ಸಿರಿಗನ್ನಡಂ ಗೆಲ್ಗೆ

# ಕನ್ನಡ ನುಡಿ

**ಸಂಪುಟ ೨**

**(ಸಂಚಿಕೆಗಳು ೧–೪೯)**



ಸಂಪಾದಕರು :

**ಬಿ. ವೆಂಕೋಬರಾವ್, ಬಿ.ಎ.**

ಪ್ರಕಾಶಕರು :

ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು ನಗರ

೧೯೩೯–೪೦

ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟದಲ್ಲಿ ಮುದ್ರಿಸಲ್ಪಟ್ಟಿತು

# ಲೇಖನಗಳು

## ಸಂಪಾದಕೀಯ





## ಲೇಖಕರು

## ಚಿತ್ರಗಳು

**Regd. No. M. 3975**

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು



# ಕನ್ನಡ ನುಡಿ

ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ:
ಸಂಚಿಕೆ ೧೦ | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨೯, ೧೯೩೯ | ಬಿ. ವೆಂಕೋಬರಾವ್, ಬಿ.ಎ.

## ಸಮ್ಮೇಳನ ಸಂಚಿಕೆ

ಬೆಳಗಾಂವಿಯಲ್ಲಿ ನಡೆದ ೨೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಮಾನ್ಯ ಅಧ್ಯಕ್ಷರು



ಸುಪ್ರಸಿದ್ಧ ದೇಶಭಕ್ತರೂ ಕನ್ನಡ ನಾಡಿನ ಹಿರಿಯರೂ ನುರಿತ ಮುಂದಾಳುಗಳೂ ಆದ

**ಶ್ರೀ ಮುದವೀಡು ಕೃಷ್ಣರಾಯರು**

### ಸಮ್ಮೇಳನದ ಸ್ವಾಗತಾಧ್ಯಕ್ಷರಾದ

## ಶ್ರೀ|| ಮಲ್ಲೇಶ ಪ್ರಭು ವಾಲಿ ಅವರ ಭಾಷಣ

ಅಜನ ಪಟ್ಟದ ರಾಣಿಯಖಿಳಗುಣಶ್ರೇಣಿ ।
ವಿಜಿತಾಬ್ಜಪಾಣಿ ಸುಶ್ರೋಣಿ ॥
ಗಜರಾಜಗಮನೆ ಪನ್ನಗವೇಣಿ ಕಲ್ಯಾಣಿ ।
ಭಜಿಪೆ ವರವನೀಯೆ ವಾಣಿ ॥

—ವೆಂಕಟಾರ್ಯ ಶಿಷ್ಯ.

**ಕನ್ನಡ ಮಾತೆಯ ನಚ್ಚಿನ ಸುತಸುತೆಯರಾದ**
**ಮಾನ್ಯ ಗುರುಹಿರಿಯರೆ, ಸಹೋದರ ಸಹೋದರಿಯರೆ—**

ಇಂದು ನಡೆಯಲಿರುವ ೩೭ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಮಹೋತ್ಸವಕ್ಕೆ ನಮ್ಮ ಬಿನ್ನಹವನ್ನು ಮನ್ನಿಸಿ ಮುದ್ದು ತಾಯ್ನುಡಿಯ ಸೇವೆಗಾಗಿ ಕನ್ನಡ ನಾಡಿನ ಎಲ್ಲ ಭಾಗಗಳಿಂದಲೂ ಆಗಮಿಸಿರುವ ತಮ್ಮೆಲ್ಲರಿಗೂ ಸತ್ಕಾರದ ಮಂಡಲದ ಪರವಾಗಿ ಅಂತಃಕರಣಪೂರ್ವಕವಾಗಿ ಸ್ವಾಗತವನ್ನು ಬಯಸುತ್ತೇನೆ. ಅನಿರೀಕ್ಷಿತನಿಕ್ಷೇಪವು ದೊರೆತ ಕಡು ಬಡವನಂತೆ ಸಾಹಿತ್ಯ ಕ್ಷೇತ್ರದಲ್ಲಿ ಹೇಳಿಕೊಳ್ಳುವ ಹಾಗೆ ದುಡಿಯದಿದ್ದ ನನಗೆ ಸತ್ಕಾರಕ ಮಂಡಲದ ವಿಶ್ವಾಸಪರುಷದ ಮಹಿಮೆಯಿಂದ ಈ ಮಹತ್ತರವಾದ ಪುಣ್ಯ ದೊರೆತುದಕ್ಕಾಗಿ ನಾನು ಧನ್ಯನು. ಲಲಿತವಾದ ತಾಯ್ನುಡಿಯನ್ನು ಎಲ್ಲ ಬಗೆಯಿಂದಲೂ ಏಳ್ಗೆಗೊಳಿಸುವ ಉನ್ನತ ಕಾರ್ಯದಲ್ಲಿ ಸಹಕಾರಿಗಳಾಗಬೇಕೆಂಬ ಉದಾತ್ತವಾದ ಭಾವನೆಯಿಂದ ಪ್ರೇರಿತರಾಗಿ ನೀವು ನಿಮ್ಮ ಕೆಲಸಗಳನ್ನೆಲ್ಲ ಬದಿಗಿರಿಸಿ, ಅನನುಕೂಲತೆಗಳನ್ನು ಲಕ್ಷ್ಯಕ್ಕೆ ತಾರದೆ, ಪಯಣದ ದಣಿವನ್ನು ಸಹಿಸಿ, "ಬಾಣ ದೊಲು ತನುವ ಸೀಳುವ" ಇಲ್ಲಿಯ ಸದ್ಯದ ಹೇಮಂತದ ತಣ್ಪಿಗೆ ಬೆದರದೆ ಇಲ್ಲಿಗೆ ಬಂದುದು ಕರ್ನಾಟಕದ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ವಿಷಯವಾಗಿ ನಿಮಗಿರುವ ನಿಸ್ಸೀಮವಾದ ಪ್ರೇಮವನ್ನು ವ್ಯಕ್ತಗೊಳಿಸುತ್ತದೆ. ಎಷ್ಟು ಶ್ರದ್ಧೆಯಿಂದ ಸೇವೆ ಮಾಡಿದರೂ ನಿಮ್ಮ ಯೋಗ್ಯತೆಗೆ ಅನುರೂಪವಾದ ಆದರಾತಿಥ್ಯವನ್ನು ಸಲ್ಲಿಸುವಲ್ಲಿ ಅಪರಿಹಾರ್ಯವಾಗಿ ನ್ಯೂನತೆಗಳೇನಾದರೂ ಕಂಡುಬಂದಲ್ಲಿ ಅವುಗಳನ್ನು ಕಡೆಗಣಿಸಿ ನಮ್ಮ ಹೃದಯದ ಭಾವವನ್ನರಿತು ನಾವು ಅಂತಕರಣಪೂರ್ವಕವಾಗಿ ಮಾಡುವ ಅಲ್ಪವಾದ ಆದರಾತಿಥ್ಯವನ್ನೇ ಬಹುವಾಗಿ ಮನ್ನಿಸುವಿರೆಂದು ನಂಬಿದ್ದೇವೆ. ತಾಯ್ನುಡಿಯ ಉನ್ನತಿಯ ಕರ್ತವ್ಯವನ್ನು ಸ್ಮರಿಸಿ ತಾವು ಇಲ್ಲಿಗೆ ಬಂದು ಈ ಸಮ್ಮೇಲನಕ್ಕೆ ಅಪೂರ್ವವಾದ ಶೋಭೆಯನ್ನುಂಟು ಮಾಡಿರುವುದರಿಂದ ತಮ್ಮ ಉಪಕಾರವು ಎಂದಿಗೂ ಮರೆಯದಂಥದಾಗಿದೆ.

ಮಾನ್ಯರೆ, ಈ ಸಲದ ಸಮ್ಮೇಲನಕ್ಕೆ ಇನ್ನೊಂದು ಸಂಗತಿಯಿಂದ ನಿರತಿಶಯವಾದ ಶೋಭೆಯೂ ವಿಶಿಷ್ಟವಾದ ಪ್ರತಿಷ್ಠೆಯೂ ಉಂಟಾಗಿರುವುದನ್ನು ನಾನು ಇಲ್ಲಿ ಹೇಳದಿರಲಾರೆನು. ಕಳೆದ ಎರಡು ವರ್ಷಗಳಿಂದ ಸಮ್ಮೇಲನದ ಅಧಿವೇಶನಗಳ ಪ್ರಾರಂಭೋತ್ಸವವು ಅರಸರಿಂದ —ಮೊದಲನೆಯ ಸಲ ಜಮಖಂಡಿಯ ರಾಜರ ಆಶೀರ್ವಾದದಿಂದಲೂ, ಎರಡನೆಯ ಸಲ ಸೊಂಡೂರು ಅರಸರ ಪ್ರತ್ಯಕ್ಷ ಸನ್ನಿಧಿಯಿಂದಲೂ— ಸಾಗಿಬಂದ ಪರಂಪರೆಯು ಈ ಸಲವೂ ಮುಂದುವರಿದಿರುವುದು ಆನಂದಕರವಾದ ಸಂಗತಿಯಾಗಿದೆ. ಇಲ್ಲಿಯ ಲಿಂಗರಾಜ ವಿದ್ಯಾಭವನದಲ್ಲಿ ಶಾಸ್ತ್ರೀಯ ವಿಷಯಗಳ ಶಿಕ್ಷಣದ ದೆಶೆಯಿಂದ ಯಾರು ಒಂದು ಲಕ್ಷ ರೂಪಾಯಿಗಳ ದಾನ ಮಾಡಿರುವರೊ, ಇತರ ಅನೇಕ ಸಣ್ಣ ದೊಡ್ಡ ಸಂಸ್ಥೆಗಳಿಗೆ ಭೇದಭಾವವಿಲ್ಲದೆ ಅವವುಗಳ ಯೋಗ್ಯತೆಗನುಸಾರವಾಗಿ ಮುಕ್ತಹಸ್ತದಿಂದ ಹಸನ್ಮುಖಿಗಳಾಗಿ ಧನಸಹಾಯಮಾಡಿ ಸತ್ಪಾತ್ರದಲ್ಲಿ ದಾನಮಾಡಲು ಕೊಡಗೈ ದೊರೆಯೆಂದೆನಿಸಿಕೊಂಡು ಹೆಸರು ಪಡೆದಿರುವರೊ, ಯಾರ ಹೆಸರಿನಿಂದ ಇಲ್ಲಿ ನೂತನವಾಗಿ ಸ್ಥಾಪಿಸಲ್ಪಟ್ಟ ಲಾ ಕಾಲೇಜು ಅಪೂರ್ವವಾದ ಶೋಭೆಯಿಂದ ಮೆರೆಯುತ್ತಿದೆಯೊ, ಆ ಸದ್ವಿದ್ವಾಮಂಡಿತರೂ, ಸದ್ಗುಣಿಗಳೂ, ಭೇದಭಾವಾತೀತರೂ ಆಗಿರುವ ಅಚ್ಚಕನ್ನಡಿಗರಾದ ವಂಟಮುರಿಯ ಪೂಜ್ಯ ಪ್ರಭುಗಳಾದ ಶ್ರೀಮಂತ ರಾಜಾ ಲಖಮಗೌಡ ಸರದೇಸಾಯರ ಸತ್ಪುತ್ರರಾದ **ಶ್ರೀಮಂತ ಬಸವಪ್ರಭು ಸರದೇಸಾಯರು** ಈ ಸಲದ ಸಮ್ಮೇಲನದ ಅಧಿವೇಶನದ ಪ್ರಾರಂಭೋತ್ಸವವನ್ನು ನೆರವೇರಿಸಲು ನಮ್ಮ ಬಿನ್ನಹವನ್ನು ಅಂಗೀಕರಿಸಿದ್ದಕ್ಕಾಗಿ ಅವರಿಗೆ ನಾವು ಹೃತ್ಪೂರ್ವಕವಾಗಿ ಧನ್ಯವಾದಗಳನ್ನು ಸಮರ್ಪಿಸುತ್ತೇವೆ. ಸರಲ ಸ್ವಭಾವ, ವಿನಯ, ವಿದ್ಯಾಭಿಮಾನತೆ, ಸತ್ಪಾತ್ರದಾನ ಮುಂತಾದ ಸದ್ಗುಣಗಳಲ್ಲಿ ತಂದೆಗಿಂತ ಕಡಮೆಯಾಗಿರದ **ಶ್ರೀಮಂತ ಬಸವಪ್ರಭು**ಗಳವರು ಸಮ್ಮೇಲನದ ಅಧಿವೇಶನವನ್ನು ಪ್ರಾರಂಭಿಸುವುದರ ಮೂಲಕ ಕನ್ನಡ ನುಡಿಯ ಬಗ್ಗೆ ತಮಗಿರುವ ಪ್ರೇಮಾಭಿಮಾನಗಳನ್ನು ವ್ಯಕ್ತಪಡಿಸಿ,

"ಬನ್ನಿ ಬನ್ನಿ ಬನ್ನಿ ಬನ್ನಿ
ಬನ್ನಿರಕ್ಕ ಬನ್ನಿರಣ್ಣ
ಬನ್ನಿ ಬನ್ನಿ
ನಾವೆ ನಮ್ಮ ನಾಡ ಬೆನ್ನು
ನಮ್ಮ ಬಲವೆ ನಾಡ ಬಲವು
ನಮ್ಮ ನಮ್ಮ ಒಳಗೆ ಹೊರಗೆ
ಇದ್ದ ಹೊಲಸ ಹಿರಿದು ತೆಗೆದು
ಒಗೆದು ಬನ್ನಿ ಅಂದದಿಂದ
ನಮ್ಮ ನಾಡ್ಗೆ ನಮ್ಮ ಜನಕೆ
ನಮ್ಮ ನುಡಿಗೆ ಜಯಂ ಜಯಂ
ಬನ್ನಿ ಬನ್ನಿ "

ಎಂದು ಉತ್ತರ ಕರ್ನಾಟಕದ ಗಡಿನಾಡಿನಲ್ಲಿ ಈ ದಿನ ಕನ್ನಡ ರಾಜರ ಪರಂಪರೆಗುಚಿತವಾಗುವಂತೆ ಸೀಮೋಲ್ಲಂಘನೆಗಾಗಿ ಕನ್ನಡಿಗರೆಲ್ಲರಿಗೆ ಮುಂದಾಳುವಾಗಿ ಕನ್ನಡದ ಬಾವುಟವನ್ನು ನಿಲ್ಲಿಸಲು ಬಂದು ನಮ್ಮೆಲ್ಲರಿಗೂ ಅಭಿನಂದನೀಯರಾಗಿರುವರು.

ಇಂದಿನ ಸಮ್ಮೇಲನದ ಅಧ್ಯಕ್ಷಸ್ಥಾನವನ್ನಲಂಕರಿಸಿ ಸಮ್ಮೇಲನದ ಕರ್ತವ್ಯ ಮಾರ್ಗವನ್ನು ಸಾಗಿಸಲು ಒಪ್ಪಿ ಬಂದಿರುವ ಕನ್ನಡದ ಪ್ರೀತಿಯ ಜೀವಕಳೆ ತುಂಬಿಕೊಂಡಂತಿರುವ ಮುದದ ಬೀಡಾಗಿರುವಂಥ **ಶ್ರೀಮಾನ್ ಮುದವೀಡು ಕೃಷ್ಣರಾಯರು** ಕನ್ನಡಿಗರೆಲ್ಲರ ಆದರ-ಮನ್ನಣೆಗಳಿಗೆ ಪಾತ್ರರಾಗಿರುವರು. ಕನ್ನಡಿಗರ ಏಕಮೇವ ಜೀವಾಳದ ಪ್ರಶ್ನೆಯಾಗಿರುವ ಕರ್ನಾಟಕ ಏಕೀಕರಣದ ವಿಚಾರವಾಗಿ ಬೀಜವನ್ನು ನೆಟ್ಟ ಮೊದಲಿಗರಲ್ಲೊಬ್ಬರಾದ ಅವರ ಮೂರುವರೆ ಮೊಳದ ದೇಹದಲ್ಲಿ ಕನ್ನಡದ ಬೀರಸಿರಿ, ಕನ್ನಡದ ಕೆಚ್ಚು, ಕನ್ನಡದ ಕನ್ನಡತೆಗಳು ಅಚ್ಚುಮೆಚ್ಚಾಗಿ ಹೊಂದಿಕೊಂಡಿವೆ. ಕೆಚ್ಚೆದೆಗೆ ಅನುರೂಪವಾದ ಗುಡುಗು ದನಿಯುಳ್ಳ ಅವರಿಗೆ "ಲೌಡರ್ ಸ್ಪೀಚ್" ಎಂದು ಅನ್ನಿಸಿಕೊಳ್ಳುವ ಸಮಯವು ಯಾವ ದೊಡ್ಡ ಜನಸಮುದಾಯವು ಕೂಡಿದ ಸಭೆಯಲ್ಲಿ ಮಾತನಾಡುವಾಗಲೂ ಬರಲಿಲ್ಲ. ಕನ್ನಡದ ನಾಡು-ನುಡಿಗಳ ವಿಷಯವಾಗಿ ಅವರು ಭಾಷಣ ಮಾಡಲು ಎದ್ದು ನಿಂತರೆಂದರೆ ಸಿಂಹನಾದದಿಂದ ಗರ್ಜಿಸಿ ಆವೇಶಯುಕ್ತರಾಗಿ, ಪ್ರೇಕ್ಷಕರನ್ನೂ ಆವೇಶದಲ್ಲಿ ಮುಳುಗಿಸಿಬಿಡುವರು. ಗುಡುಗಿನ ದನಿಯ ಸಿಡಿಲು ನುಡಿಗಳ ಅವರ ಭಾಷಣವು ಜೀವನ್ಮೃತರಾಗಿರುವ ಹೇಡಿಗಳಿಗೆ ಹುರುಪನ್ನು ಕೊಡುವ ಇಂಜೆಕ್ಷನ್ ಇದ್ದಂತೆ. ಅವರ ಪ್ರತಿಯೊಂದು ಮಾತಿನಲ್ಲಿ ಭಗವಾನ್ ಶ್ರೀಕೃಷ್ಣನ "ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ" ಎಂಬ ವಾಕ್ಯದ ಪ್ರತಿಧ್ವನಿಯೇ ಕಂಡುಬರುವುದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. "ಕರ್ನಾಟಕ ವೃತ್ತ" ಮತ್ತು "ಧನಂಜಯ" ಪತ್ರಿಕೆಗೆ ಬಹುಕಾಲದ ವರೆಗೆ ಸಂಪಾದಕರಾಗಿದ್ದುಕೊಂಡು ಕನ್ನಡ ನಾಡು ನುಡಿಗಳಿಗಾಗಿ ಅವರು ಸಲ್ಲಿಸಿದ ಸೇವೆಯು ಅಪಾರವೂ ಅಮೋಘವೂ ಆಗಿದೆ. ಸದ್ಯದ ಇಳಿವಯಸ್ಸಿನಲ್ಲಿಯೂ ಕೂಡ ಅವರು ಕನ್ನಡ ನಾಡು ನುಡಿಗಳಿಗಾಗಿ "ಪುರಾಣೋ ನವಯುವಕ"ರಾಗಿ ಒಳ್ಳೆಯ ಹುರುಪಿನಿಂದ ಸೇವೆ ಮಾಡುತ್ತಿರುವರು. ಇಂಥ ಮಹೋದಯರು ಈಸಲದ ಸಮ್ಮೇಲನದ ಅಧ್ಯಕ್ಷಸ್ಥಾನಕ್ಕೆ ದೊರೆತುದು ನಮಗೆ ಅಭಿಮಾನದ ಮಾತಾಗಿದೆ.

ಬೆಳಗಾಂವಿಯಲ್ಲಿ ಈ ಸಮ್ಮೇಲನವು ಕೂಡಿದುದು ಇದು ೩ನೆಯ ಸಲ. ಮೊದಲನೆಯ ಸಲ ೧೯೨೫ರಲ್ಲಿ ಮದ್ರಾಸು ಸರಕಾರದ ಸೀನಿಯರ್ ಟ್ರಾನ್ಸಲೇಟರರೂ (ಈಗ ನಿವೃತ್ತರಾಗಿದ್ದಾರೆ), ಸುಪ್ರಸಿದ್ಧ ಪಂಡಿತರೂ ಆದ ಮ|| ರಾ|| ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ., ಇವರ ಅಧ್ಯಕ್ಷತೆಯಲ್ಲಿ ನಡೆದಿದ್ದಿತು. ಆ ಮಹನೀಯರು ತಮ್ಮ ಅಧ್ಯಕ್ಷೀಯ ಭಾಷಣದ ಕೊನೆಯಲ್ಲಿ 'ಏಳಿರಿ! ಎಚ್ಚರಗೊಳ್ಳಿರಿ!! ಉದ್ದೇಶವು ಸಫಲವಾಗುವವರೆಗೂ ಬಿಡದೆ ಪ್ರಯತ್ನಿಸಿರಿ!!!' ಎಂದು

ಎಲ್ಲ ಕನ್ನಡಿಗರಿಗೂ, ಮುಖ್ಯವಾಗಿ ನಮ್ಮ ಜಿಲ್ಲೆಯ ಕನ್ನಡಿಗರಿಗೆ, ಅಪ್ಪಣೆ ಕೊಡಿಸಿ ಹೋದರು. ಮುಂದೆ ಎರಡನೆಯ ಸಲ ೧೯೨೯ರಲ್ಲಿ ಮೈಸೂರು ಸಂಸ್ಥಾನದ ಸೀನಿಯರ್ ಅಸಿಸ್ಟೆಂಟ್ ಕಮೀಷನರೂ (ಈಗ ಡೆಪ್ಯೂಟಿ ಕಮಿಷನರಾಗಿದ್ದಾರೆ) ಒಳ್ಳೇ ನುರಿತ ಸುಪ್ರಸಿದ್ಧ ಕನ್ನಡ ಸಾಹಿತಿಗಳೂ ಆದ ಮ|| ರಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ., ಅವರ ಅಧ್ಯಕ್ಷತೆಯಲ್ಲಿ ಜರುಗಿದ್ದಿತು. ಆ ಮಹೋದಯರು "ಕನ್ನಡ ನಾಡು ತನ್ನ ಮಕ್ಕಳಿಂದ ಸದಾ ಕಾಲದಲ್ಲಿಯೂ ಉತ್ತಮವಾದ ಸೇವೆಯನ್ನೇ ಪಡೆಯುವಂತಾಗಲೆಂದೂ, ಈ ನಮ್ಮ ನಾಡು, ನಮ್ಮ ಮಾತು, ನಮ್ಮ ಜನಕ್ಕೆ ಶುಭವಾಗಲೆಂದೂ, ನಾವು ಭಾರತ ವರ್ಷದ ದೇಶಗಳಲ್ಲಿಯೂ ಪ್ರಪಂಚದ ಜನಗಳಲ್ಲಿಯೂ ತಲೆಯೆತ್ತಿಕೊಂಡು ನಡೆಯುವಂತಾಗಲೆಂದೂ" ಅನನ್ಯಭಾವದಿಂದ ಕೋರಿ ತಮ್ಮ ಅಧ್ಯಕ್ಷಸ್ಥಾನದ ಭಾಷಣವನ್ನು ಮುಕ್ತಾಯಗೊಳಿಸಿದ್ದರು. ಈ ಮಹಾಶಯರೀರ್ವರೂ ಅಧ್ಯಕ್ಷಸ್ಥಾನದಿಂದ ಅಪ್ಪಣೆ ಕೊಡಿಸಿದ ಮೇರೆಗೆ ಈ ಅವಧಿಯಲ್ಲಿ ಕರ್ನಾಟಕದ ಗಡಿನಾಡಾದ ನಮ್ಮ ಬೆಳಗಾವಿ ಜಿಲ್ಲೆಯ ಜನರು ಅದೆಷ್ಟೊ ಎಚ್ಚರಗೊಂಡಿದ್ದಾರೆ; ಕನ್ನಡ ನಾಡಿಗೆ ಉತ್ತಮವಾದ ಸೇವೆಯನ್ನು ಸಲ್ಲಿಸುವ ಭಾವನೆಯನ್ನು ತಳೆಯಹತ್ತಿದ್ದಾರೆ. ಹೀಗೆ ಇಲ್ಲಿಯ ಜನರು ಕನ್ನಡ ನಾಡುನುಡಿಗಳ ಸೇವೆಗಾಗಿ ದಿನೇ ದಿನೇ ಎಚ್ಚರಗೊಳ್ಳುತ್ತಿರುವಾಗ, ಈ ಕಾರ್ಯವು ಇನ್ನಿಷ್ಟು ಪರಿಣಾಮಕರವಾಗಲೆಂದು ಬಗೆದು ಈ ವರ್ಷ ಇಲ್ಲಿ ಮೂರನೆಯ ಸಲ ಸಮ್ಮೇಲನದ ಅಧಿವೇಶನವನ್ನು ನೆರೆಯಿಸಲು ನಾವು ಮಾಡಿಕೊಂಡ ಬಿನ್ನಹವನ್ನು ಮಾನ್ಯಮಾಡಿ ನಮ್ಮ ಪಟ್ಟಣದಲ್ಲಿ ಸಮ್ಮೇಲನವನ್ನು ನಡೆಯಿಸಲೊಪ್ಪಿದ ಪರಿಷತ್ತಿನವರಿಗೆ ನಮ್ಮ ವಂದನೆಗಳು.

ಕನ್ನಡ ಭಕ್ತರೆ, ನಮ್ಮ ಬೆಳಗಾಂವಿ ಜಿಲ್ಲೆಯಲ್ಲಿ ಪೂರ್ವದ ಐತಿಹಾಸಿಕ ಕುರುಹುಗಳು ಹೇರಳವಾಗಿವೆ. ಧೀರವೀರರಾದ ಕನ್ನಡ ರಾಜರೂ ರಾಣಿಯರೂ ಇಲ್ಲಿ ರಾಜ್ಯವಾಳಿ ಕನ್ನಡದ ಧವಲಕೀರ್ತಿಯನ್ನು ಬೆಳಗಿಸಿರುವರು. ಗೋವೆಯ ಕದಂಬರು, ಬಾದಾಮಿಯ ಚಾಲುಕ್ಯರು, ಸವದತ್ತಿಯ ರಟ್ಟರು, ದೇವಗಿರಿಯ ಯಾದವರು ಈ ಜಿಲ್ಲೆಯಲ್ಲಿ ನಾಡುಗಳನ್ನು ಕಟ್ಟಿ ರಾಜ್ಯವಾಳಿ, ಅನೇಕಾನೇಕ ಸುಂದರವಾದ ದೇವಾಲಯಗಳನ್ನು ಕಟ್ಟಿಸಿ, ಅಳಿದು ಅಳಿಯದ ಜನಾಂಗದ ದಿವ್ಯ ಸಂಸ್ಕೃತಿಯನ್ನು ಬೆಳಗುವ ವೀರವಾಣಿಯ ಅಜರಾಮರವಾದ ಶಾಸನಗಳನ್ನು ಬರೆಯಿಸಿರುವರು. ಕರ್ನಾಟಕದ ಸಾಹಿತ್ಯ, ಕಲೆ, ಸಮಾಜ, ಇತಿಹಾಸಗಳ ಯಥಾರ್ಥ ಪ್ರತಿಬಿಂಬಗಳಾದ ಈ ಶಾಸನಗಳನ್ನು ಕಾಪಾಡಿ ಸಂಶೋಧಿಸಿ ಅವುಗಳಲ್ಲಿ ಹುದುಗಿರುವ ಕರ್ನಾಟಕದ ಇತಿಹಾಸವನ್ನು ಪ್ರಕಾಶಕ್ಕೆ ತರುವುದು ಕನ್ನಡಿಗರ ಆದ್ಯ ಕರ್ತವ್ಯವಾಗಿದೆ. ಈ ಜಿಲ್ಲೆಯಲ್ಲಿ ಇಂಥ ಮುಖ್ಯವಾದ ಶಾಸನಗಳು ದೇಗಾವಿ, ಬೈಲಹೊಂಗಲ, ಮುನವಳ್ಳಿ, ಸೊಗಲ, ಹೂಲಿ, ಹಲಸಿಗೆ, ಕಿತ್ತೂರು ಗ್ರಾಮಗಳಲ್ಲಿವೆ. ಶಿವಾಜಿ ಮಹಾರಾಜನೊಡನೆ ಬಹು ಶೂರತನದಿಂದ ಯುದ್ಧಮಾಡಿದ ಮಲ್ಲವ್ವ ದೇಸಾಯಣಿಯ ಬೆಳವಡಿ ಗ್ರಾಮವು ಇದೇ ಜಿಲ್ಲೆಯಲ್ಲಿಯೇ ಇದೆ. ಇದೇ ಜಿಲ್ಲೆಗೆ ಸೇರಿದ "ಚನ್ನಮ್ಮನ ಕಿತ್ತೂರ" ಎಂದು ಕರೆಯಲ್ಪಡುವ ಕಿತ್ತೂರ ಗ್ರಾಮವು ಎರಡು ಮೂರು ನೂರು ವರ್ಷಗಳ ಹಿಂದೆ ದೊಡ್ಡ ವೈಭವದ ಬೀಡಾಗಿ ವೀರ ಕನ್ನಡ ದೇಸಾಯರ ಪ್ರಭಾವಶಾಲಿಯಾದ ದೇಸಗತಿಯ ನೆಲೆಯಾಗಿದ್ದಿತು. ಈ ಸಂಸ್ಥಾನದ ಕೊನೆಯ ದೇಸಾಯಿ ಮಲ್ಲಸರ್ಜನ ಹೆಂಡತಿ ವೀರರಾಣಿ ಕೆಚ್ಚಿನ ಕನ್ನಡಿತಿ ಚೆನ್ನಮ್ಮನ ಅದ್ಭುತ ಶೌರ್ಯದ ಇತಿಹಾಸದ ಪರಿಚಯವಿಲ್ಲದ ಕನ್ನಡಿಗರೇ ಇಲ್ಲ. ಮಾನಧನಳಾದ ಚೆನ್ನಮ್ಮರಾಣಿಯು ಸ್ವಾಭಿಮಾನದ ರಕ್ಷಣೆಗಾಗಿ ರಣದಲ್ಲಿ ವೈರಿಗಳೊಡನೆ ಮಹಿಷಾಸುರಮರ್ದಿನಿಯಂತೆ ಕಲಿತನದಿಂದ ಕಾದಿ ಅಮರವಾದ ಕೀರ್ತಿಯನ್ನು ಪಡೆದಿರುವಳು. ಅಂತೆಯೇ,

"ಚಂಡಿಯೊ ಚೌಡಿಯೊ ಮಾರಿಯೊ ಮಸಣಿಯೊ! ಖಂಡಿತ
ಮಾನಿನಿ ಇವಳಲ್ಲ!
ಗಂಡುಗಲಿಗಳ ಮೀರಿ ರುಂಡವ ತರಿವಳು ಮಹಂ ಮಾಯೆಯಲ್ಲದೆ
ಬ್ಯಾರಲ್ಲ||"

ಎಂದೇ ಈಗಲೂ ಅವಳ ಶೌರ್ಯವನ್ನು ಹಾಡುಕಟ್ಟಿ ಹೊಗಳುವರು. ಕಿತ್ತೂರ ದೇಸಗತಿಯ ಬಹುಮಟ್ಟಿಗೆ ಹಾಳಾದ ಹಳೆಯ ಕಿಲ್ಲೆಯನ್ನು ಈಗಲೂ ನೋಡಬಹುದು. ಕಿತ್ತೂರ ನಾಡಿನ ಕೆಚ್ಚೆದೆಯ ಗತಿಸಿಹೋದ ಕನ್ನಡ ವೀರರ ರಕ್ತವು ಸಹ ಎಂತಹ ಪ್ರಭಾವಶಾಲಿಯಾದುದೋ! ಕಿತ್ತೂರ ಕಿಲ್ಲೆಯಲ್ಲಿ ಕಲಿತನದಿಂದ ಕಾದಿ ಮಡಿದ ಆ ವೀರರ ವೀರರಕ್ತವು ಬೆರೆತ ಆ ಹಾಳು ಕಿಲ್ಲೆಯ ಪ್ರದೇಶದೊಳಗಿನ ಕೆಮ್ಮಣ್ಣು ಈಗ ಸನಿಯದ ಸಾರ್ವಜನಿಕ ದಾರಿಗಳನ್ನು ಗಟ್ಟಿಮಾಡುವುದಕ್ಕಾಗಿ ಲೋಕಲ್ ಬೋರ್ಡಿನವರಿಂದ ಉಪಯೋಗಿಸಲ್ಪಡುತ್ತದೆ. ಈ ಜಿಲ್ಲೆಯಲ್ಲಿ ನೋಡತಕ್ಕ ಇತರ ಸ್ಥಳಗಳೆಂದರೆ, ಎಲ್ಲಮ್ಮನ ಗುಡ್ಡ, ಯಡೂರು, ನವಿಲುತೀರ್ಥ, ಸೊಗಲ ಮುಂತಾದ ಪವಿತ್ರ ಸ್ಥಾನಗಳು ಹಾಗು ಹಲಸಿಗೆ, ಕಿತ್ತೂರು, ಮುನವಳ್ಳಿ, ಸವದತ್ತಿ, ಹೂಲಿ, ದೇಗಾವಿ ಮೊದಲಾದ ಇತಿಹಾಸ ಪ್ರಸಿದ್ಧವಾದ ಸ್ಥಳಗಳು.

ಇನ್ನು ಈ ನಮ್ಮ ಬೆಳಗಾಂವಿ ನಗರದ ಕಡೆಗೆ ಹೊರಳೋಣ. ಬೆಳಗಾಂವಿಯು ತನ್ನ ಪೂರ್ವದ ಐತಿಹಾಸಿಕ ಕುರುಹುಗಳಿಂದಲೂ ಆಧುನಿಕ ಸುಧಾರಣೆಯ ಕಾಲದಲ್ಲಿ ಪಡೆದಿರುವ ಆನೇಕ ಸೊಬಗುಗಳಿಂದಲೂ ನಿಮ್ಮೆಲ್ಲರ ಮನಸ್ಸನ್ನು ಸಹಜವಾಗಿ ಎಳೆದುಕೊಳ್ಳಬಲ್ಲದು. ಇಲ್ಲಿಗೆ ಸಮೀಪದಲ್ಲಿಯೇ ಸೋಮೇಶ್ವರ ದೇವನಿಗೆ ನೆಲೆವೀಡಾಗಿ ಆಯುರ್ವೇದ ಶಾಸ್ತ್ರದ ಅಧಿದೇವತೆಯಾದ ಧನ್ವಂತರಿಯ ಪ್ರಯೋಗಶಾಲೆಯಂತಿರುವ ನಾನಾ ಪ್ರಕಾರದ ಅಮೌಲ್ಯವಾದ ಗಿಡಮೂಲಿಕೆಗಳನ್ನೊಳಗೊಂಡ ವೈದ್ಯನಾಥ (ಈಗ "ವೈಜನಾಥ") ಎಂದು ಕರೆಯಲ್ಪಡುವ ಬೆಟ್ಟದ ಮೇಲಿನ ಆರೋಗ್ಯಕರವಾದ ಸುಳಿಗಾಳಿಯು ದೂರದೇಶದ ಪ್ರವಾಸದಿಂದುಂಟಾಗಿರುವ ನಿಮ್ಮ ದಣಿವನ್ನು ಆರಿಸಿ ನಿಮ್ಮ ಮುಖಗಳನ್ನರಳಿಸುತ್ತದೆ. ನಿಸರ್ಗ ದೇವತೆಯ ಹಿರಿಯ ವರಪ್ರಸಾದವನ್ನು ಪಡೆದಿರುವ ನಮ್ಮೀ ನಗರದಲ್ಲಿ ನವನಾಗರಿಕತೆಯ ಕೈಚಳಕದಿಂದ ಸೊಬಗು ಪಡೆದಿರುವ ಪೂದೋಟಗಳು 'ಅರಲ ಕುಲಕಂಬೈತಲೆಯ ಜೊಕ್ಕ ಮುತ್ತೆನಿಪ" ಮಲ್ಲಿಗೆ ಹೂಗಳಿಂದಲೂ, 'ಸೊಡಗುರ್ಡಿಯಗೆಯಂ ಪಚ್ಚೆಯ ಪಡಲಗೆಗಳೊಡಕಿಲಿಟ್ಟು ರತಿ ಪೊಯ್ದಂತೆ" ತೋರುವ ಸಂಪಗೆ ನನೆಗಳಿಂದಲೂ, ಕಂಪಿನ ಕರಂಡವನ್ನು ಸಮರ್ಪಿಸಿ ನಿಮಗೆ ಬಹುಮಾನವನ್ನು ಮಾಡುವುವು. 'ನಳಿನಶರಂ ಸುಧೆಯಂ ಪೊಂಗೊಳವಿಗಳೊಳ್ ತೀವಿ ಬೆಳ್ಳಿಯಿಂ ಬಿಗಿದು ಶುಕಂಗಳ ಕಾಪನಿಟ್ಟ'ಂತೆ ಕಬ್ಬಿನ ಗದ್ದೆಗಳು ನಯನಮನೋಹರವಾಗಿ ಶೋಭಿಸುವುವು. ಹಾಗು 'ತೂಗುತೆ ತೊನೆಯುತೆ ಬಳ್ಕುತೆ ಬಾಗುತೆ ಕಂಪಿಡುತೆ ಕನಕರುಚಿದಾಳುತೆ ರಾಗಿಸುತೆ ರಂಜಿಸುತೆ ಸೊಂಪಾಗಿರ್ದ' ಬತ್ತದ ಹೊಡೆಗಳು ಇದೀಗ ತಲೆಬಾಗಿ ನನ್ನೊಡನೆ ನಿಮಗೆ ಸ್ವಾಗತವನ್ನೀಯಲಿರುವುವು. ಸುಮನಃ ಪರಾಗ ಭರ ಮಂಥರನಾದ ಕುಮಾರ ಸಮೀರಕನ ಆಡುವಂಗಳವೆನಿಸಿದ, ಆರೋಗ್ಯತೆಯ ನೆಲೆವೀಡಾಗಿರುವ, ಸಿಂಗರದ ತವರ್ಮನೆಯಂತಿರುವ, ಬೆಳಗಾಂವಿಯ ಉಪನಗರವಾದ ವಿಜಯನಗರವು (ಠಳಕವಾಡಿಯು) ಸುಂದರವಾದ ಗೃಹಗಳಿಂದಲೂ ನಳನಳಿಸುವ ಪೂದೋಟಗಳಿಂದಲೂ ಅಚ್ಚುಕಟ್ಟಾದ ಮಾರ್ಗಗಳಿಂದಲೂ ರಂಜನೆಗೆಯ್ಯುವುದು.

ಕನ್ನಡ ನಾಡಿನ ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ ಇತಿಹಾಸಪ್ರಸಿದ್ಧವಾದ ನಮ್ಮ ಬೆಳಗಾಂವಿಯು ಬಹುಕಾಲದ ವರೆಗೆ ಕನ್ನಡ ರಾಜರ ಬೀಡಾಗಿದ್ದು, ಕನ್ನಡ ಸಾಹಿತ್ಯದಾಗಸಕೆ ಶಾಶ್ವತವಾದ ಮಿನುಗುವ ತಾರೆಗಳನ್ನೊದಗಿಸಿ ಕೊಟ್ಟಿರುವುದೆಂಬುದು ಕಂಡುಬರುತ್ತದೆ. ಬೆಳಗಾಂವಿಯು ಗೋವೆಯ ಕದಂಬ ರಾಜರ ಆಡಳಿತಕ್ಕೆ ಒಳಪಟ್ಟು ಕ್ರಿ. ಶ. ೧೧೬೦ರಲ್ಲಿ ಎಪ್ಪತ್ತು ಹಳ್ಳಿಗಳ ಹಿರಿಯೂರಾಗಿದ್ದಿತು. ಮುಂದೆ ಸುಮಾರು ೫೦ ವರ್ಷಗಳ ಅನಂತರ ಈ ಊರು ಬಾಡವಳಹಳ್ಳಿಯೆಂಬ ಹೆಸರಿನಿಂದ ಸವದತ್ತಿಯ ರಟ್ಟರಾಜರ ರಾಜಧಾನಿಯಾಯಿತು. ಅನಂತರ ೧೨೫೦ರ ಸುಮಾರಿನಲ್ಲಿ ಈ ಊರು ದೇವಗಿರಿಯ ಯಾದವರ ಆಳಿಕೆಗೆ ಒಳಗಾಯಿತು. ಮುಂದೆ ಅನುಕ್ರಮವಾಗಿ ೧೪ನೆಯ ಶತಮಾನದ ಕೊನೆಯಲ್ಲಿ ವಿಜಯನಗರದ ಅರಸರ, ೧೫ನೆಯ ಶತಮಾನದಲ್ಲಿ ಕಲುಬುರ್ಗೆಯ ಬಹಮನಿ ಬಾದಶಹರ, ೧೬ನೆಯ ಮತ್ತು ೧೭ನೆಯ ಶತಮಾನಗಳಲ್ಲಿ ವಿಜಾಪುರದ ಅದಿಲಶಾಹಿಯರ ಹಾಗು ದಿಲ್ಲಿಯ ಮೊಗಲ ಬಾದಶಹರ, ೧೮ನೆಯ ಶತಮಾನದ ಮೊದಲಲ್ಲಿ ಸವಣೂರಿನ ನವಾಬರ ಮತ್ತು ಅದೇ ಶತಮಾನದ ಮಧ್ಯ

ದಿಂದ ಕೊನೆಯವರೆಗೆ ಪೇಶ್ವೆಯರ ಆಳಿಕೆಗೆ ಒಳಪಟ್ಟುಮುಂದೆ ಜನರಲ್ ಮನ್ರೋ ಅದನ್ನು ಯುದ್ಧಮಾಡಿ ತೆಗೆದುಕೊಂಡ ನಂತರ ೧೮೧೮ರಲ್ಲಿ ಬ್ರಿಟಿಷ್ ಸರ್ಕಾರದ ಕೈಸೇರಿತು. ಸದ್ಯದಲ್ಲಿಯೂ ಸರ್ಕಾರದಿಂದ ತಕ್ಕಮಟ್ಟಿಗೆ ಭದ್ರವಾದ ಸ್ಥಿತಿಯಲ್ಲಿಡಲ್ಪಟ್ಟ ಇಲ್ಲಿಯ ಕೋಟೆಯನ್ನು ಒಬ್ಬ ಜೈನ ಅರಸನು ಕಟ್ಟಿಸಿದನೆಂದು ಹೇಳುತ್ತಾರೆ. ಈ ಕೋಟೆಯು ಬೆಳಗಾಂವಿಯ ಪೂರ್ವದ ತುದಿಯಲ್ಲಿದ್ದು ಇದಕ್ಕೆ ಎರಡು ದೊಡ್ಡ ಅಗಸೆಗಳಿವೆ. ಉತ್ತರದ ಕಡೆಯ ಅಗಸೆಯ ಹೆಬ್ಬಾಗಿಲಿನ ಒಳಬದಿಯಲ್ಲಿ ದುರ್ಗಾಧಿದೇವತೆಯ ಗುಡಿಯುಂಟು. ಕೋಟೆಯೊಳಗೆ ಪ್ರಾಚೀನ ಕಾಲದ ಎರಡು ಬಸದಿಗಳೂ, ೧೫೧೧ರಲ್ಲಿ ಬೆಳಗಾಂವಿಯ ಒಡೆಯನಾದ ವಿಜಾಪುರದ ಆದಿಲಶಾಹಿಯ ಸರದಾರನಾದ ಅಸದ ಖಾನನು ಕಟ್ಟಿಸಿದ "ಸೋಫಾ ಮಸೀದಿ"ಯೆಂಬ ಸುಂದರವಾದ ದೊಡ್ಡ ಮಸೀದಿಯೂ ಇರುವುವು. ಇಲ್ಲಿಯ ಬಸದಿಗಳಲ್ಲಿ ಸವದತ್ತಿಯ ರಟ್ಟ ವಂಶದವರ ಕೊಂಡಿ ಮಂಡಲಾಧೀಶ್ವರನೆನಿಪ ಸೇನವಿಭುಗೆ ಸುತನಾದ ದುರ್ಧರ ವೈರಿಭೂಪಭೀಕರ ಪರಾಕ್ರಮನಾದ ಅನುಪಮಶೌರ್ಯನಾದ ಕಾರ್ತವೀರ್ಯನೆಂಬವನು ಬರೆಯಿಸಿದ ಎರಡು ಶಿಲಾಶಾಸನಗಳಿದ್ದವು. ಅವುಗಳನ್ನು ಈಗ ಲಂಡನದೊಳಗಿನ ಬ್ರಿಟಿಷ್ ಮ್ಯೂಜಿಯಮ್ಮಿಗೆ ಒಯ್ದಿರುವರು. ಈ ಶಾಸನಗಳನ್ನು

ಜಿನಶಾಸನ ಗುರುಕುಳವ
ರ್ಣನ ಭೂಮಿಗೆ ಸೀಮೆಯಾದನೂರ್ಜಿತ ಕವಿ ವ ॥
ರ್ಣನ ನಟನೆಗೆ ನಾಂದಿ ನಿಬಂ ।
ಧನವಾದಂ ಬಾಳಚಂದ್ರಕವಿಕಂದರ್ಪಂ ॥

ಎಂದು ಜನ್ನ ಮಹಾಕವಿಯಿಂದ ಹೊಗಳಲ್ಪಟ್ಟ, "ಪೀಯೂಷ ಸಮಸೂಕ್ತಿ", "ಚಾತುರ್ಭಾಷಾಕವಿಚಕ್ರವರ್ತಿ", "ಬುಧಾಧೀಶ್ವರ" ಎಂಬ ಬಿರುದುಗಳನ್ನು ಪಡೆದ ಬಾಳಚಂದ್ರಕವಿಕಂದರ್ಪನು ೧೨೦೪ರಲ್ಲಿ ಬರೆದಿರುವನು.

ಇವುಗಳಲ್ಲಿ, ಸವದತ್ತಿಯ ರಟ್ಟರಾಜರಲ್ಲೊಬ್ಬನಾದ ನಾಲ್ಕನೆಯ ಕಾರ್ತವೀರ್ಯನ ಶ್ರೀಕರಣಾಗ್ರಗಣ್ಯ ಬೀಚಿರಾಜನು ಬೆಳಗಾಂವಿಯಲ್ಲಿ ಕಟ್ಟಿಸಿದ ರಟ್ಟಜಿನಾಲಯಕ್ಕೆ ಕಾರ್ತವೀರ್ಯನೂ ಇತರರೂ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇವುಗಳಲ್ಲೊಂದು ಶಾಸನದೊಳಗಿನ ಕೆಳಗಿನ ಪದ್ಯವು ಕವಿಯ ಅನುಪಮವಾದ ವರ್ಣನ ಶಕ್ತಿಯನ್ನು ತೋರಿಸುತ್ತದೆ :

ಧೃತಶೌರ್ಯಂ ಕಾರ್ತವೀರ್ಯಂ ತಳರೆ ಬಳಿಯುತಂ
ದಿಗ್ಜಯಕ್ಕನ್ಯಧಾತ್ರೀ
ಪತಿಗಳ್ ಜೆನ್ನಿತ್ತು ಸೀರಂ ಪುಗಲವರಶರೀರೋಷ್ಣದಿಂ ಬತ್ತಿ ಚಿತ್ತೋ॥
ದ್ಗತ ಭೀತ್ಯುತ್ಕರ್ಷವೃತ್ತಿ ಪ್ರಸರಣ ವಿಸರದ್ಘರ್ಮ
ತೋಯೋರ್ಮಿಯಿಂ ವಿ
ಸ್ತೃತಮಾಗಲ್ ಹಾನಿಯುಂ ವೃದ್ಧಿಯುಮದು ನಿಜಮಂಭೋಧಿ
ಗೆಂಬರ್ ವಿಮೂಢರ್ ॥

ಇದಲ್ಲದೆ, ಇದೇ ರಟ್ಟರಾಜರ ಆಶ್ರಯದಲ್ಲಿ ಕರ್ಣಪಾರ್ಯ, ನೇಮಿಚಂದ್ರ, ಮುನಿಚಂದ್ರ ಮೊದಲಾದ ಉದ್ದಾಮ ಕವಿಗಳು ಶ್ರೇಷ್ಠವಾದ ಗ್ರಂಥಗಳನ್ನು ಬರೆದು ಕನ್ನಡದೇವಿಯ ಕಳೆಯನ್ನು ಬೆಳಗಿಸಿರುವರು.

ಕನ್ನಡ ಭಾಷೆಯು ಕ್ರಿ. ಶ. ೯ನೆಯ ಶತಮಾನದಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿಕೊಂಡಿದ್ದಿತೆಂತಲೂ, ಕಿಸುವೊಳಲ್ ಅಂದರೆ ವಿಜಾಪುರ ಜಿಲ್ಲೆಯಲ್ಲಿಯ ಪಟ್ಟದಕಲ್ಲೆಂಬ ಊರು, ಕೊಪಣನಗರ ಅಂದರೆ ನಿಜಾಮನ ರಾಜ್ಯದಲ್ಲಿಯ ಕೊಪ್ಪಳ ನಗರವು, ಪುಲಿಗೆರೆ ಅಂದರೆ ಧಾರವಾಡ ಜಿಲ್ಲೆಯೊಳಗಿರುವ ಮಿರಜ ಸಂಸ್ಥಾನಕ್ಕೊಳಪಟ್ಟ ಲಕ್ಷ್ಮೇಶ್ವರವು ಮತ್ತು **ಒಂಕುಂದ ಅಂದರೆ ಇದೇ ಬೆಳಗಾಂವಿ ಜಿಲ್ಲೆಯೊಳಗಿನ ಸಂಪಗಾಂವಿ ತಾಲ್ಲೂಕಿಗೆ ಸೇರಿದ ಒಕ್ಕುಂದ ಎಂಬ ಊರು**—ಇವುಗಳ ನಡುವಿನ ಪ್ರದೇಶವೆ ತಿರುಳುಗನ್ನಡದ ನೆಲೆಯೆಂದೂ, ನೃಪತುಂಗನ (೮೧೪-೮೭೭) ಕವಿರಾಜಮಾರ್ಗದೊಳಗಿನ ಕೆಳಗಿನ ಪದ್ಯಗಳಿಂದ ತಿಳಿಯುತ್ತದೆ.

ಕಾವೇರಿಯಿಂದಮಾ ಗೋ
ದಾವರಿವರಮಿರ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು
ಧಾ ವಳಯ ವಿಲೀನ ವಿಶದ ವಿಷಯ ವಿಶೇಷಂ ॥
ಅದರೊಳಗಂ ಕಿಸುವೊಳಲಾ ।
ವಿದಿತ ಮಹಾ ಕೊಪಣನಗರದಾ ಪುಲಿಗೆರೆಯಾ ॥
ಸದಭಿಸ್ತುತಮಪ್ಪೊಂಕುಂ
ದದನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

ಅಂದಮೇಲೆ, ಒಂಬತ್ತನೆಯ ಶತಮಾನದಲ್ಲಿ ಇದೇ ಜಿಲ್ಲೆಗೊಳಪಟ್ಟ ಹಲಸಿಗೆಯಲ್ಲಿ ರಾಜ್ಯವಾಳುತ್ತಿದ್ದ ಕದಂಬರಾಜರ ಆಳಿಕೆಯಲ್ಲಿ ಈ ಬೆಳಗಾಂವಿ ಜಿಲ್ಲೆಯು ಕನ್ನಡದ ತಿರುಳ್ನಾಡಾಗಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಆದರಂತೆಯೇ, ಅಭಿನವಕವಿಚಕ್ರವರ್ತಿ, ಕವಿಕುಂಜರಾಂಕುಶ, ಉಭಯ ವ್ಯಾಕರಣ ಪಂಡಿತ, ಇತ್ಯಾದಿ ಬಿರುದುಗಳನ್ನು ಪಡೆದ ಅಭಿನವಪಂಪ, ನಯಸೇನ, ಮಧುರ, ಮೊದಲಾದ ಉದ್ದಾಮ ಕವಿಗಳಿಂದ ಹೊಗಳಲ್ಪಟ್ಟ

"ರತ್ನ ಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ ।
ರತ್ನಮುಮಂ ರನ್ನನ ಕೃತಿ ।
ರತ್ನಮುಮಂ ಪೇಟ್ ಪರೀಕ್ಷಿಪಂಗೆಂಟೆರ್ದೆಯೇ"

ಎಂದು ತನ್ನ ಅಸಾಧಾರಣವಾದ ಕವಿತಾಶಕ್ತಿಯನ್ನು ತಾನೇ ಹೆದರದೆ ಹೇಳಿಕೊಂಡಂಥ ಮಹಾಕವಿಯಾದ ಕವಿರನ್ನನು ತನ್ನ ಅಜಿತ ತೀರ್ಥಕರ ಪುರಾಣತಿಲಕದಲ್ಲಿ

ಬೆಳುಗಲಿಯಯ್ನೂರರೊಳ
ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ ।
ತಿಳಕಮೆನೆ ನೆಗಳ್ದ ಮುದುವೊಳ
ಲೊಳ್ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ॥

ಎಂದು ಹೇಳಿದಂತೆ, ಇದೇ ಬೆಳಗಾಂವಿ ಜಿಲ್ಲೆಗೆ ಹೊಂದಿಯೇ ಇರುವ ಮುದುವೊಳಲಲ್ಲಿ (ಈಗಿನ ಮುಧೋಳದಲ್ಲಿ) ೯೪೯ರಲ್ಲಿ ಜನ್ಮವನ್ನು ತಾಳಿ ಚಾಲುಕ್ಯರಾಜರ ಪೋಷಣೆಯಲ್ಲಿದ್ದು ಅಜರಾಮರವಾದ ಕನ್ನಡ ಕಾವ್ಯಗಳನ್ನು ಬರೆದಿರುವನು. ಇದರ ಮೇಲಿಂದ ಒಂಬತ್ತನೆಯ ಶತಮಾನದಲ್ಲಿ ಬೆಳಗಾಂವಿ ಜಿಲ್ಲೆಯೂ ಈಗಿನ ಮುಧೋಳ, ಜಮಖಂಡಿ ಸಂಸ್ಥಾನಗಳೂ ತಿರುಳ್ಗನ್ನಡ ನಾಡುಗಳಾಗಿದ್ದವೆಂದು ಸ್ಪಷ್ಟವಾಗುವುದು. ೧೧೨೩ನೆಯ ಇಸವಿಯಲ್ಲಿ ಚಾಲುಕ್ಯ ರಾಜನಾದ ವಿಕ್ರಮಾದಿತ್ಯನ ಸಾಮಂತ ಗೊಂಕದೇವನು ಬರೆಯಿಸಿದ ತೇರ್ದಾಳದ ಶಾಸನವಾದರೂ ಇದೇ ಮಾತನ್ನೇ ದೃಢಪಡಿಸುವುದು. ತೇರದಾಳ ಗ್ರಾಮವು ಸದ್ಯಕ್ಕೆ ಸಾಂಗಲಿ ಸಂಸ್ಥಾನಕ್ಕೆ ಒಳಪಟ್ಟಿದ್ದು ಬೆಳಗಾಂವಿಯಿಂದ ೭೦ ಮೈಲು ಅಂತರದ ಮೇಲಿದೆ. ಈ ಶಾಸನದೊಳಗಿನ ಒಂದು ಪದ್ಯವನ್ನು ಇಲ್ಲಿ ತಮಗೆ ಓದಿತೋರಿಸುತ್ತೇನೆ.

ಅಡಸುವ ಕುತ್ತುವೊತ್ತರಿಪ ಮಿತ್ತು, ಕಡಂಗುವ ಸಾರಿ, ಕೊಯ್ವಸಂ।
ತೊಡರ್ವ ವಿರೋಧಿ, ಪಾಯ್ವ ಪುಲಿ, ಪೊಯ್ವ ಸಿಡಿಲ್,
ಪಿಪಿಪ್ರುಗ್ರಸನ್ನಗಂ ॥
ಸುಡುವ ದವಾಗ್ನಿ ಬಾಧೆ ಕಡೆಗಣ್ಬುಪ್ರಪಂಪೊಡೆ ತೇರದಾಳದೀ
ಕಡುಗಲಿ ಗೊಂಕಭೂಪತಿಯ ಭವ್ಯತೆ ಕೇವಳಮೇ ನಿರೀಕ್ಷಿಸಲ್ ॥

ಇದಲ್ಲದೆ ೧೧೮೭ನೆಯ ಇಸವಿಯಲ್ಲಿ ಬರೆದ ತೊರಗಲ್ಲಿನ ಶಾಸನದ ಮೇಲಿಂದ ಬೆಳಗಾಂವಿಯಿಂದ ೮೦ ಮೈಲು ಅಂತರದ ಮೇಲಿರುವ ಕೊಲ್ಹಾಪುರ ಸಂಸ್ಥಾನಕ್ಕೊಳಪಟ್ಟ ಸದ್ಯದ ತೊರಗಲ ಸಂಸ್ಥಾನವೂ ಕೂಡ ಶುದ್ಧವಾದ ಕನ್ನಡ ನಾಡಾಗಿದ್ದಿತೆಂಬುದು ಸಿದ್ಧವಾಗುತ್ತದೆ. ತೊರಗಲೆ ದೇಶವನ್ನು ಬಹು ಸುಂದರವಾಗಿ ವರ್ಣಿಸುವ ಈ ಶಾಸನದೊಳಗಿನ ಕೆಳಗಿನ ಪದ್ಯವನ್ನು ನೋಡಿರಿ :

ನೆರೆದ ಕವುಂಗು ಬಗ್ಗಿಸುವ ಕೋಗಿಲೆ ತಳ್ತೆಲೆವಳ್ಳಿ ಸುತ್ತಲುಂ
ತುರುಗಿ ತಳರ್ತ ಮಾಮರನಿಕಾಯಮಗುರ್ವಿನ ಕರ್ಪುದೋಂಟಮಿಂ
ತರಿಕೆಯ ಚಾರುನಂದನವನಾವಳಿ ರಾಜಿಸೆ ಶೋಭೆವೆತ್ತುದೀ
ತೊರಗಲೆ ಭೂತನಾಥವಿಭುವಿಂ ಜಳಸಿರ್ವ ಮಲಪ್ರಹಾರಿಯಿಂ ॥

ಇದರಂತೆಯೇ ಇಡೀ ಕೊಲ್ಲಾಪುರ ಸಂಸ್ಥಾನವೆಲ್ಲವೂ ಅಚ್ಚಗನ್ನಡ ನಾಡಾಗಿತ್ತೆಂಬ ಬಗ್ಗೆ ಅನೇಕ ಶಿಲಾಶಾಸನಗಳ ಮೇಲಿಂದ ಗೊತ್ತಾಗು ವುದು. ಇಷ್ಟೇ ಏಕೆ! ಬೆಳಗಾಂವಿಯಂತೆಯೇ ಈಗ ಕನ್ನಡ–ಮರಾಠಿ ಗಡಿನಾಡಿನ ಸೊಲ್ಲಾಪುರ ಪಟ್ಟಣವು ೧೨ನೆಯ ಶತಮಾನದಲ್ಲಿ ಶುದ್ಧ ಕನ್ನಡ ನಾಡಾಗಿದ್ದಿತೆಂಬುದು ಸೊನ್ನಲಿಗೆಯುಪುರದ (ಈಗಿನ ಸೊಲ್ಲಾಪುರ) ಸಿದ್ಧರಾಮನು ಬರೆದ ಕಪಿಲ ಸಿದ್ಧಮಲ್ಲಿಕಾರ್ಜುನ ಎಂಬ ಅಂಕಿತದ ವಚನಗಳ ಮೇಲಿಂದಲೂ ಇತರ ಗ್ರಂಥಗಳಿಂದಲೂ ಸ್ಪಷ್ಟ ವಾಗುತ್ತದೆ. ಇದಲ್ಲದೆ ಸೊಲ್ಲಾಪುರ ಜಿಲ್ಲೆಯೆಲ್ಲವೂ ಸಹ ಕನ್ನಡ ನಾಡಾಗಿದ್ದಿತೆಂಬುದನ್ನು ೧೭ನೆಯ ಶತಮಾನದಲ್ಲಿದ್ದ ಗೋಪಕವಿಯು ಬರೆದ ನಂದಿಮಾಹಾತ್ಮ್ಯವೆಂಬ ಪ್ರೌಢ ಶೈಲಿಯ ಕಾವ್ಯದಿಂದ ಕಂಡು ಬರುತ್ತದೆ. ಈ ಗ್ರಂಥದೊಳಗಿನ

ಹರುಷಮಂ ತಾಳ್ದೀ ಮಹಾತ್ಮೆಯಂ ಪೇಳ್ದನಾ
ದರದಿ ವಿಶ್ವಾಮಿತ್ರ ಗೋತ್ರಜಂ ಭೀಮರಥಿ
ವರತೀರದೊಳ್ಗೊಳಪ ಖೇಡ ಬುಯ್ಯರದ ಕರಣಿಕ
ಜೋತಿಯಾತ್ಮಭವನು ||

ಸರಸಿರುಹನೇತ್ರ ಶ್ರೀಮದನ ಗೋಪಾಲಕನ
ಕರುಣದಿಂ ಗೋವಿಂದನೆಂಬೊರ್ವನಂ ಪ್ರಿಯದಿ
ಪರಮ ಸತ್ಪುರುಷರಾಲಿಸಿ ಲಾಲಿಸುವುದೆನ್ನ ಮೇಲುಳ್ಳ
ಮೋಹದಿಂದ ||

ಎಂಬ ಪದ್ಯದಿಂದ ಗ್ರಂಥಕರ್ತನು ಭೀಮಾನದಿಯ ತೀರದಲ್ಲಿರುವ ಬುಯ್ಯುರವೆಂಬ ಗ್ರಾಮದವನೆಂಬುದು ಸ್ಪಷ್ಟವಾಗುತ್ತದೆ. ಭೀಮರಥೀ ತೀರ ಎಂಬುದರಿಂದ ಒಂದುವೇಳೆ ಸೋಲಾಪುರದ ಜಿಲ್ಲೆಯೇ ಈತನ ದೇಶವಾಗಿರಬಹುದೆಂತಲೂ, ಬುಯ್ಯರವೆಂಬುದು ಆ ಜಿಲ್ಲೆಯಲ್ಲಿ ಪ್ರಸಿದ್ಧವಾದ ಈಗಿನ 'ಬಾರ್ಸಿ' ಎಂಬ ಗ್ರಾಮವಾಗಿ ಇದ್ದರೂ ಇರ ಬಹುದೆಂತಲೂ ಕರ್ನಾಟಕ ಕಾವ್ಯಕಲಾನಿಧಿಯ ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ, ಈ ನಮ್ಮ ಬೆಳಗಾಂವಿ ಜಿಲ್ಲೆಯಲ್ಲಿಯೂ ಸುತ್ತುಮುತ್ತ ಲಿನ ಮುಧೋಳ, ಜಮಖಂಡಿ, ಕೊಲ್ಲಾಪುರ ಸಂಸ್ಥಾನಗಳಲ್ಲಿಯೂ ಒಂದಾನೊಂದು ಕಾಲದಲ್ಲಿ ಪ್ರಾಬಲ್ಯ ಹೊಂದಿದ ಕನ್ನಡ ನುಡಿಯು ಈಗ ಕಳೆಗುಂದಿದೆ. ಒಮ್ಮೆ ತಿರುಳ್ಗನ್ನಡದ ನಾಡಾಗಿ ಮೆರೆದ ಬೆಳಗಾಂವಿಯು ಕಾಲವಶದಿಂದ ಈಗ ಗಡಿನಾಡಾಗಿದೆ. ಹೀಗೆ ಗಡಿ ನಾಡಿನ ಹೊಂದಿಗಿರುವ ಪರಭಾಷೆಯ ಆಕ್ರಮಣಶೀಲತೆಯು ನಮ್ಮ ಭಾಷೆಯನ್ನು ನುಗ್ಗುಗೊಳಿಸುತ್ತಿದೆಯೆಂಬ ಕೂಗು ಸಹ ಕೇಳಬರುತ್ತಿದೆ. ಆದರೆ ನಾವು ನಮ್ಮ ತಾಯ್ನುಡಿಯ ಅಭ್ಯಾಸ ಮಾಡಿ ಅದರ ಬಗ್ಗೆ ಜಾಜ್ವಲ್ಯವಾದ ಅಭಿಮಾನವನ್ನು ತಾಳಿ ಸುಸಂಘಟಿತವಾದ ರೀತಿಯಿಂದ ಅದರ ಏಳ್ಗೆಗಾಗಿ ಯತ್ನಿಸಿದರೆ ನಾವೀಗ ತಿಳಿದುಕೊಳ್ಳುವಷ್ಟು ಪರಭಾಷೆಯಿಂದ ನಮ್ಮ ಭಾಷೆಗೆ 'ಮರಣಾಂತ'ಪ್ರಸಂಗ ಬಂದುದೆನಿಸು ವುದಿಲ್ಲ. ಇದಲ್ಲದೆ ನಮ್ಮ ಜಿಲ್ಲೆಯ ಕನ್ನಡಿಗರ ಸಂಖ್ಯೆಯನ್ನು ನೋಡಿದರೆ, ಬೆಳಗಾಂವಿ ಜಿಲ್ಲೆಯು ಪ್ರಾಮುಖ್ಯವಾಗಿ ಕನ್ನಡನಾಡಾಗಿ ರುವುದೆಂಬುದು ಸ್ಪಷ್ಟವಾಗುವುದರಿಂದ ಇಲ್ಲಿಯ ಪ್ರತಿಯೊಬ್ಬ ಕನ್ನಡಿ ಗನೂ ತನ್ನ ತಾಯ್ನುಡಿಯ ಬಗ್ಗೆ ಅಭಿಮಾನ ತಾಳಿ ಅದರ ಏಳಿಗೆಗಾಗಿ ಪ್ರಯತ್ನಿಸಿದರೆ ಪ್ರಗತಿಯುಂಟಾಗಲು ತಡವಾಗಲಿಕ್ಕಿಲ್ಲ. ಈ ನಮ್ಮ ಜಿಲ್ಲೆಯ ಜನಸಂಖ್ಯೆಯು ೧೯೩೧ನೆಯ ಇಸವಿಯ ಜನಗಣತಿಯ ಮೇರೆಗೆ ೧೦,೭೬,೭೦೧ ಇದ್ದು ಅದರಲ್ಲಿ ೬,೧೫,೬೦೦ ಜನರು ಕನ್ನಡ ಮಾತಾಡುವವರಿದ್ದಾರೆ. ಮರಾಠಿ ಮಾತಾಡುವವರ ಸಂಖ್ಯೆಯು ೨,೬೮,೪೦೦ ಇರುತ್ತದೆ. ಮಾತೃಭಾಷೆಯು ಕನ್ನಡವಾಗಿದ್ದು ಮರಾಠಿ ಭಾಷೆಯನ್ನು ಉಪಭಾಷೆಯಾಗಿ ಮಾತಾಡುವವರ ಸಂಖ್ಯೆ ೨,೩೬,೯೯೨ ಇರುತ್ತದೆ. ಕನ್ನಡ ಮಾತಾಡುವವರ ಪ್ರಮಾಣವು ಈ ಜಿಲ್ಲೆಯಲ್ಲಿ ೧೦೦ಕ್ಕೆ ೬೧ರಷ್ಟು ಇರುವುದರಿಂದ ಮೇಲೆ ಈ ಜಿಲ್ಲೆಯು ಮುಖ್ಯವಾಗಿ ಕನ್ನಡ ನಾಡಾಗಿರುವುದೆಂಬುದು ಸ್ಪಷ್ಟವಿದೆ.

ಒಟ್ಟು ಮುಂಬಯಿ ಇಲಾಖೆಯಲ್ಲಿ ಮುಖ್ಯ ಭಾಷೆಯನ್ನಲ್ಲದೆ ಉಪಭಾಷೆಯನ್ನು ಉಪಯೋಗಿಸುವವರಲ್ಲಿ ಕನ್ನಡಿಗರ ಪ್ರಮಾಣವು ಹೆಚ್ಚಾಗಿದೆ. ಕನ್ನಡಿಗರಲ್ಲಿ ೧೦೦ಕ್ಕೆ ೫೫ರಂತೆ ಉಪಭಾಷೆಯನ್ನುಪ ಯೋಗಿಸುವವರಿದ್ದಾರೆ; ಗುಜರಾಥಿಗಳಲ್ಲಿ ಈ ಪ್ರಮಾಣವು ೧೦೦ಕ್ಕೆ ೫೧ ರಷ್ಟೂ, ಮರಾಠೀ ಮಾತಾಡುವವರಲ್ಲಿ ೨೨ರಷ್ಟೂ, ಸಿಂಧೀ ಜನರಲ್ಲಿ ೧೧ ರಷ್ಟೂ ಇರುತ್ತದೆ. ಇದರ ಮೇಲಿಂದ ಕನ್ನಡ ಮಾತಾ ಡುವ ಭಾಗಗಳಲ್ಲಿ ಏಕರೂಪತೆಯಿರುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅದರಲ್ಲಿಯೂ ಯಾವ ಭಾಗಗಳಲ್ಲಿ ಎರಡು ಭಾಷೆಗಳಲ್ಲಿ ಸಮವಾಗಿ ಯಾಗಲಿ ವಿಷಮವಾಗಿಯಾಗಲಿ ತಿಕ್ಕಾಟವಿರುವದೋ ಅಂಥಲ್ಲಿ ಮುಖ್ಯ ಭಾಷೆಯೊಂದಿಗೆ ಉಪಭಾಷೆಯ ಉಪಯೋಗವು ಬಳಕೆಯಲ್ಲಿ ಬಂದಿರು ತ್ತದೆ. ಬೆಳಗಾಂವಿಯು ಇಂಥದೊಂದು ಭಾಗವಾಗಿರುವುದರಿಂದ ಅದು ಗಡಿನಾಡು ಎಂದೆನಿಸಿಕೊಳ್ಳುತ್ತದೆ. ಅಂತೆಯೇ ಇಲ್ಲಿಯ ಮುಖ್ಯ ಭಾಷೆ ಕನ್ನಡವಾಗಿದ್ದರೂ ಬೇರೊಂದು ಉಪಭಾಷೆಯು ಬಳಕೆಯಲ್ಲಿ ಬಂದಿದೆ. ಆದುದರಿಂದಲೇ ಇಲ್ಲಿ ಕನ್ನಡವು ಮಾತೃಭಾಷೆಯಾಗಿದ್ದ ೬,೧೫,೬೦೦ ಜನರೊಳಗೆ ೩೧,೭೦೮ ಜನರು ಮರಾಠಿಯನ್ನು ಉಪಭಾಷೆಯಂತೆ ಉಪಯೋಗಿಸುತ್ತಾರೆ. ಕನ್ನಡ ಭಾಷೆಯು ಪ್ರಧಾನವಾದ ಇತರ ಭಾಗಗಳಲ್ಲಿ ಹೀಗೆ ಮರಾಠಿಯನ್ನು ಉಪಭಾಷೆಯಾಗಿ ಉಪಯೋಗಿಸು ವವರ ಸಂಖ್ಯೆಯು ಕಡಮೆಯಾಗಿರುತ್ತದೆಂಬುದನ್ನು ನಾನು ತಮ್ಮ ನಿದರ್ಶನಕ್ಕೆ ತಂದು ಕೊಡಲಿಚ್ಛಿಸುತ್ತೇನೆ—

| | ಕನ್ನಡವು ಮಾತೃಭಾಷೆಯಾಗಿದ್ದವರು | ಮರಾಠಿಯನ್ನು ಉಪಭಾಷೆಯಂತೆ ಉಪಯೋಗಿಸುವವರು | ಕೇವಲ ಮರಾಠೀ ಮಾತಾಡುವವರು |
|---|---|---|---|
| ಧಾರವಾಡ ಜಿಲ್ಲೆ | ೮,೬೩,೯೩೪ | ೬೭೦೮ | ೪೧,೯೫೯ |
| ವಿಜಾಪುರ ,, | ೭,೧೨,೨೫೯ | ೭೨೬೯ | ೨೬,೮೫೩ |
| ಕಾರವಾರ ,, | ೨,೫೯,೫೬೬ | ೨೮೨೧ | ೨೭,೬೯೫ |

ಒಟ್ಟು ಇಲಾಖೆಯನ್ನೇ ತೆಗೆದುಕೊಂಡರೆ ಒಟ್ಟು ೨,೬೨,೭೧,೭೮೪ ಜನ ಸಂಖ್ಯೆಯಲ್ಲಿ ೩೧,೯೭,೪೧೭ ಜನರು ಕನ್ನಡ ಮಾತಾಡುವವ ರಿದ್ದಾರೆ. ಅಂದರೆ ೮ ರಲ್ಲೊಬ್ಬನು ಕನ್ನಡ ಮಾತಾಡುವವನಿದ್ದಾನೆ. ಮತ್ತು ಇಡೀ ಇಲಾಖೆಯಲ್ಲಿ ಕನ್ನಡವು ಮಾತೃಭಾಷೆಯಾಗಿದ್ದು ಮರಾಠಿಯನ್ನು ಉಪಭಾಷೆಯಂತೆ ಬಳಸುವವರು ೧,೩೩,೦೦೦ ಜನರು ಇದ್ದಾರೆ. ಕನ್ನಡ ಮಾತೆಯ ನಿಜವಾದ ಸೇವೆಯನ್ನು ಗೈಯ ಲಿಚ್ಛಿಸುವ ಕನ್ನಡ ಸತ್ಪುತ್ರರು ಅದರಲ್ಲಿಯೂ ಗಡಿನಾಡಿನಲ್ಲಿ ವಾಸಿಸು ವವರು ಉಪಭಾಷೆಯ ಉಪಯೋಗವನ್ನು ಕಡಮೆ ಮಾಡಲಿಕ್ಕೆ ಪ್ರಯತ್ನಿಸುವುದು ಆವಶ್ಯಕವು. ಉಪಭಾಷೆಯನ್ನು ಉಪಯೋಗಿಸು ವವರಲ್ಲಿ ಕನ್ನಡಿಗರಷ್ಟು ಉದಾರಮನಸ್ಕರು ಇನ್ನು ಬೇರೆ ಯಾರೂ ಇಲ್ಲ. ಈ ಉದಾರತೆಯು ಅಪ್ರತ್ಯಕ್ಷವಾಗಿ ಪರರಿಗುಪಕಾರಿಯಾಗಿ ಸ್ವತಃಕ್ಕೆ ಪ್ರತ್ಯಕ್ಷವಾಗಿ ಅಪಕಾರಿಯಾಗಿ ಪರಿಣಮಿಸುವುದು.

ಆದುದರಿಂದ ಮಾತೃಭಾಷೆಯ ಬಗ್ಗೆ ಉತ್ಕಟ ಪ್ರೇಮವಿದ್ದರೂ ವ್ಯಾವಹಾರಿಕ ದೃಷ್ಟಿಯಿಂದ ಪರಭಾಷೆಯನ್ನುಪಯೋಗಿಸುವ ಈ ನಮ್ಮ ಬೆಳಗಾಂವಿ ಜಿಲ್ಲೆಯೊಳಗಿನ ಗುರುಹಿರಿಯರಿಗೂ ಬಂಧುಭಗಿನಿಯರಿಗೂ ಈ ಪ್ರವೃತ್ತಿಯನ್ನು ಶಕ್ಯವಿದ್ದಮಟ್ಟಿಗೆ ಕಡಮೆಮಾಡಿ ಮಾತೃ ಭಾಷೆಯ ಉಪಯೋಗವನ್ನೇ ಯಾವಾಗಲೂ ಮಾಡಿ ಗಡಿನಾಡಿನಲ್ಲಿ ಕೊರಗುತ್ತ ನಡೆದಿರುವ ನಮ್ಮ ಭಾಷಾಮಾತೆಯ ಉದ್ಧಾರಕ್ಕಾಗಿ ಹಸ್ತಭಾರ ವನ್ನೀಯಬೇಕೆಂದು ಬಿನ್ನವಿಸುತ್ತೇನೆ. ತನ್ನ ಹಿರಿಯಕ್ಕನ ಮಕ್ಕ ಳನ್ನು ತನ್ನ ಕಡೆಗೆ ಬರಮಾಡಿಕೊಳ್ಳುವ ಆಕರ್ಷಣ ಶಕ್ತಿಯನ್ನು ಪಡೆದುದಕ್ಕಾಗಿ ನನ್ನ ಕನ್ನಡ ಮಾತೆಯ ಚಿಕ್ಕ ಸಹೋದರಿಯಾದ ಮರಾಠೀ ದೇವಿಯನ್ನು ನಾನು ವಂದಿಸುತ್ತೇನೆ. ಆದರೆ ಚಿಕ್ಕಮ್ಮನ ಜೀವಣಿಗೆಗಾಗಿ ಹೆತ್ತಮ್ಮನ ಕುತ್ತಿಗೆ ಹಿಸುಕಬೇಡಿರೆಂದು ನಾನು ನನ್ನ ಬಂಧುಭಗಿನಿಯರಲ್ಲಿ ಬೇಡಿಕೊಳ್ಳುತ್ತೇನೆ. ಸಾಮಾನ್ಯದ ದೃಷ್ಟಿಯಿಂದ ಮಾತೃಭಾಷೆಯನ್ನು ಕಲಿತು ಇತರ ಅನೇಕ ಪರಭಾಷೆಗಳನ್ನು ಅಭ್ಯ ಸಿಸುವುದು ಆವಶ್ಯಕವೆಂಬುದು ನಿಜವು. ಬೇಕೇ ಅಲ್ಲ. ಯಾವುದೇ ಒಂದು ವಾಙ್ಮಯದ ನಿಜವಾದ ಪ್ರಗತಿಯಾಗಬೇಕಾದರೆ, ಇತರ ಭಾಷೆಗಳ ಅಭ್ಯಾಸವನ್ನು ಚೆನ್ನಾಗಿ ಮಾಡಿ ಆಯಾ ಭಾಷೆಗಳೊಳಗಿನ ಉತ್ತಮೋತ್ತಮವಾದ ಗ್ರಂಥಗಳನ್ನು ಭಾಷಾಂತರಿಸಿಯಾಗಲಿ ಅನು

ವಾದಿಸಿಯಾಗಲಿ ಆ ವಾಙ್ಮಯವನ್ನು ಬೆಳೆಯಿಸಬೇಕು. ಆದರೆ ಪರಭಾಷೆಯು ಎಷ್ಟೆಂದರೂ ಪರಭಾಷೆಯೆ ಎಂಬುದರ ಅರಿವು ಇರುವುದು ಅವಶ್ಯವು. 'ಮನೆ ಗೆದ್ದು ಮಾರು ಗೆಲ್ಲಬೇಕು' ಎಂಬ ಗಾದೆಯಂತೆ ತಾಯ್ನುಡಿಗೆ ಗೊಬ್ಬರವಾಗಿ ಅದರ ಬೆಳವಣಿಗೆಗೆ ಸಹಕಾರಿಯಾಗುವಂತೆ ಮಾತ್ರ ಪರಭಾಷೆಗಳನ್ನು ಕಲಿಯುವುದು ಸ್ವಾಭಾವಿಕವಾದ ನಿಯಮವಾಗಿದೆ. ವಸ್ತುಸ್ಥಿತಿಯು ಹಾಗಿರದಿದ್ದರೂ, ಇಲ್ಲಿಯ ನಮ್ಮ ಮರಾಠೀ ಬಂಧುಗಳು ತಮ್ಮ ಭಾಷೆಯ ಮೇಲೆ ಕನ್ನಡಿಗರ ಆಕ್ರಮಣವಾಗಹತ್ತಿದೆಯೆಂದು ಅನ್ನುತ್ತಿರುವುದು ಅಲ್ಲಲ್ಲಿ ಕೇಳಬರುತ್ತಿದೆ. ಸಂಘಟಿತವಾದ ಮಾರ್ಗವನ್ನವಲಂಬಿಸಿ ಅವರು ತಮ್ಮ ಭಾಷೆಯ ಬೆಳವಣಿಗೆಗಾಗಿ ಯತ್ನಿಸುತ್ತಿರುವುದನ್ನು ನಾವು ನೋಡುತ್ತೇವೆ. ಇದೆಲ್ಲವೂ ಅವರ ಜಾಜ್ವಲ್ಯವಾದ ಸ್ವಭಾಷಾಭಿಮಾನದ ದ್ಯೋತಕವಾಗಿದೆ. ಇಂಥ ಕಡುತರವಾದ ಸ್ವಭಾಷಾಭಿಮಾನವನ್ನು ನಾವಿನ್ನೂ ಕಲಿಯಬೇಕಾಗಿದೆ.

ಕನ್ನಡ ಭಾಷೆಯು ಇಂದು ಸುಮಾರು ಒಂದೂಕಾಲು ಕೋಟಿ ಜನರು ಆಡುವ ಚೆಲುವ ಭಾಷೆ. ಅದು ಬಹು ಪುರಾತನವಾದುದು. ನಿನ್ನೆ ಮೊನ್ನೆ ಹುಟ್ಟಿದ ಅಳಿಭಾಷೆಯಲ್ಲ. ಅದಕ್ಕೆ ಪುರಾತನ ಕಾಲದಿಂದಲೂ ಪ್ರತ್ಯೇಕವಾದ ಸಂಸ್ಕೃತಿಯಿದೆ. ಅದು ಪ್ರತ್ಯೇಕವಾದೊಂದು ಜನಾಂಗದ ಸೊತ್ತಾಗಿದೆ. ಪ್ರತ್ಯೇಕವಾದ ಭೌಗೋಲಿಕ ಮೇರೆಯನ್ನು ಪಡೆದಿದೆ. ಕ್ರಿ. ಶ. ೧೨ನೆಯ ಶತಮಾನದವರೆಗೆ ಕನ್ನಡ ಮಾತೆಗೆ ಜೈನಕವಿಗಳು ಉದ್ದಾಮ ಚಂಪೂ ಕಾವ್ಯರೂಪವಾದ ಅಂದವಾದ ತೊಡವುಗಳನ್ನು ತೊಡಿಸಿದರು. ಮುಂದೆ ಕಾಲಕಾಲಕ್ಕೆ ವೀರಶೈವ ಮತ್ತು ವೈಷ್ಣವ ಕವಿಗಳು ಕನ್ನಡ ಭಾಷೆಯ ಸೌಂದರ್ಯವನ್ನು ಹೆಚ್ಚಿಸುತ್ತ ಬಂದರು. ಹೀಗೆ ಪ್ರತ್ಯೇಕವಾದ ಸಂಸ್ಕೃತಿಯನ್ನು ಪಡೆದ ಬಹು ಪುರಾತನಳಾದ ನಮ್ಮ ಕನ್ನಡ ಮಾತೆಯು ಕಾಲ ಕಾಲಕ್ಕೆ ಪರಿಸ್ಥಿತಿಗಳಿಗನುಸಾರವಾಗಿ ವಿವಿಧವಾದ ತೊಡವುಗಳನ್ನು ಧರಿಸುತ್ತ "ಪುರಾಣೀ ನವಯುವತಿ"ಯೆಂದು ಋಗ್ವೇದದಲ್ಲಿ ವರ್ಣಿಸಲ್ಪಟ್ಟ ಉಷಾದೇವಿಯಂತೆ ಚಿರಸ್ಥಿರಳಾಗಿರುವಳು. ಕನ್ನಡ ಭಾಷೆಯು ಗೌಡ ಭಾಷೆಗಳ ಚಲ್ಲಾಟದ ಬಲದಿಂದ ತಿಲಾಂಶವಾದರೂ ಕುಗ್ಗದೆ ಬಗ್ಗದೆ ನಿಂತಿರುವ ಬಗ್ಗೆ ೧೯೩೧ನೆಯ ಇಸವಿಯ ಖಾನೇಸುಮಾರಿಯ ವರದಿಯಲ್ಲಿ ಹೇಳಿದ ವಾಕ್ಯಗಳನ್ನು ನಾನು ತಮಗಾಗಿ ಓದಿ ತೋರಿಸುತ್ತೇನೆ.

"Displacement of Dravidian and minor languages by Aryan Languages :—The only Dravidian languages deserving mention in this connection are Brahui and Kanarese. Kanarese shows no signs of yielding before Aryan languages...............Kanarese is a main language well established racially, culturally, socially and geographically and there is no likelihood of its failing to keep its place."

**(Census of India 1931, Volume VIII, Part I, Page 385)**

ಯಾವುದೊಂದು ಜನಾಂಗವು ಉಳಿದು ಬಾಳಬೇಕಾದರೆ ಜೀವಿಗೂ ಜಗತ್ತಿಗೂ ಇರುವ ಸಂಬಂಧವನ್ನು ತೋರಿಸಿಕೊಡುವ ಸಾಧನವಾದಂಥ ಒಂದು ಭಾಷೆಯು ಅದಕ್ಕೆ ಅಗತ್ಯವಾಗಿದೆ. ಅದು ಮಾನವ ಪ್ರಾಣಿಯ ನಿತ್ಯದ ಆಹಾರ ನಿದ್ರಾದಿ ಸಾಮಾನ್ಯ ವ್ಯವಹಾರಗಳಿಗೆ ಮಾತ್ರ ಉಪಯುಕ್ತವಾಗುವಷ್ಟು ಇದ್ದರೆ ತೀರದು. ಆ ಭಾಷೆಯಲ್ಲಿ ಉತ್ತಮವಾದ ಗ್ರಂಥಗಳು, ಆ ಗ್ರಂಥಗಳನ್ನೋದಿ ಅನುಭವಿಸುತ್ತಿರುವ ಜನರು ಇದ್ದರೆ ಮಾತ್ರ ಆ ಜನಾಂಗವು ತನ್ನ ಅಸ್ತಿತ್ವವನ್ನು ರಕ್ಷಿಸಿಕೊಳ್ಳಲಿಕ್ಕೆ ಸಮರ್ಥವಾಗುವದು. ನಮ್ಮ ಕನ್ನಡದ ಒಳ್ನುಡಿಯಲ್ಲಿ ಉತ್ತಮವಾದ ಹಳೆಯ ಗ್ರಂಥಗಳ ರಾಶಿಯು ಬಹು ದೊಡ್ಡದಿದೆ. ಆದರೆ ಅವು ಗಡುಸಾದ ಭಾಷೆಯಲ್ಲಿ ಬರೆಯಲ್ಪಟ್ಟಿರುವುದರಿಂದ ಅವು ಕೇವಲ ಪಂಡಿತರ ಸೊತ್ತಾಗಿವೆ. ಆದರೆ ಸಾಹಿತ್ಯವು ಕೇವಲ ಪಂಡಿತರ ಸೊತ್ತಾಗಿರದೆ ಜನಸಾಮಾನ್ಯರಿಗೂ ಅದು ಅವಶ್ಯವಾಗಿರುವದರಿಂದ ಸುಲಭವಾದ ಶೈಲಿಯಲ್ಲಿ ಗ್ರಂಥನಿರ್ಮಾಣವಾಗಿ ಆ ಗ್ರಂಥಗಳನ್ನು ಜನಸಾಮಾನ್ಯರು ಅನುಭವಿಸುವಂತಾಗಬೇಕು. ಹಲ್ಲು ತುಂಡಾದರೂ ಕಡಿಯಲಿಕ್ಕಾಗದ ಉಕ್ಕಿನ ಕಡಲೆಗಳಂತಿರುವ ಉದ್ದುದ್ದ ಸಮಾಸದ ಶ್ಲೇಷಾಲಂಕಾರಗಳಿಂದ ಗಡುಸಾದ ಆ ಪೂರ್ವದ ಭಾಷೆಯ ದಿನಗಳು ಈಗ ಉಳಿದಿಲ್ಲ. ಈಗ ನಮಗೆ ಬೇಕಾಗಿರುವ ಸಾಹಿತ್ಯವು ಜನಸಾಮಾನ್ಯರಿಗಾಗಿ. ಈಗಿನ ಹೊಸಕಾಲಕ್ಕೆ ಹೊಸ ಜೀವವನ್ನು ಕೊಡುವಂಥ ಹೊಸಗನ್ನಡದ ಸಾಹಿತ್ಯವು ಬೇಕು. ಇಂಥ ಸಾಹಿತ್ಯವು ಇತ್ತೀಚೆಗೆ ಬಹುಮುಖವಾಗಿ ತಲೆದೋರಹತ್ತಿರುವುದು ಆನಂದಕರವಾದ ಸಂಗತಿಯಾಗಿದೆ. ಸಾಹಿತ್ಯವು ಜೀವನಕ್ಕೆ ಅವಶ್ಯವಾದುದು; ಅದು ಜೀವನಕ್ರಮದ ಪ್ರತೀಕವು; ಅದಕ್ಕೂ ಜೀವನಕ್ಕೂ ನಿಕಟವಾದ ಸಂಬಂಧವಿದೆ; ಅದು ಜೀವನದೊಳಗಿಂದಲೇ ಬೆಳೆಯುವುದು. ಅನ್ವಿತ ವಿಜ್ಞಾನದಂತೆ ಸಾಹಿತ್ಯವನ್ನೂ ಜನಜೀವನಕ್ಕೆ ಅನ್ವಿತವನ್ನಾಗಿ ಮಾಡಬಹುದು ಎಂಬುದನ್ನು ಜನಸಾಮಾನ್ಯರಿಗೆಲ್ಲ ತಿಳಿಸಿ ಅವರಲ್ಲಿ ಸಾಹಿತ್ಯದ ಬಗ್ಗೆ ಅಭಿರುಚಿಯನ್ನುಂಟುಮಾಡುವದು ಕನ್ನಡದ ಹಿರಿಯರ ಆದ್ಯಕರ್ತವ್ಯವಾಗಿದೆ. ನಾನು ಸಾಹಿತ್ಯಸಮ್ಮೇಲನಕ್ಕಾಗಿ ಹಣವನ್ನು ಕೇಳುವದಕ್ಕಾಗಿ ಹಳ್ಳಿಗಳಿಗೆ ಹೋಗಿದ್ದಾಗ ನನಗೆ ಹೆಜ್ಜೆ ಹೆಜ್ಜೆಗೂ 'ಸಾಹಿತ್ಯವೆಂದರೇನು? ಅದು ಮನುಷ್ಯನಿಗೆ ಊಟಕ್ಕೆ ಹಾಕುವುದೆ? ಇಷ್ಟು ಹಣವನ್ನು ಕೂಡಿಸಿ ಜನರದೊಂದು ದೊಡ್ಡ ಗುಂಪನ್ನು ಕೂಡಿಸುವುದರಿಂದೇನು ಪ್ರಯೋಜನ?' ಎಂದು ಕೇಳುವವರೇ ನನಗೆ ದೊರೆತರು. ನಮ್ಮ ಹಳ್ಳಿಯ ಬಾಂಧವರು ಹೀಗೆ ಕೇಳಿದುದು ಅಷ್ಟೇನೂ ಆಶ್ಚರ್ಯಕರವಲ್ಲವೆಂದು ನಾವು ಅಂದುಕೊಳ್ಳಬಹುದು. ಆದರೆ ಜಿಲ್ಲೆಯೊಳಗಿನ ಎಷ್ಟೋ ಸುಶಿಕ್ಷಿತ ಜನರು ಇಂಥ ಉದ್ಗಾರಗಳನ್ನು ತೆಗೆಯುತ್ತಿರುವುದು ಸಖೇದಾಶ್ಚರ್ಯಕರವಾಗಿದೆ. ನೃಪತುಂಗ ದೇವನ ಕಾಲದಲ್ಲಿ 'ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್' ಆಗಿದ್ದ ಕನ್ನಡ ನಾಡವರು ಇದೀಗ ಓದಿಯೂ ಕೂಡ ಸಾಹಿತ್ಯದ ಬಗ್ಗೆ ಉದಾಸೀನ ವೃತ್ತಿಯನ್ನು ತಳೆಯಹತ್ತಿರುವುದು ವಿಷಾದಕರವಾಗಿದೆ. ಆದುದರಿಂದ ಸಾಹಿತ್ಯ ಸಮ್ಮೇಳನದ ಅಧಿವೇಶನಗಳಿಂದಾಗಬೇಕಾಗಿದ್ದ ಮುಖ್ಯವಾದ ಕೆಲಸವೆಂದರೆ ಸಾಹಿತ್ಯದ ಜ್ಞಾನದ ಬಗ್ಗೆ ಹಳ್ಳಿ ಹಳ್ಳಿಗಳಲ್ಲಿಯೂ ಪ್ರಚಾರ ಕಾರ್ಯವನ್ನು ಮಾಡುವುದು. ನಿರಕ್ಷರ ಕುಕ್ಷಿಗಳಾಗಿ ಅಜ್ಞಾನಾಂಧಕಾರದಲ್ಲಿ ಮುಳುಗಿದ ನಮ್ಮ ಹಳ್ಳಿಯ ಬಾಂಧವರಲ್ಲಿ ವಿದ್ಯಾಪ್ರಚಾರವನ್ನೂ ತಾಯ್ನುಡಿಯ ಮಹತ್ವದ ಜ್ಞಾನವನ್ನೂ ಮಾಡಿಕೊಡುವುದು ಒಳ್ಳೇ ಅಗತ್ಯವಾಗಿದೆ. ಹಿಂದಿನ ಕಾಲದಲ್ಲಿ ಜನಸಾಮಾನ್ಯರಲ್ಲೆಲ್ಲ ತಿಳಿವಳಿಕೆ ಹರಡಲು ಪುರಾಣ, ಕೀರ್ತನೆ, ಲಾವಣಿ ಮೊದಲಾದ ಅನೇಕ ಸಾಧನಗಳಿದ್ದವು. ಇತ್ತೀಚೆಗೆ ಆ ಸಾಧನಗಳು ಕಡಮೆಯಾಗಹತ್ತಿವೆ. ಈಗ ಬಡಬಗ್ಗರಲ್ಲಿ ಅಲ್ಪಮಟ್ಟಿಗೆ ಉಳಿದ ನಮ್ಮ ಜನಪದ ಸಾಹಿತ್ಯವನ್ನು ಪರದೇಶದ ಪಂಡಿತರು ಬಂದು ರಿಕಾರ್ಡುಗಳಲ್ಲಿ ಸೇರಿಸಿಕೊಂಡು ತೆಗೆದುಕೊಂಡು ಹೋಗುತ್ತಿರುವರು. ಇನ್ನು ಕೆಲವು ವರುಷಗಳ ಮೇಲೆ ನಮ್ಮಲ್ಲಿಯ ಜ್ಞಾನಪ್ರಸಾರದ ಪೂರ್ವದ ಸಾಧನಗಳು ಸಂಪೂರ್ಣವಾಗಿ ನಾಶವಾಗಿ, ನಮ್ಮ ದೇಶದ ಇತಿಹಾಸ, ವೇದ ಮೊದಲಾದವುಗಳನ್ನು ನಾವು ಈಗ ಪರದೇಶದವರಿಂದ ತಿಳಿದುಕೊಂಡು ಆಶ್ಚರ್ಯಪಡುವಂತೆ, ಇನ್ನು ಮುಂದೆ ಪರದೇಶದವರಿಂದ ನಮ್ಮ ಜನಪದ ಸಾಹಿತ್ಯವು ಇಂತಹದೊಂದಿತ್ತೆಂದು ಕಂಡುಕೊಳ್ಳುವ ಪ್ರಸಂಗವು ಬರಬಹುದೇನೋ ಎಂಬ ಭೀತಿಯಿದೆ. ಜ್ಞಾನಪ್ರಚಾರದ ಇಂದಿನ ಸಾಧನಗಳಾದ ರೇಡಿಯೊ, ಸಿನಿಮಾ, ಮ್ಯಾಜಿಕ್ ಲ್ಯಾಂಟರ್ನ್ ಮೊದಲಾದುವು ಬಡಬಗ್ಗರ ಕೈಗೆ ಸಿಲುಕದಂಥವುಗಳಾಗಿರುವುದರಿಂದ ಅವು ಪಟ್ಟಣಗಳಿಗೆ ಮಾತ್ರ ಅನುಕೂಲವಾಗಿವೆ. ಆದುದರಿಂದ ಹಳ್ಳಿಗಳಲ್ಲಿ ಸಾಹಿತ್ಯದ ಪ್ರಚಾರವನ್ನು ಕೈಕೊಂಡು ಅಲ್ಲಿಯ ಸ್ಥಳೀಯ ಜನಪದ ಸಾಹಿತ್ಯವನ್ನು ಉಳಿಸಿ ಬೆಳೆಯಿಸಿ

ಕೊಳ್ಳುವದು ಮುಖ್ಯವಾದ ಕರ್ತವ್ಯವಾಗಿದೆ. ಮೈಸೂರು ಸಂಸ್ಥಾನದಲ್ಲಿ ವಸಂತ ಸಾಹಿತ್ಯೋತ್ಸವಗಳನ್ನು ಏರ್ಪಡಿಸುವುದರಿಂದಲೂ ಪ್ರಚಾರೋಪನ್ಯಾಸಮಾಲೆಯೆಂಬ ಸುಲಭಶೈಲಿಯ ಅಲ್ಪ ಬೆಲೆಯ ಚಿಕ್ಕ ಪುಸ್ತಕಗಳನ್ನು ಪ್ರಸಿದ್ಧಿಸುವುದರಿಂದಲೂ ಈ ಕಾರ್ಯವು ಈಗಾಗಲೆ ನಡೆದಿದೆ. ಸಾಹಿತ್ಯಪರಿಷತ್ತು ಕೈಕೊಂಡ ಈ ಉಪಕ್ರಮವು ಅತ್ಯಂತ ಅಭಿನಂದನೀಯವಾಗಿದೆ. ಈ ತರದ ಕಾರ್ಯವು ಕರ್ನಾಟಕದ ಪ್ರತಿಯೊಂದು ಭಾಗದಲ್ಲಿಯೂ ಸಾಗುವುದು ಅವಶ್ಯವಾಗಿದೆ. ಸುದೈವದಿಂದ ಈ ನಮ್ಮ ಬೆಳಗಾವಿಯಲ್ಲಿ ಕಳೆದ ಹತ್ತಾರು ವರ್ಷಗಳಿಂದ ಕನ್ನಡ ನುಡಿಯ ಬಗ್ಗೆ ಜಾಗೃತಿಯುಂಟಾಗಿದೆ. ಈ ಜಾಗೃತಿಯ ದೀವಿಗೆಯನ್ನು ನಾವು ಜಿಲ್ಲೆಯ ಹಳ್ಳಿಪಳ್ಳಿಗಳಲ್ಲಿಯೂ ಬೆಳಗಿಸಿ ಭಾಷಾಭಿಮಾನವನ್ನು ಜಾಗೃತಗೊಳಿಸಬೇಕಾಗಿದೆ.

ಕನ್ನಡ ಪ್ರಾಂತದ ಪ್ರತಿಯೊಂದು ಜಿಲ್ಲೆಯಲ್ಲಿಯೂ ಸಾಹಿತ್ಯ ಪ್ರಚಾರದ ಕೇಂದ್ರ-ಸಂಸ್ಥೆಯು ನಿರ್ಮಾಣವಾಗಿ ತಾಲ್ಲೂಕುಗಳಲ್ಲೆಲ್ಲ ಅದರ ಅಂಗ ಸಂಸ್ಥೆಗಳು ಸ್ಥಾಪಿತವಾಗಿ ಅವುಗಳ ಮುಖಾಂತರ ಹಳ್ಳಿಪಳ್ಳಿಗಳಲ್ಲೆಲ್ಲ ಹಳ್ಳಿಯ ಸಾಹಿತ್ಯ, ವ್ಯಾವಹಾರಿಕ ಭಾಷೆಯಲ್ಲಿಯೇ ಬರೆಯಿಸಿದ ಸಾಹಿತ್ಯ, ಮುಂತಾದವುಗಳಿಂದ ಸಾಹಿತ್ಯದ ಪ್ರಚಾರ ಕಾರ್ಯವನ್ನು ಮಾಡುವುದು ಅವಶ್ಯವಿದೆ. ಹೀಗೆ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿಯೂ ಸಾಹಿತ್ಯಜ್ಞಾನದ ಪ್ರಸಾರವಾದರೆ ಜನರಲ್ಲಿ ನಾಗರಿಕ ಜೀವನಕ್ಕೆ ತಕ್ಕುದಾದ ವ್ಯಕ್ತಿತ್ವವುಂಟಾಗಿ ಅವರಲ್ಲಿ ಸಮಾಜಯಂತ್ರದ ಕೀಲೆಣ್ಣೆಯಾದ ಸಹೃದಯತೆಯು ಬೆಳೆದು ಅವರು ಸಮಾಜದ ಒಳ್ಳೆಯ ಉಪಯೋಗಿಯಾದ ಘಟಕರಾಗುವರು; ಸದ್ಯದ ಪ್ರಜಾಸತ್ತೆಯ ಪದ್ಧತಿಯ ರಾಜ್ಯಕ್ರಮದಲ್ಲಿ ಯೋಗ್ಯವಾಗಿ ಭಾಗವಹಿಸಲಿಕ್ಕೆ ವಿಚಾರಪರರೂ ನ್ಯಾಯಶೀಲರೂ ಆಗುವರು. ಕಳೆದ ೨೪ ವರ್ಷಗಳಿಂದಲೂ ಕನ್ನಡ ನುಡಿಯ ಉನ್ನತಿಗಾಗಿ ಹೆಣಗಾಡುತ್ತ ಕನ್ನಡದೇವಿಗೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಲಿರುವ ಮೈಸೂರು ಶ್ರೀಮನ್ಮಹಾರಾಜರವರ ಉದಾರಾಶ್ರಯದಿಂದ ಪೋಷಿತವಾದ ಸಾಹಿತ್ಯ ಪರಿಷತ್ತು ಹಳ್ಳಿಪಳ್ಳಿಗಳಲ್ಲಿಯೂ ನವ ಕನ್ನಡ ಸಾಹಿತ್ಯದ ಜ್ಞಾನವು ಜನಸಾಮಾನ್ಯರಿಗುಂಟಾಗುವಂತೆ ಯೋಜನೆಯನ್ನು ಕೈಕೊಳ್ಳಬೇಕೆಂದು ನನ್ನ ವಿನಮ್ರವಾದ ಸೂಚನೆ.

ಮಹನೀಯರೆ, ನಾನು ಮತ್ತೊಮ್ಮೆ ತಮ್ಮೆಲ್ಲರಿಗೂ ಸುಸ್ವಾಗತವನ್ನು ಬಯಸಿ ಸ್ವಾಗತ ಮಂಡಳವರು ಕೊಡಿಸಿದ ಅಪ್ಪಣೆಯ ಮೇರೆಗೆ ನಾನು ನನ್ನ ಕಾರ್ಯವನ್ನು ಇಲ್ಲಿಗೆ ಮುಗಿಸಿ ಮುಂದಣ ಕಾರ್ಯವನ್ನು ನೆರವೇರಿಸಬೇಕೆಂದು ತಮಗೆ ಬಿನ್ನವಿಸಿಕೊಳ್ಳುವೆನು.

**ಸಿರಿಗನ್ನಡಂ ಗೆಲ್ಗೆ**



---

'ಕನ್ನಡ ನುಡಿ'ಗೆ

ಚಂದಾದಾರರಾಗಿರಿ!

---

ಸಾಹಿತ್ಯಿಕ ಇಲ್ಲವೆ ಸಾಂಸ್ಕೃತಿಕ ಸ್ವರೂಪವು ಜನರ ಮನಸ್ಸನ್ನು ಹಿಡಿಯಲಿಲ್ಲ. ಮುಂದೆ ಬೆಳಗಾಂವಿಯಲ್ಲಿ ಭಾರತೀಯ ಕಾಂಗ್ರೆಸ್ಸಿನ ಕರ್ನಾಟಕದ ಅಧಿವೇಶನವು ಅತಿ ವಿಜೃಂಭಣೆಯಿಂದ ನೆರವೇರಿತು. ಸೋಜಿಗದ ಮಾತೆಂದರೆ,—ಭರತಖಂಡಕ್ಕೆಲ್ಲ ಕರ್ನಾಟಕದ ಪರಿಚಯವು ಮೊದಲನೆಯ ಸಲ ಸಂಭವಿಸಿದ್ದು ಬೆಳಗಾಂವಿಯಲ್ಲಿ. ಕರ್ನಾಟಕ ಸಾಹಿತ್ಯ ಸಮ್ಮೇಲನದ ಒಂದೆರಡು ಅಧಿವೇಶನಗಳೂ ಅಲ್ಲಿ ನೆರವೇರಿದವು. ೧೯೨೯ರ ಸಮ್ಮೇಲನವು ಇನ್ನೂ ನನಗೆ ನೆನಪಿದೆ. ಕರ್ನಾಟಕದ ಸಮ್ಮೇಲನವಾಗಿ ಕೆಲವು ದಿವಸಗಳಲ್ಲಿಯೇ ಮರಾಠಿ ಸಾಹಿತ್ಯ ಸಮ್ಮೇಲನವು ಅಲ್ಲಿ ಒದಗಿಬಂದಿತು. ಇದಕ್ಕಿಂತ ಮೊದಲು ತಿಂಗಳಾನುಗಟ್ಟಲೆ ರಸರಸಿ ನಡೆದಿತ್ತು. ಕರ್ನಾಟಕ ಕಾಲೇಜಿನಲ್ಲಿಯ ಕೆಲವು ಮಹಾರಾಷ್ಟ್ರೀಯ ಪ್ರೊಫೆಸರರನ್ನು ಸಂದರ್ಶಿಸಿದ ಮಹನೀಯರೊಬ್ಬರು 'ಅಧಿಕಾರವಿಲ್ಲದೆ ಕನ್ನಡದಲ್ಲಿ ಗೀಚುವವರೇನು ಹೇಳುತ್ತಾರೆ? ನಮ್ಮ ಬೆಳಗಾಂವಿ ಸಮ್ಮೇಲನಕ್ಕೆ ಅನೇಕ ಜನ ಬುದ್ಧಿವಂತರ ಬೆಂಬಲವಿದೆ' ಎಂದು ಗರ್ಜಿಸಿದರು. 'ಬೆಳಗಾಂವಿಯು ಬಹಳ ಸೂಕ್ಷ್ಮ ಪ್ರಶ್ನೆ; ಮಹರಾಷ್ಟ್ರದ ಸಾಹಿತ್ಯ ಸಮ್ಮೇಲವನ್ನು ಬೇಕಾದರೆ ನೀವು ಧಾರವಾಡದಲ್ಲಿ ಕೂಡಿರಿ, ಬೆಂಗಳೂರಲ್ಲಿ ಕೂಡಿರಿ' ಎಂದು ಅಂಗಲಾಚಿ ಕೇಳಿದರೂ ಯಾವ ಪುಣ್ಯಾತ್ಮರೂ ಕಿವಿಗೊಡಲಿಲ್ಲ. ಮುಂದೆ ಮರಾಠಿ ಸಮ್ಮೇಲನದ ಹೊತ್ತಿಗೆ ಕನ್ನಡಿಗರು ಕೆಲವರು ಕರಿ ನಿಶಾನೆಗಳ ಮೆರೆವಣಿಗೆಯನ್ನು ಸಹ ತೆಗೆದರು. ಬೆಳಗಾಂವಿಯ ಧುರೀಣರಲ್ಲಿ ಕೆಲವರು ಕರಿ ನಿಶಾನೆಗಳನ್ನು ಬರಿ ಪುಂಡಾಟಿಕೆಯೆಂದು ಟೀಕಿಸಿದರು.

ಬೆಳಗಾಂವಿಯ ದುರ್ದೈವವೆಂದರೆ ಮೊನ್ನೆ ಮೊನ್ನೆಯವರೆಗೆ ಅಲ್ಲಿಯ ಕನ್ನಡದ ಏಳಿಗೆಗೆ ಜನರ ಕಣ್ಣನ್ನು ತುಂಬುವಂಥ ಮುಖಂಡರೇ ದೊರೆಯಲಿಲ್ಲ. ಇದು ಬರಿಯ ಹುಡುಗರ ಉಲಕೋಚಿತನವೆಂದು ಇನ್ನೂ ತಿಳಿದುಕೊಂಡವರಿದ್ದಾರೆ. ಟೈಮ್ಸ್ ಪತ್ರಿಕೆಯ ಬೆಳಗಾಂವಿಯ ಪ್ರತಿನಿಧಿಯು ಕನ್ನಡ-ಮರಾಠಿ ವಾದದ ಬಗ್ಗೆ ಕಳಿಸುತ್ತಿರುವ ಸುದ್ದಿ–ಸಮಾಚಾರಗಳನ್ನು ವಾಚಕರು ಅವಶ್ಯವಾಗಿ ಓದಬೇಕು. ಪ್ರಫುಲ್ಲ ವಾತಾವರಣದಲ್ಲಿ ಸೂಕ್ಷ್ಮ ವಿಷವಾಯುವನ್ನು ಈ ಆಸಾಮಿಗಿಂತ ಹೆಚ್ಚು ಪರಿಣಾಮಕರವಾಗಿ ಬಿಡಬಲ್ಲವರಾರು? ಇಂಥ ಕೊಳಕು ಹೊಲಸುಗಳನ್ನು ಇನ್ನಾವ ಪತ್ರಿಕಾ ವ್ಯವಸಾಯಿಗಳೂ ಬಿಟ್ಟಿಲ್ಲ. ಬೆಳಗಾಂವಿಗೂ ಲಂಡನ್ನಿನ ಫ್ಲೀಟ್ ಸ್ಟ್ರೀಟಿಗೂ ಆರು ಸಾವಿರ ಮೈಲುಗಳಿಗಿಂತ ಹೆಚ್ಚು ಅಂತರವಿದ್ದರೂ ಟೈಮ್ಸಿನ 'ಪ್ರಾತಿನಿಧಿಕ' ಪತ್ರಗಳನ್ನು ಓದಿದಾಗ ಅವು ಬಂದ ಕ್ಕೊಂಡು ಹೊಂದಿರಬೇಕೆಂದೆನಿಸುತ್ತದೆ.

ಅದಿರಲಿ. ಕನ್ನಡತನದ ನೇತೃಗಳಾರು ಬೆಳಗಾಂವಿಯಲ್ಲಿ? ತೀರ ಇತ್ತೀಚೆಗೆ, ಕಾಲೇಜುಗಳ ಸೌಕರ್ಯದ ಮೂಲಕ, ಅನೇಕ ಸಾಹಿತ್ಯಾಭಿಮಾನಿಗಳು ಬೆಳಗಾಂವಿಗೆ ಲಭಿಸಿದ್ದಾರೆ. ಅಲ್ಲದೆ ನ್ಯಾಯಪಕ್ಷಪಾತಿಗಳಾದ ಕೆಲವು ಜನ ವಕೀಲರು ಕನ್ನಡಕ್ಕಾಗಿ ಟೊಂಕಕಟ್ಟಿದ್ದಾರೆ. ಆದರೆ ಕನ್ನಡಕ್ಕಾಗಿ ಮೊದಲು ಕೆಲಸಮಾಡುವವರು ಒಮ್ಮೊಮ್ಮೆ ತಮ್ಮವರ ವಿರೋಧವನ್ನೇ ಕಟ್ಟಿಕೊಳ್ಳುವ ಪ್ರಸಂಗ ಬಂತು. 'ಜೋಳದ ಪಾಳಿ'ಯನ್ನು ನೆನೆಯಬೇಕೆನ್ನುವವರಿಗೆ ಕನ್ನಡವು ಸಾಧಿಸಲಿಲ್ಲ. ಕನ್ನಡವನ್ನು ಸಾಧಿಸಿದವರಿಗೆ ಅಂತಹ ನೆನಹು ಸಾಧಿಸಲಿಲ್ಲ. ನಾಡನರಿಗಳೂ ಕನ್ನಡ ಕ್ರಾಂತಿ ಸಂಘದ ಕಿಡಿಗಳೂ ಹಾಗು ಉಳಿದ ಕನ್ನಡ ಮರಿಗಳೂ ಬೆಳಗಾಂವಿಯ ಕನ್ನಡತನವನ್ನು ಕಾಯಬೇಕಾಗಿ ಬಂತು. ಹಲಕೆಲವು ಮಾತ್ರ ಅವರಿಗೆ ಸಿಗುವದು ಸಾಧ್ಯವಾಯಿತು.

ಇತ್ತೀಚೆಗೆ ಬೆಳಗಾಂವಿಯು ಬೆಳೆಯಹತ್ತಿದೆ,–ಅಂದರೆ ಬೆಳಗಾಂವಿಯಲ್ಲಿ ಕನ್ನಡವು ಬೆಳೆಯಹತ್ತಿದೆ. ಅಲ್ಲಿಯ ಸಾರ್ವಜನಿಕ ವಾಚನಾಲಯದ ಆಡಳಿತವು ಕನ್ನಡಿಗರದಾಯಿತೆಂದು ನಾವು ಕೇಳುತ್ತೇವೆ. ಲಿಂಗರಾಜ ಕಾಲೇಜು ಅಚ್ಚ ಕನ್ನಡಿಗರ ಸಂಸ್ಥೆ. ವಸತಿಗೃಹ ಮೊದಲಾದ ವಿಷಯಗಳಲ್ಲಿ ಜಾತೀಯತೆಯ ಭಾವನೆಯು ಇಲ್ಲಿ ಮೂಲದಲ್ಲಿಯೇ ತಳವೂರಿದೆಯೆಂದು ಸುದ್ದಿಯಿದೆ. ಈ ಸುದ್ದಿ ಸುಳ್ಳಾದರೆ ನಮಗಿಂತ ಸಂತುಷ್ಟರಾದವರಿಲ್ಲ. ಜಿ. ಟಿ. ಕಾಲೇಜಿನ ಶಿಕ್ಷಕ ವರ್ಗದಲ್ಲಿ ಕೆಲವು ಜನ ಕನ್ನಡಿಗರಿದ್ದುದು ನಮಗೆ ಹೆಮ್ಮೆಯ ವಿಷಯ. ವಿಶೇಷತಃ ವಿಕ್ಟೋರಿಯಾ ಕಾಲೇಜು ದುರ್ದೈವದಿಂದ ಮುರಿದುಹೋದಾಗ ಕಿಸೆಯಲ್ಲಿ ಕೈಯಿಲ್ಲದೆ ಕರ್ನಾಟಕವನ್ನು ಬಿಟ್ಟುಹೋದ ರ್‍ಯಾ. ಕಟ್ಟಿಯವರು ಮತ್ತೆ ಕರ್ನಾಟಕದಲ್ಲಿಯ ಒಂದು ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದಿದು ನಮ್ಮ ಅಭಿಮಾನಾಸ್ಪದವಾದ ಸಂಗತಿ. ಆದರೆ ಬಿ. ಟಿ. ಕಾಲೇಜು ಕರ್ನಾಟಕ ಹಾಗು ಮಹಾರಾಷ್ಟ್ರ ಪ್ರಾಂತಗಳ ಸಲುವಾಗಿ ಸ್ಥಾಪಿತವಾಗಿದೆಯೆಂದು ಸರಕಾರವೇ ಡಾಣಾಡಂಗುರವಾಗಿ ಸಾರಿದುವುದಲ್ಲ! ಬೆಳಗಾಂವಿಗಿದ್ದ ತ್ರಿಶಂಕು ಸ್ಥಿತಿಯನ್ನು ದೃಢಪಡಿಸಲು ಹಾಕಿದ ಹೊಂಚಿದೆಂದು ಕೆಲವರಾಡಿಕೊಳ್ಳುತ್ತಾರೆ. ಏನಿದೆಯೋ ಸರಕಾರವೇ ಬಲ್ಲದು. ಇನ್ನು ನಾಳೆ ಬೆಳಗಾದರೆ ಲಾ ಕಾಲೇಜು ಹೊರಡುವದಿದೆ. ಇದು ಎಷ್ಟರಮಟ್ಟಿಗೆ ಕರ್ನಾಟಕವಿದೆಯೋ ನೋಡಬೇಕಾದ ಮಾತು. ಅದರಂತೆಯೇ ಆಯುರ್ವೇದ ಕಾಲೇಜಿನ ವಿಷಯವಾಗಿದೆ.

ಬೆಳಗಾಂವಿಯು ಇನ್ನೂ ಬೆಳೆಯಲಿ; ಉತ್ತರ ಕರ್ನಾಟಕದಲ್ಲಿ ಬಿತ್ತರವಡೆದ ಪಟ್ಟಣವಾಗಲಿ. ಆದರೆ ಮೊಟ್ಟಮೊದಲು ಈಗಾಗಲೇ ಹುಟ್ಟಿ ಬಂದ ಸಂಸ್ಥೆಗಳನ್ನು ಕನ್ನಡ ಬಲದ ವೃಷ್ಟಿಯಿಂದ ಅದು ಚೆನ್ನಾಗಿ ಅರಗಿಸಿಕೊಳ್ಳಲಿ; ಕುಡಿದ ಹಾಲನ್ನು ದಕ್ಕಿಸಿಕೊಳ್ಳಲಿ.

ಹೀಗೆ ಹೇಳುವಾಗ ನಾವು ಮಹರಾಷ್ಟ್ರಕ್ಕೆ ಯಾವ ಅಪಾಯವನ್ನೂ ಬಯಸುವುದಿಲ್ಲ. ಮಹರಾಷ್ಟ್ರದಲ್ಲಿ ಬೇಕಾದಷ್ಟು ಪ್ರಾಂತ ಹೆಚ್ಚಾಗಿ ಸಂಸ್ಥೆಗಳವೆ. ಮಹಾರಾಷ್ಟ್ರ ಸಂಸ್ಕೃತಿಯ ಕೋಟೆಗಳು ನಾಗಪುರದಿಂದ ಸಾತಾರೆಯವರೆಗೆ ಹಬ್ಬಿವೆ. 'ನಿಮ್ಮ ಚಕ್ರ ಮುಂದೆ ಸಾಗಿದೆ. ನಮ್ಮ ಬೆಳೆವಣಿಗೆಗೆ ಮಾತ್ರ ನೀವು ಚಕ್ರವನ್ನು ತಂದರೆ ನಡೆಯಲಿಕ್ಕಿಲ್ಲ'ವೆಂದೇ ನಾವಿಂದು ಅವರಿಗೆ ಹೇಳಬೇಕಾಗಿದೆ.

(ಜೀವನ, ಡಿಸೆಂಬರ್ ೧೯೩೯.)

**ಸಿರಿಗನ್ನಡಂ ಗೆಲ್ಗೆ**

---



ಈ ಪತ್ರಿಕೆಯು ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ 'ಮೈಸೂರು ಪೇಪರ್'ನಲ್ಲೇ ಅಚ್ಚಾಗುತ್ತಿದೆ.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾಂವಿ, ೧೯೩೯

## ಅಧ್ಯಕ್ಷರ ಭಾಷಣ

ಕನ್ನಡ ನಾಡದೈವದ ಹಿರಿಮಣಿಗಳೆ, ನಚ್ಚಿನ ಕನ್ನಡಿಗರೆ, ಕನ್ನಡಿತಿಯರೆ,

ತಾವೆಲ್ಲರೂ ತಮ್ಮ ಕಕುಲಾತಿಯ ಕರುಳುಗಳನ್ನೊಂದುಗೂಡಿಸಿ, ಅಂತಃಸ್ನೇಹದಿಂದ ಹದಗೊಳಿಸಿ, ಒಳ್ಳೇ ಹುರಿಗೊಂಡು ಹರಿಯದಾದ ಹಸನಾದ ಹಗ್ಗವನ್ನು ಹೊಸೆದು, ನನ್ನಿಂದ ಬಿಡಿಸಲಾಗದ ಬಿಚ್ಚಲಾಗದ ಹರಿಯಲಾಗದ ಕಗ್ಗಂಟು ಹಾಕಿ, ನನ್ನನ್ನು ಬಿಗಿದು ಎಳೆದು ತಂದು ಈ ಸ್ಥಾನಕ್ಕೆ ನಿಲ್ಲಿಸಿದಿರಿ. ಕನ್ನಡ ನಾಡಿನ ಶ್ರೇಷ್ಠವಾದ ಸಾಹಿತ್ಯ ಕ್ಷೇತ್ರದಲ್ಲಿ ನಾನು ಯಾರು? ನನಗೆ ಯಾವುದೂ ಸಾಹಿತ್ಯದ ವ್ಯಾಸಂಗವಿಲ್ಲ, ಪರಿಶ್ರಮವಿಲ್ಲ, ಪರಿಚಯವಿಲ್ಲ. ಕನ್ನಡ ನಾಡಿನ ಸಾರಸ್ವತ ಭಂಡಾರದಲ್ಲಿ ಕಂಗೊಳಿಸಬಹುದಾದ ಯಾವ ಗ್ರಂಥವನ್ನಾಗಲಿ, ಕಾವ್ಯವನ್ನಾಗಲಿ, ನಾಟಕವನ್ನಾಗಲಿ, ಕಥೆ-ಕಾದಂಬರಿಗಳನ್ನಾಗಲಿ ಬರೆದವನು ನಾನಲ್ಲ. ನಿಷ್ಪಕ್ಷಪಾತಿಯಾದ ನ್ಯಾಯಾಧೀಶನಂತೆ ಸಾಹಿತ್ಯ ಗ್ರಂಥಗಳ ಸಮಾಲೋಚನೆ ಮಾಡುವ ವಿಮರ್ಶಕನ ಯೋಗ್ಯತೆಯೂ ನನ್ನಲ್ಲಿಲ್ಲ. ಹಾಗಾದರೆ ನಾನು ಯಾರು? ಅಷ್ಟೈಶ್ವರ್ಯಸಂಪನ್ನೆಯಾಗಿ ಮೆರೆದ, ಇನ್ನೂ ಮೆರೆಯಬಹುದಾದ, ಕನ್ನಡಮ್ಮನ ಊಳಿಗವನ್ನು ಕೈಕೊಂಡು ಬಾಳಿದ, ಬಾಳುವ, ಆಳು ಮಾತ್ರ ನಾನು. ಹಿಂದಿನ ಈ ಇಪ್ಪತ್ತುಮೂರು—ಅದೇಕೆ? ಇಪ್ಪತ್ತುನಾಲ್ಕು ಕೂಟಗಳಲ್ಲಿ ಈ ಪರಮಪಾವನವಾದ, ಪುಣ್ಯಕರವಾದ, ಕನ್ನಡಾಂಬೆಯ ಪ್ರಧಾನ ಪೂಜಕ ಪೀಠವನ್ನು ಅಲಂಕರಿಸಿ, ಅವಳಿಗೆ ಸೇವೆಯನ್ನು ಸಲ್ಲಿಸಿದ ಮಹನೀಯರು ಎಂತೆಂತಹರು? ಅವರ ಯೋಗ್ಯತೆ ಎಂತಹದು? ಪಾತ್ರತೆಯೆಂತಹದು? ಪ್ರಭಾವವೆಂತಹದು? ಅಂತಹ ಪುಣ್ಯಪುರುಷರ ಅಂಗಳಗುಡಿಸುವ ಯೋಗ್ಯತೆಯೂ ನನ್ನಲ್ಲಿಲ್ಲವೆಂಬುದನ್ನು ಮನಗಂಡ ನನ್ನನ್ನು ತಾವೆಲ್ಲರೂ ಹಿಡಿದು ತಂದು ಈ ಪೀಠಕ್ಕೆ ಬಿಗಿದುಬಿಟ್ಟಿರಿ. ತಮ್ಮ ಈ ಕೃತಿಯು ಅನುಚಿತವೆಂದೂ ಅಯೋಗ್ಯವೆಂದೂ ಹೇಳುವೆನೇ? ತಮ್ಮೆಲ್ಲರ ಸಾರಾಸಾರ ವಿವೇಚಕ ವಿಮರ್ಶಾಬುದ್ಧಿಗೆ ಕುಂದನ್ನಿಟ್ಟು ಮಾತನಾಡುವ ಎದೆಗಾರಿಕೆಯನ್ನು ನಾನು ಮಾಡಿದಂತಾಗುವುದು. ಅಂತಹ ಮಹಾಪರಾಧವನ್ನು ನಾನೆಂದಿಗೂ ಮಾಡಲಾರೆನು. ತಮ್ಮ ಸದಸದ್ವಿವೇಕ ಬುದ್ಧಿಯಲ್ಲಿ ಪೂರಾ ನಂಬುಗೆಯನ್ನಿಟ್ಟು ನಡೆದುಕೊಳ್ಳುತ್ತ ಬಂದಿರುವ ನನಗೆ ತಮ್ಮ ಆಜ್ಞೆಯನ್ನು ಮರುಮಾತನಾಡದೆ ಮನ್ನಿಸುವುದೇ ಇಂದಿನ ವರೆಗಿನ ನನ್ನ ಧರ್ಮವಾಗಿದೆ; ಅದನ್ನೇ ಮುಂದಾದರೂ ನಡಸುವುದೇ ನನ್ನ ಇತಿ ಕರ್ತವ್ಯವಾಗಿದೆ. ಇದೇ ವಿಚಾರದಿಂದ ನಾನಿಲ್ಲಿ ಬಂದು ನಿಂತಿದ್ದೇನೆ.

### ಕನ್ನಡ ನಾಡಿನಲ್ಲಿ ಬೆಳಗಾಂವಿಯ ಸ್ಥಾನಮಾನಗಳು

ಕನ್ನಡದ ರಾಜ್ಯವೈಭವಕ್ಕೆ ಈಗ ತಿಳಿದ ಮಟ್ಟಿಗೆ ಉಗಮಸ್ಥಾನವೆಂದು ಗಣಿಸಲಾಗಿರುವ ಕದಂಬರ ಕಾಲದಿಂದಲೂ ಕನ್ನಡ ನಾಡ ಸೀಮೆಯಲ್ಲಿ ಬೆಳಗಾಂವಿಗೊಂದು ಬಗೆಯ ಹಿರಿಮೆಯ ಸ್ಥಾನಮಾನಗಳು ಇಂದಿನ ವರೆಗೆ ಅವಿಚ್ಛಿನ್ನವಾಗಿ ನಡೆದುಬಂದಿವೆ. ರಾಜರ ರಾಜಧಾನಿಯಾಗಿ, ದಂಡನಾಯಕರ ಪಾಳೆಯದೂರಾಗಿ, ಶತ್ರುಗಳ ಲಗ್ಗೆಗಳುಕದ ಕೋಟೆ ಕೊತ್ತಳಗಳ ಭದ್ರಸ್ಥಾನವಾಗಿ, ಮೆರೆದ ಈ ಬೆಳಗಾಂವಿಯ ನಾಡು ಅಭಿನಯಚಂದ್ರ, ಕರ್ಣಪಾರ್ಯ, ಗುಣವರ್ಮ, ನೇಮಿನಾಥ, ಭಾಳಚಂದ್ರ, ಕವಿಚಕ್ರವರ್ತಿಯೆನಿಸಿದ ರನ್ನ, ಜಗನ್ನಾಥವಿಜಯದ ಕರ್ತೃವಾದ ರುದ್ರಭಟ್ಟ ಮೊದಲಾದ ಮಹಾಮಹಾ ಕವಿಗಳಿಗೆ ಜನ್ಮಸ್ಥಾನ – ವಾಸಸ್ಥಾನವಾಗಿ, ನೃಪತುಂಗನು ವರ್ಣಿಸಿದ 'ಒಂಕುಂದದ ತಿರುಳ್ಗನ್ನಡ' ನಾಡಿನ ಭಾಗವಾಗಿತ್ತು. ಅಂದಿನಿಂದ ಇಂದಿನ ವರೆಗೆ ಅದು ತನ್ನ 'ತಿರುಳುಗನ್ನಡತನ'ವನ್ನು ಅವ್ಯಾಹತವಾಗಿ ಕಾಯ್ದುಕೊಂಡೇ ಬಂದಿದೆ. ಇಂದು ಕೃಷ್ಣೆಯ ಉತ್ತರಕ್ಕೆ ಗೋದಾವರಿಯ ವರೆಗೆ ಪಶ್ಚಿಮಘಟ್ಟಗಳ ಪೂರ್ವದ ತಪ್ಪಲು ಸೀಮೆಯಲ್ಲಿ 'ಮಹಾರಾಷ್ಟ್ರ'ವೆಂಬ ಹೆಸರಿನಿಂದ ಪ್ರಸಿದ್ಧವಾಗಿ ಹಬ್ಬಿಕೊಂಡಿರುವ ಪ್ರದೇಶವು "ಮೊದಲು 'ಕನ್ನಡ ನಾಡೇ' ಆಗಿತ್ತು: ಅಲ್ಲಿಯ ಜನಜೀವನದ ಭಾಷೆಯು ಬದಲಾದ ಮೂಲಕ ಅದಕ್ಕೆ 'ಮಹಾರಾಷ್ಟ್ರ'ವೆಂಬ ಹೆಸರು ಬಂದಿದೆ" ಎಂದು ಸಾರಿದ ಮಹಾರಾಷ್ಟ್ರದ ಲೋಕಮಾನ್ಯರೇ ಬೆಳಗಾಂವಿಗೆ 'ಕರ್ನಾಟಕದ ಹೆಬ್ಬಾಗಿಲು' ಎಂಬ ಹೆಸರು ಕೊಟ್ಟಿದ್ದಾರೆ. ಋಷಿ ಸಮಾನ ಯಥಾರ್ಥವಾದಿಗಳಾಗಿದ್ದ ಆ ಮಹಾಪುರುಷರ ಬಾಯಿಂದ ಹುಸಿಮಾತು ಎಂದೂ ಹೊರಡದು. ಅಂತಹ ಮಹಾನುಭಾವರು ಬೆಳಗಾಂವಿಗೆ ಈ ಗೌರವದ ಹೆಸರನ್ನು ಸುಮ್ಮ ಸುಮ್ಮನೆ ಕೊಡಲಿಲ್ಲ. ಬೆಳಗಾಂವಿಯಲ್ಲಿ ಅಂತಹ ಕರ್ತೃತ್ವವು ಯಾವಾಗಲೂ ನಿದರ್ಶನಕ್ಕೆ ಬರುತ್ತಿದೆ. ನಾಡಿನ ಜನಜೀವನದ ಉನ್ನತಿಗೆ ಸಂಬಂಧಪಟ್ಟ ಎಲ್ಲ ಬಗೆಯ ಚಟುವಟಿಕೆಗಳಲ್ಲಿ ಕರ್ನಾಟಕದೊಳಗಿನ ಎಲ್ಲ ನಗರ ಪಟ್ಟಣಗಳಲ್ಲಿ ಬೆಳಗಾಂವಿಯೇ ಮೇಲು. ರಾಜಕೀಯ ಚಟುವಟಿಕೆಗಳಲ್ಲಿ ನೋಡಿದರೂ ಕಾಂಗ್ರೆಸ್ಸಿನ ಆಡಳಿತದಲ್ಲಿ ಕರ್ನಾಟಕವು ಬೇರೆ ಪ್ರಾಂತವಾಗುವ ಮೊದಲು ಮುಂಬಯಿ ಪ್ರಾಂತಿಕ ಪರಿಷತ್ತೆಂಬುದು ಕರ್ನಾಟಕದೊಳಗೆ ಮೊಟ್ಟಮೊದಲು ೧೯೦೫ರಲ್ಲಿ ಇಲ್ಲಿಯೇ ಕೂಡಿತ್ತು. ಲೋಕಮಾನ್ಯರು ಮಂಡಲೆಯಲ್ಲಿ ತಮ್ಮ ಆರು ವರುಷಗಳ ಶಿಕ್ಷೆಯ ಅವಧಿಯನ್ನು ಮುಗಿಸಿ ತಿರುಗಿ ಬಂದ ನಂತರ ೧೯೧೬ರಲ್ಲಿ ಅದೇ ಪರಿಷತ್ತು ಎರಡನೆಯ ಸಾರಿ ಇಲ್ಲಿಯೇ ಕೂಡಿತ್ತು. ೧೯೦೭ರಲ್ಲಿ ಸುರತದಲ್ಲಿ ಒಡೆದುಹೋದ ಕಾಂಗ್ರೆಸ್ಸನ್ನು ಮತ್ತೆ ಲಖನೌದಲ್ಲಿ ಸಂಧಿಸಿ, ಬೆಸಗೆ ಇಕ್ಕುವ ಪೂರ್ವಯೋಜನೆಯು ಇದೇ ಪರಿಷತ್ತಿನ ಕಾಲಕ್ಕೆ ಇಲ್ಲಿಯೇ ನಿಶ್ಚಿತವಾಯಿತು. ೧೯೨೦ರಲ್ಲಿ ಕರ್ನಾಟಕವು ಕಾಂಗ್ರೆಸ್ಸಿನ ಆಡಳಿತೆಯಲ್ಲಿ ಸ್ವತಂತ್ರ ಪ್ರಾಂತವಾದ ಕೂಡಲೆ 'ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ'ಯ ಅಧ್ಯಕ್ಷಪದದ ಬಹುಮಾನವು ಒಂದೇ ಸವನೆ ನಾಲ್ಕು ವರ್ಷಗಳ ವರೆಗೆ ಬೆಳಗಾಂವಿಯ ನನ್ನ ಮಿತ್ರರಾದ ಶ್ರೀಮಾನ್ ದೇಶಭಕ್ತ ದೇಶಪಾಂಡೆ ಗಂಗಾಧರರಾಯರಿಗೇ ಮೀಸಲಾಗಿತ್ತು. ಕನ್ನಡನಾಡಿನಲ್ಲೆಲ್ಲ ರಾಷ್ಟ್ರೀಯ ಮಹಾಸಭೆಯ ಒಂದೇ ಒಂದು ಅಧಿವೇಶನವಾದದ್ದೂ ಬೆಳಗಾಂವಿಯಲ್ಲಿಯೇ, ೧೯೨೪ರಲ್ಲಿ. ಯೋಗ್ಯತೆಯಿಂದ, ಮಾಹಾತ್ಮ್ಯದಿಂದ, ಮನಸ್ಸೌಮನಸ್ಯದಿಂದ ಇಂದಿಗೂ ಕಾಂಗ್ರೆಸ್ಸಿನ ಅನಧಿಕೃತ ಸರ್ವಾಧಿಕಾರಿಗಳಾಗಿರುವ ಜಗದ್ವಂದ್ಯ ಪುರುಷರಾದ ಮಹಾತ್ಮ ಗಾಂಧಿಯವರು ಕಾಂಗ್ರೆಸ್ಸಿಗೆ ಸಾಧಿಕಾರ ಅಧ್ಯಕ್ಷರಾದದ್ದು ಬೆಳಗಾಂವಿಯ ಅಧಿವೇಶನದಲ್ಲಿಯೇ. ಕನ್ನಡನಾಡು ತನ್ನ ಅತಿಥಿ ಸತ್ಕಾರದ ಪರಮಾವಧಿಯ ಔದಾರ್ಯವನ್ನು ಹಾಲು ತುಪ್ಪಗಳ ಹಿರಿಹೊಳೆಗಳನ್ನು ಹರಿಸಿ ಇಡೀ ಹಿಂದುಸ್ಥಾನಕ್ಕೆಲ್ಲ ಒಂದೇ ಕಾಲಕ್ಕೆ ನಿದರ್ಶನಕ್ಕೆ ತಂದುಕೊಟ್ಟುದೂ ಈ ಬೆಳಗಾಂವಿಯಲ್ಲಿಯೇ.

ರಾಷ್ಟ್ರಕಾರ್ಯದಲ್ಲಿ ಹೇಗೋ ಹಾಗೆಯೇ ಕನ್ನಡ ನಾಡಿನ ಉನ್ನತಿಯ ಉದ್ಯಮದಲ್ಲಿಯೂ ಬೆಳಗಾಂವಿಯೇ ಯಾವಾಗಲೂ ಮುಂದೆ. ಈಸ್ಟ್ ಇಂಡಿಯಾ ಕಂಪೆನಿಯ ಆಳಿಕೆಯ ಆರಂಭದಲ್ಲಿ ಇತ್ತ ಕಡೆಯ ಜನಜೀವನದ ಯಥಾರ್ಥ ಪರಿಸ್ಥಿತಿಯ ಜ್ಞಾನವು ಮುಂಬಯಿ ಪುಣೆಯಲ್ಲಿಯ ಅಧಿಕಾರಿಗಳಿಗೆ ಆಗದ ಮೂಲಕ ಈ ಪ್ರದೇಶಕ್ಕೆಲ್ಲ "ದಕ್ಷಿಣ ಮಹಾರಾಷ್ಟ್ರ"ವೆಂಬ ಅಸಂಬದ್ಧ ಹೆಸರು ದೊರೆತುದರಿಂದ, ಸಾರ್ವಜನಿಕ ಶಿಕ್ಷಣಕ್ಕೆ ಪ್ರಾರಂಭವಾದಾಗ ಇತ್ತ ಕಡೆಗೆಲ್ಲ ಸ್ವಾಭಾವಿಕವಾಗಿಯೇ ಮರಾಠೀ ಶಾಲೆಗಳು ಸ್ಥಾಪಿಸಲ್ಪಟ್ಟಿದ್ದವು. ಈ ವಿಪರೀತ ಪರಿಸ್ಥಿತಿಯನ್ನು ಬದಲಿಸಿ, ಇಲ್ಲಿಯ ಪ್ರಾಥಮಿಕ ಶಾಲೆಗಳಲ್ಲಿ ಅನ್ಯಾಯವಾಗಿದ್ದ ಮರಾಠೀ ಶಿಕ್ಷಣವನ್ನು ನಿಲ್ಲಿಸಿ, ಕನ್ನಡ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸಿ, ಇತ್ತಕಡೆಗೆಲ್ಲ ಕನ್ನಡವನ್ನು ಬದುಕಿಸಿ ಬಾಳಿಸಿದ ಶ್ರೇಯಸ್ಸು ಬೆಳಗಾಂವಿಗೇ ಉಂಟು. ಹೊಸದಾಗಿ ಹುಟ್ಟಿದ ಕನ್ನಡ ಶಾಲೆಗಳಿಗೆ ಶಿಕ್ಷಣಕ್ರಮವನ್ನು ಕಲಿಸಿ ಸಿದ್ಧಮಾಡಿದ ಕನ್ನಡ ಶಿಕ್ಷಕರನ್ನು ಒದಗಿಸುವ "ಕನ್ನಡ ನಾರ್ಮಲ್ ಸ್ಕೂಲು" ಮೊದಲು ಬೆಳಗಾಂವಿಯಲ್ಲಿಯೇ ಸ್ಥಾಪಿತವಾಯಿತು. ಈಗ ಇತ್ತಕಡೆಗೆಲ್ಲ ಪ್ರಚಾರದಲ್ಲಿರುವ ಸೊಗಸಾದ ಹೊಸಗನ್ನಡದ ನಿರ್ಮಾಣಕರ್ತರೆನಬಹುದಾದ ಕೀರ್ತಿಶೇಷ ಡೆಪೂಟಿ ಚೆನ್ನಬಸಪ್ಪನವರು, ಗಂಗಾಧರ ಮಡಿವಾಳೇಶ್ವರ ತೂರಮರಿಯವರು, ವೆಂಕಟ ರಂಗೋ ಕಟ್ಟಿಯವರು ಮೊದಲಾದವರೆಲ್ಲರೂ ಬೆಳಗಾಂವಿಯ ನಾಡಿನವರೇ. ಕನ್ನಡ ನಾಡಿನ ಈ ಭಾಗದಲ್ಲಿ

"ಜ್ಞಾನಮಂಜರಿ", "ರಸಿಕತರಂಗಿಣಿ" ಎಂಬ ಮೊಟ್ಟಮೊದಲನೆಯ ಕನ್ನಡ ಪತ್ರಿಕೆಗಳು ಹೊರಟದ್ದೂ ಬೆಳಗಾಂವಿಯಲ್ಲಿ. ಕನ್ನಡದ ಕುಲಗುರು ಗದುಗಿನ ಕೀರ್ತಿಶೇಷ ಶಾಂತ ಕವಿಗಳಿಗಿಂತಲೂ ಮೊದಲು ಕನ್ನಡದಲ್ಲಿ ಪೌರಾಣಿಕ ನಾಟಕಗಳನ್ನು ಬರೆದು, ಅವುಗಳನ್ನು ಪ್ರಯೋಗಿಸುತ್ತ ಬಳ್ಳಾರಿ ಅನಂತಪುರದ ವರೆಗಿನ ಕನ್ನಡ ನಾಡನ್ನೆಲ್ಲ ಸುತ್ತಿಕೊಂಡು ಬಂದು, ವಿಪುಲವಾದ ಶ್ರೇಯಸ್ಸನ್ನು ಸಂಪಾದಿಸಿದ ಬೆಳಗಾಂವಿನಾಡಿನ ಹಲಸಿಗಿಯ ನಾಟಕ ಮಂಡಲಿಯವರೇ ಕನ್ನಡ ನಾಟಕ ಪ್ರದರ್ಶನದ ಹೊಸ ಪ್ರಕಾರವನ್ನು ಇತ್ತಕಡೆಗೆಲ್ಲ ಮೊದಲು ಪ್ರಚಾರದಲ್ಲಿ ತಂದವರು. ಈ ಬೆಳಗಾಂವಿ ನಾಡಿನಲ್ಲಿ ಕನ್ನಡ ಕವಿಗಳ ಪರಂಪರೆಯು ಹರಿಗಡಿಯದೆ ನಡೆಯುತ್ತ ಬಂದಿರುವುದೆಂಬುದಕ್ಕೆ ದಿವಂಗತ ಚುರಮರಿ ಶೇಷಗಿರಿ ರಾಯರು, ಗೋಕಾಂವಿಯ ಅನಂತಾಚಾರ್ಯರು, ಕಾವ್ಯಾನಂದ ಪುಣೇಕರ ನರಸಿಂಹಾಚಾರ್ಯರು, ಸ್ವದೇಶೀಲಾವಣಿ, ವಿಷಮವಿವಾಹ, ಮೊದಲಾದುವುಗಳ ಕರ್ತರಾದ ಬಸವಾರ್ಯ ಕವಿಗಳು, ಕನ್ನಡದ ಅಭಿಮಾನದ ಪುತ್ಥಳಿಯಾಗಿದ್ದ ಚಿಕ್ಕೋಡಿ ತಮ್ಮಣ್ಣಪ್ಪನವರೇ ಮೊದಲಾದವರನ್ನು ಮುಂದೆಮಾಡಿ ವಿದ್ಯಮಾನ ಕವಿಗಳ ಅನೇಕಾನೇಕ ಹೆಸರುಗಳನ್ನು ಹೇಳಬಹುದು. ಗದ್ಯಲೇಖಕರು, ಜನಪದ ಸಾಹಿತ್ಯ ನಿರ್ಮಾಣಕರು, ನಾಟಕಕಾರರು ಇವರಾರಿಗೂ ಈ ನಾಡಿನಲ್ಲಿ ಇಂದಿಗೂ ಕೊರತೆಯಿಲ್ಲ. ಹೀಗೆ ಅನಾದಿಕಾಲದಿಂದಲೂ ಕನ್ನಡ ಸಂಸ್ಕೃತಿಗೆ ನೆಲೆವೀಡಾಗಿದ್ದ ಈ ಬೆಳಗಾಂವಿಯ ನಾಡು ಇಂದಿಗೂ ಕನ್ನಡ ನಾಡೇ ಆಗಿದೆ. ನಡುವಿನ ಹತ್ತಿಪ್ಪತ್ತು ವರ್ಷಗಳಲ್ಲಿ ಬೆಳಗಾಂವಿಯೇ ಮೊದಲಾದ ನಾಲ್ಕಾರು ಚಿಕ್ಕ ದೊಡ್ಡ ಪಟ್ಟಣಗಳಲ್ಲಿ ಮೇಲೆ ಮೇಲೆ ಪರಭಾಷೆಯ ಧೂಳು ಮುಸುಕಿ ಇಲ್ಲಿಯ ಕನ್ನಡತನದ ರನ್ನಗನ್ನಡಿಯು ನಸು ಮುಸುಳಿಸಿದಂತಾಗಿತ್ತು. ಆ ಧೂಳನ್ನು ಹಾರಿಸಿ ಕನ್ನಡಿಯನ್ನೊರಸಿ ಉಜ್ವಲಗೊಳಿಸಿ, ಅದರ ತಿಳಿವೆಳಗನ್ನೇ ಅಚ್ಚಳಿಯದಂತೆ ಬೆಳಗಿಸಲು ಇತ್ತಕಡೆಯ ಅಚ್ಚಕೆಚ್ಚಿನ ಕನ್ನಡಿಗರನೇಕರು ಪರಿಶ್ರಮಪೂರ್ವಕ ಹೆಣಗಿದ್ದಾರೆ. ದಿವಂಗತ ಬೀಡಿ ಕೃಷ್ಣರಾಯರು, ವಿದ್ಯಮಾನ ಡಾಕ್ಟರ್ ಪವಣೂರ ಹಣಮಂತರಾಯರು ಮೊದಲಾದವರ ಉದ್ಯೋಗದಿಂದ ಇಪ್ಪತ್ತೈದು ವರುಷಗಳ ಹಿಂದೆ ಸ್ಥಾಪಿತವಾಗಿರುವ ಕರ್ನಾಟಕ ಸಂಘ ವಾಚನಾಲಯ, ಮುಂದೆ ಹುಟ್ಟಿದ ತುಂಟರ ತಂಡ, ಕನ್ನಡ ಸೇವಾ ಸಮಿತಿ, ಕನ್ನಡ ಸಂಘ, ಮೊದಲಾದ ಸಂಸ್ಥೆಗಳು ಇಲ್ಲಿಯ ಜನರಲ್ಲಿ ಸ್ವಭಾಷೆ ಸ್ವಸಾಹಿತ್ಯಗಳ ಅಭಿಮಾನವನ್ನು ಹುಟ್ಟಿಸಲು ಬಲುಮಟ್ಟಿಗೆ ಕಾರಣವಾಗಿವೆ. ಗಿಲಗಂಚಿ ಅರಟಾಳ ಹೈಸ್ಕೂಲು, ಮಾಡೆಲ್ ಹೈಸ್ಕೂಲು, ಲಿಂಗರಾಜ ಕಾಲೇಜು, ಮೊದಲಾದ ಕನ್ನಡಿಗರ ಸಂಸ್ಥೆಗಳು ಇಲ್ಲಿ ನೆಲಸಿ ಶಿಕ್ಷಣಕಾರ್ಯವನ್ನಾರಂಭಿಸಿದಂದಿನಿಂದಂತೂ, ಇಲ್ಲಿಯ ಕನ್ನಡತನವು ಏಕಪ್ರಕಾರವಾಗಿ ಬೆಳೆಯುತ್ತಲೇ ನಡೆದಿದೆ. ಇದರ ದೃಷ್ಟಾಂತವೆಂದೇ ಕನ್ನಡನಾಡಿನಲ್ಲೆಲ್ಲಿಯೂ ಆಗದಿದ್ದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಉಪಕ್ರಮವನ್ನು ಬೆಳಗಾಂವಿಯವರೇ ಮೊದಲು ಮಾಡಿ ಮೂರು ಸಮ್ಮೇಳನಗಳನ್ನು ಸಾಂಗಗೊಳಿಸಿದರು. ಹಾಗೆಯೇ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡನಾಡಿನ ಯಾವ ನಗರಕ್ಕೂ ಪಟ್ಟಣಕ್ಕೂ ದೊರೆಯದ ಇಡಿಗನ್ನಡನಾಡಿನ ಸಾಹಿತ್ಯ ಸಮ್ಮೇಳನವನ್ನು ಮೂರನೆಯ ಬಾರಿ ಕೂಡಿಸುವ ಹೆಚ್ಚಿನ ಸನ್ಮಾನವನ್ನು ಹೊಂದಲು ಇಂದು ಬೆಳಗಾಂವಿಯು ಪಾತ್ರವಾಗಿದೆ.

ಇನ್ನೂ ಒಂದು ವಿಚಾರದಿಂದಲೂ ಬೆಳಗಾಂವಿಯು ಕನ್ನಡ ನಾಡಿನ ಹೊಸ ಕಾಲದ ಪವಿತ್ರ ಕ್ಷೇತ್ರಗಳಲ್ಲಿ ಒಂದಾಗಿರುವುದೆಂಬುದನ್ನು ನಾನು ತಮ್ಮ ಸ್ಮರಣೆಗೆ ತಂದು ಕೊಡದಿರಲಾರೆನು. ಈಗೇನೋ ಕನ್ನಡ ಸಾಹಿತ್ಯವೇ ಮೊದಲಾದ ಸಂಸ್ಕೃತಿಯ ಸಕಲಸಾಧನಗಳನ್ನೂ ಜನುಮೆತ್ತಿ ಬಾಳಿಸಿ ಬೆಳೆಸಿಕೊಳ್ಳುವುದಕ್ಕೆ ಹುರಿಗೊಂಡು ಎದ್ದಿರುವ ಕನ್ನಡ ನಾಡಿನಲ್ಲೆಲ್ಲ ಬೆಳಗಾಂವಿ ನಾಡಿನವನೇ ಆದ ಕವಿಯೊಬ್ಬನು ಹಾಡಿದ "ಕನ್ನಡಿಗರಿಗಿಂದೊಂದೇ ಸ್ಮರಣ—ಕನ್ನಡ ನಾಡಿನ ಏಕೀಕರಣ" ಎಂಬ ಕರುಳಿನ ಕೂಗು ದುಮುದುಮಿಸಿ ಮೊಳಗುತ್ತಿರುವುದು ನಿಜ. ಆದರೆ ಎರಡು ತಲೆಗಳ ಹಿಂದೆ ಕನ್ನಡ ನಾಡಿನ ಹತ್ತೆಂಟು ಜನ ಬದ್ಧಭಕ್ತರು ಈ ಕೆಲಸವನ್ನು ಮೈಮೇಲೆ ತೆಗೆದುಕೊಂಡಾಗ ಎಲ್ಲಕಡೆಗೂ ವಿರೋಧವೇ ವಿರೋಧ. ಕನ್ನಡಿಗರಲ್ಲದವರು ಸ್ವಾರ್ಥಬುದ್ಧಿಯಿಂದ ವಿರೋಧ ಮಾಡಿದರೆ ಮಾಡಲಿ—ಅದರಲ್ಲಿ ಚೋದ್ಯವಿಲ್ಲ. ಆದರೆ ಹುಟ್ಟುಗನ್ನಡಿಗರು, ತಿಟ್ಟಗನ್ನಡಿಗರು ವಿರೋಧ ಮಾಡುತ್ತ "ತಲೆತಿರುಕರು, ಹುಚ್ಚರು, ಮೂರ್ಖರು" ಎಂಬ ವಿಶೇಷಣಗಳಿಂದ ಅವರನ್ನು ಸಂಭಾವಿಸುತ್ತಿದ್ದರು. ಇಂಥ ವಿಪರೀತ ಕಾಲದಲ್ಲಿಯೂ ಎಲ್ಲ ಬಗೆಯ ತೀವ್ರ ವಿರೋಧಗಳನ್ನೂ ಧೈರ್ಯದಿಂದ ಸ್ಥೈರ್ಯದಿಂದ ಎದುರಿಸಿ, ಕನ್ನಡ ನಾಡಿನ ನಾಲ್ಕೂ ದಿಕ್ಕಿನಲ್ಲಿ ಸಂಚರಿಸಿ, ಎಲ್ಲ ಕಡೆಗೂ ಕನ್ನಡತನದ ಹೊಸ ಹುರುಪನ್ನು ಒಡಮೂಡಿಸಿ ಕಾಂಗ್ರೆಸ್ಸಿನ ಮಾನ್ಯ ಮುಖಂಡರ ಮುಂದೆಯೂ ಕನ್ನಡ ಜನಾಂಗದ ಏಕಮುಖವಾದ ಬೇಡಿಕೆಯನ್ನು ಮಂಡಿಸಿ, ಅಲ್ಲಿಯೂ ಮುಂದೆ ಮಾಡಲಾದ ಆಕ್ಷೇಪಗಳನ್ನೆಲ್ಲ ತುಂಡು ತುಂಡಾಗಿ ಖಂಡಿಸಿ ಕಾಂಗ್ರೆಸ್ಸಿನ ಆಡಳಿತೆಯಲ್ಲಿ ಹಿಂದಿನ ನಾಲ್ಕು ವರ್ಷಗಳಲ್ಲಿ ನಿರಾಕೃತವಾದ ಕನ್ನಡ ನಾಡಿನ ಅಖಂಡತ್ವವನ್ನು ಸಾಧಿಸಿ, ಕರ್ನಾಟಕವನ್ನೊಂದುಗೂಡಿಸಿ ಬೇರೆ ಪ್ರಾಂತವನ್ನು ನಿರ್ಮಿಸಿಕೊಂಡು ಬಂದ ಶ್ರೇಯಸ್ಸೆಲ್ಲವೂ ಕರ್ನಾಟಕ ಸೇವಾಧುರಂಧರ ರಾಷ್ಟ್ರವೀರ ಕಡಪಾ ರಾಘವೇಂದ್ರರಾಯರಿಗೇ ಎಂಬುದನ್ನು ನಾವು ಕೃತಜ್ಞತಾಬುದ್ಧಿಯಿಂದ ಒಪ್ಪಿಕೊಳ್ಳದೆ ಗತ್ಯಂತರವೇ ಇಲ್ಲ. ಈ ಸಂದರ್ಭದಲ್ಲಿ ಕಡಪಾರಾಯರ ಜೊತೆಯಲ್ಲಿ ಅಖಂಡ ಕನ್ನಡ ನಾಡಿನ ಸಂಚಾರ ಮಾಡಿ ಅವರ ಕಾರ್ಯದಲ್ಲಿ ಸಹಕರಿಸಿದ ನನ್ನ ಪುರಾತನ ಮಿತ್ರರಾದ ಶ್ರೀಮಾನ್ ಬೆಟಗೇರಿ ಭೀಮರಾಯರು ಇಂದು ಇಲ್ಲಿಯೇ ಇರುವುದು ನಮ್ಮೆಲ್ಲರ ಭಾಗ್ಯವಾಗಿದೆ. ಕನ್ನಡ ಜನಾಂಗಕ್ಕೆಲ್ಲ ಈ ಬಗೆಯ ಮಹೋಪಕಾರಕರ್ತರಾಗಿರುವ ಆ ಮಹಾಪುರುಷ ಕಡಪಾ ರಾಯರ ದಿವ್ಯ ಆತ್ಮವು ೧೮೪೮ರ ಕ್ಷಯ ಸಂ॥ ಮಾಘ ಶುದ್ಧ ಚತುರ್ದಶಿ ಕ್ರಿ. ಶ. ೧೯೨೭ರ ಫೆಬ್ರವರಿ ೧೫ನೆಯ ತಾರೀಖು ಮಂಗಳವಾರ ಬೆಳಗು ಮುಂಜಾವಿನ ೨ ಘಂಟೆಗೆ ತನ್ನ ನಶ್ವರವಾದ ಭೌತಿಕ ಕಳೇಬರವನ್ನು ಇದೇ ಬೆಳಗಾಂವಿಯಲ್ಲಿ ವಿಸರ್ಜಿಸಿ ಪರಂಧಾಮವನ್ನೈದಿತು. ಹೊಸಗನ್ನಡ ನಾಡಿನ ನಿರ್ಮಾಣಕರ್ತರಲ್ಲಿ ಅಗ್ರೇಸರರಾಗಿದ್ದ ಕಡಪಾ ರಾಘವೇಂದ್ರರಾಯರ ಈ ನಿಧನ ಭೂಮಿಯು ನಮ್ಮ ಕನ್ನಡ ಜನಾಂಗಕ್ಕೆಲ್ಲ ಕೂಡಲಸಂಗಮ, ಉಳವಿ, ಸೋದೆ, ಮಂತ್ರಾಲಯಗಳಂತೆ ಪವಿತ್ರವಾದ ಪುಣ್ಯಭೂಮಿಯಾಗಿರುವುದೆಂಬುದನ್ನು ನಾನೇನು ಬೇರೆ ಹೇಳಬೇಕೆ?

ಹೀಗೆ ಯಾವ ಬಗೆಯಿಂದ ನೋಡಿದರೂ ಬೆಳಗಾಂವಿಯು ತನ್ನದೇ ಒಂದಾದ ವಿಶಿಷ್ಟತನವನ್ನು ಸಾಧಿಸಿಕೊಂಡು ಕನ್ನಡ ನಾಡಿನಲ್ಲೆಲ್ಲ ಚೆನ್ನಾಗಿಯೇ ಕೀರ್ತಿವೆತ್ತು ನಿಂತುಕೊಂಡಿದೆ. ಇಂತಹ ಬೆಳಗಾಂವಿಯಲ್ಲಿ ಕನ್ನಡಮ್ಮನ ರಥವು ಕನ್ನಡದ ಬಾವುಟವನ್ನು ಗಗನ ಮಂಡಲದಲ್ಲಿ ಹೊಯ್ದಾಡಿಸುತ್ತ ಸುಸ್ಥಿರವಾಗಿ ನಿಂತಿದೆ. ಅದನ್ನು ಇನ್ನು ಮುಂದೆ ಇಂದಿನ ಕನ್ನಡ ನಾಡಿನ ಗಡಿದುರ್ಗಗಳಂತಿರುವ ಕೊಲ್ಲಾಪುರ, ಸಾಂಗಲಿ, ಸೊಲ್ಲಾಪುರಗಳತ್ತ ಸಾಗಿಸಿ ಪಾದಗಟ್ಟಿಗೆ ಮುಟ್ಟಿಸಬೇಕಾಗಿದೆ. ಸಹ್ಯಾದ್ರಿಯ ಶಾಖೋಪಶಾಖೆಗಳಲ್ಲಿ ಹಾಯ್ದು ಮುನ್ನಡೆಯಬೇಕಾಗಿರುವ ಈ ದಾರಿಯು ಬಲು ಕಡಿದಿನದಾಗಿ ಅತ್ಯಂತ ಪ್ರಯಾಸಕರವಾಗಿದೆ. ಗುಡ್ಡಬೆಟ್ಟಗಳ ಗಟ್ಟದೊಳಗಿಂದ ಹಾಯುವುದಕ್ಕೆ ಒಳ್ಳೆಯ ಗಟ್ಟಿಮುಟ್ಟಾದ, ಕಡಿದಿನ ದಾರಿಯನ್ನೇರುವಲ್ಲಿ ಚೆನ್ನಾಗಿ ದಣಗಂಡು ಕಾಲುಕೂತ, ಹಳೆಯ ಎತ್ತುಗಳನ್ನೇ ಹೂಡುವುದು ಯಾರಿಗಾದರೂ ಅನುಭವಸಿದ್ಧವಾದದ್ದು. ಹೀಗೆ ಮಾಡಿಯೇ ಯಾವ ಅಪಘಾತದ ಭಯವಿಲ್ಲದೆ, ಅಪಾಯದ ಭೀತಿಯಿಲ್ಲದೆ, ದಾರಿ ತಪ್ಪುವ ಅಂಜಿಕೆಯಿಲ್ಲದೆ ಇಷ್ಟಸ್ಥಳವನ್ನು ಮುಟ್ಟಬಹುದೆಂಬ ನಂಬಿಕೆಯನ್ನಿಟ್ಟುಕೊಂಡು ನಿಶ್ಚಿಂತತೆಯಿಂದ ಮುಂದೆ ಸಾಗಬಹುದು. ಇದೇ ವಿಚಾರವನ್ನು ಮನದಂದು ತಾವೆಲ್ಲರೂ ನನ್ನಂತಹ ಹಣಬನನ್ನು (ಒಲಿಕಾರನನ್ನಲ್ಲ) ಇಲ್ಲಿಗೆ ಕರೆದು ತಂದು, ಕನ್ನಡಮ್ಮನ ಈ ರಥಕ್ಕೆ ಹೂಡಿರಬೇಕೆಂದು ನಾನು ಭಾವಿಸದೆ ಗತ್ಯಂತರವಿಲ್ಲ. ನಾಡಿನ ಮುನ್ನಡೆಯನ್ನು ನಿಷ್ಕರ್ಷಿಸಿ ಅದನ್ನು ನೀಗಿಸಿಕೊಂಡು ಹೋಗಲು ಸಮರ್ಥರಾದ ಯೋಗ್ಯತಾಸಂಪನ್ನ ಪ್ರೌಢರನ್ನೇ ಮಹಾಸಭೆ ಸಮ್ಮೇಳನಗಳ ಅಧ್ಯಕ್ಷಸ್ಥಾನಕ್ಕೆ ಆರಿಸಬೇಕಲ್ಲದೆ, ದಿನಹೋಗಿ ದುರ್ಬಲರಾಗಿ, ವಿಚಾರಶಕ್ತಿ ಕುಂಠಿತವಾಗಿ, ಕಾರ್ಯಾಸಕ್ತಿ ನಶಿಸಿಹೋದವನನ್ನು ಆರಿಸತಕ್ಕದ್ದಲ್ಲವೆಂದು ಹಿಂದಿನ ಸಮ್ಮೇಳನದ ಕೊನೆಯಲ್ಲಿಯೇ ನಾನು ಎಚ್ಚರಿಸಿದೆನು. ಆದರೂ ನನಗೆ ಈ ಆಪತ್ತಿಯು ಬಿಡಲಿಲ್ಲ. ಕೊನೆಗೆ ಇದೊಂದು ಇಷ್ಟಾಪತ್ತಿಯೆಂದೇ

ನಾನು ಭಾವಿಸಿಕೊಳ್ಳಬೇಕಾಯಿತು. ಕನ್ನಡ ತಾಯಿಯ ಸೇವೆಗೆಂದು ಬಂದ ಯಾವ ಕರೆಯನ್ನೂ ನನ್ನೀ ಆಯುಷ್ಯದಲ್ಲಿ ಎಂದೂ ನಿರಾಕರಿಸದ ನಾನು ಇಡೀ ನಾಡಿನ ಒಪ್ಪಿತದ ಬೆಂಬಲದಿಂದ ನನಗೆ ಬಂದ ಬೆಳಗಾಂವಿಯವರ ಕರೆಯನ್ನು ಯಾವ ಮೋರೆಯಿಂದ ಅನಾದರಿಸಲೆಂಬ ನಾಚಿಕೆಯು ನನ್ನ ಅಂತರಂಗದಲ್ಲಿ ಪ್ರಬಲವಾಗಿ ನನ್ನನ್ನು ಇಂದು ತಮ್ಮೆಲ್ಲರ ನಡುವೆ ತಂದು ಇಲ್ಲಿ ನಿಲ್ಲಿಸಿದೆ. ತಮ್ಮ ಅಂತಃಕರಣದಿಂದ ಹೊರಸೂಸಿ ಬಂದು ನನ್ನ ಮೇಲೆ ಒಟ್ಟೊಟ್ಟಲಾಗಿ ಬಿದ್ದುಕೊಂಡಿರುವ ಈ ಕಕುಲಾತಿಯ ಹೊರೆಯನ್ನು ಇಳಿಸುವ ಶಕ್ತಿಯು ನನಗೆ ಸಾಲದೆಂಬುವದನ್ನು ಮೊದಲೇ ಬಿಚ್ಚಿ ಹೇಳಿಬಿಡುತ್ತೇನೆ. ತಾವೇ ತಮ್ಮ ಅನಂತ ಹಸ್ತಗಳ ಆಧಾರವನ್ನು ನನಗೆ ಕೊಟ್ಟು ನೆರವಾಗಿ ಈ ಭಾರವನ್ನು ಇಳಿಸಿಕೊಳ್ಳಬೇಕೆಂದು ಅನನ್ಯಭಾವದಿಂದ ವಿನೀತನಾಗಿ ಬೇಡಿಕೊಳ್ಳುತ್ತೇನೆ.

**ಕೀರ್ತಿಶೇಷರಾದ ಕನ್ನಡಿಗರು**

ಮಹನೀಯರೆ, ಹೋದ ಸಲ ನಾವು ಬಳ್ಳಾರಿಯಲ್ಲಿ ಕೂಡಿದಾಗಿನಿಂದಿತ್ತ ಕಡೆಗೆ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಹೆಸರಾಂತ ಮಹನೀಯರು ಕೆಲವರು ನಮ್ಮನ್ನು ಅಗಲಿ ನಮಗೆ ಕಣ್ಮರೆಯಾಗಿರುವುದು ಅತ್ಯಂತ ವಿಷಾದಕರವಾಗಿದೆ. ಅಂತಹರೊಳಗೆ ಶ್ರೀಮಾನ್ ಎಂ. ಶಾಮರಾಯರ ನಾಮನಿರ್ದೇಶವನ್ನು ನಾನು ಮೊದಲು ಮಾಡಬೇಕಾಗಿದೆ. ಮೈಸೂರು ಸಂಸ್ಥಾನದ ಶಿಕ್ಷಣ ಖಾತೆಯ ಮುಖ್ಯಾಧಿಕಾರಿಗಳಾಗಿ ಕನ್ನಡಕ್ಕೆ ವಿಶೇಷವಾದ ಸೇವೆಯನ್ನು ಇವರು ಸಲ್ಲಿಸಿರುವುದುಂಟು. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ವಿಷಯದಲ್ಲಿಯೂ ಇವರು ಹೆಚ್ಚಿನ ಆಸ್ಥೆಯಿಂದ ಕಾರ್ಯಮಾಡಿದರು. ಎರಡನೆಯದಾಗಿ ಮೈಸೂರು ಮಹಾರಾಜರ ಕಾಲೇಜಿನಲ್ಲಿ ಕನ್ನಡದ ಪ್ರೊಫೆಸರಾಗಿದ್ದ ನನ್ನ ಜೀವದ ಗೆಳೆಯರು ಶ್ರೀಮಾನ್ ತಳುಕಿನ ವೆಂಕಣ್ಣಯ್ಯನವರು. ಇವರನ್ನು ಅರಿಯದ ಕನ್ನಡಿಗರೇ ವಿರಳವೆಂದು ಹೇಳಬಹುದು. ಇವರು ಕನ್ನಡ ನಾಡಿಗೂ ಸಾಹಿತ್ಯಕ್ಕೂ ಮಾಡಿದ ಸೇವೆಯನ್ನು ಬಣ್ಣಿಸುವುದು ನನ್ನ ಯೋಗ್ಯತೆಗೆ ಮೀರಿದ ಮಾತು. ಮೂರನೆಯವರು ಕೊಡಗಿನ ಶ್ರೀಮತಿ ಸೌಭಾಗ್ಯವತಿ ಗೌರಮ್ಮನವರು; ಕನ್ನಡ ಸಣ್ಣ ಕಥೆಗಳ ಹೆಸರಾದ ಬರಹಗಾರ್ತಿಯರು. ಬಿ. ಟಿ. ಜಿ. ಕೃಷ್ಣ ಎಂಬ ಹೆಸರಿನಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆಲ್ಲ ಇವರು ಚೆನ್ನಾಗಿಯೇ ಪರಿಚಿತರಾಗಿದ್ದಾರೆ. ಕೊಡಗಿನಿಂದ ಒಬ್ಬರೇ ಹೊರಟು ಅತಿ ದೂರದ ತಾಪದಾಯಕ ಪ್ರವಾಸವನ್ನು ಧೈರ್ಯದಿಂದ ಕೈಕೊಂಡು, ಅನೇಕ ಬಗೆಯ ದೈಹಿಕ ಕಷ್ಟಾಯಾಸಗಳನ್ನು ಆನಂದದಿಂದ ಸಹಿಸಿ, ಇತ್ತ ಕಡೆಯ ಕನ್ನಡ ಬಂಧು-ಭಗಿನಿಯರ ಜೊತೆಯಲ್ಲಿ ನಾಲ್ಕೆಂಟು ದಿನಗಳನ್ನು ಕಳೆಯಬೇಕೆಂಬ ಉತ್ಕಂಠೆಯಿಂದ ೧೯೩೭ರ ಜಮಖಂಡಿಯ ಸಾಹಿತ್ಯ ಸಮ್ಮೇಲನಕ್ಕೆ ಕೊಡಗಿನ ಕರ್ನಾಟಕ ಸಂಘದ ಪ್ರತಿನಿಧಿಗಳಾಗಿ ಅವರು ಬಂದದ್ದೇ ಅವರ ಅಂತರಂಗದೊಳಗಿನ ಕನ್ನಡದ ಭಕ್ತಿಯನ್ನು ಚೆನ್ನಾಗಿ ತೋರಿಸಿಕೊಡುತ್ತಿದೆ. ನಮ್ಮ ಮಿಕ್ಕ ಕನ್ನಡ—ಭಗಿನಿಯರ ಮಾತು ಹಾಗಿರಲಿ—ಬಂಧುಗಳಾದರೂ ಸೌಭಾಗ್ಯವತಿ ಗೌರಮ್ಮನವರ ಕನ್ನಡ ಭಕ್ತಿಯನ್ನು ಅನುಕರಿಸಿದರೆ ಕನ್ನಡನಾಡಿನ ಉನ್ನತಿಗೆ ತಡವಾಗಲಾರದು. ನಾಲ್ಕನೆಯವರು 'ಸಂಸ' ಎಂಬ ಹೆಸರಿನಿಂದ 'ಸುಗುಣ ಗಂಭೀರ,' 'ವಿಗಡ ವಿಕ್ರಮರಾಯ' ಮೊದಲಾದ ನಾಟಕಗಳನ್ನು ಬರೆದು ಪ್ರಸಿದ್ಧರಾಗಿದ್ದ ಸ್ವಾಮಿ ವೆಂಕಟಾದ್ರಿಯವರು. ದುರಂತ ನಾಟಕಗಳನ್ನು ಬರೆಯುವುದರಲ್ಲಿ ಎತ್ತಿದ ಕೈಯಾಗಿದ್ದ ಇವರ ಕೊನೆಯೂ ದುರಂತವಾಗಿಯೇ ಪರಿಣಮಿಸಿದುದು ಅತ್ಯಂತ ಶೋಕಕ್ಕೆ ಕಾರಣವಾಗಿದೆ. ಕೊನೆಯದಾಗಿ ಕಾಶಿಯ ಹಿಂದೂ ವಿಶ್ವವಿದ್ಯಾಲಯದಲ್ಲಿ ಉಚ್ಚ ಶಿಕ್ಷಣ ಪಡೆದು ಮುಂದಿನ ಅಭ್ಯಾಸ ಕ್ರಮಕ್ಕೆಂದು ಇಟಲಿಗೆ ಹೋಗಿದ್ದ ಶ್ರೀಮಾನ್ ಪೇಜಾವರ ಸದಾಶಿವರಾಯರ ಉಲ್ಲೇಖವನ್ನು ಅವಶ್ಯವಾಗಿ ಮಾಡಬೇಕಾಗಿದೆ. ಕಾಶಿಯ ವಿದ್ಯಾಪೀಠದ ಕನ್ನಡ ತರುಣರಲ್ಲಿ ಕನ್ನಡತನದ ಜೀವಾಳವನ್ನು ಬೆಳಸಲು ಕಂಕಣ ಕಟ್ಟಿದ ಇವರ ಸೇವೆ ಮುಂದೆ ಕನ್ನಡಮ್ಮನ ಬಹು ಬೆಲೆಯ ಸೊತ್ತಾಗಬಹುದಾಗಿತ್ತು. ಇವರೆಲ್ಲರ ಅಕಾಲಿಕ ನಿಧನದ ಬಗ್ಗೆ ಕನ್ನಡ ಸಾಹಿತ್ಯ ಸೇವಕ ವರ್ಗವೇ ಅಪಾರವಾದ ದುಃಖಕ್ಕೆ ಈಡಾಗಿರುವುದು. ಆದರೆ ಭಗವದಿಚ್ಛೆಯ ಮುಂದೆ ಯಾರ ಯತ್ನವೇನು ಸಾಗುವುದು? ದಿವಂಗತರಾದ ಈ ಮಹನೀಯರಿಗಾಗಿ ಅನುತಪಿಸುತ್ತ ಕಂಬನಿಗರೆಯುವುದು ಮಾತ್ರ ನಮ್ಮ ಕೈಯೊಳಗಿನ ಮಾತು. ಪರಮಾತ್ಮನು ಇವರೆಲ್ಲರ ಆತ್ಮಗಳಿಗೆ ಚಿರಶಾಂತಿಯನ್ನೀಯಲೆಂದು ಹಾರಯಿಸುವ.

**ಕನ್ನಡದ ಹಳಗಾಲದ ಹಿರಿಮೆ**

ಕನ್ನಡ ನುಡಿಯ ಪುರಾತನತ್ವವೂ ಪ್ರಾಚೀನತ್ವ ಮಹತ್ವವೂ ಈಗ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಕ್ರಿ. ಶ. ಒಂಬತ್ತನೆಯ ಶತಮಾನದಲ್ಲಿಯೇ ಕನ್ನಡ ನಾಡಿನ ಚಕ್ರವರ್ತಿಯಾಗಿದ್ದ ರಾಷ್ಟ್ರಕೂಟ ವಂಶದ ನೃಪತುಂಗನ ಕಾಲದಲ್ಲಿ ಕರ್ನಾಟಕ ರಾಜ್ಯದ ವಿಸ್ತಾರವೆಷ್ಟಿದ್ದಿತೆಂಬುದನ್ನು ವಿವರಿಸುವ ಆದಿ ಗ್ರಂಥವಾದ 'ಕವಿರಾಜಮಾರ್ಗ'ವು ಒಂದೇ ಉಪಲಬ್ಧವಾಗಿದ್ದರೂ ಅದಕ್ಕೂ ಹಿಂದಿನ ಬಿಡಿ ಬಿಡಿ ಆಧಾರಗಳೆಷ್ಟೋ ಈಗ ಬೆಳಕಿಗೆ ಬಂದಿವೆ. ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿಕೊಂಡಿದ್ದ ವಿಶಾಲವಾದ ಪ್ರದೇಶವು ಕನ್ನಡ ನಾಡೆಂದೂ ಅದರೊಳಗೆ ಬೆಳಗಾಂವಿ ನಾಡಿನ ಒಂಕುಂದ, ವಿಜಾಪುರ ನಾಡಿನ ಪಟ್ಟದಕಲ್ಲು, ಹಂಪೆಯ ನಾಡಿನ ಕೊಪ್ಪಳ, ಸವಣೂರು ಸೀಮೆಯ ಲಕ್ಷ್ಮೇಶ್ವರ, ಇವುಗಳ ನಡುವಣ ನಾಡು 'ತಿರುಳ್ಗನ್ನಡ'ವೆಂದೂ ಕವಿರಾಜಮಾರ್ಗದಲ್ಲಿ ವರ್ಣಿತವಾಗಿದೆ. ಶ್ರೀಮಾನ್ ಜೋಶಿ ಶಂಕರರಾಯರಂಥ ಮಾರ್ಮಿಕ ಸಂಶೋಧಕರು ಕನ್ನಡ ನಾಡಿನ ವಿಸ್ತಾರವನ್ನು ಉತ್ತರಕ್ಕೆ ಗೋದಾವರಿಯ ಆಚೆಗೆ ನರ್ಮದೆಯ ವರೆಗೆ ಒಯ್ದು ಮುಟ್ಟಿಸಲು ಯತ್ನಿಸಿದ್ದಾರೆ. ಇನ್ನೂ ಹಿಂದೆ ಹಿಂದಿನ ಅಜ್ಞಾತ ಸಂಗತಿಗಳ ಸಂಶೋಧನವಾಗುತ್ತ ನಡೆದಂತೆ ನಾವು ಇನ್ನೂ ಇನ್ನೂ ಮೇಲಿನವರೆಂಬ ಅನುಮಾನಕ್ಕೆ ಪ್ರಬಲವಾದ ಆಧಾರಗಳು ದೊರೆಯುತ್ತವೆಂದು ಪ್ರಾಚೀನ ಸ್ಥಿತಿಗತಿ ಸಂಶೋಧಕರು ಸಾರಹತ್ತಿದ್ದಾರೆ. ಮಧುರೆಯ ಅರಸು ಮನೆತನಕ್ಕೆ ಸಂಬಂಧಿಕನಾಗಿ ಹುಟ್ಟಿ, ಗೋಕುಲದ ಪಟ್ಟಿಕಾರರ ಹಿರಿಯನ ಮನೆಯಲ್ಲಿ ಹಿಗ್ಗಿನ ಮಗನಾಗಿ ಬೆಳೆದು, ತನ್ನ ಲೋಕೋತ್ತರ ಗುಣಶೀಲ ಚಾರಿತ್ರ್ಯಗಳ ಮೂಲಕ ಪುರಾಣಪುರುಷನ ಅವತಾರವೆಂದು ಪುರಾಣಗಳೆಲ್ಲ ಕೊಂಡಾಡಿರುವ ಶ್ರೀ ಕೃಷ್ಣನು ಕನ್ನಡ ಕುಲದವನೇ ಆಗಿದ್ದನೆಂಬುವಕ್ಕೆ ಆಧಾರಗಳನ್ನು ಕಂಡುಹಿಡಿದಿದ್ದಾರೆ. ಸಿಂಧೂ ನದಿಯ ಪ್ರದೇಶದ ಭೂ ಸಂಶೋಧನೆಯಲ್ಲಿ ದೊರೆತಿರುವ ಮೊಹೆಂಜೋದಾರೋ ಹರಪ್ಪಾ ಪಟ್ಟಣಗಳ ಅವಶೇಷಗಳಲ್ಲಿ ಕನ್ನಡ ಸಂಸ್ಕೃತಿಯ ಅನೇಕಾನೇಕ ಕುರುಹುಗಳು ನಿದರ್ಶನಕ್ಕೆ ಬರುತ್ತಿರುವವೆಂದು ಫಾದರ್ ಹಿರಾಸರೇ ಮೊದಲಾದ ನಿಷ್ಪಕ್ಷಪಾತಿಗಳಾದ ಸಂಶೋಧಕರು ಸಿದ್ಧಾಂತಮಾಡಹತ್ತಿದ್ದಾರೆ. ದ್ರಾವಿಡರ 'ಶಿವದೇವ'ನನ್ನು ಆರ್ಯರು ತಮ್ಮ ದೇವಗಣದೊಳಗೆ ಸೇರಿಸಿಕೊಂಡು ಆ 'ರುದ್ರಶಿವ'ನಿಗೆ ವೇದಗಳಲ್ಲಿಯೂ ಸ್ಥಾನವನ್ನು ಕಲ್ಪಿಸಿರುವರೆಂದು ಶ್ರೀಮಾನ್ ಜೋಶಿ ಶಂಕರರಾಯರ 'ಶಿವರಹಸ್ಯ'ವನ್ನು ಓದುವವರಿಗೆ ಮನದಟ್ಟಾಗುವಂತಿದೆ. ಕರ್ನಾಟಕ ವಿದ್ಯಾವರ್ಧಕ ಸಂಘದ ಸುವರ್ಣ ಮಹೋತ್ಸವ ಗ್ರಂಥಗಳಲ್ಲೊಂದಾಗಿ ಮೊನ್ನೆ ತಾನೇ ಪ್ರಕಟವಾಗಿರುವ ಶ್ರೀಮಾನ್ ಕರಮರಕರ ಅನಂತರಾಯರು, ಎಂ.ಎ., ಎಲ್ಎಲ್.ಬಿ., ಹಾಗು ಶ್ರೀಮಾನ್ ಕಲಮದಾನಿ ನಾರಾಯಣರಾಯರು ಬರೆದಿರುವ "ಕರ್ನಾಟಕದೊಳಗಿನ ಹರಿದಾಸರ ಆಧ್ಯಾತ್ಮಿಕ ರಹಸ್ಯಬೋಧೆಗಳು (Mystic teachings of the Haridasas of Karnataka)" ಎಂಬ ಇಂಗ್ಲಿಷ್ ಗ್ರಂಥಕ್ಕೆ 'ಐತಿಹಾಸಿಕ ಪರಿಚಯ (Historical introduction)' ರೂಪವಾಗಿ ಫಾದರ್ ಹಿರಾಸರವರು ಬರೆದಿರುವ ಪೀಠಿಕೆಯಲ್ಲಿ 'ಆತ್ಮ', 'ಪರಮಾತ್ಮ', ಬ್ರಹ್ಮ', 'ವಿಶ್ವಸ್ವರೂಪ ಪರಬ್ರಹ್ಮ', 'ಕರ್ಮಪ್ರಕ್ರಿಯೆ', 'ಪೂನರ್ಜನ್ಮ ವಿಚಾರ', 'ಪಾರಲೌಕಿಕ ಚಿಕಿತ್ಸೆ' ಮೊದಲಾದ ಆಧ್ಯಾತ್ಮಿಕ ಸಂಗತಿಗಳನ್ನು ಆರ್ಯರು ದ್ರಾವಿಡ ಜನಾಂಗದೊಡನೆ ಸಂಧಿಸಿ ಅವರೊಂದಿಗೆ ಬೆರೆತು ಹೋಗುತ್ತ ನಡೆದಂತೆ ದ್ರಾವಿಡರಿಂದಲೇ ಕಲಿತುಕೊಂಡು ವೇದೋಪನಿಷತ್ತುಗಳಲ್ಲಿ ಸಮಾವೇಶಗೊಳಿಸಿದರೆಂದು ಅಸಂದಿಗ್ಧವಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಆರ್ಯರ ಶ್ರೇಷ್ಠ ಬುದ್ಧಿಯ ಪರಿಣತಿಯ ಪ್ರಭಾವವೇ ಎಂದು ತಿಳಿಯಲಾಗಿದ್ದ 'ವೇದಾಂತ' ಪ್ರಮೇಯಗಳು ಹಿಂದುಸ್ಥಾನದಲ್ಲಿ ಆರ್ಯರಿಗಿಂತ ಮೊದಲಿಗರಾಗಿದ್ದ ದ್ರಾವಿಡ ಕುಲದವರೇ ಆರ್ಯ ಮಹರ್ಷಿಗಳಿಗೆ ಸಲ್ಲಿಸಿದ ಹಿರಿಯ ಕಾಣಿಕೆಗಳೆಂಬುದು ಈಗ ಬಯಲಿಗೆ ಬರಹತ್ತಿದೆ. ಈ ದ್ರಾವಿಡ ಕುಲವೆಂಬುದು ಕನ್ನಡಿಗರದೇ ಎಂಬ ಮಾತು

ವಿದ್ವಾಂಸರು ತಮ್ಮ ತಮ್ಮ ದೇಶಭಾಷೆಗಳ ಪ್ರತಿಷ್ಠೆಯನ್ನು ಕಾಯುವುದಕ್ಕೆ ತಮ್ಮ ತಮ್ಮ ಭಾಷೆಗಳ ಪ್ರಾಚೀನ ಸಾಹಿತ್ಯವನ್ನು ಉದ್ಧಾರ ಮಾಡಿ ಹೊಸ ಸಾಹಿತ್ಯ ನಿರ್ಮಾಣಕ್ಕೂ ಕೈಯಿಕ್ಕಿ ಸಾಹಸಮಾಡ ಹತ್ತಿದರು. ಬಂಗಾಲದಲ್ಲಿ ರಾಜಾ ರಾಮಮೋಹನರಾಯ, ಕೇಶವ ಚಂದ್ರಸೇನ, ಬಂಕಿಮಚಂದ್ರ ಚಟರ್ಜಿ, ಮಹಾರಾಷ್ಟ್ರದಲ್ಲಿ ವಿಷ್ಣು ಶಾಸ್ತ್ರಿ ಚಿಪಳೂಣಕರ, ಲೋಕಮಾನ್ಯ ಬಾಲಗಂಗಾಧರ ತಿಲಕ, ಗೋಪಾಳರಾವ ಅಗರಕರ, ಆಂಧ್ರದೇಶದಲ್ಲಿ ವೀರೇಶಲಿಂಗಂ ಪಂತುಲು, ಮೊದಲಾದ ಮಹನೀಯರ ದೃಷ್ಟಾಂತಗಳನ್ನು ನಾವು ನೋಡಿಕೊಳ್ಳಬಹುದು. ಆದರೆ ವಿಭಕ್ತವಾದ ವಿಸ್ಖಲಿತವಾದ ವಿಕಲಾಂಗವಾಗಿ ವಿದ್ರೂಪವಾದ ಕನ್ನಡನಾಡಿಗೆ ಸ್ವತಂತ್ರ ವಿಶ್ವವಿದ್ಯಾಲಯವೂ ಇಲ್ಲ; ಬೇರೆ ವಿದ್ಯಾಪೀಠಗಳಿಗೆ ಹೊಂದಿಕೊಂಡಿದ್ದ ಉಚ್ಚ ಶಿಕ್ಷಣ ಸಂಸ್ಥೆಗಳೂ ಇಲ್ಲ. ಹೀಗಾಗಿ ಆಗಿನ ಕಾಲದ ಕನ್ನಡ ಯುವಕರಿಗೆ ಹೊಸ ಬಗೆಯ ಶಿಕ್ಷಣದ ಸಂಸ್ಕಾರವಿಲ್ಲ; ಅದನ್ನು ಪಡೆಯಬೇಕೆಂಬ ಹಂಬಲ ಹಿಡಿದರೆ ನಾಲ್ಕಾರು ನೂರು ಮೈಲಿಗಳ ದೂರದ ಪರನಾಡಿನಲ್ಲಿ ಪರಭಾಷೆಯವರ ಪರಿಷ್ಕಾರದಿಂದ ತುಂಬಿದ ಪರಿಘದಲ್ಲಿ ಹೇರಳ ಹಣ ವೆಚ್ಚಮಾಡಬೇಕಾಗುತ್ತಿತ್ತು. ಹೀಗಿದ್ದುದರಿಂದ ಹೊಸ ಬಗೆಯ ಸಂಸ್ಕಾರವನ್ನು ಹೊಂದುವುದು ಕನ್ನಡಿಗರಿಗೆ ಅಸಾಧ್ಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಕನ್ನಡದ ಪ್ರಾಚೀನ ಮಹಿಮೆಯನ್ನರಿತುಕೊಂಡು ಅದರ ಉನ್ನತಿಗಾಗಿ ಸಾಹಸಪಡಬೇಕೆಂಬ ಸದ್ಬುದ್ಧಿಯುಳ್ಳ ಕನ್ನಡಿಗರು ಮುಂದೆ ಬರಲು ಮಾರ್ಗವೇ ಇಲ್ಲದಾಯಿತು. ಮೇಲಾಗಿ ಕನ್ನಡನಾಡಿನಲ್ಲೆಲ್ಲಿ ನೋಡಿದರೂ ಪರಭಾಷೆಯವರ ಪ್ರಭುತ್ವ,—ಇಂಗ್ಲಿಷದ ಉಚ್ಚ ಸಂಸ್ಕಾರದಿಂದ ಸ್ವಭಾಷೆಯ ಅಭಿಮಾನದ ಪುಟವೇರಿದ ಪರಭಾಷೆಯ ವರಿಷ್ಠಾಧಿಕಾರಿಗಳ ವರ್ಚಸ್ಸು,—ಇದರಿಂದ ಕನ್ನಡಕ್ಕೆ ಎಲ್ಲೆಲ್ಲಿಯೂ ಪುರಸ್ಕಾರವೆಂಬುದೇ ಇಲ್ಲದಾಗಿ ಕನ್ನಡಿಗರಲ್ಲಿಯೂ ಸ್ವಭಾಷೆಯ ವಿಷಯಕ್ಕೆ ಒಂದು ಬಗೆಯ ತಿರಸ್ಕಾರ ಭಾವನೆ ಹುಟ್ಟಿ ಬೆಳೆಯಲು ಕಾರಣವಾಯಿತು.

**ಮೈಸೂರು ಸೀಮೆಯಲ್ಲಿ ಇಂಗ್ಲಿಷದ ದಬ್ಬಾಳಿಕೆ**

೧೭೯೯ರಲ್ಲಿ ಶ್ರೀರಂಗಪಟ್ಟಣದಲ್ಲಿ ಟೀಪುವಿನ ಪರಾಭವವಾದ ನಂತರ ಆತನ ಅಧೀನದಲ್ಲಿದ್ದ ಕನ್ನಡನಾಡನ್ನು ಇಂಗ್ಲಿಷರೂ ಮರಾಟರೂ ನಿಜಾಮರೂ ಹಂಚಿಕೊಂಡ ಕಾಲಕ್ಕೆ ಕನ್ನಡಾಂಬೆಯ ಕಂಠದೊಳಗಿನ ಮಣಿಮಾಲೆಯೊಳಗಿನ ಹಿರಿಯಮಣಿಯಂತಿರುವ ಮೈಸೂರು ಸೀಮೆಯು ಮೂಲ ಕನ್ನಡ ರಾಜರ ಮನೆತನಕ್ಕೆ ಬಿಟ್ಟುಕೊಡಲಾಯಿತು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಳಿಕೆಯ ಕಾಲದಲ್ಲಿ ಯಾವುದೋ ನಿಮಿತ್ತದಿಂದ ಕಂಪೆನಿಯ ಸರಕಾರದವರು ಸಂಸ್ಥಾನದ ಆಡಳಿತೆಯನ್ನೆಲ್ಲ ತಮ್ಮ ಕಡೆಗೆ ಸೆಳೆದುಕೊಂಡು ಒಂದು ಕಮಿಶನ್ನಿನ ಮುಖಾಂತರ ಕಾರಭಾರ ನಡೆಸಿದರು. ಈ ಕಮಿಶನ್ನು ೫೦ ವರುಷಗಳವರೆಗೆ ಅಖಂಡವಾಗಿ ರಾಜ್ಯಮಾಡಿತು. ಕಂಪೆನಿಯ ಅಧಿಕಾರಿಗಳು ಮದರಾಸಿನತ್ತಣಿಂದ ಬರುವರು. ಅವರ ಸಂಜಗೆಗೆ ಪ್ರೇಮಕ್ಕೆ ಪಾತ್ರರಾಗಿದ್ದ ಸುಶಿಕ್ಷಿತ ಮದರಾಸಿಗಳೇ ವರಿಷ್ಠಾಧಿಕಾರಿಗಳಾಗಿ ಬರುವರು. ಇವರಿಗೆ ಕನ್ನಡದ ಗಂಧವಿಲ್ಲ. ಹೀಗಾಗಿ ರಾಜ್ಯದ ವ್ಯವಹಾರದಲ್ಲಿ ಇಂಗ್ಲಿಷಕ್ಕೆ ಪ್ರಧಾನ ಪಟ್ಟ ದೊರೆತು, ತಮಿಳು ತೆಲುಗುಗಳು ಗೌರವವನ್ನು ಪಡೆದು, ಕನ್ನಡ ಮೂಲೆಗುಂಪಾಗುವ ಹೊತ್ತು ಬಂದಿತು. ಪುರಾತನ ಕಾಲದಿಂದಲೂ ಮೈಸೂರು ಸೀಮೆಯ ಮೂಲಭಾಷೆಯಾಗಿ, ಮೈಸೂರೊಡೆಯರ ಮನೆತನದ ಮೆಚ್ಚುಗೆಯ ಮುದ್ದುಮಾತಾಗಿ, ಆ ಸೀಮೆಯಲ್ಲೆಲ್ಲ ಮಹಾ ರಾಜವೈಭವದಿಂದ ಮೆರೆಯಬೇಕಾಗಿದ್ದ ಕನ್ನಡವು ಒಂದು ಬಗೆಯ ರಾಜಕೀಯ ಪಾರತಂತ್ರ್ಯದ ಮೂಲಕ ದೆಸೆಗೇಡಿಯಾಗಿ ಬಾಳಬೇಕಾಯಿತೆಂಬ ಮಾತು ಎಲ್ಲ ಕನ್ನಡಿಗರ ಕರುಳಿಗೆ ಬರೆಕೊಡುವಂತಹದಾಗಿದೆ. ಕಮಿಶನ್ನಿನ ಆಳಿಕೆ ಮುಗಿದು 'ಕನ್ನಡರಾಜ್ಯರಮಾರಮಣ'ರೆಂಬ ಗೌರವಾಸ್ಪದ ಬಿರುದಿಗೆ ಈಗಲೂ ಪಾತ್ರರಾಗಬಹುದಾಗಿರುವ ಈಗಿನ ಮಹಾರಾಜರವರ ಪೂಜ್ಯ ಪಿತೃಗಳಾಗಿದ್ದ ಕೀರ್ತಿವೆತ್ತ ಶ್ರೀ ಚಾಮರಾಜೇಂದ್ರರ ಪ್ರತ್ಯಕ್ಷ ಆಳಿಕೆಗೆ ಆರಂಭವಾಯಿತು. ಆದರೂ ರಾಜ್ಯವ್ಯವಹಾರದಲ್ಲಿ ಇಂಗ್ಲಿಷದ ಪ್ರಾಧಾನ್ಯಕ್ಕೆ ಚ್ಯುತಿಬರಲಿಲ್ಲ. ಕನ್ನಡಿಗರಲ್ಲದವರ ವರಿಷ್ಠಾಧಿಕಾರಗಳ ವರ್ಚಸ್ಸವು ಕಡಮೆಯಾಗಲಿಲ್ಲ. ಹೀಗಾಗಿ ಮೈಸೂರು ಸೀಮೆಯಲ್ಲಿಯೂ ಕನ್ನಡಕ್ಕೆ ಯಾವ ಬಗೆಯ ತಿರಸ್ಕಾರ ಅನಾದರಗಳುಂಟಾಗುವಂತಾಯಿತೆಂಬುದನ್ನು ನೋಡಬೇಕಾದರೆ ಅಲ್ಲಿ ಕನ್ನಡಕ್ಕಾಗಿ ಕರುಳು ಕರಗಿ ದುಡಿದು, ದುಃಖಪಟ್ಟು, 'ಕರ್ನಾಟಕ ಕಾವ್ಯಮಂಜರಿ', 'ಕರ್ನಾಟಕ ಕಾವ್ಯಕಲಾನಿಧಿ' ಎಂಬ ಮಾಸಪತ್ರಿಕೆಗಳ ಮುಖಾಂತರ ಅನೇಕ ಕನ್ನಡ ಪ್ರಾಚೀನ ಸಾಹಿತ್ಯಗ್ರಂಥಗಳನ್ನು ಪ್ರಕಟಿಸಿ, ಕನ್ನಡದ ಪುನರುದ್ಧಾರಕ್ಕೆ ತಮ್ಮ ಸರ್ವಸ್ವವನ್ನೂ ಸಮರ್ಪಿಸಿ, ಸಾಹಸ ಮಾಡಿದ ದಿವಂಗತ ಶ್ರೀ|| ಎ. ರಾಮಾನುಜ ಅಯ್ಯಂಗಾರ್ಯರು ಪ್ರಬುದ್ಧಕರ್ನಾಟಕದ ಒಂದು ಸಂಚಿಕೆಯಲ್ಲಿ ಬರೆದಿರುವ ಕಣ್ಣೀರಿಡಿಸುವಂತಹ ಲೇಖನವನ್ನು ಪರಿಶೀಲಿಸಬೇಕು. ಹೋದ ನವಂಬರ ತಿಂಗಳ 'ಜಯಂತಿ'ಯ ಸಂಚಿಕೆಯಲ್ಲಿ ನನ್ನದೊಂದು ಬರಹದಲ್ಲಿ ನಾನು ಅದರ ಮುಖ್ಯ ಭಾಗವನ್ನು ಉದಾಹರಿಸಿದ್ದೇನೆ. ಅದನ್ನು ಕನ್ನಡಿಗರೆಲ್ಲರೂ ದಯವಿಟ್ಟು ಓದಬೇಕು. ಮುಂದೆ ಮೈಸೂರಿನವರೇ ಆದ ಶ್ರೀಮಾನ್ ವಿಶ್ವೇಶ್ವರಯ್ಯನವರು ದಿವಾನರಾಗಲು 'ಮೈಸೂರು ಮೈಸೂರಿನವರಿಗಾಗಿ' ಎಂಬ ಸಾತ್ವಿಕ ಸ್ವಾಭಿಮಾನವು ಪ್ರಾದುರ್ಭೂತವಾಗಿ ರಾಜ್ಯಕಾರಭಾರದ ಕೆಲವೊಂದು ಸಂದರ್ಭಗಳಲ್ಲಿ ತುಸುಮಟ್ಟಿನ ಹಿತಕರವಾದ ಮಾರ್ಪಾಟುಗಳಾದವು. ಆದರೂ 'ಮೈಸೂರಿನ ಭಾಷೆ ಮೈಸೂರಿನಲ್ಲಿ' ಎಂಬ ಆವಶ್ಯಕ ಪರಿವರ್ತನವಾಗಲೇ ಇಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಕಾಲಕ್ಕೆ ಬೆಂಗಳೂರಿನಲ್ಲಿ ಕೂಡಿದ ಮಹಾಜನರ ಸಭೆಯಲ್ಲಿ ಹೆಸರೇನಿಡಬೇಕೆಂಬ ಚರ್ಚೆ ನಡೆದಾಗ 'ಕನಡಾ ಅಕಾಡೆಮಿ' ಎಂಬ ಅತ್ತೆಯ ಮನೆಯ ಹೆಸರೂ ಮುಂದೆ ಬಂದಿತ್ತು. ಅದು ಇನ್ನೂ ಕೆಲವು ಕಡೆ ಪ್ರಚಾರದಲ್ಲಿದೆ. ಮುಂದೆ ಮೈಸೂರು ವಿದ್ಯಾಪೀಠದ ಸ್ಥಾಪನೆಯಾಯಿತು. ಅದರ ಪ್ರಾರಂಭೋತ್ಸವದ ಪ್ರಸಂಗದಲ್ಲಿ ಶ್ರೀಮನ್ಮಹಾರಾಜರವರು 'ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗು ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ' ಎಂಬ ಎರಡು ವಿಶೇಷವಾದ ಕರ್ತವ್ಯಗಳನ್ನು ವಿದ್ಯಾಪೀಠದ ಪಾಲಿಗೆ ಒಪ್ಪಿಸಿದುದಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ಎರಡು ಸಂಗತಿಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಿ ನೋಡಿದರೆ ಆಗಲೂ ಮೈಸೂರಿನ ಕನ್ನಡರಾಜರ ರಾಜ್ಯದಲ್ಲಿ ಕನ್ನಡವೇ ಪ್ರಭುತ್ವಸ್ಥಾನದಲ್ಲಿರಬೇಕೆಂಬ ವಿಚಾರಕ್ಕೆ ಅವಕಾಶವಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿ ೨೫ ವರುಷಗಳಾದವು. ಮಹಾರಾಜರಿಂದ, ರಾಜಪರಿವಾರದಿಂದ, ಮಹಾರಾಜರ ಪ್ರಭುತ್ವದಿಂದ, ಪರಿಷತ್ತಿಗೆ ಚೆನ್ನಾಗಿಯೇ ಆಶ್ರಯ ದೊರೆಯುತ್ತಿದೆ. ವಿದ್ಯಾಪೀಠದಲ್ಲಿ ವಿದ್ವಾಂಗ ವಿಭಾಗದಲ್ಲಿ ಕನ್ನಡಕ್ಕೆ ಈಗ ಅಲ್ಪಸ್ವಲ್ಪ ಸ್ಥಾನವೂ ದೊರೆತಂತಾಗಿದೆ. ಆದರೆ ರಾಜ್ಯವ್ಯವಹಾರದಲ್ಲಿ ಪ್ರಧಾನ ವಿದ್ಯಾಪೀಠದಲ್ಲಿ ಪರಭಾಷೆಯಾದ ಇಂಗ್ಲಿಷೇ ನಿಷ್ಕಾರಣವಾಗಿ ಅನಾವಶ್ಯಕವಾಗಿ ಅರಸುತನದ ಗದ್ದುಗೆಯನ್ನೇರಿ ತನ್ನ 'ಅತ್ತೆತನ'ದ ಅಧಿಕಾರ ನಡೆಯಿಸುತ್ತಲೇ ಇದೆ! ಬ್ರಿಟಿಷರ ಆದಿಪತ್ಯಕ್ಕೆ ಪ್ರತ್ಯಕ್ಷ ಅಧೀನವಾಗಿರುವ ಪ್ರದೇಶಗಳಲ್ಲಿ ಇಂಗ್ಲಿಷು ಸದ್ಯಕ್ಕಂತೂ ಅನಿವಾರ್ಯವಾಗಿದೆ. ಆದರೆ ರಾಜ್ಯಾಡಳಿತೆಯ ಅಂತರ್ವ್ಯವಸ್ಥೆಯಲ್ಲಿ ಸ್ವತಂತ್ರರಾಗಿರುವ ಮೈಸೂರೊಡೆಯರಿಗೆ ಈ ನಿರ್ಬಂಧವಿಲ್ಲವಷ್ಟೆ? ನಿಜಾಮರ ರಾಜ್ಯದಲ್ಲಿ ಪ್ರಜೆಗಳ ಮಾತಲ್ಲದಿದ್ದರೂ ಅರಸರ ಮನೆಮಾತು ಉರ್ದುವು ರಾಜ್ಯಾಂಗವ್ಯವಹಾರದ ಭಾಷೆಯಾಗಿ ವಿದ್ಯಾಪೀಠದ ಭಾಷೆಯಾಗಿ ಅರಮನೆಯ ಕಳಸದಿಂದಾರಂಭಮಾಡಿಕೊಂಡು ಆಡಳಿತೆಯ ಸಂದಿಗೊಂದಿಗಳಲ್ಲಿಯೂ ತನ್ನ ಅಧಿಕಾರವನ್ನು ಅವ್ಯಾಹತವಾಗಿ ನಡೆಸುತ್ತಿದೆ. ಮೈಸೂರಿನ ಮಹಾರಾಜರವರ ಹಾಗು ಪ್ರಜೆಗಳ ತಾಯಿನುಡಿ ಕನ್ನಡಕ್ಕೆ ಮೈಸೂರಿನ ರಾಜ್ಯದಲ್ಲಿ ಈ ಮನ್ನಣೆ ಏಕೆ ಇರಬಾರದು? ಹೈದರಾಬಾದಿನಲ್ಲಿ ಉರ್ದುವು ಬಹುಸಂಖ್ಯ ಪ್ರಜೆಗಳ ಭಾಷೆಯಲ್ಲವೆಂಬುದು ನಿಜ. ಆದರೂ ಅದೊಂದು ನಮ್ಮ ದೇಶಭಾಷೆ. ಪರದೇಶದ ಪರಕೀಯರು ತಮ್ಮ

ರಾಜಕೀಯ ಅಧಿಕಾರದ ಮೂಲಕ ನಮ್ಮ ಮೇಲೆ ಹೇರಿದ ಭಾಷೆಯಲ್ಲ. ಹೈದರಾಬಾದಿನ ಬೇರೆ ಬೇರೆ ಭಾಷೆಗಳ ಪ್ರಜೆಗಳು ಪ್ರಜಾಪ್ರಭುತ್ವದ ಈ ಯುಗದಲ್ಲಿ ತಮ್ಮ ತಮ್ಮ ಭಾಷೆಗಳಿಗಾಗಿ ಬೇಡಬಹುದು, ಕಾಡಬಹುದು, ಹೋರಾಡಲೂ ಬಹುದು; ಮುಂದೆ ಪರಿಣಾಮವೇನಾಗುವುದೋ ನೋಡಬಹುದು. ಆದರೆ ಮೈಸೂರಿನಲ್ಲಿ ಅಂತಹ ಪ್ರಸ್ತಾಪವೇ ಇಲ್ಲವಷ್ಟೆ? ಆದರೂ ಇನ್ನೂ ಏಕೆ ಅಲ್ಲಿ ಇಂಗ್ಲಿಷದ ಅಧಿರಾಜ್ಯ? ಈ ಮೊದಲು ನಾನು ಹೇಳಿದಂತೆ ಎಂದಿನಿಂದಲೂ ಪರಭಾಷೆ ಪರಸಂಸ್ಕೃತಿಗಳ ಹೆಬ್ಬುಗೆಯ ಹಾವಳಿಯನ್ನು ತಡೆದು ಹಿಡಿದ ಕನ್ನಡ ಜನಾಂಗದಲ್ಲಿಯೇ ಇಂದು ಈ ಬಗೆಯ ದಾಸ್ಯವೃತ್ತಿಯ ಮನೋಭಾವನೆಯು ಬೆಳೆದು ನಿಂತಿರುವುದೇಕೆ? ರಾಜಕೀಯ ಪರವಶತೆಯ ವಿಷಮಯವಾದ ತಿರುಗಣಿ ಮಡುವಿನಲ್ಲಿ ಬಹುದಿನಗಳಿಂದ ಭ್ರಮಣಗೊಳ್ಳುತ್ತ ಮುಂಗಾಣದಾಗಿರುವ ಜನಾಂಗದ ಆಂತರಿಕ ಅಧಃಪಾತದ ಹಿರಿದಾದ ದೃಷ್ಟಾಂತವೇ ಇದೆಂದು ಹೇಳಿದರೆ ತಪ್ಪಾಗಲಾರದಷ್ಟೆ?

**ಮಿಕ್ಕ ಸಂಸ್ಥಾನಗಳಲ್ಲಿ ಕನ್ನಡದ ಅಧೋಗತಿ**

ರಾಜರೂ ಪ್ರಜೆಗಳೂ ಕನ್ನಡಿಗರೇ ಆಗಿರುವ ಮೈಸೂರಿನಲ್ಲಿಯೇ ಈ ದುರವಸ್ಥೆಯಾದ ಬಳಿಕ ಮಿಕ್ಕ ಪರಭಾಷೆಯ ರಾಜರ ಅಧೀನದಲ್ಲಿರುವ ಕನ್ನಡನಾಡ ಭಾಗಗಳ ಅವಸ್ಥೆಯಂತೂ ಹೇಳಲಾಸಲ್ಲ. ಇಂತಹ ಹದಿನಾರು ಚಿಕ್ಕ ದೊಡ್ಡ ರಾಜ್ಯಗಳಲ್ಲಿ ಕನ್ನಡನಾಡು ಹಂಚಿಹೋಗಿದೆ. ಒಳ ಆಡಳಿತೆಯಲ್ಲಿ ಸರ್ವತಂತ್ರ ಸ್ವತಂತ್ರರಾಗಿ ಸರ್ವ ಸತ್ತಾಧಿಕಾರಿಗಳಾಗಿರುವ ಈ ಬೇರೆ ಬೇರೆ ಹದಿನಾರು ರಾಜ-ಮಹಾರಾಜರ ಮನಃಪೂರ್ತ ಕಾರಭಾರಕ್ಕೆ ಈ ಭಾಗಗಳು ಒಳಗಾಗಿ ಬಾಳಬೇಕಾಗಿದೆ. ಈ ಸಂಸ್ಥಾನಗಳೊಳಗಿನ ಬೇರೆ ಬೇರೆ ಭಾಷೆಯ ಪ್ರಜೆಗಳ ಸಂಖ್ಯೆಯನ್ನು ೧೯೩೧ರ ಜನಗಣನೆಯ ಆಧಾರದಿಂದ ಇಲ್ಲಿ ಕೊಡಲಾಗಿದೆ.

| ಹೆಸರು | ಕನ್ನಡಿಗರು | ಮರಾಟರು | ತೆಲುಗರು | ಹಿಂದುಸ್ಥಾನಿಗಳು |
|---|---|---|---|---|
| ಅಂಕಲಕೋಟಿ | ೫೦,೦೦೩ | ೨೭,೭೭೩ | ... | ೧೩,೪೨೮ |
| ಔಂಧ | ೬,೫೪೭ | ೬೫,೪೬೬ | .... | ೩,೨೪೪ |
| ಕುರುಂದವಾಡ (ಹಿರಿಮನೆ) | ೧೭,೭೩೨ | ೨೧,೭೭೫ | ... | ೪,೦೦೧ |
| ಅದೇ (ಕಿರಿಮನೆ) | ೧೫,೯೪೯ | ೧೮,೪೯೬ | ... | ೪,೫೩೭ |
| ಕೊಲ್ಲಾಪುರ | ೧,೪೭,೦೧೮ | ೨,೨೦,೨೪೫ | .... | ೩೭,೮೫೦ |
| ಜಮಖಂಡಿ | ೮೫,೭೧೬ | ೧೪,೯೩೪ | .... | ೧೨,೦೫೩ |
| ಜತ್ತಿ | ೩೫,೪೯೪ | ೪೮,೪೮೭ | .... | ೫,೭೮೩ |
| ಮಿರಿಜಿ (ಹಿರಿಮನೆ) | ೨೪,೪೪೨ | ೫೬,೩೬೭ | ... | ೧೧,೦೯೩ |
| ಅದೇ (ಕಿರಿಮನೆ) | ೧೬,೨೭೦ | ೨೧,೩೩೮ | .... | ೨,೪೩೨ |
| ಮುಧೋಳ | ೫೫,೭೦೯ | ೨,೭೦೪ | .... | ೩,೪೧೭ |
| ರಾಮದುರ್ಗ | ೩೧,೫೧೫ | ೧,೩೪೧ | ..... | ೨,೦೩೦ |
| ಸವಣೂರು | ೧೨,೧೭೬ | ೭೪೫ | .... | ೬,೭೭೩ |
| ಸಾಂಗಲಿ | ೯೮,೭೫೨ | ೧,೩೬,೦೮೪ | .... | ೧೯,೪೨೬ |
| ಸೊಂಡೂರು | ೭,೫೧೧ | ೬೫೧ | ೨,೪೮೫ | ೨,೨೯೯ |
| ಪುದುಕೊಟ್ಟಾ | ೫,೧೧೮ | ೬೬೦ | ೧೨,೨೫೦ | ೧,೯೯೩ |
| ಹೈದರಾಬಾದು | | | | |
| ರಾಯಚೂರು | ೫,೯೮,೫೧೦ | ೧೧,೨೫೮ | ೨,೩೭,೫೫೩ | ೮೩,೬೧೯ |
| ಕಲಬುರ್ಗಿ | ೬,೦೪,೪೦೯ | ೧,೯೮,೯೫೦ | ೩,೩೯,೭೯೬ | ೧,೭೧,೪೭೩ |

ಬೀದರ, ಉಸ್ಮಾನಾಬಾದ, ಕೊಪ್ಪಳ ಜಹಗೀರು— ಈ ಮೂರು ಜಿಲ್ಲೆಗಳ ಅಂಕಿಗಳು ಉಪಲಬ್ಧವಾಗಿಲ್ಲ. ಒಟ್ಟಾರೆ ನಿಜಾಮರ ರಾಜ್ಯದಲ್ಲಿ ೧೬ರಿಂದ ೨೦ ಲಕ್ಷ ಕನ್ನಡಿಗರಿರುವರೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

ಈ ಸಂಸ್ಥಾನಗಳಲ್ಲಿ ಅಂಕಲಕೋಟಿ, ಜಮಖಂಡಿ, ಮುಧೋಳ, ರಾಮದುರ್ಗ, ಸೊಂಡೂರು, ಸವನೂರು ಈ ಆರು ಸಂಸ್ಥಾನಗಳು ಅಚ್ಚಗನ್ನಡ ರಾಜ್ಯಗಳಾಗಿವೆ. ಉಳಿದವುಗಳಲ್ಲಿ ಕೆಲವು ಜಿಲ್ಲೆಗಳೂ ತಾಲೂಕುಗಳೂ ಕನ್ನಡವಾಗಿವೆ. ಮಿಕ್ಕ ಭಾಗಗಳು ಮಹಾರಾಷ್ಟ್ರ ಅಥವಾ ತೆಲುಗು ನಾಡಿಗೆ ಒಳಗಾಗಿವೆ. ಅಚ್ಚಗನ್ನಡ ಆರು ರಾಜ್ಯಗಳಲ್ಲಿ ಸವಣೂರು ಒಂದನ್ನು ಬಿಟ್ಟರೆ ಮಿಕ್ಕೆಲ್ಲವುಗಳ ಅಧಿಪತಿಗಳೂ ಮಹಾರಾಷ್ಟ್ರೀಯರು. ಹಾಗೆಯೇ ಹೈದರಾಬಾದಿನ ನಿಜಾಮರು ಮತ್ತು ಪುದುಕೊಟ್ಟಾದ ಅಧಿಪತಿಗಳು ಇವರನ್ನುಳಿದು ಮಿಕ್ಕವರೆಲ್ಲರೂ ಮಹಾರಾಷ್ಟ್ರೀಯರೇ. ಈ ಯಾವ ಸಂಸ್ಥಾನಗಳಲ್ಲಿಯೂ ಕನ್ನಡಕ್ಕೆ ತಕ್ಕುದಾದ ಮಾನ್ಯತೆಯಿಲ್ಲ. ರಾಜ್ಯವ್ಯವಹಾರದ ಭಾಷೆ ಇಂಗ್ಲಿಷು, ಮರಾಠಿ. ಸವಣೂರಲ್ಲಿ ಮಾತ್ರ ಇಂಗ್ಲೀಷು, ಕನ್ನಡ. ಮುಧೋಳ ಸಂಸ್ಥಾನದಲ್ಲಿ ಮೊನ್ನೆ ಮೊನ್ನಿನವರೆಗೆ ಕನ್ನಡ ಶಾಲೆಗಳೇ ಇರಲಿಲ್ಲ. ಪ್ರಜೆಗಳು ಸ್ವಪ್ರಯತ್ನದಿಂದ ಕನ್ನಡ ಶಾಲೆಯನ್ನು ಮಾಡಿಕೊಳ್ಳಬೇಕೆಂದರೆ ಪ್ರಭುಗಳ ಅಪ್ಪಣೆ ದೊರೆಯುತ್ತಿರಲಿಲ್ಲ. ಜಮಖಂಡಿ, ರಾಮದುರ್ಗ, ಸೊಂಡೂರು ಸಂಸ್ಥಾನಗಳು ಅಚ್ಚಗನ್ನಡನಾಡಿನ ನಡುವೆ ಸಿಕ್ಕಿಕೊಂಡಿರುವ ಮೂಲಕ ಇಲ್ಲೆಲ್ಲ ಹೆಸರಿಗೇನೋ ಕನ್ನಡ ಶಾಲೆಗಳಿವೆ. ಆದರೆ ಮೂರು ನಾಲ್ಕು ಇಯತ್ತೆಗಳಿಗಿಂತ ಹೆಚ್ಚಿನ ಅಭ್ಯಾಸಕ್ಕೆ ಅವಕಾಶವಿರುವುದು ಅತಿ ವಿರಳ. ಕನ್ನಡ ಶಾಲೆಗಳಿಗೆ ಮರಾಠೀ ಅಥವಾ ಉರ್ದೂಟ್ರೆಯ್ನ್ಡ್ ಮಾಸ್ತರರನ್ನು ನೇಮಿಸುವ ವಿಚಿತ್ರ ದೃಷ್ಟಾಂತಗಳೂ ಕೆಲವೆಡೆಯಲ್ಲಿ ಕಂಡುಬರುತ್ತಿವೆ. ಅಕ್ಕಲಕೋಟೆಯಲ್ಲಿ ಸೊಲ್ಲಾಪುರ ಜಿಲ್ಲೆಯ ಪ್ರಭಾವವೇ ಹೆಚ್ಚಾಗಿರುವ ಮೂಲಕ ೫೦ ಸಾವಿರ ಕನ್ನಡ ಪ್ರಜೆಗಳಿದ್ದರೂ ಅವರಿಗಾಗಿ ಕನ್ನಡ ಶಾಲೆಗಳೇ ಇಲ್ಲ. ಸುಮಾರು ಒಂದೂವರೆ ಲಕ್ಷ ಕನ್ನಡಿಗರಿರುವ ಕೊಲ್ಲಾಪುರದ ಕನ್ನಡ ಪ್ರದೇಶಗಳಲ್ಲಿ ಪ್ರಜೆಗಳಿಗೆ ಕನ್ನಡ ಕಲಿಯುವ ಅನುಕೂಲವಿಲ್ಲ. ಮಿಕ್ಕ ಮರಾಠೀ ಸಂಸ್ಥಾನಗಳಲ್ಲಿ ಕನ್ನಡ ತಾಲೂಕುಗಳಲ್ಲಿ ಹೆಸರಿಗೆ ಕೆಲವು ಕನ್ನಡ ಶಾಲೆಗಳಿದ್ದರೂ ಅವುಗಳ ಅವಸ್ಥೆಯು ಕುಂಬಾರ ಕಂಬಾರ ಸಾಲೆಗಳಿಗಿಂತಲೂ ಹೆಚ್ಚಿನದಾಗಿಲ್ಲ. ಪರೀಕ್ಷಣ ನಿರೀಕ್ಷಣದ ಅಧಿಕಾರಿಗಳೆಲ್ಲರೂ ಎಲ್ಲ ಕಡೆಗೂ ಕನ್ನಡದ ಗಂಧವಿಲ್ಲದವರೇ ಇರುವುದರಿಂದ ಕನ್ನಡ ಶಿಕ್ಷಣಕ್ಕೆ ಎಲ್ಲೆಲ್ಲಿಯೂ ಅಧೋಗತಿಯೇ ಕಟ್ಟಿಟ್ಟದೆ. ಮುಸಲ್ಮಾನ ಪ್ರಜೆಗಳ ಸಂಖ್ಯೆಯು ಕನ್ನಡ ಪ್ರಜೆಗಳಿಗಿಂತ ಎಷ್ಟೋ ಕಡಮೆ ಇದ್ದಲ್ಲಿಯೂ ಅವರಿಗಾಗಿ ಉರ್ದೂ ಶಾಲೆಗಳಿವೆ. ಸಾಮ್ರಾಜ್ಯ ಸರಕಾರದ ಧೋರಣವೇ ಈ ಬಗೆಗೆ ಇವರನ್ನು ಬೊಗ್ಗಿಸಿದೆಯೆಂದು ಹೇಳಿದರೆ ತಪ್ಪಾಗಲಾರದು. ಆದರೆ ಆ ಬೆಂಬಲವಿಲ್ಲದ ನಿರ್ವೀರ್ಯ ನಿಃಸಹಾಯ ಕನ್ನಡ ಪ್ರಜೆಗಳ ಶಿಕ್ಷಣಕ್ಕೆ ಇವರೇಕೆ ವಿಚಾರ ಮಾಡಬೇಕು? ಸಂಸ್ಥಾನದ ಪ್ರಜೆಗಳಲ್ಲಿ ಉಂಟಾಗುತ್ತ ನಡೆದಿರುವ ನವಜಾಗೃತಿಯಿಂದ ಪರಿಸ್ಥಿತಿಯು ತಕ್ಕಮಟ್ಟಿಗೆ ಸುಧಾರಿಸುತ್ತ ನಡೆದಿದೆ. ಇವೆಲ್ಲ ಸಂಸ್ಥಾನಗಳಲ್ಲಿ ಸಾಂಗಲಿಯ ಅಧಿಪತಿಗಳೇ ಚೆನ್ನಾಗಿ ಪ್ರಗತಿಯ ಧೋರಣವನ್ನಿಟ್ಟುಕೊಂಡುದು ಸಂತೋಷದ ಸಂಗತಿ. ಅಲ್ಲಿಯ ರೈತ ಸಭೆಯ ಪ್ರತಿನಿಧಿಗಳಾಗಿರುವ ಶಿರಹಟ್ಟಿಯ ಶ್ರೀಮಾನ್ ಮಹಿಷಿ ಅಶ್ವತ್ಥರಾಯರನ್ನು ತಮ್ಮ ಮಂತ್ರಿಮಂಡಲದಲ್ಲಿ ಸೇರಿಸಿಕೊಂಡು ಅವರ ಕಡೆಗೇ ಸಂಸ್ಥಾನದ ಶಿಕ್ಷಣ ಖಾತೆಯನ್ನು ಒಪ್ಪಿಸಿ ಕನ್ನಡಿಗರನ್ನೆಲ್ಲ ಕೃತಜ್ಞತೆಗೊಳಪಡಿಸಿ ತಮ್ಮ ಬೇರೆ ಬಾಂಧವರಿಗೆ ಒಂದು ಮೇಲುಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ಶಿರಹಟ್ಟಿಯ ತಾಲೂಕಿನಲ್ಲಿ ರಾಜ್ಯವ್ಯವಹಾರ ಭಾಷೆಯು ಕನ್ನಡವೇ ಆಗಿರಬೇಕೆಂದು ಕಟ್ಟಪ್ಪಣೆ ಮಾಡಿ ಅದನ್ನಾಗಲೇ ವ್ಯವಹಾರದಲ್ಲಿ ತಂದಿದ್ದಾರೆ. ಪ್ರಜೆಗಳ ಬೇಡಿಕೆಯು ತುಸು ಕಸುವಿನದಾದರೆ ಶಹಾಪೂರ ತೇರದಾಳ ಮೊದಲಾದ ಕನ್ನಡ ಪ್ರದೇಶಗಳಲ್ಲೆಲ್ಲ ಕನ್ನಡ ಶಾಲೆಗಳೂ ರಾಜ್ಯವ್ಯವಹಾರ ಭಾಷೆ ಕನ್ನಡವೂ ಆಗುವುದೆಂದು ಬಲವಾಗಿ ನಂಬಲು ಅವಕಾಶವಿದೆ. ಶಿರಹಟ್ಟಿಯ ತಾಲೂಕಿನ ಕನ್ನಡಿಗರ ಸೊಲ್ಲು ಯಜಮಾನರ ಕಿವಿಯವರೆಗೆ ಹೋಗಿ ಮುಟ್ಟುವಂತೆ ಅಲ್ಲಿಯ ಕನ್ನಡಿಗರನ್ನು ಎಚ್ಚರಿಸಿ ಸಜ್ಜುಗೊಳಿಸಿದ ಶ್ರೇಯಸ್ಸು ಅಲ್ಲಿಯ ನನ್ನ ಪರಮಮಿತ್ರರಾಗಿದ್ದ ದಿವಂಗತ ಮುಂಗಸೂಳಿ ರಾಮಚಂದ್ರರಾಯರಿಗೆ ಹಾಗು ಈಗ ಶಿಕ್ಷಣ ಮಂತ್ರಿಗಳಾಗಿರುವ ಶ್ರೀಮಾನ್ ಮಹಿಷಿ ಅಶ್ವತ್ಥರಾಯರಿಗೆ ಬಲು ಮಟ್ಟಿಗೆ ಸಲ್ಲುವುದೆಂದು ನಾನಿಲ್ಲಿ ಹೇಳದಿರಲಾರೆನು. ತಮ್ಮ ಅಧಿಪತಿಗಳಿಂದ ರಾಜ್ಯಕರ್ತರಿಂದ ತಮ್ಮ ಭಾಷೆಗೆ ತಕ್ಕುದಾದ ಪುರಸ್ಕಾರವನ್ನು ಹೊಂದುವುದಕ್ಕೆ ವಿಶೇಷ ಪರಿಶ್ರಮಪಟ್ಟ ಶಿರಹಟ್ಟಿಯ ಪ್ರಜೆಗಳನ್ನೂ ಹಾಗೆಯೇ ಅವರ ಬೇಡಿಕೆಗಳನ್ನು ನಿರಾಯಾಸವಾಗಿ ಶೀಘ್ರವಲ್ಲಿಯೇ ಪೂರೈಸಿದ ಪ್ರಜಾವತ್ಸಲರಾದ ಸಾಂಗಲಿಯ ಅಧಿಪತಿಗಳನ್ನೂ ಅವರ ವಿಚಾರವಂತ ಪರಿಸ್ಥಾಧಿಕಾರಿಗಳನ್ನೂ ಹೃತ್ಪೂ

ರ್ವಕವಾಗಿ ಅಭಿನಂದಿಸುವುದು ನಮ್ಮ ಕರ್ತವ್ಯವಾಗಿದೆ. ಸಾಂಗಲಿಯ ಈ ಪ್ರಗತಿಯೊಂದಿಗೆ ಸರಿಹಚ್ಚಿ ನೋಡಿದರೆ ಮಿಕ್ಕ ಕಡೆಯ ಪರಿಸ್ಥಿತಿಯು ಅತ್ಯಂತ ಉದ್ವೇಗಜನಕವಾಗಿದೆ. ಕನ್ನಡ ಪ್ರಜೆಗಳ ಕಣ್ಣೊರಸುವಂತೆ ಬರಿಯ ಅಶ್ವಾಸನಗಳನ್ನು ಕೊಟ್ಟು ತೋರಿಕೆಯ ಸಮಾಧಾನವನ್ನು ಬೀರುವ ಹಂಚಿಕೆಯೇ ಬಹಳ ಕಡೆಗೆ ಕಂಡು ಬರುತ್ತಿದೆ. ಪ್ರಜಾಕಲ್ಯಾಣಬುದ್ಧಿಯಿಂದ ಅಂತಃಕರಣ ಕರಗಿ ಹೃದಯಪರಿವರ್ತನವಾದರೆ ಮಾತ್ರ ನಿಜವಾದ ಫಲ ದೊರೆಯುವುದು. ಅದಿಲ್ಲದೆ ಕೊಡುವ ಅಶ್ವಾಸನಗಳೂ ಮಾಡುವ ಕೃತಿಗಳೂ ಕೇವಲ ನಟನೆಯಾಗಿ ಪ್ರಜೆಗಳ ನಿಜವಾದ ಹಿತವು ಎಂದಿಗೂ ಸಾಧಿಸಲಾರದು. ಈ ಎಲ್ಲ ಸಂಸ್ಥಾನಾಧಿಪತಿಗಳೂ ಈಗ ದೇಶದಲ್ಲೆಲ್ಲ ಕಡೆಗೆ ಬೀಸುತ್ತಿರುವ ಪ್ರಜಾಪ್ರಭುತ್ವದ ಗಾಳಿಯ ಪ್ರವಾಹಕ್ಕೆ ಅನುಕೂಲವಾಗಿ ತಮ್ಮ ಕಾರಭಾರ ನೌಕೆಗಳ ಪಟಗಳ ದಿಕ್ಕು ಬದಲಿಸಿ ಸಾಂಗಲಿಯ ಶ್ರೀಮಂತ ರಾಜೇಸಾಹೇಬರು ಕೈಕೊಂಡ ಮಾರ್ಗವನ್ನನುಸರಿಸಿ ತಮ್ಮ ಕನ್ನಡ ಪ್ರಜೆಗಳ ಕಲ್ಯಾಣದ ದೃಷ್ಟಿಯಿಂದ ಅವರ ಭಾಷೆ ಅವರ ಸಾಹಿತ್ಯ ಅವರ ವಾಙ್ಮಯ ಇವುಗಳ ವಿಷಯವಾಗಿ ಉದಾರವಾದ ಧೋರಣೆಯನ್ನಿಟ್ಟು ನಡೆದುಕೊಳ್ಳುವುದೇ ತಮಗೆ ಶ್ರೇಯಸ್ಸನ್ನುಂಟುಮಾಡುವುದೆಂಬ ಮಾತನ್ನು ಅಗತ್ಯವಾಗಿ ಲಕ್ಷ್ಯಕ್ಕೆ ತಂದುಕೊಂಡು ನಡೆಯಬೇಕೆಂದು ಅವರ ಚಿತ್ತಕ್ಕೆ ಬಿನ್ನವಿಸಿಕೊಳ್ಳುವ ಸಾಹಸವನ್ನು ನಾನು ಮಾಡದಿರಲಾರೆನು. ಹಾಗೆಯೇ ಆ ಸಂಸ್ಥಾನಗಳ ಕನ್ನಡ ಪ್ರಜೆಗಳಾದರೂ ಸುಸಂಘಟಿತರಾಗಿ ತಮ್ಮ ನೈಸರ್ಗಿಕ ಹಕ್ಕು ಬಾಧ್ಯತೆಗಳಾದ ಮಾತೃಭಾಷೆಯ ಶಿಕ್ಷಣ, ಅದರಲ್ಲಿ ಹೆಚ್ಚಿನ ಪ್ರಗತಿ, ಇವೇ ಮೊದಲಾದ ಸಂದರ್ಭಗಳಲ್ಲಿ ನಿಶ್ಚಯದಿಂದ ನಿರ್ದಾಕ್ಷಿಣ್ಯದಿಂದ ನಿರ್ಭೀತಿಯಿಂದ ತಮ್ಮ ಬೇಡಿಕೆಗಳನ್ನು ತಮ್ಮ ಅಧಿಪತಿಗಳ ಅವಗಾಹನೆಗೆ ತಂದುಕೊಟ್ಟು ಅವುಗಳನ್ನು ಸಂಪಾದಿಸಿಕೊಳ್ಳುವ ಯೋಗ್ಯ ದಾರಿಯನ್ನು ಅನುಸರಿಸಲು ಎಷ್ಟೂ ಹಿಂದೆಮುಂದೆ ನೋಡಲಾಗದೆಂದು ಅವರಿಗೂ ನಾನು ಸೂಚಿಸದಿರಲಾರೆನು. ನಿಜಾಂ ಕರ್ನಾಟಕದಲ್ಲಿ ಅಂದರೆ ಮೊಗಲಾಯಿಯಲ್ಲಿ ಉರ್ದುವಿನ ಮಹಿಮೆಯನ್ನು ಬಣ್ಣಿಸಬೇಕಾಗಿಲ್ಲ. ಈಗ ಅಲ್ಲಿಯ ಕನ್ನಡಿಗರೂ ಎಚ್ಚತ್ತಿದ್ದಾರೆ. ತಮ್ಮದೊಂದು ಪರಿಷತ್ತನ್ನು ಮಾಡಿಕೊಂಡು ಕನ್ನಡದ ಏಳ್ಗೆಗೆ ಯತ್ನಿಸುತ್ತಿದ್ದಾರೆಂಬುದನ್ನು ತಾವು ಬಲ್ಲಿರಿ.

**ಬ್ರಿಟಿಷರ ಅಧೀನದಲ್ಲಿರುವ ಕನ್ನಡ ಪ್ರದೇಶಗಳು**

ಬೇರೆ ಬೇರೆ ಸಂಸ್ಥಾನಗಳಿಗೆ ಅಧೀನವಾಗಿರುವ ಕನ್ನಡ ನಾಡ ವಿಭಾಗಗಳ ಪರಿಸ್ಥಿತಿಯ ನಿರೀಕ್ಷಣೆ ಮಾಡಿದ ಬಳಿಕ ಪ್ರತ್ಯಕ್ಷ ಬ್ರಿಟಿಷರ ಅಧೀನದಲ್ಲಿರುವ ಕನ್ನಡ ನಾಡ ಪ್ರದೇಶಗಳ ಪರಿಸ್ಥಿತಿಯ ಸಮಾಲೋಚನೆ ಮಾಡುವುದು ಈಗ ಕ್ರಮಪ್ರಾಪ್ತವಾಗಿದೆ. ಈ ಪ್ರದೇಶಗಳು ಮೂರು ಸರ್ಕಾರಗಳಿಗೆ ಒಳಗಾಗಿವೆಯೆಂಬುದನ್ನು ಎಲ್ಲರೂ ಬಲ್ಲರು. ಮುಂಬಯಿ ಸರಕಾರದ ಅಧೀನದಲ್ಲಿ ಬೆಳಗಾಂವಿ ಧಾರವಾಡ, ವಿಜಾಪುರ, ಉತ್ತರ ಕನ್ನಡ ಜಿಲ್ಲೆಗಳು. ಮದ್ರಾಸು ಸರಕಾರದ ಅಧೀನದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಮಲಬಾರ ಜಿಲ್ಲೆಯೊಳಗಿನ ವೈನಾಡು ತಾಲ್ಲೂಕು, ನೀಲಗಿರಿ ಜಿಲ್ಲೆ, ಕೊಯಮತ್ತೂರು, ಸೇಲಂ, ಅನಂತಪುರ ಜಿಲ್ಲೆಗಳಲ್ಲಿ ಕನ್ನಡನಾಡಿಗೆ ಹೊಂದಿಕೊಂಡಿರುವ ಬಹುಸಂಖ್ಯಾಕ ಕನ್ನಡಿಗರು ವಾಸವಾಗಿರುವ ತಾಲೂಕುಗಳು ಹಾಗು ಬಳ್ಳಾರಿಜಿಲ್ಲೆ. ಮೂರನೆಯದಾಗಿ ಸುಮಾರು ಎರಡೇ ಲಕ್ಷ ಜನಸಂಖ್ಯೆಯುಳ್ಳ ಕೊಡಗು ಪ್ರಾಂತ. ಇದು ಚೀಫ್ ಕಮಿಷನರ ಆಳಿಕೆಗೆ ಒಳಗಾಗಿದೆ. ಮೈಸೂರು ಸಂಸ್ಥಾನದ ರೆಸಿಡೆಂಟರೇ ಇದಕ್ಕೆ ಚೀಫ್ ಕಮಿಷನರಾಗಿರುತ್ತಾರೆ. ಅವರ ಹೆಸರಿನಿಂದ ಇಬ್ಬರು ಡೆಪ್ಯೂಟಿಕಮಿಷನರರು ಈಪ್ರಾಂತದ ಎರಡು ಜಿಲ್ಲೆಗಳಲ್ಲಿ ಕಾರಭಾರ ನಡಸುತ್ತಾರೆ.

ಈ ಕನ್ನಡ ನಾಡ ವಿಭಾಗಗಳು ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯ ಆಳಿಕೆಗೆ ಒಳಗಾದನಂತರ ಇಲ್ಲೆಲ್ಲ ಸಾರ್ವಜನಿಕ ಶಿಕ್ಷಣಕ್ಕೆ ಆರಂಭವಾದ ಕಾಲದಲ್ಲಿ ಈ ಪ್ರದೇಶಗಳ ಭಾಷೆ ಕನ್ನಡವೆಂಬ ಅರಿವು ಕೂಡ ಕಂಪೆನಿಯ ಅಧಿಕಾರಿಗಳಿಗೆ ಇರಲಿಲ್ಲವೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಮುಂಬಯಿ ಇಲಾಖೆಗೆ ಒಳಗಾದ ಭಾಗದಲ್ಲಿ ಮರಾಠಿ ಶಾಲೆಗಳೇ ಪ್ರಾರಂಭವಾಗಿ ಸುಮಾರು ೨೫-೩೦ ವರುಷಗಳವರೆಗೆ ಮರಾಠಿಯೇ ಇಲ್ಲಿಯ ಪ್ರಾಥಮಿಕ ಶಾಲೆಗಳಲ್ಲಿ ಕಲಿಸಲಾಗುತ್ತಿತ್ತೆಂಬುದೂ ಮುಂದೆ ರಸೆಲ್ ಸಾಹೇಬರೆಂಬವರೊಬ್ಬರು ಇತ್ತಕಡೆಗೆ ಎಜ್ಯುಕೇಷನಲ್ ಇನ್ಸ್‌ಪೆಕ್ಟರಾಗಿ ಬಂದನಂತರ ಇಲ್ಲಿಯ ಪ್ರಮುಖ ಕನ್ನಡಿಗರು ಇಲ್ಲಿಯ ದೇಶಭಾಷೆ ಕನ್ನಡವೆಂಬುದನ್ನು ಅವರಿಗೆ ಮನಗಾಣಿಸಿಕೊಟ್ಟಬಳಿಕ ಅವರು ಆಗಿನ ಸರಕಾರಕ್ಕೆ ವಿದ್ಯಮಾನ ಸ್ಥಿತಿಯನ್ನು ತಿಳಿಸಿ ಇಲ್ಲಿಯ ಶಾಲೆಗಳನ್ನೆಲ್ಲ ಕನ್ನಡಕ್ಕೆ ಪರಿವರ್ತಿಸಿದರೆಂಬ ಸಂಗತಿಯು ಈಗ ಎಲ್ಲರಿಗೂ ವೇದ್ಯವಾಗಿಯೇ ಇದೆ. ಆದರೆ ಮುಂಬಯಿ ಇಲಾಖೆಯ ಮಧ್ಯಭಾಗ ಅಂದರೆ ಮಹಾರಾಷ್ಟ್ರಭಾಗಕ್ಕೆ ಸೇರಿರುವ ಸೊಲ್ಲಾಪುರ ಜಿಲ್ಲೆಯ ಸೊಲ್ಲಾಪುರ ತಾಲೂಕಿನಲ್ಲಿ ಹಾಗು ಸಾತಾರಾ ಜಿಲ್ಲೆಯ ತಾಸಗಾಂವ ತಾಲ್ಲೂಕಿನಲ್ಲಿ ಸಂಪೂರ್ಣ ಕನ್ನಡ ಗ್ರಾಮಗಳಲ್ಲಿಯೂ ಇನ್ನೂವರೆಗೆ ಕನ್ನಡದ ಶಿಕ್ಷಣವಿಲ್ಲ ; ಮರಾಠಿಯೇ ನಡೆದಿವೆ. ಹಾಗೆಯೇ ಬಳ್ಳಾರಿ ಅನಂತಪುರ ಜಿಲ್ಲೆಗಳಲ್ಲಿ ತೆಲುಗು, ಸೇಲಂ ಕೊಯಿಮತ್ತೂರು ನೀಲಗಿರಿ ಜಿಲ್ಲೆಗಳಲ್ಲಿ ತಮಿಳು, ಮಲಬಾರ ಜಿಲ್ಲೆಯಲ್ಲಿ ಮಲೆಯಾಳಿ ಭಾಷೆಗಳು ಪ್ರಾಥಮಿಕ ಶಾಲೆಗಳ ಪಠ್ಯಭಾಷೆಗಳಾಗಿ ಅಲ್ಲಲ್ಲಿಯ ಕನ್ನಡಿಗರೂ ಆಯಾ ಪರಭಾಷೆಗಳನ್ನೇ ಕಲಿಯುವ ಸಂದರ್ಭ ಒದಗಿತೆಂದು ನನಗೆ ತಿಳಿದಮಟ್ಟಿಗೆ ಹೇಳಬಹುದಾಗಿದೆ. ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಮಾತ್ರ ಕನ್ನಡವೇ ಮೊದಲಿನಿಂದಲೂ ಸಾರ್ವಜನಿಕ ಶಿಕ್ಷಣದ ಭಾಷೆಯಾಗಿರಬೇಕೆಂದು ತೋರುತ್ತದೆ. ನಮ್ಮಿತ್ತಕಡೆಗೆ ಅಂದರೆ ಮುಂಬಯಿ ಕರ್ನಾಟಕದಲ್ಲಿ ಮರಾಠಿಯ ಬದಲು ಕನ್ನಡಕ್ಕಾಗಿ ಪ್ರಯತ್ನವಾದಂತೆ ತೆಲುಗು ತಮಿಳು ಮಲಯಾಳೀ ನಾಡುಗಳಿಗೆ ಹೊಂದಿಕೊಂಡಿದ್ದ ಮದರಾಸು ಕರ್ನಾಟಕದ ಭಾಗಗಳಲ್ಲಿ ಪ್ರಯತ್ನವಾದಂತೆ ಕಂಡುಬರುವುದಿಲ್ಲ. ಪೂರಾ ಇಲ್ಲೆನಲಾರದಂತೆ ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲೂಕುಗಳಾದ ಹರಪನಹಳ್ಳಿ, ಹಡಗಲಿ, ಹೊಸಪೇಟೆ, ಮೊದಲಾದ ಆರು ತಾಲೂಕುಗಳಲ್ಲಿ ಈಗ ಕೆಲವು ವರುಷಗಳಿಂದ ಕನ್ನಡ ಶಾಲೆಗಳು ಆರಂಭಿಸಲ್ಪಟ್ಟವೆ. ಇಡೀ ಬಳ್ಳಾರಿ ಜಿಲ್ಲೆಯು ಪ್ರಚಂಡ ಬಹುಸಂಖ್ಯಾಕ ಕನ್ನಡಿಗರ ಬೀಡಾಗಿದ್ದರೂ ಬಳ್ಳಾರಿಯಲ್ಲಿ ಹಾಗು ಆಲೂರು, ಆದವಾನಿ, ರಾಯದುರ್ಗ ತಾಲೂಕುಗಳಲ್ಲಿ ಇನ್ನೂವರೆಗೆ ಕನ್ನಡ ಶಿಕ್ಷಣದ ಅನುಕೂಲತೆಯೇ ಇಲ್ಲ. ಹಾಗೆಯೇ ಅನಂತಪುರ ಜಿಲ್ಲೆಯ ಕದ್ರಿ ತಾಲೂಕು ಮಾತ್ರ ಅಚ್ಚ ತೆಲುಗು ; ಗುತ್ತಿ, ಪೆನುಗೊಂಡೆ, ಧರ್ಮಾವರ, ಅನಂತಪುರ ತಾಲೂಕುಗಳು ಸುಮಸುಮಾರು ಅರ್ಧಕ್ಕರ್ಧ ಕನ್ನಡ. ಮಡಕಶಿರಾ, ಕಲ್ಯಾಣದುರ್ಗ, ಹಿಂದೂಪುರ, ಒಳಗೊಂಡ ಈ ತಾಲೂಕುಗಳು ಬಹುಸಂಖ್ಯಾಕ ಕನ್ನಡಿಗರಿಂದಲೇ ತುಂಬಿಕೊಂಡಿವೆಯೆಂಬುದಾಗಿ ನನ್ನ ಆಪ್ತಮಿತ್ರರೊಬ್ಬರಿಂದ ತಿಳಿಯುತ್ತದೆ. ಆದರೆ ಇಲ್ಲೆಲ್ಲಿಯೂ ಕನ್ನಡ ಶಿಕ್ಷಣದ ಅನುಕೂಲತೆಯೇ ಇಲ್ಲ. ಹಾಗೆಯೇ ಸೇಲಂ, ಕೊಯಮತ್ತೂರು, ನೀಲಗಿರಿ ಜಿಲ್ಲೆಗಳಲ್ಲಿ ಐದಾರು ಲಕ್ಷ ಕನ್ನಡಿಗರು ತಮಿಳನ್ನೇ ಕಲಿಯಬೇಕಾಗಿದೆ. ಮಲಬಾರ ಜಿಲ್ಲೆಯ ವೈನಾಡು ತಾಲೂಕು ಕನ್ನಡವೇ ಆಗಿದ್ದರೂ ಅಲ್ಲಿ ಮಲಯಾಳಿಯೇ ಶಿಕ್ಷಣ ಭಾಷೆಯಾಗಿದೆ. ಅಂದರೆ ಬ್ರಿಟಿಷ್ ಕರ್ನಾಟಕವೆಂದು ಒಂದು ಬಗೆಯಿಂದ ಕರೆಯಲಾಗುತ್ತಿರುವ ಕನ್ನಡ ನಾಡಿನಲ್ಲಿ ಇಂದಿಗೂ ಸುಮಾರು ೧೨ ಲಕ್ಷ ಕನ್ನಡಿಗರಿಗೆ ಅವರ ತಾಯಿನುಡಿಯ ಶಿಕ್ಷಣಕ್ಕೆ ಅವಕಾಶವಿಲ್ಲ, ಅನುಕೂಲವಿಲ್ಲ. ಇಲ್ಲೆಲ್ಲಕಡೆಗೆ ಪರಕೀಯರಾದ ಬ್ರಿಟಿಷರ ಆಡಳಿತೆಯ ಭಾಷೆಯಾದ ಇಂಗ್ಲಿಷನ್ನೆ ಚರಿತಾರ್ಥಕ್ಕಾಗಿ, ಗೌರವ ಪ್ರತಿಷ್ಠೆಗಳಿಗಾಗಿ, ಹೆಚ್ಚುಹೆಚ್ಚಾಗಿ ಅಭ್ಯಾಸಮಾಡಬೇಕಾಗುವ ಪರಿಸ್ಥಿತಿಯ ಒತ್ತಾಸೆಯೊಂದು ಕಡೆಗೆ, ಪ್ರಾಥಮಿಕ ಶಾಲೆಗಳಲ್ಲಿ ಕನ್ನಡದ ಅಕ್ಷರಾಭ್ಯಾಸಕ್ಕೂ ಅವಕಾಶವಿಲ್ಲದೆ ಲಕ್ಷಾಂತರ ಕನ್ನಡ ಜನರು ಸ್ವಭಾಷೆಯನ್ನು ಬಿಟ್ಟು ಪರಭಾಷೆಯನ್ನೇ ಕಲಿಯುವ ಅವಶ್ಯಕತೆಯುಂಟಾದ ಬಲುಮೆ ಇನ್ನೊಂದು ಕಡೆಗೆ, ಹೀಗಾಗಿ ಬ್ರಿಟಿಷ್

ಕರ್ನಾಟಕದಲ್ಲಿಯೂ ಕನ್ನಡಕ್ಕೆ ದುರ್ದೆಸೆಯೊದಗಿದುದು ಆಶ್ಚರ್ಯದ ಮಾತಲ್ಲ. ಸರ್ವ ಸಂಸ್ಕೃತಿ ಸಾಹಿತ್ಯಗಳಿಗೆ ಮೂಲವಾದ ತಾಯಿನುಡಿಯ ಅರಿವಿಗೇ ಜನಾಂಗವು ಎರವಾದ ಬಳಿಕ ಸಾಹಿತ್ಯ ಸಂಸ್ಕೃತಿಗಳ ಬೆಳವಣಿಗೆಯ ಆಶೆಯನ್ನೆಂತು ಹಿಡಿಯಬೇಕು? ಕನ್ನಡ ನಾಡಿನ ವಿಭಕ್ತೀಕರಣದಿಂದ ಕನ್ನಡ ಜನಾಂಗಕ್ಕೆ ಒದಗಿದ ಅಗಣಿತ ಅನ್ಯಾಯ ಪರಂಪರೆಗಳಲ್ಲಿ ಲಕ್ಷೋಪಲಕ್ಷ ಕನ್ನಡ ಬಾಂಧವರು ತಾಯಿನುಡಿಯ ಶಿಕ್ಷಣಕ್ಕೇ ಎರವಾಗಬೇಕಾಗಿರುವ ಅನ್ಯಾಯವು ಎಲ್ಲಕ್ಕೂ ಹೆಚ್ಚಿನದಾಗಿದೆಯೆಂಬುದನ್ನು ಗಮನಿಸದೆ ಗತ್ಯಂತರವಿಲ್ಲ.

**ನೆರೆನುಡಿಗಳ ನೆರೆಹಾವಳಿ**

ಪರಭಾಷೆಯಾದ ಇಂಗ್ಲಿಷದ ಪ್ರಭಾವವು ಬ್ರಿಟಿಷರ ರಾಜಕೀಯ ವರ್ಚಸ್ವದ ಮೂಲಕ ಪರತಂತ್ರ ಹಿಂದುಸ್ಥಾನದ ಎಲ್ಲ ಪ್ರಾಂತಗಳಲ್ಲಿಯೂ ಬೆಳೆಯುತ್ತ ನಡೆದಂತೆ ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿಯೂ ಹೆಚ್ಚುತ್ತ ನಡೆದದ್ದು ಮಿಕ್ಕವರಂತೆ ನಮಗೂ ಕೈ ಮೀರಿದ ಮಾತೇ ಸರಿ. ಆದರೆ ಬೇರೆ ಯಾವ ಪ್ರಾಂತಗಳಲ್ಲಿಯೂ ಅನುಭವಕ್ಕೆ ಬಾರದ ನೆರೆನುಡಿಗಳ ಹಾವಳಿಯು ನಮ್ಮ ನುಡಿಯ ಬೆಳವಣಿಗೆಗೆ ಎಲ್ಲೆಲ್ಲಿಯೂ ಇನ್ನೂ ಒಂದು ದೊಡ್ಡ ಆತಂಕವೇ ಆಗಿ ಕೂತಿದೆ. ನಮ್ಮ ಮುಂಬಯಿ ಕರ್ನಾಟಕದಲ್ಲಿ ಒಂದು ಕಾಲಕ್ಕೆ ಹಬ್ಬಿಕೊಂಡಿದ್ದ ಮರಾಠಿ ಶಾಲೆಗಳು ಅಡಗಿ ಕನ್ನಡ ಶಾಲೆಗಳಾದವೆಂಬ ಸಂತಸವು ತುಸು ತೋರುವಷ್ಟರಲ್ಲಿಯೇ ಇತ್ತಕಡೆಯ ನೆರೆಭಾಷೆಯಾದ ಮರಾಠಿಯು ತನ್ನ ಪ್ರಭಾವವನ್ನೂ ಪ್ರತಾಪವನ್ನೂ ಇಲ್ಲಿ ಅನಪೇಕ್ಷಿತವಾಗಿ ಅನಿರೀಕ್ಷಿತವಾಗಿ ಹಬ್ಬಿಸಿಕೊಂಡು ಇನ್ನೂ ನಮ್ಮ ಕನ್ನಡಕ್ಕೆ ಕಾಲ್ತೊಡಕಾಗಿ ಕೂತಿದೆ. ಪುಣೆಯತ್ತಕಡೆಯಿಂದ ಬರುತ್ತಿದ್ದ ಮರಾಠಿ ವರಿಷ್ಠಾಧಿಕಾರಿಗಳು, ಶಿಕ್ಷಣ ಶಾಖೆಯ ಮೇಲಧಿಕಾರಿಗಳು, ಇಂಗ್ಲಿಷದ ಉಚ್ಚ ಶಿಕ್ಷಣವು ಸಹಜವಾಗಿ, ಸುಲಭವಾಗಿ, ಅತ್ಯಲ್ಪ ವ್ಯಯದಿಂದ ದೊರೆಯುವ ಅನುಕೂಲತೆಯುಂಟಾಗಿ ಮಹಾರಾಷ್ಟ್ರದಲ್ಲಿ ಸುಶಿಕ್ಷಿತರ ಸಂಖ್ಯೆಯು ಹೆಚ್ಚಾದುದರಿಂದ ಇಂತಹವರ ಪ್ರತಿಷ್ಠಿತ ವ್ಯವಸಾಯಕ್ಕೆ ಅತ್ತಕಡೆಗೆ ಅವಸರ ದೊರೆಯಲಾರದೆ ಹೊಸ ಕ್ಷೇತ್ರಗಳನ್ನು ಹುಡುಕುತ್ತ ಇತ್ತಕಡೆಗೆ ಹೊರಳಿದ ಮರಾಠಿ ಪದವೀಧರರು, ಸಾಮಾನ್ಯ ಶಿಕ್ಷಣವು ಅಲ್ಲಿ ಸುಲಭವೂ ವಿಪುಲವೂ ಆದ ಮೂಲಕ ಆ ಪ್ರದೇಶದಲ್ಲಿ ಉಂಟಾದ ನಿರುದ್ಯೋಗಿತನದ ನಿರಾಶೆಯಿಂದ ಪಾರಾಗಲು ಚರಿತಾರ್ಥದ ಹೊಸ ದಾರಿಗಳನ್ನು ಹುಡುಕುತ್ತ ಇತ್ತಕಡೆಗೆ ಮುಗಿಬಿದ್ದ ಮಹಾರಾಷ್ಟ್ರೀಯರು. ಇಂತಹರೆಲ್ಲರೂ ಕನ್ನಡ ನಾಡಿನ ಈ ಭಾಗದಲ್ಲಿ ತಮ್ಮ ಮಾತೃಭಾಷೆಯಾದ ಮರಾಠಿಯನ್ನು ತಳವೂರಿಸಿ ನಿಲಿಸಿ ಬೆಳಸಿ ಬಲಿಸುವುದಕ್ಕೆ ಬಲುಮಟ್ಟಿಗೆ ಸಾಹಸಪಟ್ಟಿದ್ದಾರೆ. ಬ್ರಿಟಿಷರ ಆಡಳಿತೆಯ ಮೊದಲು ಇಲ್ಲಿ ಹಬ್ಬಿಕೊಂಡಿದ್ದ ಮಹಾರಾಷ್ಟ್ರೀಯರ ರಾಜಕೀಯ ವರ್ಚಸ್ವದ ಪರಿಣಾಮವಾಗಿ ನೂರಿನ್ನೂರು ವರುಷಗಳಿಂದ ಇಲ್ಲಿಯೇ ಒಕ್ಕಲಾಗಿ ನಿಂತು ಮಿಕ್ಕ ವಿಷಯಗಳಲ್ಲೆಲ್ಲ ಇತ್ತಕಡೆಯ ಕನ್ನಡಿಗರೊಂದಿಗೆ ಬಲುಮಟ್ಟಿಗೆ ಬೆರೆತು ಹೋದವರಾದರೂ ತಮ್ಮ ಮಾತೃಭಾಷೆಯ ಶ್ರೇಷ್ಠತೆಯು ಇಲ್ಲಿ ಬೆಳೆಯಲು ಆಸ್ಪದ ದೊರೆಯುವುದೆಂಬ ಹಿಗ್ಗಿನಿಂದ ಸ್ಫೂರ್ತಿಗೊಂಡ ಕೆಲವು ಮಹಾರಾಷ್ಟ್ರೀಯರು ಹಾಗು ಅದೇ ರಾಜಕೀಯ ವರ್ಚಸ್ವದ ರಾಜಭಾಷೆಗೆ ಮನಸೋತು 'ಅರೆ ಅರಸು ಕನ್ನಡ ಬಿರುಸು' ಎಂಬ ಆತ್ಮವಂಚಕವಿಚಾರಕ್ಕೆ ಬಲಿಬಿದ್ದ ಎಷ್ಟೋ ಜನ ಕನ್ನಡಿಗರು ಅವರ ಈ ಸಾಹಸಕ್ಕೆ ಚೆನ್ನಾಗಿಯೇ ನೆರವಾದವರೂ ಉಂಟು. ಇತ್ತಕಡೆಯಲ್ಲಿ ಇಂಗ್ಲಿಷದ ಉಚ್ಚ ಶಿಕ್ಷಣಕ್ಕೆ ಅನುಕೂಲವಿಲ್ಲದಾಗಿ ಅದನ್ನು ಹೊಂದುವ ಹಂಬಲದಿಂದ ಪುಣೆ, ಮುಂಬಯಿ ಕಡೆಗೆ ಕೆಲವು ವರ್ಷಗಳನ್ನು ಕಳೆದುಬರಬೇಕಾಗುತ್ತಿದ್ದ ಇಲ್ಲಿಯ ವರಿಷ್ಠ ವರ್ಗದ ತರುಣರು ತಮ್ಮ ಅಂತಃಕರಣದಲ್ಲಿ ಅಲ್ಲಿ ಬೆಳಗುತ್ತಲಿದ್ದ ಮರಾಠಿಯ ಮೋಹವನ್ನು ಕಟ್ಟಿಕೊಂಡೇ ಬರುತ್ತಿದ್ದರು. ಇಂತಿಂತಹವರೆಲ್ಲ ಊರ ಪ್ರಮುಖರೆಂದು ಗಣ್ಯರಾಗಿದ್ದ ಕಡೆಗೆಲ್ಲ ಇವರ ಮಾತನ್ನೇ ಪ್ರಮಾಣವಾಕ್ಯವೆಂದು ತಮ್ಮ ಅಂತಸ್ಥ ಹೇತುಸಾಧನೆಗೆ ಆಧಾರವಾಗಿಟ್ಟುಕೊಂಡು ಮರಾಠಿ ಶಿಕ್ಷಣಾಧಿಕಾರಿಗಳು ಅಲ್ಲಿಯ ಬಹುಸಂಖ್ಯರ ಭಾಷೆ ಯಾವುದೆಂಬ ವಿಚಾರಕ್ಕೂ ಎಡೆಗೊಡದೆ ಮರಾಠಿ ಶಾಲೆಗಳನ್ನು ಸ್ಥಾಪಿಸಿ ಕನ್ನಡಕ್ಕೆ ಎದ್ದಲಗಾಟ ಕೊಟ್ಟ ದೃಷ್ಟಾಂತಗಳು ಈ ಬೆಳಗಾಂವಿ ಜಿಲ್ಲೆಯಲ್ಲಿಯೇ ವಿಪುಲವಾಗಿವೆ. ಎಲ್ಲೆಲ್ಲಿಯೂ ಕನ್ನಡವೇ ಕನ್ನಡವಾಗಿದ್ದ, ಮರಾಠಿಯ ಗಂಧವೂ ಕೂಡ ಇಲ್ಲದಿದ್ದ, ಪಟ್ಟಣಗಳಲ್ಲಿ ತೆನೆಯ ಮೇಲಿನ ಹಕ್ಕಿಗಳಂತೆ ಅಷ್ಟರಮಟ್ಟಿಗೆ ಬಂದು ನಿಂತ ಒಬ್ಬಿಬ್ಬ ಅಧಿಕಾರಿಗಳ ಹಾಗು ಹಿಂದೆ ಹೇಳಿದ ಅನೇಕ ಕಾರಣಗಳಿಗಾಗಿ ಹೊಸದಾಗಿ ಬಂದು ನೆಲಸಿದ ಹತ್ತೆಂಟು ಮರಾಠಿ ಕುಟುಂಬಗಳ ಮಕ್ಕಳ ಶಿಕ್ಷಣಕ್ಕಾಗಿಯೇ ಅಲ್ಲಲ್ಲಿಯ ಸ್ಥಾನಿಕ ಸಂಸ್ಥೆಗಳ ಉತ್ಪನ್ನದೊಳಗಿನ ಹೇರಳ ಹಣವನ್ನು ಯಾವ ಪ್ರಮಾಣಕ್ಕೂ ಸರಿಹೋಗದಂತೆ ಮಿತಿಮೀರಿ ವೆಚ್ಚಮಾಡಿ ಸ್ವತಂತ್ರ ಮರಾಠಿ ಶಾಲೆಗಳನ್ನು ಹೊಸದಾಗಿ ಏರ್ಪಡಿಸಿಕೊಳ್ಳುವ ಸಾಹಸಮಾಡಿದ ಮರಾಠಿ ಅಧಿಕಾರಿಗಳ ಕೃತಿಗಳೇ ಅವರ ಮನೋವೃತ್ತಿಯನ್ನು ಚೆನ್ನಾಗಿ ಪ್ರತಿಬಿಂಬಿಸುವ ಕನ್ನಡಿಗಳಂತಿವೆ. ಕರ್ನಾಟಕದಲ್ಲಿ ಕನ್ನಡ ಶಾಲೆಗಳಾದ ೪೦ ವರುಷಗಳ ನಂತರ ಅಂದರೆ ೧೯೦೩ರಲ್ಲಿ ಇತ್ತಕಡೆಯ ಕನ್ನಡ ಶಾಲೆಗಳಲ್ಲೆಲ್ಲ ಮರಾಠಿಯನ್ನು ಕಲಿಸುವ ವ್ಯವಸ್ಥೆ ಮಾಡಬೇಕೆಂದು ಇಲ್ಲಿಯ ಆ ಕಾಲದ ಮರಾಠಿ ಅಧಿಕಾರಿಗಳು ಹಾಕಿದ ಹೊಂಚನ್ನು ಕರ್ನಾಟಕ ವಿದ್ಯಾವರ್ಧಕ ಸಂಘವು ಚೆನ್ನಾಗಿ ವಿರೋಧಿಸಿ, ಸರಕಾರದವರೆಗೆ ದೂರು ಮುಟ್ಟಿಸಿ, ಪರಮಪ್ರಯಾಸದಿಂದ ಹಾರಿಸಿಬಿಡಬೇಕಾಯಿತೆಂಬುದೊಂದೇ ಸಂಗತಿಯು ಎಳೆ ಸಿಕ್ಕರೆ ಹಚ್ಚಡವನ್ನೇ ನುಂಗುವ ಅವರ ಪ್ರವೃತ್ತಿಯ ಪರಿಚಯವನ್ನು ಚೆನ್ನಾಗಿಯೇ ಮಾಡಿಕೊಡಲು ಸಾಕಾಗಿದೆ. ಮುಂಬಯಿ ಕರ್ನಾಟಕದಲ್ಲಿ ಮರಾಠಿಗೆ ಅನಾವಶ್ಯಕವಾಗಿ ಮಹತ್ವವುಂಟಾದ, ಪ್ರತಿಷ್ಠೆ ಬೆಳೆದ, ಗೌರವ ಹೆಚ್ಚಾದ ಅನೇಕ ಕಾರಣಗಳೇ ಬಳ್ಳಾರಿ ಜಿಲ್ಲೆಯಲ್ಲಿ ತೆಲುಗಿನ ಪ್ರಸ್ತವು ಬೆಳೆಯಲು ಕಾರಣವೆಂಬುದನ್ನು ಅಂತಃಕರಣದ ನಂಬುಗೆಯಿಂದ ಹೇಳಬಹುದು. ಮೇಲಾಗಿ 'ಆಂಧ್ರ ನಾಟಕ ಪಿತಾಮಹ'ರೆಂದು ವಿಖ್ಯಾತರಾಗಿರುವ ಕೀರ್ತಿಶೇಷ ಧರ್ಮಾವರಂ ಕೃಷ್ಣಮಾಚಾರ್ಯರು ಬಳ್ಳಾರಿಯಲ್ಲಿ ವಕೀಲಿಯ ವ್ಯವಸಾಯಕ್ಕೆ ಬಂದು ನೆಲಸಿದ ಬಳಿಕ ಅಲ್ಲಿ ಕನ್ನಡವನ್ನು ಕಲಿತು ಕನ್ನಡದಲ್ಲಿಯೇ ಮೊದಲು 'ಪ್ರಹ್ಲಾದ ಚರಿತ್ರೆ' ಮೊದಲಾದ ನಾಟಕಗಳನ್ನು ಬರೆದು ಅವುಗಳನ್ನು ಅಲ್ಲಿಯ ಕನ್ನಡ ಜನರ ನೆರವಿನಿಂದಲೇ ಪ್ರಯೋಗಿಸಿ, ಬಳ್ಳಾರಿಯ ಸುಶಿಕ್ಷಿತರಿಗೆ ನಾಟಕವಾಡುವ ಹಾಗು ನೋಡುವ ಸವಿಗಲಿಸಿ, ಮುಂದೆ ತೆಲುಗು ನಾಟಕಗಳನ್ನು ಬರೆದು ಅವರಿಂದಲೇ ಆಡಿಸುತ್ತ ಬಳ್ಳಾರಿಯಲ್ಲಿ ತೆಲುಗಿನ ಪ್ರಾಬಲ್ಯವುಂಟಾಗುವಂತೆ ಮಾಡಿದರೆಂದು ಶ್ರೀ ಕೃಷ್ಣಮಾಚಾರ್ಯರ ಜೊತೆಯಲ್ಲಿಯೇ ಅವರ ನಾಟಕಗಳಲ್ಲಿ ಪಾತ್ರವನ್ನು ವಹಿಸುತ್ತಿದ್ದ ನನ್ನ ಅತಿವೃದ್ಧಮಿತ್ರರಾಗಿರುವ ಹೊಸಪೇಟೆಯ ರಾವ್‌ಬಹದ್ದೂರ್ ಚಿತ್ರವಾಡಿಗಿ ಹಣಮಂತಗೌಡರು ನನಗೆ ಹೇಳಿ ಪಶ್ಚಾತ್ತಾಪಪಟ್ಟದ್ದನ್ನು ನಾನು ತಮ್ಮೆಲ್ಲರ ತಿಳಿವಳಿಕೆಗಾಗಿ ಇಲ್ಲಿ ಹೇಳದಿರಲಾರೆನು. ನೆರೆನಾಡ ಬಾಂಧವರ ಭಾಷೆಯ ಒತ್ತಾಸೆಗೆ ಇದೇ ಮೇರೆಗೆ ಒಳಗಾದುದರಿಂದಲೇ ಅನಂತಪುರ, ಸೇಲಂ, ಕೊಯಮತ್ತೂರು, ನೀಲಗಿರಿ, ಮಲಬಾರು ಜಿಲ್ಲೆಗಳ ಪ್ರದೇಶಗಳಲ್ಲಿ ನೂಂಕಲಾಗಿದ್ದ ಕನ್ನಡಜನರ ಪರಿಸ್ಥಿತಿಯು ಇದೇ ಮೇರೆಗೆ ಅನುಕಂಪನೀಯವಾಗಿರಬೇಕೆಂದು ಹೇಳಿದರೆ ತಪ್ಪಾಗಲಾರದು. ಹೀಗೆ ಮೂಲ ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಅತ್ಯಂತ ನಿಕೃಷ್ಟಾವಸ್ಥೆಯೊದಗಿ ಕನ್ನಡ ಜನಾಂಗದ ಕನ್ನಡತನವೇ ನಶಿಸಿ ಹೋಗುವಂಥ ಕೆಟ್ಟ ಕಾಲವು ಬಂದಿರುವುದಕ್ಕೆ ಕನ್ನಡ ನಾಡು ಕತ್ತರಿಸಲ್ಪಟ್ಟು ಕನ್ನಡಿಗರಲ್ಲದವರ ವರಿಷ್ಠಾಧಿಕಾರದ ವರ್ಚಸ್ವಕ್ಕೆ, ಪ್ರತಿಷ್ಠೆಗೆ, ಗುರಿಯಾಗಿರುವುದೇ ಕಾರಣವಾಗಿರುವುದೆಂಬುವನ್ನು ಇನ್ನೂ ತರ್ಕಶುದ್ಧವಾಗಿ ಸಿದ್ಧಪಡಿಸುವ ಅವಶ್ಯಕತೆಯುಂಟೆ?

**ನಾಡು–ನುಡಿಗಳ ಸಂಬಂಧ**

"ಅಯ್ಯೋ! ಕನ್ನಡ ಕನ್ನಡವೆಂದು ಏಕೆ ಬಡುಕೊಳ್ಳುವಿರಿ? ಕರ್ನಾಟಕನಲ್ಲಿ ಯಾವ ಭಾಷೆಯಾದರೇನು? ಭಾಷೆಗೆ ಸುಮ್ಮನೇ

ಹೆಚ್ಚಳ ಕೊಟ್ಟು ಹುಯಿಲು ಎಬ್ಬಿಸಬೇಡಿರಿ" ಎಂಬ ಉಪದೇಶವನ್ನು ನಮಗೆ ಕನ್ನಡಿಗರಿಗೆ ಕನ್ನಡಿಗರೂ ಕನ್ನಡಿಗರಲ್ಲದವರೂ ಹಿಂದೆ ಮಾಡಿದ್ದಾರೆ; ಇನ್ನೂ ಮಾಡುತ್ತಾರೆ. ಕಾಂಗ್ರೆಸ್ಸಿನ ಕಾರ್ಯಕ್ಷೇತ್ರದಲ್ಲಿ ಕರ್ನಾಟಕವು ಬೇರೆ ಪ್ರಾಂತವಾಗಿ ಅದರ ಸಾರ್ವಜನಿಕ ಜೀವನದ ಭಾಷೆ ಕನ್ನಡವೆಂದು ಅದರ ಮೂಲ ಘಟನೆಯಲ್ಲಿ ಸ್ಪಷ್ಟವಾಗಿ ಸಾರಲಾಗಿದ್ದರೂ ಕಾಂಗ್ರೆಸ್ ಕಮಿಟಿಗಳಲ್ಲಿ, ಕಾಂಗ್ರೆಸ್ಸಿನ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ, ಮರಾಠಿ, ತೆಲುಗು ಭಾಷೆಗಳು ಕನ್ನಡವನ್ನು ಹಿಂದಕ್ಕಿಟ್ಟು ತಾವು ಮುಂದಾದದ್ದುಂಟು; ಇನ್ನೂ ಆಗುವುದುಂಟು. ಇದು ಯಾವ ನ್ಯಾಯ? "ನಾಡು ಹೆಚ್ಚಿನದು; ಅದರ ಮುಂದೆ ನುಡಿಯ ಪಾಡೇನು?" ಎಂದು ವಾದಿಸುವವರಿಗೆ ಜೋಡುಗೈ ಶರಣೆನ್ನದೆ ಬೇರೆ ಉಪಾಯವೇ ಕಾಣುವುದಿಲ್ಲ. ನಾಡು ಜನಾಂಗದ ಪ್ರಾಕೃತಿಕ ಸ್ವರೂಪ ಮಾತ್ರ, ನುಡಿಯೇ ಅದರ "ಜೀವ, ಆತ್ಮ, ಅಂತರಾತ್ಮ". ನುಡಿಯಿಲ್ಲದ ನಾಡು ನಾಡಲ್ಲ, ಕಾಡು. ನುಡಿಯಿಂದಲೇ ನಾಡು. ನಾಡಿನ ನುಡಿಯ ಮೇಲಿಂದಲೇ ನಾಡಿಗೆ ಹೆಸರು. "ಇಂದಿನ ಮಹಾರಾಷ್ಟ್ರವು ಮೊದಲೊಂದು ಕಾಲಕ್ಕೆ ಕರ್ನಾಟಕದ ಭಾಗವೇ ಆಗಿತ್ತು; ಭಾಷೆಯ ಸಂಬಂಧದಲ್ಲಿ ಅದು ಕುಲಗೆಟ್ಟುದರಿಂದಲೇ ಮಹಾರಾಷ್ಟ್ರವಾಯಿತು" ಎಂದು ಮಹಾನುಭಾವರಾದ ಸ್ವರ್ಗಸ್ಥ ಲೋಕಮಾನ್ಯ ತಿಲಕರು ಹೇಳಿದುದರ ಗುಟ್ಟು ಇದೇ ಅಲ್ಲವೆ? ಸ್ವಾತಂತ್ರ್ಯೋನ್ಮುಖವಾದ ಅಖಂಡ ಭಾರತದ ಯಾವುದೇ ಪ್ರಾಂತದ ಭಾರತವರ್ಷೀಯ ಮಾನ್ಯತೆ ಪಡೆದ ಮುಖಂಡರು ತಮ್ಮ ಪ್ರಾಂತದ ಪ್ರಮುಖ ಭಾಷೆಯನ್ನು ಎಂದೂ ಬಿಟ್ಟಿಲ್ಲ, ತಿರಸ್ಕರಿಸಿಲ್ಲ, ಅನಾದರಿಸಿಲ್ಲ. "ಗುಜರಾತ ಮತ್ತು ಗುಜರಾತೀ ಇವುಗಳ ಮುಖಾಂತರವಾಗಿಯೇ ನಾನು ಭಾರತದ ಸೇವೆಯನ್ನು ಮಾಡುವುದು" ಎಂದು ಮಹಾತ್ಮಾಜಿಯವರೇ ಹಿಂದೆ ಹೇಳಿದ್ದಾರೆ. ಇಂಗ್ಲೆಂಡಿನ ಇಂಗ್ಲಿಷ ಭಾಷೆ ಫ್ರಾನ್ಸಿನ ಫ್ರೆಂಚ್ ಭಾಷೆ, ಜರ್ಮನಿಯ ಜರ್ಮನ್ ಭಾಷೆ, ರಷ್ಯದ ರಷಿಯನ್ ಭಾಷೆ, ಜಪಾನಿನ ಜಪಾನೀ ಭಾಷೆ, ಇಂದಿಗೆ ಜಗತ್ತಿನಲ್ಲೆಲ್ಲ ಇದನ್ನೇ ಸಾರುವುದಿಲ್ಲವೆ? ತಮಿಳುನಾಡು, ಆಂಧ್ರದೇಶ, ಬಂಗಾಳ, ಬಿಹಾರ, ಗುಜರಾತ, ಉತ್ಕಲ, ಪಂಜಾಬ, ಸಿಂಧ, ಇವೆಲ್ಲ ನಾಡುಗಳು ಆಯಾಭಾಷೆಗೆ ಪ್ರಮುಖತ್ವೇನ ಆಸರೆಯಾಗಿರುವಾಗ, ಅಲ್ಲಲ್ಲಿ ಆಯಾ ಭಾಷೆಗಳೇ ಸಾರ್ವಜನಿಕ ಕಾರ್ಯಗಳ ಜೀವನಸರ್ವಸ್ವವಾಗಿರುವಾಗ, ಕನ್ನಡ ನಾಡಿನಲ್ಲಿ ಸಾರ್ವಜನಿಕ ಜನಜೀವನದಲ್ಲಿ ಕನ್ನಡಕ್ಕೆ ಪ್ರಧಾನ ಪಟ್ಟ ಬೇಕೆಂದು ಹೇಳುವುದು ಮಾತ್ರ ತಪ್ಪೇ? "ಜನಾಂಗದ ಜನಾಂಗತ್ವದ ಚೇತನವನ್ನು ಕೊಂದುಬಿಡಬೇಕಾದರೆ ಮೊದಲು ಅದರ ಭಾಷೆಯನ್ನು ಕೊಲ್ಲಬೇಕು" ಎಂದು ಪಾಶ್ಚಾತ್ಯದೇಶಗಳ ಒಬ್ಬ ಮಹಾಪುರುಷನು ಹೇಳಿದುದನ್ನು ನಾವು ಗಮನಿಸಬೇಕು. ಫ್ರೆಂಚ್ ಜನಾಂಗವು ಜರ್ಮನ್ ಜನಾಂಗವನ್ನು ಪಾದಾಕ್ರಾಂತಮಾಡಿದಾಗ ಮೊದಲು ಅದರ ಭಾಷೆಯನ್ನು ತನ್ನ ರಾಜಕೀಯ ದಂಡದ ವರ್ಚಸ್ವದಿಂದ ಕೊಲ್ಲುವ ಪ್ರಯತ್ನ ಮಾಡಿದ ಸಂಗತಿಯು ಇತಿಹಾಸ ಪ್ರಸಿದ್ಧವಾಗಿದೆ. ಝೆಕೋಸ್ಲೋವಾಕಿಯಾದಲ್ಲಿ ನಡೆದಿದ್ದ ಜರ್ಮನ್ ಭಾಷೆಯ ಮೇಲಿನ ಅತಿಕ್ರಮಣವೇ ಆ ಪ್ರದೇಶವನ್ನು ಜರ್ಮನ್ ಜನಾಂಗದ ಅಧಿನಾಯಕನಾದ ಹಿಟ್ಲರನ ಉಡಿಯಲ್ಲಿ ಹಾಕುವುದಕ್ಕೆ ಬ್ರಿಟನ್ನಿಗೆ ಮೂಲಾಧಾರ ಶಕ್ತಿಯಾಯಿತೆಂಬುದನ್ನು ಈಗ ಯಾರೇನು ಅರಿಯದಿರಲಾರರು. ಜಗತ್ತಿನೊಳಗಿನ ಯಾವ ದೃಷ್ಟಾಂತವನ್ನೇ ನೋಡಿದರೂ ನಾಡಿಗೂ ನುಡಿಗೂ ಇರುವ ದೇಹ ಜೀವಗಳ ಅನ್ಯೋನ್ಯ ಸಂಬಂಧವು ಶಾಶ್ವತ ಸತ್ಯವಾಗಿ ಕಂಡುಬರದಿರದು. ಈ ಶಾಶ್ವತ ಸತ್ಯತತ್ವವನ್ನೇ ಕನ್ನಡ ನಾಡಿಗೆ ಅನ್ವಯಿಸಿಕೊಂಡು, ಇಲ್ಲೆಲ್ಲ ಕನ್ನಡವನ್ನು, ಕನ್ನಡಿಗರ ಮಾತೃಭಾಷೆಯನ್ನು, ತಾಯ್ನುಡಿಯನ್ನು, ಬದುಕಿಸಲು ಶಾಶ್ವತವಾಗಿ ನಿಲ್ಲಿಸಲು ಅದರ ಮೇಲಾಗುತ್ತಿರುವ ಆಕ್ರಮಣ ಅತಿಕ್ರಮಣಗಳನ್ನು ಹಠಾತ್ತಾಗಿ ತಡೆದು ನಿಲ್ಲಿಸುವುದಕ್ಕೆ ಮಾಡುವ ಯತ್ನಗಳಲ್ಲಿ ತಪ್ಪಿಲ್ಲ, ತಡೆಯಿಲ್ಲ. ಅಖಂಡ ಕನ್ನಡ ಜನಾಂಗದಲ್ಲಿ ಯಾವ ಭಾಷೆಯ ವಿಷಯದಲ್ಲಿಯೂ ದ್ವೇಷವಿಲ್ಲ; ಅಸೂಯೆ ಇಲ್ಲ; ತಿರಸ್ಕಾರವಿಲ್ಲ; ಅನಾದರವಿಲ್ಲ. ಅವೆಲ್ಲವೂ ತಮ್ಮ ತಮ್ಮ ನಾಡುಗಳಲ್ಲಿ ಸಾಮ್ರಾಜ್ಯವನ್ನಾಳಲಿ. ಹಾಗೆಯೇ ನಮ್ಮ ಕನ್ನಡ ನಾಡಿನಲ್ಲೆಲ್ಲಿಯೂ ನಮ್ಮ ಕನ್ನಡಮ್ಮನ ಅರಸುತನವೇ ತಡೆಯಿಲ್ಲದೆ ನೆಲೆಗೊಳ್ಳಲೆಂದು ಕನ್ನಡಿಗರು ನಡಸಿರುವ ಪ್ರಯತ್ನಗಳಿಗೆ ಬೇರೆಯವರಾರೂ ಎಡೆತಡೆಗಳನ್ನುಂಟುಮಾಡಕೂಡದು. ಹಾಗೆ ಮಾಡಿದರೆ ಕನ್ನಡಿಗರಾದವರು ಎಂದಿಗೂ ಸೈರಿಸಲಾರರು, ಸೈರಿಸಕೂಡದು.

**ನಾವು ಮಾಡಿದುದೇನು? ಕಂಡುಕೊಂಡುದೇನು?**

ನಮ್ಮ ಕನ್ನಡ ಭಾಷೆ — ಹಿಂದೊಂದು ಕಾಲಕ್ಕೆ ಸರ್ವಾಂಗ ಸುಂದರವಾಗಿ ಸಮೃದ್ಧವಾಗಿ ಪರಿಪುಷ್ಟವಾಗಿ ಬೆಳೆದು ರಾಜ್ಯ ಸಾಮ್ರಾಜ್ಯ ಅಧಿರಾಜ್ಯಗಳನ್ನು ಕಟ್ಟಿ ಆಳಿ ವೈಭವದ ಕಳಸಕ್ಕೆ ಮುಟ್ಟಿದ್ದ ನಮ್ಮ ಕನ್ನಡ ಭಾಷೆ—ಕೊರಕೊರಗಿ ಸಾಯಹತ್ತಿರುವುದೆಂಬ ಅರಿವು ಈಗ ೫೦ ವರುಷಗಳ ಹಿಂದೆ ಕನ್ನಡನಾಡಿನ ಕೆಲವು ಸಂಸ್ಮರಣೀಯ ಪುರುಷರ ಅಂತರಂಗದಲ್ಲಿ ಉಂಟಾಯಿತು. ನಮ್ಮಿತ್ತಕಡೆಗೆ ದಿವಂಗತ ಶ್ರೀಮಾನ್ ರಾಮಚಂದ್ರ ಹಣಮಂತ ದೇಶಪಾಂಡೆಯವರು, ವೆಂಕಟ ರಂಗೋ ಕಟ್ಟಿಯವರು, ಮುಂಬಯಿ ಹೈ ಕೋರ್ಟಿನ ವಕೀಲರಾಗಿದ್ದ ಶಾಮರಾವ ವಿಠ್ಠಲ ಕೈಕಿಣಿಯವರು, ಹತ್ತಂಗಡಿ ನಾರಾಯಣರಾಯರು ಮೊದಲಾದ ಮಹನೀಯರು ೧೮೯೦ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ ಕನ್ನಡದ ಏಳ್ಗೆಗಾಗಿ ಸಾಮೂಹಿಕ ಪ್ರಯತ್ನವನ್ನಾರಂಭಿಸಿದರು. ಮೈಸೂರಿನತ್ತ ಕೀರ್ತಿಶೇಷರಾದ ಶ್ರೀಮಾನ್ ಎ. ರಾಮಾನುಜಯ್ಯಂಗಾರ್ಯರು, ಎಸ್. ಜಿ. ನರಸಿಂಹಾಚಾರ್ಯರು, ಪ್ರಾಕ್ತನ ವಿಮರ್ಶ ವಿಚಕ್ಷಣ ಆರ್. ನರಸಿಂಹಾಚಾರ್ಯರು ಮೊದಲಾದ ಮಹಾನುಭಾವರು ಈ ಕಾರ್ಯಕ್ಕೆ ಮೊದಲು ಮಾಡಿದರು. ಮಂಗಳೂರಿನತ್ತ ಕೀರ್ತಿಶೇಷ ಕೆರೋಡಿ ಸುಬ್ಬರಾಯರೇ ಮೊದಲಾದವರು ಸಾಹಸ ನಡಸಿದರು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಕೆಲಸಗಳಲ್ಲಿ ಮೈಸೂರಿನ ಮಹಾರಾಜರೂ ಅವರ ಸರಕಾರದವರೂ ತುಂಬಾ ಸಹಕಾರವನ್ನು ನೀಡಿ ನೆರವಾಗುತ್ತಿದ್ದರು. ಹನ್ನೆರಡು ವರುಷಗಳವರೆಗೆ ಅಲ್ಲಲ್ಲಿ ನಡೆಯುತ್ತಿದ್ದ ಈ ವಿಸಂಘಟಿತ ಪ್ರಯತ್ನಗಳಿಂದ ಎಲ್ಲಿಯೂ ತಕ್ಕಷ್ಟು ಪ್ರಗತಿಯಾಗಿ ಕನ್ನಡವು ಮುಂದುವರಿಯಬಹುದಾದ ಲಕ್ಷಣಗಳು ಕಂಡುಬರಲಿಲ್ಲ. ಆಗಂತುಕವಾದ ರಾಜಕೀಯ ಕಾರಣಗಳಿಂದ ಖಂಡಿತವಾದ ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಾಮೂಹಿಕ ಹಿತಸಂಬಂಧದ ಏಕರೂಪತೆಯೆಂಬುದೇ ಇರಲಿಲ್ಲ. ಪರಸ್ಪರ ಬಳಕೆಗೆ ಅನುಕೂಲ ಸಾಧನಗಳಿರಲಿಲ್ಲ. ಇಷ್ಟೊಂದು ನಿರ್ವಾತೀಕೃತ ಪ್ರದೇಶಗಳಂತೆ ಪರಸ್ಪರ ವಿಭಿನ್ನವಾಗಿ ಅನ್ಯೋನ್ಯ ಸುಖದುಃಖಗಳ ವಿಚಾರವಿನಿಮಯಕ್ಕೂ ಅವಕಾಶವಿರಲಿಲ್ಲ. ಹೀಗೆ ಅತ್ತಿತ್ತ ಚೆದರಿಬಿದ್ದ ಒಂದೂವರೆ ಕೋಟಿ ಜನಸಂಖ್ಯೆಯುಳ್ಳ ಕನ್ನಡ ಜನಾಂಗದ ಭಾಷೆಯ ವಿಷಯಕ ಚಟುವಟಿಕೆಗಳು ತೃಪ್ತಿಕರವಾಗಿ ಸಾಗಲು ಅವಸರ ದೊರೆತಿರಲಿಲ್ಲ. ಈ ವಿಚಾರಗಳು ಕನ್ನಡನಾಡಿನ ಎಲ್ಲ ಭಾಗಗಳಲ್ಲಿ ಕೆಲಕಾಲ ನಿಂತು ಕನ್ನಡದ ದುರ್ದೆಸೆಯ ಅಲ್ಲಲ್ಲಿಯ ಕಾರಣಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಮನಗಾಣಿಸಿಕೊಂಡ ಮಂಗಳೂರಿನ ಶ್ರೀಮಾನ್ ಬೆನಗಲ್ಲ ರಾಮರಾಯರಿಗೆ ಹೊಳೆದು ಧಾರವಾಡದ ವಿದ್ಯಾವರ್ಧಕ ಸಂಘದ ೧೯೦೭ರ ವಾರ್ಷಿಕೋತ್ಸವದ ಕಾಲಕ್ಕೆ ಅವರೇ ಆ ವಿಚಾರವನ್ನು ಪ್ರಕಟಗೊಳಿಸಿದರು. ಸರಿ. ಮತ್ತಿನ್ನೇನು? ಕನ್ನಡಮ್ಮನಿಗೆ ಅಂಟಿಕೊಂಡಿದ್ದ ಕ್ಷಯರೋಗದ ಯಥಾರ್ಥ ನಿದಾನವಾದಂತಾಗಿ ಅದಕ್ಕೆ ತಕ್ಕ ಚಿಕಿತ್ಸೆಯೆಂದರೆ ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲೆಲ್ಲ ತಾವು ಕನ್ನಡಮ್ಮನ ಮಕ್ಕಳು, ತಮ್ಮ ತಾಯಿನುಡಿ ಕನ್ನಡ, ಅದನ್ನುಳಿದು ಬೇರೆ ಭಾಷೆಗಳು ತಮ್ಮಮೇಲೆ ನಡಸುವುದು ದಬ್ಬಾಳಿಕೆ, ಎಂಬ 'ಸ್ವ'ತ್ವದ ಅಂಕುರವೂ ಸ್ವಸಂರಕ್ಷಣೆಯ ವಿಚಾರವೂ ಮೊಳೆದೋರಿ ಬೆಳೆಯುವಂತೆ ಕನ್ನಡನಾಡಿನ ಏಕೀಕರಣದ ಕಾರ್ಯವನ್ನು ಕೈಕೊಳ್ಳದೆ ಗತಿಯಿಲ್ಲ, ವಿಧಿಯಿಲ್ಲ ಎಂಬ ಮಾತು ವಿಚಾರವಂತ ಕನ್ನಡಿಗರಿಗೆಲ್ಲ

ತಟ್ಟನೆ ಮನದಟ್ಟಾಯಿತು. ಆ ಮಾರ್ಗದಿಂದ ಪ್ರಯತ್ನ ನಡೆಯಿತು. ಶ್ರೀಮಾನ್ ಆಲೂರ ವೆಂಕಟರಾಯರು ಈ ಸತ್ಕಾರ್ಯದ ಪುರಸ್ಕಾರವನ್ನು ಕೈಕೊಂಡರು. ೧೯೦೭ರಲ್ಲಿ ಮೊದಲನೆಯ "ಕನ್ನಡ ಗ್ರಂಥಕಾರರ ಸಮ್ಮೇಳನ"ವನ್ನು ವಿದ್ಯಾವರ್ಧಕ ಸಂಘದ ವಾರ್ಷಿಕೋತ್ಸವದ ಜೊತೆಯಲ್ಲಿಯೇ ಕೂಡಿಸಲಾಯಿತು. ಮೈಸೂರಿನ ದಿವಂಗತ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯ, ಎಂ.ಎ. ಇವರು ಅದಕ್ಕೆ ಅಧ್ಯಕ್ಷರಾಗಿದ್ದರು. ಎರಡನೆಯ ಸಮ್ಮೇಳನವೂ ಧಾರವಾಡದಲ್ಲಿಯೇ ನಡೆಯಿತು. ಒಂದೇ ಸ್ಥಳದಲ್ಲಿ ಕೆಲವರೇ ಕೂಡಿ ನಡಸುವ ಸಮ್ಮೇಳನಗಳು ಫಲಕಾರಿಯಾಗಲಾರವೆಂಬ ಅನುಭವ ಬಂತು. ಕನ್ನಡ ನಾಡು ಒಂದಾಗಬೇಕಾದರೆ ಇಂಥ ಸಮ್ಮೇಳನಗಳು ಎಲ್ಲ ಕಡೆಗೆ ಆಗಬೇಕೆಂಬ ಆಲೋಚನೆ ಹೊರಟಿತು. ಎಷ್ಟಾದರೂ ಮೈಸೂರು ಸೀಮೆ ಕನ್ನಡಕ್ಕೆ ತವರೂರು; ಗತಕಾಲದ ಕನ್ನಡ ವೈಭವಾವಶೇಷದ ಕುರುಹು; ವಿದ್ಯಮಾನ ಕಾಲದಲ್ಲಿ ಕನ್ನಡಕ್ಕೆ ಉಳಿದಿರುವ ಒಂದೇ ಒಂದು ಆಶ್ರಯಸ್ಥಾನ. ಇವೇ ಮೊದಲಾದ ವಿಚಾರಗಳಿಂದ ಮೈಸೂರಿನಲ್ಲಿಯೇ ಎಲ್ಲಿಯಾದರೂ ಮುಂದಿನ ಸಮ್ಮೇಳನದ ಯೋಜನೆಮಾಡಬೇಕೆಂದು ಶ್ರೀ॥ ಆಲೂರ ವೆಂಕಟರಾಯರು ಯತ್ನಿಸಿದರು. ಅಲ್ಲಿಯ ವರಿಷ್ಠಾಧಿಕಾರಿಗಳನ್ನು ಕಂಡರು. ಪ್ರತಿಷ್ಠಿತ ಕನ್ನಡ ಪ್ರೇಮಿಗಳಿಗೆ ಭೆಟ್ಟಿಯಾದರು. ಕೊನೆಗೆ ನಾಲ್ಕಾರು ವರುಷಗಳ ಸತತ ಪ್ರಯತ್ನದಿಂದ ೧೯೧೫ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಗಿ ಅಲ್ಲಿಂದ ಮುಂದೆ ಕನ್ನಡದ ಚಳವಳಿಗೆ ಒಂದು ಬಗೆಯ ಕಸುವು ಬರತೊಡಗಿತು. ಅಂದಿನಿಂದಲೇ ಕನ್ನಡದ ಪುನರುದ್ಧಾರ ಕಾರ್ಯಕ್ಕೆ ಅಂದರೆ ಕರ್ನಾಟಕದ ಏಕೀಕರಣ ಕಾರ್ಯಕ್ಕೆ ನಿಜವಾಗಿಯೂ ಪ್ರಾರಂಭವಾಯಿತೆಂದು ಹೇಳಬಹುದು.

**ಇಂದಿನ ಒಂದಾದ ಕರ್ನಾಟಕ**

ಕನ್ನಡನುಡಿಯ ಬನ್ನವನ್ನು ಬಿಡಿಸಿ ಅದನ್ನು ಉನ್ನತಿಯ ದಾರಿಗೆ ಹಚ್ಚಬೇಕೆಂದು ಬಯಸಿ ನಾವು ಕನ್ನಡಿಗರು ಮಾಡಿದ ದೀರ್ಘ ಪ್ರಯತ್ನಗಳ ಫಲವಾಗಿ ಇಂದು ಇಡೀ ಕರ್ನಾಟಕದಲ್ಲಿ ಒಂದು ಬಗೆಯ ನವಚೈತನ್ಯ ಹುಟ್ಟಿದಂತಾಗಿದೆ. ಹನ್ನೆರಡು ವರುಷ ದಾರಿಗಾಣದೆ ಕಂಡಕಂಡಲ್ಲಿ ಅಲೆದು ಬೀಳು ಬಿದ್ದ ಬಸವನ ಹಾಗೆ ಮುಂಗಾಣದಾದ ನಮಗೆ ಒಮ್ಮೆ ದಾರಿಯ ದಿಕ್ಕು ತೋಚಿತು. ಅದೇ ದಿಕ್ಕಿನಿಂದ ಮುಂದುವರಿದು ಮತ್ತೆ ಹನ್ನೆರಡು ವರುಷ ಕಷ್ಟಪಟ್ಟು ಹುಡುಕಿದಾಗ ಒಮ್ಮೆ ದಾರಿಯೂ ಸಿಕ್ಕಿತು. ಆ ದಾರಿಯಿಂದ ಈಗ ಎರಡು ಹನ್ನೆರಡು ವರುಷ ಬಿಟ್ಟೂಬಿಡದೆ ಪ್ರಯತ್ನ ಮಾಡಿದುದರ ಫಲವಾಗಿ ಇಂದು ಕನ್ನಡ ನುಡಿ ತನ್ನ "ಬಾವುಟ"ವನ್ನು ಎತ್ತಿ ಹಾರಿಸುತ್ತ ತಲೆಯೆತ್ತಿ ನಿಂತಿದೆ. ಮೈಸೂರು ಸೀಮೆಯಲ್ಲಿ ಕನ್ನಡವು ಈಗ ಚೆನ್ನಾಗಿ ಮುನ್ನುಗ್ಗುತ್ತಿರುವುದನ್ನು ನಾವು ಕಾಣುತ್ತೇವೆ. ಪ್ರಜಾವರ್ಗಕ್ಕೆ ಸಂಬಂಧಪಟ್ಟ ಕಾರ್ಯಗಳಲ್ಲೆಲ್ಲ ಬಹುಶಃ ಈಗ ಕನ್ನಡವೇ ಪ್ರಚಾರಕ್ಕೆ ಬರಹತ್ತಿದೆ. ಪ್ರಜಾಪ್ರತಿನಿಧಿ ಸಭೆಯಲ್ಲಿಯೂ ಇಂಗ್ಲಿಷಿನ ಪ್ರಭಾವದ ಪಾರಜವು ಎಷ್ಟೋಮಟ್ಟಿಗೆ ಕೆಳಗಿಳಿದು ಕನ್ನಡದ ಪಾರಜವು ಮೇಲೆಮೇಲೆ ಏರುತ್ತ ನಡೆದ ದೃಷ್ಟಾಂತಗಳು ಕಂಡುಬರುತ್ತವೆ. ವಿದ್ಯಾಭ್ಯಾಸ ಇಲಾಖೆಯಲ್ಲಿಯೂ ವಿದ್ಯಾಪೀಠದಲ್ಲಿಯೂ ಈಗೀಗ ನಮ್ಮ ಕನ್ನಡಮ್ಮನು ಮಾನ್ಯ ಮುತ್ತೈದೆಯಂತೆ ತಕ್ಕಮಟ್ಟಿನ ಮನ್ನಣೆಗೆ ಪಾತ್ರಳಾಗುತ್ತ ನಡೆದಿದ್ದಾಳೆ. ಕನ್ನಡವೇ ಅಧ್ಯಯನದ ಭಾಷೆಯಾಗಬೇಕೆಂಬ ವಿಚಾರವು ಪ್ರಚಾರದಲ್ಲಿ ಬರತೊಡಗಿ ಕೆಲಮಟ್ಟಿಗೆ ಆಚಾರಕ್ಕೂ ಆಸ್ಪದವಾಗಿದೆ. ವಿದ್ಯಾಪೀಠದವರು ಪುರಾತನ ಕನ್ನಡ ಗ್ರಂಥಗಳ ಸಂಗ್ರಹಗಳನ್ನು ಪರಿಷ್ಕರಿಸಿ ಪ್ರಕಟಿಸಲನುವಾಗಿದ್ದಾರೆ. ಜನಜೀವನದಲ್ಲಿ ವಿವಿಧ ವಿಜ್ಞಾನಪ್ರಸಾರವಾಗುವಂತೆ ಸುಸಂಸ್ಕೃತ ಪದವೀಧರ ವಿದ್ಯಾವಂತರಿಂದ ಕನ್ನಡದಲ್ಲಿ ಉಪನ್ಯಾಸಗಳನ್ನೇರ್ಪಡಿಸಿ ಅವುಗಳನ್ನೇ ಪುಸ್ತಕರೂಪವಾಗಿ ಮುದ್ರಿಸಿ ಪ್ರಕಟಿಸಿ ತೀರ ಅಲ್ಪ ಬೆಲೆಗೆ ಮಾರುವ ಪ್ರಸಾರಕಾರ್ಯವನ್ನೂ ನಡಸಿದ್ದಾರೆ. ಸಾಂಗಲೀ ಸಂಸ್ಥಾನದಲ್ಲಿ ಕನ್ನಡದ ಶ್ರೇಯಸ್ಸು ಬೆಳೆಯುತ್ತಿರುವುದನ್ನು ನಾನು ಆಗಲೇ ತಮಗೆ ತಿಳಿಸಿದ್ದೇನೆ. ಮಿಕ್ಕ ಸಂಸ್ಥಾನಗಳಲ್ಲಿಯೂ ಕನ್ನಡಕ್ಕೆ ಮನ್ನಣೆ ಕೊಡದೆ ಗತ್ಯಂತರವಿಲ್ಲೆಂಬ ಪರಿಸ್ಥಿತಿಯು ಉಂಟಾಗುತ್ತ ನಡೆದಿದೆ. ಮೊಗಲಾಯಿಯೆನಿಸುವ ಹೈದರಾಬಾದು ಸಂಸ್ಥಾನದೊಳಗಿನ ಕನ್ನಡಿಗರು ತಮ್ಮಲ್ಲಿಯ ಜಾಗೃತಿಗಾಗಿ ಮಾಡಿಕೊಂಡಿರುವ ಕನ್ನಡ ಸಾಹಿತ್ಯ ಪರಿಷತ್ತು ಮುಂದಿನ ಫೆಬ್ರುವರಿಯಲ್ಲಿ ಬೀದರದಲ್ಲಿ ಅಂದರೆ ಇಂದಿನ ಕನ್ನಡನಾಡಿನ ಈಶಾನ್ಯ ಮೂಲೆಯಲ್ಲಿ ಕೂಡತಕ್ಕ ಏರ್ಪಾಡು ನಡೆದಿದೆ. ಅಂದರೆ ನಿಜಾಮ ಕರ್ನಾಟಕದ ಉತ್ತರ ತುದಿಯಾದ ಬೀದರದಿಂದ ದಕ್ಷಿಣ ಕನ್ನಡದ ದಕ್ಷಿಣ ತುದಿಯಾದ ಕಾಸರಗೋಡಿನ ವರೆಗೆ, ಇತ್ತ ಕಲಬುರ್ಗಿಯಿಂದ ಅತ್ತ ಕೊಡಗಿನೊಳಗಿನ ಮಡಿಕೇರಿಯ ವರೆಗೆ, ರಾಯಚೂರಿನಿಂದ ಕಾರವಾರದವರೆಗೆ, ಜಂಬುಕಿಂಡಿಯಿಂದ ಬಳ್ಳಾರಿಯವರೆಗೆ, ಹಬ್ಬಿಕೊಂಡಿರುವ ಕನ್ನಡ ಜನಾಂಗದಲ್ಲಿ, ಹಾಗೆಯೇ ಮುಂಬಯಿ, ಪುಣೆ, ಅಹಮ್ಮದನಗರ, ಕಲಕತ್ತಾ, ಅಲಹಾಬಾದ, ಲಖನೌ, ಬನಾರಸ ಮೊದಲುಗೊಂಡು ಹರಿದ್ವಾರದ ವರೆಗಿನ ಪರಪ್ರಾಂತಗಳ ಪ್ರಮುಖ ಪಟ್ಟಣಗಳಲ್ಲಿ ವಾಸವಾಗಿರುವ ಸಾವಿರಗಟ್ಟಳೆ ಲಕ್ಷಗಟ್ಟಳೆ ಕನ್ನಡಿಗರಲ್ಲಿ "ಕನ್ನಡತನ"ದ ದಿವ್ಯಜ್ಯೋತಿಯು ಒಡಮೂಡಿರುವುದು ಕಂಡುಬರುತ್ತದೆ. ಇಂದು ಇಡಿಗನ್ನಡನಾಡು ತನ್ನ ಭಾಷೆ ಸಾಹಿತ್ಯ ವಾಙ್ಮಯಗಳು ಮೊದಲಿನಸ್ಥಾನಮಾನಗಳನ್ನು ಗಳಿಸಿ ಇಂದಿನಹಿಂದುಸ್ಥಾನದಲ್ಲಿ ಪ್ರಬುದ್ಧವೂ ಪ್ರೌಢವೂ ಎಂಬ ಹೆಮ್ಮೆಗೆ ಆಸ್ಪದವಾಗುವಂತೆ ಬೆಳೆದು ಬಲಿತಿರುವ ಮಿಕ್ಕಭಾಷೆಗಳ ಜೊತೆಗೆ ನಿಂತು, ಮೇಲು ಎನಿಸಿ ಮಿಂಚುವ ಮಟ್ಟಕ್ಕೆ ಮುಟ್ಟಬೇಕೆಂಬ ಅಭಿಲಾಷೆಯಿಂದ ಏಕಮುಖವಾಗಿ, ಏಕಜೀವವಾಗಿ ಏಕಸೂತ್ರತೆಯಿಂದ ಬದ್ಧವಾಗಿ ಕೆಲಸ ನಡಸಿರುವುದು ಸ್ಪಷ್ಟವಾಗಿ ಗೋಚರವಾಗುತ್ತಿದೆ. ಇಪ್ಪತ್ತೈದು ಮೂವತ್ತು ವರುಷಗಳ ಹಿಂದೆ ನೆರೆಹೊರೆಯ ಪ್ರಾಂತಗಳಲ್ಲಿ ಬೆರೆತು ಹೋಗುವ ಮಟ್ಟಿಗೆ ತಮ್ಮತನವನ್ನು ಮರೆತು ಮರುಳರಂತಾಗಿದ್ದ ಕನ್ನಡಿಗರ ಹತಾಶ ಜೀವನವೆತ್ತ? ಇಂದು ಸ್ವಾತ್ಮಸ್ಫೂರ್ತಿಯ ಅಂತಶ್ಚೇತನದಿಂದ ಸ್ಫುರಣಗೊಂಡು ತಮ್ಮ ಸ್ವತಂತ್ರಜೀವನದ ಸವಿಯನ್ನುಣ್ಣುವ ಹಾತೊರಿಕೆಯ ಚಾಪಲ್ಯದಿಂದ ಹುರಿದುಂಬಿ ಹೆಣಗುತ್ತಿರುವ ಕನ್ನಡಿಗರ ಸ್ಪೃಹಣೀಯ ಚಟುವಟಿಕೆಗಳೆತ್ತ? ಕನ್ನಡ ಜನಾಂಗದಲ್ಲಿ ಕಳೆದ ಈ ಎರಡೇ ತಪಗಳಲ್ಲಿ ಉಂಟಾಗಿರುವ ಈ ಅದ್ಭುತ ಕ್ರಾಂತಿಯನ್ನು ಕಣ್ಣಾರ ಕಂಡು ಹಿರಿಹಿರಿ ಹಿಗ್ಗದ ಕುರುಡು ಪಾಪಿಗಳಾರಾದರೂ ಇರಬಹುದೆಂಬ ಮಾತನ್ನು ನಾನೆಂದಿಗೂ ನಂಬಲಾರೆನು.

**ಸಂಘಟನೆಯ ಪ್ರೇರಕಶಕ್ತಿ**

ವಿಭಕ್ತವಾದ ವಿಸಂಘಟಿತವಾದ ವಿಸ್ಖಲಿತವಾದ ಕನ್ನಡ ಜನಾಂಗವು ಸುಸಂಘಟಿತವಾಗುವಂತೆ ಅವ್ಯಾಹತವಾಗಿ ಪ್ರಯತ್ನಪಟ್ಟು ಬಲುಮಟ್ಟಿಗೆ ಶ್ರೇಯಸ್ಸು ಪಡೆದ ಇಡಿಗನ್ನಡನಾಡಿನ ನಾಲ್ಕಾರು ಸಂಸ್ಥೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಲ್ಲೇಖವನ್ನು ನಾನಿಲ್ಲಿ ಮೊದಲು ಮಾಡಬೇಕಾಗಿದೆ. ಅದುವೇ ಎಲ್ಲವುಗಳಿಗೂ ಹಿರಿದಾದ ಸಂಸ್ಥೆ. ಕಳೆದ ೨೫ ವರ್ಷಗಳಲ್ಲಿ ಕನ್ನಡ ಜನಾಂಗದಲ್ಲಿ ಉಂಟಾಗಿರುವ ಅಭಿನವಜಾಗೃತಿಯ ಶ್ರೇಯಸ್ಸಿನ ಬಹು ಭಾಗವು ಪರಿಷತ್ತಿನದೇ ಎಂದು ಹೇಳಲು ಯಾವ ಅನುಮಾನವೂ ಇಲ್ಲ. ಹುಟ್ಟಿದ ನಾಲ್ಕನೆಯ ವರುಷದಿಂದಲೇ ಅದು ತನ್ನ ಅಖಿಲ ಕರ್ನಾಟದ ದೃಷ್ಟಿಯನ್ನು ನಾಲ್ಕು ಕಡೆಗಳಲ್ಲಿಯೂ ಹರಡಿ, ನಾಲ್ಕೂ ನಿಟ್ಟುಗಳ ಕನ್ನಡಿಗರನ್ನು ತನ್ನ ಕ್ಷೇತ್ರದೊಳಗೆ ಆಕರ್ಷಿಸಿಕೊಂಡು, ಕನ್ನಡ ನುಡಿಯ ವಿಷಯವಾಗಿ ಎಲ್ಲೆಲ್ಲಿಯೂ ಅಭಿಮಾನವನ್ನು ಜಾಗ್ರತಿಗೊಳಿಸಿ, ಎಲ್ಲ ಕಡೆಗಳ ಸುಶಿಕ್ಷಿತ ಸುಸಂಸ್ಕೃತ ಜನಸಮೂಹದಲ್ಲಿ ಕನ್ನಡಿಗರೆಲ್ಲರೂ ಒಂದೆಂಬ ಭಾವನೆಯನ್ನು ಬೇರೂರಿಸಿತು. ನಾನು ಬಲ್ಲಮಟ್ಟಿಗೆ ಕೀರ್ತಿಶೇಷ ಕರ್ಪೂರ ಶ್ರೀನಿವಾಸರಾಯರೂ ಹಾಗೆಯೇ ವಿದ್ಯಮಾನ ಶ್ರೀ॥ ಡಿ. ವಿ. ಗುಂಡಪ್ಪನವರೂ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಮಾಡಿದ ಕಾರ್ಯಕಲಾಪಗಳಲ್ಲಿ ಅಖಂಡ ಕರ್ನಾಟಕದ ದೃಷ್ಟಿಯೇ ಪ್ರಭಾವಶಾಲಿಯಾಗುವಂತೆ ಮೊದಲಿನಿಂದಲೂ ಪ್ರಯತ್ನಿಸಿದುದು

ಕಂಡುಬರುತ್ತದೆ. ಪ್ರಕೃತದಲ್ಲಿ ಉಪಾಧ್ಯಕ್ಷರಾಗಿರುವ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಪರಿಷತ್ತಿನಲ್ಲಿ ಅದೇ ಅಖಂಡ ಕರ್ನಾಟಕ ದೃಷ್ಟಿಯನ್ನು ಇನ್ನೂ ಹೆಚ್ಚಾಗಿ ಬಳೆಯಿಸುತ್ತಿರುವುದು ಎರಡು ವರ್ಷಗಳಲ್ಲಿ ಅನುಭವಕ್ಕೆ ಬಂದಿದೆ. ಪಂಡಿತ ಸಾಹಿತ್ಯ ಪ್ರಕಟನೆಯ 'ಪರಿಷತ್ಪತ್ರಿಕೆ'ಯ ಜೊತೆಯಲ್ಲಿ 'ಕನ್ನಡ ನುಡಿ'ಯು ಸಾಮಾನ್ಯ ಜನತೆಯಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಅಭಿಮಾನವನ್ನು ಹೆಚ್ಚಿಸುತ್ತ, ಕನ್ನಡನಾಡಿನ ನಾಲ್ಕೂ ನಿಟ್ಟುಗಳ ಕನ್ನಡದ ಚಟುವಟಿಕೆಗಳನ್ನು ತಿಳಿಸುತ್ತ ಇಡಿಯ ಕನ್ನಡ ಜನಾಂಗವನ್ನೊಂದುಗೂಡಿಸಿದ ಕಟ್ಟನ್ನು ಹೆಚ್ಚಾಗಿ ಬಿಗಿಯಲಾರಂಭಿಸಿದೆ. ವಾರ್ಷಿಕ ಸಮ್ಮೇಳನಗಳಲ್ಲದೆ ನಾಲ್ಕೂ ಕಡೆಗಳಲ್ಲಿಯೂ ವಸಂತೋತ್ಸವಗಳು, ಸಾಹಿತ್ಯ ಗೋಷ್ಠಿಗಳು ನಡೆಯಲಾರಂಭಿಸಿದುದರಿಂದ, ಎಲ್ಲೆಲ್ಲಿಯೂ ಕನ್ನಡ ನುಡಿಯು ಭರದಿಂದ ಮುಂದೆ ಸಾಗಲನುವಾಗಿದೆ. ಪರಿಷತ್ತಿನಲ್ಲಿ ಮಹಿಳೆಯರಿಗಾಗಿ ಸ್ವತಂತ್ರ ಶಾಖೆಯೊಂದು ಏರ್ಪಟ್ಟಿದೆ. ಮಹಿಳಾ ಸಮ್ಮೇಲನಗಳನ್ನೂ ಸಂತೋಷಕೂಟಗಳನ್ನೂ ನಡೆಯಿಸಿ ಕನ್ನಡದ ಬಗೆಗೆ ಅವರಲ್ಲಿ ಭಕ್ತಿ ಆದರಗಳನ್ನು ಹುಟ್ಟಿಸಿ ಹಬ್ಬಿಸುವ ಉಪಕ್ರಮವು ಕೈಕೊಳ್ಳಲಾಗಿದೆ. ಕನ್ನಡ ಕಾವ್ಯಗಳನ್ನು ಗಮಕ ಪದ್ಧತಿಯಿಂದ ಹಾಡಿ ಜನತೆಯಲ್ಲಿ ಅವುಗಳ ವಿಷಯವಾಗಿ ಅಭಿರುಚಿಯನ್ನು ಹುಟ್ಟಿಸಲೆಂದು ಕನ್ನಡ ಯುವಕ ಯುವತಿಯರಿಗೆ ಗಮಕ ಕಲೆಯನ್ನು ಕಲಿಸುವುದು ಏರ್ಪಡಿಸಲಾಗಿದೆ. ಕನ್ನಡ ಸಾಹಿತ್ಯ ಪರೀಕ್ಷೆಗಳ ತರಗತಿಗಳು ನಿಷ್ಕರ್ಷಿಸಲ್ಪಟ್ಟು, ಅವುಗಳಲ್ಲಿ ಅಭ್ಯಾಸ ಮಾಡಿ ತೇರ್ಗಡೆ ಹೊಂದಿದವರಿಗೆ ಬಿರುದುಗಳನ್ನು ಕೊಡುವ ವ್ಯವಸ್ಥೆಮಾಡಿ, ಹಳಗನ್ನಡ ಹೊಸಗನ್ನಡ ಸಾಹಿತ್ಯದ ಅಭ್ಯಾಸವನ್ನು ಪ್ರೋತ್ಸಾಹಿಸುವ ನೂತನ ಉಪಕ್ರಮವು ಆರಂಭಿಸಲಾಗಿದೆ. ಎಂದರೆ, ಸಾಮಾನ್ಯವಾಗಿ ನಮ್ಮ ಕನ್ನಡ ಸಾಹಿತ್ಯ ಪರಿಷತ್ತು ಈಗೀಗ ನಿಜವಾಗಿಯೂ ಕನ್ನಡ ವಿದ್ಯಾಪೀಠವಾಗುವ ಪೂರ್ವರೂಪವನ್ನುಳವಡಿಸಿಕೊಳ್ಳಲನುವಾಗಿದೆಯೆಂದು ಹೇಳಬಹುದು. ಪರಿಷತ್ತು ಉದ್ದೇಶವಾಗಿಟ್ಟುಕೊಂಡಿರುವ ಕಾರ್ಯಗಳು ಕನ್ನಡನಾಡಿನ ಎಲ್ಲ ಭಾಗಗಳಲ್ಲಿಯೂ ಒಂದೇ ಬಗೆಯಾಗಿ ಸರಾಗವಾಗಿ ಸಾಗಲನುವಾಗುವಂತೆ ನಾಲ್ಕು ಕಡೆಗಳಲ್ಲಿಯೂ ಪ್ರಾಂತಸಮಿತಿಗಳನ್ನು ನಿರ್ಮಿಸಿ, ಆಯಾ ಕ್ಷೇತ್ರಗಳಲ್ಲಿ ಕನ್ನಡದ ಬೆಳೆವಣಿಗೆಗೆ ಹೆಚ್ಚು ಅವಕಾಶ ದೊರೆಯುವಂತೆ ಹೆಚ್ಚಾಗಿ ಕಾರ್ಯ ಜರುಗಲು ಅನುಕೂಲತೆ ಕಲ್ಪಿಸಲಾಗಿದೆ. ಈ ಬಗೆಯಾಗಿ ಅಖಂಡ ಕರ್ನಾಟಕದಲ್ಲಿ ಕನ್ನಡ ಭಾಷೆ ಸಾಹಿತ್ಯ ವಾಙ್ಮಯ ಸಂಸ್ಕೃತಿಗಳ ಸಂಗೋಪನ ಸಂವರ್ಧನ ಕಾರ್ಯವು ಒಮ್ಮುಖವಾಗಿ ಶೀಘ್ರಗತಿಯಿಂದ ನಡೆಯಲು ಅನುಕೂಲವಾಗುವಂತೆ ನಮ್ಮ ಪರಿಷತ್ತಿನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಈ ಕಾರ್ಯಸಾಧನೆಗಾಗಿ ಹಗಲಿರುಳೂ ಹೆಣಗುತ್ತಿರುವ ಶ್ರೀಮಾನ್ ಶ್ರೀಕಂಠಯ್ಯನವರಿಗೆ ಕನ್ನಡಿಗರೆಲ್ಲರೂ ಕೃತಜ್ಞರಾಗಿರಬೇಕಾಗಿದೆ. ಶ್ರೀಯುತರ ಅಗಾಧವಾದ ವಿದ್ವತ್ತೆ, ಕವಿತ್ವಪ್ರತಿಭೆ, ಇಂಗ್ಲಿಷ್ ವಾಙ್ಮಯದಮೇಲೆ ಅವರಿಗಿರುವ ಪ್ರಭುತ್ವವು ಅಸಾಮಾನ್ಯವಾಗಿದ್ದರೂ ಕನ್ನಡಕ್ಕಾಗಿ ಅವರಲ್ಲಿರುವ ಅಪಾರವಾದ ಪ್ರೇಮಾದರ ಭಕ್ತಿಗಳು, ಕನ್ನಡನಾಡು ಎಲ್ಲ ಬಗೆಯಿಂದಲೂ ಸ್ವತಂತ್ರವಾಗಿ ಏಕಸೂತ್ರನಿಬದ್ಧವಾಗಿ ಅದರ ಸಾಹಿತ್ಯವು ಸರ್ವಾಂಗ ಸುಂದರವಾಗಿ ವಿಪುಲವಾಗಿ ಸರ್ವಾದರಣೀಯವಾಗಿ ಬೆಳೆದು ಭಾರತದಲ್ಲಿಯೂ ಜಗತ್ತಿನಲ್ಲಿಯೂ ಅದು ತನ್ನ ಯಶಸ್ಸನ್ನು ಮೆರೆಯಿಸಬೇಕೆಂಬ ಮಹದಾಕಾಂಕ್ಷೆಯಿಂದ ಅವರು ನಡೆಯಿಸಿರುವ ಜನಜಾಗೃತಿಯ ಕಾರ್ಯಗಳೂ ಹಾಗೆಯೇ ಕನ್ನಡಕ್ಕಾಗಿ ಅವರು ಮಾಡಿರುವ, ಮಾಡುತ್ತಿರುವ, ಅನನ್ಯ ಸಾಧಾರಣವಾದ ತ್ಯಾಗವು, ಇವೆಲ್ಲವುಗಳ ಮೂಲಕವಾಗಿ ಶ್ರೀಮನ್ಮಹಾರಾಜರವರಿಂದ ''ರಾಜಸೇವಾಸಕ್ತ''ರೆಂಬ ಬಹುಮಾನದ ಬಿರುದಿಗೆ ಪಾತ್ರರಾಗಿರುವ ಅವರು ನಿಜವಾಗಿಯೂ "**ಕನ್ನಡ ಕುಲರನ್ನ**"ರಾಗಿರುವರೆಂದು ನಾನಿಲ್ಲಿ ನಿರ್ದೇಶಿಸದಿರಲಾರೆನು. ಇಂತಹ ಮಹನೀಯರ ನೇತೃತ್ವದಲ್ಲಿ ನಮ್ಮ ಸಾಹಿತ್ಯ ಪರಿಷತ್ತು ಯಾವ ಆಕುಂಚಿತ ದೃಷ್ಟಿಗೂ, ಸಂಕುಚಿತಬುದ್ಧಿಗೂ ಎಷ್ಟೂ ಎಡೆಗೊಡದಂತೆ, ವಿಶಾಲವಾದ ನಮ್ಮ ಕನ್ನಡ ಜನಾಂಗದ ಸರ್ವ ವಿಧದ ಅಭ್ಯುದಯ ಸಾಧನಕ್ಕೆ ಹೆಚ್ಚುಹೆಚ್ಚಾಗಿ ತತ್ಪರವಾಗಿ ಪ್ರಯತ್ನಿಸುವಂತೆ, ನಾವೆಲ್ಲರೂ ಅವರಿಗೆ ಅಂತಃಕರಣಪೂರ್ವಕವಾಗಿ ನೆರವನ್ನು ನೀಡಿ, ನಮ್ಮೆಲ್ಲರ ಸಾಮಾನ್ಯ ಗುರಿಯನ್ನು ಬೇಗನೆ ಸಾಧಿಸಲು ಸಾಹಸಪಡೋಣ.

ಸಾಹಿತ್ಯ ಪರಿಷತ್ತಿನಂತೆಯೇ, ನಮ್ಮ ಪ್ರಾಂತಿಕ ಕಾಂಗ್ರೆಸ್ ಸಮಿತಿಯೂ, ಕರ್ನಾಟಕ ಏಕೀಕರಣ ಸಂಘವೂ, ಕನ್ನಡನಾಡನ್ನೊಂದುಗೂಡಿಸುವ ಕಾರ್ಯದಲ್ಲಿ ಅದ್ಭುತವಾದ ಕಾರ್ಯ ಮಾಡಿ ಪರಿಷತ್ತಿನ ಕೆಲಸಕ್ಕೆ ಬಲುಮಟ್ಟಿಗೆ ನೆರವಾಗುತ್ತಿರುವುದನ್ನು ತಾವೆಲ್ಲರೂ ಬಲ್ಲಿರಿ. ಈ ಎರಡೂ ಮಾನ್ಯ ಸಂಸ್ಥೆಗಳ ಕಾರ್ಯಕಲಾಪಗಳು ನಾಡಿನ ರಾಜಕೀಯ ವ್ಯವಹಾರಕ್ಕೆ ಸಂಬಂಧಪಟ್ಟುವಾದುದರಿಂದ ಅವುಗಳ ವಿಷಯಕವಾದ ಚರ್ಚೆಯು ಇಲ್ಲಿ ಪ್ರಸ್ತುತವಲ್ಲ. ಆದರೂ ಕನ್ನಡ ಸಾಹಿತ್ಯದ ಅಭಿವೃದ್ಧಿಯ ದೃಷ್ಟಿಯಿಂದ, ಕನ್ನಡ ನಾಡಿನ ಜನಸಾಮಾನ್ಯರಲ್ಲಿ ತಮ್ಮ ನಾಡು ಒಂದಾಗಬೇಕೆಂಬ ವಿಚಾರವನ್ನು ಹುಟ್ಟಿಸಿ ಹಬ್ಬಿಸುವ ದೃಷ್ಟಿಯಿಂದ, ನಾನವುಗಳ ಉಲ್ಲೇಖವನ್ನು ಇಲ್ಲಿ ಮಾಡದಿರಲಾರೆನು. ಇಂದು ಇಡಿಯ ಕನ್ನಡನಾಡಿನಲ್ಲಿ "ನಾಡಿನ ಹಾಡು" ಎಂದು ಸರ್ವಮಾನ್ಯತೆಯನ್ನು ಹೊಂದಿ, ನಾಡಿನ ಪ್ರತಿಯೊಂದು ಸಮಾರಂಭ ಸಂದರ್ಭಗಳಲ್ಲಿ ಎಲ್ಲೆಲ್ಲಿಯೂ ಹಾಡಲಾಗುತ್ತಿರುವ "ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಎಂಬ ಪದ್ಯವನ್ನು ಬೆಳಗಾಂವಿಯ ಕಾಂಗ್ರೆಸ್ಸಿನ ಅಧಿವೇಶನದಲ್ಲಿಯೇ ಅದಕ್ಕೆ ಮಾನ್ಯತೆಯ ಮುದ್ರೆಯನ್ನೊತ್ತಿಸಿ, ನಮ್ಮ ಪ್ರಾಂತಿಕ ಕಾಂಗ್ರೆಸ್ ಕಮಿಟಿಯೇ ನಮ್ಮ ನಾಡಿಗೆ ಅನುಗ್ರಹಿಸಿರುವುದೆಂಬ ಮಾತನ್ನು ನಾನು ತಮಗೆ ನೆನಪು ಮಾಡಿಕೊಡುವ ಕಾರಣವಿಲ್ಲ. ಹಾಗೆಯೇ ಭಾರತೀಯ ಸ್ವಾತಂತ್ರ್ಯದ ಹೋರಾಟವು ನಡೆದ ಕಾಲಕ್ಕೆ ಕನ್ನಡ ನಾಡಿನ ಜನತೆಯಲ್ಲಿ ತಾವೂ ಮುಂದೆ ನುಗ್ಗಬೇಕು ನುರಿಯಬೇಕು ನಾಡಿಗೆ ಕೀರ್ತಿ ತರಬೇಕು ಎಂಬ ನಿಷ್ಠೆಯನ್ನು ಹುಟ್ಟಿಸುವುದಕ್ಕಾಗಿ ಎಲ್ಲ ಕಡೆಗೂ ಹುಟ್ಟಿ ಬೆಳೆಯುತ್ತ ಬಂದ ಕನ್ನಡ ಜನಪದ ಸಾಹಿತ್ಯವು ವಿಪುಲವಾಗಿರುವುದೆಂಬುದನ್ನು ತಮ್ಮ ಅವಗಾಹನೆಗೆ ತಂದುಕೊಡದಿರಲಾರೆನು. ಓದುಬಲ್ಲ ಕನ್ನಡ ಬಾಂಧವರಲ್ಲಿ ರಾಷ್ಟ್ರೀಯ ಭಾವನೆಯೊಂದಿಗೆ ಕನ್ನಡತನವೂ ಬೆಳೆಯುವುದಕ್ಕೆ ಆವಶ್ಯಕವಾದ ಓದುವ ರುಚಿಯನ್ನು ಹಬ್ಬಿಸಲು ದೇಶವಿದೇಶಗಳ ಸುದ್ದಿಗಳನ್ನೆಲ್ಲ ಪ್ರಕಟಿಸುತ್ತ ಜನರಲ್ಲಿ ಜ್ಞಾನಾಭಿವೃದ್ಧಿಯಾಗುವಂತೆ ಜನಸೇವೆಯೆಸಗುತ್ತಿರುವ ದಿನಪತ್ರಿಕೆ ವಾರಪತ್ರಿಕೆ ಮಾಸಪತ್ರಿಕೆಗಳು ಬೆಳಗಾಂವಿಯಿಂದ ಬೆಂಗಳೂರಿನವರೆಗೆ, ಮಂಗಳೂರಿನಿಂದ ಬಳ್ಳಾರಿಯವರೆಗೆ, ಮೈಸೂರಿನಿಂದ ವಿಜಾಪುರದವರೆಗೆ, ಇಡಿಗನ್ನಡನಾಡಿನಲ್ಲಿ ಲೋಕ ಜಾಗೃತಿಯ ಕಾರ್ಯವನ್ನು ಕೈಕೊಂಡು ನಡೆಯಿಸಿರುವುದು ಕನ್ನಡ ಸಾಹಿತ್ಯದ ಬೆಳೆವಣಿಗೆಯ ದೃಷ್ಟಿಯಿಂದ ಸ್ಪೃಹಣೀಯವಾದ ಕೆಲಸವೆಂದು ಯಾರೂ ಹೇಳಿದಿರಲಾರರು. ಈಗ ಎರಡೂವರೆ ವರ್ಷಗಳವರೆಗೆ ಕನ್ನಡನಾಡಿಗೆ ಸಂಬಂಧಪಟ್ಟ ಮುಂಬಯಿ ಮದರಾಸು ಈ ಎರಡು ಪ್ರಾಂತಗಳಲ್ಲಿಯೂ ಪ್ರಭುತ್ವಾಧಿಕಾರವನ್ನು ಕೈಕೊಂಡು ರಾಜ್ಯ ನಡೆಯಿಸಿದ ಕಾಂಗ್ರೆಸ್ ಸರಕಾರಗಳಲ್ಲಿ ನಮ್ಮ ಮುಂಬಯಿ ಸರಕಾರವು ಕನ್ನಡದ ಪ್ರಾಚೀನ ಸಾಹಿತ್ಯ ಸಂಸ್ಕೃತಿಗಳ ಸಂಶೋಧನಕ್ಕೆಂದು ಒಂದು ಚಿರಸಂಸ್ಥೆಯನ್ನೇ ಏರ್ಪಡಿಸಿ ಕನ್ನಡದ ಮುನ್ನಡೆಗೆ ಚೆನ್ನಾಗಿಯೇ ಪ್ರೋತ್ಸಾಹ ಕೊಟ್ಟಿರುವುದನ್ನೂ ನಾವು ಕೃತಜ್ಞತೆಯಿಂದ ಮನ್ನಿಸಬೇಕಾಗಿದೆ. ಶ್ರೀಮಾನ್ ಚಕ್ರವರ್ತಿ ರಾಜಗೋಪಾಲಾಚಾರ್ಯರಿಂದ ಅಧಿಷ್ಠಿತವಾದ ಮದ್ರಾಸ್ ಸರಕಾರವು ತನ್ನ ಅಧೀನದಲ್ಲಿರುವ ಕನ್ನಡ ಪ್ರಜೆಗಳ ವಿಶಿಷ್ಟ ಯೋಗಕ್ಷೇಮದ ವಿಚಾರವನ್ನು ಎಷ್ಟೂ ಗಮನಿಸಲಿಲ್ಲವೆಂದು ಅತ್ಯಂತ ದುಃಖದಿಂದ ಉಲ್ಲೇಖಿಸಬೇಕಾಗಿದೆ. ಮುಂಬಯಿ ಸರಕಾರವೂ ಕನ್ನಡದ ಕಡೆಗೆ ಇಷ್ಟುಮಟ್ಟಿಗಾದರೂ ಲಕ್ಷ ಕೊಡಬೇಕಾಗಿ ಬಂದುದು ಇತ್ತ ಕಡೆಯ ಕನ್ನಡಿಗರಲ್ಲಿ ತಮ್ಮ ವಿಶಿಷ್ಟ ಅಸ್ತಿತ್ವವನ್ನು ಕಾಯ್ದುಕೊಳ್ಳುವುದಕ್ಕೆ ಹುಟ್ಟಿದ ಗಂಡುಗಲಿತನವು ಏಕಮುಖವಾಗಿ ಹರಿದು ಹೊರಹೊಮ್ಮುತ್ತಿರುವುದೇ ಬಲುಮಟ್ಟಿಗೆ ಕಾರಣವೆಂಬುದನ್ನು ಸಂಕ್ಷೇ

ದರೆ, ಅಖಂಡ ಕನ್ನಡ ಜನಾಂಗವೂ ಅದೇ ಉದ್ದೇಶ ಸಾಧನೆಗಾಗಿ ಅಷ್ಟೇ ಗಂಡುಗಲಿತನದಿಂದ ಹೋರಾಡಲು ಸಿದ್ಧವಾಗದೆ ಅದರ ಗುರಿಯು ಕೈಗೆ ನಿಲುಕಲಾರದೆಂಬುದನ್ನು ತಮ್ಮ ಮುಖಾಂತರವಾಗಿ ಇಡಿಯ ಕನ್ನಡ ಜನಾಂಗಕ್ಕೆ ನಾನಿಲ್ಲಿ ಬಿನ್ನವಿಸದಿರಲಾರೆನು. ಕರ್ನಾಟಕ ವಣಿಕ್ ಸಂಘ, ಆಯುರ್ವೇದ ಪರಿಷತ್ತು, ಅಖಿಲಕರ್ನಾಟಕ ವ್ಯಾಯಾಮ ಪ್ರಸಾರಕ ಮಂಡಳ, ಮುಂತಾದವುಗಳೂ ತಮ್ಮ ತಮ್ಮ ಪರವಾಗಿ ಕನ್ನಡನಾಡನ್ನು ಒಗ್ಗೂಡಿಸುವ ಕೆಲಸದಲ್ಲಿ ತುಂಬ ಸಾಹಸಪಡುತ್ತಿವೆ. ಇವುಗಳಿಗೆ ಸಂಬಂಧಿಸಿದ ಸಾಹಿತ್ಯವೂ ಈಗ ಹುಟ್ಟುವುದರಲ್ಲಿದೆ. ಅವುಗಳಿಂದಲೂ ನಮ್ಮ ಸಾಹಿತ್ಯವು ಬೆಳೆಯಲನುಕೂಲವಾಗುವುದೆಂಬುದನ್ನು ನಾವು ನಿರೀಕ್ಷಿಸಬಹುದು.

**ಇಂದಿನ ಸಾಹಿತ್ಯ ಸಂಪತ್ತು**

ಹೀಗೆ ಸುಮಾರು ಮುಕ್ಕಾಲು ಶತಮಾನದ ಅವಧಿಯಲ್ಲಿ ಬಹುಜನ ಕನ್ನಡ ನುಡಿಯ ಭಕ್ತರು ಬಗೆ ಬಗೆಯ ಕಷ್ಟನಷ್ಟಗಳನ್ನು ಸಹಿಸಿ ಸಾಹಸಪಟ್ಟು ದುಡಿದುದರ ಫಲವಾಗಿ ಇಂದು ನಮ್ಮ ಕನ್ನಡ ಭಾಷೆ ತನ್ನ ನಡುಗಾಲದ ಅಂಧಕಾರ ಯುಗವನ್ನು ದಾಟ ಚೆನ್ನಾಗಿಯೇ ಬೆಳಕಿಗೆ ಬರುತ್ತ ನಡೆದಿರುವುದು. ಅನೇಕ ಜನ ಕವಿಗಳು, ಗ್ರಂಥಕಾರರು, ಕತೆಗಾರರು, ಲೇಖಕರು, ಪತ್ರಿಕಾಕರ್ತರು, ವಿಮರ್ಶಕರು, ಕನ್ನಡ ಸರಸ್ವತಿಯ ಸೇವೆಗೆ ಸಜ್ಜಾಗಿ ಮುಂದೆ ಬಂದು ತಮ್ಮ ತಮ್ಮ ಶಕ್ತಿಗನುಗುಣವಾಗಿ ಕನ್ನಡ ಸಾಹಿತ್ಯ ಭಾಂಡಾರವನ್ನು ಬೆಳೆಯಿಸುವುದರಲ್ಲಿ ತಮ್ಮ ತಮ್ಮ ಬುದ್ಧಿಶಕ್ತಿಗಳನ್ನು ವಿನಿಯೋಗಿಸಿರುವುದೂ ವಿನಿಯೋಗಿಸುತ್ತಿರುವುದೂ ಕನ್ನಡಿಗರಿಗೆಲ್ಲರಿಗೂ ಹೆಮ್ಮೆಯ ಹಾಗೂ ಹಿಗ್ಗಿನ ಸುಗ್ಗಿಯಾಗಿದೆ. ಒಂದು ಕಾಲಕ್ಕೆ ಕನ್ನಡದ ಬಡತನವನ್ನೂ ದೈನ್ಯವನ್ನೂ ಕಂಡು ಮನವಾರೆ ಕನಿಕರಪಡುತ್ತಿದ್ದ ನನ್ನಂತಹನನ್ನೂ ಇಂದು ಬಯಲಿಗೆ ಬರುತ್ತಿರುವ ಕನ್ನಡ ವಾಙ್ಮಯವು ತನ್ನ ವಿವಿಧತೆಯಿಂದ ವಿಪುಲತೆಯಿಂದ ಉತ್ಕೃಷ್ಟತೆಯಿಂದ ಬಲುಮಟ್ಟಿಗೆ ಬೆರಗುಗೊಳಿಸುತ್ತಿರುವುದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ನಮ್ಮ "ಶ್ರೀನಿವಾಸ"ರು, ರಾಜರತ್ನಂರು, ಪುಟ್ಟಪ್ಪನವರು, ಬೇಂದ್ರೆಯವರು, ಸಾಲಿಯವರು ಇನ್ನೂ ಎಷ್ಟೆಷ್ಟೋ ಜನ ಪ್ರತಿಭಾಶಾಲಿಗಳಾದ ಕವಿ-ಲೇಖಕರು ಇಂಗ್ಲಿಷ ಮರಾಠಿ ಹಿಂದೀ ಮೊದಲಾದ ನಮ್ಮ ನೆರೆಹೊರೆಯ ಬಾಂಧವರನ್ನು ಅವರವರ ಭಾಷೆಗಳಲ್ಲಿಯೇ ತಣಿಸಿ ತಲೆದೂಗಿಸಿ ನಮ್ಮ ಕನ್ನಡದ ವಿಷಯವಾಗಿ ಅವರಲ್ಲಿ ಆದರವನ್ನೂ ಪ್ರೇಮವನ್ನೂ ಭಕ್ತಿಯನ್ನೂ ಹುಟ್ಟಿಸುತ್ತ ನಡೆದಿರುವರೆಂಬುದು ಆದಾವ ಕನ್ನಡಿಗನನ್ನು ಸಂತಸದ ಕಡಲಿನಲ್ಲಿ ಮುಳಗಿಸಲಿಕ್ಕಿಲ್ಲ? ಬಾಂಧವರೇ, ಇಂದಿನ ವಾಯುಯಾನಗಳ ಗತಿಯೊಂದಿಗೆ ಸ್ಪರ್ಧಿಸುವುದೋ ಏನೋ ಎಂಬಂತೆ ಅತೀವ ಭರದಿಂದ ರಭಸದಿಂದ ಬೆಳೆಯುತ್ತ ನಡೆದಿರುವ ನಮ್ಮ ಸಾಹಿತ್ಯದ ಯಥಾರ್ಥವಾದ ವಿಮರ್ಶೆಯು ಇಲ್ಲಿ ಸಾಧ್ಯವಿಲ್ಲ, ಶಕ್ಯವಿಲ್ಲ. ಆದರೂ ಬಳ್ಳಾರಿಯಲ್ಲಿ ನಾವು ಹೋದ ಸಲ ಕೂಡಿದಾಗಿನಿಂದ ಇಂದಿನವರೆಗಿನ ಒಂದು ವರುಷದಮುಟ್ಟಿಗೆ ನಮ್ಮ ಸರಸ್ವತೀ ಭಂಡಾರಕ್ಕೆ ಅಲಂಕಾರಪ್ರಾಯವಾಗಿರುವ ಕೆಲವೇ ಗ್ರಂಥಗಳ ನಾಮನಿರ್ದೇಶವನ್ನಾದರೂ ಮಾಡದೆ ನಾನು ಮುಂದುವರಿಯಲಾರೆನು. ಹೋದ ಸಮ್ಮೇಳನದ ಕಾಲಕ್ಕೆ ಪ್ರಸಿದ್ಧವಾದ ಅಂದಿನ ಅಧ್ಯಕ್ಷರ "ಹರಿಭಕ್ತಿಸುಧೆ"ಯೂ ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯನವರ "ನಾಡೋಜ ಪಂಪ" ಗ್ರಂಥವೂ ತಮಗಾಗಲೇ ಪರಿಚಿತವೇ ಆಗಿವೆ. ನಮ್ಮ ದಾಸ ವಾಙ್ಮಯದೊಳಗಿನ ವಿವಿಧತೆಯನ್ನೂ ವಿಶಾಲತೆಯನ್ನೂ ಭಾವನೆಗಳನ್ನೂ ವ್ಯಕ್ತಗೊಳಿಸುವ ವಿಚಿತ್ರ ಶಕ್ತಿಯನ್ನು ನಮ್ಮ ತಿಳಿವಳಿಕೆಗೆ ತಂದುಕೊಟ್ಟು ಅವೆಲ್ಲವುಗಳ ಪ್ರತ್ಯಕ್ಷಾನುಭವದಿಂದ ನಮ್ಮ ಅಂತಃಕರಣಗಳನ್ನು ಶ್ರೀ॥ ರಂಗನಾಥರು ಕುಣಿಸಹತ್ತಿದ್ದಾರೆಂಬುದನ್ನು ನೀವೆಲ್ಲರೂ ಒಪ್ಪಿಕೊಳ್ಳುವಿರೆಂದು ನಾನು ಭಾವಿಸದಿರಲಾರೆನು. ನಮ್ಮ ಆದಿಕವಿಯಾದ ಪಂಪನ ಪೆರ್ಮೆಯನ್ನು ನಮಗೆಲ್ಲ ಪ್ರತಿಬಿಂಬಿಸಿ ತೋರುವ ರನ್ನಗನ್ನಡಿಯಾಗಿರುವ "ನಾಡೋಜ ಪಂಪ"ನನ್ನು ನಾನೆಂತು ಬಣ್ಣಿಸಲಿ? ನಮ್ಮ ಸರ್ವಜ್ಞನ ಸಕಲ ಗುಣಗಣಗಳನ್ನು ಬಯಲಿಗಿಟ್ಟು ಕನ್ನಡ ಜನಾಂಗಕ್ಕೆ ಆತನ ದಿವ್ಯ ತೇಜಸ್ಸನ್ನು ಬಿಚ್ಚಿತೋರಿಸಿದ ಶ್ರೀಮಾನ್ ಉತ್ತಂಗಿಯವರಿಗೆ ಹಿಂದಿನ ಇಲ್ಲಿಯ ಸಮ್ಮೇಳನದ ಕಾಲಕ್ಕೆ ನಮ್ಮ ಭೀಷ್ಮಾಚಾರ್ಯರಂತಿರುವ ಶ್ರೀಮಾನ್ ಬೆಳವಿಯ ದತ್ತರಾಯರು ಸಾರ್ವಜನಿಕ ಸನ್ಮಾನವನ್ನು ಮಾಡಿದಂತೆಯೇ ಇಂದು ಶ್ರೀಮಾನ್ ತಿಮ್ಮಪ್ಪಯ್ಯನವರಿಗೂ ನಾವು ಮಾಡತಕ್ಕದ್ದು ನಮ್ಮ ಧರ್ಮವಾಗಿರುವುದೆಂದು ನಾನಿಲ್ಲಿ ಹೇಳದಿರಲಾರೆನು. ಕನ್ನಡ ನಾಡಿನ ಹರಿದಾಸರ ಆತ್ಮಬೋಧೆಯ ರಹಸ್ಯಗಳನ್ನು ಇಂದಿನ ಇಂಗ್ಲಿಷ ಬಲ್ಲ ಜನಾಂಗಗಳಿಗೆಲ್ಲ ತಿಳಿಸಿಕೊಟ್ಟು ಅವುಗಳನ್ನು ನಲಿಸಹಚ್ಚುವ ಶ್ರೀ॥ ಕರಮರಕರ ಅನಂತರಾಯರ ಹಾಗು ಶ್ರೀ॥ ಕಲಮದಾನಿ ನಾರಾಯಣರಾಯರ ದಿವ್ಯವಾದ ಆಂಗ್ಲ ಗ್ರಂಥವು ನನ್ನ ಬಹು ದಿನಗಳ ಕನಸನ್ನು ನನಸು ಮಾಡಿರುವುದೆಂದು ತಮಗೆಲ್ಲ ಬಿನ್ನವಿಸದಿರಲಾರೆನು. ಹಾಗೆಯೇ "ಕನ್ನಡದ ನೆಲೆ" (ಶಂ. ಬಾ. ಜೋಶಿ)ಯನ್ನರಿಯಿಸಿ "ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ" (ಪ್ರೊ॥ ಮಾಳವಾಡ) ದಿಂದ "ಕರ್ನಾಟಕ ಜನಜೀವನ" (ಕವಿಭೂಷಣ ಬೆಟಗೇರಿ)ದ ಪರಿಚಯ ಮಾಡಿಕೊಟ್ಟು ಬೇಗ ಬರಲಿರುವ "ಕರ್ನಾಟಕ ವಿದ್ಯಾವರ್ಧಕ ಸಂಘದ ಸುವರ್ಣ ಮಹೋತ್ಸವ"ವನ್ನು ನಮ್ಮ ಪುರಾತನ ಸುಸಂಸ್ಕೃತ ಜನಜೀವನದ ಹಿರಿಮೆಗೆ ಅನುಗುಣವಾಗುವಂತೆ ಯಾವ ರೀತಿ ನೆರವೇರಿಸಬೇಕೆಂಬ ಬಗ್ಗೆ ನಮ್ಮ ವಿಚಾರಶಕ್ತಿಗೆ ಚಾಲನೆ ಕೊಡುವಂತಹ ಈ ಗ್ರಂಥಗಳು ಈ ಕಾಲಕ್ಕೆ ಪ್ರಕಟವಾದುದು ಬರಲಿರುವ ಕನ್ನಡದ ಭಾಗ್ಯೋದಯದ ಪೂರ್ವ ಸೂಚನೆಯೆಂದು ನಾನು ಭಾವಿಸುತ್ತೇನೆ. ಹಾಗೆಯೇ "ಮುಂದುವರಿದ ಜಪಾನು" (ಕರಾಚೂರ ನಂಜಪ್ಪ) ದೇಶದ ಚರಿತ್ರೆಯನ್ನೋದಿ ಕನ್ನಡನಾಡು ತನ್ನ "ಸ್ವಾತಂತ್ರ್ಯದ ಹೆಜ್ಜೆಗಳು" (ಬುರ್ಲಿ ಬಿಂದುಮಾಧವ) ತಪ್ಪಿ ಬೀಳದಂತೆ ಎಚ್ಚರದಿಂದ ಮುಂದೆ ಸಾಗಲು ಕಲಿಯಬೇಕೆಂದು ಸೂಚಿಸುವುದು ಅಪ್ರಸ್ತುತವಾಗಲಾರದು. ನಮ್ಮ "ಹಳ್ಳಿಯ ವೈದ್ಯ" (ವೈದ್ಯ ಬುರ್ಲಿ)ವೆಂಬ ವೈದ್ಯಶಾಸ್ತ್ರವು ಕನ್ನಡ ನಾಡಿನ ಹಳ್ಳಿಗಳ ರೋಗರುಜೆ ನಿವಾರಣೆಗೆ ದಾರಿ ತೋರಿ ನಮ್ಮ ಜನಾಂಗವನ್ನು ಆರೋಗ್ಯಸಂಪನ್ನ ಮಾಡುವಂತಹದಿದೆ. ಮಹನೀಯರೇ, ನನ್ನ ಸಂಪಾದಕೀಯ ವ್ಯವಸಾಯವು ಕಟ್ಟಾಗಿ ನಿಂತು ನಾನು ನಿಃಸಹಾಯನಾಗಿ ಮೂಲೆಗುಂಪಾಗಿರುವ ಕಳೆದ ಹತ್ತು ವರುಷಗಳಲ್ಲಿ ನನಗೂ ನೂತನ ಕನ್ನಡ ಸಾಹಿತ್ಯ ಸಮೂಹಕ್ಕೂ ಪರಲು ಹರಿದಂತಾಗಿರುವ ಮೂಲಕ ನನಗೆ ನಮ್ಮ ಹೊಸ ಹೊಸ ಗ್ರಂಥಗಳ ಪರಿಚಯವಾಗುವುದೇ ದುಸ್ತರವಾಗಿದೆ. ಆದುದರಿಂದ ಈ ವಿಷಯವನ್ನು ಇನ್ನೂ ವಿಸ್ತಾರವಾಗಿ ವಿವೇಚಿಸಲಾಗದ ನನ್ನ ಅಜ್ಞಾನವನ್ನು ತಾವೆಲ್ಲರೂ ಅನುಕಂಪೆಯಿಂದ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ. ಈ ಸಮ್ಮೇಳನದ ಅಂಗವಾಗಿ ನಡೆಯಲಿರುವ "ಸಾಹಿತ್ಯ ಗೋಷ್ಠಿ"ಯಲ್ಲಿ ನಮ್ಮ ಇಂದಿನ ಸಾಹಿತ್ಯ ಸಂಪತ್ತಿನ ಪರಿಚಯಮಾಡಿಕೊಳ್ಳಬಯಸುವ ತಮ್ಮ ಹಸಿವು ತಣಿಯದಿರಲಾರದೆಂದು ನಾನು ಆಶ್ವಾಸನಕೊಡಬಯಸುತ್ತೇನೆ.

**ಮುಂದಿನ ಮೆಟ್ಟಲು**

ಭರದಿಂದ ಬೆಳೆಯುತ್ತ ನಡೆದಿರುವ ನಮ್ಮ ಇಂದಿನ ಸಾಹಿತ್ಯವು ಒಂದು ಬಗೆಯಿಂದ ನಿಸರ್ಗಸೃಷ್ಟಿಯ ಸ್ವೇಚ್ಛಾಪ್ರವೃತ್ತಿಯನ್ನನುಕರಿಸುತ್ತಿರುವುದೆಂದು ಹೇಳಿದರೆ ತಪ್ಪಾಗಲಾರದು. ನಮ್ಮ ಕನ್ನಡ ನಾಡು ಕೃಷಿಮಾಡದ ಕಾಡಿನಂತಿದ್ದ ಕಾಲದಲ್ಲಿ "ಬಂದೆದ್ದೆಲ್ಲ ಬರಲಿ—ನಮ್ಮ ಸಾಹಿತ್ಯವು ಬದುಕಿರಲಿ" ಎಂಬ ಕಕುಲಾತಿಯ ಭಾವನೆಯಿಂದ ಎಲ್ಲವನ್ನೂ ಸ್ವಾಗತಿಸಿದೆವು. ಆದರೆ ಈಗ ನಮಗೆ ಒಂದು ಕ್ರಮವನ್ನನುಸರಿಸಿ ಬೆಳೆಯುವ ಕಾಲವು ಅಂದರೆ ಪ್ರೌಢದೆಸೆಯು ಬಂದಿರುವುದರಿಂದ, ನಮ್ಮ ಜನಾಂಗಕ್ಕೆ "ಆಯಸ್ಸತ್ತ್ವ ಬಲಾರೋಗ್ಯವರ್ಧಕ"ವಾದ ವಾಙ್ಮಯವನ್ನೊದಗಿಸಿ ಕೊಟ್ಟು, ಅದು ತನ್ನ ಅಭ್ಯುದಯ ನಿಃಶ್ರೇಯಸ್ಸುಗಳನ್ನು ನಿರಾಂತವಾಗಿ ಸಂಪಾದಿಸಲು ಸಮರ್ಥವಾಗುವಂತೆ ಮಾಡಬೇಕಾದುದು ಅಗತ್ಯವಾಗಿದೆ. ಕನ್ನಡ ನಾಡಿನ "ಅಭ್ಯುದಯ"ವು ಅದರ ಒಗ್ಗೂಟದಲ್ಲಿಯೇ ಅಡಕವಾಗಿರುವುದೆಂಬುದು ತಮಗೀಗ ಮಂದಟ್ಟಾಗದಿರಲಾರದು. ಅದರ "ನಿಃಶ್ರೇಯಸ್ಸು" ಭಾರತೀಯ ಸ್ವಾತಂತ್ರ್ಯವನ್ನೇ ಅವಲಂಬಿಸಿರುವುದೆಂಬುದನ್ನು ತಾವು ಅಲ್ಲಗಳೆಯಲಾರಿರಿ. ಈ ಎರಡು ಗುರಿಗಳನ್ನೂ ಸಾಧಿಸುವುದಕ್ಕೆ ನಮ್ಮ

ಜನಾಂಗವು ಸಜ್ಜಾಗುವಂತಹ ಓಜಸ್ವಿಯಾದ ತೇಜಸ್ವಿಯಾದ ಸ್ಫೂರ್ತಿದಾಯಕವಾದ ಎಲ್ಲ ಬಗೆಯ ಸಹಜ ವಾಙ್ಮಯವೂ ನಮಗೀಗ ಬೇಕಾಗಿದೆ. ಅಂತಹುದನ್ನು ನಿರ್ಮಿಸಿ ನಮ್ಮ ಇಂದಿನ ಮುಂದಿನ ಪೀಳಿಗೆಗಳಿಗೆ ನಾವು ಸನ್ಮಾರ್ಗವನ್ನು ತೋರಿಸಿಕೊಡಬೇಕಾಗಿದೆ. ನಮ್ಮ ದೇಶದ ಪಾರತಂತ್ರ್ಯದ ಮೂಲಕ ಗಂಡು ಸಂತತಿಯಲ್ಲಿ ಸರ್ವಸ್ವೀ ಪರಾವಲಂಬನದ ಹೇಡಿ ಹೆಣ್ಣುತನವೂ ನಮ್ಮ ಹೆಣ್ಣುಮಕ್ಕಳಲ್ಲಿ ಅವರ ನೈಸರ್ಗಿಕ "ಸ್ತ್ರೀತ್ವ"ಕ್ಕೆ ತೀರ ವಿರುದ್ಧವಾದ "ಗಂಡುಬೀರಿ"ತನವೂ ಅಪಾರವಾಗಿ ಬೆಳೆದು ಬಂದಿರುವುದು ಪ್ರತ್ಯಕ್ಷ ಅನುಭವದಿಂದ ಮನಗಂಡ ಮಾತಾಗಿದೆ. ಈ ನಿಃಸಹಾಯ ನಿರಾಶ ನಿರ್ಬಲ ನಿಃಸತ್ವ ನಿರ್ವೀರ್ಯ ಪರಿಸ್ಥಿತಿಯಿಂದ ನಮ್ಮ ಜನಾಂಗವನ್ನು ಎತ್ತಿ ಅದನ್ನು ಎಲ್ಲ ಬಗೆಯಿಂದಲೂ ವೀರ್ಯಸಂಪನ್ನ ಮಾಡುವಂತಹ ಸಾಹಿತ್ಯವನ್ನು ನಾವು ಅವರ ಕೈಗೆ ಕೊಡಬೇಕಾಗಿದೆಯೆಂಬ ನನ್ನ ನಿಶ್ಚಿತಾಭಿಪ್ರಾಯವನ್ನು ನಾನು ತಮಗೆ ನಿವೇದಿಸಬೇಕೆನ್ನುತ್ತೇನೆ. ನನ್ನ ಅಭಿಪ್ರಾಯವು ತಮಗೆ ಸರಿದೋರಿದುದಾದರೆ ಅಂತಹ ವಾಙ್ಮಯ ನಿರ್ಮಾಣಕ್ಕೆ ಬೇಕಾಗುವ ವಿವಿಧಾಂಗಗಳನ್ನು ವಿಚಾರದಿಂದ ನಿಷ್ಕರ್ಷಿಸಿ ಮುಂದಿನ ದಾರಿಯನ್ನು ನಿಶ್ಚಿತಗೊಳಿಸಿ ಕಾರ್ಯವನ್ನು ಕೈಗೊಂಡು ಸಾಗಿಸುವ ಭಾರವೆಲ್ಲವೂ ತಮ್ಮನ್ನೇ ಕೂಡಿದೆ.

**ಒಳದೊಡಕುಗಳು**

ನಮ್ಮ ಕನ್ನಡದ ಬೆಳವಣಿಗೆಗೆ ಅನೇಕ ಬಗೆಗಳಿಂದ ಕಾಲ್ತೊಡಕಾಗಿ ಹೆಜ್ಜೆಹೆಜ್ಜೆಗೂ ನಮ್ಮ ನುಡಿಯ ಪ್ರಗತಿಯನ್ನು ನಿರೋಧಿಸುತ್ತಿರುವ ಅನೇಕಾನೇಕ ಸಂಗತಿಗಳನ್ನು ನಾವು ಗಮನಿಸಿ ಅವುಗಳ ನಿವಾರಣೆಗೆ ತಕ್ಕ ಉಪಾಯಗಳನ್ನು ಯೋಜಿಸದೆ ನಿರ್ವಾಹವಿಲ್ಲ. ಇವುಗಳಲ್ಲಿ ಅತ್ಯಂತ ಮುಖ್ಯವಾದುದೆಂದರೆ ಹಿಂದುಸ್ಥಾನದ ಉದ್ಧಾರಕ್ಕಾಗಿಯೇ ದೈವೀಶಕ್ತಿಯಿಂದ ಪ್ರೇರಿತರಾಗಿ ಇಲ್ಲಿ ಬಂದು ತಮ್ಮ ರಾಜ್ಯವನ್ನು ನೆಲೆಗೊಳಿಸಿರುವೆವೆಂದು ಬಾಯಿತುಂಬ ಬಡಿವಾರದ ಮಾತುಗಳನ್ನು ಸುರಿಸುತ್ತಿರುವ ಬ್ರಿಟಿಷರ ೧೫೦ ವರುಷಗಳಲ್ಲಿ ಇಡೀ ದೇಶವನ್ನೆಲ್ಲ ಆವರಿಸಿರುವ ಅಗಾಧವಾದ ಅಜ್ಞಾನಕ್ಕೆ ಮೂಲಕಾರಣವಾಗಿರುವ ನಿರಕ್ಷರತೆಯು. ನಮ್ಮ ಕನ್ನಡ ನಾಡಿನಲ್ಲಂತೂ ಈ ನಿರಕ್ಷರ ರಾಕ್ಷಸನ ಹಾವಳಿಯು ಮಿಕ್ಕೆಲ್ಲ ಕಡೆಗಿಂತಲೂ ಅತ್ಯದ್ಭುತವಾಗಿ ಪಸರಿಸಿಕೊಂಡಿದೆ. ಇಡೀ ದೇಶದ ಜನಸಂಖ್ಯೆಯಲ್ಲಿ ೧೦೦ಕ್ಕೆ ೯೦ರಂತೆ ಅಕ್ಷರ ಶತ್ರುಗಳ ಪ್ರಮಾಣವಿರುವುದಾದರೆ ನಮ್ಮಲ್ಲಿ ೧೦೦ಕ್ಕೆ ೯೫ರ ವರೆಗೂ ಈ ಪ್ರಮಾಣವಿರಬಹುದೆಂದು ಹೇಳಲು ಯಾವ ಅಭ್ಯಂತರವೂ ತೋರುವುದಿಲ್ಲ. ಏಕೆಂದರೆ ಮೂಲತಃ ಶಿಕ್ಷಣ ದೊರೆಯುವುದೇ ಅತ್ಯಂತ ಕಡಮೆ ಪ್ರಮಾಣದಲ್ಲಿ; ಮತ್ತೆ ಅದರಲ್ಲಿಯೂ ಸುಮಾರು ೫೦-೬೦ಲಕ್ಷ ಕನ್ನಡ ಪ್ರಜೆಗಳಿಗೆ ಕನ್ನಡದ ಶಿಕ್ಷಣ ದೊರೆಯುವ ಅನುಕೂಲತೆಯೇ ಇಲ್ಲ. ಪರಭಾಷೆಯ ಶಿಕ್ಷಣವೆಂಬುದು ದೊರೆತರೂ ಅಷ್ಟೇ, ದೊರೆಯದಿದ್ದರೂ ಅಷ್ಟೇ, ಅಲ್ಲವೆ? ಹೀಗಿರಲು ಒಂದೂವರೆ ಕೋಟಿ ಜನಸಂಖ್ಯೆಯ ಕನ್ನಡಿಗರಲ್ಲಿ ಕನ್ನಡ ಬರುವವರ ಪ್ರಮಾಣವು ನೂರಕ್ಕೆ ಒಂದರಂತಾದರೆ ಕನ್ನಡ ಗ್ರಂಥಗಳಿಂದಾರಂಭ ಮಾಡಿಕೊಂಡು ಮಾಸ, ವಾರ, ದಿನಪತ್ರಿಕೆಗಳ ವರೆಗಿನ ಎಲ್ಲ ಕನ್ನಡ ಸಾಹಿತ್ಯ ಸಾಮಗ್ರಿ ಪ್ರಸಾರವೆಲ್ಲಾಗಬೇಕು? ಎಷ್ಟಾಗಬೇಕು? ಹಿಂದಿ ಮೊದಲಾದ ಭಾಷೆಗಳ ಪ್ರಸಾರಕ್ಕೆ ಆ ಜನಾಂಗಗಳು ಕೂಡಿಸಿ ಮೀಸಲಾಗಿರಿಸಿರುವ ಲಕ್ಷಾಂತರ ಕೋಟ್ಯಂತರ ರೂಪಾಯಿಗಳ ನಿಧಿಯನ್ನು ಕೂಡಿಸುವುದಕ್ಕೆ ಅನುಕೂಲವಾದ ಪರಿಸ್ಥಿತಿಯೂ ನಮ್ಮಲ್ಲಿಲ್ಲ. ಮೇಲಾಗಿ ಕನ್ನಡದ ಅಭ್ಯಾಸಕ್ಕೆ ಅನುಕೂಲತೆಯಿರುವುದೆಂಬ ಆಶೆ ತುಂಬಿದ ಪ್ರದೇಶಗಳಲ್ಲಿಯೂ ಉಗಿಯಂತ್ರದಿಂದ ನಡೆಯುವ ಪ್ರಚಂಡ ರುಬ್ಬುಗುಂಡುಗಳಂತೆ ಮರಾಠಿ ತೆಲುಗು ತಮಿಳುಗಳು ನಮ್ಮ ಕನ್ನಡವನ್ನು ಹತ್ತಿಕ್ಕಿ ಮಣ್ಣುಗೂಡಿಸಲು ತಮ್ಮ ಅದ್ಭುತಶಕ್ತಿಯನ್ನು ಪಯೋಗಿಸುತ್ತ ಅಡ್ಡಾಡುತ್ತಲೇ ಇವೆ. ನಮ್ಮಲ್ಲಿಯ ದಕ್ಷಿಣ ಭಾಗಕ್ಕೆ ಹೊಸದಾಗಿ ಎಜ್ಯುಕೇಶನಲ್ ಇನ್ಸ್‌ಪೆಕ್ಟರಾಗಿ ಬಂದಿರುವ ಮಹಾರಾಷ್ಟ್ರೀಯ ಮಹಾಶಯರು ಧಾರವಾಡದ ಹೈಸ್ಕೂಲುಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳಲ್ಲಿ ಮರಾಠೀ ಭಾಷೆಯವರೆಷ್ಟು? ಶಿಕ್ಷಣದ ಮಾಧ್ಯಮಿಕವು ವಿದ್ಯಾರ್ಥಿಗಳ ಮಾತೃಭಾಷೆಯೇ ಇರಬೇಕೆಂಬ ನಿಯಮದ ಮೇರೆಗೆ ಮರಾಠೀ ವಿದ್ಯಾರ್ಥಿಗಳಿಗೆ ಮರಾಠಿಯಲ್ಲಿ ಶಿಕ್ಷಣ ಕೊಡಲು ಸಮರ್ಥರಾದ ಶಿಕ್ಷಕರ ಸಂಖ್ಯೆಯೆಷ್ಟು? ಎಂಬ ವಿಷಯವಾಗಿ ವಿಚಾರಣೆ ನಡಸಿರುವುದಾಗಿ ತಿಳಿಯುತ್ತದೆ. ಅಂದರೆ ಧಾರವಾಡದಂಥ ಕನ್ನಡದ ಗಂಡುಮೆಟ್ಟಿನಲ್ಲಿಯೂ ಮಾತೃಭಾಷೆಯ ಶಿಕ್ಷಣದ ತತ್ವಾನುಸಂಧಾನದಿಂದ ಹೈಸ್ಕೂಲುಗಳಲ್ಲಿ ಮರಾಠಿಯನ್ನೂ ಮಾಧ್ಯಮಿಕ ಶಿಕ್ಷಣದ ಭಾಷೆಯಾಗಿ ಸೇರಿಸಿ, ನಮ್ಮ ಕನ್ನಡಕ್ಕೊಬ್ಬ ಸವತಿಯನ್ನು ತಂದು ನಿಲ್ಲಿಸುವ ವಿಚಾರ ನಡೆದಿರಬಹುದಾದ ಅನುಮಾನಕ್ಕೆ ಅವಕಾಶವುಂಟೆಂದು ಹೇಳಿದರೆ ತಪ್ಪಾಗಲಾರದು. ಮೊದಲೇ ನಮ್ಮ ಕನ್ನಡ ನಾಡಿನ ಅನೇಕ ಭಾಗಗಳಲ್ಲಿ ಈ ನೆರೆ ಭಾಷೆಗಳ ಉಪಟಳವು ಮಿತಿಮೀರಿ ಬೆಳೆದು ಕೂತಿದೆ. ಧಾರವಾಡದಲ್ಲಿರುವ ಇಂಗ್ಲಿಷು ಕನ್ನಡ ಹೆಣ್ಣುಮಕ್ಕಳ ಮಾಧ್ಯಮಿಕ ಶಾಲೆಯಲ್ಲಿ ಕನ್ನಡ ಬಲ್ಲ ಶಿಕ್ಷಕಿಯರ ಅಭಾವದ ಮೂಲಕ ಅವರು ಕನ್ನಡದ ಮಟ್ಟಿಗೆ ಗಂಡುಮಕ್ಕಳ ಹೈಸ್ಕೂಲಿನಲ್ಲಿ ಆಸರೆ ಪಡೆಯಬೇಕಾಗುತ್ತದೆ. ನಮ್ಮಿತ್ತ ಕಡೆಯ ಎಷ್ಟೋ ಕನ್ನಡ ಹಳ್ಳಿಗಳಲ್ಲಿಯೇ ಕನ್ನಡ ಶಾಲೆಗಳಿಲ್ಲದೆ ಮರಾಠೀ ಶಾಲೆಗಳಿರುವ ಸಂಗತಿಯನ್ನು ಮೊದಲೆ ತಮಗೆ ನಿವೇದಿಸಿದ್ದೇನೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಹುಡುಗರಿಗೆ ಕನ್ನಡ ಶಾಲೆಗಳಿದ್ದರೂ ಹುಡುಗಿಯರಿಗೆ ಬಹುತೇಕ ಸ್ಥಳಗಳಲ್ಲಿ ಮರಾಠಿಯೇ ಕಲಿಸಲಾಗುತ್ತಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ ಮುನಿಸಿಪಲ್ ಚೇರಮನ್ನರೊಬ್ಬರು ತೆಲುಗರಾಗಿ ಅಲ್ಲಿಯ ಪ್ರಚಂಡ ಬಹು ಸಂಖ್ಯಾಕ ಕನ್ನಡ ಪ್ರಜೆಗಳ ತಲೆಯಮೇಲೆ ತೆಲುಗಿನ ಆಕ್ರಮಣವಾಗುವುದಕ್ಕೆ ಅವಕಾಶವನ್ನುಂಟುಮಾಡಲು ಮೊನ್ನೆ ಮೊನ್ನೆಯಿಂದೊಂದು ತೆಲುಗು ವರ್ಗವನ್ನು ಆರಂಭಿಸುವ ಅಟ್ಟಹಾಸವನ್ನು ಮಾಡಿದ್ದಾರೆ. ಹೊಸಪೇಟೆಯ ಇಂಗ್ಲಿಷ ಶಾಲೆಯಲ್ಲಿ ಕನ್ನಡ ಬಲ್ಲ ಶಿಕ್ಷಕರ ಸಂಖ್ಯೆಯು ಕಡಮೆ ಇದ್ದುದರಿಂದ ಮದ್ರಾಸ ಸರ್ಕಾರದ ಶಿಕ್ಷಣದ ಧೋರಣವನ್ನೇ ಎದುರಿಸಿ, ಆ ಶಾಲೆಯಲ್ಲಿ ಇಂಗ್ಲಿಷದ ಮುಖಾಂತರವಾಗಿಯೇ ಎಲ್ಲ ವಿಷಯಗಳನ್ನೂ ಕಲಿಸತಕ್ಕದ್ದೆಂದು ತಮ್ಮ ವರ್ಚಸ್ವದ ಪ್ರಭಾವದಿಂದ ಅಲ್ಲಿಯ ಕನ್ನಡ ಸದಸ್ಯರನ್ನೂ ಮಂಕುಗೊಳಿಸಿ ನಿರ್ಣಯ ಮಾಡಿಕೊಂಡು ಆ ಮೇರೆಗೆ ಮದ್ರಾಸ ಸರಕಾರಕ್ಕೆ ಬರೆದು ತಿಳಿಸಿದರಂತೆ! ಆದರೆ ಅಲ್ಲಿಯ ಕನ್ನಡಿಗರ ಸುದೈವದಿಂದ ಸರಕಾರದವರು ಈ ಮಾತಿಗೊಪ್ಪದೆ ಅಲ್ಲಿ ಕನ್ನಡವೇ ಶಿಕ್ಷಣದ ಮುಖ್ಯ ಭಾಷೆಯಾಗಿರಬೇಕೆಂದು ಅಪ್ಪಣೆ ಮಾಡಿರುವುದಾಗಿ ತಿಳಿಯುತ್ತದೆ. ಹೊಸಪೇಟೆಯ ಅಚ್ಚಗನ್ನಡ ಮ್ಯುನಿಸಿಪಲ್ ಸದಸ್ಯರ ಈ ಬಗೆಯ ಸ್ವಭಾಷಾದ್ರೋಹಕಾರಕ ಬುದ್ಧಿಗಾಗಿ ನಾವೆಲ್ಲರೂ ಅನುಕಂಪಿಸಿ ಅಳಬೇಕಾಗಿರುವುದಲ್ಲದೆ, ಕನ್ನಡದ ಮೇಲೆ ಈ ಬಗೆಯಾಗಿ ಎಲ್ಲೆಲ್ಲಿಯೂ ನಡೆದಿರುವ ಅಕ್ರಮ ಅತಿಕ್ರಮಣಗಳನ್ನು ಅತ್ಯಂತ ಕಠೋರವಾದ ನಿಷ್ಠುರತೆಯಿಂದ ಎದುರಿಸದೆ ಗತ್ಯಂತರವಿಲ್ಲವೆಂಬ ಪಾಠವನ್ನೂ ಕಲಿಯುವುದು ಅಗತ್ಯವಾಗಿದೆ. ಆದುದರಿಂದ ಮೊದಲನೆಯದಾಗಿ ನಿರಕ್ಷರತೆಯ ನಿವಾರಣೆ, ಎರಡನೆಯದಾಗಿ ಈ ಇಪ್ಪತ್ತನೆಯ ಶತಮಾನದ ನಡುಗಾಲದ ಪ್ರಬುದ್ಧ ಯುಗದಲ್ಲಿಯೂ ನಮ್ಮ ನುಡಿಯ ಮೇಲೆ ನಡೆಯುತ್ತಿರುವ ಅನ್ಯಾಯದ ಆತಿಕ್ರಮಣಗಳನ್ನು ತಡೆಯುಯುವುದು, ನಮ್ಮ ಪ್ರಥಮ ಧರ್ಮವಾಗಿದೆ. ಈ ನಮ್ಮ ಶ್ರೇಷ್ಠ ಧರ್ಮವನ್ನು ನಾವು ನಿಷ್ಠೆಯಿಂದ ಅನುಸರಿಸಲನುವಾಗದಿದ್ದರೆ ನಮ್ಮ ಸಾಹಿತ್ಯದ ಅಭಿವೃದ್ಧಿಯ ದಾರಿಯೊಳಗಿನ ತೊಡಕುಗಳು ದೂರಾಗಲಾರವು, ನಮ್ಮ ನುಡಿಯೂ ಸಾಹಿತ್ಯವೂ ಭರದಿಂದ ಬೆಳೆಯಲು ಆಸ್ಪದ ದೊರೆಯಲಾರದು. ಈ ಮುಖ್ಯ ಸಂಗತಿಯನ್ನು ತಾವು ಅಗತ್ಯವಾಗಿ ಗಮನಿಸಬೇಕು.

**ಹಿಂದಿಯ ಸಂಧಾನ**

ಕಾಂಗ್ರೆಸ್ಸು ಅಧಿಕಾರಗ್ರಹಣ ಮಾಡಿ ಪ್ರಾಂತಿಕ ರಾಜ್ಯಕಾರಭಾರಗಳನ್ನು ನಡಸತೊಡಗಿದಂದಿನಿಂದ ಹಿಂದೀ ಭಾಷೆಯ ಪ್ರಚಾರಕ್ಕೆ ಪ್ರಾಶಸ್ತ್ಯವು ದೊರೆತು ಅದನ್ನು ಜನತೆಯಲ್ಲೆಲ್ಲ ಹಬ್ಬಿಸಲು ನಡೆದಿರುವ ಪ್ರಯತ್ನದ ವಿಷಯವಾಗಿ ನನಗೆ ತೋರುವ ನಾಲ್ಕು ಮಾತುಗಳನ್ನು ಇಲ್ಲಿ ಹೇಳುವುದು ಅಗತ್ಯವಾಗಿದೆ. ಹಿಂದುಸ್ಥಾನದ ರಾಷ್ಟ್ರೀಯತ್ವದ ಸಿದ್ಧಿಗಾಗಿ ಹಿಂದೀ ಭಾಷೆಯೇ ಇಡೀ ಹಿಂದುಸ್ಥಾನದ ಭಾಷೆಯಾಗಬೇಕು, ನಾಗರಿಯೇ ಅದಕ್ಕೆ ಲಿಪಿಯಾಗ

ಬೇಕು, ಎಂಬ ವಿಚಾರದ ಪ್ರಚಾರವು ಅಲ್ಪಸ್ವಲ್ಪ ಪ್ರಮಾಣದಿಂದ ಈಗ ಎಷ್ಟೋ ವರುಷಗಳಿಂದ ನಡದೇ ಇದೆ. ಒಂದೇ ಧರ್ಮ, ಒಂದೇ ಭಾಷೆ, ಒಂದೇ ಲಿಪಿ, ಮೊದಲಾದ ಕಟ್ಟುಗಳ ಬಿಗುವಿಲ್ಲದೆ ಯಾವುದೇ ಜನಾಂಗದ ರಾಷ್ಟ್ರೀಯತ್ವ ಸಿದ್ಧಿಯಾಗಲಾರದೆಂಬ ವಾದವು ಕೆಲವೆಡೆಯಲ್ಲಿ ಕೇಳಬರುತ್ತಿದೆ. ಈ ಸಿದ್ಧಾಂತವೇ ತಳಬುಡವಿಲ್ಲದ್ದೆಂಬುದಕ್ಕೆ ಇಂದಿನ ಪ್ರತ್ಯಕ್ಷದೃಷ್ಟಾಂತಗಳನ್ನೇ ನಾವು ನೋಡಿಕೊಳ್ಳಬಹುದು. ಸ್ವಿಟ್ಸರ್ಲೆಂಡಿನಂತಹ ಚಿಕ್ಕ ಸ್ವತಂತ್ರ ರಾಷ್ಟ್ರದಲ್ಲಿಯೂ ಸ್ವಿಸ್, ಇಟಾಲಿಯನ್, ಜರ್ಮನ್, ಫ್ರೆಂಚ್ ಮುಂತಾದ ಭಾಷೆಗಳು ಪ್ರಚಾರದಲ್ಲಿವೆ. ಈ ಭಾಷೆಗಳಿಗೆಲ್ಲ ಪ್ರಭುತ್ವದ ಮಾನ್ಯತೆಯ ಪ್ರಾಶಸ್ತ್ಯವಿದೆ. ಪ್ರತಿನಿಧಿ ಮಂಡಲಗಳಲ್ಲಿ ಇವೆಲ್ಲ ಭಾಷೆಗಳಿಗೆ ಮುಕ್ತದ್ವಾರವಿದೆ. ಆದರೂ ಸ್ವಿಸ್ ರಾಷ್ಟ್ರದ ರಾಷ್ಟ್ರೀಯತ್ವಕ್ಕೆ ಚ್ಯುತಿಯಿಲ್ಲ; ಪ್ರತಿಯಿಲ್ಲ. ಬ್ರಿಟಿಷರ ಒಕ್ಕಲುನಾಡಾಗಿ ಸಂಪೂರ್ಣ ಸ್ವಾತಂತ್ರ್ಯವನ್ನುಪಭೋಗಿಸುತ್ತಿರುವ ಕಾನಡಾ ದೇಶದಲ್ಲಿ ಇಂಗ್ಲಿಷ್ ಹಾಗು ಫ್ರೆಂಚ್ ಭಾಷೆಗಳು ರೂಢವಾಗಿವೆ. ಆದರೂ ಅದು ಏಕರಾಷ್ಟ್ರವೇ ಆಗಿದೆ. ಮೊನ್ನೆ ಮೊನ್ನೆ ಬ್ರಿಟಿಷ್ ಚಕ್ರವರ್ತಿಗಳು ಅಮೇರಿಕೆಯನ್ನು ಸಂದರ್ಶಿಸಲು ಹೋದಾಗ ಕಾನಡಾ ರಾಜ್ಯದ ಫ್ರೆಂಚ್ ಭಾಷೆಯ ಸೀಮೆಗೆ ದಯಮಾಡಿಸಿದಾಗ ಅಲ್ಲಿ ಫ್ರೆಂಚ್ ಭಾಷೆಯಲ್ಲಿಯೇ ಮಾತನಾಡಿ ಅಲ್ಲಿಯ ಪ್ರಜೆಗಳನ್ನು ತಮ್ಮ ಪ್ರೇಮರಜ್ಜುವಿನಿಂದ ಚೆನ್ನಾಗಿಯೇ ಬಿಗಿದುಬಿಟ್ಟರೆಂಬುದಾಗಿ ನಾನು ಓದಿರುವುದು ನನಗೆ ನೆನಪಿನಲ್ಲಿದೆ. ಆದುದರಿಂದ ಏಕಭಾಷೆ, ಏಕಲಿಪಿ, ಏಕಧರ್ಮ, ಇವುಗಳಾವುವೂ ರಾಷ್ಟ್ರೀಯತ್ವ ಸಿದ್ಧಿಗೆ ಅತ್ಯವಶ್ಯಕವಾದ ವಿಧಿಗಳೆಂಬ ಸಿದ್ಧಾಂತವು ನಿರಾಧಾರವಾದದ್ದೆಂದು ಹೇಳಲು ಯಾವ ಅನುಮಾನವೂ ಬೇಡ. ನಮ್ಮ ಹಿಂದುಸ್ಥಾನವಂತೂ ಅನಾದಿಕಾಲದಿಂದಲೂ ವಿವಿಧ ಭಾಷೆ, ವಿವಿಧ ಲಿಪಿ, ವಿವಿಧ ಧರ್ಮ, ಇವುಗಳಿಗೆ ಆಗರವಾಗಿ ಬೆಳೆದು, ಬಹು ರಾಷ್ಟ್ರಗಳ ಸಂಘಟಿತ ಖಂಡವೆನಿಸಿ, ಅವೆಲ್ಲವುಗಳ ಸಮನ್ವಯಮಾಡಿ ಏಕರಾಷ್ಟ್ರೀಯತ್ವದ ಭಾವನೆಯಿಂದಲೇ ನಡೆಯುತ್ತ ಬಂದಿರುವುದೆಂದು ನಿರಾತಂಕವಾಗಿ ಹೇಳಬಹುದು. ಧರ್ಮ, ಭಾಷೆ, ಜನಾಂಗ, ಸಮಾಜ, ವ್ಯಕ್ತಿ, ಕುಲ, ಕರ್ಮ, ಗುಣ, ಮೊದಲಾದ ವಿಭಿನ್ನತೆಯ, ವಿಭಕ್ತತೆಯ, ಅನೇಕತ್ವದಲ್ಲಿಯೇ ಏಕತ್ವವನ್ನೂ ಅವಿಭಕ್ತತೆಯನ್ನೂ ಅಭಿನ್ನತೆಯನ್ನೂ ಕಂಡುಹಿಡಿದು, ಸಮಷ್ಟಿಯ ಉತ್ಕರ್ಷಕ್ಕಾಗಿ, ಉನ್ನತಿಗಾಗಿ, ವ್ಯಕ್ತಿಗತ ಸ್ವಾರ್ಥವನ್ನು ಮರೆತುಬಿಡುವುದೇ ಹಿಂದುಸ್ಥಾನದ ತತ್ವಜ್ಞಾನಿಗಳ ಜಗತ್ಕಲ್ಯಾಣಕಾರಕ ಸಿದ್ಧಾಂತಗಳ ಸಾರಸರ್ವಸ್ವವಾಗಿದೆ. ಇಂತಹ ಸಮುದಾತ್ತ ವಿಚಾರಗಳಿಂದ ತುಂಬಿದ ಅನೇಕ ಉಪರಾಷ್ಟ್ರಗಳ ಸುಸಂಘಟಿತವಾದ ಸರ್ವೋತ್ಕರ್ಷಕಾರಕವಾದ ಸಮಷ್ಟಿರೂಪ ರಾಷ್ಟ್ರವೇ ನಮ್ಮ ಹಿಂದುಸ್ಥಾನವಾಗಿರುವುದೆಂದು ಅದರ ಅನಾದಿಕಾಲದ ಇತಿಹಾಸಪರಂಪರೆಯು ಸಾರುತ್ತದೆ. ಸೃಷ್ಟಿಯೊಳಗಿನ ಪ್ರಕೃತಿನಿಯಮಾನುಸಾರ ಎಲ್ಲೆಲ್ಲಿಯೂ ಸ್ವಾಭಾವಿಕವಾಗಿಯೇ ಗೋಚರವಾಗುವ ವಿವಿಧತೆಯನ್ನು ಅನೈಕ್ಯ ಒಡಕು ಎಂಬ ಹೆಸರಿನಿಂದ ಬಲು ದೊಡ್ಡದು ಮಾಡಿ ತೋರಿಸಿ, ನಮ್ಮಲ್ಲಿ ಬುದ್ಧಿಭ್ರಮೆಯನ್ನು ಉಂಟುಮಾಡಿ, ಐಕ್ಯವಾಗುವ ಅಶಕ್ಯತೆಯ ಕುಕಲ್ಪನೆಗಳಿಂದ ನಮ್ಮನ್ನು ಅಡ್ಡದಾರಿಗೊಯ್ದು, ನಾವು ನಿರಾಶರಾಗಿ, ನಿಷ್ಪ್ರಭರಾಗಿ, ನಿಷ್ಕ್ರಿಯರಾಗಿ ವಿಶ್ವಪ್ರಳಯದವರೆಗೂ ತಮ್ಮ ಗುಲಾಮರಾಗಿರಬೇಕೆಂಬ ಪರಮ ಸ್ವಾರ್ಥಬುದ್ಧಿಯಿಂದ ನಮ್ಮನ್ನಾಳುತ್ತಿರುವ ಪರಕೀಯರ ಕುಟಿಲ ರಾಜನೀತಿಯ ತಂತ್ರವೇ ಈ ಬಗೆಯ ವಿಚಾರಪ್ರಸರಣೆಯ ಬುಡಕ್ಕಿರುವುದೆಂದು ನಾನು ತಮಗೆ ಖಂಡಿತವಾಗಿಯೂ ನಿವೇದಿಸಬಯಸುತ್ತೇನೆ. ಆದುದರಿಂದ ನಮ್ಮ ಹಿಂದುಸ್ಥಾನಕ್ಕೆಲ್ಲ ಹಿಂದಿಯೊಂದೇ ಭಾಷೆಯಾಗಬೇಕೆಂಬ ಹುಚ್ಚು ವಿಚಾರಲಹರಿಯಲ್ಲಿ ತೇಲುಬಿದ್ದು ಎಲ್ಲೆಲ್ಲಿಯೂ ಹಿಂದಿ ಭಾಷೆಯನ್ನು ಹಬ್ಬಿಸಲು ಹವಣಿಸುತ್ತಿರಬಹುದಾದ ನಮ್ಮ ಬಾಂಧವರ ಉತ್ಸಾಹದ ಅತಿರೇಕವು ಕೇವಲ ಅನಾವಶ್ಯಕವಾಗಿರುವುದೆಂದು ನಾನಿಲ್ಲಿ ಸ್ಪಷ್ಟವಾಗಿ ನಿವೇದಿಸಬಯಸುತ್ತೇನೆ. ಆದರೆ ಹಿಂದಿ ರಾಷ್ಟ್ರದಲ್ಲೆಲ್ಲ ಪ್ರಾಂತಗಳ ಪರಸ್ಪರ ವಿಚಾರಗಳ ಬಳಕೆಗೆ, ವ್ಯವಹಾರದ ಅನುಕೂಲತೆಗೆ, ಈಗ ಮುಖ್ಯ ಸಾಧನವಾಗಿರುವ ತೀರ ಪರಕೀಯವಾದ ಇಂಗ್ಲಿಷ ಭಾಷೆಯು ನಮ್ಮ ರಾಷ್ಟ್ರದ "ರಾಜಕೀಯ ಗುಲಾಮಗಿರಿ"ಯ ಚಿರಂತನ ಚಿನ್ಹವಾಗಿ ಕೊನೆಯವರೆಗೂ ಇಲ್ಲಿ ನೆಲೆಸಬೇಕೆಂದು ಯಾರೂ ಅಪೇಕ್ಷಿಸಲಾರರು; ನಾನೂ ಅಪೇಕ್ಷಿಸುವುದಿಲ್ಲ. ಆದುದರಿಂದ ಈಗಿನ ಇಂಗ್ಲಿಷದ ಸ್ಥಳದಲ್ಲಿ ಬೇರೊಂದು ನಮ್ಮದೇ ಆದ ರಾಷ್ಟ್ರಭಾಷೆಯು ನಮಗೆ ಬೇಕು. ಮೊದಲು ಸಂಸ್ಕೃತ ಭಾಷೆಯು ಈ ಕೆಲಸವನ್ನು ಮಾಡುತ್ತಿತ್ತು. ಈಗ "ಹಿಂದುಸ್ತಾನಿ"ಯು ಆ ಸ್ಥಾನಕ್ಕೆ ಬರುವುದು ಇಷ್ಟವೂ ಶಕ್ಯವೂ ಸಾಧ್ಯವೂ ಆಗಿರುವುದೆಂದು ನಮ್ಮ ರಾಷ್ಟ್ರ ಮುಖಂಡರು ನಿಶ್ಚಯಿಸಿ ಆ ಉದ್ದೇಶದಿಂದ ಅದನ್ನು ಪ್ರಚಾರದಲ್ಲಿ ತರಲು ಪ್ರಯತ್ನಿಸುತ್ತಿರುವುದು ಯೋಗ್ಯವಾಗಿದೆ. ಆದರೆ ರಾಷ್ಟ್ರದ ಮಾನ್ಯ ಧುರಂಧರರು ಯಾವ ಪರಿಸ್ಥಿತಿಯಲ್ಲಿ, ಯಾವ ಮಟ್ಟದವರೆಗೆ, ಹಿಂದಿಯನ್ನು ಹಬ್ಬಿಸಬೇಕೆಂದು ಬಯಸುವರೋ, ಸಾರುವರೋ, ಅದನ್ನೆಲ್ಲ ಅವರ ಅನುಯಾಯಿಗಳು ಉತ್ಸಾಹದ ಭರದಲ್ಲಿ ದುರ್ಲಕ್ಷಿಸಿ, ಸಾಮಾನ್ಯ ಜನತೆಯಮೇಲೆಲ್ಲ ಹಿಂದುಸ್ತಾನಿಯನ್ನು ಕಲಿತೇ ತೀರಬೇಕೆಂಬ ಹಟದಿಂದ, ಅಧಿಕಾರದ ಬಲದಿಂದ, ಮುಖಂಡತ್ವದ ವರ್ಚಸ್ವದಿಂದ ಒತ್ತಾಸೆ ಮಾಡುವುದು ಯೋಗ್ಯವಲ್ಲ; ನ್ಯಾಯವಲ್ಲ. ಅಖಿಲ ಭಾರತೀಯ ರಾಷ್ಟ್ರಕಾರ್ಯದಲ್ಲಿ ತೊಡಗಬೇಕೆಂಬ ಮಹತ್ವಾಕಾಂಕ್ಷೆಯುಳ್ಳವರು ಹಿಂದುಸ್ತಾನಿಯನ್ನು ಸುಲಭವಾಗಿ ಸರಾಗವಾಗಿ ಕಲಿತುಕೊಳ್ಳಲು ಅನುಕೂಲತೆಗಳನ್ನು ಒದಗಿಸಿಕೊಟ್ಟರೆ ರಾಷ್ಟ್ರಕಾರ್ಯವನ್ನು ನಿರಾತಂಕವಾಗಿ ಮುಂದುವರಿಸಿದಂತಾಗುವದು. ಹಿಂದೀ ರಾಷ್ಟ್ರದ ಸರ್ವವಿಧದ ಸ್ವಾತಂತ್ರ್ಯ ಸಂಪಾದನೆಗಾಗಿ ಕಂಕಣ ಕಟ್ಟಿ ನಿಂತಿರುವ ಗಾಂಧಿಯವರು ಜನತೆಯಲ್ಲಿ ವ್ಯವಹಾರ ಸಾಗಿಸುವ ಮಟ್ಟಿಗೆ ಹಿಂದುಸ್ತಾನಿಯ ಜ್ಞಾನ (Workable knowledge of Hindustani) ವುಂಟಾಗಬೇಕೆಂದಿಷ್ಟೇ ಬಯಸುತ್ತಾರೆ; ಇದನ್ನೇ ಸಾರುತ್ತಾರೆ. ಮಹಾತ್ಮರ ಈ ವಿಚಾರವನ್ನು ರಾಷ್ಟ್ರಹಿತದ ದೃಷ್ಟಿಯಿಂದ ಯಾರೂ ವಿರೋಧಿಸಲಾರರು; ವಿರೋಧಿಸಕೂಡದು. ಆದರೆ ನಮ್ಮ ಕಾಂಗ್ರೆಸ್ ಸರಕಾರಗಳು ತಮ್ಮ ಆಳಿಕೆಯ ಅವಧಿಯಲ್ಲಿ ಈ ಸಂದರ್ಭದಲ್ಲಿ ಉತ್ಸಾಹದ ಅತಿರೇಕವನ್ನು ನಿಚ್ಚಳವಾಗಿ ತೋರಿದವೆಂದು ಅತ್ಯಂತ ದುಃಖದಿಂದ ಇಲ್ಲಿ ಉಲ್ಲೇಖಿಸದೆ ಗತ್ಯಂತರವಿಲ್ಲ. ನಮ್ಮ ಕನ್ನಡನಾಡಿನ ಮಟ್ಟಿಗೆ ಪರಿಶೀಲಿಸಿದರೆ ಮುದ್ರಾಸ್ ಪ್ರಾಂತದಲ್ಲಿ ಕಾರಭಾರ ನಡಸಿದ ಕಾಂಗ್ರೆಸ್ ಸರಕಾರವು ತನ್ನ ಆಡಳಿತೆಗೆ ಒಳಪಟ್ಟದ್ದ ಲಕ್ಷೋಪಲಕ್ಷ ಕನ್ನಡ ಪ್ರಜೆಗಳಿಗೆ ಅವರ ನಿಸರ್ಗಸಿದ್ಧವಾದ ಹಕ್ಕಾಗಿರುವ (Fundamental right) ಹಾಗು ಅತ್ಯಂತ ಸುಲಭವಾಗಿ ಒದಗಿಸಿ ಕೊಡಲು ಬರಬಹುದಾಗಿದ್ದ ಅವರ ತಾಯಿನುಡಿಯಾದ ಕನ್ನಡದ ಶಿಕ್ಷಣದ ವಿಚಾರವನ್ನು ಎಷ್ಟೂ ಗಮನಿಸದೆ, ನೂರಾರು ವರುಷಗಳಿಂದ ಅವರ ಮೇಲೆ ಅನ್ಯಾಯವಾಗಿ ನಡೆಯುತ್ತ ಬಂದಿರುವ ಒಂದು ಅಕ್ರಮಣಶೀಲ ಪರಭಾಷೆಯ ಶಿಕ್ಷಣದ ಜೊತೆಯಲ್ಲಿಯೇ ಮತ್ತೊಂದನ್ನು ಹೇರಲು ಸಜ್ಜಾಗಿ ನಿಂತುದು ಅತ್ಯಂತ ಉದ್ವೇಗಜನಕವಾಗಿರುವುದೆಂದು ನಾನು ಹೇಳದಿರಲಾರೆನು. ತಾಯಿನುಡಿಯಲ್ಲಿ ತಕ್ಕಮಟ್ಟಿಗೆ ಪ್ರಾವೀಣ್ಯವನ್ನು ಪಡೆದ ಯಾವನಾದರೂ ನಾಲ್ಕಾರು ತಿಂಗಳುಗಳಲ್ಲಿ ವ್ಯವಹಾರದ ಮಟ್ಟಿಗೆ ಹಿಂದುಸ್ತಾನಿಯನ್ನು ಸುಲಭವಾಗಿ ಕಲಿಯಬಹುದು. ಈ ದೃಷ್ಟಿಯಿಂದ ನೋಡಿದರೆ ಮಾಧ್ಯಮಿಕ ಶಾಲೆಗಳಲ್ಲಿ ಮೇಲ್ತರಗತಿಗಳಲ್ಲಿ ಹಿಂದುಸ್ತಾನಿಯನ್ನು ತಕ್ಕಮಟ್ಟಿಗೆಕಲಿಸಿ, ವರಿಷ್ಠ ಶಿಕ್ಷಣ ಸಂಸ್ಥೆಗಳಲ್ಲಿ ಹಾಗು ವಿದ್ಯಾಪೀಠದ ಪರೀಕ್ಷೆಗಳಲ್ಲಿ ಬೇರೆ ಪರಭಾಷೆಗಳ ಜೊತೆಯಲ್ಲಿ ಹಿಂದುಸ್ತಾನಿಯನ್ನೂ ಇಷ್ಟವಿದ್ದವರು ಹೆಚ್ಚಾಗಿ ಕಲಿಯಲು ಅನುಕೂಲತೆಯನ್ನು ಮಾಡಿಕೊಟ್ಟರೆ ಸಾಲದೆ? ಪ್ರಾಥಮಿಕ ಶಾಲೆಗಳ ಮೇಲುವರ್ಗಗಳಲ್ಲಿಯೂ ಹಿಂದಿಯನ್ನು ಎಲ್ಲರೂ ಕಲಿಯಲೇಬೇಕೆಂದು ಒತ್ತಾಯಪಡಿಸುವುದು ಜುಲುಮೆಯಲ್ಲದೆ ಮತ್ತೇನು? ರಾಷ್ಟ್ರದ ಮಾನ್ಯ ಮುಖಂಡರಾಗಿರುವ ಮಹಾತ್ಮಾ ಗಾಂಧಿಯವರ

ವಿಚಾರಸರಣಿಯಲ್ಲಿ ಅಢಕವಾಗಿರುವ ಸರ್ವಜನಸಮ್ಮತವಾಗುವಂತಹ ತತ್ವವನ್ನು ಮೂಲೆಗಿರಿಸಿ, ಕನ್ನಡವನ್ನೇ ಚೆನ್ನಾಗಿ ಕಲಿಯಲು ಅನುಕೂಲತೆಯಿಲ್ಲದ ನಮ್ಮ ಶಾಲೆಗಳಲ್ಲಿ ಎಳೆವಯಸ್ಸಿನ ಹುಡುಗ ಹುಡುಗಿಯರಿಗೆ ಹಿಂದಿಯನ್ನು ಕಲಿಸಿಯೇ ತೀರುವೆವೆಂಬ ಪ್ರವೃತ್ತಿಯನ್ನು ಕನ್ನಡ ಜನತೆಯು ಸಂತೋಷದಿಂದ ಪುರಸ್ಕರಿಸಲಾರದೆಂಬ ಮಾತನ್ನು ನಮ್ಮ ನಾಡಿಗೆ ಸಂಬಂಧಿಸಿರುವ ಕಾಂಗ್ರೆಸ್ ಧುರೀಣರು ಅಗತ್ಯವಾಗಿ ಗಮನಿಸಬೇಕು. ನಮ್ಮಿತ್ತ ಕಡೆಯ ಭಾಗದಲ್ಲಂತೂ ಕನ್ನಡವನ್ನು ಬುದ್ಧಿಪುರಸ್ಸರವಾಗಿ ಕುಕ್ಕರಬಡಿಯುವ ತಮ್ಮ ಅಂತಸ್ಥ ಉದ್ದೇಶವನ್ನು ಸಾಧಿಸುವುದಕ್ಕಾಗಿ ರಾಷ್ಟ್ರಭಾಷೆಯೆಂಬ ಗೌರವದ ತೆರೆಮರೆಯಲ್ಲಿ ಹಿಂದಿಯನ್ನು ಪುರಸ್ಕರಿಸಿ ಕನ್ನಡವನ್ನು ತಿರಸ್ಕರಿಸುವ ಅಂತಃಪ್ರವೃತ್ತಿಯು ಕನ್ನಡನಾಡ ಧುರೀಣರೊಳಗಿನ ಕೆಲವರಲ್ಲಿ, ಹಾಗೆಯೇ ಕೆಲವು ಜನ ಕಾರ್ಯಕರ್ತರಲ್ಲಿ, ಬಹುದಿನಗಳ ಪರಂಪರಾಸಂಪ್ರದಾಯವಾಗಿ ನೆಲೆಗೊಂಡಿರುವುದು ಪ್ರತ್ಯಕ್ಷ ಅನುಭವಕ್ಕೆ ಬಂದಿರುತ್ತದೆ. ಈ ಬಗೆಯ ದುಷ್ಪ್ರೇರಣೆಯಿಂದ ತನ್ನ ಚುಂಚನ್ನು ಚಾಚಬಹುದಾದ ಹಿಂದಿಯು ಮುಂದೆ ಎಂದಾದರೂ ಕನ್ನಡದ ಕತ್ತಿಗೆ ಕುತ್ತಾಗಿ ಕೂಡಬಹುದೆಂಬ ಶಂಕೆಯು ಕನ್ನಡ ಜನಾಂಗದಲ್ಲಿ ತಲೆದೋರಿದ್ದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಆದುದರಿಂದ ಇಂತಹ ಸಂಶಯಕ್ಕೆ ಎಡೆಯಾಗದಂತೆ, ಅಂದರೆ ಕನ್ನಡನಾಡಿನಲ್ಲಿ ಕನ್ನಡದ ಉತ್ಕರ್ಷಕ್ಕೆ ಹಿಂದೀ ಪ್ರಚಾರದಿಂದ ಅಡ್ಡಿ ಆತಂಕಗಳುಂಟಾಗದಂತೆ, ದಕ್ಷತೆಯಿಂದ ಹಿಂದುಸ್ತಾನಿಯನ್ನು ಮುಂದುವರಿಸುವುದಾದರೆ ರಾಷ್ಟ್ರೀಯ ವೃತ್ತಿಯ ಕನ್ನಡ ಜನಾಂಗವು ಅದನ್ನು ವಿರೋಧಿಸಲಾರದೆಂಬ ಮಾತನ್ನೂ ನಾನಿಲ್ಲಿ ಸ್ಪಷ್ಟಮಾಡಿ ತಿಳಿಸಬೇಕಾಗಿದೆ.

### ಕನ್ನಡದ ಒಗ್ಗೂಟಕ್ಕೆ ವಿರೋಧ

ತುಂಡುತುಂಡಾಗಿ ಖಂಡಿಸಲ್ಪಟ್ಟು ಎಲ್ಲೆಲ್ಲಿಯೂ ಪರಭಾಷೆಯವರ ಇತ್ತಂಡದ ಆಳಿಕೆಗೆ ಒಳಗಾಗಬೇಕಾಗಿರುವ ಕನ್ನಡ ಜನಾಂಗದ ಭಾಷೆ ಸಾಹಿತ್ಯಗಳು ಹೇಗೆ ಗಂಡಾಂತರಕ್ಕೊಳಗಾಗಿರುವವೆಂಬುದು ಕನ್ನಡಿಗರೆಲ್ಲರೂ ಈಗ ಚೆನ್ನಾಗಿಯೇ ಪ್ರತ್ಯಕ್ಷಾನುಭವದಿಂದ ಮನಗಂಡ ಮಾತಾಗಿದೆ. ನುಡಿಯ ಬೆಳೆವಣಿಗೆಗೆ ತಡೆಯುಂಟಾಗಿರುವುದು ಮಾತ್ರವಲ್ಲದೆ ಅದು ಕೆಟ್ಟು ವಿದ್ರೂಪವಾಗಿ ವಿಕೃತಿಹೊಂದಿ ಉಪಹಾಸಕ್ಕೆ ಎಡೆಯಾಗುವ ಪ್ರಸಂಗಗಳೂ ತಪ್ಪಿಲ್ಲ. ಅಲ್ಲಲ್ಲಿ ಪ್ರಕಟನಾಗುವ ಸರಕಾರೀ ಪ್ರಕಟನೆಗಳನ್ನು, ಅಂಚೆಕಟ್ಟೆಯ ಬೇರೆ ಬೇರೆ ನಮೂನೆಗಳನ್ನು, ರೇಲ್ವೆ ಕಂಪೆನಿಯವರು ಆಗಾಗ ಹೊರಡಿಸುವ ಪರಿಪತ್ರಗಳನ್ನು, ನೋಡಿದರೆ ಈ ಮಾತು ತಿಳಿದುಬರುವಂತಿದೆ. ಇವೆಲ್ಲವುಗಳೂ ಕನ್ನಡ ಅಕ್ಷರಗಳಲ್ಲಿ ಮುದ್ರಿತವಾಗಿರುವುದರಿಂದಲೇ ಇವು ಕನ್ನಡವೆಂದು ಹೇಳಬೇಕಲ್ಲದೆ ಇವುಗಳ ಭಾಷೆ ಕನ್ನಡವೆಂದು ಹೇಳಲು ಬರುವಂತಿಲ್ಲ. ನಮ್ಮ ಮುಂಬಯಿ ಕರ್ನಾಟಕದ ಸರಕಾರೀ ಪ್ರಕಟನೆಗಳಲ್ಲಿ ಈಗೀಗ ತುಸುಮಟ್ಟಿಗೆ ತಿದ್ದುಪಡೆಯಾಗಿ ಇವುಗಳ ಭಾಷೆ ಕನ್ನಡವೆಂದು ಹೇಳಬಹುದಾದ ಮಟ್ಟಕ್ಕೆ ಬಂದಿರುವುದು ನಿಜ. ಆದರೆ ಶಾಲೆಗಳಲ್ಲಿ ಕಲಿಸುವ ಕನ್ನಡದಲ್ಲಿ ವರ್ಣೋಚ್ಚಾರ ಆಘಾತ ಮೊದಲಾದ ಭಾಷೆಯ ಜೀವಾಳದ ಕುರುಹುಗಳಲ್ಲಿ ಕನ್ನಡತನದ ಸುಳಿವೇ ಇರುವುದಿಲ್ಲ. ಮದ್ರಾಸ ಸರಕಾರದ ಆಡಳಿತೆಯ ಕನ್ನಡ ಪ್ರದೇಶದಲ್ಲಿ ಇವುಗಳ ಸ್ವರೂಪವೆಂತಹುದೆಂಬುದನ್ನು ಅತ್ತಕಡೆಯ ಅನುಭವಿಕರೇ ಹೇಳಬೇಕು. ಅಂಚೆ ಖಾತೆ ಮತ್ತು ರೇಲ್ವೆ ಕಂಪೆನಿಯವರ ಕನ್ನಡವನ್ನು ತಿಳಿದುಕೊಳ್ಳುವುದಕ್ಕೆ ಅವುಗಳಿಗೆ ಸಂಬಂಧಪಟ್ಟ ಅಧಿಕಾರಿಗಳ ಕಡೆಗೆ ಹೋಗಿ ಇಂಗ್ಲಿಷದಲ್ಲಿ ಅವುಗಳ ಅರ್ಥವನ್ನು ತಿಳಿಸಿಕೊಂಡೇ ಬರಬೇಕಾಗುತ್ತದೆ. "ಬಾ" "ಹೋಗು" ಎಂಬೆರಡು ಶಬ್ದಗಳನ್ನಾಡಬಲ್ಲ ಕನ್ನಡ ಭಾಷಾಕೋವಿದರಿಂದ ಅವುಗಳು ಭಾಷಾಂತರಿತವಾಗುತ್ತಿರುವುವೆಂಬುದು ಅವುಗಳ ಸ್ವರೂಪದಿಂದಲೇ ಗೊತ್ತಾಗುತ್ತದೆ. ಹೀಗೆ ಎಲ್ಲ ಬಗೆಯಿಂದಲೂ ನಮ್ಮ ನುಡಿಯನ್ನು ಇನ್ನೂ ಇನ್ನೂ ಅಧಃಪಾತಕ್ಕೆ ಇಳಿಸುವುದಕ್ಕೆ ಕಾರಣವಾಗಿರುವ ಪರಿಸ್ಥಿತಿಯನ್ನು ನಿವಾರಿಸಿ, ನಮ್ಮ ಕನ್ನಡ ನುಡಿಗೆ ಅಭ್ಯುದಯಕಾಲ ಬರಬೇಕೆಂದು ನಾವು ಬಯಸುವುದಾದರೆ, ಕನ್ನಡ ಜನಾಂಗವು ಒಂದಾಗಿ ತನ್ನ ಎಲ್ಲ ಬಗೆಯ ಉನ್ನತಿಯನ್ನು ಸಾಧಿಸಿಕೊಳ್ಳಲು, ತನ್ನನ್ನು ತಾನೇ ಆಳಿಕೊಳ್ಳಲು, ಸಮರ್ಥವಾಗಬೇಕು. ಈ ವಿಚಾರವೇ ಕರ್ನಾಟಕದ ಏಕೀಕರಣದ ಚಳವಳಿಯ ಗುಟ್ಟು, ರಹಸ್ಯ, ಜೀವಾಳವಾಗಿದೆ. ನಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಮ್ಮ ಭಾಷೆ ಸಾಹಿತ್ಯ ವಾಙ್ಮಯ ಸಂಸ್ಕೃತಿಗಳನ್ನೆಲ್ಲ ಬೆಳೆಯಿಸಿಕೊಳ್ಳುವುದಕ್ಕೆ ನಾವು ಮಾಡುವ ಪ್ರಯತ್ನಗಳೆಲ್ಲ ನಮ್ಮ ನೆರೆಹೊರೆಯವರ ಭಾಷೆ ಸಂಸ್ಕೃತಿಗಳ ವಿಸ್ತಾರಕ್ಕೆ ಪ್ರಸಾರಕ್ಕೆ ತಡೆಯನ್ನುಂಟುಮಾಡುವುದರಿಂದ, ಮುಂದೆ ಮುಂದೆ ಕಾಲು ಚಾಚಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ಅವರೆಲ್ಲರೂ ನಮ್ಮ ಏಕೀಕರಣದ ಪ್ರಯತ್ನಗಳಿಗೆ ಮೊದಲಿನಿಂದಲೂ ವಿರೋಧಮಾಡುತ್ತ ಬಂದಿದ್ದಾರೆ; ಇಂದಿಗೂ ಮಾಡುತ್ತಲಿದ್ದಾರೆ. ಇತ್ತ "ಬೆಳಗಾಂವಿ ಜಿಲ್ಲೆಯಿಂದ ತುಂಗಭದ್ರೆಯವರೆಗೆ ಮರಾಠಿಯೇ ಮೂಲ ಭಾಷೆಯಾಗಿತ್ತು; ಕನ್ನಡವೇ ಆಗಂತುಕವಾಗಿ ಬಂದು ನೆಲಸಿದೆ" ಎಂಬ ಅತ್ಯದ್ಭುತವಾದ ವಿಧಾನವನ್ನು "ಬೃಹನ್ಮಹಾರಾಷ್ಟ್ರ"ದ ಸವಿಗನಸುಗಳನ್ನುಣ್ಣುತ್ತಿರುವ ಸಂಶೋಧಕರು ಸಾರಹತ್ತಿದ್ದಾರೆ. ಅತ್ತ ಬಳ್ಳಾರಿಯ ಕಡೆಗೆ "ನಮಗೆ ಆಂಧ್ರದೇಶವೂ ಬೇಡ, ಕರ್ನಾಟಕವೂ ಬೇಡ, ನಮ್ಮ 'ರಾಯಲು' ಸೀಮೆಯೇ ಬೇರೆಯಾಗಿ, ಸ್ವತಂತ್ರವಾಗಿ ಬಾಳಬೇಕಾಗಿದೆ" ಎಂಬ ಬುದ್ಧಿಭೇದವನ್ನು ಹುಟ್ಟಿಸಿ ತ್ರಿಶಂಕು ಸ್ಥಿತಿಗೆ ಶರಣುಹೋಗುವವರಂತೆ ಕೆಲವರು ತಳಬುಡವಿಲ್ಲದ ಚಳವಳಿಯನ್ನು ನಡೆಯಿಸಿದ್ದಾರೆ. ತಮಿಳುನಾಡಿನ ಶ್ರೀ|| ರಾಜಗೋಪಾಲಾಚಾರ್ಯರು ಕಾಂಗ್ರೆಸ್ಸಿನ ಪರವಾಗಿ ಮದ್ರಾಸದ ಮುಖ್ಯ ಮಂತ್ರಿಗಳಾಗಿ ಕಾರಭಾರ ನಡೆಯಿಸುವ ಅಧಿಕಾರ ಬಂದಾಗ "ಕನ್ನಡ ನಾಡು ಒಂದಾಗುವುದರಲ್ಲಿ ಸುಖವಿಲ್ಲ" ಎಂದು ನಮ್ಮ ದಕ್ಷಿಣ ಕನ್ನಡದ ಬಂಧುಗಳಿಗೆ ತತ್ತ್ವೋಪದೇಶಮಾಡಿ "ಮಹದಪಿ ಪರದುಃಖಂ ಶೀತಲಂ ಸಮ್ಯಗಾಹುಃ" ಎಂಬ ಕಾಳಿದಾಸನ ಉಕ್ತಿಯ ಸಾರ್ಥಕತೆಯನ್ನು ಸಿದ್ಧಪಡಿಸಿದ್ದಾರೆ. ಹೀಗೆ ಕನ್ನಡ ನಾಡು ಈಗಿದ್ದ ಸ್ಥಿತಿಯಲ್ಲಿಯೇ ಕಲ್ಪಾಂತದವರೆಗೂ ಬಿದ್ದುಕೊಂಡಿರುವುದಾದರೆ ತಮತಮಗೆ ಹೊಂದಿಕೊಂಡಿರುವ ಭಾಗಗಳಿಂದ ತಮ್ಮ ತಮ್ಮ ಎಲ್ಲ ಬಗೆಯ ಹಿತಸಂಬಂಧಗಳ ಸಂವರ್ಧನಕ್ಕೆ ಹೆಚ್ಚಾದ ಕ್ಷೇತ್ರವು ದೊರೆಯುವುದೆಂಬ ಹಾತೊರಿಕೆಯಿಂದ ಕನ್ನಡ ನಾಡಿನ ಏಕೀಕರಣವನ್ನು ನಮ್ಮ ನೆರೆನುಡಿಯ ಬಾಂಧವರು ಏಕಪ್ರಕಾರವಾಗಿ, ಬಲವಾಗಿ, ವಿರೋಧಿಸುತ್ತಲಿದ್ದಾರೆಂಬ ಸಂಗತಿಯನ್ನು ನಾನೀಗ ಬಿಚ್ಚಿ ಹೇಳಬೇಕಾದ ಆವಶ್ಯಕತೆಯಿಲ್ಲ.

### ಬರಲಿರುವ ಗಂಡಾಂತರ

ಈ ತಮ್ಮ ವಿರೋಧವು ಫಲಕಾರಿಯಾಗುವಂತೆ ಕನ್ನಡನಾಡಿನ ಗಡಿಸೀಮೆಯಲ್ಲಿ ಕನ್ನಡಿಗರ ಸಂಖ್ಯೆಯನ್ನೇ ಕಡಮೆಮಾಡಿ ತೋರಿಸಿ ಆಯಾ ಭಾಗಗಳನ್ನೆಲ್ಲ ತಮ್ಮೊಳಗೆ ಸೇರಿಸಿಕೊಂಡು ಅರಗಿಸಿಕೊಂಡು ಬೆಳೆಯುವುದಕ್ಕೆ ನಮ್ಮ ನೆರೆಯ ಬಾಂಧವರು ಅಖಂಡವಾಗಿ ಸಾಹಸವನ್ನು ನಡೆಯಿಸಿದ್ದಾರೆ; ನಡೆಯಿಸುತ್ತಾರೆ; ಮುಂದಾದರೂ ನಡೆಯಿಸುವುರೆಂಬುದು ಅನುಭವಸಿದ್ಧ. "ತನ್ನತನ"ದ ಅರಿವಿನ ಪರಿವೆಯೇ ಇಲ್ಲದ ನಾವು ಕನ್ನಡಿಗರು ಕಾಂಗ್ರೆಸಿನ ಆಡಳಿತೆಯಮಟ್ಟಿಗಾದರೂ ಒಂದಾಗಿ ಸ್ವತಂತ್ರರಾದಾಗಿನಿಂದ ಇಂದಿನವರೆಗಿನ ಇಪ್ಪತ್ತು ವರುಷಗಳಲ್ಲಿ ಈ ಅವರ ಪ್ರಯತ್ನಗಳನ್ನು ಎದುರಿಸಲು ಎಲ್ಲಿಯೂ ಪ್ರಯತ್ನಪಟ್ಟಿರುವುದಿಲ್ಲವೆಂಬುದು ಧಾರಾಳವಾಗಿದೆ. ರಾಜಕೀಯ ಸ್ವಾತಂತ್ರ್ಯವನ್ನೆ ಗುರಿಯಾಗಿಟ್ಟುಕೊಂಡಿರುವ ಕಾಂಗ್ರೆಸ್ಸು ಭಾಷೆ ಸಾಹಿತ್ಯ ಸಂಸ್ಕೃತಿಗಳ ಕಡೆಗೆ ಗಮನಕೊಡುವ ಕಾರಣವಿಲ್ಲವೆಂಬ ಮನೋವೃತ್ತಿಯೇ ಪ್ರಬಲವಾಗಿದ್ದ ನಮ್ಮ ಕರ್ನಾಟಕದ ಕಾಂಗ್ರೆಸ್ಸು ಅವುಗಳ ವಿಷಯದಲ್ಲಿ ಉದಾಸೀನವಾಗಿರಬಹುದಾದರೂ ರಾಜಕೀಯ ಕಾರ್ಯಕ್ಷೇತ್ರದ ಮಟ್ಟಿಗಾದರೂ ಆಂಧ್ರರು ಬಳ್ಳಾರಿ ಜಿಲ್ಲೆಗಾಗಿ ಹೋರಾಡಿ ಈಗಿನಮಟ್ಟಿಗೆ ತುಸು ಗೆದ್ದಿರುವಂತೆ ನಮ್ಮ ಕಾಂಗ್ರೆಸ್ ಕಮಿಟಿಯೂ ಮಾಡಬಹುದಾಗಿತ್ತು. ಆದರೆ,—ಇರಲಿ.—ಆ ಮಾತು ಹೋಗಲಿ. ನಮ್ಮ ಸಾಹಿತ್ಯ ಪರಿಷತ್ತು ಕೂಡ ಸಾಳುಬಿದ್ದು ಪರರ ಪಾಲಾಗುತ್ತ ನಡೆದಿರುವ ಅನಂತಪುರ ಸೇಲಂ ಕೊಯಿಮುತ್ತೂರು

ನೀಲಗಿರಿ ವೈನಾಡು ಪ್ರದೇಶಗಳ ಕಡೆಗೆ ಗಮನ ಕೊಟ್ಟಂತೆ ತೋರುವುದಿಲ್ಲ. ನಮ್ಮ ಸ್ವತ್ವರಕ್ಷಣೆಗೆ ಅಗತ್ಯವಾದ ನಮ್ಮ ನುಡಿಯನ್ನು ಕಾಯ್ದುಕೊಳ್ಳಲು ಈ ಬಗೆಯಾಗಿ ಹೆಚ್ಚಿನ ಉದಾಸೀನತೆಯನ್ನು ತಾಳಿ, ಕರ್ತವ್ಯಶೂನ್ಯತೆಯನ್ನು ಅವಲಂಬಿಸಿದುದು ನಮ್ಮ ಕನ್ನಡತಾಯಿಗೆ ನಾವು ದ್ರೋಹ ಮಾಡಿದ ಅಕ್ಷಮ್ಯ ಅಪರಾಧವಾಗಿದೆ. ಹಿಂದೆ ಆದದ್ದು ಆಗಿಹೋಯಿತು. ಇನ್ನು ಮುಂದಾದರೂ ನಾವು ಎಚ್ಚತ್ತು ಕಣ್ದೆರೆದು ಕಾರ್ಯಪ್ರವೃತ್ತರಾಗಿ ಕೃತಾಪರಾಧಕ್ಕೆ ಪ್ರಾಯಶ್ಚಿತ್ತ ಹೊಂದೋಣ. ೧೯೪೧ರಲ್ಲಿ ಹೊಸ ಜನಗಣತಿಯಾಗತಕ್ಕದ್ದುಂಟು. ಆ ಜನಗಣತಿಯಲ್ಲಿ ಗಡಿನಾಡಿನ ಕನ್ನಡಿಗರೆಲ್ಲರೂ "ನಾವು ಕನ್ನಡಿಗರೇ" ಎಂದು ಬರೆಯಿಸುವಂತೆ, "ನಮ್ಮ ತಾಯಿನುಡಿ ಮರಾಠಿಯಲ್ಲ, ತೆಲುಗಲ್ಲ, ತಮಿಳಲ್ಲ, ಮಲಯಾಳಿಯಲ್ಲ, ಕನ್ನಡ" ಎಂದು ಅಸಂದಿಗ್ಧವಾಗಿ ಸ್ಪಷ್ಟವಾಗಿ ಹೇಳುವುದಕ್ಕೆ ಸಿದ್ಧರಾಗುವ ಮಟ್ಟಿಗಾದರೂ ಅಲ್ಲಲ್ಲಿಯ ಕನ್ನಡಿಗರಲ್ಲಿ ಆತ್ಮಜ್ಞಾನೋದಯವಾಗುವಂತೆ ವಿಶ್ವಪ್ರಯತ್ನ ಮಾಡೋಣ. ಅಲ್ಲಲ್ಲಿಯ ಸರಕಾರಗಳಿಂದ ನೇಮಿಸಲ್ಪಡುವ ಗಣಕರು, ನಿರೀಕ್ಷಕರು, ವಿಚಾರಣಾಧಿಕಾರಿಗಳು ಇದ್ದ ಸ್ಥಿತಿಯನ್ನು ಇದ್ದಂತೆ ಬರೆಯುವಂತೆ ಅವರ ಮೇಲೆ ಕಣ್ಣಿಟ್ಟು, ಕನ್ನಡ ಜನಾಂಗದ ಹಿತಸಂಬಂಧಗಳನ್ನು ಅತಿ ದಕ್ಷತೆಯಿಂದ ರಕ್ಷಿಸಿಕೊಳ್ಳುವ ಅಧಿಕಾರ ಪಡೆದು ಭಗೀರಥ ಪ್ರಯತ್ನದ ಸಾಹಸ ಮಾಡೋಣ. ಹಿಂದುಸ್ಥಾನದಲ್ಲೆಲ್ಲ ಭಾಷಾನುರೋಧವಾದ ಪುನರ್ಘಟನೆಯಾಗುವ ಪ್ರಸಂಗವು ಬೇಗನೆ ಬರಲಿದೆ. ಆಗ ನಮ್ಮ ಗಡಿಸೀಮೆಗಳು ಸರಕಾರೀ ಅಂಕಿಸಂಖ್ಯೆಗಳ ಕೃತ್ರಿಮತೆಯ ಕಪಟಜಾಲದಿಂದ ಅನ್ಯಾಕ್ರಾಂತವಾಗದಂತೆ ಈಗಿನಿಂದ ನೋಡಿಕೊಳ್ಳುವುದು ನಮ್ಮ ಆದ್ಯ ಧರ್ಮವಾಗಿದೆ. ನಮ್ಮ ಆಲಸ್ಯದಿಂದ, ನಮ್ಮವರೊಳಗಿನ ಕೆಲವರ ವಂಚಕವೃತ್ತಿಯಿಂದ, ಅನ್ಯಾಯವಾಗಿ ತೆಲುಗರ ಪಾಲಾಗಿರುವ ಬಳ್ಳಾರಿಯ ಮೂರು ತಾಲೂಕುಗಳನ್ನೂ ತಿರಿಗಿ ಪಡೆಯುವುದು ಶಕ್ಯವಾಗಿರುವುದನ್ನು ನಾನು ತಮಗೆ ಸ್ವಾನುಭವದಿಂದ ಹೇಳುವೆನು. ಈ ಮಹತ್ಕಾರ್ಯಕ್ಕಾಗಿ ಲಕ್ಷಾಂತರ ರೂಪಾಯಿಗಳ ನಿಧಿಯನ್ನು ಕೂಡಿಸಿ ಸಾವಿರಗಟ್ಟಳೆ ಕನ್ನಡ ತರುಣರ ಸೇವಕ ದಳವನ್ನೇರ್ಪಡಿಸಿ ನಾಲ್ಕೂ ಕಡೆಗೆ ಸುಸಂಘಟಿತವಾಗಿ ಕೆಲಸ ನಡೆಯಿಸಿ ಜನಜಾಗೃತಿಮಾಡಿ ನಮ್ಮ ಇಷ್ಟವನ್ನು ಕೈವಶಪಡಿಸಿಕೊಳ್ಳುವ ದಾರಿಯನ್ನು ಸುಲಭ–ಸುಗಮ–ಮಾಡಬೇಕಾಗಿದೆ. ಇನ್ನು ತಡವಾದರೆ ನಮ್ಮ ಆಶೆ ಆಕಾಂಕ್ಷೆಗಳೆಲ್ಲ ಬುಡಮೇಲಾಗಿ ಕರ್ನಾಟಕದ ಏಕೀಕರಣದಿಂದಲೇ ನಿಷ್ಕಂಟಕವಾಗಿ ಸಾಧಿಸಬೇಕಾದ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಸಂಗೋಪನ ಸಂವರ್ಧನ ಕಾರ್ಯವು ತಿರುಕನ ಕನಸಿನಂತಾಗಿ ಕನ್ನಡ ಜನಾಂಗವು ತಲೆಯೆತ್ತುವ ಆಶೆಯನ್ನೇ ತೊರೆಯಬೇಕಾಗುವುದೆಂಬ ಖಂಡತುಂಡಾದ ಎಚ್ಚರಿಕೆಯನ್ನು ನಾನಿಲ್ಲಿ ಸಾರದಿರಲಾರೆನು.

## ಕೊನೆಯ ಮಾತು

ಮಹಾಶಯರೆ, ಹಿಂದುಸ್ಥಾನದ ವೈಸರಾಯರಾಗಿದ್ದ ಲಾರ್ಡ್ ಕರ್ಝನ್‌ರು ಬಂಗಾಲವನ್ನು ವಿಭಾಗಿಸಿ ವಂಗಜನಾಂಗವನ್ನು ಇಕ್ಕಡೆಗೈದರು. ಈ ಮೂಲಕ ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಬೆಳವಣಿಗೆಗೆ ಅಳಿಗಾಲ ಬಂತೆಂದು ನಮ್ಮ ವಂಗಬಾಂಧವರು ತಮ್ಮ ಅಖಂಡತ್ವವನ್ನು ಉಳಿಸಿಕೊಳ್ಳಲು ಅತ್ಯದ್ಭುತವಾದ ಆಂದೋಲನವನ್ನು ಹೂಡಿದರು. ಅವರು ಏಕವಾಕ್ಯತೆಯಿಂದ ಪ್ರಯೋಗಿಸಿದ ಬಹಿಷ್ಕಾರಾಸ್ತ್ರವು ಪ್ರಭಾವಶಾಲಿಯಾಗಿ ಅದರ ಮುಂದೆ ಪ್ರಚಂಡ ಶಕ್ತಿಸಂಪನ್ನವಾದ ಬ್ರಿಟಿಷ್ ರಾಷ್ಟ್ರವೇ ಗದಗದ ನಡುಗಿತು. ಏಳೇ ವರುಷಗಳಲ್ಲಿ ಬ್ರಿಟಿಷ್ ಚಕ್ರವರ್ತಿಗಳು ಹಿಂದುಸ್ಥಾನಕ್ಕೆ ಬಿಜಯಂಗೈದು ಬಂಗಾಲಿಗಳ ಇಷ್ಟಾರ್ಥವನ್ನು ಸಲ್ಲಿಸಿ ಅವರನ್ನು ಪ್ರಶಾಂತಗೊಳಿಸಿದರು. ಬ್ರಿಟಿಷ್ ರಾಜ್ಯಕಾರ್ಯಧುರಂಧರರು ವಜ್ರಲೇಪವೆಂದೂ ಶಿಲಾಶಾಸನವೆಂದೂ ಸಾರಿದ್ದ ವಂಗಭಂಗವು ನೀರ್ಗುಳ್ಳೆಯಂತೆ ನಿರ್ನಾಮವಾಯಿತು. ಹೀಗೆ ಹಿಂದುಸ್ಥಾನಕ್ಕೆಲ್ಲ ಸ್ವಾತಂತ್ರ್ಯಸಂಪಾದನೆಯ ಅಂತಃಸ್ಫೂರ್ತಿಯನ್ನೊದಗಿಸಿಕೊಟ್ಟಿರುವ ಪ್ರಚಂಡ ಶಕ್ತಿಯು ಬಂಗಾಲದಲ್ಲಿಯೇ ಮೊದಲು ಒಡಮೂಡಿತೆಂದು ಹೇಳಬಹುದು. ಬಂಗಾಲಿಗಳ ಅದ್ಭುತವಾದ ಒಗ್ಗಟ್ಟು, ಅಸಾಧಾರಣವಾದ ತ್ಯಾಗ, ಅಸದೃಶವಾದ ಧೈರ್ಯ, ಅಗಾಧವಾದ ಸ್ಥೈರ್ಯ, ನಿಃಸ್ಸೀಮನಿರಲಸತೆ, ನಿಷ್ಕಾಮಕರ್ಮನಿರತಿ ಮೊದಲಾದ ರಾಷ್ಟ್ರನಿರ್ಮಾಣಕ ಸದ್ಗುಣಗಳ ಮೂಲಕವಾಗಿಯೇ ಅವರಿಗೆ ಅಲ್ಪಾವಧಿಯಲ್ಲಿಯೇ ತಮ್ಮ ಗುರಿಯನ್ನು ಗೆಲ್ಲುವುದು ಸಾಧ್ಯವಾಯಿತು. ಒಂದಿದ್ದ ಬಂಗಾಲವು ಎರಡಾದ ಮಟ್ಟಿಗೆ ಅವರೆಷ್ಟು ಸಂತಾಪಗೊಂಡು ಹೋರಾಡಿದರೆಂಬ ಮನೋವೇಧಕವಾದ ಚಿತ್ತಾಕರ್ಷಕವಾದ ಈ ಇತಿಹಾಸವು ಕಟುಕನ ಕೈಗೆ ಸಿಕ್ಕುಬಿದ್ದ ಕುರಿಯಂತೆ ಹತ್ತಿಪ್ಪತ್ತು ತುಕಡಿಗಳಾಗಿ ತುಂಡರಿಸಲ್ಪಟ್ಟು ನೂರಾರು ವರುಷಗಳ ವರೆಗೆ ಮೃತಪ್ರಾಯವಾಗಿ ಬಿದ್ದುಕೊಂಡಿರುವ ನಮ್ಮ ಕನ್ನಡ ಜನಾಂಗಕ್ಕೆ ಸ್ವತ್ವವನ್ನು ಕಾಯ್ದುಕೊಳ್ಳಲು ಹುರಿಗೊಂಡು ಏಳುವ ಹುರುಪನ್ನು ಕೊಡಲಾರದೆ? ನಮ್ಮೊಳಗಿನ ಜಾತಿ ಕುಲ ಗೋತ್ರಗಳ ದುರಂತಕಾರಕ ದುರ್ಗುಣಗಳು ದೂರಾಗಲಾರವೆ? ನಮ್ಮ ಸರ್ವಸ್ವನಾಶಕ ಸಂಕುಚಿತ ಸ್ವಾರ್ಥಬುದ್ಧಿಯು ಸಾಯಲಾರದೆ? ನಮ್ಮನ್ನು ಹೀನದೆಸೆಗೆ ಗುರಿಮಾಡುತ್ತಿರುವ ಹೇಸಿ ಹೇಡಿತನವು ದೆಸೆಗೇಡಾಗಿ ಓಡಲಾರದೆ? ನಮ್ಮ ನಾಡಿನ ಚತುಃಸೀಮೆಯ ವರೆಗೂ ಹಬ್ಬಿಕೊಂಡಿರುವ ಚಂಚಲತೆ, ವಂಚಕತೆ, ಚಪಲತೆ, ಅಪಾರ ಆಲಸಿಗತೆ, ಐಹಿಕ ಸುಖಲೋಲುಪತೆ, ಮೊದಲಾದ ತಮಃಪ್ರಧಾನ ಗುಣಗಳು ನಮ್ಮನ್ನಗಲಲಾರವೆ? ಬಾಂಧವರೆ, ನಮ್ಮ ನಾಡು ಒಂದಾಗಬೇಕು, ನಮ್ಮ ಜನಾಂಗವು ಸ್ವತಂತ್ರವಾಗಬೇಕು. ನಮ್ಮ ಭಾಷೆ, ನಮ್ಮ ಸಾಹಿತ್ಯ, ನಮ್ಮ ವಾಙ್ಮಯ, ನಮ್ಮ ಸಂಸ್ಕೃತಿ ಇವುಗಳು ಬಾಳಬೇಕು, ಬೆಳೆಯಬೇಕು, ಇಳೆಯಲ್ಲೆಲ್ಲ ಕಳೆಗೊಂಡು ಮೆರೆಯಬೇಕು. ಸಕಲ ಐಶ್ವರ್ಯಸಂಪನ್ನೆಯಾಗಿ ಹಿಂದೊಮ್ಮೆ ಎಲ್ಲರ ಮುಂದಾಳಾಗಿದ್ದ ನಮ್ಮ ಕನ್ನಡ ತಾಯಿಗೆ ಅವಳ ಪೂರ್ವವೈಭವವನ್ನೆಲ್ಲ ಮತ್ತೆ ದೊರಕಿಸಿ ಕೊಟ್ಟು, ಅವಳನ್ನು ಅಭೇದ್ಯವಾದ ಅರಸುತನದ ಗದ್ದುಗೆಯಲ್ಲಿಟ್ಟು, ಅವಳಿಂದ ಚಿರಂತನವಾದ ಶಾಶ್ವತವಾದ ಉತ್ಕರ್ಷದ ಹರಕೆಗಳನ್ನು ನಾವು ಪಡೆಯಬೇಕು ಎಂಬಾಸೆ ನಮಗಿದ್ದರೆ ನಾವು ಆ ಮಹಾತಾಯಿಯ ಅಂಚಿತ್ಯಾದ್ಭುತವಾದ ವಿಶ್ವರೂಪವನ್ನು ಯಾವಾಗಲೂ ನಮ್ಮ ಕಣ್ಣಮುಂದೆ ಕಟ್ಟಿಕೊಂಡು ಅವಳ ಉದ್ಧಾರಕ್ಕಾಗಿ ನಮ್ಮ ಸರ್ವಸ್ವವನ್ನೂ ಸೂರೆಗೈದು ಆತ್ಮಸಮರ್ಪಣೆಗೆ ಸಿದ್ಧರಾಗಿ, ನಾವೆಲ್ಲರೊಂದಾಗಿ ಹೋರಾಡಲು ಎದ್ದೇಳಬೇಕಾಗಿದೆ. ಆದುದರಿಂದ, ಮಹಾಶಯರೆ, ಈ ಸಂದರ್ಭದಲ್ಲಿ ವಿಶ್ವನಿಯಾಮಕ ಮೂಲಶಕ್ತಿಯಾದ ಭಗವದ್ವಾಣಿಯೇ ಎಂದು ಗಣಿಸಲಾಗಿರುವ ಋಗ್ವೇದಸಂಹಿತೆಯ

ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥

ಎಂಬ ಸಮಾರೋಪ ಮಂತ್ರದ ಕನ್ನಡ ಅನುವಾದವನ್ನು ಹೇಳಿ, ನಾವೆಲ್ಲರೂ ಅದನ್ನು ಅಕ್ಷರಶಃ ಪರಿಪಾಲಿಸಲಣಿಯಾಗುವ ಎಂದು ಬಿನ್ನವಿಸಿ ತಮಗೆ ಬೇಸರವನ್ನುಂಟುಮಾಡಿರಬಹುದಾದ ನನ್ನ ಮಾತುಗಳನ್ನು ಮುಗಿಸಿಬಿಡುತ್ತೇನೆ:—

ಕೂಗು ಒಂದಾಗಿ ಕರುಳೊಂದಾಗಿ ಹೃದಯದನು-
ರಾಗಮೊಂದಾಗಿ ಸಂಘಟಿತಬಲಯುತರಾಗಿ ।
ರಾಗ ವಿದ್ವೇಷ ಮತ್ಸರ ಮದಂಗಳ ನೀಗಿ
ಸಾಗಲನುವಾಗಿರೈ, ಛೋಗಬಿಟ್ಟೇಳಿರೈ,
ಕನ್ನಡಮ್ಮನ ಕುವರರಿ!

**ವಂದೇ ಕರ್ನಾಟ ಮಾತರಂ**

# ಶ್ರೀ ಮುದವೀಡು ಕೃಷ್ಣರಾಯರು

ಶ್ರೀ॥ ಮುದವೀಡು ಕೃಷ್ಣರಾಯರು ಕರ್ನಾಟಕದ ಹಿರಿಯ ಮುಖಂಡರಲ್ಲೊಬ್ಬರು; ನಾಲ್ವತ್ತು ವರ್ಷ ಮೇಲ್ಪಟ್ಟು ಕನ್ನಡ ವಾಙ್ಮಯ, ಕರ್ನಾಟಕ ಏಕೀಕರಣ, ಕರ್ನಾಟಕ ರಾಜಕಾರಣ, ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಅವ್ಯಾಹತವಾಗಿ ಕಾರ್ಯಮಾಡುತ್ತ ಬಂದವರು. ಕರ್ನಾಟಕಕ್ಕಾಗಿ ತನುಮನಧನಗಳನ್ನು ಪೂರಾ ಸವಿಸಿದವರು; ವಿಶೇಷತಃ ಬೆಳಗಾವಿಯ ಜಿಲ್ಲೆಯನ್ನು ಮರಾಠಿ ಭಾಷೆಯ ವರ್ಚಸ್ಸಿನಿಂದ ಉಳಿಸಿಕೊಳ್ಳಬೇಕೆಂಬುದೊಂದೇ ಮುಖ್ಯ ಉದ್ದೇಶದಿಂದ, ತಮ್ಮ ಹುಟ್ಟೂರಾದ ಧಾರವಾಡವನ್ನು ಬಿಟ್ಟು, ಬೆಳಗಾಂವಿಗೆ ತಮ್ಮ 'ಕರ್ನಾಟಕವೃತ್ತ ಮತ್ತು ಧನಂಜಯ' ಪತ್ರವನ್ನು ಒಯ್ಯು, ಅಲ್ಲಿ ಹೆಣಗಾಡಿದವರು. ಇಂಥವರನ್ನು ಬೆಳಗಾಂವಿಯವರು ಕೃತಜ್ಞತಾ ಬುದ್ಧಿಯಿಂದ ಈ ಸಲದ ಸಾಹಿತ್ಯಸಮ್ಮೇಲನದ ಅಧ್ಯಕ್ಷಪದವಿಗೆ ಆರಿಸಿದುದು ಅತ್ಯಂತ ಉಚಿತವಾದ ಸಂಗತಿಯೇ ಸರಿ. ವಸ್ತುತಃ ಈ ಪದವಿಯು ಅವರಿಗೆ ಸಿಕ್ಕಿ ಅನೇಕ ವರ್ಷಗಳಾಗಿಹೋಗಬೇಕಾಗಿತ್ತು.

ಶ್ರೀ॥ ಕೃಷ್ಣರಾಯರು ಕರ್ನಾಟಕದೊಳಗಿನ ಒಂದು ಅದ್ಭುತ ವ್ಯಕ್ತಿ. ಅವರ ಶಾರೀರಕ ಮಾನಸಿಕ ಮೂಲಶಕ್ತಿಗಳು ಅದ್ಭುತ, ಅವರ ಲೆಕ್ಕಣಿಕೆಯೂ ಅದ್ಭುತ, ಬಾಯಿಯೂ ಅದ್ಭುತ. ಅವರ ನೆನಪಿನ ಶಕ್ತಿಯೂ ಅದ್ಭುತ, ಅವರ ಧೈರ್ಯವೂ ಅದ್ಭುತ. ಹೀಗೆ ಅವರ ವಿಷಯದಲ್ಲಿ ಎಲ್ಲವೂ ಅದ್ಭುತವೇ. ಹಿಂದಕ್ಕೆ ಅರುವತ್ತುನಾಲ್ಕು ಕಲೆಗಳಲ್ಲಿ ನಿಪುಣನಾದವನಿಗೆ ಘನಪಂಡಿತನೆಂದು ಅನ್ನುತ್ತಿದ್ದರಂತೆ. ಶ್ರೀ॥ ಕೃಷ್ಣರಾಯರು ಹಾಗೆ ಪಂಡಿತರೆಂದು ಹೇಳಬಹುದು. ಅವರಿಗೆ ಬಾರದ ವಿದ್ಯೆಯಿಲ್ಲ, ಗೊತ್ತಿಲ್ಲದ ಕಲೆಯಿಲ್ಲ. ನೃತ್ಯ, ನಾಟಕ, ಗಾಯನ ವಾದನ, ಅಭಿನಯ, ಮುಂತಾದುವುಗಳಲ್ಲಿ ಚೆನ್ನಾಗಿ ತಲೆಯೊಳ್ಳವರು; ಒಳ್ಳೆ ರಸಿಕರು, ರಸಜ್ಞರು. ಮುದ್ರಾಲಯದಲ್ಲಿ ಮೊಳೆಜೋಡಿಸುವದು ಮೊದಲ್ಗೊಂಡು ವ್ಯವಸ್ಥಾಪಕತ್ವದವರೆಗೆ ಎಲ್ಲ ಕೆಲಸಗಳನ್ನೂ ಕುಶಲತೆಯಿಂದ ಮಾಡಬಲ್ಲವರು, ಮಾಡಿದವರು. ಅವರು ಕವಿಗಳು, ಸಂಪಾದಕರು, ಗಹನವಾದ ಧಾರ್ಮಿಕ ವಿಷಯಗಳಲ್ಲಿಯೂ ಆಸಕ್ತಿಯುಳ್ಳವರು. ಅವರು ಪ್ರಸನ್ನ ವೆಂಕಟರಾಯರ ಪದಗಳನ್ನು ಹಾಡಹತ್ತಿದರೆಂದರೆ ತಾವೂ ಆನಂದಬಾಷ್ಪೋದಕಗಳನ್ನು ಉದುರಿಸಿ, ಮುಂದಿಯ ಕಣ್ಣೊಳಗಿಂದಲೂ ಅವನ್ನು ಉದುರಿಸುತ್ತಿದ್ದರು. ಅವರು ತಾವು ಕಟ್ಟಿದ ರಾಜಕಾರಣದ ಸಂಬಂಧವಾದ ಲಾವಣಿ ಪದಗಳನ್ನು ಹಾಡಹತ್ತಿದರೆಂದರೆ, ಜನರೆಲ್ಲರ ಹೃದಯಗಳು ತುಂಬಿಬರುತ್ತಿದ್ದವು. ಅವರು ಲೆಕ್ಕಣಿಕೆಯನ್ನು ಹಿಡಿದು ಬರೆಯಹತ್ತಿದರೆಂದರೆ ಬರೆದೇ ಬರೆಯುವರು. ಮಾತಾಡಹತ್ತಿದರೆಂದರೆ ಆಡೇ ಆಡುವರು. ಕೈತುಂಬಿ ವಾಕ್ಯಗಳು ಹೊರಡುವವು, ಬಾಯಿತುಂಬಿ ಮಾತುಗಳು ಹೊರಡುವವು. ಅವರ ಬರಹದ ಶೈಲಿಯು ಭವಭೂತಿಯ ಶೈಲಿಯಂತೆ ಕ್ಲಿಷ್ಟಪದಭೂಯಿಷ್ಠವಾಗಿ ಗಹನವಾದುದು. ಅವರ ಮಾತಿನ ಶೈಲಿಯು ಮೇಘನಾದದಂತೆ ಗಂಭೀರವಾದುದು. ಅವೆರಡೂ ಪ್ರವಾಹಗಳು ನಡುವೆ ತಗ್ಗುದಿನ್ನೆಗಳನ್ನು ಲೆಕ್ಕಿಸದೆ ತಡೆಯಿಲ್ಲದೆ ಓಡುವುವು. ಅವರು ಬರಹದಲ್ಲಿಯೂ ಮಾತಿನಲ್ಲಿಯೂ ಗಟ್ಟಿಗರಾದುದರಿಂದ ಅವರನ್ನು ಸವ್ಯಸಾಚಿಗಳೆನ್ನಬಹುದು.

ಆದರೆ, ಇಷ್ಟೆಲ್ಲ ಕಾರ್ಯಗಳನ್ನು ಅವರು ಮಾಡುತ್ತಿರುವುದು ವಿಶೇಷತಃ ಮೂಲಶಕ್ತಿಗಳ ಬಲಗಳಿಂದಲೇ. ಅವರು ಯಾವ ಪರೀಕ್ಷೆಯನ್ನೂ ಪಾಸಾಗಿರುವುದಿಲ್ಲ, ಯಾವ ವಿದ್ಯೆಯನ್ನೂ ನಾಲ್ಕು ವರ್ಷ ಮನಸ್ಸು ಕೊಟ್ಟು ಕಲಿಯಲಿಲ್ಲ. ಕೇವಲ ದೇವದತ್ತವಾದ ಬುದ್ಧಿ, ದೇವದತ್ತವಾದ ವಾಕ್‌ಶಕ್ತಿ, ಇವುಗಳಮೇಲೆಯೇ ಅವರ ಭಾರ ಹೆಚ್ಚು. ಅವರಿಗೆ ಪಾಂಡಿತ್ಯದ ಮಹಾಮುದ್ರೆಯಿಲ್ಲ. ಅವರು ಹಳೆಗನ್ನಡ ಪಂಡಿತರಲ್ಲ, ಸಂಸ್ಕೃತ ವಿದ್ವಾಂಪರಲ್ಲ, ಇಂಗ್ಲೀಷ ಭಾಷಾ ಪಟುಗಳಲ್ಲ, ಮರಾಠಿ ಭಾಷಾ ನಿಪುಣರಲ್ಲ. ಆದರೆ, ಇವೆಲ್ಲ ಭಾಷೆಗಳ ಮರ್ಮವನ್ನು ಚೆನ್ನಾಗಿ ಆಕಲನಮಾಡಿದವರು. ಹಳೆಗನ್ನಡ ಪಂಡಿತರನ್ನು ಅವರು ತಡೆದು ಹಿಡಿಯಬಲ್ಲರು, ಸಂಸ್ಕೃತ ಕಾವ್ಯ ನಾಟಕಗಳ ರಸವನ್ನು ಆಕಲನಮಾಡಬಲ್ಲರು, ಇಂಗ್ಲಿಷ ಭಾಷೆಯ ದೊಡ್ಡದೊಡ್ಡ ಭಾಷಣಗಳನ್ನು ತಮ್ಮ ಸ್ಮರಣಶಕ್ತಿಯಿಂದ ತತ್‌ಕ್ಷಣಕ್ಕೆ ಸರಸವಾಗಿ ಭಾಷಾಂತರ ಮಾಡಬಲ್ಲರು, ಮರಾಠಿ ಭಾಷೆಯಲ್ಲಿ ಕೂಡ ವೃತ್ತಪತ್ರಿಕೆಯನ್ನು ನಡೆಯಿಸಿದವರು. ಅವರು ಜುಟ್ಟಾ ಜುಲುಮೆಯಿಂದ ಹಲಕೆಲವು ಗ್ರಂಥಗಳನ್ನು ಬರೆದಿದ್ದಾರೆ. ತಮ್ಮ ಭರತಕಲೋತ್ತೇಜಕವೆಂಬ ಅಮೆಚೂರ್ ನಾಟಕ ಕಂಪೆನಿಯ ಸಲುವಾಗಿ ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಅಚ್ಚಾಗದೆ ಉಳಿದಿರುವವೇ ಬಹಳ. ಒಟ್ಟಿಗೆ, ಅವರು ಬಂಗಾರದ ಕಣಿಯೊಳಗಿನ ದೊಡ್ಡದೊಂದು ಬಂಡೆಗಲ್ಲು ಇದ್ದಂತೆ. ಸ್ವಾಭಾವಿಕ ಶಕ್ತಿಗಳಿಗೆ ಸ್ವತಃ ಎಂದೂ ಸಾಕಷ್ಟು ಸಂಸ್ಕಾರವನ್ನು ಕೊಡಲಿಲ್ಲ. ದೇಶಸೇವೆಯನ್ನು ಮಾಡುವ ಅತ್ಯುತ್ಕಟ ಲವಲವಿಕೆಯ ಮೂಲಕ ಅವರಿಗೆ ಹಾಗೆ ಮಾಡಲು ಆಸ್ಪದವು ದೊರೆಯಲಿಲ್ಲ. ವಯಸ್ಸಿಗೆ ಬಂದ ಕೂಡಲೇ ದೇಶಕಾರ್ಯಗಳಲ್ಲಿ ಧುಮುಕಿ ಇನ್ನೂ ವರೆಗೆ ಈಸುತ್ತಲೇ ಇದ್ದಾರೆ. ಹೀಗೆ ಈಸುವಾಗಲೇ ಅವರ ಸ್ವಾಭಾವಿಕ ಶಕ್ತಿಗಳಿಗೆ ಒಳ್ಳೇ ಸಂಸ್ಕಾರಗಳುಂಟಾಗಿವೆ. ಆದುದರಿಂದ, ಅವರು ಯಾವ ಸಂಸ್ಥೆಯಲ್ಲಿಯೂ ಬಹಳ ವರ್ಷಗಳವರೆಗೆ ಒಂದೇ ಸವನೆ ಕೆಲಸಮಾಡದಿದ್ದರೂ ಎಲ್ಲ ಸಂಸ್ಥೆಯವರಿಗೂ ಅವರ ಆವಶ್ಯಕತೆಯುಂಟಾಗದೆ ಇಲ್ಲ. ಯಾವ ಕೆಲಸ ಮಾಡುವಾಗಲೂ ಅವರು ಮೈಮರೆಯುತ್ತಾರೆ. ಅವರು ತಮ್ಮ ಸಹಾಯವನ್ನು ನೀಡಲು ಯಾವಾಗಲೂ ಸಿದ್ಧ. "ಕರೆದಲ್ಲಿ ಬರುವನೋ. ಕಾವೇರಿ" ಎಂಬಂತೆ "ಕರೆದಲ್ಲಿ ಹೋಗುವನೋ ಕೃಷ್ಣಣ್ಣ" ಎಂದು ಅನ್ನಬಹುದು. ಸೆರೆಮನೆಯ ಪರಿವೆ ಅವರಿಗಿಲ್ಲ. ಆದಕಾರಣ, ರಾಜಕಾರಣದಲ್ಲಿ ಅವರ ಸಹಾಯವು ಕ್ಷಣಕ್ಷಣಕ್ಕೆ ಬೇಕಾಗುತ್ತದೆ. ಜನತೆಯನ್ನು ಜಾಗೃತಿಗೊಳಿಸುವ ಅವರ ವಿಲಕ್ಷಣ ಶಕ್ತಿಯು ಪ್ರತಿಯೊಂದು ಕ್ಷೇತ್ರದಲ್ಲಿ ಉಪಯೋಗವಾಗುತ್ತದೆ.

ಹೀಗೆ ಅವರು ವಿವಿಧ ವಿಷಯಗಳಲ್ಲಿ ಗಟ್ಟಿಗರಾದರೂ ಒಂದು ವಿಷಯದಲ್ಲಿ ಮಾತ್ರ, ಬಲು ಮೆತ್ತಗಿರುತ್ತಾರೆ. ಅವರ ಹೃದಯವು ಬೆಣ್ಣೆಯಂತೆ ಬಿಸು ಕಾವು ಬಡಿದ ಕೂಡಲೇ ಕರಗಿ ನೀರಾಗುತ್ತದೆ. ಅವರು ವಾಗ್ಮಿಗಳಾಗಿದ್ದರೂ ಒಮ್ಮೊಮ್ಮೆ ಅವರ ಗಂಟಲ ಶಿರಗಳು ಉಬ್ಬಿ ಬಂದು, ಅವರ ಜಲಪ್ರಾತದಂತಿರುವ ವಾಕ್‌ಪ್ರವಾಹವನ್ನು ಕೂಡ ಅದು ಕ್ಷಣಹೊತ್ತು ತಡೆದು ಹಿಡಿಯುತ್ತದೆ. ಅವರ ಈ ತರದ ಸ್ವಭಾವದ ಮೂಲಕ ಅವರ ಪ್ರತಿಯೊಂದು ಆಚರಣೆಯಲ್ಲಿ "ಅತಿ"ಯು ಕಂಡುಬರುತ್ತದೆ. "ಮಿತಿ"ಯೆಂಬುದು ಅವರಿಗೆ ಗೊತ್ತಿಲ್ಲ. ಪ್ರಮಾಣ, ತೂಕ ಎಂಬುದನ್ನು ಅರಿಯರು. "ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ" ಎಂಬುದರ ಅತಿರೇಕವನ್ನು ನಾವು ಅವರಲ್ಲಿ ಕಾಣಬಹುದು. ಅನ್ಯರ ಕಡ್ಡಿಯಂಥ ಗುಣವನ್ನು ಕೂಡ ಗುಡ್ಡವನ್ನಾಗಿ ಮಾಡುವರು. ಅವರು ತಮಗಿಂತ ಎಷ್ಟೋಪಟ್ಟು ಕಡಮೆ ಯೋಗ್ಯತೆಯುಳ್ಳವರನ್ನು ತಾವೇ ಅಟ್ಟಕ್ಕೇರಿಸಿ ಸ್ತುತಿಸಿದ ಉದಾಹರಣೆಗಳೂ ಅವರ ಆಯುಷ್ಯದಲ್ಲಿ ಕಡಮೆ ಇಲ್ಲ. ಆದರೆ ಅದರಲ್ಲಿ ಕೃತ್ರಿಮತೆಯು ಮಾತ್ರ ತಿಲಪ್ರಾಯವೂ ಇಲ್ಲ ಅವರ ಮೃದು ಹೃದಯವೇ ಅದಕ್ಕೆ ಕಾರಣ. ಒಳಗೊಂದು ಹೊರಗೊಂದು ಎಂಬುದನ್ನವರು ಅರಿಯರು. ಅವರ ಹೃದಯವನ್ನು ನೋಡಲು "ಕ್ಷ" ಕಿರಣಗಳು ಬೇಕಾಗಿಲ್ಲ. ಅವರ ಮೈದೊಗಲೇ ಅತಿ ಮೆತ್ತಗೆ ಮತ್ತು ಪಾರದರ್ಶಕವಾದುದು. ಆದುದರಿಂದಲೇ ಅವರ ಭಾಷಣದಲ್ಲಿಯ ಅತಿರೇಕವು ಅದ್ಭುತಪರಿಣಾಮವನ್ನುಂಟುಮಾಡುತ್ತದೆ. ನಾಟಕದೊಳಗಿನ ಪಾತ್ರಗಳಲ್ಲಿಯ ಆವೇಶದಂತೆ, ಕಪಟ ಆವೇಶವನ್ನು ತಂದುಕೊಂಡು ತತ್ಕಾಲದ ಮಟ್ಟಿಗೆ ಜನತೆಯ ಮೋರೆಗೆ ಮಂಕುಬೂದಿ ಎರಚುವ ಕಲೆಯು ಅವರಲ್ಲಿ ಇಲ್ಲ.

ಒಟ್ಟಿಗೆ ಅವರು ಕರ್ನಾಟಕದ ಮಹಾಪುರುಷರಲ್ಲೊಬ್ಬರು. ಗುಣಗ್ರಹಣಶಕ್ತಿಯಲ್ಲಿ ತೀರ ಹಿಂದುಳಿದ ಪ್ರಾಂತವೆಂದು ಪ್ರಸಿದ್ಧಿಯೊಂದಿದ ಕರ್ನಾಟಕವು ಇಂದಾದರೂ ಅವರಿಗೆ ತಕ್ಕ ಮರ್ಯಾದೆಯನ್ನು ಕೊಟ್ಟು ಸ್ವಲ್ಪ ಮಟ್ಟಿಗಾದರೂ ಕೃತಜ್ಞತಾಬುದ್ಧಿಯನ್ನು ತೋರಿಸಿದುದಕ್ಕಾಗಿ ನಾವು ಕರ್ನಾಟಕವನ್ನೇ ಅಭಿನಂದಿಸುತ್ತೇವಲ್ಲದೆ. ಶ್ರೀ ಕೃಷ್ಣರಾಯರನ್ನು ಪ್ರತ್ಯೇಕವಾಗಿ ಅಭಿನಂದಿಸುವ ಕಾರಣವೇ ಇಲ್ಲ.

ಆಲೂರ ವೆಂಕಟರಾವ

(ಜೀವನ, ಡಿಸೆಂಬರ ೧೯೩೯)

೭-೬೫೦—೧೯೩೯ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Regd. No. M. 3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೮-೦
ಬಿಡಿ ಪತ್ರಿಕೆ: ೬ ಕಾಸು




ಸಂಪುಟ ೨ ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ ಸಂಪಾದಕ:
ಸಂಚಿಕೆ ೧೧ ಬೆಂಗಳೂರು, ಶುಕ್ರವಾರ, ಜನವರಿ ೫, ೧೯೪೦ ಬಿ. ವೆಂಕೋಬರಾವ್, ಬಿ.ಎ.

## ೨೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ

**ಬೆಳಗಾಂವಿ, ೧೯೩೯**

---

(ಸಂಗ್ರಹ ವರದಿ: ಶ್ರೀ ಎಂ. ವಿ. ಸೀತಾರಾಮಯ್ಯ, ಎಂ.ಎ. ಅವರಿಂದ)

ಕನ್ನಡ ಸಾಹಿತ್ಯ ಸಮ್ಮೇಳನದ ೨೫ನೆಯ ಅಧಿವೇಶನ ಈ ಸಲ ಕನ್ನಡ ನಾಡಿನ ಗಂಡುಮೆಟ್ಟಿನ ಉತ್ತರ ಕರ್ನಾಟಕದ ಬೆಳಗಾಂವಿಯಲ್ಲಿ, ಶಾಲಿನಾರ್ ವಾತ್ಸ್ರ್ಯಮಂದಿರದಲ್ಲಿ, ೧೯೩೯ನೆಯ ಡಿಸೆಂಬರ್ ೨೬ ರಿಂದ ಮೊದಲುಗೊಂಡು ೨೯ರ ವರೆಗೆ ೪ ದಿನ ಅತ್ಯಂತ ವಿಜೃಂಭಣೆಯಿಂದ, ಬಹು ಯಶಸ್ವಿಯಾಗಿ ನಡೆಯಿತು. ಕನ್ನಡ ನಾಡ ನುಡಿಯ ವೀರಭಕ್ತರೂ, ಕನ್ನಡ ನಾಡಿನ ಮುಂದಾಳುಗಳಲ್ಲಿ ಗಂಡುಗಲಿಗಳೆನ್ನಿಸಿಕೊಂಡವರೂ ಆದ ಧಾರವಾಡದ ಶ್ರೀಮಾನ್ ಮುದವೀಡು ಕೃಷ್ಣರಾಯರು ಈ ಸಲದ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದು ಕಾಲಿಕವೂ ಯಥೋಚಿತವೂ ಆಗಿತ್ತು. ಅವರು ಅತ್ಯಂತ ದಕ್ಷತೆಯಿಂದ ಸಮ್ಮೇಳನದ ಕಾರ್ಯಗಳನ್ನು ನಿರ್ವಹಿಸಿಕೊಟ್ಟು ನಾಡಿಗೂ ಪರಿಷತ್ತಿಗೂ ಮಹೋಪಕಾರ ಮಾಡಿರುವರು. ಅವರು ಬೆಳಗಾಂವಿಯಲ್ಲಿ ಕನ್ನಡ **ಬಾವುಟವನ್ನು ಏರಿಸಿ, ಹಾರಿಸಿದರು; ಕನ್ನಡದ ಬಾವುಟದ ಹಾಡು ಎಲ್ಲರ ಬಾಯಲ್ಲೂ ಉಲಿಯುವಂತೆ ಮಾಡಿದರು. ಸಿಂಹಗರ್ಜನೆಯಂಥ ಅವರ ಕೆಚ್ಚು ನುಡಿಗಳು ನಾಲ್ಕು ದಿನವೂ ಸಮ್ಮೇಳನ** ಮಂಟಪದ ಒಳಗೂ ಹೊರಗೂ ಗುಡುಗಾಡಿ, ಎಲ್ಲ ಕನ್ನಡಿಗರಲ್ಲಿ ಕೆಚ್ಚು ತುಂಬಿ, ನಿರಭಿಮಾನಿಗಳಿಗೂ ಕನ್ನಡದ ಹುಚ್ಚು ಹಿಡಿಸಿತು—ಎಂದರೆ ಅತ್ಯುಕ್ತಿಯಾಗಲಾರದು.

ಈ ಸಲದ ಸಮ್ಮೇಳನದಲ್ಲಿ ಕೆಲವು ವೈಶಿಷ್ಟ್ಯಗಳುಂಟು: ಇವು ಬೆಳಗಾಂವಿಗೂ, ಅಲ್ಲಿನ ಸ್ವಾಗತ ಸಮಿತಿಗೂ ವಿಶೇಷ ಹೆಮ್ಮೆಯ **ಸಂಗತಿ; ನಾಡಿಗೂ ಪರಿಷತ್ತಿಗೂ ಬಹಳ ಸಂತೋಷದ ವಿಷಯ.**

ಮೊದಲನೆಯದಾಗಿ, ಸಮ್ಮೇಳನಾಧ್ಯಕ್ಷರು ತಮ್ಮ ಭಾಷಣದಲ್ಲಿ ಅಪ್ಪಣೆ ಕೊಡಿಸಿರುವಂತೆ, "ಕಳೆದ ೨೫ ವರ್ಷಗಳಲ್ಲಿ ಕನ್ನಡ ನಾಡಿನ ಯಾವ ನಗರಕ್ಕೂ ಪಟ್ಟಣಕ್ಕೂ ದೊರೆಯದ ಇಡಿಯ ಕನ್ನಡ ನಾಡಿನ ಸಾಹಿತ್ಯ ಸಮ್ಮೇಳನವನ್ನು ಮೂರನೆಯ ಬಾರಿ ಕೂಡಿಸುವ ಹೆಚ್ಚಿನ ಸನ್ಮಾನವನ್ನು ಹೊಂದಲು ಇಂದು ಬೆಳಗಾಂವಿ ಪಾತ್ರವಾಗಿದೆ."

ಎರಡನೆಯದಾಗಿ, ಪರಿಷತ್ತಿನ ಉಪಾಧ್ಯಕ್ಷರ ಸೂಚನೆಯ **ಮೇರೆಗೆ, ಮೊದಲನೆಯ ದಿನ ಬೆಳಗ್ಗೆ** ಸಮ್ಮೇಳನಾಧ್ಯಕ್ಷರು ಕನ್ನಡದ ಬಾವುಟವನ್ನು ಏರಿಸಿದ್ದು: ಪ್ರತಿನಿಧಿ ಬಿಡಾರದ ಮುಂಬಯಲಿನಲ್ಲಿ ನಾಲ್ಕು ದಿನವೂ ಕನ್ನಡ ಬಾವುಟ ಹಾರಾಡುತ್ತಿದ್ದು, **ಬೆಳಗಾಂವಿಯ ನಗರಿಗರ ಕಣ್-ಮನಗಳನ್ನು ಸೆಳೆಯುತ್ತಿತ್ತು. ಪ್ರತಿ** ದಿನ ಬೆಳಗ್ಗೆಯೂ ಬಿಡಾರದ ಮುಂಬಯಲಿನಲ್ಲಿ, ಸಮ್ಮೇಳನಾಧ್ಯಕ್ಷರ ಸಮ್ಮುಖದಲ್ಲಿ ಪ್ರತಿನಿಧಿಗಳೂ ನಗರದ ಕನ್ನಡ **ಅಭಿಮಾನಿಗಳೂ** ನೆರೆದು, ಒಕ್ಕೊರಲಿನಿಂದ "ಏರಿಸಿ ಹಾರಿಸಿ ಕನ್ನಡದ **ಬಾವುಟ" ಎಂದು ಹಾಡಿ, ಬಾವುಟಕ್ಕೆ ವಂದನೆ ಮಾಡಿ, ಸಮ್ಮೇಳನ ಮಂಟಪಕ್ಕೆ** ತೆರಳುತ್ತಿದ್ದರು. ಇನ್ನು ಮುಂದೆ, ಈ ಕನ್ನಡ **ಬಾವುಟದ ವಂದನೆ** ಸಮ್ಮೇಳನದ—ಅಷ್ಟೇಕೆ, ಎಲ್ಲ ಕನ್ನಡ ಉತ್ಸವಗಳ—ಮೊದಲ ಮಂಗಳಕಾರ್ಯವಾಗಿ ನಡೆಯುವುದೆಂದು ನಂಬಬಹುದಾಗಿದೆ.

ಮೂರನೆಯ ವೈಶಿಷ್ಟ್ಯವೆಂದರೆ, ಬೆಳಗಾಂವಿಯ ಜನರ ಕೂಟ, ಅವರ ಅತ್ಯುತ್ಸಾಹ. ಹಿಂದಿನ ಯಾವ ಸಮ್ಮೇಳನದಲ್ಲೂ ಇಷ್ಟು ಜನ ನೆರೆದಿರಲಿಲ್ಲ, ಉತ್ಸಾಹ ಇಷ್ಟು ಮಿಕ್ಕಿರಲಿಲ್ಲ ಎನ್ನಬಹುದು. ಇದರ ಪರಿಣಾಮವಾಗಿ, ಸಾಮಾನ್ಯವಾಗಿ ಎಲ್ಲ ಕಾರ್ಯಕ್ರಮಗಳೂ ದೀರ್ಘವಾಗಿ, ಮುಂದುವರಿದುವು. ಭಾಷಣವಾಗಲಿ, ಕಾವ್ಯವಾಚನವಾಗಲಿ, ಸಂಗೀತವಾಗಲಿ,—ಯಾವುದನ್ನು ಎಷ್ಟು ಕೇಳಿದರೂ ಜನಕ್ಕೆ ತಣಿವಿಲ್ಲ, ದಣಿವಿಲ್ಲ. ಹೀಗೆ, ಮೂರುದಿನ ನಡೆಯಬೇಕಾಗಿದ್ದ ಸಮ್ಮೇಳನ ನಾಲ್ಕು ದಿನ ನಡೆಯಿತು. ಪ್ರತಿದಿನವೂ ಸಭೆಯಲ್ಲಿ **ಸಾವಿರಾರು ಮಂದಿ ನೆರೆಯುತ್ತಿದ್ದರು.**

### ಮೆರವಣಿಗೆ

೨೬ನೆಯ ತಾ|| ಸಾಯಂಕಾಲ ಸಮ್ಮೇಳನಾಧ್ಯಕ್ಷರಾದ ಶ್ರೀ ಮುದವೀಡು ಕೃಷ್ಣರಾಯರು, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು, ಹಿಂದಿನ ಸಮ್ಮೇಳನಾಧ್ಯಕ್ಷರಾದ ಶ್ರೀ ರಂ. ರಾ. ದಿವಾಕರರವರು, ಮುಂತಾಗಿ ಅನೇಕ ಮಂದಿ ಪ್ರಮುಖರೊಡನೆ ಬೆಳಗಾಂವಿಗೆ ದಯಮಾಡಿಸಿದರು. ಅವರು ರೈಲು ಬಿಟ್ಟು, ಇಳಿದೊಡನೆಯೆ, ಜಯಜಯಕಾರದ ಉದ್ಘೋಷ ಮೊಳಗುತ್ತಿರಲು, ಸಾಹಿತ್ಯ ಪರಿಷತ್ತಿನ ಪರವಾಗಿಯೂ, ಸ್ವಾಗತ ಸಮಿತಿಯ ಪರವಾಗಿಯೂ, ಬೆಳಗಾಂವಿಯ ಅನೇಕ ಸಂಘಸಂಸ್ಥೆಗಳ ಪರವಾಗಿಯೂ ಹೂಮಾಲೆಗಳು ಅವರ ಕೊರಳನ್ನು ಅಲಂಕರಿಸಿದುವು. ಆಮೇಲೆ ಅಧ್ಯಕ್ಷರನ್ನು ತಳಿರು ತೋರಣಗಳಿಂದ ಅಲಂಕೃತವಾದ ಮೋಟಾರಿನಲ್ಲಿ ಕೂರಿಸಿ ನಗರದ ಮುಖ್ಯಮುಖ್ಯ ಬೀದಿಗಳಲ್ಲಿ ಮೆರವಣಿಗೆ ಮಾಡಲಾಯಿತು. ರೈಲ್ವೆ ಸ್ಟೇಷನ್ನಿನಿಂದ ೫|| **ಘಂಟೆಗೆ ಬಿಟ್ಟ** ಮೆರವಣಿಗೆ ಅಧ್ಯಕ್ಷರ ಮತ್ತು ಪ್ರತಿನಿಧಿಗಳ ಬಿಡಾರವಾಗಿದ್ದ ಲಿಂಗರಾಜ ಕಾಲೇಜಿನ ಕಟ್ಟಡದ ಬಳಿ ೭|| ಘಂಟೆಗೆ ಮುಗಿಯಿತು.

## ಪ್ರಾರಂಭೋತ್ಸವ

೨೫ನೆಯ ತಾ|| ಸೋಮವಾರ ಬೆಳಗ್ಗೆ ೯ ಘಂಟೆಗೆ ಶಾಲಿಮಾರ್ ವಾಕ್‌ಚಿತ್ರ ಮಂದಿರದಲ್ಲಿ ಸಮ್ಮೇಳನ ಮಹೋತ್ಸವ ಪ್ರಾರಂಭ ವಾಯಿತು.

ಬಾಲಕಿಯರು, "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಗೀತವನ್ನು ಹಾಡಿದ ಮೇಲೆ, ತರುಣಿಯರು ಎಲ್ಲರಿಗೂ ಸ್ವಾಗತ ಬಯಸುವ ಹಾಡು ಹಾಡಿದರು. ಅನಂತರ, ವಂಟಮುರಿಯ ಶ್ರೀಮಂತ ಬಸವಪ್ರಭು ರಾಜಾ ಲಖಮನಗೌಡರು ಅಭಿಮಾನಪೂರಿತ ವಾದ ಭಾಷಣಮಾಡಿ ಸಮಾರಂಭವನ್ನು ಉದ್ಘಾಟನ ಮಾಡಿದರು. (ಇವರ ಭಾಷಣವನ್ನು ಕಳೆದ ಸಂಚಿಕೆಯಲ್ಲಿ ಕೊಟ್ಟಿದೆ.) ಆಮೇಲೆ ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀಮಾನ್ ಮಲ್ಲೇಶಪ್ರಭು ವಾಲಿ ಯವರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣ ಮಾಡಿದರು. (ಸ್ವಾಗತ ಭಾಷಣವನ್ನು ಹಿಂದಿನ ಸಂಚಿಕೆಯಲ್ಲಿ ಕೊಟ್ಟಿದೆ.)

ಬಳಿಕ ಅಧ್ಯಕ್ಷರ ಆಯ್ಕೆಯ ಕೆಲಸ ಪ್ರಾರಂಭವಾಯಿತು. ಬೇರೆ ಬೇರೆ ಪ್ರಾಂತಗಳ ಪರವಾಗಿ ಮಾತಾಡಿದ ಮಹನೀಯರೆಲ್ಲರೂ ಶ್ರೀ ಮುದವೀಡುರವರ ಗುಣವಿಶೇಷಗಳನ್ನು ಕೊಂಡಾಡಿ, ಅವರನ್ನು ಅಧ್ಯಕ್ಷ ಪದವಿ ಸ್ವೀಕರಿಸುವಂತೆ ಬೇಡಿಕೊಂಡರು. ಮೈಸೂರು ಕರ್ನಾಟಕದ ಪರವಾಗಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ, ಉತ್ತರ ಕರ್ನಾಟಕದ ಪರವಾಗಿ ಶ್ರೀ ದ. ರಾ. ಬೇಂದ್ರೆಯವರೂ, ಹೈದರಾಬಾದು ಕರ್ನಾಟಕದ ಪರವಾಗಿ ಶ್ರೀ ವ್ಯಾಕರಣತೀರ್ಥ ಚಂದ್ರ ಶೇಖರಶಾಸ್ತ್ರಿಗಳೂ, ದಕ್ಷಿಣ ಕರ್ನಾಟಕದ ಪರವಾಗಿ ಶ್ರೀ ಕೆ. ಎಸ್. ಕಾರಂತರವರೂ ಅಧ್ಯಕ್ಷ ಸ್ಥಾನಕ್ಕೆ ಶ್ರೀ ಮುದವೀಡುರವರನ್ನು ಸೂಚಿಸಿ ಭಾಷಣಮಾಡಿದರು. ಬಳ್ಳಾರಿ ಜಿಲ್ಲೆಯ ಪರವಾಗಿ ಶ್ರೀ ಕೃಷ್ಣಮೂರ್ತಿ ಯವರೂ, ಸಾಂಗ್ಲಿಯ ಪರವಾಗಿ ಶ್ರೀ ಮಹಿಷಿ ಅಶ್ವತ್ಥರಾಯರೂ, ಸೊಲ್ಲಾಪುರದ ಪರವಾಗಿ ಶ್ರೀ ಬ್ಯಾರಿಸ್ಟರ್ ಸರದಾರರೂ, ಮಹಿಳೆಯರ ಪರವಾಗಿ ಶ್ರೀಮತಿ ಶಕುಂತಳಾಬಾಯಿ ಮತ್ತು ಶ್ರೀಮತಿ ಪದ್ಮಾವತಿ ದೇವಿ ಇವರುಗಳೂ ಮೇಲ್ಕಂಡ ಸೂಚನೆಯನ್ನು ಅನುಮೋದಿಸಿ ಮಾತಾಡಿದರು.

ಬಳಿಕ ಹಿಂದಿನ ಸಮ್ಮೇಳನದ ಅಧ್ಯಕ್ಷರಾದ ಶ್ರೀ ರಂ. ರಾ. ದಿವಾಕರರೆದ್ದು—"ಶ್ರೀ ಮುದವೀಡು ಕೃಷ್ಣರಾಯರ ಸೂಚನೆಯ ಮೇರೆಗೆ ಒಂದು ಹೊಸ ಪದ್ಧತಿ ಈ ಸಲ ಉಪಕ್ರಮವಾಗಿದೆ. ಅದೇ ನೆಂದರೆ, ನಿವೃತ್ತ ಅಧ್ಯಕ್ಷರು ಹೊಸ ಅಧ್ಯಕ್ಷರಿಗೆ ಕಾಯಿ ಒಪ್ಪಿಸುವುದು, ಎಂದರೆ ತಮ್ಮ ಅಧ್ಯಕ್ಷ ಪದವಿಯನ್ನು ಹೊಸ ಅಧ್ಯಕ್ಷರಿಗೆ ವಹಿಸು ವುದು. ಆ ಕೆಲಸ ನನ್ನ ಪಾಲಿಗೆ ಬಂದಿರುವುದು ನನಗೆ ಅತ್ಯಂತ ಸಂತೋಷ" ಎಂದು ಹೇಳಿ ಅಧ್ಯಕ್ಷಮಾಲೆಯನ್ನು ಹಾಕಿದರು.

ಬಳಿಕ ಅಧ್ಯಕ್ಷರಾದ ಶ್ರೀ ಮುದವೀಡು ಕೃಷ್ಣರಾಯರು ಎದ್ದು, ತಮ್ಮನ್ನು ಅಧ್ಯಕ್ಷರಾಗಿ ಆರಿಸಿದ್ದಕ್ಕೆ ಎಲ್ಲರಿಗೂ ತಮ್ಮ ಕೃತಜ್ಞತೆ ಯನ್ನು ಸಲ್ಲಿಸಿ, ಈ ಅಧ್ಯಕ್ಷಸ್ಥಾನ ತಮಗೆ ದೊರೆತಿರುವುದರಿಂದ ಕನ್ನಡಿಗ ರೆಲ್ಲರ ಅಂತಃಕರಣದಲ್ಲಿ ತಮಗೆ ಯಾವ ಸ್ಥಾನವಿದೆ ಎಂಬುದು ಗೊತ್ತಾಗುತ್ತದೆಯೆಂದು ತಮ್ಮ ಭಾಷಣದ ಪೀಠಿಕೆಯಾಗಿ ಕೆಲವು ಮಾತುಗಳನ್ನು ಹೇಳಿದರು.

ಅನಂತರ ಸ್ವಾಗತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ವಿ. ಪಿ. ಕಿತ್ತೂರ ಅವರು ಸಮ್ಮೇಳನಕ್ಕೆ ಯಶಸ್ಸು ಕೋರಿ ಬರೆದು ಬಂದಿದ್ದ ಕೆಲವು ಸಂದೇಶಗಳನ್ನು ಓದಿ ತಿಳಿಸಿದರು. ಸಂದೇಶಗಳನ್ನು ಕಳಿಸಿದವರು:

೧. ಮೈಸೂರಿನ ಶ್ರೀಮದ್ಯುವರಾಜ ಕುಮಾರರಾದ ಶ್ರೀ ಜಯ ಚಾಮರಾಜ ಒಡೆಯರವರು.

೨. ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮೈಲ್ ಅವರು.

೩. ಸೊಂಡೂರು ಸಂಸ್ಥಾನದ ಮಹಾರಾಜರವರಾದ ಶ್ರೀಮಂತ ಅಪ್ಪಾಸಾಹೇಬ್ ರಾಜಾ ಘೋರ್ಪಡೆ ಅವರು.

೪. ಮೈಸೂರಿನ ಪ್ರಥಮ ಸಚಿವರಾದ ರಾಜಮಂತ್ರಪ್ರವೀಣ ಶ್ರೀ ಎನ್. ಮಾಧವರಾಯರು.

೫. ಮೈಸೂರು ವಿದ್ಯಾಭ್ಯಾಸದ ಡೈರೆಕ್ಟರವರಾದ ಶ್ರೀ ಇ. ಜಿ. ಮೆಕಾಲ್ಪೈನ್ ಅವರು.

೬. ಮೈಸೂರು ಹೈಕೋರ್ಟಿನ ನಿವೃತ್ತ ಮುಖ್ಯ ನ್ಯಾಯಾಧೀಶ ರಾದ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಶ್ರೀ ಪಿ. ಮಹ ದೇವಯ್ಯನವರು.

೭. ಮೈಸೂರಿನ ನಿವೃತ್ತ ಪ್ರಥಮ ಸಚಿವರಾದ ರಾಜಮಂತ್ರ ಪ್ರವೀಣ ದಿವಾನ್ ಬಹದೂರ್ ಶ್ರೀ ಪೂರ್ಣ ರಾಘವೇಂದ್ರರಾಯರು.

೮. ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರವರಾದ ರಾಜಕಾರ್ಯಪ್ರವೀಣ ಶ್ರೀ ಎನ್. ಎಸ್. ಸುಬ್ಬರಾವ್, ಎಂ.ಎ., ಬಾರ್-ಅಟ್-ಲಾ ಅವರು.

೯. ಶ್ರೀಮಾನ್ ನಿಡುಮಾಮಿಡಿ ಚೆನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರು.

೧೦. ಬೊಂಬಾಯಿ ಹೈ ಕೋರ್ಟಿನ ನ್ಯಾಯಾಧೀಶರಾದ ಶ್ರೀಮಾನ್ ಲೋಕೂರ್‌ರವರು ಮತ್ತು ಶ್ರೀಮತಿ ಲೋಕೂರ್‌ರವರು.

೧೧. ಧಾರವಾಡದ ಎಜುಕೇಷನಲ್ ಇನ್‌ಸ್ಪೆಕ್ಟರವರಾದ ಶ್ರೀ ಎಸ್. ಆರ್. ತಾವ್ದೆ ಅವರು.

೧೨. ಬಾಗಲಕೋಟೆಯ ಶ್ರೀ ಹನುಮಂತರಾವ್ ಕೌಜಲಗಿ ಯವರು.

೧೩. ಧಾರವಾಡದ ಶ್ರೀ ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. ಅವರು.

೧೪. ಬಿಜಾಪುರದ ಶ್ರೀ ಗೋವಿಂದರಾಮಾಚಾರ್ಯರವರು.

೧೫. ಮೈಸೂರಿನ ರಿಟೈರ್ಡ್ ರೆವಿನ್ಯೂ ಕಮಿಷನರವರಾದ ರಾಜಸೇವಾಸಕ್ತ ಎಸ್. ಹಿರಿಯಣ್ಣಯ್ಯನವರು.

೧೬. ಹಾವೇರಿಯ ಸಬ್-ಜಡ್ಜ್‌ರವರಾದ ಎಸ್. ಎಸ್. ತಕ್ಳೂರ್‌ರವರು.

೧೭. ಡಾ|| ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್. ಅವರು.

೧೮. ಪ್ರೊ|| ಕೆ. ಜಿ. ಕುಂದಣಗಾರರವರು.

೧೯. ರಾಜಸೇವಾಪ್ರಸಕ್ತ ಶ್ರೀ ಎ. ವಿ. ರಾಮನಾಥನ್ ಅವರು.

೨೦. ನಿಜಾಂ ಕರ್ನಾಟಕ ಪರಿಷತ್ತಿನ ಶ್ರೀ ಚಿಮ್ಮಲಗಿಯವರು.

೨೧. ಬಿಜಾಪುರದ ಸ್ವಾಮಿರಾಯರು.

೨೨. ಕಲ್ಕತ್ತಾ ಕನ್ನಡ ಸಂಘದ ಶ್ರೀ ನಾರಾಯಣಸ್ವಾಮಿ ಅಯ್ಯರವರು.

೨೩. ಹುಬ್ಬಳ್ಳಿಯ ವಿಶ್ವಬ್ರಾಹ್ಮಣ ತರುಣ ಸಂಘದವರು.

೨೪. ಹುಬ್ಬಳ್ಳಿಯ ಶ್ರೀ ಮಹಾವೀರ ಜೈನ ತರುಣ ಸೇವಾ ಸಂಘ ಮತ್ತು ಮಹಾವೀರ ವಾಚನಾಲಯದವರು.

೨೫. ಶ್ರೀ ಅಂದಾನಪ್ಪ ದೊಡ್ಡಮೇಟಿ ಅವರು.

೨೬. ಶ್ರೀ ಎಚ್. ಕೆ. ವೀರಬಸವಯ್ಯನವರು.

ಈ ಸಂದರ್ಭದಲ್ಲಿ ಒಂದು ವಿಶೇಷ ಸಂಗತಿಯನ್ನು ತಿಳಿಸಬೇಕಾ ಗಿದೆ. ಅದೇನೆಂದರೆ, ಶ್ರೀ ಕೌಜಲಗಿ ಹನುಮಂತರಾಯರು "ಸಮ್ಮೇ ಳನಕ್ಕೆ ಜಯವಾಗಲಿ" ಎಂಬ ಸಂದೇಶವನ್ನು ಕನ್ನಡ ನುಡಿಯಲ್ಲೇ ತಂತಿ ಕಳಿಸಿದ್ದರು

ತರುವಾಯ, ಶ್ರೀ ಮುದವೀಡು ಕೃಷ್ಣರಾಯರು ಅಧ್ಯಕ್ಷಭಾಷಣ ವನ್ನು ಅಸ್ಖಲಿತವಾದ ವೀರವಾಣಿಯಿಂದ ಅಪ್ಪಣೆ ಕೊಡಿಸಿದರು. (ಅಧ್ಯಕ್ಷ ಭಾಷಣವನ್ನು ಹಿಂದಿನ ಸಂಚಿಕೆಯಲ್ಲಿ ಕೊಟ್ಟಿದೆ). ಮತ್ತು ಎಲ್ಲರ ಪರವಾಗಿ ಮೈಸೂರಿನ ಶ್ರೀಮನ್ಮಹಾರಾಜರವರ ಮತ್ತು ಶ್ರೀಮದ್ಯುವರಾಜರವರ ಸನ್ನಿಧಿಯಲ್ಲಿ ಭಕ್ತಿ ವಿಶ್ವಾಸಗಳನ್ನು ಸಮರ್ಪಿ ಸಿದರು. ಇದನ್ನು ಸಭೆ ಹರ್ಷಧ್ವನಿಯಿಂದಲೂ ಚಪ್ಪಾಳೆಯಿಂದಲೂ ಅನುಮೋದಿಸಿತು.

ಬಳಿಕ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಸಮ್ಮೇಳನಕ್ಕೆ ಮೂರನೆಯ ಸಲ ಆಹ್ವಾನ ಕೊಟ್ಟು ಉಪಕಾರ ಮಾಡಿರುವುದಕ್ಕಾಗಿ ಪರಿಷತ್ತಿನ ಪರವಾಗಿ ವಂದನೆಗಳನ್ನು ಸಮರ್ಪಿಸಿ, ಪರಿಷತ್ತು ಮಾಡಿರುವ, ಮಾಡುತ್ತಿರುವ ಮತ್ತು ಮಾಡಬೇಕೆಂದು ಉದ್ದೇಶಿಸಿರುವ ಕಾರ್ಯಗಳನ್ನು ಕುರಿತು ಈ ರೀತಿ ವಿಜ್ಞಾಪಿಸಿಕೊಂಡರು:

"ಈಗ ಪರಿಷತ್ತಿನ ಕೆಲಸದಲ್ಲಿ ನಿರತರಾಗಿರುವ ನಾವುಗಳು ಕೈಲಾದಷ್ಟು ಮಟ್ಟಿಗೆ ಕನ್ನಡತಾಯಿ ನಿತ್ಯಾರಾಧನೆಯನ್ನು ಮಾಡುತ್ತಿದ್ದೇವೆ. ಇದನ್ನು ಹಳಿಯಬಲ್ಲ ಯುಕ್ತಿಶಾಲಿಗಳು-ಹೆಚ್ಚಿನ ಕೆಲಸ ಮಾಡಲು ಮುಂದೆ ಬರುವುದಾದರೆ ಈ ಕೆಲಸವನ್ನು ಅವರಿಗೆ ವಹಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಪರಿಷತ್ತಿನಲ್ಲಿ ನಡೆದಿರುವ ಕೆಲಸವೇನು, ನಡೆಯಲು ಏನು ಕಷ್ಟನಿಷ್ಟುರಗಳಿವೆ ಎಂಬುದನ್ನು ಸ್ವಲ್ಪ ಮಟ್ಟಿಗೆ ಸೂಚಿಸುತ್ತೇನೆ. ಈಗ ತಾನೆ ತಾವೆಲ್ಲ ಅಧ್ಯಕ್ಷರೊಡನೆ ಮೈಸೂರಿನ ಶ್ರೀಮನ್ಮಹಾರಾಜರವರಲ್ಲಿಯೂ ಮತ್ತು ಶ್ರೀಮದ್ಯುವರಾಜರವರಲ್ಲಿಯೂ ನಮ್ಮ ಗಾಢವಾದ ಭಕ್ತಿ ವಿಶ್ವಾಸಗಳನ್ನು ಪ್ರದರ್ಶಿಸಿದ್ದೀರಿ. ಶ್ರೀಮದ್ಯುವರಾಜರವರ ಕುಮಾರರಾದ ಶ್ರೀ ಜಯಚಾಮರಾಜ ಒಡೆಯರವರು ಮೈಸೂರಿನ ಮುಂದಿನ ಮಹಾರಾಜರವರು; ಮುಂದಿನ ಸ್ವತಂತ್ರ ಭಾರತದಲ್ಲಿ ಕಂಗೊಳಿಸುವ ಪ್ರಜಾಪ್ರಭುತ್ವದ ಸ್ವತಂತ್ರ ಕರ್ನಾಟಕದ ನಾಯಕರಾಗುವವರು. ಅವರು ಪರಿಷತ್ತಿನ ಈ ವರ್ಷದ ವಸಂತ ಸಾಹಿತ್ಯೋತ್ಸವವನ್ನು ಪ್ರಾರಂಭಗೊಳಿಸುತ್ತಾ ಕನ್ನಡ ನಾಡಿನ ಏಳಿಗೆಯ ವಿಷಯದಲ್ಲಿ ಅಪಾರ ಮಮತೆ ಆಸಕ್ತಿಗಳನ್ನು ವ್ಯಕ್ತಪಡಿಸಿ ಮುತ್ತಿನಂಥ ಮಾತುಗಳನ್ನು ಆಡಿದ್ದಾರೆ. ಅವನ್ನು ಯಾರೂ ಮರೆತಿರಲಾರರು.

ಕನ್ನಡ ನುಡಿ ಒಂದಾಗಬೇಕು; ನಾಡು ಮುಂದಾಗಬೇಕು; ಕನ್ನಡ ನುಡಿಯಿಲ್ಲದೆ ಕನ್ನಡ ನಾಡಿಲ್ಲ; ನಾಡಿಲ್ಲದೆ ನುಡಿಯಿಲ್ಲ. ಆದ್ದರಿಂದ ಕನ್ನಡ ಬಾವುಟ ನಾಡಿನಲ್ಲೆಲ್ಲ ಹಾರಾಡಬೇಕು. ಈ ಕೆಲಸ ನಡೆಯಲು ಪರಿಷತ್ತು ಏನು ಮಾಡಿದೆ ಎಂಬುದು ತಮಗೆ ಗೊತ್ತೇ ಇದೆ. ಪರಿಷತ್ತಿನ ಕೆಲಸದ ವಿಚಾರ ಹೇಳುವಲ್ಲಿ ಕನ್ನಡ ನುಡಿಯ ಸೇವೆಗೆ ತೊಡಗಿದ ಮೊದಲ ಸಂಸ್ಥೆಯಾದ ಧಾರವಾಡದ ವಿದ್ಯಾವರ್ಧಕ ಸಂಘ ಮಾಡಿರುವ ಮತ್ತು ಮಾಡುತ್ತಿರುವ ಅಮೌಲ್ಯವಾದ ಸೇವೆಯನ್ನು ಮರೆಯುವಂತಿಲ್ಲ. ಎರಡೂ ಅಖಿಲ ಕರ್ನಾಟಕ ಸಂಸ್ಥೆಗಳು. ಧಾರವಾಡದವರೂ ಬೆಂಗಳೂರಿನವರೂ ಇಬ್ಬರೂ ಅಖಿಲ ಕರ್ನಾಟಕದವರು. ಕನ್ನಡ ನುಡಿಯ ಸೇವೆಯಲ್ಲಿ ಎಲ್ಲರೂ ಅಣ್ಣತಮ್ಮಂದಿರಂತಿದ್ದು ಭೇದಭಾವಗಳನ್ನು ಬಿಟ್ಟು, ನಡುವೆ ಯಾವ ಅಸಮಾಧಾನಗಳು ಬಂದರೂ ಸಮಾಧಾನದಿಂದ ಸರಿಪಡಿಸಿಕೊಳ್ಳಬೇಕು.

ಪರಿಷತ್ತಿನ ಬಲಾಬಲಗಳು ತಮ್ಮ ಮನಸ್ಸಿನಲ್ಲಿ ಇಳಿಯಬೇಕು. ಪರಿಷತ್ತಿನ ಸದಸ್ಯ ಸಂಪತ್ತು ೫೫೦ ಮಾತ್ರ. ಒಂದೂವರೆ ಕೋಟಿ ಜನಸಂಖ್ಯೆಯಲ್ಲಿ ಮೇಲಿನ ಸಂಖ್ಯೆ ತೀರ ಅಲ್ಪ. ಇದರಲ್ಲಿಯೂ ಅರ್ಧ ಭಾಗದವರು ಚಂದಾ ಹಣ ಬಾಕಿ ಇರಿಸಿಕೊಂಡಿದ್ದಾರೆ. ಉಳಿದವರಲ್ಲಿ ಸಮ್ಮೇಳನಕ್ಕೆ ಬಂದು ಇಲ್ಲಿನ ಕಾರ್ಯಕಲಾಪಗಳಲ್ಲಿ ಭಾಗ ವಹಿಸುವವರು ೫೦-೬೦ ಮಂದಿ ಮಾತ್ರವೆಂದರೆ ಎಷ್ಟು ಉತ್ತೇಜನಕರವೆಂಬುದನ್ನು ತಾವುಗಳೇ ಯೋಚಿಸಬಹುದು. ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರದವರು ಕೃಪೆಮಾಡಿ ಕೊಡುತ್ತಿರುವ ಸಹಾಯದ್ರವ್ಯದಿಂದ ಪರಿಷತ್ತಿನ ನಿತ್ಯಾರಾಧನೆ ನಡೆಯುತ್ತಿದೆ. ಸಹಾಯ ದ್ರವ್ಯ ಹೆಚ್ಚಿಸಬೇಕೆಂದು ಪರಿಷತ್ತು ಸರ್ಕಾರದವರನ್ನು ಪ್ರಾರ್ಥಿಸುತ್ತಲೇ ಇದೆ. ಅದು ಎಂತಿದ್ದರೂ ಪರಿಷತ್ತಿಗೆ ಜನರಿಂದ ಬೆಂಬಲ ಬರಬೇಕು. ಅದು ಇನ್ನೂ ಸಾಕಷ್ಟು ಬಂದಿಲ್ಲ.

ಶ್ರೀ. ದಿವಾಕರರು ಅಧ್ಯಕ್ಷರ ವಿಷಯವೆತ್ತಿ, ಅವರು ಮೂರು ದಿವಸಗಳ ಉತ್ಸವಮೂರ್ತಿ ಮಾತ್ರವಾಗಿದ್ದಾರೆಂದೂ ಪರಿಷತ್ತಿನ ಘಟನೆಯಲ್ಲಿ ಇನ್ನು ಮುಂದಾದರೂ ಅವರಿಗೆ ಸ್ಥಾನ ದೊರೆಯಬೇಕೆಂದೂ ಹೇಳಿದರು. ಹಾಗೆ ಅಧ್ಯಕ್ಷರಿಗೆ ಸ್ಥಾನವಿಲ್ಲದಿರುವುದು ಯಾವೊಬ್ಬ ವ್ಯಕ್ತಿಯ ತಪ್ಪೂ ಅಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ, ಅಧ್ಯಕ್ಷರಿಗೆ ನಾನು ಒಂದು ಪೂಜ್ಯಸ್ಥಾನವನ್ನು ಕೊಟ್ಟಿದ್ದೇನೆಂದು ಧೈರ್ಯವಾಗಿ ಹೇಳುತ್ತೇನೆ. ಅನೇಕ ಸಂದರ್ಭಗಳಲ್ಲಿ ನಾನು ಶ್ರೀ. ದಿವಾಕರರ ಸಲಹೆ ಸಹಾಯಗಳನ್ನು ಪಡೆದಿದ್ದೇನೆ; ಪತ್ರವ್ಯವಹಾರ ನಡಸಿದ್ದೇನೆ. ಪರಿಷತ್ತಿಗೆ ಅವರಿಂದ ವಿಶೇಷ ಉಪಕಾರವಾಗಿದೆ. ಕಬ್ಬಿಣದ ಕಟ್ಟನ ಘಟನೆಯು ಹಾಗಿರಲಿ; ಹೃದಯಗಳ ಘಟನೆ ಏನೋ ಆಗಿದೆಯೆಂದು ಧೈರ್ಯವಾಗಿ ಹೇಳುತ್ತೇನೆ.

ಪರಿಷತ್ತಿನ ಘಟನೆಯಲ್ಲಿ ಈ ಸಲ ಕೆಲವು ಬದಲಾವಣೆಗಳು ಆಗುವುದಿದೆ. ಅಧ್ಯಕ್ಷರ ಸ್ಥಾನದ ವಿಚಾರವೂ ಪರ್ಯಾಲೋಚನೆಗೆ ಬರಲಿದೆ. ಎಲ್ಲರೂ ಒಮ್ಮನಸ್ಸಿನಿಂದ ಕಲೆತು ಪರಿಷತ್ತಿಗೆ ತಕ್ಕ ಘಟನೆ ದೊರೆಯಲಿ.

ಕನ್ನಡ ಪರಿಷತ್ತು ಹಬ್ಬ ಉತ್ಸವಗಳನ್ನು ನಡಸುತ್ತಿದೆ. ಸಂಘ ಸಂಸ್ಥೆಗಳನ್ನು ಒಂದುಗೂಡಿಸುವ ಪ್ರಯತ್ನದಲ್ಲಿದೆ. ಕನ್ನಡ ನಾಡಿನ ಚರಿತ್ರೆಯನ್ನು ಬರಸುತ್ತಿದೆ. ಸಾಹಿತ್ಯ ಪರೀಕ್ಷೆಗಳ ಏರ್ಪಾಟನ್ನು ಕೈಗೊಂಡು ಕೆಲಸ ಪ್ರಾರಂಭಿಸಿದೆ. ಸಾಕ್ಷರತೆಯನ್ನು ಹರಡಬೇಕೆಂದಿದೆ. ಪರಿಷತ್ತಿಗೆ ಹೆಚ್ಚುಹೆಚ್ಚಾಗಿ ಮಹಿಳೆಯರು ಸೇರಿ ಕೆಲಸ ಮಾಡಬೇಕೆಂಬ ಉದ್ದೇಶದಿಂದ ಮಹಿಳಾಶಾಖೆಯನ್ನು ಏರ್ಪಡಿಸಿದೆ. ಈ ಶಾಖೆಯ ಏರ್ಪಾಟನ್ನೂ ಕಾರ್ಯಕಲಾಪಗಳನ್ನೂ ಕುರಿತು ಒಂದು ಕಡೆ ಕಟುವಾದ ಟೀಕೆ ಬಂದಿತ್ತು. ಈ ಟೀಕೆ ನಿರಾಧಾರವಾದದ್ದೆಂದು ನಾನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಎಲ್ಲ ಕೆಲಸಗಳಲ್ಲೂ ಪ್ರಾಂತ ಸಮಿತಿಗಳು ತಕ್ಕ ಮಟ್ಟಿಗೆ ನೆರವಾಗಿವೆ. ಅವು ಇನ್ನೂ ಹೆಚ್ಚಾಗಿ ನೆರವಾಗಿ ಅವುಗಳ ಕೆಲಸದಿಂದಲೇ, ಪರಿಷತ್ತಿನ ಕೆಲಸ ಇಮ್ಮಡಿಯಾಗಲಿ, ಕನ್ನಡ ಬಾವುಟ ಎಲ್ಲೆಲ್ಲೂ ಹಾರಾಡುವಂತಾಗಲಿ ಎಂಬುವೇ ಪರಿಷತ್ತಿನ ಬಯಕೆ.

ಬರುವ ವರ್ಷ ರಜತೋತ್ಸವ ನಡೆಯಬೇಕಾಗಿದೆ. ನಮ್ಮ ಮೈಸೂರು ಸಂಸ್ಥಾನದ ಪ್ರಭುಗಳಾದ ಶ್ರೀಮನ್ಮಹಾರಾಜರವರೇ ಅದನ್ನು ಪ್ರಾರಂಭಗೊಳಿಸಬೇಕೆಂದು ಎಲ್ಲರ ಮನಸ್ಸಿನಲ್ಲೂ ಇದೆ. ಕನ್ನಡ ಜನತೆಯ ಇಷ್ಟಾರ್ಥ ನೆರವೇರಲೆಂದು ಹಾರೈಸುತ್ತೇನೆ.

ಪರಿಷತ್ತು ನಿಮ್ಮದು, ಎಲ್ಲ ಕನ್ನಡಿಗರದು. ಅರಮನೆ ಗುರುಮನೆಗಳ ಆಶ್ರಯದಲ್ಲಿ, ಜನತೆಯ ಬೆಂಬಲದಲ್ಲಿ, ಅದು ಮುಂದುವರಿಯುತ್ತ ನಾಡ ನುಡಿಯ ಸೇವೆ ಮಾಡುವಂತೆ ಸಹಾಯಮಾಡಿ ಎಂದು ಪರಿಷತ್ತಿನ ಪರವಾಗಿ ಬೇಡುತ್ತೇನೆ."

ಉಪಾಧ್ಯಕ್ಷರ ಭಾಷಣವಾದಮೇಲೆ, ನಿಯಮಾನುಸಾರ ವಿಷಯ ನಿರ್ಧಾರಕ ಸಮಿತಿ ಏರ್ಪಾಟಾಯಿತು.

**ವಿಷಯ ನಿರ್ಧಾರಕ ಮಂಡಲಿಯ ಸದಸ್ಯರು**

(೧) ಸಮ್ಮೇಳನಕ್ಕೆ ಬಂದಿದ್ದ ಪರಿಷತ್ತಿನ ಕಾರ್ಯಸಮಿತಿಯ ಎಲ್ಲ ಸದಸ್ಯರು:

ಶ್ರೀಗಳಾದ—೧. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು; ೨. ವಿ. ಸೀತಾರಾಮಯ್ಯನವರು; ೩. ಎ. ಆರ್. ಕೃಷ್ಣಶಾಸ್ತ್ರಿಗಳು; ೪. ಎಸ್. ಎಸ್. ಮಾಳವಾಡರು; ೫. ದ. ರಾ. ಬೇಂದ್ರೆಯವರು; ೬. ಆರ್. ಬಿ. ಪೋತ್‌ದಾರರು; ೭. ರಂ. ಶ್ರೀ. ಮುಗಳಿಯವರು; ೮. ಕೆ. ಎಸ್. ಕಾರಂತರವರು.

(೨) ಸಮ್ಮೇಳನದ ಅಧ್ಯಕ್ಷರು: ಶ್ರೀ ಮುಡವೀಡು ಕೃಷ್ಣರಾಯರು.

(೩) ಸಮ್ಮೇಳನಕ್ಕೆ ಬಂದಿದ್ದ ಹಿಂದಣ ಸಮ್ಮೇಳನಗಳ ಅಧ್ಯಕ್ಷರು:

೧. ಶ್ರೀ॥ ಆಲೂರು ವೆಂಕಟರಾಯರು; ೨. ರಾವ್‌ಸಾಹೆಬ್ ಪಿ. ಜಿ. ಹಳಕಟ್ಟಿಯವರು; ೩. ಮಾಸ್ತಿ ವೆಂಕಟೇಶಯ್ಯಂಗಾರ್ಯರು; ೪. ಆರ್. ಆರ್. ದಿವಾಕರರವರು.

(೪) ಸ್ವಾಗತ ಮಂಡಲಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು:

ಶ್ರೀಗಳಾದ ೧. ಎಂ. ಪಿ. ಪಾಟಿಲಯವರು; ೨. ಜೋಶಿ ನರಸಿಂಗರಾಯರು; ೩. ವಿ. ಪಿ. ಕಿತ್ತೂರ ಅವರು.

(೫) ಸ್ವಾಗತಮಂಡಲಿಯವರು ನಿಯಮಿಸಿದ ಐದು ಮಂದಿ ಸಭ್ಯರು:

ಶ್ರೀಗಳಾದ:—೧. ಎಸ್. ಜಿ. ಕಟ್ಟಿಯವರು; ೨. ಅರವಿಂದ ಜೋಶಿ ಅವರು; ೩. ಎಸ್. ವಿ. ಅಡ್ಡಣಗಿ; ೪. ಪ್ಯಾಟಿ ಶಾಮರಾಯರು; ೫. ಬಿ. ಜಿ. ಕುಲಕರಣಿಯವರು.

(೬) ಪರಿಷತ್ತಿನ ಉಪಾಧ್ಯಕ್ಷರು ನಿಯಮಿಸಿದ ಪರಿಷತ್ತಿನ ಇಬ್ಬರು ಸದಸ್ಯರು:

ಶ್ರೀಗಳಾದ:—೧. ಬಿ. ಶಿವಮೂರ್ತಿ ಶಾಸ್ತ್ರಿಯವರು; ೨. ಎನ್. ಆರ್. ಗಂಗಾವತಿಯವರು.

(೭) ಪ್ರತಿನಿಧಿಗಳು ಆರಿಸಿದ ಹತ್ತು ಮಂದಿ ಸದಸ್ಯರು:

ಶ್ರೀಗಳಾದ:—೧. ತಲ್ಲೂರ ಚೆನ್ನಪ್ಪನವರು; ೨. ಗಣೇಶಭಟ್ಟ ಸುಬ್ರಾಯಭಟ್ಟ ಪುರ್ಶಿಯವರು; ೩. ಮನೋಹರರಾವ್ ದೇಶಪಾಂಡೆಯವರು; ೪. ಬಸವನಾಳರವರು; ೫. ಶ್ರೀಮತಿ ಡಿ. ಚಂಪಾಬಾಯಿಯವರು; ೬. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು; ೭. ಡಿ. ಸಿ. ಸುಬ್ಬರಾಯಪ್ಪನವರು; ೮. ಪರಪ್ಪಾ ಸಂಗಪ್ಪಾ ಸಜ್ಜನ ಅವರು; ೯. ಭಟ್ಟರವರು; ೧೦. ಹರ್ಡೇಕರ ಮಂಜಪ್ಪನವರು

**ಗೋಷ್ಠಿಗಳು**

ಸಮ್ಮೇಳನದ ಅಂಗವಾಗಿ ಈ ಸಲ ನಾಲ್ಕು ಗೋಷ್ಠಿಗಳು ನಡೆದುವು: (೧) ಮಹಿಳಾ ಗೋಷ್ಠಿ, (೨) ವೃತ್ತಪತ್ರಿಕಾಕರ್ತರ ಗೋಷ್ಠಿ, (೩) ನಾಟಕ ಗೋಷ್ಠಿ ಮತ್ತು (೪) ಸಾಹಿತಿಗಳ ಗೋಷ್ಠಿ. ಅಲ್ಲದೆ, ಸಂಘಗಳ ಸಮ್ಮೇಳನವೂ ನಡೆಯಿತು.

**ಮಹಿಳಾ ಗೋಷ್ಠಿ:** ೨೯ನೆಯ ತಾರೀಖು ಅಪರಾಹ್ಣ ೩ ರಿಂದ ೬ರ ವರೆಗೆ ನಡೆಯಿತು. ಶ್ರೀಮತಿ ಪಂಚಾಕ್ಷರದೇವಿ ಸರದಾರ (ಸೊಲ್ಲಾಪುರ) ಅವರು ಈ ಗೋಷ್ಠಿಯ ಅಧ್ಯಕ್ಷರಾಗಿದ್ದರು. ಸ್ವಾಗತಾಧ್ಯಕ್ಷರಾದ ಶ್ರೀಮತಿ ಗೌರೀದೇವಿ ಇಂಚಲಮಠ ಅವರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣ ಮಾಡಿದಮೇಲೆ ಅಧ್ಯಕ್ಷರು ವಿಷಯಪೂರಿತವಾದ ಭಾಷಣ ಮಾಡಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಕನ್ನಡ ನಾಡಿನ ಏಕೀಕರಣ, ಆ ಪ್ರಯತ್ನದಲ್ಲಿ ಸ್ತ್ರೀಯರು ವಹಿಸಬೇಕಾದ ಭಾಗ, ಸ್ತ್ರೀಯರ ಸಾಮಾಜಿಕ ಸ್ವಾತಂತ್ರ್ಯ ಇವುಗಳ ವಿಚಾರವಾಗಿ ಪ್ರಸ್ತಾವಿಸಿ, ಎಲ್ಲ ಮಹಿಳೆಯರೂ ನಾಡ ನುಡಿಯ ಸೇವೆಗಾಗಿ ತನು ಮನ ಧನಗಳನ್ನು ಅರ್ಪಿಸಲು ಸಿದ್ಧರಾಗಿರಬೇಕೆಂದು ಕೋರಿದರು.

ಈ ಗೋಷ್ಠಿಯ ಸಂಬಂಧದಲ್ಲಿ, ಶ್ರೀಮತಿ ಶ್ಯಾಮಲಾದೇವಿಯವರೇ ಮುಂತಾದವರು ಪ್ರಬಂಧಗಳನ್ನು ಓದಿದರು. ಶ್ರೀಮತಿ ಶಕುಂತಳಾಬಾಯಿಯವರು ಕನ್ನಡ ದೇವರನಾಮಗಳನ್ನು ಸುಶ್ರಾವ್ಯವಾಗಿ ಹಾಡಿದರು. ಶ್ರೀಮತಿ ಗಿರಿಜಾದೇವಿಯವರು ಲಾವಣಿಯೊಂದನ್ನು ಹಾಡಿದರು. ಸಣ್ಣ ಮಕ್ಕಳು ಒಂದು ಸಣ್ಣ ಐತಿಹಾಸಿಕ ದೃಶ್ಯವನ್ನು ಅಭಿನಯಿಸಿ ತೋರಿಸಿದರು.

ಗೋಷ್ಠಿಯಲ್ಲಿ ೮ ಗೊತ್ತುವಳಿಗಳು ಅಂಗೀಕಾರವಾದುವು.

**ವೃತ್ತಪತ್ರಿಕಾ ಕರ್ತರ ಗೋಷ್ಠಿ :** ಇದು ೨೯ನೆಯ ತಾ॥ ಸಂಜೆ ೬ಕ್ಕೆ ಪ್ರಾರಂಭವಾಗಿ ೮-೩೦ರ ವರೆಗೆ ನಡೆಯಿತು. "ಸರಸ್ವತೀ" ಮಾಸಪತ್ರಿಕೆಯ ಸಂಪಾದಕಿಯವರಾದ ಬೆಂಗಳೂರಿನ ಶ್ರೀಮತಿ ಆರ್. ಕಲ್ಯಾಣಮ್ಮನವರು ಅಧ್ಯಕ್ಷರಾಗಿದ್ದರು. ಸ್ವಾಗತಾಧ್ಯಕ್ಷರಾದ ಡಾ॥ ಸವಣೂರ ಹನುಮಂತರಾಯರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣ ಮಾಡಿದ ಮೇಲೆ ಅಧ್ಯಕ್ಷರು ವಿಚಾರಪೂರಿತವಾದ ಭಾಷಣಮಾಡಿದರು. ಶ್ರೀ ಕಲ್ಯಾಣಮ್ಮನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಬೇರೆ ಬೇರೆ ದೇಶಗಳ ವೃತ್ತ ಪತ್ರಿಕೆಗಳ ರೀತಿ ನೀತಿಗಳನ್ನು ವಿವೇಚಿಸಿ, ನಮ್ಮ ದೇಶದಲ್ಲಿ ವೃತ್ತಪತ್ರಿಕೆಗಳಿಗಿರುವ ಸ್ಥಾನಮಾನಗಳನ್ನೂ ಅವುಗಳ ಕಷ್ಟನಿಷ್ಠುರಗಳನ್ನೂ ವಿಮರ್ಶಿಸಿ, ವೃತ್ತಪತ್ರಿಕೆಗಳ ಬೆಳವಣಿಗೆಗೆ ಉಪಯುಕ್ತವಾದ ಕೆಲವು ಸಲಹೆಗಳನ್ನು ಕೊಟ್ಟರು. ಈ ಅಧ್ಯಕ್ಷ ಭಾಷಣವಾದ ಮೇಲೆ ನಿರ್ಣಯಗಳು ಅಂಗೀಕಾರವಾದುವು.

**ಸಂಘಗಳ ಸಮ್ಮೇಳನ :** ಇದು ೨೭ನೆಯ ತಾರೀಖು ಬೆಳಗ್ಗೆ ೮-೩೦ರಿಂದ ೧೧ರ ವರೆಗೆ ನಡೆಯಿತು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಈ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಸ್ವಾಗತಾಧ್ಯಕ್ಷರಾದ ಶ್ರೀ ಎಸ್. ಎನ್. ಅಂಗಡಿಯವರು ಸ್ವಾಗತ ಬಯಸಿ ಭಾಷಣಮಾಡಿದ ಮೇಲೆ ಅಧ್ಯಕ್ಷರಾದ ಶ್ರೀ ಶ್ರೀಕಂಠಯ್ಯನವರು ತಮ್ಮ ಸ್ಫೂರ್ತಿಯುತವಾದ ಭಾಷಣದಲ್ಲಿ,—ಹಿಂದೆ ಶ್ರೀ ಬಸವೇಶ್ವರರೇ ಮೊದಲಾದ ಶಿವಶರಣರೂ, ದಾಸಕೂಟದವರೂ ಕನ್ನಡ ಕೂಟವನ್ನು ಕಟ್ಟಿದರು. ಇಂದು ನಾವು ಅಲ್ಲಲ್ಲಿ ಕನ್ನಡ ಸಂಘಗಳನ್ನು ಸ್ಥಾಪಿಸಿ, ಎಲ್ಲ ಸಂಘಗಳನ್ನೂ ಒಟ್ಟುಗೂಡಿಸಿ, ಕನ್ನಡ ಬಳಗವೊಂದನ್ನು ಕಟ್ಟಿ ಕನ್ನಡ ನಾಡ ನುಡಿಯ ಒಕ್ಕೂಟವನ್ನು ಸಾಧಿಸಬೇಕು—ಎಂದರು.

ತರುವಾಯ, ಎಲ್ಲ ಕನ್ನಡ ಸಂಘಗಳ ಕನ್ನಡ ಚಳವಳಿಯನ್ನು ಏಕಮುಖವಾಗಿ ನಡಸಿಕೊಂಡು ಹೋಗಲು ಪರಿಷತ್ತಿನ ನೇತೃತ್ವದಲ್ಲಿ ಒಂದು ಕೇಂದ್ರ ಸಂಸ್ಥೆಯನ್ನು ಸ್ಥಾಪಿಸುವ ವಿಚಾರವನ್ನು ಪರ್ಯಾಲೋಚಿಸಿ ವರದಿ ಮಾಡಲು ಒಂದು ಉಪಸಮಿತಿ ನೇಮಕವಾಯಿತು.

**ನಾಟಕ ಗೋಷ್ಠಿ :** ಈ ಗೋಷ್ಠಿ ೨೭ನೆಯ ತಾರೀಖು ಅಪರಾಹ್ನ ೩ರಿಂದ ೫ರ ವರೆಗೆ ನಡೆಯಿತು. ಸುಪ್ರಸಿದ್ಧ ನಾಟಕಕರ್ತರಾದ ಶ್ರೀ ಟಿ. ಪಿ. ಕೈಲಾಸಂ ಅವರು ಗೋಷ್ಠಿಯ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಗೋಷ್ಠಿಯ ಸ್ವಾಗತಾಧ್ಯಕ್ಷರಾದ ಶ್ರೀ ವಿ. ಜಿ. ಕುಲಕರ್ಣಿಯವರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣಮಾಡಿದ ಮೇಲೆ, ಗೋಷ್ಠಿಯ ಅಧ್ಯಕ್ಷರಾದ ಪ್ರೊ॥ ಆರ್. ವಿ. ಜಾಗೀರದಾರರವರು, ತಮ್ಮ ಸಹಜವಾದ ಹಾಸ್ಯಪೂರ್ಣ ಶೈಲಿಯಲ್ಲಿ ಭಾಷಣಮಾಡಿ ಸಭಿಕರನ್ನು ಆನಂದಗೊಳಿಸಿದರು. ತರುವಾಯ ಶ್ರೀಗಳಾದ ಮಾಸ್ತಿ ವೆಂಕಟೇಶ ಐಯಂಗಾರ್ಯರು, ವಿ. ಕೆ. ಗೋಕಾಕರು, ಕೆ. ಎಸ್. ಕಾರಂತರವರು, ಎಸ್. ಎಸ್. ಮಾಳವಾಡರು, ಮುದವೀಡು ಕೃಷ್ಣರಾಯರು, ಅ. ನ. ಕೃಷ್ಣರಾಯರು—ಇವರುಗಳು ನಾಟಕದ ಮತ್ತು ರಂಗಭೂಮಿಯ ವಿಚಾರವಾಗಿ ರಸಭರಿತವಾಗಿ ಭಾಷಣಮಾಡಿದರು.

**ಸಾಹಿತಿಗಳ ಗೋಷ್ಠಿ :** ಈ ಗೋಷ್ಠಿ ೨೮ನೆಯ ತಾರೀಖು ಬೆಳಗ್ಗೆ ೮-೩೦ರಿಂದ ೧೧ರ ವರೆಗೂ ಮತ್ತು ಅದೇ ಅಪರಾಹ್ನ ೩ರಿಂದ ೫ರ ವರೆಗೂ ನಡೆಯಿತು. ಗೋಷ್ಠಿಯ ಸ್ವಾಗತಾಧ್ಯಕ್ಷರಾದ ಶ್ರೀ ಕಟ್ಟಿ ಶೇಷಾಚಾರ್ಯರು ಎಲ್ಲರಿಗೂ ಸ್ವಾಗತಬಯಸಿ ಭಾಷಣ ಮಾಡಿದ ಮೇಲೆ, ಗೋಷ್ಠಿಯ ಅಧ್ಯಕ್ಷರಾದ ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಸ್ಫೂರ್ತಿಯುತವಾಗಿ ಭಾಷಣಮಾಡಿದರು. ಅವರು ತಮ್ಮ ಭಾಷಣದಲ್ಲಿ ಕನ್ನಡ ನಾಡಿನ ಮತ್ತು ಸಾಹಿತ್ಯದ ಹಿರಿಮೆ ಹಳಮೆಗಳನ್ನೂ ಕರ್ನಾಟಕ ಸಂಸ್ಕೃತಿಯ ವೈಭವವನ್ನೂ ವರ್ಣಿಸಿ, ವಾಸ್ತವವಾಗಿ ಗದ್ಯಕ್ಕೂ ಪದ್ಯಕ್ಕೂ ಯಾವ ಭೇದವೂ ಇಲ್ಲವೆಂದೂ, ಎರಡೂ ಉತ್ತಮವಾಗಿದ್ದ ಪಕ್ಷದಲ್ಲಿ ಕಾವ್ಯವೇ ಎಂದೂ, ಸಾಹಿತ್ಯ ಸೃಷ್ಟಿಯಾಗಬೇಕಾದರೆ ಸಹೃದಯತೆ ಬೇಕೆಂದೂ, ಸಾಹಿತ್ಯದಲ್ಲಿ ಅಂಧಾನುಕರಣ ಮಾಡಕೂಡದೆಂದೂ ಹೇಳಿದರು.

ತರುವಾಯ, ಶ್ರೀಗಳಾದ ಬಿ. ಎಂ. ಶ್ರೀಕಂಠಯ್ಯನವರು, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಆರ್. ವಿ. ಜಾಗೀರದಾರರು, ಸಾಲಿ ರಾಮಚಂದ್ರರಾಯರು, ಜಿ. ಪಿ. ರಾಜರತ್ನಂ ಅವರು, ಶ್ರೀಮತಿ ಶಾಂತಾದೇವಿ ಮಾಳವಾಡರವರು, ಶ್ರೀಮತಿ ಶ್ಯಾಮಲಾದೇವಿಯವರು, ದ. ರಾ. ಬೇಂದ್ರೆಯವರು, ಎಂ.ವಿ. ಸೀತಾರಾಮಯ್ಯನವರು, ರಂ. ಶ್ರೀ. ಮುಗಳಿಯವರು, ಆನಂದಕಂದರು ಇವರೇ ಮುಂತಾಗಿ ಹಲವುಮಂದಿ ಹಿರಿಯ ಕಿರಿಯ ಸಾಹಿತಿಗಳು, ತಮ್ಮ ತಮ್ಮ ಕವಿತೆ ಮೊದಲಾದ ಕೃತಿಗಳನ್ನು ಓದಿ ಸಭಿಕರನ್ನು ಸಂತೋಷಗೊಳಿಸಿದರು.

## ಮಹಿಳೆಯರ ಕಲಾ ಪ್ರದರ್ಶನ

ಸಮ್ಮೇಳನದ ಅಂಗವಾಗಿ ಲಿಂಗರಾಜ ಕಾಲೇಜು ಭವನದಲ್ಲಿ ಮಹಿಳೆಯರು ಕಳಿಸಿದ್ದ ಕಲಾ ಕೃತಿಗಳ ಪ್ರದರ್ಶನವೊಂದು ಏರ್ಪಾಟಾಗಿತ್ತು. ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕಿಯರಾಗಿರುವ ಶ್ರೀಮತಿ ಡಿ. ಚಂಪಾಬಾಯಿಯವರು ಈ ಪ್ರದರ್ಶನವನ್ನು ತೆರೆದರು.

## ಮನೋರಂಜನ ಕಾರ್ಯಗಳು

ಸಮ್ಮೇಳನದ ಕಾರ್ಯಕ್ರಮದಲ್ಲಿ ಕಾವ್ಯವಾಚನ, ಕೀರ್ತನೆ, ಲಾವಣಿ, ಹಾಡುಗಾರಿಕೆ ಮೊದಲಾದ ಮನೋರಂಜನ ಕಾರ್ಯಗಳೂ ಸೇರಿದ್ದುವು.

ಸುಪ್ರಸಿದ್ಧ ಕೀರ್ತನಕಾರರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೂ ಗಮಕ ವಿದ್ವಾನ್ ಶ್ರೀ ಕೆ. ಜಿ. ಸಂಪತ್ಕುಮಾರಾಚಾರ್ಯರೂ, ಸುಪ್ರಸಿದ್ಧ ಸಂಗೀತ ವಿದ್ವಾಂಸರಾದ ಶ್ರೀ ಮನಸೂರ್ ಅವರೂ, ಬಾಗಲಕೋಟೆಯ ಶ್ರೀ ವಾಸುದೇವ ಅಮೆಚೂರ್ಸ್ ನಾಟಕ ಸಂಘದವರೂ ಮುಂತಾದವರು ಈ ಮನೋರಂಜನ ಕಾರ್ಯಗಳಲ್ಲಿ ಭಾಗವಹಿಸಿದ್ದರು.

## ಸಮ್ಮೇಳನದ ನಿರ್ಣಯಗಳು

......ವಿಷಯ ನಿಯಾಮಕ ಸಮಿತಿ ಒಪ್ಪಿಗೆ ಕೊಟ್ಟ ಮೇರೆಗೆ, ಒಟ್ಟು ೩೯ ನಿರ್ಣಯಗಳನ್ನು ಸಮ್ಮೇಳನದ ಒಪ್ಪಿಗೆಯ ಬಗ್ಗೆ ಇಡಲಾಯಿತು. ಇವೆಲ್ಲವನ್ನೂ ಸಮ್ಮೇಳನ ಅಂಗೀಕರಿಸಿತು. (ಇವನ್ನು ಬೇರೆಯಾಗಿ ಪ್ರಕಟಿಸಿದೆ.) ಈ ನಿರ್ಣಯಗಳು ಕಾರ್ಯರೂಪಕ್ಕೆ ಬರಬೇಕಾದರೆ ಕನ್ನಡ ನಾಡಿನಲ್ಲಿರುವ ಸರ್ಕಾರಗಳ, ನಾನಾ ಸಂಘ ಸಂಸ್ಥೆಗಳ ಮತ್ತು ಮಹಾಜನರ ಸಹಾಯ ಸಹಕಾರಗಳು ಪರಿಷತ್ತಿಗೆ ಅತ್ಯಾವಶ್ಯಕವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

## ಕೊನೆಮಾತು

ಒಟ್ಟಿನಮೇಲೆ ಸಮ್ಮೇಳನ ಅತ್ಯಂತ ಯಶಸ್ವಿಯಾಯಿತೆಂದು ಎಲ್ಲರೂ ಅಭಿಪ್ರಾಯಪಟ್ಟಿದ್ದಾರೆ. ಸಮ್ಮೇಳನ ಇಷ್ಟು ಯಶಸ್ವಿಯಾಗಿ ನಡೆಯಲು ಸಮ್ಮೇಳನಾಧ್ಯಕ್ಷರೂ, ಸ್ವಾಗತ ಸಮಿತಿಯೂ ಕಾರಣ. ಸಮ್ಮೇಳನದ ಕಾರ್ಯಕಲಾಪಗಳನ್ನು ದಕ್ಷತೆಯಿಂದ ನಿರ್ವಹಿಸಿಕೊಟ್ಟ ಶ್ರೀ ಮುದವೀಡು ಕೃಷ್ಣರಾಯರಿಗೂ, ಸಮ್ಮೇಳನದ ಎಲ್ಲ ಏರ್ಪಾಟುಗಳನ್ನೂ ಅಚ್ಚುಕಟ್ಟಾಗಿ ಮಾಡಿ, ಅದನ್ನು ವಿಜೃಂಭಣೆಯಿಂದ ನಡಸಿದ ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀ. ಎಂ. ಪಿ. ವಾಲಿ ಅವರಿಗೂ, ಕಾರ್ಯದರ್ಶಿಗಳಾದ ಜೋಶಿ ನರಸಿಂಗರಾಯರು ಮತ್ತು ವಿ. ಪಿ. ಕಿತ್ತೂರ್ ಇವರಿಗೂ, ಸಮಿತಿಯ ಇತರ ಸದಸ್ಯರಿಗೂ ಪರಿಷತ್ತಿನ ಮತ್ತು ಎಲ್ಲ ಕನ್ನಡಿಗರ ಕೃತಜ್ಞತೆ ಸಲ್ಲಬೇಕಾಗಿದೆ.

## ಕನ್ನಡಮ್ಮನ ಕೊರಗು

(ಉಸಿರು ೫)

ಕನ್ನಡಮ್ಮನಿಗೆ ಪಟ್ಟಣವಾಸ ಆಗಲೇ ಬೇಸರವಾಗುತ್ತ ಬಂತು. ತನ್ನ ಮಲೆನಾಡಿಗೆ, ಕಾಡಿಗೆ, ಹಳ್ಳಿಗಳ ಬೀಡಿಗೆ, ಕನ್ನಡದ ನೆಲೆವೀಡಿಗೆ ಹಿಂದಿರುಗಬೇಕೆಂಬ ಬಯಕೆ ಹತ್ತಿತ್ತು. ಆದರೂ ಪಟ್ಟಣದ ಮಕ್ಕಳೂ ತನ್ನ ಮಕ್ಕಳೇ ಅಲ್ಲವೆ? ಅವರನ್ನೂ ಕಣ್ತುಂಬ ನೋಡಿ ನಲಿಯಬೇಕೆಂಬ ಆಸೆಯೂ ಹಿಂಗಿರಲಿಲ್ಲ; ತನ್ನ ಕೊರಗಿಗೆ ಕಾರಣವಾದ ನೋಟಗಳನ್ನು ಕಂಡೂ ಅವಳ ಆ ಆಸೆ ಕುಗ್ಗಿರಲಿಲ್ಲ. ಎಲ್ಲವೂ ಹೀಗೆಯೇ ಇರಲಾರದು, ಮಾಗಿಯ ಕೊರಗು ನಿಂತೀತು, ಕನ್ನಡ ವಸಂತೋತ್ಸವ ಬಂದೀತು ಎಂಬ ಸವಿಗನಸು ಕಾಣುತ್ತ ಕನ್ನಡಮ್ಮ ಊರ ಹೆದ್ದಾರಿಯೊಂದರಲ್ಲಿ ತಲೆಬಾಗಿ, ಮೌನದಿಂದ, ನಿಧಾನವಾಗಿ ನಡೆದು ಹೋಗುತ್ತಿದ್ದಳು. ನೋಡಲು ತಿರುಕಿಯಂತೆ ಕಾಣುತ್ತಿದ್ದಳು.

ಯಾರೋ ಕೂಗಿದಂತಾಯಿತು, ಹಿಂದಿರುಗಿ ನೋಡಿದಳು. ಒಂದು ಮನೆಯ ಮುಂದೆ ನಿಂತು ಒಬ್ಬ ಆಳು ಕರೆಯುತ್ತಿದ್ದ. ಮನೆ ದೊಡ್ಡದು, ಸೊಗಸಾದ್ದು, ಸಿರಿವಂತರದು.

ಕನ್ನಡಮ್ಮ ಕೂಗಿದ ಕಡೆ ಹೋಗುವವಳು; ಅಲ್ಲಿಗೂ ಹೋದಳು. ದೊಡ್ಡ ನಾಯಿಯೊಂದು ಬಗುಳಿತು. ಅವಳ ಪುಣ್ಯಕ್ಕೆ ಅದನ್ನು ಕಟ್ಟಿ ಹಾಕಿತ್ತು.

ಆಳು ತೆಲುಗಿನಲ್ಲಿ "ಸ್ವಲ್ಪ ನಿಂತಿರಮ್ಮ" ಎಂದು ಹೇಳಿ ಒಳಕ್ಕೆ ಹೋದ.

ನಾಯಿ ಬಗುಳತ್ತಲೇ ಇತ್ತು. Keep quiet, Tommy, keep quiet ಎಂಬ ತನಗೆ ಅರ್ಥವಾಗದ ನುಡಿಗಳು ಕೇಳಿಬಂದವು ಕನ್ನಡಮ್ಮನಿಗೆ. ಸ್ವರ ಇನಿದಾಗಿತ್ತು. ಇಂಚರ ಕೇಳಿಬಂದ ಕಡೆಗೆ ತಿರುಗಿದಳು: ಪಂಜರದಲ್ಲಿ ಗಿಣಿ, ಹಚ್ಚಹಸುರು ಗಿಣಿ: ತನ್ನ ಮುದ್ದು ಗಿಣಿ! **ಕನ್ನಡ ವಕ್ಕಿ**!

ಕನ್ನಡಮ್ಮ ಕನ್ನಡವಕ್ಕಿಯ ಬಳಿ ಸಾರಿದಳು.

"Hello, how do you do......ಏಮಯ್ಯ, ಎಪ್ಪುಡು ವಸ್ತಿವಿ....ಸುನೋ ಸುನೋ ಬನಕೇ ರಾಣಿ .......(ನಾಯಿ ಬಗುಳಿತು) Tommy, keep quiet....ಜಾವ್, ಜಾರೆ. get away...." ಮುಂತಾಗಿ ತಡೆಯಿಲ್ಲದೆ ಗಳಹತೊಡಗಿತು ಕನ್ನಡವಕ್ಕಿ!

ಕನ್ನಡವಕ್ಕಿ ಹೇಳಿದ ಒಂದು ಮಾತೂ ಕನ್ನಡಮ್ಮನಿಗೆ ಅರ್ಥವಾಗಲಿಲ್ಲ. ಅವಳಿಗೆ ಆಶ್ಚರ್ಯವಾಯಿತು.

ಅಷ್ಟುಹೊತ್ತಿಗೆ ತಿರುಕರ ತಂಡವೊಂದು ಆ ಮನೆಯ ಬಾಗಿಲ ಬಳಿ ಹಾಡುತ್ತ ನಿಂತಿತು. ಹಾಡಿನ ಗಲಭೆ ಕೇಳಿ ಒಳಗಿನಿಂದ ಹುಡುಗರು ಮಕ್ಕಳು ಓಡಿಬಂದರು; ಮನೆಯ ಒಡತಿಯೂ ಆಳೂ ಕೂಡಿಬಂದರು. ತಿರುಕರನ್ನು ಎಲ್ಲರೂ ಗಮನಿಸಿಕೊಂಡರು: ನಾಯಿ ಬಗುಳತೊಡಗಿತು; ಗಿಣಿಯೂ ಗಳಹತೊಡಗಿತು. ತಿರುಕರ ಹಾಡಾಗಲಿ, ಮಕ್ಕಳ ಒಡತಿಯ ಬೈಗುಳ ಮಾತಾಗಲಿ, ಗಿಣಿಯ ಮಾತಾಗಲಿ — ಒಂದೂ ತಿಳಿಯಲಿಲ್ಲ ಕನ್ನಡಮ್ಮನಿಗೆ. ಅವಳಿಗೆ ಕಕ್ಕಬಿಕ್ಕಿಯಾಯಿತು; ತನಗೇ ಹುಚ್ಚು ಹಿಡಿದಿರಬೇಕು ಎಂದುಕೊಂಡಳು.

ಆಳು ತಾನು ತಂದಿದ್ದ ಹಿರಿಯಕ್ಕಿಯನ್ನು ತಿರುಕರಿಗೆಲ್ಲ ಹಂಚಿ, ಅವರನ್ನು ಕಳಿಸಿ, ತಾನು ಒಳಕ್ಕೆ ಹೋದ; ಹುಡುಗರೆಲ್ಲ ಅವರ ಪಾಡಿಗೆ ಅವರು ತೋಟದ ಕಡೆಗೆ ಓಡಿದರು; ಮನೆಯೊಡತಿಯೊಬ್ಬಳು ಮಾತ್ರ ನಿಂತಿದ್ದಳು; ಕನ್ನಡಮ್ಮನನ್ನು ಏನೋ ಕೇಳಿದಳು. ಕನ್ನಡಮ್ಮನಿಗೆ ಅರ್ಥವಾಗದಿದ್ದುದು ತಿಳಿಯಿತು.

"ನೀನು ಯಾರಮ್ಮ, ಬಲು ಬಡವಿಯಂತೆ ಕಾಣುವೆ. ಬಡ ಮುತ್ತೈದೆ, ಶುಕ್ರವಾರ, ಏನಾದರೂ ಕೊಡೋಣ ಎಂದು ಕರಸಿದೆ" ಎಂದು ಕನ್ನಡದಲ್ಲಿ ಹೇಳಿದಳು.

ನಾಯಿ ಬಗುಳಿತು ಮತ್ತೆ. "ಸುಮ್ಮನಿರು— Keep quiet ಟಾಮಿ" ಎಂದು ಜಬ್ಬರಿಸಿದಳು ಒಡತಿ. ನಾಯಿ ಸುಮ್ಮನಾಯಿತು.

ಕನ್ನಡಮ್ಮ ಕೇಳಿದಳು: "ಟಾಮಿ ನಾಯಿಯ ಹೆಸರೋ?"

"ಹೌದು" ಎಂದಳು ಒಡತಿ.

ಕನ್ನಡಮ್ಮ: "ನಾನು ಕೇಳಿಯೇ ಇಲ್ಲ ಇಂಥ ಹೆಸರನ್ನು; ಯಾವುದೋ ಹೊಸ ಹೆಸರು"

ಒಡತಿ: "ಅದು ಇಂಗ್ಲಿಷ್ ಹೆಸರು".

ಕನ್ನಡಮ್ಮ: "ಓಹೋ, ಹಾಗೋ".

ಅಷ್ಟು ಹೊತ್ತಿಗೆ ಮನೆಯಾಳು ಒಂದು ತಟ್ಟೆಯಲ್ಲಿ ಅಕ್ಕಿ, ಬೇಳೆ, ಹಣ್ಣು, ಕಾಯಿ, ಹೂವು ಎಲ್ಲ ಇಟ್ಟುಕೊಂಡು ಬಂದು ಒಡತಿಯ ಕೈಗೆ ಕೊಟ್ಟ. ಒಡತಿ ತಟ್ಟೆಯನ್ನು ಕನ್ನಡಮ್ಮನ ಕಡೆ ಹಿಡಿದಳು.

ಕನ್ನಡಮ್ಮ ಹೇಳಿದಳು: "ನಾನು ತಿರುಕಿ ಎಂದು ತಿಳಿದು ನನ್ನನ್ನು ಒಳಕ್ಕೆ ಕರೆದಿರಲ್ಲವೆ. ಹೌದಮ್ಮ, ನಾನು ತಿರುಕಿ. ಈಗ ಬಹುಕಾಲದಿಂದ ತಿರುಪೆಯಲ್ಲೇ ನನ್ನ ಬಾಳು ಸವೆಯುತ್ತಿದೆ. ಆದರೆ, ದುಡ್ಡು, ತಿಂಡಿತೀರ್ಥ ಇವುಗಳಿಗಾಗಿ ನಾನು ತಿರುಪೆ ಬೇಡುತ್ತಿಲ್ಲ. ನನ್ನದು ಒಂದೇ ಭಿಕ್ಷೆ: ಕನ್ನಡದ ಭಿಕ್ಷೆ. ಅದನ್ನು ನೀಡಮ್ಮ. ಕನ್ನಡ ನಾಡಿನಲ್ಲಿ ಕನ್ನಡದ ಭಿಕ್ಷೆಬೇಡುವ ದುರ್ಗತಿ ಬಂದಿದೆ ನನಗೆ. ಈ ನಾಡು ನನ್ನದು, ನನ್ನ ನಾಡಿನ ಹಿರಿಯೂರು ಇದು. ನನ್ನ ನುಡಿ ನೆಲೆ ತಪ್ಪಿದೆ ಇಲ್ಲಿ. ತಿರುಕರು ಕೂಡ ಕನ್ನಡ ಮಾತಾಡುವುದಿಲ್ಲ ಇಲ್ಲಿ. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಎಂಥ ದುರ್ಭಿಕ್ಷ ಬಂತು! ನಾಡವರ ನಾಯ ಹೆಸರು ಕೂಡ ಕನ್ನಡವಲ್ಲ! ನನ್ನ ಕನ್ನಡವಕ್ಕಿ ಕೂಡ ಕನ್ನಡ ಮಾತಾಡದು. ಇದಕ್ಕಿಂತ ಅನ್ಯಾಯವುಂಟೆ?"

"ಸಾಕಮ್ಮ ನಿನ್ನ ಪುರಾಣ. ಇವಳಿಗೆ ಭಿಕ್ಷೆ ಬೇಡವಂತೆ ಒಳಕ್ಕೆ ತೆಗೆದುಕೊಂಡು ಹೋಗೂ" ಎಂದು ಒಡತಿ ಒಳಕ್ಕೆ ಹೋದಳು. ಆಳು, ಹೊರಕ್ಕೆ ನಡೆ ಎಂದು ಸನ್ನೆ ಮಾಡಿದ. ಕನ್ನಡಮ್ಮ ಮರು ಮಾತಾಡದೆ ತನ್ನ ದಾರಿ ಹಿಡಿದುಹೋದಳು. ಹೋಗುತ್ತಿರಲು ಕನ್ನಡ ವಕ್ಕಿಯ ನೆನಪು ಬಂತು. ಅದನ್ನು ಕುರಿತು ಕೊರಗಿದಳು—

"ಅಯ್ಯೋ, ನಿರ್ಭಾಗ್ಯ ಕನ್ನಡವಕ್ಕಿ! ಪಂಜರದಲ್ಲಿ ಸೆರೆಯಾಗಿ, ಹೆರರ ಹಂಗಿಗೆ ಸಿಲುಕಿ, ಹೆರರ ನುಡಿಯ ಮೋಹಕ್ಕೆ ಒಳಗಾಗಿ, ನಿನ್ನ ನಲ್ನುಡಿಯನ್ನು ಮರೆಯುತ್ತಿರುವೆ. ನಿನ್ನ ಬಿಡುಗಡೆ ಎಂದು? ನೀನು ಮನಬಂದಂತೆ ನಾಡಿನಲ್ಲೆಲ್ಲ ಹಾರಾಡುತ್ತ ಕನ್ನಡ ಪಂಡಿತ ವಕ್ಕಿಯಾಗಿ ನಾಡಮಕ್ಕಳಿಗೆಲ್ಲ ನುಡಿ ಕಲಿಸುವುದೆಂದು?"

"ಎಂದು? ಎಂದು?" ಎಂಬ ಪ್ರಶ್ನೆ ಅವಳ ಮನಸ್ಸಿನಲ್ಲಿ ಮಿಡಿಯುತ್ತಲೇ ಇತ್ತು.

—ಎಂ. ವಿ. ಸೀ.

---

ಪತ್ರವ್ಯವಹಾರ

## ವಿಲ್ಲಿ ಭಾರತದ ಮೂಲವೆಲ್ಲಿ?

### ವಿಜ್ಞಾಪನೆಗಳು

ತಮಿಳಿನಲ್ಲಿ ಭಾರತವನ್ನು ಬರೆದ ವಿಲ್ಲಿ ಅಥವಾ ವಿಲ್ಲಿಪುತ್ತೂರರ್ ಕವಿ ಬಾಲಭಾರತವು ವ್ಯಾಸಭಾರತ ಭಿನ್ನವಾದ ಭಾರತಕ್ಕೆ ಋಣಿಯಾಗಿದ್ದನೆಂದು ತೋರುತ್ತದೆ. ಅದೇ ಪ್ರಕಾರ ಹಿಂದಣ ಪಂಪಕವಿಯೂ ಇರಬಹುದು. ತಮಿಳು ವಿದ್ವಾಂಸರೊಳಗೆ ಗಣ್ಯರಾದ ಶ್ರೀ॥ ಎಂ. ಎಸ್. ಪೂರ್ಣಲಿಂಗಪಿಳ್ಳೆಯವರು ತಮ್ಮ Tamil Literature (ತಮಿಳು ಸಾಹಿತ್ಯ) ಎಂಬ ಗ್ರಂಥದಲ್ಲಿ ವಿಲ್ಲಿ ಕವಿಯ ಭಾರತವನ್ನು ಕುರಿತು ಬರೆಯುತ್ತ ಒಂದೆಡೆ ಹೀಗೆಂದಿರುವರು: "For its wealth of legends and stories, it was indebted to the Sanskrit **accretional** epic of Mahabharatha" (Page **279**). ಮತ್ತೊಂದೆಡೆಯಲ್ಲಿ ಅವರು ಹೇಳುವುದೇನೆಂದರೆ: "The epic was based on the Bharatham of Vyasa and **Bala** in Sanskrit and on that of Perum Thevanar in Tamil" (Page **281**). ಅವರು ಹೇಳುವ **ಬಾಲಭಾರತ**ವೆಂದರೆ ಯಾವುದು? ಸಾಮಾನ್ಯ ಹತ್ತನೆಯ ಶತಮಾನ ಅಥವಾ ಅದಕ್ಕೆ ಹಿರಿದಣವನಾದ **ಅಮರಚಂದ್ರಸೂರಿ** ಕೃತವಾದ ಬಾಲಭಾರತವೆಂಬುದೊಂದುಂಟು. ಅಮರಚಂದ್ರಸೂರಿ ಜೈನನೆಂದು ತೋರುತ್ತದೆ. ಆ ಬಾಲಭಾರತವು ಅಚ್ಚಾಗಿದೆಯೆ? ಆಗಿದ್ದರೆ ಎಲ್ಲಿ ದೊರೆಯುವುದು? ಎನ್ನುವ ವಿಚಾರವನ್ನು ಬಲ್ಲವರಾರಾದರೂ ತಿಳಿಸಿದರೆ ಉಪಕಾರವಾಗುತ್ತಿತ್ತು. ಒಂದುವೇಳೆ ಆ ಗ್ರಂಥವು ಈಗ ದೊರೆಯುವಂತಿಲ್ಲವಾದರೆ, ಅದನ್ನು ನೋಡುವುದಕ್ಕೆ ಅನುಕೂಲವಿರತಕ್ಕ ವಿದ್ವಾಂಸರಾರಾದರೂ ಅದರೊಳಗಿನ ಉದ್ಯೋಗ ಪರ್ವದಲ್ಲಿ ಕರ್ಣನಿಗೆ ಕುಂತಿ ಅಥವಾ ಕೃಷ್ಣನೊಡನೆ ಉಂಟಾದ ಸಂಭಾಷಣೆಯ ಸಂದರ್ಭದಲ್ಲಿ 'ನೆತ್ತವನಾಡಿದ' ಪ್ರಸ್ತಾಪವು ಬರುವುದೆ? ಎನ್ನುವ ವಿಷಯವನ್ನು ತಿಳಿಸುವ ಕೃಪೆ ಮಾಡಬೇಕು.

—ಎನ್. ಬಿ.




ಶುಕ್ರವಾರ, ಜನವರಿ ೫, ೧೯೪೦

## ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಈಸಾರಿ ಕನ್ನಡದ ಗಡಿನಾಡುಗಳಲ್ಲೊಂದಾದ ಬೆಳಗಾಂವಿಯಲ್ಲಿ ನಡೆದ ಸಾಹಿತ್ಯಸಮ್ಮೇಳನದ ಸಂಗ್ರಹ ವರದಿಯನ್ನು ಈ ಸಂಚಿಕೆಯ ಬೇರೊಂದು ಭಾಗದಲ್ಲಿ ಕೊಟ್ಟಿರುತ್ತೇವೆ. ಕಳೆದ ಸಂಚಿಕೆಯಲ್ಲಿ ಸಮ್ಮೇಳನಾಧ್ಯಕ್ಷರ ಮತ್ತು ಇತರರ ಕೆಲವು ಭಾಷಣಗಳನ್ನು ಕೊಟ್ಟಿದ್ದೆವು. ಇವುಗಳೆಲ್ಲವನ್ನೂ ಪರಿಶೀಲಿಸಿದ್ದೇ ಆದರೆ ಈಸಾರಿಯ ಸಮ್ಮೇಳನ ವಿಶೇಷ ಜಯಪ್ರದವಾಗಿ ನಡೆಯಿತೆಂದು ನಮ್ಮಂತೆಯೇ ನಮ್ಮ ವಾಚಕರೂ ಸಹ ಅಭಿಪ್ರಾಯ ಪಡುವರೆಂದು ನಂಬಿದ್ದೇವೆ. ಈ ಸಮ್ಮೇಳನದಲ್ಲಿ ಹಾಜರಿದ್ದು ಪ್ರತಿದಿನದ ಕಾರ್ಯಕಲಾಪಗಳನ್ನು ಪ್ರತ್ಯಕ್ಷವಾಗಿ ನೋಡಿದವರಂತೂ ಅಲ್ಲಿ ಪ್ರದರ್ಶಿತವಾದ ಹುರುಪು, ಉತ್ಸಾಹ, ಆಸಕ್ತಿ, ಅಭಿಮಾನ ಮುಂತಾದವುಗಳನ್ನು ಕಂಡು ಬೆರಗಾಗದೆ ಇರಲಾರರೆಂಬುದರಲ್ಲಿ ಸಂದೇಹವೇ ಇಲ್ಲ.

ಸಮ್ಮೇಳನ ನಡೆದ ವಾಕ್ಚಿತ್ರಮಂದಿರ ಸಾಮಾನ್ಯವಾಗಿ ವಿಶಾಲವಾದದ್ದೇ ಎಂದು ಹೇಳಬೇಕು. ಇದರಲ್ಲಿ ಒಂದು ಸಾವಿರ ಮಂದಿ ಪ್ರೇಕ್ಷಕರು ಧಾರಾಳವಾಗಿ ಹಿಡಿಯಬಹುದು. ಇಂತಹ ಮಂದಿರ ಸಮ್ಮೇಳನದ ನಾಲ್ಕು ದಿವಸವೂ ತುಂಬಿ ತುಳುಕಾಡುತ್ತಿದ್ದುದಲ್ಲದೆ ಸ್ಥಳಾಭಾವದ ದೆಸೆಯಿಂದ ಅನೇಕ ಮಂದಿ ಪ್ರೇಕ್ಷಕರು ಪ್ರವೇಶ ದೊರೆಯದೆ ಹೊರಗೆ ನಿಲ್ಲುವ ಸಂಭವ ಒದಗಿದ್ದಿತೆಂದರೆ ಜನಸಂದಣಿ ಎಷ್ಟರಮಟ್ಟಿನದಾಗಿತ್ತೆಂಬುದು ವಿಶದವಾಗುವುದರಲ್ಲಿ ಸಂದೇಹವಿಲ್ಲ.

ಪ್ರೇಕ್ಷಕರಲ್ಲಿ ಸರಿಸುಮಾರಾಗಿ ಮೂರರಲ್ಲೊಂದು ಭಾಗಕ್ಕೆ ಕಡಮೆ ಇಲ್ಲದಷ್ಟು ಹೆಂಗಸರೂ, ಅಷ್ಟೇ ಪರಿಮಾಣದ ವಿದ್ಯಾರ್ಥಿಗಳೂ ಇರುತ್ತಿದ್ದರೆಂಬುದು ಶುಭಸೂಚಕವಾದ ಸಂಗತಿ ಎಂತಲೇ ಹೇಳಬೇಕು.

'ಲೌಡ್ ಸ್ಪೀಕರ್' ವ್ಯವಸ್ಥೆ ಮಾಡಿದ್ದ ಪ್ರಯುಕ್ತ ಎಲ್ಲ ಭಾಷಣಗಳನ್ನೂ ಪ್ರೇಕ್ಷಕರು ಉತ್ಸಾಹದಿಂದ ಕೇಳಿ ಸಂತೋಷಿಸುತ್ತಿದ್ದರೆಂಬುದಕ್ಕೆ ಸ್ವಾರಸ್ಯವಾದ ಅಂಶಗಳನ್ನು ಮತ್ತೊಂದು ಬಾರಿ ಹೇಳಬೇಕೆಂದು ಅವರುಗಳು ಒತ್ತಾಯಪಡಿಸುತ್ತಿದ್ದುದೇ ಒಂದು ನಿದರ್ಶನವಾಗಿತ್ತು.

ಪ್ರತಿನಿಧಿಗಳ ಸಂಖ್ಯೆಯೂ, ಸ್ವಾಗತಮಂಡಲಿಯ ಸದಸ್ಯರಾಗಿ ಬಂದವರ ಸಂಖ್ಯೆಯೂ ನಿರೀಕ್ಷಿಸಿದ್ದದ್ದಕ್ಕಿಂತ ಹೆಚ್ಚಾಗಿದ್ದುವೆಂದೂ, ಸಮ್ಮೇಳನಕ್ಕೆ ಬೆಳಗಾಂವಿ ಪ್ರಾಂತ್ಯದ ಜನರಿಂದ ಒದಗಿದ ಧನಸಹಾಯವೂ ಸಹ ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚಾಗಿದ್ದಿತೆಂದೂ ಸ್ವಾಗತಾಧ್ಯಕ್ಷರೇ ತಮ್ಮ ಮುಕ್ತಾಯಭಾಷಣದಲ್ಲಿ ತಿಳಿಯಪಡಿಸಿದ್ದು ಯಾರಿಗೆ ತಾನೇ ಸಂತೋಷವನ್ನುಂಟುಮಾಡಲಾರದು?

ಸಮ್ಮೇಳನದ ಅಂಗವಾಗಿ ನಡೆದ ಪ್ರತಿಯೊಂದು ಗೋಷ್ಠಿಯೂ ಸುಗಮವಾಗಿ ನಡೆಯಿತೆಂದು ಹೇಳಬಹುದು. ಈ ಪೈಕಿ ಮಹಿಳೆಯರ ಗೋಷ್ಠಿ ಇತರ ಎಲ್ಲ ಗೋಷ್ಠಿಗಳಿಗಿಂತ ಹೆಚ್ಚು ಉತ್ಕೃಷ್ಟವಾಗಿ ನಡೆಯಿತೆಂದರೆ ವಾಸ್ತವಾಂಶವೇ ಹೊರತು ಅತಿಶಯೋಕ್ತಿಯಲ್ಲ. ಈ ಗೋಷ್ಠಿಯ ಚಾಲಕರಾಗಿ ನಿಂತಿದ್ದ ಮಹಿಳೆಯರ ಚಾಕಚಕ್ಯತೆ, ಕಾರ್ಯಶ್ರದ್ಧೆ, ಕರ್ತವ್ಯದಕ್ಷತೆ ಮುಂತಾದುವುಗಳು ಯಾರನ್ನೇ ಆಗಲಿ ಬೆರಗುಮಾಡುವಂತಿದ್ದುವೆಂದು ಧಾರಾಳವಾಗಿ ಹೇಳಬಹುದು. ಮಹಿಳೆಯರೂ ಸಹ ಈ ರೀತಿ ಭಾಷಾಸೇವೆಗೆ ನಿಲ್ಲುತ್ತಿರುವುದು ಕನ್ನಡ ತಾಯಿಯ ಸುದೈವವೇ ಸರಿ.

ಸಮ್ಮೇಳನದ ಕಾರ್ಯಕಲಾಪಗಳು ಸುಗಮವಾಗಿ ನಡೆದಂತೆಯೇ ಪರಿಷತ್ತಿನ ವಾರ್ಷಿಕಾಧಿವೇಶನದ ಕಾರ್ಯಕಲಾಪಗಳೂ ಸಹ ನಿರೀಕ್ಷಿಸಿದ್ದದ್ದಕ್ಕಿಂತ ಸುಗಮವಾಗಿ ನಡೆದದ್ದು ಅಭಿನಂದನೀಯವಾದ ಸಂಗತಿ ಎಂತಲೇ ಹೇಳಬೇಕು. ಈ ಅಧಿವೇಶನದಲ್ಲಿ ಚರ್ಚೆಯಾಗಲು ಕಳುಹಿಸಲ್ಪಟ್ಟಿದ್ದ ವಿಷಯಗಳ ಪಟ್ಟಿಯನ್ನು ನೋಡಿದವರಿಗೆ ಅಧಿವೇಶನ ತುಂಬಾ ಕ್ರಾಂತಿಕಾರಕವಾಗಿ ಪರಿಣಮಿಸಬಹುದೆಂಬ ಶಂಕೆ ಮೂಡಿತ್ತು. ಆದರೆ ಅದೃಷ್ಟವಶಾತ್ ಹಾಗೆ ಪರಿಣಮಿಸದೆ ಎಲ್ಲವೂ ಸುಗಮವಾಗಿ ಮುಕ್ತಾಯವಾದದ್ದು ಸುದೈವವೇ ಸರಿ.

ಇದರಲ್ಲಿ ನಿರ್ಧರವಾದ ತೀರ್ಮಾನಗಳ ಪೈಕಿ ಮುಖ್ಯವಾದುವುಗಳೆಂದರೆ: (೧) ಸಮ್ಮೇಳನದ ಅಧ್ಯಕ್ಷರಿಗೆ ಕಾರ್ಯಕಾರಿ ಮಂಡಲಿಯಲ್ಲಿ ಒಂದು ಸ್ಥಾನವನ್ನು ಕಲ್ಪಿಸಿದ್ದು; (೨) ಈಗಿನ ಉಪಾಧ್ಯಕ್ಷರೇ ಮುಂದೆಯೂ ತಮ್ಮ ಸ್ಥಾನದಲ್ಲಿದ್ದುಕೊಂಡು ಪರಿಷತ್ತಿನ ಕಾರ್ಯಕಲಾಪಗಳನ್ನು ನಡಸಿಕೊಂಡು ಬರಬೇಕೆಂದು ಗೊತ್ತುಮಾಡಿದ್ದು; (೩) ಮಂಡಲಿಯ ಸದಸ್ಯರ ಸಂಖ್ಯೆಯನ್ನು ೧೬ಕ್ಕೆ ಹೆಚ್ಚಿಸಿದ್ದು; ಮತ್ತು (೪) ಮಂಡಲಿ ಬೆಂಗಳೂರಿನಲ್ಲಿ ಮಾತ್ರವೇ ಅಲ್ಲದೆ ಇತರ ಕನ್ನಡ ಪ್ರಾಂತಗಳಲ್ಲಿಯೂ ಒಂದೊಂದು ಬಾರಿ ನಡೆಯಬೇಕೆಂದು ನಿರ್ಧರವಾದದ್ದು. ಈ ರೀತಿ ಪರಿಷ್ಕೃತವಾದ ಕಾರ್ಯಕಾರಿಮಂಡಲಿಯ ಕಾರ್ಯಗಳು ಹಿಂದಿನಂತೆ ಇನ್ನು ಮುಂದೆಯೂ ಸುಗಮವಾಗಿ ನಡೆದು ಪರಿಷತ್ತಿನ ಏಳಿಗೆಗೆ ಸಾಧಕವಾಗಿ ಪರಿಣಮಿಸಲೆಂದು ಹಾರೈಸುತ್ತೇವೆ.

ಮೇಲ್ಕಂಡ ಅಧಿವೇಶನದಲ್ಲಿ ತೀರ್ಮಾನವಾದ ಮತ್ತೊಂದು ಮುಖ್ಯ ವಿಷಯವೆಂದರೆ- ಪರಿಷತ್ತಿನ ಸದಸ್ಯರಿಗೆಲ್ಲರಿಗೂ ಇನ್ನು ಮುಂದೆ ನಮ್ಮ 'ಕನ್ನಡ ನುಡಿ' ಪತ್ರಿಕೆಯನ್ನು ಉಚಿತವಾಗಿ ಕಳುಹಿಸಬೇಕೆನ್ನುವುದು. ಈ ತೀರ್ಮಾನವನ್ನು ನಮ್ಮ ವಾಚಕರು ಸಂತೋಷದಿಂದ ಸ್ವೀಕರಿಸುವರೆಂದು ಭಾವಿಸುತ್ತೇವೆ. ಇದರಿಂದ ನಮಗೇನೋ ವರಮಾನ ಕಡಮೆಯಾಗಬಹುದಾದರೂ ಹೆಚ್ಚು ಮಂದಿ ನಮ್ಮ ಪತ್ರಿಕೆಯನ್ನು ಪಡೆದುಕೊಂಡು ಕನ್ನಡದ ಏಳಿಗೆಗೆ ನೆರವಾಗುವಂತಾದರೆ ಅದೇ ನಮಗೆ ಯೋಗ್ಯ ಪ್ರತಿಫಲವೆಂದು ಭಾವಿಸುತ್ತೇವೆ. ಈ ರೀತಿಯ ಹೆಚ್ಚಿನ ಅನುಕೂಲ ಕಲ್ಪಿಸಿಕೊಟ್ಟಿರುವುದನ್ನು ಪರಿಷತ್ತಿನ ಈಗಿನ ಸದಸ್ಯರಾಗಿರುವವರು ತಮ್ಮ ಮಿತ್ರಮಂಡಲಿಯಲ್ಲಿ ಪ್ರಚಾರಮಾಡಿ ಇನ್ನೂ ಹೆಚ್ಚು ಮಂದಿ ಪರಿಷತ್ತಿನ ಸದಸ್ಯರಾಗುವಂತೆ ಸಹಾಯಮಾಡುವವರಾಗಬೇಕೆಂದು ಪ್ರಾರ್ಥಿಸುತ್ತೇವೆ.

---

## ಶ್ರೀಮದ್ಯುವರಾಜರವರ ಸ್ವದೇಶಾಗಮನ

ಈಗ ಕೆಲಕಾಲದ ಹಿಂದೆ ಪಾಶ್ಚಾತ್ಯ ದೇಶಗಳಿಗೆ ಪ್ರಯಾಣ ಬೆಳಸಿದ್ದ ನಮ್ಮ ಪರಿಷತ್ತಿನ ಮಾನ್ಯ ಅಧ್ಯಕ್ಷರಾದ ಶ್ರೀಮದ್ಯುವರಾಜರವರು ಮೊನ್ನೆಯ ದಿವಸ ಸುರಕ್ಷಿತವಾಗಿ ಬೊಂಬಾಯಿ ನಗರವನ್ನು ತಲಪಿದರೆಂದೂ, ಕ್ಷಿಪ್ರದಲ್ಲಿಯೇ ಸ್ವದೇಶಕ್ಕೆ ಹಿಂತಿರುಗುವವರಾಗಿರುವರೆಂದೂ ತಿಳಿಸಲು ಸಂತೋಷಿಸುತ್ತೇವೆ. ಈ ಸಮಯದಲ್ಲಿ ನಮ್ಮ ವಾಚಕರೊಡನೆ ನಾವೂ ಸಹ ಶ್ರೀ ಪ್ರಭುವರ್ಯರಿಗೆ ಭಕ್ತಿಪೂರ್ವಕವಾಗಿ ಸುಖಾಗಮನವನ್ನು ಬಯಸುತ್ತೇವೆ.

# ಸಂದೇಶಗಳು

ಶ್ರೀಮದ್ಯುವರಾಜಕುಮಾರರವರಾದ ಶ್ರೀ ಜಯಚಾಮರಾಜ ಒಡೆಯರವರ ಸಂದೇಶ :

"ಇಪ್ಪತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಶ್ರೇಷ್ಠ ಕನ್ನಡ ಸಾಹಿತಿಗಳಾದ ಶ್ರೀ॥ ಮುದವೀಡು ಕೃಷ್ಣರಾಯರವರ ಅಧ್ಯಕ್ಷತೆಯಲ್ಲಿ ಈ ತಿಂಗಳು ಬೆಳಗಾಂವಿಯಲ್ಲಿ ನಡೆಯುವುದೆಂದು ಕೇಳಿ ವಿಶೇಷ ಹರ್ಷವುಂಟಾಗಿದೆ. ಸಮ್ಮೇಳನ ಸರ್ವ ವಿಧಗಳಲ್ಲಿಯೂ ಯಶಸ್ವಿಯಾಗಲೆಂದು ಹಾರೈಸುತ್ತೇವೆ."

ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರ ಸಂದೇಶ :

"ನಮ್ಮ ನನ್ನಿಯ ನಾಡಾದ ಕನ್ನಡ ನಾಡಿನ ಅಭಿವೃದ್ಧಿಗಾಗಿ ಮತ್ತು ಐಕಮತ್ಯ ಸಾಧನೆಗಾಗಿ ಶ್ರದ್ಧೆಯಿಂದ ಸಂತತವಾಗಿ ಶ್ರಮಿಸಿರುವ ಮಹಾಶಯರುಗಳಲ್ಲೊಬ್ಬರಾದ ಶ್ರೀಮಾನ್ ಮುದವೀಡು ಕೃಷ್ಣರಾಯರವರ ಅಧ್ಯಕ್ಷತೆಯಲ್ಲಿ ಇಪ್ಪತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾಂವಿ ನಗರದಲ್ಲಿ ಇದೇ ತಿಂಗಳು ೨೫ನೆಯ ತಾರೀಖಿನಿಂದ ನಡೆಯುವುದನ್ನು ಕೇಳಿ ಹರ್ಷಿಸುತ್ತೇನೆ. ಸಮ್ಮೇಳನ ಸರ್ವವಿಧಗಳಿಂದಲೂ ಯಶಸ್ವಿಯಾಗಿ ನೆರವೇರಲೆಂದೂ, ನಮ್ಮ ನಾಡಿನ ಮತ್ತು ನುಡಿಯ ಸೇವೆ ಮತ್ತಷ್ಟು ಹೆಚ್ಚಾಗಿ ನಡೆಯುವುದಕ್ಕೆ ಸಾಧಕವಾಗುವಂತೆ ಒಕ್ಕಟ್ಟೂ ಬಲವೂ ಮತ್ತು ಉತ್ಸಾಹವೂ ಮತ್ತಷ್ಟು ಹೆಚ್ಚಲೆಂದೂ ಹಾರೈಸುವೆನು."

ಸಂಡೂರಿನ ಶ್ರೀಮಂತ ರಾಜಾ ಸಾಹೇಬರವರ ಸಂದೇಶ:

"೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಬೆಳಗಾಂವಿಯಲ್ಲಿ ಕನ್ನಡದ ಮತ್ತು ಕನ್ನಡ ನಾಡಿನ ಏಳಿಗೆಗಾಗಿ ಹೋರಾಡುತ್ತಿರುವವರಲ್ಲಿ ಸುರಿತವರಾದ ಶ್ರೀಮಾನ್ ಮುದವೀಡು ಕೃಷ್ಣರಾಯರವರ ಅಧ್ಯಕ್ಷತೆಯಲ್ಲಿ ನಡೆಯುವುದೆಂದು ತಿಳಿದು ನನಗೆ ಬಹಳ ಸಂತೋಷವಾಗಿದೆ. ಕಳೆದ ವರ್ಷ ನಾನು ಆರಂಭಗೊಳಿಸಿದ ಬಳ್ಳಾರಿಯ ಸಾಹಿತ್ಯ ಸಮ್ಮೇಲನದ ಹಾಗೂ ಅಲ್ಲಿ ಕಂಡುಬಂದ ಅಪಾರ ಉತ್ಸಾಹದ ಸವಿ ನೆನಪು ಇನ್ನೂ ನನಗಿದೆ. ಬೆಳಗಾಂವಿಯಲ್ಲಿ ಸೇರುವ ಈ ಸಮ್ಮೇಳನ ಎಲ್ಲ ವಿಧದಲ್ಲಿಯೂ ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನೆ ; ಮತ್ತು ಕನ್ನಡದ ಚಳವಳಿ ದಿನದಿನಕ್ಕೂ ಪುಷ್ಟಿ ಹೊಂದಿ ತನ್ನ ಗುರಿ ಶೀಘ್ರದಲ್ಲಿಯೇ ಸಾಧಿಸಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ. ಹಿಂದೂಸ್ಥಾನದಲ್ಲಿರುವ ನಾನಾ ಭಾಷೆಗಳಿಗೆಲ್ಲ—ಕಡೆಗೆ ದಕ್ಷಿಣ ಹಿಂದುಸ್ಥಾನದ ಭಾಷೆಗಳಿಗಾದರೂ—ಒಂದು ಸಾಮಾನ್ಯ ಲಿಪಿಯ ಆವಶ್ಯಕತೆಯ ವಿಷಯವನ್ನು ಈ ಸಲದ ಸಮ್ಮೇಳನ ಚರ್ಚಿಸಿ ಆ ಬಗ್ಗೆ ಒಂದು ತೀರ್ಮಾನಕ್ಕೆ ಬರಬೇಕೆಂದು ನಾನು ಆಶಿಸುತ್ತೇನೆ.''

ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರಾದ ರಾಜಕಾರ್ಯಪ್ರವೀಣ ಶ್ರೀ॥ ಎನ್. ಎಸ್. ಸುಬ್ಬರಾಯರು, ಬೆಳಗಾಂವಿಯ ಸಾಹಿತ್ಯ ಸಮ್ಮೇಳನ ಯಶಸ್ವಿಯಾಗಿ ನಡೆಯಲೆಂದು ಹಾರೈಸಿ "ಸಮ್ಮೇಳನದಲ್ಲಿ ನಡೆಯುವ ಚರ್ಚೆಗಳು ಕನ್ನಡ ಭಾಷೆಯ ಮತ್ತು ಸಾಹಿತ್ಯದ ಏಳಿಗೆಗೆ ಸಾಕಷ್ಟು ಸಹಾಯ ಸಂಪತ್ತುಗಳನ್ನೊದಗಿಸುತ್ತದೆಂದೂ ಇಡಿಯ ಕರ್ನಾಟಕದ ಕನ್ನಡಿಗರೆಲ್ಲರನ್ನು ಒಗ್ಗೂಡಿಸುತ್ತದೆಂದೂ ನಾನು ನಂಬಿದ್ದೇನೆ" ಎಂದು ಸಂದೇಶವನ್ನು ಕಳಿಸಿದ್ದರು.

---

# ಕನ್ನಡ ಸುದ್ದಿ

**ಬಾಗಲಕೋಟೆ**

೧೯೩೯ನೆಯ ಡಿಸೆಂಬರ್ ೩೧ನೆಯ ತಾರೀಖು ಭಾನುವಾರ ಸಂಜೆ ೬-೩೦ ರಿಂದ ೯ ರವರೆಗೆ ಬಾಗಲಕೋಟೆಯಲ್ಲಿ ತರುಣರ ಸಂಘದ ಆಶ್ರಯದಲ್ಲಿ ಬಿಜಾಪುರದ ಶ್ರೀ॥ ವಿ. ಬಿ. ನಾಯಕರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ಸೇರಿತ್ತು. ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರು "ವಾಲ್ಮೀಕಿ ರಾಮಾಯಣ"ದ ವಿಷಯವಾಗಿಯೂ, ಶ್ರೀಮಾನ್ ಕೆ. ವಿ. ರಾಘವಾಚಾರ್ಯರು ಜನ್ನನ "ಯಶೋಧರ ಚರಿತ್ರೆ"ಯ ವಿಷಯವಾಗಿಯೂ, ಶ್ರೀಮಾನ್ ವಿ. ಸೀತಾರಾಮಯ್ಯನವರು "ಕನ್ನಡಿಗರ ಸಂಸ್ಕೃತಿ"ಯ ವಿಷಯವಾಗಿಯೂ ಮಾತನಾಡಿದರು. ಶ್ರೀಮಾನ್ ವಿ. ಕೆ. ಗೋಕಾಕರು ತಮ್ಮ ಕೆಲವು ಕವಿತೆಗಳನ್ನು ಓದಿದರು.

ಅದೇ ರಾತ್ರಿ ಅಲ್ಲಿಯ ವಾಸುದೇವ ಅಮೆಚೂರ್ಸ್ ಸಂಘದವರು ಶ್ರೀಮಾನ್ ಮುಗಳಿಯವರ "ಅತಿಥಿ ದೇವ" ಎಂಬ ಏಕಾಂಕ ನಾಟಕವನ್ನು ಆಡಿದರು.

**ಸಿಂಧನೂರು : ಕನ್ನಡಿಗರ ಸಂಘ**

ನಿಜಾಂ ಕನ್ನಡಕ್ಕೆ ಸೇರಿದ ಸಿಂಧನೂರಿನಲ್ಲಿ ಒಂದು ಕನ್ನಡಿಗರ ಸಂಘವೂ ಅದರ ಆಶ್ರಯದಲ್ಲಿ "ಶ್ರೀ ಶಾರದಾ ವಾಚನಾಲಯ"ವೂ ಸ್ಥಾಪನೆಯಾಗಿವೆಯೆಂದು ತಿಳಿಸಲು ಸಂತೋಷಿಸುತ್ತೇವೆ.

**ಸಿರಸಿ**

ಸಿರಸಿಯಲ್ಲಿ ಹನ್ನೊಂದನೆಯ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನ ಡಿಸೆಂಬರ್ ೨೮ನೆಯ ತಾರೀಖು ಆಯುರ್ವೇದ ತೀರ್ಥ ಶ್ರೀಮಾನ್ ಅನಂತಾಚಾರ್ಯ ಆದ್ಯ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

**ಕೋಲಾರ**

ಇಲ್ಲಿಯ ಕರ್ನಾಟಕ ಸಂಘದ ಕನ್ನಡ ಉತ್ಸವಸಮಾರಂಭದ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರ ಉಪನ್ಯಾಸಮಾಲೆ ಇದೇ ಜನವರಿ ತಾ॥ ೨ ರಿಂದ ೬ ರ ಪೂರ್ತ ನಡೆಯುವಂತೆ ಏರ್ಪಾಡಾಗಿದೆ.

**ಕಾರ್ಯಕ್ರಮ**

೨-೧-೧೯೪೦

೧. ಪರಿಚಯ—
೨. ಉಪಕ್ರಮ ಭಾಷಣ—ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ., ಬಾರ್-ಅಟ್-ಲಾ.
೩. ಕನ್ನಡ ಕಾವ್ಯವಾಚನ—ಶ್ರೀಮಾನ್ ಎನ್. ಶಿವರಾಮಶಾಸ್ತ್ರಿ, ಎಂ.ಎ.
೪. ಈಗಿನ ಯುದ್ಧದ ಹಿನ್ನೆಲೆ (i)—ಶ್ರೀಮಾನ್ ನಾ. ಕಸ್ತೂರಿ, ಎಂ.ಎ., ಬಿ.ಎಲ್.

೩-೧-೧೯೪೦

೧. ಪಂಪಭಾರತದ ಕರ್ಣ—ಶ್ರೀಮಾನ್ ತೀ. ನಂ. ಶ್ರೀಕಂಠಯ್ಯ, ಎಂ.ಎ.
೨. ತಮಿಳುನಾಡಿನ ವೈಷ್ಣವ ಭಕ್ತರು—ಶ್ರೀಮಾನ್ ಎಂ. ಯಾಮುನಾಚಾರ್ಯ, ಎಂ.ಎ.
೩. ಸ್ತ್ರೀಯರು ಅಬಲೆಯರೆ? ಪ್ರಾಣಿಶಾಸ್ತ್ರಜ್ಞರ ಉತ್ತರ—ಶ್ರೀಮಾನ್ ಎ. ನಾರಾಯಣರಾವ್, ಎಂ.ಎಸ್‌ಸಿ.

೪-೧-೧೯೪೦

೧. ಉಪನಿಷತ್ತುಗಳು—ಶ್ರೀಮಾನ್ ಎನ್. ಶಿವರಾಮಶಾಸ್ತ್ರಿ, ಎಂ.ಎ.
೨. ನಮ್ಮ ಆರ್ಥಿಕದೃಷ್ಟಿ (i)—ಶ್ರೀಮಾನ್ ಎಸ್. ಗೋಪಾಲಸ್ವಾಮಿ, ಎಂ.ಎ.
೩. ಈಗಿನ ಯುದ್ಧದ ಹಿನ್ನೆಲೆ (ii)—ಶ್ರೀಮಾನ್ ನಾ. ಕಸ್ತೂರಿ, ಎಂ.ಎ., ಬಿ.ಎಲ್.

೫-೧-೧೯೪೦

೧. ಭವಭೂತಿ (i)—ಶ್ರೀಮಾನ್ ಎಸ್. ರಾಮಚಂದ್ರರಾವ್, ಎಂ.ಎ.
೨. ನಮ್ಮ ಆರ್ಥಿಕ ದೃಷ್ಟಿ (ii)—ಶ್ರೀಮಾನ್ ಎಸ್. ಗೋಪಾಲಸ್ವಾಮಿ, ಎಂ.ಎ.
೩. ಮೇಲ್ಮೈಗಳ ರಚನೆ—ಶ್ರೀಮಾನ್ ಪಿ. ಶ್ರೀನಿವಾಸರಾವ್, ಎಂ.ಎಸ್‌ಸಿ.

೬-೧-೧೯೪೦

೧. ಭವಭೂತಿ (ii)—ಶ್ರೀಮಾನ್ ಎಸ್. ರಾಮಚಂದ್ರರಾವ್, ಎಂ.ಎ.
೨. ನಮ್ಮ ಆರ್ಥಿಕದೃಷ್ಟಿ (iii)—ಶ್ರೀಮಾನ್ ಎಸ್. ಗೋಪಾಲಸ್ವಾಮಿ, ಎಂ.ಎ.
೩. ವಾಯುಗುಣ—ಶ್ರೀಮಾನ್ ಕೆ. ಶೇಷಾದ್ರಿ ಐಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.

ಮೇಲ್ಕಂಡ ಉಪನ್ಯಾಸಗಳ ಜೊತೆಯಲ್ಲಿ ಬರವಣಿಗೆ, ಕಂಠಪಾಠ, ಪ್ರಬಂಧ ರಚನೆ, ನೂಲುವುದು, ಆಶುಭಾಷಣ, ಮಲ್ಲಕ್ರೀಡೆ ಮೊದಲಾದ ಸ್ಪರ್ಧೆಗಳನ್ನು ವಿದ್ಯಾರ್ಥಿಗಳಿಗಾಗಿ ಏರ್ಪಡಿಸಿದೆ.

---

## ಕನ್ನಡ ಸಾಹಿತಿಗಳ ಸಂಘ, ಕೃಷ್ಣರಾಜೇಂದ್ರ ಮಂದಿರ
### ಚಾಮರಾಜಪೇಟೆ, ಬೆಂಗಳೂರು

ಕನ್ನಡ ಸಣ್ಣ ಕತೆಗಳ ಬರಹಗಾರರ ಎರಡನೆಯ ಸಮ್ಮೇಳನವನ್ನು ಇದೇ ಜನವರಿ ೨೦, ೨೧ನೆಯ ತಾರೀಖುಗಳಲ್ಲಿ ಬೆಂಗಳೂರಿನಲ್ಲಿ ಪರಿಷತ್ತಿನ ಸಭಾಂಗಣದಲ್ಲಿ ನಡಸಲು ಏರ್ಪಾಡಾಗಿದೆ.

ಮಂಗಳೂರಿನ ಹಿರಿಯ ಸಾಹಿತಿಗಳಾದ ಶ್ರೀ॥ ಎಂ. ಎನ್. ಕಾಮತ್ ಅವರು ಅಧ್ಯಕ್ಷತೆ ವಹಿಸಲು ದಯವಿಟ್ಟು ಒಪ್ಪಿದ್ದಾರೆ. ಅದೇ ಸಂದರ್ಭದಲ್ಲಿ ಸುಪ್ರಸಿದ್ಧ ಕತೆಗಾರರಾದ ಶ್ರೀ॥ ಮಾಸ್ತಿ ವೆಂಕಟೇಶ ಐಯಂಗಾರ್ಯರ ಭಾವಚಿತ್ರದ ಅನಾವರಣ ಮಹೋತ್ಸವವೂ ನಡೆಯುವುದಾಗಿದೆ. ಕನ್ನಡ ನಾಡಿನ ಎಲ್ಲ ಸಾಹಿತ್ಯಾಭಿಮಾನಿಗಳೂ ದಯಮಾಡಿ ಬಂದು ಉತ್ಸವವನ್ನು ಯಶಸ್ವಿಯಾಗಿ ನಡಸಿಕೊಡಬೇಕಾಗಿ ಪ್ರಾರ್ಥನೆ.

ಉತ್ಸವ ಕಾಲದಲ್ಲಿ ತಮ್ಮ ಕತೆಗಳನ್ನು ಓದಬಯಸುವವರು ಆ ಕತೆಗಳನ್ನು ಜನವರಿ ೧೫ನೆಯ ತಾರೀಖಿನೊಳಗಾಗಿ ತಲುಪುವಂತೆ ಸಂಘದ ಕಾರ್ಯದರ್ಶಿಯವರಿಗೆ ಕಳಿಸಬೇಕು. ಒಪ್ಪಿತವಾದ ಕತೆಗಳನ್ನು ಓದಲು ೫ ನಿಮಿಷ ಅವಕಾಶ ಕೊಡಬಹುದು.

ಈ ಉತ್ಸವಕ್ಕೆ ಸುಮಾರು ೩೦೦ ರೂಪಾಯಿಗಳಿಗೆ ಮೇಲ್ಪಟ್ಟ ಹಣ ಬೇಕಾಗುವುದರಿಂದ ಸಾಹಿತ್ಯಾಭಿಮಾನಿಗಳು ಉದಾರ ಸಹಾಯ ಮಾಡಬೇಕಾಗಿ ಪ್ರಾರ್ಥನೆ.

**ಕೆ. ಗೋಪಾಲಕೃಷ್ಣರಾಯ**
ಗೌ॥ ಕಾರ್ಯದರ್ಶಿ

# ಸಮ್ಮೇಳನದಲ್ಲಿ ಅಂಗೀಕೃತವಾದ ನಿರ್ಣಯಗಳು

## ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಲ್ಲಿ ಕೃತಜ್ಞತಾ ಸಮರ್ಪಣೆ ಮತ್ತು ಪ್ರಾರ್ಥನೆ

೧ ಬೆಳಗಾಂವಿ ನಗರದಲ್ಲಿ ಸೇರಿರುವ ೨೫ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ದಿವ್ಯ ಸನ್ನಿಧಿಯಲ್ಲಿ, ಮಹಾಸ್ವಾಮಿಯವರು ಕನ್ನಡದ ಮತ್ತು ಕನ್ನಡಿಗರ ವಿಷಯದಲ್ಲಿ ತೋರುತ್ತಿರುವ ದಯೆ ಮಮತೆಗಳಿಗಾಗಿ ತನ್ನ ಮನಃ ಪೂರ್ವಕವಾದ ಕೃತಜ್ಞತೆಯನ್ನೂ ಭಕ್ತಿವಿಶ್ವಾಸಗಳನ್ನೂ ಸಮರ್ಪಿಸಲು ಅಪ್ಪಣೆ ಬೇಡುತ್ತದೆ; ಮತ್ತು ಮಹಾಸ್ವಾಮಿಯವರು ಕನ್ನಡ ಸಾಹಿತ್ಯ ಪರಿಷತ್ತನ್ನು ಇನ್ನು ಮುಂದಕ್ಕೂ ಅಭಿಮಾನದಿಂದಲೂ ಔದಾರ್ಯ ದಿಂದಲೂ ಸಂಪೋಷಿಸಿ ಬೆಳಸಬೇಕೆಂದು ಅತ್ಯಂತ ವಿನಯದಿಂದ ಪ್ರಾರ್ಥಿಸುತ್ತದೆ.

## ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಲ್ಲಿ ಕೃತಜ್ಞತಾ ಸಮರ್ಪಣೆ ಮತ್ತು ಪ್ರಾರ್ಥನೆ

೨ ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕನ್ನಡದ ಮತ್ತು ಕನ್ನಡಿಗರ ಏಳಿಗೆ ಗೋಸ್ಕರ ಅತ್ಯಂತ ವಾತ್ಸಲ್ಯದಿಂದ ಅನುಗ್ರಹ ಮಾಡುತ್ತಿರುವುದಕ್ಕಾಗಿ ಬೆಳಗಾಂವಿ ನಗರದಲ್ಲಿ ಸೇರಿರುವ ೨೫ನೆಯ ಕನ್ನಡ ಸಾಹಿತ್ಯಸಮ್ಮೇಳನವು ಮಹಾಸ್ವಾಮಿಯವರಲ್ಲಿ ತನ್ನ ಮನಃಪೂರ್ವಕವಾದ ಕೃತಜ್ಞತೆಯನ್ನೂ ಪ್ರೀತಿವಿಶ್ವಾಸಗಳನ್ನೂ ಸಮರ್ಪಿಸಲು ಅಪ್ಪಣೆ ಬೇಡುತ್ತದೆ; ಮತ್ತು ಮಹಾಸ್ವಾಮಿಯವರು ಇದೇ ತೆರದ ಮರುಕ ಔದಾರ್ಯಗಳಿಂದ ಕನ್ನಡದ ಉದ್ಧಾರಕ್ಕೆ ಆಶ್ರಯದಾತರಾಗಿರಬೇಕೆಂದು ವಿನಯದಿಂದ ಬೇಡುತ್ತದೆ.

೩ ಪರಿಷತ್ತಿನ ಸ್ಥಾಪಕರಲ್ಲೊಬ್ಬರೂ, ಕೆಲವು ಕಾಲ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಪರಿಷತ್ತಿನ ಏಳಿಗೆಗೆ ಕಾರಣರಾದವರೂ, ಕನ್ನಡದ ದೊಡ್ಡ ಅಭಿಮಾನಿಗಳಲ್ಲೊಬ್ಬರೂ ಆಗಿದ್ದ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀ ಎಂ. ಶಾಮರಾವ್, ಎಂ.ಎ., ಅವರು ಕಾಲಾಧೀನರಾದುದಕ್ಕಾಗಿ ಈ ಸಮ್ಮೇಳನವು ತನ್ನ ಅಪಾರ ದುಃಖವನ್ನು ವ್ಯಕ್ತಪಡಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೪ ಪರಿಷತ್ತಿನ ಅಜೀವ ಸದಸ್ಯರೂ ಬಹುಕಾಲ ಅದರ ಕಾರ್ಯ ಸಮಿತಿಯ ಸದಸ್ಯರೂ ದೊಡ್ಡ ವಿದ್ವಾಂಸರೂ ಮೈಸೂರು ವಿಶ್ವವಿದ್ಯಾ ನಿಲಯದ ಕನ್ನಡ ಪ್ರೊಫೆಸರರವರೂ ಕನ್ನಡದ ದೊಡ್ಡ ಅಭಿಮಾನಿಗಳ ಲ್ಲೊಬ್ಬರೂ ಆಗಿದ್ದ ಶ್ರೀ ಟಿ. ಎಸ್. ವೆಂಕಣ್ಣಯ್ಯ, ಎಂ.ಎ., ಅವರು ದೈವಾಧೀನರಾದುದರಿಂದ ಕನ್ನಡ ನಾಡಿಗೆ ಉಂಟಾಗಿರುವ ನಷ್ಟಕ್ಕಾಗಿ ಈ ಸಮ್ಮೇಳನ ತನ್ನ ಸಂತಾಪವನ್ನು ಸೂಚಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೫ ಕನ್ನಡದ ಭಕ್ತರೂ ಪಂಡಿತರೂ ಆಗಿ ಹಲವು ಉತ್ತಮ ನಾಟಕ ಕವಿತೆಗಳನ್ನು ರಚಿಸಿ ಹಿರಿದಾದ ಸೇವೆ ಸಲ್ಲಿಸಿದ ಶ್ರೀ ಸ್ವಾಮಿ ವೆಂಕಟಾದ್ರಿ (ಸಂಸ) ಅವರ ನಿಧನದಿಂದ ದೇಶಕ್ಕಾಗಿರುವ ನಷ್ಟಕ್ಕಾಗಿ ಈ ಸಮ್ಮೇಳನ ತನ್ನ ಅನುತಾಪವನ್ನು ಸೂಚಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೬ ದಕ್ಷಿಣ ಕನ್ನಡ ಜಿಲ್ಲೆಯ ತರುಣ ಕವಿಗಳೂ ಸರಸ ಸಾಹಿತಿ ಗಳೂ ಆಗಿ ಅನೇಕ ಬಗೆಯಲ್ಲಿ ಏಳ್ಗೆಗೆ ಬರುತ್ತಿದ್ದು ವಿದ್ಯಾವ್ಯಾಸಂಗ ಕ್ಕಾಗಿ ಪಡುನಾಡಿನಲ್ಲಿ ಪ್ರವಾಸ ಮಾಡುತ್ತಿದ್ದಾಗಲೇ ತೀರಿಕೊಂಡ ಶ್ರೀ ಪೇಜಾವರ ಸದಾಶಿವರಾಯರ ಮೃತಿಯಿಂದ ಉಂಟಾದ ನಷ್ಟಕ್ಕಾಗಿ ಈ ಸಮ್ಮೇಳನ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೭ ಕೊಡಗಿನ ಮಹಿಳೆಯರಲ್ಲಿ ಗಣ್ಯರಾಗಿ ಅನೇಕ ಸಣ್ಣ ಕತೆ ಮುಂತಾದುವನ್ನು ಬರೆದು ಸಾಹಿತ್ಯಸೇವೆ ಸಲ್ಲಿಸುತ್ತಿದ್ದ ಶ್ರೀಮತಿ ಗೌರಮ್ಮನವರು (ಶ್ರೀಮತಿ ಬಿ. ಟಿ. ಜಿ. ಕೃಷ್ಣ ಅವರು) ತೀರಿಕೊಂಡದ್ದ ರಿಂದ ಉಂಟಾಗಿರುವ ನಷ್ಟಕ್ಕಾಗಿ ಈ ಸಮ್ಮೇಳನವು ಸಂತಾಪವನ್ನು ಸೂಚಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೮ ಮೈಸೂರು ಶಿವಮೊಗ್ಗ ಜಿಲ್ಲೆಯಲ್ಲಿ ಆನವಟ್ಟಿಯಲ್ಲಿದ್ದ ಪಂಡಿತ ಶ್ರೀ ಮೂಗೂರು ಹನುಮಂತಾಚಾರ್ಯರವರು ಬಹುಕಾಲ ಸಾಹಿತ್ಯ ಸೇವೆ ಸಲ್ಲಿಸುತ್ತಿದ್ದು ಈಚೆಗೆ ನಿಧನರಾದ ಪ್ರಯುಕ್ತ ನಾಡಿಗೆ ತುಂಬ ನಷ್ಟವಾಗಿದೆ; ಇದಕ್ಕಾಗಿ ಈ ಸಮ್ಮೇಳನ ತನ್ನ ಸಂತಾಪವನ್ನು ಸೂಚಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೯ ಕನ್ನಡದ ಅಭಿಮಾನಿಗಳೂ ನಾಡಿಗಾಗಿ ಬಹುರೀತಿಯಲ್ಲಿ ದುಡಿದವರೂ ಆಗಿದ್ದ ಬೆಳಗಾಂವಿಯ ವಕೀಲರು ಶ್ರೀ ಮುರಗೆಪ್ಪ ಬಾಳಿ ಅವರೂ, ಶ್ರೀ ಹುಚ್ಚಾಚಾರ್ಯ ಪಾಂಡುರಂಗೀ ಅವರೂ, ಯಾದಗಿರಿ ಸಂಗ್ರಾಮಪ್ಪನವರೂ, ಮೀರಜ್ (ಸೀನಿಯರ್)ನ ಶ್ರೀಮಂತ ಬಾಳಾ ಸಾಹೇಬರವರೂ, ಶ್ರೀ ಶಿವರಾಮ ವಾವಟಿಯವರೂ ನಿಧನರಾದು ದಕ್ಕಾಗಿ ಈ ಸಮ್ಮೇಳನವು ತನ್ನ ಅಪಾರವಾದ ದುಃಖವನ್ನು ವ್ಯಕ್ತ ಪಡಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೧೦ ಬರುವ ೧೯೪೦ರ ಮೇ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆಯಲಿ ರುವ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬವನ್ನು (ರಜತ ಮಹೋತ್ಸವ ವನ್ನು) ಪರಿಷತ್ತಿನ ಆಶ್ರಯದಾತರೂ ಮಹಾಪೋಷಕರೂ ಆಗಿರುವ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಪ್ರಾರಂಭ ಮಾಡಿ ಕೊಟ್ಟು ಅನುಗ್ರಹ ಮಾಡಬೇಕೆಂದು ಎಲ್ಲ ಕನ್ನಡಿಗರ ಪರವಾಗಿ ಬೆಳಗಾಂವಿಯಲ್ಲಿ ನೆರೆದಿರುವ ಈ ಸಮ್ಮೇಳನವು ಮಹಾಸ್ವಾಮಿ ಯವರನ್ನು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೧೧ ೧೯೪೦ರಲ್ಲಿ ನಡೆಯಲಿರುವ ಪರಿಷತ್ತಿನ ರಜತ ಮಹೋತ್ಸ ವಕ್ಕೆ ಎಲ್ಲ ಕನ್ನಡಿಗರೂ ಸಾಹಿತ್ಯ ಸಂಸ್ಕೃತಿ ಸಂಘಗಳೂ ಜನಧನ ಸಹಾಯವನ್ನು ಒದಗಿಸಿಕೊಟ್ಟು ಅದನ್ನು ಯಶಸ್ವಿಯಾಗಿ ನಡಸಿಕೊಡ ಬೇಕೆಂದು ಈ ಸಮ್ಮೇಳನವು ಅವರುಗಳನ್ನು ಪ್ರಾರ್ಥಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೧೨ ಮೈಸೂರು ಶ್ರೀಮನ್ಮಹಾರಾಜರವರ ಘನ ಸರ್ಕಾರದವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಉದಾರವಾದ ವರ್ಷಾಶನವನ್ನು ಇದುವರೆಗೂ ಕೊಡುತ್ತ ಬಂದು ಅದರ ಪುರೋಭಿವೃದ್ಧಿಗೆ ವಿಶೇಷವಾಗಿ ಉಪಕಾರ ಮಾಡಿರುವುದಕ್ಕಾಗಿ ಬೆಳಗಾಂವಿಯಲ್ಲಿ ಸೇರಿರುವ ಈ ಸಮ್ಮೇಳನವು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ; ಪರಿಷತ್ತಿನ ಕಾರ್ಯಕಲಾಪಗಳು ಈಗ ಎಂದಿಗಿಂತ ಹೆಚ್ಚಾಗಿದ್ದು, ಅವನ್ನು ಇನ್ನೂ ವಿಸ್ತರಿಸಿ, ಕನ್ನಡ ನಾಡ ನುಡಿಯ ಸೇವೆ ಮಾಡಬೇಕೆಂಬ ಹಂಬಲು ಪರಿಷತ್ತಿಗಿದೆ; ಆದರೆ ಪರಿಷತ್ತಿನ ದ್ರವ್ಯ ಸಂಪತ್ತು ಅದರ ಉದ್ದೇಶ ಸಾಧನೆಗೆ ಏನೇನು ಸಾಲದಿರುವುದರಿಂದ ಮೈಸೂರು ಸರ್ಕಾರದವರು ಕೃಪೆ ಮಾಡಿ, ಈಗ ಕೊಡುತ್ತಿರುವುದಕ್ಕಿಂತ ಇಮ್ಮಡಿಯಷ್ಟಾದರೂ ದ್ರವ್ಯಸಹಾಯ ಮಾಡಿ ಕನ್ನಡ ನಾಡಿನ ಸಾಂಸ್ಕೃತಿಕ ಅಭಿವೃದ್ಧಿಗೆ ನೆರವಾಗಬೇಕೆಂದು ಈ ಸಮ್ಮೇಳನ ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

(ಮುಂದುವರಿಸಲಾಗುವುದು)

೯-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦

ಅಂಚೆ ಮೂಲಕ : ರೂ. ೨-೮-೦

ಬಿಡಿ ಪತ್ರಿಕೆ :





ಸಂಪುಟ ೨ ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ ಸಂಪಾದಕ :

ಸಂಚಿಕೆ ೧೨ ಬೆಂಗಳೂರು, ಶುಕ್ರವಾರ, ಜನವರಿ ೧೨, ೧೯೪೦ ಬಿ. ವೆಂಕೋಬರಾವ್, ಬಿ.ಎ.

## ತಂದೆಹರಕೆ

ನನ್ನ ರಕ್ತದಿ ಹುಟ್ಟಿ ಬಲಿತಿಹ
ನಾಲ್ಕು ಮಕ್ಕಳು ನಿಲ್ಲಲಿ ;
ನನ್ನ ದಿಬ್ಬಣ ಅವರ ಭುಜದಲಿ
ಮಸಣಸೂಡಿಗ್ಗೆ ನಡೆಯಲಿ.

ನಾನು ಗಳಿಸಿಹ ಪುಣ್ಯ ಕೀರುತಿ
ಅವರ ಬದುಕಿಗೆ ಬೆರೆಯಲಿ ;
ನನ್ನ ಆಸೆಯು ಕನಸ ಕಾಂಕ್ಷೆಯ-
ನವರು ರೂಡಿಸಿ ಬಳಸಲಿ.

ತಲೆಗೆ ತಲೆಮೊರೆ ಹಬ್ಬಿ ಹರಡಲಿ
ನನ್ನ ನೆತ್ತರ ಹೊನಲಲಿ –
ಇವರ ಕಳೆ ಗುಣ ಕೆಳೆಯ ಗಂಡುಲಿ
ಇಳೆಯ ಸಾಸದಿ ಮೊರೆಯಲಿ.

ನಾನು ಕಟ್ಟಿದ ಮನೆಗೆ ಮಾಡಕೆ
ಹೊನ್ನ ಕಳಸಗಳೇಳಲಿ ;
ಲೋಕ ನಡೆಯುವವರೆಗು ಬೆಳಗುತೆ
ಮನೆಯ ದೀವಿಗೆ ಉರಿಯಲಿ.

ತೆರೆದ ಎದೆಮನ ಕೈಯ ಹರಹಿಗೆ
ಇಹವು ಪರವೂ ತುಂಬಲಿ ;
ಅವಕು ಮೀರಿದ ಭಾಗ್ಯವಿದ್ದರೆ
ಅದರ ಭೋಗವು ಇಡುಕಲಿ.

ಇದುವೆ ಸೊಬಗನು ನಟ್ಟು ಬಳಸುವ
ಧರ್ಮವವರಿಗೆ ಫಲಿಸಲಿ ;
ಜಗವ ಪೋಷಿಪ ಎಲ್ಲ ಸತ್ವವು
ಅವರ ತೋಳಲಿ ಮೆರೆಯಲಿ.

ಭುವಿಯ ಬಾಳನು ಮಸಣಗೈದಿಹ
ಹಮ್ಮು ಹಿಂಸೆಯನಿಳಿಸಲಿ ;
ನೆರೆಯ ತಬ್ಬಲಿಯೊಡಲ ಬೇಗೆಗೆ
ನೆರವು ಕರುಣೆಯನೂಡಲಿ.

ತುಂಬಿದವನ್ನೃತದ ತುಷ್ಟಿ ಪುಷ್ಟಿಯ
ನನ್ನ ಮಕ್ಕಳು ಹಂಚಲಿ ;
ಬೇಡುವಾರ್ತರ ಸಲಹಲಾರದ
ಬಂಜೆ ಗತಿ ಮತಿ ಮುರಿಯಲಿ.

– ನೆರವು ಕೆಳೆಗಳ ಕತೆಯ ನಡಸಿರೆ
ಎಲ್ಲ ಕಾಲಕು ಉಳಿಯಲಿ ;
ಹೆರರ ನೋವಿಗೆ ಕರಗದಾವರೆ
ಅಲ್ಲೆ ಅಂದಿಗೆ ಮುಗಿಯಲಿ.

ವಿ. ಸೀ.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಬೆಳಗಾಂವಿಯಲ್ಲಿ ಸೇರಿದ ಕನ್ನಡ ವೃತ್ತಪತ್ರಿಕಾ ಗೋಷ್ಠಿಯ ಅಧ್ಯಕ್ಷರಾದ ಶ್ರೀಮತಿ ಆರ್. ಕಲ್ಯಾಣಮ್ಮನವರು ಮಾಡಿದ ಭಾಷಣ

ತಾವುಗಳು ನನ್ನನ್ನು ಈ ವರ್ಷದ ವೃತ್ತಪತ್ರಿಕಾಕರ್ತರ ಸಮ್ಮೇಳನಕ್ಕೆ ಅಭಿಮಾನದಿಂದ ಆರಿಸಿರುವುದು ನನ್ನ ವ್ಯಕ್ತಿತ್ವಕ್ಕಿಂತ ಹೆಚ್ಚಾಗಿ ನನ್ನ ವೃತ್ತಿಗೆ ತೋರಿಸಿರುವ ಗೌರವವೆಂದು ನಾನು ಭಾವಿಸುತ್ತೇನೆ. ಬರೇ ವ್ಯಕ್ತಿತ್ವವನ್ನು ತೆಗೆದುಕೊಂಡರೆ ಈ ಸಭೆಯಲ್ಲಿ ನನಗಿಂತ ಎಲ್ಲಾ ವಿಷಯಗಳಲ್ಲಿಯೂ ಹಿರಿಯರಾದವರು ಅನೇಕ ಮಹನೀಯರಿರುವರು. ನನ್ನ ವೃತ್ತಿಯಲ್ಲಿಯೂ ಸಹ ನನಗಿಂತ ಹೆಚ್ಚು ಅನುಭವಶಾಲಿಗಳಾದವರು ಈ ಕರ್ತವ್ಯವನ್ನು ನಿರ್ವಹಿಸಬೇಕಾಗಿತ್ತು. ಆದರೆ ನೀವು ನಿಮ್ಮೊಡನೆ ಪತ್ರಿಕಾವೃತ್ತಿಯಲ್ಲಿ ಕೈಲಾದಷ್ಟು ಕನ್ನಡ ಜನತೆಯ ಸೇವೆ ಸಲ್ಲಿಸುತ್ತಿರುವ ನನಗೆ ಈ ಗೌರವ ಕೊಟ್ಟಿರುವುದು ನಿಮ್ಮ ಅಭಿಮಾನದ ಹೆಗ್ಗಳಿಕೆಯೆಂದು ನಾನು ಭಾವಿಸುತ್ತೇನೆ. ಮತ್ತು ಒಂದೇ ವೃತ್ತಿಯ ಮಿತ್ರರೊಡನೆ ನಮ್ಮ ಕಷ್ಟ ಸುಖಗಳನ್ನು ಹೇಳಿಕೊಂಡು ಅಭಿಪ್ರಾಯ ವಿನಿಮಯ ಮಾಡಿಕೊಳ್ಳುವಂತೆ ಹಲವು ವಿಷಯಗಳನ್ನು ತಮಗೆ ಹೇಳ ಬಯಸುತ್ತೇನೆ.

ಮಾನವನು ತನ್ನಂತಹ ಇತರ ಮನುಷ್ಯರೊಬ್ಬರೊಡಗೂಡಿ ಗುಂಪು ಗುಂಪಾಗಿ ಸಾಮಾಜಿಕ ಜೀವನವನ್ನು ನಡಸಲು ಆರಂಭ ಮಾಡಿದಾಗಿನಿಂದ ವೃತ್ತಾಂತದ ಉತ್ಪತ್ತಿಯೂ, ವೃತ್ತಾಂತ ಸಂಗ್ರಹವೂ, ವೃತ್ತಾಂತ ಪ್ರಚಾರವೂ ಆ ವೃತ್ತಾಂತದ ಮೇಲಿನ ವೈಯಕ್ತಿಕ ಅಭಿಪ್ರಾಯ ಪ್ರಚಾರವೂ ಆರಂಭವಾಗಿದೆಯೆನ್ನಬಹುದು. ಇಂದಿನ ವೃತ್ತಪತ್ರಿಕೆಯ ಅರ್ಥವಾದರೂ ಇದೇ. ಈ ಅರ್ಥದಿಂದ ಈ ರೀತಿಯಲ್ಲಿ ಪ್ರಕಟವಾಗುವ ವೃತ್ತಪತ್ರಿಕೆಗಳೇ ಇಂದಿಗೂ ಜನರ ಮನಸ್ಸನ್ನಾಕರ್ಷಿಸಿ ಸರ್ವಾದರಣೀಯವಾದ ಪತ್ರಿಕೆಯೆನಿಸಿಕೊಳ್ಳುತ್ತದೆ. ಮಾನವನ ನಾಗರಿಕತೆಯು ಬೆಳೆದಂತೆ ಈ ವೃತ್ತ ಸಂಗ್ರಹವೂ, ಪ್ರಚಾರಮಾಡುವ ರೀತಿಯೂ ಬದಲಾವಣೆಯಾಗುತ್ತ ಬಂದು ಇಂದು ಪ್ರತಿನಿತ್ಯ ಬೆಳಗ್ಗೆ ನಾವು ಕಣ್ಣೊರಸಿ ಏಳುವ ಹೊತ್ತಿಗೆ ಹಿಂದಿನ ದಿನ ಇಡೀ ಪ್ರಪಂಚದ ಮೂಲೆ ಮೂಲೆಯಲ್ಲಿ ಏನು ನಡೆಯಿತೆನ್ನುವ ಸಮಾಚಾರವನ್ನೆಲ್ಲಾ ಮುದ್ದಾದ ಅಕ್ಷರಗಳಲ್ಲಿ ಮುದ್ರಿಸಿದ ಪತ್ರಿಕೆಗಳು ನಮ್ಮ ಕೈಗಳಲ್ಲಿರುತ್ತವೆ.

ಪತ್ರಿಕೆಗಳು ನಮ್ಮ ಹಾಗೆ ಸುಖದುಃಖಗಳನ್ನನುಭವಿಸುವ ಜನರ ವೃತ್ತಾಂತವನ್ನು ನಮಗೆ ಕೊಡುವುದರಿಂದ ನಮ್ಮ ಸೋದರರ ಸುಖ ದುಃಖವನ್ನೂ ಮನೋಭಾವವನ್ನೂ ನಾವು ತಿಳಿದು ಪರಸ್ಪರ ಸಹಾಯ ಮಾಡುವುದಕ್ಕೂ ಸರ್ವರ ಹಿತಸಾಧನೆಗೆ ಎಲ್ಲರೂ ದುಡಿಯುವಂತೆ ಪ್ರೇರೇಪಿಸುವುದಕ್ಕೂ ಅನುಕೂಲವಾಗುವುದು. ಮನುಷ್ಯರ ಸಾಮಾಜಿಕ ಹಿತಸಾಧನೆಗಾಗಿ ಆರಂಭವಾದ ಸರ್ಕಾರದ ಕರ್ತವ್ಯವಾದರೂ ಅದೇ. ಸಮಾಜ ಸೇವೆಯ ಈ ದೃಷ್ಟಿಯಿಂದ ಒಂದು ಸರ್ಕಾರದ ಕರ್ತವ್ಯವೂ ಪತ್ರಿಕಾ ಕರ್ತವ್ಯವೂ ಒಂದೇ ಆಗಿದೆ. ಉತ್ತಮ ಸರ್ಕಾರವು ತನ್ನ ಪ್ರಜೆಗಳ ಸೇವೆಯನ್ನು ಸರಿಯಾಗಿ ಸಲ್ಲಿಸಬೇಕಾದರೆ ಪತ್ರಿಕೆಗಳ ಸಹಾಯವನ್ನು ಪಡೆಯಲೇ ಬೇಕಾಗುವುದು. ಪ್ರಜಾಸತ್ತಾತ್ಮಕ ಸರ್ಕಾರಕ್ಕಂತೂ ಪತ್ರಿಕೆಗಳೇ ಜೀವಾಳ. ಈ ಕಾರಣದಿಂದಲೇ ಇಂಗ್ಲೆಂಡ್ ಅಮೆರಿಕಾ ಮೊದಲಾದ ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿ ಪತ್ರಿಕೆಗಳಿಗೆ ಪ್ರಾಮುಖ್ಯ ಸ್ಥಾನಗಳಿವೆ.

ಒಂದು ಜನಾಂಗದ ಪತ್ರಿಕೆಗಳ ಯೋಗ್ಯತೆಯಿಂದ ಆ ಜನಾಂಗದ ಸಂಸ್ಕೃತಿಯನ್ನೂ, ರಾಜಕೀಯ ಮತ್ತು ಸಾಮಾಜಿಕ ಯೋಗ್ಯತೆಯನ್ನೂ ನಾವು ಕಂಡುಹಿಡಿಯಬಹುದು. ಪ್ರಜೆಗಳ ಯೋಗಕ್ಷೇಮ ಮತ್ತು ಪ್ರಜಾಭಿಪ್ರಾಯವೇ ಪ್ರಾಮುಖ್ಯವಾಗಿರುವ ಪ್ರಜಾಸತ್ತಾತ್ಮಕ ರಾಷ್ಟ್ರಗಳ ಪತ್ರಿಕೆಗಳ ರೀತಿಯೇ ಬೇರೆ. ಸರ್ವಾಧಿಕಾರಿಗಳ ಆಡಳಿತವೇ ಪ್ರಧಾನವಾಗಿ ಪ್ರಜಾಭಿಪ್ರಾಯಕ್ಕೆ ಜಾಗವೇ ಇಲ್ಲದಿರುವ ರಾಷ್ಟ್ರಗಳ ಪತ್ರಿಕೆಗಳ ರೀತಿಯೇ ಬೇರೆ. ಭಾರತದಂತಹ ಗುಲಾಮ ರಾಷ್ಟ್ರಗಳಲ್ಲಿ ಸಾಮ್ರಾಜ್ಯ ಸರ್ಕಾರಗಳ ಅಂಕೆಗೆ ಒಳಪಟ್ಟಿರುವ ಪತ್ರಿಕೆಗಳ ರೀತಿಯೇ ಬೇರೆ. ಶಿಕ್ಷಣ ಮತ್ತು ಸಂಸ್ಕೃತಿಯಲ್ಲಿ ಮುಂದುವರೆದಿರುವ ರಾಷ್ಟ್ರಗಳ ಮತ್ತು ಶಿಕ್ಷಣದಲ್ಲಿ ಹಿಂದುಳಿದಿರುವ ರಾಷ್ಟ್ರಗಳ ಪತ್ರಿಕೆಗಳಲ್ಲೂ ವ್ಯತ್ಯಾಸಗಳಿವೆ. ಇವೆಲ್ಲಕ್ಕೆ ಮಿಗಿಲಾಗಿ ಪತ್ರಿಕೆಗಳು ಜನತೆಯ ಮನೋಭಾವಕ್ಕನುಸರಿಸಿ ಜನಾಂಗದ ಕನ್ನಡಿಗಳಂತಿವೆ. ಉದಾಹರಣೆಗಾಗಿ ವಿದ್ಯಾಭ್ಯಾಸ ಮತ್ತು ಸಂಸ್ಕೃತಿಯಲ್ಲಿ ಮುಂದುವರೆದಿರುವ ಪ್ರಜಾಸತ್ತಾತ್ಮಕ ರಾಜ್ಯವಾದ ಅಮೆರಿಕಾದಲ್ಲಿ ಪತ್ರಿಕೆಗಳ ತುಂಬ ಬರೇ ವೃತ್ತಾಂತಗಳೇ ಇರುತ್ತವೆ. ವೈಯಕ್ತಿಕ ಮನೋಭಾವವನ್ನು ತಿಳಿಸುವ ಲೇಖನಗಳಾಗಲಿ ರಾಜಕೀಯ ವಿಷಯದ ಲೇಖನಗಳಾಗಲಿ ಇರುವುದೇ ಇಲ್ಲವೆನ್ನಬಹುದು. ಅಲ್ಲಿನ ಜನತೆಗೆ ರಾಜಕೀಯ ವಿಷಯಗಳಾಗಲಿ ಮುಖಂಡರ ವೈಯಕ್ತಿಕ ಅಭಿಪ್ರಾಯಗಳಾಗಲಿ ಬೇಕಾಗಿರುವುದಿಲ್ಲ. ವೃತ್ತಾಂತವೇ ಪ್ರಧಾನವಾಗಿರುತ್ತದೆ.

ಅಲ್ಲಿನ ಪ್ರಮುಖ ಪತ್ರಿಕೆಯಾದ 'ನ್ಯೂಯಾರ್ಕ್ ಟೈಂಸ್' ಪತ್ರಿಕೆಯ ಧ್ಯೇಯವು 'ಮುದ್ರಿಸಲು ಯೋಗ್ಯವಾದ ಎಲ್ಲ ಸುದ್ದಿಗಳು' ಎಂಬ ಮುಖಪತ್ರದ ಮೇಲೆ ಲಿಖಿತವಾಗಿದೆ. ಅದೇ ಜರ್ಮನಿ, ಇಟಲಿ, ರಷ್ಯಗಳ ಪತ್ರಿಕೆಗಳು ಸರ್ವಾಧಿಕಾರಿಗಳ ಮುಷ್ಟಿಯಲ್ಲಿ ಬಲವಾಗಿ ಸಿಕ್ಕಿವೆ. ಸ್ವತಂತ್ರ ಅಭಿಪ್ರಾಯವುಳ್ಳ ಪತ್ರಿಕೆಗಳಿಗೆ ಅಲ್ಲಿ ಸ್ಥಾನವೇ ಇಲ್ಲ. ಪತ್ರಿಕಾ ಕಾರ್ಯಾಲಯಕ್ಕೆ ಬರಲಿರುವ ಟೆಲಿಫೋನ್, ಟೆಲಿಗ್ರಾಫ್ ತಂತಿಗಳಿಂದ ಸಮಾಚಾರಗಳನ್ನು ತೆಗೆದು ಗೆಸ್ಟೆಪೋ ಜನರು ಕದ್ದು ಕೇಳುವರು. ಪ್ರತಿದಿನ ಬೆಳಗ್ಗೆ ಸರ್ಕಾರದ ಪ್ರತಿನಿಧಿಯು ಬರ್ಲಿನಿನಿಂದ ಅಂದು ಪ್ರಕಟಿಸಬೇಕಾದ ವೃತ್ತಾಂತವನ್ನು ರೇಡಿಯೋ ಮೂಲಕ ಪತ್ರಿಕಾಲಯಕ್ಕೂ ತಿಳಿಸುವನು. ಅದನ್ನು ಬಿಟ್ಟು ಬೇರೆ ಸುದ್ದಿಯನ್ನು ಪತ್ರಿಕೆಗಳು ಪ್ರಕಟಿಸುವಹಾಗಿಲ್ಲ. ಸರ್ಕಾರಕ್ಕೆ ವಿರೋಧವಾದ ಸುದ್ದಿ ಪ್ರಕಟಿಸಿದ್ದಾದರೆ ಮರುಗಳಿಗೆಯಲ್ಲಿ ಆ ಸಂಪಾದಕನನ್ನು ಯಾರೂ ಕಂಡು ಕೇಳದ ಜಾಗದಲ್ಲಿ ಬಂಧಿಸಲಾಗುವುದು. ಮತ್ತೆ ಹಲವು ವರ್ಷಗಳವರೆಗೆ ಅವನ ಸುದ್ದಿ ಅವನ ಹೆಂಡಿರು ಮಕ್ಕಳಿಗೂ ತಿಳಿಯುವ ಹಾಗಿಲ್ಲ. ಸಾರ್ವಜನಿಕ ಅಥವಾ ವೈಯಕ್ತಿಕ ಅಭಿಪ್ರಾಯಕ್ಕೆ ಅಲ್ಲಿ ಸ್ಥಳವೇ ಇಲ್ಲ. ವಾಕ್‌ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯವೆಂಬುದನ್ನು ಅವರು ಕನಸಿನಲ್ಲೂ ಕಾಣರು. ಇಂಗ್ಲೆಂಡಿನ ಪತ್ರಿಗಳ ರೀತಿಗೂ ಅಮೆರಿಕಾದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಅಮೆರಿಕದಲ್ಲಿ ಬರೇ ಸಾರ್ವಜನಿಕ ವೃತ್ತಾಂತಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡುವರು. ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಸುದ್ದಿಯು ಕೊನೆಯ ಪುಟಗಳಲ್ಲಿರುತ್ತವೆ. ನಾಟಕ, ಕಲೆ, ಸಾಹಿತ್ಯ, ಮುಖಂಡರ ಅಭಿಪ್ರಾಯಗಳು ಇವುಗಳಿಗೆ ತುಂಬ ಗಮನ ಕೊಡುವರು. ಅಶ್ಲೀಲ ವೃತ್ತಾಂತಗಳಿಗೂ ಶೀಲವಾದ ವೃತ್ತಾಂತಗಳಷ್ಟೇ ಪ್ರಾಧಾನ್ಯತೆ ಈ ಎರಡು ಸೀಮೆಗಳಲ್ಲಿ ದೊರೆಯುವುದು. ಸಾಮಾನ್ಯವಾಗಿ ಶೀಲತೆ ಸಮಾಜದಲ್ಲಿ ಇದ್ದೇ ಇರುತ್ತೆ. ಅದು ವೃತ್ತಾಂತವಾಗುವುದಿಲ್ಲ. ಅಶ್ಲೀಲ ಸುದ್ದಿಗಳೇ ವೃತ್ತಾಂತವೆನಿಸಿಕೊಳ್ಳುತ್ತದೆ. ಅದನ್ನು ಜನತೆಯು ತಿಳಿದು ಅದರ ನಿವಾರಣೆಗೆ ಗಮನಕೊಡಲೆಂಬುದೇ ಆ ಸುದ್ದಿ ಪ್ರಕಟಿಸುವ ಪತ್ರಿಕೆಗಳ ಉದ್ದೇಶವಾಗಿರುತ್ತೆ. ಲಾರ್ಡ್ ನಾರ್ತ್ ಕ್ಲಿಫ್ ಎಂಬ ಪ್ರಮುಖ ಪತ್ರಿಕಾಕರ್ತರ ಅಭಿಪ್ರಾಯದಂತೆ ಒಂದು ಉತ್ತಮ ಪತ್ರಿಕೆಯ ವೃತ್ತಾಂತದಲ್ಲಿ ಸೆಕ್ಸ್ (ಲಿಂಗ), ಧ್ವಜ ಮತ್ತು ಖೂನಿ ಈ ಮೂರು ಬಗೆಯ ವೃತ್ತಾಂತಕ್ಕೆ ಪ್ರಾಮುಖ್ಯತೆ ಇರುತ್ತದೆ. ಫ್ರಾನ್ಸಿನ ಪತ್ರಿಕೆಗಳಲ್ಲಿ ಅಶ್ಲೀಲವಾದ ವೃತ್ತಾಂತಗಳು ಹೆಚ್ಚೆನ್ನಬಹುದು. ಆದರೆ ಫ್ರಾನ್ಸಿನ ಪತ್ರಿಕಾ ಸಂಪಾಕರುಗಳೂ ಪ್ರತಿನಿಧಿಗಳೂ ಬಂಡವಾಳಗಾರರ ಮುಷ್ಟಿಯಲ್ಲಿರುವರು. ದುಡ್ಡಿನ ಆಸೆಗೆ ಅವರು ಏನನ್ನು ಬೇಕಾದರೂ ಮಾಡಬಲ್ಲರು. ಹೊರದೇಶದವರು ಪತ್ರಿಯೊಬ್ಬರೂ ತಮ್ಮ ಸರ್ಕಾರದ ಪ್ರತಿನಿಧಿಯೊಡನೆ ಫ್ರಾನ್ಸಿನ ರಾಜಧಾನಿಯಲ್ಲಿ ತಮ್ಮದೊಂದು ಪತ್ರಿಕೆಯನ್ನೂ ನಡಸುವ ಪದ್ಧತಿಯಿದೆ. ಮೊನ್ನೆ ಯುದ್ಧವಾರಂಭವಾಗುವ ಸಮಯದಲ್ಲಿ ಜರ್ಮನಿಯ ಗೆಸ್ಟೆಪೋಜನರ ಬಲೆಯಲ್ಲಿ ಹಣದಾಸೆಗೆ ಬಲಿಬಿದ್ದು ದೇಶದ್ರೋಹಿಗಳಾದ ಅನೇಕ ಪತ್ರಿಕಾವ್ಯವಸಾಯಿಗಳನ್ನು ಫ್ರಾನ್ಸ್ ಸರ್ಕಾರವು ದಸ್ತಗಿರಿ ಮಾಡಿದ ಸುದ್ದಿ ಬಂದಿದೆ. ಜಪಾನಿನ ಪತ್ರಿಕೆಗಳ ರೀತಿಯೇ ಬೇರೆ. ಪ್ರಪಂಚದ ಪತ್ರಿಕೆಗಳಲ್ಲೆಲ್ಲಾ ಜಪಾನಿನ ಪತ್ರಿಕೆಗಳಿಗೇ ಹೆಚ್ಚು ಪ್ರಚಾರವಿದೆ. 'ಒಸಾಕಾ ನ್ಯೂಸ್' ಎಂಬ ಪತ್ರಿಕೆಗೆ

೩೦ ಲಕ್ಷ ಪ್ರಚಾರವಿದೆ. ಟೋಕಿಯೋದ ಪತ್ರಿಕೆಯೊಂದಕ್ಕೆ ೨೫ ಲಕ್ಷ ಪ್ರಚಾರವಿದೆ. ಅಲ್ಲಿ ಶೇ|| ೯೯ರಷ್ಟು ಇರುವ ವಿದ್ಯಾವಂತರ ಸಂಖ್ಯೆಯೇ ಇದಕ್ಕೆ ಕಾರಣ. ಅಲ್ಲಿನ ಪತ್ರಿಕೆಗಳಲ್ಲಿ ಕೈಗಾರಿಕೆಗೆ ತುಂಬಾ ಪ್ರಾಧಾನ್ಯತೆ ಯಿದೆ. ವೃತ್ತಾಂತಕ್ಕೆ ಎರಡನೆಯ ಸ್ಥಾನವೂ, ಸಾಹಿತ್ಯ ಕಲೆಗಳಿಗೆ ಮೂರನೆಯ ಸ್ಥಾನವೂ ಇದೆ. ಗುಲಾಮ ಜನಾಂಗಗಳಾದ ಭಾರತ, ಆಫ್ರಿಕಾ ಮುಂತಾದ ದೇಶಗಳ ಪತ್ರಿಕೆಗಳ ಲಕ್ಷಣವೇ ಬೇರೆ. ಇವು ಸರ್ವಾಧಿಕಾರಿಗಳ ಹಿಡಿಯಲ್ಲಿ ಸರ್ಕಾರದ ಅಭಿಪ್ರಾಯದಂತೆ ನಡೆ ಯುವ ಪತ್ರಿಕೆಗಳಂತೆಯೂ ಅಲ್ಲ. ಅಥವಾ ಪ್ರಜಾಸತ್ತಾತ್ಮಕ ರಾಷ್ಟ್ರ ಗಳ ಪತ್ರಿಕೆಗಳಂತೆ ಸರ್ವ ಸ್ವತಂತ್ರವಾಗಿಯೂ ಇಲ್ಲ. ಸರ್ಕಾರವನ್ನು ಟೀಕಿಸುವ ಅಭಿಪ್ರಾಯಗಳನ್ನು ಪ್ರಕಟಿಸಲು ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ವಿರುವುದಾದರೂ ಸರ್ಕಾರಕ್ಕೆ ತೊಂದರೆ ಆಗುವಂತಹ ಅಭಿಪ್ರಾಯ ಗಳನ್ನು ಪ್ರಕಟಿಸಲು ಅಪ್ಪಣೆಯಿಲ್ಲ. ಜನತೆಯಲ್ಲಿ ವಿದ್ಯಾಭ್ಯಾಸ, ಪ್ರಪಂಚದ ತಿಳಿವಳಿಕೆ ಕಡಮೆಯಾದುದರಿಂದ ವೃತ್ತಾಂತಕ್ಕಿಂತ ಮುಖಂಡರ ಅಭಿಪ್ರಾಯಗಳಿಗೂ ರಾಜಕೀಯ ವಿಷಯದ ಬರಹ ಗಳಿಗೂ ಪ್ರಾಮುಖ್ಯತೆ ಹೆಚ್ಚು. ನಮ್ಮಲ್ಲಿಯಂತೂ ರಾಜಮಹಾರಾಜರ ಅಥವಾ ಜಮೀನುದಾರರ ಸುದ್ದಿಗಳು, ಪ್ರಮುಖ ರಾಜಕೀಯ ಮುಂದಾಳುಗಳ ಅಭಿಪ್ರಾಯಗಳು, ರಾಜಕೀಯ ಸಭೆಗಳು ಇವುಗಳಿಗೆ ಪತ್ರಿಕೆಗಳು ಮೀಸಲಾಗಿರುತ್ತವೆ. ವೃತ್ತಾಂತಗಳು ಪತ್ರಿಕೆಯ ಕಾಲು ಪಾಲು ಸಹ ಇರುವುದಿಲ್ಲ. ಸಾಹಿತ್ಯ ಕಲೆಗಳಿಗೆ ಕೆಲವು ಪತ್ರಿಕೆಗಳಲ್ಲಿ ಸ್ಥಾನವೇ ಇರುವುದಿಲ್ಲ.

ಹೊರದೇಶದ ಮತ್ತು ಭಾರತದ ಪತ್ರಿಕೆಗಳ ವ್ಯತ್ಯಾಸವನ್ನು ಇಷ್ಟು ವಿವರವಾಗಿ ಹೇಳುವ ನನ್ನ ಉದ್ದೇಶವೇನೆಂದರೆ, ನಾವು ಪತ್ರಿಕೆ ಗಳನ್ನು ಹೇಗೆ ಸುಧಾರಿಸಬಹುದು, ನಮ್ಮ ಪತ್ರಿಕೆಗಳು ನಮ್ಮ ಜನಾಂಗದ ಶ್ರೇಯಸ್ಸಿನ ದೃಷ್ಟಿಯಿಂದ ಯಾವ ಮಾರ್ಗವನ್ನವಲಂಬಿಸ ಬಹುದು ಎಂದು ನಾವು ಈಗ ಗೊತ್ತುಮಾಡಿಕೊಳ್ಳಬೇಕಾಗಿದೆ. ನಮ್ಮಲ್ಲಿ ಜನತೆಯ ವಿದ್ಯಾಭ್ಯಾಸ ತೀರ ಕಡಿಮೆ. ನಮ್ಮ ದೇಶದ ರಾಜಕೀಯ ಗಂಧವರಿಯದ ನಮ್ಮ ಜನರಿಗೆ ಹೊರಗಿನ ಸುದ್ದಿ ಬೇಕಾ ಗಿಲ್ಲ. ಅವರನ್ನು ಪ್ರತಿನಿತ್ಯ ಹಿಂಡುತ್ತಿರುವ ಬಡತನ ಅವರ ಮೇಲೆ ಹೇಗೆ ಕವಿದಿದೆ, ಅದರ ನಿವಾರಣೆ ಆಗುವುದೆಂತು, ಅವರ ಸ್ವಾತಂತ್ರ್ಯವನ್ನು ಕಸಿದುಕೊಂಡು ಅವರನ್ನು ಬಂಧಿಸಿ ಆಳುವವರಾರು ? ಆ ಬಂಧನದ ಪರಿ ಣಾಮವೇನು? ಅದರ ನಿವಾರಣೆ ಆಗುವುದು ಯಾವ ರೀತಿ ಎಂಬ ಪ್ರಬಲ ವಾದ ಸಮಸ್ಯೆಯನ್ನು ಬಿಡಿಸುವ ಸುದ್ದಿ ಅವರಿಗೆ ಬೇಕಾಗಿದೆ. ಅಮೇರಿಕ, ಇಂಗ್ಲೆಂಡಿನಂತೆ ಬರೀ ವೃತ್ತಾಂತ ಬೇಕಾಗಿಲ್ಲ. ಒಬ್ಬ ಹೆಂಗಸು ನಾಲ್ಕು ಮಕ್ಕಳನ್ನು ಹೆತ್ತಳು. ಅಮೆರಿಕದ ಹೆಂಗಸೊಬ್ಬಳು ೧೨ ಮಂದಿಯನ್ನು ಮದುವೆಯಾದಳು. ಇಂಗ್ಲೆಂಡಿನ ತೀರದಲ್ಲೊಂದು ಹಡಗು ಮುಳುಗಿತು. ಈ ಸುದ್ದಿಗಳಿಗಿಂತ ಹರಿಜನರು ದೇವಾಲಯ ಪ್ರವೇಶಮಾಡಿ ಹಿಂದೂ ಧರ್ಮದಲ್ಲಿ ಒಂದು ಸುಧಾರಣೆಯಾಯಿತು. ಕಾಂಗ್ರೆಸು ಸರ್ಕಾರಗಳು ಪ್ರಜಾನುಕೂಲಕ್ಕಾಗಿ ಪಾನನಿರೋಧ ಮೊದಲಾದ ಸುಧಾರಣೆಗಳನ್ನು ತಂದಿರುವರು. ಕಂದಾಯ ಕಡಿಮೆಮಾಡುವ ಯೋಚನೆಯಲ್ಲಿರುವವರು. ಈ ಮುಂತಾದ ಸುದ್ದಿಗಳು ನಮ್ಮ ಜನರಿಗೆ ಹೆಚ್ಚು ರುಚಿಸುತ್ತವೆ. ನಮ್ಮ ಪತ್ರಿಕೆಗಳು ನಿರ್ಭಯವಾಗಿ ಈ ಬಗೆಯ ತಿಳುವಳಿಕೆಯನ್ನು ನಮ್ಮ ಜನರಿಗೆ ಕೊಡಬೇಕಾಗಿವೆ. ರಾಜಕೀಯ ಆರ್ಥಿಕ ಸಾಮಾಜಿಕ ಸಮಸ್ಯೆಗಳ ವಿದ್ಯಾಭ್ಯಾಸವು ನಮ್ಮ ಜನರಿಗೆ ಹೆಚ್ಚು ಹೆಚ್ಚಾಗಿ ಆಗ ಬೇಕಾಗಿದೆ. ರಾಷ್ಟ್ರಪ್ರೇಮವನ್ನು ನಮ್ಮ ಜನರಿಗೆ ಪತ್ರಿಕೆಗಳು ಕಲಿಸ ಬೇಕಾಗಿದೆ. ಸಮಾಜದ ಕಳಂಕಗಳನ್ನೂ ಅವರ ದುಷ್ಪರಿಣಾಮ ವನ್ನೂ ಎತ್ತಿ ತೋರಿಸಿ ಆ ಕಳಂಕಗಳನ್ನು ನಿವಾರಿಸುವ ಪ್ರಯತ್ನ ನಮ್ಮ ಪತ್ರಿಕೆಗಳಿಗೆ ಸೇರಿದೆ. ಈ ಬಗ್ಗೆ ಈ ದಾರಿಯಲ್ಲಿ ನಮ್ಮ ಪತ್ರಿಕೆಗಳು ಮುಂದುವರಿಯುವುದಕ್ಕೆ ನಾವು ಪ್ರಯತ್ನಪಡಬೇಕೆಂದು ನಿಮ್ಮಲ್ಲಿ ಪ್ರಾರ್ಥನೆ.

ಇನ್ನು ಪತ್ರಿಕೆಗಳನ್ನು ಸುಧಾರಿಸುವ ವಿಷಯವಾಗಿ ಒಂದೆರಡು ಸಲಹೆಗಳನ್ನು ಕೊಡಲಿಚ್ಛಿಸುವೆನು. ಪತ್ರಿಕೆಗಳು ಜನದ ಮನವನ್ನಾ ಕರ್ಷಿಸುವುದು ಮೊದಲು ಅದರ ಬಾಹ್ಯಾಡಂಬರ, ಎರಡನೆಯದು ಸುದ್ದಿ ಯನ್ನು ವಿಂಗಡಿಸಿ ಪ್ರದರ್ಶಿಸುವ ರೀತಿ, ಮೂರನೆಯದು ಸುದ್ದಿಗಳ ವೈವಿಧ್ಯ ಇವೆಲ್ಲವುಗಳಲ್ಲಿಯೂ ನಮ್ಮ ಪತ್ರಿಕೆಗಳು ಇತರ ದೇಶಗಳ ಪತ್ರಿಕೆಗಳಿಗಿಂತ ಬಹಳ ಹಿಂದುಳಿದಿವೆ. ನಮ್ಮ ಕನ್ನಡ ಪತ್ರಿಕೆಗಳಂತೂ ಒಂದೆರಡನ್ನು ಬಿಟ್ಟು ಭಾರತದ ಇತರ ಪ್ರಾಂತೀಯ ಪತ್ರಿಕೆಗಳಿಗಿಂತ ಹಿಂದುಳಿದಿದೆಯೆನ್ನಬಹುದು. ಇವುಗಳಲ್ಲಿ ಅಮೆರಿಕದ ಪತ್ರಿಕೆಗಳು ತುಂಬಾ ಸುಧಾರಿಸಿವೆಯೆನ್ನಬಹುದು. ಅಲ್ಲಿಯ ಪತ್ರಿಕೆಗಳಲ್ಲಿ ಮೊದಲ ನೆಯ ಮುಖಪುಟವೇ ಪ್ರಾಮುಖ್ಯವಾದುದು. ಅಂದಿನ ಮುಖ್ಯವಾದ ಸುದ್ದಿಯು ದಪ್ಪ ಅಚ್ಚಕ್ಷರದಲ್ಲಿ ಮೇಲು ಸಾಲಿನಲ್ಲಿ ಮುದ್ರಿಸಲ್ಪಟ್ಟು ಓದುವವರ ಗಮನವನ್ನೆಳೆಯುವುದು. ಈ ಮುಖ ಸುದ್ದಿಯನ್ನು ಆರಿಸು ವುದಕ್ಕೇ ಒಬ್ಬ ನುರಿತ ಕೆಲಸಗಾರನು ಪ್ರತಿ ಪತ್ರಿಕಾಲಯದಲ್ಲಿಯೂ ಇರುವನು. ಅವನಿಗೆ "ಮೇಕ್‌ಅಪ್ ಮ್ಯಾನ್" ಎಂದು ಕರೆಯುವರು. ಇಡೀ ಮುಖಪುಟದ ಜವಾಬ್ದಾರಿ ಇವನ ಮೇಲಿದೆ. ಮುಖಪುಟದ ಆಡಂಬರದಿಂದಲೇ ಪತ್ರಿಕೆಗಳು ಜನಾದರಣೀಯುವಾಗುವುದರಿಂದ ಪತ್ರಿಕೆಗಳನ್ನು ಜನಾದರಣೀಯವಾಗಿ ಮಾಡುವ ಜವಾಬ್ದಾರಿಯೆಲ್ಲಾ ಆತನ ಮೇಲಿರುತ್ತದೆ. ಆತನು ಅಂದಿನ ಎಲ್ಲಾ ಸುದ್ದಿಗಳನ್ನೂ ತಿಳಿದು ಅವುಗಳ ಯೋಗ್ಯತೆಯನ್ನು ತುಲನೆ ಮಾಡಿ ಯಾವಯಾವ ಸುದ್ದಿಗೆ ಯಾವ ಯಾವ ಜಾಗ ಕೊಡಬೇಕೆಂಬುದನ್ನು ನಿರ್ಣಯಿಸುವನು. ಮೇಲು ಸಾಲಿನ ಮುಖ್ಯ ಸುದ್ದಿಯು ವಿವರಣೆ ಮುಖಪುಟದ ಬಲ ಭಾಗದಲ್ಲಿ ಓದುವವರ ದೃಷ್ಟಿ ಮೊದಲು ಬೀಳುವ ಜಾಗದಲ್ಲಿರುತ್ತೆ. ಎರಡು ಮೂರನೇ ಪುಟಗಳಲ್ಲಿ ಇತರ, ಅಷ್ಟು ಪ್ರಾಮುಖ್ಯವಲ್ಲದ ಸುದ್ದಿ ಗಳಿರುತ್ತವೆ. ಸಂಪಾದಕೀಯವು ಸಾಮಾನ್ಯವಾಗಿ ಮಧ್ಯದ ಪುಟ ಗಳಲ್ಲಿರುತ್ತೆ. ಸಾಹಿತ್ಯ, ಕಲೆ, ಶಿಕ್ಷಣ, ವಿಮರ್ಶೆ, ಧಾರಣೆವಾಸಿ, ಹಣಕಾಸಿನ ಸುದ್ದಿ, ಆಟಪಾಟಗಳ ಸುದ್ದಿ, ರೇಡಿಯೋ ಕಾರ್ಯಕ್ರಮ, ಮಹಿಳೆಯರ ಪುಟವೊಂದು ಇವು ಸಾಮಾನ್ಯವಾಗಿ ಪ್ರತಿಕೆಯೊಂದು ಪತ್ರಿಕೆಗಳಲ್ಲಿ ಇರಲೇಬೇಕು. ನಮ್ಮಲ್ಲಿಯೂ ಈ ಮಾದರಿಯಲ್ಲಿ ಹಲವು ಇಂಗ್ಲಿಷ್ ಪತ್ರಿಕೆಗಳೂ ಎಲ್ಲೋ ಒಂದೆರಡು ದೇಶೀಯ ಭಾಷಾ ಪತ್ರಿಕೆಗಳೂ ಪ್ರಕಟವಾಗುತ್ತಿವೆ. ಮದರಾಸಿನ ಹಿಂದು, ಇಂಡಿಯನ್ ಎಕ್ಸ್‌ಪ್ರೆಸ್, ಕಲ್ಕತ್ತೆಯ ಅಮೃತಬಜಾರ್ ಪತ್ರಿಕೆ, ಬೊಂಬಾಯಿ ಕ್ರಾನಿಕಲ್ ಮೊದಲಾದ ಕೆಲವು ಪತ್ರಿಕೆಗಳೂ ನಮ್ಮ ಕನ್ನಡದಲ್ಲಿ ತಾಯಿನಾಡು, ಪ್ರಜಾಮತ, ಲೋಕಮತ, ಕಂಠೀರವ, ಪತ್ರಿಕೆಗಳೂ ಈ ಮಾದರಿಯನ್ನನುಸರಿಸಿವೆ. ಮದರಾಸಿನ ಹಿಂದೂ ಪತ್ರಿಕೆ ತುಂಬಾ ಜನಾದರಣೀಯವಾಗಿದ್ದರೂ ಸಹ ಮೊದಲನೆಯ ಪುಟದಲ್ಲಿ ಬರೀ ಜಾಹೀರಾತನ್ನು ತುಂಬಿ ಮಧ್ಯದ ಪುಟದಲ್ಲಿ ಮುಖ್ಯ ಸುದ್ದಿಕೊಡುವ ಬದಲು ಮುಖ್ಯ ಸುದ್ದಿಯನ್ನು ಮೊದಲ ಪುಟಕ್ಕೆ ತಂದು ಅಮೆರಿಕ ಪತ್ರಿಕೆಗಳಂತೆ ಸುಧಾರಿಸಿದರೆ ಇನ್ನೂ ಜನಾದರಣೀಯವಾಗಬಲ್ಲು ದೆಂದು ನನ್ನ ಅಭಿಪ್ರಾಯ.

ನಮ್ಮಲ್ಲಿ ಪತ್ರಿಕಾವೃತ್ತಿಯವರ ಮಾರ್ಗವು ಸುಗಮವಾಗಿಲ್ಲ. ಅದು ಬಡತನ ಮತ್ತು ನಿರುದ್ಯೋಗಿಯ ವೃತ್ತಿಯೆನಿಸಿಕೊಂಡಿದೆ. ನಮ್ಮ ವೃತ್ತಿಯವರಿಗೆ ಸಲ್ಲಬೇಕಾದಷ್ಟು ಗೌರವ ನಮಗೆ ಸಲ್ಲುತ್ತಿಲ್ಲ. ನಮಗೆ ಸರ್ಕಾರದ ಅಡಚಣೆ, ಮುಖಂಡರ ತಿರಸ್ಕಾರ, ಜನತೆಯ ಅನಾದರಣೆ, ಬಡತನ ಇವೆಲ್ಲ ಮುತ್ತಿಕೊಂಡು ನಮ್ಮ ಧೈರ್ಯ ಉತ್ಸಾಹವನ್ನು ಕುಂದಿಸು ತ್ತಿವೆ. ಇವುಗಳನ್ನೆಲ್ಲ ನಾವೇ ಸುಧಾರಿಸಿಕೊಳ್ಳಬೇಕಾಗಿದೆ. ಅದಕ್ಕೆ ಒಬ್ಬಿಬ್ಬರು ಪ್ರಯತ್ನಪಟ್ಟರೆ ಸಾಲದು. ಸಂಘಶಕ್ತಿ ಬೇಕು. ಇಂಗ್ಲೆಂಡಿ ನಲ್ಲಿರುವಂತೆ ನಮ್ಮಲ್ಲಿಯೂ ಒಂದು ಬಲವಾದ ಪತ್ರಿಕಾಕರ್ತರ ಸಂಘ ಸ್ಥಾಪಿತವಾಗಿ ಒಗ್ಗಟ್ಟಿನಿಂದ ನಮ್ಮ ಕಷ್ಟಗಳನ್ನು ನಿವಾರಿಸಿಕೊಂಡು ಅನುಕೂಲಗಳನ್ನು ಕಲ್ಪಿಸಿಕೊಂಡು ನಮ್ಮ ಗೌರವವನ್ನು ಹೆಚ್ಚಿಸಿಕೊಳ್ಳ ಬೇಕಾಗಿದೆ. ವೃತ್ತಪತ್ರಿಕಾ ಕಾನೂನು ಪಬ್ಲಿಕ್ ಸೆಕ್ಯೂರಿಟಿ ಕಾನೂನು ಇಂಡಿಯನ್ ಪೀನಲ್ ಕೋಡಿನ ೧೨೪ (ಎ) ಕಲಮು, ಕ್ರಿ. ಪ್ರೊ. ಕೋ. ೧೪೪ನೇ ಕಲಮು ಮುಂತಾದುವು ನಮ್ಮನ್ನು ಬಲವಾಗಿ ಬಂಧಿಸಿವೆ. ಇಂಗ್ಲೆಂಡಿನಲ್ಲಿ ಕಾನೂನಿಗೆ ವಿರೋಧವಾಗಿ ಒಂದು ಸುದ್ದಿ ಪ್ರಕಟ ವಾದರೆ ಅದರ ಸಂಪಾದಕರು ಹಾಗೆ ಪ್ರಕಟಿಸಿದುದರ ಕಾರಣವನ್ನು ಸರ್ಕಾರಿ ಅಧಿಕಾರಿಗಳ ಮುಂದೆ ತಿಳಿಸುವಂತೆ ಕರೆಕಳಿಸುವರು. ಆದರೆ ನಮ್ಮಲ್ಲಿ ಐದು ಹತ್ತು ಸಾವಿರ ರೂಪಾಯಿ ಸೆಕ್ಯುರಿಟಿ ಕೊಟ್ಟು ಅದನ್ನು ಕಳೆದುಕೊಳ್ಳಬೇಕಲ್ಲದೆ, ನಮ್ಮ ಮುದ್ರಣಯಂತ್ರ, ಕಾಗದಪತ್ರಗಳನ್ನು




**ಶುಕ್ರವಾರ, ಜನವರಿ ೧೨, ೧೯೪೦**

## ಸಾಹಿತ್ಯ – ದೇಶಾಭಿಮಾನ

ಈಗ ನಮಗೆ ಬೇಕಾಗಿರುವುದು ದೇಶಾಭಿಮಾನವನ್ನು ಹೊಮ್ಮಿಸುವ ಸಾಹಿತ್ಯ. ನೋವು, ಸಾವು, ಸರಸ, ಶೃಂಗಾರ, ವಿನೋದ, ಗಾಳಿ, ಬೆಳಕು ಇವುಗಳನ್ನು ಕುರಿತು ಬರೆಯುತ್ತ ಕುಳಿತರೆ ಈಗಿನ ಸ್ಥಿತಿಯಲ್ಲಿ ಸಾಹಿತ್ಯಕ್ಕೆ ಯಾರು ಬೆಲೆ ಕೊಟ್ಟಾರು? ಮಂಕುತನ ಭ್ರಾಂತಿಗಳಿಂದ ಅಂಥವೇ ವಿಷಯಗಳನ್ನು ಕುರಿತು ಎಂದಿಗೂ ಬರೆಯುತ್ತಾ ಹೋದರೆ ಪಡುವ ಶ್ರಮ ವ್ಯರ್ಥವಾಗುವುದು ಎಂಬ ವಾದವನ್ನೆತ್ತಿ ಹಿರಿಯರೂ ಕಿರಿಯರೂ ಅನೇಕ ಬಗೆಯಾಗಿ ನುಡಿಯುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಸಾಹಿತ್ಯದ ಸ್ವರೂಪ ತಿಳಿಯದವರು ಈ ರೀತಿ ನುಡಿದರೆ ಅದಕ್ಕೆ ಬೆಲೆ ಇರುತ್ತಿರಲಿಲ್ಲ. ಮೇಧಾವಿಗಳೂ ಕಾವ್ಯಗಳನ್ನು ಓದಿದವರೂ ಈ ರೀತಿ ದೊಡ್ಡ ದೊಡ್ಡ ವೇದಿಕೆಗಳಿಂದ ನುಡಿಯುವದು ಇಂಥಾ ವಾದಕ್ಕೆ ಸಲ್ಲದ ಪ್ರಾಶಸ್ತ್ಯವನ್ನು ಕೊಟ್ಟಿದೆ. ಇದನ್ನು ಕುರಿತು ಒಂದೆರಡು ಮಾತುಗಳನ್ನು ಇಲ್ಲಿ ಹೇಳಲಾಗುವದು.

ಕುಳಿತೆಡೆ ಸುಖಪಟ್ಟು ಕಾಲ್ಕಳೆಯುವುದಕ್ಕೆ ಮಾತ್ರವಲ್ಲ ಸಾಹಿತ್ಯ; ಅದು ಕೆಲಸಕ್ಕೆ ಪ್ರೇರಿಸಬೇಕು; ಕೆಲಸ ಮಾಡಿಸುವ ಹುರುಪು ತರಬೇಕು; ಕೇವಲ ಒಂದು ವಿನೋದವಾಗಿಯೊ ಮಾದಕವಾಗಿಯೊ ಇದ್ದರೆ ಸಾಲದು; ತುಂಬಿದಬದುಕು ಬದುಕಲು ಉತ್ಸಾಹ ತರಬೇಕು ಎಂದರೆ ಎಲ್ಲರೂ ಒಪ್ಪುವ ಮಾತಾಗುತ್ತದೆ. ಆದರೆ ನೇರವಾಗಿ ದೇಶಪ್ರೇಮವನ್ನು ಕೆರಳಿಸುವ ಪದ್ಯಗಳನ್ನೂ ಗ್ರಂಥಗಳನ್ನೂ ಬರೆಯಿರೆಂದು ಹೇಳುತ್ತ, ಬರೆದುಬಂದ ಎಲ್ಲ ಸಾಹಿತ್ಯದ ಕಡೆಗೂ ಅಸಹನೆಯಿಂದ ನೋಡುತ್ತ, ಸಾಹಿತಿಗಳನ್ನು ಆಲಸರು, ವ್ಯರ್ಥರು, ಬರಿ ಕನಸಿಗರು ಎಂಬಂತೆ ಹೀಯಾಳಿಸುತ್ತ ನುಡಿಯುವವರ ವಾದವನ್ನು ಕುರಿತು ಮಾತ್ರ ಇಲ್ಲಿ ಹೇಳುತ್ತಿರುವುದು. ಸಾಹಿತ್ಯಕ್ಕೆ ವಿಷಯ ಯಾವುದು, ಸಾಹಿತ್ಯ ಮಾಡಬೇಕಾದ ಕೆಲಸವೇನು ಎಂಬ ಪ್ರಶ್ನೆ ಮೊದಲಿಂದಲೂ ಕೇಳಿದ್ದೇ. ಅದಕ್ಕೆ ಉತ್ತರವನ್ನೂ ಮೊದಲಿಂದಲೇ ಸಾಹಿತಿಗಳೂ ವಿಮರ್ಶಕರೂ ಕೊಟ್ಟಿದ್ದಾರೆ. ಕೆಲವು ಕಾಲಗಳಲ್ಲಿ ಆವರಣದ ವಿಶೇಷ ಲಕ್ಷಣಗಳಿಂದಲೂ ಆವಶ್ಯಕತೆಗಳಿಂದಲೂ ಒಂದೊಂದು ವಿಶೇಷಸಾಹಿತ್ಯಜಾತಿಗೆ ಪ್ರಭಾವ ಬಂದಿರುವುದುಂಟು. ಅದರೆ ಒಟ್ಟಿನಲ್ಲಿ ಸಾಹಿತ್ಯವೆಂಬ ಹೆಸರಿಗೆ ಯಾವ ಸಂಕುಚಿತ ಅರ್ಥವೂ ಸರಿಯಲ್ಲವೆಂಬುದನ್ನು ಜನರ ಮನಸ್ಸು ಒಪ್ಪಿಕೊಂಡಿದೆ. ಮಾನವನ ಬದುಕೆಲ್ಲ–ಅವನ ಕಾರ್ಯರಂಗ ಮನೋರಂಗವೆಲ್ಲ ಸಾಹಿತ್ಯಕ್ಕೆ ವಿಷಯ. ಒಳಗಿನದು ಹೊರಗಿನದು, ನಿನ್ನೆಯದು ನಾಳೆಯದು, ವ್ಯಕ್ತಿಯದು ಸಮಾಜದ್ದು, ಕಣ್ಣೆದುರು ನೆಲಸಿ ಕೋಟಿ ವೈಭವದಿಂದ ಮೆರೆಯುವ ಸಮಗ್ರ ಪ್ರಪಂಚದ್ದು, ಅದರ ಕಥೆ, ಸಂಬಂಧ, ಸ್ಥಿತಿಗತಿ, ಫಲಾಫಲಗಳು ಸಾಹಿತ್ಯಕ್ಕೆ ಸಾಮಗ್ರಿಯಾಗುತ್ತವೆ. ಇನ್ನೂ ಮುಂದೆಹೋಗಿ ಕವಿಗೆ ಸಾಮಗ್ರಿಯಾಗಲಾರದುದು ಒಂದೂ ಇಲ್ಲವೆನ್ನಬಹುದು.

ಪ್ರಪಂಚ ಹುಟ್ಟಿದಂದಿನಿಂದ ಇವುಗಳನ್ನು ಕುರಿತೇ ಕಾವ್ಯ ನಿರ್ಮಾಣವಾಗಿರುವುದು. ಇವುಗಳಲ್ಲಿಯೂ ಹಿರಿಯ ಕವಿಗಳ ಮನಸ್ಸನ್ನು ಮೀಟಿರುವ ವಿಷಯಗಳೆಂದರೆ: ಹುಟ್ಟು, ಬದುಕು, ಸಾವು, ಬಿಡುಗಡೆ; ಭೂಮಿ, ಚೆಲುವು, ಧರ್ಮ; ವಿಧಿ, ಗತಿ ಮುಂತಾದವುಗಳ ತೊಳಲು, ಇವಕ್ಕೆ ಸಂಬಂಧಪಟ್ಟ ಗಹನವಾದ ಜಟಿಲವಾದ ಸಮಸ್ಯೆಗಳು; ಇವೆಲ್ಲಕ್ಕೂ ಸಂಬಂಧಪಟ್ಟಂತೆ ಆಶೆ, ಭರವಸೆ, ಕಾವು, ನೋವು, ಪಾಪಪುಣ್ಯ ವಿಚಾರ, ನಯ ಅನಯ ವಿಚಾರ. ಇತರರು ಜೀವನವನ್ನು ಅರ್ಥಮಾಡಿಕೊಳ್ಳಲು ತಮ್ಮ ರೀತಿಯಲ್ಲಿ ಹೇಗೆ ಪ್ರಯತ್ನಿಸುತ್ತಾರೆಯೋ ಅದರ ಕಷ್ಟನಿಷ್ಠುರಗಳನ್ನು ಹೋಗಲಾಡಿಸಿ ಅದರ ಶುಚಿಬಲಗಳನ್ನು ಹೆಚ್ಚಿಸಲು ಯಾವ ರೀತಿ ಯತ್ನಿಸುತ್ತಾರೆಯೋ ಆದರ್ಶಗಳನ್ನು ಮೇಲೆತ್ತಿ ತೋರಿಸಿ ಆ ಕಡೆಗೆ ನಡೆಯಬೇಕೆಂದು ಹೇಗೆ ಒತ್ತಿ ಹೇಳುತ್ತಾರೆಯೋ, ಹಾಗೆಯೇ ಸಾಹಿತಿಗಳು ತಮ್ಮ ಕಾವ್ಯಗಳಲ್ಲಿ ಬದುಕಿನ ಚಿತ್ರಗಳನ್ನು ತೋರಿಸಿ ತಮ್ಮದಾದ ವಿಶೇಷ ರೀತಿಯಲ್ಲಿ ಪ್ರಪಂಚಕ್ಕೆ ಸೇವೆ ಸಲ್ಲಿಸುತ್ತಾರೆ. ಬದುಕನ್ನು ಪೂರ್ತಿ ತೆಗಳಿ ಶಾಪ ನಿರಾಶೆಗಳಿಂದ ಬರವಣಿಗೆಯನ್ನು ತುಂಬುವ ಕೆಲವು ಅಪವಾದದ ಸಾಹಿತಿಗಳನ್ನು ಬಿಟ್ಟರೆ ಉಳಿದವರೆಲ್ಲ ಸಾಮಾನ್ಯವಾಗಿ ಬದುಕಿಗೆ ಮರ್ಯಾದೆ ಸಲ್ಲಿಸಿಯೇ ಬರೆಯುವುದು. ತಾವೂ ತಮ್ಮ ಸುತ್ತಲ ಪ್ರಪಂಚವೂ ಮೇಲಾಗಬೇಕು, ಸತ್ವ ಮಂಗಳಗಳ ತಿರುಳು ಬಲಿಯಬೇಕು ಎಂಬುದೇ ಎಲ್ಲ ಸಾಹಿತಿಗಳ ಗುರಿ. ಈ ಕಾರ್ಯಸಾಧನೆಯಲ್ಲಿ ಅವರವರ ಸ್ವಭಾವ, ಚಾರಿತ್ರ್ಯ, ಅನುಭವ ಯೋಗ್ಯತೆಗಳಿಗೆ ತಕ್ಕಂತೆ ಸತ್ಯದ ಸ್ವರೂಪವನ್ನು ಅರಿತು ವರ್ಣಿಸುತ್ತಾರೆ, ವ್ಯಾಖ್ಯಾನಮಾಡುತ್ತಾರೆ; ಆ ಕಡೆಗೆ ಒಲವನ್ನೂ ಚಲವನ್ನೂ ಹಾಯಿಸಲು ಪ್ರಯತ್ನಪಡುತ್ತಾರೆ. ಅವರಿಗೆ ಮುಖ್ಯ ಬೇಕಾದುದು ಒಂದೇ – ಬಾಳು ಹಸನಾಗಬೇಕೆಂಬುದು. ಅದಕ್ಕಾಗಿ ತಾವು ಕುದಿದು ಇನ್ನೊಬ್ಬರನ್ನು ಕುದಿಸುವರು. ಆ ಕುದಿತದ ಫಲವಾಗಿಯೇ ಜನರ ಮನಸ್ಸು ತನಗೇ ತಿಳಿಯದಂತೆ ಸರಿಯಾದುದರ ಕಡೆಗೆ ಒಲೆಯುವುದು ಎಂದು ಅವರ ನಂಬಿಕೆ. ಬರವಣಿಗೆಯ ಚೆಲುವಿನಿಂದ ಕಾವ್ಯಾನಂದ ದೊರೆತು ಕುದಿತದ ಬೇಗೆ ಕ್ಷಣಮಾತ್ರ ಮರೆಯುವುದು. ಹೀಗಾಗಿ ಪ್ರತಿಯೊಬ್ಬ ಸಾಹಿತಿಯೂ ತನ್ನ ಕಾಲದಲ್ಲಿ ತನ್ನ ಸುತ್ತಲಿನ ಬಾಳನ್ನು ಚೊಕ್ಕಗೊಳಿಸುವ ಪ್ರಯತ್ನದಲ್ಲಿಯೇ ತೊಡಗಿರುವಾಗ ಅವನ ಸೇವೆ ದೇಶ ಸೇವೆ ಅಲ್ಲವೆಂದರೆ ಅದು ಮತ್ತೇನು? ದೇಶ ಪ್ರೇಮವೇ ಅಲ್ಲವೆ ಅವನ ಈ ಕುದಿತಕ್ಕೂ ಕಾರಣ? ದೇಶ, ಕಾಲ ಎಂದರೆ ಜನದ ಬದುಕಲ್ಲವೆ ಒಂದು ದೊಡ್ಡ ಅರ್ಥದಲ್ಲಿ?

ಜನವನ್ನು ಸಂತೋಷಗೊಳಿಸುವುದು; ಕಲ್ಲು ಮನಸ್ಸನ್ನು ಕರಗಿಸುವುದು, ನಯಮಾಡುವದು; ದುರ್ಬಲವಾದುದಕ್ಕೆ ಬಲವೂಡುವುದು, ವೀರ್ಯ ಕೆರಳಿಸುವುದು; ವಸ್ತು ಪ್ರಪಂಚದಲ್ಲಿನ ಚೆಲುವು ಸಂತೋಷಗಳನ್ನು ಕುರಿತು ಹಾಡುವುದು ಹೊಗಳುವುದು; ಮಾನವನ ಶುಭಕ್ಕೆ ಕಾರಣವಾಗುವ ಪ್ರಭಾವಗಳು ಇಂಥವೆಂಬುದನ್ನು ನೇರವಾಗಿಯೂ ಪರೋಕ್ಷವಾಗಿಯೂ ತೋರಿಸುವುದು; ಸೋಲು ಅಪಮಾನಗಳಲ್ಲಿ, ಗೆಲವು ಕೀರ್ತಿಗಳಲ್ಲಿ ಹಿರಿನಡತೆಯನ್ನೂ ಮಹಾನುಭಾವತೆಯನ್ನೂ ಕಾಣಿಸುವುದು; ವ್ಯಕ್ತಿಜೀವನದಲ್ಲಿಯೂ ಸಮಾಜ ಜೀವನದಲ್ಲಿಯೂ ಬಲಿದ ಅನ್ಯಾಯ, ಕ್ರೌರ್ಯ, ಅಸಮತೆಗಳನ್ನು ಎದೆ ಕರಗುವಂತೆ ತೋರಿಸಿ ಜನದ ಮನಸ್ಸು ಅವುಗಳ ಸಂಸ್ಕರಣಕ್ಕೆ ತಿರುಗುವಂತೆ ಮಾಡುವುದು; ಎಲ್ಲ ಕಾಲದ ಶುಭ ಸೂಚಿಸುವುದು; ಇಂಥವು ಒಳ್ಳೆಯ ಸಾಹಿತಿಗಳ ಎಲ್ಲ ಕಾಲದ ಕೆಲಸ. ಈ ಕೆಲಸದಲ್ಲಿ ನಿಷ್ಠೆಯಿಂದಲೂ ಸತ್ಯೈಕಪಕ್ಷಪಾತದಿಂದಲೂ ಸಾಹಿತಿ ತನ್ನ ದಾರಿಯನ್ನು ನಡೆದು ತನ್ನ ಅನುಭವವನ್ನು ಜನದ ಮುಂದಿರಿಸಿ, ತನ್ನನುಭವಕ್ಕೆ ಅವನ್ನೊಲಿಸಿಕೊಳ್ಳಲು ಪ್ರಯತ್ನಿಸುವನು. ಇದಕ್ಕಿಂತ ದೊಡ್ಡ ಸೇವೆ ಕವಿ, ಸಾಹಿತಿ ತನ್ನ ಕಾಲಕ್ಕಾಗಲಿ ತನ್ನ ನಾಡಿಗಾಗಲಿ ಮಾಡಲಾರನು. ನಿಜವಾಗಿ ಇದು ನಾಡಿನ ಉದ್ಧಾರ ಕಾರ್ಯ.

ರಾಜಕೀಯ ಅಥವಾ ಆರ್ಥಿಕ ಕಷ್ಟಗಳು ಹುಚ್ಚು ರೇಗಿಸಿರುವ ಈ ಕಾಲದಲ್ಲಿ ಹೊರಗಿನ ತಬ್ಬಲಿತನಗಳನ್ನು ನೀಗಲು ಸಂದಣಿಗೆ ಸ್ಫೂರ್ತಿ ಉಂಟುಮಾಡಬಲ್ಲ ನಾಲ್ಕು ಒರಟು ಗೀತೆಗಳನ್ನು ಬರೆವರೆ ಮಾತ್ರ ದೇಶ ಪ್ರೇಮ ಕೆರಳುವುದೆಂಬ ಮಾತು ಅಷ್ಟು ಸರಿಯಲ್ಲ. ಹತ್ತು ಹೆಸರುಗಳನ್ನು ಪೋಣಿಸಿ ನೇರವಾಗಿ ಜನಗಳನ್ನು ಹೀಗೆ ಮಾಡಿ ಹಿರಿಯಿರಿ, ಮುರಿಯಿರಿ ಎಂದು ಹೇಳುವ ಸಂಪ್ರದಾಯ ಸಾಹಿತ್ಯದಲ್ಲಿ ಉಚ್ಚವಾದ ಅಥವಾ ನಯವಾದ ಸಂಪ್ರದಾಯವಲ್ಲ. ಅಥವಾ ಪೂರ್ವ ಚರಿತ್ರೆಯ ಸಂಗತಿಗಳನ್ನೆತ್ತಿ, ಹಿಂದಿನ ದ್ವೇಷಗಳನ್ನು ಉದ್ರೇಕಗೊಳಿಸಿ, ಸೋದರರಂತೆ ಈ ನಾಡಿನಲ್ಲಿಯೇ ಬಹುಕಾಲ ವಾಸಮಾಡಬೇಕಾಗಿರುವ ಜನರಲ್ಲಿ ಅನೈಕಮತ್ಯ ಹುಟ್ಟಿಸುವಂತಹ ಬರವಣಿಗೆ ಬರೆದು ಅದನ್ನು

ದೇಶಾಭಿಮಾನದ ಸಾಹಿತ್ಯವೆನ್ನಲೂ ಆಗುವುದಿಲ್ಲ. ಒಂದೊಂದು ಗಿಡವೂ ತನ್ನ ಚಿಗುರು, ಹೂ, ಹಣ್ಣು ತಳೆದು ತನ್ನ ಬಗೆಯಲ್ಲಿ ಪ್ರಕೃತಿಯ ಶಕ್ತಿಯನ್ನೂ ಸತ್ಯವನ್ನೂ ತೋರುವಂತೆ, ಪ್ರತಿಯೊಂದು ಕಲೆಯೂ ಮನಸ್ಸೂ ತನ್ನ ತನಿರಸವನ್ನೂ ಪರಿಪಾಕವನ್ನೂ ನಾಡಿನ ಸಂಸ್ಕಾರಕ್ಕಾಗಿ ಎರೆಯುತ್ತದೆ. ಮಲ್ಲಿಗೆಯನ್ನು ಸಂಪಿಗೆ ಬಿಡೆನ್ನುವದೂ ಸಂಪಿಗೆಯನ್ನು ಹಲಸು ಹೆರು ಎನ್ನುವದೂ ಅಸ್ವಾಭಾವಿಕ, ಅನ್ಯಾಯ. ಒಂದು ರೀತಿಯಲ್ಲಿ ಧರ್ಮ ವಂಚನೆ.

ಆಯಾ ಪ್ರಭಾವಗಳ ಒತ್ತಡವೂ ಕೆರಳಿಕೆಯೂ ಬಂದಾಗ ನಿಜವಾದ ಸಾಹಿತ್ಯಶಕ್ತಿ ದಿನ ದಿನದ ಸಂದರ್ಭಕ್ಕೆ ಬೇಕಾದಂತೆ ಕೂಡ ಕೆರಳುವುದು, ಕೂಗುವುದು, ಹೊಂದುವುದು; ಆದರೆ ಈ ದಿನದಿನದ ಕೆಲಸದ ಜತೆಗೆ ಎಲ್ಲ ಕಾಲಕ್ಕೂ ಸತ್ಯವಾದ ಸಂಪತ್ತಿಯನ್ನು ಬೆಳಸತಕ್ಕ ಕೆಲಸದಲ್ಲಿಯೂ ತೊಡಗಿರುವುದು. ಸಾಹಿತಿಯ ಮನಸ್ಸು ಸಂತತವಾಗಿ ಜಾಗೃತವಾದದ್ದು. ಎಲ್ಲ ಗಾಳಿ ಬೆಳಕುಗಳಿಗೂ ತೊನೆಯುವುದು; ಎಲ್ಲ ಪ್ರಭಾವಗಳನ್ನೂ ಆಕರ್ಷಿಸಿಕೊಳ್ಳುವುದು; ಉಂಟಾದ ಅನುಭವದ ಮೇಲೆ ತನ್ನ ಮುದ್ರೆ ಒತ್ತಿ ಅದನ್ನು ಬಾಳಿನ ಪೋಷಣೆಗಾಗಿ ಕಳಿಸಿಕೊಡುವುದು. ಅದರಲ್ಲಿ ಇರುವ ಜೀವಶಕ್ತಿ ಸಂತತವಾಗಿ ಪ್ರಪಂಚದ ರಕ್ತದಲ್ಲಿ ಕಲೆತು ಉಳಿದು ಅದರ ಸತ್ವವನ್ನು ಕಾಪಾಡುತ್ತಲೇ ಹೋಗುವುದು. ಇದೂ ನಿಸ್ಸಂಶಯವಾಗಿ, ನಾಡಸೇವೆಯೇ, ಜನ ಸೇವೆಯೇ—ಎಂದು ಒಪ್ಪುವ ಕಾಲ ಎಷ್ಟು ಬೇಗ ಬಂದರೆ ಅಷ್ಟು ಕ್ಷೇಮವೆಂದು ಹೇಳಬಹುದು.

——

## ಪರಿಷತ್ತಿನ ಸುದ್ದಿ

ಬೆಳಗಾಂವಿಯಲ್ಲಿ ನಡೆದ ೨೪ನೆಯ ವಾರ್ಷಿಕಾಧಿವೇಶನದಲ್ಲಿ ಈ ಕೆಳಗೆ ಕಂಡಂತೆ ಚುನಾವಣೆಗಳು ನಡೆದುವು.

### ಅಧ್ಯಕ್ಷರು

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಅವರು.

### ಅಧಿಕಾರಿಗಳು

ಉಪಾಧ್ಯಕ್ಷರು: ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಪ್ರೊಫೆಸರ್ ಮತ್ತು ಗೌರವ ಕನ್ನಡ ಪ್ರೊಫೆಸರ್, ಬೆಂಗಳೂರು.

ಗೌರವ ಕಾರ್ಯದರ್ಶಿಗಳು: ಶ್ರೀ ಬಿ. ವೆಂಕೋಬರಾವ್, ಬಿ.ಎ. ಅವರು, ಮೈಸೂರು ಸರ್ಕಾರದ ನಿವೃತ್ತ ಆರ್ಕಿಟೆಕ್ಚರಲ್ ಅಸಿಸ್ಟೆಂಟರು, ಬೆಂಗಳೂರು.

ಗೌರವ ಕೋಶಾಧಿಕಾರಿಗಳು: ಶ್ರೀ ಡಿ. ಸಿ. ಸುಬ್ಬರಾಯಪ್ಪ, ಬಿ.ಎ. ಬಿ.ಎಲ್. ಅವರು, ಮೈಸೂರು ಸರ್ಕಾರದ ನಿವೃತ್ತ ಅಂಡರ್‌ಸೆಕ್ರೆಟರಿಗಳು, ಬೆಂಗಳೂರು.

### ಕಾರ್ಯ ಸಮಿತಿ

೧. ಉಪಾಧ್ಯಕ್ಷರು: (ಸಮಿತಿಯ ಅಧ್ಯಕ್ಷರು.)
೨. ಸಮ್ಮೇಳನಾಧ್ಯಕ್ಷರು: (ಶ್ರೀ ಮುದವೀಡು ಕೃಷ್ಣರಾಯರು, ಧಾರವಾಡ.)
೩. ಗೌರವ ಕಾರ್ಯದರ್ಶಿಗಳು.
೪. ಗೌರವ ಕೋಶಾಧಿಕಾರಿಗಳು.

#### ಮೈಸೂರು ಕರ್ನಾಟಕ

ಶ್ರೀಗಳಾದ

೫. ವಿ. ಸೀತಾರಾಮಯ್ಯ, ಎಂ.ಎ. ಅವರು, ಕನ್ನಡ ಲೆಕ್ಚರರು ಇಂಟರ್‌ಮೀಡಿಯೆಟ್ ಕಾಲೇಜು, ಬೆಂಗಳೂರು.
೬. ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು, ಮೈಸೂರು ಸರ್ಕಾರದ ಕನ್ನಡ ಟ್ರಾನ್ಸ್‌ಲೇಟರು, ಬೆಂಗಳೂರು.
೭. ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎಸ್‌ಸಿ., ಎಲ್‌ಎಲ್.ಬಿ. ಅವರು, ಅಡ್ವೊಕೇಟರು, ಶಿವಮೊಗ್ಗ.
೮. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರು, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರೊಫೆಸರ್, ಮೈಸೂರು.

#### ಉತ್ತರ ಕರ್ನಾಟಕ

೯. ಎಂ. ಪಿ. ವಾಲಿ, ಎಂ.ಎ. ಅವರು, ಚೀಫ್ ಆಫೀಸರು, ಡಿ॥ ಲೋ॥ ಬೋ॥ ಬೆಳಗಾಂವಿ.
೧೦. ಆರ್. ವಿ. ಜಾಗೀರ್‌ದಾರ್, ಎಂ.ಎ. (ಲಂಡನ್) ಅವರು, ಸಂಸ್ಕೃತ ಪ್ರೊಫೆಸರ್, ಕರ್ನಾಟಕ ಕಾಲೇಜು, ಧಾರವಾಡ.
೧೧. ಶ್ರೀ ಬಸವಲಿಂಗ ಸ್ವಾಮಿಗಳು, ಶ್ರೀ ಗವೀಮಠ, ನವಲಗುಂದ.
೧೨. ವಿ. ಕೆ. ಗೋಕಾಕ, ಬಿ.ಎ. (ಆಕ್ಸನ್) ಅವರು, ಇಂಗ್ಲಿಷ್ ಪ್ರೊಫೆಸರ್, ಮತ್ತು ವೈಸ್-ಪ್ರಿನ್ಸಿಪಲ್, ವಿಲ್ಲಿಂಗ್ಡನ್ ಕಾಲೇಜು, ಸಾಂಗ್ಲಿ.
೧೩. ಎಂ. ಜಿ. ವೆಂಕಟೇಶಯ್ಯ, ಎಂ.ಎ., ಬಿ.ಟಿ. ಅವರು, ಅಧ್ಯಾಪಕರು, ಮುನಿಸಿಪಲ್ ಹೈಸ್ಕೂಲು, ಬಳ್ಳಾರಿ.

#### ಹೈದರಾಬಾದ್ ಕರ್ನಾಟಕ

೧೪. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು, ಪ್ರಿನ್ಸಿಪಾಲ್, ಶ್ರೀ ಶಂಕರ ಸಂಸ್ಕೃತ ಕಾಲೇಜು, ಯಾದಗಿರಿ.

#### ಮಂಗಳೂರು ಮತ್ತು ಕೊಡಗು

೧೫. ಕೆ. ಶಿವರಾಮ ಕಾರಂತರು, ಪುತ್ತೂರು.

#### ಅರಮನೆಯ ಪ್ರತಿನಿಧಿ

೧೬. (ನೇಮಕವಾಗಬೇಕಾಗಿದೆ.)

### ಪ್ರಾಂತ ಸಮಿತಿಗಳು

#### (೧) ಮೈಸೂರು ಕರ್ನಾಟಕ

ಶ್ರೀಗಳಾದ—

(೧) ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಅವರು, ಬೆಂಗಳೂರು
(೨) ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು, ,,
(೩) ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ. ಅವರು, ,,
(೪) ಜಿ. ಶಾಂತವೀರಪ್ಪ, ಬಿ.ಎ. ಅವರು, ,,
(೫) ಶ್ರೀಮತಿ ಡಿ. ಚಂಪಾಬಾಯಿ, ಎಂ.ಎ. ಅವರು, ,,
(೬) ಎಂ. ನರಸಿಂಹಮೂರ್ತಿ, ಬಿ.ಎ. ಅವರು, ,,
(೭) ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರು, ,,
(೮) ಎಸ್. ವಿ. ರಂಗಣ್ಣ, ಎಂ.ಎ. ಅವರು, ,,
(೯) ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರು, ಮೈಸೂರು
(೧೦) ಎಚ್. ಚನ್ನಕೇಶವಯ್ಯಂಗಾರ್, ಎಂ.ಒ.ಎಲ್. ಅವರು, ,,
(೧೧) ಕೆ. ಆಂಬ್ರೋಸ್ ಆನಂದ, ಬಿ.ಎ. ಅವರು, ಬೆಂಗಳೂರು
(೧೨) ಎಂ. ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು, ,,
(೧೩) ಎಸ್. ವಿ. ಶ್ರೀನಿವಾಸಶೆಟ್ಟಿ, ಅವರು, ,,
(೧೪) ಕೆ. ಗೋಪಾಲಕೃಷ್ಣರಾವ್, ಬಿ.ಎ. ಅವರು, ,,
(೧೫) ಎನ್. ಬಾಲಕೃಷ್ಣಯ್ಯ, ಬಿ.ಎ., ಎಲ್‌ಎಲ್.ಬಿ. ಅವರು, ,,
(೧೬) ಎನ್. ಎಸ್. ರಾಮಚಂದ್ರಯ್ಯ, ಎಂ.ಎ. ಅವರು, ,,
(೧೭) ಬಿ. ಆರ್. ಪುಟ್ಟನಂಜಪ್ಪ, ಎಂ.ಎ., ಎಲ್‌ಎಲ್.ಬಿ. ಅವರು, ಶಿವಮೊಗ್ಗ
(೧೮) ಶ್ರೀಮತಿ ಆರ್. ಕಲ್ಯಾಣಮ್ಮನವರು. ಬೆಂಗಳೂರು
(೧೯) ಎಸ್. ಗೋಪಾಲಸ್ವಾಮಿ, ಎಂ.ಎ. ಅವರು. ,,
(೨೦) ಕೆ. ವಿ. ಪುಟ್ಟಪ್ಪ, ಎಂ.ಎ. ಅವರು. ,,
(೨೧) ಎಸ್. ಶ್ರೀನಿವಾಸಯ್ಯನವರು. ,,

#### (೨) ಉತ್ತರ ಕರ್ನಾಟಕ

ಶ್ರೀಗಳಾದ—

(೧) ಎಸ್. ಪಿ. ದೇಶಾಯಿ ಅವರು, ಮುರಗೋಡು,
(೨) ಎಸ್. ಎಸ್. ಬಸವನಾಳ, ಎಂ.ಎ. ಅವರು, ಬೆಳಗಾಂವಿ.
(೩) ಚ. ಚ. ಅಬಕಾರ ಅವರು, ಬನಹಟ್ಟಿ (ಜಮಖಂಡಿ).
(೪) ವಿ. ಜಿ. ಕುಲಕರ್ಣಿ, ಎಂ.ಎ., ಎಲ್‌ಎಲ್.ಬಿ. ಅವರು, ಬೆಳಗಾಂವಿ.
(೫) ಡಾ॥ ಎಸ್.ಸಿ. ನಂದೀಮಠ, ಎಂ.ಎ., ಪಿಎಚ್.ಡಿ. ಅವರು, ಬೆಳಗಾಂವಿ.
(೬) ಪೋತ್ದಾರ ರಂಗಪ್ಪನವರು, ಬಿ.ಎ., ಧಾರವಾಡ.
(೭) ಪ್ರೊ॥ ಎಸ್. ಎಸ್. ಮಾಳವಾಡರು, ಎಂ.ಎ., ಧಾರವಾಡ.
(೮) ಮಾಧವ ತಿರುಮಲ ದೇಶಪಾಂಡೆ ಅವರು, ಹೊನ್ನೂರು (ಜಮಖಂಡಿ.)
(೯) ವಿ. ಬಿ. ನಾಯಕ್, ಎಂ.ಎ., ಎಲ್‌ಎಲ್.ಬಿ. ಅವರು, ಬಿಜಾಪುರ.
(೧೦) ಮುರಿಗೆಯ್ಯ ಸೋಮಯ್ಯ ಜೆಂಗಿನ ಅವರು, ಬಾಗಲಕೋಟೆ.
(೧೧) ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. ಅವರು, ಬಿಜಾಪುರ.
(೧೨) ಎಸ್. ಆರ್. ಮಂಗಳವೇಢೆ ಅವರು, ಬಾಗಲಕೋಟೆ.
(೧೩) ಆರ್. ಆರ್. ದಿವಾಕರ್, ಎಂ.ಎ., ಎಲ್‌ಎಲ್.ಬಿ. ಅವರು, ಹುಬ್ಬಳ್ಳಿ.
(೧೪) ನಾರಾಯಣ ವೆಂಕಟೇಶ ಕುರಡಿ, ಬಿ.ಎ., ಅವರು, ಧಾರವಾಡ.
(೧೫) ದ. ರಾ. ಬೇಂದ್ರೆ, ಎಂ.ಎ., ಅವರು, ಧಾರವಾಡ.
(೧೬) ಶ್ರೀನಿವಾಸ ಪೋತ್ದಾರರು, ಧಾರವಾಡ.
(೧೭) ಎಸ್. ಆರ್. ಗಣಪತಿ ಅವರು, ಬಳ್ಳಾರಿ.
(೧೮) ವೈ. ಮಹಾಬಲೇಶ್ವರಪ್ಪನವರು, ಬಳ್ಳಾರಿ.

#### (೩) ಮಂಗಳೂರು ಮತ್ತು ಕೊಡಗು

ಶ್ರೀಗಳಾದ

(೧) ವಿದ್ವಾನ್ ಕಡೆಂಗೋಡ್ಲು ಶಂಕರ ಭಟ್ಟರು, ಮಂಗಳೂರು.
(೨) ,, ಮುಳಿಯ ತಿಮ್ಮಪ್ಪಯ್ಯನವರು, ,,
(೩) ಶಿವರಾಮ ಕಾರಂತರು, ಪುತ್ತೂರು
(೪) ವಿದ್ವಾನ್ ಟಿ. ನಾರಾಯಣಭಟ್ಟರು, ಮಂಗಳೂರು
(೫) ಜಿ. ವಾಮನಭಟ್ಟರು, ಬಿ.ಎ., ಎಲ್.ಟಿ., ,,

#### (೪) ಹೈದರಾಬಾದು ಕರ್ನಾಟಕ

ಶ್ರೀಗಳಾದ –

(೧) ಪಿ. ರಾಮಾಚಾರ್ಯರು, ಹೈದರಾಬಾದ್
(೨) ರಾಘವೇಂದ್ರರಾವ್ ಚಾಕಲಬ್ಬಿ ಅವರು, ಕೊಪ್ಪಳ
(೩) ಕೆ. ವೆಂಕಟರಾಯರು, ರಾಯಚೂರು
(೪) ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಯಾದಗಿರಿ
(೫) ಡಿ. ಕೆ. ಭೀಮಸೇನರಾಯರು, ಎಂ.ಎ., ಹೈದರಾಬಾದು
(೬) ಸಿದ್ಧವನಹಳ್ಳಿ ಕೃಷ್ಣಶರ್ಮರು, ,,
(೭) ಅಶ್ವತ್ಥರಾಯರು, ಬಿ.ಎ., ಎಲ್‌ಎಲ್.ಬಿ., ಗುಲ್ಬರ್ಗ

# ಸಮ್ಮೇಳನದಲ್ಲಿ ಅಂಗೀಕೃತವಾದ ನಿರ್ಣಯಗಳು

(ಮುಂದುವರಿದುದು)

೧೩ ಸಾಂಗಲಿ ಸಂಸ್ಥಾನದ ರಾಜಾ ಸಾಹೇಬರವರು ಪ್ರಜಾಪಕ್ಷದ ನಾಯಕರೂ ಕನ್ನಡಿಗರೂ ಆದ ಶಿರಿಹಟ್ಟಿಯ ಶ್ರೀಮಾನ್ ಮಹಿಷಿ ಅಶ್ವತ್ಥರಾಯರವರನ್ನು ಮಂತ್ರಿಮಂಡಲಕ್ಕೆ ನೇಮಿಸಿಕೊಂಡು ಶಿಕ್ಷಣ ಖಾತೆಯನ್ನು ಅವರಿಗೆ ಒಪ್ಪಿಸಿ, ಸಂಸ್ಥಾನದಲ್ಲಿ ಕನ್ನಡದ ಏಳಿಗೆಗೆ ಅವಕಾಶ ಕೊಟ್ಟಿರುವುದಕ್ಕಾಗಿಯೂ, ಶಿರಹಟ್ಟಿ ತಾಲ್ಲೂಕಿನಲ್ಲಿ ರಾಜ್ಯವ್ಯವಹಾರವೆಲ್ಲಾ ಕನ್ನಡದಲ್ಲಿ ಇರಬೇಕೆಂದು ಅನುಜ್ಞೆಕೊಟ್ಟಿರುವುದಕ್ಕಾಗಿಯೂ ಈ ಸಮ್ಮೇಳನ ರಾಜಾಸಾಹೇಬರವರನ್ನು ಅಭಿವಂದಿಸುತ್ತದೆ. ಇದೇ ಸಂದರ್ಭದಲ್ಲಿ ತೇರದಾಳ ಹಾಗೂ ಶಹಾಪೂರ್ ಈ ಎರಡೂ ಕನ್ನಡ ವಿಭಾಗಗಳಲ್ಲಿ ಮೇಲಿನಂತೆ ರಾಜ್ಯವ್ಯವಹಾರಭಾಷೆ ಕನ್ನಡವಾಗುವಂತೆ ಅನುಜ್ಞೆ ದಯಪಾಲಿಸಬೇಕೆಂದು ಈ ಸಮ್ಮೇಳನ ರಾಜಾ ಸಾಹೇಬರವರನ್ನು ಪ್ರಾರ್ಥಿಸುತ್ತದೆ.

**ಸೂಚಕರು :** ಶ್ರೀ ವಿ. ಡಿ. ಅರಬಳ್ಳಿಯವರು

**ಅನುಮೋದಕರು :** ಶ್ರೀ ಗುಂಡಪ್ಪ ಅರವಾಡೆಯವರು

೧೪ ಮುಧೋಳ ಸಂಸ್ಥಾನದಲ್ಲಿ ಸಂಸ್ಥಾನದ ತಾಯ್ನುಡಿಯಾದ ಕನ್ನಡಕ್ಕೆ ಸಂಪೂರ್ಣ ಮನ್ನಣೆಯನ್ನು ಕೊಟ್ಟುದಕ್ಕೆ ರೀಜೆಂಟ್ ರಾಣೀ ಸರ್ಕಾರದವರನ್ನೂ ಮತ್ತು ಈ ಕೆಲಸವನ್ನು ತೀವ್ರವಾಗಿ ಜಾರಿಗೆ ತರಲು ಯತ್ನಮಾಡಿದುದಕ್ಕಾಗಿ ದಿವಾನರವರನ್ನೂ ಈ ಸಮ್ಮೇಳನ ಅಭಿನಂದಿಸುತ್ತದೆ.

ಸಂಸ್ಥಾನದ ಅನುಮತಿ ದೊರೆತ ಕೂಡಲೆ ಸಂಸ್ಥಾನದ ಎಲ್ಲ ಪ್ರಾಥಮಿಕ ಶಾಲೆಗಳನ್ನು ಒಮ್ಮೆಲೇ ಕನ್ನಡ ಮಾಡಿದುದಕ್ಕಾಗಿ ಸಂಸ್ಥಾನದ ರೈತ ಅಸೆಂಬ್ಲಿಯ ಮತ್ತು ಅದರ ಪ್ರೆಸಿಡೆಂಟರಾದ ಶ್ರೀ ರಾಮಣ್ಣ ಸೋನ್ನದರವರನ್ನೂ ಮತ್ತು ಅದಕ್ಕೆ ಎಲ್ಲ ಅನುಕೂಲತೆಗಳನ್ನು ತೀವ್ರವಾಗಿ ಪುಕ್ಕಟೆಯಾಗಿ ಒದಗಿಸಿಕೊಟ್ಟುದಕ್ಕಾಗಿ ಕರ್ನಾಟಕ ಲಿಂಗಾಯತ ಎಜ್ಯುಕೇಷನ್ ಸೊಸೈಟಿಯನ್ನೂ ಈ ಸಮ್ಮೇಳನ ಅಭಿನಂದಿಸುತ್ತದೆ.

**ಸೂಚಕರು :** ಶ್ರೀ ವ್ಹಿ. ಪಿ. ಕಿತ್ತೂರ ಅವರು

**ಅನುಮೋದಕರು :** ಶ್ರೀ ಅನಂತರಾವ್ ಚಿಕ್ಕೋಡಿ ಅವರು, ಶ್ರೀ ತಲ್ಲೂರ ಅವರು.

೧೫ ಮುಂಬಯಿ ಪ್ರಾಂತದ ವರಿಷ್ಠ ವಿಧಿಮಂಡಲದ (Upper House) ಮತದಾರ ಸಂಘಗಳಲ್ಲೊಂದಾದ ಬೆಳಗಾಂವಿ, ಬಿಜಾಪುರ, ಸೋಲಾಪುರ ಮತದಾರ ಸಂಘದೊಳಗಿಂದ ಸೋಲಾಪುರ ಜಿಲ್ಲೆಯ ಮರಾಠೀ ಭಾಗವನ್ನು ಬೇರ್ಪಡಿಸಿ ಈ ಮತದಾರ ಸಂಘವನ್ನು ಕೇವಲ ಕರ್ನಾಟಕ ಮತದಾರಸಂಘವಾಗಿಯೇ ಮಾರ್ಪಡಿಸಬೇಕೆಂದು ಈ ಸಮ್ಮೇಳನವು ಸರಕಾರವನ್ನು ಪ್ರಾರ್ಥಿಸುತ್ತದೆ. ಹಾಗೆಯೆ ಮುಂಬಯಿ ಸರಕಾರದ ಸಹಕಾರಿಖಾತೆಯವರು ಮೊನ್ನೆ ಏರ್ಪಡಿಸಿದ ವಿಭಾಗಗಳಲ್ಲಿ ವಿಜಾಪುರಜಿಲ್ಲೆಯನ್ನು ಸೊಲ್ಲಾಪುರಮೊಂದಿಗೆ ಜೋಡಿಸಿರುವುದರಿಂದ ಕನ್ನಡದ ಹಿತ ಸಂಬಂಧಗಳಿಗೆ ತೀವ್ರವಾದ ಧಕ್ಕೆ ತಗಲುವುದೆಂಬ ಹೆದರಿಕೆಯು ತಲೆದೋರುತ್ತಿದೆ. ಆದುದರಿಂದ ವಿಜಾಪುರ ಜಿಲ್ಲೆಯನ್ನು ಕರ್ನಾಟಕದ ಬೇರೆ ಜಿಲ್ಲೆಗಳಾದ ಧಾರವಾಡ, ಬೆಳಗಾಂವಿ, ಕಾರವಾರಗಳೊಂದಿಗೆ ಇಟ್ಟು ಕೆಲಸದ ವ್ಯವಸ್ಥೆ ಮಾಡಬೇಕೆಂದು ಈ ಸಮ್ಮೇಳನ ಮುಂಬಯಿ ಸರಕಾರವನ್ನು ಪ್ರಾರ್ಥಿಸುತ್ತದೆ.

**ಸೂಚಕರು :** ಶ್ರೀ ಚಿಕ್ಕೋಡಿ ಅವರು.

**ಅನುಮೋದಕರು :** ಶ್ರೀ ಬುರ್ಲಿ ಬಿಂದು ಮಾಧವ ಅವರು.

೧೬ ಬೆಳಗಾಂವಿ ಜಿಲ್ಲೆಯ ಲೋಕಲ್ ಬೋರ್ಡಿನ ಮತದಾರ ಪಟ್ಟಿಗಳು ಮತ್ತು ಮುಂಬಯಿ ಕಾನೂನುಮಂಡಲದ ಕೆಲವು ಮತದಾರ ಸಂಘಗಳಲ್ಲಿ ಪಟ್ಟಿಗಳು ಕನ್ನಡೇತರ ಭಾಷೆಯಲ್ಲಿ ಪ್ರಸಿದ್ಧವಾಗುತ್ತಿರುವ ವಿಷಯದ ಬಗ್ಗೆ ಈ ಸಮ್ಮೇಳನ ತನ್ನ ವಿಷಾದವನ್ನು ವ್ಯಕ್ತಪಡಿಸುತ್ತದೆ. ಮತ್ತು ಅಲ್ಲಿನ ಕನ್ನಡ ಜನತೆಯ ಅನುಕೂಲಕ್ಕಾಗಿ ಈ ಮತದಾರ ಪಟ್ಟಿಗಳನ್ನು ಕನ್ನಡದಲ್ಲಿ ಪ್ರಸಿದ್ಧವಾಗುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನ ಸರ್ಕಾರದವರನ್ನು ಬೇಡಿಕೊಳ್ಳುತ್ತದೆ.

**ಸೂಚಕರು :** ಶ್ರೀ ಚಿಕ್ಕೋಡಿ ಅನಂತರಾಯರು.

**ಅನುಮೋದಕರು :** ಶ್ರೀ ಎಸ್. ಪಿ. ಅಡ್ಡಣಗಿಯವರು.

೧೭ ಬೆಳಗಾಂವಿ ಜಿಲ್ಲೆಯಲ್ಲಿ ಕನ್ನಡಿಗರೇ ಬಹುಸಂಖ್ಯಾಕವಾಗಿ ಉಳ್ಳ ಊರುಗಳಲ್ಲಿ ಕನ್ನಡ ಶಾಲೆಗಳನ್ನೇ ಸ್ಥಾಪಿಸಬೇಕೆಂದು ಈ ಸಮ್ಮೇಳನ ಬೆಳಗಾಂವಿಯ ಜಿಲ್ಲಾಸಂಸ್ಥೆಯನ್ನು ಆಗ್ರಹಪೂರ್ವಕವಾಗಿ ಪ್ರಾರ್ಥಿಸುತ್ತದೆ.

**ಸೂಚಕರು :** ಶ್ರೀ ಚಿಕ್ಕೋಡಿ ಅವರು.

**ಅನುಮೋದಕರು :** ಶ್ರೀ ಬಿ. ಜಿ. ಕುಲಕರ್ಣಿ ಅವರು.

೧೮ ಧಾರವಾಡದ ಕರ್ನಾಟಕ ವಿದ್ಯಾವರ್ಧಕಸಂಘವು ಸ್ಥಾಪಿತವಾಗಿ ೫೦ ವರ್ಷಗಳು ಮುಗಿಯುವುದರಿಂದ ೧೯೪೦ರಲ್ಲಿ ಅದರ ಸುವರ್ಣಮಹೋತ್ಸವವನ್ನು ನೆರವೇರಿಸುವ ನಿಶ್ಚಯವಾಗಿರುವುದು ಕನ್ನಡಿಗರೆಲ್ಲರಿಗೂ ಸಂತೋಷದ ಸಂಗತಿಯಾಗಿದೆ. ಆದುದರಿಂದ ಅಖಿಲ ಕರ್ನಾಟಕದ ಜನರೆಲ್ಲರೂ ಕರ್ನಾಟಕ ವಿದ್ಯಾವರ್ಧಕ ಸಂಘದ ಈ ಸುವರ್ಣಮಹೋತ್ಸವಕ್ಕೆ ಆವಶ್ಯಕವಾದ ಎಲ್ಲ ಬಗೆಯ ಸಹಾಯ ಸಹಕಾರವನ್ನು ನೀಡಬೇಕೆಂದು ಈ ಸಮ್ಮೇಳನವು ಎಲ್ಲರನ್ನೂ ಬೇಡಿಕೊಳ್ಳುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೧೯ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲದ ಸ್ಥಾಪನೆಯಾಗಿ ೨೫ ವರ್ಷಗಳಾಗಿರುವುದರಿಂದ ಈ ಸಂಬಂಧದಲ್ಲಿ ನೆರವೇರಲಿರುವ ರೌಪ್ಯ ಮಹೋತ್ಸವ ಪ್ರಸಂಗವು ವಿಜೃಂಭಣೆಯಿಂದ ನೆರವೇರುವಂತೆ ಎಲ್ಲ ಕನ್ನಡಿಗರು ಎಲ್ಲ ವಿಧದ ಸಹಾಯವನ್ನು ಕೊಡಬೇಕೆಂದು ಈ ಸಮ್ಮೇಳನವು ಬಿನ್ನವಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೨೦ ಮೈಸೂರು ವಿಶ್ವವಿದ್ಯಾನಿಲಯದಲ್ಲಿ 'ಫ್ಯಾಕಲ್ಟಿ ಆಫ್ ಓರಿಯಂಟಲ್ ಸ್ಟಡೀಸ್' ಶಾಖೆಯನ್ನು ಏರ್ಪಡಿಸಬೇಕೆಂದು ಈ ಸಮ್ಮೇಳನ ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೨೧ ಈಗ ಹೈಸ್ಕೂಲು ತರಗತಿಗಳಲ್ಲಿರುವಂತೆ ಕಾಲೇಜು ತರಗತಿಗಳಲ್ಲಿಯೂ ಭಾಷೇತರ ವಿಷಯಗಳನ್ನು ಕನ್ನಡದ ಮೂಲಕ ಬೋಧಿಸುವ ಏರ್ಪಾಟನ್ನು ಶೀಘ್ರದಲ್ಲಿಯೇ ಕೈಕೊಳ್ಳಬೇಕೆಂದು ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಈ ಸಮ್ಮೇಳನ ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೨೨ ಬೊಂಬಾಯಿ ವಿಶ್ವವಿದ್ಯಾನಿಲಯದವರು ಉತ್ತರ ಕರ್ನಾಟಕ ಸಂಸ್ಥಾನಗಳನ್ನು ಸದ್ಯಕ್ಕೆ ಡೆಕ್ಕನ್ ವಿಭಾಗದಲ್ಲಿ ಸೇರಿಸಿದ್ದು ಮುಂದೆ ಅವುಗಳನ್ನು ಕರ್ನಾಟಕ ವಿಭಾಗದಲ್ಲಿ ಸೇರಿಸಬೇಕೆಂದು ಈ ಸಮ್ಮೇಳನವು ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೨೩ ಐ. ಸಿ. ಎಸ್. ಪರೀಕ್ಷೆಯಲ್ಲಿ ವಿದ್ಯಾರ್ಥಿಗಳು ಕನ್ನಡ ತೆಗೆದುಕೊಂಡು ಉತ್ತೀರ್ಣರಾಗಲು ಅವಕಾಶವಿಲ್ಲದಿರುವುದರಿಂದ ಕನ್ನಡ ಯುವಕರಿಗೆ ಅಪಾರವಾದ ಅನ್ಯಾಯವಾಗಿದೆ. ಇತರ ದೇಶ ಭಾಷೆಗಳಿಗೆ ಕೊಟ್ಟಂತೆಯೇ ಕನ್ನಡ ಭಾಷೆಗೂ ಮಾನ್ಯತೆ ಕೊಟ್ಟು ಪರೀಕ್ಷಾ ವಿಷಯಗಳಲ್ಲಿ ಅದನ್ನೂ ಸೇರಿಸಿಕೊಳ್ಳಬೇಕೆಂದು ಇಂಡಿಯಾ ಸರಕಾರವನ್ನು ಈ ಸಮ್ಮೇಳನ ಆಗ್ರಹಪೂರ್ವಕವಾಗಿ ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೨೪ "ಕನ್ನಡ ಸಾಹಿತ್ಯದಲ್ಲಿ ಒಂದು ಕಾಲಕ್ಕೆ ಅತ್ಯಂತ ವೈಭವದಿಂದ ಮೆರೆದು ಜನಜೀವನದಲ್ಲಿ ಪ್ರಾಪಂಚಿಕ, ಪಾರಮಾರ್ಥಿಕ ಎಂಬ ಎರಡು ಬಗೆಯ ಸುಖಸಾಧನಗಳಿಗೆ ಮಾರ್ಗಮಾಡಿಕೊಟ್ಟು ಕನ್ನಡ ಜನಾಂಗವನ್ನು ಉದ್ಧಾರಮಾರ್ಗಕ್ಕೆ ಹಚ್ಚಿದ ಶ್ರೀ ಹರಿದಾಸ ಕೂಟ ವಾಙ್ಮಯವು ಬಹು ವಿಶಾಲವಾಗಿದ್ದರೂ ಸದ್ಯಕ್ಕೆ ಸಾಕಷ್ಟು ಉಪಲಬ್ಧವಿಲ್ಲ. ಆದುದರಿಂದ ಈಗ ಸಂಶೋಧಿತವಾಗಿ ಪ್ರಕಟವಾಗಿರುವ ದಾಸ ವಾಙ್ಮಯದ ಹೊರ್ತಾಗಿ ಉಳಿದಿರುವ ಸಹಸ್ರಾವಧಿ ಪದ

ಪದ್ಯಾದಿ ಸಾಹಿತ್ಯವನ್ನು ಸಂಗ್ರಹಿಸಿ, ಪರಿಷ್ಕರಿಸಿ, ಮುದ್ರಿಸಿ ಪ್ರಕಟಿಸುವ ಕಾರ್ಯವನ್ನು ಕನ್ನಡ ಸಾಹಿತ್ಯದ ಆ ಶಾಖೆಯ ಅಭಿರುಚಿಯುಳ್ಳವರು ಅತ್ಯಗತ್ಯವಾಗಿ ಕೈಕೊಂಡು ಪೂರೈಸಬೇಕೆಂದು ಈ ಸಮ್ಮೇಲನ ಸರ್ವರಿಗೂ ಆಗ್ರಹಪೂರ್ವಕವಾಗಿ ಬಿನ್ನವಿಸುತ್ತದೆ.

ಈ ಮಹತ್ಕಾರ್ಯವನ್ನು ಕೈಕೊಂಡು ನೆರವೇರಿಸಲು ಮುಂದಾಗ ಬಹುದಾದವರಿಗೆ ನೆರವಾಗುವುದಕ್ಕೆ ಸಾಹಿತ್ಯ ಪರಿಷತ್ತಿನವರು ತಮಗೆ ಯೋಗ್ಯ ಕಂಡ ಮೇರೆಗೆ ಒಂದು ಉಪಸಮಿತಿಯನ್ನು ನೇಮಿಸಿ, ಅದರಿಂದ ಈ ಕಾರ್ಯವನ್ನು ಮಾಡಿಸುವ ಉಪಕ್ರಮವನ್ನು ಕೈಕೊಳ್ಳ ಬೇಕೆಂದು ಪರಿಷತ್ತಿಗೆ ಈ ಸಮ್ಮೇಳನ ಬಿನ್ನವಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು ಕೈಕೊಳ್ಳಬಹುದಾದ ಈ ಮಹತ್ಕಾರ್ಯಕ್ಕೆ ಕನ್ನಡ ನಾಡಿನ ಯಾವತ್ತೂ ಸಾಹಿತ್ಯ ಭಕ್ತರೂ, ದಾಸ ವಾಙ್ಮಯದ ಪುರಸ್ಕರ್ತರೂ ಅಭ್ಯಾಸಿಗಳೂ ತಂತಮ್ಮ ಸಲಹೆಸಹಕಾರಗಳನ್ನು ನೀಡಿ ಅಧಿಕ ದ್ರವ್ಯ ಸಹಾಯಮಾಡಿ ನೆರವಾಗಬೇಕೆಂದು ಈ ಸಮ್ಮೇಳನ ಎಲ್ಲರನ್ನೂ ಬಿನ್ನವಿಸುತ್ತದೆ.

ಸೂಚಕರು : ಶ್ರೀ. ಎಸ್. ಬಿ. ಕಲಮದಾನಿ.
ಅನುಮೋದಕರು : ಶ್ರೀ. ಶೇಷಾಚಾರ್ಯಕಟ್ಟಿ.

(ಈ ಠರಾವಿನಲ್ಲಿ ಅಡಕವಾಗಿರುವ ಕೆಲಸವನ್ನು ಕೂಡಲೆ ಕೈಕೊಂಡು ನಡಸಲು ಅನುಕೂಲವಾಗಬೇಕೆಂದು ೫೧ ರೂ. ಗಳ ಮೂಲಕಾಣಿಕೆಯನ್ನು ಶ್ರೀಮಾನ್ ಕಮಲದಾನಿ ನಾರಾಯಣ ರಾಯರು ಪರಿಷತ್ತಿಗೆ ಸಲ್ಲಿಸುವುದಾಗಿ ವಾಗ್ದಾನ ಮಾಡಿದ್ದಾರೆ.

ಹಾಗೆಯೇ ತಮ್ಮ ಕಡೆಗೆ ಇರುವ ಅನೇಕ ಸಹಸ್ರ ಕನ್ನಡ ಪದ್ಯಗಳ ಸಂಗ್ರಹವನ್ನೂ ತಮಗೆ ಆ ವಿಷಯವಾಗಿರುವ ಅಲ್ಪಸ್ವಲ್ಪ ಜ್ಞಾನಭಕ್ತಿಗಳನ್ನೂ ಪರಿಷತ್ತಿನ ಮುಖಾಂತರವಾಗಿ ಕನ್ನಡ ಸರಸ್ವತಿಯ ಸೇವೆಗೆ ಸಲ್ಲಿಸುವುದಾಗಿಯೂ ಆಶ್ವಾಸನ ಕೊಟ್ಟಿದ್ದಾರೆ.

ಮುಂದೆಯೂ ಅನುಕೂಲವಾದಂತೆ ಇನ್ನೂ ಹೆಚ್ಚುಹೆಚ್ಚಾಗಿ ೫೧ ರೂಪಾಯಿಗಳಂತೆ ಕೈಲಾದಮಟ್ಟಿಗೆ ಕಾಣಿಕೆಗಳನ್ನು ಈ ಕಾರ್ಯಕ್ಕಾಗಿ ಸಮರ್ಪಿಸುವ ತಮ್ಮ ನಿಶ್ಚಯವನ್ನೂ ಪ್ರಕಟಗೊಳಿಸಿದ್ದಾರೆ.)

೨೫ ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಬಿ.ಎ., ಎಂ.ಎ., ಪರೀಕ್ಷೆಗಳಲ್ಲಿ ಕನ್ನಡೇತರ ಭಾಷೆಗಳನ್ನು ಐಚ್ಛಿಕ ವಿಷಯಗಳನ್ನಾಗಿ ಇಟ್ಟುಕೊಂಡು ಉಚ್ಚತರಗತಿಯಲ್ಲಿ ತೇರ್ಗಡೆ ಹೊಂದಿದವರಿಗೆ ಬಹುಮಾನವನ್ನೂ, ವಿದ್ಯಾರ್ಥಿವೇತನವನ್ನೂ (Scholarship) ಕೊಡುವ ಏರ್ಪಾಡು ಮಾಡಲಾಗಿದೆ: ಆದರೆ ಕನ್ನಡಕ್ಕೆ ಈ ತರಹದ ಏರ್ಪಾಡು ಇಲ್ಲದಿರುವುದು ಶೋಚನೀಯಕರವಾದ ಸಂಗತಿಯಾಗಿದೆ. ಆದುದರಿಂದ ಈ ಸಮ್ಮೇಳನ ಎಲ್ಲ ಕನ್ನಡಬಾಂಧವರನ್ನು ಈ ತರಹದ ಸೌಕರ್ಯಗಳನ್ನು ಒದಗಿಸಿಕೊಡಲು ಪ್ರಯತ್ನಿಸುವಂತೆ ಸವಿನಯದಿಂದ ಬೇಡಿಕೊಳ್ಳುತ್ತದೆ.

ಸೂಚಕರು : ಶ್ರೀ. ಜಂಬಿಗೆ ಅವರು.
ಅನುಮೋದಕರು : ಶ್ರೀ.ಪುರಾಣಿಕ್ ಅವರು.

೨೬ ಸಾಂಗಲಿ ಸಂಸ್ಥಾನದ ಮಂತ್ರಿಮಂಡಲದಲ್ಲಿ ಪ್ರಜಾಪಕ್ಷದ ಪರವಾಗಿ ನೇಮಕ ಹೊಂದಿರುವ ತಿರಹಟ್ಟಿಯ ಶ್ರೀ ಮಹಿಪಿ ಅಶ್ವತ್ಥ ರಾಯರವರನ್ನು ಈ ಸಮ್ಮೇಳನ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ. ಮತ್ತು ಅವರ ಆಳಿಕೆಯಲ್ಲಿ ಆ ಸಂಸ್ಥಾನದೊಳಗಿನ ಕನ್ನಡ ಪ್ರಜೆಗಳಿಗೂ ಅವರ ತಾಯ್ನುಡಿಯಾದ ಕನ್ನಡದ ಉನ್ನತಿಗೂ ಇನ್ನೂ ಹೆಚ್ಚು ಹೆಚ್ಚಾಗಿ ಸೇವೆ ಸಹಾಯಗಳು ಸಲ್ಲುವವೆಂದು ಈ ಸಮ್ಮೇಳನ ನಂಬಿದೆ.

ಸೂಚಕರು : ಶ್ರೀ. ರಂ. ಶ್ರೀ. ಮುಗುಳಿ ಅವರು
ಅನುಮೋದಕರು : ಶ್ರೀ. ಆರ್. ಪಿ. ಕುಲಕರ್ಣಿ ಅವರು

೨೭ ಕನ್ನಡ ನಾಡುನುಡಿಗಳ ಒಕ್ಕೂಟಕ್ಕಾಗಿ ದುಡಿಯುತ್ತಿರುವ ಅಖಿಲ ಕರ್ನಾಟಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಹಣದ ಕೊರತೆಯಿಂದ ಗುರಿಯಲ್ಲಿಟ್ಟುಕೊಂಡಿರುವ ಅನೇಕ ಕಾರ್ಯಗಳನ್ನು ನಡೆಸಲು ಸಾಧ್ಯವಿಲ್ಲವಾಗಿದೆ; ದಿನೇ ದಿನೇ ಪರಿಷತ್ತಿನ ಕಾರ್ಯಕ್ಷೇತ್ರ ವಿಸ್ತಾರವಾಗಿ ಅದರ ಹೊಣೆ ಹೆಚ್ಚುತ್ತಿದೆ; ಈ ಸಂದರ್ಭದಲ್ಲಿ ಕನ್ನಡ ನಾಡಿನ ಎಲ್ಲ ಭಾಗಗಳ ಸರ್ಕಾರಗಳ ಧಾರ್ಮಿಕ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಬೆಂಬಲ ಪರಿಷತ್ತಿಗೆ ಅತ್ಯಾವಶ್ಯಕವಾಗಿದೆ; ಆದ್ದರಿಂದ ಮೈಸೂರು ಸರ್ಕಾರದವರು ಈಗ ಪರಿಷತ್ತಿಗೆ ಕೊಡುತ್ತಿರುವಂತೆ ಕನ್ನಡ ನಾಡಿನ ಇತರ ಸರ್ಕಾರಗಳವರೂ, ಮಠ ಮುಂತಾದ ಧರ್ಮಸಂಸ್ಥೆಗಳೂ, ಜಿಲ್ಲಾಬೋರ್ಡ್, ನಗರ ಸಭೆ ಮುಂತಾದ ಸ್ಥಳೀಯ ಸಂಸ್ಥೆಗಳೂ ಪರಿಷತ್ತಿಗೆ ಉದಾರವಾದ ವರ್ಷಾಶನಗಳನ್ನು ಕೊಟ್ಟು ಸಹಾಯ ಪ್ರೋತ್ಸಾಹಗಳನ್ನು ಕೊಡಬೇಕೆಂದು ಈ ಸಮ್ಮೇಳನ ಮೇಲ್ಕಂಡವರಲ್ಲಿ ಆಗ್ರಹಪೂರ್ವಕವಾಗಿ ವಿನಂತಿಮಾಡಿಕೊಳ್ಳುತ್ತದೆ.

ಸೂಚಕರು : ವ್ಯಾಕರಣತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು
ಅನುಮೋದಕರು : ಶ್ರೀ. ಷಣ್ಮುಖಪ್ಪ ಅಂಗಡಿಯವರು

೨೮ ಕರ್ನಾಟಕದಲ್ಲಿ ಪ್ರೌಢ ವಯಸ್ಕರಲ್ಲಿ ಸಾಕ್ಷರತೆಯು ತೀವ್ರವಾಗಿ ನಡೆಯಲೆಂಬ ಉದ್ದೇಶದಿಂದ ಆಯಾ ಪ್ರಾಂತಿಕ ಸರ್ಕಾರ ದಿಂದಲೂ ಮೈಸೂರು ಸರ್ಕಾರದವರಿಂದಲೂ ಆಗುತ್ತಿರುವ ಪ್ರಯತ್ನಗಳಿಗೆ ಈ ಸಮ್ಮೇಳನ ತನ್ನ ಬೆಂಬಲವನ್ನು ಕೊಡುತ್ತದೆ; ಇಂತಹ ಪ್ರೌಢವಯಸ್ಕರಿಗಾಗಿ ವಿವಿಧ ಸಾಹಿತ್ಯವನ್ನು ನಿರ್ಮಿಸುವುದು ಅಗತ್ಯವೆಂದು ಈ ಸಮ್ಮೇಳನದ ಅಭಿಪ್ರಾಯವಿರುವುದು. ಇದಕ್ಕಾಗಿ ಕೆಳಗೆ ಕಾಣಿಸಿದ ಸಂಸ್ಥೆಗಳ ಪ್ರತಿನಿಧಿಗಳ ಒಂದು ಸಮಿತಿಯನ್ನು ಸಾಹಿತ್ಯ ಪರಿಷತ್ತು ಏರ್ಪಡಿಸಬೇಕಾಗಿ ಈ ಸಮ್ಮೇಳನ ಬಿನ್ನವಿಸುತ್ತದೆ.

ಸಾಹಿತ್ಯ ಪರಿಷತ್ತಿನ ಪ್ರತಿನಿಧಿ : ೨
ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರತಿನಿಧಿ : ೧
ಡಿವಿಜನಲ್ ಬೋರ್ಡ್ ಆಫ್ ಅಡಲ್ಟ್ ಎಜ್ಯುಕೇಷನ್ ಪ್ರತಿನಿಧಿ : ೨
(ಇದರ ಕಾರ್ಯದರ್ಶಿ ಡಿವಿಜನಲ್ ಬೋರ್ಡಿನ ಒಬ್ಬ ಪ್ರತಿನಿಧಿ)

ಸೂಚಕರು : ಪ್ರೊ. ಎಸ್. ಎಸ್. ಬಸವನಾಳವರು
ಅನುಮೋದಕರು : ಪ್ರೊ. ಎಸ್. ಎಸ್. ಮಾಳವಾಡರು

೨೯ ಮುಂಬಯಿ ಮದರಾಸು ಸರ್ಕಾರಗಳವರು ಕರ್ನಾಟಕ ವಿಭಾಗಗಳಲ್ಲಿ ಶಿಕ್ಷಣಾಧಿಕಾರಿಗಳನ್ನು ನೇಮಿಸುವಾಗ ಕನ್ನಡ ಭಾಷೆಯನ್ನು ಚೆನ್ನಾಗಿ ಬಲ್ಲಂಥವರನ್ನೇ ನೇಮಿಸಬೇಕೆಂದು ಈ ಸಮ್ಮೇಳನ ಮೇಲ್ಕಂಡ ಸರಕಾರಗಳಿಗೆ ಸೂಚಿಸುತ್ತದೆ.

ಸೂಚಕರು : ಶ್ರೀ. ಆರ್. ಆರ್. ದಿವಾಕರ್ ಅವರು
ಅನುಮೋದಕರು : ಶ್ರೀ. ವಿ. ಬಿ. ನಾಯಕರು, ಶ್ರೀ. ಅರವಿಂದ ಜೋಶಿ ಅವರು.

೩೦ ನೀಲಗಿರಿ, ಕೊಳ್ಳೇಗಾಲ ಮೊದಲಾದ ಇತರ ಕರ್ನಾಟಕದ ಗಡಿನಾಡುಗಳಲ್ಲಿರುವ ಕನ್ನಡಿಗರ ಕನ್ನಡ ಶಿಕ್ಷಣಕ್ಕೆ ತಕ್ಕ ಏರ್ಪಾಟನ್ನು ಕೈಕೊಳ್ಳಲು ತಕ್ಕ ಕಾರ್ಯಕ್ರಮವನ್ನು ಒತ್ತಾಯಪಡಿಸಲು ಆಯಾ ಪ್ರಾಂತದ ಸರಕಾರಗಳನ್ನೂ ಮತ್ತು ಮೈಸೂರು ಸರಕಾರವನ್ನೂ ಈ ಸಮ್ಮೇಳನ ಬೇಡುತ್ತದೆ.

ಸೂಚಕರು : ಶ್ರೀ ಜಿ. ಆರ್. ರಂಗಸ್ವಾಮಿ ಅವರು.
ಅನುಮೋದಕರು : ಶ್ರೀ ಚಂದ್ರಶೇಖರಶಾಸ್ತ್ರಿಗಳು.

೩೧ ಬಳ್ಳಾರಿ ಜಿಲ್ಲೆಯಲ್ಲ ಇಡಿ ಕನ್ನಡ ಜಿಲ್ಲೆಯಲ್ಲಿರುವುದರಿಂದ ಈ ಜಿಲ್ಲೆಯ ಸರಕಾರೀ ಮತ್ತು ಬೇರೆ ವ್ಯವಹಾರ ಭಾಷೆಯೂ ಶಿಕ್ಷಣದ ಭಾಷೆಯೂ ಕನ್ನಡವೇ ಆಗಿರಬೇಕೆಂದು ಈ ಸಮ್ಮೇಳನವು ಮದರಾಸು ಸರಕಾರದ ಗಮನಕ್ಕೆ ತರಲಿಚ್ಛಿಸುತ್ತದೆ.

ಸಮ್ಮೇಳನಾಧ್ಯಕ್ಷರಿಂದ

೩೨ ಕನ್ನಡ ಭಾಷೆ ಸಾಹಿತ್ಯ ಇವುಗಳ ಉನ್ನತಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಅಖಿಲ ಕರ್ನಾಟಕದ ಪ್ರಮುಖ ಸಂಸ್ಥೆಯಾಗಿರುವ ಮೂಲಕ ಕರ್ನಾಟಕಕ್ಕೆ ಸಂಬಂಧಪಟ್ಟ ಸರಕಾರಗಳು ಅಂಥ ವಿಷಯಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಹಾಯ ಸಲಹೆಗಳನ್ನು ಪಡೆಯಬೇಕೆಂದೂ, ಪರಿಷತ್ತೂ ಸಹ ಆಯಾ ಸರಕಾರಗಳನ್ನು ಈ ರೀತಿಯಾಗಿ ಬಿನ್ನವಿಸಿಕೊಳ್ಳಬೇಕೆಂದೂ ಈ ಸಮ್ಮೇಳನ ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

**೩೩** ಕರ್ನಾಟಕದಲ್ಲಿಯ ಪ್ರಾಥಮಿಕ ಶಾಲೆಗಳಲ್ಲಿಯೂ ಆವರಂತೆ ಆಂಗ್ಲೋ-ವರ್ನಾಕ್ಯುಲರ್ ಶಾಲೆಗಳಲ್ಲಿಯೂ ಹಿಂದಿಯನ್ನು ಒತ್ತಾಯವಾಗಿ ಕಲಿಸುತ್ತಿರುವುದರಿಂದ ವಿದ್ಯಾರ್ಥಿಗಳ ಮೇಲೆ ಮಾನಸಿಕ ಭಾರ ಬೀಳುತ್ತಿದೆ; ಅಲ್ಲದೆ ಮಾತೃಭಾಷೆಯಾದ ಕನ್ನಡಕ್ಕೂ ಧಕ್ಕೆ ತಟ್ಟುತ್ತಿದೆ. ಆದ್ದರಿಂದ ಹಾಗೆ ಹಿಂದಿಯನ್ನು ಒತ್ತಾಯವನ್ನಾಗಿ ಮಾಡಿರುವುದನ್ನು ತಪ್ಪಿಸಬೇಕೆಂದು ಮುಂಬಯಿ ಮತ್ತು ಮದರಾಸು ಸರಕಾರಗಳೆರಡಕ್ಕೂ ಈ ಸಮ್ಮೇಳನ ಬಿನ್ನವಿಸುತ್ತದೆ.

**ಸೂಚಕರು :** ನಾ. ಶ್ರೀ. ಗಲಗಲಿ.

**ಅನುಮೋದಕರು :** ಶ್ರೀ ಸಾಂಗಲಿಯವರು.

**೩೪** (i) ಮುಂಬಯಿ ಯೂನಿವರ್ಸಿಟಿಯ ಪದವೀಧರ ಮತ ಸಂಘವು ಪ್ರಾದೇಶಿಕವಾಗಿ ಕರ್ನಾಟಕ, ಮಹಾರಾಷ್ಟ್ರ, ಸಿಂಧ, ಗುಜರಾಥ ಈ ಬಗೆಯಾಗಿ ವಿಭಾಗಿಸಲ್ಪಡಬೇಕೆಂದು ಈ ಸಭೆ ಮುಂಬಯಿ ಯೂನಿವರ್ಸಿಟಿಯವರನ್ನು ಕೇಳಿಕೊಳ್ಳುತ್ತದೆ.

(ii) ಹೆಡ್‌ಮಾಸ್ಟರ್ಸ್ ಕಾನ್‌ಸ್ಟಿಟ್ಯೂಯೆನ್ಸಿ (Constituency) ಯಲ್ಲಿ ಉತ್ತರ ಕರ್ನಾಟಕದ ಸಂಸ್ಥಾನದ ಶಾಲೆಗಳನ್ನು ಕರ್ನಾಟಕ ವಿಭಾಗದಲ್ಲಿ ಸೇರಿಸಬೇಕೆಂದು ಯೂನಿವರ್ಸಿಟಿಯವರನ್ನು ಈ ಸಭೆ ಕೇಳಿಕೊಳ್ಳುತ್ತದೆ.

**ಸೂಚಕರು :** ಶ್ರೀ ಅರವಿಂದ ಜೋಶಿ ಅವರು.

**ಅನುಮೋದಕರು :** ಶ್ರೀ ಸುಬುದ್ಧಿ ಹಿರೇಮಠ ಅವರು.

**೩೫** ಮುಂಬಯಿ ಪ್ರಾಂತದ ನಾಲ್ಕು ಕನ್ನಡ ಜಿಲ್ಲೆಗಳಾದ ಬೆಳಗಾಂ, ಸೋಲಾಪುರ, ಧಾರವಾಡ, ಮತ್ತು ಉತ್ತರ ಕನ್ನಡ ಜಿಲ್ಲೆಗಳ ಎಲ್ಲ ಸೆಕೆಂಡರಿ ತರಗತಿಗಳಲ್ಲಿ ಭಾಷೇತರ ವಿಷಯಗಳನ್ನು ಕಲಿಸುವಾಗ ಕನ್ನಡವನ್ನೇ ಕಲಿಸುವ ಭಾಷೆಯಾಗಿ ಕಡ್ಡಾಯವಾಗಿ ಮಾಡಬೇಕೆಂದೂ, ವಿಶ್ವವಿದ್ಯಾನಿಲಯದ ಶಿಕ್ಷಣದಲ್ಲಿಯೂ ಹೀಗೆಯೇ ಕನ್ನಡವನ್ನೇ ಶಿಕ್ಷಣ ಭಾಷೆಯಾಗಿ ಬಳಸಲು ಪ್ರಯತ್ನಿಸಬೇಕೆಂದೂ ಈ ಸಮ್ಮೇಳನ ಮುಂಬಯಿ ಸರಕಾರವನ್ನು ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

**೩೬** ಮುಂಬಯಿ, ಮದರಾಸು ರೇಡಿಯೋ ಕೇಂದ್ರಗಳ ಮತ್ತು ಹೈದರಾಬಾದಿನ ಆಕಾಶವಾಣಿಯ ಮುಖಾಂತರ ನಡೆಯತಕ್ಕ ದಿನದ ಸುದ್ದಿ ಕಾರ್ಯಕ್ರಮದಲ್ಲಿ ಕನ್ನಡ ಭಾಷೆಗೆ ಈಗ ಸ್ಥಾನವಿರುವುದಿಲ್ಲ. ಇನ್ನು ಮುಂದಾದರೂ ಕನ್ನಡದಲ್ಲಿ ಸುದ್ದಿಗಳಿಗೆ ಅವಕಾಶ ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನ ಮೇಲ್ಕಂಡ ಕೇಂದ್ರಗಳ ಅಧಿಕಾರಿಗಳನ್ನು ಬೇಡುತ್ತದೆ. ಅಲ್ಲದೆ, ಕರ್ನಾಟಕದ ನುಡಿ ಮತ್ತು ಸಂಸ್ಕೃತಿಯನ್ನು ಕಾಪಾಡುವ ಸಲುವಾಗಿ ಉತ್ತರ ಕರ್ನಾಟಕ ಪ್ರಾಂತಕ್ಕೊಂದು ಪ್ರತ್ಯೇಕ ರೇಡಿಯೋ ಕೇಂದ್ರವಿಲ್ಲದಿರುವುದರಿಂದ, ಉತ್ತರ ಕರ್ನಾಟಕ ಪ್ರಾಂತದ ಪ್ರಮುಖ ಪಟ್ಟಣವೊಂದರಲ್ಲಿ ಅಂಥ ಕೇಂದ್ರವೊಂದನ್ನು ಸ್ಥಾಪಿಸಬೇಕೆಂದು ಈ ಸಮ್ಮೇಳನ ಅಖಿಲ ಭಾರತ ರೇಡಿಯೋ ಅಧಿಕಾರಿಗಳನ್ನು ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

**೩೭** (i) ೧೯೫೧ನೆಯ ಇಸವಿಯಲ್ಲಿ ಜನಗಣನೆ ನಡೆಯುವುದಿದ್ದು ಕರ್ನಾಟಕದ ಗಡಿನಾಡಿನಲ್ಲಿ ಕನ್ನಡದ ವಿಷಯವಾಗಿ ಜಾಗೃತಿಯಾಗುವುದು ಅವಶ್ಯವಿದೆ. ಆದ್ದರಿಂದ, ಗಡಿನಾಡಿನಲ್ಲಿ ಕನ್ನಡ ಬಾಂಧವರೆಲ್ಲರೂ ಉದಾಸೀನರಾಗಿ ಉಳಿಯದೆ, ತಾವು ಕನ್ನಡಿಗರೆಂದೂ ತಮ್ಮ ಭಾಷೆ ಕನ್ನಡವೆಂದೂ ಆ ಸಂದರ್ಭದಲ್ಲಿ ಹೇಳಿ ಬರೆಯಿಸಬೇಕೆಂದು ಈ ಸಮ್ಮೇಳನ ಅವರಲ್ಲಿ ಬಿನ್ನವಿಸಿಕೊಳ್ಳುತ್ತದೆ.

(ii) ಈ ವಿಷಯವಾಗಿ ಗಡಿನಾಡಿನಲ್ಲಿ ಪ್ರಚಾರಕಾರ್ಯವನ್ನು ಕೈಕೊಳ್ಳಲು ಕನ್ನಡ ಸಾಹಿತ್ಯ ಪರಿಷತ್ತಿಗೆ ಈ ಸಮ್ಮೇಳನ ಬಿನ್ನವಿಸಿಕೊಳ್ಳುತ್ತದೆ. ಮತ್ತು ಈ ಬಗ್ಗೆ ಕನ್ನಡ ಜನಾಂಗವೂ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ, ಕರ್ನಾಟಕ ಏಕೀಕರಣ ಸಂಘವೇ ಮೊದಲಾದ ಸಂಘಸಂಸ್ಥೆಗಳೂ ಪರಿಷತ್ತಿಗೆ ನೆರವಾಗಬೇಕೆಂದು ಈ ಸಮ್ಮೇಳನ ಬಿನ್ನವಿಸಿಕೊಳ್ಳುತ್ತದೆ. ಈ ಕಾರ್ಯಕ್ಕೆ ಬೇಕಾಗುವ ಧನಸಹಾಯವನ್ನು ಕನ್ನಡ ಜನಾಂಗ ಮಾಡಬೇಕೆಂದು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

**ಸೂಚಕರು :** ಶ್ರೀ ಅರವಿಂದ ಜೋಶಿಯವರು.

**ಅನುಮೋದಕರು :** ಶ್ರೀ ಎ. ಜೆ. ಪಾಟೀಲ ಅವರು.
ಶ್ರೀ ಅಡ್ಡಣಗಿಯವರು.

**೩೮** ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ಬೋರ್ಡ್ ಆಫ್ ಸ್ಟಡೀಸ್ ಮಂಡಲದ ಸದಸ್ಯರಲ್ಲಿ ಇಬ್ಬರಾದರೂ ಮುಂಬಯಿ ವಿಶ್ವವಿದ್ಯಾನಿಲಯಕ್ಕೆ ಅಂಕಿತವಾದ ಕನ್ನಡ ವಿಷಯವನ್ನು ಕಲಿಸುವ ಅಧ್ಯಾಪಕರಿರಬೇಕೆಂದು ಈ ಸಮ್ಮೇಳನ ಮುಂಬಯಿ ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಬೇಡುತ್ತದೆ.

ಸಮ್ಮೇಳನಾಧ್ಯಕ್ಷರಿಂದ

**೩೯** ಕನ್ನಡದ ಶೈಕ್ಷಣಿಕ ದೃಷ್ಟಿಯಿಂದಲೂ ಆರ್ಥಿಕ ದೃಷ್ಟಿಯಿಂದಲೂ ಕರ್ನಾಟಕದಲ್ಲಿ ಚಲಚ್ಚಿತ್ರಗಳೂ ವಾಕ್ಪಟಗಳೂ ಹೆಚ್ಚಾಗಿ ಆಗುವುದು ಅತ್ಯಂತ ಅವಶ್ಯವಾಗಿರುವುದರಿಂದ ಅದು ಬೇಗ ಸಫಲವಾಗಲು ಪರಿಷತ್ತಿನವರು ಒಂದು ಉಪಸಮಿತಿಯನ್ನು ನೇಮಿಸಿ, ಅದರ ಮುಖಾಂತರ ಕರ್ನಾಟಕದಲ್ಲಿಯ ಮುಂದಾಳುಗಳ ಮತ್ತು ಸಂಸ್ಥಾನಿಕರ ಬಂಡವಾಳ ಸಹಾಯ ಪಡೆದು ಪ್ರಾತಿನಿಧಿಕವಾದ ಒಂದು ಸಂಸ್ಥೆಯನ್ನು ಅಸ್ತಿತ್ವಕ್ಕೆ ತರಬೇಕೆಂದು ಈ ಸಮ್ಮೇಳನ ಬೇಡುತ್ತದೆ.

**ಸೂಚಕರು :** ಶ್ರೀ ವಿ. ಪಿ. ಕಿತ್ತೂರ ಅವರು.

**ಅನುಮೋದಕರು :** ಶ್ರೀ ಅ. ನ. ಸುಬ್ಬರಾಯರು.
ಶ್ರೀ ಡಿಸಿಲ್ವ ಅವರು.

---

## ಕನ್ನಡ ಸುದ್ದಿ

### ಕೋಲಾರ

ಈ ತಿಂಗಳು ೨ರಲ್ಲಿ ಪ್ರೊಫೆಸರ್ ಎಂ. ಸಿದ್ಧಲಿಂಗಯ್ಯನವರ ಆರಂಭ ಭಾಷಣದಿಂದ ಮೊದಲಾಗಿ ಐದು ದಿನಗಳೂ ಡಾ॥ ಕೆ॥ ಶ್ರೀ ಜಿ. ಸುಂದರರಾಯರ ಅಧ್ಯಕ್ಷತೆಯಲ್ಲಿ ನಡೆದ ಕೋಲಾರದ ಕರ್ನಾಟಕ ಸಂಘವು ಏರ್ಪಡಿಸಿದ್ದ ಕನ್ನಡ ಉತ್ಸವವು ಅತಿ ವಿಜೃಂಭಣೆಯಿಂದ ೬ನೆಯ ತಾರೀಖು ಸಂಜೆ ಮುಕ್ತಾಯವಾಯಿತು. ಈ ಸಲದ ಉತ್ಸವದಲ್ಲಿ ಹಲವು ವೈಶಿಷ್ಟ್ಯಗಳು ಕಂಡುಬಂದವು. ನಿತ್ಯವೂ ಮೈಸೂರು ಧ್ವಜವು ಉಪನ್ಯಾಸ ಮಂದಿರದ ಮುಂದೆ ಹಾರಾಡುತ್ತಿತ್ತು. ಮಕ್ಕಳ ಕೂಟ, ವ್ಯಾಯಾಮ, ಪ್ರೈಮರಿ, ಮಿಡ್ಲ್ ಮತ್ತು ಹೈಸ್ಕೂಲು ವ್ಯಾಸಂಗಿಗಳಿಗೆ ಕಂಠಪಾಠಗಳು, ಬರೆವಣಿಗೆ, ಆಶುಭಾಷಣ, ಪ್ರಬಂಧ ರಚನೆಗಳಲ್ಲಿ ಸ್ಪರ್ಧೆಗಳು, ನೂಲುವ ಸ್ಪರ್ಧೆಗಳು ಅಂಗಸಾಧನೆ ಮತ್ತು ಕುಸ್ತಿಗಳು, ನಡೆದವು. ಬೌರಿಂಗ್‌ಪೇಟೆ, ಚಿನ್ನದ ಗಣಿ, ಸೂಲಿಕುಂಟೆ, ಮಾದಮಂಗಲಗಳಿಂದ ಕರ್ನಾಟಕ ಸಂಘಗಳವರೂ ಇತರರೂ ಬಂದು ಉತ್ಸವದಲ್ಲಿ ಭಾಗವಹಿಸಿದರು. ಶ್ರೀಮತಿ ರಾಧಾಬಾಯಿ ಸುಂದರರಾಯರು ಸ್ಪರ್ಧೆಗಳಲ್ಲಿ ವಿಮರ್ಶಕರಾಗಿದ್ದು ಕೊನೆಯಲ್ಲಿ ಬಹುಮಾನ ವಿನಿಯೋಗಮಾಡಿದರು.

---

(೧೨೧ನೆಯ ಪುಟದಿಂದ ಮುಂದುವರಿದುದು)

ಸರ್ಕಾರದವರು ವಶಪಡಿಸಿಕೊಳ್ಳುವರು. ಇದರಿಂದ ನಮ್ಮ ಕೈಕಾಲುಗಳನ್ನು ಕಡಿದುಕೊಂಡಂತಾಗಿ ನಾವೂ ಕೆಲವುವೇಳೆ ಕಾರಾಗೃಹದಲ್ಲಿ ಜೀವಿಸಬೇಕಾಗುತ್ತದೆ. ಈ ಬಂಧನಗಳಲ್ಲಿ ಅಲ್ಪ ಸ್ವಲ್ಪವನ್ನಾದರೂ ನಾವೇ ನಮ್ಮ ಸಂಘಶಕ್ತಿಯಿಂದ ನಿವಾರಿಸಿಕೊಳ್ಳಬೇಕು ಎಂಬುದು ನನ್ನ ಸಲಹೆ.

ಕೊನೆಯದಾಗಿ ನಾವು ನಮ್ಮ ವೃತ್ತಿಯನ್ನು ಪರಿಶುದ್ಧಗೊಳಿಸಿಕೊಳ್ಳಬೇಕೆಂಬುದು ನನ್ನ ಪ್ರಾರ್ಥನೆ. ನಮ್ಮ ಪತ್ರಿಕೆಗಳಲ್ಲಿ ಅಶ್ಲೀಲವು ದಿನ ದಿನಕ್ಕೆ ಹೆಚ್ಚಾಗುತ್ತಿದೆಯೆಂದು ಅನೇಕ ಬಾರಿ ಮಹಾತ್ಮಗಾಂಧಿಯವರಿಗೆ ದೂರು ಹೋಗಿ ಅವರು ನಮಗೆ ಎಚ್ಚರಿಕೆ ಕೊಟ್ಟಿದ್ದಾರೆ. ಈ ಎಚ್ಚರಿಕೆಗೆ ವಿಶೇಷ ಗಮನಕೊಡಬೇಕೆಂದು ನನ್ನ ಸಹೋದ್ಯೋಗಿಗಳಲ್ಲಿ ನನ್ನ ಪ್ರಾರ್ಥನೆ.

**ಈ ಪತ್ರಿಕೆಯು ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ 'ಮೈಸೂರು ಪೇಪರ್'ನಲ್ಲೇ ಅಚ್ಚಾಗುತ್ತಿದೆ.**

೧೧-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೧೩

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜನವರಿ ೧೯, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.



## ಕವಿ - ಬನದೇವಿ

ಹೊಳೆಯತಡಿ, ಹೊಂಬಿದಿರ
ಮೆಳೆ, ಹಕ್ಕಿಗಳ ಬಳಗ;
ಮಳಲಿನಲಿ ಕವಿ ಬಂದು
ಕುಳಿತನಾ ಬೆಳಗಿನಲಿ.

ಹಾಡಿದನು ಕವಿ, ಅದನೆ
ಹಾಡಿದುದು ಹೊಳೆನೀರು,
ಹಾಡಿಮುದು ಬಿದಿರಮೆಳೆ,
ಹಾಡಿದುವು ಹಕ್ಕಿಗಳು.

ಬಿರಿವ ಹೂವಿನ ಬಳಿಯ
ಮರಿದುಂಬಿ ಕೇಳ್ದು ಮೆ-
ಯ್ಮರೆದುದಾ ಹಾಡಿನಲಿ
ಮೊರೆದುದಿಂಚರವಿಂಪೆ.

ಇನಿದು ದನಿ ತುಂಬಿದುದು
ವನದೊಳೆಡೆಯಡೆಯಲ್ಲಿ !
ಬನದೇವಿ ಹರ್ಷದು
ಹೊನಲಿಡಲು ನಲಿದಳು !

ಬನದೇವಿ, "ಶಾಂತಿಗೀ -
ತನೆ ಉಗಮದೆಡೆಯಲ್ತೆ?"
ಎನುತೆ ಕೈಮುಗಿದಳಾ-
ತನಿಗೆ ಮನದೊಲವಿಂದೆ !

"[illegible], ಅಮರ ಕವಿ,
ವಿಮಲಾತ್ಮ, ಸತ್ಯಾರ್ಥಿ,
ಶಮನಿಲಯನೆ," ಎಂದು
ನಮಿಸಿದಳು ಬನದೇವಿ !

—ಸಾಲಿ. ರಾ.

## 'ಮೈಸೂರು ದಿನಾಚರಣೆ'

### ನಂಜನಗೂಡಿನಲ್ಲಿ

ಕಳೆದ ವಾರದಲ್ಲಿ ದಿವಾನ್ ಸಾಹೇಬರವರು ಮೈಸೂರು ಡಿಸ್ಟ್ರಿಕ್ಟಿನಲ್ಲಿ ಸಂಚಾರಮಾಡುತ್ತ ನಂಜನಗೂಡಿನಲ್ಲಿ ಕರ್ನಾಟಕ ಸಂಘದವರು ಏರ್ಪಡಿಸಿದ್ದ "ಮೈಸೂರು ದಿನಾಚರಣೆ"ಯಲ್ಲಿ ಭಾಗವಹಿಸಿದರು. ದೇವತಾ ಪ್ರಾರ್ಥನೆಯಾದ ಮೇಲೆ ಸ್ವಾಗತಾಧ್ಯಕ್ಷರಾದ ಶ್ರೀ ಬಿ. ವಿ. ಪಂಡಿತರು ದಿವಾನರವರಿಗೆ ಸ್ವಾಗತವನ್ನು ಬಯಸಿ ಭಾಷಣಮಾಡಿದರು. "ನಮ್ಮ ಈ ಮೈಸೂರು ರಾಷ್ಟ್ರದಲ್ಲಿ ಜನ್ಮವೆತ್ತಿ ದೇಶಸೇವೆಗಾಗಿಯೇ ದುಡಿದು ಕೀರ್ತಿಶೇಷರಾಗಿರುವ ಮಹನೀಯರನೇಕರ ಪವಿತ್ರಜೀವನವನ್ನು ಪುಸ್ತಕಗಳ ರೂಪದಿಂದ ಪ್ರಕಟಿಸುತ್ತಾ ಬರುವುದು ಈ ಸಂಘದ ಒಂದು ಮುಖ್ಯ ಉದ್ದೇಶವಾಗಿರುವುದು. ಈಗಾಗಲೇ ಹದಿನಾಲ್ಕು ಜನರ ಜೀವನ ಪರಿಚಯವನ್ನೊಳಗೊಂಡ 'ಮೈಸೂರು ಮಹನೀಯರು' ಎಂಬ ಪುಸ್ತಕದ ಪ್ರಥಮ ಭಾಗವನ್ನು ಇದೇ ಸಂಘದ ಆಶ್ರಯದಲ್ಲಿ ಪ್ರಸಿದ್ಧಿ ಪಡಿಸಿದೆ. ಈ ಬಾರಿ ಅದೇ ಪುಸ್ತಕದ ದ್ವಿತೀಯ ಭಾಗವನ್ನು ನಮ್ಮ ದಿವಾನ್ ಸಾಹೇಬರವರ ಸಮ್ಮುಖದಲ್ಲಿ ಪ್ರಸಿದ್ಧಿಪಡಿಸುವ ಉದ್ದೇಶವಿದೆ".ಎಂದು ಹೇಳಿದರು.

ಶ್ರೀ ಸುಬ್ರಹ್ಮಣ್ಯಯ್ಯನವರು ವಿಜ್ಞಾಪನಾ ಪತ್ರವನ್ನು ಅರ್ಪಿಸಿದರು.

"ಶತಮಾನಗಳ ಹಿಂದೆ ಮೈಸೂರು ಜನ್ಮವೆತ್ತಿದುದು ನಮ್ಮ ತಾಲ್ಲೂಕಿನಲ್ಲಿ. ತಮ್ಮ ಪಾಂಡಿತ್ಯ ಪರಾಕ್ರಮಗಳಿಂದ ಭಾರತವನ್ನೇ ಬೆರಗುಮಾಡಿ ಸಿರಿಸರಸ್ವತಿಗಳಿಬ್ಬರನ್ನೂ ಬಂಧಿಸಿದ್ದ ದೇವರಾಜಯ್ಯ ನಂಜರಾಜಯ್ಯ ದಳವಾಯಿ ಸಹೋದರರು ಹುಟ್ಟಿ ಬೆಳೆದುದು ನಮ್ಮ ತಾಲ್ಲೋಕಿನಲ್ಲಿ. ನಗರ್ಲೆ ನಂಜುಂಡ ಶಾಸ್ತ್ರಿಗಳಂತಹ ಕವಿಗಳಿದ್ದುದು ನಮ್ಮ ತಾಲ್ಲೋಕಿನಲ್ಲಿ. ಮೈಸೂರಿನ ಇತಿಹಾಸದಲ್ಲಿ ತನ್ನದೇ ಒಂದು ಪಾತ್ರವನ್ನು ಅಭಿನಯಿಸಿದ ಈ ಸ್ಥಳಕ್ಕೆ ತಮಗೆ ಸುಖಾಗಮನವನ್ನು ಕೋರುವುದು ಅದೊಂದು ಹೆಮ್ಮೆಯಷ್ಟೆ!

"ವಿಶ್ವವಿದ್ಯಾನಿಲಯದ ಉಪಾಧ್ಯಾಯರುಗಳು, ಸಂಗೀತಸಾಹಿತ್ಯಗಳ ಆಸ್ಥಾನ ವಿದ್ವಾಂಸರುಗಳು, ಸ್ಥಳದ ಅಧಿಕಾರವರ್ಗ ಎಲ್ಲರ ಕೃಪೆಯಿಂದ ಸಂಘವು ತನ್ನ ಸೇವೆಯಲ್ಲಿ ಮುಂದುವರಿಯುತ್ತಿದೆ. ಇಂದು ತಮ್ಮ ಆಶೀರ್ವಾದವನ್ನು ಪಡೆದಿದೆ.

"ನಮ್ಮದು ಕನ್ನಡ ನಾಡು. ನಮ್ಮೊಡೆಯರು ಕರ್ನಾಟಕ ದಿವ್ಯ ರತ್ನ ಸಿಂಹಾಸನಾಧೀಶ್ವರರು. ನಮ್ಮ ನುಡಿಯನ್ನು ವ್ಯವಹಾರದಲ್ಲಿ ಮತ್ತಷ್ಟು ಮುಂದುವರಿಸಲು ಬೇಡುವೆವು.

"ನಮ್ಮ ಸಂಘಕ್ಕೊಂದು ಕಟ್ಟಡದ ಆವಶ್ಯಕತೆಯಿದೆ. ನಮ್ಮ ಸಂಘದ ಪ್ರಕಟಣೆಗಳಿಗೆ ತಮ್ಮ ಘನ ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯವರ ಪ್ರೋತ್ಸಾಹವನ್ನು ನಿರೀಕ್ಷಿಸುತ್ತಿದ್ದೇವೆ. ಸಂಘದವರು ಮೈಸೂರಿನಲ್ಲಿ ನೆರವೇರಿಸಿದ ಸಂಗೀತ ವಿದ್ವತ್ಸಮ್ಮೇಳನವು ಶಾಶ್ವತವಾಗಿ ನಡೆಯಲು ತಮ್ಮ ವೈಯಕ್ತಿಕವಾದ ನೆರವನ್ನು ಬೇಡುತ್ತೇವೆ.

"ತಮ್ಮನ್ನು ಹೊಗಳುವುದರಲ್ಲಿಯೇ ನಮಗೆ ತೃಪ್ತಿಯಿಲ್ಲ. ತಮ್ಮ ಹೆಸರಿನ ಗ್ರಂಥಮಾಲೆಯೊಂದರಲ್ಲಿ ಕೊನೆಯಪಕ್ಷ ಆರು ಗ್ರಂಥಗಳನ್ನಾದರೂ ಪ್ರಕಟಿಸಿ, ಪ್ರತಿಯೊಬ್ಬ ವಿದ್ಯಾರ್ಥಿಯ ಕನ್ನಡಿಗನ ಹೃದಯದಲ್ಲಿ ತಮ್ಮ ನೆನಪಿರುವಂತೆ ಯತ್ನಿಸಲು ಒಪ್ಪಿಗೆಗಾಗಿ ಬೇಡುವೆವು.

"ಮಹನೀಯರೆ! ಹಗಲಿರುಳೂ ದುಡಿಯುತ್ತಿರುವ ತಮಗೆ ಭಗವಂತನು ಆಯುರಾರೋಗ್ಯಗಳನ್ನು ಅತಿಶಯವಾಗಿ ಕೊಡಲಿ. ತಮ್ಮ ಜೀವನದ ಆದರ್ಶವಾದ ನನ್ನ ದೇಶ, ನನ್ನ ದೊರೆ, ಎಂಬಿವೇ ಪ್ರತಿಯೊಬ್ಬ ಮೈಸೂರಿನ ನಿವಾಸಿಯ ಬಾಳಿನ ಗುರಿಯಾಗಲಿ. ನಮ್ಮ ನಾಡೊಡೆಯರ ಕೀರ್ತಿಯು ಜಗದ್ವಿಖ್ಯಾತವಾಗಿ ಬೆಳಗಲಿ."

ಅದಕ್ಕೆ ಪ್ರತ್ಯುತ್ತರವಾಗಿ ದಿವಾನ್‌ರವರು ಈ ರೀತಿ ಭಾಷಣವನ್ನು ಮಾಡಿದರು.

"ಮಹಿಳೆಯರೇ ಮತ್ತು ಮಹಾಶಯರೇ,

ಕನ್ನಡ ಭಾಷೆಯ ಮತ್ತು ಸಾಹಿತ್ಯದ ಸೇವೆಗಾಗಿ ದುಡಿಯುತ್ತಿರುವ ಈ ಕರ್ನಾಟಕ ಸಂಘದ ಸದಸ್ಯರೊಡನೆ ಸೇರಿರುವುದು ನನ್ನ ಮನಸ್ಸಿಗೆ ಬಹಳ ಸಂತೋಷವನ್ನುಂಟು ಮಾಡಿದೆ. ಸಂಘದವರು ನನ್ನನ್ನು ಆದರದಿಂದ ಸ್ವಾಗತಿಸಿ, ಬಿನ್ನವತ್ತಳೆಯನ್ನು ಒಪ್ಪಿಸಿದ್ದಾರೆ. ಅವರಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

"ಈಚೆಗೆ ಈ ಬಗೆಯ ಸಂಘಗಳು ಬಹಳವಾಗಿ ಹೆಚ್ಚುತ್ತಿವೆ. ಇದಕ್ಕಾಗಿ ನಮ್ಮ ಸಂಸ್ಥಾನದವರೆಲ್ಲರೂ ಹರ್ಷಿಸಬಹುದಾಗಿದೆ. ನಮ್ಮ ಸಂಸ್ಥಾನದಲ್ಲಿ ಮೊಟ್ಟಮೊದಲನೆಯದಾಗಿ ಏರ್ಪಟ್ಟ ಕರ್ನಾಟಕ ಸಂಘವೆಂದರೆ ಸೆಂಟ್ರಲ್ ಕಾಲೇಜಿನಲ್ಲಿ ೧೯೧೯ನೆಯ ಇಸವಿಯಲ್ಲಿ ಏರ್ಪಟ್ಟ ಕರ್ನಾಟಕ ಸಂಘವೆಂದು ಹೇಳಬಹುದು. ಅಲ್ಲಿಂದೀಚೆಗೆ ಅದರ ಮೇಲ್ಪಂಕ್ತಿಯನ್ನನುಸರಿಸಿ ಅನೇಕ ಸ್ಥಳಗಳಲ್ಲಿ ಸಂಘಗಳು ಏರ್ಪಟ್ಟಿವೆ. ಭಾಷೆಯ ಮೇಲಿನ ಮಮತೆಯಿಂದ ಅನೇಕ ಮಹಾಶಯರುಗಳು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಜಾತಿಗಳೂ ಪಂಗಡಗಳೂ ಅನೇಕವಾಗಿರುವ ನಮ್ಮ ದೇಶದಲ್ಲಿ, ಸಮಸ್ತರೂ ಒಟ್ಟಿಗೆ ಕಲೆತು ಸೇವೆಯನ್ನು ಸಮರ್ಪಿಸಬಹುದಾದ ಅನುಕೂಲವಿರುವುದು ಸಾಹಿತ್ಯ ಕ್ಷೇತ್ರದಲ್ಲಿ. ಇತರ ಕಾರ್ಯಕ್ಷೇತ್ರಗಳಲ್ಲಿ ಕೂಡ ಸಮಸ್ತರೂ ಒಕ್ಕಟ್ಟಾಗಿ ಸೇವೆ ಸಲ್ಲಿಸಲು ಜಾತಿ ಮತಗಳೇನೂ ಅಡ್ಡಿಯಾಗಬೇಕಾಗಿಲ್ಲ. ಹಾಗಿದ್ದೂ ಅದೇಕೋ ತಕ್ಕಷ್ಟು ಒಕ್ಕಟ್ಟು ಕಂಡುಬರುತ್ತಿಲ್ಲ. ಅದಕ್ಕೆ ಜಾತಿ ಮತಗಳು ಕಾರಣವಲ್ಲ. ಜಾತಿಮತಗಳ ಆಶಯವನ್ನು ಬಹುಜನರು ಸರಿಯಾಗಿ ತಿಳಿದುಕೊಂಡಿಲ್ಲದಿರುವುದೇ ಕಾರಣ; ಅದನ್ನು ಸರಿಯಾಗಿ ತಿಳಿದುಕೊಂಡು ವರ್ತಿಸುತ್ತಿರುವ ಮಹಾಶಯರುಗಳ ಮೇಲ್ಪಂಕ್ತಿಯನ್ನು ಉಳಿದವರು ಅನುಸರಿಸದೆ ಹೋಗಿರುವುದೇ ಕಾರಣ.

"ಕನ್ನಡ ಸಾಹಿತ್ಯವು ಅತ್ಯಂತ ಪ್ರಾಚೀನವಾದುದು. ಈ ವಿಚಾರ ನನಗಿಂತ ನಿಮಗೇ ಹೆಚ್ಚಾಗಿ ತಿಳಿದಿದೆ. ಕನ್ನಡ ಸಾಹಿತ್ಯದ ಸವಿಯನ್ನು ನನಗಿಂತಲೂ ಚೆನ್ನಾಗಿ ನೀವುಗಳು ಬಲ್ಲಿರಿ. ಆದಕಾರಣ, ನಾನು ಅವೆರಡು ಅಂಶಗಳನ್ನೂ ಕುರಿತು ಪ್ರಸ್ತಾಪಿಸಬೇಕಾದ ಅಗತ್ಯವೇ ಇಲ್ಲ. ಜೈನರೂ, ವೀರಶೈವರೂ, ಬ್ರಾಹ್ಮಣರೂ ಕನ್ನಡ ಭಾಷೆಯಲ್ಲಿ ಅನೇಕ ಉತ್ತಮ ಗ್ರಂಥಗಳನ್ನು ರಚಿಸಿದ್ದಾರೆ. ಡಾಕ್ಟರ್ ಕಿಟ್ಟೆಲ್ ಮುಂತಾದ ಕ್ರೈಸ್ತಪಂಗಡದ ಮಹಾಶಯರುಗಳು ಕನ್ನಡಕ್ಕೆ ಸೇವೆ ಸಲ್ಲಿಸಿದ್ದಾರೆ. ಈಚೆಗೆ ಮುಸಲ್ಮಾನರಲ್ಲಿ ಅನೇಕರು ಕನ್ನಡವನ್ನು ಕಲಿತು, ಕನ್ನಡದಲ್ಲಿ ಆಸಕ್ತಿಯನ್ನು ತೋರಿಸುತ್ತಿರುವುದೂ ಸಂತೋಷಕರವಾದ ಅಂಶ.

"ಮೈಸೂರು ಸಂಸ್ಥಾನದ ರಾಜಮನೆತನದಲ್ಲಿ, ಶ್ರೀ ಚಿಕ್ಕದೇವರಾಜ ಒಡೆಯರವರೂ, ಮುಮ್ಮಡಿ ಕೃಷ್ಣರಾಜ ಒಡೆಯರವರೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಗ್ರಂಥಕರ್ತರಿಗೆ ಅವರಿಂದ ಯಥೇಷ್ಟವಾಗಿ ಪ್ರೋತ್ಸಾಹ ದೊರೆತಿದೆ. ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರಿಂದ ಕನ್ನಡ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು. ಮೈಸೂರು ಸಂಸ್ಥಾನದಲ್ಲಿ ಕನ್ನಡದಲ್ಲಿ ನಾಟಕ ಪ್ರದರ್ಶನಗಳು ನಡೆಯಲು ಪ್ರಾರಂಭವಾದುದೇ ಅವರ ಪ್ರೋತ್ಸಾಹ ಸಹಾಯಗಳ ಫಲವಾಗಿ. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಂತು ಸಂಗೀತ ಸಾಹಿತ್ಯಗಳಿಗೆ ಬಹಳವಾಗಿ ಪ್ರೋತ್ಸಾಹ ಕೊಡುತ್ತಿದ್ದಾರೆ. ಶ್ರೀಮನ್ಮಹಾರಾಜರವರ ಸರ್ಕಾರದವರೂ ಸಹ ಕನ್ನಡಕ್ಕೆ ಸಾಧ್ಯಕಂಡ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ.

"ಈ ಸಂಘದವರಿಗೆ ಈ ಊರಿನಮೇಲಿನ ಅಭಿಮಾನವು ವಿಶೇಷವಾಗಿದೆಯೆಂಬ ಅಂಶವು ಅವರ ಬಿನ್ನವತ್ತಳೆಯಿಂದ ವ್ಯಕ್ತವಾಗುತ್ತದೆ. ಅದಕ್ಕಾಗಿ ನಾನು ಹರ್ಷಿಸುತ್ತೇನೆ. ಸಂಘವು ಉತ್ತಮ ರೀತಿಯಲ್ಲಿ ಕೆಲಸ ನಡೆಯಿಸುತ್ತಿದೆ. ಅದು ಇನ್ನೂ ಉತ್ತಮರೀತಿಯಲ್ಲಿ ಕೆಲಸ ಮಾಡಬೇಕೆಂಬುದು ನನ್ನ ಅಭಿಲಾಷೆ.

"ಇನ್ನು, ಬಿನ್ನವತ್ತಳೆಯಲ್ಲಿರುವ ಅರಿಕೆಗಳ ವಿಚಾರ. ಸಂಘದವರು ಅಪೇಕ್ಷಿಸುವ ಸಹಾಯಗಳೇನೆಂಬುದು ಅರಿಕೆಗಳಿಂದ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಅವುಗಳೇನೆಂಬುದನ್ನು ಅವರು ಸ್ಪಷ್ಟವಾಗಿ ತಿಳಿಸಿದಲ್ಲಿ, ಸಾಧ್ಯಕಂಡ ಸಹಾಯವನ್ನು ಮಾಡಲು ಸರ್ಕಾರದವರು ಹರ್ಷಿಸುವರು.

"ಮಹಾಶಯರೇ, ನಿಮ್ಮ ಸಂಘವು ದಿನದಿನವೂ ಅಭಿವೃದ್ಧಿ ಹೊಂದಲೆಂದೂ, ಜನರಿಗೆ ಅರಿವಿನ ಬೆಳಕನ್ನು ಕೊಡುವ ಒಂದು ಕೇಂದ್ರವಾಗಿ ಪರಿಣಮಿಸಲೆಂದೂ ಹಾರೈಸುತ್ತೇನೆ."

## ಹುಚ್ಚು ಸಾಹಿತ್ಯ
(Nonsense Literature)

ನಮ್ಮಲ್ಲಿ ಸಾಹಿತ್ಯದ ಹುಚ್ಚೇ ಕಡಮೆಯಾಗಿರುವ ಕಾಲದಲ್ಲಿ ಹುಚ್ಚು ಸಾಹಿತ್ಯವೂ ಕಡಮೆಯಾದುದರಲ್ಲಿ ಆಶ್ಚರ್ಯವಿಲ್ಲ. ಬರೆಯುವವರ ದೃಷ್ಟಿಯು ಉಚ್ಚ ಸಾಹಿತ್ಯದ ಕಡೆಗೆ; ಪ್ರಕಾಶಕರ ದೃಷ್ಟಿಯೂ ಅದೇ ಕಡೆ. ಆದುದರಿಂದ ಹುಚ್ಚು ಸಾಹಿತ್ಯದ ಕಡೆಗೆ ದೃಷ್ಟಿಯಿರುವುದು ವಾಚಕರದು ಮಾತ್ರ. ಬೇರೆ ಎಲ್ಲಾ ಜನರ ಮನಸ್ಸು ಉಚ್ಚ ಸಾಹಿತ್ಯವನ್ನು ಬೆಳಕಿಗೆ ತರುವಂತಹುದು.

ಉಚ್ಚ ಸಾಹಿತ್ಯಕ್ಕೆ ಬೆಳಕು ಅವಶ್ಯಕವಾಗಿದೆ. ಯಾವುದಾದರೂ ಬಗೆಯ ಎಲೆಕ್ಟ್ರಿಕ್‌ಟಾರ್ಚ್ (Electric torch) ಇಲ್ಲದಿದ್ದರೆ ಅದು ಏನು ಹೇಳುತ್ತದೆಂಬುದನ್ನು ತಿಳಿದುಕೊಳ್ಳುವುದು ಸಹ ಸ್ವಲ್ಪ ಶ್ರಮದಿಂದಲೆ ಸಾಧ್ಯವಲ್ಲದೆ ಸುಲಭವಾಗಿ ಅದನ್ನು ಗ್ರಹಿಸಲಾಗುವುದಿಲ್ಲ. ಆದರೆ ದೊಡ್ಡವರು ನಮ್ಮ ಮುಂದುವರಿಸುವ ದೀಪದ ಬೆಳಕಿನಲ್ಲಿ ಅದರಲ್ಲಿ ಅಡಗಿರುವ ತತ್ತ್ವಗಳು ಬಹಿರಂಗವಾಗುವುವು. ಆದುದರಿಂದ ಕಷ್ಟವಾದುದನ್ನು ಸುಲಭರೂಪದಲ್ಲಿ ಕಾಣಿಸುವವರಿಗೂ ಸ್ವಲ್ಪಮಟ್ಟಿಗೆ ಕೆಲಸವು ದೊರಕಿದಂತಾಯಿತು. ಇವರೂ ದೊಡ್ಡದೊಡ್ಡ ಪುಸ್ತಕಗಳನ್ನು ಬರೆಯಲಿಕ್ಕವಕಾಶವು ದೊರಕಿದಂತಾಯಿತು. ಇಷ್ಟೆಲ್ಲ ಉಚ್ಚ ಸಾಹಿತ್ಯದ ಮೇಲೆ ಬೆಳಕನ್ನು ಹಾಕಲಿಕ್ಕೆ ಜನ್ಮವೆತ್ತಿದ ಗ್ರಂಥಗಳು. ಇವುಗಳಿಂದ ಒಂದು ವಿಧದಲ್ಲಿ ಸಾಹಿತ್ಯದ ಬೆಳವಣಿಗೆಯಾಗುವುದು.

ಉತ್ತಮವಾದ ಸಾಹಿತ್ಯವು ಮನೋರಂಜಕವಾಗಿರಬೇಕಂತೆ; ಹುಚ್ಚು ಸಾಹಿತ್ಯವೂ ವಾಚಕರ ದೃಷ್ಟಿಯಿಂದ ಮನೋರಂಜಕವಾಗಿರುತ್ತದೆ. ಉಚ್ಚ ಸಾಹಿತ್ಯವನ್ನು ಓದುವವರಿಲ್ಲ; ಹುಚ್ಚು ಸಾಹಿತ್ಯವನ್ನು ಬರೆಯುವವರಿಲ್ಲ. ಇದನ್ನು ಓದುವವರು ಮಾತ್ರ ಸಾವಿರಾರು ಮಂದಿ ಇರುತ್ತಾರೆ.

ಓದುವವರಲ್ಲಿ ಸಾಹಿತ್ಯದ ಹುಚ್ಚನ್ನು ಹೆಚ್ಚಿಸುವುದೆ ಹುಚ್ಚು ಸಾಹಿತ್ಯದ ಮುಖ್ಯೋದ್ದೇಶ. ಸುಲಭವಾದ ವಿಷಯವನ್ನೆತ್ತಿ, ಸುಲಭವಾದ ಮಾತುಗಳಲ್ಲಿ ಅದನ್ನು ವಿವರಿಸಿ, ಮನಸ್ಸಿನ ಸಂತೋಷವನ್ನು ಹೆಚ್ಚಿಸುವುದು ಈ ಹುಚ್ಚು ಸಾಹಿತ್ಯದ ಕೆಲಸ.

ಎಂತಹ ಅಲ್ಪ ವಿಷಯವಾದರೂ ಹುಚ್ಚು ಸಾಹಿತಿಗೆ ಅದರಲ್ಲಿ ಅಸಾಧಾರಣ ರೂಪವು ಕಂಡುಬರುತ್ತದೆ. ಅದನ್ನು ವಿವರಿಸುತ್ತಾ ಹೋಗುವಾಗ ವಿಷಯದ ಅಲ್ಪತೆಯು ಮರೆತುಹೋಗಿ, ನಿಜವಾಗಿ ಯಾವ ವಿಷಯವೂ ಅಲ್ಪವಲ್ಲವೆಂಬುದು ಮನಸ್ಸಿಗೆ ಖಚಿತವಾಗುವುದು.

ಉದಾಹರಣೆಗಾಗಿ ಒಂದು ಬೆಂಕಿಯ ಕಡ್ಡಿಯನ್ನು ತೆಗೆಯುವ. ನಮ್ಮ ಸಣ್ಣ ಪ್ರಾಯದಲ್ಲಿ [illegible] ಸಾಧಾರಣ ವ್ಯಕ್ತಿಯಲ್ಲವೆಂದೆ ನಮಗೆ ಭಾಸವಾಗುತ್ತಿತ್ತು. [illegible] ಜಿಲ್ಲಿಸಿದ್ದ ಒಂದು ಬೆಂಕಿಯ ಪೆಟ್ಟಿಗೆಯಲ್ಲ [illegible] ಜನ ಕೆಂಪು ಮುಂಡಾಸಿನವರು ಆಗ ಸುಲಭವಾಗಿ [illegible]ಕೊಂಡಿರುತ್ತಿದ್ದರು. ಯಾರಿಗೆ ಆ ಮುಂಡಾಸುಗಳು ಇರುತ್ತಿದ್ದಿಲ್ಲವೋ ಅವುಗಳು ನಿರರ್ಥಕವೆಂದು ದೊಡ್ಡವರು ನಿರ್ಧರಿಸಿ ಅವುಗಳನ್ನು [illegible]ತ್ತಿದ್ದರು. ಮುಂಡಾಸಿನ ಪ್ರಾಮುಖ್ಯತೆ ಎಷ್ಟು ಎಂಬುದನ್ನು ನಾವು ಈ ಸಣ್ಣ ಸಂಗತಿಯಿಂದ ತಿಳಿಯುತ್ತಿದ್ದೆವು. ಪೋಲಿಸಿನವರಿಗೂ ಕೆಂಪು ಮುಂಡಾಸು, ಬೆಂಕಿಯ ಕಡ್ಡಿಗೂ ಅದೇ. ಆದುದರಿಂದ ಆ ಕಾಲದಲ್ಲಿ 'ಒಂದು ಕಡ್ಡಿಯನ್ನು ಕೊಡಿ' ಎಂದು ಹೇಳುವ ಬದಲಾಗಿ 'ಒಂದು ಕೆಂಪು ಮುಂಡಾಸನ್ನು ಕೊಡಿ' ಎಂಬ ಮಾತು ನಮ್ಮಲ್ಲಿ ಸಾಧಾರಣವಾಗಿ ವಾಡಿಕೆಯಲ್ಲಿತ್ತು. ಇದು ಇಪ್ಪತ್ತೈದು ವರ್ಷಗಳ ಹಿಂದೆ.

ಈಗ ಈ ಕಡ್ಡಿಯ ಮುಂಡಾಸಿನ ಬಣ್ಣವೆ ಬೇರೆಯಾಗಿದೆ. ಉದ್ದದಲ್ಲಿಯೂ ಅಗಲದಲ್ಲಿಯೂ ಈಗಿನ ಬೆಂಕಿಕಡ್ಡಿಯು ಸ್ವಲ್ಪ ಮುದುಡಿಕೊಂಡಿದೆ. ಕೆಂಪು ಮುಂಡಾಸು ಮಾಯವಾದಂದಿನಿಂದ ಮರ್ಯಾದೆಗೂ ಸ್ವಲ್ಪ ಕುಂದು ಬಂದಿರುತ್ತದೆ. ಮುಂಚಿನ ಕೆಂಪುತಲೆಯ ಕಡ್ಡಿಗಳಿಗೆ ಪೆಟ್ಟಿಗೆಯ ಪ್ರಯೋಜನವು ವಿಶೇಷವಾಗಿರಲಿಲ್ಲ. ಅವುಗಳನ್ನು ಗೋಡೆಗೆ ತಿಕ್ಕಿದರೂ ಅದರಿಂದ ಬೆಂಕಿಯು ಹೊರಡುತ್ತಿತ್ತು. ಈಗಿನ ಕಪ್ಪು ಮುಂಡಾಸಿನವರಿಗೆ ಪೆಟ್ಟಿಗೆಯು ಅಥವಾ ಅವರಬದಿಯು ಅತ್ಯಾವಶ್ಯಕ. ಅಲ್ಲಿ ತಿಕ್ಕಿದರೆ ಮಾತ್ರ ಅವಕ್ಕೆ ಜೀವ; ಇಲ್ಲದಿದ್ದರೆ ಅದು ನಿರ್ಜೀವವಾದ ವಸ್ತು; ಕೆಲಸಕ್ಕೆ ಬಾರದ ವಸ್ತುವೆಂದೆಣಿಸುವರು.

ಬೆಂಕಿಯಕಡ್ಡಿಯು ಬೆಲೆಯಿಲ್ಲದ ವಸ್ತು. ಪೆಟ್ಟಿಗೆಯನ್ನು ಕಿಸೆಯಲ್ಲಿಟ್ಟುಕೊಂಡು ಕೇಳಿದವರಿಗೆಲ್ಲ ಧರ್ಮಾವತಾರಿಯಾಗಿ ಕಡ್ಡಿ ದಾನವನ್ನು ಮಾಡಬೇಕೆಂದಿರುವವರಿಗೆ ಮಾತ್ರ ಮೂರು ನಾಲ್ಕು ಪೈಗಳ ಖರ್ಚಿರಬಹುದು. ಒಂದೇ ಒಂದು ಕಡ್ಡಿ ಸಾಕೆಂದಿರುವವರಿಗೆ ಒಂದು ಪೈ ಕೂಡ ಖರ್ಚಿಲ್ಲ. ಬೀಡಿಯನ್ನು ಕ್ರಯಕ್ಕೆ ಪಡೆದುಕೊಳ್ಳಬಹುದಾದ ಯಾವ ಅಂಗಡಿಗಾರರಲ್ಲಿಯೂ ಬೀಡಿಯ ಉಪಾಸನೆಯನ್ನು ಭಕ್ತಿಪೂರ್ವಕವಾಗಿ ಮಾಡುವ ಯಾವ ಬೀಡಿಭಕ್ತರಲ್ಲಿಯೂ ಒಂದು ಕಡ್ಡಿಯನ್ನು ದಾನಮಾಡುವಷ್ಟು ಧರ್ಮಬುದ್ಧಿಯು ಇದ್ದೇ ಇದೆ. ಆದುದರಿಂದ ಕಡ್ಡಿಗೋಸ್ಕರ ಪೈ ಖರ್ಚುಮಾಡುವುದು ಬರೆ ಹುಚ್ಚು.

ಸುಲಭವಾಗಿ ದೊರಕುವ ಸಾಧನವಾದುದರಿಂದ ಹೆಚ್ಚಿನವರು ಈ ಪೆಟ್ಟಿಗೆಯನ್ನು ತಮ್ಮೊಡನೆ ಹೊತ್ತುಕೊಂಡು ಹೋಗುವುದಿಲ್ಲ; ಅಥವಾ ಹೊತ್ತುಕೊಂಡು ಹೋಗಲಿಕ್ಕೆ ಮರೆಯುತ್ತಾರೆ. ಹೀಗೆ ನೆನಪು ಕಡಮೆಯಾದುದರಿಂದ ಅವಶ್ಯವಿರುವಾಗ ಕಡ್ಡಿಯನ್ನು ಬೇರೆಯವರಿಂದ ಕೇಳಿಕೊಳ್ಳಲಿಕ್ಕೆ ಅವಸರವು ಸಿಗುವುದು.. ಹೊಗೆಬಂಡಿಯಲ್ಲಿ ಪ್ರಯಾಣ ಮಾಡುವಾಗ, ಬಂಡಿಯು ಹೊಗೆಯನ್ನು ಹೊರಡಿಸಿ ಹೋಗುವಾಗ, ಪ್ರಯಾಣೀಕರಲ್ಲಿಯೂ ಹೊಗೆ ಹೊರಡಿಸುವ ಆಸೆಯು ಸಹಜವಾಗಿ ಹುಟ್ಟುವುದು. ಆಗ ಬೀಡಿ, ಚುಟ್ಟಾ ವಗೈರೆಯ ಕಟ್ಟುಗಳು ಹೊರಬೀಳುವವು. ಆ ಸಮಯದಲ್ಲಿ ಬೆಂಕಿಯ ಪೆಟ್ಟಿಗೆಯು ಅನೇಕರಲ್ಲಿರುವುದಿಲ್ಲ. ಒಬ್ಬನಲ್ಲಿ ಮಾತ್ರ ಇದ್ದೇ ಇರುತ್ತದೆ. ಆಗ ಬೆಂಕಿಪೆಟ್ಟಿಗೆಯವನಿಗೆ ಮಹಾರಾಜನ ಪದವಿಯು ಸುಲಭವಾಗಿ ಲಭಿಸುವುದು. ಪ್ರತಿಯೊಬ್ಬನು "ಮಹಾರಾಜಾ, ಒಂದು ಕಡ್ಡಿ" ಎಂದು ಆತನೊಡನೆ ಕೇಳಿಕೊಳ್ಳುವುದಿದೆ. ಆತನೂ ತನ್ನ ಹೊಸ ಪದವಿಯ ಗೌರವವು ಕಡಮೆಯಾಗದಂತೆ ಅವರೆಲ್ಲರಿಗೂ ಒಂದೊಂದು ಕಡ್ಡಿಯನ್ನು ಉಚಿತವಾಗಿ ಕೊಡುತ್ತಾನೆ. ಹೀಗೆ ಏನೂ ಪರಿಚಯವಿಲ್ಲದವರಲ್ಲಿ ಹೊಸ ಪರಿಚಯವು ಅಂಕುರಿಸಿ ಸ್ನೇಹಲತೆಯ ಜನನಕ್ಕೆ ಕಾರಣವಾಗುತ್ತದೆ.

ಬೆಂಕಿಯ ಕಡ್ಡಿಯು ಇನ್ನೂ ಕೆಲವು ಸಂಗತಿಗಳಲ್ಲಿ ಬಹಳ ಸಹಾಯಕಾರಿಯಾಗುತ್ತದೆ. ಪ್ರಯೋಜನವಿಲ್ಲದ ಕಸದ ರಾಶಿಯನ್ನು ಹೊತ್ತಿಸಿ ಬಹು ಪ್ರಯೋಜನಕಾರಿಯಾದ ಗೊಬ್ಬರವನ್ನು ಹುಟ್ಟಿಸುವುದು. ನಮಗೆ ಬಂದ ಕಾಗದಗಳಲ್ಲಿ ಯಾವುದಾದರೂ ಇತರರ ಕಣ್ಣಿಗೆ ಬೀಳಬಾರದೆಂಬ ಉದ್ದೇಶ ನಮಗಿದ್ದರೆ ಆ ಕಾಗದವನ್ನು ಸ್ವರ್ಗ ಲೋಕಕ್ಕೇರಿಸಲಿಕ್ಕೆ ಬೆಂಕಿಯ ಕಡ್ಡಿಯು ಅನುಕೂಲವಾಗುವುದು. ಹೆಚ್ಚೇಕೆ? ನಾವು ಈಗ ಬರೆದ ಲೇಖನವು ನಮ್ಮ ಮನಸ್ಸಿಗೆನೇ ತೃಪ್ತಿಕರವಲ್ಲವೆಂದು ತೋರಿದರೆ ಅದಕ್ಕೂ ಒಂದು ಕಡ್ಡಿಯನ್ನು ಹತ್ತಿಸಿದರಾಯಿತು.

ಮುಂಡಾಸಿಲ್ಲದ ಕಡ್ಡಿಗಳೂ ನಿರರ್ಥಕವಲ್ಲ. ಊಟವಾದ ಮೇಲೆ ಹಲ್ಲುಗಳ ನಡುವೆ ಸಿಕ್ಕಿಕೊಂಡು ನೋವನ್ನೆಬ್ಬಿಸುವ ಆಹಾರದ ಅಣುಗಳನ್ನು ಆ ಸಂಸ್ಥಾನದಿಂದ ಹೊರಗಟ್ಟಲಿಕ್ಕೆ ಬೆಂಕಿಯ ಕಡ್ಡಿಯಷ್ಟು ಉಪಕಾರಿಯಾದ ವಸ್ತು ಬೇರೊಂದಿಲ್ಲ. ಆದುದರಿಂದ ಮುಂಡಾಸಿಲ್ಲವಾದರೂ ತಲೆಯೊಂದಿದ್ದರೆ ಆ ವಸ್ತುವಿನಿಂದ ಪ್ರಯೋಜನವಿದೆ ಎಂದು ನಾವೆಲ್ಲರೂ ಮರೆಯಬಾರದಾದ ವಿಷಯ.

ಎಂ. ವಿ. ಪ್ರಭು.
(ಮಿತ್ರಮಂಡಳಿ)

---

**ಉಡುಪಿ :**

ದಕ್ಷಿಣ ಕನ್ನಡ ಪಂಡಿತ ಸಂಘ ಮತ್ತು ಕಿರಿಯರ ಪ್ರಪಂಚ ಈ ಎರಡು ಸಂಘಗಳ ಆಶ್ರಯದಲ್ಲಿ ಈ ತಿಂಗಳು ೧೪ನೇ ತಾರೀಖಿನ ದಿನ ಶ್ರೀ ಕಡೆಕಾರು ಎಸ್. ರಾಜಗೋಪಾಲ ಕೃಷ್ಣರಾಯರ ಅಧ್ಯಕ್ಷತೆಯಲ್ಲಿ "ಮುದ್ದಣ ಕವಿಯ ಜನ್ಮೋತ್ಸವ"ವನ್ನು ನೆರವೇರಿಸಿದರು. ಈ ಸಂದರ್ಭದಲ್ಲಿ ಕವಿಯ ಮತ್ತು ಆವನ ಕಾವ್ಯಗಳ ವಿಷಯವಾಗಿ ಹಲವು ವಿದ್ವಾಂಸರಿಂದ ಉಪನ್ಯಾಸಗಳು ಜರುಗಿದವು.

**ನವಲುಗುಂದ**

ಧಾರವಾಡ ಜಿಲ್ಲೆಯ ೪ನೆ ಸಾಹಿತ್ಯ ಸಮ್ಮೇಳನವನ್ನು ನವಲುಗುಂದದಲ್ಲಿ ಮುಂದಿನ ತಿಂಗಳು ೪, ೫ನೇ ತಾರೀಖುಗಳಲ್ಲಿ ನಡೆಯುವಂತೆ ಏರ್ಪಾಡಾಗಿದೆ. ಆ ಕಾಲಕ್ಕೆ ಜರಗುವ ಕವಿ ಸಮ್ಮೇಳನದ ಅಧ್ಯಕ್ಷತೆಯನ್ನು ರಾಜಸೇವಾಸಕ್ತ ಪ್ರೊ. ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ವಹಿಸಲು ಒಪ್ಪಿರುತ್ತಾರೆ.



**ಶುಕ್ರವಾರ, ಜನವರಿ ೧೯, ೧೯೪೦**

## ನಾಳೆಯ ಸಂಸ್ಕೃತಿ

ಭರತಖಂಡದ ಸಂಸ್ಕೃತಿ ನಾಳೆಗೆ ಹೇಗೆ ರೂಪುಗೊಳ್ಳಬೇಕು, ಅದರ ಗತಿ ಏನು ಎಂದು ಜನ ಕೇಳುತ್ತಿದ್ದಾರೆ. ಈ ಸಂಬಂಧದಲ್ಲಿ ಕುರುಡುನಂಬಿಕೆಗಳೊಂದುಕಡೆ, ಅತಿಯಾದ ಆಧುನಿಕತೆ ಇನ್ನೊಂದುಕಡೆ ವಾದಕ್ಕೆ ನಿಂತು ರಾಗದ್ವೇಷ ಕೆರಳುವುದುಂಟು. ಆಚಾರವಾಗಿ ನಡೆದುಬಂದದ್ದನ್ನೆಲ್ಲ ಉಳಿಸಿ ಬೆಳೆಸಿದ ಹೊರತು ಮಂಗಳ ಇಲ್ಲ ಎನ್ನುವವರು ಮೊದಲಿನವರು. ಹಳೆಯ ಕಾಲ ಹೋಯಿತು, ಹೊಸಕಾಲದ ಸಮಸ್ಯೆಗಳು ಬೇರೆ, ಅದಕ್ಕೆ ತಕ್ಕಂತೆ ಬದುಕನ್ನು ನಡೆಸದಿದ್ದರೆ ನಮ್ಮ ಇರುವಿಕೆಗೇ ಭಂಗ ಬರುವುದು, ಆದ್ದರಿಂದ ಎಲ್ಲ ಬಗೆಯಲ್ಲಿಯೂ ಪ್ರಯತ್ನಪಟ್ಟು ಹೊಸ ಕಾಲದ ದಾರಿಯನ್ನೇ ಹಿಡಿಯಬೇಕು ಎನ್ನುವವರು ಇನ್ನೊಬ್ಬರು. ಸಂಪ್ರದಾಯವಾದಿಗಳಲ್ಲಿಯೂ ನವೀನರಲ್ಲಿಯೂ ಉಗ್ರಪಂಥದವರು ಮಿತಗಾಮಿಗಳು ಇಬ್ಬರೂ ಇದ್ದರೂ, ಈ ಎರಡು ನೋಟಗಳಿಗೆ ಸಾಮಾನ್ಯವಾಗಿ ಯೋಜನೆ. ಕಾರ್ಯರಂಗ, ಮಾತು, ನಡತೆ, ಎಲ್ಲದರಲ್ಲಿಯೂ ವಿರೋಧವೂ ಕೋಟಲೆಯೂ ಇದೆ. ಪಾಶ್ಚಾತ್ಯವಿದ್ಯೆಯನ್ನು ಕಲಿತವರೆಲ್ಲ ನವೀನರಾಗಿಯೇ ವಾದಿಸುತ್ತಾರೆಂದು ಹೇಳುವುದಕ್ಕೂ ಆಗದು. ನಾಡಿನ ಹಿರಿಯರೆಲ್ಲ ಒಂದು ಗೊತ್ತಾದ ಬಗೆಯಲ್ಲಿ, ಯುವಕರೆಲ್ಲ ಬೇರೊಂದು ಬಗೆಯಲ್ಲಿ ವಾದಿಸುವರೆನ್ನಲೂ ಆಗುವುದಿಲ್ಲ. ಇರಬಹುದಾದ ಗುಣಗಳಿಗಿಂತ ಸಂಪ್ರದಾಯದಲ್ಲಿ ಮುನ್ನಡೆಗೆ ಅಡ್ಡಿ ತೊಂದರೆಗಳೇ ಹೆಚ್ಚೆಂದು ಅದನ್ನೆಲ್ಲ ಮೀರಿ ಹೊಸ ಬದುಕನ್ನು ಹೊಸರೀತಿಯಲ್ಲಿಯೇ ಆರಂಭಿಸಿಬಿಡೋಣ ಎಂದು ಒಬ್ಬರು ಆತುರಪಟ್ಟು ನುಡಿದರೆ ತಾವು ಆಚರಿಸುತ್ತಿರುವುದೇ ಧರ್ಮ, ಸ್ವಧರ್ಮದಿಂದಲೇ ಶ್ರೇಯಸ್ಸು, ಪಾಶ್ಚಾತ್ಯರ ಧರ್ಮ ನಮ್ಮದಲ್ಲ. ಅವರ ಚಲನವಲನ ಬದುಕಿನ ರೀತಿಗಳನ್ನು ನೋಡಿದರೆ ಭಯವಾಗುತ್ತದೆ, ಆ ರೀತಿಯಲ್ಲಿ ನಾವು ಉದ್ಧಾರವಾಗುವುದಿಲ್ಲ, ಅವರಿಗೇ ಅದರಿಂದ ಪ್ರಯೋಜನವಾಗಿಲ್ಲ, ನಮಗೆ ಖಂಡಿತ ಅದು ಬೇಡ, ನಮ್ಮದನ್ನೇ ಹಾಗೆ ಹೀಗೆ ಸರಿಮಾಡಿಕೊಂಡು—ಬೇಕಾದರೆ ತೇಪೆ ಹಾಕಿಕೊಂಡು—ಹೋಗೋಣ ಎಂಬ ವಾದಗಳು ಸಚ್ಚರಿತ್ರರಾದ ಮೇಧಾವಿಗಳ ಬಾಯಿಂದ ಕೇಳಿಬರುತ್ತಿದೆ. ಈ ಸಂದರ್ಭದಲ್ಲಿ ರಾಗದ್ವೇಷಗಳನ್ನು ಕೆರಳಿಸದೆ ಸ್ವತಂತ್ರನಾಗಿ ಯೋಚನೆ ಮತ್ತು ವಿಷಯಪರಿಶೀಲನೆ ನಡೆಯುವುದು ಕೂಡ ಕಷ್ಟವಾಗಿದೆ. ಅನೇಕರಿಗೆ ದಾರಿ ಮುಂದೆ ಕವಲೊಡೆದಂತೆ ಕಾಣಿಸುತ್ತ, ಯಾವುದನ್ನು ತುಳಿಯೋಣ ಎಂಬ ಯೋಚನೆ ಬಲವಾಗಿದೆ. ಇದು ಹೀಗೆಯೇ ಸರಿ, ಮುಂದೆ ಹೀಗೆಯೇ ಹೋಗಬೇಕು, ಆಗಬೇಕು, ಎಂದು ಹೇಳುವಷ್ಟು ಯಾರ ಮನಸ್ಸೂ ವಿಶದವಾಗಿಲ್ಲ, ನಿಷ್ಕರ್ಷೆಗೆ ಬಂದಿಲ್ಲ.

ಪೂರ್ವದ ಸಂಸ್ಕೃತಿ, ಪಶ್ಚಿಮದ ಸಂಸ್ಕೃತಿ ಎಂದುಹೇಳುವುದು ಒಂದರ್ಥದಲ್ಲಿ ನಿಜವಾದರೆ ಇನ್ನೊಂದರಲ್ಲಿ ಸ್ವಲ್ಪವೂ ಸರಿಯಲ್ಲ. ದೇಹ, ಮನಸ್ಸು, ಮಾತು, ನಡತೆ, ಕೆಲಸ, ಆತ್ಮಶಕ್ತಿ ಇವುಗಳನ್ನು ತಿದ್ದಿ ಹದನುಮಾಡತಕ್ಕ ಎಲ್ಲ ಪ್ರಭಾವಗಳಿಗೂ ಸಂಸ್ಕಾರಗಳೆನ್ನಬಹುದು. ಒಟ್ಟಿನಲ್ಲಿ ಯಾವ ದೇಶದ, ಯಾವ ಕಾಲದ ದೊಡ್ಡ ಸಂಸ್ಕಾರಗಳಾಗಬೇಕಾದರೂ ಸುಮಾರು ಒಂದೇ ದಾರಿಯಲ್ಲಿ ಆಗುವುವು. ಹೊರಗಿನ ಆಚಾರ ವ್ಯವಹಾರಗಳಲ್ಲಿ ವ್ಯತ್ಯಾಸಗಳಿದ್ದರೂ ಮನುಷ್ಯನ ಮೂಲಸ್ವರೂಪವನ್ನು ತಿದ್ದಿ ಶುಚಿಗೊಳಿಸುವ ಮಾರ್ಗ ಎಲ್ಲ ಕಡೆಯೂ ಒಂದೇ. ಸಾರತಃ ಪ್ರಪಂಚಕ್ಕೆಲ್ಲ ಇರುವದು ಒಂದೇ ಸಂಸ್ಕೃತಿ. ಆದ್ದರಿಂದ ದಿಕ್ಕುಗಳಿಗೆ ತಕ್ಕಂತೆ ಪ್ರಪಂಚದ ಸಂಸ್ಕೃತಿಯ ವಿಂಗಡಣೆ ಮಾಡಹೋಗುವುದು ಸರಿಯಾಗುವುದಿಲ್ಲ. ಮತಧರ್ಮಗಳ ಆಚಾರ್ಯಪುರುಷರು ಹುಟ್ಟಿ ಬೆಳೆದು ಮಾನವಕುಲಕ್ಕೆ ಜೀವನದ ಗುರಿಯನ್ನು ತೋರಿಸಿರುವುದು ಪೂರ್ವ ರಾಷ್ಟ್ರಗಳಲ್ಲಿಯೇ ಆದ್ದರಿಂದ ಹಿರಿದಾದ ದೃಷ್ಟಿಯೆಲ್ಲ ಇತ್ತಕಡೆಯದೇ, ಉಳಿದುದೆಲ್ಲ ಪೂರ್ವ ಸಂಪ್ರದಾಯಗಳಿಗೇ ಶರಣಾಗಬೇಕು ಎಂದು ಕೆಲವರು ತೀರ್ಮಾನಿಸಿಬಿಡಬಹುದು. ಆದರೆ ಮತಧರ್ಮ ಮತ್ತು ಪ್ರಮಾಣವಾಕ್ಯಗಳು ಎಲ್ಲೇ ಹುಟ್ಟಿರಲಿ ಜೀವಕ್ಕೂ ಧರ್ಮಸೂತ್ರಗಳಿಗೂ ಸಂಬಂಧವಿಲ್ಲದಂತೆ ವ್ಯವಹಾರ ಧರ್ಮಗಳೂ ಸಂಸ್ಥೆಗಳೂ ನಡತೆ ರೀತಿಗಳೂ ಏರ್ಪಟ್ಟು ಪೂರ್ವ ಪೂರ್ವವೇ ಪಶ್ಚಿಮ ಪಶ್ಚಿಮವೇ, ಇವೆರಡೂ ಎಂದಿಗೂ ಕೂಡಲಾರವು ಎನ್ನುವಷ್ಟು ವ್ಯತ್ಯಾಸಗಳು ಎರಡಕ್ಕೂ ನಡುವೆ ಬೆಳೆದು ನಿಂತಿರುವುದು ಎಲ್ಲರಿಗೂ ಕಾಣುತ್ತಿರುವ ಸಂಗತಿ. ಪೂರ್ವದೇಶದವನಾದ ಏಸುವಿನ ಮತ್ತು ಆತನ ಶಿಷ್ಯ ಸಂತತಿಯಿಂದ ಕ್ರೈಸ್ತ ಉಪದೇಶ ಹರಡಿದ್ದರೂ ಪಶ್ಚಿಮ ದೇಶಗಳವರ ದಿನದಿನದ ಆಚಾರ ಕ್ರೈಸ್ತವಲ್ಲದ ಒಂದು ಮನೋಧರ್ಮದಿಂದ ನಡೆಯುತ್ತಿದೆ ಎಂಬಂತೆ ಕೇವಲ ಪ್ರಾಪಂಚಿಕ ಸುಖ ಮೇಲ್ಮೆಗಳಿಗಾಗಿ ರಚಿತವಾಗಿ ಪಶ್ಚಿಮದವರ ಜೀವನ ವಿಧವಿಧವಾದ ಶಕ್ತಿಗಳನ್ನು ರೂಢಿಸಿಕೊಂಡು ಲಕ್ಷ್ಯಮುಖವಾಗಿ ಪ್ರಬಲಿಸಿದೆ. ಇಹದ ಬದುಕು ಬಲವಾಗಬೇಕು ಎಂಬ ಒಂದು ಚಿಂತೆಯಿಂದ ಸಂಪತ್ತನ್ನು ಗಳಿಸುವುದು, ರಾಜನೀತಿ ಕಟ್ಟುವುದು, ಸಮಾಜ ವ್ಯವಸ್ಥೆ ಮಾಡುವುದು, ವಿಜ್ಞಾನಸಾಧನೆ ಮಾಡಿ ಯಂತ್ರತಂತ್ರಗಳಿಂದ ಒಂದಕ್ಕೆ ಲಕ್ಷವಾದಿ ಶಕ್ತಿಯನ್ನು ಹೆಚ್ಚುಮಾಡಿಕೊಳ್ಳುವುದು. ಇನ್ನೂ ಯಾವ ಯಾವ ಬಗೆಯಲ್ಲಿ ಗೆಲ್ಲುವ ಮತ್ತು ಪ್ರತಿಷ್ಠೆಯಕ್ಕೆ ಬಲಪಡಿಸಿಕೊಳ್ಳಬಹುದೊ ಆ ಬಗೆಯಲ್ಲೆಲ್ಲ ನಿರ್ಭೀತಿಯಿಂದ ಕಟ್ಟು ಆತಂಕಗಳಿಗೆ ಬಗ್ಗದೆ ನಡೆಯುವುದು ಸಾಧಾರಣವಾಗಿ ಅಲ್ಲಿನ ಬಹುಕಾಲದ ವರ್ತನೆಯಾಗಿದೆ.

ಸಂಪತ್ತು ಶಕ್ತಿ ಪ್ರತಿಷ್ಠೆಗಳ ಸಾಧನೆಗೆ ಕೊಟ್ಟ ಮನಸ್ಸು ಸಾಹಸಕ್ಕೆ ತಾಯಾಯಿತು. ಹಾಗೂ ಧರ್ಮಾಧರ್ಮದ ಸೂಕ್ಷ್ಮವಿವೇಚನೆಗೆ ಕಾದು ಕುಳಿತುಕೊಳ್ಳದೆ ಲಾಭ, ಕೀರ್ತಿ. ಪ್ರಭಾವ ಇವುಗಳನ್ನು ಗಳಿಸುತ್ತಲೇ ಹೋಗಿ ಅದೇ ಮಾರ್ಗಗಳನ್ನೂ ಯಂತ್ರತಂತ್ರಗಳನ್ನೂ ಬಲ್ಲದ ಅಥವಾ ದೊರಕಿಸಿಕೊಳ್ಳಲಾರದ ಜನಕ್ಕೆ ಅಜೇಯವಾಗಿ ಪ್ರಪಂಚವನ್ನೆಲ್ಲಾ ನುಂಗಿ ಅಬ್ಬರಿಸುತ್ತಿದೆ. ವ್ಯಾಪಕವಾದ ಈ ಪ್ರಭಾವದದುರು ನಿಲ್ಲಲಾರದೆ ರಾಷ್ಟ್ರದ ಮೇಲೆ ರಾಷ್ಟ್ರ ಸೋತು ಅದರ ಕೈಕಬಳವಾಗಿದೆ. ಎಲ್ಲಿ ನೋಡಿದರೂ ಅದರ ಅಧಿಕಾರವೇ, ಕಣ್ಣೇ. ಅದರ ವಿಚಕ್ಷಣೆಯೇ. ಮಾತೇ, ಅದರ ವಾದವೇ, ಸಿದ್ಧಾಂತವೇ. ಅದಕ್ಕಿಂತ ಪ್ರಬಲ

ವಾದ ಒಂದು ಶಕ್ತಿ ಎದ್ದು ಅದನ್ನು ಎದುರಿಸದ ಹೊರತು ಅದನ್ನು ತಿರುಗಿಸಲಾಗದು ಅಥವಾ ನಮ್ಮನ್ನು ಕಾಪಾಡಲಾರದು.

ಇಂಥ ಶಕ್ತಿಯ ಎದುರು ನಿಲ್ಲಲು ಪೂರ್ವ ದೇಶದ ಪ್ರಾಚೀನ ರಾಷ್ಟ್ರಗಳಲ್ಲಿ ದೊಡ್ಡದಾದ ಭರತಖಂಡಕ್ಕಾಗಲಿ ಅದರ ಸಂಸ್ಕೃತಿಗಾಗಲಿ ಇದೆಯೋ ಎಂಬುದು ಮೇಲೆ ಕೇಳಿರುವ ಪ್ರಶ್ನೆ. ಮೂಡ ನಾಡುಗಳಲ್ಲಿ ಧರ್ಮಗಳ ಹುಟ್ಟೇನೊ ಆಯಿತು; ಮತ ಪಂಥಗಳು ಏರ್ಪಟ್ಟುವು, ಸಮಾಜ ವ್ಯವಸ್ಥೆ ಅವಕ್ಕೆ ಒಳಪಟ್ಟು ವ್ಯವಹಾರ ವಿಧಾನಗಳು ಬೆಳೆದುವು. ಆದರೆ ಧರ್ಮಸೂತ್ರಗಳ ಅತ್ಯುನ್ನತವಾದ ಸ್ಫೂರ್ತಿ ದಿನದಿನದ ಬಾಳಿಗೂ ಸಾಮಾನ್ಯ ಜನರೆಲ್ಲರ ನಡತೆಗೂ ಇಳಿಯಲು ಅಸಾಧ್ಯವಾಗಿ ವ್ಯವಹಾರ ಜೀವನದಲ್ಲಿ ಜಡತೆ ಹುಟ್ಟಿತು. ಜನರ ಚಟುವಟಿಕೆ, ಸಾಹಸಬುದ್ಧಿ ಹೇಗೋ ಕಡಮೆಯಾಯಿತು. ಸ್ವಾತಂತ್ರ್ಯ ಸಾಧನೆಗೂ ಸಾಹಸಕ್ಕೂ ಆಸೆಪಡುವುದು 'ಅಹಂಕಾರ' ಎಂದು ತತ್ತ್ವದ ನುಡಿ ಮರೆಯಾಗಿ, ಒಂದು ನಿರ್ವೀರ್ಯತೆಯೂ ದುರ್ಬಲ ಸರ್ವಸಹಿಷ್ಣುತೆಯೂ ಹುಟ್ಟಿ ಬೆಳೆದುವು. ಕರ್ಮ, ವಿಧಿ ಎಂಬ ವ್ಯಾಖ್ಯಾನ ವಿವರಣೆ ಬಲಿತು, ಇಹ ಅಸತ್ಯ, ಪರವೇ ಸತ್ಯ ಎಂದು ಹೇಳುತ್ತ ನಡೆಯುತ್ತಿರಲು, ಪರ ದೊರೆಯದೆ ಇಹ ಕೈತಪ್ಪಿಹೋಗುವ ಗತಿಗೆ ಬಂದಿತು. ಧರ್ಮಗಳನ್ನು ದಾನಮಾಡಿದ ಜನದ ಕಾರ್ಯಶಕ್ತಿ ಕುಂಠಿತವಾಯಿತು. ಅಂಥ ರಾಷ್ಟ್ರಗಳೆಲ್ಲ ಇಂದು ನಿರ್ಬಲವಾಗಿ ತಬ್ಬಲಿಯಾಗಿ ಹೊಸ ರಾಷ್ಟ್ರಗಳ ಕಡೆ ನಿಬ್ಬೆರಗಾಗಿಯೊ ಬೆಬ್ಬಳಿಸಿಯೊ ನೋಡುತ್ತ ನಿಂತಿರುವುದಾಗಿದೆ.

ಈ ಲೋಕದಲ್ಲಿ ವೀರ್ಯವಂತವಾದ ಬಾಳು ನಿಮಗೆ ಬೇಕೆ ಬೇಡವೆ? ಸರ್ವತೋಮುಖವಾದ ಶಕ್ತಿಯನ್ನು ಹೊಮ್ಮಬಲ್ಲ ಸಕಲಜನಸುಖದಾಯಕವಾದ ವಸ್ತುಪ್ರಪಂಚವನ್ನೂ ಕ್ರಿಯಾ ಪ್ರಪಂಚವನ್ನೂ ನಿರ್ಮಾಣಮಾಡಿಕೊಳ್ಳಲು ನಿಮಗೆ ಇಷ್ಟ ವಿದೆಯೆ? ಪಡುವಲ ಪ್ರಭಾವವನ್ನು ಎದುರಿಸಿ ನಿಂತು ನಿಮ್ಮನ್ನು ನೀವು ಕಾಪಾಡಿಕೊಂಡು ನಿಲ್ಲಬಲ್ಲಿರ? ಅವರ ಸ್ಪರ್ಧೆಯನ್ನು ಗೆದ್ದು ತಡೆಯುವವರೆಗೆ ಅದೇ ಪ್ರಭಾವವನ್ನು ಅಥವಾ ಅದಕ್ಕೂ ಮೇಲಾದ ಸಾತ್ತ್ವಿಕ ಪ್ರಭಾವವನ್ನು ನಿಮ್ಮ ಜನತೆಗಳಲ್ಲಿ ಬೆಳಸಬಲ್ಲಿರ? ಇದಕ್ಕೆ ಯಾವ ಮಾರ್ಗವನ್ನನುಸರಿಸುವಿರಿ? ಎಂಬುದು ಈ ದಿನದ ಪ್ರಶ್ನೆ.

ಪ್ರಶ್ನೆ ಉಗ್ರವಾದುದು, ನಿಷ್ಠುರವಾದುದು. ಯೋಚನಾಪರ ರಾದ ಇಂದಿನ ಎಲ್ಲರೂ ಇದಕ್ಕೆ ಉತ್ತರವನ್ನು ನಿಷ್ಪನ್ನಗೊಳಿಸ ಬೇಕಾಗಿದೆ.

---

## 'ಸಮಾಜ ಸೇವಕ'

ಈಗ ಹಿಂದೂ ಸಮಾಜವು ಒಂದು ವಿಷಮ ಸಂದಿಗ್ಧ ಸ್ಥಿತಿ ಯಲ್ಲಿದೆ. ಮತಾಚಾರಗಳ ಕಟ್ಟುಗಳು ಸಡಿಲವಾಗಿರುವುದೂ, ಶ್ರದ್ಧೆಯೆಂಬುದು ಕಡಮೆಯಾಗುತ್ತಿರುವುದೂ ಸಮಾಜದ ಐಕಮತ್ಯದ ದೃಷ್ಟಿಯಿಂದ ಒಳ್ಳೆಯದೇ ಕೆಟ್ಟದೇ ಎಂದು ಹೇಳುವುದು ಕಷ್ಟವಾಗಿದೆ. ಮತಧರ್ಮ ಬೇರೆ, ಸಮಾಜಧರ್ಮ ಬೇರೆ ಎಂದು ವಿಂಗಡಿಸಿ ತಕ್ಕಂತೆ ವ್ಯವಹಾರಗಳನ್ನು ತಿದ್ದಿಕೊಳ್ಳುವುದು ಆವಶ್ಯಕವಲ್ಲವೆ ಎಂಬ ಪ್ರಶ್ನೆ ಬೇರೆ ಮುಂದೆ ಕುಳಿತಿದೆ. ಮಠಾಧಿಪತಿಗಳಿಂದ ಈ ವಿಚಾರಗಳಿಗೆಲ್ಲ ಸಹಾಯವಾಗಬಹುದೆಂದು ಕೆಲವರೂ ಸಹಾಯವಾಗುವುದಿಲ್ಲವೆಂದು ಇತರರೂ ಅಭಿಪ್ರಾಯಪಡುತ್ತಿದ್ದಾರೆ. ಹಿಂದೆ ಸಮಾಜಕ್ಕೆ ಬ್ರಾಹ್ಮಣರು ಮೇಲ್ಪಂಕ್ತಿಗಳಾಗಿದ್ದರು. ಈಗ ಕಾರಣಾಂತರಗಳಿಂದ ಬ್ರಾಹ್ಮಣರಿಗೆ ಆ ಸ್ಥಾನವಿಲ್ಲ. ರಾಜಕೀಯ ವಾತಾವರಣದ ಕಾರಣದಿಂದ ಮೇಲು ಕೀಳುಗಳೆಂಬ ಮೋಟುಗೋಡೆಗಳೆಲ್ಲ ಧ್ವಂಸವಾಗುತ್ತಿವೆ. ಅನ್ಯಮತ ದವರ ಉಪಟಳ, ಹಿಂದೂಗಳಲ್ಲಿಯೇ ಭಿನ್ನಭಿನ್ನ ಪಂಗಡಗಳ ಒಳಜಗಳ ಇವುಗಳೆಲ್ಲರಿಂದ ಹೇಗೆ ಸಂಘಟಿತರಾಗಬೇಕೆಂಬುದಕ್ಕೆ ಮಾರ್ಗವೇ ತೋರುತ್ತಿಲ್ಲ. ಶ್ರೀಯುತ ಯಂ. ರಾಮರಾಯರು ಈ ಸಂದರ್ಭದಲ್ಲಿ ಅವರು ಈಗ ಹದಿನಾಲ್ಕುವರ್ಷಗಳಿಂದಲೂ ಸಂತತವಾಗಿ ನಡಸಿಕೊಂಡು ಬರುತ್ತಿರುವ "ಸುಬೋಧ" ಮಾಸಪತ್ರಿಕೆಯ ಜತೆಗೆ **'ಸಮಾಜ ಸೇವಕ'** ಎಂಬ ವಾರಪತ್ರಿಕೆಯನ್ನು ಹೊರಡಿಸಿ ದೇಶಸೇವೆ ಯನ್ನು ಮಾಡಲು ಕೈಕೊಂಡಿರುವುದನ್ನು ನೋಡಿ ನಮಗೆ ಸಂತೋಷ ವಾಗುತ್ತದೆ. ಶ್ರೀಯುತ ರಾಮರಾಯರು ನುರಿತ ಲೇಖಕರು, ಅನುಭ ವಸ್ಥರಾದ ಸಂಪಾದಕರು, ಹಿರಿಯ ಕನ್ನಡಪ್ರೇಮಿಗಳು, ಮೇಲಾಗಿ ಭಗವದ್ಭಕ್ತರು. ಇವರು ಕೈಕೊಂಡಿರುವ ಕಾರ್ಯವು ಯಶಸ್ವಿಯಾಗಿ ನೆರವೇರಲೆಂದು ಹಾರೈಸುತ್ತೇವೆ.

---

ಸಂಯುಕ್ತ ಕರ್ನಾಟಕದ ೨೪-೧೨-೩೯ ಸಂಚಿಕೆಯ ಅಗ್ರ ಲೇಖನದಲ್ಲಿ ಸಂಪಾದಕರು ಈ ರೀತಿ ಬರೆದಿರುತ್ತಾರೆ:

"ಕರ್ನಾಟಕದ ಎಲ್ಲ ಲೇಖಕರೂ ತಮ್ಮ ಈಗಿರುವ ಪುಸ್ತಕಗಳ ಎರಡೆರಡು ಪ್ರತಿಗಳನ್ನು ಹಾಗೂ ಮುಂದೆ ಪ್ರಕಟಮಾಡುವ ಪುಸ್ತಕಗಳಲ್ಲಿ ನೂರಕ್ಕೆ ಒಂದ ರಂತೆ ಪ್ರತಿಗಳನ್ನು ಪ್ರಕಟಿಸಲ್ಲಿಸುತ್ತ ಹೋದರೆ ಹಾಗೂ ಅವು ಬಂದಬಂದಂತೆ ಅವುಗಳ ವಿವರಗಳನ್ನು 'ಕನ್ನಡ ನುಡಿ'ಯಲ್ಲಿ ಕೊಡುತ್ತ ಹೋಗುವ ಪದ್ಧತಿಯ ನ್ನಿಟ್ಟರೆ ಆ ಪುಸ್ತಕಗಳ ಮಾರಾಟದ ಆದಾಯವೊಂದು ಪರಿಷತ್ತಿಗೆ ಲಭಿಸಬಹು ದೆಂದು ನಾವು ನಂಬಿದ್ದೇವೆ. ಈ ಸೂಚನೆಯನ್ನು ಎಲ್ಲರೂ ವಿಚಾರಿಸಬೇಕೆಂದು ನಮ್ಮ ಬಿನ್ನಹ."

ಅವರ ಈ ಮೇಲಿನ ಸಲಹೆಗೆ ನಮ್ಮ ಹೃತ್ಪೂರ್ವಕವಾದ ಬೆಂಬಲ ವನ್ನೀಯಲಿಚ್ಛಿಸುತ್ತೇವೆ. ಈ ರೀತಿ ಮಾಡುವುದರಿಂದ ಲೇಖಕರು ಪರಿಷತ್ತಿಗೆ ತಮ್ಮ ಸಹಾಯವನ್ನು ನೀಡಿದಂತಾಗುವುದಲ್ಲದೆ ಅಖಿಲ ಕರ್ನಾಟಕದ ಸಂಸ್ಥೆಯಾದ ಪರಿಷತ್ತಿನ ಪುಸ್ತಕ ಭಂಡಾರವನ್ನು ಸುಲಭ ವಾಗಿ ವೃದ್ಧಿಪಡಿಸುವುದಕ್ಕೆ ಅನುಕೂಲವನ್ನು ಕಲ್ಪಿಸಿಕೊಟ್ಟಂತಾಗುವುದು.

ಇನ್ನು ಮುಂದೆ ಲೇಖಕರಾಗಲಿ ಪ್ರಕಟನಕಾರರಾಗಲಿ ಹೊಸ ಹೊಸದಾಗಿ ಪ್ರಕಟವಾದ ಪುಸ್ತಕಗಳ ಸಂಕ್ಷಿಪ್ತ ವಿವರಗಳನ್ನು ನಮಗೆ ಕಳಿಸಿಕೊಟ್ಟಲ್ಲಿ ಅವುಗಳನ್ನು ಸಂತೋಷದಿಂದ "ಕನ್ನಡ ನುಡಿ"ಯಲ್ಲಿ ಪ್ರಕಟಿಸುತ್ತೇವೆ.

---

## ಕನ್ನಡ ಸುದ್ದಿ

**ಭದ್ರಾವತಿ**

ಈ ತಿಂಗಳು ೩ನೆಯ ತಾರೀಖು ಬುಧವಾರ ಸಾಯಂಕಾಲ ೬ ಘಂಟೆಗೆ ಭದ್ರಾವತಿ ಹೈಸ್ಕೂಲ್ ಹಾಲಿನಲ್ಲಿ ಶ್ರೀ ಕೆ. ಸಿ. ರಾಮನಾಥಯ್ಯನವರ ಅಧ್ಯಕ್ಷತೆ ಯಲ್ಲಿ ಮೈಸೂರು ಮರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿರುವ ಶ್ರೀ ಜಿ. ಆರ್. ರಂಗಸ್ವಾಮಿಯವರು ಇಲ್ಲಿ ಒಂದು ಕರ್ನಾಟಕ ಸಂಘವನ್ನು ಸ್ಥಾಪಿಸಿದರು.

ದೇವತಾ ಪ್ರಾರ್ಥನೆ, ಕವಿತಾ ಪಠನೆಗಳ ನಂತರ ಬಾಲಕಿಯರು ಜೋಗುಳ ಹಾಡಿದರು. ಅಧ್ಯಕ್ಷರು ಶ್ರೀ ಜಿ. ಆರ್. ರಂಗಸ್ವಾಮಿಯವರನ್ನು ಸಭೆಗೆ ಪರಿಚಯ ಮಾಡಿಕೊಟ್ಟರು. ಅನಂತರ ಶ್ರೀ ರಂಗಸ್ವಾಮಿಯವರು ಭಾಷಣಮಾಡುತ್ತಾ ಬೆಳಗಾಂ ಸಾಹಿತ್ಯ ಸಮ್ಮೇಳನವು ಎಷ್ಟು ವೈಭವದಿಂದ ನಡೆಯಿತು ಎಂಬುದನ್ನು ವಿಸ್ತಾರವಾಗಿ ತಿಳಿಸಿ ಈ ನಗರಕ್ಕೆ ಇಂತಹ ಸಂಘದ ಆವಶ ಕತೆಯನ್ನು ವಿವರಿಸಿ ಇದರಿಂದ ಜನಜೀವನವು ಉತ್ತಮಗೊಳ್ಳುವುದೆಂದು ಹೇಳಿದರು.

**ಎಲವಿಗಿ :**

ಧಾರವಾಡ ಜಿಲ್ಲೆಯ ಶಿಗ್ಗಾಂವಿ ತಾಲ್ಲೂಕಿಗೆ ಸೇರಿದ ಈಸ್ಥಳಕ್ಕೆ ಮೈಸೂರಿನ ಶ್ರೀ ಜಿ. ಆರ್. ರಂಗಸ್ವಾಮಿ ಎಂ.ಎ. ಅವರು ೩೧-೧೨-೩೯ರಲ್ಲಿ ದಯಮಾಡಿಸಿ ಇಲ್ಲಿ ಒಂದು ಕರ್ನಾಟಕ ಸಂಘವನ್ನು ಸ್ಥಾಪಿಸಿದರು. ಶ್ರೀ ಆರ್. ಬಿ. ರಾಯ ಚೂರ್ರವರು ಅಧ್ಯಕ್ಷರಾಗಿಯೂ, ಶ್ರೀ ಜೇಥೂಭಾಯಿ ವಿರಧೋರ್ ಅವರು ಉಪಾಧ್ಯಕ್ಷರಾಗಿಯೂ, ಶ್ರೀಗಳಾದ ಸಂಗಪ್ಪ ಗಡಪ್ಪ ಮತ್ತು ಗುಂಡುರಾವ್, ಎಚ್. ಕಡೀಮ್ ದಿವಾನ್ ಇವರುಗಳು ಕಾರ್ಯದರ್ಶಿಗಳಾಗಿಯೂ ಚುನಾಯಿತ ರಾದರು. ಆರು ಜನರನ್ನೊಳಗೊಂಡ ಒಂದು ಕಾರ್ಯಸಮಿತಿ ಏರ್ಪಾಟಾಯಿತು. ಅದೇ ಸಮಯದಲ್ಲಿ ದಯಮಾಡಿಸಿದ್ದ ಬೆಂಗಳೂರಿನ ಶ್ರೀ ಎಂ. ಎನ್. ಗೋಪಾಲ ರಾಯರು "ಕತೆಗಾರ" ಮತ್ತು "ಕನ್ನಡ ನುಡಿ" ಪತ್ರಿಕೆಗಳನ್ನು ಸಂಘಕ್ಕೆ ಉಚಿತ ವಾಗಿ ಕಳುಹಿಸಿಕೊಡುವುದಾಗಿ ವಾಗ್ದಾನ ಮಾಡಿದರು. ಸಂಘದ ಅಂಗವಾಗಿ ಒಂದು ವಯಸ್ಕರ ಶಾಲೆಯನ್ನು ಸ್ಥಾಪಿಸತಕ್ಕದ್ದೆಂದು ನಿರ್ಣಯವಾಯಿತು.

**ಸಿಂಧನೂರು :**

ಇದು ನಿಜಾಂ ಕರ್ನಾಟಕಕ್ಕೆ ಸೇರಿದೆ. ಇಲ್ಲಿ ಕನ್ನಡಿಗರ ಸಂಘವೇರ್ಪಟ್ಟು ಅದರ ಆಶ್ರಯದಲ್ಲಿ "ಶ್ರೀ ಶಾರದಾ ವಾಚನಾಲಯ"ವು ಸ್ಥಾಪಿಸಲ್ಪಟ್ಟಿದೆ. ಸಂಘದ ಕಾರ್ಯನಿರ್ವಾಹಕ ಸಮಿತಿಯು ಕೆಳಗಿನಂತಿದೆ. ಅಧ್ಯಕ್ಷರು: ಶ್ರೀ ಕನಕಗಿರಿ ರಾಮರಾವ್, ವಕೀಲ; ಉಪಾಧ್ಯಕ್ಷರು: ಶ್ರೀ ಸಿದ್ದಲಿಂಗಪ್ಪ, ವಕೀಲರು; ಕಾರ್ಯದರ್ಶಿಗಳು: ಎನ್. ಹನುಮಂತರಾವು, ವಕೀಲ; ಉಪಕಾರ್ಯದರ್ಶಿ ಗಳು: ಕೆ. ಹನುಮಂತಪ್ಪ, ವಕೀಲ; ಕೋಶಾಧ್ಯಕ್ಷರು: ಪ್ರಲ್ಹಾದಾಚಾರ್ಯ, ವಕೀಲ. ೯ ಜನ ಸದಸ್ಯರಿರುವ ಕಾರ್ಯಸಮಿತಿಯೊಂದು ಏರ್ಪಾಟಾಗಿದೆ. ಇಲ್ಲಿಯ ಕನ್ನಡಿಗರಲ್ಲಿ ಚಟುವಟಿಕೆಯುಂಟಾಗಿ ಜನತೆಯ ಸಂಘಟನೆಮತ್ತ ಜ್ಞಾನ ಪ್ರಸಾರ ಇವೇ ಸಂಘದ ಮುಖ್ಯೋದ್ದೇಶಗಳಾಗಿವೆ.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸೇರಿದ ಸಾಹಿತ್ಯಗೋಷ್ಠಿಯ ಅಧ್ಯಕ್ಷರಾದ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ. ಅವರು ಮಾಡಿದ ಭಾಷಣ

**ಪೂಜ್ಯರಾದ ಹಿರಿಯರೇ, ಅಕ್ಕತಂಗಿಯರೇ, ಅಣ್ಣತಮ್ಮಂದಿರೇ,**

ಈ ಸಲದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷಸ್ಥಾನಕ್ಕೆ ನನ್ನನ್ನು ಆರಿಸಿದ ಕನ್ನಡ ಬಂಧುಗಳಿಗೆಲ್ಲ ನಾನು ಕೃತಜ್ಞನಾಗಿದ್ದೇನೆ. ಈ ಸಂಬಂಧದಲ್ಲಿ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದ ಶ್ರೀಮಾನ್ ಮಲ್ಲೇಶಪ್ರಭು ವಾಲಿ, ಎಂ.ಎ. ಅವರು; ಕಾರ್ಯದರ್ಶಿಗಳಾದ ಶ್ರೀಮಾನ್ ಜೋಶಿ ನರಸಿಂಗರಾಯರು ಮತ್ತು ಶ್ರೀಮಾನ್ ವಿ. ಪಿ. ಕಿತ್ತೂರ ಅವರು; ಸ್ವಾಗತ ಸಮಿತಿಯ ಇತರ ಸದಸ್ಯರುಗಳು; ಸಾಹಿತ್ಯ ಗೋಷ್ಠಿಯ ಸ್ವಾಗತಾಧ್ಯಕ್ಷರಾದ ಶ್ರೀಮಾನ್ ಕಟ್ಟಿ ಶೇಷಾಚಾರ್ಯರವರು; ಕಾರ್ಯದರ್ಶಿಗಳಾದ ಶ್ರೀಮಾನ್ ಕೃಷ್ಣಮೂರ್ತಿ ಪುರಾಣಿಕರವರು ಮತ್ತು ಶಿವಲಿಂಗಪ್ರಭು ದೇಶಾಯಿ ಅವರು — ಮುಂತಾದ ಮಹಾಶಯರುಗಳಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಜಾತಿ ಪಂಗಡಗಳ ಭೇದವಾವುದೂ ಇಲ್ಲದೆ ಕನ್ನಡಿಗರೆಲ್ಲ ಒಬ್ಬಳೇ ಕನ್ನಡತಾಯಿಯ ಮಕ್ಕಳಾದ ಸೋದರ ಸೋದರಿಯರೆಂಬ ಭಾವನೆಯಿಂದ ನಾವೆಲ್ಲರೂ ಇಲ್ಲಿ ಸೇರಿರುವ ಸಾಹಿತ್ಯಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸುವುದೊಂದು ದೊಡ್ಡ ಗೌರವವೆಂದು ನಾನು ಭಾವಿಸಿದ್ದೇನೆ. ಈ ಗೌರವವು ನನಗೆ ಲಭಿಸಿರುವುದೊಂದು ಸುಯೋಗವೆಂಬುದು ನನ್ನ ನಂಬಿಕೆ.

## ಭಾಷಣದ ಆಶಯ

ಸರಸ್ವತೀ ದೇವಿಯ ಭಕ್ತರಾದ ಕನ್ನಡ ಸಾಹಿತಿಗಳು ಸಭೆ ಸೇರಿರುವ ಈ ಸಾಹಿತ್ಯ ಗೋಷ್ಠಿಯಲ್ಲಿ ಇಂದಿನ ಸಾಹಿತ್ಯ ಸೇವಕರ ಕೃತಿಗಳ ಸಂಕ್ಷೇಪ ವಿಮರ್ಶೆಯ ರೂಪದಲ್ಲೊಂದು ಭಾಷಣ ಮಾಡಲೆಣಿಸಿತ್ತು. ಆದರೆ ಆ ಅಗಾಧ ಪ್ರಯತ್ನದಲ್ಲಿ ಕಾಲಾವಕಾಶ ಸಾಲದೆ ಸಾಹಿತ್ಯಭಕ್ತರಲ್ಲಿ ಅನೇಕ ಕೃತಿಗಳನ್ನೇ ಸೂಚಿಸುವುದು ಬಿಟ್ಟುಹೋಗುವ ಅಪಚಾರವು ನಡೆದು, ಅವರ ಮನಸ್ಸಿಗೆ ನೋವಾಗಬಹುದೆಂದು ತೋರಿತು. ಆದಕಾರಣ ಆ ಪ್ರಯತ್ನವನ್ನು ಕೈಬಿಟ್ಟು ಪೌರಾತ್ಯ ಪಾಶ್ಚಾತ್ಯ ಸಾಹಿತ್ಯ ವಿಮರ್ಶಾಂಶಗಳಿಗೆ ಸಂಬಂಧಪಟ್ಟ ಸಾಮಾನ್ಯ ವಿಷಯಗಳನ್ನು ಕುರಿತು ಭಾಷಣಮಾಡುವ ಆಲೋಚನೆಯಾಯಿತು. ಆದರೆ ಅದನ್ನೂ ತೊರೆದೆ. ಏಕೆಂದರೆ, ಕಾಲಾವಕಾಶ ಸಾಲದ ಕೊರತೆ ಅದಕ್ಕೂ ತಪ್ಪದು. ಆದಕಾರಣ, ಲೋಕಾಭಿರಾಮವಾಗಿ ಮಾತಾಡುವುದೆಂದು ನನ್ನ ಮನಸ್ಸಿಗೆ ತೋರಿದ ಕೆಲವು ಸಂಗತಿಗಳನ್ನು ತಮ್ಮಲ್ಲಿ ಬಿನ್ನಹಮಾಡಿಕೊಳ್ಳುತ್ತೇನೆ. ಸಾಹಿತ್ಯಕ್ಷೇತ್ರದಲ್ಲಿ ಕಂಡುಬರುವ ಚಲನವಲನಗಳಲ್ಲಿ ಕೆಲವನ್ನು ಕುರಿತು ಸಂಕ್ಷೇಪವಾಗಿ ವಿಚಾರಮಾಡುತ್ತೇನೆ; ಮುಖ್ಯವಾಗಿ ಸಾಹಿತ್ಯಕ್ಷೇತ್ರದಲ್ಲಾಗಲಿ ಅಥವಾ ಜೀವನದಲ್ಲಾಗಲಿ ಸಹೃದಯತೆಯು ಕಡಮೆಯಾಗಿರುವುದೇ ನಮ್ಮ ಕಷ್ಟಕಾರ್ಪಣ್ಯಗಳಿಗೂ ನಮ್ಮ ತೊಂದರೆಗಳಿಗೂ ಕಾರಣವೆಂಬುದನ್ನು ಪ್ರಸ್ತಾಪಿಸುತ್ತೇನೆ. ಗುಣಪಕ್ಷಪಾತದಿಂದ ಎಲ್ಲವರಲ್ಲಿಯೂ, ಎಲ್ಲರಲ್ಲಿಯೂ ಇರುವ ಒಳ್ಳೆಯದನ್ನು ಮಾತ್ರವೇ ಗಮನಿಸಿ, (ಒಂದಿಲ್ಲದಿದ್ದರೆ ಮತ್ತೊಂದು ರೂಪದಲ್ಲಿ ಸರ್ವರಲ್ಲಿಯೂ ಸಮಾನಲಕ್ಷಣದಂತಿರುವ ಕಾರಣಕ್ಕಾಗಿ) ದೋಷವನ್ನು ಕಡೆಗಂಡು ತ್ರಿಕರಣ ಶುದ್ಧವಾಗಿ ಸಹಾನುಭೂತಿಯನ್ನು ವ್ಯಕ್ತಗೊಳಿಸಿ ಆದರಕೋರುವುದೇ ಸಹೃದಯರ ಲಕ್ಷಣವೆಂಬುದನ್ನು ತಮ್ಮಲ್ಲಿ ಬಿನ್ನವಿಸುವುದು ಆನಾವಶ್ಯಕ.

## ಕನ್ನಡಿಗರ ವೈಭವ

ಕನ್ನಡ ನಾಡಿನ, ಕನ್ನಡ ನುಡಿಯ, ಮತ್ತು ಕನ್ನಡ ಸಂಸ್ಕೃತಿಯ ಮೇಲಿನ ಅಭಿಮಾನದಿಂದ ಅವುಗಳ ಮೇಲ್ಮೆಗಾಗಿ ತನುಮನಧನಗಳನ್ನರ್ಪಿಸಿ ಅಮೋಘ ರೀತಿಯಲ್ಲಿ ಸೇವೆಯನ್ನು ಸಮರ್ಪಿಸಿರುವ, ಉಜ್ಜ್ವಲ ದೇಶಾಭಿಮಾನಿಗಳನ್ನು ಪಡೆದಿರುವ ಹೆಮ್ಮೆ ನಮ್ಮದು. ಅದರೊಡನೆ, ಇಂದು ಕೂಡ ಕನ್ನಡಿಗರ ಹಿರಿಮೆಯ ವಿಷಯವಾಗಿ ಅಭಿಮಾನ ತೋರದ ಅಸಂಖ್ಯಾತ ಮಂದಿ ಕನ್ನಡಿಗರಿಗೆ ತಮ್ಮ ದೇಶಮಾತೆಯಲ್ಲಿ ಸಹೃದಯತೆಯನ್ನು ತೋರಿಸಬೇಕೆಂದು ಬೋಧಿಸಿ ಅದನ್ನು ಅವರಿಗೆ ಕಲಿಸಬೇಕಾದ ಕರಕರೆಯೂ ನಮ್ಮದು. ಒಂದಲ್ಲ ಒಂದು ವಿಧದಲ್ಲಿ ಇಂದು ಕೂಡ "ಕನ್ನಡವೂ ಒಂದು ಭಾಷೆಯೆ?" ಎಂದು ಕೇಳುವವರೂ ಇದ್ದಾರೆ. "ನೀವೂ ಒಬ್ಬರು ಮನುಷ್ಯರೆ?" ಎಂಬುದೇ ಅದಕ್ಕೆ ತಕ್ಕ ಪ್ರತ್ಯುತ್ತರ. ಕನ್ನಡಿಗರ ಹಿರಿಮೆಯಲ್ಲಿ ಕನ್ನಡಿಗರೇ ಅನೇಕರು ಸಂದೇಹದಿಂದಿರುವ ಸನ್ನಿವೇಶದಿಂದ ಆತಂಕಪಡಬೇಕಾಗಿದೆ. ಕನ್ನಡಿಗರ ಹಿರಿಮೆಯನ್ನಾಗಲಿ, ಕನ್ನಡಿಗರ ವೈಭವವನ್ನಾಗಲಿ ಕುರಿತು ಪ್ರಸ್ತಾವಿಸಲು ಈಗ ಸಮಯವಿಲ್ಲ. ಆದಾಗ್ಗೂ, ಕನ್ನಡಿಗರ ಸಾಧನೆ ಸಿದ್ಧಿಗಳು ಮಹತ್ತರವಾದುವುಗಳೆಂಬುದನ್ನೂ ಕನ್ನಡಿಗರ ಜೀವನದ ಸೊಂಪನ್ನೂ ವ್ಯಕ್ತಗೊಳಿಸುವುದಕ್ಕಾಗಿ ಕೆಲವು ಅಂಶಗಳನ್ನು ಸೂಚಿಸುವೆನು.

ಯಾವ ಕ್ಷೇತ್ರದಲ್ಲಿ ನೋಡಿದರೂ ನಮ್ಮ ಪೂರ್ವಿಕರು ಪಡೆದ ಕಾರ್ಯಸಿದ್ಧಿಯು ಅಲ್ಪವಾಗಿರಲಿಲ್ಲವೆಂಬುದನ್ನು ವಿಚಾರಶೀಲರಾದ ಸಹೃದಯರೆಲ್ಲರೂ ಒಪ್ಪುವರು. ನಾಡಿನ ವಿಸ್ತೀರ್ಣದಲ್ಲಿ ನೋಡೋಣವೆ? ಇಂದು ವಿಸ್ತಾರದಲ್ಲಿ ಕಡಮೆಯಾಗಿ ಹರಿದು ಹಂಚಿಹೋಗಿರುವ ನಮ್ಮ ನಾಡು ಹಿಂದೊಮ್ಮೆ "ಕಾವೇರಿಯಿಂದಮಾಗೋದಾವರಿವರಮಿರ್ದ" ನಾಡು. ನಮ್ಮ ಕನ್ನಡದ ಪ್ರಾಚೀನತೆಯನ್ನು ನೋಡೋಣವೆ? ಗ್ರೀಕರ ಗ್ರಂಥದಲ್ಲಿ ಕೂಡ ಕನ್ನಡದ ಪದಗಳಿವೆಯೆಂದು ಶಂಕೆಯು ಹುಟ್ಟಿರುವುದೂ ಕನ್ನಡ ಪ್ರಾಚೀನತೆಗೊಂದು ನಿದರ್ಶನ. ನಮ್ಮ ನಾಡಿಗಿದ್ದ ಪ್ರಭಾವವನ್ನೂ ನಮ್ಮ ನಾಡು ಇತರ ನಾಡುಗಳ ಮೇಲೆ ಒತ್ತಿದ ವರ್ಚಸ್ಸಿನ ಮುದ್ರೆಯನ್ನೂ ನೋಡೋಣವೆ? ಹಿಂದೆ ಕನ್ನಡಿಗರ ತೇಜಸ್ಸು ಬಂಗಾಳ ಕಾಶ್ಮೀರ ದೇಶಗಳವರೆಗೆ ಕೂಡ ಪಸರಿಸಿ ನಯ ವಿನಯಾದಿ ಸದ್ಗುಣಗಳೇ ಮುಂತಾದವುಗಳಲ್ಲಿ—ಜೀವನಕ್ಕೆ ಒಪ್ಪವಿಡುವ ಹಲವು ವಿಚಾರಗಳಲ್ಲಿ—ಭಾರತೀಯರಲ್ಲಿ ಅನೇಕ ರಾಜ್ಯಗಳವರು ಕನ್ನಡಿಗರ ವರ್ತನೆಯನ್ನೇ ಪ್ರಮಾಣವೆಂದೆಣಿಸಿ ಅವರ ನಡೆಯ ಮಾದರಿಯನ್ನೇ ಅನುಸರಿಸುತ್ತಿದ್ದ ಧವಳಕೀರ್ತಿಯ ನಾಡು ನಮ್ಮದು. ರಾಜಕೀಯ ಕಾರ್ಯರಂಗದಲ್ಲಿ ಕನ್ನಡಿಗರ ಕೈಚಳಕವನ್ನು ನೋಡೋಣವೆ? ಕದಂಬರೇ ಮುಂತಾದ ನಾನಾ ರಾಜಮನೆತನದವರು ಆಳಿದ ನಾಡು ನಮ್ಮದು. ಶತ್ರುಪಕ್ಷದವರ ಕತ್ತಿಗಳೊಡನೆ ತನ್ನ ಕತ್ತಿಯ ಆಘಾತದ ನಿನಾದವಾಗುವಾಗ್ಗೆ ಹುಟ್ಟದ ಕಿಡಿಗಳ ಮಾಲೆಯೇ ವೀರನ ಕೊರಳಿಗೆ ತಕ್ಕ ಮಾಣಿಕ್ಯಮಾಲೆಯೆಂಬ ಭಾವನೆಯಿಂದ ಕೂಡಿ ಅಪಾರ ಸೇನಾಸಾಗರದೊಡನೆ ದಂಡಯಾತ್ರೆಗೆ ಬಂದಿದ್ದ ವೀರಶ್ರೇಷ್ಠನಾದ ಹರ್ಷವರ್ಧನ ಚಕ್ರವರ್ತಿಯನ್ನು ಹಿಮ್ಮೆಟ್ಟಿಸಿದ ಚಾಲುಕ್ಯರ ಪುಲಿಕೇಶಿಯು ಮೆರೆದ ನಾಡು ನಮ್ಮದು. ಸಾಮ್ರಾಜ್ಯ ವಿಸ್ತಾರದಿಂದಲೂ ಸಾಮ್ರಾಜ್ಯ ವೈಭವದಿಂದಲೂ ಅಂದಿನ ಪ್ರಪಂಚವನ್ನೇ ವಿಸ್ಮಯಗೊಳಿಸಿದ ನಾಡು ನಮ್ಮದು. "ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ" ಎಂಬ ನುಡಿಯನ್ನು ನಡೆಯಲ್ಲಿ ತೋರಿದ ವಿದ್ಯಾರಣ್ಯ ಸ್ವಾಮಿಗಳ ಕೃಪಾಶೀರ್ವಾದಗಳನ್ನು ಪಡೆದು ಮುಂದೆ ವೃದ್ಧಿಹೊಂದಿದ ವಿಜಯನಗರದ ವ್ಯಾಪಾರ ವಾಣಿಜ್ಯಗಳನ್ನೂ, ಫಲಪುಷ್ಪ ರಾಶಿಗಳನ್ನೂ, ಚಿನ್ನಬೆಳ್ಳಿಗಳ ಮತ್ತು ರತ್ನಪಡಿಗಳ ವೈಭವ ವೈಖರಿಗಳನ್ನೂ ಮನುಷ್ಯಶಕ್ತಿಗೆ ಮೀರಿದಂತೆ ತೋರುತ್ತಿದ್ದ ಕಾರ್ಯಸಾಧನೆಯ ನಿದರ್ಶನಗಳೆಂದು ವಿದೇಶೀಯರೂ ಕೊಂಡಾಡಿದರೂ, ಅವೆಲ್ಲಕ್ಕೂ ಮಿಗಿಲಾಗಿ ಸರ್ವಾದರಣೀಯವಾದೆರಡು ಅಂಶಗಳಂತು ಒಟ್ಟು ಮನುಷ್ಯ ವರ್ಗಕ್ಕೇ ಕೊಟ್ಟ ಮಂಗಳ ಶಾಸನಗಳಂತಿವೆ. ಸರ್ವಮತಸಹಿಷ್ಣುತೆಯ ಸಂದೇಶವನ್ನು ಸಾರುತ್ತ ಬೇಲೂರು ದೇವಾಲಯದಲ್ಲಿ ಶಿಲಾಕ್ಷರಗಳಲ್ಲಿರುವ ಪ್ರೌಢದೇವರಾಯರ ಕಾಲದ "ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ । ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ॥ ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ । ಸೋಯಂವೋ ವಿದಧಾತು ವಾಂಛಿತ ಫಲಂ ತ್ರೈಲೋಕ್ಯನಾಥೋ ಹರಿಃ ॥" ಎಂಬ ಶ್ಲೋಕವು ಅವುಗಳಲ್ಲೊಂದು. ಅಪರಾಧಿಗಳ ವಿಚಾರಣೆಮಾಡಿ ನ್ಯಾಯಶಾಸನ ನಾಡುವಲ್ಲಿ, ಅರಣ್ಯವಾಸಿಗಳ ವಿಚಾರಣೆಗೆ ಅರಣ್ಯವಾಸಿಗಳನ್ನೂ, ಪಟ್ಟಣಿಗರ

ವಿಚಾರಣೆಗೆ ಪಟ್ಟಣಿಗರನ್ನೂ, ಸೈನಿಕರ ವಿಚಾರಣೆಗೆ ಸೈನಿಕರನ್ನೂ
ಹಳ್ಳಿಯವರ ವಿಚಾರಣೆಗೆ ಹಳ್ಳಿಯವರನ್ನೂ ಪಂಚಾಯತರನ್ನಾಗಿಟ್ಟು
ಕೊಂಡು ಅವರ ಅಭಿಪ್ರಾಯವನ್ನೂ ಸ್ವೀಕರಿಸಿ ತೂಗಿನೋಡಿ ತೀರ್ಪು
ಕೊಡಬೇಕೆಂದು ಶ್ರೀ ವಿದ್ಯಾರಣ್ಯಸ್ವಾಮಿಗಳು ಅಪ್ಪಣೆ ಕೊಡಿಸಿರುವ
ಶ್ಲೋಕವು ಅವುಗಳಲ್ಲಿ ಮತ್ತೊಂದು. ನಿಷ್ಪಕ್ಷಪಾತವಾದ ತೀರ್ಮಾನ
ವಾಗುವುದಕ್ಕೆ ಸಾಧಕವಾಗುವುದೇ ಮುಂತಾದ ಉದಾತ್ತವಾದ ಆಶಯ
ಗಳು ಅದರಲ್ಲಿ ನೆಲಸಿವೆ; ಇಂದು ಕೂಡ ಪ್ರಪಂಚಕ್ಕೇ ಆದರ್ಶವನ್ನೊ
ದಗಿಸಿ ಕನ್ನಡಿಗರ ಕೀರ್ತಿಯನ್ನೂ ಹಿರಿಮೆಯನ್ನೂ ಮೆರೆಯುವ ಶಕ್ತಿ
ಅದರಲ್ಲಿದೆ.

ಕಲಾ ಭಂಡಾರವೇ ಒಂದು ಜನಾಂಗದ ಹಿರಿಮೆಯನ್ನು ಶಾಶ್ವತ
ವಾಗಿ ಬೆಳಗುವ ಸಾಧನ. ಈ ದೃಷ್ಟಿಯಿಂದ ನೋಡಿದರೂ ಯಾವ
ನಾಡಿನ ಅಥವಾ ಯಾವ ಕಾಲದ ಸಹೃದಯರಾದರೂ ಹೆಮ್ಮೆಪಡು
ವಷ್ಟು ಸಾಮರ್ಥ್ಯವನ್ನು ಕನ್ನಡಿಗರು ವ್ಯಕ್ತಗೊಳಿಸಿದ್ದಾರೆ. ಇಂದು
ಕನ್ನಡಿಗರಲ್ಲಿ ರಸಿಕತೆಯೂ, ಕಲಾಭಿಮಾನವೂ, ಸಹೃದಯತೆಯೂ
ಕಡಮೆಯಾಗಿರುವುದೇ—ಅವರ ಸಹೃದಯತೆಗೆ ಕಾರ್ಯಕಾರಿಯಾಗು
ವಷ್ಟುಮಟ್ಟಿನ ಕಾವೂ ಕೆಚ್ಚೂ ಇಲ್ಲದಿರುವುದೇ – ಕಲೆಯು ಸೊರಗು
ತ್ತಿರುವುದಕ್ಕೆ ಕಾರಣ. ಈ ಮಾತು ಹಾಗಿರಲಿ. ಕಲೆಯ ಅಂಗ
ಗಳಾದ ಸಂಗೀತ, ಸಾಹಿತ್ಯ, ಚಿತ್ರಲೇಖನ, ಶಿಲ್ಪ ಮತ್ತು ನಾಟ್ಯ—
ಇವುಗಳಲ್ಲಿ ಪ್ರತಿಯೊಂದೂ ಸಹ, ಕನ್ನಡಿಗರ ಸಿದ್ಧಹಸ್ತದಿಂದ
ಪುರೋಭಿವೃದ್ಧಿ ಹೊಂದಿ ಕನ್ನಡ ನಾಡಿನ ಬೆಳಕಿನಂತಿದೆ. ನಾಟ್ಯವು
ಕನ್ನಡ ನಾಡಿನಲ್ಲಿ ಒಮ್ಮೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತಾದರೂ—
ಇಲ್ಲಿ ಸೂಚಿಸುವುದು ಅಪ್ರಕೃತವಾದ ನಾನಾ ಕಾರಣಗಳ ದೆಸೆಯಿಂದ
—ಹೀನದೆಶೆಗಿಳಿದು ಮತ್ತೆ ಅಭಿವೃದ್ಧಿ ಹೊಂದುತ್ತಿದೆ. ದೇವಾಲಯ
ಗಳಲ್ಲಿ ಶಿಲೆಗಳಲ್ಲಿ ಕೆತ್ತಿರುವ ನರ್ತಕಿಯರ ಪ್ರತಿಮೆಗಳ ಭಾವ ಭಂಗಿಗಳ
ಬೆಡಗನ್ನು ನೋಡಿದರೆ ಸಹ ಕನ್ನಡಿಗರು ಹಿಂದೆ ನಾಟ್ಯಕ್ಕೆಷ್ಟು
ಪ್ರಾಧಾನ್ಯಯನ್ನು ಕೊಟ್ಟಿದ್ದರೆಂಬುದು ವ್ಯಕ್ತವಾಗುತ್ತದೆ. ಕನ್ನಡಿಗರ
ಶಿಲ್ಪಕಲಾ ಸೌಭಾಗ್ಯಕ್ಕೆ ಸೋಮನಾಥಪುರ, ಶ್ರವಣಬೆಳಗೊಳ, ಹಳೇ
ಬೀಡು, ಬೇಲೂರು, ಕಾರ್ಕಳ, ಹಂಪೆ, ಬಾದಾಮಿ ಮುಂತಾದುವು ಸಿರಿ
ಬೀಡಾಗಿ ಕಂಗೊಳಿಸುತ್ತಿವೆ. ಮೇಣದಲ್ಲಿ ಮಾಡುವುದು ಕೂಡ ಸಾಧ್ಯ
ವಿಲ್ಲದಷ್ಟು ಕೌಶಲ್ಯದಿಂದ ತುಂಬಿದ ಕೆತ್ತನೆಯ ಕೆಲಸವನ್ನು ನಮ್ಮ
ಶಿಲ್ಪಶ್ರೇಷ್ಠರು ಮಾಡಿದ್ದಾರೆ; ಅವರು ಎಷ್ಟು ಹದನಾದ, ಎಷ್ಟು
ಸೂಕ್ಷ್ಮವಾದ ಮತ್ತು ಯಾವ ಬಗೆಗಳ ಆಯುಧಗಳನ್ನುಪಯೋಗಿಸಿ
ಅವನ್ನು ನಿರ್ಮಿಸಿರಬೇಕೆಂಬುದು ಕೂಡ ಗೊತ್ತಾಗುವಂತಿಲ್ಲವೆಂದು ಬಲ್ಲ
ವರು ಆಶ್ಚರ್ಯವನ್ನು ಸೂಚಿಸಿದ್ದಾರೆ; ಅವರನ್ನು ಮನಸಾರೆ ಕೊಂಡಾ
ಡಿದ್ದಾರೆ. ಕಲಾಕೃತಿಗಳನ್ನು ಸಪ್ರಮಾಣವಾಗಿ, ಸುಂದರವಾಗಿ, ಸೊಗ
ಸಾಗಿ ಕೆತ್ತಿದ ಶಿಲ್ಪಶ್ರೇಷ್ಠರ ಕಲಾ ನೈಪುಣ್ಯಕ್ಕೆ ಮೌನದಿಂದ ಕಂಬನಿಯ
ಕಾಣಿಕೆಯನ್ನು ಸಲ್ಲಿಸುವುದೊಂದೇ ನಮಗೆ ಸಾಧ್ಯ. ಅಜಂತದಲ್ಲಿರುವ
ಕೆತ್ತನೆಯ—ಬಂಡೆಗಳನ್ನೇ ಕೊರೆದು ಮಾಡಿರುವ ಶಿಲ್ಪಕೌಶಲ್ಯದ
ಮತ್ತು ಚಿತ್ರಲೇಖನ ವಿನ್ಯಾಸದ—ವೈಖರಿಯನ್ನು ಎಷ್ಟು ಕೊಂಡಾಡಿ
ದರೂ ಸಾಲದು.

ಇನ್ನು ಸಂಗೀತದ ವಿಚಾರ. ದಾಕ್ಷಿಣಾತ್ಯ ಸಂಗೀತದ ಸೃಷ್ಟಿ
ಯೊಂದು ಅದ್ಭುತ ಸೃಷ್ಟಿ. ಅದಕ್ಕೆ ಮೂಲ, ಶ್ರೀಪುರಂದರ ದಾಸರ
ಪ್ರಯತ್ನ. ತ್ಯಾಗರಾಜರು ಮುಂತಾದವರು ಅದನ್ನು ವೃದ್ಧಿಪಡಿಸಿದರೂ
ತಳಹದಿಯೆಲ್ಲ ಪುರಂದರದಾಸರದೇ. ಪಾಶ್ಚಾತ್ಯ ಸಂಗೀತವೆಲ್ಲ, ದಾಕ್ಷಿ
ಣಾತ್ಯ ಸಂಗೀತ ಕ್ರಮದ ಧೀರ, ಶಂಕರಾಭರಣ, ಕೀರವಾಣಿ, ಗೌರೀ
ಮನೋಹರಿ ಈ ಮೂರೇ ಮೂರು ರಾಗಗಳಲ್ಲಿ ಅಡಕವಾಗಿ ಮುಕ್ತಾಯ
ಹೊಂದುವುವೆಂದು ನಿಷ್ಪಕ್ಷಪಾತ ದೃಷ್ಟಿಯುಳ್ಳ ಪಾಶ್ಚಾತ್ಯರೇ ಒಬ್ಬರು
ಅಭಿಪ್ರಾಯಪಟ್ಟು, ಮಾಯಾಮಾಳವ ಗೌಳದ ಸೊಗಸನ್ನಾಗಲಿ,
ಕಲ್ಯಾಣಿಯ ಮಾಧುರ್ಯವನ್ನಾಗಲಿ, ತೋಡಿಯ ಸತ್ವವನ್ನಾಗಲಿ,
ಅನುಭವ ಮಾಡಿಕೊಳ್ಳುವ ಸಾಮರ್ಥ್ಯವೇ ಪಾಶ್ಚಾತ್ಯರಿಗಿಲ್ಲವೆಂದು
ವಿಷಾದಿಸಿದ್ದಾರೆ. ಇದಕ್ಕಿಂತ ಕನ್ನಡಿಗರಿಗೆ ಮತ್ತಾವ ಹೆಚ್ಚಿನ ಕೀರ್ತಿ
ಬೇಕು? ಕನ್ನಡಿಗರಿಗೇ ತಮ್ಮಸಂಗೀತವನ್ನು ಮೆಚ್ಚುವ ಸಹೃದಯ
ತೆಯೂ ಸಾಮರ್ಥ್ಯವೂ ಎಷ್ಟುಮಂದಿಗುಂಟು? ಹೀಗೆ ಕೇಳಿ ಯಾರನ್ನು
ಆಕ್ಷೇಪಿಸುವುದೂ ನನ್ನ ಅಭಿಪ್ರಾಯವಲ್ಲ. ನಮ್ಮ ಅಭಿರುಚಿಯ ಮಟ್ಟ
ಇನ್ನೂ ತಕ್ಕಷ್ಟು ಮೇಲಕ್ಕೇರಿಲ್ಲವಲ್ಲಾ. ಕಲೆಯೂ ಕಲಾವಿದರೂ
ಸೊರಗಬೇಕಾದ ಸನ್ನಿವೇಶವೇ—ನಮ್ಮ ಸಹೃದಯತೆಯು ತಕ್ಕಷ್ಟು
ಹೆಚ್ಚಾಗಿಲ್ಲದ ಕಾರಣ–ಇನ್ನೂ ಉಳಿದಿದೆಯಲ್ಲಾ ಎಂದು ವಿಷಾದವನ್ನು
ಸೂಚಿಸುವುದು ನನ್ನ ಉದ್ದೇಶ.

ಇನ್ನು ಕನ್ನಡ ಸಾಹಿತ್ಯದ ಮಾತು. ಹಿಂದಿನ ಸಾಹಿತ್ಯವನ್ನೇ
ನೋಡಲಿ, ಇಂದಿನ ಸಾಹಿತ್ಯವನ್ನೇ ನೋಡಲಿ, ಕನ್ನಡಿಗರೂ ಭರತ
ಖಂಡದ ಇತರ ಪ್ರಾಂತಗಳ ಸಾಹಿತ್ಯಗಳೆದುರಿಗೆ ನಾಚಿಕೆಯಿಂದ ತಲೆ
ಬಾಗಿ ನಿಲ್ಲಬೇಕಾದ ಆವಶ್ಯಕತೆಯೇನೂ ಇಲ್ಲದಮಟ್ಟಿಗೆ ಕನ್ನಡಿಗರ
ಸಾಹಿತ್ಯ ಭಂಡಾರವೂ ಇದೆ. ಪ್ರಪಂಚದ ಉತ್ತಮ ಸಾಹಿತ್ಯಗಳಲ್ಲಿ
ನೆಲಸಿರುವ ಹಲಕೆಲವು ಸಲ್ಲಕ್ಷಣಗಳಿಗೂ ನಮ್ಮ ಸಾಹಿತ್ಯದ ಕೊರತೆ
ಯಿಲ್ಲ. ಇದಕ್ಕೆ ಉದಾಹರಣೆಗಳನ್ನು ಪ್ರಾಸಂಗಿಕವಾಗಿ ಸೂಚಿಸು
ವುದು ಮಾತ್ರವೇ ಇಲ್ಲಿ ಸಾಧ್ಯ. ಪ್ರಪಂಚದ ಉದ್ದಾಮ ಕವಿಗಳಲ್ಲಿ
ಯಾರು ಬರೆದಿರುವ ದೇಶಾಭಿಮಾನಪೂರಿತವಾದ ಯಾವ ಕವಿತ್ವಕ್ಕೆ
ತಾನೆ ಪಂಪ ಕವಿಯ ಬನವಾಸಿಯ ವರ್ಣನೆಯು ಕೀಳಾಗಿದೆ? ಬನ
ವಾಸಿಯ ವರ್ಣನೆಯಲ್ಲಿ ಬರುವ—

ಮಿಡಿದೊಡೆ ತನಿಗರ್ಬು ರಸಂ
ಬಡುವುವು ಬಿರಿದೊಂದು ಮುಗುಳಕಂಪಿನೊಳಿಮೊಗಂ ।
ಗಿಡುವುವು ತುಂಬಿಗಳಟ್ಟಿಮೆ
ವಡುವುವು ಕುಡಿದೊಂದು ಪಣ್ಣರಸದೊಳೆ ಗಿಳಿಗಳ್ ॥

ಚಾಗದ ಭೋಗದಕ್ಕರದಗೇಯದ ಗೊಟ್ಟಿಯಲಿಂಪಿನಿಂಪುಗ
ಳ್ಗಾಗರವಾದ ಮಾನಿಸರೆಮಾನಿಸರಂತವರಾಗಿ ಪುಟ್ಟಲೇ । [ಮೇಣ್
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್ ॥

ತೆಂಕಣಗಾಳಿ ಸೋಂಕಿದೊಡಮೊಳ್ನುಡಿ ಗೇಳ್ದೊಡಮಿಂಪನಾಳ್ದಗೇ
ಯಂ ಕಿವಿವೊಕ್ಕೊಡಂ ಬಿರಿದಮಲ್ಲಿಗೆ ಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನಮನಂಬನವಾಸಿದೇಶಮಂ ॥

ಎಂಬ ಪದ್ಯಗಳನ್ನೋದಿ ಆನಂದಿಸದವರಾರು? ಅರ್ಜುನನೇ “ಆರಂ
ಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ” ಎಂದು
ಕೊಳ್ಳುವಂತೆ ಚಿತ್ರಿಸಿದವನು ಪಂಪನಾದರೆ, ಹಿಮವತ್ಪರ್ವತದಲ್ಲಿ ಪರ
ಮೇಶ್ವರನು ತಪಸ್ಸುಮಾಡಿದ ಸನ್ನಿವೇಶವನ್ನೇ ಮಾರ್ಪಡಿಸಿ ಕನ್ನಡ
ನಾಡಿನ ಹೇಮಕೂಟ ಪರ್ವತಕ್ಕೆ ದೇವನನ್ನು ಬಿಜಯಮಾಡಿಸಿ ತಪಸ್ಸಿಗೆ
ಕುಳ್ಳಿರಿಸಿದವನು “ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ
ಸಾಕ್ಷಾತ್ಸುಪುತ್ರ”ನಾದ ಹರೀಶ್ವರ ಕವಿ. ಆತನು ತುಂಗಭದ್ರೆಯನ್ನು
ಶ್ಲಾಘಿಸಿ ಬರೆದಿರುವ—

ನೆನೆದನೆ ಧನ್ಯಂ ನೋಡಿದ
ನನಘಂ ಸೋಂಕಿದವನಮರನಘಮರ್ಷಣಮಿಾ ।
ರ್ದನೆ ಗಣನಾಥಂ ಸೇವಿಸಿ
ದನೆ ಮುಕ್ತಂ ಕೇಳು ತುಂಗಭದ್ರಾಜಳಮಂ ॥

ಎಂಬ ಪದ್ಯವನ್ನು ಓದಿದರೆ ಯಾರ ಹೃದಯ ತಾನೆ ದೇಶಾಭಿಮಾನ
ದಿಂದ ಉಬ್ಬುವುದಿಲ್ಲ? ಆತನು ಬರೆದಿರುವ,

ಇದು ವಿದ್ಯುತ್ಪ್ರಭವ ಪ್ರಭಾಪ್ರಸರಮೋ ಸಂಪೂರ್ಣಚಂದ್ರಾಂಶು ಸಂ
ಪ್ರದಮೋ ಶಾಶ್ವತಸೂರ್ಯಕೋಟಿರುಚಿರ ಪ್ರದ್ಯೋತಮೋ ಮಿಾರಿ ಪೊ
ಣ್ಮಿದ ಸರ್ವೇಶ ನಿಜಪ್ರಕಾಶನಿಧಿಯೋ ಪೇಳೆಂಬಿನಿಂ ತೋರುತಿ
ರ್ದುದು ದಿಕ್ಸಂಕುಳ ನಿರ್ಮಳೀಕೃತ ವಿರೂಪಾಕ್ಷ ಪ್ರಭಾಮಂಡಲಂ ॥

ವಿಳಸತ್ಪದ್ಮಾಸನಂ ಭಾಸುರ ಭಾಸಿತ ವಪುರ್ವಲ್ಕಲಂ ಧ್ಯಾನಮುದ್ರಾಂ ।
ಗುಲಿ ರುದ್ರಾಕ್ಷಮಾಲಾ ರುಚಿ ನಳಿನ ಗುಣವ್ರಾತ ಯಜ್ಞೋಪವೀತಂ ।
ಲಲಿತಾಸ್ಯಂ ಸ್ನಿಗ್ಧಗಂಡಂ ಮುಕುಳಿತ ನಯನಂ ಚಿತ್ತನಿಷ್ಕಂಪನಂಪಿರಿ
ಗಳವರ್ನೋದ್ಯಜ್ಜಟಾಮಂಡಲಮೆಸೆಯೆ ತಪೋವೇಷದಿಂದೀಶನಿರ್ದಂ ।

ಎರಡು ಪದ್ಯಗಳಲ್ಲಿರುವ ಭಾವಶುದ್ಧಿಯನ್ನೂ ಭಾಷಾ ಧೋರಣೆಯನ್ನೂ
ಕೊಂಡಾಡದವರಾರು? ರನ್ನಕವಿಯ ಗದಾಯುದ್ಧ ಕಾವ್ಯದಲ್ಲಿ ದುರ್ಯೋ
ಧನ ಅಭಿಮನ್ಯುವಿನ ಶವದ ಮುಂದೆ ನಿಂತು ಹೇಳುವ ಪದ್ಯಗಳಲ್ಲಿ

ಪಲರಿರ್ದು ಕಾವಿನರ್ ಮೆ
ಯ್ಗಲಿಗರ್ ನಿನ್ನಂತೆ ಮೆಯ್ಯೊಳಿ ತವೆ ಕೊಂಡೈ ।
ಪಲರಂ ನಿನ್ನಂ ಪೆತ್ತಳ್
ಪೊಲೆವೆತ್ತಳೆ ನೀರಜನನಿ ಪೆಸರಂ ಪೆತ್ತಳ್ ॥
ಅನುಜರ ಧನಂಜಯನು
ಮಸಂಘನಂ ಪೆರ್ಗೆ ನಿನ್ನ ನಾನಿನಿತಂ ಪ್ರಾ ॥
ರ್ಥಿಸುವೆನೆಂದನು ನಿಜಸಾ
ಹಸ್ರ ಕಸೇನಾಸುರಣಮುಮುಗಕ್ಕೆ ಗಡಾ ॥
ಪಸಿವಿನೊಳನ್ನಮಂ ಪಸಿದು ಬಂದರ್ಗಿಕ್ಕುವ ಯುದ್ಧರಂಗದೊಳ್
ಕುಸಿಯದೆ ಸೂಜಿಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ ಮಾ
ನಸ್ಥಿಕೆಯ ನಾಲ್ವರುಂ ನಮಗೆ ವಂದ್ಯರವಂದಿರೊಳೀತನಲ್ತೆ ಸಾ
ಪಸಧನನೆಂದು ಕೈಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥

ಎಂಬ ಪದ್ಯಗಳನ್ನೋದಿ ಅವು ಪ್ರಪಂಚದ ಶ್ರೇಷ್ಠ ಕವಿಗಳ ವಾಣಿಗಳಿಗೆ ಸರಿದೂಗತಕ್ಕವುಗಳಲ್ಲವೆನ್ನುವ ಬಗೆ ಹೇಗೆ? ರನ್ನನಿಗಿಂತ ಶ್ರೇಷ್ಠನಾದ ಪಂಪನ ಕೃತಿರತ್ನದ ವಿಷಯದಲ್ಲಿ ಹೇಳತಕ್ಕುದೇನುಂಟು? ಸ್ಪೆನ್ಸರ್ ಕವಿಯ ಲೇಖನಿಯ ಪದ್ಯಗಳಲ್ಲಿ ವಿವಿಧವರ್ಣ ಸೂಚಕವಾದ ವಿನ್ಯಾಸವುಂಟೆಂದೂ, ಕಣ್ಣಿನೆದುರಿಗೆ ಮನೋಹರವಾದ ಬಣ್ಣಗಳನ್ನೆ ರಚಿದಂತೆ ಅವುಗಳನ್ನೋದಿದಾಗ ಮನಸ್ಸಿಗೆ ತೋರುವುದೆಂದೂ ನ್ಯಾಯವಾದ ಶ್ಲಾಘನೆ ಆತನಿಗೆ ಸಂದಿದೆ. ಕುಮಾರವ್ಯಾಸನು ಬರೆದಿರುವ

ಎಂದು ಗಂಗಾನಂದನನು ನಲ
ವಿಂದ ಕೈಗೊಡೆ ಸುರಗಿರಿಯ ತುದಿ
ಯಿಂದ ಮರಿಮಿಂಚುಗಳ ಮುಗಿಲಿಳಿವಂತೆ ಭೂತಳಕೇ ।
ಅಂದು ನೀಲಾಚಲನಿಕಾಯದ
ಸೌಂದರಾಗದ ಕೌಸ್ತುಭ ಪ್ರಭೆ
ಯಿಂದ ಕಾಂಚನರಥವನಿಳಿದನು ದಾನವಾರಾತಿ ॥

ಎಂಬುದೇ ಮುಂತಾದ ಪದ್ಯಗಳನ್ನೂ ಈ ಸಂಬಂಧವಾಗಿ ಸ್ಮರಿಸಲು ಅಡ್ಡಿಯೇನುಂಟು? ಆತನು ಬರೆದಿರುವ

ಕಂಗಳನು ಕರುಣಿಸಿದ ನಂದನ್ಪ
ಪಂಗೆ ಬಳಿಕೀ ಕೃಷ್ಣರಾಯನ
ಮಂಗಳ ಶ್ರೀಮೂರ್ತಿಯನು ಮನದಣಿಯೆ ತಾ ನೋಡಿ ।
ಕಂಗಳಡಗಲಿ ದೇವ ನಿವಿಶ್ರಾ
ಯಂಗವಟ್ಟವ ಕಂಡು ಮುಗುಳೀ
ಕಂಗಳಿತರವ ಕಾಣಲಾಗದು ಕೃಪೆಯಮಾಡೆಂದಾ ॥

ಎಂಬ ಪದ್ಯದಲ್ಲಿ ಅಡಗಿರುವ ಭಾವೋನ್ನತಿಯೆಷ್ಟು ಸೊಗಸಾಗಿದೆ! "ಉಭಯಕವಿ ಕಮಲರವಿ" ಹಂಪೆಯ ರಾಘವಾಂಕ ಕವಿ ತನ್ನ ಹರಿಶ್ಚಂದ್ರನ ಕಾವ್ಯದಲ್ಲಿ ಚಿತ್ರಿಸಿರುವ ಹೃದಯವೇಧಕವಾದೊಂದು ಸನ್ನಿವೇಶವನ್ನೂ ಸೂಚಿಸಬಹುದಾಗಿದೆ. ಹರಿಶ್ಚಂದ್ರ ಚಕ್ರವರ್ತಿ "ಇದು ರತ್ನಭಂಡಾರವಿದು ಹೇಮಭಂಡಾರವಿದು ಸುನಾಣೆಯವರ್ಗವಿದು" ಎಂದು ಮುಂತಾಗಿ ಒಕ್ಕಣೆ ಹೇಳಿ ಸರ್ವಸ್ವವನ್ನೂ ವಿಶ್ವಾಮಿತ್ರನಿಗೆ ಒಪ್ಪಿಸಿ ಅಯೋಧ್ಯಾನಗರದಿಂದ ಹೊರಡಲನುವಾಗುವನು. ಆಗ ಮರುಗುವ ಪ್ರಜೆಗಳನ್ನು ಸಂತವಿಟ್ಟು

ಮನದೊಳಗೆ ಮಱುಗದಿರಿ ಚಿಂತಿಸದಿರಳಲದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆರ
ಡನೆಯ ಶಿವನೆನಿಪ ಕೌಶಿಕನೊಡೆಯನಾದನಾತನಪಾದಪಂಕಜಕೆ ।
ಎನಗೆ ಬೆಸಕೈವಂತೆ ಬೆಸಕೈವುದಂಜುವುದು
ವಿನಯಮಂ ನುಡಿವುದೋಲೈಸುತಿಹುದೆಂದುಸರಿ [ನೃಪನು ।
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯನಿಧಿಹರಿಶ್ಚಂದ್ರ

ಎಂದು ಹೇಳುವಂತೆ ರಾಘವಾಂಕನು ಚಿತ್ರಿಸಿರುವ ಸನ್ನಿವೇಶದಲ್ಲಿ ಕಂಬನಿ ಬಿಡದಿರುವುದು ಸಾಧ್ಯವೇ ಇಲ್ಲ. ಲಕ್ಷ್ಮೀಶನ ಜೈಮಿನಿ ಭಾರತದ ಸೀತಾದೇವಿ ತನ್ನನ್ನು ಶ್ರೀರಾಮಚಂದ್ರನು ತೊರೆದನೆಂಬುದನ್ನು ಲಕ್ಷ್ಮಣನಿಂದ ಕೇಳಿ ದುಃಖಿಸಿ "ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ"ವೆಂದು ಹೇಳುವುದೂ ಹೃದಯಭೇದಕವಾದ ಸನ್ನಿವೇಶವೆಂದು ಧಾರಾಳವಾಗಿ ಹೇಳಬಹುದು. ಇದೇ ರೀತಿ ನಮ್ಮ ಕವಿಗಳ ಪ್ರತಿಭೆ, ಪಾಂಡಿತ್ಯ, ವರ್ಣನಾ ವೈಖರಿ, ಪರಿಶೀಲನಾ ಸಾಮರ್ಥ್ಯ, ಪ್ರಾತರಚನಾ ಕೌಶಲ್ಯ, ಸಂವಿಧಾನ ಕೌಶಲ್ಯ ಮುಂತಾದುವುಗಳಿಗೆ ಎಷ್ಟು ನಿದರ್ಶನಗಳನ್ನಾದರೂ ಕೊಡಬಹುದು. ಇವುಗಳಾವುದಕ್ಕೂ ನಮ್ಮಲ್ಲಿ ಕೊಗತೆಯಿಲ್ಲ. ನಮ್ಮಲ್ಲಿರುವ ಕೊರತೆ, ಕನ್ನಡ ಸಾಹಿತ್ಯವನ್ನು ತಕ್ಕಷ್ಟು ಗೌರವದಿಂದ, ತಕ್ಕಷ್ಟು ಅಕ್ಕರೆಯಿಂದ ಕಾಣುವ ಸ್ವಭಾವ ಯತೆಯ ಮನೋಧರ್ಮವು ಇನ್ನೂ ರೂಢಮೂಲವಾಗಿ ನೆಲೆಗೊಳ್ಳದಿರುವುದೇ ಆಗಿದೆ.

(ಮುಂದುವರಿಯುವುದು)

## ಕನ್ನಡ ಸುದ್ದಿ

### ಬೆಂಗಳೂರು

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರೊಫೆಸರಾಗಿದ್ದ ದಿವಂಗತ ಶ್ರೀ. ಟಿ. ಎಸ್. ವೆಂಕಣ್ಣಯ್ಯನವರ ಜ್ಞಾಪಕಾರ್ಥವಾಗಿ ಬೆಂಗಳೂರಿನ ವಿಶ್ವವಿದ್ಯಾನಿಲಯ ಸಂಘದವರು ಕನ್ನಡದಲ್ಲಿ ಚರ್ಚಾಸ್ಪರ್ಧೆಯೊಂದನ್ನು ಏರ್ಪಡಿಸಿರುತ್ತಾರೆ. ಇದಕ್ಕಾಗಿ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ೫೦ರೂ.ಗಳ ಬೆಲೆಯುಳ್ಳ ಒಂದು ಪರ್ಯಾಯ ಪಾರಿತೋಷಕವನ್ನು ದಯಪಾಲಿಸಿರುತ್ತಾರೆ. ಸ್ಪರ್ಧೆಗೆ ಇಂಡಿಯಾದ ವಿಶ್ವವಿದ್ಯಾನಿಲಯಗಳ ಎಲ್ಲ ಸಂಸ್ಥೆಗಳಿಗೂ ಪ್ರವೇಶವಿದೆ.

ಸ್ಪರ್ಧೆಯಲ್ಲಿ ಭಾಗವಹಿಸಲು ಪ್ರತಿಯೊಂದು ಸಂಸ್ಥೆಯೂ ಎರಡೆರಡು ಪ್ರತಿನಿಧಿಗಳನ್ನು ಕಳಿಸತಕ್ಕದ್ದು. ಪ್ರವೇಶಧನ ರೂ. ೨.

ಸ್ಪರ್ಧೆಗೆ ಉತ್ತಮ ದರ್ಜೆಯ ಪ್ರತಿನಿಧಿಗಳನ್ನು ಕಳಿಸಿಕೊಟ್ಟ ಸಂಸ್ಥೆಗೆ ಒಂದು ಬಹುಮಾನವನ್ನೂ ಮತ್ತು ಉತ್ತಮರೆಂದು ಪರಿಗಣಿಸಲ್ಪಟ್ಟ ಇಬ್ಬರು ಭಾಷಣಕಾರರಿಗೆ ಒಂದೊಂದು ಬಹುಮಾನವನ್ನೂ ಕೊಡುವಂತೆ ಏರ್ಪಡಿಸಿದೆ.

ಚರ್ಚಾವಿಷಯ ಮುಂತಾದ ವಿವರಗಳನ್ನು ಸ್ಪರ್ಧೆಯ ದಿನ ತಿಳಿಯಪಡಿಸಲಾಗುವುದು.

ಸ್ಪರ್ಧೆ ತಾ॥ ೨೪-೧-೧೯೪೦ನೇ ಬುಧವಾರ ಸಂಜೆ ೫ ಘಂಟೆಗೆ ನಡೆಯುವಂತೆ ಏರ್ಪಾಡಾಗಿದೆ.

### ಹೈದರಾಬಾದ್ ಕರ್ನಾಟಕ ಪರಿಷತ್ತು : ಬಿದರೆ

ನೈಜಾಂ ಕರ್ನಾಟಕ ಪರಿಷತ್ತಿನ ಸ್ವಾಗತ ಸಮಿತಿಯವರು ಈ ರೀತಿ ಬರೆಯುತ್ತಾರೆ :

ನಿಜಾಮ ಕರ್ನಾಟಕ ಪರಿಷತ್ತಿನ ೨ನೆಯ ಅಧಿವೇಶನವು ಶ್ರೀ ಜನಾರ್ದನರಾಯರ ಅಧ್ಯಕ್ಷತೆಯಲ್ಲಿ ತಾರೀಖು ೨೦, ೨೧ನೇ ಜನವರಿಯಲ್ಲಿ ಬಿದರೆಯಲ್ಲಿ ಸೇರುವುದು. ಈ ಅಧಿವೇಶನದಲ್ಲಿ ಶ್ರೀಮತಿ ವಿಮಲಾಬಾಯಿ ಮೇಲ್ಕೋಟೆ ಅವರ ಅಧ್ಯಕ್ಷತೆಯಲ್ಲಿ ಮಹಿಳಾ ಸಭೆ ಸೇರುವುದು. ಸೋದರಿಯರು ವಿಶೇಷವಾಗಿ ಭಾಗವಹಿಸಬೇಕಾಗಿ ಪ್ರಾರ್ಥನೆ.

ಎಲ್ಲ ಕನ್ನಡ ಜಿಲ್ಲೆಗಳಿಂದ ಪರಿಷತ್ತಿಗಾಗಿ ಬರುವ ಮಹಾಜನರ ಸಲುವಾಗಿ ವಸತಿಗೃಹ, ಭೋಜನ ಮುಂತಾದ ಏರ್ಪಾಟುಗಳು ನಡೆದಿವೆ. ಬಿದರೆ ನಗರದಲ್ಲಿನ ಅಲಂಕೃತವಾದ ಭವ್ಯ ಚಲನಚಿತ್ರಮಂದಿರದಲ್ಲಿ ಪರಿಷತ್ತಿನ ಸಮಾವೇಶನವು ನಡೆಯುವುದಾಗಿ ನಿಶ್ಚಯಿಸಲಾಗಿದೆ. ಎಲ್ಲ ಕಾರ್ಯಕ್ರಮಗಳಲ್ಲಿ ಶಿಸ್ತು ಕಾಯ್ದುಕೊಳ್ಳುವುದಕ್ಕಾಗಿ ಸ್ವಯಂಸೇವಕರ ದಳವೂ ಸಿದ್ಧವಾಗಿದೆ.

ಜನತೆಗೆ ನಿತ್ಯಜೀವನದಲ್ಲಿ ಬೇಕಾಗುವ ಸಾಮಾನ್ಯ ಜ್ಞಾನವನ್ನೂ, ವಿಜ್ಞಾನ ರೀತಿಯಿಂದ ಪರಿಚಯ ಮಾಡಿಕೊಡುವುದಕ್ಕಾಗಿ ಒಕ್ಕಲುತನದ ಪ್ರದರ್ಶನ, ಉಪನ್ಯಾಸಗಳು, ಮಾಯಾದೀಪದ ಮೂಲಕ ಮದ್ಯಪಾನ ಪ್ರತಿಬಂಧಕ ಉಪದೇಶಗಳು ಇತ್ಯಾದಿ ಜನಮನೋರಂಜಕ ಕಾರ್ಯಕ್ರಮಗಳನ್ನು ಆಯಾ ಸರ್ಕಾರಿ ಖಾತೆಗಳ ಸಹಾಯದಿಂದ ಏರ್ಪಡಿಸಲಾಗಿದೆ.

ತಪ್ಪದೇ ಎಲ್ಲ ದೇಶಾಭಿಮಾನಿಗಳು ದಯಮಾಡಿಸಬೇಕಾಗಿ ಪ್ರಾರ್ಥನೆ. ಪ್ರತಿನಿಧಿಗಳಾಗಿ ಬರುವವರು ಮೊದಲೇ ತಿಳಿಸಿದರೆ ಹೆಚ್ಚು ಅನುಕೂಲ. ಸ್ವಾಗತ ಸಮಿತಿ ಸದಸ್ಯತ್ವದ ಹಣ ರೂ. ೫ ಹಾಗೂ ರೂ. ೩ ಎರಡು ವಿಧ. ಪ್ರತಿನಿಧಿ ಹಣ ರೂ. ೧.

### ಶಿವಮೊಗ್ಗ :

ಇಲ್ಲಿಯ ಕರ್ನಾಟಕ ಸಂಘದವರು ಪ್ರಾಥಮಿಕ, ಮಾಧ್ಯಮಿಕ ಮತ್ತು ನಾರ್ಮಲ್ ಸ್ಕೂಲು ವಿದ್ಯಾರ್ಥಿಗಳಿಗೆ ಕಂಠಪಾಠ, ಕಾವ್ಯವಾಚನ, ಅಭಿನಯ ಮತ್ತು ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಿರುತ್ತಾರೆ. ಸ್ಪರ್ಧೆಗಳು ಈ ತಿಂಗಳು ೧೫ರಿಂದ ೨೨ರ ವರೆಗೂ ನಡೆಯುತ್ತವೆ.

ಈ ಪತ್ರಿಕೆಯು ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ 'ಮೈಸೂರು ಪೇಪರ್'ನಲ್ಲೇ ಅಚ್ಚಾಗುತ್ತಿದೆ.

೧೫—೮೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು






ಸಂಪುಟ ೨
ಸಂಚಿಕೆ ೧೪

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜನವರಿ ೨೬, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

# ಕನ್ನಡ ಸಾಹಿತ್ಯ ಪರಿಷತ್ತಿನ
# ರಜತ ಮಹೋತ್ಸವ

ಕನ್ನಡ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವ ಈ ವರ್ಷ ನಡೆಯಲಿರುವ ವಿಷಯ ಕನ್ನಡಿಗರೆಲ್ಲರಿಗೂ ಈಗಾಗಲೆ ತಿಳಿದಿದೆಯಷ್ಟೆ. ರಜತ ಮಹೋತ್ಸವ ಸಮಾರಂಭವನ್ನು ಅನುಗ್ರಹಿಸಿ ನಡಸಿಕೊಡಬೇಕೆಂದು ಪರಿಷತ್ತಿನ ಮಹಾಪೋಷಕರಾದ ಶ್ರೀಮನ್ ಮಹಾರಾಜರವರನ್ನು ಬೆಳಗಾವಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನವು ಪ್ರಾರ್ಥಿಸಿಕೊಂಡಿತ್ತು. ಮಹಾಸ್ವಾಮಿಯವರು ಸಮ್ಮೇಳನದ ಪ್ರಾರ್ಥನೆಯನ್ನು ಮನ್ನಿಸಿ ಕೃಪೆಮಾಡಿ ಒಪ್ಪಿರುತ್ತಾರೆ. ಈ ಶುಭವಾರ್ತೆ ಕನ್ನಡಿಗರೆಲ್ಲರಿಗೂ ಮಹದಾನಂದದ ಸಂಗತಿಯಾಗಿದೆ.

ಶ್ರೀಮನ್ಮಹಾರಾಜರವರ ಕೃಪಾಪೋಷಣೆಯಿಂದಲೂ, ಶ್ರೀಮದ್ಯುವರಾಜರವರ ವಾತ್ಸಲ್ಯಪ್ರೇಮದಿಂದಲೂ, ಮತ್ತು ಘನ ಸರ್ಕಾರದ ಉದಾರ ಸಹಾಯದಿಂದಲೂ ಪರಿಷತ್ತು ಕಳೆದ ಇಪ್ಪತ್ತೈದು ವರ್ಷಗಳಿಂದ ತನ್ನ ಧ್ಯೇಯಗಳನ್ನು ಯಶಸ್ವಿಯಾಗಿ ನಡಸಲು ಸರ್ವವಿಧದಿಂದಲೂ ಪ್ರಯತ್ನಪಟ್ಟಿದೆ. ಈಗ ಮಹಾಪ್ರಭುಗಳವರು ಒಪ್ಪಿ ಆಶೀರ್ವದಿಸಲಿರುವ ಈ ಸಮಾರಂಭ ಮಹೋತ್ಸವ ಇನ್ನು ಮುಂದಕ್ಕೂ ಹೀಗೆಯೇ ನಾಡಿಗೂ ನುಡಿಗೂ ಹೆಚ್ಚು ಹೆಚ್ಚಾಗಿ ಪರಿಷತ್ತು ತನ್ನ ಸೇವೆಯನ್ನು ಸಲ್ಲಿಸಲು ಪ್ರೋತ್ಸಾಹವನ್ನೀಯುವುದರಲ್ಲಿ ಯಾವ ಸಂದೇಹವೂ ಇಲ್ಲ.

# ಸಣ್ಣಕತೆಗಾರರ ಎರಡನೆಯ ಸಮ್ಮೇಳನ, ಬೆಂಗಳೂರು—೧೯೪೦

(ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ)

## ಮೊದಲನೆಯ ದಿನದ ಕಾರ್ಯಕಲಾಪಗಳು

### ಪ್ರಾರಂಭೋತ್ಸವ

ಮೇಲ್ಕಂಡ ಸಮ್ಮೇಳನ ಇದೇ ಜನವರಿ ೨೦ ಮತ್ತು ೨೧ನೆಯ ತಾರೀಖುಗಳಲ್ಲಿ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಮೊದಲನೆಯ ದಿನ ಬೆಳಗ್ಗೆ ೮-೧೫ಕ್ಕೆ ಕನ್ನಡ ಬಾವುಟ ವಂದನೆಯೊಡನೆ ಸಮ್ಮೇಳನ ಮೊದಲಾಯಿತು. ಆ ಸಂದರ್ಭದಲ್ಲಿ ಎಲ್ಲರೂ "ಶ್ರೀ"ಯವರ "ಕನ್ನಡ ಬಾವುಟ" ಕವಿತೆಯನ್ನು ಒಕ್ಕೊರಲಿನಲ್ಲಿ ಹಾಡಿದರು. ಶ್ರೀ ಎಂ. ಎನ್. ಕಾಮತ್ ಅವರು ಕನ್ನಡ ಬಾವುಟದ ವಿಚಾರವಾಗಿ ಮಾತನಾಡುತ್ತ, ಅದರ ಸಂಕೇತವನ್ನು ವಿವರಿಸಿ, "ಅದು ಕನ್ನಡ ನಾಡು ನುಡಿಗಳ ಕಲ್ಪವೃಕ್ಷವಾಗಲಿ" ಎಂದರು.

ಬಳಿಕ ೮–೩೦ಕ್ಕೆ ಸರಿಯಾಗಿ ಸಮ್ಮೇಳನದ ಸಭೆ ಪ್ರಾರಂಭವಾಯಿತು. ಗಮಕವಿದ್ವಾನ್ ಶ್ರೀ ಕೆ. ಜಿ. ಸಂಪತ್ಕುಮಾರಾಚಾರ್ಯರ ಪ್ರಾರ್ಥನೆಯಾದ ಮೇಲೆ, ಸಂಘದ ಅಧ್ಯಕ್ಷರೂ ಸ್ವಾಗತಾಧ್ಯಕ್ಷರೂ ಆದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣ ಮಾಡಿದರು.

ಶ್ರೀ ಎಂ. ಎನ್. ಕಾಮತ್ ಅವರು

"ಶ್ರೀ"ಯವರು ತಮ್ಮ ಭಾಷಣದಲ್ಲಿ ಸಮ್ಮೇಳನವನ್ನು ಆರಂಭಿಸಲು ಮದರಾಸಿನ ಹಿಂದಿನ ಮುಖ್ಯ ಮಂತ್ರಿಗಳಾದ ಶ್ರೀ. ಚಕ್ರವರ್ತಿ ರಾಜಗೋಪಾಲಾಚಾರ್ಯರನ್ನು ಪ್ರಾರ್ಥಿಸಿಕೊಳ್ಳಲಾಗಿತ್ತೆಂದೂ, ಕಾರ್ಯಗೌರವದಿಂದ ಅವರು ಈ ಪ್ರಾರ್ಥನೆಯನ್ನು ಸಲ್ಲಿಸಲು ಸಾಧ್ಯವಾಗಲಿಲ್ಲವೆಂದೂ, ಆದರೂ ತಮ್ಮ ಮನಸ್ಸು ಇಲ್ಲೇ ಇದೆಯೆಂದು ತಿಳಿಸಿ ತಮ್ಮ ವಿಶ್ವಾಸಪೂರ್ವಕವಾದ ಸಂದೇಶವನ್ನು ಕಳಿಸಿದ್ದಾರೆಂದೂ ತಿಳಿಸಿದರು. ಸಾಹಿತಿಗಳ ಸಂಘದ ಧ್ಯೇಯಗಳನ್ನು ತಿಳಿಸಿ, ಲೇಖಕರು, ಪತ್ರಿಕಾಕರ್ತರು, ಪ್ರಕಾಶಕರು ಹೇಗೆ ಏಕೀಭವಿಸಿ ಕಾರ್ಯಮಾಡಬಹುದೆಂದು ಸೂಚಿಸಿದರು. ಬಳಿಕ ಕಥಾಸಾಹಿತ್ಯ ಬಹಳ ಪುರಾತನ ಕಾಲದಿಂದಲೂ ಇದೆಯೆಂದೂ, ೧೯ನೆಯ ಶತಮಾನದಹೊತ್ತಿಗೆ ಅದು ಒಂದು ನಿರ್ದಿಷ್ಟವಾದ ಕಲಾರೂಪವನ್ನು ಪಡೆಯಿತೆಂದೂ, ಸಣ್ಣಕತೆ ಬರೆಯುವುದು ಬಹಳ ಕಷ್ಟದ ಕೆಲಸವೆಂದೂ, ಚಿನ್ನದ ಒಡವೆಗೆ ತೇವಾನ ತೆಗೆದು ನಯಮಾಡಿದಂತೆ ಕುಸುರಿ ಕೆಲಸಮಾಡಬೇಕೆಂದೂ, ಕಿರಿದರಲ್ಲಿ ಹಿರಿದಾದ ಭಾವ, ಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯವೆಂದೂ, ಮೈಸೂರಿನಲ್ಲಿ "ಶ್ರೀನಿವಾಸರು" ಮೊತ್ತಮೊದಲು ಸಣ್ಣಕತೆಗಳನ್ನು ಬರೆದು ಜನಕ್ಕೆ ಅದರ ಸವಿ ತೋರಿಸಿ ಮಾರ್ಗದರ್ಶಕರಾದವರೆಂದೂ, ಈ ಸಮ್ಮೇಳನಕ್ಕೆ ಹಿರಿಯ ಸಾಹಿತಿಗಳಾದ ಮಂಗಳೂರಿನ ಶ್ರೀ ಎಂ. ಎನ್. ಕಾಮತ್ ಅವರು ಅಧ್ಯಕ್ಷರಾಗಿ ದೊರೆತದ್ದು ಭಾಗ್ಯವೆಂದೂ, ಹೇಳಿ ಪ್ರಕೃತಿ ಸೌಂದರ್ಯದ ನೆಲೆವೀಡಾದ ಮಂಗಳೂರಿನಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಉತ್ಸಾಹದಿಂದಲೂ ಛಲದಿಂದಲೂ ಕೆಲಸಮಾಡುತ್ತಿರುವವರು ಬಹುಮಂದಿ ನಕ್ಷತ್ರರಾಶಿಯಂತೆ ಬೆಳಗುತ್ತಿದ್ದಾರೆಂದೂ ಅವರಲ್ಲಿ ಶ್ರೀ ಕಾಮತ್ ಅವರು ಒಬ್ಬ ಪ್ರಮುಖರೆಂದೂ ತಿಳಿಸಿ ಅವರ ಅಧ್ಯಕ್ಷತೆಯಲ್ಲಿ ಸಮ್ಮೇಳನ ಯಶಸ್ವಿಯಾಗಿನಡೆವುದರಲ್ಲಿ ಸಂದೇಹವಿಲ್ಲವೆಂದರು.

ತರುವಾಯ ಶ್ರೀಗಳಾದ ದ. ಕೃ. ಭಾರದ್ವಾಜರವರೂ, ದ. ರಾ. ಬೇಂದ್ರೆಯವರೂ ಮತ್ತು ಶ್ರೀಮತಿ ಆರ್. ಕಲ್ಯಾಣಮ್ಮನವರೂ ಸಭಿಕರಿಗೆ ಅಧ್ಯಕ್ಷರ ಪರಿಚಯ ಮಾಡಿಕೊಟ್ಟು ಭಾಷಣಮಾಡಿದರು.

### ಸಂದೇಶಗಳು

ಬಳಿಕ ಶ್ರೀ. ಎಂ. ವಿ. ಸೀತಾರಾಮಯ್ಯನವರು ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಇಸ್ಮೈಲ್ ಅವರು ಕಳಿಸಿದ್ದ ಸಂದೇಶವನ್ನು ಓದಿ ಹೇಳಿದರು. ಆ ಸಂದೇಶ ಈ ರೀತಿ ಇದೆ :

"ಸಮ್ಮೇಳನಕ್ಕೆ ಬರಬೇಕೆಂದು ನನಗೆ ಆಹ್ವಾನವನ್ನು ಕಳಿಸಿರುವುದಕ್ಕಾಗಿ ವಂದನೆಗಳನ್ನು ಸಮರ್ಪಿಸುತ್ತೇನೆ. ಕೆಲವು ಅನಿವಾರ್ಯಗಳ ದೆಸೆಯಿಂದ ಸಮ್ಮೇಳನಕ್ಕೆ ಬರಲು ಅವಕಾಶವಿಲ್ಲದೆ ಹೋಗಿರುವುದಕ್ಕಾಗಿ ವಿಷಾದಿಸುತ್ತೇನೆ. ಸಮ್ಮೇಳನವು ಯಶಸ್ವಿಯಾಗಿ ಜರುಗಲೆಂದೂ ಸಣ್ಣಕತೆಗಾರರು ಉತ್ಸಾಹದಿಂದಲೂ ಸೋದರ ಪ್ರೇಮದಿಂದಲೂ ಶ್ರಮಿಸಿ ಉತ್ತಮೋತ್ತಮವಾದ ಸಣ್ಣಕತೆಗಳನ್ನು ಇನ್ನು ಮುಂದೆ ಸಹ ಬರೆಯುತ್ತ ಬರಬೇಕೆಂದೂ ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ."

ಸಂದೇಶಗಳನ್ನು ಕಳಿಸಿದ್ದ ಇತರ ಮಹನೀಯರು: ೧. ಮೈಸೂರಿನ ವಿದ್ವಾನ್ ಆರ್. ಅನಂತಕೃಷ್ಣ ಶರ್ಮ ಅವರು. ೨. ಧಾರವಾಡದ ಕವಿಭೂಷಣ ಶ್ರೀ ಬೆಟಗೇರಿ ಕೃಷ್ಣಶರ್ಮ ಅವರು. ೩. ಬೆಳಗಾಂವಿಯ ಶ್ರೀ. ಎ. ಡಿ. ಸಿಲ್ವಾ ಅವರು. ೪. ಪಂಡಿತ ತಾರಾನಾಥರವರು. ೫. ಬಳ್ಳಾರಿಯ ವಿದ್ವಾನ್ ಎಂ. ಜಿ. ವೆಂಕಟೇಶಯ್ಯನವರು. ೬. ಧಾರವಾಡದ ಪ್ರೊಫೆಸರ್ ಶ್ರೀ. ಎಸ್. ಎಸ್. ಮಾಳವಾಡರವರು. ೭. ತುಮಕೂರಿನ ಆರ್. ಎಸ್. ಆರಾಧ್ಯರವರು.

### ಅಧ್ಯಕ್ಷರ ಭಾಷಣ

ಅನಂತರ "ಶ್ರೀ"ಯವರು ಅಧ್ಯಕ್ಷರಿಗೆ ಹಾರತುರಾಯಿಗಳನ್ನು ಸಮರ್ಪಿಸಿದರು. ಅಧ್ಯಕ್ಷರು ಸುಮಾರು ಒಂದೂವರೆ ಗಂಟೆಯ ಕಾಲ ಸ್ಫೂರ್ತಿಯುತವಾದ, ಸರಸವಾದ, ಭಾಷಣವನ್ನು ಅಪ್ಪಣೆ ಕೊಡಿಸಿ ಸಭಿಕರನ್ನು ನಗೆಗಡಲಿನಲ್ಲಿ ತೇಲಾಡಿಸಿದರು. ಅವರು ತಾವು ಹೇಳಬೇಕೆಂದಿದ್ದ ವಿಚಾರಗಳೆಲ್ಲವನ್ನೂ ತಮ್ಮ ಅನುಭವಕ್ಕೆ ಸಂಬಂಧಪಟ್ಟ ಸಣ್ಣ ಸಣ್ಣ ಕತೆಗಳ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ ಹೇಳಿದ್ದು ಆಕರ್ಷಣೀಯವೂ ಸಂದರ್ಭೋಚಿತವೂ ಆಗಿತ್ತು.

ಅವರು ತಮ್ಮ ಭಾಷಣದಲ್ಲಿ, ಪರಿಷತ್ತು ಸ್ಥಾಪಿತವಾಗುವುದಕ್ಕೆ ಮುಂಚೆ ಕನ್ನಡ ನಾಡು ನುಡಿಗಳು ಬಹಳ ಶೋಚನೀಯ ಸ್ಥಿತಿಯಲ್ಲಿದ್ದುವೆಂದೂ, ಅಲ್ಲಿಂದೀಚೆಗೆ ಪರಿಷತ್ತಿನ ಕಾರ್ಯಪ್ರಭಾವಗಳಿಂದ ಅವು ಒಂದುಗೂಡುತ್ತಿವೆಯೆಂದೂ ತಿಳಿಸಿ, ತಾವು ಕನ್ನಡ ಬಂಗಾಳಿಗಳನ್ನು ಕಲಿತ ಕತೆ ಹೇಳಿದರು. ಮತ್ತು "ಕನ್ನಡ ಸಾಹಿತ್ಯಕ್ಕೆ ಈಗ ತಕ್ಕಷ್ಟು ಪ್ರೋತ್ಸಾಹವಿಲ್ಲ. ಜನರು ಪುಸ್ತಕ ಕೊಳ್ಳುವುದನ್ನು ತಮ್ಮ ಆವಶ್ಯಕ ವೆಚ್ಚಗಳಲ್ಲಿ ಒಂದು ಎಂಬುದಾಗಿ ಭಾವಿಸಿಲ್ಲ. ಈ ಭಾಗದಲ್ಲಿ ನಮ್ಮ ಜನ ಬಂಗಾಳದವರಿಂದ ಪಾಠ ಕಲಿಯಬೇಕಾಗಿದೆ. ಸಣ್ಣಕತೆಗಳ ಬೆಳವಣಿಗೆಗೆ ಬಂಗಾಳಿಗಳವರಂತೆ ಜನರ ಮತ್ತು ಪ್ರಕಾಶಕರ ಪ್ರೋತ್ಸಾಹ ದೊರೆಯಬೇಕು. ಸಣ್ಣಕತೆಯೇ ಆಗಲಿ. ಕವಿತೆಯೇ ಆಗಲಿ, ಆತ್ಮಕ್ಕೆ ಚೇತನ ಕೊಡುವಂಥ ಸಾಹಿತ್ಯವನ್ನು ಸೃಷ್ಟಿ ಮಾಡಬೇಕು. ಈ ಸಾಹಿತ್ಯಸೃಷ್ಟಿಯಲ್ಲಿ ಯುವಕರು ಹೆಚ್ಚು ಹೆಚ್ಚಾಗಿ ಮುಂದೆ ಬಂದು ಕೆಲಸಮಾಡಬೇಕು. ಆದರೆ ಅವರು ಮೊದಲು ಜೀವನದ ಅನುಭವ ಪಡೆಯಬೇಕು. ಜೀವನವನ್ನು ಒಳಹೊಕ್ಕು ನೋಡಬೇಕು." ಎಂದು ಮುಂತಾಗಿ ಹೇಳಿದರು.

ಸಮ್ಮೇಳನದ ವ್ಯವಸ್ಥಾಪಕರಾದ ಶ್ರೀ. ಕೆ. ಗೋಪಾಲಕೃಷ್ಣ ರಾಯರು ಅಧ್ಯಕ್ಷರಿಗೂ ಸಭಿಕರಿಗೂ ವಂದನೆಗಳನ್ನು ಸಮರ್ಪಿಸಿದ ಮೇಲೆ ಬೆಳಗಿನ ಉತ್ಸವ ಮುಗಿಯಿತು.

**ಶ್ರೀ ಮಾಸ್ತಿಯವರ ಭಾವಚಿತ್ರದ ಅನಾವರಣೋತ್ಸವ**

ಅದೇ ದಿನ ಮಧ್ಯಾಹ್ನದ ಮೇಲೆ ೪ರಿಂದ ೫-೩೦ರವರೆಗೆ ಮನೋರಂಜನೆಯ ಕಾರ್ಯಕ್ರಮಗಳು ಏರ್ಪಾಡಾಗಿದ್ದುವು. ಸಂಗೀತ, ಕಾವ್ಯವಾಚನ, ಮುಂತಾದುವು ನಡೆದುವು. ಮೊದಲು ಆಚಾರ್ಯ ಪಾಠಶಾಲೆಯ ಹುಡುಗಿಯರು ಮಾಸ್ತಿಯವರ "ತಿರುಪಾಣಿ"ಯ ಗೀತ ವೊಂದನ್ನು ಹಾಡಿಕೊಂಡು ಕೋಲಾಟ ಆಡಿದರು. ಬಳಿಕ ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾವ್ ಅವರು ಮಾಸ್ತಿಯವರ "ಅಭಿಮನ್ಯು"ವಿನಿಂದ ಕೆಲವು ಪದ್ಯಗಳನ್ನು ಸುಶ್ರಾವ್ಯವಾಗಿ ವಾಚನಮಾಡಿದರು. ಕುಮಾರಿ ಇಂದಿರಾಬಾಯಿ ಮಾನೆ ಅವರು ಮಾಸ್ತಿಯವರ "ಯಶೋಧರ"ದಿಂದ ಒಂದು ದೃಶ್ಯಭಾಗವನ್ನು ಅಭಿನಯಿಸಿದರು. ಆಮೇಲೆ ಶ್ರೀ ಸಂಪತ್ಕುಮಾರಾಚಾರ್ಯರು ಮಾಸ್ತಿಯವರ "ಚೆನ್ನಹ" ಮುಂತಾದ ಕೃತಿಗಳಿಂದ ಕೆಲವು ಆಯ್ದ ಗೀತಗಳನ್ನು ಪಕ್ಕವಾದ್ಯಗಳೊಡನೆ ಹಾಡಿ ಸಭಿಕರನ್ನು ಆನಂದಗೊಳಿಸಿದರು.

ಬಳಿಕ ೫-೩೦ಕ್ಕೆ ಭಾವಚಿತ್ರದ ಅನಾವರಣೋತ್ಸವ ಸಮಾರಂಭ ಮೊದಲಾಯಿತು. ಅಧ್ಯಕ್ಷರು ಪ್ರಾರ್ಥಿಸಿಕೊಂಡ ಮೇರೆಗೆ "ಶ್ರೀ" ಯವರು ಶ್ರೀ 'ಶ್ರೀನಿವಾಸ'ರ ಭಾವಚಿತ್ರದ ಅನಾವರಣಮಾಡಿದರು.



ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು

ಅನಾವರಣಮಾಡುತ್ತ ಅವರು ಹೀಗೆ ಹೇಳಿದರು: "ಶ್ರೀ ಮಾಸ್ತಿಯವರು ಕನ್ನಡ ನಾಡಿನ ಪ್ರೇಮದ ಪುತ್ಥಳಿ; ದೊಡ್ಡ ಹೆಸ್ರು; ಅವರ ಗುಣಗಳೂ ಹಿರಿದೂ ವಿಶ್ವವ್ಯಾಪಕ; ಅವರ ಕೃತಿಗಳಲ್ಲಿ ಷೇಕ್ಸ್‌ಪಿಯರ್, ಮ್ಯಾಥ್ಯೂ ಆರ್ನಾಲ್ಡ್ ಇವರ ಮನೋಧರ್ಮವನ್ನು ಕಾಣಬಹುದು. ಶ್ರೀ ಮಾಸ್ತಿಯವರು ಚಿಕ್ಕವರಲ್ಲಿ ಚಿಕ್ಕವರಾಗಿಯೂ ದೊಡ್ಡವರಲ್ಲೂ ಚಿಕ್ಕವರಾಗಿಯೂ ತಮ್ಮ ನಯ, ವಿನಯ, ಸೌಜನ್ಯ, ಸೌಹಾರ್ದಗಳಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದಾರೆ. ವಿಶ್ವದ ಅನುಭವವನ್ನು ತಮ್ಮ ದೊಡ್ಡ ಹೃದಯದಲ್ಲಿ ತುಂಬಿ ಆ ಬೆಳಕನ್ನು ಕನ್ನಡಕ್ಕೆ ಎರೆಯುವುದೇ ಅವರ ಗುರಿ. ಇವರ ಕೃತಿಗಳು ನಾಡಿನವರಿಗೆಲ್ಲಾ, ಜೇನಾಗಿದ್ದು ಕನ್ನಡ ಸಾಹಿತ್ಯದ ಗೌರವವನ್ನು ಹೆಚ್ಚಿಸಿವೆ."

ತರುವಾಯ, ಶ್ರೀ ಡಿ. ಆರ್. ಚನ್ನೇಗೌಡರು ಶ್ರೀ ಮಾಸ್ತಿಯವರನ್ನು ಕುರಿತು ತಾವು ಬರೆದಿದ್ದ ಕವಿತೆಯೊಂದನ್ನು ಓದಿದಮೇಲೆ ಮಾಸ್ತಿಯವರ ಕೃತಿಗಳನ್ನು ಕುರಿತು ಈ ಕೆಳಗಿನಂತೆ ಭಾಷಣಗಳಾದುವು:

ಮಾಸ್ತಿಯವರ ಕಲೆ ಮತ್ತು ಒಲವು— ದ. ರಾ. ಬೇಂದ್ರೆ, ಎಂ.ಎ.; ಮಾಸ್ತಿಯವರ ಕವನಗಳು—ವಿ. ಸೀತಾರಾಮಯ್ಯ, ಎಂ.ಎ.; ಮಾಸ್ತಿಯವರ ಕವಿತೆಯಲ್ಲಿ ಆಧ್ಯಾತ್ಮಿಕತೆ—ಪು. ತಿ. ನರಸಿಂಹಾಚಾರ್, ಬಿ. ಎ. ಮಾಸ್ತಿಯವರ ಮಾತುಗಾರಿಕೆ — ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ.; ಮಾಸ್ತಿಯವರ ಸಣ್ಣಕತೆಗಳು—ಗೊರೂರು ರಾಮಸ್ವಾಮಿ ಅಯ್ಯಂಗಾರ್.; ಮಾಸ್ತಿಯವರ ಸುಬ್ಬಣ್ಣ—ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್ಎಲ್.ಬಿ. ಮಾಸ್ತಿಯವರ ವಿಮರ್ಶೆಗಳು—ತೀ. ನಂ. ಶ್ರೀಕಂಠಯ್ಯ, ಎಂ.ಎ.; ಮಾಸ್ತಿಯವರ 'ಆದಿಕವಿ ವಾಲ್ಮೀಕಿ'—ಕೆ. ವಿ. ಪುಟ್ಟಪ್ಪ, ಎಂ.ಎ.

ಶ್ರೀ ರಾಜರತ್ನಂ ಅವರು ಮಾಸ್ತಿಯವರ "ಮಲಾರ" ಎಂಬ ಕವನ ಸಂಗ್ರಹವನ್ನು ಮೆಚ್ಚಿ ತಾವು ರಚಿಸಿದ್ದ ಅಷ್ಟಷಟ್ಪದಿಯನ್ನು ಓದಿದರು.

ಆಮೇಲೆ ವೀರಶೈವ ಸೇವಾ ಸಮಾಜದ ಪರವಾಗಿ ಶ್ರೀ ಜೀರಿಗೆ ಕೆ. ಬಸವಪ್ಪನವರು ಮಾಸ್ತಿಯವರು ಬಸವಣ್ಣನವರ ಕೆಲವು ವಚನಗಳನ್ನು ಇಂಗ್ಲಿಷಿಗೆ ಪರಿವರ್ತಿಸಿ ವಚನ ವಾಙ್ಮಯಕ್ಕೆ ಮಾಡಿರುವ ಮಹೋಪಕಾರವನ್ನು ಕೊಂಡಾಡಿದರು.

[ಸಾಂಗ್ಲಿಯ ಪ್ರೊ. ವಿ. ಕೆ. ಗೋಕಾಕರವರು "ಮಾಸ್ತಿಯವರ ಮಾತುಗಾರಿಕೆ" (ಭಾಷಣರೀತಿ) ಎಂಬ ವಿಷಯವಾಗಿ ಪ್ರಬಂಧವನ್ನು ಬರೆದು ಕಳಿಸಿದ್ದರು.]

ಬಳಿಕ "ಶ್ರೀ"ಯವರು ಹಾರ ತುರಾಯಿಗಳನ್ನು ಸಮರ್ಪಿಸಿ ಪ್ರಾರ್ಥಿಸಿಕೊಂಡಂತೆ ಮಾಸ್ತಿಯವರು ಈ ರೀತಿ ಮಾತನಾಡಿದರು:

"ಈ ದಿನ ನನ್ನ ಹಿರಿಯ ಕಿರಿಯ ಮಿತ್ರರು ನನ್ನನ್ನು ಬಹುವಾಗಿ ಹೊಗಳಿದ್ದಾರೆ. ನನ್ನ ಕೃತಿಗಳಲ್ಲಿ ದೊಡ್ಡ ಗುಣವನ್ನು ಕಂಡು ಕೊಂಡಾಡಿದ್ದಾರೆ. ಗುಣ ಎಷ್ಟಾದರೂ ಇರಲಿ, ಅವರ ವಿಶ್ವಾಸ ದೊಡ್ಡದಾದ್ದರಿಂದ ಗುಣವೂ ದೊಡ್ಡದಾಗಿದೆ. ನನ್ನ ಸಾಹಿತ್ಯ ಸೇವೆ ಕುಚೇಲನ ಹಿಡಿಯವಲಕ್ಕಿ ಮಾತ್ರ. ಹೀಗಿರುವಾಗ ನನ್ನ ಮಿತ್ರರು ನನ್ನನ್ನು ಇಷ್ಟೊಂದು ಹೊಗಳಿರುವುದರಿಂದ ನಾನು ದೊಡ್ಡವನೆಂಬ ಅಹಂಕಾರ ನನಗೆಲ್ಲಿ ಬರುವುದೋ ಎಂಬ ಶಂಕೆ ಇದ್ದರೂ, ದೇವರು ಇದುವರೆಗೆ ನನ್ನ ಬೆನ್ನ ಹಿಂದೆ ಇದ್ದು ನನ್ನನ್ನು ಮುಂದಕ್ಕೆ ನಡೆಸಿಕೊಂಡು ಹೋಗುತ್ತಿರುವಂತೆ ಇನ್ನು ಮುಂದಕ್ಕೂ ಹಾಗೆಯೇ ನಡಸಿಕೊಂಡು ಹೋಗುತ್ತಾನೆಂಬ ನಂಬಿಕೆಯಿದೆ. ಎಲ್ಲರಿಗಿಂತ ಕಡಮೆಯವನು ನಾನು ಎಂಬ ಭಾವ ಈಗ ನನ್ನಲ್ಲಿ ಇಲ್ಲದೆ ಹೋದರೆ ಇನ್ನು ಮುಂದಾದರೂ ಬರಲಿ. ಶ್ರೀ ರಾಮಾನುಜಾಚಾರ್ಯರು ಇದನ್ನೇ ಬೋಧಿಸಿರುವುದು. ಬಸವಣ್ಣನವರೂ '**ಎನಗಿಂತಲೂ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ**' ಎಂದು ಸಾರಿದ್ದಾರೆ. ನಾನು ಅವರ ಅಮೋಘವಾದ ವಚನವನ್ನೇ '**ನನಗಿಂತ ಕಿರಿಯರಿಲ್ಲ. ಕನ್ನಡ ಭಕ್ತರಿಗಿಂತ ಹಿರಿಯರಿಲ್ಲ**' ಎಂದು ಮಾರ್ಪಡಿಸಿ ಹೇಳುತ್ತೇನೆ."

ಕೊನೆಯಲ್ಲಿ ಶ್ರೀ ಕೆ. ಗೋಪಾಲಕೃಷ್ಣರಾಯರು ಅಧ್ಯಕ್ಷರಿಗೂ "ಶ್ರೀ"ಯವರಿಗೂ ಹಾರಹಾಕಿ ಶ್ರೀ ಮಾಸ್ತಿಯವರ ಭಾವಚಿತ್ರವನ್ನು ಸಂಘಕ್ಕೆ ದಾನಮಾಡಿ ಉಪಕಾರಮಾಡಿದ ಶ್ರೀ ಎಂ. ನರಸಿಂಹಮೂರ್ತಿಯವರಿಗೂ, ಉತ್ಸವದಲ್ಲಿ ಭಾಗವಹಿಸಿದ್ದವರಿಗೆಲ್ಲರಿಗೂ ಸಂಘದ ವಂದನೆಗಳನ್ನು ಸಮರ್ಪಿಸಿದರು.

## ೨೧ನೆಯ ದಿನದ ಕಾರ್ಯಕಲಾಪಗಳು

### ಕತೆಗಳ ಓದು

೨೧ನೆಯ ತಾರೀಖು ಭಾನುವಾರ ಬೆಳಗ್ಗೆ ೮-೩೦ರಿಂದ ೧೧-೩೦ರ ವರೆಗೆ ಈ ಮುಂದೆ ಹೇಳಿರುವ ಮಹನೀಯರೂ ಮಹಿಳೆಯರೂ ತಮ್ಮ ತಮ್ಮ ಕತೆಗಳನ್ನು ಓದಿ ಸಭಿಕರನ್ನು ಸಂತೋಷಪಡಿಸಿದರು—

೧. ಎಂ. ನರಸಿಂಹಮೂರ್ತಿ ('[illegible]') ೨. ಕಡೂರು ಶ್ರೀಪಾದ ('ನನ್ನ ಹೆಂಡತಿ ನನಗಿಂತ ಬುದ್ಧಿವಂತೆ,) ೩. ಕೆ. ಎಸ್. ನೊರೆಸ್ವಾಮಿ ('ಎಷ್ಟಾದರೂ ಒಬ್ಬ ತಾಯಿಯ ಮಕ್ಕಳಲ್ಲವೆ?') ೪. ಶ್ರೀಮತಿ ಕಾಮಾಕ್ಷಮ್ಮ ರಾಮಯ್ಯ ('ಸುಗುಣ ಅಥವಾ ಮಕ್ಕಳ ಸುಖ') ೫. ಎಂ. ವಿ. ಸೀತಾರಾಮಯ್ಯ ('ಕುಮುದೆ') ೬. ಸಿ. ಕೆ. ನಾಗರಾಜರಾವ್ ('ಕರುಳು') ೭. ಶ್ರೀಮತಿ ಆರ್. ಕಲ್ಯಾಣಮ್ಮ ('ಕಾಣಿಕೆ ಮುಟ್ಟಿತು') ೮. ಗೊರೂರು ರಾಮಸ್ವಾಮಯ್ಯಂಗಾರ್ ('ವಿಮೆ ಯಮನನ್ನೆ ಹೆದರಿಸಿತು') ೯. ಕೆ. ರಾಜಾರಾವ್ ('ಮೌನ ಪತ್ನೀವ್ರತ') ೧೦. ಜಿ. ಪಿ. ರಾಜರತ್ನಂ (ಒಂದು ಕಾಡ ಕತೆ), ೧೧. ವರದರಾಜರಾವ್ ('ಯಜ್ಞ') ೧೨. ಎಂ. ಕೃಷ್ಣಮೂರ್ತಿ ('ಶಕುನ') ೧೩. ಬಿ. ಎಸ್. ರಂಗಸ್ವಾಮಿ ('ತಿಂಪನ್ನ ಕಾರಿದ ನಂತರ') ೧೪. ಜಿ. ನರಸಿಂಗರಾವ್ ('ಪರೀಕ್ಷೆಯ ತೀರ್ಪು')




ಶುಕ್ರವಾರ, ಜನವರಿ ೨೬, ೧೯೪೦

## ಸಣ್ಣ ಕತೆಗಾರರ ಸಮ್ಮೇಳನ

ಹೋದ ಶನಿವಾರ ಭಾನುವಾರ ಪರಿಷತ್ತಿನಲ್ಲಿ ನಡೆದ ಸಣ್ಣಕತೆಗಾರರ ಸಮ್ಮೇಳನದ ಕಾರ್ಯಕ್ರಮದ ವರದಿ ಈ ಸಂಚಿಕೆಯಲ್ಲಿಯೇ ಬೇರೆ ಒಂದು ಕಡೆ ಇದೆ. ಅಲ್ಲಿ ಹೇಳಿರುವಂತೆ ಈ ಸಮ್ಮೇಳನ ಅವರ ಎರಡನೆಯದು. ಹಲವು ವರ್ಷಗಳ ಅನಂತರ ಇಂಥ ಸಮ್ಮೇಳನ ನಡೆದದ್ದರಿಂದ ಹೆಚ್ಚಿನ ಕಾಲಾವಧಿಯಲ್ಲಿ ಹುಟ್ಟಿ ಬೆಳೆದಿರುವ ಸಣ್ಣಕತೆಗಳ ಬೆಳವಣಿಗೆಯನ್ನೂ ಪರಿಶೀಲಿಸುವುದು ಸಾಧ್ಯವಾಯಿತು.

ಸಣ್ಣಕತೆಗಳನ್ನು ಬರೆದ ಹಲವು ಮಹನೀಯರು ತುಂಬಿ ಕಿಕ್ಕಿರಿಯುತ್ತಿದ್ದ ಸಭೆಯಲ್ಲಿ ತಮ್ಮ ಕತೆಗಳನ್ನು ಓದಿ ತೋರಿಸಿದರು. ಸಣ್ಣಕತೆಗಳ ಸ್ವರೂಪ, ವಿಧಗಳು, ತತ್ವ, ಗುರಿ, ಶೈಲಿ, ಮುಂತಾದವನ್ನು ಕುರಿತು ಕೆಲವರು ಉಪನ್ಯಾಸ ಮಾಡಿದರು. ಆ ಬಗೆಯ ಸಾಹಿತ್ಯ ಹೇಗೆ ಜನಪ್ರಿಯವಾಗಿ ಬೆಳೆಯುತ್ತಿದೆ, ಅದರ ಲಗು-ಬಿಗು ಏನು, ಅದರಲ್ಲಿ ಕಲೆಗಾರಿಕೆಯನ್ನೂ ಉನ್ನತಿಯನ್ನೂ ಹೇಗೆ ಸಾಧಿಸಬೇಕು ಎಂಬುವೂ ವಿಚಾರಕ್ಕೆ ಬಂದು ತಿಳಿವಳಿಕೆಯ ವಿನಿಮಯವಾಯಿತು. ಎಲ್ಲಕ್ಕೂ ವಿಶೇಷದ ಅಂಶವೆಂದರೆ ಭರತಖಂಡದ ಬೇರೆ ಬೇರೆ ಪ್ರಾಂತ ಭಾಷೆಗಳಲ್ಲಿ ಈ ಸಣ್ಣಕತೆಗಳ ಸಾಹಿತ್ಯ ಹೇಗೆ ಬೆಳೆದುಬರುತ್ತಿದೆ ಎಂಬುವನ್ನು ತಿಳಿಸುವ ಆರೆಂಟು ಉಪನ್ಯಾಸಗಳ ಯೋಜನೆ. ಹಿಂದೆ ಇತರ ದೇಶಗಳಲ್ಲಿದ್ದಂತೆಯೇ ನಮ್ಮ ದೇಶದಲ್ಲಿಯೂ ಚಿಕ್ಕ ಕತೆಗಳು ಬಳಕೆಯಲ್ಲೇನೂ ಇದ್ದುವು. ಶುಕಸಪ್ತತಿಕತೆ, ಪಂಚತಂತ್ರದ ಕತೆಗಳು ಮುಂತಾದ ಹಲವು ಬಗೆಯ ಕತೆಗಳು ಜನರ ಬಳಕೆಯಲ್ಲಿರುತ್ತಿದ್ದುವು. ಆದರೆ ಒಂದು ವಿಶೇಷಬಗೆಯ ಕೃತಿವರ್ಗ ಎಂಬಂತೆ ಈಗ ಯಾವುದು ಸಣ್ಣಕತೆ ಎಂಬ ಹೆಸರಿಂದ ಸಾಹಿತ್ಯಕ್ಕೆ ಬಂದಿದೆಯೊ ಆ ಬಗೆಯ ಸಣ್ಣಕತೆ ಈಚಿನದು; ಯೂರೋಪಿನ ಸಾಹಿತ್ಯ ಪ್ರಪಂಚದಲ್ಲಿಯೂ ಅಮೇರಿಕಾದಲ್ಲಿಯೂ ಹುಟ್ಟಿ ಲೋಕದಲ್ಲೆಲ್ಲ ಹರಡಿರುವಂಥದು; ಇತರ ಬಗೆಯ ಸಾಹಿತ್ಯ ಕೃತಿಗಳಿಗಿಂತ ಬೇರೆಯಾದ ಒಂದು ವ್ಯಕ್ತಿತ್ವವನ್ನು ಬೆಳೆಸಿ ತನಗೇ ಒಪ್ಪುವ ನೇಮನಿಷ್ಠೆಗಳ ಒಂದು ಸಂಪ್ರದಾಯವನ್ನು ರಚಿಸಿಕೊಂಡಿರುವಂಥದು. ಹೀಗೆಂದಮಾತ್ರಕ್ಕೇ ನಮ್ಮ ದೇಶದ ಎಲ್ಲ ಸಣ್ಣಕತೆಗಳೂ ಅಲ್ಲಿನವುಗಳಂತೆಯೇ ಇವೆಯೆಂದಾಗಲಿ, ಇರಬೇಕೆಂದಾಗಲಿ, ಬೇರೆ ಲಕ್ಷಣಗಳನ್ನು ಹೊಮ್ಮಕೂಡದೆಂದಾಗಲಿ ಹೇಳುತ್ತಿಲ್ಲ. ಈಗ್ಗೆ ಸುಮಾರು ಇಪ್ಪತ್ತು ಮೂವತ್ತು ವರ್ಷಗಳಿಂದ ತನ್ನದೇ ಆದ ಒಂದು ಚೆಲುವಿನಿಂದಲೂ ಸ್ವಭಾವ ಲಕ್ಷಣದಿಂದಲೂ ಸಣ್ಣಕತೆ ಕನ್ನಡದಲ್ಲಿ ನಿರ್ಮಾಣವಾಗುತ್ತಿದೆ; ದಿನದಿನಕ್ಕೆ ಅದರ ವ್ಯವಸಾಯ ಹೆಚ್ಚಾಗುತ್ತಿದೆ; ಕವಿತೆ ನಾಟಕಗಳಂತೆ ಅದರನ್ನೂ ಮಾನ್ಯತೆಯನ್ನೂ ಪಡೆಯುತ್ತಿದೆ; ಬದುಕನ್ನು ಚಿತ್ರಿಸುತ್ತ, ವಿಮರ್ಶೆ ಮಾಡುತ್ತ, ಸಂತೋಷ ಕೊಡುತ್ತ, ಅಂತಃಕರಣಗಳನ್ನು ಉಕ್ಕಿಸುತ್ತ ಇದೆ. ಇದಕ್ಕೆ ಸಂಬಂಧಿಸಿದ ಧರ್ಮ ಕರ್ಮ ಮರ್ಮಗಳನ್ನು ಕುರಿತು ಯೋಚಿಸುವುದು, ಈವರೆಗೆ ಏನು ಕೆಲಸ ನಡೆದಿದೆ ಮುಂದೆ ಏನು ನಡೆಯಬೇಕಾಗಿದೆ ಎಂಬುದನ್ನು ಗ್ರಹಿಸುವುದು, ಇದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಚರ್ಚಿಸುವುದು; ಕತೆಗಾರರನ್ನು ಸೇರಿಸಿ ಒಂದು ಸೋದರತೆಯ ಆವರಣವನ್ನು ಕಲ್ಪಿಸುವುದು—ಇದೆಲ್ಲ ಅಗತ್ಯವೆಂದು ತೋರಿ ಕೈಕೊಂಡ ಈ ಸಮ್ಮೇಳನ ಬಹಳ ಯಶಸ್ವಿಯಾಗಿ ನೆರವೇರಿತು. ಎರಡು ದಿನಗಳು ಅವಿಶ್ರಾಂತವಾಗಿ ಕಾರ್ಯಕಲಾಪ ಕಟ್ಟಿತ್ತು.

ಸಾಹಿತ್ಯ ಸೇವೆ ಮಾಡುತ್ತ ಕನ್ನಡ ನಾಡಿನಲ್ಲಿ ಒಂದು ಹಿರಿಯ ಹೆಸರಾಗಿರುವ ಮಂಗಳೂರಿನ ಶ್ರೀ ಎಂ. ಎನ್. ಕಾಮತ್ ಅವರು ಸಮ್ಮೇಳನದ ಅಧ್ಯಕ್ಷರಾಗಿ ದೊರೆತದ್ದು ಎಲ್ಲ ರೀತಿಯಲ್ಲೂ ಒಪ್ಪಿತ್ತು, ಚೆನ್ನಾಯಿತು. ವಿನೋದಶೀಲವಾದ ಒಂದು ಸರಳಶೈಲಿಯಲ್ಲಿ ಎಲ್ಲರ ಮನಸ್ಸೂ ಒಲಿಯುವಂತೆ ತಮ್ಮ ಅನುಭವವನ್ನು ಅವರು ಅಧ್ಯಕ್ಷ ಭಾಷಣಗಳಲ್ಲಿ ವಿವರಿಸಿದರು. ಅದರ ಫಲವನ್ನು ಸಾಹಿತಿಗಳೆಲ್ಲ ಪಡೆದು ತಮ್ಮ ಕಲೆಯನ್ನು ಉತ್ತಮಗೊಳಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಮಂಗಳೂರು ಕಡೆಯಿಂದಲೂ ಉತ್ತರ ಕರ್ನಾಟಕದಿಂದಲೂ ಬರಹಗಾರರಾಗಿ ಹೆಸರಾದ ಇನ್ನೂ ಹಲವರು ಬಂದಿದ್ದರೆ ಸಮ್ಮೇಳನದ ಸಂತೋಷ ಇನ್ನೂ ಹೆಚ್ಚುತ್ತಿತ್ತು. ಆದರೂ ಉತ್ತರ ಕರ್ನಾಟಕದಿಂದ ಶ್ರೀಯುತ ದ. ರಾ. ಬೇಂದ್ರೆಯಂಥವರೂ, ಸಂಡೂರು ಸಂಸ್ಥಾನದ ಕೆಲವರೂ ಸಮ್ಮೇಳನಕ್ಕೆ ಬಂದು ಈ ಉತ್ಸವದಲ್ಲಿ ಭಾಗವಹಿಸಿದ್ದರಿಂದ ಕರ್ನಾಟಕದ ಬೇರೆಬೇರೆ ಕಡೆಯ ಮಹನೀಯರೂ ಸಹಕರಿಸಿದಂತಾಗಿತ್ತು. ಸಮ್ಮೇಳನದ ಕಾರ್ಯವನ್ನು ವಿತರಣೆಯಿಂದ ನಡಸಿದ ಅದರ ಅಧಿಕಾರ ವರ್ಗಕ್ಕೆ ಅಭಿನಂದನೆ ಸಲ್ಲತಕ್ಕದ್ದಾಗಿದೆ. ಸಾಹಿತ್ಯ ಪರಿಷತ್ತಿನ ಕೆಳೆಯಲ್ಲಿ ನುಡಿ ಸೇವೆ ಮಾಡುತ್ತಿರುವ ಮತ್ತು ಅದರ ಅಂಗಸಂಸ್ಥೆಯಾದ ಕನ್ನಡ ಸಾಹಿತಿಗಳ ಸಂಘದವರು ಸಂಘವನ್ನು ಸ್ಥಾಪಿಸಿಕೊಂಡ ಅಲ್ಪಕಾಲದಲ್ಲಿಯೇ ಇಷ್ಟು ಉತ್ತಮವಾದ ಉತ್ಸವವನ್ನು ಏರ್ಪಡಿಸಿದ್ದು ಮುಂದೆ ಅವರು ಮಾಡಲಿರುವ ಕೆಲಸಕ್ಕೆ ಶುಭವಾದ ಪ್ರವೇಶಿಕೆಯಾದಂತಾಗಿದೆ.

ಸಣ್ಣಕತೆಯ ಪ್ರಪಂಚದಲ್ಲಿ ಅಗ್ರಗಣ್ಯರಾಗಿ, ಹೊಸದಾದ ಒಂದು ಮಾರ್ಗವನ್ನು ಸ್ಥಾಪಿಸಿ, ಹೊಸ ಚೆಲುವು ಆನಂದಗಳನ್ನು ಪ್ರಪಂಚಕ್ಕೆ ಕೊಟ್ಟಿರುವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರ ಭಾವಚಿತ್ರದ ಅನಾವರಣವನ್ನು ಸಮ್ಮೇಳನದ ಅಂಗ ಉತ್ಸವವಾಗಿ ಕೈಕೊಂಡು ಅದನ್ನು ನೆರವೇರಿಸಿದ್ದು ಸಮ್ಮೇಳನಕ್ಕೆ ಒಂದು ಹೆಚ್ಚಿನ ಮೆರುಗನ್ನೂ ಕೀರ್ತಿಯನ್ನೂ ಕೊಟ್ಟಿತು. ಉತ್ತಮ ಕವಿಗಳಾಗಿ, ನಾಟಕ ಕರ್ತೃಗಳಾಗಿ, ವಿಮರ್ಶಕರಾಗಿ, ಹೊಸಕನ್ನಡ ಸಾಹಿತ್ಯಪ್ರಪಂಚದಲ್ಲಿ ಹೊಳೆವ ಹೆಚ್ಚಳಕಾಗಿರುವ ಅಂಥವರಿಗೆ ಸನ್ಮಾನ ಮಾಡುವುದು ಸಾಹಿತಿಗಳಿಗೆಲ್ಲ ಗೌರವದ ಪ್ರಸಂಗ. ಶ್ರೀನಿವಾಸರೆಂಬ ಹೆಸರಿನಿಂದ ಸಾಹಿತ್ಯಸೃಷ್ಟಿಯನ್ನು ಮಾಡುತ್ತ ಕನ್ನಡ ಜನತೆಯ ಮೇಲೆ ಉಪಕಾರದ ಮೇಲೆ ಉಪಕಾರವನ್ನು ಮಾಡುತ್ತಿರುವ ಉದಾರಿಗಳೂ, ಎಲ್ಲರ ಪ್ರೀತಿವಿಶ್ವಾಸಗಳಿಗೂ ಪಾತ್ರರಾಗಿ ನಯವಾದ ಸುಸಂಸ್ಕೃತವಾದ ನಡೆಯನ್ನು ತಮ್ಮ ಬದುಕಿನಲ್ಲಿ ತೋರಿಸುತ್ತಿರುವವರೂ ಆದ ಅವರ ಹಲವು ಕೃತಿಗಳನ್ನು ಕುರಿತು ಹನ್ನೊಂದು ಜನ

ತರುಣ ಸಾಹಿತಿಗಳು ಮಾತನಾಡಿ ತಮ್ಮ ವಿಶ್ವಾಸದ ಕಾಣಿಕೆಗಳನ್ನು ಅವರಿಗೆ ಅರ್ಪಿಸಿದರು. ಪರಿಷತ್ತಿನ ಉಪಾಧ್ಯಕ್ಷರೂ ಶ್ರೀ. ಅಯ್ಯಂಗಾರ್ಯರವರಿಗೆ ಕೂಡ ಹಿರಿಯರೂ ಗುರುಗಳೂ ನಾಡುನುಡಿ ಭಕ್ತರೂ ಆದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಚೆಲುವಾದ ಭಾಷಣಮಾಡಿ ಭಾವಚಿತ್ರವನ್ನು ಅನಾವರಣಮಾಡಿದ್ದು ದೊಡ್ಡ ಹರಕೆಯಿಂದ ಉತ್ಸವದ ಆ ಭಾಗವನ್ನೂ ನೆರವೇರಿಸಿದಂತಾಯಿತು. ಕಡೆಯಲ್ಲಿ ಶ್ರೀ. ಮಾಸ್ತಿಯವರು ಕೃತಜ್ಞತೆಯನ್ನು ಸೂಚಿಸಿ, ಮಧುರವಾಗಿಯೂ ತುಂಬಿದ ತಮ್ಮ ಬಾಳಿನ ಗೌರವಕ್ಕೆ ತಕ್ಕಂತೆಯೂ ಉತ್ತರಕೊಟ್ಟರು. ಇಂಥ ಉತ್ಸವಗಳಿಂದ ದೇಶದಲ್ಲಿ ಒಂದು ಉತ್ಸಾಹವೂ ಸ್ಫೂರ್ತಿಯೂ ಸೌಹಾರ್ದವೂ ಬೆಳೆಯುವಂತಾಗುವುದಲ್ಲದೆ ನಾಡಿನಲ್ಲಿ ಒಂದು ಸುಮನಸತೆಯೂ ಮೇಲಾದ ಸಂಪ್ರದಾಯವೂ ನೆಲಸುವಂತೆ ಆಗುವುದು. ಈ ಬಗೆಯ ಸೌಮನಸ್ಯವನ್ನು ಹೇಗೆ ಬೆಳಸಿದರೂ ಜನತೆಗೆ ಕಲ್ಯಾಣವೇ. ಇದು ನಮ್ಮ ನಾಡಿನ ದಿನದಿನದ ಬಾಳಾಗಲಿ; ಮುಂದಿನವರಿಗೆ ಬೆಳಕಾಗಲಿ; ಎಂದೆಂದಿಗೂ ನಿಲ್ಲುವ ಒಂದು ಸೌಭಾಗ್ಯವಾಗಲಿ.

## ಕಂಬನಿ

ಕನ್ನಡ ನಾಡಿನ ದುರ್ದೈವ! ದಿವಂಗತ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಮಹಿಷಿ ಶ್ಯಾಮರಾಯರುಗಳ ನಿಧನದಿಂದುಂಟಾದ ಶೋಕವಾರುವುದಕ್ಕೆ ಮುಂಚೆಯೆ ಕನ್ನಡ ನಾಡಿನ ಮತ್ತಿಬ್ಬರು ಹಿರಿಯರು ಕಣ್ಮರೆಯಾದರೆಂದು ನಾವು ದುಃಖಪೂರ್ವಕವಾಗಿ ತಿಳಿಸಬೇಕಾಗಿದೆ. ಒಬ್ಬರು ನಿಜಾಂ ಕರ್ನಾಟಕದ ಕನ್ನಡದ ಉಜ್ವಲ ಭಕ್ತರಾದ ರೆವರೆಂಡ್ ನಾನಪ್ಪ ದೇಸಾಯಿಯವರು; ಇನ್ನೊಬ್ಬರು ಸುಪ್ರಸಿದ್ಧ ಇತಿಹಾಸಜ್ಞರೂ, ಬಂಗಾಳಿ ಸಾಹಿತಿಗಳೂ, "ಸವಿನುಡಿ"ಯ ಸಂಪಾದಕರೂ ಆಗಿದ್ದ ಶ್ರೀಮಾನ್ ಭಾರತಿ ಸಂಪಂಗಿ ರಾಮಯ್ಯನವರು.

ಶ್ರೀ. ನಾನಪ್ಪ ದೇಸಾಯಿಯವರು ಕ್ರೈಸ್ತಸಮಾಜದಲ್ಲಿ ಗಣ್ಯರಾಗಿದ್ದರು. ಸುರಪುರ ಸಂಸ್ಥಾನದಲ್ಲಿ ತಮ್ಮ ಪ್ರಭಾವವನ್ನು ಬೀರಿ ರಾಜಾಸ್ಥಾನದಲ್ಲಿ ಮರ್ಯಾದೆಯನ್ನು ಸಂಪಾದಿಸಿದ್ದರು. ಅಲ್ಲಿ ಕನ್ನಡವನ್ನು ಮತ್ತೆ ನೆಟ್ಟು ಬೆಳಸಿದವರು ಇವರೇ ಎಂದರೆ ಅತಿಶಯೋಕ್ತಿಯಾಗಲಾರದು. ಅಲ್ಲಿಯ ಕರ್ನಾಟಕ ಸಂಘಕ್ಕೆ ಅಧ್ಯಕ್ಷರಾಗಿದ್ದು, ಸಮ್ಮೇಳನದಲ್ಲಿ ಪ್ರಧಾನ ಪಾತ್ರವನ್ನು ವಹಿಸಿ, ಕನ್ನಡಕ್ಕಾಗಿ ದುಡಿಯುವವರಲ್ಲಿ ಬಹುಪ್ರೀತಿಯನ್ನು ತೋರಿಸಿ, ಹೆಮ್ಮೆಪಟ್ಟುಕೊಳ್ಳುತ್ತಿದ್ದರು. ಕ್ರೈಸ್ತ ಸಮಾಜದವರು ಕನ್ನಡಕ್ಕಾಗಿ ಎಷ್ಟೋ ಕೆಲಸ ಮಾಡುತ್ತಿದ್ದಾರೆ. ಅವರಿಗೆ ಈ ಗುಣಾಢ್ಯರೂ ದೇಶಾಭಿಮಾನಿಗಳೂ ಆದ ಮಹಾಶಯರ ನಿಧನದಿಂದ ಆಗಿರುವ ದೊಡ್ಡ ನಷ್ಟದಲ್ಲಿ ನಾವು ಸಹಾನುಭೂತಿಯನ್ನು ಅರ್ಪಿಸುತ್ತೇವೆ.

ಶ್ರೀ ಸಂಪಂಗಿರಾಮಯ್ಯನವರು ಕೆಲಕಾಲದಿಂದ ಎದೆನೋವಿನಿಂದ ನರಳುತ್ತ, ಅದಕ್ಕೆ ಅಗಾಗ್ಗೆ ತಾವೇ ಪ್ರಕೃತಿ ಚಿಕಿತ್ಸೆ ಮಾಡಿಕೊಳ್ಳುತ್ತಿದ್ದರು. ಇವರು ನಿಸ್ಸೀಮ ಭಕ್ತಿಯಿಂದ ನುಡಿ ಸೇವೆಮಾಡಿ, ಸಾಹಿತ್ಯ ಪ್ರಪಂಚದಲ್ಲಿ ಭೀಷ್ಮಾಚಾರ್ಯರೆನಿಸಿದ್ದರು. ಇವರ ಜೀವನ ಚರಿತೆಯನ್ನು ಕನ್ನಡ ನುಡಿ ಸಂಪುಟ ೧, ಸಂಚಿಕೆ ೩೯, ೩೦–೬–೧೯೩೯ ರಲ್ಲಿ ಪ್ರಕಟಿಸಲಾಗಿದೆ.

ದಿವಂಗತರ ಆತ್ಮಕ್ಕೆ ಶಾಂತಿಯನ್ನು ಪರಮಾತ್ಮನು ಅನುಗ್ರಹಿಸಲಿ.

## ನಾಗರಿಕತೆ

### ಪ್ರಿನ್ಸ್ ಜಯಚಾಮರಾಜ ಒಡೆಯರವರ ಭಾಷಣ

ಹೊಸದಾಗಿ ಸ್ಥಾಪಿಸಲಾಗಿರುವ 'ಇನ್ಸ್ಟಿಟ್ಯೂಟ್ ಆಫ್ ಇಂಟರ್ ನ್ಯಾಷನಲ್ ಅಫೇರ್ಸ್' ಎಂಬ ಅಂತರರಾಷ್ಟ್ರೀಯ ವಿದ್ಯಮಾನಗಳ ಪರಿಶೀಲನಾ ಸಂಸ್ಥೆಯ ಆಶ್ರಯದಲ್ಲಿ ಪ್ರಿನ್ಸ್ ಜಯಚಾಮರಾಜ ಒಡೆಯರವರು "ನಾಗರಿಕತೆ" ಎಂಬ ವಿಷಯದ ಮೇಲೆ ಈ ತಿಂಗಳು ೧೭ನೆಯ ತಾರೀಖು ಮೈಸೂರು ಮಹಾರಾಜಾ ಕಾಲೇಜ್ ಅಂಗಳದಲ್ಲಿ ಆರಂಭ ಭಾಷಣ ಮಾಡಿದರು. ನಗರದ ಖಾಸಗೀ ಮಾನ್ಯರುಗಳೂ, ಅರಮನೆ ಮತ್ತು ಸರ್ಕಾರಿ ಅಧಿಕಾರಿಗಳೂ, ವಿಶ್ವವಿದ್ಯಾನಿಲಯದ ಅಧ್ಯಾಪಕರುಗಳೂ ವಿದ್ಯಾರ್ಥಿಗಳೂ ಕಿಕ್ಕಿರಿದು ನೆರೆದಿದ್ದರು.

ಸರ್ ಚಾರಲ್ಸ್ ಟಾಡ್‌ಹಂಟರ್‌ರವರು ಅಧ್ಯಕ್ಷತೆ ವಹಿಸಿದ್ದರು.

ಪ್ರಿನ್ಸ್ ಜಯಚಾಮರಾಜ ಒಡೆಯರವರು ಈ ರೀತಿ ಭಾಷಣ ಮಾಡಿದರು :

"ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ಇಂದು ರಸ್ತೆಯ ಸಂಚಾರಕ್ಕೆ ಹೋಲಿಸಬಹುದಾಗಿದೆ. ರಸ್ತೆಯಲ್ಲಿ ಸರಿಯಾಗಿ ಪೋಲೀಸಿನವರು ನಿಂತು ಸಂಚಾರವನ್ನು ಕ್ರಮಪಡಿಸದಿದ್ದರೆ ಹೇಗೆ ವಾಹನಗಳು ಡಿಕ್ಕಿ ಹೊಡೆದು ಅನಾಹುತಗಳಾಗುತ್ತವೆಯೋ ಹಾಗೆ ಇಂದು ಅಂತರಾಷ್ಟ್ರೀಯ ನೀತಿಮಾರ್ಗದಲ್ಲಿ ಸರಿಯಾದ ದರ್ಶಕರಿಲ್ಲದೆ ಪ್ರತಿ ರಾಷ್ಟ್ರವೂ ಇನ್ನೊಂದರೊಡನೆ ವ್ಯಾಜ್ಯವಾಡಿ ತನ್ನ ತನ್ನ ಶಕ್ತಿಗಳನ್ನು ಪ್ರದರ್ಶಿಸುತ್ತಿದೆ. ಅನಾಗರಿಕತೆಯು ನಾಗರಿಕತೆಯನ್ನು ಹಿಂದಕ್ಕೆ ತಳ್ಳಿ ಹೆಚ್ಚು ಹೆಚ್ಚಾಗಿ ಮುಂದಕ್ಕೆ ನುಗ್ಗುತ್ತಿರುವಂತೆ ಕಾಣುತ್ತಿದೆ. ಸುಮಾರು ೪೦ ವರ್ಷಗಳ ಕೆಳಗೆ ಅಂತರರಾಷ್ಟ್ರೀಯ ಕಾನೂನು, ನೀತಿ, ನ್ಯಾಯಗಳಿಗೆ ಮನ್ನಣೆಯಿತ್ತು. ಇಂದು ಅವೆಲ್ಲವೂ ಮಾಯವಾಗಿವೆ. ಪಶುಶಕ್ತಿಯ ಕೈವಾಡ ಜಾಸ್ತಿಯಾಗುವಂತೆ ತೋರುತ್ತಿದೆ. ಹಿಂದೆ ಅಂತರಾಷ್ಟ್ರೀಯ ಅನ್ಯಾಯ ನಡೆದರೆ ಅದಕ್ಕೆ ಪ್ರಜಾಭಿಪ್ರಾಯವು ತನ್ನಪ್ರಭಾವವನ್ನು ಬೀರಿ ಅದನ್ನು ಸರಿಪಡಿಸುತ್ತಿತ್ತು. ಇಂದು ಅಂಥ ಅನ್ಯಾಯಗಳಿಗೆ ಯಾವುದಾದರೂ ಒಂದು ದೊಡ್ಡ ಧ್ಯೇಯದ ಹೆಸರಿನಲ್ಲಿ ಸಮರ್ಥನೆ ದೊರೆಯುತ್ತಿದೆ. ಈಗ ವ್ಯಕ್ತಿಗಳು ಮಾತ್ರ ತಮ್ಮ ಉದ್ರೇಕದಿಂದ ಅನಾಗರಿಕತೆ ಶಕ್ತಿಯನ್ನು ಮುಂದೆ ಬಿಡುತ್ತಿಲ್ಲ; ಜನಾಂಗಗಳೇ ಅನ್ಯಾಯಕ್ಕೆ ಬೆಂಬಲ ಕೊಡುತ್ತಿವೆ. ಜನರನ್ನು ಹೊಡೆಯುವುದು, ಹಿಂಸಿಸುವುದು ಇವಕ್ಕೆಲ್ಲಾ ಮುಂಚೆ ಆಸ್ಪದವಿರಲಿಲ್ಲ. ಈಗ ಯೂರೋಪಿನ ಟೋಟಲಿಟೇರಿಯರ್ ದೇಶಗಳಲ್ಲೆಲ್ಲ ಅದು ಸರ್ವೇಸಾಧಾರಣವಾಗಿ ಹೋಗಿದೆ. ಯುದ್ಧಕ್ಕೆ ಹಿಂದಿದ್ದ ಯೂರೋಪಿಯನ್ ರಾಜ್ಯಗಳಲ್ಲಿ ಸಾಮೂಹಿಕ ತತ್ತ್ವಗಳು ಮಾತ್ರವಲ್ಲದೆ ಸಾಮ್ರಾಜ್ಯಕ ತತ್ತ್ವಗಳೂ ಇದ್ದುವು.

"ನಾಗರಿಕತೆಯೆಂಬುದು ನ್ಯಾಯ, ಸತ್ಯ, ಧರ್ಮ ಗುಣಗಳ ಮೇಲಿರಬೇಕು. ಆದರೆ ದುರದೃಷ್ಟವಶಾತ್ ಇತ್ತೀಚೆಗೆ ಈ ಭಾವನೆಗಳಲ್ಲಿ ಭಿನ್ನಾಭಿಪ್ರಾಯವುಂಟಾಗುತ್ತಿದೆ. ಈಗ ಎಲ್ಲೆಲ್ಲಿಯೂ ನಿರಾಶಾ ಭಾವನೆಯೂ, ಕತ್ತಲೆಯೂ ಕವಿದಿದೆ. ಆದ್ದರಿಂದ ಬುದ್ಧಿವಂತರೆಲ್ಲರೂ ಒಟ್ಟಿಗೆ ಸೇರಿ ಆ ನಿರಾಶೆಯನ್ನು ಹೋಗಲಾಡಿಸಿ ಬೆಳಕನ್ನು ತೋರಿಸಲು ಯತ್ನಿಸಬೇಕು.

"ಮಾನವನಲ್ಲಿ ಅಗಾಧ ಗುಣಗಳಿವೆ. ಚರಿತ್ರೆಯ ಆದ್ಯಂತದಿಂದಲೂ ಪ್ರಕೃತಿಯೊಡನೆ ಹೋಡೆದಾಡಿ ಪ್ರತಿಯೊಂದು ತೊಂದರೆಯನ್ನೂ ಗೆದ್ದು ಮಾನವನು ಹೆಚ್ಚಿನ ಮಟ್ಟಕ್ಕೇರುತ್ತಿದ್ದಾನೆ. ಇಂದು ಕೆಲವು ದೇಶಗಳು ಆಧುನಿಕ ಸೌಕರ್ಯಗಳನ್ನು ದುರುಪಯೋಗಪಡಿಸಿಕೊಂಡು ನಾಗರಿಕತೆಯನ್ನು ಹಾಳುಮಾಡಲೆತ್ನಿಸುತ್ತಿದ್ದರೂ ಅದು ಖಂಡಿತವಾಗಿಯೂ ಹಾಳಾಗುವುದಿಲ್ಲ. ಸರಿಯಾದ ತಿಳಿವಳಿಕೆಯುಳ್ಳ ಕೊಂಚ ಮೈನಾರಿಟಿಯವರಿದ್ದೇ ಇದ್ದಾರೆ. ಎಲ್ಲ ದೇಶಗಳಲ್ಲೂ ಇರುವ ಆ ಜನರು ಒಟ್ಟಿಗೆ ಸೇರಿ ತಮ್ಮ ಶಕ್ತಿಗಳನ್ನು ಶೇಖರಿಸಿ ಕೆಲಸಮಾಡಿದರೆ ಮುಂದೆ ಈಗಿರುವ ನೋವು ಹೋಗಿ ಮಾನವನಿಗೆ ನಾಗರಿಕತೆಯ ಬೆಳಕು ಸರಿಯಾಗಿ ಕಾಣುತ್ತದೆ. ಮಾನವನಲ್ಲಿ ಆಧ್ಯಾತ್ಮಿಕ ಗುಣವಿದೆ. ಇಂದು ಅದಕ್ಕೂ ಸವಾಲ್ ಬಂದಿದೆ. ಆದರೆ ಆ ಆಧ್ಯಾತ್ಮಿಕ ಗುಣವು ಎಂದಿಗೂ ಸೋಲನ್ನು ಹೊಂದಲಾರದು. ಬುದ್ಧ, ಜೀಸಸ್, ಮಹಮದ್ ಮುಂತಾದ ಆಧ್ಯಾತ್ಮಿಕ ಬೋಧಕರೂ, ಅರಿಸ್ಟೋಟಲ್, ಗೆಲಿಲಿಯೊ, ಎಡಿಸನ್, ಮಾರ್ಕೋನಿ, ರಾಸ್ ಮುಂತಾದ ವೈಜ್ಞಾನಿಕರೂ ಅನಾಗರಿಕ ಶಕ್ತಿಯನ್ನು ಗೆದ್ದು ಉದಾತ್ತ ಧ್ಯೇಯಗಳನ್ನು ತೋರಿಸಿದ್ದಾರೆ. ಈಗಲೂ ಅದೇ ಉದಾತ್ತ ಧ್ಯೇಯಗಳನ್ನನುಸರಿಸಿ ಕ್ಷಮೆ, ಸಹನೆ,

(೧೪೦ನೆಯ ಪುಟವನ್ನು ನೋಡಿ)

(೧೩೭ನೆಯ ಪುಟದಿಂದ ಮುಂದುವರಿದುದು)

ಸಮ್ಮೇಳನದ ಕಾಲದಲ್ಲಿ ಓದಲು ಬಂದಿದ್ದ ಕತೆಗಳನ್ನು ಪರಿಶೀಲಿಸಿ ಓದ ಬಹುದಾದವುಗಳನ್ನು ಶಿಫಾರಸು ಮಾಡಲು ಒಂದು ಸಮಿತಿಯನ್ನು ನೇಮಕಮಾಡ ಲಾಯಿತು. ಅವರು ಶಿಫಾರಸು ಮಾಡಿದವರ ಪೈಕಿ ಮೇಲೆ ಕಂಡವರಲ್ಲದೆ ಶ್ರೀ. ಗಳಾದ ಬಿ. ಎಸ್. ಪಾಂಡುರಂಗರಾವ್, ಎಂ. ಎಸ್. ಗೋಪಾಲರಾವ್, ಕೆ. ನರಸಿಂಹಮೂರ್ತಿ, ಬಿ. ವೆಂಕಟರಾವ್, ಬಿ. ಎಸ್. ವಾಸುದೇವಮೂರ್ತಿ, ಎಂ. ವಾಸುದೇವಮೂರ್ತಿ, ಆರ್. ಗೋಪಾಲಕೃಷ್ಣಯ್ಯಂಗಾರ್ ಇವರುಗಳಿಗೂ ಮತ್ತು ಕತೆ ಓದಬೇಕೆಂದು ಕೋರಿದ್ದ ಇನ್ನು ಕೆಲವರಿಗೂ ಓದಲು ಕಾಲಾವಕಾಶವಾಗ ಲಿಲ್ಲ.]

### ವಿಚಾರ ಕೂಟ

ಮಧ್ಯಾಹ್ನ ೨ಗಂಟೆಯ ಮೇಲೆ ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ಸಭಾಮಂದಿರದಲ್ಲಿ ವಿಚಾರಕೂಟ ಸೇರಿತು. ಸುಮಾರು ೬೦ಮಂದಿ (ಸಹಾಯಕರು, ಸ್ವಾಗತಸಮಿತಿಯ ಸದಸ್ಯರು, ಅಭಿಮಾನಿಗಳು ಮತ್ತು ಕತೆಗಾರರು) ಸಭೆಗೆ ಬಂದಿದ್ದರು. ಶ್ರೀ. ಎಂ. ಎನ್. ಕಾಮತ್ ಅವರು ಕಾರ್ಯಾಂತರದಿಂದ ಸಭೆಗೆ ಬರುವುದು ತಡ ವಾಗುವುದೆಂದು ತಿಳಿಸಿದ್ದರಿಂದ ವ್ಯವಸ್ಥಾಪಕರು ಪ್ರಾರ್ಥಿಸಿಕೊಂಡ ಮೇರೆಗೆ ಶ್ರೀ. ಕಾಮತ್ ಅವರು ಬರುವವರೆಗೂ ಶ್ರೀ. ಬೆನಗಲ್ ರಾಮ ರಾಯರು ಅಧ್ಯಕ್ಷರ ಕಾರ್ಯವನ್ನು ನಿರ್ವಹಿಸಿಕೊಟ್ಟರು.

ಮೊದಲು ಹಲವು ಕತೆಗಾರರು ಸಭೆಗೆ ತಮ್ಮ ಪರಿಚಯಮಾಡಿ ಕೊಟ್ಟರು. ಆ ಬಳಿಕ ೮ ನಿರ್ಣಯಗಳು ಸಭೆಯಿಂದ ಅಂಗೀಕಾರ ವಾದುವು.

### ಕೊಳಲು ಕಚೇರಿ

ಮಧ್ಯಾಹ್ನದ ಮೇಲೆ ೪–೩೦ರಿಂದ ೫–೩೦ರ ವರೆಗೆ ವಿದ್ವಾನ್ ಶ್ರೀಪತಿರಾಯರು (ಪಕ್ಕವಾದ್ಯಗಳೊಡನೆ) ತಮ್ಮ ಇಂಪಾದ ಕೊಳಲು ವಾದನದಿಂದ ಸಭಿಕರನ್ನು ಸಂತೋಷಪಡಿಸಿದರು.

### ಪ್ರಬಂಧಗಳು, ಭಾಷಣಗಳು

ತರುವಾಯ ಈ ಮುಂದಿನಂತೆ ಕಥಾ ಸಾಹಿತ್ಯ ಸಂಬಂಧವಾದ ಪ್ರಬಂಧಗಳ ಓದೂ ಭಾಷಣಗಳೂ ನಡೆದುವು. ಶ್ರೀ|| ಸಿ. ಕೆ. ವೆಂಕಟ ರಾಮಯ್ಯನವರು ಕನ್ನಡ ಸಣ್ಣಕತೆಗಳ ವಿಚಾರವಾಗಿ ಭಾಷಣ ಮಾಡಿದರು. ಶ್ರೀ|| ಜಾನಕಿರಾಮಯ್ಯನವರು 'ತೆಲುಗು ಸಣ್ಣಕತೆಗಳು' ಎಂಬ ವಿಚಾರವಾಗಿ ತಾವು ಬರೆದಿದ್ದ ಪ್ರಬಂಧವನ್ನು ಓದಿ ಕೆಲವು ಕತೆಗಳ ಭಾಗಗಳನ್ನು ಓದಿತೋರಿಸಿ ತೆಲುಗು ಕತೆಯ ದಾಟಿಯನ್ನು ಮನಗಾಣಿಸಿದರು. ಶ್ರೀ. ಪಿ. ಜಿ. ಶ್ರೀನಿವಾಸನ್ ಅವರು "ತಮಿಳು ಸಣ್ಣ ಕತೆಗಳು" ಎಂಬ ವಿಚಾರವಾಗಿಯೂ, ಶ್ರೀ. ಎನ್. ಕಸ್ತೂರಿ ಯವರು "ಮಲೆಯಾಳಿ ಸಣ್ಣಕತೆಗಳು" ಎಂಬ ವಿಚಾರವಾಗಿಯೂ, ಶ್ರೀ. ದ. ಕೃ. ಭಾರದ್ವಾಜರು "ಮರಾಠಿ ಸಣ್ಣಕತೆಗಳು"ಎಂಬ ವಿಚಾರ ವಾಗಿಯೂ, ಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳು "ಹರಿಕತೆಗಳೂ ಸಣ್ಣ ಕತೆಗಳೂ"ಎಂಬ ವಿಷಯವಾಗಿಯೂ, ಶ್ರೀ. ದೇವುಡು ನರಸಿಂಹಶಾಸ್ತ್ರಿ ಗಳು "ಮಕ್ಕಳ ಕತೆಗಳು" ಎಂಬ ವಿಷಯವಾಗಿಯೂ ಉದಾಹರಣೆ ಗಳನ್ನು ಕೊಟ್ಟು ಸ್ವಾರಸ್ಯವಾದ ಭಾಷಣಗಳನ್ನು ಮಾಡಿದರು. ಶ್ರೀ. ವಿಶ್ವಾಮಿತ್ರ ಎಂಬುವರು "ಹಿಂದೀ ಸಣ್ಣಕತೆಗಳು" ಎಂಬ ವಿಷಯದ ಮೇಲೆ ಬರೆದು ಕಳಿಸಿದ್ದ ಪ್ರಬಂಧವನ್ನು ಶ್ರೀ. ಬಿ. ಎಸ್. ವೆಂಕಟ ರಾಮ್ ಅವರು ಓದಿದರು.

["ಶ್ರೀಗಳಾದ ಎಂ. ವಿ. ಸೀತಾರಾಮಯ್ಯ, ಕೆ. ನರಸಿಂಹಮೂರ್ತಿ, ಟಿ. ಎಸ್. ಶಾಮರಾವ್, ಜಿ. ಪಿ. ರಾಜರತ್ನಂ, ಜಿ. ವಿ. ದೊಡ್ಡವೀರಪ್ಪ, ಇವರುಗಳು ಮೇಲ್ಕಂಡ ಕಾರ್ಯಕ್ರಮದಲ್ಲಿ ಭಾಗವಹಿಸುವ ಏರ್ಪಾಡಾಗಿತ್ತು ; ಕಾಲಾವಕಾಶ ಸಾಲದೆ ಹೋದದ್ದರಿಂದ ಅದು ನೆರವೇರಲಿಲ್ಲ.]

### ಅಧ್ಯಕ್ಷರ ಮುಕ್ತಾಯ ಭಾಷಣ

ಪ್ರಬಂಧವಾಚನ ಭಾಷಣಗಳು ಸುಮಾರು ೮ ಗಂಟೆಯ ಹೊತ್ತಿಗೆ ಮುಗಿದುವು. ಬಳಿಕ ಅಧ್ಯಕ್ಷರು ಸುಮಾರು ಒಂದೂವರೆ ಗಂಟೆಯ ಮೇಲೆ ನಾತಾಡಿ ವಿಚಾರಪೂರಿತವೂ ಸರಸವೂ ಆದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಮಧ್ಯಾಹ್ನದ ಮೇಲೆ ೪ ಗಂಟೆಯಿಂದ ಸಭೆ ಯಲ್ಲಿ ಕಿಕ್ಕಿರಿದು ನೆರೆದಿದ್ದ ಸಭಿಕರೆಲ್ಲರೂ ರಾತ್ರೆ ಬಹಳ ಹೊತ್ತಾಗಿದ್ದರೂ ಸಹ ಅತ್ಯಾಸಕ್ತಿಯಿಂದ ಭಾಷಣವನ್ನು ಕೇಳಿ ಆನಂದಪಟ್ಟರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು :

"ಈಗ ಎಲ್ಲೆಲ್ಲೂ ನಮ್ಮ ಮುಂದೆ ಕಾಣುವುದು ಪ್ರಶ್ನಾರ್ಥಕ ಚಿಹ್ನೆ : ಮುಂದೇನು? ಮುಂದೇನು? ಇದು ವಿಚಾರಯುಗ. ಯಾವ ಕ್ಷೇತ್ರದಲ್ಲೇ ಆಗಲಿ ವಿಚಾರಮಾಡುತ್ತ ಮುಂದುವರಿಯಬೇಕು. ಮತೀಯ ಅಥವಾ ರಾಜಕೀಯ ವಿಷಯಗಳು ನಮಗೆ ದೂರ. ನಮ್ಮದು ಸಾಹಿತ್ಯ ಪ್ರಪಂಚ. ತಾಯ್ನುಡಿಯಾದ ಕನ್ನಡದ ಸೇವೆಯೇ ನಮ್ಮ ಗುರಿ. ನನ್ನ ತಾಯ್ನುಡಿ ಕನ್ನಡವಲ್ಲದಿದ್ದರೂ ನನ್ನ ವಿಶ್ವಾಸವೆಲ್ಲ ಕನ್ನಡದ ಕಡೆಗೆ. ಏಕೆಂದರೆ, ನನ್ನನ್ನು ಬೆಳಸಿ ಬದುಕಿಸಿರುವುದು ಕನ್ನಡ. ಕನ್ನಡವೇ ನನ್ನ ಶ್ರೇಯಸ್ಸು, ನನ್ನ ಸಂಪತ್ತು, ನನ್ನ ಸರ್ವಸ್ವ.

"ಈ ದಿನ ಬೆಳಗ್ಗೆ ಓದಿದ ಕತೆಗಳನ್ನು ಕೇಳಿ ಬಹಳ ಸಂತೋಷ ಪಟ್ಟಿದ್ದೇನೆ. ಕೆಲವು ನಗಿಸಿದ್ದರೆ, ಕೆಲವು ನಗಿಸಿ ಅಳಿಸಿವೆ. ಒಮ್ಮೆಯೇ ನಗಿಸಿ ಅಳಿಸಿ ನಮ್ಮನ್ನು ಆಲೋಚನಾಪರರನ್ನಾಗಿ ಮಾಡುವ ಕಲೆ ದೊಡ್ಡದು. ಇದನ್ನು ಚಾರ್ಲಿ ಚಾಪ್ಲಿನ್ನಿನ ಚಲನಚಿತ್ರಪಟಗಳಲ್ಲಿ ಕಾಣಬಹುದು. ಕತೆ ಬರೆಯುವಾಗ ಯಾರಿಗಾಗಿ ಬರೆಯುತ್ತಿದ್ದೇ ವೆಂದು ತಿಳಿದು ಎಚ್ಚರಿಕೆಯಿಂದ ಬರೆಯಬೇಕು. ಮಕ್ಕಳಿಗೆ ಬರೆಯು ವಾಗ ಮಕ್ಕಳ ಮನಸ್ಸಿಗೆ ತಕ್ಕಂತೆ ಬರೆಯಬೇಕು. 'ಪರಡಿ' (Parody) ಕಥೆ ಬೇಡ. ಏಕೆಂದರೆ ಅದು ಇನ್ನೊಬ್ಬರ ಮನಸ್ಸು ನೋಯಿಸಬಹುದು. ಇದರಲ್ಲೂ ನಮ್ಮ ದೇಶ ಯಾವುದನ್ನು ಅತಿ ಪವಿತ್ರ, ಅತಿ ಪೂಜ್ಯ, ಎಂದು ಭಾವಿಸಿದೆಯೋ ಅದನ್ನು ಹಾಸ್ಯಮಾಡು ವುದು ಬೇಡ. ಇನ್ನೊಂದು ಮುಖ್ಯ ವಿಚಾರವೆಂದರೆ ನಮ್ಮ ದೇಶದ ಶೀಲವಂತಿಕೆ ಕಾಪಾಡುವುದು. ಇದರಲ್ಲಿ ಕತೆಗಾರರ ಹೊಣೆ ಬಹಳ ದೊಡ್ಡದು. ಅವರು ಕತೆಗಳಲ್ಲಿ ಅಶ್ಲೀಲವಾದ್ದನ್ನು ತರಬಾರದು. ಶೃಂಗಾರವನ್ನೇ ಚಿತ್ರಿಸಕೂಡದೆಂದು ನಾನು ಹೇಳುವುದಿಲ್ಲ. ಅದು 'ರಿಯಲಿಸ್ಟಿಕ್ (Realistic)' ಆಗಿರಲಿ, 'ನ್ಯೂಡಿಸ್ಟಿಕ್ (Nudistic)' ಆಗಿರುವುದು ಬೇಡ ; ಅದನ್ನು ಬಟ್ಟೆ ಹಾಕಿ ಮೆರೆಸೋಣ, ಬತ್ತಲೆ ತಿರುಗಿಸುವುದು ಬೇಡ. ಅಶ್ಲೀಲವನ್ನು ಚಿತ್ರಿಸುವುದು ಜನಕ್ಕೆ ವಿಷದ ಇಂಜಕ್ಷನ್ ಕೊಟ್ಟಂತೆ. ಕತೆ ಬರೆಯುವವರು ಮೊದಲು ಅನುಭವ ಪಡೆಯಬೇಕು. ಅನುಭವವಿಲ್ಲದೆ ಬರೆದರೆ ನಗೆಗೀಡಾಗು ತ್ತಾರೆ. ಅಲ್ಲದೆ, ತಮ್ಮ ಹೆಸರನ್ನು ಅಚ್ಚಿನಲ್ಲಿ ಕಾಣುವ ಒಂದು ಕೀಳು ಬಯಕೆಗಾಗಿ ಮಾತ್ರ ಕತೆ ಬರೆದು ಪ್ರಕಟಿಸಬಾರದು. ಸಾಹಿತ್ಯದಲ್ಲಿ ಕೆಲಸ ಮಾಡುವವರು ಸಂಯಮಶೀಲರಾಗಬೇಕು. ಮಹಿಳೆಯರೂ ಮುಂದೆಬಂದು ಸಾಹಿತ್ಯದಲ್ಲಿ ಹೆಚ್ಚಾಗಿ ಕೆಲಸಮಾಡಬೇಕೆಂದು ಅವರಲ್ಲಿ ವಿಶೇಷವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಅದರಲ್ಲಿಯೂ ಮುಖ್ಯವಾಗಿ ಕತೆ ಬರೆಯತೊಡಗಬೇಕೆಂದು ಕೋರುತ್ತೇನೆ. ಏಕೆಂದರೆ, ಹೆಂಗಸರಿಗೆ ಕತೆಗಾರಿಕೆ ಸಹಜವಾದದ್ದು ; ಹೆಂಗಸರು ಕಥಾನಿಪುಣರು.

"ಕೊನೆಯದಾಗಿ ಒಂದು ಮಾತು : ಸಾಹಿತ್ಯ ಸೇವೆಯಲ್ಲಿ ಎಲ್ಲರೂ ಒಂದೆ. ಹೆಚ್ಚು ಕಡಮೆ, ಮೇಲು ಕೀಳು, ಎಂಬ ಭಾವ ಅಲ್ಲಿ ಇಲ್ಲ. ಸಾಹಿತ್ಯ ರಥ, ನಮ್ಮ ಕನ್ನಡಮ್ಮನ ರಥ, ಮುಂದೆ ಸಾಗ ಬೇಕಾದರೆ ಎಲ್ಲರೂ ಒಂದುಗೂಡಿ ಕೆಲಸಮಾಡಿದರೆ ಸಾಧ್ಯ ; ಅದಕ್ಕೆ ಎಲ್ಲರ ಸೇವೆಯೂ ಅಗತ್ಯ. ರಥವೂ ಬೇಕು, ಪೂಜಾರಿಯೂ ಬೇಕು, ಎಳೆಯುವ ಹಗ್ಗವೂ ಬೇಕು, ಎಳೆಯುವವರೂ ಬೇಕು, ಎಲ್ಲರಿಂದಲೂ ತುಳಿಸಿಕೊಳ್ಳುವ ಹೆದ್ದಾರಿಯೂ ಬೇಕು. ತನ್ನ ಸಾಹಿತ್ಯ ಸೃಷ್ಟಿ ಎಲ್ಲ ರಿಂದ ತುಳಿಸಿಕೊಂಡರೂ ಚಿಂತೆಯಿಲ್ಲ, ಸಾಹಿತ್ಯ ರಥ ಅದರ ಮೇಲೆ ಸಾಗುವಂತಾಯಿತಲ್ಲ ಎಂಬ ಆತ್ಮಾರ್ಪಣಭಾವನೆಯಿಂದ ಕೆಲಸ ಮಾಡಲು ತರುಣರು ಮುಂದೆ ಬರಬೇಕು. ಭುವನೇಶ್ವರಿಯ ಕೃಪೆ ಯಿಂದ ನಮ್ಮೆಲ್ಲರ ಮನೋರಥ ನೆರವೇರಲಿ ಎಂದು ಆಶಿಸುತ್ತೇನೆ."

ಅಧ್ಯಕ್ಷರು ಭಾಷಣಮಾಡಿ ಮುಗಿಸಿದ ಮೇಲೆ ಸ್ವಾಗತಾಧ್ಯಕ್ಷ ರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷರಿಗೂ ಸಭಿಕರಿಗೂ ಸಮ್ಮೇಳನ ಕಾರ್ಯದಲ್ಲಿ ಭಾಗವಹಿಸಿಯೂ ಸಹಕರಿಸಿಯೂ ನೆರವಾದ ಎಲ್ಲ ಮಹಾಶಯರಿಗೂ ಸಂಘದ ಮತ್ತು ಸ್ವಾಗತ ಸಮಿತಿಯ ಪರ ವಾದ ಕೃತಜ್ಞತೆಯ ವಂದನೆಗಳನ್ನು ಸಮರ್ಪಿಸಿ, ಅಧ್ಯಕ್ಷರಿಗೆ ಹಾರ ಹಾಕಿದರು. ಶ್ರೀಮನ್ಮಹಾರಾಜರವರು ಬೆಳ್ಳಿಯ ಹಬ್ಬವನ್ನು ಆರಂಭ ಮಾಡುವ ಅನುಗ್ರಹವನ್ನು ಸಭೆಗೆ ತಿಳಿಸಿ, ವೈಭವದಿಂದ ನಡಸುವುದಕ್ಕೆ ಸರ್ವರ ಸಹಕಾರವನ್ನು ಕೋರಿದರು.

ಬಳಿಕ ಶ್ರೀ|| ಕೆ. ಜಿ. ಸಂಪತ್ಕುಮಾರಾಚಾರ್ಯರು ಶ್ರೀ. ಬೆನಗಲ್ ರಾಮರಾಯರಿಂದ ರಚಿತವಾಗಿರುವ ಕನ್ನಡ ನಾಡ ಗೀತೆಯೊಂದನ್ನು ಸುಶ್ರಾವ್ಯವಾಗಿ ಹಾಡಿದರು.

ಸ್ವಯಂಸೇವಕರು 'ಕಾಯೌ ಶ್ರೀಗೌರಿ' ಹಾಡಿದ ಮೇಲೆ ಸಮ್ಮೇಳನದ ಸಭೆ ಮುಕ್ತಾಯಗೊಂಡಿತು.

ರಾತ್ರಿ ಪರಿಷನ್ಮಂದಿರದಲ್ಲಿ ಔತಣ ಏರ್ಪಾಡಾಗಿತ್ತು. ಸಹಾ ಯಕರು, ಸ್ವಾಗತ ಸಮಿತಿಯ ಸದಸ್ಯರು, ಕತೆಗಾರರು, ಸ್ವಯಂ ಸೇವಕರು, ಮುಂತಾಗಿ ಸುಮಾರು ೧೫೦ ಮಂದಿ ಅತಿಥಿಗಳು ಊಟಕ್ಕೆ ಬಂದಿದ್ದರು. ಔತಣದೊಡನೆ ಸಮ್ಮೇಳನದ ಕಾರ್ಯಕಲಾಪಗಳು ಕೊನೆಗಂಡುವು.

—ಸಮ್ಮೇಳನದ ಪ್ರಚಾರ ಸಮಿತಿಯಿಂದ

## ಕನ್ನಡ ಸಾಹಿತ್ಯ ಪರೀಕ್ಷೆಗಳು

### ಕನ್ನಡಿಗರಲ್ಲಿ ಬಿನ್ನಹ

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಾಡಿನಲ್ಲಿ ನೆಲೆಯಾಗಿ ನಿಂತಿರುವವರೆಲ್ಲರಲ್ಲಿಯೂ ತಾಯ್ನುಡಿಯ ನಲುಮೆಯನ್ನು ಬೆಳಸಿ, ಅವರೆಲ್ಲರನ್ನೂ ನಾಡಿನೊಲುಮೆಯ ನೂಲಿನಿಂದ ಬಿಗಿದು ಒಂದುಗೂಡಿಸಲೆಂದೂ ಪರಿಷತ್ತನ್ನು ಜನಸಾಮಾನ್ಯರ ವಿದ್ಯಾಪೀಠವನ್ನಾಗಿ ಮಾಡಬೇಕೆಂದೂ ಈಚೆಗೆ ಮೂರು ತರಗತಿಗಳ ಸಾಹಿತ್ಯ ಪರೀಕ್ಷೆಗಳನ್ನು ಏರ್ಪಡಿಸಿದೆ.

ಈ ಪರೀಕ್ಷೆಗಳು **ಬರಲಿರುವ ಜೂನ್ ತಿಂಗಳ ಮೊದಲನೆಯ ವಾರದಲ್ಲಿ** ನಡೆಯಲಿವೆ. ಈ ಪರೀಕ್ಷೆಗಳಲ್ಲಿ ಯಾವುದಾದರೊಂದು ಪರೀಕ್ಷೆಗಾದರೂ ೧೦ ಮಂದಿ ಸೇರಲಿರುವ ಕೇಂದ್ರಗಳಲ್ಲಿ ಪಾಠ ಹೇಳಲು ಏರ್ಪಡಿಸಿ, ಪರೀಕ್ಷೆಗಳನ್ನು ನಡಸಲಾಗುವುದು. ಈ ಪರೀಕ್ಷೆಗಳಲ್ಲಿ ತೇರ್ಗಡೆಯಾದವರಿಗೆ ಸಾಹಿತ್ಯ ಪರಿಷತ್ತು ಬಿರುದನ್ನು ಕೊಡುವುದು. ಕೊನೆಯಪರೀಕ್ಷೆಯಲ್ಲಿ(ಮೂರನೆಯ ತರಗತಿಯ-ಪ್ರೌಢ-ಪರೀಕ್ಷೆಯಲ್ಲಿ) ತೇರ್ಗಡೆಯಾದವರಿಗೆ "ಕನ್ನಡ ಜಾಣ (ಜಾಣೆ)" ಎಂಬ ಬಿರುದನ್ನೂ ಮೊದಲನೆಯ ಮತ್ತು ಎರಡನೆಯ ಪರೀಕ್ಷೆಗಳಲ್ಲಿ ತೇರ್ಗಡೆಯಾದವರಿಗೆ ಪ್ರಶಸ್ತಿ ಪತ್ರಿಕೆಗಳನ್ನೂ ಕೊಡಲಾಗುವುದು.

ಹುಡುಗರೂ, ಹುಡುಗಿಯರೂ, ಹಿರಿಯರೂ, ಕಿರಿಯರೂ, ಶಾಲೆಗಳಲ್ಲಿ ಓದುತ್ತಿರುವವರೂ, ಓದುಬರಹಗಳನ್ನು ಹೊಸದಾಗಿ ಕಲಿಯುವವರೂ—ಎಲ್ಲರೂ ಈ ಪರೀಕ್ಷೆಗಳಿಗೆ ಕಟ್ಟಬಹುದು. ಬೆಂಗಳೂರಿನ ಸಾಹಿತ್ಯ ಪರಿಷನ್ಮಂದಿರದಲ್ಲಿಯೂ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಸಭಾಮಂದಿರದಲ್ಲಿಯೂ, ಬೇಕಾದ ಮಿಕ್ಕೆಡೆಗಳಲ್ಲಿಯೂ, ಈ ಪರೀಕ್ಷೆಗಳಿಗಾಗಿ ಪಾಠಗಳನ್ನು ಹೇಳಿಕೊಡುವ ಏರ್ಪಾಟುಗಳನ್ನು ಪರಿಷತ್ತಿನವರು ಬೇಗನೆ ಮಾಡಲಿರುವರು.

ಇಂತಹ ಪಾಠಗಳ ಉಪಯೋಗವನ್ನು ಪಡೆಯಲು ಬಯಸುವವರು ಕನ್ನಡ ಸಾಹಿತ್ಯ ಪರಿಷತ್ತಿನ 'ಅಭಿಮಾನಿ'ಗಳಾಗಿರಬೇಕೆಂದು ಕಾರ್ಯಸಮಿತಿಯವರ ಹ್ವಾರೈಕೆಯಾಗಿದೆ; ಅಭಿಮಾನಿಗಳಾಗುವವರು ಪರಿಷತ್ತಿಗೆ ವರ್ಷಕ್ಕೊಮ್ಮೆ ಎಂಟು ಆಣೆಗಳ ಚಂದಾ ಹಣವನ್ನು ಸಲ್ಲಿಸಬೇಕು.

### ಪಾಠಕ್ರಮಗಳ ಗುರಿ

**I ಮೊದಲನೆಯ ಪರೀಕ್ಷೆ**—ಓದುಬರಹಗಳನ್ನು ಹೇಳಿಕೊಡುವುದು.

ಪಾಠಪುಸ್ತಕಗಳು: (೧) "ವಯಸ್ಕರ ವಿದ್ಯಾಭ್ಯಾಸದ ಮೊದಲನೆಯ ಪುಸ್ತಕ" ಎಂ. ಆರ್. ಶ್ರೀನಿವಾಸಮೂರ್ತಿಯವರಿಂದ, ಬೆಲೆ: ೧ ಆ. ೬ ಪೈ. (೨) ಮೈಸೂರು, ಮುಂಬಯಿ, ಮದ್ರಾಸು ಪ್ರಾಂತಗಳ ವಿದ್ಯಾಶಾಖೆಯವರಾಗಲಿ, ಪ್ರೌಢ ಶಿಕ್ಷಣ ಸಮಿತಿಯವರಾಗಲಿ, ಪ್ರಕಟಿಸಿರುವ ಕ್ರಮಿಕ ಪುಸ್ತಕಗಳು ೧ರಿಂದ ೪. (೩) ನೀತಿಚಿಂತಾಮಣಿ. (೪) ಲೆಕ್ಕ: ಒಂದು ಸಾವಿರದವರೆಗೆ ಎಣಿಕೆ, ಒಂದರಿಂದ ೨೦ರ ವರೆಗೆ ಮಗ್ಗಿ; [illegible] ಕೂಡುವುದು, ಕಳೆಯುವುದು, ಗುಣಾಕಾರ, ಭಾಗಾಕಾರ: ರೂಪಾಯಿ, ಆಣೆ, ಕಾಸುಗಳ ಬಾಯಿಲೆಕ್ಕ.

ಸೂಚನೆ: ಈ ಪರೀಕ್ಷೆಗೆ ಒಂದು ಪ್ರಶ್ನಪತ್ರಿಕೆ. ಬಾಯಿಪ್ರಶ್ನೆಗಳೂ ಉಂಟು. ತೆರ ೮ ಆಣೆ ಕಟ್ಟಬೇಕು.

**II ಎರಡನೆಯ ಪರೀಕ್ಷೆ**—ಕನ್ನಡದಲ್ಲಿ ತಕ್ಕಮಟ್ಟಿಗೆ ತಿಳಿವಳಿಕೆಯನ್ನು ಉಂಟುಮಾಡುವುದು.

ಪಾಠಪುಸ್ತಕಗಳು:

(೧) ವ್ಯಾಕರಣ — ಟಿ. ಎಂ. ಶ್ರೀಕಂಠಯ್ಯನವರ 'ಕನ್ನಡ ಮಧ್ಯಮ ವ್ಯಾಕರಣ' ಬೆಲೆ [illegible] ಆಣೆ ೬ ಪೈ.

(೨) ಸಾಹಿತ್ಯ

ನಾಟಕ:

(ಅ) ಸಿ. ಕೆ. ವೆಂಕಟರಾಮಯ್ಯನವರ 'ಮಂಡೋದರಿ' ಬೆಲೆ ೧ ರೂ.

(ಆ) [illegible] ನವರ 'ಆಗ್ರಹ' ಬೆಲೆ ೧೨ ಆಣೆ

(ಇ) ಶ್ರೀನಿವಾಸರವರ '[illegible]' ಬೆಲೆ ೬ ಆಣೆ

(ಈ) ಬೆಂಗಳೂರು ಮಿತ್ರ ಮಂಡಳಿಯವರ ಆರು ಏಕಾಂಕ ನಾಟಕಗಳು 'ಸಂಸಾರ' ಬೆಲೆ ೧೨ ಆಣೆ

ಕಾವ್ಯ:

(ಅ) ದೇಶಪಾಂಡೆ ಮನೋಹರರಾಯರವರ 'ಸರ್ವಜ್ಞನ ಸಂದೇಶ' ಬೆಲೆ ೮ ಆಣೆ

(ಆ) ಸಾಹಿತ್ಯ ಪರಿಷತ್ತಿನ 'ಸೋಮೇಶ್ವರ ಶತಕ' ಬೆಲೆ ೮ ಆಣೆ

(ಇ) ಕುಮಾರವ್ಯಾಸ ಭಾರತ: ಭೀಷ್ಮಪರ್ವ ಸಂಧಿಗಳು ೧-೨-೩

(ಈ) ಶ್ರೀನಿವಾಸರವರ 'ಬಿನ್ನಹ' ಬೆಲೆ ೬ ಆಣೆ

ಗದ್ಯ:

(ಅ) ಕೃಷ್ಣಶರ್ಮ ಬೆಟಗೇರಿಯವರ 'ರಾಜಯೋಗಿ' ಬೆಲೆ ೧೨ ಆಣೆ

(ಆ) ಕೆರೂರ ವಾಸುದೇವಾಚಾರ್ಯರವರ 'ಯದುಮಹಾರಾಜ' ಬೆಲೆ ೧ ರೂಪಾಯಿ

(ಇ) ಅ. ನ. ಕೃಷ್ಣರಾಯರವರ 'ಸಂಧ್ಯಾರಾಗ' ಬೆಲೆ ೧ ರೂ.

(ಈ) ಎ. ಎನ್. ಮೂರ್ತಿರಾವ್ ಅವರ 'ಹಗಲುಗನಸುಗಳು' ಬೆಲೆ ೧೨ ಆಣೆ

(ಉ) ಶ್ರೀ ದಿವಾಕರ ರಂಗರಾಯರ 'ಅಂತರಾತ್ಮನಿಗೆ' ಬೆಲೆ ೮ ಆಣೆ

(ಊ) ವಿಲಾಸಿ (ಶ್ರೀರಂಗ) ಇವರ 'ಕಮಲಪಾಶಾ'

**(೩) ಸಂಸ್ಕೃತಿ**

ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರ 'ಕರ್ನಾಟಕ ಜನತೆಯ ಸಂಸ್ಕೃತಿ' ಬೆಲೆ ೧ ರೂ.

ಪರೀಕ್ಷೆಗೆ ಎರಡು ಪ್ರಶ್ನಪತ್ರಿಕೆಗಳು. ತೆರ ೧ ರೂಪಾಯಿ ಕಟ್ಟಬೇಕು.

**III ಮೂರನೆಯ (ಪ್ರೌಢ) ಪರೀಕ್ಷೆ**—ಕನ್ನಡದಲ್ಲಿ ಮೇಲ್ಮಟ್ಟದ ಜಾಣ್ಮೆಯನ್ನು ಉಂಟುಮಾಡುವುದು.

ಪಾಠ ಪುಸ್ತಕಗಳು—

**(೧) ಸಾಹಿತ್ಯ**

ನಾಟಕ:

(ಅ) ಬಸಪ್ಪಶಾಸ್ತ್ರಿಗಳ 'ಶಾಕುಂತಲ' ಬೆಲೆ ೧ ರೂ.

(ಆ) ಶ್ರೀಯವರ 'ಅಶ್ವತ್ಥಾಮನ್' ಬೆಲೆ ೧ ರೂ.

(ಇ) 'ವಿಗಡ ವಿಕ್ರಮರಾಯ' (ಸಂಸ ವಿರಚಿತ) ಬೆಲೆ ೧೨ ಆಣೆ

(ಈ) ಶ್ರೀನಿವಾಸಮೂರ್ತಿಗಳ 'ನಾಗರಿಕ' ಬೆಲೆ ೧೨ ಆಣೆ

(ಉ) ಕೆ. ಎಸ್. ಕಾರಂತರವರ 'ಮುಕ್ತದ್ವಾರ' ಬೆಲೆ ೧೨ ಆಣೆ

ಕಾವ್ಯ:

(ಅ) ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ಬಾವುಟ' ಬೆಲೆ ೫ ರೂ.

(ಆ) 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಬೆಲೆ ೧೨ ಆಣೆ

(ಇ) 'ಪಂಪ ರಾಮಾಯಣ ಸಂಗ್ರಹ' ಬೆಲೆ ೧೨ ಆಣೆ

(ಈ) ಪಿ. ಜಿ. ಹಳಕಟ್ಟಿಯವರ 'ನೈತಿಕ ಮತ್ತು ಭಕ್ತಿಯ ವಚನಗಳು' ಬೆಲೆ ೧ ರೂ.

ಗದ್ಯ:

(ಅ) 'ರಾಮಾಶ್ವಮೇಧ' (೫ನೆಯ ಆಶ್ವಾಸ) ಬೆಲೆ ೧ ರೂ. ೮ ಆ.

(ಆ) ಸಿ. ಕೆ. ವೆಂಕಟರಾಮಯ್ಯನವರ 'ಬುದ್ಧ' ಬೆಲೆ ೧ ರೂ. ೮ ಆಣೆ

(ಇ) ಶ್ರೀನಿವಾಸರ 'ನಾಲ್ಕು ಸಣ್ಣಕತೆಗಳು' ಬೆಲೆ ೬ ಆಣೆ

(ಈ) ಕೃಷ್ಣಶರ್ಮ ಬೆಟಗೇರಿಯವರ 'ಅಶಾಂತಿ ಪರ್ವ' ಬೆಲೆ ೧ ರೂ. ೮ ಆ.

(ಉ) ಕೆ. ವಿ. ಪುಟ್ಟಪ್ಪನವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಬೆಲೆ ೬ ರೂ.

ಅಥವಾ

ಮುಳಿಯ ತಿಮ್ಮಪ್ಪಯ್ಯನವರ 'ಆದಿಪುರಾಣ ಸಂಗ್ರಹ' ಬೆಲೆ ೧ ರೂ.

**(೨) ವ್ಯಾಕರಣ, ಭಾಷಾ ಚರಿತ್ರೆ, ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆ**

(ಅ) 'ಕನ್ನಡ ಕೈಪಿಡಿ' ೧ನೆಯ ಸಂಪುಟ

(ಆ) ಆರ್. ನರಸಿಂಹಾಚಾರ್ಯರ 'ಕವಿಚರಿತೆ'

(ಇ) ಡಿ. ವಿ. ಗುಂಡಪ್ಪನವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ'

**(೩) ಸಂಸ್ಕೃತಿ ಮತ್ತು ಚರಿತ್ರೆ**

(ಅ) ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ'

(ಆ) ಕೆ. ಕೃಷ್ಣಯ್ಯಂಗಾರ್ಯರ 'ಭಾರತೀಯ ಇತಿಹಾಸ ಪ್ರವೇಶಿಕಾ'

(ಇ) ದ. ಕೃ. ಭಾರದ್ವಾಜರವರ 'ಕರ್ನಾಟಕದ ಕೈಪಿಡಿ'

ಈ ಪರೀಕ್ಷೆಗೆ ಪ್ರಶ್ನಪತ್ರಿಕೆಗಳು ಮೂರು. ತೆರ ೨ ರೂಪಾಯಿ, ಕಟ್ಟಬೇಕು.

ಕಲಿತವರಾದ ಕನ್ನಡಿಗರು ಕನ್ನಡ ನಾಡಿನ ದೊಡ್ಡ ಹಳ್ಳಿಗಳಲ್ಲಿಯೂ, ಹಿರಿಯೂರುಗಳಲ್ಲಿಯೂ, ಕನ್ನಡ ಕೂಟಗಳನ್ನೇರ್ಪಡಿಸಿ, (ಕರ್ನಾಟಕ ಸಂಘಗಳು) ಈ ಪರೀಕ್ಷೆಗಳಿಗಾಗಿ ಪಾಠಗಳನ್ನು ನಡಸಿದರೆ ತಡವಿಲ್ಲದೆ ಕನ್ನಡ ಸಾಹಿತ್ಯ ಪರಿಷತ್ತು ನಾಡವರ 'ವಿದ್ಯಾಪೀಠ' ವಾಗುವುದು. ಹಣವುಳ್ಳವರು ವಿದ್ಯೆ ಹರಡುವಂತೆ ನೆರವಾದರೆ ಪರಿಷತ್ತಿನ ಗುರಿ ಬೇಗನೆ ಈಡೇರುವುದು.

**ಬಿ. ಎಂ. ಶ್ರೀಕಂಠಯ್ಯ**
ಉಪಾಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು ನಗರ
೨೬-೧-೧೯೪೦

## ಪರಿಷತ್ತಿನ ಸುದ್ದಿ

ಹೋದ ವರ್ಷ ಕಾರ್ಯಸಮಿತಿಯಲ್ಲಿ ಅರಮನೆಯ ಪ್ರತಿನಿಧಿಗಳಾಗಿದ್ದ ಶ್ರೀ ಎಲ್. ರಾಮರಾವ್, ಎಂ.ಎ., ಎಫ್.ಜಿ.ಎಸ್. ಅವರು ಪ್ರಸಕ್ತ ವರ್ಷಕ್ಕೂ ಪ್ರತಿನಿಧಿಗಳಾಗಿ ನೇಮಕವಾಗಿರುತ್ತಾರೆ.

**ಕೃತಜ್ಞತೆ**

ಈ ಸಂಚಿಕೆಯಲ್ಲಿ ಪ್ರಕಟಿಸಿರುವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಪಡಿಯಚ್ಚನ್ನು 'ತಾಯಿನಾಡು' ಕಚೇರಿಯವರು ಎರವಲಾಗಿ ಕೊಟ್ಟಿರುತ್ತಾರೆ.

## ಕನ್ನಡ ಸುದ್ದಿ

**ಬೆಂಗಳೂರು**

ಇಲ್ಲಿಯ ವಿಶ್ವವಿದ್ಯಾನಿಲಯ ಸಂಘದವರು ಏರ್ಪಡಿಸಿದ್ದ ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕ ಚರ್ಚಾ ಸ್ಪರ್ಧೆಯು ೨೪ನೆಯ ತಾ॥ ಸರ್ ಪುಟ್ಟಣ್ಣ ಶೆಟ್ಟರವರ ಪುರಭವನದಲ್ಲಿ ನಡೆಯಿತು. "ಜ್ಞಾನದಿಂದ ಆಗಿರುವಷ್ಟು ಅನರ್ಥ ಅಜ್ಞಾನದಿಂದ ಆಗಿಲ್ಲ" ಎಂಬುದೇ ಚರ್ಚೆಯ ವಿಷಯವಾಗಿತ್ತು. ಬೆಂಗಳೂರು, ಧಾರವಾಡ, ಮೈಸೂರು ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ಶ್ರೀಗಳಾದ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಸಿ. ಕೆ. ವೆಂಕಟರಾಮಯ್ಯನವರು ಪರೀಕ್ಷಕರಾಗಿದ್ದರು. ಸ್ಪರ್ಧೆಯಲ್ಲಿ ಧಾರವಾಡದ ಕರ್ನಾಟಕ ಕಾಲೇಜಿಗೆ ಪರ್ಯಾಯ ಪಾರಿತೋಷಕವೂ, ಉತ್ತಮಭಾಷಣಕ್ಕಾಗಿ ಪ್ರಥಮಬಹುಮಾನ ಬೆಂಗಳೂರು ಸೆಂಟ್ರಲ್ ಕಾಲೇಜಿನ ಶ್ರೀ ಎಂ. ಶಂಕರ ಅವರಿಗೂ, ದ್ವಿತೀಯ ಬಹುಮಾನ ಧಾರವಾಡದಿಂದ ಬಂದಿದ್ದ ಶ್ರೀ ಜಬ್ಬಿಯವರಿಗೂ, ತೃತೀಯ ಬಹುಮಾನ ಮೆಡಿಕಲ್ ಸ್ಕೂಲಿನ ಶ್ರೀ ಆರ್. ಎ. ಗುಂಡಪ್ಪನವರಿಗೂ ದೊರೆತವು. ಸ್ಪರ್ಧೆಯು ಬಹಳ ಯಶಸ್ವಿಯಾಗಿ ಜರುಗಿತು.

**ಮೈಸೂರು**

ಮಹಾರಾಜರವರ ಕಾಲೇಜು ಕರ್ನಾಟಕ ಸಂಘದ ವಾರ್ಷಿಕೋತ್ಸವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ತಾ॥ ೨೮-೧-೪೦ನೆಯ ಭಾನುವಾರ ನಡೆಯಲಿದೆ.

**ಆನೆಕಲ್ :**

ಇಲ್ಲಿಯ ಕರ್ನಾಟಕ ಸಂಘದ ಆಶ್ರಯದಲ್ಲಿ ಈ ತಿಂಗಳು ಕೊನೆಯ ವಾರದಲ್ಲಿ ಬೆಂಗಳೂರಿನ ಕೆಲವು ಸಾಹಿತಿಗಳು ೪-೫ ಉಪನ್ಯಾಸಗಳನ್ನು ಕೊಡುತ್ತಾರೆಂದು ಗೊತ್ತಾಗಿದೆ. ಶ್ರೀಮಾನ್ ಆರ್. ಸುಬ್ಬರಾಯರೂ, ಶ್ರೀ॥ ಶಿವರಾಮನ್‌ರವರೂ ಈ ಏರ್ಪಾಡಿನಲ್ಲಿ ನಿರತರಾಗಿದ್ದಾರೆ.

**ಮೇಲುಕೋಟೆ :**

ಇಲ್ಲಿಯ ಕನ್ನಡ ಸಂಘದ ವಾರ್ಷಿಕೋತ್ಸವವು ತಾ॥ ೧೭-೧-೪೦ನೇ ದಿನ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಯಿತು. ಶ್ರೀ॥ ದ. ರಾ. ಬೇಂದ್ರೆಯವರು ಭಾಷಣ ಮಾಡಿದರು.

**ಶಿವಮೊಗ್ಗಾ :**

ಇಲ್ಲಿಯ ಕರ್ನಾಟಕ ಸಂಘದ ೯ನೆಯ ವಾರ್ಷಿಕೋತ್ಸವದ ಅಂಗವಾಗಿ ತಾ॥ ೪—೨—೪೦ನೆಯ ಬೆಳಿಗ್ಗೆ ಶಿವಮೊಗ್ಗ ಜಿಲ್ಲೆಯ ಲೇಖಕರ ಸಮ್ಮೇಳನವನ್ನು ಸೇರಿಸಬೇಕೆಂದು ನಿಶ್ಚಯಿಸಲಾಗಿದೆ. ಜಿಲ್ಲೆಯ ಎಲ್ಲ ಬರಹಗಾರರೂ, ಕರ್ನಾಟಕ ಸಂಘಗಳೂ ಈ ಕಾರ್ಯದಲ್ಲಿ ಸಹಕರಿಸಬೇಕಾಗಿ ಈ ಮೂಲಕ ಕೋರಿದೆ. ಸಮ್ಮೇಳನದಲ್ಲಿ ಲೇಖಕರು ತಾವು ಓದುವ ವಿಷಯವನ್ನು ದಯವಿಟ್ಟು ಜನವರಿ ೩೧ನೇ ತಾರೀಖಿನ ಒಳಗಾಗಿ ತಿಳಿಸಬೇಕಾಗಿ ಕಾರ್ಯದರ್ಶಿಗಳಾದ ಎಸ್. ವಿ. ಕೃಷ್ಣಮೂರ್ತಿರಾವ್ ಇವರು ಬಿನ್ನವಿಸುತ್ತಾರೆ.

ಶ್ರೀ॥ ಎನ್. ಆರ್. ಗಿರಿಮಾಜಿ ಎಂಬುವರಿಗೆ ಶಿಕಾರಿಪುರದ ತಾಲ್ಲೂಕು ಸಾಲೂರು ಬಳಿ ವಾರ್ಧಿಕ ಷಟ್ಪದಿಯಲ್ಲಿ ರಚಿಸಿಹ "[illegible] ಕಾಂಡ" ಎಂಬ ಒಂದು ದೊಡ್ಡ ಓಲೆಗರಿ ಗ್ರಂಥವು ದೊರೆತಿರುವ[illegible] ತಿಳಿಯಬರುತ್ತದೆ. ಕೆಳದಿಯ ಅರಸನೂ ಚೆನ್ನಮ್ಮಾಜಿಯ ದತ್ತುಪುತ್ರನೂ [illegible] ಈ ಗ್ರಂಥವನ್ನು ರಚಿಸಿದನೆಂಬೂ ಮತ್ತು ಸಾಗರಕ್ಕೆ ಸಮೀಪದಲ್ಲಿರುವ ಭೀಮನಕೋಣೆಯ ತಿಮ್ಮಪ್ಪನು ಅದನ್ನು ಬರೆದನೆಂದೂ ಗ್ರಂಥದ ಕೊನೆಯಲ್ಲಿ ಹೇಳಿದೆ. ಶಿವಮೊಗ್ಗಾ ಕರ್ನಾಟಕ ಸಂಘದವರು ಈ ವಿಚಾರದಲ್ಲಿ ಪರಿಶೀಲನೆ ನಡೆಸುವವರಾಗಿದ್ದಾರೆಂದು ತಿಳಿಯಬರುತ್ತದೆ.

**ತಾಂಡೂರ :**

ಇದು ನೈಜಾಮ್ ಪ್ರಾಂತದ ದೊಡ್ಡ ವ್ಯಾಪಾರದ ಸ್ಥಳವಾಗಿದ್ದು ಕರ್ನಾಟಕದ ಮೇರೆಯಲ್ಲಿದೆ; ಇಲ್ಲಿಯ ವಿಶೇಷ ಜನರು ಕನ್ನಡಿಗರಾಗಿದ್ದರೂ ಪರಭಾಷೆಯ ಪ್ರಾಬಲ್ಯದಿಂದ ಮಾತೃಭಾಷೆಯ ಮಹತ್ವವನ್ನು ಮರೆತಿರುವರು. ಇಲ್ಲಿಗೆ ಹೊಸದಾಗಿ ಬಂದ ಹೈದರಾಬಾದಿನ ತರುಣ ವಕೀಲರಾದ ಶ್ರೀ ಕನಕಗಿರಿ ರಾಘವೇಂದ್ರರಾಯರು ಇಲ್ಲಿಯ ಪರಿಸ್ಥಿತಿಯನ್ನರಿತು, ಮನಸೊಂದು ಕನ್ನಡದ ಹಿರಿಮೆ ಹೆಗ್ಗಳಿಕೆಯನ್ನು ಇಲ್ಲಿಯ ಕನ್ನಡ ತರುಣರಿಗೆ ಮನನಮಾಡಿಸುವುದಕ್ಕಾಗಿ ಒಂದು "ನಿಜಾಮ ಕರ್ನಾಟಕ ತರುಣರ ತಂಡ"ವೆಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರ ದ್ವಾರಾ ವಾಚನಾಲಯವನ್ನು ನಡಸಿಕೊಂಡು ಕನ್ನಡಿಗರು ಒಂದೆಡೆ ಕೂಡಿ ಕನ್ನಡ ಭಾರತಿಯ ರಸವನ್ನುಣ್ಣುವಂತೆ ಮಾಡಿದ್ದಾರೆ. ಇಲ್ಲಿಯ ಪ್ರಮುಖ ಕನ್ನಡಿಗರ ಸಹಾಯದಿಂದ ಒಂದು ಕನ್ನಡ ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸುವರೆಂದು ತಿಳಿಯುತ್ತೇವೆ.

**ಸಿರ್ಸಿ :**

ಶ್ರೀಮಾನ್ ದೇಶಾಯಿ ಪಾಂಡುರಂಗರಾಯರು ಈ ತಾಲ್ಲೂಕಿನಲ್ಲಿ ಒಂದು ತಿಂಗಳಿಂದಲೂ ಪ್ರಾಚೀನ ಸಂಶೋಧನೆಯನ್ನು ಮಾಡುತ್ತಿರುವರು. ಅನೇಕ ಪುರಾತನ ಶಿಲಾಶಾಸನಗಳೂ ತಾಮ್ರಶಾಸನಗಳೂ ದೊರೆತಿವೆ. ಇವುಗಳಿಂದ ಕನ್ನಡ ದೇಶದ ವಿಷಯವಾಗಿ ಮಹತ್ವದ ಸಂಗತಿಗಳು ಹೊರಬೀಳಬಹುವೆಂದು ಊಹಿಸಲಾಗಿದೆ.

**ತುಮಕೂರು :**

ಇಲ್ಲಿಯ ಕರ್ನಾಟಕ ಸಂಘದ ಆಶ್ರಯದಲ್ಲಿ ಈ ತಿಂಗಳು ೨೮ನೇ ತಾರೀಖು ಭಾನುವಾರ ಸಾಯಂಕಾಲ ಪುರಭವನದಲ್ಲಿ ಶ್ರೀ. ಕೆ. ವಿ. ರಾಘವಾಚಾರ್ ಎಂ.ಎ. ಬಿ.ಟಿ. ಅವರು ಜನ್ನಕವಿಯ ಯಶೋಧರ ಚರಿತ್ರೆ ಎಂಬ ವಿಷಯವಾಗಿ ಭಾಷಣ ಮಾಡುವರು.

---

## ಧಾರವಾಡ ಜಿಲ್ಲೆಯ ೪ನೆಯ ಸಾಹಿತ್ಯ ಸಮ್ಮೇಳನ, ನವಲಗುಂದ ಬಿನ್ನಹ

ನವಲಗುಂದದ ಗವಿಮಠದ ಶ್ರೀ ಬಸವಲಿಂಗಸ್ವಾಮಿಗಳವರ ಪ್ರೇರಣೆಯಿಂದಲೂ, ಉತ್ತರ ಕರ್ನಾಟಕ ಪ್ರಾಂತಸಮಿತಿಯವರ ಸಹಕಾರದಿಂದಲೂ, ಇಲ್ಲಿಯ ಮಹಾಜನರ ಧನಸಹಾಯದಿಂದಲೂ ನಮ್ಮ ಜಿಲ್ಲೆಯ ನಾಲ್ಕನೆಯ ಸಾಹಿತ್ಯ ಸಮ್ಮೇಲನವನ್ನು ಬರಲಿರುವ ಫೆಬ್ರುವರಿ ತಿಂಗಳ ೪ನೆಯ ಮತ್ತು ೫ನೆಯ (ರವಿವಾರ - ಸೋಮವಾರ) ತಾರೀಖುಗಳಲ್ಲಿ ಈ ಊರಿನಲ್ಲಿ ನೆರವೇರಿಸಬೇಕೆಂದು ಗೊತ್ತುಪಡಿಸಿದೆ. ಈ ಸಮ್ಮೇಲನದ ಉಪಾಂಗಗಳಾಗಿ ಕವಿ - ನಾಟ್ಯ - ಮಹಿಳಾ ಗೋಷ್ಠಿಗಳೂ, ಕಲಾಪ್ರದರ್ಶನವೂ ನಡೆಯಲಿವೆ. ಹೆಚ್ಚಾಗಿ ಒಕ್ಕಲುಮಕ್ಕಳಿಂದ ತುಂಬಿರುವ ನವಲಗುಂದದಂತಹ ಊರಿನಲ್ಲಿ ಈ ಬಗೆಯ ಸಮ್ಮೇಲನವು ಮೊದಲನೆಯ ಬಾರಿಯೆ ಸೇರಲಿದೆ. ಆ ಸಮಯದಲ್ಲಿ ವಿಧವಿಧವಾದ ಜನಮನೋರಂಜನದ ಕಾರ್ಯಕ್ರಮಗಳು ನಡೆಯುವುವು. ಕನ್ನಡ ನಾಡಿನ ಸಾಹಿತ್ಯಕ್ಷೇತ್ರದಲ್ಲಿ ದುಡಿಯುತ್ತಿರುವವರೆಲ್ಲರೂ ದಯವಿಟ್ಟು ಇಲ್ಲಿಗೆ ಬಂದು, ನಮ್ಮೊಡನೆ ಸಹಕರಿಸಿ, ಸಮ್ಮೇಲನವು ಸೊಗಸಾಗಿ ಜರುಗುವಂತೆ ನೋಡಿಕೊಳ್ಳಬೇಕಾಗಿ ಇಲ್ಲಿಯ ಸ್ವಾಗತಸಮಿತಿಯವರ ಬಿನ್ನಹವು.

ಬೆಳಗಾಂವಿಯ ಲಿಂಗರಾಜ ಮಹಾವಿದ್ಯಾಲಯದ ಮುಖ್ಯೋಪಾಧ್ಯಾಯರಾದ ಡಾಕ್ಟರ ನಂದೀಮಠ ಇವರು ಸಾಹಿತ್ಯಸಮ್ಮೇಲನಕ್ಕೂ ಶ್ರೀಮಾನ್ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಕವಿಗೋಷ್ಠಿಗೆ, ಅಧ್ಯಕ್ಷರಾಗಲು ಒಪ್ಪಿದ್ದಾರೆ.

**ಡಿ. ಗಂಗಾಧರನ್**
ಸ್ವಾಗತ ಸಮಿತಿಯ ಅಧ್ಯಕ್ಷರು.

ಸಮ್ಮೇಲನದ ಕಾರ್ಯದರ್ಶಿಗಳು
೧ ಮಲ್ಲನಗೌಡ ಚ. ಪಾಟೀಲ.
೨ ರಾಮಚಂದ್ರ ನಾ. ಗೋಸಾವಿ.
೩ ಪೋದ್ದಾರ ರಂಗಪ್ಪ.

ಮಹಿಳಾಗೋಷ್ಠಿಯ ಕಾರ್ಯದರ್ಶಿಗಳು
ಶ್ರೀಮತಿ ಸುಬ್ಬಾಬಾಯಿ ಕಿರಿಜಂತ
,, ಶಾಂತಾದೇವಿ ಮಾಳವಾಡ

---

(೧೩೯ನೆಯ ಪುಟದಿಂದ ಮುಂದುವರಿದುದು)

ಪ್ರೇಮಗುಣಗಳಿಂದ ಮಾನವನು ಕೆಲಸ ಮಾಡಿದರೆ ನಾಗರಿಕತೆಯ ಜ್ಯೋತಿಯು ಪ್ರಪಂಚಕ್ಕೆ ಬೆಳಕನ್ನುಂಟುಮಾಡುತ್ತದೆ."

ಸರ್ ಚಾರಲ್ಸ್ ಟಾಡ್‌ಹಂಟರ್ರವರು ಉಪಸಂಹಾರ ಭಾಷಣ ಮಾಡುತ್ತಾ ನಾಗರಿಕ ಶಿಕ್ಷಣ ಇಂದಿನ ಜನರಿಗೆ ಅತ್ಯಾವಶ್ಯಕವೆಂದೂ ಅದರಿಂದ ಪರಿಸ್ಥಿತಿ ಉತ್ತಮಗೊಳ್ಳುವುದೆಂದೂ ಹೇಳಿದರು.

ಡಾ॥ ಕೆ. ಎನ್. ವಿ. ಶಾಸ್ತ್ರಿಗಳು ವಂದನಾ ಸಮರ್ಪಣೆ ಮಾಡಿ ಈ ಹೊಸ ಸಂಸ್ಥೆಗೆ ಜನರು ಹೆಚ್ಚಾಗಿ ಸೇರಬೇಕೆಂದು ಕೋರಿದರು.

೧೭-೪೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು




ಸಂಪುಟ ೨
ಸಂಚಿಕೆ ೧೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಫೆಬ್ರುವರಿ ೨, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಹೃದಯ ತಳಮಳ

ರಾಗ—ಸಾವೇರಿ (ಜೋಗಿ)—ರೂಪಕತಾಳ

ದುರುಳರಡಿಗೆರಗುತಿದೆ ।
ಧರೆ ಸೂರೆಪೋಗುತಿದೆ ।
ಕರವಾಳ ಮಿರುಗುತಿದೆ ।
ಸರಿದಾರಿಯುಳಿದು ॥
ಬರಿದೆ ತಲೆತಿರುಗುತಿದೆ ।
ಕರಗಿ ಮನಮರುಗುತಿದೆ ।
ಕರಿದು ತನು ಸೊರಗುತಿದೆ ।
ಹರುಷ ಸಿರಿಯಳಿದು

ತುಡುಗು ಕೈಮಿರುತಿದೆ ।
ಕಡಿದಾಟವೇರುತಿದೆ ।
ಮಡುರಕುತ ಹರಿಯುತಿದೆ ।
ಎಡೆ ಬಿಡದಲಮ್ಮ ॥
ಬಡತನವು ಚೀರುತಿದೆ ।
ನಡು ಮುರಿದು ಉಡುಗುತಿದೆ ।
ಅಡಿಗಡಿಗೆ ಹಾರುತಿದೆ ।
ಕಿಡಿ ಪ್ರಾಣವಮ್ಮ

ಗುಡುಗು ಕಿವಿಗಿಡಿಸುತಿದೆ ।
ಕುಡಿಮಿಂಚು ಕಡುಕುತಿದೆ ।
ಸಿಡಿಲೆದೆಯನೊಡೆಯುತಿದೆ ।
ತಡೆಯಲರಿದಮ್ಮ ॥

ಪೊಡವಿ ನಡುನಡುಗುತಿದೆ ।
ಕಡಲುಕ್ಕಿ ಜಡಿಯುತಿದೆ ।
ಸುಡುಗಾಳಿ ತೀಡುತಿದೆ ।
ಮಿಡುಕಲರಿದಮ್ಮ

ಅವಿವೇಕ ಹಿರಿದಾಯ್ತು ।
ಸುವಿಚಾರ ಮರೆಯಾಯ್ತು ।
ಭವಣೆಗಳೆ ಹೊರೆಯಾಯ್ತು ।
ಅವನಿಯೊಳಗಮ್ಮ ॥
ಕವಿದ ಕಾವಿಳ ಕಳೆದು ।
ರವಿಯಂತೆ ಪೊಳೆಪೊಳೆದು ।
ಸವಿನುಡಿದು ಕೈಪಿಡಿದು ।
ಜವವೆ ನಡೆಸಮ್ಮ

ಸ್ಥಾನಮಾನ್ಯಕೆ ಮಣಿದು ।
ಮಾನಹಾನಿಗೆ ಮುನಿದು ।
ದೀನಹೀನರ ನೊಣೆದು ।
ನಾಣುಳಿದು ಕುಣಿದು ॥
ಕಾಣದಾದರು ನಿಜವ ।
ಜಾಣಿತ್ತು ರಾಮನನು ।
ಮಾಣದನಿಶವು ಕಾಯೆ ।
ರಾಣಿ ಕಾತ್ಯಾಯನೀ

—ಬೆನಗಲ್ ರಾಮರಾವ್.

---

## ಶಾರದೆಗೆ ಹರಕೆ

ಓ ಭಾರತೀ
ವಿಶ್ವಾತ್ಮ ಸ್ವಾಂತ ಸಂಭವೆ
ಸಕಲ ಚೇತನಾರಾಧನ ದೈವವೆ
ಓ ವಾಗಧಿದೇವಿ

ಓ ಗಿರಿವನಕಂದರ ನಿರ್ಝರ ಮರ್ಮರ
ಖಗ ಮೃಗ ಕೂಜನ ನಾದಶರೀರೇ
ಸುಮನೋ ವಿಹಾರೆ, ಜ್ಞಾನಮಂದಿರೆ, ಸುಂದರೀ,
ಬಾ ಈ ಸಭೆಗೋವಿ

ಓ ಪುರಾಣ ಕವಿ ವಚಃಪ್ರಭಾವ ಲಲಿತೆ
ನವಕಾವ್ಯೋದ್ಗಮ ಯೌವನ ಲಸಿತೆ
ಓ ತೇಜಸ್ವಿನಿ, ರಾಣಿ

ಓ ರಸ ಭರ ಕವಿತಾ ಪಯೋದ ದರ್ಶನ
ಮುದಿತ ರಸಿಕ ಹೃನ್ಮಯೂರವಾಹನೆ

ಓ ಸನಾತನೆ, ನಿತ್ಯನೂತನೆ, ಸೂಕ್ತಿಜೀವನೆ, ಪಾವನೆ
ಓ ಚಾರುಗತಿ ಗೀತ ವೀಣಾ ನಿಕ್ವಣಿ
ಬಾ ಕನ್ನಡ ನಾಡಿನ ವಾಣಿ

ಓ ಮಧುರ ಮನೋಹರ ಭಾವ ವಿಲಾಸೆ
ಮಂಗಳಮತಿ ಶ್ರೀನಿವಾಸ ಹಾಸೆ

ಓ ಕರಲಾಲಿತ ಬಹು ಕವಿ ಶಾರಿಕೆ
ಅಂಬಿಕಾತನಯ ದತ್ತ ತಾರಕೆ

ಓ ಜನನೀ
ಆನಂದ ಸ್ತನ್ಯದಾಯಿನೀ
ಆತ್ಮ ಪೋಷಿಣೀ ಪಾರದರ್ಶಿನೀ
ಓ ಶುಭಕರಿ ಕಲ್ಯಾಣೀ
ದಯೆಗೈ ಕನ್ನಡ ವಾಣೀ

—ಪು. ತಿ. ನ.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸೇರಿದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷರಾದ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು ಮಾಡಿದ ಭಾಷಣ

(ಮುಂದುವರಿದುದು)

## ಸಹೃದಯತೆಯ ಮಿತಿ

ಸಹೃದಯರಾಗಿದ್ದು ವರ್ತಿಸಬೇಕೆಂದ ಮಾತ್ರವೇ ದೋಷಗಳ ಕಡೆಗೇ ಗಮನಕೊಡದೆ ಇರಬೇಕೆಂವರ್ಥವಲ್ಲ. ಸಹೃದಯತೆಗೂ ಒಂದು ಮಿತಿಯುಂಟು. ಸಹೃದಯತೆ ಅಂಧಶ್ರದ್ಧೆಯಾಗಿ ಪರಿಣಮಿಸಲೇ ಕೂಡದು. ಕನ್ನಡ ಸಾಹಿತ್ಯ ಹುರುಳಿಲ್ಲದ ಸಾಹಿತ್ಯವೆಂಬ ಭಾವ ಹೋಗಬೇಕೆಂಬುದು ನಿಜ. ಆದರೆ ಪ್ರಪಂಚದ ಇತರ ಸಾಹಿತ್ಯಗಳಿಗೆ ಹೋಲಿಸಿ ನೋಡುವಲ್ಲಿ ಕನ್ನಡ ಸಾಹಿತ್ಯದ ಕುಂದುಕೊರತೆಗಳೇನೆಂಬುದನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ಸರಿಪಡಿಸಿಕೊಳ್ಳಬೇಕಾದುದೂ ಆಗತ್ಯವೇ. ಆದರೆ ಜನಜೀವನದ ವಿಷಯದಲ್ಲಾಗಲಿ, ಸಾಹಿತ್ಯದ ವಿಷಯದಲ್ಲಾಗಲಿ, ದೇಶಭೇದ, ಕಾಲಭೇದ, ಧ್ಯೇಯಭೇದ, ರುಚಿಭೇದಗಳಿಗೂ ಗಮನಕೊಟ್ಟು ಅವಕ್ಕನುಗುಣವಾದ ಸಹಾನುಭೂತಿಯಿಂದಲೂ ಗುಣಪಕ್ಷಪಾತದಿಂದಲೂ ವಿ ಮ ರ್ಶಿ ಸ ಬೇ ಕಾ ದು ದು ಸಹೃದಯತೆಯ ಲಕ್ಷಣ. ಈ ಬಗೆಯ ಸಹೃದಯತೆ ಒಟ್ಟಿನ ಮೇಲೆ ಈಗ ಕಡಮೆಯಾಗಿರುವುದೇ – ಸಹೃದಯರಾದ ಮಹನೀಯರು ಹಲವರಿದ್ದರೂ ಅವರ ಸಂಖ್ಯೆ ಒಟ್ಟಿನಲ್ಲಿ ಕಡಮೆಯಾಗಿರುವುದೇ— ನಮ್ಮಲ್ಲಿಯ ದೊಡ್ಡ ಕೊರತೆ.

## ಹಳೆಯ ಸಾಹಿತ್ಯ – ಹೊಸ ಸಾಹಿತ್ಯ

ಪಾಶ್ಚಾತ್ಯ ಸಾಹಿತ್ಯದ ವರ್ಚಸ್ಸು ಬಿದ್ದಮೇಲೆ ನಮ್ಮ ದೇಶದಲ್ಲಿ ಒಂದು ಬಗೆಯ ಜಾಗೃತಿಯುಂಟಾಗಿ ನವೀನ ಸಾ ಹಿ ತ್ಯ ಸೃ ಷ್ಟಿ ಪ್ರಾರಂಭವಾಯಿತು. ಕನ್ನಡ ನಾಡಿನ ಮಾನ್ಯರಾದ ಹಿರಿಯರು ಉತ್ತಮ ಗ್ರಂಥಗಳನ್ನು ರಚಿಸಿ, ಹಲವು ಗ್ರಂಥಗಳನ್ನು ಭಾಷಾಂತರ ಮಾಡಿ ತರುಣರಿಗೆ ದಾರಿ ತೋರಿದರು. ಹಿರಿಯರೂ ಕಿರಿಯರೂ ಸರಳ ರಗಳೆ ಮುಂತಾದ ನವೀನ ಛಂದಸ್ಸಿನಲ್ಲಿ ಕವನಗಳನ್ನು ಬರೆದೂ ಬರೆಯುತ್ತಲೂ ಇದ್ದಾರೆ. ಪದ್ಯ ಕಾವ್ಯಗಳು, ಗದ್ಯಕಾವ್ಯಗಳಾದ ನೀಳ್ಕತೆಗಳು, ಸಣ್ಣಕತೆಗಳು, ನಾಟಕಗಳು, ವಿಮರ್ಶಾತ್ಮಕ ಗ್ರಂಥಗಳು, ಶಿಶುಸಾಹಿತ್ಯ, ಹರಟೆಗಳು, ಪ್ರಬಂಧಗಳು, ಕಾದಂಬರಿಗಳು ಮುಂತಾದುವು ರಚಿತವಾಗಿವೆ. ಹಳೆಯ ಛಂದಸ್ಸಿನ ಮತ್ತು ಹೊಸ ಛಂದಸ್ಸಿನ ಪದ್ಯಕಾವ್ಯಗಳು ರಚಿತವಾಗಿವೆ. ಅನೇಕ ಸಂಘಗಳೂ ಸಂಸ್ಥೆಗಳೂ ಕನ್ನಡದ ಸೇವೆ ಮಾಡುತ್ತಿವೆ. ಎಲ್ಲಿ ನೋಡಿದರೂ ಕನ್ನಡದ ಮೇಲಿನ ಪ್ರೇಮ ವೃದ್ಧಿಯಾಗುತ್ತಿದೆ. ಶ್ರಮವನ್ನೂ ವೆಚ್ಚವನ್ನೂ ನೋಡದೆ ಗ್ರಂಥಕರ್ತರೂ, ಗ್ರಂಥಪ್ರಕಾಶಕರೂ, ಪತ್ರಿಕಾಕರ್ತರುಗಳೂ ಕನ್ನಡದ ಮೇಲಿನ ಮಮತೆಯಿಂದ ದುಡಿಯುತ್ತಿದ್ದಾರೆ. ಯಾವ ನಾಡಿನವರು ಬೇಕಾದರೂ ಹರ್ಷಿಸಬಹುದಾದ ಮಟ್ಟಿನ ಮತ್ತು ಹೆಮ್ಮೆಪಡಬಹುದಾದ ಮಟ್ಟಿನ ಯೋಗ್ಯತೆಯುಳ್ಳ ಶ್ರೇಷ್ಠವಾದ ಪದ್ಯಗದ್ಯ ಗ್ರಂಥಗಳು ಹಲವು ಹುಟ್ಟಿವೆ. ಹೀಗಾಗಿರುವುದು ಕನ್ನಡ ನಾಡಿನ ಭಾಗ್ಯ.

ಹೊಸದಾಗಿ ಯಾವುದೇ ಪ್ರಯೋಗ ಪರೀಕ್ಷೆ ನಡೆದರೂ ಪೂರ್ವ ಸಂಪ್ರದಾಯ ಪ್ರೇಮಿಗಳಿಗೂ ಸ್ವಾತಂತ್ರ್ಯ ಪ್ರೇಮಿಗಳಿಗೂ ವಿರೋಧ ತಪ್ಪದು; ಅದು ಸಹಜವೂ ಹೌದು. ಇಂದು ಜಗತ್ತಿನಲ್ಲಿ ಮಾನ್ಯರಾಗಿರುವ ಡಾಕ್ಟರ್ ರವೀಂದ್ರನಾಥ ಠಾಕೂರರು ತಮ್ಮ ನೂತನ ವಿವಿಧ ಕೃತಿಗಳನ್ನು ರಚಿಸಿದ ಮೇಲೆ ಬಹುಕಾಲ ಬಹುಜನ ಬಂಗಾಳಿಗಳೇ ಅವುಗಳ ಮೇಲೆ ತೀಕ್ಷ್ಣವಾದ ಟೀಕೆಮಾಡಿ ಆಕ್ಷೇಪಿಸಿದರಂತೆ. ಅವು ಅರ್ಥವಿಲ್ಲದ ಕಗ್ಗಗಳೆಂದು ಹಲವರು ಹೇಳಿದರಂತೆ. ಅವು ಅನರ್ಥಕಾರಿಗಳೆಂದು ಮತ್ತೆ ಕೆಲವರು ದೂರಿದರಂತೆ. ಅದನ್ನೆಲ್ಲ ಡಾಕ್ಟರ್ ರವೀಂದ್ರನಾಥ ಠಾಕೂರರೇ ವರ್ಣಿಸಿ ಕೊನೆಗೆ "ಇಷ್ಟಕ್ಕೂ ನನ್ನ ಕೃತಿಗಳನ್ನು ನನ್ನ ದೇಶಬಾಂಧವರೆಲ್ಲರೂ ಒಪ್ಪಿ ಪೂರ್ಣವಾಗೇನೂ ಅಂಗೀಕರಿಸಿಲ್ಲ. ಅದೂ ಒಂದು ಒಳ್ಳೆಯದೇ. ಏಕೆಂದರೆ ಸಮಸ್ತರಿಂದಲೂ ಪೂರ್ಣ ಶ್ಲಾಘನೆ ದೊರೆಯುವದರಷ್ಟು ಮಟ್ಟಿಗೆ ಮನಸ್ಸಿನ ಮೇಲೆ ದುಷ್ಪರಿಣಾಮವುಳ್ಳದು ಮತ್ತಾವುದೂ ಇಲ್ಲ" ಎಂದು ಹೇಳಿದ್ದಾರೆ. ಡಾಕ್ಟರ್ ರವೀಂದ್ರನಾಥ ಠಾಕೂರರವರಿಗೇ ಆ ಗತಿಯಾದ ಮೇಲೆ ಉಳಿದವರ ಪಾಡೇನು? ಕವಿ ರಾಘವಾಂಕನು ಮೊಟ್ಟಮೊದಲು ಷಟ್ಪದಿಯಲ್ಲಿ ಗ್ರಂಥರಚನೆ ಮಾಡಿದಾಗ ಪೂರ್ವಸಂಪ್ರದಾಯ ಪ್ರೇಮಿಗಳ ವಿರೋಧಕ್ಕೆ ಗುರಿಯಾಗಿರಲೇ ಬೇಕಲ್ಲವೆ? ಹಿಂದೆ ಹೊಸದಾಗಿದ್ದುದು ಇಂದು ಹಳೆಯದು. ಆದಕಾರಣ ಉಭಯಪಕ್ಷಗಳವರೂ ಪರಸ್ಪರವಾಗಿ ಗೌರವವನ್ನೂ ಪ್ರೀತಿಯನ್ನೂ ತೋರಬೇಕಾದುದೇ ಧರ್ಮ. ಮತಿಭೇದವಾಗಲಿ, ಮತಭೇದವಾಗಲಿ ಇದ್ದ ಮಾತ್ರವೇ ಹೃದಯಗಳೇಕೆ ಸಾಮರಸ್ಯಗೆಡಬೇಕೋ ತಿಳಿಯದು. "ಲೋಕೋ ಭಿನ್ನರುಚಿಃ" ಎಂಬುದರ ಮರ್ಮವನ್ನು ಪೂರ್ವಸಂಪ್ರದಾಯ ಪ್ರೇಮಿಗಳು ಅರಿತುಕೊಂಡರೆ, ಸ್ವಾತಂತ್ರ್ಯಪ್ರೇಮಿಗಳು ತಾವು ಸ್ವಾತಂತ್ರ್ಯವನ್ನು ಬಯಸುವುದರ ಹಿಂದೆಯೇ ಇತರರ ಸ್ವಾತಂತ್ರ್ಯವನ್ನುಳಿಸಿ ಅವರಿಗೆ ಬೇಕಾದುದರಲ್ಲಿ ಅವರು ಆಸಕ್ತಿಯನ್ನು ತೋರುವುದು ಸಹಜವೇ ಹೊರತು ಅದರಲ್ಲಿ ತಪ್ಪಿಲ್ಲವೆಂಬುದನ್ನು ಗ್ರಹಿಸಿದರೆ, ಉಭಯತ್ರರೂ ಅದಕ್ಕನುಗುಣವಾಗಿ ವರ್ತಿಸಿದರೆ, ಸಾಮರಸ್ಯತಪ್ಪಿ ವೈಮನಸ್ಸುಂಟಾಗಲು ಕಾರಣವೇ ಇಲ್ಲ. ಹಾಗೆ ವರ್ತಿಸಿ ಸಹೃದಯತೆಯನ್ನು ತೋರುವವರೂ ನಮ್ಮಲ್ಲಿದ್ದಾರೆ. ಈ ರೀತಿ ಸಹೃದಯತೆಯನ್ನು ತೋರದಿರುವವರೂ ನಮ್ಮಲ್ಲಿದ್ದಾರೆ. ಉಭಯ ಪಕ್ಷಗಳಲ್ಲಿ ಪ್ರತಿಯೊಂದರಲ್ಲಿಯೂ ಈ ಎರಡು ಬಗೆಗಳವರೂ ಇದ್ದಾರೆ. ನಿತ್ಯ ಯೌವನೆಯಾಗಿ ಬಾಡದ ಬಿಳಿಯ ಕಮಲದಮೇಲೆ ಕುಳಿತಿರುವ ವೀಣಾಪುಸ್ತಕ ಧಾರಿಣಿಯಾದ ಸರಸ್ವತಿಯ ಆಭರಣಗಳಲ್ಲಿ ವೈವಿಧ್ಯವಿರುವುದು ಆವಶ್ಯಕವೆಂಬುದನ್ನು ಸಮಸ್ತರೂ ಮನಗಂಡು ವರ್ತಿಸುವುದು ಮೇಲು.

ಹಳೆಯ ಸಂಪ್ರದಾಯದಲ್ಲಾಗಲಿ, ಹೊಸ ಸಂಪ್ರದಾಯದಲ್ಲಾಗಲಿ, ಪದ್ಯದಲ್ಲಾಗಲಿ, ಗದ್ಯದಲ್ಲಾಗಲಿ ಉತ್ತಮವಾದ ಕಾವ್ಯವನ್ನು ಬರೆಯುವುದು ಅತ್ಯಂತ ಕಷ್ಟವಾದ ಕೆಲಸ. ಅದಕ್ಕೆ ಮನುಷ್ಯ ಪ್ರಯತ್ನವೂ ಸರಸ್ವತಿಯ ಅನುಗ್ರಹವೂ ಎರಡೂ ಬೇಕು. ಕೊನೆಯ ಪಕ್ಷ ಉದ್ದಾಮ ಪಾಂಡಿತ್ಯ, ಬಹುಮುಖವಾದ ಅನುಭವ, ಇವೆರಡಾದರೂ ಬೇಕು. ಇದನ್ನರಿಯದೆ ತಕ್ಕಷ್ಟು ಪರಿಶ್ರಮವಿಲ್ಲದ ಅನಧಿಕಾರಿಗಳಾದ ಅನೇಕರು ಹೊಸ ಛಂದಸ್ಸಿನ ಅನುಕೂಲವನ್ನು ದುರುಪಯೋಗ ಪಡಿಸಿಕೊಂಡು ಹೊಸ ಛಂದಸ್ಸಿನ ಪದ್ಯಗಳನ್ನು ಬರೆಯಲುಪಕ್ರಮಿಸಿರುವುದರಿಂದ ಹಗರಣವಾಗುತ್ತಿದೆ. ನಮ್ಮಲ್ಲಿ ಹೊಸ ಛಂದಸ್ಸಿನ ಮತ್ತು ಹಳೆಯ ಛಂದಸ್ಸಿನ ಉತ್ತಮ ಕಾವ್ಯಗಳು ಹಲವು ಹುಟ್ಟಿವೆಯೆಂದು ಸಂತೋಷಪಡುವುದಕ್ಕೆ ಕಾರಣವಿದ್ದರೂ ಈ ಹಗರಣಕ್ಕಾಗಿ ವಿಷಾದಿಸುವ ಅಗತ್ಯವೂ ಉಂಟಾಗಿದೆ. ಹೀಗೆಂದಮಾತ್ರವೇ ನಾನು ಹೊಸ ಕವಿತೆಗಳ ಶತ್ರುವೆಂದು ಯಾರೊಬ್ಬರೂ ಸಹ ಭಾವಿಸಬಾರದೆಂದು ಬಿನ್ನವಿಸುತ್ತೇನೆ; ನಾನು ಯಾವ ಅಭಿಪ್ರಾಯದಿಂದ ಹೀಗೆ ಹೇಳಿರುವೆನೆಂಬುದನ್ನು ಸಹೃದಯರೆಲ್ಲರೂ ಗ್ರಹಿಸುವರೆಂದು ನಂಬಿದ್ದೇನೆ. "ಜೇನುನೊಣದಂತೆ ಅತ್ಯುತ್ತಮವಾದ ಮತ್ತು ಸೊಗಸಾದ ಹೂಗಳಿಂದ ಮಕರಂದವನ್ನು ಸಂಗ್ರಹಿಸಿ ಅದಕ್ಕೊಂದು ರುಚಿಯನ್ನೂ ಸೌರಭವನ್ನೂ ಕೊಟ್ಟು ಜೇನುತುಪ್ಪವಾಗಿ ಪರಿಣಾಮಗೊಳಿಸಿ"* ಎಂದು ಬೆನ್ ಜಾನ್ಸನ್ ಎಂಬ ಪಾಶ್ಚಾತ್ಯ ಕವಿ ಹೇಳಿದ್ದಾನೆ. ಆತನಿಗಿಂತ ಮೊದಲೇ ನಮ್ಮವರು ಇದನ್ನೇ ಮಧುಕರ ವೃತ್ತಿಯೆಂದು ಕರೆದಿದ್ದಾರೆ. ಆದರೆ ಹೂಗಳನ್ನೇ ಹೆಚ್ಚಾಗಿ ನೋಡಿಲ್ಲದ ಜೇನುನೊಣಗಳು ಜೇನುತುಪ್ಪವನ್ನು ಕೊಡುವ ಬಗೆ ಹೇಗೆ? ಇಂದು ಪಾಶ್ಚಾತ್ಯ ಪ್ರಪಂಚದಲ್ಲಿ ಸುಪ್ರಸಿದ್ಧ ಲೇಖಕರಾದ ಶ್ರೀ. ಡಬ್ಲ್ಯು. ಸಾಮರ್ಸೆಟ್ ಮಾಗಮ್ (Mr. W. Somerset Maugham) ಅವರೂ ಸಹ ಅದೇ ಮಧುಕರ ವೃತ್ತಿಯನ್ನೇ ಬೋಧಿಸಿ ವ್ಯಾಸಂಗದ ಆವಶ್ಯಕತೆಯನ್ನು

---

* "Draw forth out of the best and choicest flowers with the bee and turn all to honey working it into one relish and savour."—*Ben Jonson.*

ಸೂಚಿಸಿದ್ದಾರೆ; ಪ್ರಕೃತಿಸಿದ್ಧವಾದ ಸಾಮರ್ಥ್ಯವಿರುವವರು ಕೂಡ ಸಂತತವಾದ ವ್ಯಾಸಂಗದಿಂದ ತಮ್ಮ ಜ್ಞಾನಭಂಡಾರವನ್ನು ವೃದ್ಧಿಪಡಿಸಿಕೊಂಡು ಅದರ ಜೊತೆಗೆ ಹೊಸ ಹೊಸ ಅನುಭವವನ್ನು ಪಡೆದಲ್ಲದೆ ಗ್ರಂಥರಚನೆಗೆ ಕೈಹಾಕಬಾರದೆಂದು ಒತ್ತಿ ಹೇಳಿದ್ದಾರೆ. ವ್ಯವಸಾಯ ಚೆನ್ನಾಗಿ ನಡೆದ ಮೇಲಲ್ಲವೇ ಬೆಳೆಯ ಸೊಂಪು! ಸಾಣೆ ಆಡಿದ ಮೇಲಲ್ಲವೇ ವಜ್ರಗಳು ಥಳಗುಟ್ಟಿ ಕಣ್ಣುಗಳನ್ನು ಕೋರೈಸುವುದು! ಬೆಳೆಯ ಸಿರಿ ಮೊಳೆಯಲ್ಲಿ ಕಾಣುವುದೆಂಬುದೂ ನಿಜವೇ. ಆದರೂ ಮೊಳೆ ಮೊಳೆಯಾಗಿಯೇ ಉಳಿದಿರುವಾಗ ಯಾವ ಬೆಳೆಯ ಹಂಬಲಿಗೆ ತಾನೆ ಅವಕಾಶವೆಲ್ಲಿ?

## ಪದ್ಯ – ಗದ್ಯ

ಮಿತ್ರರೆದುರಿಗೆ ಮನಬಿಚ್ಚಿ ಮಾತನಾಡಬಹುದಾದರೆ, ಗದ್ಯ ಲೇಖಕರಿಗೂ ಪದ್ಯ ಲೇಖಕರಿಗೂ ಕೊಂಚ ವಿರಸಭಾವವಿದ್ದೇ ಇದೆ. ಅದು "ನಾಗೋಲಿಯ ನಿಷ್ಠುರದ" ನಸುಮುನಿಸಿನಂತೆ ಸ್ವಲ್ಪಕಾಲವೇ ಇರಲೆಂದು ಹಾರೈಸೋಣ. ಗದ್ಯ ಲೇಖಕರಿಗೂ ಪದ್ಯ ಲೇಖಕರಿಗೂ ನಾವು ಅಪೇಕ್ಷಿಸುವಷ್ಟು ಸೌಹಾರ್ದವಿಲ್ಲದೆ ಹೋಗಿರುವುದು ಅನ್ಯಾಯ. ಏಕೆಂದರೆ, ಪಾಶ್ಚಾತ್ಯರಲ್ಲಿರುವಂತೆ ಪದ್ಯದಲ್ಲಿ ಬರೆದವರು ಮಾತ್ರವೇ ಕವಿಗಳೆಂಬ ಭಾವನೆಯೇ ನಮ್ಮಲಿಲ್ಲ. ಈ ವಿಚಾರದಲ್ಲಿ ನಮ್ಮವರು ಪಾಶ್ಚಾತ್ಯರಿಗಿಂತ ಬಹಳ ಮುಂದೆ ಹೋಗಿದ್ದಾರೆ. ರಸಾತ್ಮಕವಾದ ವಾಕ್ಯವೇ ಕಾವ್ಯವೆಂದು ನಿರೂಪಿಸಿ ನುಡಿವೆಣ್ಣಿನ ಎರಡು ಕಣ್ಣುಗಳಂತಿರುವ ಗದ್ಯಪದ್ಯಗಳೆರಡಕ್ಕೂ ನಮ್ಮ ಪೂರ್ವಿಕರು ನ್ಯಾಯವನ್ನು ದೊರೆಯಿಸಿದ್ದಾರೆ. ಅಷ್ಟೇ ಅಲ್ಲ. ಕವಿಯ ಸಾಮರ್ಥ್ಯಕ್ಕೆ ಆತನು ಬರೆಯುವ ಗದ್ಯವೇ ನಿಕಷವೆಂದು ಹೇಳಿ, ಕವಿಗೆ ಒರೆಗಲ್ಲಿನ ಪರೀಕ್ಷೆಯನ್ನಿಟ್ಟಿರುವುದಕ್ಕೂ ಆಳವಾದ ಅರ್ಥವಿದೆಯೆಂದು ತೋರುತ್ತದೆ. ಛಂದಸ್ಸಿನ ಸಹಾಯದಿಂದ ಹಲವು ಸಂದರ್ಭಗಳಲ್ಲಿ ಕೇಳುವವರನ್ನು ತಣಿಸಿಬಿಡಬಹುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮಾತನಾಡಬಹುದಾದರೆ, ಛಂದಸ್ಸಿನ ಸಹಾಯವಿರುವುದಾದ ಕಾರಣ ಕವಿಗೇ ಬಹುಶಃ ಅರ್ಥವಾಗಿಲ್ಲದ ಮತ್ತು ಕೇಳುವವರಿಗಂತು ಅರ್ಥವಾಗದ ಕೆಲಕೆಲವು ಭಾವಗಳೂ ಕೆಲಕೆಲವು ಪದಗಳೂ ಮಧ್ಯದಲ್ಲಿ ಬಂದರೂ ಸಹ ಒಟ್ಟಿನಲ್ಲಿ ಕವಿತೆಯಲ್ಲಿ ರಸವಿರುವ ಸಂದರ್ಭಗಳಲ್ಲಿ ಕವಿತೆಗಳನ್ನು ಹಾಡಿ ಜನರನ್ನು ಕುಣಿಸಿ ಬಿಡಬಹುದು. ಛಂದಸ್ಸಿನ ಸಹಾಯವಿಲ್ಲದ ಕಾರಣ ಸಾಮಾನ್ಯವಾಗಿ ಗದ್ಯ ಗೀತಗಂಧಿಯಾಗಿರುವುದಿಲ್ಲವಾದುದರಿಂದ, ಗದ್ಯದಿಂದ ಇದು ಸಾಧ್ಯವಿಲ್ಲ. ಹಾಗಿದ್ದೂ ಗದ್ಯದಿಂದ ಓದುವವರ–ಅಥವಾ ನಾಟಕದ ವಿಷಯದಲ್ಲಾದರೆ ನೋಡುವವರ– ಆನಂದ ಬಾಷ್ಪದ ಕಾಣಿಕೆಯನ್ನು ಪಡೆಯುವದಾದರೆ ವಿದ್ವಾಂಸರೂ ಸುಸಂಸ್ಕೃತರೂ ಆದವರಿಂದಲೇ ಆ ಕಾಣಿಕೆಯನ್ನೂ ಶ್ಲಾಘನೆಯನ್ನೂ ಪಡೆಯುವುದಾದರೆ–ಆ ಬಗೆಯ ಗದ್ಯಗಳಲ್ಲಿ ಹುರುಳಿರಬೇಕಲ್ಲವೇ? ಆ ಬಗೆಯ ಗದ್ಯಕಾವ್ಯಗಳನ್ನು ಬರೆದ ಗದ್ಯಲೇಖಕರುಗಳಿಗೂ ಸಹ ಯಥಾಯೋಗ್ಯವಾದ ಪುರಸ್ಕಾರ ದೊರೆಯಬೇಕೆಂದು ಬಯಸುವುದು ತಪ್ಪೆ? ಹೀಗೆ ಹೇಳುವುದರಲ್ಲಿ ನಾನು ಯಾವ ಬಗೆಯ ಸಂಕುಚಿತ ಭಾವವೂ ಇಲ್ಲದೆ, ಶುದ್ಧಮನಸ್ಸಿನಿಂದ, ಯಾವ ಕುತ್ಸಿತ ಭಾವವೂ ಇಲ್ಲದೆ ಹಾಗೆ ಮಾಡಿದ್ದೇನೆ. ಗದ್ಯಪದ್ಯಗಳ ವಿಷಯವಾಗಿ ನಾನು ಮುಂದೆ ಅರಿಕೆಮಾಡುವ ಅಂಶಗಳನ್ನು ಲಾಲಿಸಿದರೆ ನಿಷ್ಪಕ್ಷಪಾತವಾಗಿ ನುಡಿದಿದ್ದೇನೆಂಬುದೂ ಸ್ಪಷ್ಟವಾದೀತೆಂದು ನಂಬಿದ್ದೇನೆ. ಕವಿಗೇ ಅರ್ಥವಾಗಿಲ್ಲದ ಕೆಲಕೆಲವು ಪದಗಳೂ ಭಾವಗಳೂ ಕವನಗಳಲ್ಲಿರುವುದುಂಟೆಂದು ಸೂಚಿಸುವಲ್ಲಿ ಸಹ, ಯಾರ ಮನಸ್ಸಿಗಾಗಲಿ ನೋವನ್ನುಂಟುಮಾಡಬೇಕೆಂಬ ಉದ್ದೇಶದಿಂದ ನುಡಿದಿಲ್ಲ. ಬ್ರೌನಿಂಗನಂಥ ಕವಿಶ್ರೇಷ್ಠನ ಕವನಕ್ಕೂ ಅದು ತಪ್ಪಲಿಲ್ಲ. ಆತನ ಒಂದು ಕವನದಲ್ಲಿ ಅರ್ಥವಾಗದ ಒಂದು ಭಾಗಕ್ಕೆ ಆತನನ್ನೇ ಅರ್ಥವನ್ನು ಕೇಳಿದಾಗ ಆತನು "ಅವನ್ನು ಬರೆದಾಗ ಅದರ ಅರ್ಥವನ್ನು ಭಗವಂತನೂ ನಾನೂ ಇಬ್ಬರೂ ಬಲ್ಲವರಾಗಿದ್ದೆವು. ಈಗ ಅದರ ಅರ್ಥವನ್ನು ಬಲ್ಲವನು ಭಗವಂತನೊಬ್ಬನೇ" ಎಂದು ಹೇಳಿದನಂತೆ. ತೀರ ಈಚೆಗೆ ಅಚ್ಚಾದ ವಿಮರ್ಶೆಯ ಗ್ರಂಥವೊಂದರಲ್ಲಿ ಅದನ್ನು ಬರೆದ ಪಾಶ್ಚಾತ್ಯ ಲೇಖಕರೂ ಈ ಬಗೆಯ ನ್ಯೂನತೆಗಳನ್ನೇ ಎತ್ತಿ ಆಡಿದ್ದಾರೆ.

ಭಾವವೂ ಭಾಷಾಧೋರಣೆಯೂ ಎರಡೂ ಸೊಗಸಾಗಿದ್ದು ಅದರ ಜೊತೆಗೆ ಛಂದಸ್ಸೂ ಸೇರಿದ್ದರೆ, ಆಗ್ಗೆ ಆ ಕವಿತೆ ಸರ್ವೋತ್ತಮ. ಅಂಥ ಕವಿತೆಯನ್ನು ಬರೆದವನೇ ಕವಿ; ಅವನೇ ರಸಪರಮೇಷ್ಠಿ. ಭಾವವೂ ಭಾಷಾಧೋರಣೆಯೂ ಎರಡೂ ಸೊಗಸಾಗಿರುವ ಗದ್ಯವೂ ಕೂಡ ಆ ಕವಿತೆಗೆ ಸಮವಲ್ಲವೇ ಅಲ್ಲ. ಆದರೆ ಭಾವವು ಉದಾತ್ತವಾಗಿಲ್ಲದೆ ಭಾಷೆಯು ಕುಂಟುತ್ತಿದ್ದರೂ ಛಂದಸ್ಸಿನಲ್ಲಿರುವುದರಿಂದಲೇ ಅಂಥ ಪದ್ಯವನ್ನು ಕವಿತೆಯೆಂದು ಕರೆದು ಅದನ್ನು ಬರೆದವರೆಲ್ಲ ಕವಿಗಳೆಂದುಕೊಳ್ಳುವುದಾದರೆ ಮಾತ್ರ ಮತ್ತು ಅಂಥ ಪದ್ಯಗಳಿಗೆ ಮಿತಿಮೀರಿದ ಶ್ಲಾಘನೆ ದೊರೆತರೆ ಮಾತ್ರ ಅದು ನ್ಯಾಯವೆನಿಸದು. ಅವಕ್ಕೂ ಶ್ಲಾಘನೆ ಅವಶ್ಯವಾಗಿ ದೊರೆಯಲಿ. ಪ್ರೋತ್ಸಾಹ ಅವಶ್ಯವಾಗಿ ದೊರೆಯಲಿ; ತರುಣರು ಬರೆದಿದ್ದರಂತೂ "ಮುಂದಿನ ಬೆಳಕಾಗು ದೊರೆಯೆ" ಎಂದು ಬಾಯಿತುಂಬ ಹರಸಿ ಉತ್ಸಾಹವನ್ನು ತುಂಬುವ ದೊಡ್ಡ ಕೆಲಸವೂ ಅಗತ್ಯವಾಗಿ ನಡೆಯಲಿ. ಆದರೆ ಭಾವೋನ್ನತಿಯಲ್ಲಿಯೂ ಭಾಷಾಧೋರಣೆಯಲ್ಲಿಯೂ ಹೃದಯವೀಣೆಯನ್ನೇ ಮಿಡಿದಂತೆ ನುಡಿಯುತ್ತಿರುವ ಗದ್ಯಕ್ಕಿಂತ ಹೆಚ್ಚಿನ ಪ್ರಾಶಸ್ತ್ಯವನ್ನು ಅವೆರಡರಲ್ಲಿಯೂ ಬೀಳಾಗಿರುವ ಪದ್ಯಕ್ಕೆ ಕೊಡುವುದು ಮಾತ್ರ ಖಂಡಿತವಾಗಿ ಬೇಡ. ಈ ನಿಯಮವನ್ನು ಮಾತ್ರ ಅನುಸರಿಸುವುದಾದರೆ ಗದ್ಯಲೇಖಕರಿಗೂ ಪದ್ಯ ಲೇಖಕರಿಗೂ ಸೌಹಾರ್ದ ಹುಟ್ಟುತ್ತದೆ. ಈ ನಿಯಮವನ್ನು ಎಷ್ಟುಬೇಗ ಅನುಸರಿಸಿದರೆ ಅಷ್ಟು ಮೇಲು. ಮುಖ ಸುಂದರವಾಗಿರಬೇಕಾದರೆ ಕಿವಿಗಳು, ಕಣ್ಣುಗಳು, ಮೂಗು ಮುಂತಾದುವುಗಳೆಲ್ಲವೂ ಸರಿಯಾದ ಪ್ರಮಾಣದಲ್ಲಿದ್ದಲ್ಲಿ ಮಾತ್ರವೇ ಸಾಧ್ಯ. ಯಾವುದು ಅಳತೆ ಮೀರಿದರೂ ಒಟ್ಟು ಮುಖವೇ ಅಂದಗೆಡುತ್ತದೆ. ಉತ್ತಮವಾದ ಕವಿತೆಗಳು ಹೆಚ್ಚಬೇಕು; ಅವು ಯಾವ ಛಂದಸ್ಸಿನಲ್ಲಿರಲಿ ಅವುಗಳು ಎಷ್ಟು ಹೆಚ್ಚಿದರೂ ಸಾಲದು. ಅದೇ ರೀತಿ ಗದ್ಯಗ್ರಂಥಗಳೂ ಹೆಚ್ಚಬೇಕು. ವಿಜ್ಞಾನಸಂಬಂಧವಾದ ಗ್ರಂಥಗಳು ರಾಶಿಬೀಳಬೇಕು. ಕಥೆಗಳು, ಜೀವನ ಚರಿತ್ರೆಗಳು, ಕಾದಂಬರಿಗಳು, ಪ್ರಬಂಧಗಳು, ವಿಮರ್ಶೆಗಳು ಮುಂತಾದುವೆಲ್ಲ ಹೆಚ್ಚಬೇಕು. ಕಲೆಗಳೆಲ್ಲ ಬೆಳೆದು ಜೀವನವು ತುಂಬಬೇಕು. ಕನ್ನಡ ಸಾಹಿತ್ಯವು ಸೊಂಪುಗೂಡಿ ಬೆಳೆದು ಶೋಭಿಸಬೇಕು. ಅರಿವಿನ ತಿಳಿನೀರು ನಾನಾ ಕಾಲುವೆಗಳಲ್ಲಿ ಗುಳಗುಳನೆ ಹರಿದು ಬಂದು ಕನ್ನಡಿಗರೆಲ್ಲರೂ ಅದನ್ನು ಕುಡಿದು ಆನಂದಿಸಬೇಕು. ಪಾಶ್ಚಾತ್ಯ ದೇಶಗಳಲ್ಲಿ ನಿರ್ಮಾಣವಾಗುತ್ತಿರುವ ಗ್ರಂಥರಾಶಿಯನ್ನು ನೋಡಿದರೆ "ನಮ್ಮ ನಾಡಿನಲ್ಲಿ ಹೀಗಾಗುವುದೆಂದಿಗೆ ದೇವರೇ!" ಎಂದು ನಿಟ್ಟುಸಿರು ಬಿಟ್ಟು ಕೊರಗುವಂತಾಗುತ್ತದೆ.

ನಮ್ಮ ನಾಡಿನ ಸಾಹಿತ್ಯ ಅಲ್ಲಿರುವಷ್ಟು ವಿಪುಲತೆಯಿಂದಲೂ ವೈವಿಧ್ಯದಿಂದಲೂ ಕೂಡಿಲ್ಲವೆಂಬುದು ನಿಜವಾದರೂ, ನಮ್ಮ ನಾಡಿನ ಸ್ಥಿತಿಯಲ್ಲಿ ಈಗಿರುವ ಮಟ್ಟಿಗೆ ಕನ್ನಡ ಸಾಹಿತ್ಯ ಬೆಳೆದೂ ಬೆಳೆಯುತ್ತಲೂ ಇರುವುದೇ ಒಂದು ಅಚ್ಚರಿ. ಏಕೆಂದರೆ ಪಾಶ್ಚಾತ್ಯ ದೇಶಗಳಲ್ಲಿರುವ ಬಗೆಯ ಸಮಾಜವೇ ನಮ್ಮಲ್ಲಿಲ್ಲ. ಅಲ್ಲಿರುವ ಧನಾಢ್ಯತೆಯಾಗಲಿ ಅಲ್ಲಿರುವ ಜ್ಞಾನಪಿಪಾಸೆಯಾಗಲಿ ನಮ್ಮಲ್ಲಿಲ್ಲ. ನಮ್ಮದು ಮೊದಲೇ ಬಡ ನಾಡು. ಜನಸಾಮಾನ್ಯರೊ ಓದುಬರಹಗಳ ಗಂಧವಿಲ್ಲದೆ ಅಜ್ಞಾನದಲ್ಲಿ ಮುಳುಗಿದ್ದಾರೆ. ಹಣಗಾರರು ಕೆಲವರಿದ್ದರೂ ಅವರಲ್ಲಿ ಬಹುಭಾಗದವರಿಗೆ ಸಾಹಿತ್ಯದ ಮೇಲೆ ಮಮತೆಯಿಲ್ಲ. ಗ್ರಂಥಗಳನ್ನು ಪ್ರಕಟಗೊಳಿಸಿ ಉತ್ಸಾಹದಿಂದ ವಿಕ್ರಯಿಸುವ ಪ್ರಕಾಶಕರೂ ಹೆಚ್ಚಾಗಿಲ್ಲ. ಸಾವಿರ ಪ್ರತಿಗಳು ಮಾರಾಟವಾಗಬೇಕಾದರೆ ಎಷ್ಟೋ ವರ್ಷಗಳಾಗಬೇಕು. ಹೀಗಿರುವ ವಿಷಮ ಸನ್ನಿವೇಶದಲ್ಲಿ ಕೂಡ ಎಷ್ಟು ಉತ್ತಮ ಗ್ರಂಥಗಳು ಹೊರಬಿದ್ದಿವೆ! ಯಾವ ದೇಶದವರಾದರೂ ಹೆಮ್ಮೆ ಪಡಬಹುದಾದ ಎಷ್ಟು ಮುದ್ದಾದ ಕವಿತೆಗಳು ಪ್ರಕಟವಾಗಿವೆ! ಎಷ್ಟು ಜನ ಪದ್ಯಲೇಖಕರಾದ ಮತ್ತು ಗದ್ಯಲೇಖಕರಾದ ಕವಿಗಳು ತಾಯಿ ಕನ್ನಡ ದೇವಿಯನ್ನು ದಿವ್ಯ ಪರಿಮಳದ ವಿಧವಿಧದ ಹೂಗಳಿಂದ ಅಲಂಕರಿಸಿ, ತಮ್ಮ ಭಕ್ತಿಕಾಣಿಕೆಯನ್ನು ಸಮರ್ಪಿಸಿಯೂ ಸಮರ್ಪಿಸುತ್ತಲೂ ಇದ್ದಾರೆ! ಅವರ ಭಾಷಾಪ್ರೇಮವನ್ನೂ ಸ್ವಾರ್ಥತ್ಯಾಗವನ್ನೂ ನೆನೆದರೆ, ಇಂದು ಬಡ ನಾಡಾಗಿದ್ದರೂ ನಮ್ಮ ಸೊಬಗಿನ ಕನ್ನಡ ನಾಡು ತನ್ನ ಪುಣ್ಯವನ್ನು ಮಾತ್ರ ಉಳಿಸಿಕೊಂಡೇ ಇದೆಯೆಂಬ ಭಾವನೆ ಯಾವ




ಶುಕ್ರವಾರ, ಫೆಬ್ರುವರಿ ೨, ೧೯೪೦

## 'ಕುಮಾರವ್ಯಾಸ ಪ್ರಶಸ್ತಿ'ಯೂ ದಿವಂಗತ ವೆಂಕಣ್ಣಯ್ಯನವರೂ

ಮೈಸೂರು ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದವರು ತಮ್ಮ ಸಂಘದ ವಾರ್ಷಿಕೋತ್ಸವ ಸಮಯದಲ್ಲಿ 'ಕುಮಾರವ್ಯಾಸ ಪ್ರಶಸ್ತಿ'ಯನ್ನು ಪ್ರಕಟಿಸಿ ದಿವಂಗತ ವೆಂಕಣ್ಣಯ್ಯನವರ ಭಾವಚಿತ್ರದ ಅನಾವರಣ ನೆರವೇರಿಸಿದ ಸುದ್ದಿ ಬೇರೆಯ ಕಡೆ ಕೊಟ್ಟಿದೆ.

ಕನ್ನಡ ನಾಡಿನ ಪ್ರಸಿದ್ಧ ಗಮಕಿಗಳು ಕೆಲವರು ನಾಡಿಗೆಲ್ಲ ಕುಮಾರವ್ಯಾಸನ ಕೃತಿಯ ಪರಿಚಯವನ್ನು ಮಾಡಿಕೊಟ್ಟೂ ಕೊಡುತ್ತಲೂ ಇದ್ದಾರೆ. ಕುಮಾರವ್ಯಾಸ ಭಾರತ ಸರ್ವಜನಾದರಣೀಯವಾದ ಗ್ರಂಥ. ಅದರ ವಿಷಯದಲ್ಲಿ ಶ್ರೀ ವೆಂಕಣ್ಣಯ್ಯನವರಿಗೆ ತುಂಬ ಭಕ್ತಿ, ಪ್ರೇಮ. ೧೯೩೦ ರ ನವರಾತ್ರಿ ಕಾಲದಲ್ಲಿ ಮೈಸೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಂಗವಾಗಿ ಕುಮಾರವ್ಯಾಸ ಜಯಂತ್ಯುತ್ಸವವನ್ನು ವಿಜೃಂಭಣೆಯಿಂದ ನಡಸಿದವರು ಶ್ರೀ ವೆಂಕಣ್ಣಯ್ಯನವರು. ಆ ಸಂದರ್ಭದಲ್ಲಿ ದಲ್ಲಿ ಅವರ ಸೂಚನೆಯಂತೆ, ಈ ಗ್ರಂಥದ ಹಿರಿಮೆಯೇನು, ಇದನ್ನು ಬರೆದ ಕವಿಯ ಪ್ರತಿಭೆ ಎಂಥದು ಎಂಬುದನ್ನು ತಿಳಿಸುವ ಉದ್ದೇಶದಿಂದ 'ಕುಮಾರವ್ಯಾಸ ಪ್ರಶಸ್ತಿ'ಯನ್ನು ಪ್ರಕಟಿಸುವ ನಿರ್ಧಾರವನ್ನು ಸಂಘದವರು ಕೈಕೊಂಡರು. ದಿವಂಗತ ವೆಂಕಣ್ಣಯ್ಯನವರು ತಮ್ಮ ಹಿರಿಯ ಕಿರಿಯ ಮಿತ್ರರಿಂದ ವಿದ್ವತ್ಪೂರ್ಣವಾದ ಲೇಖನಗಳನ್ನು ಬರಸಿ ಕೂಡಹಾಕಿದರು. ಕಾರಣಾಂತರದಿಂದ ಪ್ರಕಟನೆ ಮುಂದಕ್ಕೆ ತಳ್ಳುತ್ತ ಬಂತು; ಗ್ರಂಥ ಬೆಳಕು ಕಾಣುವ ಮುನ್ನ ಅವರು ಕಣ್ಣುಮುಚ್ಚಿದರು. ಅವರ ಭಾವಚಿತ್ರದ ಅನಾವರಣವೂ ಅವರ ದುಡಿಮೆಯ ಫಲವಾದ 'ಕುಮಾರವ್ಯಾಸ ಪ್ರಶಸ್ತಿ'ಯ ಪ್ರಕಟನೆಯೂ ಒಟ್ಟಿಗೆ ನರವೇರಿದ್ದರಲ್ಲಿ ದೊಡ್ಡ ಔಚಿತ್ಯವಿದೆ. ಇದರಿಂದ ದಿವಂಗತರ ಆತ್ಮಕ್ಕೆ ತೃಪ್ತಿಯುಂಟಾಗುವುದರಲ್ಲಿ ಸಂದೇಹವಿಲ್ಲ.

ಕುಮಾರವ್ಯಾಸ ಭಾರತದ ಸಮಗ್ರ ಗ್ರಂಥವನ್ನು ಸಾಧ್ಯವಾದಮಟ್ಟಿಗೆ ಒಂದೂ ತಪ್ಪಿಲ್ಲದಂತೆ ಚೆನ್ನಾಗಿ ಪರಿಶೋಧಿಸಿ, ಅತ್ಯುತ್ತಮವಾದ ಕಾಗದ ಉಪಯೋಗಿಸಿ ಅಡಕವಾದ ಆಕಾರದಲ್ಲಿ ಅದನ್ನು ಪ್ರಕಟಿಸಿ, ಬಹಳ ಕಡಮೆಯ ಬೆಲೆಗೆ ಕನ್ನಡಿಗರಿಗಲ್ಲ ದೊರಕಿಸಿಕೊಡಬೇಕೆಂದು ಅವರ ಹಿರಿಯ ಹಂಬಲಾಗಿತ್ತು: ಅದು ಹಣ್ಣಾಗಲು ಸಾಧ್ಯವಾಗದೆ ಹೋದದ್ದು ಕನ್ನಡಿಗರ ದುರ್ದೈವ.

ಮೈಸೂರು ವಿಶ್ವವಿದ್ಯಾನಿಲಯದವರು ತಮ್ಮ ಗ್ರಂಥಮಾಲೆಯ 'ಕುಮಾರವ್ಯಾಸ ಭಾರತ ಸಂಗ್ರಹ'ದ ಸಂಪಾದನೆಯ ಕಾರ್ಯವನ್ನು ದಿವಂಗತ ಶ್ರೀ ಪಂಜೆ ಮಂಗೇಶರಾಯರಿಗೂ ಶ್ರೀ ಡಿ. ಎಲ್. ನರಸಿಂಹಾಚಾರ್ಯರಿಗೂ ಒಪ್ಪಿಸಿದ್ದರು. ಗ್ರಂಥ ಪ್ರಕಟನೆಯಾಗುವುದಕ್ಕೆ ಮೊದಲೇ ಶ್ರೀ ಪಂಜೆಯವರು ತೀರಿಹೋದರು. ಅದು ಸದ್ಯದಲ್ಲಿಯೇ ಪ್ರಕಟನೆಯಾಗುವುದೆಂದು ಕೇಳಿ ಸಂತೋಷಿಸುತ್ತೇವೆ. ಆ ಗ್ರಂಥದ ಪ್ರಕಟನೆಯಿಂದ ದಿವಂಗತ ವೆಂಕಣ್ಣಯ್ಯನವರ ಹೆಬ್ಬಯಕೆ ಸ್ವಲ್ಪಮಾತ್ರವಾದರೂ ಫಲಿಸಿದಂತಾಗುವುದೆಂಬುದೇ ಸಮಾಧಾನ.

---

## ಕಂಬನಿ

### ದಿವಂಗತ ಪಿ. ಧೂಲಾ ಅವರು

ಕಳೆದ ವಾರದ ಕಂಬನಿಯಿನ್ನೂ ಆರುವುದಕ್ಕಿಲ್ಲ, ಮತ್ತೊಂದು ದುಃಖವಾರ್ತೆಯನ್ನು ತಿಳಿಸಬೇಕಾಗಿ ಬಂದಿದೆ. 'ಕಾಡಹಕ್ಕಿ' ಎಂಬ ಹೆಸರಿನಿಂದ 'ವೀರಪಥಿಕ' ಎಂಬ ಖಂಡಕಾವ್ಯವನ್ನು ಬರೆದು ಹೆಸರಾಗಿರುವ, ಮಹಮ್ಮದೀಯ ಬಂಧುಗಳಾದ ಹಲಸಂಗಿಯ ಶ್ರೀ ಪಿ. ಧೂಲಾ ಅವರು ಕಳೆದ ಜನವರಿ ೨೫ರಲ್ಲಿ ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಅವರ ಪರಿಚಯವನ್ನು ಕೆಳಗೆ ಕೊಟ್ಟಿದೆ.

ಕನ್ನಡದ 'ಕಾಡಹಕ್ಕಿ' ಕಣ್ಣು ಮುಚ್ಚಿತು. ಪಿ. ಧೂಲಾ (ಕಾಡಹಕ್ಕಿ) ಹಲಸಂಗಿ ಅವರು 'ವೀರಪಥಿಕ'ದ ಕವಿಗಳು. 'ಜೀವನ ಸಂಗೀತ'ದ ಸಂಗ್ರಾಹಕರಲ್ಲೊಬ್ಬರು. ಧ್ಯೇಯವಾದಿಗಳು. ಅವಿವಾಹಿತರು. ಕಾಂಗ್ರೆಸ್ಸು, ಲೋಕಲ್ ಬೋರ್ಡ್, ಪತ್ರಿಕಾ ಪ್ರಪಂಚ, ನಾಟಕ ಸಂಘ ಮೊದಲಾದ ಸಂಸ್ಥೆಗಳಲ್ಲಿ ಸೇರಿ, ಅಲ್ಲದೆ ಸ್ವತಃ ಶಿಕ್ಷಣಕಾರ್ಯ ವಹಿಸಿ ನಿರ್ವಹಿಸಬಲ್ಲ ಕರ್ತೃತ್ವಶಾಲಿಗಳು. ಹಳ್ಳಿಯ ಜನ್ಮ, ಹಳ್ಳಿಯ ಶಿಕ್ಷಣ, ಹಳ್ಳಿಯ ನಿವಾಸ ಮುಂತಾದುವುಗಳಲ್ಲಿಯೇ ಬೆಳೆದ ಜೀವನವು ಬೆಳ್ಳಕ್ಕರಿಗೇಗೆ ಕಂಗೊಳಿಸದೆ ಹೋಯಿತು. ಅವರು ತಾ|| ೨೫-೧-೪೦ನೆಯ ಗುರುವಾರ ಕರ್ಮರಂಗದಿಂದ ಹಿಂದೆ ಸರಿದು ಚಿರವಿಶ್ರಾಂತಿಯನ್ನು ಹೊಂದಿದರು. ವಯಸ್ಸು ೩೪ಕ್ಕೆ ಸಮಾಪಿಸಿತ್ತು. ಹಲಸಂಗಿಯ ಗೆಳೆಯರಲ್ಲೊಬ್ಬರಾಗಿ ಖಾಜೇಬಾಯಿ (ಗ್ರಾಮಕವಿ)ಯ ಲಾವಣಿಯ ಸ್ವಾರಸ್ಯವನ್ನು ಬಳ್ಳಾರಿ, ಮಂಗಳೂರು, ಧಾರವಾಡ ಮುಂತಾದ ಕಡೆಗೆ ತೋರಿಸಿಕೊಡಲು ಬಹುವಾಗಿ ಪ್ರಯತ್ನಪಟ್ಟರು. 'ಜಯಕರ್ನಾಟಕ'ದಲ್ಲಿ ಕೆಲವು ತಿಂಗಳು ಇವರಿಂದ ಸಂಗ್ರಹಿತವಾದ ಲಾವಣಿಗಳಿಂದಲೇ 'ಜನಪದ ಸಾಹಿತ್ಯ' ವಿಭಾಗ ಮೆರೆಯಿತು. 'ಜ. ಕ.'ದಲ್ಲಿ ಕೆಲಸಮಾಡುತ್ತಿರುವಾಗ ಅನೇಕ ಕತೆ, ಕವಿತೆಗಳನ್ನು ಬರೆದರು. ಶ್ರೀ ಕಾರಂತರ 'ವಸಂತ'ದಲ್ಲಿಯೂ ಈ 'ಕಾಡಹಕ್ಕಿ' ಕೂಗಿತು. ಮಹಮ್ಮದೀಯರಲ್ಲಿ ಇವರಂತೆ ಕನ್ನಡಕ್ಕಾಗಿ ನಡಕಟ್ಟಿದವರು ತೀರಾ ವಿರಳ. ಕನ್ನಡ ಸಾಹಿತ್ಯ ಭಂಡಾರದಲ್ಲಿ ಇವರು ವೀರ ಪಥಿಕವನ್ನಿರಿಸಿ, ಹಿಂದಿನ ಮಹಮ್ಮದೀಯರಾದ ಕನ್ನಡ ಬಂಧುಗಳಿಗೆ ಮಾರ್ಗದರ್ಶಿಯರನ್ನಾಗಿ ಮಾಡಿದರು. ಆದರೆ 'ವೀರಪಥಿಕ'ನು ವೀರಸ್ವರ್ಗವನ್ನು ಅಕಾಲದಲ್ಲಿ ಸೇರಿದ್ದು ಕನ್ನಡಿಗರಿಗೆ ಕಳವಳವನ್ನುಂಟುಮಾಡದಿರದು. ಅಕಾಲ ಮರಣದಿಂದ ಅವರ ಧ್ಯೇಯ ಬೀಜವು ಅವರ ಹತ್ತಿರವೇ ಉಳಿಯಿತು. ಹೊಸ ಸರಂಜಾಮುದೊಡನೆ ಕನ್ನಡ ನಾಡಿನಲ್ಲಿ ಮತ್ತೊಮ್ಮೆ ಹುಟ್ಟಿಬಂದು ತಮ್ಮ ಧ್ಯೇಯವನ್ನು ಮೊಳೆಸಲೆಂದು ಹಾರಯಿಸೋಣ.

—ಅರವಿಂದ ಗ್ರಂಥಮಾಲೆಯ ಸಂಪಾದಕರು.

---

(೧೪೨ನೆಯ ಪುಟದಿಂದ ಮುಂದುವರಿದುದು)

ಭಾವುಕನ ಹೃದಯವನ್ನು ತಾನೆ ಅರಳಿಸುವುದಿಲ್ಲ! ತಾಯಿ ಭುವನೇಶ್ವರಿಯು ವರದ ಹಸ್ತದ ಕೃಪೆಯಿದ್ದರೆ ಕನ್ನಡವು ಸರ್ವತೋಮುಖವಾಗಿ ಬೆಳೆದು ವಿಶ್ವಸಾಹಿತ್ಯಪಂಕ್ತಿಯಲ್ಲಿ ಪ್ರಾಮುಖ್ಯ ಸ್ಥಾನವೊಂದನ್ನು ಪಡೆಯಲಾರದೆ? ಈಗ ಹುಟ್ಟಿರುವ ಅನೇಕ ಗದ್ಯಪದ್ಯ ಕಾವ್ಯರತ್ನಗಳೇ ಅದರ ನಾಂದಿಯನ್ನು ಹಾಡುತ್ತಿವೆ. ಆದರೂ ಈಗ ಸಾಗಿರುವ ಕೆಲಸವು ಸಾಲದು. ಮುಂದೆ ಸಾಗಬೇಕಾಗಿ ಬೆಟ್ಟದಷ್ಟಿರುವ ಕೆಲಸದಲ್ಲಿ ಇದೊಂದು ಸಾಸಿವೆ ಕಾಳಿನಷ್ಟು ಮಾತ್ರ.

## ಆರ್ಯ–ದ್ರಾವಿಡ ಘರ್ಷಣ

ಈ ಮಧ್ಯದಲ್ಲಿ ಆರ್ಯ – ದ್ರಾವಿಡ ಘರ್ಷಣದ ಅಪಸ್ವರವೊಂದು ಹೊರಡುವ ಸೂಚನೆ ತಲೆದೋರಿದೆ. ಮದ್ರಾಸು ಪ್ರಾಂತದ ಗಾಳಿಯಿಂದೆಲ್ಲಿ ಹಗರಣವಾದೀತೋ ಎನ್ನಿಸಿದೆ. ವಾಲ್ಮೀಕಿ ರಾಮಾಯಣ, ಬ್ರಾಹ್ಮಣ ಸಂಸ್ಕೃತಿಯಾದ ಆರ್ಯ ಸಂಸ್ಕೃತಿ ದ್ರಾವಿಡ ಸಂಸ್ಕೃತಿಯ ಮೇಲೆ ಮಾಡಿದ ಅಘಾತವಂತೆ. ಬ್ರಾಹ್ಮಣರ ಮತದಿಂದ ದ್ರಾವಿಡ ಸಂಸ್ಕೃತಿಯು ಜರ್ಝರಿತವಾಯಿತಂತೆ. ಆರ್ಯ ಸಂಸ್ಕೃತಿ ದ್ರಾವಿಡ ಸಂಸ್ಕೃತಿಯ ಮೇಲೆ ಗದಾಪ್ರಹಾರ ಮಾಡಿದ ವಿಷಮ ಪರಿಣಾಮಗಳಲ್ಲಿ ವಾಲ್ಮೀಕಿ ರಾಮಾಯಣವೂ ಪುರಾಣ ಗ್ರಂಥಗಳೂ ಕೆಲವಂತೆ. ಆರ್ಯ ಸಂಸ್ಕೃತಿಯ ಸಂಸ್ಕೃತ ಭಾಷೆಗೆ ಬಹಿಷ್ಕಾರ ಹಾಕಿದಲ್ಲದೆ ದ್ರಾವಿಡ ಸಂಸ್ಕೃತಿಗೆ ಉಳಿಗಾಲವಿಲ್ಲವಂತೆ. ಈ ಬಗೆಯ ಕೋಲಾಹಲವು ಮದರಾಸು ಪ್ರಾಂತದಲ್ಲಿ ನಡೆಯುತ್ತಿದೆ. ಹೊರಗಿನವರೆಂದ ಕೂಡಲೇ ಮೊದಲು ಹೂವಿನ ಹಾರ ಹಾಕಿ ಆ ಬಳಿಕ ತಾವು ಯಾರಿಗೆ ಹೂವಿನಹಾರ ಹಾಕಿದುದೆಂಬುದನ್ನು ನೋಡುವ ಪ್ರವೃತ್ತಿಯುಳ್ಳ ಕನ್ನಡಿಗರೂ ಕೆಲವರು ಉಂಟಷ್ಟೆ. ಅಂಥವರು ಈ ವಿಕಟವಾದ ವಾದಕ್ಕೆ ಮನಸೋತಂತಿದೆ. ವ್ಯಾಧನೊಬ್ಬನು ಮಾಡಿದ ಹಕ್ಕಿಯ ಕೊಲೆಗಾಗಿ ಹುಟ್ಟಿದ ಶೋಕವು ಶ್ಲೋಕತ್ವವನ್ನು ಪಡೆದ ಹೃದಯವೇಧಕ ಸನ್ನಿವೇಶದಲ್ಲಿ "ಮಾನಿಷಾದ ಪ್ರತಿಷ್ಠಾಂ ತ್ವಮಗಮಶ್ಶಾಶ್ವತೀಸ್ಸಮಾಃ॥ ಯತ್ಕ್ರೌಂಚ ಮಿಥುನಾದೇಕಮವಧೀಃ ಕಾಮಮೋಹಿತಂ ॥' ಎಂದು ಹೇಳಿ (ಜೋಡಿ ಹಕ್ಕಿಗಳಲ್ಲಿ ಗಂಡುಹಕ್ಕಿಯನ್ನು ಕೊಂದ) ಆ ವ್ಯಾಧನನ್ನು ಶಪಿಸಿದ ಆದಿಕವಿ ವಾಲ್ಮೀಕಿಗೆ ಮೆಚ್ಚಿನ ಸನ್ಮಾನ! ಇನ್ನು ಬ್ರಾಹ್ಮಣ ಪಂಗಡದಿಂದ ಆದಿಕವಿಗೆ ಮೆಚ್ಚಿನ ಬಹುಮಾನ ಸಲ್ಲಬೇಕಾದುದೊಂದೇ ಉಳಿದಿದೆ. ಎಂದರೆ ಬ್ರಾಹ್ಮಣರೆಲ್ಲರೂ ಕೋಲಾಹಲ ಹೂಡಿ ಜಾತಿಯಲ್ಲಿ ಬೇಡನಾದ ವಾಲ್ಮೀಕಿ, ತಪಸ್ಸಿನ ಸೋಗು ಹಾಕಿಕೊಂಡು ಗ್ರಂಥರಚನ ಮಾಡಿ ಬ್ರಾಹ್ಮಣೇತರನಾದ ರಾಮನಿಂದ ಬ್ರಾಹ್ಮಣನಾದ ಪರಶುರಾಮನ ತೇಜೋವಧೆ ಮಾಡಿಸಿ ಬ್ರಾಹ್ಮಣನಾದ ರಾವಣನ ವಧೆ ಮಾಡಿಸಿದ ಬ್ರಾಹ್ಮಣವಿದ್ವೇಷಿಯೆಂದು ವಾಲ್ಮೀಕಿಯನ್ನು ಬಣ್ಣಿಸಿ ಸನ್ಮಾನಿಸಬೇಕಾದುದೊಂದೇ ಇನ್ನೂ ಉಳಿದಿದೆ! ಸಾಹಿತ್ಯ ರಂಗದಲ್ಲಿ. ಆಧ್ಯಾತ್ಮಿಕ ರಂಗದಲ್ಲಿ ಮತ್ತು ಸಂಸ್ಕೃತಿ ರಂಗದಲ್ಲಿ ಸಹ, ಜಾತಿ ಪಂಗಡಗಳ ಗೊಂದಲವೆ? ಪ್ರಾಸಂಗಿಕವಾಗಿ ಒಂದು ನಿದರ್ಶನವನ್ನು ಸೂಚಿಸುವುದಾದರೆ, ಮಹದೇವಿಯಕ್ಕನವರ "ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ" ಎಂಬುದೇ ಮುಂತಾದ ವಚನಗಳು ಕಿವಿಗೆ ಬಿದ್ದಾಗ ಅಥವಾ ಭಗವದ್ಗೀತೆ ಮುಂತಾದ ಧಾರ್ಮಿಕ ಗ್ರಂಥಗಳ ವಾಣಿಗಳು ಕಿವಿಗೆ ಬಿದ್ದಾಗ ಸಮಸ್ತ ಜಾತಿಪಂಗಡಗಳವರೂ ತಮ್ಮ ಪಾರ್ಥಿವ ದೇಹವನ್ನೇ ಮರೆತು ಆ ಮಹಾ ತಾಯಿಗೆ ಕೈಮುಗಿಯಬೇಕಲ್ಲವೆ? "ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ. ಎನ್ನ ಮನ ಸಾಕ್ಷಿ" ಎಂಬ ಬಸವೇಶ್ವರರ ವಚನದ ಮಂಜುಳ ನಿನಾದದ ಮಧುರ ಸುಧೆಯನ್ನೀಂಟುವ ಸಮಯದಲ್ಲಾಗಲಿ, ಉಪನಿಷತ್ತಿನ ಕಲರವದಂತಿರುವ "ಅಸತೋ ಮಾ ಸದ್ಗಮಯ । ತಮಸೋ ಮಾ ಜ್ಯೋತಿರ್ಗಮಯ । ಮೃತ್ಯೋರ್ಮಾಮೃತಂ ಗಮಯ ।' ಎಂಬ ಅಮೃತವಾಣಿಗಳನ್ನಾಲಿಸಿ ಆನಂದಿಸುವ ಸಮಯದಲ್ಲಾಗಲಿ ಬ್ರಾಹ್ಮಣ ಬ್ರಾಹ್ಮಣೇತರ ಭಾವನೆಯ ಸಂಕುಚಿತ ವೃತ್ತಿಯ ಕೀಳು ಮನೋಧರ್ಮಕ್ಕೆಡೆಯುಂಟೆ? ಹಾಗೆ ಎಡೆಗೊಟ್ಟವರನ್ನು ಮನುಷ್ಯರೆನ್ನಬಹುದೆ? ಬ್ರಾಹ್ಮಣರು ಪೂಜಿಸಲ್ಲಿಸುವುದು ಬ್ರಾಹಣನಾದ ಪರುಶರಾಮನಿಗೋ ಅಥವಾ ಬ್ರಾಹ್ಮಣರ ವಂಶೀಯರಲ್ಲದ ಶ್ರೀರಾಮಚಂದ್ರ ಶ್ರೀಕೃಷ್ಣರಿಗೋ? ಆರ್ಯ ಸಂಸ್ಕೃತಿಯ ಅಮೃತಪ್ರವಾಹವನ್ನು ನಮ್ಮ ಮೌಢ್ಯದಿಂದ ಕುಲುಷಿತಮಾಡಬಾರದು. ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದ ಮಹನೀಯರ ವಿಷಯದಲ್ಲಾಗಲಿ, ಸಾಹಿತ್ಯ ಸಾಮ್ರಾಟರ ವಿಷಯದಲ್ಲಾಗಲಿ, ಅವರು ಯಾವ ನಾಡಿನವರಾಗಿದ್ದರೂ ಸರಿ ಜಾತಿ ಪಂಗಡಗಳ ಗೊಂದಲವೇ ಇಲ್ಲದೆ ಸಮಸ್ತರೂ ಅವರು ವಂದನಾರ್ಹರೆಂದೂ ಭಾವಿಸುವುದೇ ವಿವೇಕ. ಮದರಾಸು ಪ್ರಾಂತದಲ್ಲಿ ಆರ್ಯ ಸಂಸ್ಕೃತಿ ಧ್ರಾವಿಡ ಸಂಸ್ಕೃತಿಗಳ ಬಡಿದಾಟದಲ್ಲಿ ವಿಶ್ವಾಸವುಳ್ಳವರ ವಿಲಕ್ಷಣ ಮನೋಧರ್ಮದ ವಿಕಟಾಟ್ಟಹಾಸಕ್ಕೆ ಮತ್ತೊಂದು ನಿದರ್ಶನವನ್ನೂ ಬಿನ್ನವಿಸುವೆನು. ಸುಪ್ರಸಿದ್ಧರಾದ ಮಾನ್ಯ ವಿದ್ವಾಂಸರೊಬ್ಬರು ಬಹಳ ಮನನೊಂದುಕೊಂಡು ಅದನ್ನು ನನ್ನೊಡನೆ ಹೇಳಿದರು. ಶಾಕುಂತಲ ನಾಟಕವು ಈಚೆಗೆ ತಮಿಳಿಗೆ ಭಾಷಾಂತರವಾದಾಗ್ಗೆ ಉಚಿತವಾಗಿ ಅದರ ಪ್ರತಿಗಳನ್ನು ಕೊಟ್ಟರೂ ಕೂಡ, ಆ ವಿಲಕ್ಷಣ ಮನೋಧರ್ಮದವರು ಅದು ಆರ್ಯ ಸಂಸ್ಕೃತಿಯ ಸಂಸ್ಕೃತ ಭಾಷೆಯ ಗ್ರಂಥದ ತರ್ಜುಮೆಯೆಂಬ ಕಾರಣದಿಂದ ಓದಲೊಲ್ಲದೆ ಹೋದರಂತೆ. ಈ ಚಿತ್ರವನ್ನೂ ನೋಡಿ; ಮೊನ್ನೆ ತಾನೆ ಸಿಂಹಳದ್ವೀಪಕ್ಕೆ ಬಂದಿದ್ದ ಯೂರೋಪು ಖಂಡದ ವಿದ್ವಾಂಸಶ್ರೇಷ್ಠರೊಬ್ಬರು ಯುದ್ಧದ ಕರಾಳ ಸನ್ನಿವೇಶದ ಮಧ್ಯದಲ್ಲಿ ಕೂಡ ತಮ್ಮ ದೇಶದಲ್ಲಿ ಶಾಕುಂತಲ ನಾಟಕವನ್ನಾಡಿಸುವ ಉದ್ಯಮದಲ್ಲಿ ಪ್ರವರ್ತಿಸುವುದಾಗಿ ಹೇಳಿದಂತೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಆ ಚಿತ್ರವನ್ನೂ ನೋಡಿ! ತಪಸ್ವಿನಿಯಾದ ಭಾರತಮಾತೆಯ ಕೋಕಿಲ ಕಂಠದ ಕಲರವವೇ ವಾಲ್ಮೀಕಿ ಕಾಳಿದಾಸಾದಿ ಕವಿಗಳ ಕಮನೀಯ ವಾಣಿ. ಹಾಗಿದ್ದೂ ಈ ರೀತಿ ಸಂಸ್ಕೃತ ದ್ವೇಷಮಾಡಿದರೆ ಭಾರತಮಾತೆಯ ನಾಲಗೆಯನ್ನೇ ಇರಿದಂತೆ. ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳಲ್ಲಿ ಕೂಡ ಸಂಸ್ಕೃತಕ್ಕೆ ಅಮಿತವಾದ ಪ್ರೋತ್ಸಾಹವಿರುವುದಕ್ಕೆ ಅರ್ಥವಿದೆ. ಆರ್ಯ ಸಂಸ್ಕೃತಿಯೂ ದ್ರಾವಿಡ ಸಂಸ್ಕೃತಿಯೂ ಗಂಗಾಯಮುನೆಗಳಂತೆ. ಅದೂ ಹೋಗಲಿ. ಭಾರತೀಯರಿಗೆ ಇಂಗ್ಲಿಷಿಗಿಂತ ಸಂಸ್ಕೃತ ಸಮೀಪವಾದುದಲ್ಲವೆ? ಭರತಖಂಡದ ಪ್ರತಿಯೊಂದು ಪ್ರಾಂತದಲ್ಲಿಯೂ ಅದರ ತಾಯನುಡಿಯಾದ ಪ್ರಾಂತ ಭಾಷೆಗೆ ಪ್ರಾಧಾನ್ಯವಿರಲೇಬೇಕು. ತಂದೆತಾಯಿಗಳನ್ನೇ ಸಾಕಲಾರದವರು ದೇಶದವರೆಲ್ಲರನ್ನೂ ಸಾಕಲಾರರು. ಯಾವುದೊಂದು ಪ್ರಾಂತದಲ್ಲಾಗಲಿ ಹೆಚ್ಚು ಭಾಗದ ಜನರ ತಾಯಿನುಡಿಯು ಯಾವುದೋ ಆ ಭಾಷೆಗೆ ಪ್ರಾಧಾನ್ಯವಿರಲೇಬೇಕು. ಅದರ ಜೊತೆಗೆ ಪ್ರಪಂಚದ ಉಳಿದ ಎಲ್ಲ ಸಂಸ್ಕೃತಿ ಸಾಹಿತ್ಯಗಳ ಸಾರವನ್ನೂ ಹೀರಿ ಆ ಭಾಷೆ ಪರಿಪುಷ್ಟವಾಗಬೇಕು. ಇಂಗ್ಲಿಷ್ ಭಾಷೆಯ ನಿದರ್ಶನವೇ ಸಾಲದೆ? ಇಂಗ್ಲಿಷ್ ಭಾಷೆ ಇಂದು ಉಚ್ಛ್ರಾಯಸ್ಥಿತಿಯಲ್ಲಿರುವುದೇ ಇತರ ಸಾಹಿತ್ಯಗಳ ಸಾರವನ್ನೆಲ್ಲ ಹೀರಿರುವುದರಿಂದ. ಕನ್ನಡ ನಾಡಿನ ಜನಜೀವನಪಕ್ಷಿಗೆ ಕನ್ನಡ ಸಾಹಿತ್ಯ ಸಂಸ್ಕೃತಿಗಳೇ ಮೈ. ಸಂಸ್ಕೃತ ಸಾಹಿತ್ಯ ಸಂಸ್ಕೃತಿಗಳೇ ಒಂದು ರೆಕ್ಕೆ. ಪ್ರಪಂಚದ ಉಳಿದ ಸಾಹಿತ್ಯ ಸಂಸ್ಕೃತಿಗಳೆಲ್ಲ ಮತ್ತೊಂದು ರಕ್ಕೆ. ಈ ರೀತಿ ಭಾವಿಸುವ ಔದಾರ್ಯವನ್ನು ಕನ್ನಡಿಗರಾದ ನಾವಾದರೂ ತೋರಿಸೋಣ. ಭರತಖಂಡದ ಇತರ ಪ್ರಾಂತಗಳಿಗೆಲ್ಲ ಮೇಲ್ಪಂಕ್ತಿ ಹಾಕುವ ಮಟ್ಟಿನ ವಿಶಾಲ ಹೃದಯದಿಂದ ವರ್ತಿಸೋಣ. ಉದಾತ್ತ ಭಾವನೆಗಳ ಸಹೃದಯತೆಯ ಮೂಲಾಧಾರವಿಲ್ಲದೆ ಯಾವ ದೊಡ್ಡ ಕೆಲಸವೂ ನಾಗದು. ಜಗದ್ವಂದ್ಯರಾದ ಮಹಾಪುರುಷರಲ್ಲೊಬ್ಬನಾಗಿ ದೇಹವು ಎಂದೋ ಬಿದ್ದುಹೋದರೂ ಕೀರ್ತಿಕಾರ್ಯನಾಗಿ ಅಮರವಾಗಿರುವ ಎಬ್ರಹಾಂ ಲಿಂಕನ್ ಮಹಾಶಯನ ಕಾರ್ಯಸೂತ್ರವೆಂದರೆ ಯಾರಲ್ಲಿಯೂ ದ್ವೇಷ ತೋರದೆ ಎಲ್ಲರಲ್ಲಿಯೂ ದಯಾ ದಾಕ್ಷಿಣ್ಯಗಳನ್ನು ತೋರಿ ವರ್ತಿಸಬೇಕೆಂಬುದೇ. ಉಪನಿಷತ್ತು ಹಾಡಿರುವುದೂ "ಸಹನಾವವತು । ಸಹನೌಭುನಕ್ತು । ಸಹವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ ।" ಎಂದೇ. ಶ್ರೀ ಬಸವೇಶ್ವರರು ಕೇಳಿರುವುದೂ "ದಯವಿಲ್ಲದ ಧರ್ಮವಾವುದಯ್ಯಾ?" ಎಂದೇ. ಇದೆಲ್ಲ ನಮ್ಮ ನುಡಿಯಲ್ಲಿಯೇ ಮುಗಿಯದೆ ನಡೆಯಲ್ಲಿ ಬಂದಂದು, ಸಂಯಮಶೀಲರಾಗಿ ವಿಶ್ವಪ್ರೇಮವನ್ನು ಮೆರೆದಂದು ನಾವು ಧನ್ಯರು. ಅಂದಿನದು ಶುಭತಾರೆ. ಅಂದೇ ದೇಶಮಾತೆಯ ವರ್ಧಂತ್ಯುತ್ಸವ.

(ಮುಂದುವರಿಯುವುದು)

## ಈಗ ಬೇಕಾದ ಸಾಹಿತ್ಯ

(ಶ್ರೀ ಸು. ರಂ. ಯಕ್ಕುಂಡಿ)

ಇಲ್ಲಿಯ ವರೆಗೆ ನಮಗೆ ನಮ್ಮ ಭಾಷೆಯಾದ ಕನ್ನಡದಲ್ಲಿ ಎಷ್ಟೋ ಬಗೆಯ ಸಾಹಿತ್ಯ ದೊರಕಿದೆ, ದೊರಕುತ್ತಿದೆ. ರಸದ ಕುಸುರಿನ ಕೆಲಸಗಳಲ್ಲಿ ನಮ್ಮ ಕವಿಗಳು ಮಹಾ ಪಂಡಿತರಾಗಿ ಮೆರೆದರು. ಅವೆಲ್ಲ ನಮ್ಮ ಒಳ ಹೊರ ಜೀವನದ ಸಂಸ್ಕೃತಿಯ ಕಟ್ಟುನಿಟ್ಟನ್ನು ಬಿಗಿಯಾಗಿ ಇರಿಸಿ ನಮ್ಮನ್ನು ಜಗತ್ತಿನ ನೋಟದ ಒಂದು ವಸ್ತುವನ್ನಾಗಿ ಮಾಡಿದುವು.

ನಮ್ಮ ಸಂಸ್ಕೃತಿಗೆ ಹೊಂಗಾಳಿನ ತೆನೆ ಬೇಕಾದರೆ ನಮ್ಮಲ್ಲಿ ಹುಟ್ಟಾ, ನಾಡು, ನುಡಿ, ಕಲೆ ಇವುಗಳ ಬಗ್ಗೆ ಆದರಾಭಿಮಾನ ಬೇಕು. ಆಗಿನ ಕಾಲಕ್ಕೆ ಆ ರೀತಿ ಇತ್ತು. ಚಿಕ್ಕಮಗುವಿನಿಂದ ಮುದುಕರ ವರೆಗೂ "ನಮ್ಮ ನಾಡು, ನಮ್ಮ ನುಡಿ, ನಮ್ಮ ಕಲೆ" ಎಂದು ಉಚ್ಚರಿಸುವಾಗ ದೇಹದ ಪ್ರತಿಯೊಂದು ಕಣದಲ್ಲಿ ತನ್ನತನದ ಬಿಗುವು ನುಗ್ಗಿ ಬರುತ್ತಿತ್ತು. ಆಗಿನ ಕಾಲ ಸಂಸ್ಕೃತಿಯ ಕಾಲ. ಆಗ ನಮ್ಮಲ್ಲಿ ಯುದ್ಧಗಳಾದರೂ ಒಂದು ಒಳಚೇತನದ ಸಹಾಯದಿಂದ ಸಂಸ್ಕೃತಿಯ ಬೆಳವಣಿಗೆಯೇ ಆಗುತ್ತಿತ್ತೇ ಹೊರತು ಅದರ ಕೊಲೆಯೆಂದಿಗೂ ಆಗುತ್ತಿರಲಿಲ್ಲ. ಉದಾಹರಣೆಗೆ, ವಿದ್ಯಾರಣ್ಯರ ಚೇತನದಿಂದಲೇ ಹುಕ್ಕಬುಕ್ಕರು ವಿಜಯನಗರ ರಾಜ್ಯಗಳನ್ನು ಕಟ್ಟಿದರು. ಕನ್ನಡಿಗರು ರಾಜ್ಯ–ಅದೇಕೆ ?–ಸಾಮ್ರಾಜ್ಯ ಕಟ್ಟಿದವರು ಗುಬ್ಬಿಯ ಗೂಡಲ್ಲ. ಆದರೆ ಈಗ ಆಗತಕ್ಕ ಯುದ್ಧಗಳಿಂದ ಇಡಿಯ ಮಾನವ ಜನಾಂಗದ ಬೂದಿಯೇ ಆಗುವುದೆಂಬುದರಲ್ಲಿ ಸಂಶಯವಿಲ್ಲ. ಇಂದಿನ ಯಂತ್ರ, ವಿಷಗಾಳಿ, ಗುಂಡು, ಬಾಂಬುಗಳು, ಜನಾಂಗಗಳ ಜಲ್ಪವಿಷಯಗಳಾದ ಕಲೆ ಕುಸುರಿನ ಮನೆಮಠಗಳನ್ನು ಬೂದಿಗೂಡಿಸುತ್ತವೆ.

ಇನ್ನೂ ಅದು ಆ ಹಾದಿಯಲ್ಲಿದೆ. ಇನ್ನೊಂದು ೩೦–೪೦ ವರ್ಷದಲ್ಲಿ ನಿಜವಾಗಿಯೂ ಆ ಸ್ಥಿತಿ ಬಂದೇ ಬರುತ್ತದೆ. ಆದ್ದರಿಂದ ಈಗಲೇ ಅದರ ಪ್ರತಿಕಾರ ಆಗಲೇಬೇಕು: ಶಸ್ತ್ರಕ್ಕೆ ಶಸ್ತ್ರದಿಂದಲ್ಲ. ಆದರೆ ಶಸ್ತ್ರಕ್ಕೆ ಶಸ್ತ್ರ ಸನ್ಯಾಸದಿಂದ. ಯುದ್ಧ ಸುರುವಾದೊಡನೆಯೇ ಎಲ್ಲರ ಮನಸ್ಸಿನಲ್ಲಿ ಯುದ್ಧಕ್ಕಾಗಿ "ಹಾತೊರೆ" ಬಹಳವಾಗುತ್ತದೆ. ಶಸ್ತ್ರ ಹಿಡಿಯಲು ಕೈ ಮುಂದರಿಯುತ್ತದೆ. ನೆತ್ತರಿನಲ್ಲಿ ವೀರ ಚಿಮ್ಮುತ್ತದೆ. ಯುದ್ಧ ಸುರುವಾದ ಕಡೆ ಅದರ ಎಡ ಬಲದಲ್ಲಿಯೂ ಅಲ್ಲ, ಎಲ್ಲ ಕಡೆಗೂ ಹಬ್ಬುತ್ತದೆ. ಅದೊಂದು ಪಿಡುಗು, ಸೋಂಕು ರೋಗ.

ಇಂತಹ ಪರಿಣಾಮ ವಿರೋಧಿಸಲು ನಮಗೆ ಈಗ ಸಾಹಿತ್ಯ ಬೇಕು. ಕಲೆ ಬೇಕು. ಕೇವಲ ಸಮಾಜ ಟೀಕೆಯಾಗಲಿ ಶೃಂಗಾರ ಕಾವ್ಯವಾಗಲಿ ನಮಗೆ ಬೇಕಾಗಿಲ್ಲ. ಜನರಲ್ಲಿ ಯುದ್ಧದ ಬಗ್ಗೆ ಇದ್ದ ಭಾವನೆಯನ್ನು ಸಂಪೂರ್ಣವಾಗಿ ನಾಶಮಾಡಬೇಕು. ಇದುವೆ ನಮಗೆ ಈಗ ಬೇಕಾದ ಸಾಹಿತ್ಯ. ನಮಗೆ ಇಂದು ಬೇಕಾದ ಸಾಹಿತ್ಯ ಯುದ್ಧ ವಿರೋಧಿ ಸಾಹಿತ್ಯ.

* * *

ಇಂಗ್ಲಿಷ್ ಸಾಹಿತ್ಯದಲ್ಲಿನ ಶೇಕ್ಸ್‌ಪಿಯರ ಬೈರನ್ನಷ್ಟು ಕನ್ನಡದಲ್ಲಿ ಬೆಳವಣಿಗೆಗೊಂಡಿಲ್ಲವಾದರೂ ಬೇಂದ್ರೆಯವರು—

ಹರಿದರು ನೆತ್ತರು
ಉಳ್ಳವರು ಸತ್ತರು
ಒಳ್ಳೆವರು ಅತ್ತರು ॥ ಕುಣಿಯೋಣು ಬಾರ ॥

ಎನ್ನುವಾಗ, ಜಗತ್ತಿನಲ್ಲಿ ಶಾಂತಿಗಿತ್ತ ತ್ರಾಣ ಮತ್ತು ಯುದ್ಧ ವಿಷಯಕ ತಿರಸ್ಕಾರ ಇವೆಲ್ಲ ವ್ಯಕ್ತವಾಗುತ್ತವೆ. ಪುಟ್ಟಪ್ಪನವರೂ, ವಿ. ಸೀ.ಯವರೂ ಈಶ್ವರ ಸಣಕಲ್ಲರವರೂ, ಸಾಲಿ ರಾಮಚಂದ್ರರಾಯರೂ ಅದರಲ್ಲಿ ಈಗಾಗಲೇ ಅಡಿಯಿಟ್ಟಿದ್ದಾರೆ. ನಾನು ಬರೆದ "ಕುರುಕ್ಷೇತ್ರ ರಗಳೆ"ಯಲ್ಲಿ ಕೂಡ ಈ ಕೆಳಗಿನ ಸಾಲುಗಳು ಆ ಪ್ರಯತ್ನದಲ್ಲಿವೆ:

ಸದಮಲದ ಒಳಗಣ್ಣ ಮುಂದೆ ತಳಿದಿರ್ದೆನ್ನ
ಮನಕೆ ದುಗುಡವ ತಂದೆ ಏಕೆ? ಈ ಯುದ್ಧವಿದು
ಕನಕರಿಪ ಜೀವಿಗಳ ನಾಶ. ಪಶುತಿಂಡಿಗಿದು
ಅಡುವನೆಯು ನರಕದೆರಡನೆ ರೂಪವವತರಿಸಿ
ಜಡದೇಹಿಗಳ ಗೋಳು ಹೊಯಿಸಿ ಹುಡಿಯೊಡನಿರಿಸಿ....

ಇದೇ ಸಾಹಿತ್ಯ ನಮಗಿಂದು ಬೇಕು. ವಿಶ್ವವೆಲ್ಲ ಶಾಂತಿಯಿಂದ ಬಾಳಬೇಕೆಂಬುದೇ ಇದರ ಧ್ಯೇಯವಾಗಿರಬೇಕು.

[ಸಂಯುಕ್ತ ಕರ್ನಾಟಕ, ೧೯—೧—೪೦]

---

## ಬಂಗಾಳಿ ಪತ್ರಿಕೆಯಲ್ಲಿ ಕನ್ನಡ ಸಾಹಿತ್ಯ*

[ಶ್ರೀ. ಎಂ. ಎಸ್. ಕಾಮತ್ ಅವರಿಂದ]

ಇತ್ತೀಚೆಗಿನ ಕನ್ನಡ ಸಾಹಿತ್ಯವನ್ನು ಕುರಿತಾಗಿ ಸ್ವಲ್ಪ ಆಲೋಚನೆ ಮಾಡೋಣ. ಶ್ರೀ॥ **ಕೆ. ವಿ. ಪುಟ್ಟಪ್ಪ** ಅವರು ಶ್ರೇಷ್ಠ ಕವಿಗಳೆಂದು ಸನ್ಮಾನಿತರಾಗಿದ್ದಾರೆ. ಇವರು ಬೆಂಗಳೂರು ಕಾಲೇಜಿನಲ್ಲಿ ಅಧ್ಯಾಪಕರು; ವಯಸ್ಸು ನಲವತ್ತರೊಳಗೆ; ರಾಮಕೃಷ್ಣ ವಿವೇಕಾನಂದರ ಸಾಧನೆಗಳಿಗಾಗಿ ಬಾಳನ್ನು ಅರ್ಪಿಸಿದವರು. ಇವರು ನಾಟಕ, ಉಪನ್ಯಾಸ, ಕವಿತೆಗಳೆಲ್ಲವನ್ನು ವಿಪುಲವಾಗಿ ಬರೆದಿದ್ದಾರೆ, ಬರೆಯುತ್ತಿರುವರು. ಇವರ ಒಂದು ಸುಪ್ರಸಿದ್ಧ ಕವಿತೆಯ ಹೆಸರು 'ಕಲ್ಕಿ'. ಕಾಶಿಯಲ್ಲಿ ಪ್ರವಾಸೀ ಬಂಗಾಳಿಯರು ನಡಸುತ್ತಿರುವ 'ಉತ್ತರಾ' ಎಂಬ ಪತ್ರಿಕೆಯಲ್ಲಿ ಕೆಲ ಕಾಲಕ್ಕೆ ಹಿಂದೆ ಇದರದೊಂದು ಭಾಷಾಂತರ ಪ್ರಕಟವಾಗಿದ್ದಿತು. ಕವಿ ನಮ್ಮ ಮುಂದಿನ ಸಮಾಜ ಕ್ರಾಂತಿಯಲ್ಲಿ ಕಲ್ಕಿಯನ್ನು ನೂತನ ಸ್ವರೂಪದಲ್ಲೇ ಕಂಡಿರುವರು. ಮನುಷ್ಯರೊಳಗೆ ವೈಷಮ್ಯವೆಷ್ಟು! ಪ್ರಭೇದಗಳೆಷ್ಟು! ಧನಿಕ- ದರಿದ್ರರೊಳಗೆ ಅಲಂಘ್ಯವಾದ ಪಾರಾವಾರವೆಷ್ಟು! ಇದನ್ನು ಭಾವಿಸಿದರೆ ವಿಸ್ತಾರವಾದೊಂದು ನೆತ್ತರಕಡಲೇ ಹರಡಿರುವಂತೆ ತೋರುವುದು. ಯಾರು ದೀನಹೀನರೋ, ಯಾರು ಶೋಷಕ ಸಮಾಜದ ಮೂಲಕ ಅಣುಅಣುವಾಗಿ ತಮ್ಮ ಜೀವನ ಶಕ್ತಿಯಿಂದ ವಂಚಿತರಾಗಿ ಬರುತ್ತಿದ್ದಾರೆಯೋ ಅವರ ನಡುವಣಿಂದ "ಕಲ್ಕಿ" ಮೂಡಿರುವನು. ಈ ವಿಧವಾಗಿ ಹಸಿವು ಸುಡುತ್ತಿರುವ ಅತ್ಯಾಚಾರ ಕಾಳಗದ ಮನುಷ್ಯಕಂಕಾಲರಲ್ಲಿ ದಶಮಾವತಾರ ಕಲ್ಕಿಯ ಪ್ರಾಣಪ್ರತಿಷ್ಠೆ ಆಗಿರುವುದು. ಇನ್ನೊಬ್ಬರ ಹೆಸರನ್ನು ಇಲ್ಲಿ ಎತ್ತುತ್ತೇವೆ. ಇವರೂ ಪ್ರಾಚೀನರಲ್ಲ, ಆಧುನಿಕರು; ಕವಿಗಳು. ನಮ್ಮ ಬಂಗಾಳ ದೇಶದಲ್ಲಿ ಈಗಲೂ ಉಪನಾಮವನ್ನು ಧರಿಸಿಕೊಂಡು ಕವಿಗಳಾಗಲಿ ಸಾಹಿತಿಗಳಾಗಲಿ ಲೇಖನಿ ಮೆರೆಯಿಸುವುದಿಲ್ಲ: ಆದರೆ ಅನ್ಯಪ್ರದೇಶಗಳಲ್ಲಿ ಇಂತಹ ಉಪನಾಮಗ್ರಹಣವು ಮೊದಲಿಂದಲೂ ರೀತಿ ವಿರುದ್ಧವಾಗಿದ್ದಿಲ್ಲ ಮಾತ್ರವಲ್ಲ, ಅದೇ ಈಗ ಬಹಳವಾಗಿ ಪ್ರಚಲಿತವೂ ಆಗಿದೆ. ನಾವು ಹೇಳುವ ಕವಿಯ ಹೆಸರು **ಬೇಂದ್ರೆ.** ಆದರೆ ಇವರು "ಅಂಬಿಕಾತನಯ ದತ್ತ"ರೆಂಬ ಹೆಸರಲ್ಲೇ ಬರೆವವರು. ನಾವು "ತ್ರಿಂಶತ್ ಕೋಟಿ ಕಂಠೆ" ಭಾರತಮಾತೆಯ ಜಯಗಾನ ಹಾಡುವೆವು; ಇವರು ಮೂವತ್ತುಮೂರು ಕೋಟಿಗಳ ಸಂತತಿ ಕಾಣಲಾರರು. ಅದುಕಾರಣ ಭಾರತ ಭೂಮಿಯ ಬಾಯಿಂದ ಹೀಗೆ ಹೇಳಿಸುವರು: 'ಮೂವತ್ತು ಮೂರು ಕೋಟಿ! ನನಗೆ ಮೂವತ್ತು ಮೂರು ಕೋಟಿ ಸಂತಾನವಂತೆ! ಅವರನ್ನು ವಜ್ರಕಠಿನರನ್ನಾಗಿ ಮಾಡಿ ಆಶೀರ್ವದಿಸಿ ಜಗತ್ತಿನಲ್ಲಿ ಕಳುಹಿದ್ದೆನು. ಎಲ್ಲಿದೆ ಆ ಶಾಂತಿ? ಆ ತೇಜ? ಅವರೆಲ್ಲ ಇಂದು ಪ್ರಾಣಹೀನ ದೇಹಗಳೇ ಮಾತ್ರ! ಪರದಾಸರಾಗಿರುವುದರಿಂದ ಅವರು ಪರಪದಲೇಹನದಲ್ಲೇ ತತ್ಪರರು!' ಇಂದಿನ ಭಾರತದಲ್ಲಿ ಭಕ್ತಿಯನ್ನಿಟ್ಟವರಲ್ಲಿ, ಬೇಂದ್ರೆಯವರ ಈ ಭಾರತ ವಿಲಾಪವು ಅನುಭೂತಿಯ ತೀವ್ರತೆ ಮತ್ತು ಪ್ರಕಾಶದ ಉತ್ಕರ್ಷಗಳಿಂದ ವಿಶಿಷ್ಟಸ್ಥಾನವನ್ನು ಪಡೆವುದು.

---

"ದೇಶ್" ಎಂಬ ಬಂಗಾಳೀ ವಾರಪತ್ರಿಕೆ ಡಿಸೆಂಬರು ೨೩ನೆಯ **ತಾರೀಖಿನ ಸಂಚಿಕೆಯಲ್ಲಿ ಅಧ್ಯಾಪಕ ಪ್ರಿಯರಂಜನ ಸೇನ್, ಎಂ.ಎ., ಪಿ.ಆರ್.ಎಸ್. ಇವರ "ಭಾರತೀಯ ಸಾಹಿತ್ಯ" ಎಂಬ ಲೇಖದ ಒಂದು ಭಾಗ.**

## ಸಣ್ಣಕತೆಗಾರರ ಎರಡನೆಯ ಸಮ್ಮೇಳನದಲ್ಲಿ ಅಂಗೀಕಾರವಾದ ನಿರ್ಣಯಗಳು

**(೧) ಸಂತಾಪ ಸೂಚನೆ**

ಮೊದಲನೆಯ ಕತೆಗಾರರ ಸಮ್ಮೇಳನವಾದಂದಿನಿಂದ ಈಚೆಗೆ, ಕನ್ನಡ ಸಣ್ಣಕತೆಯ ಸಾಹಿತ್ಯಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದ ಶ್ರೀ ಪಂಜೆ ಮಂಗೇಶರಾಯರು, ಶ್ರೀ ಪೇಜಾವರ ಸದಾಶಿವರಾಯರು, ಶ್ರೀಮತಿ ಗೌರಮ್ಮ — ಇವರುಗಳೂ, ಸಣ್ಣಕತೆಗಾರರಿಗೆ ವಿಶೇಷ ಪ್ರೋತ್ಸಾಹ ಕೊಡುತ್ತಿದ್ದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರೂ ನಿಧನರಾದ್ದರಿಂದ ಕನ್ನಡ ಸಣ್ಣಕತೆಯ ಪ್ರಪಂಚಕ್ಕೆ ವಿಶೇಷ ನಷ್ಟವಾಗಿದೆ. ಇದಕ್ಕಾಗಿ ಈ ಎರಡನೆಯ ಕತೆಗಾರರ ಸಮ್ಮೇಳನ ತನ್ನ ಅಪಾರ ದುಃಖವನ್ನು ವ್ಯಕ್ತಪಡಿಸುತ್ತದೆ.

—ಅಧ್ಯಕ್ಷರಿಂದ

**(೨) ಭಾರತ ರಾಷ್ಟ್ರಸಭೆಯ ಆಶ್ರಯದಲ್ಲಿ ಏರ್ಪಾಡಾಗಲಿರುವ ಗ್ರಂಥ ಭಂಡಾರಕ್ಕೆ ಗ್ರಂಥ ದಾನ**

ಕಾಂಗ್ರೆಸ್ಸಿನ ಆಶ್ರಯದಲ್ಲಿ ರಾಷ್ಟ್ರೀಯ ಸಮಸ್ಯೆಗಳ ವ್ಯಾಸಂಗಕ್ಕೂ ಆ ಸಂಬಂಧವಾದ ಸಂಶೋಧನೆಯ ಕೆಲಸಕ್ಕೂ ಉಪಯೋಗವಾಗತಕ್ಕ ಒಂದು ಗ್ರಂಥ ಭಂಡಾರವನ್ನು ಏರ್ಪಡಿಸಬೇಕೆಂಬ ಉದ್ದೇಶವಿದೆಯೆಂದೂ, ಇದು ನೆರವೇರಬೇಕಾದರೆ ನಮ್ಮ ದೇಶದ ಎಲ್ಲ ಭಾಷೆಗಳ ಗ್ರಂಥಕರ್ತರ ಸಹಕಾರವೂ ಅವಶ್ಯಕವೆಂದೂ, ಅದಕ್ಕಾಗಿ ಎಲ್ಲ ಗ್ರಂಥಕರ್ತರೂ ತಮ್ಮ ತಮ್ಮ ಪ್ರಕಟವಾದ ಗ್ರಂಥಗಳ ಒಂದೊಂದು ಪ್ರತಿಯನ್ನು ಉಚಿತವಾಗಿ ಆ ಗ್ರಂಥ ಭಂಡಾರಕ್ಕೆ ಕಳಿಸಿಕೊಡಬೇಕೆಂದೂ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀಯುತ ರಾಜೇಂದ್ರ ಪ್ರಸಾದರವರು ಮಾಡಿರುವ ಬಿನ್ನಹಕ್ಕೆ ಈ ಸಮ್ಮೇಳನದ ಸಹಾನುಭೂತಿಯಿದೆ. ಕನ್ನಡ ನಾಡಿನ ಗ್ರಂಥಕರ್ತರೂ, ಪ್ರಕಾಶಕರೂ ತಮ್ಮ ಗ್ರಂಥಗಳನ್ನು ಕಳಿಸಿಕೊಟ್ಟು ಮೇಲಿನ ಉದ್ದೇಶ ಸಫಲವಾಗುವಂತೆ ನೆರವಾಗಬೇಕೆಂದು ಈ ಸಮ್ಮೇಳನ ಅವರನ್ನು ಬೇಡುತ್ತದೆ.

—ಅಧ್ಯಕ್ಷರಿಂದ

**(೩) ಶ್ರೇಷ್ಠವಾದ ಕನ್ನಡ ಸಣ್ಣಕತೆಗಳನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿ ಪ್ರಕಟಿಸಲು ಸಮಿತಿ**

ಈಗ ಕನ್ನಡದಲ್ಲಿ ಕೆಲವು ಶ್ರೇಷ್ಠವಾದ ಸಣ್ಣಕತೆಗಳು ಹೊರಕ್ಕೆ ಬಂದಿವೆ. ಅವನ್ನೆಲ್ಲ ಒಟ್ಟುಗೂಡಿಸಿ ಇಂಗ್ಲಿಷಿನಲ್ಲಿ ಭಾಷಾಂತರಮಾಡಿ ಪ್ರಕಟಿಸುವ ಅವಶ್ಯಕತೆಯಿದೆಯೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ. ಈ ವಿಚಾರವನ್ನು ಪರ್ಯಾಲೋಚಿಸಿ ತಕ್ಕ ಮುಂದಿನ ಕಾರ್ಯವನ್ನು ಕೈಕೊಂಡು ಪೂರೈಸಲು ಈ ಸಮ್ಮೇಳನ ಈ ಮುಂದಿನ ಸಮಿತಿಯನ್ನು ನೇಮಿಸುತ್ತದೆ:-

ಶ್ರೀಗಳಾದ

(೧) ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಎಂ.ಎ. (ಅಧ್ಯಕ್ಷರು)
(೨) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.
(೩) ಎಂ. ಎನ್. ಕಾಮತ್ ಅವರು.
(೪) ವಿ. ಕೆ. ಗೋಕಾಕ್, ಬಿ.ಎ. (ಆಕ್ಸನ್), ಎಂ.ಎ. ಅವರು.
(೫) ಸಿ. ಸೀತಾರಾಮಯ್ಯನವರು, ಎಂ.ಎ.
(೬) ಎಂ. ವಿ. ಸೀತಾರಾಮಯ್ಯನವರು, ಎಂ.ಎ.
(೭) ವ. ರಾ. ಚೇಂದ್ರೆಯವರು, ಎಂ.ಎ.
(೮) ಎ. ಎನ್. ಮೂರ್ತಿರಾಯರು, ಎಂ.ಎ.
(೯) ಕೆ. ಗೋಪಾಲಕೃಷ್ಣರಾಯರು, ಬಿ.ಎ. (ಕಾರ್ಯದರ್ಶಿ)

ಮೇಲೆ ಕಂಡ ಸಮಿತಿಯ ಸಲಹೆ ಸೂಚನೆಗಳ ಮೇರೆಗೆ ಉದ್ದೇಶವನ್ನು ಆ ಸಮಿತಿಯ ಮೂಲಕ ನೆರವೇರಿಸುವ ಹೊಣೆಯನ್ನು ವಹಿಸಿಕೊಳ್ಳಬೇಕೆಂದು ಈ ಸಮ್ಮೇಳನ ಸಾಹಿತಿಗಳ ಸಂಘವನ್ನು ಬೇಡುತ್ತದೆ.

ಸೂಚಕರು: ಶ್ರೀ. ಎಂ. ಎನ್. ಗೋಪಾಲರಾಯರು.
ಅನುಮೋದಕರು: ಶ್ರೀ. ಮಾ. ನಾ. ಚೌಡಪ್ಪನವರು.

**(೪) ದಿವಂಗತ ಭಾಸ್ಕರರಾಯರ ಸ್ಪರ್ಧೆಯನ್ನು ಕತೆಗಳಿಗೂ ಅದರ ಸಂಬಂಧವಾದ ವಿಮರ್ಶಾರೂಪವಾದ ಪ್ರಬಂಧಗಳಿಗೂ ಮೀಸಲಾಗಿಡಬೇಕೆಂದು ಪ್ರಾರ್ಥನೆ**

ಈಗ ಮೂರು ವರ್ಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನವರು ಕತೆಗಾರರಾದ ದಿವಂಗತ ಶ್ರೀ ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ನಡಸುತ್ತಿರುವ ಸ್ಪರ್ಧೆಯನ್ನು ಇನ್ನುಮುಂದಕ್ಕೆ ಕನ್ನಡ ಸಣ್ಣಕತೆ ಮತ್ತು ಅದರ ಸಂಬಂಧವಾದ ವಿಮರ್ಶನರೂಪವಾದ ಪ್ರಬಂಧಕ್ಕೆ ಮಾತ್ರ ದಾತೃಗಳ ಅನುಮತಿ ಪಡೆದು ಮೀಸಲಾಗಿಡಬೇಕೆಂದು ಈ ಸಮ್ಮೇಳನ ಪರಿಷತ್ತನ್ನು ಬೇಡುತ್ತದೆ.

ಸೂಚಕರು: ಶ್ರೀ. ದ. ಕೃ. ಭಾರದ್ವಾಜರು.
ಅನುಮೋದಕರು: ಶ್ರೀ. ಎಂ. ಎಸ್. ಗೋಪಾಲರಾಯರು.

**(೫) 'ಕನ್ನಡ ನುಡಿ'ಯಲ್ಲಿ ಸಣ್ಣಕತೆಗಳ ಪ್ರಕಟನೆ**

ಪರಿಷತ್ತಿನ ವಾರಪತ್ರಿಕೆಯಾದ 'ಕನ್ನಡ ನುಡಿ'ಯಲ್ಲಿ ಸಣ್ಣಕತೆಗಳನ್ನು ಹೆಚ್ಚಾಗಿ ಪ್ರಕಟಿಸಬೇಕೆಂಬ ಉದ್ದೇಶವಿದೆ. ಎಲ್ಲ ಕತೆಗಾರರೂ ತಮ್ಮ ಸಣ್ಣಕತೆಗಳನ್ನು 'ಕನ್ನಡ ನುಡಿ'ಗೆ ಕಳಿಸಿಕೊಟ್ಟು ಅದಕ್ಕೆ ಪ್ರೋತ್ಸಾಹ ಕೊಡಬೇಕೆಂದು ಈ ಸಮ್ಮೇಳನ ಅವರನ್ನು ಬೇಡುತ್ತದೆ.

ಸೂಚಕರು: ಶ್ರೀ. ಎ. ಸೀತಾರಾಂ, ಬಿ.ಎ.
ಅನುಮೋದಕರು: ಶ್ರೀ. ಕೆ. ರಾಜಾರಾಯರು, ಬಿ.ಎ.

**(೬) ಪ್ರಪಂಚದ ಶ್ರೇಷ್ಠ ಕತೆಗಾರರ ಉತ್ತಮ ಕತೆಗಳ ಪರಿವರ್ತನೆ**

ಕನ್ನಡ ಸಾಹಿತಿಗಳ ಸಂಘವು ಕನ್ನಡ ನಾಡಿನ ಬೇರೆ ಬೇರೆ ಲೇಖಕರ ನೆರವು ಪಡೆದು ಪ್ರಪಂಚದ ಶ್ರೇಷ್ಠಕತೆಗಾರರ ಉತ್ತಮ ಕತೆಗಳೆಲ್ಲವನ್ನೂ ಕನ್ನಡಕ್ಕೆ ಪರಿವರ್ತನಗೊಳಿಸಿ ಸಾಧ್ಯವಾದಂತೆ ಪ್ರಕಟಿಸುವ ಏರ್ಪಾಟು ಮಾಡಬೇಕೆಂದು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ. ಎಂ. ವಿ. ಸೀತಾರಾಮಯ್ಯನವರು, ಎಂ.ಎ.
ಅನುಮೋದಕರು: ಶ್ರೀ. ಎಲ್. ಗುಂಡಪ್ಪನವರು, ಎಂ.ಎ.

**(೭) ಕನ್ನಡ ಪತ್ರಿಕೆಗಳವರಿಗೆ ವಂದನೆ; ಅವರು ಕತೆಗಾರರಿಗೆ ಹಣ ಸಹಾಯಮಾಡಬೇಕೆಂದು ಕೋರಿಕೆ**

(ಅ) ಕನ್ನಡ ಪತ್ರಿಕೆಗಳು ಕನ್ನಡ ಸಾಹಿತ್ಯ ಪ್ರಚಾರದ ವಿಚಾರದಲ್ಲಿ, ಮುಖ್ಯವಾಗಿ ಸಣ್ಣಕತೆಗಳ ವಿಚಾರದಲ್ಲಿ ಕೊಡುತ್ತಿರುವ ಪ್ರೋತ್ಸಾಹಕ್ಕಾಗಿ ಈ ಸಮ್ಮೇಳನ ಕನ್ನಡ ಪತ್ರಿಕೆಗಳನ್ನು ಅಭಿನಂದಿಸುತ್ತದೆ.

(ಆ) ಕನ್ನಡ ಪತ್ರಿಕೆಗಳವರು ಬರಹಗಾರರಿಗೆ, ಮುಖ್ಯವಾಗಿ ಸಣ್ಣಕತೆಗಳ ಬರಹಗಾರರಿಗೆ, ಸಾಧ್ಯವಾದಷ್ಟು ಹಣದ ಸಹಾಯವನ್ನು ಕೊಟ್ಟು ಈಗಿಗಿಂತಲೂ ಹೆಚ್ಚಾದ ಪ್ರೋತ್ಸಾಹವನ್ನು ಕೊಡಬೇಕೆಂದು ಈ ಸಮ್ಮೇಳನ ಕೋರುತ್ತದೆ.

ಸೂಚಕರು: ಶ್ರೀ. ಮತಿಘಟ್ಟ ಕೃಷ್ಣಮೂರ್ತಿ ಅವರು.
ಅನುಮೋದಕರು: ಶ್ರೀ. ದ. ಕೃ. ಭಾರದ್ವಾಜ ಅವರು.

---

## ಕನ್ನಡ ಸುದ್ದಿ

**ಬೆಂಗಳೂರು:**

ತಾ|| ೨೫-೧-೪೦ರ ಸಂಜೆ ಮಲ್ಲೇಶ್ವರದಲ್ಲಿರುವ ಶ್ರೀರಾಮ ಮಂದಿರದ ಸಭಾಂಗಣದಲ್ಲಿ ಮಲ್ಲೇಶ್ವರದ ಗ|| ಹೈಸ್ಕೂಲು ಕರ್ನಾಟಕ ಸಂಘದ ವಾರ್ಷಿಕೋತ್ಸವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಯಿತು.

ಶ್ರೀ ಮಾಸ್ತಿಯವರು ಭಾಷಣ ಮಾಡುತ್ತಾ, "ಈ ದಿನ ನನಗೆ ಬಹಳ ಸಂತೋಷದ ದಿನ. ಈ ಸಭೆ ನನ್ನ ಆನಂದವನ್ನು ಒಂದೇ ಸಮನಾಗಿ ಹೆಚ್ಚಿಸುತ್ತಿದೆ. ಕಿರಿಯರು ಈ ಉತ್ಸವವನ್ನು ಎಷ್ಟು ಸೊಗಸಾಗಿ ಏರ್ಪಾಡು ಮಾಡಿದ್ದಾರೆ, ಹಿರಿಯರು ಯಾವ ರೀತಿಯಾಗಿ ಮುಂದೆಬಂದು ಕಿರಿಯರಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ, ಎಂಬುದನ್ನು ನೋಡಿದರೆ ನಮ್ಮ ನಾಡಿನ ಅಭ್ಯುದಯದ ದಿನಗಳು ಬಂದುವೆಂದು ಕಾಣುತ್ತದೆ. ಇಂದು ನಮ್ಮ ನಾಡಿನಲ್ಲಿ ಉದ್ಭವವಾಗುತ್ತಿರುವ ಒಂದು ಹೊಸ ಹುರುಪು ನಮ್ಮಂತಹ ಮುದುಕರನ್ನು ಹುಡುಗರನ್ನಾಗಿ ಮಾಡುತ್ತಿದೆ. ನಮ್ಮ ಆಶೆಗಳು ನಿಜವಾಗುವ ಸುಸಂಧಿ ಬರುತ್ತಿದೆಯೆಂದು ನಮಗೆ ಭರವಸೆ ಬರುತ್ತಿದೆ. ಜಗತ್ತಿನಲ್ಲಿ ಇಂದು ಮಹತ್ಕಾರ್ಯವೊಂದು ನಡೆಯಬೇಕಾಗಿದೆ. ಅದು ಭಾರತದಿಂದಲೇ ನಡೆಯಬೇಕಾದ ಕಾರ್ಯ. ಭಾರತವು ನಡಸಬೇಕಾದ ಮಹಾಕಾರ್ಯದಲ್ಲಿ ಕರ್ನಾಟಕ ಹೆಚ್ಚು ಭಾಗವನ್ನು ತೆಗೆದುಕೊಳ್ಳಬೇಕು. ಇವುಗಳೆಲ್ಲದರ ಜತೆಯಲ್ಲಿ ಕನ್ನಡ ಒಂದು, ಕನ್ನಡಿಗರು ಒಂದು, ಕನ್ನಡನಾಡು ಒಂದು ಎಂಬ ಅಭಿಪ್ರಾಯ ಮಕ್ಕಳ ಮನಸ್ಸಿನಲ್ಲಿಯೂ ಬೆಳೆಯಬೇಕು. ಕರ್ನಾಟಕದಲ್ಲಿ ಎಷ್ಟು ದೂರ ಹೋದರೂ ಎಲ್ಲರ ನಡತೆಗಳು ನಮ್ಮ ಮನೆಯ ನಡತೆಗಳಂತೆಯೇ ಇವೆ. ಅವರ ಮಾತು ಸ್ವಲ್ಪಹೊತ್ತು ವಿಚಿತ್ರವಾದರೂ ಅದು ಬೇಗ ನಮ್ಮ ಮನೆಯ ಮಾತಿನಂತೆ ಆಗುತ್ತದೆ. ಅಂತಹ ನಾವು ಒಂದಾಗಬೇಕು. ಕನ್ನಡನಾಡು ಭಾರತದ ಇತಿಹಾಸದಲ್ಲಿ ಹೆಸರೆತ್ತಿದ ನಾಡು. ಶೂರ ವೀರರ ನಾಡು. ಮತಸ್ಥಾಪನಾಚಾರ್ಯರು ಹುಟ್ಟಿದ ಇಲ್ಲವೇ ಬಾಳಿದ ನಾಡು. ಆ ನಾಡು ಹಿಂದಿನಂತೆಯೇ ಇಂದು ರಾಷ್ಟ್ರದ ಸೇವೆಗೆ, ಜಗತ್ತಿನ ಸೇವೆಗೆ ಮುಂದೆ ಬರಬೇಕು." ಎಂದರು.

(ದೇಶಬಂಧುವಿನಿಂದ)

**ಕಲ್ಕತ್ತ :**

ಕಳೆದ ಡಿಸೆಂಬರಿನಲ್ಲಿ ಕಲ್ಕತ್ತೆಯ 'ಮೈಸೂರು ವಸತಿ ಗೃಹ'ದಲ್ಲಿ ಒಂದು ಸಾಹಿತ್ಯಗೋಷ್ಠಿ ನಡೆಯಿತು. ಡಾ॥ ಕಾಳಿದಾಸ ನಾಗ್ ಅವರು ಸಭಾಧ್ಯಕ್ಷತೆ ವಹಿಸಿದ್ದರು. ಡಾ॥ ಎಂ. ಎಚ್. ಕೃಷ್ಣ, ಡಾ॥ ಬಿ. ಎ. ಸಾಲೆತೊರೆ, ಉಸ್ಮಾನಿಯ ವಿಶ್ವವಿದ್ಯಾನಿಲಯದ ಪ್ರೊ॥ ಎ. ಎಂ. ಸಿದ್ದಿಕ್, ಆಂಧ್ರ ಇತಿಹಾಸ ಸಂಶೋಧನ ಸಂಘದ ಶ್ರೀ॥ ಬಿ. ಕೃಷ್ಣರಾವ್ ಇವರುಗಳು ಭಾಷಣ ಮಾಡಿದರು. ಡಾ॥ ಕೃಷ್ಣ ಅವರು ಕನ್ನಡ ಸಾಹಿತ್ಯದ ವಿಷಯವಾಗಿಯೂ, ಡಾ॥ ಸಾಲೆತೊರೆ ಅವರು 'ಕರ್ನಾಟಕದ ಸಂಸ್ಕೃತಿ ಮತ್ತು ಗತವೈಭವ' ಎಂಬ ವಿಷಯವಾಗಿಯೂ ಮಾತನಾಡಿದರು (ಎಂಬುದಾಗಿ ಕಲ್ಕತ್ತೆಯ ಶ್ರೀ. ಎ. ನಾರಾಯಣಸ್ವಾಮಿ ಅಯ್ಯರ್ ಅವರು ಬರೆದು ತಿಳಿಸುತ್ತಾರೆ.)

**ಹೊಳೆನರಸೀಪುರ: ಕರ್ನಾಟಕ ಸಂಘ**

ಇದೇ ೨೬ನೆಯ ತಾರೀಖು ಸಂಜೆ, 'ಅಧ್ಯಾತ್ಮ ಪ್ರಕಾಶ' ಪತ್ರಿಕೆಯ ಸಂಪಾದಕರಾದ ಶ್ರೀ. ವೈ. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಚರ್ಚಾಗೋಷ್ಠಿ ನಡೆಯಿತು. ಚರ್ಚೆಯ ವಿಷಯ—'ನಾಟಕದಲ್ಲಿ ಸಂಗೀತ ಅನುಚಿತ' (ವಿಷಯ ಬಹುಮತದಿಂದ ಬಿದ್ದು ಹೋಯಿತು.)

**ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘ : ಮೈಸೂರು**

ಜನವರಿ ೨೮ನೆಯ ತಾರೀಖು ಬೆಳಗ್ಗೆ ಸಂಘದ ವಾರ್ಷಿಕೋತ್ಸವ ನಡೆಯಿತು. ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಉತ್ಸವದ ಅಧ್ಯಕ್ಷರಾಗಿದ್ದರು. ವಿಶ್ವವಿದ್ಯಾನಿಲಯದ ವೈಸ್ ಚಾನ್ಸೆಲರ್ರವರಾದ ಶ್ರೀ. ಎಸ್. ಎಸ್. ಸುಬ್ಬರಾಯರು ಸಭೆಗೆ ದಯಮಾಡಿಸಿ ಸಂಘದ ಕಾರ್ಯಕಲಾಪಗಳಲ್ಲಿ ತಮ್ಮ ಸಹಾನುಭೂತಿ ವ್ಯಕ್ತಪಡಿಸಿ ಪ್ರೋತ್ಸಾಹಿಸಿದರು. ಸಭೆ ವಿದ್ಯಾರ್ಥಿಗಳಿಂದಲೂ ಮಾನ್ಯ ಮಹನೀಯರಿಂದಲೂ ಮಹಿಳೆಯರಿಂದಲೂ ತುಂಬಿತ್ತು. ಶ್ರೀ ಜಯಚಾಮರಾಜ ಒಡೆಯರವರೂ ಶ್ರೀ॥ ಡಿ. ವಿ. ಗುಂಡಪ್ಪನವರೂ ಸಂದೇಶಗಳನ್ನು ಕಳಿಸಿದ್ದರು.

ಉತ್ಸವ ಸಂದರ್ಭದಲ್ಲಿ ಎರಡು ಮುಖ್ಯ ಕಾರ್ಯಗಳು ನಡೆದುವು— "ಕುಮಾರವ್ಯಾಸ ಪ್ರಶಸ್ತಿಯ" ಪ್ರಕಟನೆ ಮತ್ತು ದಿವಂಗತ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಭಾವಚಿತ್ರದ ಅನಾವರಣೋತ್ಸವ.

ಸಂಘದ ಅಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಮೊದಲು ಮಾತಾಡುತ್ತ, ಶ್ರೀ॥ ವೆಂಕಣ್ಣಯ್ಯನವರನ್ನು ಕುರಿತು, ಅವರು ನಿಧನರಾದ್ದರಿಂದ ಸಂಘಕ್ಕೂ ಕನ್ನಡ ನಾಡಿಗೂ ದೊಡ್ಡ ನಷ್ಟವಾಗಿದೆಯೆಂದೂ, ಅವರು ಕನ್ನಡಿಗರ ಹೃದಯದಲ್ಲಿ ಸಾಧುಸಂತರಂತೆ ಒಂದು ಪೂಜ್ಯಸ್ಥಾನವನ್ನು ಪಡೆದು ಚಿರಕೀರ್ತಿಯುಳ್ಳವರಾಗಿರುವರೆಂದೂ ('He will live as one of the Saints in the Kannada Calendar'.) ಹೇಳಿದರು. ಆಮೇಲೆ ಕನ್ನಡ ಭಾಷೆ ಸಾಹಿತ್ಯಗಳಿಗೆ ಶ್ರೀ॥ ಎಸ್. ಎಸ್. ಸುಬ್ಬರಾಯರಿಂದ ಆಗಿರುವ ಮಹೋಪಕಾರವನ್ನು ಸ್ಮರಿಸುತ್ತ, ಹೈಸ್ಕೂಲಿನಲ್ಲಿ ಕನ್ನಡವನ್ನು ಬೋಧಭಾಷೆಯಾಗಿ ಮಾಡಿ ಅದಕ್ಕೆ ಅತಿಶಯವಾದ ಪ್ರೋತ್ಸಾಹ ಕೊಟ್ಟರೆಂದೂ, ಈಗ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಚಾರೋಪನ್ಯಾಸ ಗ್ರಂಥಮಾಲೆ ಹೊರಡಿಸಿ ಆ ಮಾಲೆಯ ಗ್ರಂಥಗಳು ಬಹು ಸುಲಭ ಬೆಲೆಗೆ ದೊರೆಯುವಂತೆ ಮಾಡಿ ಕನ್ನಡದ ಬಗ್ಗೆ, ಕನ್ನಡದ ಮೂಲಕ, ತಿಳಿವು ಹರಡಲು ದೊಡ್ಡ ಸಹಾಯ ಮಾಡಿರುವರೆಂದೂ ಹೇಳಿದರು.

ಶ್ರೀ॥ ಮಾಸ್ತಿಯವರು ಶ್ರೀ ವೆಂಕಣ್ಣಯ್ಯನವರ ಭಾವಚಿತ್ರದ ಅನಾವರಣ ಮಾಡಿದರು. ಆ ಸಂದರ್ಭದಲ್ಲಿ, ಶ್ರೀ॥ ಎ. ಎನ್. ಮೂರ್ತಿರಾಯರೂ, ಶ್ರೀಮತಿ ಲಲಿತಮ್ಮ ಎಂಬ ವಿದ್ಯಾರ್ಥಿನಿಯೂ, ಇನ್ನೊಬ್ಬ ವಿದ್ಯಾರ್ಥಿಯೂ ದಿವಂಗತರ ವಿಷಯವಾಗಿ ಮಾತಾಡಿದರು. ಶ್ರೀ॥ ಮಾಸ್ತಿಯವರು ದಿವಂಗತರ ಗುಣಗಾನ ಮಾಡುತ್ತ, ಅವರು ಆಗಡಿ ಸ್ವಾಮಿಗಳ ಶಿಷ್ಯರಾಗಿದ್ದರೆಂದೂ, ಅವರ ಮನಸ್ಸಿನ ಮೇಲೆ ಆಗಡಿಯವರ ಪ್ರಭಾವ ಬಹಳವಾಗಿತ್ತೆಂದೂ, ಬಹಳ ಶೋಚನೀಯ ಸ್ಥಿತಿಯಲ್ಲಿದ್ದ ಕನ್ನಡ ಈಗ ತಲೆಯೆತ್ತಿದೆಯೆಂದೂ, ಹೀಗೆ ಕನ್ನಡ ತಲೆಯೆತ್ತುವಂತೆ ಮಾಡಿದ ಹಿರಿಯ ವ್ಯಕ್ತಿಗಳಲ್ಲಿ ಶ್ರೀ. ವೆಂಕಣ್ಣಯ್ಯನವರು ಒಬ್ಬರೆಂದೂ ನುಡಿದರು. ಮತ್ತು, ಕನ್ನಡ ದೊಡ್ಡದಾಗಬೇಕು. ಭಾರತ ಭೂಮಿಯಲ್ಲಿ ಅದು ಹಿರಿಯಸ್ಥಾನ ಗೌರವ ಗಳಿಸಬೇಕು. ಇದು ಎಲ್ಲರ ದುಡಿಮೆಯಿಂದ ಮಾತ್ರ ಸಾಧ್ಯ—ಎಂದರು.

## ಕನ್ನಡ ಸಂಘ, ಮೇಲ್ಕೋಟೆ

ಪ್ರಥಮ ವಾರ್ಷಿಕೋತ್ಸವ (ವರದಿ: ಸಂಘದ ಕಾರ್ಯದರ್ಶಿಗಳಿಂದ)

ಮೇಲ್ಕೋಟೆ ಕನ್ನಡ ಸಂಘದ ಪ್ರಥಮ ವಾರ್ಷಿಕೋತ್ಸವ ಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರಿಂದ ತಾ॥ ೧೭ನೆಯ ಬೆಳಗ್ಗೆ ಪ್ರಾರಂಭವಾಯಿತು. ತಳಿರು ತೋರಣಗಳಿಂದ ಅಲಂಕೃತವಾದ ಸಾರ್ವಜನಿಕ ವಾಚನಾಲಯದಲ್ಲಿ ಪುಸ್ತಕ ಮತ್ತು ಕಲಾ ಪ್ರದರ್ಶನ ಏರ್ಪಾಡಾಗಿತ್ತು. ಪುಸ್ತಕ ಪ್ರದರ್ಶನದಲ್ಲಿ ಕ್ರಿ. ಶ. ೭೦೦ ರಿಂದ ಇಂದಿನವರೆಗೆ ಮೇಲ್ಕೋಟೆಯ ಮಹನೀಯರು, ಆಚಾರ್ಯರು, ಸನ್ಯಾಸಿಗಳು ಬರೆದಿರತಕ್ಕ (ಮುಖ್ಯವಾಗಿ ವಿಶಿಷ್ಟಾದ್ವೈತ ಸಂಪ್ರದಾಯದ) ಗ್ರಂಥಗಳೆಲ್ಲಾ ಪ್ರದರ್ಶಿತವಾಗಿದ್ದುವು. ಮೇಲ್ಕೋಟೆಯವರಾದ, ಚಿಕ್ಕದೇವರಾಯನ ಮಂತ್ರಿಯಾದ ತಿರುಮಲೆಯಾರ್ಯನ ಕೃತಿಗಳೂ ಆಧುನಿಕರಾದ ದೇವಶಿಖಾಮಣಿ ಅಳಸಿಂಗರಾಚಾರ್, ರಾಮಾನುಜ ಅಯ್ಯಂಗಾರ್, ಪು. ತಿ. ನರಸಿಂಹಾಚಾರ್ ಮುಂತಾದವರ ಕೃತಿಗಳೂ ಇಬ್ಬರು ಆಧುನಿಕ ಮಹಿಳೆಯರ ಗ್ರಂಥಗಳ ಹಸ್ತಪ್ರತಿಗಳೂ, ಒಟ್ಟಿನಲ್ಲಿ ೧೫೦ ಪುಸ್ತಕಗಳು, ಪ್ರದರ್ಶನದಲ್ಲಿದ್ದುವು. ಕಲಾ ಪ್ರದರ್ಶನದಲ್ಲಿ ಮೇಲ್ಕೋಟೆಯ ಚಿತ್ರಗಾರರ ಚಿತ್ರಗಳೂ, ಮೇಲ್ಕೋಟೆಯವರೇ ಕೈಯಿಂದ ನಾಡಿದ ಖಾದಿ ಬಟ್ಟೆಯೂ ಪ್ರದರ್ಶಿತವಾಗಿದ್ದುವು. ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರೂ ಬೇಂದ್ರೆಯವರೂ ವಾಚನಾಲಯದ ಆವರಣದಲ್ಲಿ ಎರಡು 'ಯೂಕ್ಲಿಪ್ಟಸ್' ಗಿಡಗಳನ್ನು ಕರತಾಡನಗಳ ನಡುವೆ ನೆಟ್ಟರು.

ಸಮ್ಮೇಳನ ೧೭ನೆಯ ತಾರೀಖು ಸಂಜೆ ೫ ಗಂಟೆಗೆ ಪ್ರಾರಂಭವಾಯಿತು. ಬಾಲಕಿಯರು, ಪ್ರಾರಂಭದಲ್ಲಿ ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರಿಂದ ರಚಿತವಾದ 'ಶಾರದೆಗೆ ಹರಕೆ' ಎಂಬ ಗೀತವನ್ನೂ, ಶ್ರೀಮಾನ್ ಹೆಮ್ಮಿಗೆ ದೇಶಿಕಾಚಾರ್ಯ, ಮೇಲ್ಕೋಟೆಯ ಜೋಯಿಸರು ಶ್ರೀ ಹಿರಿಯಣ್ಣಯ್ಯ ಮತ್ತು ಮಧ್ಯಮಿಕಶಾಲೆ ಪಂಡಿತರಾದ ತಿಮ್ಮಪ್ಪಯ್ಯನವರಿಂದ ರಚಿತವಾದ ಗೀತೆಗಳನ್ನೂ ಮಧುರವಾಗಿ ಹಾಡಿದರು. ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರು ಮಾಸ್ತಿಯವರನ್ನು ಪರಿಚಯ ಮಾಡಿಕೊಟ್ಟು ಭಾಷಣ ಮಾಡಿದರು. ಕನ್ನಡ ಸಂಘದ ಕಾರ್ಯದರ್ಶಿಗಳು ಸಂಘದ ವಾರ್ಷಿಕ ವರದಿಯನ್ನು ಓದಿದರು. ಪುರಜನರ ಪರವಾಗಿ ಪೌರಸಭಾ ಉಪಾಧ್ಯಕ್ಷರಾದ ಶ್ರೀ. ಎ. ಕೆ. ಅಳಸಿಂಗರಾಚಾರ್ಯರೂ, ಕನ್ನಡ ಸಂಘದ ಪರವಾಗಿ ಶ್ರೀ ಎಂ. ವಿ. ಅಳಸಿಂಗರಾಚಾರ್ಯರೂ ಸ್ವಾಗತವಿತ್ತು ಭಾಷಣಮಾಡಿದರು. ಅನಂತರ ಶ್ರೀ ಡಿ. ಆರ್. ಚನ್ನೇಗೌಡರು ಕೆಲವು ಕವನಗಳನ್ನು ಓದಿದರು. ಶ್ರೀ ಬೇಂದ್ರೆಯವರು ಮೂರು ಕವನಗಳನ್ನು ಪಠಿಸಿ "ಕನ್ನಡ ಕುಲ"ದ ಮೇಲೆ ವಿದ್ವತ್ಪೂರ್ಣವಾದ ಭಾಷಣ ಮಾಡಿದರು. ಶ್ರೀ ಸಾಂಖ್ಯತೀರ್ಥ ವಿದ್ವಾನ್ ಜಗ್ಗು ವೆಂಕಟಾಚಾರ್ಯರು ಸ್ಥಳ ಮಹಾತ್ಮೆಯನ್ನು ಕುರಿತು ಭಾಷಣ ಮಾಡಿದರು. ಶಾಲೆಯ ಬಾಲಕಿಯರು ಗೀತೆಗಳನ್ನು ಹಾಡಿ ಮನೋಹರವಾಗಿ ಅಭಿನಯಿಸಿದರು. ಶ್ರೀ ಮಾಸ್ತಿ ವೆಂಕಟೇಶಐಯ್ಯಂಗಾರ್ಯರು ತಮ್ಮ ಭಾಷಣದಲ್ಲಿ ಕನ್ನಡ ಭಾಷೆಯ ಏಳಿಗೆಯನ್ನು ಕುರಿತು ಪ್ರಸ್ತಾಪಿಸುತ್ತ, "ಕನ್ನಡವನ್ನು ಬಿಟ್ಟರೆ ನಮಗೆ ಗತಿಯಿಲ್ಲ. ಕನ್ನಡದ ಬಾಳನ್ನು ಬೆಳಗಿಸುವುದು ಕನ್ನಡಿಗರು ಕನ್ನಡ ತಾಯಿಗೆ ಸಲ್ಲಿಸುವ ಕಾಣಿಕೆ" ಎಂದು ಮನಮುಟ್ಟುವಂತೆ ಹೇಳಿ, ಕನ್ನಡಿಗರಾದ ನಾವು ಕನ್ನಡಕ್ಕೆ ಹೇಗೆ ಸೇವೆ ಮಾಡಬಹುದೆಂಬುದನ್ನು ಸ್ಪಷ್ಟವಾಗಿ ವಿವರಿಸಿದರು. ರಾತ್ರಿ ಹತ್ತು ಗಂಟೆಯಮೇಲೆ, ಮೇಲುಕೋಟೆ ಗೀರ್ವಾಣ ಭಾಷಾಭಿವೃದ್ಧಿನೀ ಸಭೆಯವರು 'ತಿರುಪಾಣಿ' ನಾಟಕದ ಕೆಲವು ದೃಶ್ಯಗಳನ್ನು ಅಂದವಾಗಿ ಅಭಿನಯಿಸಿದರು.

೧೮ನೆಯ ತಾರೀಖು ಬೆಳಗ್ಗೆ, ಗೀರ್ವಾಣ ಭಾಷಾಭಿವೃದ್ಧಿನೀಸಭೆಯಲ್ಲಿ ಶ್ರೀ ಮಾಸ್ತಿಯವರು "ಸಂಸ್ಕೃತಜ್ಞರಿಂದ ಕನ್ನಡಕ್ಕೆ ಆಗಬೇಕಾದ ಕೆಲಸವೇನು" ಎಂಬ ವಿಷಯದಮೇಲೆ ಬಹಳ ಹೃದಯಂಗಮವಾಗಿ ಮಾತನಾಡಿದರು. ಸಂಸ್ಕೃತ ಕಾಲೇಜು ವಿದ್ಯಾರ್ಥಿಗಳು ತಾವೇ ಸಂಸ್ಕೃತದಲ್ಲಿ ರಚಿಸಿದ್ದ ಸ್ವಾಗತ ಗೀತೆಗಳನ್ನು ಹಾಡಿದನಂತರ ಸಂಘದ ಕಾರ್ಯದರ್ಶಿಗಳಾದ ಶ್ರೀ ಎಂ. ಕೆ. ಶ್ರೀನಿವಾಸಯ್ಯಂಗಾರ್ಯರು ಸಂಸ್ಕೃತ ಭಾಷೆಯಲ್ಲೂ ಕನ್ನಡ ಭಾಷೆಯಲ್ಲೂ ಮಾಸ್ತಿಯವರನ್ನು ಸ್ವಾಗತಿಸಿದರು. ಶ್ರೀ ಬೇಂದ್ರೆಯವರೂ ಮಾಸ್ತಿಯವರೂ ಬಹಳ ಸ್ಫೂರ್ತಿದಾಯಕವಾದ ಭಾಷಣಗಳನ್ನು ಮಾಡಿದರು. ಅನಂತರ ಶ್ರೀಮಾನ್ ವಿದ್ವಾನ್ ಪುರೋಹಿತ ತಿರುನಾರಣ ಅಯ್ಯಂಗಾರ್ಯರು ರಾಮಾನುಜಾಚಾರ್ಯರ ಸೂಕ್ತಿಗಳನ್ನು ತೆಗೆದುಕೊಂಡು 'ನಾವು ಆಶೀರ್ವದಿಸಿದರೆ ಅದರಲ್ಲಿ ಅಶುದ್ಧ, ತಪ್ಪು ಸೇರಬಹುದು. ಆದುದರಿಂದ ಯತಿವರ್ಯರ ಮಾತಿನಲ್ಲೇ ಆಶೀರ್ವದಿಸುತ್ತೇನೆ' ಎಂದು ಶ್ರೀ ಮಾಸ್ತಿಯವರಿಗೆ ಶ್ಲೋಕಾಮೃತ ಸೇಚನೆಯನ್ನು ಮಾಡಿದರು. ಅನಂತರ ಕಾರ್ಯದರ್ಶಿಗಳಿಂದ ವಂದನಾ ಸಮರ್ಪಣೆಯಾಯಿತು. ಶ್ರೀ ಮಾಸ್ತಿಯವರು ಸಂಸ್ಕೃತ ಪಾಠಶಾಲೆಯನ್ನು ಲೈಬ್ರೆರಿಯನ್ನೂ ಸಂದರ್ಶಿಸಿದರು.

೧೮ನೆಯ ತಾರೀಖು ಸಂಜೆ ಸಾರ್ವಜನಿಕ ಸಭೆಯಲ್ಲಿ ಶ್ರೀ ಬೇಂದ್ರೆಯವರು ತಮ್ಮ ಕವನಗಳನ್ನು ಓದಿದರು. ಶ್ರೀ ಗೊರೂರು ರಾಮಸ್ವಾಮಿ ಐಯಂಗಾರ್ಯರು ಹಳ್ಳಿಯ ಹಾಡುಗಳನ್ನು ಹೇಳಿದರು. ಶ್ರೀ ಮಾಸ್ತಿಯವರು ಕರ್ನಾಟಕ ಸಂಸ್ಕೃತಿ ಎಂದರೇನು; ಅದು ಹೇಗೆ ಬೆಳೆದುಬಂದಿದೆ; ಅದರ ತಿರುಳು ಯಾವುದು; ಅದನ್ನು ಉಳಿಸಿಕೊಳ್ಳುವುದು ಹೇಗೆ; ಸಂಸ್ಕೃತಿ ಹೇಗೆ ಪರಂಪರೆಯಾಗಿ ಬೆಳೆದುಬಂದಿದೆ; ಮುಂದೆ ಹೇಗೆ ಅದನ್ನು ಬೆಳೆಸಬೇಕು—ಎಂಬ ವಿಚಾರದಲ್ಲಿ ಬಹು ಸ್ವಾರಸ್ಯವಾಗಿ ಭಾಷಣ ಮಾಡಿದರು. ಶ್ರೀ ಡಿ. ಆರ್. ಚನ್ನೆಗೌಡರು ತಾವು ಪ್ರಕಟಿಸಿದ ನೀತಿಕೋಶವನ್ನು ಬಾಲಕಿಯವರಿಗೆ ಬಹುಮಾನವಾಗಿ ಕೊಟ್ಟರು. ರಾತ್ರಿ ಮೇಲ್ಕೋಟೆ ಯಕ್ಷಗಾನ ಸಭೆಯವರು 'ಸುಭದ್ರಾಕಲ್ಯಾಣ'ವನ್ನು ಮನೋಹರವಾಗಿ ಆಡಿ ತೋರಿದರು; ಶ್ರೀ ಮಾಸ್ತಿಯವರಿಗೆ ಬಿನ್ನವತ್ತಳೆಯನ್ನು ಅರ್ಪಿಸಿದರು. ಮಾಸ್ತಿಯವರು ಯಕ್ಷಗಾನ ಕಲೆ ಹೇಗೆ ನಮ್ಮ ದೇಶಕ್ಕೆ ಅನೂಚಾನವಾಗಿ ಬಂದುದೆಂಬುದನ್ನೂ, ಅದರಿಂದ ಹೇಗೆ ಸ್ವಲ್ಪ ವೆಚ್ಚದಲ್ಲಿ ಎಲ್ಲರಿಗೂ ಬಹಳ ಆನಂದವುಂಟಾಗುವುದೆಂಬುದನ್ನೂ, ಹೇಗೆ ಈ ಕಲೆಯನ್ನು ಮುಂದಕ್ಕೆ ಅಭಿವೃದ್ಧಿಮಾಡಿಕೊಳ್ಳುತ್ತಾ ಹೋಗಬೇಕೆಂಬುದನ್ನೂ ತಿಳಿಸಿದರು. ಸಭೆಯವರಿಗೆ ಜ್ಞಾಪಕಾರ್ಥವಾಗಿ ಒಂದು ರಜತ ಪಾತ್ರೆಯನ್ನು ಕೊಟ್ಟರು. ಶ್ರೀ ಖಾದ್ರಿ ವೆಂಕಟನರಸಿಂಹಾಚಾರ್ಯರಿಂದ ವಂದನಾ ಸಮರ್ಪಣೆಯಾಯಿತು.

ಹೀಗೆ ಮೇಲ್ಕೋಟೆಯ ಕನ್ನಡ ಸಂಘದ ವಾರ್ಷಿಕೋತ್ಸವ, ಸಂಘದವರ ಸಾಹಸದಿಂದ, ಆಪ್ತಾನಿತರಾಗಿದ್ದವರ ಬೆಂಬಲದಿಂದ, ಪುರಜನರ ಸೌಹಾರ್ದದಿಂದ, ಉಪನ್ಯಾಸಕರ ಪ್ರತಿಭೆಯಿಂದ, ತಾವಿದ್ದಕಡೆ ಸ್ವರ್ಗವನ್ನು ಸೃಷ್ಟಿಮಾಡತಕ್ಕ ಮಾಸ್ತಿಯವರ ಸೌಜನ್ಯ ಮತ್ತು ಪ್ರತಿಭೆಯಿಂದ ದೊಡ್ಡ ಕಲಾ ಉತ್ಸವವಾಗಿ ಯಶಸ್ವಿಯಾಗಿ ನಡೆಯಿತು.

**ಈ ಪತ್ರಿಕೆಯು ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ 'ಮೈಸೂರು ಪೇಪರ್'ನಲ್ಲೇ ಅಚ್ಚಾಗುತ್ತಿದೆ.**

೧೯—೯೦೦—೧೯೪೦
ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು

# ಕನ್ನಡ ನುಡಿ



ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ:
ಸಂಚಿಕೆ ೧೬ | ಬೆಂಗಳೂರು, ಶುಕ್ರವಾರ, ಫೆಬ್ರುವರಿ ೯, ೧೯೪೦ | ಬಿ. ವೆಂಕೋಬರಾವ್, ಬಿ.ಎ.

ಕನ್ನಡ ನುಡಿ ಭಕ್ತರು—೨೨.

## ಪಂಡಿತ ಶ್ರೀಮಾನ್ ದೇವಶಿಖಾಮಣಿ ಅಳಸಿಂಗ್ರಾಚಾರ್ಯರು

ಲೇಖಕರು: ಶ್ರೀ॥ ದ. ಕೃ. ಭಾರದ್ವಾಜ, ಬೆಂಗಳೂರು

ಈಗ್ಗೆ ೯-೧೦ ವರುಷಗಳ ಹಿಂದಿನ ಮಾತು. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾನಿಲಯದ ಲೈಬ್ರರಿಯನರೂ ಕನ್ನಡ ಪ್ರೊಫೆಸರರೂ ಆದ ಶ್ರೀ ಕೃಷ್ಣಸ್ವಾಮಿರಾಯರು ಮದ್ರಾಸು ವಿಶ್ವವಿದ್ಯಾನಿಲಯದ ಕನ್ನಡ ಪರೀಕ್ಷೆಗಳ ಬೋರ್ಡಿಗೆ ಚೇರ್ಮನ್ನರಾಗಿದ್ದರು. ಅವರು ಅಸ್ವಸ್ಥರಾಗಿದ್ದುದರಿಂದ ಬೆಂಗಳೂರಿಗೆ ಬಂದು ಇಲ್ಲಿ ತಮ್ಮ ಅಳಿಯ ಶ್ರೀ ಅ. ನ. ಕೃಷ್ಣರಾಯರ ಮನೆಯಲ್ಲಿಳಿದುಕೊಂಡಿದ್ದರು. ಆಗ, ಉಳಿದ ಕನ್ನಡ ಪರೀಕ್ಷಕರೆಲ್ಲರೂ ಇಲ್ಲಿಗೆ ಬರಬೇಕೆಂದು ಅವರು ವಿನಂತಿ ಮಾಡಿಕೊಂಡಿದ್ದರು. ಆ ಸಮಯದಲ್ಲಿ ಪರೀಕ್ಷಕರಲ್ಲೊಬ್ಬರಾದ ಶ್ರೀಮಾನ್ ಅಳಸಿಂಗ್ರಾಚಾರ್ಯರೂ ಇಲ್ಲಿಗೆ ದಯಮಾಡಿಸಿದ್ದರು. ಅದೇ ವರುಷ ಪರೀಕ್ಷಕರಾಗಿದ್ದ ನನ್ನ ಮಿತ್ರರಾದ ಶ್ರೀ ಮುಳಿಯ ತಿಮ್ಮಪ್ಪಯ್ಯ ಮತ್ತು ಶ್ರೀ ಕಡೆಂಗೋಡ್ಲು ಶಂಕರಭಟ್ಟರನ್ನು ನಮ್ಮ ಮನೆಯಿಂದ ಕೃಷ್ಣರಾಯರ ಮನೆಗೆ ಕರೆದುಕೊಂಡುಹೋದಾಗ ಅಲ್ಲಿ ಶ್ರೀಮಾನ್ ಅಳಸಿಂಗ್ರಾಚಾರ್ಯರನ್ನು ಕಂಡೆನು. ಮುಳಿಯರು ಅವರಿಗೆ ನನ್ನ ಪರಿಚಯ ಮಾಡಿಸಲು, ಆಚಾರ್ಯರು "ನಾನು ಅವರನ್ನು ಬಲ್ಲೆ. ಅವರ ಪುಸ್ತಕಗಳನ್ನು ಓದಿದ್ದೇನೆ" ಎಂದರು. ಅದಕ್ಕೆ ಮೊದಲು ನಾನು ಅವರನ್ನು ಒಂದು ಸಲ ಬೆಂಗಳೂರಿನಲ್ಲಿ, ಮತ್ತೊಂದು ಸಲ ಮದ್ರಾಸಿನಲ್ಲಿ ಈಗ ನ್ಯಾಯವಿಧಾಯಕ ಸಭೆಯ ಅಧ್ಯಕ್ಷರಾದ ಮಾನ್ಯ ರಾ। ಬ॥ ರಾಮರಾಯರ ಮನೆಯಲ್ಲಿ ನೋಡಿದ್ದೆನು. ಅದರೆ ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೆ ಅವರ ವಾಲ್ಮೀಕಿ ರಾಮಾಯಣದ ಭಾಷಾಂತರವನ್ನು ಓದಿದ್ದೆನು.

ಪಂಡಿತ ಶ್ರೀ ದೇವಶಿಖಾಮಣಿ ಅಳಸಿಂಗ್ರಾಚಾರ್ಯರಿಗೆ ಈಗ ೭೩ ವರುಷ ವಯಸ್ಸಾಗಿದೆ (ಜನನ ೧೮೬೭). ದಿವ್ಯಕ್ಷೇತ್ರವೆನಿಸಿರುವ ಯಾದವಗಿರಿ (ಮೇಲುಕೋಟೆ)ಯೆ ಇವರ ಜನ್ಮಸ್ಥಳ. ನವಾಬನಿಂದ ಬಿಬಿನಾಚ್ಚಿಯಾರನ್ನು ದಿಲ್ಲಿಯಿಂದ ಮೇಲುಕೋಟೆಗೆ ಬರಮಾಡಿಕೊಂಡ ಶ್ರೀ ಚೆಲುವರಾಯಸ್ವಾಮಿಯೆ ಇವರ ಕುಲದೈವ. (ಈ ದಂತಕಥೆಯನ್ನು ರೈಸ್ ಸಾಹೇಬರ ಗೆಜೆಟಿಯರಲ್ಲಿಯೂ ತರುಣ ಕತೆಗಾರರಾಗಿ ಪ್ರಸಿದ್ಧರಾದ ಶ್ರೀ ಎ. ರಂಗಸ್ವಾಮಿಯವರ ಕೃಷ್ಣ ನಾಳೆಯಲ್ಲಿಯೂ ಓದಬಹುದು.)



ಶ್ರೀಮಾನ್ ಅಳಸಿಂಗ್ರಾಚಾರ್ಯರು

ಶ್ರೀಮಾನ್ ಅಳಸಿಂಗ್ರಾಚಾರ್ಯರು ಪ್ರಸಿದ್ಧ ಪಂಡಿತರ ವಂಶಕ್ಕೆ ಸೇರಿದವರೆಂಬುದನ್ನು ಅವರೇ **‘ ಶ್ರೀ ಚೆಲ್ವನಾರಾಯಣ ಶತಕಂ ’** ಎಂಬ ನೂರು ಪದ್ಯಗಳುಳ್ಳ ನೀತಿ ಕಾವ್ಯವನ್ನು ಸನ್ ೧೯೦೦ರಲ್ಲಿ ರಚಿಸಿದಾಗ, ಅದರಲ್ಲಿ ಕೊನೆಗೆ ತಿಳಿಸಿರುವರು. *

ಶ್ರೀಮಾನ್ ಅಳಸಿಂಗ್ರಾಚಾರ್ಯರು ನಸುಗಪ್ಪಾಗಿ, ಉನ್ನತವಾದ ದೇಹದಾರ್ಢ್ಯವುಳ್ಳವರಾಗಿ, ಎಲ್ಲರೊಂದಿಗೂ ಮಂದಹಾಸದಿಂದ ಮಾತನಾಡುವವರಾಗಿರುವರು. ಇವರು ಮೊದಲು ಮದರಾಸ್ ಕ್ರಿಶ್ಚಿಯನ್ ಕಾಲೇಜಿನ ಕನ್ನಡ ಪಂಡಿತರಾಗಿದ್ದರು. ಮಹಾಮಹೋಪಾಧ್ಯಾಯ ಪಂಡಿತ ಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಕನ್ನಡ ಅಧ್ಯಾಪಕತ್ವದಿಂದ ನಿವೃತ್ತರಾದ ಬಳಿಕ ಅಳಸಿಂಗ್ರಾಚಾರ್ಯರೇ ಕಾಲೇಜಿನ ಕನ್ನಡ ಪಂಡಿತರಾಗಿ ನೇಮಿಸಲ್ಪಟ್ಟರು. ಮತ್ತೆ ಕ್ವೀನ್ ಮೇರೀಸ್ ಕಾಲೇಜ್ ಮತ್ತು ಮದ್ರಾಸ್ ವಿಮೆನ್ಸ್ ಕ್ರಿಶ್ಚಿಯನ್ ಕಾಲೇಜಿಗೂ ಇವರೇ ಕನ್ನಡ ಪಂಡಿತರಾಗಿದ್ದರು. ಹೀಗೆ ಇವರು ನಾಲ್ಕು ಕಾಲೇಜುಗಳಿಗೆ ಏಕಕಾಲದಲ್ಲಿ ಕನ್ನಡ ಅಧ್ಯಾಪಕರಾಗಿ, ಅನೇಕ ಜನ ಕನ್ನಡ ಸ್ನಾತಕ ಸ್ನಾತಕಿಯರನ್ನು ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಹೊರಗೆ ಹಾಕಿದ ಯಶಸ್ಸು ಇವರದಾಗಿದೆ. ಅದರೆ ಇಂದು ಇವರು **ಶ್ರೀ ವಾಲ್ಮೀಕಿ ರಾಮಾಯಣ, ಶ್ರೀಮದ್ಭಾಗವತ, ಶ್ರೀಮನ್ಮಹಾಭಾರತ** ಇವುಗಳನ್ನು ಸವಿಸ್ತಾರವಾಗಿ ಕನ್ನಡ ವಚನದಲ್ಲಿ ರಚಿಸಿ ಕರ್ಣಾಟಕ ಡಿಪ್ಪೊ, ತ್ರಿಪ್ಲಿಕೇನ್, ಮದ್ರಾಸ್ ಇವರ ಮೂಲಕ ಪ್ರಕಟಿಸಿ, ಕನ್ನಡಿಗರನ್ನು ಚಿರಋಣಿಗಳಾಗಿ ಮಾಡಿಕೊಂಡಿರುವರು. ಇವರಿಗೆ ಮೊದಲು ಎಂ. ರುದ್ರಪ್ಪ ಎಂಡ್ ಸನ್ಸ್, ಲಾಲ್‌ಬಾಗ್ ರೋಡ್, ಬೆಂಗಳೂರು—ಇವರು, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಂದ ರಚಿತವಾದ ವಾಣೀವಿಲಾಸ ರಾಮಾಯಣ, ಭಾಗವತ, ಮಹಾಭಾರತಗಳನ್ನು ದೊಡ್ಡ ಆಕಾರದಲ್ಲಿ ಪ್ರಕಟಿಸಿದ್ದರು. ಆ ಗ್ರಂಥಗಳು ಈಗ ನೂರು

* ಶ್ರೀಮದ್ದೇವಶಿಖಾಮಣೀ ತಿರುಮಲಾಚಾರ್ಯರ್ಗಂ ನೆಗಳ್ದಂ ಗುಣೋ
ದ್ದಾಮಂ ಕೋದಂಡ ಕಾವ್ಯಬಂಧಚತುರಂ ಯದ್ವಂಶ್ರಸಾಧಾತ್ರಯಂ ।
ಆ ನಾಚಾರ್ಯರ ಸೂನು ತದ್ವರಕೃಪಾ ಸಂಪ್ರಾಪ್ತ ವಿದ್ಯಂ ಬುಧ
ಸ್ತೋಮಂ ಮೆಚ್ಚುವವೊಲ್ ನೆಗಳ್ದಳಸಿಂಗ್ರಾಚಾರ್ಯನೀ ಕಾವ್ಯಮಂ ॥

# ಹೈದರಾಬಾದು ಕರ್ನಾಟಕ ಪರಿಷತ್ತಿನ ಎರಡನೆಯ ಅಧಿವೇಶನ

## ಬಿದರೆಯಲ್ಲಿ ಕನ್ನಡಿಗರ ವಿಚಾರ ವಿನಿಮಯ

ನೈಜಾಂ ಕರ್ನಾಟಕ ಪರಿಷತ್ತಿನ ಎರಡನೆಯ ವಾರ್ಷಿಕಾಧಿವೇಶನ ಬಿದರೆಯಲ್ಲಿ ಕಳೆದ ವಾರ ಬಹಳ ವಿಜೃಂಭಣೆಯಿಂದ ನೆರವೇರಿತು. ೬೦೦೦ ಪ್ರತಿನಿಧಿಗಳು ಹೈದರಾಬಾದು ಕರ್ನಾಟಕದ ಬೇರೆಬೇರೆ ಜಿಲ್ಲೆಗಳಿಂದ ನೆರೆದಿದ್ದರು. ಶ್ರೀಮಾನ್ ಜನಾರ್ದನರಾವ್ ದೇಶಾಯ್ ಅವರು ಅಧ್ಯಕ್ಷತೆ ವಹಿಸಿದ್ದರು.

ಸ್ವಾಗತಾಧ್ಯಕ್ಷರಾದ ಶ್ರೀ ಖೇಣಿ ಶರಣಪ್ಪನವರು ಪ್ರತಿನಿಧಿಗಳನ್ನೂ ಅತಿಥಿಗಳನ್ನೂ ಸ್ವಾಗತಿಸಿದರು. ಪಂಡಿತ ಚಿವರೆ ಮಠದ ವೀರಭದ್ರಶಾಸ್ತ್ರಿಗಳು ಅಧಿವೇಶನದ ಸಮಾರಂಭೋತ್ಸವವನ್ನು ನಡಸಿದರು.

ಶ್ರೀ ಖೇಣಿ ಶರಣಪ್ಪನವರು ಭಾಷಣ ಮಾಡುತ್ತ, ಹೈದರಾಬಾದಿನಲ್ಲಿ ಕನ್ನಡಿಗರ ಕುಂದುಕೊರತೆಗಳ ಮಾತೆತ್ತಿ ಹೀಗೆ ಹೇಳಿದರು :

"ನಾವು ಎಲ್ಲ ದೃಷ್ಟಿಗಳಿಂದಲೂ ಹಿಂದೆ ಬಿದ್ದಿದ್ದೇವೆ. ಇಂಥ ಪರ್ವಕಾಲದಲ್ಲಿ ನಮ್ಮ ಕೊರತೆಗಳನ್ನು ಹೋಗಲಾಡಿಸಿಕೊಂಡು ಪ್ರಗತಿಯ ಮಾರ್ಗವನ್ನು ಹಿಡಿಯದಿದ್ದರೆ ನಮಗಿಂತ ದುರ್ದೈವಿಗಳು ಮತ್ತಾರೂ ಇಲ್ಲವೆನ್ನಬೇಕು. ಶಿಕ್ಷಣ, ನೀರಾವರಿ, ಆಸ್ಪತ್ರೆ ಮುಂತಾದ ಯೋಜನೆಗಳ ಪ್ರಯೋಜನ ಕನ್ನಡಿಗರಿಗೂ ಯೋಗ್ಯವಾದ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಆಗ್ರಹಪೂರ್ವಕವಾದ ಬೇಡಿಕೆ. ಕನ್ನಡ ಜನತೆಗೆ ಮಾತೃಭಾಷೆಯಾದ ಕನ್ನಡದಲ್ಲಿ ಶಿಕ್ಷಣವಿಲ್ಲದಿರುವುದು ದೊಡ್ಡ ಕೊರತೆಯಾಗಿದೆ. ಈ ವಿಚಾರವಾಗಿ ನಮ್ಮ ಶಿಕ್ಷಣ ಇಲಾಖೆ ಇದುವರೆಗೆ ಮೌನವ್ರತವನ್ನು ಧರಿಸಿರುವುದು ಚಿಂತಾಜನಕವಾಗಿದೆ. ಈ ಪ್ರಕಾರವಾಗಿ ನೈಜಾಂ ಕರ್ನಾಟಕದ ಜನತೆ ಬೌದ್ಧಿಕ ದಬ್ಬಾಳಿಕೆಗೆ ತುತ್ತಾಗಿದೆ. ನೈಜಾಂ ಕರ್ನಾಟಕ ಪರಿಷತ್ತು ಹೈದರಾಬಾದಿನ ಕನ್ನಡ ಪ್ರದೇಶದ ಪರಿಸ್ಥಿತಿಗಳನ್ನು ಅಧ್ಯಯನ ಮಾಡಿ ಒಂದು ರಚನಾತ್ಮಕ ಶೈಕ್ಷಣಿಕ ಯೋಜನೆ ಮಾಡಬೇಕೆಂದು ನಾನು ಬಿನ್ನವಿಸಿಕೊಳ್ಳುತ್ತೇನೆ."

ಪಂಡಿತ ವೀರಭದ್ರ ಶಾಸ್ತ್ರಿಗಳು ತಮ್ಮ ಸಮಾರಂಭ ಭಾಷಣದಲ್ಲಿ ಇಂದು ಕನ್ನಡನಾಡು ಬೇರೆ ಬೇರೆ ಪ್ರಾಂತ ಮತ್ತು ಸಂಸ್ಥಾನಗಳಲ್ಲಿ ಹಂಚಿಹೋಗಿರುವುದನ್ನು ವಿವರಿಸಿ ಹೀಗೆ ಹೇಳಿದರು :

" ಈ ನಮ್ಮ ಬಹುನಾಯಕರ ಸತ್ತೆಯಿರುವ ಕನ್ನಡ ನಾಡಿಗೆ ಭಾಗ್ಯೋದಯವೆಂದಿಗೋ ಎಂದು ಕನ್ನಡದ ಕಣ್ಣುಗಳು ಎಣ್ಣೆಹಾಕಿಕೊಂಡು ಕಾಯುತ್ತಿವೆ. ಇಂದಲ್ಲ ನಾಳೆಯಾದರೂ ಕುಂದುಗಳು ದೂರವಾಗಬೇಕೆಂದು ಈಗಾಗಲೇ ಎಲ್ಲೆಲ್ಲೂ ಆಂದೋಳನ ಆರಂಭವಾಗಿರುವುದು ಕಾಣಿಸುತ್ತಿದೆ.

"ಕನ್ನಡ ನಾಡಿನಲ್ಲಿ ಮೊದಲಿನಿಂದಲೂ ಬೆಳೆದು ಮುಂದೆ ಬಾಳಲಿರುವವರೆಲ್ಲರೂ ಕನ್ನಡಿಗರೇ ಸರಿ. ಅವರು ಯಾವ ಮತಕ್ಕೆ ಸೇರಿದ್ದರೂ ಅವರ ಕನ್ನಡತನಕ್ಕೆ ಭಂಗಬರುವುದಿಲ್ಲ. ಕನ್ನಡದ ಉಪ್ಪೇ ಕರ್ನಾಟಕತ್ವಕ್ಕೆ ಸಾಕ್ಷಿ. ನಮ್ಮ ಮಾತೃಭಾಷೆ ಕನ್ನಡದ ಜ್ಞಾನ ಭಂಡಾರ ದಿನೇ ದಿನೇ ಪ್ರವರ್ಧಮಾನಕ್ಕೆ ಬಂದು ಜಗತ್ತಿಗೆ ಮಾರ್ಗದರ್ಶಕವಾಗಬೇಕು. ಶಾರೀರಿಕ ಶಕ್ತಿಪರಾಕ್ರಮಗಳು ಭೀಮಾರ್ಜುನರನ್ನು ಸಿದ್ಧಗೊಳಿಸಬೇಕು. ಕೃಷಿ ವಾಣಿಜ್ಯಗಳು ಕುಬೇರನನ್ನು ಸ್ಮರಣೆಗೆ ತರಬೇಕು. ಶಿಲ್ಪಕಲಾನೈಪುಣ್ಯಕ್ಕೆ ನೆಲೆವೀಡಾಗಿ ಕೀರ್ತಿಪಾತ್ರವಾಗಬೇಕು. ಕನ್ನಡಿಗರೆಲ್ಲರಿಗೂ ಸುಖಶಾಂತಿಗಳು ಸುಲಭವಾಗಿ ಲಭಿಸಬೇಕು. ಇದು ನಮ್ಮ ರಾಮರಾಜ್ಯದ ಆದರ್ಶ."

ಶ್ರೀಮಾನ್ ಜನಾರ್ದನರಾವ್ ದೇಶಾಯ್ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೈದರಾಬಾದು ಕನ್ನಡಿಗರ ಕುಂದುಕೊರತೆಗಳೇನೆಂಬುದನ್ನು ವಿಚಾರಮಾಡಿ ಹೈದರಾಬಾದಿನಲ್ಲಿ ನೆಲಸಿರುವ ಆಂಧ್ರರೂ ಮರಾಠಿಯವರೂ ಸಂಘಟಿತರಾಗಿ ಪ್ರಗತಿಯನ್ನು ಸಾಧಿಸುತ್ತಿರುವಂತೆ ಕನ್ನಡಿಗರು ಸಂಘಟಿತರಾಗಿ ಮುನ್ನಡೆಯುತ್ತಿಲ್ಲವೆಂದೂ, ಬೇಗನೆ ಅವರಂತೆ ಸುಸಂಘಟಿತರಾಗುವುದು ಆವಶ್ಯಕವೆಂದೂ ಒತ್ತಿ ಹೇಳಿದರು. ಕನ್ನಡಿಗರು ತಮ್ಮ ಹಕ್ಕುಬಾಧ್ಯತೆಗಳನ್ನು ಕಾಪಾಡಿಕೊಳ್ಳುವ ಕಾರ್ಯದಲ್ಲಿ ಎಷ್ಟೇ ಘನವಾದ ತ್ಯಾಗಕ್ಕಾದರೂ ಸಿದ್ಧವಾಗಿರಬೇಕೆಂದು ಪ್ರಾರ್ಥಿಸಿದರು.

ಸಮ್ಮೇಳನದ ಉಪಾಂಗವಾಗಿ ಮಹಿಳೆಯರ ಸಮ್ಮೇಳನ ಶ್ರೀಮತಿ ವಿಮಲಾದೇವಿ ಮೇಲುಕೋಟೆಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಇವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೈದರಾಬಾದಿನ ಕನ್ನಡ ಮಹಿಳೆಯರಿಗಿಂತ ಆಂಧ್ರ ಮತ್ತು ಮರಾಠಿ ಮಹಿಳೆಯರು ಹೆಚ್ಚು ಮುಂದುವರಿದಿರುವರೆಂದೂ ಕನ್ನಡ ಮಹಿಳೆಯರ ಹೀನದಶೆಗೆ ಅವರು ಅನಕ್ಷರಸ್ಥರಾಗಿರುವುದೇ ಕಾರಣವೆಂದೂ ಹೇಳಿ, ಸರಕಾರದವರು ನೈಜಾಂ ಕರ್ನಾಟಕದಲ್ಲಿ ಈಗಿಗಿಂತ ಹೆಚ್ಚು ಬಾಲಿಕಾಪಾಠಶಾಲೆಗಳನ್ನು ತೆರೆಯಬೇಕೆಂಬುದಾಗಿ ಪ್ರಾರ್ಥಿಸಿದರು.

ಪರಿಷತ್ತಿನ ಅಧಿವೇಶನದಲ್ಲಿ ಕನ್ನಡಿಗರ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳಿಗೆ ಸಂಬಂಧಿಸಿದ ಗೊತ್ತುವಳಿಗಳು ಒಪ್ಪಿತವಾದುವು. ಮಹಿಳೆಯರ ಸಮ್ಮೇಳನದಲ್ಲಿ ನೈಜಾಂ ಸರ್ಕಾರದವರು ಕನ್ನಡ ಬಾಲಕಿಯರಿಗೆ ಮಾತೃಭಾಷೆಯಾದ ಕನ್ನಡದಲ್ಲಿ ಶಿಕ್ಷಣ ಕೊಟ್ಟು, ಇಂಗ್ಲಿಷು ಮತ್ತು ಉರ್ದು ಭಾಷೆಗಳನ್ನು ಐಚ್ಛಿಕವಾಗಿ ಇಟ್ಟು ವಿದ್ಯಾಭ್ಯಾಸ ಇಲಾಖೆಯ ಶಿಕ್ಷಣ ನೀತಿಯನ್ನು ಮಾರ್ಪಡಿಸಬೇಕೆಂದು ಬೇಡುವ ಗೊತ್ತುವಳಿ ಒಪ್ಪಿತವಾಯಿತು.

---

ರೂಪಾಯಿ ಕೊಟ್ಟರೂ ಸಿಕ್ಕದಂತಾಗಿವೆ. ಆದ್ದರಿಂದ ಇಂದು ಶ್ರೀ ಅಳಸಿಂಗ್ರಾಚಾರ್ಯರ ರಾಮಾಯಣ, ಭಾಗವತ, ಮಹಾಭಾರತ ಗ್ರಂಥಗಳು ಅನೇಕ ಕನ್ನಡ ಪುಸ್ತಕ ಭಂಡಾರಗಳನ್ನು ಅಲಂಕರಿಸುವುದರಲ್ಲಿ ಆಶ್ಚರ್ಯವಿಲ್ಲ. ಇವರು ಈಗ ಪ್ರಕಟಿಸಲಾರಂಭಿಸಿರುವ ಶ್ರೀಮನ್ಮಹಾಭಾರತದ ಭಾಗಗಳು ಪೂರ್ತಿಯಾಗಿ, ಮತ್ತೆ ಬೇರೆ ಉದ್ಗ್ರಂಥಗಳು ಇವರ ಲೇಖನಿಯಿಂದ ಹೊರಬೀಳುವಂತಾಗಲೆಂದು ಎಲ್ಲ ಕನ್ನಡಿಗರ ಹಿರಿಯಾಸೆ.

ಇವರು **'ಶ್ರೀಮತೀ ಪರಿಣಯ'** ವೆಂಬ ಸ್ವತಂತ್ರನಾಟಕವೊಂದನ್ನು ಪ್ರಕಟಿಸಿರುವರು. ಮತ್ತೆ ಕರ್ನಾಟಕದ ಸುಪ್ರಸಿದ್ಧ ಕವಿಗಳೆಂದು ಖ್ಯಾತಿವೆತ್ತ ಕೈ|| ವಾ|| ಪಂಡಿತ ಬಸಪ್ಪ ಶಾಸ್ತ್ರಿಗಳಿಂದ ಆರಂಭಿಸಲ್ಪಟ್ಟು ಅರ್ಧದಲ್ಲಿ ನಿಂತುಹೋಗಿದ್ದ **'ಚಂಡಕೌಶಿಕ'**ವೆಂಬ ನಾಟಕವನ್ನು ಅದೇ ಕವಿತಾ ಶೈಲಿಯಿಂದ ಪೂರ್ತಿಗೊಳಿಸಿದ ಇವರ ಜಾಣ್ಮೆಯೂ ಮೆಚ್ಚತಕ್ಕಂಥದಾಗಿದೆ. ಇದಲ್ಲದೆ ಇವರು ಭಾಸಕವಿಯ **'ಸ್ವಪ್ನವಾಸವದತ್ತ'** ಎಂಬ ನಾಟಕವನ್ನು ಕನ್ನಡಿಸಿರುವರು. ಮತ್ತೆ ಸಂಸ್ಕೃತದಲ್ಲಿಯೂ **'ಸಂನ್ಯಾಸಿ ಗೀತೆ'**, **'ಪ್ರಬೋಧಿಕಾ ಸೂಕ್ತಿಮಾಲಾ'**, **'ಶತಾಲಂಕಾರ ನಿದರ್ಶನಮ್'** ಎಂಬಿವೇ ಮೊದಲಾದ ಕಾವ್ಯಗಳನ್ನು ರಚಿಸಿದ್ದಾರೆ. ಮತ್ತೆ ಕನ್ನಡದಲ್ಲಿ ಇವರ **'ಶ್ರೀ ಚೆಲ್ವನಾರಾಯಣ ಶತಕ'** ಹಲವರಿಗೆ ಪರಿಚಿತವಾಗಿದೆ. ಡಾ|| ಯು. ರಾಮರಾಯರ 'ಪ್ರಥಮ ಚಿಕಿತ್ಸೆ' ಎಂಬ ಎಂಬ ಇಂಗ್ಲಿಷ್ ಗ್ರಂಥವನ್ನು ಇವರೇ ಕನ್ನಡಿಸಿರುತ್ತಾರಲ್ಲದೆ, ಕನ್ನಡದಲ್ಲಿ **ಪ್ರಜಾಧರ್ಮ ಸಂಗ್ರಹ**, ಕಳೆದ **ಘೋರ ಯೂರೋಪು ಯುದ್ಧದ ಚರಿತ್ರೆ, ಯುದ್ಧದ ಅನುಭವಗಳು, ಆರ್ಯಮತೋಪಾಖ್ಯಾನ, ಜಂತು ಶಾಸ್ತ್ರ, ಓಷಧಿ ಶಾಸ್ತ್ರ, ಮನುಷ್ಯನ ಸಪ್ತ ವಯೋವಸ್ಥೆ** — ಇವೇ ಮುಂತಾದ ಹಲವು ಗ್ರಂಥಗಳನ್ನೂ ರಚಿಸಿರುವರು. ಮತ್ತೆ ಮದ್ರಾಸಿನ 'ಆರೋಗ್ಯ ಚಂದ್ರಿಕೆ' ಎಂಬ ಕನ್ನಡ ಪತ್ರಿಕೆಯಲ್ಲಿ ಬರುತ್ತಿದ್ದ ಹಲವು ಲೇಖನಗಳು ಇವರ ಲೇಖನಿಯಿಂದಲೆ ಭಾಷಾಂತರಹೊಂದಿದವೆಂದು ತಿಳಿದು ಅನೇಕರಿಗೆ ಆಶ್ಚರ್ಯವಾಗದಿರದು.

ಶ್ರೀಮಾನ್ ದೇವಶಿಖಾಮಣಿ ಅಳಸಿಂಗ್ರಾಚಾರ್ಯರು ಕನ್ನಡ ನುಡಿಗೆ ಮಾಡಿರುವ ಸೇವೆ ಅತ್ಯಮೌಲ್ಯವಾದುದೂ ಅಪಾರವಾದುದೂ ಆಗಿದೆ. ಅವರ ರಾಮಾಯಣ, ಭಾಗವತ, ಮಹಾಭಾರತ ಪುಸ್ತಕಗಳು ಅನೇಕ ಕನ್ನಡಿಗರ ಪುಸ್ತಕ ಭಂಡಾರಕ್ಕೆ ಒಂದು ಆಭರಣದಂತೆ ಅಂದವಾಗಿ ಶೋಭಿಸುತ್ತಿರುವುದನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬ. ಇವರ ಭಾಷೆಯೂ ಶೈಲಿಯೂ ಸರಳವೂ ಸುಲಭವೂ ಆಗಿರುವುದರಿಂದ ಇವರ ಗ್ರಂಥಗಳು ಎಲ್ಲ ಕನ್ನಡಿಗರ ಆದರಕ್ಕೆ ಪಾತ್ರವಾಗಿರುವುವು. ಶ್ರೀಮಾನ್ ದೇವಶಿಖಾಮಣಿ ಅಳಸಿಂಗ್ರಾಚಾರ್ಯರಿಗೆ ದೀರ್ಘಾಯುರಾರೋಗ್ಯಭಾಗ್ಯವನ್ನಿತ್ತು, ಅವರಿಂದ ಮುಂದೆಯೂ ನುಡಿಗೆ ಗಿರಿಯಂಥ ಸೇವೆಯಾಗುವಂತೆ ಮಾಡಿಸಲೆಂದು ಶ್ರೀ ಚೆಲ್ವನಾರಾಯಣನಲ್ಲಿ ನನ್ನ ನಮ್ರ ಪ್ರಾರ್ಥನೆ.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸೇರಿದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷರಾದ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು ಮಾಡಿದ ಭಾಷಣ

(ಮುಂದುವರಿದುದು)

## ಸಾರ್ವತ್ರಿಕವಾಗಿ ಅನ್ವಯಿಸುವ ಪ್ರಮಾಣಗಳಿಲ್ಲ

ಹೀಗೆ ಹೇಳಿದ ಮಾತ್ರವೇ ಸಂಸ್ಕೃತ ಸಾಹಿತ್ಯವಾಗಲಿ ಅಥವಾ ಮತ್ತಾವ ಸಾಹಿತ್ಯವಾಗಲಿ ನಿರ್ದೋಷವಾಗಿದೆಯೆಂದೇನೂ ಅರ್ಥವಲ್ಲ. ನಿರ್ಗುಣವಾದ ಅಥವಾ ನಿರ್ದೋಷವಾದ ಯಾವ ವಸ್ತುವೂ ಪ್ರಪಂಚದಲ್ಲಿಲ್ಲ. ಒಂದೊಂದು ಸಾಹಿತ್ಯವೂ ಒಂದೊಂದು ಪುಷ್ಪೋದ್ಯಾನ. ಯಾರಿಗೆ ಯಾವ ಹೂಗಳಲ್ಲಿ ಒಲವು ಬಂದರೆ ಅವರು ಆ ಹೂಗಳನ್ನು ಸ್ವೀಕರಿಸಬಹುದು. ಭಾರತೀಯ ಸಾಹಿತ್ಯ, ಗ್ರೀಕ್ ಸಾಹಿತ್ಯ, ಇಂಗ್ಲಿಷ್ ಸಾಹಿತ್ಯ ಮುಂತಾಗಿ ಯಾವ ಸಾಹಿತ್ಯವನ್ನೇ ನೋಡಲಿ ಗುಣಗಳ ಜೊತೆಗೆ ದೋಷಗಳೂ ತುಂಬಿವೆ. ಇಂದು ಪಾಶ್ಚಾತ್ಯ ಪ್ರಪಂಚದಲ್ಲಿ ಹೆಸರನ್ನು ಪಡೆದಿರುವ ಶ್ರೀ ಐ. ಎ. ರಿಚರ್ಡ್ಸ್ ಮುಂತಾದ ವಿಮರ್ಶಕರು ಕೂಡ ಇದೇ ರೀತಿ ಅಭಿಪ್ರಾಯಪಡುತ್ತಿರುವುದಲ್ಲದೆ, ಸಾರ್ವತ್ರಿಕವಾಗಿ ಅನ್ವಯಿಸುವ ಪ್ರಮಾಣಗಳಿಲ್ಲವೆಂದೂ ಒಬ್ಬರಿಗೆ ಅಮೃತವಾದುದು ಮತ್ತೊಬ್ಬರಿಗೆ ವಿಷವಾಗಬಹುದೆಂದೂ ಒಪ್ಪಿಕೊಂಡಿದ್ದಾರೆ. ಪ್ರಪಂಚದ ಸಾಹಿತ್ಯದಲ್ಲಿ ಅಮರನಾಗಿರುವ ಷೇಕ್ಸ್‌ಪಿಯರ್ ಮಹಾಕವಿಯ ಕೃತಿಗಳನ್ನು ಮೇಧಾವಿಯಾದ ವಾಲ್ಟೇರನು ಗೊಬ್ಬರವೆಂದು ಕರೆದಿದ್ದಾನೆ. ಒಬ್ಬ ವ್ಯಕ್ತಿಗೆ ಸರಿಬಿದ್ದುದು ಮತ್ತೊಬ್ಬ ವ್ಯಕ್ತಿಗೆ ಸರಿಬೀಳದು. ಪ್ರಾಸಂಗಿಕವಾಗಿ ರುದ್ರನಾಟಕಗಳ ನಿದರ್ಶನವನ್ನು ತೆಗೆದುಕೊಳ್ಳೋಣ. ಮಾರಿಸ್ ಮೆಟರ್ಲಿಂಕ್ ಅವರಂತೆ ರುದ್ರನಾಟಕಗಳು ಕೇವಲ ಅಸಭ್ಯತೆಯ ಭೀಕರಕೃತ್ಯಗಳಿಂದಲೂ ಮಾನವನು ಅನಾಗರಿಕದಶೆಯಲ್ಲಿದ್ದಾಗ ವಿಜೃಂಭಿಸುತ್ತಿದ್ದ ಘೋರವಾದ ರಾಗದ್ವೇಷಾದಿಗಳ ದಾಂಧಲೆಗಳಿಂದಲೂ ತುಂಬಿ ಅಸಹ್ಯಕರಗಳಾಗಿರುತ್ತವೆಂದು ಅಭಿಪ್ರಾಯಪಟ್ಟಿರುವವರೂ ಉಂಟು. ಬ್ರ್ಯಾಡ್ಲೀ ಮುಂತಾದವರಂತೆ ರುದ್ರನಾಟಕಗಳನ್ನು ಕೊಂಡಾಡುವವರೂ ಉಂಟು. ವ್ಯಕ್ತಿಭೇದದಿಂದ ಅಭಿರುಚಿ ಭೇದಗಳಿರುವಂತೆಯೇ ಜನಾಂಗ ಭೇದದಿಂದಲೂ ಅಭಿರುಚಿ ಭೇದಗಳುಂಟಾಗಿ ಒಂದು ಜನಾಂಗದವರು ಸಂತೋಷಿಸಿ ಹಿಗ್ಗುವಂತೆ ಮಾಡಿದ ವಿಷಯವೇ ಮತ್ತೊಂದು ಜನಾಂಗದವರಿಗೆ ಅಸಹ್ಯಕರವಾಗಿರಬಹುದು. ಶ್ರೀಮಾನ್ ಡಬ್ಲ್ಯು ಸಾಮರ್‌ಸೆಟ್ ಮಾಮ್ (Mr. W. Somerset Maugham) ಅವರೂ ಕೂಡ ಇದೇ ವಿಚಾರವನ್ನು ಮನೋಹರವಾಗಿ ಚರ್ಚಿಸಿದ್ದಾರೆ. ಕೊನೆಗೆ "ಫ್ರಾನ್ಸಿನಲ್ಲಿ ಹೆಣ್ಣಿಗಾಗಿ ಸರ್ವಸ್ವವನ್ನೂ ಕಳೆದುಕೊಂಡು ವಿನಾಶದ ದಾರಿಯನ್ನು ಹಿಡಿದವನ ವಿಷಯದಲ್ಲಿ ಸಹಾನುಭೂತಿಯೂ ಮೆಚ್ಚಿಕೆಯೂ ಉಂಟಾಗುತ್ತದೆ; ಅದು ಉಚಿತವಾಗಿ ಮಾಡಬಹುದಾದ ಕಾರ್ಯವೇ ಎಂದೂ ಅಲ್ಲಿ ಅಭಿಪ್ರಾಯಹುಟ್ಟುತ್ತದೆ. ಅಲ್ಲದೆ ಅದು ಹೆಮ್ಮೆಯ ವಿಷಯವೆಂಬ ಭಾವನೆಗೂ ಅವಕಾಶವುಂಟು; ಇಂಗ್ಲೆಂಡಿನಲ್ಲಿ ಅದೇ ಮನುಷ್ಯನು ಶುದ್ಧ ಅವಿವೇಕಿಯೆಂಬ ಭಾವನೆಯೇ ಇತರರಿಗೂ ಮತ್ತು ಅವನಿಗೂ ಸಹ ಉಂಟಾಗುತ್ತದೆ. ಆದಕಾರಣವೇ 'ಆಂಟೊನಿ ಮತ್ತು ಕ್ಲಿಯೋಪಾಟ್ರ' ನಾಟಕವು ಷೇಕ್ಸ್‌ಪಿಯರ್ ಕವಿ ಬರೆದ ಅತ್ಯುತ್ತಮ ನಾಟಕಗಳಲ್ಲೊಂದಾಗಿದ್ದೂ ಅದು ಆತನ ಇತರ ನಾಟಕಗಳಂತೆ ಇಂಗ್ಲೆಂಡಿನಲ್ಲಿ ಜನಗಳ ಮೆಚ್ಚಿಕೆಗೆ ಪಾತ್ರವಾಗಿಲ್ಲ" ಎಂದು ಘಂಟಾಘೋಷವಾಗಿ (ಕಳೆದ ವರ್ಷ ಪ್ರಕಟವಾದ ತಮ್ಮ ಗ್ರಂಥದಲ್ಲಿ) ಹೇಳಿದ್ದಾರೆ. ಇಷ್ಟೂ ಆಯಿತು. ಸರ್ವಭಕ್ಷಕನಾದ ಕಾಲಪುರುಷನ ಪಾಸಲೆ ಜೀರೆ. ಒಂದು ತಲೆಮಾರಿನಲ್ಲಿ ಜನರ ಜೀವನ ಜೀವಗಳಂತಿದ್ದ ಗ್ರಂಥಗಳನ್ನು ಮುಂದಿನ ತಲೆಮಾರಿನಲ್ಲಿ ಕೇಳುವವರಿರುವುದಿಲ್ಲ. ಅಷ್ಟು ಬೇಡ. ಕೇವಲ ಇಪ್ಪತ್ತು ವರ್ಷಗಳು ಕಳೆಯುವಷ್ಟರಲ್ಲಿ ಅಭಿರುಚಿಯೇ ವ್ಯತ್ಯಾಸ ಹೊಂದುತ್ತದೆ. ಈ ಗಂಡಾಂತರಗಳನ್ನೆಲ್ಲ ಕಳೆದು ಜನಪ್ರಿಯವಾಗಿಯೇ ಉಳಿಯುವ ಕಾವ್ಯಗಳ ಸಂಖ್ಯೆ ತೀರ ಅಲ್ಪ. ಆದಕಾರಣ, ಸಾರ್ವತ್ರಿಕವಾಗಿ ಅನ್ವಯಿಸುವ ಸರ್ವಸಮರ್ಪಕವಾದ ಪ್ರಮಾಣಗಳಾವುವೂ ಇಲ್ಲ.

## ಅಂಧಾನುಕರಣ ತರವಲ್ಲ

ಪಾಶ್ಚಾತ್ಯರೇ ಇನ್ನೂ ಪ್ರಯೋಗ ಪರೀಕ್ಷೆಗಳನ್ನು ನಡೆಯಿಸುತ್ತಿರುವಲ್ಲಿ—ಪಾಶ್ಚಾತ್ಯರಲ್ಲಿ ಪ್ರಾಜ್ಞರಾಗಿರುವ ಮೇಧಾವಿಗಳೇ ಒಂದು ವ್ಯಕ್ತಿಗೆ ಅನ್ವಯಿಸುವುದು ಮತ್ತೊಂದು ವ್ಯಕ್ತಿಗೆ ಅನ್ವಯಿಸದೆಂದೂ, ಒಂದು ತಲೆಮಾರಿನ ಅಭಿರುಚಿ ಮತ್ತೊಂದು ಜನಾಂಗಕ್ಕಿರುವುದಿಲ್ಲವೆಂದೂ ಮತ್ತು ಒಂದು ಜನಾಂಗದ ಅನುಭವದಿಂದ ಮತ್ತೊಂದು ಜನಾಂಗದ ಅಭಿರುಚಿಯನ್ನಳೆಯುವುದು ಉಚಿತವಲ್ಲವೆಂದೂ ಉದ್ಘೋಷಿಸುತ್ತಿರುವಲ್ಲಿ—ಅಂಧಾನುಕರಣವು ತರವಲ್ಲ. ಆದರೆ ಉತ್ತಮವಾದುದನ್ನು ಅನುಕರಿಸುವುದು ಅವಶ್ಯಕವಲ್ಲವೆಂದು ಯಾರೂ ಹೇಳುವುದಿಲ್ಲ. ಆದಾಗ್ಯೂ ನಮ್ಮ ಜನಾಂಗ ಮಾತ್ರ ಕೀಳು, ಇತರ ಜನಾಂಗಗಳೆಲ್ಲ ಮೇಲು—ಎಂಬ ಭಾವನೆಯಿಂದ ಕೂಡಿದ ನೈಚ್ಯಾರೋಪದಿಂದ ಕುಗ್ಗಿಹೋಗುವುದೆಂದಿಗೂ ತರವಲ್ಲ. ಪಾಶ್ಚಾತ್ಯರನ್ನು ಅಂಧಾನುಕರಣ ಮಾಡುವುದು ಸರ್ವಥಾ ಸರಿಯಲ್ಲ. ಭಾರತೀಯರು ಖಂಡಿತ ಹಾಗೆ ಮಾಡಕೂಡದೆಂದು ಪಾಶ್ಚಾತ್ಯರಲ್ಲಿ ಅನೇಕ ಮಹನೀಯರೇ ತೀರ ಈಚೆಗೆ ಕೂಡ ಸಾರಿಹೇಳಿದ್ದಾರೆ. ಪಾಶ್ಚಾತ್ಯರ (ಗ್ರೀಕ್ ಸಾಹಿತ್ಯ, ಇಂಗ್ಲಿಷ್ ಸಾಹಿತ್ಯ ಮುಂತಾದ) ಸಾಹಿತ್ಯಗಳು ಶ್ರೇಷ್ಠ ಸಾಹಿತ್ಯಗಳು. ಅವುಗಳಿಂದ ನಮ್ಮ ದೃಷ್ಟಿ ವಿಶಾಲವಾಗಿದೆ. ನಮ್ಮ ಹೃದಯಗಳು ಅರಳಿವೆ. ಸಾಹಿತ್ಯದಲ್ಲಿ ಅನೇಕ ಹೊಸ ದಾರಿಗಳು ನಮಗೆ ಗೋಚರವಾಗಿವೆ. ಮಾನ್ಯರಾದ ಹಿರಿಯರ ವ್ಯವಸಾಯದಿಂದ ಅನೇಕ ಉತ್ತಮ ಗ್ರಂಥಗಳು ಭಾಷಾಂತರವಾಗಿ ಕನ್ನಡ ಸಾಹಿತ್ಯವನ್ನು ಬೆಳಗುತ್ತಿವೆ. ಪಾಶ್ಚಾತ್ಯ ಸಾಹಿತ್ಯದಿಂದ ಆಗಿರುವ ಉಪಕಾರಗಳ ಜೊತೆಗೆ ಕೆಲವು ಅಪಕಾರಗಳೂ ಆಗಿವೆ. ನಮ್ಮ ಜನಾಂಗದ ಜಾಯಮಾನವೇನು, ನಮ್ಮ ಜನಾಂಗದ ಸತ್ವವೇನು, ಅದರ ವೈಶಿಷ್ಟ್ಯವೇನು, ನಮ್ಮ ಜನಾಂಗವು ಯಾವ ವಿಚಾರಗಳಲ್ಲಿ ಇತರ ಜನಾಂಗಗಳನ್ನು ಮೀರಿಸುವುದು ಸಾಧ್ಯ, ನಮ್ಮ ಜನಾಂಗವೇನು ಮಹೋನ್ನತವಾಗಿ ಬಾಳಿದ ಜನಾಂಗವಲ್ಲವೆ, ನಮ್ಮ ಜನಾಂಗದಲ್ಲೊಂದು ಬಗೆಯ ದೋಷಗಳಿದ್ದರೆ ಮತ್ತೊಂದರಲ್ಲಿ ಮತ್ತೊಂದು ಬಗೆಯ ದೋಷಗಳಿಲ್ಲವೆ, ಪಾಶ್ಚಾತ್ಯ ಜನಾಂಗಗಳಲ್ಲಿ ಅಮೋಘ ಗುಣಗಳಿರುವಂತೆ ನಮ್ಮ ಜನಾಂಗದಲ್ಲಿಯೂ ಇಲ್ಲವೆ—ಎಂಬವೇ ಮುಂತಾದ ಅಂಶಗಳನ್ನು ದೀರ್ಘಾಲೋಚನೆ ಮಾಡುವ ವಿಚಾರ ಸಾಮರ್ಥ್ಯವೇ ನಮ್ಮಲ್ಲಿ ಬಹುಮಂದಿಗೆ ಕಡಮೆಯಾಗಿರುವುದೂ ಆ ಅಪಕಾರಗಳಲ್ಲೊಂದು. ಸರ್ ಎಸ್. ರಾಧಾಕೃಷ್ಣನ್‌ರವರೇ ಮುಂತಾದ ಪ್ರಾಜ್ಞರುಗಳು ಹೇಳಿರುವಂತೆ, ಹೊರಗಿನವರೇ ನಮ್ಮ ದೇಶದ ಮತಸಿದ್ಧಾಂತಗಳಲ್ಲಿ, ದರ್ಶನಗಳಲ್ಲಿ, ಸಾಹಿತ್ಯದಲ್ಲಿ, ಕಲೆಗಳಲ್ಲಿ ಆದರ ತೋರಿಸಲು ಪ್ರಾರಂಭವಾಗಿರುವ ಈಗಿನ ಸಮಯದಲ್ಲಿ ನಮ್ಮವರೇ ಅನೇಕರಿಗೆ ಅವುಗಳಲ್ಲಿ ಆಸ್ಥೆಯೂ ಅಕ್ಕರೆಯೂ ಇಲ್ಲದಿರುವುದು ವಿಷಾದಕರವೇ ಸರಿ. ಮತಸಂಬಂಧವಾದ ಸಾಧನೆ ಸಿದ್ಧಿಗಳನ್ನು ಕುರಿತು ಅಪಹಾಸ್ಯ ಮಾಡುವವರಿಗೆ ಕೂಡ ಸರ್ ರಾಧಾಕೃಷ್ಣನ್‌ರವರು, ಒಬ್ಬರ ಅನುಭವದಿಂದ ಮತ್ತೊಬ್ಬರ ಅನುಭವವನ್ನು ಅಳೆಯಕೂಡದೆಂದೂ, ಸಂಗೀತದ ಗಂಧವೇ ಇಲ್ಲದವರಿಗೆ ಸಂಗೀತದಿಂದ ಆನಂದವಾಗದ ಮಾತ್ರವೇ ಅವರು ಸಂಗೀತಗಾರನಿಗಾಗಲಿ ಆತನ ಸಂಗೀತವನ್ನು ಕೇಳುವ ರಸಿಕರಿಗಾಗಲಿ ಆನಂದವಿಲ್ಲವೆಂದು ಹೇಳುವುದಕ್ಕೆ ಅವರಿಗೆ ಅಧಿಕಾರವಿಲ್ಲವೆಂದೂ ಸೂಚಿಸಿ ಚೆನ್ನಾಗಿ ಬುದ್ಧಿ ಹೇಳಿದ್ದಾರೆ.

## ಕೆಲವು ಸಲಹೆಗಳು

ಸಹೃದಯತೆಯೂ ಸಹ ಸಾಹಿತ್ಯಾಭಿವೃದ್ಧಿಗೆ ಮುಖ್ಯವೆಂಬ ಒಂದು ವಿಚಾರವನ್ನು ಮಾತ್ರವೇ ಪ್ರಸ್ತಾಪಿಸಿರುವ ಈ ಭಾಷಣದಲ್ಲಿ, ಭಾವಗೀತೆ, ಸಣ್ಣಕತೆ, ವಿಮರ್ಶೆ, ಕಾದಂಬರಿ, ಶಿಶುಸಾಹಿತ್ಯ, ಜನಪದ ಸಾಹಿತ್ಯ, ನಾಟಕ ಮುಂತಾದುವುಗಳನ್ನು ಕುರಿತು ಪ್ರತ್ಯೇಕ ಪ್ರತ್ಯೇಕ

# ಕನ್ನಡ ನುಡಿ

**ಶುಕ್ರವಾರ, ಫೆಬ್ರುವರಿ ೯, ೧೯೪೦**

## ನೈಜಾಂ ಕರ್ನಾಟಕ ಪರಿಷತ್ತು

ಕಳೆದ ಜನವರಿ ೨೫ರಲ್ಲಿ ಬಿದರೆಯಲ್ಲಿ ಶ್ರೀ ಜನಾರ್ದನರಾವ್ ದೇಶಾಯಿಯವರ ಅಧ್ಯಕ್ಷತೆಯಲ್ಲಿ ನಡೆದ ನೈಜಾಂ ಕರ್ನಾಟಕ ಪರಿಷತ್ತಿನ ಎರಡನೆಯ ಅಧಿವೇಶನ ಸಂಬಂಧದ ವಿವರಗಳನ್ನೊಳಗೊಂಡ ಸುದ್ದಿಯನ್ನು ಬೇರೆಯ ಕಡೆ ಕೊಟ್ಟಿದ್ದೇವೆ. ಪರಿಷತ್ತು ಬಹಳ ಯಶಸ್ವಿಯಾಗಿ ನಡೆಯಿತೆಂದೂ ಅಧಿವೇಶನದ ಉದ್ದಕ್ಕೂ ಉತ್ಸಾಹ ಉಕ್ಕುತ್ತಿತ್ತೆಂದೂ ಕೇಳಿ ಹರ್ಷಿಸುತ್ತೇವೆ. ಅಧಿವೇಶನದಲ್ಲಿ ಸುಮಾರು ೬೦೦೦ ಪ್ರತಿನಿಧಿಗಳು ನೆರೆದಿದ್ದರೆಂಬ ಸಂಗತಿ ಹೈದರಾಬಾದು ಕನ್ನಡಿಗರಲ್ಲಿ ಕರ್ತವ್ಯಜಾಗ್ರತಿಯಾಗಿರುವುದನ್ನು ವ್ಯಕ್ತಪಡಿಸುವುದಲ್ಲದೆ, ಅವರು ಮುಂದೆ ಸುಸಂಘಟಿತರಾಗುವರೆಂಬುದಕ್ಕೆ ಮುನ್ಸೂಚನೆಯಾಗಿದೆ.

ಈ ಪರಿಷತ್ತು ಹೈದರಾಬಾದು ಕನ್ನಡಿಗರ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮುಂತಾದ ಎಲ್ಲ ಬಗೆಯ ಉನ್ನತಿಯ ಮತ್ತು ಅವರ ಒಕ್ಕೂಟದ ಸಾಧನೆಯನ್ನು ತನ್ನ ಧ್ಯೇಯವಾಗಿಟ್ಟುಕೊಂಡಿದೆ. ಅಧ್ಯಕ್ಷರು ಮೊದಲಾದವರೆಲ್ಲರ ಭಾಷಣಗಳೂ, ಗೊತ್ತುವಳಿಗಳೂ ಈ ಧ್ಯೇಯವನ್ನು ಹೇಗೆ ಸಾಧಿಸಬೇಕೆಂಬುದನ್ನು ಕುರಿತುವಾಗಿವೆ. ಸ್ವಾಗತಾಧ್ಯಕ್ಷರಾದ ಶ್ರೀ ಬೇಣಿ ಶರಣಪ್ಪನವರು, **"ಕನ್ನಡ ಜನತೆಗೆ ಮಾತೃಭಾಷೆಯಾದ ಕನ್ನಡದಲ್ಲಿ ಶಿಕ್ಷಣವಿಲ್ಲದಿರುವುದು ದೊಡ್ಡ ಕೊರತೆಯಾಗಿದೆ"** ಎಂದು ಹೇಳಿದ್ದಾರೆ. ಇದು ನಿಜವಾಗಿಯೂ ದೊಡ್ಡ ಕೊರತೆಯೇ ಸರಿ. ಈ ಪರಿಸ್ಥಿತಿ ತೊಲಗುವಂತೆ ಹೈದರಾಬಾದಿನ ಕನ್ನಡಿಗರು ಸ್ಥಿರಪ್ರಯತ್ನ ಮಾಡಬೇಕು; ಹೈದರಾಬಾದು ಸರಕಾರದವರಾದರೂ ಉದಾರಮನಸ್ಸಿನಿಂದ ತಮ್ಮ ಕನ್ನಡ ಪ್ರಜೆಗಳ ಇಷ್ಟಾರ್ಥ ಪೂರೈಸಿಕೊಡಬೇಕು.

ಅಧ್ಯಕ್ಷರಾದ ಜನಾರ್ದನರಾವ್ ದೇಸಾಯಿಯವರು ತಮ್ಮ ಭಾಷಣದಲ್ಲಿ ಹೈದರಾಬಾದು ಕನ್ನಡಿಗರು ಆಂಧ್ರರಿಂದಲೂ ಮರಾಠಿಯವರಿಂದಲೂ ಪಾಠ ಕಲಿತು ಅವರಂತೆ ಸುಸಂಘಟಿತರಾಗಬೇಕೆಂದು ಒತ್ತಿ ಹೇಳಿದ್ದಾರೆ. ಯಾವ ಕಾರ್ಯಸಾಧನೆಗಾದರೂ ಮೊತ್ತಮೊದಲು ಸಂಘಟನೆಯಿರಲೇಬೇಕು. ಅಧ್ಯಕ್ಷರು, ಹೈದರಾಬಾದಿನ ಕನ್ನಡಿಗರು ತಾವು ಮೊದಲು ಹೈದರಾಬಾದಿನ ಪ್ರಜೆಗಳೆಂದೂ ಆಮೇಲೆ ಕನ್ನಡಿಗರೆಂದೂ ಅರಿತಿರುವರೆಂಬುದಾಗಿ ಅಪ್ಪಣೆ ಕೊಡಿಸಿದರು. ಹೈದರಾಬಾದಿನ ಕನ್ನಡಿಗರು ಹೈದರಾಬಾದಿನ ಪ್ರಜೆಗಳೆಂದು ಅರಿತುಕೊಳ್ಳಬೇಕಾದ್ದು ನ್ಯಾಯವಾಗಿಯೇ ಇದೆ; ಅದು ಅವರ ಧರ್ಮ, ಕರ್ತವ್ಯ. ಆ ರಾಜಕೀಯ ನಿಷ್ಠೆಯೊಳಗೆ, ತಾವು ಕನ್ನಡಿಗರು, ಕನ್ನಡತನವನ್ನು ಮೊದಲು ಬೆಳಸಿಕೊಳ್ಳುವುದೂ ತಮ್ಮ ಕರ್ತವ್ಯ ಎಂಬುದನ್ನು ಪಾಲಿಸಿಕೊಂಡು ಬರಬೇಕಾಗಿದೆ. ಇತರ ಪ್ರಾಂತಗಳ ಕನ್ನಡಿಗರೊಂದಿಗೆ ಸಾಂಸ್ಕೃತಿಕ ಏಕಭಾವವನ್ನು ಬೆಳಸಿ ಕನ್ನಡದ ಚಳವಳಿಗೆ ಬೆಂಬಲಕೊಡಬೇಕಾಗಿದೆ. ಅಂಥ ಅರಿವು ಚೆನ್ನಾಗಿ ಉಂಟಾಗಿದೆಯೆಂಬುದು ಈ ಪರಿಷತ್ತಿನ ಕಾರ್ಯಕಲಾಪಗಳಿಂದ ಸ್ಪಷ್ಟವಾಗುತ್ತದೆ. ಪಂಡಿತ ಚಿದರೆ ಮಠದ ವೀರಭದ್ರಶಾಸ್ತ್ರಿಗಳೂ ತಮ್ಮ ಪ್ರಾರಂಭ ಭಾಷಣದಲ್ಲಿ ಇದೇ ಕನ್ನಡತನದ ಭಾವವನ್ನು ವ್ಯಕ್ತಪಡಿಸಿದ್ದಾರೆ: "ಕನ್ನಡನಾಡಿನಲ್ಲಿ ಮೊದಲಿನಿಂದಲೂ ಬೆಳೆದು ಮುಂದೆ ಬಾಳಲಿರುವವರೆಲ್ಲರೂ ಕನ್ನಡಿಗರೇ ಸರಿ. ಅವರು ಯಾವ ಮತಕ್ಕೆ ಸೇರಿದ್ದರೂ ಅವರ ಕನ್ನಡತನಕ್ಕೆ ಭಂಗಬರುವುದಿಲ್ಲ."

ಶ್ರೀಮತಿ ಮೇಲುಕೋಟೆಯವರ ಅಧ್ಯಕ್ಷತೆಯಲ್ಲಿ ಮಹಿಳೆಯರ ಸಮ್ಮೇಳನ ಯಶಸ್ವಿಯಾಗಿ ಜರುಗಿತು. ಅದರಲ್ಲಾದ ಒಂದು ಗೊತ್ತುವಳಿ ಕನ್ನಡ ಭಾಷೆಯ ಏಳಿಗೆಯ ದೃಷ್ಟಿಯಿಂದ ಮುಖ್ಯವಾದುದಾಗಿದೆ: ನೈಜಾಂ ಸರಕಾರದವರು ಕನ್ನಡ ಬಾಲಕಿಯರಿಗೆ ತಾಯ್ನುಡಿಯಾದ ಕನ್ನಡದಲ್ಲಿ ಶಿಕ್ಷಣ ಕೊಟ್ಟು, ಇಂಗ್ಲಿಷು ಮತ್ತು ಉರ್ದು ಭಾಷೆಗಳನ್ನು ಐಚ್ಛಿಕವಾಗಿ ಮಾಡಬೇಕೆಂಬುದೇ ಗೊತ್ತುವಳಿಯ ಬೇಡಿಕೆ. ನೈಜಾಂ ಸರ್ಕಾರದ ವಿದ್ಯಾಭ್ಯಾಸ ಇಲಾಖೆಯವರು ಈ ಬೇಡಿಕೆಯನ್ನು ಅವಶ್ಯವಾಗಿ ಸಲ್ಲಿಸಬೇಕೆಂದು ನಾವೂ ಸಹ ಪ್ರಾರ್ಥಿಸಿಕೊಳ್ಳುತ್ತೇವೆ.

---

## ಪರಿಷತ್ತಿನಲ್ಲಿ ಶ್ರೀ ಪುರಂದರದಾಸರ ಪುಣ್ಯದಿನಾಚರಣೆ

**(ಪರಿಷತ್ತಿನ ಪ್ರಕಟನ ಶಾಖೆಯಿಂದ)**

ಇದೇ ಫೆಬ್ರುವರಿ ೬ನೆಯ ತಾರೀಖು ಗುರುವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ ಪುರಂದರದಾಸರ ಪುಣ್ಯದಿನವನ್ನು ಆಚರಿಸಿತು. ಅನೇಕ ಮಹಾಜನರೂ ಮಹಿಳೆಯರೂ ಸಭೆಗೆ ದಯಮಾಡಿಸಿದ್ದರು. ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮಾನ್ ಬೆನಗಲ್ ರಾಮರಾಯರು ಪುರಂದರದಾಸರ ಜೀವನ ಮತ್ತು ಕೃತಿಗಳ ವಿಷಯವಾಗಿ ಒಂದು ಗಂಟೆಯ ಕಾಲ ಜ್ಞಾನಪೂರ್ಣವಾದ ಭಾಷಣವನ್ನು ಮಾಡಿದರು. ಗಮಕ ವಿದ್ವಾನ್ ಶ್ರೀ ಕೆ. ಜಿ. ಸಂಪತ್ಕುಮಾರಾಚಾರ್ಯರು ತಕ್ಕ ಪಕ್ಕವಾದ್ಯಗಳೊಡನೆ ಪುರಂದರದಾಸರ ಕೆಲವು ಕೃತಿಗಳನ್ನು ಸುಶ್ರಾವ್ಯವಾಗಿ ಹಾಡಿ ಪ್ರೇಕ್ಷಕರನ್ನು ಆನಂದಗೊಳಿಸಿದರು.

**ಶ್ರೀಮಾನ್ ರಾಮರಾಯರ ಭಾಷಣ ಸಾರಾಂಶ**

ಇತರ ದೇಶಗಳಲ್ಲಿ ಸಾಧಾರಣವಾಗಿ ಹಣಕ್ಕೆ, ಅಧಿಕಾರಕ್ಕೆ, ಪಾಂಡಿತ್ಯಕ್ಕೆ ಗೌರವ ಹೆಚ್ಚಾಗಿದ್ದರೆ ನಮ್ಮ ದೇಶದಲ್ಲಿ "ಪುರಂದರದಾಸ"ರಿಗೆ ಹೆಚ್ಚು ಗೌರವ. ಆಡಂಬರಕ್ಕೆ ಬೀಳದೆ ಸರಳತೆಯಿಂದ ಯೋಗಿಯಾಗಿದ್ದು ಬದುಕನ್ನು ನಡಸುವವರನ್ನೇ ನಮ್ಮವರು ಗೌರವಿಸಿ ಅವರ ಮಾತಿಗೆ ಬೆಲೆ ಕೊಡುತ್ತಾರೆ. ಕೊಟ್ಟು ಆ ಮಾತನ್ನು ಪಥ್ಯವಾಗಿ ಭಾವಿಸಿ ತಮ್ಮ ಬಾಳನ್ನು ತಿದ್ದಿಕೊಳ್ಳುತ್ತಾರೆ. ಅಂತಹ ಸರಳಜೀವಿ ನಮ್ಮ ಪುರಂದರದಾಸರು. ತಮ್ಮ ಬದುಕಿನಿಂದ, ತಮ್ಮ ಬಾಳಿನಂತೆಯೇ ಸರಳವಾದ ಸಾಹಿತ್ಯದಿಂದ, ನಾಡನ್ನು ಒಲಿಸಿಕೊಂಡವರು. ಇಂದಿಗೂ ನಾಡು ಅವರನ್ನು ಮರೆತಿಲ್ಲ. ಮುಂದೂ ಮರೆಯಲಾರದು.

ಪುರಂದರದಾಸರು ಕನ್ನಡ ನಾಡಿನಲ್ಲಿ ಹುಟ್ಟಿ, ಕನ್ನಡ ನಾಡಿನಲ್ಲೇ ಬೆಳೆದು ಕನ್ನಡ ನಾಡಿನಲ್ಲೇ ತೀರಿಕೊಂಡವರು. ಅವರ ಬದುಕು ಇಷ್ಟಕ್ಕೇ ಮುಗಿಯಲಿಲ್ಲ. ಕನ್ನಡದಲ್ಲಿ ಹೊಸ ಘಾಟಿಯಲ್ಲಿ ಸರಳವಾಗಿ ಕೀರ್ತನೆ, ಉಗಾಭೋಗ, ಸುಳಾದಿಗಳನ್ನು ಬರೆದು, ಕನ್ನಡ ಬಾವುಟವನ್ನು ಅತ್ಯಂತ ಎತ್ತರವಾಗಿ ಏರಿಸಿ ಹಾರಿಸಿದರು.

ಪುರಂದರದಾಸರು ಹುಟ್ಟಿದ್ದು ಶ್ರೀಮಂತರ ಕುಟುಂಬದಲ್ಲಿ. ಉದ್ಯೋಗ ಚಿನಿವಾರ ವ್ಯಾಪಾರ. ಹುಟ್ಟಿದಾಗ ಅವರಿಗೆ ಆ ಹೆಸರಿರಲಿಲ್ಲ. ಆಗಿನ ಹೆಸರು ಕೃಷ್ಣ, ಶೀನಪ್ಪ, ಶೀನಪ್ಪನಾಯಕ ಎಂಬುದಾಗಿ ಇದ್ದುದಾಗಿ ತಿಳಿಯುಬರುತ್ತದೆ. ಕಡೆಗೆ 'ಪುರಂದರದಾಸ'ನೆಂಬ ಗಟ್ಟಿ ಹೆಸರು ಬಿತ್ತು ಆ ಪುಣ್ಯಾತ್ಮನಿಗೆ. ತಂದೆಯ ಹೆಸರು ವರದಪ್ಪನಾಯಕ. ತಾಯಿ ಲಕ್ಷ್ಮೀಬಾಯಿ. ಹೆಂಡತಿ ಸರಸ್ವತೀಬಾಯಿ.

ತಾಯಿತಂದೆಯರು ಮಕ್ಕಳಿಲ್ಲದೆ ಬಹಳಕಾಲ ಕೊರಗಿದ್ದಾಗ, ಭಗವಂತನ ದಯೆಯಿಂದ ಪುರಂದರದಾಸ ಹುಟ್ಟಿದ. ಸಾಮಾನ್ಯ ಜನರಂತೆಯೇ ಬೆಳೆದ. ಮದುವೆಯಾಯಿತು. ಮದುವೆಯಾದ ತರುಣದಲ್ಲಿ ತಾಯಿತಂದೆಗಳು ತೀರಿಕೊಂಡರು.

ತಂದೆಯಿಂದ ಈತನಿಗೆ ಐಶ್ವರ್ಯ ಬಂತು. ಜೊತೆಗೆ ಜಿಪುಣತನವೂ ಸೇರಿಕೊಂಡಿತು. ದೇವರ ಕೃಪಾಕಟಾಕ್ಷ ಈತನ ಮೇಲೆ ಬಿತ್ತು. ಲೋಭಿಯನ್ನು ದೇವರು ಪರೀಕ್ಷಿಸಿದ. ಹೆಂಡತಿ ಧರ್ಮ ಬುದ್ಧಿಯವಳಾದ್ದರಿಂದ, ದೇವರು ನಡಸಿದ ಪರೀಕ್ಷಾ ಕಾಲದಲ್ಲಿ ಆಕೆ ನಡೆದುಕೊಂಡ ಆಚರಣೆ, ಗಂಡನಲ್ಲಿ ವಿವೇಕವನ್ನು ಕೆರಳಿಸಿತು. ಜಿಪುಣನು ಯೋಗಿಯಾದ. ಆರು ತಿಂಗಳ ಕಾಲ ದೇವರನ್ನು 'ಸತಾಯಿಸಿದ' ಜಿಪುಣನ ಆತ್ಮ ಅರಳಿತು. ಆಸ್ತಿ ಪಾಸ್ತಿಯನ್ನೂ ಮನೆಮಠವನ್ನೂ ಬಿಟ್ಟು, ವ್ಯಾಸರಾಯಸ್ವಾಮಿಗಳ ಬಳಿಗೈದಿ, ಅವರಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡು, ದಾಸಕೂಟಕ್ಕೆ ಸೇರಿ ಪುರಂದರದಾಸನಾದ.

ಅಲ್ಲಿಂದಾಚೆಗೆ ಅವರ ಬಾಳಿನ ಧಾಟಿಯೇ ಮಾರ್ಪಟ್ಟಿತು. ಜನಜೀವನವನ್ನು ಕಂಡು, ತಮ್ಮ ಅನುಭವದ ಸಾರವಾದ ಕೃತಿಗಳನ್ನು ಸರಳವಾದ ಶೈಲಿಯಲ್ಲಿ ರಚಿಸಿ, ನಾಡಿನಲ್ಲಿ ಸುತ್ತಾಡಿ ಜನತೆಗೆ ಜ್ಞಾನಾಮೃತವನ್ನು ಹಂಚಿದರು. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆಗೂ ಹೋಗಿ ಅಲ್ಲಿ ಕೆಲಕಾಲ ರಾಜಾಶ್ರಯ ಪಡೆದಿದ್ದರು.

ಅವರು ಸಾಹಿತ್ಯವನ್ನು ರಚಿಸಿದ್ದು ಜನಪದದ ದೃಷ್ಟಿಯಿಂದ; ಕಲಿತವರಿಗೆ ಮಾತ್ರ ಅರ್ಥವಾಗಲಿ ಎಂದಲ್ಲ. ಸಮಾಜದಲ್ಲಿನ ಯಾವ ಮಟ್ಟದಲ್ಲಿರುವವನೂ ಸುಲಭವಾಗಿ ಜ್ಞಾನವನ್ನು ಪಡೆಯಬೇಕೆಂಬುದೇ ಅವರ ಆಶೆಯಾಗಿತ್ತು. ಅವರು ಬಳಸುತ್ತಿದ್ದ ಅಚ್ಚಗನ್ನಡ ಮಾತುಗಳು ಇಂದು ನಮ್ಮ ಮನೆ ಮಾತುಗಳಾಗಿವೆ. ಅವರು **ದ್ರೌಪದೀ ವಸ್ತ್ರಾಪಹರಣ, ಸುಧಾನು ಚರಿತ್ರೆ** ಮತ್ತು **ಪರತತ್ವಸಾರ** ಎಂಬ ಮೂರು ಇತರ ಗ್ರಂಥಗಳನ್ನೂ ರಚಿಸಿದರೆಂದು ಈಚೆಗೆ ಗೊತ್ತಾಗಿದೆ.

ಪುರಂದರದಾಸರು ಸಾಹಿತ್ಯವನ್ನು ಹೊಸಧಾಟಿಯಲ್ಲಿ ಬೆಳೆಸಿದಂತೆ ದಾಕ್ಷಿಣಾತ್ಯ ಸಂಗೀತಕ್ಕೂ ಮೂಲಪುರುಷರಾಗಿದ್ದಾರೆ. ಕರ್ನಾಟಕ ಸಂಗೀತ ಸಂಪ್ರದಾಯವನ್ನು ಒಂದು ಅಚ್ಚಿಗೆ ತಂದ ಖ್ಯಾತಿ ಇವರದು. ತ್ಯಾಗರಾಜರಿಗೆ ಕೃತಿಗಳನ್ನು ರಚಿಸಲು ಪ್ರೇರಣೆ ದೊರೆತದ್ದೂ ಇವರಿಂದಲೇ ಎಂದು ಒಂದು ದಂತ ಕತೆ ಇದೆ. ತ್ಯಾಗರಾಜರ ಸ್ವಪ್ನದಲ್ಲಿ ಇವರು ಮೈದೋರಿದ್ದರಿಂದ ಅವರಿಗೆ ಸ್ಫೂರ್ತಿ ಬಂತಂತೆ.

ಹೀಗೆ ಹಿರಿಯ ಹೆಸರನ್ನು ಪಡೆದು ಪುರಂದರದಾಸರು ೧೫೬೪ರ ಪುಷ್ಯ ಬಹುಳ ಅಮಾವಾಸ್ಯೆಯ ದಿನ ಸ್ವರ್ಗಸ್ಥರಾದರು.

ಅಂತು ಒಟ್ಟಿನಲ್ಲಿ ಪುರಂದರದಾಸರು ಆರಂಭ ಮಾಡಿದ ದಾಸ ಸಾಹಿತ್ಯ, ವೀರ ಶೈವರ ವಚನ ಸಾಹಿತ್ಯದಂತೆಯೇ ಜನತೆಗೆ ಉಲ್ಲಾಸ, ಉತ್ಸಾಹ, ಧೈರ್ಯ, ಸ್ಥೈರ್ಯ, ಭಕ್ತಿ, ಧರ್ಮ, ಶ್ರದ್ಧೆಗಳನ್ನು ಕೊಡುವುವಾಗಿವೆ. ನಿರಾಶೆಗೆ ಜೀವನದಲ್ಲಿ ತಾವಿಲ್ಲವೆಂದು ಜನತೆಗೆ ಘಂಟಾಘೋಷವಾಗಿ ಸಾರಿ, ಪರಮಾತ್ಮನಲ್ಲಿ ಅನನ್ಯ ಭಕ್ತಿಭಾವದಿಂದ ನಡೆದುಕೊಂಡರೆ ನೆಮ್ಮದಿ, ಶ್ರೇಯಸ್ಸು ಲಭಿಸುವುದು ಎಂಬುದೇ ದಾಸ ಸಾಹಿತ್ಯ ಸಾರುವ ಸಂದೇಶ.

**ದೇವರ ನಾಮುಗಳ ಹಾಡಿಕೆ**

ಶ್ರೀ ರಾಮರಾಯರ ಭಾಷಣವಾದಮೇಲೆ ಶ್ರೀ ಸಂಪತ್ಕುಮಾರಾಚಾರ್ಯರು **ಬಿನ್ನಹಕೆ ಬಾಯಿಲ್ಲವಯ್ಯ, ನಾಮಕೀರ್ತನೆ ಅನುದಿನ ಜಪಿಸಿದವಗೆ, ಮರೆಯಬೇಡ ಮನವೆ ನೀನು, ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳ ಲೇಸು, ಇದು ಭಾಗ್ಯ ಇದು ಭಾಗ್ಯವಯ್ಯ, ಕಡುಕೃಪೆಯಿರಲಿ, ಕಲ್ಲು ಸಕ್ಕರೆ ಕೊಳ್ಳಿರೋ, ನಮಗಿ ಪರಮಾದರದಿ ಪಾಡಲು, ಉದರ ವೈರಾಗ್ಯವಿದು, ಬೃಂದಾವನದೊಳು** ಎಂಬೀ ಕೃತಿಗಳನ್ನು ಹಾಡಿ ಸಭಿಕರನ್ನು ತಣಿಸಿದರು.

**ಶ್ರೀ ಮಾಸ್ತಿಯವರ ಭಾಷಣ ಸಾರಾಂಶ**

ಬಳಿಕ ಶ್ರೀ ಮಾಸ್ತಿಯವರು ತಮ್ಮ ಅಮೋಘ ಭಾಷಣದಲ್ಲಿ ಹೀಗೆ ಹೇಳಿದರು:—

"ಪುರಂದರದಾಸರ ದಿನಾಚರಣೆ ಪರಿಷತ್ತಿನಲ್ಲಿ ಏಕೆ ನಡೆಯಬೇಕು? ನಾವು ಇಂದು ಹೊಗಳಿ ಹಾಡುವ ವ್ಯಕ್ತಿ ಎಂಥ ಸಾಹಿತ್ಯವನ್ನು ಸೃಷ್ಟಿಮಾಡಿತು? ಕಲ್ಲು ಸಕ್ಕರೆಯ ಸಾಹಿತ್ಯ ಅದು. ಬಲ್ಲವರಿಂದ ಬಲ್ಲವರಿಗಾಗಿ ಬಲ್ಲ ರೀತಿಯಲ್ಲಿ ಹೊರಬೀಳುವ ಪ್ರೌಢ ಸಾಹಿತ್ಯವಲ್ಲ. ಪುರಂದರದಾಸರ ಸಾಹಿತ್ಯವಾದರೋ, ತಿಳಿದವರಿಂದ ತಿಳಿಯದವರಿಗಾಗಿ ತಿಳಿಯುವ ರೀತಿಯಲ್ಲಿ ಬಂದ ತಿಳಿಯಾದ ಸಾಹಿತ್ಯ. ಅಂಥ ಸಾಹಿತ್ಯದಿಂದ ಸಾಮಾನ್ಯ ಜನರೂ ಮೇಲ್ಮಟ್ಟಕ್ಕೆ ಬರಲು ಅವಕಾಶವಾಗುವುದರಿಂದ ಅದಕ್ಕೆ ಬೆಲೆ ಹೆಚ್ಚು. ಆದ್ದರಿಂದಲೇ ಪರಿಷತ್ತು ಪುರಂದರ ದಾಸರನ್ನು ಇಂದು ಸ್ಮರಿಸುವುದು ಉಚಿತವಾಗಿದೆ.

ಹಿಂದೆ ಸಾಹಿತ್ಯವನ್ನು ರಚಿಸಿದವರು ನಾವು ಸಾಹಿತ್ಯವನ್ನು ರಚಿಸುತ್ತೇವೆ ಎಂದು ರಚಿಸಲಿಲ್ಲ. ಧರ್ಮವನ್ನು ಹೇಳಲು, ನೀತಿಯನ್ನು ತಿಳಿಸಲು, ತಿಳಿವಳಿಕೆಯನ್ನು ಹರಡಲು, ತಮ್ಮ ಜನ್ಮ ಸಫಲವಾಗಲು, ತಮ್ಮ ಮನಸ್ಸು ತೃಪ್ತಿಪಡಿಸಲು ಬರೆದರು. ಅದು ಸಾಹಿತ್ಯವಾಯಿತು. ಅಂದು ಧರ್ಮದ ಸೇವೆಗೆ ಹೊರಟ ಕೃತಿ ಸಾಹಿತ್ಯವಾಗಿ ನಿಂತಿತು. ಅಂದಿನ ಋಷಿಗಳು ಉಪನಿಷತ್ತುಗಳನ್ನು ಬರೆದರು. ಆ ಉಪನಿಷತ್ತುಗಳು ಸಾಹಿತ್ಯಕೃತಿಗಳಾದುವು. ಉಪನಿಷತ್ತೇ ಸಾಹಿತ್ಯ; ಸಾಹಿತ್ಯವೇ ಉಪನಿಷತ್ತು ಎಂದು ಸೂತ್ರ ಹೇಳಬಹುದಾದರೆ ಆ ಸೂತ್ರಕ್ಕೆ ಪುರಂದರ ದಾಸರೇ ಸಾಕ್ಷಿ.

ಪುರಂದರದಾಸರು ಕೂಡ ಇದೇ ಉದ್ದೇಶದಿಂದ ಕೃತಿಗಳನ್ನು ರಚಿಸಿದರು. ಅವರ **ಬೃಂದಾವನದೊಳು** ಎಂಬ ಗೀತವನ್ನು ನೀವು ಕೇಳಿದಿರಿ. ಎಷ್ಟು ಚೆನ್ನಾದ ಸಾಹಿತ್ಯ. ಅದೇ ಅವರ **ಭಾಗ್ಯದ ಲಕ್ಷ್ಮಿ ಬಾರಮ್ಮ** ಎಂಬ ಕೃತಿಯನ್ನು ಕೇಳಿ (ಎಂದು ಹೇಳಿ ಮಾಸ್ತಿಯವರೇ ಎರಡು ಚರಣಗಳನ್ನು ಮಧುರವಾಗಿ ಹಾಡಿದರು.) ಅದು ಎಷ್ಟು ಮುದ್ದಾಗಿದೆ? ಪ್ರಾಸಬದ್ಧವಾದ ಕವಿತೆ. ಪ್ರಾಸದೊಂದಿಗೆ ಅರ್ಥವೂ ಸೇರಿ ಎಷ್ಟು ಮನೋಹರವಾಗಿದೆ! ಇದಕ್ಕಿಂತ ಸಾಹಿತ್ಯವೇ!

ಪುರಂದರದಾಸರು ಹಣವಂತರಾಗಿ ಹುಟ್ಟಿದವರು. ಹಣವಂತರಾಗಿ ಹುಟ್ಟಿ ಕೆಟ್ಟುಹೋಗಬೇಕಾದವರು ಲೋಕದ ರೂಢಿಯಂತೆ! ಆದರೆ ಹಾಗೆ ಕೆಟ್ಟುಹೋಗದೆ ಬದುಕಿಕೊಂಡರು. ಹೆಂಡತಿಯ ಒಂದು ತೊಟ್ಟು ಕಣ್ಣೀರು ಅವರನ್ನು ಉದ್ಧಾರ ಮಾಡಿತು. ಅವರ ಬದುಕಿನಲ್ಲಿ ಹೆಂಡತಿಯ ಕಂಬನಿ ಎಷ್ಟು ದೊಡ್ಡ ಮಾರ್ಪಾಟನ್ನು ಮಾಡಿತು! ಪುರಂದರದಾಸರ ಈ ಬದುಕು ಸಾಮಾನ್ಯ ಜನರ ಬದುಕಿನಂತೆಯೇ ಇದ್ದಿತಾದರೂ, ಅವರು ಹೆಜ್ಜೆ ಹೆಜ್ಜೆಗೂ ಬೆಳೆದ ಮನುಷ್ಯ. ಬೆಳೆದು ಗಂಡುಮೆಟ್ಟಿನಲ್ಲಿ ನಿಂತು ಲೋಕವನ್ನು ಕಂಡವರು. ಕಂಡು ದಿವ್ಯತತ್ತ್ವಗಳನ್ನು ಸಾರಿದರು. ಅವರು ಹೊರಟದ್ದು ಮರ್ತ್ಯದಿಂದ, ಮುಟ್ಟಿದ್ದು ಮುಕ್ತಿಯನ್ನು.

ಅವರ ನಾಮಸ್ಮರಣೆಯಿಂದ ನಮಗೆ ಶುಭ. ನಮ್ಮ ಜನ ಇಂಥ ದೊಡ್ಡ ಹೆಸರುಗಳನ್ನು ಆಗಿಂದಾಗ್ಗೆ ನೆನೆಯುತ್ತ, ಈ ಹೆಸರುಗಳಿಗೆ ತಕ್ಕಂತೆ ನಡೆಯಬೇಕು. ಹಿಂದೊಮ್ಮೆ ನಮ್ಮ ನಾಡು ಜಗತ್ತಿಗೇ ಮಾರ್ಗದರ್ಶಿಯಾಗಿತ್ತು. ಮತ್ತೆ ಅದನ್ನು ಹಾಗೆ ಮಾಡಬೇಕಾದರೆ, ಇಂಥ ಹಿರಿಯ ವ್ಯಕ್ತಿಗಳ ಬಾಳು ನಮಗೆ ಆದರ್ಶವಾಗಬೇಕು.

ಬಳಿಕ ಪರಿಷತ್ತಿನ ಮೈಸೂರು ಪ್ರಾಂತಸಮಿತಿಯ ಕಾರ್ಯದರ್ಶಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳಿಂದ ಧನ್ಯವಾದ ಸಮರ್ಪಣೆ ಆದಮೇಲೆ ಉತ್ಸವ ಮುಗಿಯಿತು.

(ಮುನ್ನಿನ ಪುಟದಿಂದ ಮುಂದುವರಿದುದು)

ವಾಗಿ ಪ್ರಸ್ತಾಪಿಸುವುದು ನನ್ನ ಉದ್ದೇಶವೂ ಅಲ್ಲ; ಅದಕ್ಕೆ ಕಾಲವೂ ಇಲ್ಲ. ಒಟ್ಟಿನ ಮೇಲೆ ಸಾಹಿತ್ಯಾಭಿವೃದ್ಧಿಗೆ ನಡೆಯಬೇಕಾದ ಕಾರ್ಯ ಕಲಾಪಗಳನ್ನು ಸೂಚಿಸುವುದಕ್ಕೆ ಕೂಡ ಈ ಭಾಷಣದಲ್ಲಿ ಸಾಧ್ಯವಿಲ್ಲ. ಅಲ್ಲದೆ, ತಾವೆಲ್ಲ ನಡೆಸುತ್ತಲೇ ಇರುವ ಕಾರ್ಯಗಳನ್ನು ಕುರಿತು ಬಿನ್ನಹ ಮಾಡಬೇಕಾದ ಆವಶ್ಯಕತೆಯೇ ಇಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ, ಎಲ್ಲಿಂದ ಬೆಳಕು ಬಂದರೂ ನಮಗೆ ಬೇಕು. ದೇಹ ಮಾತ್ರ ನಮ್ಮದೇ ಆಗಿದ್ದು ಅಲಂಕಾರಗಳು ಮಾತ್ರ ಹೊರಗಿನವಾಗಿರುವಂತೆ ನಾವು ಎಚ್ಚರಿಕೆಯಿಂದಿದ್ದು ನಮ್ಮ ಸಾಹಿತ್ಯವನ್ನು ಬೆಳೆಯಿಸಬೇಕು. ನಮ್ಮ ಹೂದೋಟದಲ್ಲಿರುವ ಗಿಡಗಳ ಜೊತೆಗೆ ಇತರ ಹೂದೋಟಗಳಿಂದ ಉತ್ತಮವಾದ ಹೂ ಗಿಡಗಳನ್ನು ತಂದು ಬೆಳೆಯಿಸಬೇಕು. ಅಭಿಮಾನದಿಂದಲೂ ತ್ಯಾಗಬುದ್ಧಿಯಿಂದಲೂ ದುಡಿಯುತ್ತಿರುವ ಸಾಹಿತಿಗಳ ಗ್ರಂಥಗಳಲ್ಲಿ ಆದರ ತೋರಿಸಿ, ಅವರಿಗೆ ಸರ್ವವಿಧಗಳಲ್ಲಿಯೂ ಪ್ರೋತ್ಸಾಹ ಕೊಡುವುದಂತು ಮಹಾಜನರ ಅವಶ್ಯ ಕರ್ತವ್ಯ.

ನಮ್ಮಲ್ಲಿ ಕವಿತೆಗಳೂ ಸಣ್ಣಕತೆಗಳೂ ಹೆಚ್ಚಾಗಿವೆ. ಅವು ಇನ್ನೂ ಹೆಚ್ಚಲಿ. ಆದರೆ ಈಗ ಅವುಗಳಷ್ಟು ಹೆಚ್ಚಿಲ್ಲದ ಕಾದಂಬರಿಗಳು, ಜೀವನ ಚರಿತ್ರೆಗಳು, ಪ್ರಬಂಧಗಳು, ವಿಮರ್ಶೆಯ ಗ್ರಂಥಗಳು, ನಾಟಕಗಳು ಮುಂತಾದುವೂ ಮತ್ತಷ್ಟು ಹೆಚ್ಚಬೇಕಾದುದು ಆವಶ್ಯಕ.

ಕೀಳು ಅಭಿರುಚಿಯ ಕತೆಗಳು ಮುಂತಾದುವು ಹೆಚ್ಚುತ್ತಿರುವುದಕ್ಕಾಗಿ ವಿಷಾದಿಸಬೇಕಾಗಿದೆ. ಸಾಹಿತ್ಯವು ಜನಜೀವನದ ಪ್ರತಿಬಿಂಬವಾಗಿರಬೇಕಲ್ಲವೆ? ಲೇಖಕರು ನಮ್ಮ ಸಮಾಜದ ವಾಸ್ತವ ಸ್ವರೂಪವನ್ನು ನೋಡಿಕೊಂಡು, ನಿಜದ ಆಧಾರವನ್ನು ಸ್ವಲ್ಪಮಟ್ಟಿಗಾದರೂ ಇಟ್ಟುಕೊಂಡು ಸಣ್ಣಕತೆ ಮುಂತಾದುವುಗಳನ್ನು ಬರೆಯಬೇಕಲ್ಲವೆ? ಉತ್ತಮ ವರ್ಗದ ಸಣ್ಣ ಕತೆಗಳೇ ಮುಂತಾದುವುಗಳನ್ನು ಬರೆದೂ ಬರೆಯುತ್ತಲೂ ಮಹೋಪಕಾರ ಮಾಡುತ್ತಿರುವ ಮಹನೀಯರ ವಿಷಯದಲ್ಲಿ ನಾನು ಕೃತಜ್ಞತೆಯನ್ನು ಸೂಚಿಸುತ್ತೇನೆ. ನಾನು ಇಲ್ಲಿ ಪ್ರಸ್ತಾವಿಸುತ್ತಿರುವುದು ಅವರ ವಿಷಯವನ್ನಲ್ಲ. ಇತರ ಕೆಲವರ ವಿಷಯವನ್ನು. ಅವರ ವಿಷಯದಲ್ಲಿ ಕೂಡ ಸಹೃದಯತೆಯಿಂದಲೇ ಕೂಡಿ ಬಿನ್ನವಿಸುತ್ತೇನೆ. ಒಂದು ವಿಷಯವನ್ನು ನೆನೆದರೆ ಮಾತ್ರ ಬಹಳ ವಿಷಾದವಾಗುತ್ತದೆ. ತುಚ್ಛ ಶೃಂಗಾರದ ಸಾಹಿತ್ಯ ಹೆಚ್ಚಾಗುತ್ತಿದೆ. ಇದನ್ನು ನೋಡಿ, ನಮ್ಮ ಸಮಾಜವೇ ಕೆಟ್ಟು ಹಾಳಾಗಿದೆಯೆಂದೂ ನಮ್ಮ ಸೋದರಿಯರು ಶೀಲವನ್ನು ಕಳೆದುಕೊಂಡಿರುವ ಸಂದರ್ಭಗಳು ಬಹಳ ಹೆಚ್ಚಾಗಿರುವುದೇ ಈ ಬಗೆಯ ಕತೆಗಳು ಹುಟ್ಟಲು ಕಾರಣವಾಗಿರಬೇಕೆಂದೂ ಅಭಿಪ್ರಾಯವೆಲ್ಲಿ ಹೊರಗಿನವರಿಗೆ ಉಂಟಾಗಿಬಿಡುವುದೋ ಎಂದು ತಲ್ಲಣವಾಗುತ್ತದೆ. ನಮ್ಮ ನಾಡಿನ ಹೆಸರುಗಳನ್ನು ತಂದು ಸೇರಿಸಿ, ಹೊರಗಿನ ಕತೆಗಳನ್ನು ಹಸಿಹಸಿಯಾಗಿ ಅನುವಾದಿಸಿ ಪ್ರಕಟಿಸುವ ಹುರುಡಿನಲ್ಲಿ ನಮ್ಮ ಅಕ್ಕ ತಂಗಿಯರಿಗೆ ಅಪಕಾರ ಮಾಡುವುದು ಖಂಡಿತ ಬೇಡ. ನಮ್ಮ ಸಮಾಜದಲ್ಲಿ ಬಗೆಬಗೆಯ ದೋಷಗಳಿವೆ; ಗುಣಗಳೂ ಇವೆ. ದೋಷವನ್ನೆತ್ತಿಹಾಕೋಣ; ಆದರೆ ಸಮಾಜದ ವಾಸ್ತವ ವಿದ್ಯಮಾನವನ್ನೂ ನೋಡಿ ಅಳತೆಗೆಡದಂತೆ ಕೆಲಸ ಮಾಡೋಣ. ದೋಷವನ್ನು ಹೊರಗೆ ಹಾಕುವ ಉತ್ಸಾಹದಲ್ಲಿ ಗುಣಾಂಶವನ್ನು ಮರೆಯದಿರೋಣ, ದೊಡ್ಡ ಆದರ್ಶಗಳನ್ನಿಟ್ಟುಕೊಂಡು ರುಚಿಯಾದ ಶುಚಿಯಾದ ಸಾಹಿತ್ಯವನ್ನು ಮಾತ್ರವೇ ಸೃಷ್ಟಿಸೋಣ. ನಾಟಕ ಲೇಖನದಿಂದ ಹಣದ ರಾಶಿಯನ್ನೇ ಗಳಿಸಿ ಖ್ಯಾತಿಯನ್ನು ಪಡೆದಿರುವ ಪಾಶ್ಚಾತ್ಯ ಲೇಖಕರೊಬ್ಬರು ಯಾವ ಅಸಮಾಧಾನವೂ ಇಲ್ಲದೆ ಹೇಳಿದ್ದಾರೆ, ತಾವು ಕ್ರೈಸ್ತ ಪಾದ್ರಿಗಳನ್ನು ಅಪಹಾಸ್ಯ ಮಾಡಿ ಬರೆದಿದ್ದ ನಾಟಕವನ್ನು ಆಡಿಸಲು ಯಾವ ರಂಗಭೂಮಿಯ ವ್ಯವಸ್ಥಾಪಕನೂ ಒಪ್ಪಲಿಲ್ಲವೆಂದು. ಪ್ರಗತಿಯನ್ನು ಸಾಧಿಸಿರುವ ದೇಶಗಳಲ್ಲಿ ಕೂಡ, ಯಾವುದರಲ್ಲಿಯೂ ಅಳತೆಮೀರಕೂಡದೆಂಬ ಮನೋವೃತ್ತಿಯಿದೆ. ಇಷ್ಟಾಯಿತು. ನಮ್ಮವರನೇಕರು ನಮ್ಮ ದೇಶದ ಮಹಾವ್ಯಕ್ತಿಗಳನ್ನೂ ಮತಪುರುಷರನ್ನೂ ಅಲಕ್ಷ್ಯಭಾವದಿಂದ ತುಚ್ಛವಾಗಿ ಆಕ್ಷೇಪಿಸಿ ಬರೆಯುವಂತೆ ಯೇಸುಕ್ರಿಸ್ತನನ್ನು ಅಥವಾ ಇತರ ಮಹಾವ್ಯಕ್ತಿಗಳನ್ನು ಅಲ್ಲಿಯವರು ತುಚ್ಛವಾಗಿ ಆಕ್ಷೇಪಿಸಿ ಬರೆದಿಲ್ಲ. ಅಲ್ಲಿಯವರು ಆಕ್ಷೇಪಿಸಿದರೆ ಅದರಲ್ಲಿ ಸಹ ಒಂದು ಸಂಯಮವುಂಟು; ಗುಣಪಕ್ಷಪಾತವುಂಟು; ಒಂದು ಸೊಗಸುಂಟು; ಒಂದು ಪರಿಮಿತಿಯುಂಟು. ಜೀವನದಲ್ಲಾಗಲಿ ಸಾಹಿತ್ಯದಲ್ಲಾಗಲಿ ಹಳೆಯದೆಲ್ಲ ಕೊಳೆಯೂ ಅಲ್ಲ; ಹೊಸದೆಲ್ಲ ಕಲ್ಯಾಣಕರವೂ ಅಲ್ಲ. ನಾನು ಮೊದಲೇ ಸೂಚಿಸಿರುವಂತೆ ನಿನ್ನೆಯ ಹೊಸದೇ ಇವೊತ್ತು ಹಳೆಯದು; ಇವೊತ್ತಿನ ಹೊಸದೇ ನಾಳೆಯ ಹಳೆಯದು. ತನ್ನನ್ನು ತನ್ನ ಮಗನು ನಿಂದಿಸಕೂಡದೆಂದು ಆಶಿಸುವವನಿಗೆ ತನ್ನ ತಂದೆಯನ್ನು ನಿಂದಿಸಲು ಅಧಿಕಾರವಿಲ್ಲ. ನಿಂದಿಸಿದರೂ ದೋಷಕ್ಕಾಗಿ ನಿಂದಿಸಿದಂತೆ. ಗುಣಕ್ಕಾಗಿ ಹೊಗಳದೆ ನಿಂದಿಸಲು ಅಧಿಕಾರವಿಲ್ಲ. ಎಲ್ಲರಲ್ಲಿರುವ ಗುಣಾಂಶವನ್ನೇ ಗಮನಿಸಿ ಮುಂದುವರಿಯುವುದೇ ವಿವೇಕ. ಅದೇ ಸಹೃದಯರ ಸದ್ಧರ್ಮ.

ನಾಟಕವು ನಮ್ಮ ನಾಡಿನಲ್ಲಿ ಈಚೆಗೆ ವೃದ್ಧಿಯಾದುದು. ಮೈಸೂರು ಸಂಸ್ಥಾನದಲ್ಲಂತು, ರಂಗಭೂಮಿಯು ಏರ್ಪಟ್ಟುದೇ ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಕೃಪೆಯಿಂದ. ಅವರು ಅರಮನೆಯ ಆಶ್ರಯದಲ್ಲಿ ನಾಟಕ ಸಭೆಯನ್ನೇರ್ಪಡಿಸಿ ಅಭಿನವ ಕಾಳಿದಾಸ ಮುಂತಾದ ಅನೇಕ ವಿದ್ವಾಂಸರಿಂದ ಸಂಸ್ಕೃತ ನಾಟಕಗಳನ್ನು ಭಾಷಾಂತರ ಮಾಡಿಸಿ ಆಡಿಸಿ ಪ್ರೋತ್ಸಾಹಿಸಿದರು. ಆಳುವ ಮಹಾಸ್ವಾಮಿಯವರಾದ ಶ್ರೀಮನ್ ಮಹಾರಾಜರವರು ರಂಗಭೂಮಿಗೂ ಸಂಗೀತ ಸಾಹಿತ್ಯಗಳಿಗೂ ಅಮಿತವಾದ ಪ್ರೋತ್ಸಾಹ ಕೊಟ್ಟು ಕೃಪೆಮಾಡುತ್ತಿದ್ದಾರೆ. ಅದಕ್ಕಾಗಿ ಮಹಾಸ್ವಾಮಿಯವರಲ್ಲಿ ಎಷ್ಟು ಭಕ್ತಿ ಕೃತಜ್ಞತೆಗಳಿಂದಿದ್ದರೂ ಸಾಲದು.

ಈಚೆಗೆ ನಾಟಕಕರ್ತರ, ನಟರ ಮತ್ತು ಮಹಾಜನರ ಅವಲಂಬನದಿಂದ ರಂಗಭೂಮಿ ಕನ್ನಡ ನಾಡಿನಲ್ಲಿ ಅಭಿವೃದ್ಧಿಗೆ ಬಂದು, ಈಗ ಮಾತ್ರ ಚಲನಚಿತ್ರಗಳ ಹಾವಳಿಯಿಂದ ಮುಗ್ಗಟ್ಟಿಗೆ ಸಿಕ್ಕಿದೆ. ಸಾಹಿತ್ಯದ ಶ್ರೇಷ್ಠರೂಪಗಳಲ್ಲೊಂದಾದ ನಾಟಕವನ್ನು ಉಳಿಸಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ. ನಾಟ್ಯ ಸಮ್ಮೇಳನವೇ ನಡೆದಿರುವಾಗ ನಾಟಕಗಳ ವಿಷಯವಾಗಿ ನಾನೇನನ್ನು ಹೇಳುವುದೂ ಉಚಿತವಲ್ಲ.

ಒಟ್ಟಿನಲ್ಲಿ, ನಮ್ಮ ಸಂಸ್ಕೃತಿಗನುರೂಪವಾಗಿರುವಂತೆಯೂ ನಮ್ಮ ನಾಡಿನ ಅಭ್ಯುದಯಕ್ಕೂ ಉನ್ನತಿಗೂ ಸಾಧಕವಾಗುವಂತೆಯೂ ಸಾಹಿತ್ಯದ ಸಮಸ್ತ ಕ್ಷೇತ್ರಗಳಲ್ಲಿಯೂ ಉತ್ತಮೋತ್ತಮವಾದ ಗ್ರಂಥಗಳನ್ನು ರಚಿಸಿ ನಾಡಿನಲ್ಲೆಲ್ಲ ಅರಿವಿನ ಬೆಳಕನ್ನು ಹೆಚ್ಚಿಸುವ ಧ್ಯೇಯದಿಂದ ಸಂತತವಾಗಿ ಶ್ರಮಿಸುವುದೇ ಸಾಹಿತ್ಯದೇವಿಯ ಆರಾಧಕರಾದ ಕನ್ನಡಿಗರೆಲ್ಲರ ಕರ್ತವ್ಯ. ಕನ್ನಡಕ್ಕೆ ತಕ್ಕ ಸ್ಥಾನ ದೊರೆತು, ಕನ್ನಡಿಗರೆಲ್ಲ ಉದ್ಧಾರವಾಗುವಂತೆ ಮಾಡಿಕೊಳ್ಳಬೇಕೆಂಬುದು ನಮ್ಮೆಲ್ಲರ ಹೊಂಗನಸು. ರಾಜರ್ಷಿಗಳೂ ಸಂಗೀತ ಸಾಹಿತ್ಯ ಕಲಾಭಿಜ್ಞರೂ ಆದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಅಧಿಷ್ಠಾತೃತ್ವದಲ್ಲಿ ಕನ್ನಡ ನಾಡಿಗೆಲ್ಲ ಒಂದೇ ವಿಶ್ವವಿದ್ಯಾನಿಲಯವಾಗಬೇಕೆಂಬುದೇ ಮುಂತಾದುವು ಬಹುಕಾಲದಿಂದ ನನಗಿರುವ ಆಶೆ.

## ಪರಿಸಮಾಪ್ತಿ

ಸೋದರ ಸೋದರಿಯರೇ, ಕನ್ನಡ ನಾಡು ಒಮ್ಮೆ ವೈಭವದ ಶಿಖರವನ್ನೇರಿದ್ದ ನಾಡು. ಕನ್ನಡ ನಾಡು ಭರತಖಂಡಕ್ಕೇ ಭೂಷಣಪ್ರಾಯವಾಗಿ ತನ್ನ ವರ್ಚಸ್ಸನ್ನು ವ್ಯಕ್ತಗೊಳಿಸಿದ ನಾಡು. ಕನ್ನಡ ನಾಡು ಸಂಗೀತ ಸಾಹಿತ್ಯ ಕಲಾಕೋವಿದರ ನಾಡು. ಕನ್ನಡ ನಾಡು ಪ್ರಕೃತಿದೇವಿಯ ವಿಲಾಸಭೂಮಿಯಂತಿರುವ ಸೊಬಗಿನ ನಾಡು. ವಿದ್ವನ್ಮಣಿಗಳೂ, ಭಾಷಾಭಿಮಾನಿಗಳೂ, ಶ್ರೇಷ್ಠರೂ, ಕಿರಿಯರಾದ ನಮಗೆ ಮಾನ್ಯರೂ ಆಗಿರುವ ಅನೇಕ ಮಂದಿ ಹಿರಿಯರ ವಾತ್ಸಲ್ಯಪೂರಿತವಾದ ಅವಲಂಬನವಿದೆ. ಭಾಷಾಸೇವೆಗಾಗಿ ಜಾತಿ ಮತ ಪಂಗಡ ಭೇದವಿಲ್ಲದೆ ಸಮಸ್ತರೂ ಸೋದರಪ್ರೇಮದಿಂದ ಒಟ್ಟುಗೂಡಿ ಯಥಾಶಕ್ತಿಯಾಗಿ ಪುಷ್ಪಾಂಜಲಿಯನ್ನು ಸಮರ್ಪಿಸಲು ಪ್ರಾಪ್ತವಾದ ಕಾಲವಿದೆ. ಅದನ್ನು ಪೂರ್ತಿಯಾಗಿ ಉಪಯೋಗಿಸಿಕೊಳ್ಳೋಣ. ಕನ್ನಡದ ನಾಡು ಸರ್ವತೋಮುಖವಾಗಿ ಅಭ್ಯುದಯಹೊಂದಿ, ಕನ್ನಡ ಸಾಹಿತ್ಯ ಇತರ ಯಾವ ಸಾಹಿತ್ಯಕ್ಕೂ ಕಡಮೆಯಿಲ್ಲದ ಮಹಾನಿಧಿಯಾಗಿ ಪರಿಣಮಿಸಿ, ಕನ್ನಡಿಗರೆಲ್ಲ ಉದಾತ್ತ ಸಂಸ್ಕೃತಿಯ ಅಮೃತ

ಪುತ್ರರಾಗಿ, ಕನ್ನಡ ನಾಡಿನ ಕಾರ್ಯಸಾಧನೆ ಜಗತ್ತಿನ ಬೆಳುದೀವಿಗೆಯಾಗಿ, ಕನ್ನಡ ತಾಯಿ ತಪಸ್ವಿನಿಯಾದ ಭಾರತಮಾತೆಯ ತಪೋಧನೆಯಾದ ಮುದ್ದುಕುವರಿಯೂ ಜಗದ್ವಂದ್ಯಳೂ ಎನಿಸಿ, ಒಟ್ಟು ಕನ್ನಡ ನಾಡೇ ಒಂದು ಪುಣ್ಯಭೂಮಿಯೂ ಪಾವನಕ್ಷೇತ್ರವೂ ಆಗುವಂತೆ ತಾಯಿ ಭುವನೇಶ್ವರೀದೇವಿ ಅನುಗ್ರಹಿಸಲೆಂಬುದೇ ನನ್ನ ಪ್ರಾರ್ಥನೆ; ಅದೇ ಭಕ್ತಿ ನಮ್ರನಾಗಿ ನಾನು ಜಪಿಸುತ್ತಿರುವ ಗಾಯತ್ರಿ!

---

## ಇಂಗ್ಲೆಂಡಿನಲ್ಲಿ ಸಾಹಿತ್ಯದ ಮೇಲೆ ಯುದ್ಧದ ಪರಿಣಾಮ

(ಇಂಡಿಯನ್ ಪಿ. ಇ. ಎನ್. ಪತ್ರಿಕೆಯಿಂದ)

ಯುದ್ಧದ ದೆಸೆಯಿಂದ ಇಂಗ್ಲೆಂಡಿನಲ್ಲಿ ಸಾಹಿತ್ಯಕ್ಕೆ ದೊರೆಯುತ್ತಿದ್ದ ಪ್ರೋತ್ಸಾಹ ಪುರಸ್ಕಾರಗಳಿಗೆ ತುಂಬ ಹಾನಿತಟ್ಟಿದೆ. ಮೊದಲನೆಯದಾಗಿ, ಪುಸ್ತಕಗಳ ಪ್ರಕಟನೆ ಮಾರಾಟಗಳು ಬಹಳಮಟ್ಟಿಗೆ ಕಡಮೆಯಾಗಿಬಿಟ್ಟಿವೆ: ಪ್ರಕಟನಕರ್ತರು ತಮ್ಮ ಕಚೇರಿಗಳನ್ನು ಸುರಕ್ಷಿತ ಸ್ಥಳಗಳಿಗೆ ಒಯ್ದಿದ್ದಾರೆ; ಈಗಿನ ಅಲ್ಲೋಲಕಲ್ಲೋಲದಲ್ಲಿ ಯಾರಿಗೂ ಓದುವುದಕ್ಕೆ ಹೊತ್ತಿಲ್ಲ. ಇನ್ನೊಂದು ಮುಖ್ಯ ಸಂಗತಿ, ವೃತ್ತಪತ್ರಿಕೆಗಳ ಪುಟ ಸಂಖ್ಯೆಯಲ್ಲಿ ಆಗಿರುವ ಇಳಿತಾಯ; ಇದರ ಪರಿಣಾಮ, ಪುಸ್ತಕ ವಿಮರ್ಶೆಗಳಿಗಾಗಿ ಮೀಸಲಾಗಿಟ್ಟಿದ್ದ ಸ್ಥಳಾವಕಾಶದಲ್ಲೂ ಇಳಿತಾಯ. ಇಷ್ಟೇ ಅಲ್ಲದೆ, ಬ್ರಿಟಿಷ್ ಮ್ಯೂಸಿಯಮ್ಮಿನಲ್ಲಿನ ವಾಚನಾಲಯವನ್ನು ಮುಚ್ಚಲಾಗಿದೆ: ರಾಜ ಸಾಹಿತ್ಯ ಸಂಘದ (Royal Society of Literature) ಆಶ್ರಯದಲ್ಲಿ ಕ್ರಮವಾಗಿ ನಡೆಯುತ್ತಿದ್ದ ಸಭೆಗಳನ್ನು ನಿಲ್ಲಿಸಲಾಗಿದೆ; (ಕಳೆದ) ಅಕ್ಟೋಬರಿನಲ್ಲಿ ನಡೆಯಬೇಕಾಗಿದ್ದ ರಾಷ್ಟ್ರೀಯ ಗ್ರಂಥೋತ್ಸವ (National Book Fair) ನಿಂತುಹೋಯಿತು. ಜನಾಂಗ ಹೊಸ ಪರಿಸ್ಥಿತಿಗೆ ಹೊಂದಿಕೊಂಡುಹೋದಂತೆ ಸ್ಥಿತಿಗತಿಗಳು ಉತ್ತಮವಾದಾವು; ಆದರೆ ಪರಿಹಾರ ಮಾಡಲಾಗದಂಥ ಕೆಲವು ನಷ್ಟಗಳು ಸಾಹಿತ್ಯಕ್ಕೆ ಸಂಭವಿಸುವುದು ಖಂಡಿತ.

---

# ಕನ್ನಡ ಸುದ್ದಿ

**ಸಾಂಗಲಿ :**

ಸಾಂಗಲಿ ಸರಕಾರದ ಬೇರೆ ಬೇರೆ ಇಲಾಖೆಗಳಲ್ಲಿ ಕೆಲಸ ಮಾಡುವ ವಿಶಿಷ್ಟ ಅಧಿಕಾರಿಗಳು ಕನ್ನಡ ಪರೀಕ್ಷೆ ಕೊಡಬೇಕೆಂದು ೧೯೩೦ನೆಯ ಇಸವಿಯಲ್ಲಿಯೇ ಸರಕಾರದವರು ಆಜ್ಞೆ ಮಾಡಿದ್ದರು. ಆ ಆಜ್ಞೆಯನ್ನು ಇದುವರೆಗೂ ಕಾರ್ಯರೂಪಕ್ಕೆ ತಂದಿರಲಿಲ್ಲ. ಮಹಾಜನರು ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ವಿಷಯವಾಗಿ ಪದೇ ಪದೇ ಪ್ರಶ್ನೆ ಮಾಡುತ್ತಿದ್ದುದರಿಂದ ಸರಕಾರದವರು ೧೭—೧—೧೯೪೦ ರಲ್ಲಿ ವಿಶೇಷ 'ಗೆಜೆಟ' ಹೊರಡಿಸಿ ೭—೧—೧೯೩೯ರ ಪ್ರಭುತ್ವಾಜ್ಞೆಯನ್ನು ಜಾರಿಗೆ ತರುವುದಾಗಿ ಆಶ್ವಾಸನವಿತ್ತಿದ್ದಾರೆ. ಆ ಆಶ್ವಾಸನದಂತೆ ೨೭-೪-೪೦ನೆಯ ತಾರೀಖು ಕೆಲವು ಸರಕಾರಿ ನೌಕರರ ಪರೀಕ್ಷೆ ನಡೆಯುವುದು.

**ಕೊಲ್ಲಾಪುರ : ಕರ್ನಾಟಕ ಸಂಘ**

ಕೊಲ್ಲಾಪುರದ ರಾಜಾರಾಮ ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವ ೨೦-೧-೪೦ರಲ್ಲಿ ವಿಜೃಂಭಣೆಯಿಂದ ನೆರವೇರಿತು. ವಿಜಾಪುರದ ಸಿದ್ದೇಶ್ವರ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಗಣಪತಿರಾವ್ ಪುರಾಣಿಕರು ಮುಖ್ಯ ಅತಿಥಿಗಳಾಗಿ ಆಹ್ವಾನಿಸಲ್ಪಟ್ಟಿದ್ದರು. ಸ್ವಾಗತ ಗೀತೆ, ವರದಿಯ ಓದು, ಪರಿಚಯ ಭಾಷಣಗಳು ಆದನಂತರ ತರುವಾಯ ಶ್ರೀ. ಪುರಾಣಿಕರು ಭಾಷಣ ಮಾಡುತ್ತ ಕರ್ನಾಟಕದ ವೈಭವ ಇಳಿಗುಂದಿದುಕ್ಕೆ ಕಾರಣಗಳೇನೆಂಬುದನ್ನು ತಿಳಿಯ ಹೇಳಿ, ನಾಡಿನ ಏಳಿಗೆಗೆ ಅಗತ್ಯವಾದ ಸೂಚನೆಗಳನ್ನು ಕೊಟ್ಟರು.

ಅನಂತರ ಆ ಕಾಲೇಜಿನ ಕನ್ನಡ ವಿದ್ಯಾರ್ಥಿಗಳು 'ಯಮನ ಸೋಲು' 'ಬೆಳಕು' ಮತ್ತು 'ಮನೆಯಲ್ಲಿ ಮಹಾಸಭೆ' ಎಂಬ ಏಕಾಂಕ ನಾಟಕಗಳನ್ನು ಅಭಿನಯಿಸಿದರು. ಕುಮಾರ ಎಂ. ಪಿ. ಲಾಳಿಯವರ ನರ್ತನ ಪ್ರೇಕ್ಷಕರ ಮೆಚ್ಚುಗೆ ಪಡೆಯಿತು. ವಿಜಾಪುರ ಸಿದ್ದೇಶ್ವರ ಹೈಸ್ಕೂಲಿನ ಸಂಗೀತಾಧ್ಯಾಪಕರಾದ ಶ್ರೀ. ಪಿ. ವಿ. ಪಾಟೀಲರು 'ವಚನ'ಗಳನ್ನು ಹಾಡಿದರು.

**ಕನ್ನಡ ನಾಟ್ಯ ಸಂಘ :**

ಕೊಲ್ಲಾಪುರದ ಲಾ ಕಾಲೇಜಿನ ವಾರ್ಷಿಕ ಸಮ್ಮೇಳನದ ಸಮಾರಂಭದಲ್ಲಿ (ತಾ॥ ೨೭-೧-೪೦) ಕನ್ನಡ ವಿದ್ಯಾರ್ಥಿಗಳು ಕರ್ನಾಟಕದ ಲೇಖಕರಾದ ಶ್ರೀ. ಎಸ್. ಕೆ. ಕುಲಕರ್ಣಿಯವರ 'ಬಾರ್ ರೂಂ' ಎಂಬ ನಾಟಕವನ್ನು ಅಭಿನಯಿಸಿದರು. ನಾಟಕದ ಆರಂಭದ ಮೊದಲು ಕನ್ನಡ ನಾಟ್ಯ ಸಂಘದ ಅಧ್ಯಕ್ಷರಾದ ಶ್ರೀ. ಆರ್. ಬಿ. ರಂಗನಾಥರಾವ್ ಅವರು ಸಂಘದ ಉದ್ದೇಶವನ್ನು ವಿವರಿಸಿದರು. ಲಾ ಕಾಲೇಜಿನಲ್ಲಿ ಕನ್ನಡ ನಾಟಕವನ್ನು ಆಡಿದ್ದು ಈ ವರ್ಷವೇ ಮೊದಲು. ಕಾಲೇಜಿನ ಅಧಿಕಾರಿಗಳು ಕನ್ನಡಕ್ಕೆ ಎಷ್ಟರಮಟ್ಟಿಗೆ ಪ್ರೋತ್ಸಾಹ ಸಹಾಯಗಳನ್ನು ನೀಡಿದರೆಂದು ತಿಳಿಸಿ ತಮ್ಮ ಕೃತಜ್ಞತೆಯನ್ನು ಅರ್ಪಿಸಿದರು.

ಕನ್ನಡ ಭಾಷೆ ಅರಿಯದಿದ್ದವರೂ ಸಹ ನಾಟಕವನ್ನು ಬಹಳ ಕುತೂಹಲದಿಂದ ನೋಡಿ ಅಭಿನಯದ ಮೂಲಕ ಅದರ ತಾತ್ಪರ್ಯವನ್ನೂ ಅಲ್ಲದೆ ಸಂಭಾಷಣೆಗಳ ರಸ, ಭಾವ ಅರ್ಥಗಳನ್ನೂ ತಿಳಿದುಕೊಂಡು ಆನಂದಪಟ್ಟರು. ಕಾರ್ಯದರ್ಶಿಗಳಾದ ಶ್ರೀ॥ ಎಸ್. ಕೆ. ಪಾಟೀಲ್ ಮತ್ತು ಶ್ರೀ. ಧಾರ್ವಾಡ್‌ಕರ್ ಅವರು ನಾಟಕಾಭಿನಯಕ್ಕಾಗಿ ಉತ್ತಮ ಏರ್ಪಾಡುಗಳನ್ನು ಮಾಡಿದ್ದರು.

**ರಾಣಿಬೆನ್ನೂರು : ಕರ್ನಾಟಕ ಸಂಘ**

ರಾಣಿಬೆನ್ನೂರಿನ ಕರ್ನಾಟಕ ಸಂಘದ ವಾರ್ಷಿಕೋತ್ಸವ ಜನವರಿ ೨೦ನೆಯ ತಾರೀಖು ಸಂಘದ ಕಾರ್ಯಾಲಯದಲ್ಲಿ ಶ್ರೀ. ಬಿಳ್ಳಿ ವಕೀಲರ ಅಧ್ಯಕ್ಷತೆಯಲ್ಲಿ ನಡೆಯಿತು.

**ಗೋಕರ್ಣ :**

ಬೆಳಗಾಂವಿಯ ಲಿಂಗರಾಜ ಕಾಲೇಜಿನ ಪ್ರೊಫೆಸರಾದ ವಿ. ಜಿ. ಕುಲಕರ್ಣಿಯವರು ಜನವರಿ ೧೮ನೆಯ ತಾರೀಖು ಗೋಕರ್ಣವನ್ನು ಸಂದರ್ಶಿಸಿ, ಸ್ಥಳೀಯ ಕನ್ನಡ ಪ್ರೇಮಿಗಳೊಂದಿಗೆ ಕನ್ನಡದ ಚಟುವಟಿಕೆಯನ್ನು ಕುರಿತು ವಿಚಾರ ವಿನಿಮಯ ಮಾಡಿದರು.

ಮಾರನೆಯ ದಿನ 'ಗೆಳೆಯರ ಕೂಟ'ಕ್ಕೆ ಭೇಟಿಯಿತ್ತರು. ಕಾರ್ಯದರ್ಶಿಗಳು ತಾವು ಸಂಗ್ರಹಿಸಿದ ತಾಳೆಯೋಲೆಯ ಕನ್ನಡ ಪುಸ್ತಕಗಳನ್ನು ತೋರಿಸಿದರು. ಉಪಹಾರಾನಂತರ ಪ್ರೊ॥ ಕುಲಕರ್ಣಿಯವರು ಭಾಷಣ ಮಾಡುತ್ತಾ, ಜನರಲ್ಲಿ ಕನ್ನಡ ಗ್ರಂಥಗಳನ್ನು ಓದುವ ಅಭಿರುಚಿಯನ್ನು ಹೆಚ್ಚಿಸುವ ಬಗೆ ಹೇಗೆಂಬುದನ್ನು ತಿಳಿಸಿದರು.

ಸಂಜೆ ಕನ್ನಡ ಶಾಲೆಯ ಆವರಣದಲ್ಲಿ ಸಾಹಿತ್ಯ ಸೇವಕ ಸಂಘದ ಆಶ್ರಯದಲ್ಲಿ "ಕವಿಗುರು ಕಾಳಿದಾಸ" ಎಂಬ ವಿಷಯವನ್ನು ಕುರಿತು ಪ್ರೊ॥ ಕುಲಕರ್ಣಿ ಅವರು ಭಾಷಣ ಮಾಡಿದರು. ರಾತ್ರಿ ಯಕ್ಷಗಾನಪ್ರದರ್ಶನ ನಡಯಿತು.

**ಪುಣೆ : ಕರ್ನಾಟಕ ಸಂಘ**

ಪುಣೆಯ ಕರ್ನಾಟಕ ಸಂಘದ ೨೦ನೆಯ ವಾರ್ಷಿಕಾಧಿವೇಶನ ಫರ್ಗ್ಯುಸನ್ ಕಾಲೇಜಿನಲ್ಲಿ ಜನವರಿ ೨೮ನೆಯ ತಾರೀಖು ಮುಂಬಯಿ ಸರಕಾರದ ಶಿಕ್ಷಣಾಧಿಕಾರಿಗಳಾದ ಖಾ॥ ಸಯುದ್ ನೂರುಲ್ಲ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮುಂಬಯಿ ಹೈಕೋರ್ಟಿನ ಸರಕಾರಿ ವಕೀಲರಾದ ಶ್ರೀ ಆರ್. ಎ. ಜಾಗೀರದಾರರು ಮಾನ್ಯ ಅತಿಥಿಗಳಾದ್ದರು ಅವರು ಮಾತಾಡುತ್ತ ಕರ್ನಾಟಕ ಪ್ರಾಂತ ರಚನೆ, ಬರುವ ಭಾರತ ಸಂಯುಕ್ತ ರಾಜ್ಯಾಂಗ ಘಟನೆಯಲ್ಲಿ ಅತ್ಯಂತ ಜರೂರಾಗಿ ಆಗಬೇಕೆಂದೂ, ಅದರಿಂದ ಕನ್ನಡ ನಾಡಿನ ಏಳಿಗೆಯಾಗುವುದೆಂದೂ ನುಡಿದರು.

ಈಗ ಬೇರೆ ಬೇರೆ ಪ್ರಾಂತ ಮತ್ತು ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿರುವ ಇಡಿಯ ಕರ್ನಾಟಕವನ್ನು ಒಟ್ಟುಗೂಡಿಸಿ ಪ್ರತ್ಯೇಕ ಪ್ರಾಂತವನ್ನಾಗಿ ಮಾಡುವುದಕ್ಕೆ ಪೂರ್ವಸಿದ್ಧತೆಯಾಗಿ ಮುಂಬಯಿ ಮತ್ತು ಮದರಾಸು ಪ್ರಾಂತಗಳಲ್ಲಿ ಸೇರಿಕೊಂಡಿರುವ ಕನ್ನಡ ಭಾಗಗಳನ್ನಾದರೂ ಬೇಗ ಒಂದುಗೂಡಿಸುವುದು ಅಗತ್ಯವೆಂಬುದಾಗಿ ಶ್ರೀ ಜಾಗೀರದಾರರು ಅಭಿಪ್ರಾಯಪಟ್ಟರು.

**ಬೆಳಗಾಂವಿ : ಕರ್ನಾಟಕ ಸಾಹಿತ್ಯ ಸಂಘ**

ಲಿಂಗರಾಜ ಕಾಲೇಜಿನ ಕರ್ನಾಟಕ ಸಾಹಿತ್ಯ ಸಂಘದ ೫ನೆಯ ವಾರ್ಷಿಕೋತ್ಸವ ಕಳೆದ ೨ನೆಯ ತಾರೀಖು ಶುಕ್ರವಾರ ನಡೆಯಿತು. ಶ್ರೀ ಟಿ. ಎಚ್. ಎಂ. ಸದಾಶಿವಯ್ಯ ಎಂ.ಎ., ಬಿ.ಎಲ್., ಅವರು ಮುಖ್ಯ ಅತಿಥಿಗಳಾಗಿದ್ದರು.

ಉತ್ಸವದ ದಿನ ಸಂಜೆ ವಿವಿಧ ವಿನೋದಾವಳಿ, ಕಾವ್ಯಗಾಯನವೂ ಶ್ರೀ ರಂಗರ 'ನನ್ನ ಪಲ್ಲ', ಶ್ರೀ. ಬಿ.ಬಿ. ಹಣಮಣ್ಣನವರ 'ಮೋಜಿನ ಅಳಿಯ' ಮತ್ತು ಶ್ರೀ ಎಚ್. ಎಸ್. ಪಾಟೀಲರ 'ತವರು ಮನೆ' ಎಂಬ ನಾಟಕಗಳ ಅಭಿನಯವೂ ನಡೆದುವು.

**ವಿಜಾಪುರ : ಸಾಹಿತ್ಯ ಪರೀಕ್ಷೆಯ ಪ್ರೌಢವರ್ಗದ ಸಮಾರಂಭೋತ್ಸವ**

ಕನ್ನಡ ಸಾಹಿತ್ಯ ಪರಿಷತ್ತಿನವರು ಏರ್ಪಡಿಸಿರುವ ಸಾಹಿತ್ಯ ಪರೀಕ್ಷೆಯ ಪ್ರೌಢವರ್ಗದ ವಿಜಾಪುರದ ಕೇಂದ್ರವನ್ನು ರಾವ್‌ಸಾಹೇಬ್ ಶ್ರೀ ಹಳಕಟ್ಟಿ ಅವರು ಕಳೆದ ೧ನೆಯ ತಾರೀಖು ಗುರುವಾರ ಪ್ರಾರಂಭಮಾಡಿಕೊಟ್ಟರು. ಪ್ರೌಢವರ್ಗಕ್ಕೆ ಈಗಾಗಲೇ ೨೦ಮಂದಿ ವಿದ್ಯಾರ್ಥಿಗಳು ಸೇರಿದ್ದಾರೆ. ಶುಕ್ರವಾರದಿಂದ ಶಿಕ್ಷಣ ಮೊದಲಾಯಿತು. ಶ್ರೀ ಕೃಷ್ಣ ತೆಲಸಂಗ ಅವರು ವರ್ಗದ ಗೌರವ ಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಿದ್ದಾರೆ.

**ಶಿಕಾರಿಪುರ : ಕರ್ನಾಟಕ ಸಂಘ**

ಶಿಕಾರಿಪುರದ ನಗರಭವನದಲ್ಲಿ ಜನವರಿ ೨೩ನೆಯ ತಾರೀಖು ಸಾಯಂಕಾಲ ಮೈಸೂರಿನಿಂದ ದಯಮಾಡಿಸಿದ್ದ ಶ್ರೀ ಎ. ಎನ್. ಗುಂಡೂರಾಯರವರು ಕುಮಾರವ್ಯಾಸ ಭಾರತದಲ್ಲಿ "ಕಿರಾತಾರ್ಜುನೀಯ" ಎಂಬ ಭಾಗವನ್ನು ಮತ್ತು "ಕರ್ಣಪರ್ವ"ದಲ್ಲಿ ಕೆಲವು ಭಾಗವನ್ನೂ ಬಹು ಸುಶ್ರಾವ್ಯವಾಗಿ ಪಠಿಸಿದರು. ಸಭೆಗೆ ಅನೇಕ ಮಹನೀಯರೂ ಮತ್ತು ಮಹಿಳೆಯರೂ ಬಂದಿದ್ದರು.

**ಪುರಂದರ ದಾಸರ ಪುಣ್ಯದಿನಾಚರಣೆ :**

ಬೆಂಗಳೂರಿನ 'ಸುಬೋಧ' ಮಾಸಪತ್ರಿಕೆಯ ಮತ್ತು 'ಸಮಾಜ ಸೇವಕ' ವಾರಪತ್ರಿಕೆಯ ಸಂಪಾದಕರಾದ ಶ್ರೀ ಎಂ. ರಾಮರಾಯರು ಸಿರಿಯಾಳಕೊಪ್ಪ ಕರ್ನಾಟಕ ಸಂಘದಲ್ಲಿ ಮತ್ತು ಸಾಗರ ಕರ್ನಾಟಕ ಸಂಘದಲ್ಲಿ ನಡೆಯುವ ಪುರಂದರ ದಾಸರ ಪುಣ್ಯದಿನಾಚರಣೆ ನಿಮಿತ್ತ ಆಹ್ವಾನಿತರಾಗಿ ಹೊರಟಿದ್ದಾರೆ. ಸಾಗರದಲ್ಲಿ ದಾಸ ಸಾಹಿತ್ಯದ ವಿಚಾರವಾಗೂ ಸಿರಿಯಾಳಕೊಪ್ಪದಲ್ಲಿ ಪುರಂದರ ದಾಸರ ಕೃತಿಗಳ ವಿಚಾರವಾಗೂ ಶ್ರೀಯುತರು ಭಾಷಣಮಾಡುವರು.

## ಪರಿಷತ್ತಿನ ಸುದ್ದಿ

ತಾರೀಖು ೧೦-೨-೧೯೪೦ನೆಯ ಶನಿವಾರ ಸಂಜೆ ೬ ಘಂಟೆಗೆ ಪರಿಷನ್ಮಂದಿರದಲ್ಲಿ ಶ್ರೀ ಆರ್. ವಿ. ಜಾಗೀರದಾರ್ ಎಂ.ಎ. (ಲಂಡನ್) ಅವರು "ಗೀತೆಯಲ್ಲಿ ಒಂದು ವಿಚಾರ" ಕುರಿತು ಭಾಷಣ ಮಾಡುತ್ತಾರೆ.

### ಧಾರವಾಡ ಜಿಲ್ಲೆಯ ಎರಡನೆಯ ಸಮ್ಮೇಳನ

ಕನ್ನಡ ಸಾಹಿತ್ಯ ಪರಿಷತ್ತಿನ ಉತ್ತರಕರ್ನಾಟಕ ಪ್ರಾಂತಸಮಿತಿಯವರ ಸಹಕಾರದಿಂದ ಮತ್ತು ಶ್ರೀ ಶ್ರೀ ಬಸವಲಿಂಗಸ್ವಾಮಿಗಳ ಕೃಪಾಪೂರ್ವಕ ಅನುಗ್ರಹದಿಂದ ಮೇಲ್ಕಂಡ ಸಮ್ಮೇಳನ ನವಿಲುಗುಂದದಲ್ಲಿ ಕಳೆದ ೪-೫ನೆಯ ತಾರೀಖುಗಳಲ್ಲಿ ಯಶಸ್ವಿಯಾಗಿ ನಡೆಯಿತು. ಡಾ॥ ಎಸ್. ಸಿ. ನಂದೀಮಠರು ಸಮ್ಮೇಳನಾಧ್ಯಕ್ಷರಾಗಿದ್ದರು. 'ಶ್ರೀ' ಯವರು ಕವಿಸಮ್ಮೇಳನಕ್ಕೂ, ಶ್ರೀಮತಿ ಗೌರಿದೇವಿ ಇಂಚಲಮಠ ಅವರು ಮಹಿಳಾ ಸಮ್ಮೇಳನಕ್ಕೂ, ನಾಟ್ಯಸಮ್ಮೇಳನಕ್ಕೆ ಶ್ರೀ ಅ. ನ. ಕೃಷ್ಣರಾಯರೂ ಅಧ್ಯಕ್ಷರಾಗಿದ್ದರು. ಸಮ್ಮೇಳನದ ಸಂದರ್ಭದಲ್ಲಿ ನವಿಲುಗುಂದದ ನಾಗರಿಕರು 'ಶ್ರೀ' ಯವರಿಗೆ ಬಿನ್ನವತ್ತಳೆಯನ್ನರ್ಪಿಸಿದರು.

### ಕರ್ನಾಟಕಕ್ಕೆ ಒಂದು ಸ್ವತಂತ್ರ ವಿಶ್ವವಿದ್ಯಾನಿಲಯ

ಗದಗು ವಿದ್ಯಾದಾನ ಸಮಿತಿಯ ಟಿ. ಸಿ. ಹೈಸ್ಕೂಲಿನ ವಾರ್ಷಿಕೋತ್ಸವದ ಅಧ್ಯಕ್ಷ ಪೀಠದಿಂದ ಧಾರವಾಡ ಜಿಲ್ಲಾ ಕಲೆಕ್ಟರರಾದ ಶ್ರೀ ಡಿ. ಎಸ್. ಮೋಡಕ್ ಅವರು ಭಾಷಣ ಮಾಡುತ್ತಾ, "ಜಗತ್ತೇ ವಿದ್ಯೆಯ ಭಂಡಾರ. ಕಲಿತಂತೆ ಇನ್ನೂ ಕಲಿಯಬೇಕೆಂಬ ಆಶೆಯನ್ನು ಅದು ಹುಟ್ಟಿಸುವುದು. ಪ್ರತಿಯೊಬ್ಬನೂ ತನ್ನ ಜೀವನದ ಅಂತ್ಯದ ವರೆಗೆ ವಿದ್ಯಾರ್ಥಿಯಾಗಿಯೇ ಇರಬೇಕು. ಅಂದರೇನೇ ತಾನೂ ಮುಂದಕ್ಕೆ ಬರುವನು. ರಾಷ್ಟ್ರವೂ ಮುಂದಕ್ಕೆ ಬರುವುದು.

ಕನ್ನಡಕ್ಕೆ ಉನ್ನತ ಸಂಸ್ಕೃತಿಯುಂಟು. ಸಾಹಿತ್ಯ ಬೆಳೆಯಬೇಕಾದರೆ ಒಂದು ಸ್ವತಂತ್ರ ಕನ್ನಡ ವಿಶ್ವವಿದ್ಯಾನಿಲಯ ಆವಶ್ಯಕ. ಕನ್ನಡ ಸಂಸ್ಕೃತಿಯ ಏಳಿಗೆಗೂ ಇದು ಆವಶ್ಯಕ. ಇಂಥ ಸುದಿನಗಳು ತೀವ್ರ ಬರಲೆಂದು ಹಾರೈಸುತ್ತೇನೆ" ಎಂದು ಹೇಳಿದರು.

**ಧಾರವಾಡದಲ್ಲಿ "ಶ್ರೀ" ಯವರ ಭಾಷಣ**

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಶಾಂತೇಶ ವಾಚನಾಲಯಗಳ ಆಶ್ರಯದಲ್ಲಿ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ೬ ನೆಯ ತಾರೀಖು ಕ. ವಿ. ವ. ಸಂಘದಲ್ಲಿ "ಇಂದಿನ ಕನ್ನಡ ನಾಡು" ಎಂಬ ವಿಷಯವಾಗಿ ಭಾಷಣ ಮಾಡಿದರು.

**ಹುಬ್ಬಳ್ಳಿ : ಶ್ರೀ ರಾಜರತ್ನಂ ಅವರ ಭಾಷಣ**

ತರುಣ ಸಾಹಿತಿಗಳಾದ ಶ್ರೀ ಜಿ. ಪಿ. ರಾಜರತ್ನಂ ಅವರು ಕಳೆದ ೧ನೆಯ ತಾರೀಖು ಹುಬ್ಬಳ್ಳಿಯ ಪೌರಸಭಾ ಭವನದಲ್ಲಿ ಸತ್ಯಶೋಧನ ವಾಚನಾಲಯದ ವತಿಯಿಂದ 'ಹಾಸ್ಯ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು.

**ಶಿವಮೊಗ್ಗ : ಕರ್ನಾಟಕ ಸಂಘ**

ಶಿವಮೊಗ್ಗ ಕರ್ನಾಟಕ ಸಂಘದ ಒಂಬತ್ತನೆಯ ವಾರ್ಷಿಕೋತ್ಸವ ಇದೇ ಫೆಬ್ರುವರಿ ೩ ಮತ್ತು ೪ನೆಯ ತಾರೀಖುಗಳಲ್ಲಿ ನಗರ ಸಭೆಯ ಸಭಾಮಂದಿರದಲ್ಲಿ ನಡೆಯಿತು. ಬೆಳಗಾಂವಿಯ ಲಿಂಗರಾಜ ಕಾಲೇಜಿನ ಕನ್ನಡ ಮತ್ತು ಇತಿಹಾಸ ಅಧ್ಯಾಪಕರಾದ ಶ್ರೀಮಾನ್ ಎಸ್. ಎಸ್. ಬಸವನಾಳ ಎಂ.ಎ. ಅವರು ಅಧ್ಯಕ್ಷತೆ ವಹಿಸಿದ್ದರು.

ಶ್ರೀಮಾನ್ ಬಸವನಾಳ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸಂಘದ ಅಭಿವೃದ್ಧಿಗಾಗಿ ಸಂತೋಷಪಟ್ಟು, ಅದರ ಕಾರ್ಯಕಲಾಪಗಳನ್ನು ಕೊಂಡಾಡಿದರು. ಈಗಾಗಲೇ ಆದರ್ಶವಾಗಿರುವ ಕರ್ನಾಟಕ ಸಂಘವು ಸಕಲ ಕರ್ನಾಟಕ ಸಂಘಗಳ ಸಮ್ಮೇಳನವನ್ನು ಕರೆಯಬೇಕೆಂದೂ, ಬೇರೆ ಬೇರೆ ಸಂಘಗಳವರು ಒಂದೆಡೆ ಸೇರಿ ಕನ್ನಡದ ಏಳಿಗೆಗೆ ಮತ್ತು ಬೇರೆ ಬೇರೆ ಪ್ರಾಂತಗಳಲ್ಲಿರುವ ಜನತೆಯಲ್ಲಿ ಪ್ರಾಂತೀಯತೆ, ಜಾತಿಪಂಥ ಸ್ವಾರ್ಥಗಳು ತೊಲಗಿ ಸಮರಸಭಾವ ಸಾಧನೆಗೆ ದುಡಿಯುವಂತಾಗಲೆಂದೂ ಹಾರೈಸಿದರು. ಜನತೆಯಲ್ಲಿ ಓದುವ ಅಭಿರುಚಿಯನ್ನು ಹೆಚ್ಚಿಸುವುದು ಕರ್ನಾಟಕ ಸಂಘಗಳ ಹೆಗ್ಗುರಿಯಾಗಬೇಕೆಂದು ಒತ್ತಿ ಹೇಳಿದರು.

ವಾರ್ಷಿಕೋತ್ಸವದ ಜೊತೆಗೆ ಶಿವಮೊಗ್ಗ ಜಿಲ್ಲೆಯ ಲೇಖಕರ ಸಮ್ಮೇಳನ ನಡೆದದ್ದು ಒಂದು ವಿಶೇಷ ಸಂಗತಿ.

ಶಿವಮೊಗ್ಗ ಯಕ್ಷಗಾನ ಸಂಘದ ಸದಸ್ಯರು ೩ನೆಯ ತಾರೀಖು ರಾತ್ರಿ "ಭೀಷ್ಮ ವಿಜಯ" ಪ್ರಸಂಗವನ್ನು ಆಡಿತೋರಿಸಿದರು.

**ಪುರಂದರದಾಸರ ಪುಣ್ಯದಿನ**

ಶಿವಮೊಗ್ಗ ಕರ್ನಾಟಕ ಸಂಘದಲ್ಲಿ ಪುರಂದರ ದಾಸರ ಪುಣ್ಯದಿನ ಆಚರಿಸಲಾಯಿತು. ಶ್ರೀಮಾನ್ ಎಚ್. ಶ್ರೀನಿವಾಸರಾವ್ ಬಿ.ಎ., ಬಿ.ಎಲ್., ಅವರು 'ಪುರಂದರ ದಾಸರು' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ವಿದ್ವಾನ್ ಶ್ರೀ ಬಿ. ಶೇಷಪ್ಪನವರು ಪುರಂದರ ದಾಸರ ಹತ್ತು ಕೃತಿಗಳನ್ನು ಸುಶ್ರಾವ್ಯವಾಗಿ ಹಾಡಿದರು.

**ಪೆರಿಯಸಂದ್ರ ಗ್ರಾಮದಲ್ಲಿ : ಕರ್ನಾಟಕ ಸಂಘ ಸ್ಥಾಪನೆ**

ಚಿಕ್ಕಬಳ್ಳಾಪುರ ತಾಲ್ಲೂಕಿಗೆ ಸೇರಿದ ಪೆರಿಯಸಂದ್ರವೆಂಬ ಮಾದರಿ ಗ್ರಾಮದಲ್ಲಿ ಕರ್ನಾಟಕ ಸಂಘ ಕಳೆದ ೨೬-೧-೪೦ರಲ್ಲಿ ಸ್ಥಾಪಿತವಾಯಿತು. ಕೋಲಾರದ ಕೇಂದ್ರ ಕರ್ನಾಟಕ ಸಂಘದ ಕಾರ್ಯದರ್ಶಿ ಶ್ರೀ ಎಂ. ವೆಂಕಟಪ್ಪನವರು ಈ ಸಮಾರಂಭದಲ್ಲಿ ಭಾಷಣ ಮಾಡಿದರು.

ಪೆರಿಯಸಂದ್ರ ಪಂಚಾಯಿತಿಯ ಉದಾರ ಸಹಾಯದಿಂದ ಸಂಘಕ್ಕೆ ಒಂದು ಪುಸ್ತಕ ಭಂಡಾರವನ್ನು ತೆರೆಯಬೇಕೆಂದು ತೀರ್ಮಾನವಾಯಿತು.

**ತುಮಕೂರು : ಕರ್ನಾಟಕ ಸಂಘ**

೩ನೆಯ ತಾರೀಖು ಸಂಘದ ಆಶ್ರಯದಲ್ಲಿ ಕುಮಾರಿ ಪದ್ಮಾವತಿಯವರ ಹಾಡುಗಾರಿಕೆಯೂ, ನಾರ್ಮಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಕೆ. ಶ್ರೀನಿವಾಸಾಚಾರ್ಲು ಬಿ.ಎ., ಬಿ.ಟಿ. ಅವರ ಗೋಟುವಾದ್ಯ ವಾದನವೂ ನಡೆದುವು. ತರುವಾಯ "ಸರಸ್ವತಿ" ಪತ್ರಿಕೆಯ ಸಂಪಾದಕಿಯರಾದ ಶ್ರೀಮತಿ ಆರ್. ಕಲ್ಯಾಣಮ್ಮನವರು "ಕರ್ನಾಟಕ ಮಹಿಳೆಯರು" ಎಂಬ ವಿಷಯವಾಗಿ ಭಾಷಣ ಮಾಡಿದರು.

ಜಿಲ್ಲಾ ಸಂಸ್ಥೆಯ ಅಧ್ಯಕ್ಷ ಶ್ರೀ ಎಚ್. ವೆಂಕಟರಾಮಯ್ಯನವರು ಅಧ್ಯಕ್ಷತೆ ವಹಿಸಿದ್ದರು.

ಕಳೆದ ೪ನೆಯ ತಾರೀಖು ಭಾನುವಾರ ಶ್ರೀಮತಿ ಕಲ್ಯಾಣಮ್ಮನವರ ಅಧ್ಯಕ್ಷತೆಯಲ್ಲಿ ಸಂಘದವರು ನಗರ ಸಭಾಭವನದಲ್ಲಿ ಕೆಳಗೆ ಕಂಡಂತೆ ಕಾರ್ಯಕ್ರಮ ಏರ್ಪಡಿಸಿದ್ದರು.

ಕಡೂರು ಶ್ರೀ ವಾದಿರಾಯರು "ಇಂದಿನ ಸಾಹಿತ್ಯ"ವನ್ನು ಕುರಿತು ಭಾಷಣ ಮಾಡಿದರು. ಶ್ರೀ ಜಿ. ಆರ್. ನರಸಿಂಹ ಮೂರ್ತಿಯವರು ಕುಮಾರ ವ್ಯಾಸ ಭಾರತದಿಂದ 'ಕುಂತಿ ಕರ್ಣ ಸಂವಾದ' ಎಂಬ ಭಾಗವನ್ನು ಓದಿದರು. ಶ್ರೀ ಮತಿಘಟ್ಟದ ಕೃಷ್ಣಮೂರ್ತಿಯವರು "ಜನಪದ ಸಾಹಿತ್ಯ"ವನ್ನು ಕುರಿತು ಉಪನ್ಯಾಸ ಮಾಡಿದರು.

ಸಂಘದವರು ಭಾರತವಾಚನ ಮತ್ತು ದೇವರನಾಮಗಳ ಹಾಡುಗಾರಿಕೆಯ ಸ್ಪರ್ಧೆಯನ್ನೂ ಏರ್ಪಡಿಸಿದ್ದಾರೆ. ಸ್ಪರ್ಧೆಯಲ್ಲಿ ಭಾಗವಹಿಸುವವರು ಫೆಬ್ರುವರಿ ೧೫ರೊಳಗಾಗಿ ತಮ್ಮ ಇಷ್ಟವನ್ನು ಕಾರ್ಯದರ್ಶಿಗಳಿಗೆ ತಿಳಿಸಬೇಕು.

ಸಂಘದವರ ಆಶ್ರಯದಲ್ಲಿ ಕಳೆದ ತಿಂಗಳು ೨೯ನೆಯ ತಾರೀಖು ಶ್ರೀ ತ್ಯಾಗರಾಜ ಜಯಂತಿ ನಡೆಯಿತು. ಶ್ರೀಗಳಾದ ಪಿ. ಸೀತಾರಾಮಯ್ಯ, ಎ. ಸುಬ್ಬರಾಯ ಎಂ.ಎ, ಬಿ.ಟಿ., ಹೊನ್ನಂಜಾಚಾರ್ ಮತ್ತು ಶ್ರೀನಿವಾಸಯ್ಯಂಗಾರರು ಶ್ರೀ ತ್ಯಾಗರಾಜರ ಕೃತಿಗಳನ್ನು ಹಾಡಿದರು. ಭಾಷಣಾದಿ ಕಾರ್ಯಕ್ರಮಗಳೂ ನಡೆದುವು.

**ಬೆಂಗಳೂರು : ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ**

ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಡಿ. ವಿ. ಗುಂಡಪ್ಪನವರು ಇಂದು ಸಾಯಂಕಾಲ (೯ನೆಯ ತಾರೀಖು ಶುಕ್ರವಾರ) ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಉಪಸಂಹಾರ ಭಾಷಣವನ್ನು ಮಾಡಿದರು.

**ಬೆಂಗಳೂರು :**

ಅಖಿಲ ಕರ್ನಾಟಕದ ಮಕ್ಕಳ ಕೂಟದ ಮೂರನೆಯ ವಾರ್ಷಿಕಾಧಿವೇಶನವನ್ನು ಇದೇ ಮಾರ್ಚಿ ತಿಂಗಳ ಕಡೆಯ ವಾರ ಬೆಂಗಳೂರಿನಲ್ಲಿ ನಡಸುವ ಏರ್ಪಾಟು ಮಾಡಿದೆ. ಹಿಂದಿನೆರಡು ವಾರ್ಷಿಕ ಕೂಟಗಳಲ್ಲಿ ನಡೆದಂತೆ ಮಕ್ಕಳ ಕಲಾಪ್ರದರ್ಶನ, ಮಕ್ಕಳ ಗ್ರಂಥಪ್ರದರ್ಶನ, ನಾಟಕಾಭಿನಯ, ನಾಟ್ಯ ಮೊದಲಾದವುಗಳನ್ನು ನಡೆಸಲಾಗುವುದು ಎಂಬುದಾಗಿ ಮಕ್ಕಳ ಕೂಟದ ಅಧ್ಯಕ್ಷರು ತಿಳಿಸಿ ಸಮಾಜದವರ ಉದಾರವಾದ ಪ್ರೋತ್ಸಾಹ, ಸಹಕಾರ, ಧನಸಹಾಯಗಳನ್ನು ಕೋರಿದ್ದಾರೆ.

**ಸಿರಿಯಾಳಕೊಪ್ಪ :**

ಶಿವಮೊಗ್ಗ ಜಿಲ್ಲೆಯ ಸಿರಿಯಾಳಕೊಪ್ಪದ ಅಖಿಲ ಕರ್ನಾಟಕ ಮಕ್ಕಳ ಕೂಟದ ಶಾಖೆಯ ಆಶ್ರಯದಲ್ಲಿ ಬರವಣಿಗೆ ಮತ್ತು ಕಂಠಪಾಠ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಸಿರಿಯಾಳಕೊಪ್ಪದ ಎಲ್ಲ ಶಾಲೆಗಳಿಂದಲೂ ಹತ್ತಿರ ಗ್ರಾಮಗಳಾದ ಬೆಳಗಾವಿ ಮತ್ತು ತಡಗಣಿ ಶಾಲೆಗಳಿಂದಲೂ ೬೦ ಮಂದಿ ಮಕ್ಕಳು ಬಂದು ಸ್ಪರ್ಧೆಗಳಲ್ಲಿ ಭಾಗವಹಿಸಿದ್ದರು. ೩೦ ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಬಹುಮಾನಗಳನ್ನು ಪಡೆದರು.

**ರುದ್ರಪಟ್ಟಣ : ಕರ್ನಾಟಕ ಸಂಘ**

ರುದ್ರಪಟ್ಟಣದ ಕರ್ನಾಟಕ ಸಂಘದವರು ಕಳೆದ ೪ನೆಯ ತಾರೀಖು ಗ್ರಾಮದಲ್ಲಿ ಪ್ರಚಾರೋಪನ್ಯಾಸ ಮಾಡಿದರು.

**ಈ ಪತ್ರಿಕೆ ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ 'ಮೈಸೂರು ಪೇಪರ್'ನಲ್ಲಿ ಅಚ್ಚಾಗುತ್ತಿದೆ.**

೨೨—೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ.

ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೮-೦
ಬಿಡಿ ಪತ್ರಿಕೆ : ೬ ಕಾಸು






ಸಂಪುಟ ೨
ಸಂಚಿಕೆ ೧೭

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು, ಶುಕ್ರವಾರ, ಫೆಬ್ರುವರಿ ೧೬, ೧೯೪೦

ಸಂಪಾದಕ : ಬಿ. ವೆಂಕೋಬರಾವ್, ಬಿ.ಎ.

## ಪ್ರಗತಿ - ಸ್ವಾತಂತ್ರ್ಯ

(ಶ್ರೀ ಡಿ. ವಿ. ಗುಂಡಪ್ಪನವರ ಭಾಷಣ)

೯-೨-೧೯೪೦ರಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದಲ್ಲಿ ಉಪಸಂಹಾರ ಭಾಷಣ ಮಾಡಿದರು. ಸಂಘದ ಉಪಾಧ್ಯಕ್ಷರಾದ ಶ್ರೀ ಕೆ. ವಿ. ಪುಟ್ಟಪ್ಪನವರು ಅವರ ಪರಿಚಯ ಮಾಡಿಕೊಡುತ್ತ "ಈಗ ತಾನೆ ಹಾಡಿದ 'ವನಸುಮ' ಇವರ ಜೀವನವನ್ನು ಚೆನ್ನಾಗಿ ಚಿತ್ರಿಸುತ್ತದೆ. ಸಾಧಕರ ಮನಸ್ಸಿನ ಹೊಮ್ಮುಗೆ ಈ ಕವನ. ಇವರ ಸಾಹಿತ್ಯಸೇವೆ ಮರದ ಬೇರಿನಂತೆ ಹೊರಗಡೆಗೆ ತೋರಿಸಿಕೊಳ್ಳದೆ ಆಳವಾಗಿ ಇಳಿದು ತುದಿಗೊಂಬೆಯ ಹೂಗಳಂತಿರುವ ನಮಗೆ ಚೈತನ್ಯ ಕೊಡುತ್ತಿದೆ. ನಮ್ಮ ನಾಡು ನುಡಿಗಳು ಜೀವಂತವಾಗಿರುವ ತನಕ ಇವರ ಕೃತಿಗಳು ಉಳಿದಿರುತ್ತವೆ" ಎಂದರು.

### ಶ್ರೀ ಡಿ. ವಿ. ಗುಂಡಪ್ಪನವರ ಭಾಷಣದ ಸಾರಾಂಶ

ಸಾಹಿತ್ಯಕ್ಕೆ ನಾನು ಆಗಂತುಕ. ಈ ಕರ್ನಾಟಕ ಸಂಘವನ್ನು ಸ್ಥಾಪಿಸಿದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳೂ ಇದನ್ನು ಪೋಷಿಸಿಕೊಂಡು ಬಂದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರೂ ನನ್ನನ್ನು ಈ ಕಡೆ ಎಳೆದರು.

ನಾನು ರಾಜಕೀಯದಲ್ಲಿ ಹೆಚ್ಚು ಭಾಗವಹಿಸಿದವನು. ಅಲ್ಲಿ ಮಾತು ಬಹು ಅಗ್ಗವಾಗಿಬಿಟ್ಟಿದೆ. ಅದಿ ಕೇಳಿ ಆತ್ಮಕ್ಕೆ ಬೇಸರವಾಗಿದೆ: ಮಾತಾಡುವುದೇ ಬೇಡವೆನ್ನಿಸಿದೆ. ಬಹಳ ದಿನಗಳಿಂದ ನನ್ನ ಮನಸ್ಸಿನಲ್ಲಿ ಏಳುತ್ತಿರುವ ಕೆಲವು ಪ್ರಶ್ನೆಗಳನ್ನು ಕುರಿತು ತಮ್ಮೊಡನೆ ಗಟ್ಟಿಯಾಗಿ ಆಲೋಚನೆ ಮಾಡುವವನಂತೆ ಭಾಷಣಮಾಡುತ್ತೇನೆ.

### ಸಾಹಿತ್ಯದ ಈಗಿನ ಸ್ಥಿತಿ

ಕನ್ನಡ ಸಾಹಿತ್ಯ ಬಹಳ ದಿನಗಳಿಂದ ಬೆಳೆಯುತ್ತಿದೆ. ಮುಖ್ಯಭಾಗ ಶುದ್ಧ ಸಾಹಿತ್ಯ—ಕವಿತ್ವ, ಕಥೆ, ನಾಟಕ. ವಿಜ್ಞಾನ ಗ್ರಂಥ ಬಹಳ ಸ್ವಲ್ಪ; ೧೦-೧೫ ಇದ್ದರೆ ಹೆಚ್ಚು. ಪುಸ್ತಕದ ಮೂಲಕ ಜ್ಞಾನಪ್ರಚಾರ ನಡೆಯಬೇಕು; ಹೊಸ ಚೈತನ್ಯ, ಕಾಂತಿ, ಬೆಳಗಬೇಕು; ಜನ ಉದ್ಧಾರವಾಗಬೇಕು. ಇದಕ್ಕೆ ಸಾಹಿತ್ಯದಲ್ಲಿ ಹೊಸ ಗುಣ ಕಾಣಬೇಕು. ಈಗ ಕಥೆ ಕವಿತ್ವ ಮೊದಲಾದ ಭಾವಾವೇಶ ಪ್ರಧಾನವಾದ ಕೃತಿಗಳೇ ಹೆಚ್ಚಾಗಿವೆ. ಇನ್ನು ಮುಂದೆ ಬುದ್ಧಿ ಕಾರ್ಯ ಪ್ರಧಾನವಾದ ಗ್ರಂಥಗಳು ಹೆಚ್ಚಬೇಕು. ಭಾವಾವೇಶದಿಂದ ಬುದ್ಧಿಗೆ ಪ್ರೇರಣೆಯಾಗುವಂತಿರಬೇಕು; ಬುದ್ಧಿ ಪ್ರೇರಣೆಯಿಂದ ಭಾವಾವೇಶವುಂಟಾಗಬೇಕು. ಹೀಗಾದರೆ ಮಾತ್ರ ಪ್ರಗತಿ ಸಾಧ್ಯವಾದೀತು.

### ಪ್ರಗತಿ ತತ್ತ್ವ

ಪ್ರಗತಿತತ್ತ್ವವನ್ನು (Progress ಪುರೋಗತಿ, ಎಂದರೆ ಮುಂದಕ್ಕೆ ಹೋಗುವುದು) ಕುರಿತ ಮಾತು ಈಗ ರೂಢಿಯಾಗಿದೆ. 'ನಮ್ಮ ಸ್ಥಿತಿ ದಿನ ದಿನಕ್ಕೆ ಉತ್ತಮವಾಗುತ್ತದೆ, ದುಃಖ ಕಡಮೆಯಾಗುತ್ತದೆ. ಮನುಷ್ಯ ಪ್ರಯತ್ನದಿಂದ, ಧೈರ್ಯ ಸಾಹಸಗಳಿಂದ ಕವಿಗಳು ಕನಸುಕಾಣುವ ಸ್ವರ್ಗವನ್ನು ಇಲ್ಲಿಯೇ ಸಾಧ್ಯಮಾಡಿಕೊಳ್ಳಬಹುದು. ಪರಲೋಕಕ್ಕಾಗಿ ಕಾಯಬೇಕಾಗಿಲ್ಲ'—ಎಂಬುದೇ ಈ ಪ್ರಗತಿತತ್ತ್ವದ ತಿರುಳು. ಪ್ರಾಚೀನರಿಗೆ ಈ ಭಾವನೆ ಗೋಚರವಾಗಲಿಲ್ಲ. ಒಳ್ಳೆಯ ಕಾಲ ಹಿಂದೆ ಆಗಿಹೋಯಿತು. ಮುಂದೆ ಕ್ಷೀಣಗತಿ. ಇದು ಪ್ರಪಂಚದ ಸ್ವಭಾವ. ಆ ಗತಿಯನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ' ಎಂಬುದು ಅವರ ದೃಢ ನಂಬಿಕೆ. ಇದೇ ದೈವವಾದ. ಪುರಾತನ ಗ್ರೀಕರಲ್ಲಿ ಕೂಡ ಈ ದೈವವಾದವೇ ಕಂಡುಬರುತ್ತದೆ. ಈ ಭಾವನೆ ಬದಲಾಗಿ ಪ್ರಗತಿವಾದ,—ಮಾನವನ ಉತ್ತಮತೆಯ ವಾದ, ಉತ್ಕರ್ಷವಾದ— ಪ್ರಾರಂಭವಾದದ್ದು ೧೭-೧೮ನೆಯ ಶತಮಾನಗಳಲ್ಲಿ.

### ಪ್ರಗತಿಯ ಚರಿತ್ರೆ

ಹಿಂದುಗಳಿಗೆ ಉತ್ಕರ್ಷಮತವಿಲ್ಲ. ಅವರದು ಅವನತಿ ಮತ. ಕ್ರಿಸ್ತನ ಪ್ರಕಾರವೂ ಪರಿಪೂರ್ಣತೆ, ಪರಮಪದವಿ, ಉತ್ತಮತೆ, ಪರಲೋಕದಲ್ಲಿಯೇ. ಇದು ದೊರಕುವುದೂ ದೇವರ ಅನುಗ್ರಹದಿಂದ. ಮನುಷ್ಯ ಪ್ರಯತ್ನದಲ್ಲಿ ಆತ ಹೆಚ್ಚು ನಂಬಿಕೆ ಇಟ್ಟಿರಲಿಲ್ಲ. ಪ್ರಗತಿ ಮನುಷ್ಯ ಪ್ರಯತ್ನ ಮೂಲವಾದದ್ದು.

೧೫-೧೬ನೆಯ ಶತಮಾನಗಳು ಯೂರೋಪಿನಲ್ಲಿ ಹೊಸ ಬೆಳಕು ಹರಡಿದ ಕಾಲ. ಆಗ ಚಿತ್ರ, ಶಿಲ್ಪ ಮತ್ತು ಉಳಿದ ಕಲೆಗಳ ಪುನರುಜ್ಜೀವನ (ರಿನೇಸಾನ್ಸ್) ಆಯಿತು. ಆದರೂ ಸ್ವಪ್ರಯತ್ನದಿಂದ ಮನುಷ್ಯ ಇಲ್ಲಿಯೇ ಸ್ವರ್ಗ ಕಟ್ಟುತ್ತಾನೆ, ದೇವಸಮಾನನಾಗುತ್ತಾನೆ, ಎಂದು ಆಗಿನವರು ನಂಬಲಿಲ್ಲ. ಉತ್ಕರ್ಷವಾದ ಅವರಿಗೆ ತಿಳಿದಿರಲಿಲ್ಲ.

೧೭-೧೮ನೆಯ ಶತಮಾನಗಳಲ್ಲಿ ಫ್ರೆಂಚರು ಈ ಪ್ರಗತಿವಾದವನ್ನು ಹೂಡಿದರು. ಇದಕ್ಕೆ ವೈಜ್ಞಾನಿಕರ ನೆರವು ಬಹಳ. ವೈಜ್ಞಾನಿಕರು ಪ್ರಯೋಗಪರೀಕ್ಷೆಗಳಿಂದ ಹೊಸ ಹೊಸ ವಿಷಯಗಳನ್ನು ಕಂಡು ತಿಳಿವನ್ನು ಹೆಚ್ಚಿಸಿದರು; ಮಾನವನ ಸುಖ ಸೌಕರ್ಯಗಳನ್ನು ಹೆಚ್ಚು ಮಾಡಿದರು. ವಾಲ್ಟೇರ್, ರೂಸೋ, ಡಿಡೆರೊ ಮೊದಲಾದವರು 'ಮನುಷ್ಯ ಪ್ರಯತ್ನಕ್ಕೆ ಮಿತಿಯಿಲ್ಲ; ಮಾನವನ ಶಕ್ತಿಗೆ ಮೀರಿದ ದೈವವಿರಲಾರದು' ಎಂಬ ತತ್ತ್ವವನ್ನು ಬೆಳಗಿಸಿದರು. ಫ್ರಾನ್ಸಿನ ಮಹಾಕ್ರಾಂತಿಯ ಕಾಲದಲ್ಲಿ ಇದು ಇನ್ನೂ ಪ್ರಬಲಿಸಿತು.

ಅಲ್ಲಿಂದೀಚೆಗೆ ಇಂಗ್ಲೆಂಡಿನಲ್ಲಿ ಈ ವಾದ ಅಭಿವೃದ್ಧಿಗೆ ಬಂತು. ಷೆಲ್ಲಿ, ಅವನ ಮಾವ ಗಾಡ್ವಿನ್ ಇಬ್ಬರೂ ಬಹಳ ಪ್ರಚಾರಮಾಡಿದರು. ಷೆಲ್ಲಿ "ಪ್ರೊಮಿಥಿಯಸನ ಬಂಧವಿಮೋಚನ" (Prometheus Unbound) ಎಂಬ ಗ್ರಂಥದಲ್ಲಿ ಮಾನವನ ಪ್ರಗತಿಯ ಚಿತ್ರ ಕೊಟ್ಟಿದ್ದಾನೆ. ಅವನಿಗೆ "ಪರಿಪೂರ್ಣತೆಯ ಕವಿ", (The Poet of Perfectibility) ಎಂಬ ಹೆಸರು ಬಂತು. ಇಂಗ್ಲೆಂಡಿನಿಂದ ಈ

ವಾದ ಜರ್ಮನಿಗೆ ಹರಡಿತು. ಅಲ್ಲಿ ಈ ವಾದದ ಮೇಲೆ ಕೊಂಚ ಶಂಕೆ ಆರಂಭವಾಯಿತು. 'ಪ್ರಪಂಚದ ಗತಿ ಚಕ್ರಗತಿಯಂತೆ; ಏರಿಳಿತಗಳು ಸಹಜ; ಮಿತಿಯಿಲ್ಲದ ಉತ್ತಮತೆ ಸುಳ್ಳು' ಎಂಬ ಭಾವನೆ ತೋರಲು ಮೊದಲಾಯಿತು. ಗಯಟೆ ಕವಿ 'ಮನುಷ್ಯರು ಹೆಚ್ಚು ಬುದ್ಧಿವಂತರಾಗುತ್ತಾರೆ, ಚತುರರಾಗುತ್ತಾರೆ. ಆದರೆ ಉತ್ತಮರಾಗುವುದಿಲ್ಲ. ಮನುಷ್ಯರ ವಿಷಯದಲ್ಲಿ ದೇವರಿಗೆ ಹರ್ಷವಿಲ್ಲದಾಗುವ ಒಂದು ಕಾಲ ಬಂದೀತು' ಎಂದರು.

೧೯ನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಪ್ರಗತಿವಾದಕ್ಕೆ ಮತ್ತೆ ಪ್ರಾಬಲ್ಯ ಬಂತು. ಇಂಗ್ಲೆಂಡು ಆಗ ಹಲವು ದೇಶಗಳನ್ನು ಜಯಿಸಿತ್ತು, ವಲಸೆ ನಾಡುಗಳನ್ನು ಕಟ್ಟಿತ್ತು. ವ್ಯಾಪಾರ ಮೊದಲಾದ್ದು ಬೆಳೆಯುತ್ತಿತ್ತು. ಡಾರ್ವಿನ್ ಮೊದಲಾದ ವೈಜ್ಞಾನಿಕರು ಹಲವು ಕ್ಷೇತ್ರಗಳಲ್ಲಿ ಪರಿಶ್ರಮಿಸುತ್ತಿದ್ದರು. ವಿಜ್ಞಾನದ ಹೊಸ ತಿಳಿವಳಿಕೆಯಿಂದ ಕೈಗಾರಿಕೆ ಮೊದಲಾದ ಜನಜೀವನದ ನಾನಾ ಕ್ಷೇತ್ರಗಳಲ್ಲಿ ವಿಶೇಷ ಅಭಿವೃದ್ಧಿಯುಂಟಾಯಿತು. ಇದರ ಫಲವಾಗಿ ಮನುಷ್ಯ ಪ್ರಯತ್ನದಲ್ಲಿ ನಂಬಿಕೆ ಸಹಜವಾಗಿಯೇ ಹೆಚ್ಚಾಯಿತು. ಮತ್ತೆ ಪ್ರಗತಿವಾದ ಬಲಿಷ್ಠವಾಯಿತು. ೧೯ನೆಯ ಶತಮಾನ ಈ ಪ್ರಗತಿ ತತ್ತ್ವದ ಪ್ರಭುತ್ವಕಾಲ ಎನ್ನಬಹುದು.

ಆ ಕಾಲದಲ್ಲಿ ಇಟಲಿಯಲ್ಲಿ ಮಟ್ಸೀನಿ (Mazzini) ಎಂಬ ಪ್ರಖ್ಯಾತ ಪುರುಷರೊಬ್ಬರಿದ್ದರು. ರಾಜಕೀಯ ರಂಗಕ್ಕೆ ಬಂದಿದ್ದ ಪರಮ ಸಾಧುಗಳಲ್ಲಿ ಅವರೊಬ್ಬರು. ಅವರು 'ದೈವ ಸಹಾಯದಿಂದ ಮನುಷ್ಯ ಪ್ರಯತ್ನ ಫಲಿಸಬೇಕು. ದೈವ ಸಹಾಯವಿದ್ದರೆ ಈಡೇರದ ಕಾರ್ಯವಿಲ್ಲ' ಎಂದರು. ಅವರೂ ಇಂಗ್ಲೆಂಡಿನಲ್ಲಿ ದೇವರನ್ನು ಬಿಟ್ಟು ಮನುಷ್ಯ ಪ್ರಯತ್ನಕ್ಕೇ ಸಾರ್ಥಕತೆಯುಂಟು ಎಂದು ನಂಬಿದ್ದರು.

ವೈಜ್ಞಾನಿಕರ ಕಾರ್ಯಕಲಾಪಗಳಿಂದ ಪ್ರಗತಿವಾದಕ್ಕೆ ಪುಷ್ಟಿ ದೊರೆತಂತೆಯೇ ಬ್ರೌನಿಂಗ್, ಟೆನಿಸನ್ ಮೊದಲಾದ ಕವಿಗಳಿಂದಲೂ ಬೆಂಬಲ ದೊರೆಯಿತು. ಅವರು ಪ್ರಗತಿವಾದವನ್ನು ಪೂರ್ತಿಯಾಗಿ ಒಪ್ಪದಿದ್ದರೂ ದಿನದಿನಕ್ಕೆ ಅಭಿವೃದ್ಧಿಯುಂಟಾಗುವುದು ನಿಜವೆಂದೂ ಅದಕ್ಕಾಗಿ ದುಡಿಯುವುದು ನಮ್ಮ ಧರ್ಮವೆಂದೂ ಸಾರಿದರು.

### ವಿಜ್ಞಾನ–ಮತ

ಪ್ರಗತಿವಾದವನ್ನು ನಂಬಿದ್ದ ವಿಜ್ಞಾನಕ್ಕೂ ಮತಕ್ಕೂ ಮೊದಮೊದಲು ವಿರೋಧ ಹುಟ್ಟಿ ಕೊನೆಕೊನೆಗೆ ವೈಜ್ಞಾನಿಕರಿಗೂ ತತ್ತ್ವ ದೂರವಾಯಿತು. ವೈಜ್ಞಾನಿಕರು ಸತ್ಯಾನ್ವೇಷಿಗಳು; ವೇದಾಂತಿಗಳಂತೆಯೇ ಅವರೂ ಅವರ ದಾರಿಯಲ್ಲಿ ಸ್ವಾನುಭವಿಗಳು. ಮತದಲ್ಲಿ ಶ್ರದ್ಧೆಗೆ, ನಂಬಿಕೆಗೆ ಹೆಚ್ಚು ಪ್ರಾಧಾನ್ಯ. ವಿಜ್ಞಾನದಲ್ಲಿ ಬರಿಯ ನಂಬಿಕೆಗೆ ಎಡೆಯಿಲ್ಲ. ಪ್ರಯೋಗ ಪರೀಕ್ಷೆ ಪ್ರತ್ಯಕ್ಷ ದರ್ಶನಗಳಿಗೆ ಪ್ರಾಮುಖ್ಯ.

### ಪ್ರಗತಿಗೊಂದು ಮಿತಿ

ಪ್ರಗತಿವಾದವನ್ನು ಕಟ್ಟಿದ ವೈಜ್ಞಾನಿಕರಿಂದಲೇ ಅದು ಕದಲಲು ಪ್ರಾರಂಭವಾಯಿತು. ಕೊನೆಯಿಲ್ಲದ ಪ್ರಗತಿ ಸಾಧ್ಯವಿಲ್ಲವೆಂಬ ಸಂಗತಿ ಗೋಚರವಾಗುತ್ತ ಬಂತು. ಬಾಲ್ಫರ್ ಎಂಬ ತತ್ತ್ವಚಿಂತಕರು 'ಒಬ್ಬನ ಜೀವನದಲ್ಲಿ ಹೇಗೆ ಪ್ರಬಲ ಅಬಲ ಸ್ಥಿತಿಗಳುಂಟೋ ಜನಾಂಗದ ಸ್ಥಿತಿಯಲ್ಲಿಯೂ ಚರಿತ್ರೆಯಲ್ಲಿಯೂ ಹಾಗೆಯೇ ಉನ್ನತಿ ಅವನತಿ ಉಂಟು. ಇದಕ್ಕೆ ಕಾರಣ ಗೊತ್ತಿಲ್ಲ. ಈ ಏರಿಳಿತ ಸ್ವಾಭಾವಿಕ' ಎಂದಿದ್ದಾರೆ. ಡೀನ್ ಇಂಗ್ ಎಂಬವರು 'ಪ್ರತ್ಯೇಕ ವ್ಯಕ್ತಿಗಳಿಗೆ ಪ್ರಗತಿ ಮಾರ್ಗ ಯಾವಾಗಲೂ ತೆರೆದೇ ಇದೆ. ಆದರೆ ಅದು ಬಹು ಕಡಿಮೆ; ಇಕ್ಕಟ್ಟು. ಕೆಲವರಿಗೆ ಮಾತ್ರ ಅದು ಸಾಧ್ಯವಾದೀತು' ಎಂದಿದ್ದಾರೆ. ಒಂದೊಂದು ಕಾಲದಲ್ಲಿ ಒಂದೊಂದು ವಿಷಯದಲ್ಲಿ ಒಂದೊಂದು ಜನ, ದೇಶ, ಉನ್ನತಿ ಹೊಂದುತ್ತದೆ. ಏಕದೇಶವಾದ ಪ್ರಗತಿ ಮಾತ್ರ ಸಾಧ್ಯ; ಸಾರ್ವತ್ರಿಕ ಪ್ರಗತಿಯಿಲ್ಲ.

ಬ್ಯೂರಿ ಎಂಬ ಚರಿತ್ರಕಾರನೊಬ್ಬನು 'ಪ್ರಪಂಚ ಅಪೇಕ್ಷಣೀಯವಾದ ಕಡೆಗೆ ಮುಂದುವರಿದಿದೆ, ಮುಂದುವರಿಯುತ್ತಿದೆ, ಇನ್ನು ಮೇಲೂ ಮುಂದುವರಿಯುತ್ತದೆ ಎಂಬುದು ಪ್ರಗತಿವಾದದ ಅಭಿಪ್ರಾಯ. ಆದರೆ ಈ ಮುಂಬರಿವು ಅಪೇಕ್ಷಣೀಯವಾದ ಕಡೆಗೇ ಇರಬಹುದು, ಅಪೇಕ್ಷಣೀಯವಲ್ಲದ ಕಡೆಗೆ ಇದ್ದರೂ ಇರಬಹುದು' ಎಂದು ಪ್ರಗತಿಯ ಪರಿಣಾಮ ಒಳ್ಳೆಯದೇ ಆಗುವುದೆಂಬುದರಲ್ಲಿ ಸಂದೇಹವನ್ನು ವ್ಯಕ್ತಪಡಿಸಿದ್ದಾನೆ. ಮತ್ತೊಬ್ಬರು 'ಪ್ರಗತಿಯ ಕತೆ ಮೀನಿನ ಗಾಳವಿದ್ದ ಹಾಗೆ; ಒಳ್ಳೆಯದರ ರುಚಿ ತೋರಿಸಿ ಕಷ್ಟಕ್ಕೆ ಸಿಕ್ಕಿಸುತ್ತದೆ' ಎಂದಿದ್ದಾರೆ. ಈಗ ಪರಸ್ಪರ ವಿರುದ್ಧವಾದ ಭಾವನೆಗಳಿಗೆಲ್ಲ ಪ್ರಗತಿಯನ್ನು ಅನ್ವಯಿಸುತ್ತಿದ್ದೇವೆ. ಮನಸ್ಸಿಗೆ ಪ್ರಮಾದ ಉಂಟುಮಾಡುವ ಮಾತಾಗಿದೆ ಈ ಪ್ರಗತಿ. ಪ್ರಕೃತಿ ರಹಸ್ಯ ದುರ್ಭೇದ್ಯವಾದ್ದು. ಹಾಗೇ ವಿಜ್ಞಾನದ ಪ್ರಗತಿ ಕೂಡ ಒಂದು ದಿನ ತಟಕ್ಕನೆ ನಿಂತುಬಿಡಬಹುದೇನೋ!

ಹಾಗಾದರೆ ಹಿಂದಿಗಿಂತ ಈಗ ಸ್ಥಿತಿ ಉತ್ತಮವಾಗಿಲ್ಲವೆ ಎಂದು ಕೇಳಬಹುದು. ಬೇರೆಬೇರೆ ಸಂಗತಿಗಳ ತಿಳಿವಳಿಕೆ ಹೆಚ್ಚಿದೆ. ಅವುಗಳ ಉಪಯೋಗಕ್ಕೆ ಬೇಕಾದ ಆತ್ಮ ವಿವೇಚನೆ ಹೆಚ್ಚಿಲ್ಲ. ನಿತ್ಯಜೀವನಕ್ಕೆ ಬೇಕಾದ ಪ್ರಜ್ಞೆ ಹೆಚ್ಚಿಲ್ಲ. ಈ ಸದಸದ್ವಿವೇಚನೆಯ ವಿಷಯದಲ್ಲಿ ನಾವು ಉಪನಿಷತ್ಕಾಲಕ್ಕಿಂತ, ರಾಮಾಯಣ ಮಹಾಭಾರತಗಳ ಕಾಲಕ್ಕಿಂತ ಮುಂದೆ ಹೋಗಿಲ್ಲ. ವಿಷಯಜ್ಞಾನ ಹೆಚ್ಚಿ ವಿವೇಕ ಇದ್ದಂತೆಯೇ ಇದೆ. ಟೆನಿಸನ್ ಹೇಳುವಂತೆ, 'ತಿಳಿವು ಬರುತ್ತದೆ; ಆದರೆ ವಿವೇಕ ತಡಮಾಡುತ್ತದೆ' (Knowledge comes; but wisdom lingers.)

### ಮನುಷ್ಯ ಪ್ರಯತ್ನ–ಸ್ವಾತಂತ್ರ್ಯ

ಹಾಗಾದರೆ ಪ್ರಗತಿ ಇಲ್ಲವೇ ಇಲ್ಲವೆ? ಮನುಷ್ಯ ಪ್ರಯತ್ನಕ್ಕೆ ಅವಕಾಶವಿಲ್ಲವೆ? ಫಲವಿಲ್ಲವೆ?—ಎಂಬ ಪ್ರಶ್ನೆಗಳು ಏಳುತ್ತವೆ. ಡೀನ್ ಇಂಗ್ ಹೇಳುವಂತೆ ಸ್ವಲ್ಪಮಾತ್ರ ಪ್ರಗತಿ ಉಂಟು. ಉತ್ಕರ್ಷಕ್ಕಾಗಿ, ಅಭಿವೃದ್ಧಿಗಾಗಿ ದುಡಿಯುವುದು ಮನುಷ್ಯನ ಅಧಿಕಾರ. ಮನುಷ್ಯ ಪ್ರಯತ್ನಕ್ಕೆ ಸ್ಥಾನವಿಲ್ಲದಿದ್ದರೆ ಪಾಪಪುಣ್ಯಗಳು ಕರ್ಮದ ಫಲ ಎಂಬ ಮಾತಿಗೆ ಅರ್ಥವಿಲ್ಲ. ಜೀವಕ್ಕೆ ಸ್ವಾತಂತ್ರ್ಯ ಉಂಟು. ಸ್ವಾತಂತ್ರ್ಯದ ಜೊತೆಗೆ ಜವಾಬ್ದಾರಿಯೂ ಉಂಟು.

ಹಿಂದುಗಳಲ್ಲಿ ದೈವವಾದ—ಎಂದರೆ ಅದೃಷ್ಟವಿದ್ದಂತೆ ಆಗುತ್ತದೆ; ನಮ್ಮ ಪ್ರಯತ್ನವೇನೂ ಇಲ್ಲ ಎಂಬ ವಾದ—ಪ್ರಬಲವಾಗಿದೆ. 'ಈಸಬೇಕು, ಇದ್ದು ಜೈಸಬೇಕು' ಎಂಬ ಪ್ರಚಾರ ಕಡಮೆಯಾಗಿದೆ. ಬುದ್ಧಿಯ ಮಾರ್ಗದಲ್ಲಿ ನಡೆಯುವವರು, ಚೆನ್ನಾಗಿ ವಿವೇಚನೆ ಮಾಡಿ ಕೆಲಸ ಮಾಡುವವರು, ದೈವವಾದವನ್ನೇ ಪಟ್ಟುಹಿಡಿಯದೆ ತಮ್ಮ ಸ್ವಾತಂತ್ರ್ಯದ ಅರಿವನ್ನರಿತು ಸಾಹಸಪರರಾಗಿ ಬಾಳುತ್ತಾರೆ.

ಭಾವಾವೇಶ ಬುದ್ಧಿಕಾರ್ಯವಾಗಿ ನಡೆಯಬೇಕು; ಬುದ್ಧಿ ಬೆಳೆಯಬೇಕು. 'ನಮ್ಮ ಬುದ್ಧಿಯನ್ನು ಪ್ರಚೋದಿಸು' (ಧಿಯೋ ಯೋ ನಃ ಪ್ರಚೋದಯಾತ್) ಎಂಬುದು ನಮ್ಮ ಪ್ರಾರ್ಥನೆ. ವಿಮರ್ಶನ ವಿವೇಚನಗಳು ಬುದ್ಧಿಯ ಕಾರ್ಯ, ಅದರ ಲಕ್ಷಣ. ಈಗ ಸುಮ್ಮನೆ ಮಂತ್ರೋಚ್ಚಾರ ಮಾಡುವುದು ರೂಢಿಯಾಗಿ, ಸ್ವತಂತ್ರ ವಿವೇಚನೆ ಇಲ್ಲವಾಗಿದೆ. ಸ್ವತಂತ್ರವಾಗಿ ವಿಚಾರಮಾಡಿ ಸರಿತೋರಿದರೆ ಒಪ್ಪಿಕೊಳ್ಳಬೇಕು. ಈಗ ಸ್ವಬುದ್ಧಿ ಜವಾಬ್ದಾರಿ ಹೊರುವ ಅಭ್ಯಾಸ ಕಡಮೆಯಾಗಿದೆ. ದೇವರ ಮೇಲೆ ಜವಾಬ್ದಾರಿ ಹಾಕುವ ಅಭ್ಯಾಸ ಹೆಚ್ಚಾಗಿಬಿಟ್ಟಿದೆ.

ನಮ್ಮ ಉಪದೇಶ, ತತ್ತ್ವ ಎಲ್ಲಿಂದಲೇ ಬರಲಿ ನಾವು ಸ್ವಂತವಾಗಿ ವಿಚಾರ ಮಾಡಿ ತೀರ್ಮಾನಕ್ಕೆ ಬರಬೇಕು. ಇದು ನಮ್ಮ ದೊಡ್ಡ ಜವಾಬ್ದಾರಿ. ಧರ್ಮದ ಮಾತೇ ಆಗಲಿ, ರಾಜಕೀಯ ಸಾಮಾಜಿಕಾದಿಗಳಿಗೆ ಸಂಬಂಧಿಸಲಿ, ಮಾತು ಎಲ್ಲಿಯೇ ಹುಟ್ಟಿದ್ದಿರಲಿ, ಎಂಥ ನಾಡ ಹಿರಿಯರ ಬಾಯಿಂದಲೇ ಬಂದಿರಲಿ, ಅದನ್ನು ಪರ್ಯಾಲೋಚಿಸಿ ತೂಗಿ, ಆಮೇಲೆ ನಿರ್ಧಾರಕ್ಕೆ ಬರುವ ಹೊಣೆ ಎಲ್ಲರ ಮೇಲೂ ಹೊತ್ತಿರುತ್ತದೆ. ಸ್ವಾತಂತ್ರ್ಯ ಪರಿಮಿತವೇನೋ ಹೌದು. ಇರುವ ಸ್ವಾತಂತ್ರ್ಯವನ್ನು ಪೂರ್ಣವಾಗಿ ಉಪಯೋಗಿಸಬೇಕಾದ್ದು ಮನುಷ್ಯನ ಧರ್ಮ, ಕರ್ತವ್ಯ.

ಪ್ರಪಂಚವೊಂದು ಅಶ್ವತ್ಥವೃಕ್ಷದಂತೆ (ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಂ.) ಇದರ ಬೇರು ಮೇಲೆ, ದೇವರಲ್ಲಿ. ಕೊಂಬೆಗಳು ಕೆಳಗೆ; ಸಮಸ್ತ ಜೀವರಾಶಿಗಳೂ ಕೊಂಬೆಗಳು. ಈ ಮರ ಒಂದು ದಿನ ಇದ್ದಂತೆ ಮರುದಿನ ಇರುವುದಿಲ್ಲ. ಒಂದು ಕಡೆ ಬಾಡುತ್ತಿದ್ದರೆ ಇನ್ನೊಂದು ಕಡೆ ಚಿಗುರುತ್ತಿರುತ್ತದೆ. ಬಾಡುವುದು ಕಡಮೆಯಾಗಿ ಚಿಗುರುವುದು ಹೆಚ್ಚಾಗುವಂತೆ ಮನುಷ್ಯ ಪ್ರಯತ್ನಿಸಬೇಕು.

ಲೋಕೋದ್ಧಾರಕ್ಕಾಗಿ ಕೆಲಸ ಮಾಡುತ್ತಿದ್ದೇನೆಂದು ಯಾರೂ ತಿಳಿದುಕೊಳ್ಳಬಾರದು. ನಮ್ಮ ಪ್ರಯತ್ನ ನಮ್ಮ ಏಳ್ಗೆಗಾಗಿ, ನಮ್ಮ ಬಾಳಿನ ಸಫಲತೆಗಾಗಿ, ನಮ್ಮ ಜೀವ ಸಂಸ್ಕಾರಕ್ಕಾಗಿ.

ಎಲ್. ಗುಂಡಪ್ಪ.

## ನವಿಲುಗುಂದದ ನಾಗರಿಕರು 'ಶ್ರೀ'ಯವರಿಗೆ ಅರ್ಪಿಸಿದ ಬಿನ್ನವತ್ತಳೆ

ನವಿಲುಗುಂದದ ನಾಗರಿಕರಾದ ನಾವು ತಮ್ಮನ್ನು ಅತ್ಯಾದರದಿಂದ ಸ್ವಾಗತಿಸುವ ಸುಸಂಧಿ ಮತ್ತೆ ದೊರೆತುದಕ್ಕಾಗಿ ಸಂತೋಷಿಸುತ್ತಿದ್ದೇವೆ. ಒಂದೂವರೆ ವರುಷದ ಮೊದಲು ತಾವು ಇಲ್ಲಿಗೆ ದಯಮಾಡಿಸಿದಾಗ ಬಡ ನಾಗರಿಕರಾದ ನಮ್ಮಿಂದ ಕೊಂಡ ಸೇವೆಯನ್ನು ಮರೆತಿರಲಿಕ್ಕಿಲ್ಲ.

ತಾವು ನಿಜವಾಗಿಯೂ ತೇಜಸ್ವಿಗಳು, ಓಜಸ್ವಿಗಳು, ಕನ್ನಡ ಹಿತಕ್ಕಾಗಿ ಅಹೋರಾತ್ರಿ ಪರಿತಪಿಸುತ್ತಿರುವ ತಪಸ್ವಿಗಳು. ತಮ್ಮ ಪ್ರಭಾವದ ಪರಿಣಾಮದಿಂದಲೇ ಕಳೆದ ಅರ್ಧ ಶತಮಾನದಿಂದ ತಾವು ನಡೆಯಿಸಿದ ತಾಯಿನುಡಿ ಸೇವೆಯಿಂದ ಕನ್ನಡಿಗರಲ್ಲಿ ತಮ್ಮ ಬಗ್ಗೆ ಆದರಾಭಿಮಾನವೂ ನಾಡ ಹೆಮ್ಮೆಯೂ ಉದಯಿಸಿದೆ. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಪ್ರೊಫೆಸರರಾಗಿರುವಾಗ ತಮ್ಮ ಸರಳ-ನೈಜ ಪ್ರವೃತ್ತಿಯಿಂದ ಅಲ್ಲಿನ ವಿದ್ಯಾರ್ಥಿಗಳಿಗೆ ನಮ್ಮ ನಾಡು ನುಡಿಗಳ ಬಗ್ಗೆ ಹೃದಯಪರಿವರ್ತನೆಗೊಳಿಸಿದ್ದು ಕನ್ನಡಕ್ಕೆ ತಾವು ಸಲ್ಲಿಸಿದ ಮಹಾ ಸೇವೆಯಾಗಿದೆ. ಕನ್ನಡತಾಯಿಗಾಗಿ ತಮ್ಮ ಪ್ರೀತಿಯ ದ್ಯೋತಕವಾಗಿದೆ.

ಕರ್ನಾಟಕ ಸಾಹಿತ್ಯಕುಲದೀಪಕರೆಂದು ಕರೆಯಿಸಿಕೊಳ್ಳುವ ತಾವುಗಳು ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಉತ್ಕೃಷ್ಟ ಗ್ರಂಥಗಳನ್ನು ಬರೆದು ಕನ್ನಡಿಗರಲ್ಲಿ ನವಚೈತನ್ಯವನ್ನು ತುಂಬಿದಿರಿ. ಅಲ್ಲದೆ ಇಂಗ್ಲಿಷ್-ಕನ್ನಡ ನಿಘಂಟು ಕಮಿಟಿಯ ಸಭಾಸದರಾಗಿ ತಾವು ಮಾಡುತ್ತಲಿರುವ ಕಾರ್ಯ ತಮ್ಮ ಹೆಸರನ್ನು ಅಜರಾಮರವನ್ನಾಗಿ ಮಾಡುವುದು.

ರಾಜ-ರೈತರನ್ನು ಸಮನಾಗಿ ಕಂಡುಕೊಳ್ಳುವ ತಮ್ಮ ಸಾಮ್ಯ, ವಿದ್ವತ್ತು, ತೇಜ, ಮಾಧುರ್ಯಗಳಿಗೆ ಮೆಚ್ಚಿ ಮೈಸೂರು ಶ್ರೀಮನ್ ಮಹಾರಾಜರವರು ತಮಗೆ ಕಳೆದ ವರುಷ "ರಾಜಸೇವಾಸಕ್ತ" ಎಂಬ ಅಮೋಘವಾದ ಬಿರುದನ್ನು ದಯಪಾಲಿಸಿದುದು ಅಭಿನಂದನೀಯವೂ ಕರ್ತೃತ್ವಶಕ್ತಿಯ ದ್ಯೋತಕವೂ ಆಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಕನ್ನಡ ಕಾರ್ಯಪ್ರಚಾರದಿಂದ ಪ್ರತಿಯೊಬ್ಬ ಕನ್ನಡಿಗನಿಗೂ ಆದರಮೂರುತಿಯಾಗಿರುವಿರಿ. ಕನ್ನಡಿಗರಲ್ಲಿ ತಮಗಾಗಿರುವ ಕಕುಲತೆ ತಮ್ಮನ್ನು ಸತತೋದ್ಯೋಗಿಗಳನ್ನಾಗಿ ಮಾಡಿದೆ. ಈ ಸಾರೆಯ ಬೆಳಗಾವಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮತ್ತೆ ತಮ್ಮನ್ನು ಮೂರನೆಯ ಬಾರಿ ಉಪಾಧ್ಯಕ್ಷರನ್ನಾಗಿ ಆರಿಸಿದುದೇ ತಮಗಾಗಿರುವ ಕಕುಲತೆಯ ದ್ಯೋತಕ.

ಮಾನ್ಯರೇ! ಪರ್ವತವನ್ನು ಕನ್ನಡಿಯಲ್ಲಿಯೂ, ಮಹಾಸಾಗರವನ್ನು ಕೊಡದಲ್ಲಿಯೂ ಹಿಡಿದಿಡುವ ಸಾಹಸಪಡುವಂತೆ ತಮ್ಮ ಅಮೋಘ ಚರಿತ್ರೆಯನ್ನು ಹೊಗಳುವ ನಮ್ಮ ಸಾಹಸ ಹೇವನು ಜೆಟ್ಟಿಯನ್ನು ಎದೆದಂತೆಯೇ ಸರಿ. ಕೀರ್ತಿಭಾಗಿಗಳಾದ ತಾವು ಪ್ರತ್ಯಕ್ಷ ದರುಶನವಿತ್ತು ನಮ್ಮೆಲ್ಲರ ಕಣ್ಮನಗಳನ್ನು ತಣಿಸಿದುದಕ್ಕಾಗಿ ತಮಗೆ ನಾವು ಚಿರಋಣಿಗಳಾಗಿದ್ದೇವೆ. ಇಂಥ ಸುಯೋಗಗಳನ್ನು ಪರಮಾತ್ಮನು ಮೇಲಿಂದ ಮೇಲೆ ತಂದುಕೊಡಲಿ.

"ಜಾತಿ ಮತ ಪಂಥಗಳ ಕೋಲಾಹಲಗಳಿಗೆ ಸಾಹಿತ್ಯಕ್ಷೇತ್ರದಲ್ಲಿ ಎಡೆಯಿಲ್ಲ" ಎಂಬ ತಮ್ಮ ಸಿದ್ಧಾಂತ ನಮ್ಮನ್ನು ಮುಗ್ಧರನ್ನಾಗಿ ಮಾಡಿದೆ. ನುಡಿಸೇವೆಯಂತೆ ನಾಡಸೇವೆಯನ್ನು ತಾವು ಗೈದಿದ್ದೀರಿ. ತಮ್ಮತನವನ್ನು ಕಳೆದುಕೊಂಡ ಕನ್ನಡ ಗಡಿನಾಡುಗಳಲ್ಲಿ ಕನ್ನಡ ಜಾಗೃತಿಯನ್ನು ಹುಟ್ಟಿಸುವುದಕ್ಕೆ ತಾವು ಬಹುಮಟ್ಟಿಗೆ ಕಾರಣರು ಆಗಿರುವಿರಿ. ಕನ್ನಡ ನಾಡನ್ನು ಕಟ್ಟುವ ಸಾಹಸಕ್ಕೆ ಕೈಯಿಕ್ಕಿರುವಿರಿ. ಜನಗಣನೆಯು ಸಮೀಪಿಸಿದ ಸಂಧಿಕಾಲದಲ್ಲಿ ಕನ್ನಡದ ಗಡಿಗಳಲ್ಲಿ ಹೆಚ್ಚಾದ ಜಾಗೃತಿ ತಮ್ಮ ನೇತೃತ್ವದಲ್ಲಿ ಉಂಟಾಗುವುದೆಂದು ನಂಬಿರುವೆವು.

ಪೂಜ್ಯರೇ! ತಾವು ನಮ್ಮ ಬಿನ್ನಹವನ್ನು ಮನ್ನಿಸಿ ನಮ್ಮನ್ನು ಉಪಕೃತರನ್ನಾಗಿ ಮಾಡಿರುವಿರಿ. ಕನ್ನಡತಾಯಿಯ ನಾಡು ನುಡಿಗಳಿಗೆ ಕನ್ನಡ ಸಾಹಿತ್ಯಾಚಾರ್ಯರಾದ ತಮ್ಮಿಂದ ಬಹುಕಾಲ ಸೇವೆ ಸಲ್ಲುವಂತೆ ದೇವರು ತಮಗೆ ಹೆಚ್ಚು ಆಯುಸ್ಸನ್ನೂ ಆರೋಗ್ಯವನ್ನೂ ದಯಪಾಲಿಸಲೆಂದು ಬೇಡುವ,

ನವಿಲುಗುಂದದ ನಾಗರಿಕರು

## ಭಗವದ್ಗೀತೆಯಲ್ಲಿ ಪಾಪ—ಪುಣ್ಯ ಮೀಮಾಂಸೆ*

ಬರೆದವರು: ಶ್ರೀ ಆರ್. ವಿ. ಜಾಗೀರ್ದಾರ್, ಎಂ.ಎ. (ಲಂಡನ್)

ಕುರುಕ್ಷೇತ್ರದ ರಣಾಂಗಣದಲ್ಲಿ ಯುದ್ಧದ ಪ್ರಾರಂಭಕ್ಕೆ ಅರ್ಜುನನ ಹೃದಯದಲ್ಲಿ ಉದ್ಭವಿಸಿದ ಕಾರ್ಯಾಕಾರ್ಯ ಸಂಶಯಗಳಲ್ಲಿ ಕೆಳಗಿನದೊಂದು ಮಾತೂ ಕಂಡುಬರುವುದು :

ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ

ಎಂದಿನಿಂದ, ತಮ್ಮ ಹಕ್ಕಿನದು ಎನಿಸಿದ ರಾಜ್ಯವನ್ನು ದೊರಕಿಸುವ ವೃತ್ತಿ ಇಂದು 'ಲೋಭ'ವೆನಿಸಿ, ಕ್ಷತ್ರಿಯನಾದ ತನಗೆ ಯೋಗ್ಯಮಾರ್ಗವಾದ ಯುದ್ಧ 'ಹನನ'ವಾಗಿ ಕಂಡು, ಶತ್ರುಗಳಾದ ಕೌರವರು 'ಸ್ವಜನ'ರಾಗಿ ತನ್ನ ಕೃತ್ಯವೆ 'ಪಾಪ' ಎಂದು ಅರ್ಜುನನು ವಾದಿಸಿದ್ದಾನೆ! ಪಾಪವೆಂದರೇನು? ನಿನ್ನ 'ಕರ್ತವ್ಯ'ವು ಇಂದು ಬೇರೆ ದೃಷ್ಟಿಯಿಂದ ನೋಡಲಾಗಿ 'ಪಾಪ' ಎನಿಸಿತು. ಪಾಪದ ಸ್ವರೂಪ ಹೀಗಿದ್ದರೆ ಕ್ಷಣಕ್ಷಣಕ್ಕೆ, ಕಾಲಕಾಲಕ್ಕೆ ಪಾಪದ ವ್ಯಾಖ್ಯೆ ಬದಲಾಯಿಸಬಹುದಲ್ಲವೆ?

ಈ ಪ್ರಶ್ನೆಗೆ ಗೀತೆಯಲ್ಲಿ ಉತ್ತರವೇನಿದೆ ಎಂದು ನೋಡುವ ಮುಂಚೆ ಒಂದು ಮಾತನ್ನು ಲಕ್ಷ್ಯದಲ್ಲಿಡಬೇಕಾಗುವುದು. ದೇವ-ಕರ್ಮ-ಪುನರ್ಜನ್ಮ ಈ ಮೂರರಲ್ಲಿ ವಿಶ್ವಾಸವಿಟ್ಟರೆ ಮಾತ್ರ ಪಾಪ-ಪುಣ್ಯದ ಪ್ರಶ್ನೆ ಹೊರಡುವುದು. ಜನ್ಮಜನ್ಮಾಂತರಗಳಲ್ಲಿ ಕರ್ಮದ ದ್ವಾರಾ ಪಾಪ-ಪುಣ್ಯಗಳು ನಮ್ಮನ್ನು ಅಂಟಿಕೊಳ್ಳುವುವು; ಈ ಪಾಪ-ಪುಣ್ಯಗಳ ತಕ್ಕಡಿ ಹಿಡಿಯುವವನು ದೇವನು.

ಪಾಪ-ಪುಣ್ಯ ವಿಚಾರಕ್ಕೂ ಮೇಲಿನ ವಿಚಾರಕ್ಕೂ ಮೇಲಿನ ಸಂಗತಿಗಳಿಗೂ ಹೀಗೆ ಸಂಬಂಧವಿರುವುದರಿಂದ ಈ ವಿಚಾರದಲ್ಲಿ ಶಾಸ್ತ್ರವೇ ಆಧಾರವಾಗಬೇಕಾಗುವುದು. ಆ ಶಾಸ್ತ್ರವನ್ನನುಸರಿಸಿಯೇ ಇಂದು ಅರ್ಜುನನಿಗೆ ಯುದ್ಧ ಪಾಪವೆನಿಸಿದೆ.

ಆದರೇನು? ಈ ಶಾಸ್ತ್ರಕ್ಕೆ ಪ್ರತಿಯಾಗಿ ಇನ್ನೂ ಒಂದು ಶಾಸ್ತ್ರ ಇದೆ:

ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ

'ಯುದ್ಧ ಮಾಡದಿರುವುದು ಕ್ಷತ್ರಿಯನಾದ ನಿನಗೆ ಪಾಪಕರ್ಮವಾಗುವುದು' ಎಂಬ ಕೃಷ್ಣನ ಮಾತಿನಲ್ಲಿ ಶಾಸ್ತ್ರಗಳ ಪರಸ್ಪರ ವಿರೋಧದ ನಿರ್ದೇಶವಿದೆ. ಹೀಗಿರಲು 'ಇದು ಪಾಪ, ಇದು ಪುಣ್ಯ' ಎಂದು ನಿರ್ಧರಿಸುವ ಉಪಾಯ ಯಾವುದು?

ತರ್ಕದಿಂದ ವಿಚಾರಿಸಿದರೂ ಪಾಪ-ಪುಣ್ಯ ವಿಮಾಂಸೆಗೆ ನಿರ್ಧಾರ ದೊರಕುವುದಿಲ್ಲ. ಸ್ವಹಿತ-ಪರಹಿತ-ಕರ್ತೃವಿನ ಇಚ್ಛೆ-ಕಾರ್ಯದ ಬಾಹ್ಯ ಸ್ವರೂಪ ಈ ನಾಲ್ಕೂ ದೃಷ್ಟಿಯಿಂದ ನೋಡುವಾಗಲೂ 'ಇದು ಪಾಪ' ಎಂದು ಖಂಡಿತವಾಗಿ ಹೇಳಲು ಬರುವುದಿಲ್ಲ.

ಹೀಗೆ ಯಾವ ರೀತಿಯಿಂದಲೂ ಪಾಪ-ಪುಣ್ಯಗಳ ವ್ಯಾಖ್ಯೆ ದೊರೆಯದ ಅವ್ಯವಸ್ಥೆಯಲ್ಲಿ ಮೊದಲು ಗೀತೆ ನಮ್ಮ ದೃಷ್ಟಿದೋಷವನ್ನು ನಮಗೆ ತೋರಿಸಿಕೊಡುವುದು. ಕರ್ತೃ-ಕಾರ್ಯ-ಕರ್ಮಫಲ ಈ ಮೂರರಲ್ಲಿ ಒಂದಕ್ಕೊಂದನ್ನು ಜೋಡಿಸುವುದೆ ತಪ್ಪು ಎಂದು ಗೀತೆಯ ಅಭಿಪ್ರಾಯ. ಯಾವುದಾದರೊಂದು ಕಾರ್ಯದಲ್ಲಿ—

ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ
ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಂ

ಎಂದು ಅನೇಕ ಸಹಕಾರಿ ಕಾರಣಗಳಿವೆ. ಹೀಗೆ ಕರ್ತೃವಿಗೊಬ್ಬನಿಗೇ ಕಾರ್ಯದ ಹೊಣೆಗಾರಿಕೆಯನ್ನು ಹೊರಿಸಿ ಸುಖ-ದುಃಖ, ಲಾಭ-ಅಲಾಭ, ಜಯ-ಅಪಜಯ ಎಂದು ಕರ್ಮಫಲವನ್ನು ಅಳೆಯುವುದು ಶುದ್ಧ ತಪ್ಪು.

ಕರ್ತೃವಿಗೆ ಕಾರ್ಯದ ಹೊಣೆಗಾರಿಕೆ ಇಲ್ಲವೆಂದರೆ ಬೇಕಾದ್ದನ್ನು ಮಾಡಿ 'ಬೇಜವಾಬ್ದಾರ'ನೆನಿಸಿಕೊಳ್ಳುವ ಅನವಸ್ಥೆ ಇದೆ ಎಂದಲ್ಲ.

(೧೩೪ನೆಯ ಪುಟವನ್ನು ನೋಡಿ)

*ಇದೇ ವಿಚಾರವನ್ನು ಕುರಿತು ಶ್ರೀಯುತರು ಪರಿಷತ್ತಿನಲ್ಲಿ ೧೦ನೆಯ ತಾರೀಖು ಶನಿವಾರ ಭಾಷಣ ಮಾಡಿದರು.




ಶುಕ್ರವಾರ, ಫೆಬ್ರುವರಿ ೧೬, ೧೯೪೦

## ಕನ್ನಡ ನಾಡಿಗೆ ಒಂದು ಕೇಂದ್ರ ಸರಸ್ವತೀ ಭಂಡಾರ

ಕನ್ನಡ ನಾಡಿನಲ್ಲಿ ಇದುವರೆಗೆ ಪ್ರಕಟವಾಗಿರುವ ಮತ್ತು ಮುಂದೆ ಪ್ರಕಟವಾಗುವ ಎಲ್ಲ ಕನ್ನಡ ಗ್ರಂಥಗಳನ್ನೂ ಪರಿಷತ್ತಿನ ಸರಸ್ವತೀ ಭಂಡಾರದಲ್ಲಿ ಶೇಖರಿಸಿ ಅವನ್ನು ಇಡಿಯ ಕನ್ನಡ ನಾಡಿನ ಕೇಂದ್ರ ಭಂಡಾರವನ್ನಾಗಿ ಮಾಡಬೇಕೆಂಬ ಹೆಬ್ಬಯಕೆ ಪರಿಷತ್ತಿನ ಗುರಿಯಲ್ಲಿ ಮೊದಲಿನಿಂದಲೂ ಇದೆ. ೧೯೩೪ರಲ್ಲಿ ವಸಂತ ಸಾಹಿತ್ಯೋತ್ಸವ ಸಂಬಂಧದಲ್ಲಿ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಕನ್ನಡ ಗ್ರಂಥಗಳ ಪ್ರದರ್ಶನದ ಮುಖ್ಯ ಉದ್ದೇಶಗಳಲ್ಲಿ ಮೇಲ್ಕಂಡ ಉದ್ದೇಶವೂ ಇತ್ತು. ಆಗ್ಗೆ ಹಲವು ಗ್ರಂಥಕರ್ತರ ಮತ್ತು ಪ್ರಕಾಶಕರ ಸಹಾಯದಿಂದ ಪ್ರದರ್ಶನಕ್ಕೆ ಬಂದಿದ್ದ ಬಹು ಸಂಖ್ಯೆಯ ಗ್ರಂಥಗಳು ಉಚಿತವಾಗಿ ದೊರೆತುವು; ಉಳಿದುವನ್ನು ಪರಿಷತ್ತು ಕೊಂಡುಕೊಂಡಿತು. ಆದರೂ ಅದುವರೆಗೆ ಪ್ರಕಟವಾದ ಎಷ್ಟೋ ಗ್ರಂಥಗಳು ಪ್ರದರ್ಶನಕ್ಕೆ ಬಾರದೆ, ಭಂಡಾರಕ್ಕೆ ದೊರೆಯದೆ ಹೋದುವು. ಅಂದಿನಿಂದ ಪ್ರತಿವರ್ಷವೂ ಗ್ರಂಥಪ್ರದರ್ಶನವನ್ನೇನೋ ನಡಸಿಕೊಂಡು ಬರುತ್ತಿದೆ. ಭಂಡಾರಕ್ಕೆ ಗ್ರಂಥಗಳನ್ನು ಪಡೆಯುವ ಮಾತು ಹಾಗಿರಲಿ, ಆಯಾ ವರ್ಷದಲ್ಲಿ ಪ್ರಕಟವಾದ ಎಲ್ಲ ಗ್ರಂಥಗಳೂ ಪ್ರದರ್ಶನಕ್ಕೆ ಬರುವುವೆಂದು ಸಹ ಹೇಳುವುದಕ್ಕಾಗುವುದಿಲ್ಲ.

ಗ್ರಂಥಕರ್ತರೂ ಗ್ರಂಥಪ್ರಕಾಶಕರೂ ತಾವು ಪ್ರಕಟಿಸಿದ ಗ್ರಂಥಗಳ ಒಂದೊಂದು ಪ್ರತಿಯನ್ನಾದರೂ ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಉಚಿತವಾಗಿ ಕಳಿಸಿಕೊಡಬೇಕೆಂದು ಪರಿಷತ್ತು ಬೇಡುತ್ತಲೇ ಇದೆ. ಹಲವು ಮಂದಿ ದಯಮಾಡಿ ಹಾಗೆ ಮಾಡುತ್ತಿರುವರಾದರೂ ಎಲ್ಲರೂ ಪರಿಷತ್ತಿನ ಕೋರಿಕೆಯನ್ನು ನಡಸಿಕೊಡುತ್ತಿರುವರೆಂದು ಹೇಳಲಾರೆವು. ಇನ್ನು ಮುಂದಾದರೂ ಅವರು ಗ್ರಂಥಗಳನ್ನು ಕಳಿಸಿಕೊಟ್ಟರೆ "ಕನ್ನಡ ನುಡಿ"ಯಲ್ಲಿ ಈ ಗ್ರಂಥಗಳ ಪಟ್ಟಿಯನ್ನು ಪ್ರಕಟಿಸುವುದರಿಂದ ಪ್ರಕಾಶಕರು ತಮ್ಮ ಪ್ರಕಟನೆಗಳನ್ನು ಸಾಹಿತ್ಯಲೋಕದಲ್ಲಿ ಪ್ರಸಿದ್ಧಿಗೊಳಿಸಿದಂತೆಯೂ ಆಗುವುದು.

ಈ ಸಂದರ್ಭದಲ್ಲಿ 'ಪ್ರಜಾಮತ'ದ ಸಹಸಂಪಾದಕರಾದ ಶ್ರೀ ಸಾ. ಸಾ. ಚೌಡಪ್ಪನವರು ನಮಗೆ ಬರದು ಪತ್ರ ಬರೆದು ಮಾಡಿರುವ ಸೂಚನೆಯನ್ನು ವಾಚಕರ ಅವಗಾಹನೆಗೆ ತರಬಯಸುತ್ತೇವೆ. (ಅವರ ಪತ್ರವನ್ನು ೧೬೬ನೆಯ ಪುಟದಲ್ಲಿ ಕಾಣಬಹುದು.)

ಬೊಂಬಾಯಿ ಸರಕಾರದವರು ತಮ್ಮ ಪ್ರಾಂತದಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳಿಗಾಗಿ ಬೊಂಬಾಯಿ ನಗರದಲ್ಲಿ ಒಂದು ಕೇಂದ್ರ ಭಂಡಾರವನ್ನೂ, ಎಲ್ಲ ಕನ್ನಡ ಪುಸ್ತಕಗಳಿಗಾಗಿ ಧಾರವಾಡದಲ್ಲೊಂದು ಪ್ರಾದೇಶಿಕ ಭಂಡಾರವನ್ನೂ ಸ್ಥಾಪಿಸುವ ಏರ್ಪಾಡು ಮಾಡಿರುವುದಕ್ಕಾಗಿ ಬೊಂಬಾಯಿ ಸರಕಾರದವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಇತರ ಪ್ರಾಂತಗಳ ಸರಕಾರಗಳವರೂ ಬೊಂಬಾಯಿನ ಮೇಲುಪಂಕ್ತಿಯನ್ನು ಅನುಸರಿಸಿ ಎಲ್ಲ ಪ್ರಾಂತ ಭಾಷೆಗಳಿಗೂ ಒಂದು ದೊಡ್ಡ ಉಪಕಾರ ಮಾಡಬಹುದಾಗಿದೆಯೆಂದು ಸೂಚಿಸುತ್ತೇವೆ.

ಕನ್ನಡ ನಾಡಿಗೆ ಈ ಪ್ರಾದೇಶಿಕ ಭಂಡಾರಗಳ ಜೊತೆಗೆ ಒಂದು ಕೇಂದ್ರ ಭಂಡಾರದ ಆವಶ್ಯಕತೆಯಿದೆ ಎಂಬ ಸಂಗತಿಯನ್ನು ಮತ್ತೆ ಒತ್ತಿ ಹೇಳಬೇಕಾಗಿಲ್ಲ. ಶ್ರೀಯುತ ಚೌಡಪ್ಪನವರು ಸೂಚಿಸಿರುವಂತೆ, ಬೊಂಬಾಯಿ, ಮದರಾಸು, ಹೈದರಾಬಾದು ಮತ್ತು ಮೈಸೂರು ಸರಕಾರಗಳವರು ತಮ್ಮ ತಮ್ಮ ಪ್ರಾಂತದಲ್ಲಿ ಪ್ರಕಟವಾಗುವ ಕನ್ನಡ ಗ್ರಂಥಗಳ ಒಂದೊಂದು ಪ್ರತಿಯನ್ನು ಪರಿಷತ್ತಿನ ಭಂಡಾರಕ್ಕೂ ಮಿಕ್ಕ ಪ್ರಾಂತಗಳ ಕೇಂದ್ರ ಭಂಡಾರಗಳಿಗೂ ಕೃಪೆಮಾಡಿ ಕಳಿಸಿಕೊಟ್ಟು ತಮ್ಮ ಉದಾರವಾದ ಬೆಂಬಲವನ್ನು ಕೊಟ್ಟದ್ದೇ ಆದರೆ, ಈಗಾಗಲೇ ಕೇಂದ್ರ ಭಂಡಾರವಾಗಬೇಕೆಂದು ಹೆಣಗುತ್ತಿರುವ ಇಡಿಯ ಕನ್ನಡ ನಾಡಿನ ಸಂಸ್ಥೆಯಾದ ಪರಿಷತ್ತಿನ ಸರಸ್ವತೀ ಭಂಡಾರವೂ, ಮಿಕ್ಕ ಪ್ರಾಂತಗಳವೂ ಬೇಗನೆ ಕನ್ನಡ ಗ್ರಂಥಗಳ ಪೂರ್ಣ ಭಂಡಾರಗಳಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಹಾಗಾಗುವಂತೆ ಮೇಲ್ಕಂಡ ಸರಕಾರಗಳವರು ನೆರವಾಗಬೇಕೆಂದು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತೇವೆ.

---

## ಸೊಲ್ಲಾಪುರ ಜಿಲ್ಲೆಯಲ್ಲಿ ಕನ್ನಡ ಪರಿಷತ್ತು

ಕಳೆದ ವಾರ ನವಿಲುಗುಂದದಲ್ಲಿ ಧಾರವಾಡ ಜಿಲ್ಲೆಯ ನಾಲ್ಕನೆಯ ಸಾಹಿತ್ಯಸಮ್ಮೇಳನ ಬಹಳ ಯಶಸ್ವಿಯಾಗಿ ನಡೆಯಿತಷ್ಟೆ. ಬರುವ ಮಾರ್ಚಿಯಲ್ಲಿ ಸೊಲ್ಲಾಪುರದಲ್ಲಿ ಕನ್ನಡ ಪರಿಷತ್ತನ್ನು ಕೂಡಿಸಬೇಕೆಂದು ಅಲ್ಲಿನ ಕರ್ನಾಟಕ ಸಂಘದವರು ನಿರ್ಧರಿಸಿರುತ್ತಾರೆ. ಸಂಘದ ಅಧ್ಯಕ್ಷರಾದ ಶ್ರೀ ಎಂ. ಎಸ್. ಸರದಾರ್, ಬಿ. ಎ. (ಆಕ್ಸನ್). ಬಾರ್-ಅಟ್-ಲಾ ಅವರ ಮುಂದಾಳುತನದಲ್ಲಿ ಎಲ್ಲ ಸಿದ್ಧತೆಗಳೂ ಆಗುತ್ತಿವೆ. ಇದು ಸಂತೋಷದ ಸಂಗತಿ.

ಸೊಲ್ಲಾಪುರ ಕನ್ನಡದ ಗಡಿನಾಡು. ಅಲ್ಲಿ ಕನ್ನಡದ ಸ್ಥಿತಿ ಬಹು ಶೋಚನೀಯವಾಗಿದೆ. ಅಲ್ಲಿನ ಕನ್ನಡಿಗರು ತಮ್ಮ ತಾಯ್ನುಡಿಯನ್ನು ಮರೆತು ನೆರೆನಾಡಿನ ನುಡಿಯನ್ನು ಬಳಸುತ್ತಿದ್ದಾರೆ; ಕನ್ನಡ ಮಕ್ಕಳಿಗೆ ಕನ್ನಡ ಓದುಬರಹದ ಶಿಕ್ಷಣಕ್ಕೆ ಅವಕಾಶವೇ ಇಲ್ಲ. ಅಲ್ಲಿ ಬಹಳ ಕಾಲದಿಂದ ಇರುವ ಈ ಎಲ್ಲ ಕುಂದು ಕೊರತೆಗಳನ್ನು ಹೋಗಲಾಡಿಸಿ, ಅಲ್ಲಿನ ಜನರಲ್ಲಿ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸಿ, ಕನ್ನಡದ ಹಿತವನ್ನು ಕಾಯ್ದುಕೊಳ್ಳುವ ಕೆಲಸವನ್ನು ಚುರುಕಿನಿಂದ ಪ್ರಾರಂಭಿಸುವ ಆವಶ್ಯಕತೆ ಎಂದಿನಿಂದಲೂ ಇತ್ತು; ಈಗಲೂ ಇದೆ. ಈ ಬಗ್ಗೆ ಯಾವ ಪ್ರಯತ್ನವೂ ಆಗಿರಲಿಲ್ಲ. ಇದನ್ನು ಮನಗಂಡು ಅಲ್ಲಿನ ಕರ್ನಾಟಕ ಸಂಘ ಕಾರ್ಯಪ್ರವೃತ್ತವಾಗಿರುವುದಕ್ಕಾಗಿ ನಾವು ಸಂಘದವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ.

ಬರುವ ವರುಷ ನಡೆಯಲಿರುವ ಜನಗಣತಿಯಲ್ಲಿ ಜಿಲ್ಲೆಯ ಕನ್ನಡಿಗರೆಲ್ಲರೂ ತಮ್ಮ ಭಾಷೆ ಮುಂತಾದ್ದನ್ನು ಇದ್ದಕ್ಕಿದ್ದಂತೆ ದಾಖಲುಪಡಿಸುವಂತೆ ಅವರನ್ನು ಪ್ರೇರಿಸುವ ಪ್ರಯತ್ನವನ್ನು ಕೈಗೊಳ್ಳುವುದು ಈ ಪರಿಷತ್ತಿನ ಮುಖ್ಯ ಉದ್ದೇಶಗಳಲ್ಲಿ

ಒಂದು. ಈ ಪ್ರಯತ್ನ ನೆರವೇರಿದ್ದೇ ಆದರೆ ಕನ್ನಡ ಕೋಟೆಯ ಒಂದು ದಿಕ್ಕಿನ ಬಾಗಿಲನ್ನು ಭದ್ರಪಡಿಸಿದಂತೆ. ಇದರಂತೆಯೇ, ಜಿಲ್ಲೆಯಲ್ಲಿರುವ ಸುಮಾರು ೮೦ ಅಚ್ಚಗನ್ನಡ ಹಳ್ಳಿಗಳಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸುವಂತೆ ಮಾಡುವುದೂ ಸಮ್ಮೇಳನದ ಮತ್ತೊಂದು ಮುಖ್ಯ ಧ್ಯೇಯವಾಗಿದೆ.

ಸಮ್ಮೇಳನ ಎಲ್ಲ ಬಗೆಯಲ್ಲಿ ಯಶಸ್ವಿಯಾಗಿ ನೆರವೇರಿ, ಅದರ ಧ್ಯೇಯಗಳು ಈಡೇರಿ, ಕನ್ನಡ ಬಾವುಟ ಗಡಿನಾಡಿನಲ್ಲಿ ವೈಭವದಿಂದ ಹಾರಾಡುವಂತಾಗಲೆಂದು ಹಾರೈಸುತ್ತೇವೆ.

---

**ಧಾರವಾಡ ಜಿಲ್ಲೆಯ ೪ನೆಯ ಸಾಹಿತ್ಯ ಸಮ್ಮೇಳನದ ಅಂಗವಾದ ಮಹಿಳಾ ಸಮ್ಮೇಳನದ ಅಧ್ಯಕ್ಷರಾದ**

## ಶ್ರೀಮತಿ ಗೌರೀದೇವಿ ಇಂಚಲಮಠ

### ಅವರ ಭಾಷಣ

ಶ್ರೀಮತಿಯವರು ತಮ್ಮನ್ನು ಮಹಿಳಾ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿದ್ದಕ್ಕಾಗಿ ಸಮ್ಮೇಳನದ ಕಾರ್ಯಕರ್ತರಿಗೆ ತಮ್ಮ ವಂದನೆ ಸಲ್ಲಿಸಿ ಈ ರೀತಿ ತಮ್ಮ ಭಾಷಣವನ್ನು ಮುಂದುವರಿಸಿದರು:

ಸಾಹಿತ್ಯ ಸಮ್ಮೇಳನ ಜನಿಸಿ ೩೩ ವರ್ಷಗಳು ಕಳೆದು ೨೪ನೆಯ ವರ್ಷದಲ್ಲಿ ಅಡಿಯಿಟ್ಟಿದೆ. ಇದರಲ್ಲಿ ಈ ಜಿಲ್ಲಾ ಸಾಹಿತ್ಯ ಸಮ್ಮೇಳನ ಇದೀಗ ನಾಲ್ಕನೆಯದಾಗಿ ನಡೆಯುತ್ತದೆ. ಸಾಹಿತ್ಯದಲ್ಲಿ ಸ್ತ್ರೀಯರೂ ಮುಂದುವರಿಯಬೇಕೆಂಬ ಆಕಾಂಕ್ಷೆಯಿಂದ ಸಾಹಿತ್ಯ ಸಮ್ಮೇಳನದಲ್ಲಿ ಒಂದು ಅಂಗವಾಗಿ ಮಹಿಳಾ ಸಮ್ಮೇಳನವನ್ನು ಕೂಡಿಸಿ, ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀಯರಿಗೂ ಸಮಸ್ಥಾನವನ್ನು ಕೊಟ್ಟು ಮಹಿಳೆಯರ ವಿಷಯದಲ್ಲಿ ಎಷ್ಟೋ ದಯವನ್ನು ತೋರಿಸುತ್ತಿರುವರು. ಇದಕ್ಕಾಗಿ ಸಾಹಿತ್ಯ ಮಂದಿರದ ಅಧ್ಯಕ್ಷರಿಗೂ ಉಪಾಧ್ಯಕ್ಷರಿಗೂ ಕಾರ್ಯಕರ್ತರಿಗೂ ಇಡಿಯ ಕನ್ನಡ ನಾಡಿನ ನಾರೀ ಸಮಾಜವೇ ಚಿರಋಣಿಯಾಗಿದೆ.

ನವಿಲುಗುಂದ ಗವಿಮಠದ ಶ್ರೀಗುರುಗಳಾದ **ಬಸವಲಿಂಗಸ್ವಾಮಿಗಳವರು** ಸ್ತ್ರೀಯರ ಏಳ್ಗೆಯ ಕೆಲಸವನ್ನು ಕೈಗೊಂಡಿರುವರು. ಇಂಥ ವಿಷಯಗಳಲ್ಲಿ ಅವರಲ್ಲೂ ಸ್ತ್ರೀಯರ ವಿಷಯದಲ್ಲಿ ಗಮನ ಕೊಡುವವರು ತೀರ ವಿರಳವೆಂದೇ ಹೇಳಬಹುದು. 'ಸನ್ಯಾಸಿಗೇತಕ್ಕೆ ಪ್ರಪಂಚದ ಯೋಚನೆ' ಎಂದು ತಿಳಿಯದೆ ಸ್ತ್ರೀಯರ ಏಳ್ಗೆಯ ಕೆಲಸವನ್ನು ಕೈಗೊಂಡಿರುವದು ಅತ್ಯಂತ ಅಭಿನಂದನೀಯವಾದದ್ದೂ ಸ್ತುತ್ಯವಾದದ್ದೂ ಆಗಿರುತ್ತದೆ. ಶ್ರೀಸ್ವಾಮಿಗಳವರು ಮಹಿಳೆಯರ ವಿಷಯದಲ್ಲಿ ತುಂಬಾ ಶ್ರದ್ಧೆಯನ್ನೂ ಆಸಕ್ತಿಯನ್ನೂ ವಹಿಸಿ ಆಶೀರ್ವದಿಸುತ್ತಿರುವರು. ಇವರಿಗೆ ಕನ್ನಡನಾಡಿನ ಮಹಿಳಾವೃಂದವೇ ಋಣಿಯಾಗಿದೆ.

ನಮ್ಮ ಕನ್ನಡಮ್ಮನ ಹಿರಿಯಪುತ್ರರೂ, ಕನ್ನಡ ನಾಡಿನ ಸೋದರೀ ಸೋದರರಿಗೆ ಹಿರಿಯ ಅಣ್ಣಂದಿರೂ ಆದ ರಾಜಸೇವಾಸಕ್ತ **ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು** ಸೋದರಿಯರ ಉನ್ನತಿಯ ಕಾರ್ಯವನ್ನು ಅತ್ಯಂತ ಕಳಕಳಿಯಿಂದ ಕೈಗೊಂಡು ತಮ್ಮ ಸೋದರಿಯರ ಸಲುವಾಗಿ ಎಷ್ಟೋ ಶ್ರಮವಹಿಸುತ್ತಿರುವರು. ಇವರಿಗೆ ಕನ್ನಡ ನಾಡಿನ ಮಹಿಳೆಯರು ಎಷ್ಟು ಕೃತಜ್ಞತೆಗಳನ್ನರ್ಪಿಸಿದರೂ ಸಾಲದು. ಇವರಂತೆ ನಮ್ಮೆಲ್ಲ ಸೋದರರು, ಸೋದರಿಯರ ವಿಷಯದಲ್ಲಿ ದಯತೋರಿಸಿದ್ದಾದರೆ ನಮ್ಮ ಮಹಿಳಾ ಸಮಾಜದ ದೈವವೇ ತೆರೆಯಿತೆನ್ನಬಹುದು. ಇಂಥ ಸದ್ಬುದ್ಧಿಯನ್ನು ಸೋದರರಿಗೆ ದಯಪಾಲಿಸಬೇಕೆಂದು ಪರಮೇಶ್ವರನನ್ನು ಪ್ರಾರ್ಥಿಸುತ್ತೇನೆ.

### ಹಿಂದಿನ ಏಳ್ಗೆ

ಸಾಹಿತ್ಯ ಜನಜೀವನದ ವಾಣಿಯಾದುದರಿಂದ ಅದರಲ್ಲಿ ಲಿಂಗಭೇದಕ್ಕೆಡೆಯಿಲ್ಲವೆಂಬುದು ಸ್ವತಸ್ಸಿದ್ಧವಾದ ಮಾತು. ಸಾಹಿತ್ಯ ಅನುಭವದ ತಿರುಳಿಂದ ಮೇಲೆ ಅದು ವಿಶಿಷ್ಟ ಜಾತಿಗಷ್ಟೇ ಅನ್ವಯಿಸುವುದಿಲ್ಲ. ಮಾನವಜಾತಿಗೆ ಸೇರಿದವರಿಗೆಲ್ಲ ಅದು ಮೂಲಭೂತವಾದುದು. ಸಾಹಿತ್ಯ ದೇವಿ ಪಕ್ಷಪಾತರಹಿತಳು. ಆಕೆಗೆ ಬೇಕಾದುದು ಸಾಮೂಹಿಕ ಪೂಜೆ.

ಸಾಹಿತ್ಯದ ಮೂಲ ಕರ್ತೃಗಳು ಸ್ತ್ರೀಯರೇ; ಆನಂದದಲ್ಲಿರುವಾಗ, ದುಃಖದಲ್ಲಿರುವಾಗ, ಮೋಹಗೊಂಡಾಗ, ಭಕ್ತಿಯಲ್ಲಿ ಲೀನವಾದಾಗ ಸ್ತ್ರೀಯರ ಹೃದಯದಿಂದ ಹೊರಟ ಉದ್ಗಾರಗಳೇ ಸಾಹಿತ್ಯವಾಗಿದೆ. ಮುಂದೆ ಇದಕ್ಕೆ ಸಾಹಿತ್ಯದ ರೂಪ ಬಂದು ಸಾಹಿತ್ಯ ಪ್ರಚಾರವಾಗಿದೆ. ಅಂತೆಯೇ ಸಾಹಿತ್ಯಕ್ಕೆ ಸ್ತ್ರೀರೂಪ ಬಂದು, ಶಾರದೆ, ಸರಸ್ವತಿ, ಎಂಬ ಪದವು ಸ್ತ್ರೀಗೆ ದೊರೆತಿದೆ.

ವೇದಕಾಲದಲ್ಲಿಯ ಸ್ತ್ರೀ ಸಾಹಿತಿಗಳ ಕೆಲವರ ಹೆಸರನ್ನು ಮಾತ್ರ ಇಲ್ಲಿ ಕೊಟ್ಟಿದೆ. ಘೋಷಾ, ಗೋಧಾ, ವಿಶ್ವವಾರಾ, ಲೋಪಾಮುದ್ರಾ, ಅಪಾಲಾ, ರೋಮಶಾ, ಶಾಶ್ವತಿ ಈ ಮಹಿಳೆಯರು ಮಂತ್ರಗಳನ್ನೂ ಋಕ್ಕುಗಳನ್ನೂ ರಚಿಸಿರುವರು. ಸುಲಭಾ, ವಡವಾ, ಪ್ರಥಿಕೇಯಿ, ಗಾರ್ಗಿ, ಮೈತ್ರೇಯಿ, ಕಾಶಕೃತ್ಸ್ನಿ ಈ ಮಹಿಳೆಯರು ಬ್ರಹ್ಮವಾದಿನಿಯರೆಂದು ಜಗತ್ಪ್ರಸಿದ್ಧರಾಗಿರುವರು. ಬುದ್ಧನ ಕಾಲದಲ್ಲಿಯೂ ಅನೇಕ ಮಹಿಳೆಯರು ಬುದ್ಧನ ತತ್ತ್ವವನ್ನು ಪರದೇಶದಲ್ಲಿಯೂ ಸಾರಿದ್ದಾರೆ. ಐವತ್ತು ಜನ ಸ್ತ್ರೀಯರು ಸೇರಿ 'ಥೇರೀಗಾಥಾ' ಎಂಬ ದೊಡ್ಡ ಗ್ರಂಥವನ್ನು ರಚಿಸಿರುವರು. ಇನ್ನೂ ಅನೇಕ ಮಹಿಳೆಯರು ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಅವು ಬೆಳಕಿಗೆ ಬಂದಿಲ್ಲ.

ಪೂರ್ವಜರು ಲಿಂಗಭೇದ ಜಾತಿಭೇದಗಳನ್ನು ನೋಡದೆ ಎಲ್ಲರಲ್ಲೂ ಪರಮಾತ್ಮನೊಬ್ಬನೇ ಎಂದು ತಿಳಿಯುತ್ತಿದ್ದರು. ಸ್ತ್ರೀ ಅಜ್ಞಾನಿಯಾಗಿ ಉಳಿದರೆ ಮಾನವನ ಮುಕ್ತಿಗೆ ಆತಂಕವೆಂತಲೂ, ಸಂಸಾರ ಸುಖಮಯವಾಗಿಯೂ, ಸುರಕ್ಷಿತವಾಗಿಯೂ ಸಾಗಲಾರದೆಂದೂ, ಸಮಾಜದ ಏಳ್ಗೆ, ದೇಶದ ಕಲ್ಯಾಣ ಆಗಲಾರದೆಂದೂ – ಹೀಗೆ ಮುಂದಿನ ಭವಿಷ್ಯವನ್ನರಿತು ಗಂಡುಮಕ್ಕಳಂತೆ ಹೆಣ್ಣುಮಕ್ಕಳಿಗೂ ವಿದ್ಯೆಯನ್ನು ಕಲಿಸಿ, ಸಮಾಜದಲ್ಲಿ ಉನ್ನತಸ್ಥಾನ ಕೊಟ್ಟು ಸ್ತ್ರೀಯರೊಡನೆ ಬಹು ಆದರದಿಂದ ನಡೆದುಕೊಳ್ಳುತ್ತಿದ್ದರು. ಸ್ತ್ರೀಯರ ಏಳ್ಗೆಯ ವಿಷಯದಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸುತ್ತಿದ್ದ ಮೂಲಕ ಆ ಕಾಲದಲ್ಲಿ ಎಷ್ಟೋ ಜನ ಸ್ತ್ರೀ – ಪುರುಷರು ತಮ್ಮ ಜನ್ಮಸಾಫಲ್ಯ ಮಾಡಿಕೊಂಡಿದ್ದಲ್ಲದೆ ಮುಂದಿನ ಜನಾಂಗವನ್ನು ಅಭಿವೃದ್ಧಿಗೆ ತಂದರು.

ಜರುಜರುತ್ತ ಸ್ತ್ರೀ ಸ್ವಾತಂತ್ರ್ಯ ಕಡಮೆಯಾಗಿ ಸ್ತ್ರೀ – ಪುರುಷರ ಜೀವನ ಕರ್ತವ್ಯಗಳು ನಿರ್ಣಯಿಸಲ್ಪಟ್ಟವು. ಅನಂತರ ಸ್ತ್ರೀ ವಿದ್ಯಾಭ್ಯಾಸದಲ್ಲೂ ಪರಿವರ್ತನೆಯುಂಟಾಗಿ ಸ್ತ್ರೀಯರು ವೇದಗಳನ್ನು ಓದಬಾರದೆಂತಲೂ ಧರ್ಮದಲ್ಲಿ ಕೈಹಾಕಬಾರದೆಂತಲೂ, ಹೀಗೆ ಸ್ತ್ರೀಯರ ಜ್ಞಾನದ ಬೆಳವಣಿಗೆಗೆ ನಾನಾ ತರದ ಅಡ್ಡಿಗಳುಂಟಾಗಲು ಸ್ತ್ರೀಯರ ಜ್ಞಾನ ಕುಗ್ಗುತ್ತಾ ಬಂದು, ಸ್ತ್ರೀ ಸಾಹಿತ್ಯ ನಶಿಸುತ್ತಾ ಬಂದಿತು. ಮುಂದೆ ಸಾಮಾನ್ಯ ಜನರಿಗೂ ಸಾಹಿತ್ಯ ಸೇವೆಗೆ ಅಡ್ಡಿ ಬಂದು ಬರುಬರುತ್ತ ಸಾಹಿತ್ಯ ಪಂಡಿತರ ಸೊತ್ತೇ ಆಗಿಬಿಟ್ಟಿತು. ಆದರೂ ಸಹ ಆಯಾ ಕಾಲಮಾನಕ್ಕನುಸಾರವಾಗಿ ಸ್ತ್ರೀಯರು ತಮಗೆ ಸಾಧ್ಯವಾದಷ್ಟು ಸಾಹಿತ್ಯಸೇವೆಯನ್ನು ಮಾಡುತ್ತಲೇ ಬಂದಿದ್ದಾರೆ.

### ಕನ್ನಡ ನಾಡಿನ ನಾರಿಯರ ಹಿಂದಿನ ಹಿರಿಮೆ

ನಮ್ಮ ಕನ್ನಡ ನಾಡಿನ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಸ್ತ್ರೀ ರತ್ನಗಳು ಕಂಗೊಳಿಸುವುವು. ವೀರಶೈವರೂ, ಜೈನರೂ, ಬ್ರಾಹ್ಮಣರೂ, ಕ್ಷತ್ರಿಯರೂ ಹೀಗೆ ಎಲ್ಲ ಮಹಿಳೆಯರೂ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಸಾಹಿತ್ಯದಲ್ಲಿ ಬದಲಾವಣೆ ಆಗಿ ಸಾಮಾನ್ಯ ಜನರಿಗೂ, ಸ್ತ್ರೀಯರಿಗೂ ಸಾಹಿತ್ಯ ಕ್ಷೇತ್ರದಲ್ಲಿ ಆಶ್ರಯ ದೊರೆತಿದ್ದುದರಿಂದ ಆ ಕಾಲದಲ್ಲಿ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಅದರಲ್ಲೂ ವೀರಶೈವ ಮಹಿಳೆಯರ ಸಾಹಿತ್ಯ ಹೆಚ್ಚಾಗಿದ್ದು ಬಹು ಉನ್ನತಸ್ಥಾನವನ್ನು ಪಡೆದಿದೆ. ನೀಲಮ್ಮ, ಲಿಂಗಮ್ಮ, ಕಾಳಿಮ್ಮ, ಸತ್ಯಕ್ಕ, ಮುಕ್ತಾಯಕ್ಕ, ಶಿವಮಾಯಿದೇವಿ, ಶಾಂಭವೀದೇವಿ, ಬಿಜ್ಜಳದೇವಿ, ಮಹಾದೇವಿ ಹೀಗೆಷ್ಟೋ ಮಹಿಳೆಯರು ಅನೇಕ ವಚನಗಳನ್ನು ರಚಿಸಿ ಸ್ವಾನುಭಾವದ ಸಾರವನ್ನೂ, ಜ್ಞಾನದ ಝರಿಯನ್ನೂ ಹರಿಸಿ, ಕನ್ನಡ ನಾಡಿಗೆ ಮಹೋಪಕಾರ ಮಾಡಿದ್ದಾರೆ. ಈ ಮಹಿಳೆಯರು ರಚಿಸಿರುವ ವಚನ ಗ್ರಂಥಗಳು ಕನ್ನಡ ವೇದೋಪನಿಷತ್ತುಗಳೆಂದು ಕರೆಯಲ್ಪಟ್ಟಿವೆ. ಇವು ಈಗಲೂ ಕನ್ನಡ ಜನಾಂಗಕ್ಕೆ ಕೈದೀವಿಗೆಯಂತಿವೆ. ವಚನಕಾರರಲ್ಲಿ ಶ್ರೀ ಮಹಾದೇವಿಯಕ್ಕನವರ

ವಚನಗಳು ಅತ್ಯಂತ ಮಧುರವೂ, ಭಾವಗರ್ಭಿತವೂ ಇರುತ್ತವೆ. ಇವುಗಳ ಮಹತ್ವವನ್ನು ಹೀಗೆ ವರ್ಣಿಸಿದ್ದಾರೆ:

ಅದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯಾ (ಶ್ರೀ ಚೆನ್ನಬಸವೇಶ್ವರ)

ಇದರಂತೆ ಶ್ರೀ ಮಹಾತ್ಮಾ ಬಸವಣ್ಣನವರೂ, ಪ್ರಭುದೇವರೂ, ದೊಡ್ಡ ದೊಡ್ಡ ಮಹನೀಯರೂ ಈಕೆಯ ವಚನಗಳನ್ನು ಬಹಳವಾಗಿ ಕೊಂಡಾಡಿದ್ದಾರೆ. ಯಾವುದೇ ಕೆಲಸ ಏಳ್ಗೆಯಾಗಬೇಕಾದರೆ ಸ್ತ್ರೀ–ಪುರುಷರು ಕೂಡಿ ಮಾಡಿದ ಕಾರ್ಯಗಳು ಬಹು ಬೇಗನೆ ಅಭಿವೃದ್ಧಿಗೆ ಬರುವವು. ೧೨ನೆಯ ಶತಮಾನದಲ್ಲಿ ಶ್ರೀ ಮಹಾತ್ಮಾ ಬಸವಣ್ಣನವರು ಧರ್ಮಪ್ರಚಾರ ಕಾಲದಲ್ಲಿ ಸ್ತ್ರೀಯರನ್ನು ಕೂಡಿಸಿಕೊಂಡು ಸಾಹಿತ್ಯದಲ್ಲಿ ಧರ್ಮದಲ್ಲಿ ಸರಿಸ್ಥಾನ ಕೊಟ್ಟು ಸ್ತ್ರೀ ಶಿಕ್ಷಣಕ್ಕೂ, ಸ್ತ್ರೀ ಸಾಹಿತ್ಯಕ್ಕೂ ಹೆಚ್ಚು ಪ್ರೋತ್ಸಾಹ ಕೊಟ್ಟದ್ದರಿಂದ ಸಾಹಿತ್ಯವೂ ವಿಸ್ತರಿಸಿತಲ್ಲದೆ ಕೇವಲ ಅಲ್ಪಕಾಲದಲ್ಲೇ ವೀರಶೈವ ಧರ್ಮ ಇಡಿಯ ಭರತಖಂಡದಲ್ಲಿ ವ್ಯಾಪಿಸಿಬಿಟ್ಟಿತು. ಆದರೆ ಆಗಿನ ಮಹಿಳೆಯರ ಪ್ರಗತಿಗೆ ಅಂದಿನ ಸಮಾಜದ ಬೆಂಬಲ, ಅರಸರ ಕೃಪಾವೃಷ್ಟಿಯೇ ಮುಖ್ಯ ಕಾರಣವೆಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯ ಕಾಲದಲ್ಲೂ ಸ್ತ್ರೀಯರ ಶಿಕ್ಷಣಕ್ಕೂ, ಸಾಹಿತ್ಯ ಕಲೆಗಳಿಗೂ ಹೆಚ್ಚು ಪ್ರೋತ್ಸಾಹವಿತ್ತೆಂದು ಇತಿಹಾಸದಿಂದ ಕಂಡುಬರುತ್ತದೆ. ಬುಕ್ಕರಾಯನ ಸೊಸೆಯಾದ ಗಂಗಾದೇವಿ 'ಮಧುರಾ ವಿಜಯ'ವೆಂಬ ಗ್ರಂಥವನ್ನು ರಚಿಸಿರುವಳು. ಮುಂದೆಯೂ ಕೂಡ ಗಿರಿಯಮ್ಮ, ಶೃಂಗಾರಮ್ಮ, ಹೊನ್ನಮ್ಮ ಈ ಮಹಿಳೆಯರೂ ಉತ್ತಮ ಗ್ರಂಥಗಳನ್ನು ರಚಿಸಿರುವರು. ಇವು ಈಗಲೂ ಸಮಾಜದಲ್ಲಿ ಬೆಳಗುತ್ತಿರುವುವು. ಹೀಗೆಷ್ಟೋ ಮಹಿಳೆಯರು ಕನ್ನಡ ಭಾಷೆಯ ಸೇವೆಯನ್ನು ಮಾಡಿ ಕನ್ನಡದ ಜ್ಞಾನಜ್ಯೋತಿಯನ್ನು ಬೆಳಗಿದ್ದಾರೆ.

ಹಿಂದಕ್ಕೆ ಕನ್ನಡ ನಾಡು ಕವಿಗಳ ಗೂಡೆಂತಲೂ, ವಿದ್ವತ್ ಶಿಖಾಮಣಿಗಳ ನಾಡೆಂತಲೂ ಕಲೆಗಳ ನೆಲೆವೀಡೆಂತಲೂ ಖ್ಯಾತಿ ಪಡೆದಿದೆ. ಇದರಂತೆ ವೀರ ನಾರಿಯರ ನಾಡೆಂತಲೂ, ಕೆಚ್ಚೆದೆಯ ಮಹಿಳೆಯರ ಬೀಡೆಂತಲೂ ಜಗತ್ಪ್ರಸಿದ್ಧವಾಗಿದೆ. ನಾಡಿನ ಸ್ವಾತಂತ್ರ್ಯಕ್ಕಾಗಿ ನಮ್ಮ ನಾಡಿನ ನಾರಿಯರು ಶತ್ರುಗಳೊಡನೆ ಸಮರಾಂಗಣದಲ್ಲಿ ಧುಮುಕಿ ಶೂರತನದಿಂದ ಹೋರಾಡಿ, ಯಶಸ್ಸು ಪಡೆದು ಕನ್ನಡದ ಪತಾಕೆಯನ್ನು ಹಾರಿಸಿದ್ದಾರೆ. ಕೆಲವರು ನಾಡಿನ ಸ್ವಾತಂತ್ರ್ಯಕ್ಕಾಗಿ ತಮ್ಮ ಆತ್ಮವನ್ನೇ ಬಲಿಗೊಟ್ಟು ವೀರಸ್ವರ್ಗವನ್ನೈದಿ ಈಗಲೂ ನಮಗೆ ಆದರ್ಶಮಾತೆಯರಾಗಿದ್ದಾರೆ. ಪರ ರಾಷ್ಟ್ರದವರನ್ನು ಸಹ ಚಕಿತಗೊಳಿಸಿದ ವೀರರಾಣಿ ಕಿತ್ತೂರ ಚನ್ನಮ್ಮ, ಶೂರ ಶಿವಾಜಿಯನ್ನು ಎದುರಿಸಿದ ವೀರರಾಣಿ ಬೆಳವಡಿ ಮಲ್ಲಮ್ಮ, ಮೊಗಲರೊಡನೆ ಕೆಚ್ಚೆದೆಯಿಂದ ಹೋರಾಡಿದ ವೀರರಾಣಿ ಚನ್ನಮಾಜಿ ಈ ಮಹಿಳೆಯರ ವೀರತ್ವವು ಇತಿಹಾಸ ಪ್ರಸಿದ್ಧವಾಗಿದೆ. ಅಲ್ಲದೆ ನಮ್ಮ ಮಹಿಳೆಯರು ಕಲಾಕೌಶಲ್ಯಗಳಲ್ಲಿ ಬಹು ನೈಪುಣ್ಯವನ್ನು ಪಡೆದು ಅಗ್ರಗಣ್ಯಸ್ಥಾನವನ್ನು ಪಡೆದಿರುತ್ತಾರೆ. ಹೀಗೆ ಶೌರ್ಯ, ಧೈರ್ಯ, ಸಾಹಸ, ಸತ್ಯ, ಅಹಿಂಸೆ, ಧರ್ಮ, ಸಾಹಿತ್ಯ, ಲಲಿತಕಲೆ ಮುಂತಾದುವುಗಳಲ್ಲಿ ನಮ್ಮ ನಾಡಿನ ನಾರಿಯರು ಎಷ್ಟೋ ಮುಂದುವರಿದು ಕೆಲಸ ಮಾಡಿದ್ದಾರೆ. ಈ ರೀತಿ ನಾಡಿನ ಏಳ್ಗೆಯ ಕಾರ್ಯದಲ್ಲಿ ಸ್ತ್ರೀ ಪುರುಷರು ಸಹಕರಿಸಿ ಕೆಲಸ ಮಾಡುತ್ತಿದ್ದುದರಿಂದ ಹಿಂದಕ್ಕೆ ನಮ್ಮ ನಾಡು ಬಹು ಉನ್ನತ ಶಿಖರಕ್ಕೆ ಮುಟ್ಟಿ, ಸುಂದರ ನಾಡು, ವೈಭವದ ಬೀಡು, ಸುವರ್ಣದ ನೆಲೆವೀಡುಗಳೆಂದು ನಾನಾ ತರದ ಖ್ಯಾತಿಯನ್ನು ಪಡೆದು, ಇಡಿಯ ಭರತ ಖಂಡಕ್ಕೇ ಆದರ್ಶವಾಗಿತ್ತು.

**ಅಳಿಗಾಲ**

ಬರುಬರುತ್ತ ನಮ್ಮ ಕನ್ನಡ ನಾಡಿನ ಮೇಲೆ ಬಹು ದೊಡ್ಡ ವಿಪತ್ತು ಬಂದೊದಗಿ, ಕನ್ನಡ ಜನಾಂಗದ ಮೇಲೆ ನಾನಾ ತರದ ದಾಳಿಗಳಾದುವು. ಜನಾಂಗವು ಅತಿ ದುಃಖ, ಸಂಕಟಗಳಿಗೆ ಗುರಿಯಾಗಿ ಕೊನೆಗೆ ಕನ್ನಡಿಗರ ದುರ್ದೈವದಿಂದ ಕನ್ನಡ ನಾಡು ಪರಾಕ್ರಾಂತವಾಯಿತೆಂದು ಕಡುದುಃಖದಿಂದ ಹೇಳಬೇಕಾಗುತ್ತದೆ. ಈ ಪ್ರವಾಹ ನಾರೀಸಮಾಜದ ಮೇಲೂ ಹಾಯ್ದು ಮಹಿಳೆಯರಿಗೆ ತಮ್ಮ ಶೀಲ, ಕುಲ, ಧೈರ್ಯಗಳನ್ನು ಕಾಯ್ದುಕೊಳ್ಳುವುದೇ ದುಸ್ತರವಾಗಿ ಸ್ತ್ರೀ ಸಮಾಜ ಕೋಣೆಯಲ್ಲಿ ಕೊಳೆಯಬೇಕಾಯಿತು. ಅನಂತರ ಆಂಧ್ರರೂ, ಮಹಾರಾಷ್ಟ್ರರೂ, ಮಹಮ್ಮದೀಯರೂ, ವಿಸ್ತಾರಗೊಂಡಿದ್ದ ಕನ್ನಡ ನಾಡನ್ನು ಕಡಿದು ಕಡಿದು, ತುಂಡು ತುಂಡು ಮಾಡಿ ಹರಿದು ಹಂಚಿ ತಮ್ಮ ತಮ್ಮ ಸ್ವತಂತ್ರ ಪ್ರಾಂತಗಳನ್ನಾಗಿ ಮಾಡಿಕೊಂಡರು. ಆಯಾ ಪ್ರಾಂತದವರು ತಮ್ಮತಮ್ಮ ಭಾಷೆ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ಕೊಡುತ್ತಾ ಕನ್ನಡ ಸಾಹಿತ್ಯ ಕಲೆಗಳನ್ನು ಕಣ್ಮರೆಯಾಗುವಂತೆ ಮಾಡಿದರು. ಹೀಗೆ ಎಷ್ಟೋ ವರ್ಷಗಳಿಂದಲೂ ಸ್ತ್ರೀಯರಿಗೆ ವಿದ್ಯಾಪ್ರಸಾರವಿಲ್ಲದೆ, ಜ್ಞಾನಾಮೃತವಿಲ್ಲದೆ ಸ್ತ್ರೀಯರ ಜ್ಞಾನಜ್ಯೋತಿಯೆಲ್ಲಾ ಕೋಣೆಯಲ್ಲಿಯೇ ನಂದಿಹೋಯಿತು. ಸ್ತ್ರೀಯರ ಸ್ಥೈರ್ಯ ಧೈರ್ಯಗಳು ಕುಗ್ಗಿದವು. ಸ್ತ್ರೀ ಸಾಹಿತ್ಯ ನಶಿಸಿತು.

(ಮುಂದುವರಿಯುವುದು.)

## ಕೋಲ್‌ರಿಜ್ ಕವಿಯ ಮಾತು

**ಗದ್ಯ – ಪದ್ಯ**

ನಮ್ಮ ಚತುರರಾದ ತರುಣ ಕವಿಗಳು ಗದ್ಯ ಪದ್ಯಗಳ ವಿಷಯವಾಗಿ ನನ್ನ ಸರಳ ಸೂತ್ರವನ್ನು ನೆನಪಿನಲ್ಲಿ ಇಟ್ಟುಕೊಳ್ಳಲೆಂದು ಬಯಸುತ್ತೇನೆ; ಅದು ಏನೆಂದರೆ,—ಶಬ್ದಗಳು ತಮ್ಮ ಉತ್ತಮ ಕ್ರಮದಲ್ಲಿ (ಎಂದರೆ, ಯಾವ ಯಾವ ಶಬ್ದ ಯಾವ ಎಡೆಯಲ್ಲಿ ಇದ್ದರೆ ಅರ್ಥ ಸುಸ್ಪಷ್ಟವಾಗುವುದೋ ಆ ಕ್ರಮದಲ್ಲಿ) ಇದ್ದರೆ ಅದು ಗದ್ಯ; ಉತ್ತಮ ಶಬ್ದಗಳು ಉತ್ತಮ ಕ್ರಮದಲ್ಲಿ ಇದ್ದರೆ ಅದು ಪದ್ಯ.

**ವರ್ಣಚಿತ್ರ**

ವರ್ಣಚಿತ್ರ ಸರಿಸುಮಾರಾಗಿ ಒಂದು ಭಾವನೆಗೂ ವಸ್ತುವಿಗೂ ನಡುವಣದು. (ಮನೋಭಾವನೆಯನ್ನು ವರ್ಣ ಮೂಲಕ ಚಿತ್ರಿಸಿ ಅದಕ್ಕೆ ವ್ಯಕ್ತ ಸ್ವರೂಪ ಕೊಡುವುದರಿಂದ ಚಿತ್ರ ಬರಿಯ ಭಾವನೆಗಿಂತ ಮೇಲಿನ ಮಟ್ಟದ್ದು; ಚಿತ್ರಿತ ಸ್ವರೂಪದಲ್ಲಿ ವಸ್ತುವಿನ ನೆರಳು ಮಾತ್ರ ಇರುವುದರಿಂದ ಅದು ವಸ್ತುವಿಗಿಂತ ಕೆಳಗಿನದು.)

[ಆವರಣದಲ್ಲಿರುವ ಮಾತು ನನ್ನದು]

--ಎಂ. ವಿ. ಸೀ.

## ಭಗವದ್ಗೀತೆಯಲ್ಲಿ ಪಾಪ–ಪುಣ್ಯ ಮೀಮಾಂಸೆ

(೧೬೧ನೆಯ ಪುಟದಿಂದ ಮುಂದುವರಿದುದು)

ಕರ್ತೃ 'ಸ್ವಭಾವಪ್ರಾಯ'ನಾಗಿದ್ದಾನೆ; ಎಂದರೆ ಹಿಂದಿನಿಂದ ಅನೇಕ ಶಕ್ತಿ–ಸ್ಥಿತಿ–ಗುಣಗಳನ್ನು ಮೈಗೂಡಿಸಿಕೊಂಡಿದ್ದಾನೆ; ಇವು ಅವನ ಹುಟ್ಟುಗುಣಗಳಾಗಿವೆ. ಸಹಜಶಕ್ತಿಯನ್ನನುಸರಿಸಿ, ಅದಕ್ಕೆ ತಕ್ಕುದಾಗಿ ಮಾಡುವ ಕಾರ್ಯಕ್ಕೆ ವ್ಯಕ್ತಿ ಹೊಣೆಗಾರನಲ್ಲ — ಕ್ಷತ್ರಿಯನು ಯುದ್ಧಮಾಡಿದರೆ ಆ ಯುದ್ಧದ ಕರ್ಮಫಲಕ್ಕೆ ಅವನು ಹೊಣೆಗಾರನಲ್ಲ —ಎಂಬ ಮಾತನ್ನು 'ಸ್ವಭಾವನಿಯತಂ ಕರ್ಮ ಕುರ್ವನ್ ನಾಪ್ನೋತಿ ಕಿಲ್ಬಿಷಂ' ಎಂಬ ಕೃಷ್ಣನ ವಚನದಲ್ಲಿ ಹೇಳಿದೆ.

'ಸ್ವಭಾವನಿಯತ' ಎಂದ ಮಾತ್ರಕ್ಕೆ ಕೇವಲ ಪರಂಪರಾಗತ ಕರ್ಮ ಎಂದರ್ಥವಲ್ಲ. ಬೇರೆ ಕರ್ಮವನ್ನು ಮಾಡಬಹುದು, ಮಾಡಲೂ ಬೇಕಾದೀತು; ಅಲ್ಲಿ ಹೊಣೆಗಾರಿಕೆ ತಪ್ಪುವುದು ಜ್ಞಾನದಿಂದ. ಆ ಜ್ಞಾನವೆಂದರೆ

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ

ಎಂದು ಮೊದಲಾಗಿ ಹೇಳಿದ ಆಚರಣಪ್ರಾಯವಾದ ಸಮದರ್ಶಿತ್ವ. (ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ)

ಹೀಗೆ ನೋಡಲಾಗಿ 'ಪಾಪ–ಪುಣ್ಯ'ಗಳು ತ್ರಿಕಾಲಾಬಾಧಿತವಲ್ಲ, ಸ್ವಭಾವನಿಯತಕರ್ಮಾಚರಣೆ ಮತ್ತು ಸಮದರ್ಶಿತ್ವದ ಜ್ಞಾನ ಇವುಗಳಲ್ಲಿ ಪಾಪವೆಂಬುದಿಲ್ಲವೇ ಇಲ್ಲ.

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ

ಎಂಬುದೇ ಈ ವಿಚಾರದಲ್ಲಿ ಗೀತೆಯ ನಿರ್ಧಾರವಾಗಿದೆ.

# ಪರಿಷತ್ತಿನ ಸುದ್ದಿ

### ಕಾರ್ಯಸಮಿತಿಯ ಅಧಿವೇಶನ

ಪರಿಷತ್ತಿನ ಕಾರ್ಯಸಮಿತಿಯ ಎರಡನೆಯ ಅಧಿವೇಶನ ಕಳೆದ ೧೧ನೆಯ ತಾರೀಖು ಭಾನುವಾರ ನಡೆಯಿತು.

### ರಜತ ಮಹೋತ್ಸವ

ಪರಿಷತ್ತಿನ ರಜತ ಮಹೋತ್ಸವದ ಪ್ರಾರಂಭೋತ್ಸವವನ್ನು ನಡಸಿಕೊಡಲು ನಮ್ಮ ಶ್ರೀಮನ್ಮಹಾರಾಜರವರು ಕೃಪೆಮಾಡಿ ಒಪ್ಪಿರುವುದಕ್ಕಾಗಿ ಸಮಿತಿ ತನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸಿ ಒಂದು ನಿರ್ಣಯವನ್ನು ಅಂಗೀಕರಿಸಿತು.

### ವಸಂತ ಸಾಹಿತ್ಯೋತ್ಸವ, ೧೯೪೦

ಈ ವರ್ಷ ಬೆಂಗಳೂರಿನಲ್ಲಿ ಎರಡು ದಿನಗಳೂ, ಇತರ ಪ್ರಾಂತಗಳಲ್ಲಿ ಆಯಾ ಪ್ರಾಂತಸಮಿತಿಯವರು ಗೊತ್ತು ಮಾಡುವ ಸ್ಥಳಗಳಲ್ಲಿಯೂ ಅನುಕೂಲಕಂಡಂತೆ ವಸಂತ ಸಾಹಿತ್ಯೋತ್ಸವವನ್ನು ನಡಸಬಹುದೆಂದು ತೀರ್ಮಾನಿಸಿತು.

### ಗಮಕ ಗೋಷ್ಠಿ

ಪ್ರತಿ ವರ್ಷದಂತೆ ಈ ವರ್ಷವೂ ಗಮಕ ಗೋಷ್ಠಿಯನ್ನು ಏರ್ಪಡಿಸಬೇಕೆಂದೂ, ಶ್ರೀ ಕೆ. ಜಿ. ಸಂಪತ್ಕುಮಾರಾಚಾರ್ಯರನ್ನು ಶಿಕ್ಷಕರಾಗಿರುವಂತೆ ಪ್ರಾರ್ಥಿಸಿಕೊಳ್ಳಬೇಕಂದೂ ಸಮಿತಿ ತೀರ್ಮಾನಿಸಿ, ಪಾಠಕ್ರಮ ಮುಂತಾದುವುಗಳನ್ನು ಗೊತ್ತು ಮಾಡುವ ಬಗ್ಗೆ ಶ್ರೀಗಳಾದ ೧. ಸಿ. ಕೆ. ವೆಂಕಟರಾಮಯ್ಯನವರು, ೨. ಎಚ್. ಯೋಗನರಸಿಂಹಂ ಅವರು ಮತ್ತು ೩. ಶ್ರೀಮತಿ ಬಿ. ರತ್ನಮ್ಮ ಇವರುಗಳನ್ನೊಳಗೊಂಡ ಒಂದು ಸಮಿತಿಯನ್ನು ನೇಮಕಮಾಡಿತು.

## ಪ್ರಾಂತ ಸಮಿತಿಗಳು

**ಮೈಸೂರು ಪ್ರಾಂತ ಸಮಿತಿ :** ಕಳೆದ ೧೧ನೆಯ ತಾರೀಖು ಭಾನುವಾರ ನಡೆದ ಅಧಿವೇಶನದಲ್ಲಿ ಶ್ರೀ ಜ. ಶಾಂತವೀರಪ್ಪ, ಬಿ.ಎ. ಅವರು ಅಧ್ಯಕ್ಷರಾಗಿಯೂ, ಶ್ರೀ ಎಂ. ನರಸಿಂಹಮೂರ್ತಿ, ಬಿ.ಎ. ಅವರು ಗೌರವ ಕಾರ್ಯದರ್ಶಿಗಳಾಗಿಯೂ, ಶ್ರೀಮತಿ ಆರ್. ಕಲ್ಯಾಣಮ್ಮನವರು ಗೌರವ ಕೋಶಾಧಿಕಾರಿಗಳಾಗಿಯೂ ಆರಿಸಲ್ಪಟ್ಟರು.

**ದಕ್ಷಿಣ ಕರ್ನಾಟಕ ಪ್ರಾಂತ ಸಮಿತಿ :** ಜನವರಿ ೧೬ನೆಯ ತಾರೀಖಿನ ದಿನ ನಡೆದ ಅಧಿವೇಶನದಲ್ಲಿ ವಿದ್ವಾನ್ ಶ್ರೀ ಮುಳಿಯ ತಿಮ್ಮಪ್ಪಯ್ಯನವರು ಅಧ್ಯಕ್ಷರಾಗಿಯೂ, ಶ್ರೀ ಕೋಟ ಶಿವರಾಮ ಕಾರಂತರವರು ಗೌರವ ಕಾರ್ಯದರ್ಶಿ ಮತ್ತು ಕೋಶಾಧಿಕಾರಿಗಳಾಗಿಯೂ ಆರಿಸಲ್ಪಟ್ಟರು.

# ಕನ್ನಡ ಸುದ್ದಿ

### ಸೊಲ್ಲಾಪುರ : ಕನ್ನಡ ಪರಿಷತ್ತು

ಬರುವ ಮಾರ್ಚಿ ತಿಂಗಳಲ್ಲಿ (ಬಹುಶಃ ಈಸ್ಟರ್ ಹಬ್ಬದಲ್ಲಿ) ಕನ್ನಡ ಪರಿಷತ್ತಿನ ಮೊದಲನೆಯ ಅಧಿವೇಶನವನ್ನು ಸೊಲ್ಲಾಪುರದಲ್ಲಿ ಕೂಡಿಸಬೇಕೆಂದು ಕರ್ನಾಟಕ ಸಂಘದವರು ನಿರ್ಧರಿಸಿರುವರು. ಆ ಪಟ್ಟಣದಲ್ಲಿಯ ಮತ್ತು ಜಿಲ್ಲೆಯಲ್ಲಿಯ ಕನ್ನಡ ಜನರಲ್ಲಿ ತಮ್ಮ ಭಾಷೆ, ವಾಙ್ಮಯ ಮತ್ತು ಸಂಸ್ಕೃತಿಗಳ ಬಗ್ಗೆ ತಕ್ಕ ಜಾಗ್ರತಿಯನ್ನುಂಟುಮಾಡುವದೇ ಈ ಪರಿಷತ್ತಿನ ಉದ್ದೇಶ. ಇದಲ್ಲದೆ ಬರುವ ವರುಷ ನಡೆಯುವ ಜನಗಣನೆಯ ಸಂಬಂಧದಲ್ಲಿ ಪ್ರತಿಯೊಬ್ಬ ಕನ್ನಡಿಗನೂ ತನ್ನ ಭಾಷೆ, ಜಾತಿ ಮೊದಲಾದವುಗಳನ್ನು ಇದ್ದಕ್ಕಿದ್ದಹಾಗೆ ನಮೂದಿಸಿಕೊಳ್ಳಲು ಪ್ರಯತ್ನಿಸುವುದಕ್ಕೂ, ಸೊಲ್ಲಾಪುರ ತಾಲ್ಲೂಕಿನಲ್ಲಿ ಇರುವ ಸುಮಾರು ೪೦ ಅಚ್ಚಗನ್ನಡ ಹಳ್ಳಿಗಳಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸುವುದಕ್ಕೂ, ಕರ್ನಾಟಕ ಏಕೀಕರಣ ಆಂದೋಲನಕ್ಕೆ ಇಲ್ಲಿಯ ಕನ್ನಡಿಗರೆಲ್ಲರ ಬೆಂಬಲವನ್ನು ಸಂಪಾದಿಸುವುದಕ್ಕೂ ಜನರಲ್ಲಿ ಜಾಗೃತಿ ಉಂಟುಮಾಡುವುದೇ ಸಮ್ಮೇಳನದ ಮುಖ್ಯ ಉದ್ದೇಶವೆಂದು ತಿಳಿಯಬರುತ್ತದೆ.

### ಮಲ್ಲೇಶ್ವರ : ಕರ್ನಾಟಕ ಸಂಘ

೨೮-೧-೪೦ನೆಯ ಭಾನುವಾರ ಮಧ್ಯಾಹ್ನ ಬೆಂಗಳೂರು ನಗರದ ಮಲ್ಲೇಶ್ವರ ಹರವಿನ ಕರ್ನಾಟಕ ಸಂಘದ ಕಾರ್ಯನಿರ್ವಾಹಕ ಸಮಿತಿ ಶ್ರೀರಾಮ ಭಜನ ಸಭಾಮಂದಿರದಲ್ಲಿ ಸೇರಿ ಮುಂದಿನ ಕಾರ್ಯಕ್ರಮಗಳ ಬಗ್ಗೆ ವಿಚಾರ ನಡಸಿತು. ಕೆಲವು ಕಾಲದಿಂದ ಊರಿನಲ್ಲಿಲ್ಲದ ಕಾರ್ಯನಿರ್ವಾಹಕ ಸಮಿತಿಯ ಮೂವರು ಸದಸ್ಯರ ಸ್ಥಾನಗಳಲ್ಲಿ ಶ್ರೀಗಳಾದ ಬೆನಗಲ್ ರಾಮರಾವ್, ಎಂ.ಎ., ಎಲ್ಎಲ್.ಬಿ., ಎಂ. ಎಸ್. ಗೋಪಾಲರಾವ್ ಮತ್ತು ಡಿ. ರಾಮಯ್ಯ ಇವರನ್ನು ಆರಿಸಲಾಯ್ತು. ಈಗಿನ ಕಾರ್ಯದರ್ಶಿಗಳಾದ ಶ್ರೀ ಮೆಂಬಾರ್ ವೆಂಕಟಾಚಾರ್ಯರ ಜೊತೆಗೆ ಶ್ರೀ ಎಂ. ಎಸ್. ಗೋಪಾಲರಾಯರು ಜಂಟಿ ಕಾರ್ಯದರ್ಶಿಗಳಾಗಿಯೂ ಶ್ರೀ ಡಿ. ರಾಮಯ್ಯನವರು ಸಹಾಯಕ ಕಾರ್ಯದರ್ಶಿಗಳಾಗಿಯೂ ಇರತಕ್ಕದೆಂದು ತೀರ್ಮಾನವಾಯಿತು.

ಇನ್ನು ಮೇಲೆ ಪ್ರತಿ ತಿಂಗಳಲ್ಲಿಯೂ ಒಂದೆರಡು ಕಾರ್ಯಗಳನ್ನೇರ್ಪಡಿಸಬೇಕೆಂದೂ ಇದಕ್ಕೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರೇ ಮೊದಲಾದ ವಿದ್ವಾಂಸರ ಸಹಾಯವನ್ನು ಈ ಬಗ್ಗೆ ಕೇಳಿಕೊಳ್ಳಬೇಕೆಂದೂ ನಿರ್ಧಾರವಾಯಿತು.

ಸಂಘದವರ ಬಿನ್ನಹಕ್ಕೆ ಆದರದಿಂದ ಮನ್ನಣೆಕೊಟ್ಟು ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರು ೨೯-೧-೪೦ನೆಯ ಸೋಮವಾರ ಸಂಜೆ ಸಂಘದ ಆಶ್ರಯದಲ್ಲಿ 'ವಾಲ್ಮೀಕಿಯ ಕವಿತೆ'ಯ ವಿಚಾರವಾಗಿ ಒಂದು ಅಮೋಘವಾದ, ಅತ್ಯುಜ್ವಲವಾದ ಭಾಷಣ ಮಾಡಿದರು.

### ಬೆಂಗಳೂರು : 'ತಿರುಪಾಣಿ' ನಾಟಕ ಪ್ರದರ್ಶನ

ಬಸವನಗುಡಿಯಲ್ಲಿರುವ ಶ್ರೀ ರಾಮಕೃಷ್ಣಾಶ್ರಮದಲ್ಲಿ ವಿವೇಕ ಸಾಧನ ಸಂಘದ ಸದಸ್ಯರು 'ಶ್ರೀನಿವಾಸ' ರಚಿತ 'ತಿರುಪಾಣಿ' ನಾಟಕವನ್ನು ಕಳೆದ ೧೦ನೆಯ ತಾರೀಖು ಶನಿವಾರ ಸಂಜೆ ಪ್ರದರ್ಶಿಸಿದರು. ನಟರ ಹಾಡಿಕೆ, ಅಭಿನಯ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾದುವು.

### ಚಿಂತಾಮಣಿ : ಕರ್ನಾಟಕ ಸಂಘ

ಕೋಲಾರ ಜಿಲ್ಲೆಯ ಕೇಂದ್ರ ಕರ್ನಾಟಕ ಸಂಘದ ಕಾರ್ಯದರ್ಶಿಗಳಾದ ಶ್ರೀ ಎಂ. ವೆಂಕಟಕೃಷ್ಣಪ್ಪನವರು ಕಳೆದ ೯ನೆಯ ತಾರೀಖು ಚಿಂತಾಮಣಿ ಕರ್ನಾಟಕ ಸಂಘದವರ ಆಹ್ವಾನದಂತೆ ಅಲ್ಲಿಗೆ ದಯಮಾಡಿಸಿ 'ಕುಡುಕನ ಸಾಹಿತ್ಯ'ವನ್ನು ಕುರಿತು ಭಾಷಣ ಮಾಡಿದರು. ಶ್ರೀ ಎಲ್. ಬಾಲಾಜಿರಾಯರು ಅಧ್ಯಕ್ಷತೆ ವಹಿಸಿದ್ದರು.

### ಬೌರಿಂಗ್‌ಪೇಟೆ : ಕರ್ನಾಟಕ ಸಂಘದ ಆರಂಭೋತ್ಸವ

ಬೌರಿಂಗ್‌ಪೇಟೆಯಲ್ಲಿ ಹೊಸದಾಗಿ ಸ್ಥಾಪಿತವಾದ ಕರ್ನಾಟಕ ಸಂಘದ ಆರಂಭೋತ್ಸವ ಕಳೆದ ಫೆಬ್ರವರಿ ೯ನೆಯ ತಾರೀಖು ನಡೆಯಿತು. ಚಿನ್ನದ ಗಣಿಯ ವಿಶೇಷ ನ್ಯಾಯಾಧೀಶರಾದ ಶ್ರೀ ಜೆ. ಬಿ. ಮಲ್ಲಾರಾಧ್ಯರು ಅಧ್ಯಕ್ಷರಾಗಿದ್ದರು. ಕೋಲಾರದ ವೇದಾಂತಶಿರೋಮಣಿ ಬ್ರ॥ ಶ್ರೀ॥ ವೆಂಕಟೇಶ ಶಾಸ್ತ್ರಿಗಳು ಆರಂಭ ಭಾಷಣ ಮಾಡುತ್ತಾ, ಸಂಘ ಚಿರಾಯುವಾಗಿ ಕರ್ನಾಟಕ ಮಾತೆಯ ಸೇವೆಯನ್ನು ನಿರಂತರವಾಗಿ ನಡಸಲೆಂದು ಹಾರೈಸಿದರು. ಅಧ್ಯಕ್ಷರು ಭಾಷಣ ಮಾಡಿದಮೇಲೆ, ಕಾರ್ಯದರ್ಶಿಗಳಾದ ಶ್ರೀ ಎಂ. ಎಸ್. ಲಕ್ಷ್ಮೀನಾರಾಯಣರಾವ್, ಎಂ.ಎ., ಬಿ.ಟಿ. ಅವರು ಧನ್ಯವಾದಗಳನ್ನರ್ಪಿಸಿದರು.

### ಆವನಿ : ಕರ್ನಾಟಕ ಸಂಘ ಸ್ಥಾಪನೆ

ಕಳೆದ ತಿಂಗಳು ೨೮ನೆಯ ತಾರೀಖು ಆವನಿ ಗ್ರಾಮದಲ್ಲಿ ಮಹಾಜನರು ಉತ್ಸಾಹದಿಂದ ನೆರೆದು ರಾಬರ್ಟ್‌ಸನ್‌ಪೇಟೆಯ ಸಹಕಾರ ಸಂಘದ ಕಾರ್ಯದರ್ಶಿಗಳಾದ ಶ್ರೀ ವೆಂಕಟರಾಮಯ್ಯನವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸಂಘವನ್ನು ಸ್ಥಾಪಿಸಿದರು.

### ಸಾಗರ : ಕರ್ನಾಟಕ ಸಂಘ

ಸಾಗರ ಕರ್ನಾಟಕ ಸಂಘದ ಎರಡನೆಯ ವಾರ್ಷಿಕೋತ್ಸವ ಬರುವ ಫೆಬ್ರುವರಿ ೧೭ ಮತ್ತು ೧೮ನೆಯ ತಾರೀಖುಗಳಲ್ಲಿ ತರುಣ ಸಾಹಿತಿಗಳಾದ ಶ್ರೀ ತೀ. ನಂ. ಶ್ರೀಕಂಠಯ್ಯ, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ನಡೆಯುವುದು. ೧೭ನೆಯ ತಾ॥ ತೀ. ನಂ. ಶ್ರೀ. ಯವರು 'ಪಂಪ ಭಾರತ'ವನ್ನು ಕುರಿತು ಭಾಷಣಮಾಡುವರು. ಗಮಕ ವಿದ್ವಾನ್ ಶ್ರೀ ಕೆ. ಕೃಷ್ಣರಾಯರು ಭಾರತಪಠನ ಮಾಡುವರು. ೧೮ನೆಯ ತಾರೀಖು ವಾರ್ಷಿಕೋತ್ಸವ ಸಂಬಂಧವಾಗಿ ಕಾವ್ಯವಾಚನ, ನಾಟಕ ಪ್ರದರ್ಶನಗಳು ನಡೆಯುತ್ತವೆ.

### ಕಾಶಿ (ಬನಾರಸ್) : ಕರ್ನಾಟಕ ಸಂಘದ ೧೬ನೆಯ ವಾರ್ಷಿಕೋತ್ಸವ

(ಕಾರ್ಯದರ್ಶಿಗಳಿಂದ ಬರೆದು ಬಂದುದು)

ಈ ಸಂಘ ಹದಿನೈದು ವರ್ಷಗಳಿಗೆ ಹಿಂದೆ ಕಾಶೀ ವಿಶ್ವವಿದ್ಯಾಲಯದಲ್ಲಿ ಜನ್ಮವೆತ್ತಿತು. ಅಂದಿನಿಂದ ಇಂದಿನವರೆಗೆ ಬಹು ಯಶಸ್ವಿಯಾಗಿ ತನ್ನ ಕಾರ್ಯಕಲಾಪಗಳನ್ನು ನಡಸುತ್ತ ಬರುತ್ತಿದೆ. ಡಾ॥ ಬಿ. ವಾಸಣ್ಣಾಚಾರ್ಯರು ಸಂಘದ ಅಧ್ಯಕ್ಷರು. ಸದ್ಯದಲ್ಲಿ ನಮ್ಮ ಸಂಘದಲ್ಲಿ ೪೦ ಜನ ಸದಸ್ಯರು ಇರುತ್ತಾರೆ. ಅವರೆಲ್ಲರೂ ಮೈಸೂರು, ಧಾರವಾಡ, ಕಾರವಾರ, ಮಂಗಳೂರು, ಬೆಳಗಾಂವಿ, ಬಿಜಾಪುರ, ಬಳ್ಳಾರಿ, ಕೊಡಗು ಮೊದಲಾದ ಭಾಗಗಳಿಂದ ಬಂದಿರುತ್ತಾರೆ. ಅವರಲ್ಲಿ ಹತ್ತು ಜನರು ಅಧ್ಯಾಪಕ ವರ್ಗದಲ್ಲಿ ಇರುತ್ತಾರೆ. ಉಳಿದವರೆಲ್ಲರೂ ವಿದ್ಯಾರ್ಜನೆಗಾಗಿ ಬಂದಿರುವವರು. ಅವರು ಇಲ್ಲಿ ಎಂಜಿನಿಯರಿಂಗ್, ಸೈನ್ಸ್, ಆರ್ಟ್ಸ್, ಮೈನಿಂಗ್, ಮೆಟಲರ್ಜಿ, ಕಾಲೇಜ್ ಆಫ್ ಟೆಕ್ನಾಲಜಿ ಮತ್ತು ಆಯುರ್ವೇದಿಕ್, ಮೆಡಿಕಲ್ ಕಾಲೇಜುಗಳಲ್ಲಿ ಓದುತ್ತಿದ್ದಾರೆ.

ಪದ್ಧತಿಗನುಸಾರವಾಗಿ ೧೬ನೆಯ ವಾರ್ಷಿಕೋತ್ಸವವನ್ನು ಲಕ್ನೋ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿರುವ ಡಾ॥ ಎ. ವಿಠಲರಾಯರ ಅಧ್ಯಕ್ಷತೆಯಲ್ಲಿ ಕಳೆದ ತಿಂಗಳು ೨೭ ಮತ್ತು ೨೮ರಲ್ಲಿ ಉತ್ಸಾಹದಿಂದ ನೆರವೇರಿಸಿದೆವು. ೨೭ನೆಯ ತಾರೀಖು ಶ್ರೀ ಗೋಡಬೋಲೆಯವರು ಆತಿಥ್ಯದಲ್ಲಿ ಸಂತೋಷಕೂಟ ನಡೆದ ಮೇಲೆ ಸಾಯಂಕಾಲ ಸೈನ್ಸ್ ಕಾಲೇಜು ಫಿಸಿಕ್ಸ್ ಥಿಯೇಟರಿನಲ್ಲಿ ಶ್ರೀ ಡಾ॥ ವಾಸಣ್ಣಾಚಾರ್ಯರು "ಸೈಕ್ಲೋಟ್ರಾನ್" ಎಂಬ ವಿಷಯವಾಗಿ ಭಾಷಣ ಮಾಡಿದರು.

ಮರುದಿವಸ ೨-೩೦ ಘಂಟೆಗೆ ವಾರ್ಷಿಕೋತ್ಸವದ ಸಾರ್ವಜನಿಕ ಸಭೆ ಸೇರಿತು. ಸಂಘದ ಅಧ್ಯಕ್ಷರು ಆಮಂತ್ರಿತ ಅಧ್ಯಕ್ಷರ ಪರಿಚಯ ಮಾಡಿಕೊಟ್ಟರಲ್ಲದೆ ಅವರಿಗೆ ಸ್ವಾಗತವನ್ನಿತ್ತರು. ಆಮೇಲೆ ಡಾ॥ ಎ. ವಿಠಲರಾಯರು ಅರ್ಧ ಘಂಟೆ ವರೆಗೆ ರಸವತ್ತಾಗಿ ಮಾತನಾಡಿದರು. ತರುವಾಯ ಸಂಘದ ಕಾರ್ಯದರ್ಶಿಗಳಾದ ಶ್ರೀ ಹಿರೇಮಠ ಅವರು ಸಂಘದ ವಾರ್ಷಿಕ ವರದಿಯನ್ನು ಓದಿದರು. ಅದೇ ಕಾಲಕ್ಕೆ ಡಾ॥ ಎಸ್. ಎಸ್. ಗೋಡಬೋಲೆಯವರು ಈ ಸಾರೆ "ಕಾಲೇಜ್ ಆಫ್ ಟೆಕ್ನಾಲಜಿ"ಯ ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟದ್ದಕ್ಕಾಗಿ ಮತ್ತು ಡಾ॥ ಅಸುಂಡಿಯವರು ಇಲ್ಲಿ ಫಿಸಿಕ್ಸ್ ಪ್ರೊಫೆಸರರಾಗಿ ಬಂದದ್ದಕ್ಕಾಗಿ ಅವರಿಗೆ ಸಂಘದ ಪರವಾಗಿ ಅಭಿನಂದನಗಳನ್ನು ಅರ್ಪಿಸಲಾಯಿತು.

ತರುವಾಯ ಪ್ರೊ॥ ಎಸ್. ಎಂ. ಕುಲಕರ್ಣಿ, ಎಂ.ಎ. ಅವರಿಂದ ಬರೆಯಲ್ಪಟ್ಟ '**ದೇವರ ಲೀಲಾವು**' ಎಂಬ ಏಕಾಂಕ ನಾಟಕವನ್ನು ಅಭಿನಯಿಸಿ ತೋರಿಸಲಾಯಿತು. ಶ್ರೀ ಜಠಾರ ಅವರು ತಮ್ಮ ಹಾಸ್ಯದಿಂದ ಸಭಿಕರನ್ನು ನಗೆಗಡಲಿನಲ್ಲಿ ತೇಲಾಡಿಸಿದರು. ಕೊನೆಗೆ 'ಜನಗಣಮನ' ಗೀತೆಯೊಂದಿಗೆ ಅಂದಿನ ಕಾರ್ಯಕ್ರಮ ಸಮಾಪ್ತವಾಯಿತು.

**ಕಲ್ಕತ್ತ : ಮೈಸೂರು ಸಂಘದ ವಾರ್ಷಿಕೋತ್ಸವ**

ಈ ಸಂಘದ ೧೦ನೆಯ ವಾರ್ಷಿಕೋತ್ಸವ ಕಳೆದ ೪ನೆಯ ತಾರೀಖು ನಡೆಯಿತು. ಮುಂದಿನ ವರ್ಷದ ಕಾರ್ಯಸಮಿತಿಯಲ್ಲಿ ಶ್ರೀಗಳಾದ ಡಾ|| ಎಚ್ ಶ್ರೀನಿವಾಸ ರಾವ್ (ಅಧ್ಯಕ್ಷರು), ಎ. ನಾರಾಯಣಸ್ವಾಮಿ (ಕಾರ್ಯದರ್ಶಿ), ಸಿ. ಸುಬ್ಬರಾವ್ (ಕೋಶಾಧಿಕಾರಿ) ಮುಂತಾದ ಮಹನೀಯರು ಇದ್ದಾರೆ.

**ಶಿವಮೊಗ್ಗ : ಕರ್ನಾಟಕ ಸಂಘ**

ಸಂಘದ ಆಶ್ರಯದಲ್ಲಿ ಕಳೆದ ೧೨ನೆಯ ತಾರೀಖು ಬೆಂಗಳೂರಿನ ಶ್ರೀ ಕೆ. ವಿ. ರಾಘವಾಚಾರ್ಯ, ಎಂ.ಎ., ಬಿ.ಟಿ. ಅವರು 'ಶ್ರೀ'ಯವರ 'ಅಶ್ವತ್ಥಾಮನ್' ಎಂಬ ನಾಟಕವನ್ನು ಕುರಿತು ಭಾಷಣಮಾಡಿ, ಗ್ರೀಕ್ ನಾಟಕದ ಥಾಟಿ ಬೆಳವಣಿಗೆಗಳನ್ನೂ 'ಶ್ರೀ'ಯವರ ನಾಟಕದಲ್ಲಿ ಮಾಡಿರುವ ಮಾರ್ಪಾಟಿನ ಸೌಂದರ್ಯವನ್ನೂ ವಿವರಿಸಿದರು.

**ಚಿನ್ನದ ಗಣಿ : ಕರ್ನಾಟಕ ಸಂಘ**

ನಂಜನಗೂಡಿನ ಶ್ರೀ ಬಿ. ಎಂ. ಶಿವರಾಮಯ್ಯನವರು ಈ ತಿಂಗಳು ೨೪ನೆಯ ತಾರೀಖು ಬೌರಿಂಗ್‌ಪೇಟೆ ಕರ್ನಾಟಕ ಸಂಘದಲ್ಲೂ ೨೫ನೆಯ ತಾರೀಖು ಗಣಿ ಕರ್ನಾಟಕ ಸಂಘದಲ್ಲೂ 'ರೋಗಗಳನ್ನು ಜಯಿಸುವುದು' ಎಂಬ ವಿಷಯವಾಗಿ ಭಾಷಣ ಮಾಡುವರು.

**ನಿಡುಮಾಮಿಡಿ ಸಂಸ್ಥಾನ (ಗೂಳೂರು) : ಅನುಭವ ಮಂಟಪದ ಪ್ರಾರಂಭೋತ್ಸವ**

ವಚನಶಾಸ್ತ್ರದ ರಹಸ್ಯವನರಿಯಲು ಯಾವ ವಿಧವಾದ ಅನುಕೂಲವೂ ಇಲ್ಲದಿರುವ ಶ್ರೀ ಗೂಳೂರು ಮಠದ ಸುತ್ತಣ ಪ್ರಾಂತಗಳ ಭಕ್ತಮಂಡಲಿಯ ಸೌಕರ್ಯಾರ್ಥವಾಗಿ ಶ್ರೀ ಮಠದಲ್ಲಿ **ಅನುಭವಮಂಟಪವನ್ನು** ಸ್ಥಾಪಿಸಲಾಗುತ್ತದೆ.

ಇದೇ ತಿಂಗಳು ೨೪ನೆಯ ತಾರೀಖು ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧೀಶ್ವರರಾದ ಶ್ರೀ ಮಹದೇವಸ್ವಾಮಿಗಳವರು ಮಂಟಪದ ಪ್ರಾರಂಭೋತ್ಸವ ನೆರವೇರಿಸುತ್ತಾರೆ.

**ಪುರಂದರದಾಸರ ಪುಣ್ಯದಿನಾಚರಣೆ**

ಮೈಸೂರು, ಹೊಳೇನರಸೀಪುರ, ಹಾಸನ, ಶಿಕಾರಿಪುರ, ಕೋಲಾರ, ಬೆಳಗಾವಿ, ಸಿರಿಯಾಳಕೊಪ್ಪ ಮುಂತಾದ ಕಡೆಗಳಲ್ಲಿ ಕರ್ನಾಟಕ ಸಂಘಗಳವರು ಪುರಂದರದಾಸರ ಪುಣ್ಯದಿನವನ್ನು ವಿಜೃಂಭಣೆಯಿಂದ ಆಚರಿಸಿದರು.

---

## ಪರಿಷತ್ತಿನ ಬೆಳ್ಳಿಯ ಹಬ್ಬ

### "ಕನ್ನಡ ನಾಡಿನ ಹಬ್ಬ"

"ಕನ್ನಡ ಸಾಹಿತ್ಯ ಪರಿಷತ್ತು ಹುಟ್ಟಿ ೨೫ ವರ್ಷಗಳಾದುವು. ಅದರ ಬೆಳ್ಳಿಯ ಹಬ್ಬವನ್ನು ಒಳ್ಳೇ ಸಡಗರದಿಂದ ಆಚರಿಸಬೇಕೆಂದು ಪರಿಷತ್ಸದಸ್ಯರ ಮನೀಷೆ. ಬೆಳಗಾವಿಯ ಸಮ್ಮೇಳನದಲ್ಲಿ ಈ ಹಬ್ಬವನ್ನು ಮೈಸೂರಿನ ಶ್ರೀಮನ್ಮಹಾರಾಜರ ಹಸ್ತದಿಂದ ಜರುಗಿಸಬೇಕೆಂದು ನಿರ್ಣಯಿಸಿ ಮಹಾರಾಜರನ್ನು ಪ್ರಾರ್ಥಿಸಿಕೊಂಡಿತ್ತು. ಅದಕ್ಕೆ ಅವರು ಅನುಗ್ರಹಪೂರ್ವಕವಾಗಿ ಒಪ್ಪಿಕೊಂಡಿರುವರೆಂದು ತಿಳಿಸಲು ನಮಗೆ ಸಂತೋಷವೆನಿಸುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬವೆಂದರೆ ಅದೊಂದು ವ್ಯಕ್ತಿಯ ಅಥವಾ ಸಂಸ್ಥೆಯ ಹಬ್ಬವಲ್ಲ. ಇಡೀ ಕನ್ನಡ ನಾಡಿನ ಹಬ್ಬ. ಆದುದರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಈ ಹಬ್ಬದ ಕಾರ್ಯಕ್ರಮದಲ್ಲಿ ಎಲ್ಲರೂ ಸೇರಿ ಅದನ್ನು ಯಶಸ್ವಿಯಾಗಿ ಮಾಡಬೇಕೆಂದು ನಮ್ಮ ಸೂಚನೆ.

**ಕನ್ನಡ ಪರೀಕ್ಷೆಗಳು**

"ಕನ್ನಡ ಸಾಹಿತ್ಯ ಪರಿಷತ್ತು ಈ ವರ್ಷ ಇನ್ನೊಂದು ಹೊಸ ಕಾರ್ಯಕ್ರಮವನ್ನು ಆರಂಭಿಸಿದೆ. ಸಾಹಿತ್ಯ ಪರೀಕ್ಷೆಗಳೆಂದು ಮೂರು ತರಗತಿಯ ಪರೀಕ್ಷೆಗಳನ್ನು ಏರ್ಪಡಿಸಿ ಅವುಗಳಲ್ಲಿ ಉತ್ತೀರ್ಣರಾದವರಿಗೆ ಪ್ರಶಸ್ತಿಪತ್ರಗಳನ್ನೂ ಪದವಿಗಳನ್ನೂ ಕೊಡಬೇಕೆಂದು ಗೊತ್ತುಪಡಿಸಿದೆ. ಈ ಕಾರ್ಯಕ್ರಮದಿಂದ ಕನ್ನಡಸಾಹಿತ್ಯದ ಸಾರಪೂರ್ಣ ಅಭ್ಯಾಸವಾಗಿ ನೈಜವಾದ ಅಭಿಮಾನ ಕನ್ನಡಿಗರಲ್ಲಿ ಹುಟ್ಟಲನುಕೂಲವಾಗುವುದು. ಕನ್ನಡ ನಾಡು-ನುಡಿಗಳ ಒಣ ಅಭಿಮಾನದ ಕಾಲ ಮುಗಿಯಿತು. ಈಗ ವಿಧಾಯಕ ಹಾಗೂ ಕ್ರಿಯಾತ್ಮಕ ಅಭಿಮಾನ ಕನ್ನಡಿಗರಲ್ಲಿ ಬೆಳೆಯಬೇಕಾಗಿದೆ. ಇದನ್ನು ಮುನ್ನರಿತೇ ಪರಿಷತ್ತಿನ ಅಧಿಕಾರಿಗಳು ಅಲ್ಲಲ್ಲಿ ಸಾಹಿತ್ಯಾಭ್ಯಾಸದ ವರ್ಗಗಳನ್ನು ಕೂಡ ತೆಗೆದಿರುವರು. ಈ ದೃಷ್ಟಿಯಿಂದ ಸಾಹಿತ್ಯ ಪರಿಷತ್ತು ಪ್ರಗತಿ ಪಥದಲ್ಲಿ ನಡೆಯುತ್ತಿರುವುದಕ್ಕಾಗಿ ಅದಕ್ಕೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು."

— ಕರ್ನಾಟಕ ವೈಭವ

## ಪತ್ರ ವ್ಯವಹಾರ

### 'ಕನ್ನಡ ನುಡಿ' ಸಂಪಾದಕರ ಸಮಕ್ಷಕ್ಕೆ

ಮಹಾಶಯರೆ,

ಬೊಂಬಾಯಿ ಪ್ರಾಂತದಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನೂ ಒಳಗೊಂಡ ಕೇಂದ್ರ ಸರಸ್ವತೀ ಭಂಡಾರವೊಂದನ್ನು ಬೊಂಬಾಯಿ ನಗರದಲ್ಲೂ, ಗುಜರಾಥಿ, ಮರಾಠಿ, ಕನ್ನಡ ಗ್ರಂಥಗಳನ್ನು ಮಾತ್ರ ಒಳಗೊಂಡ ಪ್ರಾದೇಶಿಕ ಗ್ರಂಥ ಭಂಡಾರಗಳನ್ನು ಅಹಮ್ಮದಾಬಾದು, ಪೂನಾ, ಧಾರವಾಡಗಳಲ್ಲೂ ಸ್ಥಾಪಿಸಬೇಕೆಂದು ಈಗ್ಗೆ ಕೆಲಕಾಲದ ಹಿಂದೆ ಬೊಂಬಾಯಿ ಸರಕಾರದವರು ಸಂಕಲ್ಪಮಾಡಿದ್ದು ತಮ್ಮ ಗಮನಕ್ಕೆ ಬಂದಿದೆಯೆಂದು ನಾನು ಭಾವಿಸುತ್ತೇನೆ.

ಆ ರೀತಿ ಪ್ರಾದೇಶಿಕ ಗ್ರಂಥ ಭಂಡಾರಗಳನ್ನು ಸ್ಥಾಪಿಸುವ ಪ್ರಯತ್ನ ಅಭಿನಂದನೀಯವೆಂಬುದು ನಿಜವಾದರೂ, ಅಂತಹ ಪ್ರಾದೇಶಿಕ ಗ್ರಂಥ ಭಂಡಾರ ಉಪಯುಕ್ತವಾಗಿರಬೇಕಾದಲ್ಲಿ ಅದರಲ್ಲಿ ಬೊಂಬಾಯಿ ಪ್ರಾಂತದಲ್ಲಿ ಮಾತ್ರ ಪ್ರಕಟವಾದ ಕನ್ನಡ ಗ್ರಂಥಗಳು ಇದ್ದರೆ ಸಾಲದು. ಬೇರೆ ಬೇರೆ ಪ್ರಾಂತ ಸಂಸ್ಥಾನಗಳಿಗೆ ಹಂಚಿ ಹೋಗಿರುವ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಪ್ರಕಟವಾಗುವ ಎಲ್ಲ ಕನ್ನಡ ಗ್ರಂಥಗಳೂ ಆ ಗ್ರಂಥ ಭಂಡಾರದಲ್ಲಿ ಇರಬೇಕಾದುದು ಆವಶ್ಯಕ.

ಅಂತಹ ಗ್ರಂಥ ಭಂಡಾರವನ್ನು ಸ್ಥಾಪಿಸಿ ನಡಸಿಕೊಂಡು ಹೋಗಲು, ಕನ್ನಡ ನಾಡಿನ ಬೇರೆ ಬೇರೆ ಭಾಗಗಳನ್ನು ಒಳಗೊಂಡಿರುವ ಎಲ್ಲ ಸರಕಾರಗಳವರ ಸಹಾನುಭೂತಿಯೂ ಸಹಾಯವೂ ಆವಶ್ಯಕ. ಈ ಎಲ್ಲ ಸರಕಾರಗಳವರೂ ತಮ್ಮ ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರದೇಶದಲ್ಲಿ ಪ್ರಕಟವಾಗುವ ಎಲ್ಲ ಕನ್ನಡ ಗ್ರಂಥಗಳನ್ನೂ ಒಂದೆಡೆಗೆ ಕಳಿಸುವ ಕೃಪೆಮಾಡಿದರೆ ಮಾತ್ರ ಅಂತಹ ಕೇಂದ್ರ ಗ್ರಂಥ ಭಂಡಾರವನ್ನು ಸ್ಥಾಪಿಸಲು ಸಾಧ್ಯವಾಗುವುದು ಎಂಬುದನ್ನು ವಿವರಿಸಿ ಹೇಳಬೇಕಾಗಿಲ್ಲ.

ಈ ಅಂಶವನ್ನು ಗಮನಿಸಿ, ಬೊಂಬಾಯಿ ಸರಕಾರದವರೂ, ಅವರಂತೆ ಕನ್ನಡ ನಾಡಿನ ಇತರ ಸರಕಾರಗಳವರೂ ತಮ್ಮ ತಮ್ಮ ಆಡಳಿತಕ್ಕೆ ಒಳಪಟ್ಟ ಕನ್ನಡ ನಾಡಿನ ಭಾಗದಲ್ಲಿ ಒಂದು ಪ್ರಾದೇಶಿಕ ಗ್ರಂಥ ಭಂಡಾರವನ್ನು ಸ್ಥಾಪಿಸಿ, ಅಲ್ಲಿ ತಮ್ಮ ಪ್ರಾಂತದಲ್ಲಿ ಪ್ರಕಟವಾಗುವ ಕನ್ನಡ ಗ್ರಂಥಗಳನ್ನೆಲ್ಲ ಸಂಗ್ರಹಿಸಿ ಇಡುವುದರ ಜೊತೆಗೆ, ಕೇಂದ್ರ ಕನ್ನಡ ಗ್ರಂಥ ಭಂಡಾರಕ್ಕೂ ತಮ್ಮ ತಮ್ಮ ಪ್ರಾಂತಗಳಲ್ಲಿ ಪ್ರಕಟವಾಗುವ ಕನ್ನಡ ಗ್ರಂಥಗಳ ಒಂದೊಂದು ಪ್ರತಿಯನ್ನು ಕಳಿಸಿಕೊಡುವ ವ್ಯವಸ್ಥೆ ಮಾಡತಕ್ಕದ್ದು ಆವಶ್ಯಕವೆಂದು ಭಾವಿಸುತ್ತೇನೆ.

ಅಲ್ಲದೆ ಅಖಿಲ ಕರ್ನಾಟಕದ ಭಾಷಾ ಸಂಸ್ಕೃತಿಗಳ ಹಿತಸಾಧನೆಗಾಗಿ ದುಡಿಯುತ್ತಿರುವ ಕೇಂದ್ರ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಈ ಕೇಂದ್ರ ಗ್ರಂಥ ಭಂಡಾರ ಸ್ಥಾಪಿಸಲ್ಪಡಬಹುದೆಂದು ನಾನು ಸೂಚಿಸಬಯಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತವರ್ಗದವರೂ, ಕನ್ನಡ ನಾಡಿನ ಐಕ್ಯತೆ ಸಾಧನೆಯ ಬಗ್ಗೆ ಆಸಕ್ತಿಯುಳ್ಳ ಮಹಾಜನರೂ, ಕೇಂದ್ರ ಕನ್ನಡ ಗ್ರಂಥ ಭಂಡಾರದ ಸ್ಥಾಪನೆಯ ಬಗ್ಗೆ ಕನ್ನಡ ನಾಡಿನ ಬೇರೆ ಬೇರೆ ಸರಕಾರಗಳವರ ಸಹಕಾರವನ್ನು ಗಳಿಸಿಕೊಂಡು ಆದಷ್ಟು ಜಾಗ್ರತೆಯಾಗಿ ಅಂತಹ ಗ್ರಂಥ ಭಂಡಾರದ ಸಂಸ್ಥಾಪನೆಗೆ ಪ್ರಯತ್ನ ಮಾಡುವರೆಂದು ನಂಬಿದ್ದೇನೆ.

ಮಾ. ನಾ. ಚೌಡಪ್ಪ,

ತಾ|| ೧೨-೨-೪೦. ಸಹಸಂಪಾದಕ, 'ಪ್ರಜಾಮತ' ಬೆಂಗಳೂರು.

**ಈ ಪತ್ರಿಕೆ 'ಮೈಸೂರು ಪೇಪರ್ ಮಿಲ್ಸ್'ನಲ್ಲಿ ತಯಾರಾದ ಕಾಗದದಲ್ಲಿ ಅಚ್ಚಾಗಿದೆ.**

೨೫-೯೦೦-೨-೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975

ಪ್ರತಿ ಶುಕ್ರವಾರ ಹೊರಡುತ್ತದೆ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦
ಬಿಡಿ ಪತ್ರಿಕೆ: ೬ ಕಾಸು



ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ:
ಸಂಚಿಕೆ ೧೮ | ಬೆಂಗಳೂರು, ಶುಕ್ರವಾರ, ಫೆಬ್ರುವರಿ ೨೩, ೧೯೪೦ | ಬಿ. ವೆಂಕೋಬರಾವ್, ಬಿ.ಎ.

ಕನ್ನಡ ನುಡಿ ಭಕ್ತರು—೨೩.

## ಕೀರ್ತಿಶೇಷರಾದ ವಿದ್ವಾನ್ ಶ್ರೀ ಬಾಲಸರಸ್ವತಿ (ನರಹರಿರಾಯರು) ೧೮೮೦—೧೯೩೮

ಲೇಖಕರು: ಶ್ರೀ ದ. ಕೃ. ಭಾರದ್ವಾಜರು

ಸುಪ್ರಸಿದ್ಧ ಸಂಸ್ಕೃತ ಪಂಡಿತನಾದ ಜಗನ್ನಾಥ ಪಂಡಿತನ ಜೀವನ ಚರಿತೆಯ ಪೂರ್ವಭಾಗವನ್ನರಿತು ಕರುಣೆಯಿಂದ ನೊಂದು; ಉತ್ತರ ಭಾಗವನ್ನು ಓದುವಾಗ ಸ್ವಲ್ಪ ಸಂತೋಷವಾಗುವ ಒಂದು ವಿಚಾರ ಕಂಡುಬರುವುದು. ಬಿಜಾಪುರದ ನವಾಬನು ಜಗನ್ನಾಥ ಪಂಡಿತನ ಕೀರ್ತಿಯನ್ನು ಕೇಳಿ, ತನ್ನ ಸಭೆಯಲ್ಲೂ ಅಂಥ ಪಂಡಿತನೊಬ್ಬನು ಇರಬೇಕೆಂದು ಅಪೇಕ್ಷಿಸಿ, ಒಂದು ಓಲೆಯನ್ನು ಬರೆದು ಪಂಡಿತವರ್ಯನಿಗೆ ಹೇಳಿ ಕಳುಹಿಸಿದನಂತೆ. ಅದಕ್ಕೆ ಉತ್ತರವಾಗಿ ಜಗನ್ನಾಥ ಪಂಡಿತನು 'ದಿಲ್ಲೀಶ್ವರನಾಗಲಿ ಅಥವಾ ಜಗದೀಶ್ವರನಾಗಲಿ ನನ್ನ ಇಚ್ಛೆಯನ್ನು ಪೂರೈಸಬಲ್ಲರು. ಅನ್ಯರಾಜರು ನನಗೆ ಕೊಡುವುದು ನನ್ನ ಮನೆಯ ಕಾಯಿಪಲ್ಯದ ವೆಚ್ಚಕ್ಕಾಗಲಿ ಉಪ್ಪಿನ ವೆಚ್ಚಕ್ಕಾಗಲಿ ಸಾಕಾಗುವುದು, ಅಷ್ಟೇ!' ಎಂಬ ಅರ್ಥವನ್ನು ಸೂಚಿಸುವ ಪದ್ಯವನ್ನು ಬರೆದು ಕಳುಹಿಸಿಬಿಟ್ಟನಂತೆ! ಜಗನ್ನಾಥ ಪಂಡಿತನು ಷಹಜಹಾನ್ ಚಕ್ರವರ್ತಿಯ ಆಸ್ಥಾನ ಪಂಡಿತನಾಗಿದ್ದನು. ಆತನು ಸಂಸ್ಕೃತದಲ್ಲಿ ಮಾತ್ರವಲ್ಲದೆ ಅರಬ್ಬಿ, ಪಾರ್ಸಿ ಭಾಷೆಗಳಲ್ಲಿಯೂ ಪಂಡಿತನಾಗಿದ್ದನು. ಜಗನ್ನಾಥ ಪಂಡಿತನಂತೆಯೆ ಸಂಸ್ಕೃತ ಮತ್ತು ಉರ್ದು ಪಂಡಿತರಾಗಿದ್ದರೂ ಸಿಕ್ಕಿದ ರಾಜಾಶ್ರಯವನ್ನು ಸ್ವಾತಂತ್ರ್ಯಾಪೇಕ್ಷೆಯಿಂದ ಬಿಟ್ಟು, ಕೊನೆಗೆ ಬಡತನದಲ್ಲಿಯೆ ಬೆಂದು ಬಳಲಿ, ಅಸುವನ್ನು ನೀಗಿದವರು ನಮ್ಮ ಕನ್ನಡ ನಾಡಿನ ವಿದ್ವಾನ್ ಬಾಲಸರಸ್ವತಿ (ನರಹರಿರಾಯರು).



ವಿದ್ವಾನ್ ಶ್ರೀ ಬಾಲಸರಸ್ವತಿಯವರು

ಈಗ್ಗೆ ಸುಮಾರು ೩೧ ವರುಷಗಳ ಹಿಂದೆ ಈಗಿನ ಸೆಂಟ್ರಲ್ ಕಾಲೇಜ್ ಕಟ್ಟಡದಿಂದ ಹೈಸ್ಕೂಲು ಶಾಖೆಯನ್ನು ಕೋಟೆಯಲ್ಲಿರುವ ಈಗಿನ ಹೈಸ್ಕೂಲು ಕಟ್ಟಡಕ್ಕೆ ಸಾಗಿಸಿದಾಗ ನಾನು ಐದನೆಯ ಫಾರಮ್ಮಿನಲ್ಲಿ ಓದುತ್ತಿದ್ದೆ. ಆಗ ನನಗೆ, ಡ್ರಾಯಿಂಗ್ ಟೀಚರ್ ಆಗಿದ್ದ ಶ್ರೀ ಬಾಲಸರಸ್ವತಿಗಳ ಪರಿಚಯವಾಯಿತು. ಅಂದಿನಿಂದ ಪರಸ್ಪರ ಪರಿಚಯ ಹೆಚ್ಚುತ್ತ ಕೊನೆಯವರೆಗೆ ಹಾಗೆಯೆ ಉಳಿಯಿತು. ನಾನು ವಿದ್ಯಾರ್ಥಿಯಾಗಿರುವಾಗಲೆ ಅವರು "ಚಿತ್ರಗುಪ್ತನ ದಫ್ತರ" ಮಾಲೆಯ ಗ್ರಂಥಗಳನ್ನು ರಚಿಸಿ ಪ್ರಕಟಿಸಲಾರಂಭಿಸಿದ್ದರು. ಆಗ ಅವರ 'ಗುರುತು ಕಂಡ ಕಳ್ಳ' ಎಂಬ ಕಥೆ ಪ್ರಕಟವಾಗಿತ್ತು. ಬೀದಿಯಲ್ಲಿ ಹೋಗುವಾಗ ವಿದ್ಯಾರ್ಥಿಗಳು 'ಲೋ ಗುರುತು ಕಂಡ ಕಳ್ಳ ಬಂದನಪ್ಪ' ಎನ್ನುತ್ತಿದ್ದರು. ಅವರು ಯಾರೆಂದು ನೋಡಿದರೆ ಬಾಲಸರಸ್ವತಿಗಳು. ಆ ಪುಸ್ತಕದ ಮೇಲೆ ಕಥೆಯ ಹೆಸರು **ಗುರುತು ಕಂಡ ಕಳ್ಳ** ಮಧ್ಯೆ ಬಾಲಸರಸ್ವತಿಗಳ ಚಿತ್ರದ ಬ್ಲಾಕು—ಅದರ ಕೆಳಗೆ **ವಿದ್ವಾನ್ ಬಾಲಸರಸ್ವತಿ** ಎಂದು ಪ್ರಕಟವಾಗಿದ್ದ ವಿಷಯವೆ ಹುಡುಗರು ಹಾಗೆನ್ನುವುದಕ್ಕೆ ಕಾರಣವಾಗಿತ್ತು.

ಬಾಲಸರಸ್ವತಿಗಳ ಮುಂಚಿನ ಹೆಸರು ನರಹರಿರಾಯ. ಇವರು ಮೈಸೂರು ರಮಾವಿಲಾಸ ಅಗ್ರಹಾರದಲ್ಲಿ ವೈಯಾಕರಣಿಗಳೆನಿಸಿದ್ದ ಪಂಡಿತ ಲಕ್ಷ್ಮೀನರಸಿಂಹಾಚಾರ್ಯರ ಪುತ್ರನಾಗಿ ಸನ್ ೧೮೮೦ರಲ್ಲಿ ಹುಟ್ಟಿದರು. ವ್ಯಾಕರಣ ಪಂಡಿತರಾದ ಅಣ್ಣಯ್ಯಾಚಾರ್ಯರಿಂದ ಇವರಿಗೆ ಸಂಸ್ಕೃತ ಪಾಂಡಿತ್ಯ ಲಾಭವಾಯಿತು. ಇವರು ಮೊದಲು ತಿರುಮಲಾಚಾರ್ಯರ ಪಾಠಶಾಲೆ (ಈಗಿನ ಸದ್ವಿದ್ಯಾಪಾಠಶಾಲೆ)ಯಲ್ಲಿ ವಿದ್ಯಾಭ್ಯಾಸ ಮಾಡಿದರು. ಮದ್ರಾಸ್ ಯೂನಿವರ್ಸಿಟಿಯ 'ಮೆಟ್ರಿಕ್ಯುಲೇಷನ್' ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಶ್ರೀ ಜೆ. ವೀರ್ ಸಾಹೇಬರು ಮುಖ್ಯಾಧ್ಯಾಪಕರಾಗಿದ್ದ ಮಹಾರಾಜಾ ಕಾಲೇಜಿನಿಂದ 'ಎಫ್.ಎ.' ಪರೀಕ್ಷೆಯನ್ನು ಮುಗಿಸಿದರು. ಇವರು ವಿದ್ಯಾರ್ಥಿ ದೆಸೆಯಲ್ಲಿರುವಾಗಲೆ ಇವರ ಚಿತ್ರಕಲಾನೈಪುಣ್ಯವನ್ನು ನೋಡಿ, ಶ್ರೀ ಜೆ. ವೀರ್ ಸಾಹೇಬರವರೆ ಇವರಿಗೆ, ಆಗ ಮೈಸೂರು ಅರಮನೆಯಲ್ಲಿ ಚಿತ್ರಗಳನ್ನು ಬರೆಯುವುದಕ್ಕಾಗಿ ಬಂದಿದ್ದ ಪ್ರಸಿದ್ಧ ಚಿತ್ರಕಾರರಾದ ರಾಜಾ ರವಿವರ್ಮರ ಪರಿಚಯವನ್ನು ಮಾಡಿಸಿಕೊಟ್ಟರು.

ರವಿವರ್ಮರ ಬಳಿ ಇವರಿಗೆ ಕೆಲಕಾಲ ಶಿಕ್ಷಣ ಲಭಿಸಿ, ಇವರ ಚಿತ್ರಕಲೆಗೆ ಮೆರುಗು ಕೊಟ್ಟಂತಾಯಿತು. ಇವರು ಎಫ್.ಎ. ಪರೀಕ್ಷೆಯನ್ನು ಮಾಡಿದ ಬಳಿಕ ಶ್ರೀ ವೀರ್ ಸಾಹೇಬರು ಇವರಿಗೆ ಶಾಲೆಯಲ್ಲಿ

ಒಂದು ಪಂಡಿತ ಉದ್ಯೋಗವನ್ನು ಕಲ್ಪಿಸಿಕೊಟ್ಟರು. ಆಗ ಅಲ್ಲಿ ಉರ್ದು ಮುನ್‌ಷಿಯಾಗಿದ್ದ ಒಬ್ಬ ಮೌಲ್ವಿಯವರಿಗೂ ಇವರಿಗೂ ಯಾವುದೊ ಬಗೆಯಿಂದ ಸ್ಪರ್ಧೆ ಹುಟ್ಟಿ, ಉರ್ದು ಭಾಷೆಯನ್ನು ಕಲಿತು, ಮೌಲ್ವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಅನಂತರ ಇವರಲ್ಲಿ ಯಾವುದೊ ಒಂದು ಬಗೆಯ ವಿರಕ್ತಿಭಾವ ಹುಟ್ಟಿ, ಗರ್ಭಿಣಿಯಾದ ಪತ್ನಿಯನ್ನೂ ಬಿಟ್ಟು, ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಕಲಕತ್ತಾ ನಗರಕ್ಕೆ ತೆರಳಿದರು. ಅಲ್ಲಿ ಇವರ ಸಂಸ್ಕೃತ ಪಾಂಡಿತ್ಯ ಪ್ರಭಾವದಿಂದ ಸ್ವರ್ಗೀಯ ಈಶ್ವರಚಂದ್ರ ವಿದ್ಯಾಸಾಗರರ ಮಗನಾದ ಶ್ರೀ ಜೀವಾನಂದ ವಿದ್ಯಾಸಾಗರರ ಪರಿಚಯ ಇವರಿಗೆ ಆಯಿತು. ಅವರು ಇವರನ್ನು ತಮ್ಮ ಮನೆಯಲ್ಲಿಯೆ ಕೆಲಕಾಲ ಇಟ್ಟುಕೊಂಡರು. ಕೊನೆಗೆ ಇವರಿಗೆ ಅವರ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂಬ ವಿಚಾರವು ಅವರಲ್ಲಿ ತಲೆದೋರಿತು. ಆದರೆ ನರಹರಿರಾಯರು ಬಂಗಾಳಿ ಬಾಬುವಾಗಲು ಅಪೇಕ್ಷಿಸಲಿಲ್ಲ. ಅಷ್ಟು ಹೊತ್ತಿಗೆ ಇವರು ವಂಗಭಾಷೆಯಲ್ಲೂ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದರು. ವಿವಾಹ ವಿಚಾರ ಬಂದ ಬಳಿಕ, ಇವರು ಪ್ರಯಾಗಕ್ಕೆ ಹೊರಟು ಹೋದರು. ಅಲ್ಲಿ ಯಾವುದೊ ಕಾರಣಾಂತರದಿಂದ ಒಂದು ಕ್ರೈಸ್ತ ಮಿಷನರಿ ಸಂಘದವರು ಇವರಿಂದ ಕೆಲವು ಪುಸ್ತಕಗಳನ್ನು ಬಂಗಾಳಿಗೂ ಸಂಸ್ಕೃತಕ್ಕೂ ಭಾಷಾಂತರ ಮಾಡಿಸಿಕೊಂಡರು. ಮತ್ತೆ ಕೆಲವರು ಇವರನ್ನು ಕ್ರೈಸ್ತರಾಗಲು ಬೋಧಿಸಿ, ಒಬ್ಬ ಪ್ರೌಢ ಕ್ರೈಸ್ತ ಕನ್ಯೆಯನ್ನು ಕೂಡ ಗಂಟುಹಾಕಲೆತ್ನಿಸಿದರು! ತಾವು ವಿವಾಹಿತರೆಂದು ಯಾರಿಗೂ ಇವರು ಹೇಳುತ್ತಿರಲಿಲ್ಲ. ತಾವು ವಿವಾಹ ಮಾಡಿಕೊಳ್ಳುವುದಿಲ್ಲವೆಂದು ಹೇಳಿ, ಪ್ರಯಾಗದಿಂದ ಮತ್ತೆ ಮೈಸೂರಿಗೆ ಬಂದರು. ಆಗ ವಿದ್ಯಾಖಾತೆಯ ಮುಖ್ಯಾಧಿಕಾರಿಗಳಾಗಿದ್ದ ಮ|| ಎಚ್. ಜೆ. ಭಾಭಾ ಅವರು ಇವರಿಗೆ ಡ್ರಾಯಿಂಗ್ ಮೇಷ್ಟರ ಕೆಲಸವನ್ನು ಕೊಟ್ಟರು. ಆಗಲೇ ಇವರಿಗೂ ಇವರ ವಿದ್ಯಾರ್ಥಿಯಾಗಿದ್ದ ನನಗೂ ಪರಿಚಯವಾದುದು. ಆದರೆ ಇವರಲ್ಲಿದ್ದ ವಿಚಿತ್ರ ಮತ್ತು ಸ್ವತಂತ್ರ ಮನೋವೃತ್ತಿ ಇವರನ್ನು ಈ ಕೆಲಸದಲ್ಲಿಯೂ ಹೆಚ್ಚುಕಾಲ ಇರಿಸಲಿಲ್ಲ. ಸ್ವತಂತ್ರವಾಗಿ ಕನ್ನಡ ಗ್ರಂಥಪ್ರಕಟನೆಯ ದೊಡ್ಡ ಪ್ರಕಟನಾಲಯವನ್ನು ಸ್ಥಾಪಿಸಬೇಕೆಂಬ ಹಿರಿಯಾಸೆ ಇವರಲ್ಲಿತ್ತು. ಇವರು ಆಗಲೆ '**ಚಿತ್ರಗುಪ್ತನ ದಫ್ತರ**' ವೆಂಬ ಮಾಲೆಯಲ್ಲಿ ೨ ಆಣೆ ಬೆಲೆಯ ಪತ್ತೆದಾರಿ ಕಥೆಗಳನ್ನು ಪ್ರಕಟಿಸಲಾರಂಭಿಸಿದರು. ಆ ಮಾಲೆಯಲ್ಲಿ—

೧. ದುಷ್ಟಚತುಷ್ಟಯ, ೨. ಗುರುತು ಕಂಡ ಕಳ್ಳ, ೩. ನರಬಲಿ, ೪. ಮಾಯಾವಿನಿ, ೫. ವಿಷಮುಹೂರ್ತ, ೬. ನೀಲಾಂಬರಿ, ೭. ಚೋರ ಚಕ್ರವರ್ತಿ, ೮. ನರರಾಕ್ಷಸಿ, ೯. ಶೋಣಿತ ತರ್ಪಣ ಎಂಬ ೯ ಪುಸ್ತಕಗಳು ಪ್ರಕಟವಾದುವು.

ಆಮೇಲೆ ಇವರ ತಮ್ಮ ಶ್ರೀ ಕೃಷ್ಣಮೂರ್ತಿಯವರೊಂದಿಗೆ ಕೂಡಿ ಇವರು ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯಲ್ಲಿ ಒಂದು ಗ್ರಂಥ ಪ್ರಕಟನಾಲಯವನ್ನು ನಿಯತಪಾಲಿನ (ಲಿಮಿಟೆಡ್) ಸಂಘವಾಗಿ ಸ್ಥಾಪಿಸಿ, ಕೆಲವು ಮುದ್ರಣ ಯಂತ್ರ ಸಾಹಿತ್ಯಾದಿಗಳನ್ನು ತರಿಸಿ ಗ್ರಂಥಪ್ರಕಟನೆಗಾರಂಭಿಸಿದರು. ಆ ಸಮಯದಲ್ಲಿ "**ತರಂಗಿಣಿ**" ಮಾಲೆಯಲ್ಲಿ—

೧. ಪ್ರೇಮಪಾಶ, ೨. ವಿಷವಿವಾಹ, ೩. ಕನ್ಯಾಕುಮಾರಿ, ೪. ಅಮೃತಗರಳ, ೫. ವಿಯೋಗಿನಿ, ೬. ವೃದ್ಧಭಾರ್ಯಾವಿಲಾಸ, ೭. ತ್ರಿಪುರ ಸುಂದರಿ, ೮. ಕರ್ಮ ಸನ್ಯಾಸಿ ಎಂಬ ೮ ಪುಸ್ತಕಗಳೂ, "**ಬಾಲ ಕಥಾವಳಿ**" ಮಾಲೆಯಲ್ಲಿ—

೧. ವೀರನಾರಸಿಂಹ, ೨. ವಿಜಯನಾರಸಿಂಹ, ೩. ಸೀತಾರಾಮ, ೪. ತಕ್ಕಡಿ—ಬಿಕ್ಕಡಿ, ೫. ಮತ್ಸ್ಯಾವತಾರ, ೬. ವಿಜಯರಾಜವಿಜಯ, ೭. ರಾಜಮಾರ್ತಾಂಡ, ೮. ಕೂರ್ಮಾವತಾರ, ೯. ಭೂತಮರ್ದನ, ೧೦. ವರಾಹಾವತಾರ, ೧೧. ನಾರಸಿಂಹಾವತಾರ ಎಂಬ ೧೧ ಪುಸ್ತಕಗಳೂ, "**ಬೋಧಾವಳೀ ಗ್ರಂಥಮಾಲೆ**" ಯಲ್ಲಿ—

೧. ಸತ್ಯನಾರಾಯಣ, ೨. ಊರ ಬಾಗಿಲ ಹನುಮಂತ, ೩. ಚೌತಿಯ ಚಂದ್ರ, ೪. ವಿಜಯದಶಮಿ, ೫. ಗಂಗಾಪುತ್ರ, ೬. ಅದೃಷ್ಟ ಬೇಕೇ ಅದೃಷ್ಟ! ೭. ಧೈರ್ಯವೇ ಧೈರ್ಯ. ೮. ಮರದ ಬೊಂಬೆ, ೯. ಶ್ರೀಪಾದಯ್ಯನ ಪಾದರಕ್ಷೆ, ೧೦. ದೊಡ್ಡವರು ಯಾರು, ೧೧. ದೊಡ್ಡ ದಡ್ಡ, ೧೨. ದೇವರ ಮಹಿಮೆ, ೧೩. ಮೂಲ ಮಂತ್ರೋಪದೇಶ, ೧೪. ಯಾರಿಗೆ ಯಾರೊ ಭಗವಂತ, ೧೫. ಹೆಂಡತಿ ಎಂದರೆ ಹೆಂಡತಿ, ೧೬. ಅಕ್ಷಯ ಪಾತ್ರೆ, ೧೭. ಲಕ್ಷಾಧಿಕಾರಿಯಾದ ಭಿಕ್ಷಾಧಿಕಾರಿ ಎಂಬ ಹದಿನೇಳು ಗ್ರಂಥಗಳೂ, "**ಅಡುಗೂಲಜ್ಜಿ**" ಮಾಲೆಯಲ್ಲಿ—.

೧. ಗುಣವಿದ್ದರೂ ಋಣವಿದ್ದಷ್ಟೇ, ೨. ಮೂರು ವರಗಳು, ೩. ಯೋಗ್ಯತೆಗೆ ತಕ್ಕ ಭೋಗ್ಯತೆ ಎಂಬ ಮೂರು ಪುಸ್ತಕಗಳೂ ಪ್ರಕಟಿತವಾದವು. ಇವುಗಳಲ್ಲದೆ ಇತರ ೧. ಶೋಭನೆ, ೨. ಕುಮುದಿನಿ, ೩. ಯಾಮಿನಿ, ೪. ಸೀತಾದೇವಿ. ೫. ಪ್ರೀತಿ ವಿಜಯ, ೬. ಸ್ವಯಂಕೃತಾಪರಾಧ, ೭. ಕಾಮಧೇನು, ೮. ಶ್ರೀ ರಾಘವೇಂದ್ರ ತೀರ್ಥವಿಜಯ ಎಂಬ ಬಂಗಾಳಿ ಕಾದಂಬರಿಗಳ ಭಾಷಾಂತರ ಮತ್ತು ಸ್ವತಂತ್ರ ಕನ್ನಡ ಗ್ರಂಥಗಳೂ ಪ್ರಕಟವಾದುವು.

೧. ನಾಮರೂಪಾವಳಿ (ಶಬ್ದದ ಪುಸ್ತಕ), ೨. ಯತೀಂದ್ರ ಶತಕಂ, ೩. ಚಂದ್ರಶೇಖರ ಸಪ್ತತಿ, ೪. ಶ್ರೀ ಗುರುಸ್ತುತಿ ರತ್ನಮಾಲಾ ಎಂಬ ಸಂಸ್ಕೃತ ಗ್ರಂಥಗಳೂ ಪ್ರಕಟವಾಗಿರುವುವು. ಮತ್ತು ೧. ಕಂಠಾಭರಣ, ೨. ರಾಣಿ ಚೌಧುರಾಣಿ, ೩. ಬ್ರಹ್ಮಾನಂದ ಮಠ, ೪. ಮಹಾರಾಜಸಿಂಹ, ೫. ಬ್ರಾಹ್ಮಣ ರಮಣಿ, ೬. ಇಂದಿಂದಿರಾ, ೭. ಮಾಲತೀ ಲತಾ, ೮. ಕಮಲಾಕಾಂತನ ಉಯಿಲು, ೯. ಸಂಸ್ಕೃತ ನೀತಿಸಾರ ಭಾಗ ೧—೨ ಈ ಗ್ರಂಥಗಳ ಹಸ್ತಪ್ರತಿಗಳನ್ನೂ ನೋಡಿದ್ದೇನು.

ಅವರ ದುರ್ದೈವದಿಂದ ಅವರು ಸ್ಥಾಪಿಸಿದ ಮುದ್ರಣಾಲಯದಲ್ಲಿ ವಿಶೇಷ ನಷ್ಟವುಂಟಾಗಿ, ಅದಕ್ಕೆ ಬರುವ ಬಾಕಿಗಳು ಹೆಚ್ಚು ನಿಂತು ಹೋಗಿ, ಸ್ವತಃ ಶ್ರೀ ಬಾಲಸರಸ್ವತಿಗಳಿಗೆ ಬಹಳ ನಷ್ಟವುಂಟಾದ್ದರಿಂದ ಅವರು ಬೆಂಗಳೂರನ್ನು ಬಿಟ್ಟು ಮೈಸೂರಿಗೆ ಹೋದರು. ಅಲ್ಲಿ ಶ್ರೇಷ್ಠ ಸಾಹಿತಿಗಳಲ್ಲೊಬ್ಬರೆನಿಸಿದ ಭಕ್ಷಿ ಲಿಂಗರಾಜೆ ಅರಸಿನವರ ಆಶ್ರಯ ಸಿಕ್ಕಿ, ಅವರ ಮೂಲಕ ಯಾವುದೊ ಒಂದು ಛತ್ರದಲ್ಲಿ ತಿಂಗಳಿಗೆ ೩|| ರೂ. ಸಂಬಳದ ಮೇಲೆ ಗುಮಾಸ್ತಗಿರಿಯನ್ನು ವಹಿಸಿಕೊಂಡರು! ದೈವಲೀಲೆ ವಿಚಿತ್ರವಾದುದು! ಮುಂದೆ ಅರಸು ಗರ್ಲ್ಸ್ ಸ್ಕೂಲಿನಲ್ಲಿ ಸಂಸ್ಕೃತ, ಕನ್ನಡ ಮತ್ತು ಚಿತ್ರಕಲೆ ಕಲಿಸುವ ಉದ್ಯೋಗ ಇವರಿಗೆ ಲಭಿಸಿತು. ಅನಂತರ ಅರಸು ಬೋರ್ಡಿಂಗ್ ಸ್ಕೂಲಿನಲ್ಲಿಯೂ ಬೋಧಕರಲ್ಲೊಬ್ಬರಾಗಿದ್ದರು. ಬಳಿಕ ರಾಜಕುಮಾರ ಶ್ರೀ ಜಯಚಾಮರಾಜ ಒಡೆಯರ ಶಿಕ್ಷಣಕಾರ್ಯದಲ್ಲಿ ಅವರು ಭಾಗವಹಿಸಬೇಕಾಯಿತು. ಆದರೆ ಚಂಚಲರೂ, ಸ್ವತಂತ್ರರೂ ಆಗಿದ್ದ ಅವರು ಅರಮನೆಯ ನಿಯಮ ಬಂಧನಗಳಿಗೊಳಗಾಗದೆ, ಆ ಉದ್ಯೋಗವನ್ನು ಬಿಟ್ಟು, ತಿರುಮಕೂಡ್ಲು ನರಸೀಪುರದಲ್ಲಿ "ಸಚ್ಚಿದಾನಂದ ಪರದೇಶಿ ಪಾಠಶಾಲೆ"ಯೊಂದನ್ನು ಪ್ರಾಚೀನ ಗುರುಕುಲ ಪದ್ಧತಿಯ ಮೇಲೆ ನಡೆಯಿಸಬೇಕೆಂದು ಅದನ್ನು ಸ್ಥಾಪಿಸಿದರು. ಅದನ್ನೂ ಹೆಚ್ಚು ಕಾಲ ನಡೆಯಿಸದೆ ಬೆಂಗಳೂರಿಗೆ ಬಂದು ಕೆಲ ಜನ ಪುಸ್ತಕ ಪ್ರಕಾಶಕರಿಗಾಗಿ ಕೆಲಸಮಾಡಿ ಜೀವನನಿರ್ವಾಹ ಮಾಡಲೆತ್ನಿಸಿದರು. ಆ ಸಮಯದಲ್ಲಿ ಮ|| ಚೌರಪ್ಪ ಅಂಡ್ ಸನ್ಸ್ ಅವರಿಗೆ, "ಸೌಭಾಗ್ಯ ಸಂಪತ್ತು" ಎಂಬ ೬೪ ಪುಟಗಳ ಕಥೆ ಪುಸ್ತಕವನ್ನು ಒಂದೇ ರಾತ್ರಿಯಲ್ಲಿ ಕುಳಿತು ಬರೆದುಕೊಟ್ಟರು! ಅವರ ಲೇಖನಿಯ ವೇಗ ಅಷ್ಟು ತೀವ್ರವಾಗಿತ್ತು. ಇವರು ವಂಗಾದಿ ಬೇರೆ ಪ್ರಾಂತಗಳಲ್ಲಿ ಹುಟ್ಟಿ ಸಾಹಿತ್ಯಕ್ಕಾಗಿ ಇಷ್ಟು ದುಡಿದಿದ್ದರೆ ಸಾಹಿತ್ಯ ಸಮ್ಮೇಳನಾಧ್ಯಕ್ಷಪದವಿ ಇವರಿಗೆ ಅಷ್ಟುಹೊತ್ತಿಗೆ ದೊರೆಯುತ್ತಿತ್ತು.

ಆ ಕಾಲದಲ್ಲಿ ಕಥೆಗಾರರು ಹಲವರಿರಲಿಲ್ಲ. ಶ್ರೀ ಅಳಸಿಂಗ್ರಾಚಾರ್ಯರ ರಾಮಾಯಣ, ಭಾಗವತ ಮತ್ತು ಬಾಲಸರಸ್ವತಿಗಳ ಕಥೆ ಪುಸ್ತಕಗಳು ಆಗ ಕನ್ನಡ ನಾಡಿನಲ್ಲಿ, ಮುಖ್ಯವಾಗಿ ಮೈಸೂರು ಪ್ರಾಂತದಲ್ಲಿ ಗುಡುಗಾಡುತ್ತಿದ್ದವು. ಅವರು ಕನ್ನಡ ಲೇಖನವಲ್ಲದೆ, ಸಂಸ್ಕೃತದಲ್ಲಿಯೂ ಸರಳವಾಗಿ, ಸುಲಭವಾಗಿ ಎಡೆತಡೆಗಳಿಲ್ಲದೆ ಅಸ್ಖಲಿತವಾದ ವಾಗ್ಝರಿ ಹರಿಯಿಸುತ್ತಿದ್ದರು. ಅವರು ಸಂಸ್ಕೃತ ಕಾವ್ಯ ಪಠನ ಮಾಡುತ್ತಿರುವರೊ ಭಾಷಣಮಾಡುತ್ತಿರುವರೊ ಎಂದು ಶ್ರಾವಕರನ್ನು ಬೆರಗುಗೊಳಿಸುವಂಥ ಸಂಸ್ಕೃತ ವಾಕ್ಪಟುತ್ವ ಇವರಲ್ಲಿತ್ತು. ಆದರೆ ವಿಧಿ ಇವರಿಗೆ ಹುಟ್ಟಿನಿಂದಲೂ ಕ್ರೂರವಾಗಿದ್ದುದರಿಂದ, ಅವರ ದುಡಿಮೆಗೆ, ಸಾಹಿತ್ಯ ಸೇವೆಗೆ ಸರಿಯಾದ ಗೌರವಾದರ ಪ್ರೋತ್ಸಾಹಗಳು ಅಧಿಕಾರವರ್ಗದಿಂದ ಲಭಿಸಲಿಲ್ಲ. ಅವರು ಕೊನೆಗೆ ಬೆಂಗಳೂರಿನಲ್ಲಿ ಒಂದು ಪಾಠಶಾಲೆಯನ್ನಾರಂಭಿಸಬೇಕೆಂದು ಬಯಸಿ, ಕೊನೆಗೆ, ಈಗ ಪ್ರಸಿದ್ಧಿಗೆ ಬರುತ್ತಿರುವ ಆಚಾರ್ಯ ಪಾಠಶಾಲೆಯ ಸ್ಥಾಪಕರಲ್ಲಿ ಅವರೂ ಒಬ್ಬರಾದರು. ಆದರೆ! ಅಲ್ಲಿಯೂ ಹೆಚ್ಚು ಕಾಲವಿರದೆ, ಬಸವನಗುಡಿಯಲ್ಲಿ ಚಾಂದಿನವರ ಬೀದಿ (೨ನೆಯ ಕ್ರಾಸ್) ಯಲ್ಲಿ, "ಗುರುಕುಲ"ವೆಂಬ ಮಕ್ಕಳ ಶಾಲೆಯನ್ನು ಸ್ಥಾಪಿಸಿದರು. ಅದರ ಸ್ಥಾಪನೆಯ ಸಮಯಕ್ಕೂ ಅವರಿಗೆ ಮಹೋದರ ವ್ಯಾಧಿ ಬರುವುದಕ್ಕೂ ಸರಿಹೋಯಿತು. ಆಗ ಅವರೊಂದಿಗೆ ಸಹಾಯಕೋಪಾಧ್ಯಾಯರಾಗಿ ಕೆಲಸಮಾಡುತ್ತಿದ್ದ,

## ಕನ್ನಡ ಬಾಂಧವರಿಗೆ ಹೃತ್ಪೂರ್ವಕ ಅಭಿನಂದನೆಗಳು

### ಶ್ರೀ ಮುದುವೀಡು ಕೃಷ್ಣರಾಯರವರ ಪ್ರಕಟನೆ

ಕನ್ನಡ ಸಾಹಿತ್ಯ ಸಮ್ಮೇಳನದ ೨೪ನೆಯ ಅಧಿವೇಶನದ ಅಧ್ಯಕ್ಷರಾದ ಶ್ರೀ ಮುದವೀಡು ಕೃಷ್ಣರಾಯರು ಕೆಳಗಿನ ಪ್ರಕಟನೆ ಹೊರಡಿಸಿದ್ದಾರೆ:

ಕನ್ನಡ ನಾಡಿನಲ್ಲೆಲ್ಲ ಕಡೆಗೂ ತಾಯಿನಾಡಿನ ಮತ್ತು ತಾಯಿ ನುಡಿಯ ವಿಷಯವಾಗಿ ಅಭೂತಪೂರ್ವವಾದ ಅಭಿಮಾನ, ಪ್ರೇಮ, ಭಕ್ತಿ ಬೆಳೆಯುತ್ತ ನಡೆದಿರುವುದು ಅತ್ಯಂತ ಸಂತೋಷದ ಸಂಗತಿಯಾಗಿದೆ. ಈ ಅಭಿಮಾನ ಪ್ರೇಮ ಭಕ್ತಿಗಳು ಬೆಳೆಯುತ್ತ ನಡೆದಂತೆಯೇ ನಮ್ಮ ನುಡಿಯ ಮೇಲೆ, ನಮ್ಮ ನಾಡಿನ ಮೇಲೆ ನಡೆಯುತ್ತಿರುವ ನೆರೆ ಭಾಷೆಗಳ ಆಕ್ರಮಣವನ್ನು ತಡೆಯುವ ಶಕ್ತಿ ನಮ್ಮ ಕನ್ನಡ ಜನಾಂಗದಲ್ಲಿಯೂ ಬೆಳೆದುಬರುವುದೆಂಬುದು ನಿಚ್ಚಳವಾಗಿದೆ. ಇಂಥ ಶಕ್ತಿ ಬೆಳೆಯುವುದಕ್ಕೆ ನಮ್ಮನಮ್ಮೊಳಗಿನ ಜಾತಿಮತ ಪಂಥ ಪಂಗಡಗಳ ಸಂಕುಚಿತ ಮನೋವೃತ್ತಿ ಅಳಿದು, ಕನ್ನಡಿಗರೆಲ್ಲರೂ ಒಂದೇ "ಕನ್ನಡ ಕುಲದವರು" ಎಂಬ ಭಾವನೆಯಿಂದ ಅಖಂಡ ಕನ್ನಡ ನಾಡು ಒಂದಾಗಿ, ಸುಸಂಘಟಿತವಾಗಿ, ನಾಡು ನುಡಿಗಳ ಏಳಿಗೆಗಾಗಿ ಒಮ್ಮನಸ್ಸಿನಿಂದ ಪ್ರಯತ್ನಿಸತಕ್ಕದೆಂಬ ಮಾತು ಸಿದ್ಧಾಂತವಾಗಿದೆ. ಈ ಬಗೆಯ ಸಂಘಟನೆ ಎಲ್ಲ ಕಡೆ ಕನ್ನಡಿಗರಲ್ಲಿ ತಲೆದೋರಹತ್ತಿರುವುದು ಹಿಗ್ಗಿನ ಹಾಗೂ ಹೆಮ್ಮೆಯ ಮಾತಾಗಿದೆ. ಕನ್ನಡಿಗರ ಈ ಬಗೆಯ ಸುಸಂಘಟಿತ ಪ್ರಯತ್ನಗಳು ಶ್ರೇಯಸ್ಕರವಾಗಿ ನೆರವೇರಿದ ಮೂರು ದೃಷ್ಟಾಂತಗಳು ಇಂದು ಕನ್ನಡ ನಾಡಿನ ಮುಂದೆ ಎದ್ದು ನಿಂತಿವೆ.

ಮೊದಲನೆಯದು 'ನಿಜಾಮ ಕರ್ನಾಟಕ ಪರಿಷತ್ತು.' 'ಮೊಗಲಾಯಿ'ಯೆಂದು ಪ್ರಸಿದ್ಧವಾಗಿರುವ ನಿಜಾಮ ರಾಜ್ಯದ ಕನ್ನಡಿಗರ ಸಂಘಟನೆಯ ದೃಶ್ಯಫಲ ಬಿದರೆಯಲ್ಲಿ ಕೂಡಿದ 'ನಿಜಾಮ ಕರ್ನಾಟಕ ಪರಿಷತ್ತು.' ಬಿದರೆ ಹೈದರಾಬಾದು ರಾಜ್ಯದಲ್ಲಿ ಒಂದು ದೊಡ್ಡ ಜಿಲ್ಲೆಯಾಗಿದೆ. ಅಲ್ಲಿಯ ಪ್ರಜೆಗಳೆಲ್ಲ ಬಹುಶಃ ಕನ್ನಡಿಗರೇ ಆದರೂ ಆ ಜಿಲ್ಲೆ ಇನ್ನೂವರೆಗೆ 'ಮರಾಠವಾಡಿ'ಯಲ್ಲಿ ಗಣಿಸಲಾಗುತ್ತಿತ್ತು. ಆದುದರಿಂದ ಅದರ ಹೆಸರಿನ ಸ್ವರೂಪವೂ ಬದಲಾಗಿ 'ಬೀದರ'ವಾಗಿದೆ. ನಿಜಾಮ ರಾಜ್ಯದ ಕಲಬುರ್ಗಿ ರಾಯಚೂರು ಜಿಲ್ಲೆಗಳೂ ಒಂದು 'ಮರಾಠವಾಡಿ'ಯಲ್ಲಿಯೇ ಸಮಾವೇಶವಾಗುತ್ತಿದ್ದವು. ಈಗ ಪರಿಸ್ಥಿತಿ ಬದಲಾಗಿದೆ. ಕಲಬುರ್ಗಿ ರಾಯಚೂರು ಜಿಲ್ಲೆಗಳು ಎಚ್ಚತ್ತು 'ಬಿದರೆ'ಯನ್ನೂ ಎಚ್ಚರಿಸಿವೆ. ಮೊನ್ನೆ ಅಲ್ಲಿ ಕೂಡಿದ ನಿಜಾಮ ಕರ್ನಾಟಕ ಪರಿಷತ್ತಿನ ಪ್ರಚಂಡ ಅಧಿವೇಶನವೇ ಇದಕ್ಕೆ ಸಾಕ್ಷಿ. ನಿಜಾಮ ಕರ್ನಾಟಕದ ಹತ್ತು ಸಾವಿರ ಪ್ರಜೆಗಳು ಬಿದರೆಯಲ್ಲಿ ಕೂಡಿ ತಮ್ಮ ನಾಡ ನುಡಿಗಳ ಆಗುಹೋಗುಗಳನ್ನು ಚರ್ಚಿಸಿ ಅವುಗಳ ಉನ್ನತಿಗಾಗಿ ವಿಚಾರಪೂರ್ವಕ ಪ್ರಯತ್ನ ಮಾಡಲು ಅಣಿಯಾದದ್ದು ಯಾವ ಕನ್ನಡಿಗನಿಗೆ ಹರ್ಷಕಾರಕವಾಗಲಿಕ್ಕಿಲ್ಲ?

ಈಗ ಬಸವನಗುಡಿ ನಾಗಸಂದ್ರಾ ರೋಡಿನಲ್ಲಿ 'ದಿ ನ್ಯೂ ಮಾಡಲ್ ಪ್ರೈಮರಿ' ಶಾಲೆಯನ್ನು ಸ್ಥಾಪಿಸಿ ನಡೆಯಿಸುತ್ತಿರುವ ಶ್ರೀ ಎಂ. ನಾರಾಯಣಶಾಸ್ತ್ರಿಗಳು ಬಾಲಸರಸ್ವತಿಗಳಿಗೆ ಔಷಧವನ್ನು ಒಯ್ಯುತ್ತಿದ್ದರು. ರೋಗ ಗುಣಮುಖವಾಗುತ್ತಿರುವಾಗ, ೨೦-೩೦ ದಿವಸಗಳಲ್ಲಿ ಅವರಿಗಿಟ್ಟಿದ್ದ ಪಥ್ಯವನ್ನು ಮಾಡಲಾಗದೆ, ಪಥ್ಯ ಸೇರದೆ ಉಪವಾಸವಾಗಿ ಬದುಕುವುದಕ್ಕಿಂತ, ನಾಲಿಗೆಗೆ ರುಚಿಸಿದ್ದನ್ನು ತಿಂದು ಪ್ರಾಣ ಬಿಡುವುದೇ ಲೇಸೆಂದು ನಿರ್ಧರಿಸಿ, ಆಯುರ್ವೇದ ಚಿಕಿತ್ಸೆ ನಿಲ್ಲಿಸಿದರು. ಮುಂದೆ ೨-೩ ತಿಂಗಳಲ್ಲಿ ಮಹೋದರ ವ್ಯಾಧಿಯಿಂದಲೆ ೧೯೩೮ನೆಯ ಮೇ ತಿಂಗಳ ೨೮ನೆಯ ತಾರೀಖಿನ ದಿನ ವೈಕುಂಠವಾಸಿಗಳಾಗಿ, ಅಂತ್ಯಕಾಲದಲ್ಲಿ ಕರೆಯಿಸಿಕೊಂಡಿದ್ದ ಅವರ ಪತ್ನಿಯನ್ನೂ ೩೦ ವರುಷದ ಮಗನನ್ನೂ ದುಃಖಕ್ಕೆ ಗುರಿಮಾಡಿದರು.

ಸ್ವರ್ಗೀಯ ಬಾಲಸರಸ್ವತಿಗಳ ಜೀವನವೆಂದರೆ ಸ್ವತಂತ್ರ ವೃತ್ತಿಯ ಚಂಚಲನಾದ ಸಾಹಿತಿಯ ಜೀವನ ಸಮರ. ಆ ಸಮರದಲ್ಲಿ ಅವರು ಸೋಲನ್ನೂ ಕಾಣಲಿಲ್ಲ, ಗೆಲುವನ್ನೂ ಹೊಂದಲಿಲ್ಲ. ಸುಂದರವಾದ ಹೂವೊಂದು ಕಾಡಲ್ಲಿ ಬೆಳೆಯಿತು. ಬೇರೆಯವರು ಅದರ ಹುಟ್ಟನ್ನಾಗಲಿ ರೂಪವನ್ನಾಗಲಿ ನೋಡಲಿಲ್ಲ. ಆದರೂ ಅದು ಅರಳಿ, ನಲಿದು, ಬಾಳಿ ಬೇರೆಯರಿಗೆ ತನ್ನ ಸುಗಂಧವನ್ನು ಬೀರಿ, ಬಾಡಿ ಬತ್ತಿ ಬಿದ್ದು ಹೋಯಿತು. ಬಾಲಸರಸ್ವತಿಗಳ ಪ್ರೌಢ ಜೀವನದ ಬೆಳಗು ಹೆಚ್ಚು ಜನರೆದುರು ಗೋಚರವಾಗದೆ ಹೋಯಿತು. ಅವರ ಆತ್ಮಕ್ಕೆ ಶಾಂತಿ ದೊರೆಯಲಿ!

ಎರಡನೆಯದು ಬೆಳಗಾವಿಯ ಕನ್ನಡಿಗರು ಅಲ್ಲಿಯ ಸಾರ್ವಜನಿಕ ವಾಚನಾಲಯದ ಅಧಿಕಾರಿಗಳ ಆಯ್ಕೆಯಲ್ಲಿ ಈ ಸಾರೆ ಸಂಪಾದಿಸಿದ ಅಪೂರ್ವವಾದ ಪ್ರಚಂಡ ವಿಜಯ. ಈಗ ಒಂದೆರಡು ವರ್ಷಗಳಿಂದ ಈ ಬಗೆಯ ಪ್ರಯತ್ನಗಳು ಅಲ್ಲಿ ನಡೆದವು. ಆ ಪ್ರಯತ್ನಗಳಿಗೆ ತಕ್ಕಮಟ್ಟಿಗೆ ಯಶಸ್ಸು ಬರುತ್ತ ನಡೆಯಿತು. ಕೊನೆಗೆ ಈ ಸಾರೆಯ ಪ್ರಯತ್ನ ಸಂಪೂರ್ಣ ಶ್ರೇಯಸ್ಕರವಾಗಿ ಇಬ್ಬರು ಕಾರ್ಯದರ್ಶಿಗಳೂ ಹನ್ನೊಂದು ಮಂದಿ ಕಾರ್ಯ ಸಮಿತಿಯ ಸದಸ್ಯರಲ್ಲಿ ಒಂಭತ್ತು ಜನ ಸದಸ್ಯರೂ ಅಚ್ಚ ಕನ್ನಡಿಗರೇ ಆರಿಸಿ ಬಂದಿದ್ದಾರೆ. ಬೆಳಗಾವಿಯ ಮಾನ್ಯಹಿರಿಯರಾಗಿ, ನಮಗೆಲ್ಲ 'ಭೀಷ್ಮಾಚಾರ್ಯ'ರಾಗಿರುವ ಶ್ರೀ ಬೆಳವಿಯ ದತ್ತರಾಯರೇ ಅಧ್ಯಕ್ಷರಾಗಿರುವ ಅಲ್ಲಿಯ ಸಾರ್ವಜನಿಕ ವಾಚನಾಲಯದಲ್ಲಿ ಇನ್ನು ಮುಂದೆ ಕನ್ನಡ ತನಗೆ ತಕ್ಕುದಾದ ಮಾನ್ಯತೆಯನ್ನು ಹೊಂದಿ ಮೆರೆಯುವದೆಂಬುದಕ್ಕೆ ಸಂದೇಹವಿಲ್ಲ. ವಾಚನಾಲಯದಂತೆಯೇ ಬೆಳಗಾವಿಯ ಬೇರೆ ಸಾರ್ವಜನಿಕ ಸಂಸ್ಥೆಗಳಲ್ಲೆಲ್ಲ ಕನ್ನಡಿಗರೇ—ಅಚ್ಚಕನ್ನಡಿಗರೇ—ಬಹುಸಂಖ್ಯಾಕರಾಗಿ ಆರಿಸಿ ಬಂದು ಬೆಳಗಾವಿಯಲ್ಲೆಲ್ಲ "ಕನ್ನಡದ ಬಾವುಟ" ತಲೆಯೆತ್ತಿ ಹಾರಾಡುವಂತಾಗುವುದೆಂದು ಆಶಿಸಲು ಅಡ್ಡಿಯಿಲ್ಲ.

ಮೂರನೆಯದು ಹೊಸಪೇಟೆಯೊಳಗೆ ಹೊಸದಾಗಿ ಹುಟ್ಟಿದ್ದ ತೆಲುಗು ಶಾಲೆಯ ಉಚ್ಚಾಟನೆ. ಹೊಸಪೇಟೆಯಂಥ ಅಚ್ಚಗನ್ನಡ ಪಟ್ಟಣದಲ್ಲಿ ತೆಲುಗು ಶಾಲೆಗೆ ಸ್ಥಾನವಿರಕೂಡದೆಂಬ ಕೂಗು ಬಹಳ ಕಡೆಗೆ ಎದ್ದುದರ ಪರಿಣಾಮವಾಗಿ ಆ ಶಾಲೆಯನ್ನು ಅಲ್ಲಿಯ ಮುನಿಸಿಪಾಲಿಟಿಯವರು ಕಿತ್ತುಬಿಟ್ಟಿದ್ದರು. ಆದರೆ ಬಳ್ಳಾರಿ ಜಿಲ್ಲೆಯ ಪುಣ್ಯವಂತ ಶಿಕ್ಷಣಾಧಿಕಾರಿಗಳು ಅದನ್ನು ಪುನಃ ಪ್ರಾರಂಭ ಮಾಡಬೇಕೆಂದು ಹೊಸಪೇಟೆಯ ನಗರಸಭೆಗೆ 'ಶಿಫಾರಸು' ಮಾಡಿದರಂತೆ! ಆದರೆ ನಗರಸಭೆಯವರು ಈ ಶಿಫಾರಸಿಗೆ ಸೊಪ್ಪು ಹಾಕದೆ ಅಚ್ಚಗನ್ನಡ ಪಟ್ಟಣವಾದ ಹೊಸಪೇಟೆಯಲ್ಲಿ ತೆಲುಗು ಶಾಲೆಯ ಆವಶ್ಯಕತೆಯಿಲ್ಲವೆಂದು ತೀರ್ಮಾನಿಸಿ ಕನ್ನಡದ ಮಾನವನ್ನು ಎತ್ತಿ ಹಿಡಿದು ಅದಕ್ಕೊದಗಬಹುದಾಗಿದ್ದ ಕುತ್ತನ್ನು ನಿವಾರಿಸಿದ್ದಾರೆ.

ಈ ಮೂರು ಸಂದರ್ಭಗಳಲ್ಲಿ ಅಂತಃಕರಣದ ಕಳಕಳಿಯಿಂದ, ಕನ್ನಡ ನಾಡು ನುಡಿಗಳ ವಿಷಯಕವಾದ ಪರಿಶುದ್ಧವಾದ ಪ್ರೇಮದಿಂದ ಹಗಲಿರುಳು ದುಡಿದು ಕನ್ನಡ ಜನಾಂಗಕ್ಕೆ ಶ್ರೇಯಸ್ಸು ತಂದು ಕೊಟ್ಟ ಎಲ್ಲ ಕಾರ್ಯಕರ್ತರನ್ನು ನಾನು ಅಖಂಡ ಕನ್ನಡ ನಾಡಿನ ಜನಪದದ ಪರವಾಗಿ ಅಭಿನಂದಿಸುವುದು ನನ್ನ ಕರ್ತವ್ಯವಾಗಿದೆ.

ಹಾಗೆಯೇ ಸೊಲ್ಲಾಪುರದೊಳಗಿನ ಮತ್ತು ಸುತ್ತುಮುತ್ತಲಿನ ಕನ್ನಡಿಗರಲ್ಲಿ ಕನ್ನಡತನವನ್ನು ಎಚ್ಚರಿಸಿ ಬೆಳಸುವುದಕ್ಕೆ ಬರುವ ಮಾರ್ಚಿ ತಿಂಗಳಲ್ಲಿ ಸೊಲ್ಲಾಪುರ ಜಿಲ್ಲೆಯ ಕನ್ನಡಿಗರ ಪರಿಷತ್ತನ್ನು ಕೂಡಿಸಬೇಕೆಂದು ಬ್ಯಾರಿಸ್ಟರ್ ಸರದಾರರೇ ಮೊದಲಾದ ಅಲ್ಲಿಯ ಕನ್ನಡ ಪ್ರಮುಖರು ನಿಶ್ಚಯಿಸಿ ಕೆಲಸವನ್ನಾರಂಭಿಸಿದುದೂ ಕನ್ನಡಿಗರಲ್ಲಿಯ ಹೊಸ ಹುರುಪಿನ ಹಿರಿದಾದ ಕುರುಹಾಗಿದೆ. ಈ ವಿಷಯವಾಗಿ ಸೊಲ್ಲಾಪುರದ ಕನ್ನಡ ಮಹನೀಯರನ್ನೂ ನಾನು ಅಭಿನಂದಿಸಬೇಕಾಗಿದೆ. ನಮ್ಮ ನಾಡಿನ ಉತ್ಕರ್ಷವನ್ನು ಬಯಸುವ ಕನ್ನಡ ನಾಡಿನ ಹಿರಿಯರೆಲ್ಲರೂ ಸೊಲ್ಲಾಪುರದವರ ಕಾರ್ಯಕ್ಕೆ ಬೆಂಬಲವಾಗಿ ನಿಂತು ಅವರನ್ನು ಪ್ರೋತ್ಸಾಹಿಸುವರೆಂದು ನಾನು ಬಲವಾಗಿ ನಂಬಿಕೊಂಡಿದ್ದೇನೆ.

ನಮ್ಮ ಕನ್ನಡ ನಾಡಿನ ಭವಿತವ್ಯ ಈ ಮೇರೆಗೆ ಗಡಿನಾಡಿನ ಕನ್ನಡಿಗರನ್ನು ಎಚ್ಚರಿಸುವುದನ್ನು, ಅವರನ್ನು ಸುಸಂಘಟಿತಗೊಳಿಸುವುದನ್ನು, ಅವರಲ್ಲಿ ಹೊಸ ಹುರುಪು ಹುಟ್ಟಿಸಿ ಅವರನ್ನು ಆತ್ಮೋದ್ಧಾರಕಾರ್ಯಕ್ಕೆ ಅಸಿಮಿಸಿ ಇಲ್ಲದೆ ಪ್ರವೃತ್ತರನ್ನಾಗಿ ಮಾಡುವುದನ್ನು ಅವಲಂಬಿಸಿರುವುದೆಂಬ ಸಿದ್ಧಾಂತವನ್ನು ಮನದಂದು ಎಲ್ಲ ಕಡೆಯ ಕನ್ನಡಿಗರು ತಮ್ಮ ತಮ್ಮ ಗಡಿನಾಡುಗಳನ್ನು ಭದ್ರಪಡಿಸುವ ಮಹತ್ಕಾರ್ಯಕ್ಕೆ ತಡಮಾಡದೆ ಪ್ರಾರಂಭಿಸಬೇಕೆಂದು ಈ ಮೂಲಕ ಎಲ್ಲರನ್ನೂ ಬೇಡಿಕೊಳ್ಳುತ್ತೇನೆ.

—ಸಂಯುಕ್ತ ಕರ್ನಾಟಕ



ಶುಕ್ರವಾರ, ಫೆಬ್ರುವರಿ ೨೩, ೧೯೪೦

## ಶ್ರೀ ಗೊಮ್ಮಟೇಶ್ವರನ ಮಹಾ ಮಸ್ತಕಾಭಿಷೇಕ ಮಹೋತ್ಸವ *

ಕನ್ನಡ ನಾಡಿನ ತೀರ್ಥಕ್ಷೇತ್ರಗಳಲ್ಲಿ ಒಂದಾದ ಶ್ರವಣಬೆಳ್ಗೊಳದಲ್ಲಿ ಮೇಲ್ಕಂಡ ಉತ್ಸವ ಈ ತಿಂಗಳು ೧೩ರಲ್ಲಿ ಪ್ರಾರಂಭವಾಗಿ ವೈಭವದಿಂದ ನಡೆಯುತ್ತಿದೆಯೆಂದು ಕೇಳಿ ಸಂತೋಷಿಸುತ್ತೇವೆ. ಉತ್ಸವದ ಮುಡಿವು ಮುಂದಿನ ಸೋಮವಾರ; ಅಂದೇ ಶ್ರೀ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕ. ಅಂದು ಶ್ರವಣಬೆಳ್ಗೊಳಕ್ಕೆ ಹೋಗಿ ಗೊಮ್ಮಟೇಶ್ವರನ ದಿವ್ಯ ಭವ್ಯ ಮೂರ್ತಿಯ ಸಂದರ್ಶನ ಮಾಡುವವರೆಲ್ಲ ಧನ್ಯರೇ ಸರಿ.



ಶ್ರೀ ಗೊಮ್ಮಟೇಶ್ವರ

ಶ್ರೀ ಗೊಮ್ಮಟೇಶ್ವರ ಮೂರ್ತಿ ಜೈನ ಧರ್ಮದ ಬೆಳಕು; ಕನ್ನಡ ನಾಡಿನ ಹೆಮ್ಮೆ, ಮಹಿಮಾ ಮೂರ್ತಿ; ಕನ್ನಡ ನಾಡಿನ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ–ಇವುಗಳ ಔನ್ನತ್ಯದ ಹೆಗ್ಗುರುತು. ಎಷ್ಟು ಜನ ಭಕ್ತರಿಗೆ, ಆರ್ತರಿಗೆ, ದೀನರಿಗೆ ಶಾಂತಿ ಕೊಟ್ಟಿರಬಹುದು ಆ ಮೂರ್ತಿ! ಎಷ್ಟು ಮಂದಿ ಕನ್ನಡ ಕವಿಗಳಿಗೆ – ಪಂಪ ಬೊಪ್ಪಣಪಂಡಿತರಿಂದ ಪುಟ್ಟಪ್ಪನವರವರೆಗೆ — ಆ ಮೂರ್ತಿ ಸ್ಫೂರ್ತಿ ಕೊಟ್ಟಿದೆ! ಎಂಥ ನಿರಾಭರಣ ಸುಂದರ ಮೂರ್ತಿ! ಮುಗಿಲು ಮುಟ್ಟುವ ನಿಲುವು; ಅಲೌಕಿಕವಾದ ಚೆಲುವು; ಕಣ್ಣಿಂದ, ನಗೆಯಿಂದ ಸೂಸುವ ಒಲವು, ಜೀವದಯೆ! ಮೂರ್ತಿಯ ಮಹಿಮೆಯನ್ನು ಮಾತಿನಲ್ಲಿ ತಿಳಿಸುವುದೆಂದರೆ ಬಾನಿಸಿಂದ ಬಣ್ಣತೆಗೆದಂತೆ.

ಈ ಮೂರ್ತಿಯ ಹಿಂದಿನ ಅಮರಚೇತನವೆಂದರೆ ಅಣ್ಣನಾದ ಭರತನಿಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ ತಪಸ್ಸಿನಿಂದ ಕೈವಲ್ಯ ಪಡೆದ ವೈರಾಗ್ಯಮೂರ್ತಿಯಾದ ಬಾಹುಬಲಿ, ಪ್ರಥಮ ತೀರ್ಥಂಕರನಾದ ವೃಷಭನ ಮಗ. ಆ ಕಾಲದ ಕಾಮ. ಈ ಬಾಹುಬಲಿಯೇ ಗೊಮ್ಮಟೇಶ್ವರ.

ಗೊಮ್ಮಟೇಶ್ವರನ ದಿವ್ಯಸ್ವರೂಪವನ್ನು ಶಿಲಾಮೂರ್ತಿಯಾಗಿ ಲೋಕಕ್ಕಾಗಿ ಮಾಡಿಸಿಟ್ಟ, ಕನ್ನಡ ಸಾಹಿತ್ಯದ ಪ್ರಥಮಾಚಾರ್ಯರಲ್ಲಿ ಒಬ್ಬನಾದ ಚಾಮುಂಡರಾಯನೇ ಧನ್ಯ; ಅದನ್ನು ಏಕಶಿಲೆಯಲ್ಲಿ ಕಂಡರಿಸಿದ ಶಿಲ್ಪಿವರ್ಯನೇ ಧನ್ಯ; ಅದನ್ನು ನೋಡುವ ಕಣ್ಣೇ ಧನ್ಯ! ಈ ಎಲ್ಲ ಪುಣ್ಯಕ್ಕೂ ಭಾಜನವಾದ ಕನ್ನಡ ನಾಡು ಧನ್ಯ!

* ಈ ಮಹೋತ್ಸವದ ಹೊತ್ತಿಗೆ ಸರಿಯಾಗಿ, ಚೆನ್ನರಾಯಪಟ್ಟಣದ ಪಂಡಿತ ಶ್ರೀ ಶ್ರೀನಿವಾಸಯ್ಯಂಗಾರ್ಯರು ಬರೆದ ಶ್ರವಣಬೆಳ್ಗೊಳದ ಕೈಪಿಡಿಯನ್ನು ಪ್ರಕಟಿಸಿರುವುದಕ್ಕಾಗಿ ಉತ್ಸವಸಮಿತಿಯವರನ್ನು ಕೃತಜ್ಞತಾಪೂರ್ವಕವಾಗಿ ಅಭಿನಂದಿಸುತ್ತೇವೆ. ಕೈಪಿಡಿ ಸ್ಥಳ ಪರಿಚಯ, ಗೊಮ್ಮಟೇಶ್ವರ ಚರಿತ್ರೆ, ಬೆಳ್ಗೊಳದ ಶಾಸನ ಸಾಹಿತ್ಯ, ಮಸ್ತಕಾಭಿಷೇಕ ವಿಷಯಗಳನ್ನು ಒಳಕೊಂಡು ಉಪಯುಕ್ತವಾಗಿದೆ.

ಗೊಮ್ಮಟೇಶ್ವರ ಚಿತ್ರದ ಪಡಿಯಚ್ಚು 'ತಾಯಿನಾಡು'ಕೃಪೆಯಿಂದ.

## ಅಖಿಲ ಭಾರತ ಆಕಾಶವಾಣಿಯಲ್ಲಿ ಕನ್ನಡದ ಸ್ಥಾನ

ಈಚೀಚೆಗೆ ಜನಸಾಮಾನ್ಯಕ್ಕೆ ತಿಳಿವು ನಲಿವುಗಳನ್ನು ಹರಡುವ ಸಾಧನಗಳಲ್ಲಿ ಆಕಾಶವಾಣಿ (ರೇಡಿಯೋ) ಪ್ರಮುಖ ಸ್ಥಾನ ವಹಿಸುತ್ತಿದೆ. 'ಅಖಿಲ ಭಾರತ ಆಕಾಶವಾಣಿ'ಯೊಂದು ಏರ್ಪಾಟಾಗಿ, ಅದರ ಆಶ್ರಯದಲ್ಲಿ ಬೇರೆ ಬೇರೆ ಕೇಂದ್ರಗಳನ್ನು ತೆರೆದು, ಭರತಖಂಡದ ಎಲ್ಲ ಭಾಗಗಳವರಿಗಾಗಿ ಭರತಖಂಡದ ಎಲ್ಲ ಭಾಷೆಗಳಲ್ಲೂ ಸುದ್ದಿ ಸಂಗೀತ ಸಾಹಿತ್ಯ ಇವುಗಳ ಪ್ರಸಾರಣೆಯ ಕಾರ್ಯಕ್ರಮಗಳು ನಡೆಯುತ್ತಿರುವುದು ಎಲ್ಲರಿಗೂ ತಿಳಿದೇ ಇದೆ. ಇದರಲ್ಲಿ ಕನ್ನಡಕ್ಕೆ ಯಾವ ಸ್ಥಾನ ದೊರೆಯಬೇಕೋ ಅದು ದೊರೆತಿಲ್ಲವೆಂಬುದು ಎಲ್ಲರ ಗಮನಕ್ಕೂ ಬಂದಿರಲಾರದು; ಅದರೂ ಕನ್ನಡಿಗರು ದಿನದಿನವೂ ಕೇಳಿ ತಲೆ ತೂಗುತ್ತಿರುವ 'ಆಕಾಶವಾಣಿ'ಯಲ್ಲಿ ಕನ್ನಡವಾಣಿ ಮಾತ್ರ ಕೇಳಬರುತ್ತಿಲ್ಲವೆಂಬುದು ಕನ್ನಡಿಗರೆಲ್ಲರಿಗೂ ಗೊತ್ತಿರಲೇಬೇಕು.

ಈ ಸಂಬಂಧದಲ್ಲಿ ಕನ್ನಡ ನಾಡಿನವರಿಗೆ ಆವಶ್ಯಕವಾದ, ಆಕಾಶವಾಣಿಯ ಏರ್ಪಾಟು ಮಾಡುವ ಬಗ್ಗೆ ಶ್ರೀಗಳಾದ ಎಸ್. ಕೆ. ಹೊಸಮನಿ (ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು), ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು (ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು). ಜಿ. ಆರ್. ನಲವಡಿ, ಎಂ.ಎಲ್.ಎ. ಅವರು, ಮುದವೀಡು ಕೃಷ್ಣರಾಯರು (೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು), ರಂಗನಾಥ ರಾಮಚಂದ್ರ ದಿವಾಕರರು ('ಸಂಯುಕ್ತ ಕರ್ನಾಟಕ'ದ 'ಧರ್ಮದರ್ಶಿ'ಗಳು). ಬಿ. ಎಸ್. ದಾತಾರರು (ಮುಂಬಯಿ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರು ಮತ್ತು ಕರ್ನಾಟಕ ಏಕೀಕರಣ ಮಂಡಲದ ಅಧ್ಯಕ್ಷರು), ಎಲ್. ಆರ್. ಮಂಕಣಿ (ಅಧ್ಯಕ್ಷರು, ಮುನಿಸಿಪಲ್ ಸ್ಕೂಲ್ ಬೋರ್ಡ್), ಶ್ರೀಮತಿ ಉಮಾಬಾಯಿ ಕುಂದಾಪುರ (ಕರ್ನಾಟಕ ಪ್ರಾಂತೀಯ ಭಗಿನೀ ಮಂಡಲದ ಕಾರ್ಯದರ್ಶಿಗಳು), ಮತ್ತು ಶ್ರೀಮತಿ ಶ್ಯಾಮಲಾಬಾಯಿ ಬೆಳಗಾಂಕರ್ (ಕರ್ನಾಟಕ ಮಹಿಳಾ ಮಂಡಲದ ಕಾರ್ಯದರ್ಶಿಗಳು) ಮದರಾಸಿನ 'ಹಿಂದೂ' ಪತ್ರಿಕೆಗೆ (ತಾ|| ೧೮–೨–೧೯೪೦) ಕೊಟ್ಟಿರುವ ಹೇಳಿಕೆಯನ್ನು ನಮ್ಮ ವಾಚಕರ ಅವಗಾಹನೆಗೆ ತರಬಯಸುತ್ತೇವೆ.

ಹೇಳಿಕೆಯನ್ನು ಕೆಳಗೆ ಕನ್ನಡಿಸಿ ಕೊಟ್ಟಿದೆ:

ಮುಂಬಯಿಯಿಂದ ಹದಿನೈದು ದಿನಗಳಿಗೊಮ್ಮೆ ಶಾಲಾ ವಿದ್ಯಾರ್ಥಿಗಳಿಗಾಗಿ ಕಾಲುಗಂಟೆಯ ಅವಧಿಯ 'ಸ್ಕೂಲ್ ಬ್ರಾಡ್‌ಕಾಸ್ಟ್' ಹೊರತು, ಭಾರತದ ಮತ್ತಾವ ಆಕಾಶವಾಣಿ ಕೇಂದ್ರದಿಂದಲೂ ಕನ್ನಡ ನಾಡಿಗೆ ಕನ್ನಡದ ಕಾರ್ಯಕ್ರಮವನ್ನು ಒದಗಿಸುತ್ತಿಲ್ಲ. ಇಂದು ಬಹುಮಟ್ಟಿಗೆ ಎಲ್ಲ ಭಾರತದ ಭಾಷೆಗಳಲ್ಲೂ ಇಂಗ್ಲಿಷಿನಲ್ಲೂ ಸುದ್ದಿಗಳನ್ನು ಆಕಾಶವಾಣಿಯ ಮೂಲಕ ಪ್ರಚಾರ ಮಾಡಲಾಗುತ್ತಿದೆ.

ಕೇವಲ ಸ್ವಲ್ಪ ಜನ ಮಾತನಾಡುವ ಪುಷ್ಟು ಮತ್ತು ಪರ್ಷಿಯನ್ ಭಾಷೆಗಳಲ್ಲಿ ಕೂಡ 'ಬ್ರಾಡ್‌ಕಾಸ್ಟ್' ನಡೆಯುತ್ತಿದೆ. ಆದರೆ ಭಾರತದ ಪ್ರಮುಖ ಭಾಷೆಗಳಲ್ಲಿ ಒಂದಾದ ಕನ್ನಡವನ್ನು ಅಖಿಲ ಭಾರತ ರೇಡಿಯೋ ಸಂಸ್ಥೆಯವರು ಪುರಸ್ಕರಿಸಿಲ್ಲ.

ಇಂದು ಕನ್ನಡ ೧ಕೋಟಿ ೧೨ಲಕ್ಷ ಜನರ ತಾಯ್ನುಡಿಯಾಗಿದೆ. ೮೦ಲಕ್ಷಕ್ಕಿಂತ ಹೆಚ್ಚು ಮಂದಿ ಅದನ್ನು ತಿಳಿದಿದ್ದಾರೆ. ಅವರ ಪ್ರಾಚೀನ ಸಾಹಿತ್ಯ ಸಂಪತ್ತು ಕ್ರಿಸ್ತಾಬ್ದದ ಪೂರ್ವಕ್ಕೆ ಸೇರಿದ್ದು. ಇಂದು ಮುಂಬಯಿ, ಮದರಾಸು, ಮೈಸೂರು, ಕಲ್ಕತ್ತ ಮತ್ತು ಉಸ್ಮಾನಿಯಾ ವಿಶ್ವವಿದ್ಯಾನಿಲಯಗಳಲ್ಲಿ ಪದವೀ ಪರೀಕ್ಷೆಗಳಿಗೆ ಕನ್ನಡವನ್ನೂ ಒಂದು ಪಾಠವಿಷಯವಾಗಿ ತೆಗೆದುಕೊಳ್ಳುವಂತೆ ಮಾಡಿ ಅವರು ಕನ್ನಡಕ್ಕೆ ಪುರಸ್ಕಾರ ಕೊಟ್ಟಿದ್ದಾರೆ. ಮುಂಬಯಿ ಪ್ರಾಂತದಲ್ಲಿ ಸುಮಾರು ೪೦ಲಕ್ಷ ಜನರೂ, ಮದರಾಸು ಪ್ರಾಂತದಲ್ಲಿ ಸುಮಾರು ೩೦ ಲಕ್ಷ ಜನರೂ ಕನ್ನಡ ಮಾತನಾಡುತ್ತಾರೆ. ಇಡಿಯ ಮೈಸೂರು ಸಂಸ್ಥಾನ ಮತ್ತು ನಿಜಾಮರ ಸಂಸ್ಥಾನದ ಮೂರು ಜಿಲ್ಲೆಗಳೂ ಕನ್ನಡ ಮಾತಾಡುವವರ ನಾಡು. ಹೀಗಿರುವಾಗ, ಅಖಿಲ ಭಾರತ ಆಕಾಶವಾಣಿಯಲ್ಲಿ ಇತರ ಎಲ್ಲ ಭಾಷೆಗಳಿಗೆ ಪ್ರಾತಿನಿಧ್ಯವಿದ್ದು ಕನ್ನಡಕ್ಕೇಕೆ ಇಲ್ಲವೋ ತಿಳಿಯದು.

ನಾವು ಅಂದಾಜು ಮಾಡಿರುವ ಮಟ್ಟಿಗೆ ಕನ್ನಡಿಗರು ಈಗಾಗಲೇ ಸುಮಾರು ೩,೦೦೦ ಆಕಾಶವಾಣಿ ಕೇಳುವ ಯಂತ್ರಗಳನ್ನು ಇಟ್ಟುಕೊಂಡಿದ್ದಾರೆ; ಅಖಿಲ ಭಾರತ ಆಕಾಶವಾಣಿಯಲ್ಲಿ ಕನ್ನಡ ಸುದ್ದಿ ಮತ್ತು ಇತರ ಕನ್ನಡ ಕಾರ್ಯಕ್ರಮಗಳನ್ನು ಎತ್ತಲೂ ಹರಡಲು ಮೊದಲುಮಾಡುವ ವರೆಗೆ ಕನ್ನಡ ನಾಡಿನಲ್ಲಿ ಆಕಾಶವಾಣಿ ಯಂತ್ರ ಇಟ್ಟುಕೊಳ್ಳುವವರ ಸಂಖ್ಯೆ ಏರಲು ಅವಕಾಶವೇ ಇಲ್ಲ.

ಅಖಿಲ ಭಾರತ ರೇಡಿಯೋ ಸಂಸ್ಥೆ ಅಖಿಲ ಭಾರತದ ಸೌಕರ್ಯಕ್ಕಾಗಿ ಏರ್ಪಟ್ಟಿರುವುದು; ಆದುದರಿಂದ ಅದು ಎಲ್ಲರ ಹಕ್ಕುಗಳನ್ನೂ ಲಕ್ಷಿಸಬೇಕು. ಈ ಭಾಗದಲ್ಲಿ ಕೆಲವು ಎಡರು ತೊಡರುಗಳಿರಬಹುದು. ಆದರೆ ನ್ಯಾಯವಾದದ್ದನ್ನು ಸಲ್ಲಿಸುವಲ್ಲಿ ಯಾವ ಎಡರೂ ದಾಟಲಾಗದ್ದೆಂದು ಹೇಳುವಂತಿಲ್ಲ. ಭಾರತದ ಪ್ರಮುಖ ಭಾಷೆಗಳಲ್ಲಿ ಒಂದಾದ ಕನ್ನಡದ ಬಗ್ಗೆ ಇರುವ ಈ ಅಲಕ್ಷ್ಯತೆಯನ್ನು ನಾವು ಮಹಾಜನರ ಗಮನಕ್ಕೂ, ಇಂಡಿಯಾ ಸರಕಾರದ ಮತ್ತು ಪ್ರಾಂತೀಯ ಸರಕಾರಗಳ ಗಮನಕ್ಕೂ ತರಬಯಸುತ್ತೇವೆ.

ಇದೇ ವಿಚಾರವಾಗಿ ಬೆಳಗಾಂವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನ ಒಂದು ನಿರ್ಣಯವನ್ನು ಅಂಗೀಕರಿಸಿದೆ :

"ಮುಂಬಯಿ, ಮದರಾಸು ರೇಡಿಯೋ ಕೇಂದ್ರಗಳ ಮತ್ತು ಹೈದರಾಬಾದಿನ ಆಕಾಶವಾಣಿಯ ಮುಖಾಂತರ ನಡೆಯತಕ್ಕ ದಿನದ ಸುದ್ದಿ ಕಾರ್ಯಕ್ರಮದಲ್ಲಿ ಕನ್ನಡ ಭಾಷೆಗೆ ಈಗ ಸ್ಥಾನವಿರುವುದಿಲ್ಲ. ಇನ್ನು ಮುಂದಾದರೂ ಕನ್ನಡದಲ್ಲಿ ಸುದ್ದಿಗಳಿಗೆ ಅವಕಾಶ ಕಲ್ಪಿಸಿಕೊಡಬೇಕೆಂದು ಈ ಸಮ್ಮೇಳನ ಮೇಲ್ಕಂಡ ಕೇಂದ್ರಗಳ ಅಧಿಕಾರಿಗಳನ್ನು ಬೇಡುತ್ತದೆ. ಅಲ್ಲದೆ, ಕರ್ನಾಟಕದ ನುಡಿ ಮತ್ತು ಸಂಸ್ಕೃತಿಯನ್ನು ಕಾಪಾಡುವ ಸಲುವಾಗಿ ಉತ್ತರ ಕರ್ನಾಟಕ ಪ್ರಾಂತಕ್ಕೊಂದು ಪ್ರತ್ಯೇಕ ರೇಡಿಯೋ ಕೇಂದ್ರವಿಲ್ಲದಿರುವುದರಿಂದ, ಉತ್ತರ ಕರ್ನಾಟಕ ಪ್ರಾಂತದ ಪ್ರಮುಖ ಪಟ್ಟಣವೊಂದರಲ್ಲಿ ಅಂಥ ಕೇಂದ್ರವೊಂದನ್ನು ಸ್ಥಾಪಿಸಬೇಕೆಂದು ಈ ಸಮ್ಮೇಳನ ಅಖಿಲ ಭಾರತ ರೇಡಿಯೋ ಅಧಿಕಾರಿಗಳನ್ನು ಬೇಡುತ್ತದೆ."

ಪರಿಷತ್ತಿನ ಕಾರ್ಯಸಮಿತಿಯೂ ಒಂದು ನಿರ್ಣಯವನ್ನು ಮಾಡಿ, ಈ ವಿಷಯದಲ್ಲಿ ಬಹಳ ಶ್ರದ್ಧೆಯನ್ನು ವಹಿಸಿ ಕಾರ್ಯಭಾಗ ನಡಸುತ್ತಿರುವ ಶ್ರೀ ದಿವಾಕರರವರನ್ನು ಡಿಳ್ಳಿಗೆ ಹೋಗಿ ಸಂಧಾನ ನಡಸಬೇಕೆಂದು ಪ್ರಾರ್ಥಿಸಿಕೊಂಡಿದೆ.

ಮೇಲೆ ಕಂಡ ಹೇಳಿಕೆಯ ಮತ್ತು ನಿರ್ಣಯದ ಪ್ರಾರ್ಥನೆಗಳನ್ನು ಬೇಗನೆ ಸಲ್ಲಿಸಬೇಕೆಂದು ಇಂಡಿಯಾ ಸರಕಾರದವರನ್ನೂ ಅಖಿಲ ಭಾರತ ರೇಡಿಯೋ ಅಧಿಕಾರಿಗಳನ್ನೂ, ಪ್ರಾಂತ ಸರಕಾರಗಳನ್ನೂ ಪರಿಷತ್ತಿನ ಪರವಾಗಿ ಬೇಡುತ್ತೇವೆ.

## ವರ್ಷಾಶನ ಹೆಚ್ಚಿಸಿ ಮುಂದುವರಿಸಿದ್ದಕ್ಕಾಗಿ ಮೈಸೂರು ಸರಕಾರಕ್ಕೆ ಕೃತಜ್ಞತೆ

**ಮೈಸೂರು ಶ್ರೀಮನ್ಮಹಾರಾಜರವರ ಘನ ಸರಕಾರದವರು ಪರಿಷತ್ತಿನ ಪ್ರಾರ್ಥನೆಯನ್ನು ಲಾಲಿಸಿ, ಬರುವ ಜುಲೈ ತಿಂಗಳಿಂದ ಮೂರು ವರ್ಷದವರೆಗೆ ವರ್ಷವೊಂದಕ್ಕೆ ೩,೦೦೦ ರೂಪಾಯಿಯಂತೆ (ಮೊದಲಿಗಿಂತ ವರ್ಷಕ್ಕೆ ೫೦೦ ರೂ. ಹೆಚ್ಚಾಗಿ) ವರ್ಷಾಶನವನ್ನು ದಯಪಾಲಿಸಿರುತ್ತಾರೆಂದು ತಿಳಿಸಲು ಹರ್ಷಿಸುತ್ತೇವೆ. ಈ ಉಪಕಾರಕ್ಕಾಗಿ ಮೈಸೂರು ಸರಕಾರಕ್ಕೂ ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಿಗೂ ನಮ್ಮ ಅತ್ಯಂತ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಪರಿಷತ್ತಿನ ಪರವಾಗಿ ಸಮರ್ಪಿಸುತ್ತೇವೆ.**

---

## ಪರಿಷತ್ತಿನ ಸುದ್ದಿ

**ಉತ್ತರ ಕರ್ನಾಟಕ ಪ್ರಾಂತಸಮಿತಿ**

ಈ ಸಮಿತಿಯ ಅಧಿವೇಶನ ತಾ। ೧೮-೨-೧೯೪೦ನೆಯ ತಾರೀಖು ನವಿಲುಗುಂದದ ಶ್ರೀ ಶ್ರೀ ಬಸವಲಿಂಗಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಸೇರಿತ್ತು. ಇದಕ್ಕೆ ಮೊದಲು ನವಿಲುಗುಂದದಲ್ಲಿ ೮-೨-೧೯೪೦ರಲ್ಲಿ ಸೇರಿದ್ದ ಈ ಸಮಿತಿಯ ವರದಿಗೆ ಒಪ್ಪಿಗೆ ಕೊಡಲಾಯಿತು. ಮುಖ್ಯವಾದ ಗೊತ್ತುವಳಿಗಳು:

೧ ಪ್ರಸಕ್ತ ವರ್ಷದ ಅಧಿಕಾರಿ ವರ್ಗ: —

ಅಧ್ಯಕ್ಷರು: ಶ್ರೀ ಶ್ರೀ ಬಸವಲಿಂಗಸ್ವಾಮಿಗಳು, ನವಿಲುಗುಂದ.

ಕಾರ್ಯದರ್ಶಿಗಳು: ಶ್ರೀ ಪೋತೆದಾರ ರಂಗಪ್ಪನವರು, ಬಿ. ಎ. ಧಾರವಾಡ.

ಕೋಶಾಧಿಕಾರಿಗಳು: ಶ್ರೀ ಬೆಳಗಾಂವಿ ರಾಮಚಂದ್ರರಾಯರು, ಬಿ. ಎ. ಧಾರವಾಡ.

೨ ೧೮ ಹೆಸರುಗಳನ್ನೊಳಗೊಂಡ ಉತ್ತರ ಕರ್ನಾಟಕ ಪ್ರಾಂತಸಮಿತಿಯ ಸದಸ್ಯರ ಪಟ್ಟಿ ಈ ಹಿಂದೆಯೇ ಪ್ರಕಟವಾಗಿದ್ದು ಅವರುಗಳ ಪೈಕಿ ಶ್ರೀ [illegible]ಕರ ರಂಗರಾಯರು ತಮ್ಮ ಸದಸ್ಯತ್ವವನ್ನು ಬಿಟ್ಟುಕೊಟ್ಟಿದ್ದರಿಂದ ತೆರವಾದ [illegible] ೩ ಸ್ಥಾನಗಳಿಗೆ ಶ್ರೀ [illegible] ಶ್ರೀ [illegible]ರಾಯರು, ಮಳೀಮಠ, ವಕೀಲರು ಮತ್ತು ಬೆಳಗಾಂವಿ ರಾಮಚಂದ್ರರಾಯರು ಇವರುಗಳನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಯಿತು.

೩ ಉತ್ತರ ಕರ್ನಾಟಕ ಪ್ರಾಂತಸಮಿತಿಗೆ ಸೇರಿದ ೫ ಜಿಲ್ಲೆಗಳಲ್ಲಿಯೂ ಆಯಾ ಜಿಲ್ಲೆಗೆ ಪ್ರತಿನಿಧಿಗಳಾಗಿರುವ ಪ್ರಾಂತ ಸಮಿತಿಯ ಸದಸ್ಯರೂ [illegible]ಕಾರ್ಯ ಸಮಿತಿಯ ಸದಸ್ಯರೂ ಒಟ್ಟುಗೂಡಿ ಜಿಲ್ಲಾ ಸಮಿತಿಯನ್ನು ಏರ್ಪಡಿಸಿ [illegible]ಡು ಪರಿಷತ್ತಿಗೆ ಸದಸ್ಯರನ್ನು ಹೊಂದಿಸಿಕೊಡುವುದು, ಸಾಹಿತ್ಯ ಪರೀಕ್ಷೆಗ[illegible] [illegible]ಕ್ಷಣ ಕೊಡುವ ಏರ್ಪಾಟು ಮಾಡುವುದು ಮುಂತಾದ ಪರಿಷತ್ತಿನ ಉದ್ದೇಶಸಾಧನೆಯಲ್ಲಿ ನೆರವಾಗತಕ್ಕದ್ದು.

ಇಂತಹ ಜಿಲ್ಲಾ ಸಮಿತಿಗಳಲ್ಲಿ ಧಾರವಾಡಕ್ಕೆ ಶ್ರೀ ಜಾಗಿರದಾರರೂ, ಬೆಳಗಾಂವಿಗೆ ಶ್ರೀ ವಾಲಿಯವರೂ, ಬಿಜಾಪುರಕ್ಕೆ ಶ್ರೀ ಗೋಕಾಕರೂ, ಕಾರವಾರಕ್ಕೆ ಶ್ರೀ ಮುದವೀಡು ಕೃಷ್ಣರಾಯರೂ ಮತ್ತು ಬಳ್ಳಾರಿಗೆ ಶ್ರೀ ವೆಂಕಟೇಶಯ್ಯನವರೂ ಹಿರಿಯರಾಗಿದ್ದುಕೊಂಡು ಕಾರ್ಯಗಳನ್ನು ಮುಂದುವರಿಸತಕ್ಕದ್ದು. ಈ ಹಿರಿಯರು ತಿಂಗಳಿಗೊಮ್ಮೆಯಾದರೂ ಸಭೆ ಸೇರಿ, ಆ ಸಭೆಯ ಕಾರ್ಯಕಲಾಪಗಳ ವರದಿಯನ್ನು ಪ್ರಾಂತಸಮಿತಿಯ ಕಾರ್ಯದರ್ಶಿಗಳಿಗೆ ತಿಳಿಸಬೇಕು.

ಮೇಲ್ಕಂಡ ಐದು ಜಿಲ್ಲೆಗಳಲ್ಲಿ ಆಯಾ ಜಿಲ್ಲೆಗಳ ಮಹಾಜನರು ಜಿಲ್ಲಾ ಸಾಹಿತ್ಯ ಸಮ್ಮೇಳನಗಳನ್ನು ಕೂಡಿಸಬೇಕೆಂದು ಬಯಸಿದಲ್ಲಿ ಅವರು ಮೊದಲು ಜಿಲ್ಲಾ ಸಮಿತಿಯ ಸಮ್ಮತಿಯನ್ನು ಪಡೆದು ಪ್ರಾಂತಸಮಿತಿಯೊಡನೆ ಪತ್ರವ್ಯವಹಾರ ನಡಸಿ, ಬೇಕಾದ ಸಹಾಯ ಸಹಕಾರಗಳನ್ನು ಪಡೆಯಬೇಕು.

ವಸಂತ ಸಾಹಿತ್ಯೋತ್ಸವ, ನಾಡಹಬ್ಬಗಳನ್ನು ಏರ್ಪಡಿಸಿ ನಡಸುವ ಸಂಘ ಸಂಸ್ಥೆಗಳಿಗೂ ಪ್ರಾಂತಸಮಿತಿ ಸಹಾಯ ಸಹಕಾರಗಳನ್ನು ನೀಡಬೇಕು.

೪ ಪ್ರಾಂತ ಸಮಿತಿಯ ಅಧಿವೇಶನದ ತಿಳಿವಳಿಕೆಯನ್ನು ಮತ್ತು ಕಾರ್ಯಕ್ರಮದ ವಿಷಯವನ್ನು ಒಂದು ವಾರ ಮುಂಚಿತವಾಗಿ 'ಕನ್ನಡ ನುಡಿ'ಯಲ್ಲಿಯೂ ಪ್ರಾಂತದ ದಿನಪತ್ರಿಕೆಗಳಲ್ಲಿಯೂ ಪ್ರಕಟಿಸತಕ್ಕದ್ದು; ಪ್ರತ್ಯೇಕವಾಗಿ ಈ ತಿಳಿವಳಿಕೆಯನ್ನು ಸದಸ್ಯರೆಲ್ಲರಿಗೂ ಪತ್ರಮುಖೇನ ಕಳುಹಿಸಬೇಕಾಗಿಲ್ಲ.

---

## ಬಿನ್ನಹ

'ಕನ್ನಡ ನುಡಿ'ಯಲ್ಲಿ ಪ್ರಕಟನೆಗಾಗಿ ಬರಹಗಳೂ ಸುದ್ದಿಗಳೂ ಬರುತ್ತಿರುವುದಕ್ಕಾಗಿ ಕೃತಜ್ಞರಾಗಿದ್ದೇವೆ. ಸ್ಥಳ ಸಂಕೋಚವೇ ಮೊದಲಾದ ಕಾರಣಗಳಿಂದ ಕೆಲವು ಮಾರ್ಪಾಟುಗಳನ್ನೂ ಸಂಕ್ಷೇಪಗಳನ್ನೂ ಮಾಡುವ ಆವಶ್ಯಕತೆ ಆಗಾಗ ಕಂಡುಬರುತ್ತದೆ. ಹಾಗೆ ಮಾಡಿದಲ್ಲಿ ಬರಹಗಾರರು ಮನ್ನಿಸುವರೆಂದು ನಂಬಿದ್ದೇವೆ.

—ಸಂಪಾದಕ

## ಧಾರವಾಡ ಜಿಲ್ಲೆಯ ೪ನೆಯ ಸಾಹಿತ್ಯ ಸಮ್ಮೇಳನದ ಅಂಗವಾದ ಮಹಿಳಾ ಸಮ್ಮೇಳನದ ಅಧ್ಯಕ್ಷರಾದ

# ಶ್ರೀಮತಿ ಗೌರೀದೇವಿ ಇಂಚಲಮಠ ಅವರ ಭಾಷಣ

(ಮುಂದುವರಿದುದು)

### ಕನ್ನಡದ ಏಳ್ಗೆ

ಆದರೆ ಕನ್ನಡ ನುಡಿಯನ್ನು ಮಾತ್ರ ಯಾರೂ ಮರೆತಿಲ್ಲ. ಕನ್ನಡ ಮಹಿಳೆಯರು ಪರಭಾಷೆಯ ಮೋಹಜಾಲಕ್ಕೆ ಸಿಲುಕದೆ ಕನ್ನಡ ನುಡಿಯನ್ನೇ ನುಡಿಸುತ್ತಾ ಬಂದಿರುವರು. ಮಕ್ಕಳಿಗೆ ತಾಯ್ನುಡಿಯೇ ಬಹು ಮಹತ್ವದ್ದಾಗಿರುವುದರಿಂದ ಹೊರಗೆ ಮಕ್ಕಳು ಪರಭಾಷೆಯಲ್ಲಾಡಿ ಬಂದಾಗ್ಯೂ ಮನೆಯಲ್ಲಿ ತಾಯ್ನುಡಿಯನ್ನೇ ನುಡಿಯುವರು.

ಅಂತೆಯೇ ನಾಡ ನುಡಿಗೆ 'ತಾಯ್ನುಡಿ' ಎಂದು ಹೆಸರುಂಟಾಗಿದೆ. ಕನ್ನಡಿತಿಯರು ಎಲ್ಲಿಯೇ ಇದ್ದರೂ ಕನ್ನಡ ಮಾತೆಯನ್ನೇ ಪೂಜಿಸುತ್ತ, ಕನ್ನಡ ಭಾಷೆ, ಸಂಸ್ಕೃತಿ, ಕಲೆಗಳನ್ನು ಸಂರಕ್ಷಿಸುತ್ತ ಬಂದಿರುವರು. ಅಲ್ಲದೆ ಮಕ್ಕಳಿಗೂ ಅದೇ ಶಿಕ್ಷಣವನ್ನು ಕೊಟ್ಟು ಪ್ರೇರಿಸುತ್ತ ಬಂದಿರುವುದರಿಂದ ಕನ್ನಡ ಇನ್ನೂವರೆಗೆ ಜೀವಂತ ಉಳಿದಿದೆ. ಸುಶಿಕ್ಷಿತರಿಂದ ತುಂಬಿದ ನಾಡು ಚಿನ್ನದ ನಾಡಾದ್ದರಿಂದ ನಮ್ಮ ನಾಡಿನಲ್ಲಿ ಮೊದಲು ಸಾಕ್ಷರತಾಪ್ರಚಾರವಾಗಬೇಕು. ಇತ್ತಿತ್ತಲಾಗಿ ಶಿಕ್ಷಣಪ್ರಚಾರ ನಡೆಯುತ್ತಿದೆ ಎಂದು ಹೇಳಿದಾಗ್ಯೂ ನಮ್ಮಲ್ಲಿ ನೂರಕ್ಕೆ ೯೯ ಮಹಿಳೆಯರು ಅಜ್ಞಾನಾಂಧಕಾರದಲ್ಲಿ ಕೊಳೆಯುತ್ತಿರುವರು. ಮುಂಬೈ ಇಲಾಖೆಯಲ್ಲಿ ದಕ್ಷಿಣಭಾಗದ ಸ್ತ್ರೀಯರ ಜನಸಂಖ್ಯೆ ೧೯೯೨೭೪೪ ಇದ್ದು ಅದರಲ್ಲಿ ೨೨೨೨೫ ಅಥವಾ ನೂರಕ್ಕೆ ೧॥ ಯಷ್ಟು ಮಂದಿ ಮಾತ್ರ ಸಾಕ್ಷರರಾಗಿದ್ದಾರೆ. ಇಂಗ್ಲಿಷು ಕಲಿತ ಸ್ತ್ರೀಯರು ಸಾವಿರಕ್ಕೆ ಒಬ್ಬರು ಮಾತ್ರ ಇದ್ದಾರೆ. ಅಚ್ಚಕನ್ನಡ ನಾಡಿನಲ್ಲೇ ಸ್ತ್ರೀ ವಿದ್ಯಾಭ್ಯಾಸ ಈ ಗತಿಯಾದರೆ ಇನ್ನು ಪರಪ್ರಾಂತದಲ್ಲಿ ವಾಸಿಸುವ ಕನ್ನಡ ಮಹಿಳೆಯರ ಶಿಕ್ಷಣದ ಗತಿಯೇನು ? ಮಹಿಳೆಯರಿಷ್ಟು ನಿರಕ್ಷರತೆಯಿಂದ ತುಂಬಿರುವಾಗ ನಾಡಿನ ಏಳ್ಗೆಯೇ ಆಗಲಿ, ಸಾಹಿತ್ಯದ ಬೆಳವಣಿಗೆಯೇ ಆಗಲಿ ಹೇಗೆ ತಾನೆ ಆಗುವುದು ? ಒಬ್ಬ ಸ್ತ್ರೀ ಸುಶಿಕ್ಷಿತಳಾದರೆ ಇಡಿಯ ಕುಲವೇ ಉದ್ಧಾರವಾಗುವುದೆಂದು ಹಿರಿಯರ ಒಮ್ಮತವಿದೆ. ಸ್ತ್ರೀಯರು ಸುಶಿಕ್ಷಿತರಾದರೆ ನಾಡಿಗೆ ಎಷ್ಟೋ ಲಾಭವಿದೆ. ಪ್ರತಿಯೊಬ್ಬ ಹೆಣ್ಣು ಮಗಳಿಗೂ ಏಳರಿಂದ ಹದಿನಾಲ್ಕು ವರ್ಷದವರೆಗೆ ವಿದ್ಯೆಯನ್ನು ಕಲಿಸಿಯೇ ತೀರಬೇಕೆಂದು ಪ್ರಾಥಮಿಕ ಸ್ತ್ರೀ ಒತ್ತಾಯದ ಶಿಕ್ಷಣ ಶಾಸನವನ್ನು ಪಾಸುಮಾಡಿಸಿ ಬೇಗನೆ ಜಾರಿಗೆ ತರುವಂತೆ ಪ್ರಯತ್ನಿಸಬೇಕು. ಬಡ ಹೆಣ್ಣುಮಕ್ಕಳಿಗೆ ವಿದ್ಯೆ ಕಲಿಯುವುದಕ್ಕೆ ಅನುಕೂಲಗಳನ್ನು ಮಾಡಿಕೊಡಬೇಕು. ಹೈಸ್ಕೂಲು ಕಾಲೇಜುಗಳಲ್ಲಿ ಕಲಿಯುವ ಮಹಿಳೆಯರಿಗೆ ಧರ್ಮಾರ್ಥವಾಗಿ ಕಲಿಸುವ ಏರ್ಪಾಡು ಮಾಡಬೇಕು. ನಾಡಿನ ಪ್ರಮುಖರೂ ಸಮಾಜದ ಮುಂದಾಳುಗಳೂ ಸ್ತ್ರೀಯರ ವಿಷಯದಲ್ಲಿ ಆಸಕ್ತಿಯನ್ನೂ ಶ್ರದ್ಧೆಯನ್ನೂ ವಹಿಸಿ ಸಾಕ್ಷರತೆಯನ್ನು ಬೆಳಸಬೇಕು. ತನುಮನಧನಗಳಿಂದ ಧನಿಕರು ಕೊಡುಗೈ ದೊರೆಗಳಾಗಿ ಹೆಣ್ಣು ಮಕ್ಕಳ ವಿಷಯದಲ್ಲಿ ಉದಾರಾಶ್ರಯವನ್ನು ತೋರಿಸಬೇಕು. ಇಂದು ಮಹಿಳಾ ಸಮ್ಮೇಳನವನ್ನು ಉದ್ಘಾಟನ ಮಾಡಿರುವ ನವಿಲುಗುಂದ–ಶಿರಸಂಗಿ ರಾಣಿ ಶ್ರೀಮತಿ ಸುಂದರಾಬಾಯಿಯವರ ಪತಿದೇವರಾದ ಲಿಂಗರಾಜ ದೊರೆಗಳು ತಮ್ಮ ಅಖಂಡ ಆಸ್ತಿಯನ್ನು ಶಿಕ್ಷಣದ ಏಳ್ಗೆಗಾಗಿ ಕೊಟ್ಟು ಕನ್ನಡ ನಾಡಿಗೆ ಮಹೋಪಕಾರವನ್ನು ಮಾಡಿದ್ದಾರೆ. ಶ್ರೀಮಂತ ಲಿಂಗರಾಜ ದೊರೆಗಳು ಕೊಡುಗೈ ದೊರೆಯಾಗಿ ತಮ್ಮ ಜೀವನವನ್ನು ಅಖಂಡ ಮಾದರಿಯಾಗಿ ಮಾರ್ಗದರ್ಶವಾಗಿ ತೋರಿಸಿದ್ದಾರೆ. ಇವರಂತೆ ಎಲ್ಲ ಮಹನೀಯರೂ ಸ್ತ್ರೀ ಶಿಕ್ಷಣದ ವಿಷಯದಲ್ಲಿ ಉದಾರತೆಯನ್ನು ತೋರಿಸಿ ಸ್ತ್ರೀ ಸಮಾಜ ಬೇಗನೆ ಉನ್ನತಿ ಹೊಂದುವಂತೆ ಮಾಡಬೇಕು. ಸದ್ಯದ ನಮ್ಮ ಪ್ರಗತಿಗೆ ಸೋದರರೇ ಕಾರಣ. ಅವರ ಅಂತಃಕರಣದ ಪ್ರೇಮದ ಪ್ರೇರಣೆಯಿಂದಲೇ, ಸೋದರರ ಅನುಗ್ರಹದಿಂದಲೇ, ನಾವಿಂದು ಇಷ್ಟುಮುಂದೆ ಬಂದಿದ್ದೇವೆ ಅವರಿಂದ ಇದಕ್ಕಿಂತಲೂ ಹೆಚ್ಚಿನ ಸಹಾಯ, ಸಹಾನುಭೂತಿ, ಆಶೀರ್ವಾದ ದೊರೆಯಬೇಕೆಂದು ಆಶಿಸುವೆವು.

ಇಂದು ಸಾಹಿತ್ಯ ಸರ್ವತೋಮುಖವಾಗಿ ಬೆಳೆಯತೊಡಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀಯರೂ ಮೆಲ್ಲಡಿ ಇಡುತ್ತಿರುವರೆಂಬುದು ಸಂತೋಷದ ಸಂಗತಿಯಾಗಿದೆ. ಆದರೆ ಇತರ ಪ್ರಾಂತಗಳ ಸ್ತ್ರೀ ಸಾಹಿತಿಗಳೊಡನೆ ನಮ್ಮ ಸ್ತ್ರೀ ಸಾಹಿತ್ಯಗಳನ್ನು ಹೋಲಿಸಿ ನೋಡಿದರೆ ನಾವು ಎಷ್ಟು ಹಿಂದುಳಿದಿದ್ದೇವೆಂಬುದು ಕಂಡುಬರುವುದು. ನಮ್ಮಲ್ಲಿ ಸ್ತ್ರೀ ಸಾಹಿತಿಗಳು ಇಲ್ಲವೆಂತಲ್ಲ. ಎಷ್ಟೋ ಜನರಿರುವರು. ಅವರಿಗೆ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಿ ಸಾಕಾದಷ್ಟು ಉತ್ತೇಜನ ಕೊಟ್ಟು ಪ್ರಕಾಶಕ್ಕೆ ತರುವವರಿಲ್ಲ. ಅಲ್ಲದೆ ಸ್ತ್ರೀ ವಿದ್ಯಾಭ್ಯಾಸಕ್ಕೂ ಸಾಹಿತ್ಯಕ್ಕೂ ಪುರುಷರಿಗಿರುವಷ್ಟು ಅನುಕೂಲ, ಸೌಕರ್ಯಗಳು ಸ್ತ್ರೀಯರಿಗಿಲ್ಲ. ಕೆಲವರು ತಮ್ಮ ಸಾಹಿತ್ಯವನ್ನು ಪ್ರಚುರಪಡಿಸಲು ಅಂಜುವರು ; ಅಳುಕುವರು. ಹಲವರು ಸಾಹಿತ್ಯಸೇವೆ ಮಾಡಲು ಅರ್ಹರಿದ್ದರೂ ಅವರಿಗೆ ಮನೆಯಲ್ಲಿ ಪ್ರತಿಬಂಧಕವಿರುತ್ತದೆ. ಕೆಲವರಿಗೆ ವಿಮರ್ಶಕರ ಭಯ ಬೇರೆ. ಹಲವರಿಗೆ ಸಾಹಿತ್ಯದಲ್ಲಿ ಸ್ಥಾನವೇ ದೊರೆಯುವುದಿಲ್ಲ. ಸ್ತ್ರೀಸಾಹಿತ್ಯದ ಬೆಳವಣಿಗೆಗೆ ಹೀಗೆ ನಾನಾತರದ ತೊಂದರೆಗಳಿರುತ್ತವೆ. ಪ್ರಾಚೀನ ಸಾಹಿತ್ಯಕ್ಕೆ ಸಂಬಂಧಿಸಿದ ಹಾಡುಗಳೆಷ್ಟೋ ಇವೆ. ಇವು ಬಹು ಸ್ವಾರಸ್ಯವಾಗಿಯೂ, ಇಂಪಾಗಿಯೂ, ಅರ್ಥಗರ್ಭಿತವಾಗಿಯೂ ಇರುತ್ತವೆ. ಎಷ್ಟೋ ಶತಮಾನಗಳ ಹಿಂದಿನ ನೂರಾರು ನುಡಿಗಳನ್ನೊಳಗೊಂಡ ಪುರಾಣೇತಿಹಾಸ, ಸಣ್ಣ ಕಥೆಗಳು, ಇಂದು ನಮ್ಮ ನಾರಿಯರ ನಾಲಗೆಯ ಮೇಲೆ ನಲಿಯುತ್ತಿವೆ. ಹಳ್ಳಿಯ ಜನರಲ್ಲಿಯೂ ಜನಪದ ಸಾಹಿತ್ಯ ವಿಪುಲವಾಗಿದೆ. ವಿದ್ಯೆಯಿಲ್ಲದೆ ಇದ್ದಾಗ್ಯೂ ಸ್ತ್ರೀಯರ ಹೃದಯವೇ ಸಾಹಿತ್ಯ ಮಂದಿರವಾಗಿ ಒಬ್ಬರ ಬಾಯಿಂದ ಒಬ್ಬರ ಬಾಯಿಗೆ ಬಿದ್ದು ಪರಂಪರೆಯಿಂದಲೂ ಪ್ರಾಚೀನ ಸಾಹಿತ್ಯಗಳನ್ನು ಸಂರಕ್ಷಿಸಿಕೊಂಡು ಬಂದಿರುತ್ತಾರೆ. ಹಳೆಯ ಜನರಿಗೆ, ಹಳ್ಳಿಯ ಜನರಿಗೆ ವಿದ್ಯೆ ಇಲ್ಲ. ಈಗಿನವರಿಗೆ ಹಳೆಯ ಸಾಹಿತ್ಯದ ಮೇಲೆ ಮಮತೆ ಕಡಮೆ. ಹೀಗಾಗಿ ಹಳೆಯ ಸಾಹಿತ್ಯ ಸಹ ಮೂಲೆಗುಂಪಾಗುತ್ತಿದೆ. ಇದರಿಂದ ಸಾಹಿತ್ಯಕ್ಕೆ ಹಾನಿಯೆಂದೇ ಹೇಳಬಹುದು. ಹೊಸ ಸಾಹಿತ್ಯದೊಂದಿಗೆ ಹಳೆಯ ಸಾಹಿತ್ಯವನ್ನೂ ಪ್ರಚಾರದಲ್ಲಿ ತರಬೇಕು. ಇತ್ತಿತ್ತಲಾಗಿ ಜನಪದ ಸಾಹಿತ್ಯವನ್ನು ಬೆಳಕಿಗೆ ತರುತ್ತಿರುವುದು ಶುಭ ಸೂಚಕವಾಗಿದೆ. ಈ ಕಾರ್ಯವನ್ನು ಸ್ತ್ರೀಯರೇ ಕೈಗೊಂಡರೆ ಸ್ತ್ರೀ ಸಾಹಿತ್ಯ ಬೇಗನೆ ಏಳ್ಗೆ ಹೊಂದುವುದು. ಮುಂದುವರಿದ ಸ್ತ್ರೀಯರು ಹಿಂದುಳಿದ ಸ್ತ್ರೀಯರನ್ನು ಮುಂದಕ್ಕೆ ತರಲು ಪ್ರಯತ್ನಿಸಬೇಕು. ಸ್ತ್ರೀಯರಲ್ಲಿ ಸಾಹಿತ್ಯಾಭಿಮಾನವನ್ನೂ, ಅಭಿರುಚಿಯನ್ನೂ ಹುಟ್ಟಿಸಿ, ಸಾಹಿತ್ಯ ಸೇವೆ ಮಾಡುವ ಲವಲವಿಕೆಯನ್ನುಂಟುಮಾಡಬೇಕು. ವಿಮರ್ಶೆಗಳ ಕಡೆಗೆ ಲಕ್ಷ್ಯ ಕೊಡದಂತೆಯೂ, ಅವುಗಳಿಗೆ ಸ್ವಲ್ಪವೂ ಬೆದರದಂತೆಯೂ ಧೈರ್ಯ ಹೇಳಿ ಸಾಹಿತ್ಯ ಸೇವೆಯನ್ನು ಮಾಡಲು ಉತ್ಸಾಹ ಕೊಡಬೇಕು. ವಿದ್ಯೆಯಿಲ್ಲದ ಮಹಿಳೆಯರಿಂದ ಹಳೆಯ ಹಾಡುಗಳನ್ನು ಕಲೆಹಾಕಿ ಅವನ್ನು ಪ್ರಕಾಶಕ್ಕೆ ತರಬೇಕು. ಇದಕ್ಕೆ ಸೋದರರ ಸಹಾನುಭೂತಿಯೂ, ಸೌಹಾರ್ದವೂ ಬೇಕು. ಸ್ತ್ರೀಯರ ಸಾಹಿತ್ಯ ಸೇವೆಗೆ ಸೋದರರು ಸಂಪೂರ್ಣ ಸ್ವಾತಂತ್ರ್ಯವನ್ನು ದಯಪಾಲಿಸಬೇಕು. ಕನ್ನಡ ಸಾಹಿತ್ಯ ಪ್ರೇಮಿಗಳಾದ ಮಹಿಳೆಯರನ್ನು ಸೋದರರು ತಗ್ಗಿಸದೆ, ಅವರಲ್ಲಡಗಿರುವ ಸಾಹಿತ್ಯಪ್ರೇಮದ ತೇಜಸ್ಸು ನಾಶವಾಗಲು ಆಸ್ಪದ ಕೊಡದೆ ಅವರಿಗೆ ಉತ್ಸಾಹವನ್ನು ಕೊಟ್ಟು ಸ್ತ್ರೀ ಸಾಹಿತ್ಯಾಭಿವೃದ್ಧಿಯಾಗುವಂತೆ ಮಾಡುವ ಭಾರ ಸೋದರರನ್ನೇ ಕೂಡಿರುತ್ತದೆ. ಕನ್ನಡ ಮಹಿಳಾ ಮಂಡಳಿಯವರೂ, ಸಂಘ ಸಂಸ್ಥೆಯವರೂ ಸ್ತ್ರೀ ಸಾಹಿತ್ಯ ಪ್ರಚಾರವನ್ನೂ, ಮಹಿಳೆಯರ ಉನ್ನತಿಯ ಕಾರ್ಯವನ್ನೂ ಕೈಕೊಳ್ಳಬೇಕು. ಸಾಹಿತ್ಯ ಮಂದಿರದವರೂ, ಸಾಹಿತ್ಯ ಸಮ್ಮೇಳನದವರೂ ಸ್ತ್ರೀ ಸಾಹಿತಿಗಳ ಕಡೆಗೆ ವಿಶೇಷ ಲಕ್ಷ್ಯಕೊಡಬೇಕು. ಪತ್ರಿಕಾಕರ್ತರೂ ಗ್ರಂಥಮಾಲೆಯವರೂ ಸ್ತ್ರೀ ಸಾಹಿತಿಗಳಿಗೆ ತಮ್ಮ ಪತ್ರಿಕೆಗಳಲ್ಲಿ ಸ್ಥಾನಕೊಟ್ಟು ಸೇವೆ ಮಾಡಲು ಪ್ರೋತ್ಸಾಹ ಕೊಡಬೇಕು. ಪರಪ್ರಾಂತದಲ್ಲಿಯ ಕನ್ನಡ ಮಹಿಳೆಯರಿಗೂ ಕನ್ನಡವಿದ್ಯೆಯನ್ನು ಕಲಿಸಿ ಅವರಲ್ಲಿಯೂ ಸಾಹಿತ್ಯಪ್ರೇಮವನ್ನುಂಟುಮಾಡಬೇಕು. ಕನ್ನಡಿಗರಿಗೆ ಇರುವ ಪರಭಾಷೆಯ ಭ್ರಾಂತಿಯನ್ನು ಬಿಡಿಸಿ ಕನ್ನಡದ ಮೇಲೆ ಮೋಹ

ಗೊಳ್ಳುವಂಥ ಜನತೆಯ ಸಾಹಿತ್ಯವನ್ನು ಹೆಚ್ಚಾಗಿ ಪ್ರಚಾರದಲ್ಲಿ ತರಬೇಕು. ಸಾಹಿತ್ಯದ ಕಟ್ಟಡ ನಿರ್ಮಾಣವಾಗಬೇಕಾದರೆ, ಎಲ್ಲರ ಸೇವೆಯೂ ಸಹಾಯವೂ ಅತ್ಯವಶ್ಯವಾಗಿ ಬೇಕು. ಸಾಹಿತ್ಯದೇವಿ ಪಕ್ಷಪಾತ ರಹಿತಳಾದ್ದರಿಂದ ಸಾಹಿತ್ಯಕ್ಷೇತ್ರದಲ್ಲಿ ಕುಲ, ಜಾತಿ, ಪಂಥಗಳೆಂದು ಭೇದಮಾಡದೆ ನಿಷ್ಪಕ್ಷಪಾತದಿಂದ ವರ್ತಿಸಿ ಸ್ತ್ರೀ ಸಾಹಿತ್ಯವನ್ನು ಬೆಳಸಬೇಕು. ನಾಡಿನ ನರನಾರಿಯರೆಲ್ಲರೂ ಒಂದಾಗಿ ಸೇರಿ ನಾಡಿನ ಸಾಹಿತ್ಯವನ್ನು ಸಾಗರದಂತೆ ಹಬ್ಬಿಸಬೇಕು. ಕನ್ನಡದಜ್ಞಾನದ ಜ್ಯೋತಿಯು ಎಲ್ಲೆಡೆಯಲ್ಲಿಯೂ ಪ್ರಜ್ವಲಿಸುವಂತೆ ಮಾಡಬೇಕು. ಅಂದು ನಾವು ಸಾಹಿತ್ಯದೇವಿಯ ಸೇವೆಯನ್ನು ಸಲ್ಲಿಸಿದಂತೆ ಆಗುವುದು. ಅಂತಹ ಸುದಿನ ಬೇಗನೆ ಬರಲೆಂದು ಹಾರೈಸೋಣ.

ಭಾರತಾಂಬೆಯ ಹಿರಿಯ ಪುತ್ರಿಯಾದ ಕನ್ನಡಮ್ಮ ಹಿಂದಕ್ಕೆ ಸ್ವಾತಂತ್ರ್ಯದಿಂದಲೂ, ಚಕ್ಕಂದದಿಂದಲೂ ತಿರುಗಾಡುತ್ತ ರತ್ನ ಖಚಿತವಾದ ಸಿಂಹಾಸನದ ಮೇಲೆ ಕುಳಿತು ಸಕಲರಿಂದಲೂ ಬಹು ವೈಭವದಿಂದ ಸನ್ಮಾನವನ್ನು ಪಡೆಯುತ್ತ ಅಷ್ಟೈಶ್ವರ್ಯದಿಂದಲೂ, ಅಟ್ಟಹಾಸದಿಂದಲೂ ಇದ್ದಳು. ಹೀಗಿದ್ದ ನಮ್ಮ ಕನ್ನಡಮ್ಮ ಈಗ ಅಂಗಹೀನಳಾಗಿ ಮೊಂಡ ದೇಹದಿಂದ ಕೂಡಿ ಪಾರತಂತ್ರ್ಯವೆಂಬ ಶೃಂಖಲೆಗಳಿಂದ ಬಂಧಿತಳಾಗಿ, ಸೆರೆಮನೆಯಲ್ಲಿ ದುಃಖದಿಂದ ಬಳಲುತ್ತಿರುವಳು. ಆಕೆ ಬಂಧನದಿಂದ ಮುಕ್ತಳಾದ ಹೊರತು ನಾವೆಂದಿಗೂ ಉದ್ಧಾರವಾಗಲಾರೆವು. ಭಾರತದ ಸ್ವಾತಂತ್ರ್ಯ ನಮಗೆಷ್ಟು ಆವಶ್ಯಕವೋ ಅದಕ್ಕಿಂತಲೂ ಹೆಚ್ಚಾಗಿ ಕನ್ನಡ ನಾಡಿನ ಸ್ವಾತಂತ್ರ್ಯ ಆವಶ್ಯಕ. ಭಾರತ ಸ್ವಾತಂತ್ರ್ಯದೊಡನೆ ನಮ್ಮ ನಾಡಿನ ಸ್ವಾತಂತ್ರ್ಯವನ್ನು ಪಡೆಯಲು ಮುಂದಾಗಬೇಕು. ಆ ವಿಷಯದಲ್ಲಿ ನಮ್ಮ ಸೋದರರು ಎಷ್ಟೋ ಶ್ರಮಪಡುತ್ತಿದ್ದಾಗ್ಗೂ ಸೋದರಿಯರು ಸುಮ್ಮನೆ ಇರುವುದು ಅತಿ ವಿಷಾದ ಸಂಗತಿಯೂ ದುಃಖದ ಮಾತೂ ಆಗಿದೆ. ನಾಡಿನ ಸೇವೆಯನ್ನು ಮಾಡುವುದು ಪ್ರತಿಯೊಬ್ಬ ಕನ್ನಡಿತಿಯ ಆದ್ಯ ಕರ್ತವ್ಯವಿರುತ್ತದೆ. ಇದಕ್ಕಾಗಿ ಸ್ತ್ರೀಯರು ಮನೆಯನ್ನು ಬಿಟ್ಟುಹೋಗಬೇಕಾಗಿಲ್ಲ. ಸಂಸಾರವನ್ನು ತ್ಯಜಿಸಬೇಕಾಗಿಲ್ಲ. ಸೆರೆಮನೆ ಸೇರಬೇಕಾಗಿಲ್ಲ. ಮನೆಯಲ್ಲಿದ್ದುಕೊಂಡೇ ನಾಡಸೇವೆಯನ್ನು ಮಾಡಬಹುದು. ಮೊದಲು ಮನೆಯವರನ್ನು, ಅನಂತರ ನೆರೆಹೊರೆಯವರನ್ನು, ಸಾಧ್ಯವಾದರೆ ಹೊರಗಿನ ಜನರನ್ನು ಸುಧಾರಿಸಿ ಅವರಿಗೆ ಕನ್ನಡದ ಅರಿವನ್ನು ಉಂಟುಮಾಡಿಕೊಟ್ಟು ನಾಡಿನ ಮೇಲೆ ಭಕ್ತಿಯುಂಟಾಗುವಂತೆ ಮಾಡಿದರೆ ನಾಡಿಗೆಷ್ಟೋ ಸಹಾಯಮಾಡಿದಂತಾಗುತ್ತದೆ. ಸುಸಂಘಟನೆ ನಮ್ಮ ನಾಡಿನ ಮೇಲ್ಮೆಯ ಹೆಗ್ಗುರುತು. ನಮ್ಮಲ್ಲಿ ಈ ಬಲವಿಲ್ಲದ್ದರಿಂದಲೇ ನಾವು ಇಂಥ ಪರಿಸ್ಥಿತಿಗೆ ಬಂದಿದ್ದೇವೆ. ಕನ್ನಡ ಬಂಧುಭಗಿನಿಯರು ಇನ್ನು ಮೇಲಾದರೂ ಎಚ್ಚೆತ್ತು, ನಾವೆಲ್ಲರೂ ಒಬ್ಬ ತಾಯಿಯ ಮಕ್ಕಳೇ ಎಂದು ತಿಳಿದು, ನಾಡಿನ ಸ್ವಾತಂತ್ರ್ಯಕಾಗಿ ನಾಡಿನ ನರನಾರಿಯರೆಲ್ಲರೂ ಒಗ್ಗಟ್ಟಿನಿಂದಲೂ ಒಮ್ಮನಸ್ಸಿನಿಂದಲೂ ಕಾರ್ಯ ಮಾಡಬೇಕು. ಪ್ರತಿಯೊಂದು ಸಣ್ಣಪುಟ್ಟ ಹಳ್ಳಿಗಳಲ್ಲಿಯೂ ಕನ್ನಡ ಸಂಘಗಳನ್ನು ಏರ್ಪಡಿಸಿ ಜನರಲ್ಲಿ ಕನ್ನಡದ ಬಗ್ಗೆ ಜಾಗ್ರುತಿಯನ್ನುಂಟುಮಾಡಬೇಕು. ಕನ್ನಡಮ್ಮನ ಮಕ್ಕಳು ನಾವು ; ಕನ್ನಡ ನುಡಿ, ಭಾಷೆ, ಸಾಹಿತ್ಯ, ಕಲೆಗಳು—ನಮ್ಮವು ; ಕನ್ನಡದ ಏಳ್ಗೆಯೇ ನಮ್ಮ ಏಳ್ಗೆ ; ಕನ್ನಡದ ಜೀವವೇ ನಮ್ಮ ಜೀವ; ಆಕೆಯ ಸೇವೆಯಿಂದಲೇ ನಮ್ಮ ಮುಕ್ತಿ— ಎಂಬುದನ್ನು ಪ್ರತಿಯೊಬ್ಬ ಕನ್ನಡಿಗನ ಹೃದಯದಲ್ಲಿ ಒಡಮೂಡುವಂತೆ ಮಾಡಿಸಬೇಕು. ಮಕ್ಕಳಿಗೆ ಮೊದಲು ಕನ್ನಡ ವಿದ್ಯೆಯನ್ನು ಕಲಿಸಿದ ನಂತರ ಎರಡನೆಯದನ್ನು ಕಲಿಯುವುದಕ್ಕೆ ಆಸ್ಪದಕೊಟ್ಟು, ಅವರಲ್ಲೂ ನಾಡಭಕ್ತಿಯನ್ನುಂಟುಮಾಡಬೇಕು. ಕನ್ನಡ ನಾಡಿನ ಭಕ್ತಿ; ವಿಶ್ವಾಸ, ಅಭಿಮಾನಗಳನ್ನು ಹುಟ್ಟಿಸುವಂಥ ಜನತೆಯ ಸಾಹಿತ್ಯವನ್ನು ಹೆಚ್ಚು ಪ್ರಚಾರಮಾಡಬೇಕು. ಪರಪ್ರಾಂತದಲ್ಲಿ ವಾಸಿಸುವ ಕನ್ನಡಿಗರನ್ನೂ ಕನ್ನಡದ ಬಗ್ಗೆ ಎಚ್ಚರಿಸಿ ಕರ್ನಾಟಕ ಪ್ರಾಂತೀಕರಣದ ಬಗ್ಗೆ ಎಲ್ಲೆಡೆಯಿಂದಲೂ ಬೆಂಬಲ ದೊರೆಯುವಂತೆ ಪ್ರಯತ್ನಿಸಬೇಕು. ಈ ವಿಷಯದಲ್ಲಿ ನಾವು ಪರಪ್ರಾಂತದವರನ್ನು ಅನುಕರಣಮಾಡುವುದು ಒಳ್ಳೆಯದು.

ಕನ್ನಡಿಗರ ಮೊದಲನೆಯ ಕರ್ತವ್ಯವಾದ ನಮ್ಮ ನಾಡಿನ ಸ್ವಾತಂತ್ರ್ಯವನ್ನು ಸಂಪಾದಿಸಿ ನಾಡಮಾತೆಯನ್ನು ಸ್ವತಂತ್ರಳನ್ನಾಗಿ ಮಾಡೋಣ. ನಾಡ ಸಿರಿಸಂಪತ್ತುಗಳನ್ನು ಹೆಚ್ಚಿಸಿ ಕನ್ನಡಮ್ಮನ ಹಿರಿಮೆಯನ್ನು ಬೆಳಸೋಣ. ಕನ್ನಡ ಸಾಹಿತ್ಯಸರಗಳಿಂದ ಕನ್ನಡಾಂಬೆಯನ್ನು ಪೂಜಿಸಿ, ಸಂಸ್ಕೃತಿ ಕಲೆಗಳಿಂದ ಬೆಳಸೋಣ. ಕನ್ನಡದ ಕೀರ್ತಿಯನ್ನು ಎಲ್ಲೆಡೆಯಲ್ಲಿಯೂ ಹಬ್ಬಿಸಿ, ಕನ್ನಡಮ್ಮನನ್ನು ಸಂತೋಷಪಡಿಸೋಣ. ಕನ್ನಡತಾಯನ್ನು ವೈಭವದಿಂದ ಮೆರಸಿ, ಅವಳನ್ನು ಆದರ್ಶಮಾತೆಯನ್ನಾಗಿ ಮಾಡಿ, ಕನ್ನಡ ಬಾವುಟವನ್ನು ಹಾರಿಸೋಣ. ಈ ಪ್ರಕಾರ ಕೆಲಸ ಮಾಡುವುದಕ್ಕೆ ಕನ್ನಡ ನರನಾರಿಯರಿಗೆ ಸದ್ಬುದ್ಧಿಯನ್ನೂ ಶಕ್ತಿ ಸಾಮರ್ಥ್ಯವನ್ನೂ ಕೊಟ್ಟು ಕನ್ನಡಮ್ಮ ಅನುಗ್ರಹಿಸಬೇಕೆಂದೂ ಹಿಂದಿನಂತೆ ನಮ್ಮ ನಾಡು ಆದರ್ಶದ ನಾಡಾಗಲೆಂದೂ ಹಾರೈಸಿ, ಇಂತಹ ಸೌಭಾಗ್ಯವನ್ನು ಕಾಣುವ ಸುಯೋಗ ಶೀಘ್ರದಲ್ಲೇ ಬರಲೆಂದು ಪರಮೇಶ್ವರನನ್ನು ಪ್ರಾರ್ಥಿಸುವೆನು.

---

## ಬಸವಣ್ಣನವರ ವಚನಗಳು

ನವಿಲುಗುಂದದ ಗವಿಮಠದ ಶ್ರೀಮನ್ನಿರಂಜನ ಬಸವಲಿಂಗಸ್ವಾಮಿಗಳು ಕಳೆದ ೧೧ನೆಯ ತಾರೀಖು ಪರಿಷನ್ಮಂದಿರದಲ್ಲಿ ಶ್ರೀಮಾನ್ ಮುದವೀಡು ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಮಾಡಿದ ಭಾಷಣದ ಸಾರಾಂಶ

ಮೊಟ್ಟಮೊದಲು ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರನ್ನು ಪರಿಚಯಮಾಡಿಕೊಟ್ಟ ಬಳಿಕ ಶ್ರೀ ಶ್ರೀ ಸ್ವಾಮಿಗಳವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

"ಬಸವಣ್ಣನವರು ದಿವ್ಯ ವಿಭೂತಿಗಳು. ಜನಜಾಗ್ರುತಿಗಾಗಿ ದುಡಿದು ತಮ್ಮ ಬಾಳನ್ನು ಸಾಧಿಸಿಕೊಂಡವರು. ಇಂದಿನ ಇಪ್ಪತ್ತನೆಯ ಶತಮಾನಕ್ಕೂ ಅವರು ಜೀವಿಸಿದ್ದ ಅಂದಿನ ಕಾಲಕ್ಕೂ ಎಂದರೆ ಹನ್ನೆರಡನೆಯ ಶತಮಾನಕ್ಕೂ ಒಂದು ಸೂಕ್ಷ್ಮ ಸಾಮ್ಯ ಕಂಡುಬರುತ್ತದೆ. ಅದೇನೆಂದರೆ ಎರಡು ಕಾಲಗಳಲ್ಲಿಯೂ ಜನರಲ್ಲಿ ಸುಖವಿರಲಿಲ್ಲ. ಬಲ್ಲಿದರ ಕಾಟದಿಂದ ಜನರು ಸಂಕಟಪಡುತ್ತಿದ್ದರು. ಈಗ ಅನ್ಯದೇಶೀಯರಿಂದ ನಮಗೆ ಹಾವಳಿ ಇದ್ದರೆ ಆಗ ನಮ್ಮವರೆ ತಮ್ಮನ್ನು ಶ್ರೇಷ್ಠ ಜಾತಿಯವರೆಂದು ಭಾವಿಸಿಕೊಂಡು ಮಿಕ್ಕವರನ್ನು ಬಹುವಾಗಿ ಹಿಂಸಿಸುತ್ತ, 'ಎಲ್ಲರೂ ಮೋಕ್ಷಕ್ಕೆ ಅರ್ಹರಲ್ಲ' ಎಂದು ಮುಂತಾಗಿ ಹೇಳುತ್ತಾ ಬಂದರು. ಜಾತಿಭೇದದಿಂದ ಕಲಹಗಳೂ ಮನಸ್ತಾಪಗಳೂ ತುಂಬಿದ್ದುವು. ಈಗ ಮಹಾತ್ಮಾ ಗಾಂಧಿಯವರು ರಾಜಕೀಯವನ್ನು ಪ್ರಧಾನವಾಗಿಟ್ಟುಕೊಂಡು ಹೇಗೆ ನಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸುತ್ತಿರುವರೋ ಅದೇ ರೀತಿ ೧೨ನೆಯ ಶತಮಾನದಲ್ಲಿ ಬಸವಣ್ಣನವರು 'ಧರ್ಮ'ವನ್ನೇ ಪ್ರಧಾನವಾಗಿಟ್ಟುಕೊಂಡು ಜನರ ಉದ್ಧಾರಕ್ಕಾಗಿ ಬಹಳ ದುಡಿದರು. ಬುದ್ಧ, ಏಸು ಮುಂತಾದ ಹಿರಿಯರಂತೆಯೇ ಬಸವಣ್ಣನವರೂ ಬಲ್ಲಿದರ ದೌಷ್ಟ್ಯಕ್ಕೆ ತುತ್ತಾಗಿ ಕೈಗುಂದಿ ಬಿದ್ದವರನ್ನು ಉದ್ಧಾರಮಾಡಲು ಕಂಕಣಕಟ್ಟಿದರು. ಕೇವಲ ಬಾಯಿಮಾತಿನಿಂದಲ್ಲ, ಕೃತಿಯಿಂದ ಕೂಡ ದುಡಿದು ಈ ಕಾರ್ಯದಲ್ಲಿ ಬಹು ಯಶಸ್ಸನ್ನು ಸಂಪಾದಿಸಿದರು.

ಅವರ ಕೃತಿಗಳು – ವಚನಗಳು – ಹುಟ್ಟಿ ೮೦೦ ವರ್ಷಗಳಾದರೂ ಇಂದಿಗೂ ಅವುಗಳ ಶಕ್ತಿ, ತೇಜಸ್ಸು ಸ್ವಲ್ಪವೂ ಕುಂದಿಲ್ಲ. ನಾಡಾಳುಗಳ ಆತ್ಮಕ್ಕೆ ಚೇತನವನ್ನು ಕೊಡುವ ಅದ್ಭುತ ಶಕ್ತಿ ಅವುಗಳಲ್ಲಿ ಇನ್ನೂ ಉಳಿದಿದೆ. ಮಹಾತ್ಮಾ ಗಾಂಧಿಯವರ ಮಾತುಗಳಂತೆ ಬಸವಣ್ಣನವರ ಪ್ರತಿಯೊಂದು ವಚನವೂ ಪ್ರತಿಯೊಂದು ಮಾತೂ ಬಹು ಪರಿಣಾಮಕಾರಿಯಾದದ್ದು. ಇದಕ್ಕೆ ಬಹು ಮುಖ್ಯ ಕಾರಣವೆಂದರೆ ಅವರಲ್ಲಿದ್ದ ಹೃದಯ ಶುದ್ಧಿ, ಆತ್ಮ ಶುದ್ಧಿ. ಬಸವಣ್ಣನವರು 'ಸತ್ತು ಉಳಿದವರು.' ಅವರ ಬಾಳು ಅಂದಿನ ಸಮಾಜದ ಏಳಿಗೆಗೆ ಮಾತ್ರ ಬೆಳಗಿ ನಂದಲಿಲ್ಲ. ಮುಂದಿನ ತಲೆಮೊರೆಗಳೂ ಅವರ ಆತ್ಮಕಥೆಯಂತಿರುವ ವಚನಗಳ ಬೆಳಕಿನಿಂದ ತಮ್ಮ ಬಾಳನ್ನು ಬೆಳಗಿಸಿಕೊಳ್ಳಲು ಅನುಕೂಲವಾಗುವಂತೆ ಉಪಕಾರಮಾಡಿದರು.

ಬಸವಣ್ಣನವರು ನುಡಿದಂತೆ ನಡೆದುಕೊಳ್ಳುತ್ತಿದ್ದರು. ಸುತ್ತಲಿನ ಜನರಮೇಲೆ ಅವರಿಗೆ ಪೂರ್ಣ ಅಂತಃಕರಣವಿತ್ತು. ಸ್ತ್ರೀಯರ ಶೋಚನೀಯ ಸ್ಥಿತಿಯನ್ನು ಕಂಡು ಮರುಗಿ, ಅವರಿಗೆ ಸಮಾಜದಲ್ಲಿ ಗೌರವವೂ

ಪೂಜ್ಯತೆಯೂ ಲಭಿಸುವಂತೆ ಮಾಡಿದರು. ಹರಿ–ಹರ ಇವರುಗಳಲ್ಲಿ ಇರುವ ಚೈತನ್ಯ ಒಂದೇ ಎಂದೂ, ನಾವು ಸತ್ಯವನ್ನರಿಯದೆ ಸುಮ್ಮನೆ ಜಾತಿ, ಮತಗಳೆಂದು ಭೇದವನ್ನು ಕಲ್ಪಿಸಿ ವೃಥಾ ಶ್ರಮಪಡುತ್ತಿರು ತ್ತೇವೆಂದೂ ತಿಳಿಸಿ, ಹಿಂದೂ ಸಂಘಟನೆಯ ಮತ್ತು ಶುದ್ಧಿಯ ಕೆಲಸ ವನ್ನು ಕೈಗೊಂಡರು. ಪ್ರತಿಯೊಬ್ಬನೂ ತನ್ನ ಅಂತರಂಗವನ್ನು ಶುದ್ಧ ವಾಗಿಡಬೇಕೆಂದೂ, ಅಂತರಂಗ ಶುದ್ಧಿ ಇಲ್ಲದೆ ಬರಿಯ ಬಾಹ್ಯಾಡಂಬರ ದಿಂದ ಏನೂ ಪ್ರಯೋಜನವಿಲ್ಲವೆಂದೂ ಹೇಳಿ, 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಅನ್ಯರನು ನಿಂದಿಸಬೇಡ, ತನ್ನ ಬಣ್ಣಿಸಬೇಡ, ಇತರರನು ಹಳಿಯಬೇಡ, ಇದೇ ಅಂತರಂಗದ ಶುದ್ಧಿ' ಎಂಬ ದೊಡ್ಡ ತತ್ತ್ವವನ್ನು ಸಾರಿದರು.

ಬಸವಣ್ಣನವರ ಅತಿಥಿ ಸೇವೆ ಅಮೋಘವಾದುದು. ತಮ್ಮಲ್ಲಿ ಎಷ್ಟಿದ್ದರೆ ಅಷ್ಟೇ ಸಾಕು ಎಂದು ಅತಿಥಿಗಳಿಗೆ ಅದನ್ನು ಸಲ್ಲಿಸುತ್ತಿದ್ದರು. ನಾಳೆಯ ಯೋಚನೆ ಅವರು ಮಾಡುತ್ತಿರಲಿಲ್ಲ. ಅತಿಥಿಗಳಿಗೆ ಆಗಿ ಮಿಕ್ಕಿದ್ದು ತಮಗೆ ಅನ್ನುತ್ತಿದ್ದರು. ತಮ್ಮ ಧನವೆಲ್ಲವೂ ಶಿವನದು, ತಮ್ಮದಲ್ಲ ಎಂದು ಲೋಕಕ್ಕೆ ತನುಮನಧನವನ್ನು ನೀಡುತ್ತಿದ್ದರು.

'ನಾನು' ಎಂಬುದು ಮನುಷ್ಯನನ್ನು ನಾಶಪಡಿಸುತ್ತದೆ. ಎಲ್ಲ ದೇವರ ಪ್ರೇರಣೆ, ಆತನು ಮಾಡಿಸಿದ್ದು ಎನ್ನದೆ, ಅಹಂಕಾರದಿಂದ ಬೀಗಿದರೆ ಅವನ ನಾಶ ಖಂಡಿತವೆಂದು ತಮ್ಮ ವಚನದಲ್ಲಿ ತಿಳಿಸಿ, ಒಮ್ಮೆ ತಮ್ಮನ್ನು ಅಹಂಕಾರ ಆವರಿಸಿದ್ದಾಗ ಬಹು ಪೇಚಾಡಿ 'ಎಳ್ಳಿಲ್ಲದೆ ಗಾಣವನಾಡಿದಂತಾಯಿತು ನನ್ನ ಭಕ್ತಿ' ಎಂದು ತಮ್ಮ ವಚನದಲ್ಲಿ ಹೇಳಿದ್ದಾರೆ.

'ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ತಿಳಿಸಿ ಬಸವಣ್ಣನವರು ಕೇವಲ ಕಿಂಕರವೃತ್ತಿಗೆ ಬಹು ಪ್ರಾಮುಖ್ಯತೆ ಕೊಟ್ಟಿದ್ದರು. ಎನಗಿಂತ ಕಿರಿಯರಿಲ್ಲ, ಕಾಯಕವೇ ಕೈಲಾಸ, ಸೇವೆಯೇ ಅತಿಮುಖ್ಯ ಕಾಯಕ–ಬರಿಯ ವೇಷಧಾರಿಯಾದರೆ ಮಾತ್ರ ಸಾಲದು, ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಲೋಕದ ಜನರು ಛೀ ಎನ್ನುತ್ತಾರೆ ಎಂದು ಬಸವಣ್ಣನವರು ಜನತೆಗೆ ಬುದ್ಧಿ ಕಲಿಸುತ್ತಿದ್ದರು. "ಬಸವಣ್ಣನವರು ಈ ಬುದ್ಧಿಯ ವಚನಗಳನ್ನು ಕೇವಲ ಪಾರಮಾರ್ಥಿಕ ದೃಷ್ಟಿಯಿಂದಲೇ ಹೇಳಲಿಲ್ಲ. ಅವರು ಬಹು ಸಂಸ್ಕೃತರು; ಯಾರ ಮನವನ್ನೂ ನೋಯಿಸದೆ ಮಾನವನ ಏಳಿಗೆಗೆ ಬಹುರೀತಿಯಲ್ಲಿ ಕಾರಣರಾಗಿರುವರು" ಎಂದು ಶ್ರೀ ಶ್ರೀ ಸ್ವಾಮಿಗಳು ತಮ್ಮ ಅಮೋಘವಾದ ಭಾಷಣವನ್ನು ಮುಕ್ತಾಯಗೊಳಿಸಿದರು.

ಅನಂತರ ಅಧ್ಯಕ್ಷರು 'ಬಸವಣ್ಣನವರು ಮಹಾನುಭಾವರು, ಅವರ ಕೆಲಸ ಅತ್ಯದ್ಭುತವಾದದ್ದು. ವೇದ ಕಾಲದಿಂದಲೂ ಆಗಾಗ್ಗೆ ಜನತೆಯಲ್ಲಿ ಮೂಡುತ್ತ ಬಂದ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ಕೊಟ್ಟು ಉಪನಿಷತ್ತುಗಳು, ದಾಸರ ಪದಗಳು, ಶಿವಶರಣರ ವಚನಗಳು ಸಹಾಯಮಾಡಿರುತ್ತವೆಂದೂ ಸನಾತನ ಧರ್ಮದ ಪುನರುದ್ಧಾರವನ್ನೇ ಬಸವಣ್ಣನವರು ಕೈಗೊಂಡರೆಂದೂ ಈ ಧರ್ಮಸಾರ ಇಂದಿನ ಕನ್ನಡ ನಾಡಿನ ಉದ್ಧಾರಕ್ಕೆ ಅತ್ಯಾವಶ್ಯಕವೆಂದೂ ತಿಳಿಸಿ, ಸಾಮ್ಯಗಳನ್ನು ತೋರಿಸುವುದಕ್ಕಾಗಿ ಕೆಲವು ದಾಸರ ಪದಗಳನ್ನು ಹಾಡಿದರು.

ಕೊನೆಯಲ್ಲಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರು ಅಧ್ಯಕ್ಷರನ್ನೂ ಉಪನ್ಯಾಸಕರನ್ನೂ ವಂದಿಸಿದರು.

---

## ಕನ್ನಡ ಸುದ್ದಿ

**ಬೆಂಗಳೂರು ದಂಡು : ಸೆಂಟ್ ಜೋಸೆಫ್ಸ್ ಕಾಲೇಜಿನ ಕನ್ನಡ ಸಂಘ**

ಕಳೆದ ೧೮ನೆಯ ತಾರೀಖು ಸಂಜೆ 'ಶ್ರೀ'ಯವರು ಈ ಸಂಘದ ಉಪಸಂಹಾರ ಭಾಷಣವನ್ನು ಮಾಡಿದರು. ಸಂಘಕ್ಕೆ ಯುವರಾಜ ಕುಮಾರ ಶ್ರೀ ಜಯಚಾಮರಾಜ ಒಡೆಯರವರೂ ದಿವಾನ್ ಸರ್ ಮಿರ್ಜಾ ಇಸ್ಮೈಲ್‌ರವರೂ ಶುಭಸಂದೇಶಗಳನ್ನು ಕಳಿಸಿದ್ದರು.

'ಶ್ರೀ' ಯವರು ತಮ್ಮ ಭಾಷಣದಲ್ಲಿ ಕನ್ನಡ ನಾಡು ನುಡಿಗಳ ಹಿರಿಮೆ, ಹಳಮೆ, ಚೆಲುವು ಇವುಗಳನ್ನು ತಿಳಿಯ ಹೇಳಿ, ನಾಡಿನ ಈಗಿನ ಸ್ಥಿತಿಯನ್ನು ವಿವರಿಸಿ, ಶಾಲೆ ಕಾಲೇಜುಗಳ ಆಶ್ರಯದಲ್ಲಿ ಸ್ಥಾಪಿತವಾಗುವ ಕರ್ನಾಟಕ ಸಂಘಗಳು ಪರಿಷತ್ತಿನೊಡನೆ ಸಂಬಂಧ ಬೆಳೆಸಿ, ಕನ್ನಡ ನಾಡು ನುಡಿಗಳ ಏಳಿಗೆ, ಏಕೀಕರಣ ಮುಂತಾದ ಹಲವು ಕಾರ್ಯಗಳಲ್ಲಿ ಪರಿಷತ್ತಿನೊಡನೆ ಸಹಕರಿಸಬೇಕೆಂದೂ ಎಲ್ಲರೂ ನಾಡಿನ ಉದ್ಧಾರ ಕಾರ್ಯಕ್ಕೆ ಮನಸ್ಸು ಕೊಡಬೇಕೆಂದೂ ಕೋರಿದರು.

**ಮೈಸೂರು : ವಿದ್ಯಾರ್ಥಿ ಸಂಘ**

ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಕಾರ್ಯದರ್ಶಿಗಳಿಂದ ವರದಿಯ ಬಳಿಕ, ಸ್ಪರ್ಧೆಗಳಲ್ಲಿ ಗೆದ್ದವರಿಗೆ ಅಧ್ಯಕ್ಷರಿಂದ ಬಹುಮಾನ ವಿತರಣೆಯಾದ ಮೇಲೆ 'ಶ್ರೀ'ಯವರು ಭಾಷಣ ಮಾಡುತ್ತಾ ಸಂಸ್ಕೃತ ಜ್ಞಾನ ಪ್ರಚಾರಕ್ಕಾಗಿ ಸಂಘದವರು ಮಾಡುತ್ತಿರುವ ಸೇವೆಯನ್ನು ಹೊಗಳಿದರು. ಸಂಘದವರು ನಡೆಸುತ್ತಿರುವ 'ಚಂದ್ರಿಕೆ' ಎಂಬ ಕೈಬರಹದ ಪತ್ರಿಕೆಯಲ್ಲಿ ಕನ್ನಡ ಲೇಖನಗಳನ್ನೂ ಸೇರಿಸುತ್ತಿರುವುದಕ್ಕಾಗಿ ಸಂತೋಷಪಟ್ಟರು. ಸಂಸ್ಕೃತ ಕನ್ನಡ ವಿದ್ಯಾರ್ಥಿಗಳಲ್ಲಿ ಪರಸ್ಪರ ಬಾಂಧವ್ಯ ಹೆಚ್ಚಬೇಕೆಂದೂ, ಸಂಸ್ಕೃತ ವಿದ್ವಾಂಸರು ಕನ್ನಡದ ಮೂಲಕ ಜ್ಞಾನಪ್ರಚಾರ ಮಾಡಬೇಕೆಂದೂ, ಸಂಸ್ಕೃತದಲ್ಲಿ ಅಡಗಿರುವ ಪ್ರಾಚೀನ ಧಾರ್ಮಿಕ ಭಾವನೆಗಳನ್ನೂ ಧ್ಯೇಯಗಳನ್ನೂ ಆಧುನಿಕ ಕಾಲದಲ್ಲಿ ಜನರು ಹೇಗೆ ತಮ್ಮ ಬಾಳಿಗೆ ಹೊಂದಿಸಿಕೊಂಡು ಆಚರಣೆಗೆ ತಂದುಕೊಳ್ಳಬೇಕೆಂಬ ಬಗ್ಗೆ ಮಾರ್ಗದರ್ಶನ ಮಾಡಬೇಕೆಂದೂ ಹೇಳಿದರು.

**ಭದ್ರಾವತಿ : ವಿದ್ಯಾಸಂಘ**

ಈ ಸಂಘದ ಆಶ್ರಯದಲ್ಲಿ ೧೪-೨-೧೯೫೦ನೆಯ ಮಂಗಳವಾರ ಸಂಜೆ ಹೈಸ್ಕೂಲು ಮಂದಿರದಲ್ಲಿ ಶ್ರೀ ಜಿ. ಕೆ. ಸತ್ಯಬೋಧಾಚಾರ್ ಎಂ.ಎ., ಬಿ.ಟಿ. ಅವರ ಅಧ್ಯಕ್ಷತೆಯಲ್ಲಿ ಶ್ರೀ ಕೆ. ಬಿ. ರಾಘವಾಚಾರ್, ಎಂ.ಎ., ಬಿ.ಟಿ. ಅವರು ಜನ್ನನ 'ಯಶೋಧರ ಚರಿತ್ರೆ'ಯ ವಿಷಯವಾಗಿ ಭಾಷಣಮಾಡಿದರು.

**ಕಾಸರಗೋಡು : ಕರ್ನಾಟಕ ಏಕೀಕರಣ ಪ್ರಚಾರ**

ಕಾಸರಗೋಡಿನ ಪೆರಡಾಲ ಮಹಾಜನ ಸಂಸ್ಕೃತ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಸಮಿತಿಯ ಆಶ್ರಯದಲ್ಲಿ ೧೧–೨–೫೦ರಲ್ಲಿ ಶ್ರೀಮಾನ್ ಜಿನರಾಜ ಹೆಗಡೆ, ಎಂ.ಎಲ್.ಎ. (ಕೇಂದ್ರ) ಅವರು ಕರ್ನಾಟಕ ಏಕೀಕರಣ ಪ್ರಚಾರ ನಡಸಿದರು. ಶ್ರೀ ಹೆಗ್ಗಡೆಯವರು ಕರ್ನಾಟಕ ಏಕೀಕರಣವಾದ ಹೊರತು ಕನ್ನಡಿಗರಿಗೆ ಏಳಿಗೆಯಿಲ್ಲವೆಂದು ನುಡಿದು, ಪ್ರತ್ಯೇಕ ಕನ್ನಡ ಪ್ರಾಂತವಾಗದೆ ಸಂಯುಕ್ತ ರಾಜ್ಯಾಂಗ ವ್ಯವಸ್ಥೆ ಜಾರಿಗೆ ಬಂದರೆ ಕನ್ನಡ ನಾಡಿನ ಸ್ಥಿತಿ ಇನ್ನೂ ಕೆಟ್ಟುಹೋಗುವುದೆಂದು ಅಂಕಿಅಂಶಗಳನ್ನು ಕೊಟ್ಟು ವಿವರಿಸಿದರು. ಕಾಸರಗೋಡು ಅಚ್ಚಗನ್ನಡ ಪ್ರದೇಶವೆಂದು ಹೇಳಿ, ಕೇರಳದವರು ಆ ತಾಲ್ಲೂಕನ್ನು ತಮ್ಮ ಪ್ರಾಂತಕ್ಕೆ ಸೇರಿಸಿಕೊಳ್ಳಬೇಕೆಂದು ನಡೆಸುತ್ತಿರುವ ಚಳವಳಿಯನ್ನು ಖಂಡಿಸಿದರು.

ಉಪನ್ಯಾಸಾನಂತರ ಕನ್ನಡನಾಡನ್ನು ಕುರಿತ ಹಲವು ಕವಿತೆಗಳ ವಾಚನವಾಯಿತು. ವಿದ್ಯಾರ್ಥಿಗಳು 'ಪುಲಿಕೇಶಿ' ಎಂಬ ನಾಟಕವನ್ನು ಪ್ರದರ್ಶಿಸಿದರು. ಕಾಸರಗೋಡಿನಲ್ಲಿ ಕರ್ನಾಟಕ ಏಕೀಕರಣ ಪರಿಷತ್ತನ್ನು ಸೇರಿಸಬೇಕೆಂಬ ಪ್ರಯತ್ನ ನಡೆದಿದೆ.

**ರುದ್ರಪಟ್ಟಣ : ಕರ್ನಾಟಕ ಸಂಘ**

ಸಂಘದವರು ಕಂಠಾಪುರದಲ್ಲಿ ಪ್ರಚಾರೋಪನ್ಯಾಸ ನಡಸಿ ರೈತರ ಏಳಿಗೆಗೆ ಅಗತ್ಯವಾದ ವಿಷಯಗಳನ್ನು ತಿಳಿಸಿದರು.

**ಗದುಗು : ಕುಮಾರವ್ಯಾಸ ಬಳಗ**

ಈ ಬಳಗದ ವಾರ್ಷಿಕೋತ್ಸವ ಕಳೆದ ೧೮–೨–೫೦ನೆಯ ದಿವಸ ಶ್ರೀ ನಾರಾಯಣರಾವ್ ಹುಯಿಲಗೋಳ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಧಾರವಾಡದ ಕರ್ನಾಟಕ ಕಾಲೇಜಿನ ಪ್ರೊ॥ ಕೆ. ಆರ್. ಮಹಿಷಿ, ಎಂ.ಎ. ಅವರು ಅತಿಥಿಗಳಾಗಿ ಆಮಂತ್ರಿತರಾಗಿದ್ದರು.

(ಗದುಗಿನ ವಿದ್ಯಾದಾನ ಸಮಿತಿಯ ಜವಾಹರ ಹೈಸ್ಕೂಲಿನಲ್ಲಿ ಹೋದ ವರ್ಷ ಫೆಬ್ರುವರಿ ತಿಂಗಳಲ್ಲಿ 'ಕುಮಾರವ್ಯಾಸ ಬಳಗ' ಸ್ಥಾಪಿತವಾಯಿತು.)

**ಕೊಡಗು : ಕರ್ನಾಟಕ ಸಂಘ**

ಈ ಸಂಘದ ವಾರ್ಷಿಕೋತ್ಸವ ಮಡಿಕೇರಿಯಲ್ಲಿ ಕಳೆದ ೧೬, ೧೭, ೧೮ನೆಯ ತಾರೀಖುಗಳಲ್ಲಿ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಸಂದರ್ಭದಲ್ಲಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು 'ವಾಲ್ಮೀಕಿ'ಯ ವಿಷಯವಾಗಿಯೂ, ಶ್ರೀ ವೆಂಕಟರಾಮಯ್ಯನವರು 'ರನ್ನ ಕವಿಯ ದುರ್ಯೋಧನ ಪಾತ್ರ' ಮತ್ತು 'ಕಾಳಿದಾಸ ಮಹಾಕವಿ' ಎಂಬ ವಿಷಯಗಳನ್ನು ಕುರಿತೂ ಅಮೋಘವಾದ ಭಾಷಣಗಳನ್ನು ಮಾಡಿದರು.

**ಮಂಗಳೂರು : ಯಕ್ಷಗಾನ ಸಂಘದ ವರ್ಧಂತಿ**

ಈ ಸಂಘದ ಆರನೆಯ ವಾರ್ಷಿಕೋತ್ಸವ ಕಳೆದ ೧೮ನೆಯ ತಾರೀಖು ಶ್ರೀ ಕೆ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಅಧ್ಯಕ್ಷರು ಯಕ್ಷಗಾನ ಕಲೆಯ ಅಭಿವೃದ್ಧಿಗೆ ತಕ್ಕ ಸಲಹೆಗಳನ್ನು ಕೊಟ್ಟು, ಯಕ್ಷಗಾನವನ್ನು ಜನಜಾಗೃತಿಯ ಸಾಧನವನ್ನಾಗಿ ಹೆಚ್ಚುಹೆಚ್ಚಾಗಿ ಉಪಯೋಗಿಸಿಕೊಳ್ಳಬೇಕೆಂದರು.

**ಈ ಪತ್ರಿಕೆ 'ಮೈಸೂರು ಪೇಪರ್ ಮಿಲ್ಸ್'ನಲ್ಲಿ ತಯಾರಾದ ಕಾಗದದಲ್ಲಿ ಅಚ್ಚಾಗಿದೆ.**

೨೬-೯೦೦—೧೯೫೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ:
ಸಂಚಿಕೆ ೧೯ | ಬೆಂಗಳೂರು, ಶುಕ್ರವಾರ, ಮಾರ್ಚಿ ೧, ೧೯೪೦ | ಬಿ. ವೆಂಕೋಬರಾವ್, ಬಿ.ಎ.

## ದಿವಂಗತ ದೇಶಭಕ್ತ 'ಕರ್ನಾಟಕ ಭೂಷಣ' ಕೌಜಲಗಿ ಶ್ರೀನಿವಾಸರಾಯರು

(ಶ್ರೀ ಮುದವೀಡು ಕೃಷ್ಣರಾಯರಿಂದ)

ಕನ್ನಡ ನಾಡು ಒಂದಾಗಬೇಕು, ಮುಂದಾಗಬೇಕು; ಕನ್ನಡ ಸಾಹಿತ್ಯ ವಿಶ್ವ ಸಾಹಿತ್ಯದಲ್ಲಿ ಸ್ಥಾನ ಪಡೆಯಬೇಕು; ಕನ್ನಡಿಗರ ವಿವಿಧ ಕಲೆಗಳು ವ್ಯಾಪಾರ ಉದ್ಯೋಗಗಳು ಮೊದಲಿನಂತೆ ಹೆಚ್ಚಳವನ್ನು ಹೊಂದಿ ದಿಗಂತದಲ್ಲಿ ವ್ಯಾಪಿಸಬೇಕು. ಕನ್ನಡ ನಾಡಿನ ನಿಸರ್ಗ ಸಂಪತ್ತೆಲ್ಲವೂ ಎಲ್ಲ ಬಗೆಯಿಂದಲೂ ಸಂಶೋಧಿತವಾಗಿ, ಪರಿಷ್ಕೃತವಾಗಿ, ಬಯಲಿಗೆ ಬಂದು ಕನ್ನಡ ಜನಾಂಗದ ಭೌತಿಕ ಸಂಪತ್ತು ಬೆಳೆದು ಪ್ರತಿಯೊಂದು ಕನ್ನಡ ಕುಟುಂಬದ ಬೀಡು ಸಿರಿದೇವಿಯ ಬೀಡಾಗಬೇಕು; ಕನ್ನಡಿಗರ ಜೀವನ ಮೊದಲಿನಂತೆ ಆಧ್ಯಾತ್ಮಿಕ ಶ್ರೇಯಸ್ಸಿನ ಆಗರವಾಗಿ, ಜಗತ್ ಕಲ್ಯಾಣಕಾರಕ ಮಹತ್ಕಾರ್ಯಗಳು ಕನ್ನಡಮ್ಮನ ಮಕ್ಕಳಿಂದ ಪ್ರಕೃಷ್ಟವಾಗಿ ಬೆಳೆದು ಜಗತ್ತಿನಲ್ಲೆಲ್ಲ ಕನ್ನಡ ನಾಡಿನ ಗೆಲುವಿನ ಬಾವುಟ ಹಾರಾಡಬೇಕು: ಅಂತೂ ಇಂದು ಹೇಳ ಹೆಸರಿಲ್ಲದ ಕನ್ನಡ ಜನಾಂಗ ಸರ್ವಸಂಪತ್ಸಮೃದ್ಧಿಗಳಿಂದ ಕೂಡಿದುದಾಗಿ ಹಿಂದಿನ ಕಾಲದಲ್ಲಿ ಈ ಮರ್ತ್ಯಲೋಕದ ಸ್ವರ್ಗವಾಗಿ ಮೆರೆದಂತೆ ಇನ್ನು ಮುಂದಾದರೂ ತನ್ನ ಕರ್ತೃತ್ವದಿಂದ ಮೆರೆಯುವಂತಾಗಬೇಕು—ಎಂದು ಹಗಲಿರುಳು ಹಂಬಲಿಸುತ್ತಿದ್ದ ಮಹಾನುಭಾವ 'ಕರ್ನಾಟಕ ಭೂಷಣ' ಕೌಜಲಗಿ ಶ್ರೀನಿವಾಸರಾಯರು ವಿಜಾಪುರದೊಳಗಿನ ತಮ್ಮ ಭವ್ಯವಾದ ಅರಮನೆಯಂಥ ಮನೆಯಲ್ಲಿ ಮೊನ್ನೆ ೨೨ನೆಯ ತಾರೀಖು ಗುರುವಾರ ರಾತ್ರಿ ಸ್ವರ್ಗಸ್ಥರಾದುದು ಕನ್ನಡ ಜನಾಂಗಕ್ಕೆಲ್ಲ ಕಡುತರವಾದ ದುಃಖಕ್ಕೆ ಕಾರಣವಾಗಿದೆ.



ದಿವಂಗತ ಶ್ರೀ ಕೌಜಲಗಿ ಶ್ರೀನಿವಾಸರಾಯರು

ಪಡಿಯಚ್ಚು: 'ಸಂಯುಕ್ತ ಕರ್ನಾಟಕ'ದ ಕೃಪೆ

ಧಾರವಾಡದ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ನನಗೂ ಅವರಿಗೂ ಮೊದಲು ಪರಿಚಯವಾಯಿತು. ಅವರು ಮುಂದೆ ಕಾಲೇಜು ಶಿಕ್ಷಣಕ್ಕೆಂದು ಪುಣೆಗೆ ಹೋದಾಗ ನನಗೂ ಒಂದೆರಡು ವರ್ಷ ಅಭ್ಯಾಸಕ್ಕಾಗಿ ಪುಣೆಯಲ್ಲಿ ಹೋಗಿ ನಿಲ್ಲಬೇಕಾಯಿತು. ಪರಭಾಷೆಯ ಕೇಂದ್ರದಲ್ಲಿ ಸ್ವಭಾಷೆಯವರ ಪರಿಚಯವಾಗುವುದು ದೃಢ ಸ್ನೇಹಕ್ಕೆ ಕಾರಣವಾಗುತ್ತದೆ. ಧಾರವಾಡದಲ್ಲಿ ನಮ್ಮಿಬ್ಬರ ಪರಿಚಯವಾದದ್ದು ಪುಣೆಯಲ್ಲಿ ದೃಢವಾಗಿ, ಸ್ನೇಹದ ಎಲ್ಲೆಯನ್ನು ಮೀರಿ ಮಿತ್ರಪ್ರೇಮದ ಸೀಮೆಗೆ ಮುಟ್ಟಿತು. ಲೋಕಮಾನ್ಯ ಟಿಳಕರ ರಾಷ್ಟ್ರೀಯತ್ವದ ಬೀಜಗಳು ನಮ್ಮಿಬ್ಬರ ಅಂತರಂಗದಲ್ಲಿ ಏಕಕಾಲಕ್ಕೆ ನೆಲೆಗೊಂಡವೆಂದು ಹೇಳಬಹುದು. ಆಗಿನ ನಮ್ಮಿಬ್ಬರೊಳಗಿನ ಪ್ರೇಮ ಬರುಬರುತ್ತ ಬೆಳೆದು ಒಂದು ಬಗೆಯ ಆತ್ಮೀಯತೆ ನಮ್ಮಲ್ಲಿ ಉಂಟಾಯಿತು. ಮನೆತನದ ಮಹತ್ವದ ಪ್ರಸಂಗಗಳಲ್ಲಿ, ಸಾರ್ವಜನಿಕ ಸಭೆ ಸಮ್ಮೇಳನಗಳಲ್ಲಿ, ಕಾಂಗ್ರೆಸ್ ಕಾನ್ಫರೆನ್ಸುಗಳಲ್ಲಿ, ತೀರ್ಥಕ್ಷೇತ್ರ ಯಾತ್ರೆಗಳಲ್ಲಿ — ಇಷ್ಟು ಮಾತ್ರವಲ್ಲದೆ ಪ್ರತ್ಯಕ್ಷ ಯರವಡೆಯ ಸೆರೆಮನೆಯಲ್ಲಿಯೂ-ನಾವಿಬ್ಬರೂ ಕೂಡಿರುವ ಪ್ರಸಂಗ ಬಂದಾಗಲೆಲ್ಲ ಈ ಆತ್ಮೀಯತೆ ಒಂದುಬಗೆಯ ಸಮರಸಭಾವವನ್ನೇ ಸಂಪೂರ್ಣವಾಗಿ ನಿದರ್ಶನಕ್ಕೆ ತಂದುಕೊಡುತ್ತಿದ್ದಿತು. ಈ ಬಗೆಯ ನನ್ನ ಅಸದೃಶ ಮಿತ್ರನ ಚರಮ ಲೇಖನವನ್ನು ಬರೆಯುವ ದೌರ್ಭಾಗ್ಯ ನನಗೆ ಒದಗಿದುದಕ್ಕಾಗಿ ನನ್ನ ಅಂತರಂಗ ದುಃಖವೇಗದಿಂದ ಕುದಿವೇಳುತ್ತದೆ.

ವಿದ್ಯಾರ್ಥಿ ದೆಸೆಯಲ್ಲಿ ಶ್ರೀನಿವಾಸರಾಯರಲ್ಲಿ ಮೈಗೂಡಿದ ಲೋಕಮಾನ್ಯರ ರಾಷ್ಟ್ರೀಯ ವೃತ್ತಿ ಅವರಲ್ಲಿ ಕೊನೆಯವರೆಗೂ ಅಖಂಡವಾಗಿ ಅಚಲವಾಗಿ ನೆಲೆಗೊಂಡಿತ್ತು. ಈ ಸಂದರ್ಭದಲ್ಲಿ ನಾನು ಅರಿತ ಮಟ್ಟಿಗೆ ಕರ್ನಾಟಕದ ರಾಜಕೀಯ ರಣರಂಗದಲ್ಲಿ ಅವರೇ ಅಗ್ರಗಣ್ಯರು.

ನಿಷ್ಕಾಮಕರ್ಮ, ನಿರ್ಹೇತುಕಸೇವೆ, ನಿರ್ವಂಚಕ ವೃತ್ತಿ, ನಿರವಧಿಕ ದೇಶಭಕ್ತಿ, ನಿರ್ದಾಕ್ಷಿಣ್ಯವಾದ ಸ್ಪಷ್ಟೋಕ್ತಿ, ನಿರಭಿಮಾನ ನಿಷ್ಕಲ್ಮಷ ಅಂತಃಪ್ರವೃತ್ತಿ ಮೊದಲಾದ ಸದ್ಗುಣಗಳಲ್ಲಿ ಶ್ರೀನಿವಾಸರಾಯರನ್ನು ಸರಿಗಟ್ಟುವವರು ಕರ್ನಾಟಕದಲ್ಲಿ ಇಲ್ಲವೇ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅವರ ಅಂತರಂಗದಲ್ಲಿ ಒಡಮೂಡಿದ ಹಿಂದುಸ್ಥಾನದ ಸ್ವಾತಂತ್ರ್ಯದ ಹಂಬಲ ಅದರಲ್ಲಿಯ ಈ ಸದ್ಗುಣಗಳ ಮೂಲಕವಾಗಿಯೇ ಚೆನ್ನಾಗಿ ಬೆಳೆದು ಬಲಿತು ಕರ್ನಾಟಕದೊಳಗಿನ ರಾಜಕೀಯ ಕಾರ್ಯಕರ್ತರೊಳಗಿನ ಅಗ್ರೇಸರತ್ವದ ಬಹುಮಾನಕ್ಕೆ ಅವರನ್ನು ಪಾತ್ರಮಾಡಿದವು. ಇಂದು ಕರ್ನಾಟಕದ ರಾಜಕೀಯ ರಂಗದಲ್ಲಿ ಎದ್ದುಕಾಣುವ ವೈಷಮ್ಯ ನೈಷ್ಠುರ್ಯದ ಬೀಜಗಳು ೧೯೩೭ಕ್ಕಿಂತ ಮೊದಲಿನಿಂದಲೂ ಇಲ್ಲಿಯ ವಾತಾವರಣದಲ್ಲಿ ಬಿತ್ತಲಾದ ಸಂಗತಿಯನ್ನು ಕಣ್ಣಾರೆ ಕಂಡು ಮನಗಂಡ ನನಗೆ ಶ್ರೀನಿವಾಸರಾಯರ ಸದ್ಗುಣಗಳ ಹಾಗು ಅವುಗಳ ಮೂಲಕ ಅವರಲ್ಲಿ ನೆಲಸಿದ ಅದ್ಭುತ ಕರ್ತೃತ್ವಶಕ್ತಿಯ ಯೋಗ್ಯವಾದ ಲಾಭ ಕರ್ನಾಟಕ್ಕೆ ದೊರೆಯಲಿಲ್ಲವಲ್ಲಾ ಎಂದು ನನ್ನ ಮನಸ್ಸು ಕಾತರಗೊಳ್ಳುತ್ತದೆ.

ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದಾಗಲೂ ಶ್ರೀನಿವಾಸರಾಯರು ಕನ್ನಡ ವಿದ್ಯಾರ್ಥಿಗಳ ಹಕ್ಕುಬಾಧ್ಯತೆ ತಾಪತೊಂದರೆಗಳಿಗಾಗಿ ಅಖಂಡವಾಗಿ ಹೋರಾಡುತ್ತಿದ್ದುದನ್ನು ನಾನು ಬಲ್ಲೆನು. ಈ ಅವರ ಕರ್ನಾಟಕದ ಅಭಿಮಾನ ಅವರಲ್ಲಿ ಕೊನೆಯವರೆಗೂ ಬೆಳೆದು ನಿಂತಿತು. ಗಾಂಧೀ ಯುಗದ ಆರಂಭಕ್ಕೆ ಕರ್ನಾಟಕದಲ್ಲಿ ಕರ್ನಾಟಕತ್ವದ ಹೆಸರು ಎತ್ತುವದೂ ರಾಷ್ಟ್ರದ್ರೋಹವೆಂಬ ದುಷ್ಪ್ರಚಾರದಿಂದ ಇಲ್ಲಿಯ ಪ್ರಮುಖ ಕಾರ್ಯಕರ್ತರಲ್ಲಿ ಬುದ್ಧಿಭೇದವನ್ನುಂಟುಮಾಡಿ ತಮ್ಮೊಳಗೆ ಹುದುಗಿಕೊಂಡಿದ್ದ ಕರ್ನಾಟಕ ದ್ರೋಹಭಾವನೆಗೆ ರಾಷ್ಟ್ರೀಯತ್ವದ ಬಣ್ಣ ಬಳಿದು ತಮ್ಮ ಮುಖಂಡತ್ವದ ಗದ್ದುಗೆಗಳನ್ನು ಭದ್ರಪಡಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದ ಕುಲಕಂಟಕರ ಸವಿಮಾತಿನ ಸೆಳವಿಗೆ ಶ್ರೀನಿವಾಸರಾಯರೂ, ಕರ್ನಾಟಕದ ವಿಶಿಷ್ಟ ರಾಜಕಾರಣವನ್ನು ಕೆಲದಿನಗಳಮಟ್ಟಿಗೆ ಕಡೆಗಣಿಸಿ ನಡೆದದ್ದೂ ಉಂಟು. ಆದರೆ ಅವರ ಅಂತರಂಗದಲ್ಲಿ ಯಥಾರ್ಥಜ್ಞಾನದ ಪ್ರಕಾಶ ಬಿದ್ದು ವಸ್ತುಸ್ಥಿತಿಯ ನಿಜವಾದ ಅರಿವು ಉಂಟಾದ ಬಳಿಕ ಅವರಷ್ಟು ಉಜ್ವಲ ಕರ್ನಾಟಕಾಭಿಮಾನಿಗಳು ಅವರೇ ಆದರೆಂಬುದನ್ನು ಅವರನ್ನು ಬಲ್ಲವರೆಲ್ಲರೂ ಒಪ್ಪಿಕೊಳ್ಳದಿರಲಾರರು. ಮೈಸೂರು ವಿದ್ಯಾಪೀಠವನ್ನು ಅಖಂಡ ಕರ್ನಾಟಕದ ವಿದ್ಯಾಪೀಠವಾಗಿ ಮಾರ್ಪಡಿಸಿಕೊಳ್ಳುವುದು ಶಕ್ಯವಾಗಬಹುದೇನೆಂಬುದನ್ನು ಮೈಸೂರಿನ ಮಹಾಜನರೊಂದಿಗೆ ಚರ್ಚಿಸುವ ಸಲುವಾಗಿ ಅವರು ಮೈಸೂರಿಗೆ ಹೋದದ್ದು, ವಿಜಯನಗರ ಸಾಮ್ರಾಜ್ಯದ ಆರು ನೂರು ವರ್ಷಗಳ ಸ್ಮಾರಕೋತ್ಸವವನ್ನು ಅತ್ಯಂತ ವೈಭವದಿಂದ ನೆರವೇರಿಸಬೇಕೆಂಬ ಹಾತೊರಿಕೆಯಿಂದ ವರ್ಷಾನುಗಟ್ಟಲೆ ಪರಿಶ್ರಮಪಟ್ಟದ್ದು ಈ ಅವರ ಅಂತರಂಗದೊಳಗಿನ ಕರ್ನಾಟಕತ್ವದ ಕುದಿಯ ಸ್ಪಷ್ಟ ನಿದರ್ಶನಗಳಾಗಿವೆ.

ಚಿಕ್ಕಂದಿನಲ್ಲಿ ಕನ್ನಡ ಸಾಹಿತ್ಯದ ಪರಿಚಯ ಶ್ರೀನಿವಾಸರಾಯರಿಗೆ ಹೆಚ್ಚಾಗಿ ಆಗುವ ಸಂದರ್ಭವೊದಗಲಿಲ್ಲವಾದರೂ ಮುಂದೆ ಮುಂದೆ ದಿವಂಗತ ಕೆರೂರ ವಾಸುದೇವಾಚಾರ್ಯರು, ವಿದ್ಯಮಾನ ಶ್ರೀ ಮುಗುಳೀ ಶ್ರೀನಿವಾಸರಾಯರು, ಬೇಲೂರ ಕೇಶವದಾಸರು ಮೊದಲಾದವರ ನಿಕಟ ಸಹವಾಸದಿಂದ ಕನ್ನಡ ಸಾಹಿತ್ಯ ಶಕ್ತಿ ಅವರಲ್ಲಿ ಚೆನ್ನಾಗಿಯೇ ಬೇರೂರಿ ನೆಲೆಗೊಂಡಿತ್ತು. ವಾಸುದೇವಾಚಾರ್ಯರ ನಲದಮಯಂತೀ ನಾಟಕವನ್ನು ಶ್ರೀನಿವಾಸರಾಯರು ತಮ್ಮ ಹಿರಿಯ ಮಗ ಕೃಷ್ಣರಾಯರಿಂದ ಮರಾಠಿಯಲ್ಲಿ ಗದ್ಯ ಪದ್ಯಾತ್ಮಕವಾಗಿ ಪರಿವರ್ತನಗೊಳಿಸಿದುದನ್ನು ನಾನು ಓದಿನೋಡಿ ಬಲ್ಲೆನು. ಕನ್ನಡ ನಾಡಿನ ಹೊಸಗಾಲದ ಕವಿಗಳ ಕಾವ್ಯಪರಿಚಯವನ್ನು ಅವರು ಮಾಡಿಕೊಳ್ಳುತ್ತಿದ್ದರು. ಶ್ರೀ ಬೇಂದ್ರೆಯವರ ಕಾವ್ಯಗಾನವನ್ನು ಕೇಳಿ ಶ್ರೀನಿವಾಸರಾಯರು ಭಾವಪರವಶರಾಗಿ ಕಣ್ಣೀರು ಸುರಿಸಿದ ದಿವ್ಯದೃಶ್ಯವು ಇಂದಿಗೂ ನನ್ನ ಕಣ್ಣಿಗೆ ಕಟ್ಟುತ್ತಿದೆ. ಕಾಖಂಡಕಿಯ ಪ್ರಸನ್ನ ವೆಂಕಟರ ಹಾಗು ಮಹಿಪತಿದಾಸರ ಪದ್ಯಗಳ ಸಂಗ್ರಹಗಳನ್ನು ದೊರಕಿಸಿ ಅವುಗಳನ್ನು ಶ್ರೀ ಬೇಲೂರು ಕೇಶವ ದಾಸರಂತಹ ಅಧಿಕಾರ ಸಂಪನ್ನ ಭಗವದ್ಭಕ್ತ ಸಾಹಿತ್ಯ ಸೇವಕರಿಂದ ಪರಿಷ್ಕಾರಗೊಳಿಸಿ ಮುದ್ರಿಸಿ ಪ್ರಕಟಿಸುವುದಕ್ಕೆ ಸಾವಿರ ರೂಪಾಯಿಗಳನ್ನಾದರೂ ವೆಚ್ಚಮಾಡಲು ಶ್ರೀನಿವಾಸರಾಯರು ಸಿದ್ಧರಾಗಿದ್ದರು. ೧೯೩೭ರ ಆರಂಭಕ್ಕೆ ಮುಂಬಯಿ ಕೌನ್ಸಿಲ್ ಚುನಾವಣೆಗೆ, ಬೆಳಗಾಂವಿ ವಿಜಾಪುರ ಸೊಲ್ಲಾಪುರ ಮತದಾರ ಸಂಘದ ಪರವಾಗಿ ಅವರು ಕಾಂಗ್ರೆಸ್ ಉಮೇದುವಾರರಾಗಿ ನಿಂತಾಗ ಕರ್ನಾಟಕದ ಕಾಂಗ್ರೆಸ್ ಪ್ರಮುಖರ ತೃತೀಯತನದಿಂದಲೇ ಅವರಿಗೆ ಸೋಲುಬಂದುದರ ಪರಿಣಾಮವಾಗಿ ಅವರ ಮನಸ್ಸಿಗೆ ತಗುಲಿದ ವಿಷಾದದ ಧಕ್ಕೆ ಅವರ ಶರೀರವನ್ನು ಹಾಸಿಗೆಗೆ ಒರಗಿಸಿತು. ಕನ್ನಡ ನಾಡಿನ ದುರ್ದೈವದಿಂದ ಆಗ ಹಾಸಿಗೆ ಹಿಡಿದವರು ಏಳಲೇ ಇಲ್ಲ. ಕೊನೆಗೆ ಅದರಲ್ಲಿಯೇ ಅವರ ಅಂತವಾಯಿತು, ಹೀಗಾಗಿ ಕರ್ನಾಟಕಕ್ಕೆ ಅಪಾರವಾದ ಹಾನಿ ತಟ್ಟಿತು! ಉಪಾಯವಿಲ್ಲ.

ಶ್ರೀನಿವಾಸರಾಯರ ಸಾರ್ವಜನಿಕ ಜೀವನದಂತೆಯೇ ಅವರ ವೈಯಕ್ತಿಕ ಜೀವನವೂ ಅತ್ಯಂತ ರಸಮಯವಾಗಿದ್ದಿತು. ವಕೀಲಿಯ ವ್ಯವಸಾಯದಲ್ಲಿ ಲಕ್ಷಗಟ್ಟಲೆ ಹಣವನ್ನು ಸಂಪಾದಿಸಿದರು. ತಮ್ಮ ಸಂಪಾದನೆಯನ್ನು ದಾನಭೋಗಗಳಿಂದ ಸಾರ್ಥಕಗೊಳಿಸಿದರು. ಅವರೆಡೆಗೆ ಸಹಾಯಕ್ಕಾಗಿ ಹೋದ ಯಾವ ಸಾರ್ವಜನಿಕ ಕಾರ್ಯಕರ್ತನೂ ಬರಿಗೈಯಿಂದ ಮರಳಲಿಲ್ಲವೆಂಬುದನ್ನು ನಾವೆಲ್ಲರೂ ಅಭಿಮಾನದಿಂದ ನೆನೆಯಬೇಕಾಗಿದೆ. ಹೊಸದಾಗಿ ಪ್ರಕಟವಾಗುವ ಕನ್ನಡ ಗ್ರಂಥಗಳೂ ಕನ್ನಡ ಪತ್ರಿಕೆಗಳೂ ಅವರ ಮನೆಯಲ್ಲಿ ರಾಶಿ ರಾಶಿಯಾಗಿ ಬಿದ್ದಿರುತ್ತಿದ್ದವು. ತಾವು ಓದಲಿ—ಓದದಿರಲಿ— ಅವುಗಳ ವಿ. ಪಿ. ಬಂದ ಕೂಡಲೆ ಹಣ ಕೊಟ್ಟುಬಿಡಬೇಕೆಂಬುದು ಅವರ ಕಟ್ಟಪ್ಪಣೆ. ಸಾರ್ವಜನಿಕ ಕಾರ್ಯಕರ್ತರಾರು ಬಂದರೂ ಅವರ ಮನೆಯಲ್ಲಿ ಮುಕ್ತದ್ವಾರ. ಅಖಿಲ ಭಾರತೀಯ ಮುಖಂಡರಾರು ಬಂದರೂ ವಿಜಾಪುರದಲ್ಲಿ ಶ್ರೀನಿವಾಸರಾಯರ ಮನೆಯೇ ಅವರ ಆತಿಥ್ಯದ ಬೀಡಾರ. ಲೋಕಮಾನ್ಯ ಟಿಳಕರು ೧೯೧೮ರಲ್ಲಿ ಇಂಗ್ಲಂಡಕ್ಕೆ ಕೊಲಂಬೋದ ಮಾರ್ಗವಾಗಿ ಹೊರಟಾಗ ವಿಜಾಪುರಕ್ಕೆ ಬಂದು ೧೨ ಗಂಟೆಗಳ ವರೆಗೆ ಅಲ್ಲಿ ತಂಗಿ ಕರ್ನಾಟಕದ ಆತಿಥ್ಯವನ್ನು ಸ್ವೀಕರಿಸಿ ಕನ್ನಡ ಜನಾಂಗದ ಶ್ರೇಯಶ್ಚಿಂತನೆಗಳೊಂದಿಗೆ ಮುಂದೆ ಸಾಗಬೇಕೆಂದು ಹಟದಿಂದ ಅವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಉತ್ತರ ಕರ್ನಾಟಕದ ಬಹುಜನರನ್ನು ತಮ್ಮಲ್ಲಿ ಕಲೆಹಾಕಿ, ಲೋಕಮಾನ್ಯರ ಪ್ರವಾಸನಿಧಿಗೆ ಹತ್ತು ಸಾವಿರ ರೂಪಾಯಿಗಳ ನಿಧಿಯನ್ನು ಕರ್ನಾಟಕದ ಪರವಾಗಿ ಸಮರ್ಪಿಸಿ ಅವರನ್ನು ಬೀಳ್ಕೊಟ್ಟ ಆ ಪ್ರಚಂಡ ಸಂಭ್ರಮದ ಸಮಾರಂಭ ನನ್ನ ಸ್ಮೃತಿಪಥದೊಳಗಿಂದ ಎಂದಿಗೂ ಹಾರುವಂತಿಲ್ಲ. ಹೀಗೆ ಶ್ರೀನಿವಾಸರಾಯರು ಕರ್ನಾಟಕದ ಸನಾತನ ಪರಂಪರೆಗೆ ತಕ್ಕುದಾದ ರೀತಿಯಲ್ಲಿ ಉದಾರಚರಿತರೇ ಆಗಿದ್ದರು. ಇಂಥವರು ಇನ್ನು ದೊರೆಯುವುದೇ ದುರ್ಲಭವೆಂದು ನನಗೆ ತೋರುತ್ತದೆ.

ಇಂಥ ಅನ್ಯಾದೃಶ ಗುಣಸಂಪನ್ನ ಮಗನನ್ನು ಹೆತ್ತ ತಾಯಿ ಧನ್ಯಳು; ಇಂಥ ಪತಿಯೊಂದಿಗೆ ಪ್ರಾಪಂಚಿಕ ಜೀವನ ಸಾಗಿಸಿದ ಪತ್ನಿ ಭಾಗ್ಯವಂತೆ; ಇಂಥ ತಂದೆಯ ಮಕ್ಕಳಾಗಿ ಹುಟ್ಟಿ ಹಿರಿಯರ ಕೀರ್ತಿಯನ್ನು ಕಾದು ಹಿಡಿದು ಮಕ್ಕಳು ಧನ್ಯರಾಗಲಿ— ಅವರಿಂದ ಕನ್ನಡ ನಾಡಿಗೆ ಶ್ರೇಯಸ್ಸಾಗಲಿ—ಎಂಬುದೇ ನನ್ನ ಕರುಳಿನ ಕಕುಲಾತಿಯ ಹಾರಯಿಕೆ. ಇದರಲ್ಲಿಯೇ ಸ್ವರ್ಗಸ್ಥ ಶ್ರೀನಿವಾಸರಾಯರ ಪವಿತ್ರ ಆತ್ಮಕ್ಕೆ ಚಿರಶಾಂತಿ ದೊರೆಯುವುದು.

---

## ಹೆಣ್ಣುಮಕ್ಕಳಿಗಾಗಿ ಸಣ್ಣಕತೆಗಳ ಸ್ಪರ್ಧೆ

### ದಿವಂಗತ ಗೌರಮ್ಮನವರ ನೆನಪು

ಧಾರವಾಡದ ಮನೋಹರ ಗ್ರಂಥ ಭಂಡಾರದವರು ದಿವಂಗತ ಕೊಡಗಿನ ಶ್ರೀ ಗೌರಮ್ಮನವರ ನೆನಪಿಗಾಗಿ 'ಸಣ್ಣಕತೆಗಳ ಮೇಲಾಟ'ವನ್ನು ಹೆಣ್ಣುಮಕ್ಕಳಿಗೆ ಏರ್ಪಡಿಸಿದ್ದಾರೆ. ಕತೆ ಸ್ವತಂತ್ರವಾಗಿದ್ದು, ಕಾಗದದ ಒಂದೇ ಬದಿಗೆ ಸ್ಪಷ್ಟವಾಗಿ ಬರೆದು ೧೯೪೦ನೆಯ ಏಪ್ರಿಲ್ ೧೦ನೆಯ ತಾರೀಖಿನೊಳಗಾಗಿ ಧಾರವಾಡದ ಮನೋಹರ ಗ್ರಂಥ ಭಂಡಾರದವರಿಗೆ ಕಳಿಸಬೇಕು. ಉತ್ತಮವಾದ ಮೂರು ಕತೆಗಳಿಗೆ ಮೊದಲನೆಯ ಬಹುಮಾನ ೧೨ ರೂ. ಎರಡನೆಯ ಬಹುಮಾನ ೮ ರೂ. ಮತ್ತು ಮೂರನೆಯ ಬಹುಮಾನ ೫ ರೂ. ಕೊಡಲಾಗುವುದು. ಸ್ಪರ್ಧೆಯ ತೀರ್ಮಾನವನ್ನು ಏಪ್ರಿಲ್ ೧೫ನೆಯ ತಾರೀಖು ಪ್ರಕಟಿಸಲಾಗುವುದು.

## ಕಂಬನಿ

### ದಿವಂಗತ ಶ್ರೀಮಾನ್ ಕೌಜಲಗಿ ಶ್ರೀನಿವಾಸರಾಯರು

ಕನ್ನಡ ನಾಡು ನುಡಿಗಳ ಏಳ್ಗೆಗಾಗಿ ಸುಮಾರು ಅರ್ಧ ಶತಮಾನದಿಂದ ಅತ್ಯಂತ ಶ್ರದ್ಧೆಯಿಂದ ದುಡಿದ, ಪರಿಷತ್ತಿನ ಸಹಾಯಕ ವರ್ಗದ ಸದಸ್ಯರಾಗಿದ್ದು, ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಬಹಳ ಆಸಕ್ತಿಯನ್ನು ತೋರುತ್ತಿದ್ದ, ಬಿಜಾಪುರದ **ಕರ್ನಾಟಕಭೂಷಣ ಶ್ರೀಮಾನ್ ಕೌಜಲಗಿ ಶ್ರೀನಿವಾಸರಾವ್, ಬಿ.ಎ., ಎಲ್‌ಎಲ್.ಬಿ. ಅವರು** ತಮ್ಮ ೬೭ನೆಯ ವಯಸ್ಸಿನಲ್ಲಿ ಕಳೆದ ತಿಂಗಳು ೨೨ನೆಯ ತಾರೀಖು ಗುರುವಾರ ಮರಣಹೊಂದಿದರೆಂದು ತಿಳಿಸಲು ನಮಗೆ ಬಹಳ ದುಃಖವಾಗುತ್ತದೆ.

ಶ್ರೀಯುತರು ಕಳೆದ ಎರಡು ವರ್ಷಗಳಿಂದಲೂ ಪಾರ್ಶ್ವವಾಯು ಬೇನೆಯಿಂದ ನರಳುತ್ತಿದ್ದರು. ಇಳಿವಯಸ್ಸು; ಜೊತೆಗೆ ಬೇನೆಯ ಮುಲುಕು. ಆದರೂ ಅವರ ಮನಸ್ಸು ಕನ್ನಡದ ಏಳ್ಗೆಯನ್ನು ಕುರಿತು ಸದಾ ಚಿಂತಿಸುತ್ತ, ಕೊನೆಯವರೆಗೂ ಚಟುವಟಿಕೆಯಾಗಿತ್ತು. ಶ್ರೀಯುತರು ಕನ್ನಡಕ್ಕಾಗಿ ಬದುಕಿದ್ದರು. ಕನ್ನಡಕ್ಕಾಗಿ ಬಾಳಿದರು. ಕನ್ನಡದ ಏಳ್ಗೆಯ ಚಿಂತೆಯಲ್ಲೇ ಅಳಿದರು.

ಕರ್ನಾಟಕಭೂಷಣ ಶ್ರೀನಿವಾಸರಾಯರು ಲೋಕಮಾನ್ಯರ ಪಟ್ಟಶಿಷ್ಯರಾಗಿ, ಎಳಮೆಯಲ್ಲೇ ನಾಡ ಊಳಿಗಕ್ಕೆ ತಮ್ಮ ಬಾಳನ್ನು ಮುಡಿಪುಕಟ್ಟಿದವರು. ಹರಿದು ಹಂಚಿಹೋದ ಕನ್ನಡ ನಾಡನ್ನು ಒಂದುಗೂಡಿಸಿ, ನಾಡಿನ ಏಳ್ಗೆಯನ್ನು ಕಾಣಬೇಕೆಂಬ ಹೆಬ್ಬಯಕೆಯಿಂದ, ತ್ರಿಕರಣಪೂರ್ವಕವಾಗಿ ದುಡಿದವರು. ಈ ದುಡಿಮೆಯಲ್ಲಿ ದಾನಶೂರರಾಗಿ, ತನುಮನಧನಗಳನ್ನು ನಾಡಿಗಾಗಿ ನೀಡಿದವರು. ನಾಡಿನಲ್ಲಿ ನವಚೇತನವನ್ನು ಕೆರಳಿಸಿ, ತಮ್ಮ ವೀರವಾಣಿಯಿಂದ ಜನರನ್ನು ಒಲಿಸಿಕೊಂಡು, ಜನರ ಎಚ್ಚತ್ತ ಸ್ಫೂರ್ತಿ ವಿವೇಕಯುತವಾದ ದಿಕ್ಕಿನಲ್ಲಿ ಹರಿಯಬೇಕೆಂದು ಬುದ್ಧಿಹೇಳಿದ ಗುರು.

ಶ್ರೀಯುತರು ಹುಟ್ಟಿದ್ದು ಕಲಾದಗಿಯಲ್ಲಿ. ೧೮೭೩ರಲ್ಲಿ. ಅವರು ತಮ್ಮ ೬೭ ವರ್ಷದ ಆಯುಷ್ಯದಲ್ಲಿ ನನಸಾಗಿ ಮಾಡಿಕೊಳ್ಳಬೇಕೆಂದು ತವಕಿಸುತ್ತಿದ್ದ ಕೆಲವು ಕನಸುಗಳನ್ನು ಇಲ್ಲಿ ಸಂಕ್ಷೇಪವಾಗಿ ಹೇಳಬಹುದು. ಈ ಕನಸುಗಳಲ್ಲಿ ಕೆಲವು ನನಸಾದುವು: ಕರ್ನಾಟಕ ಏಕೀಕರಣ ಚಳವಳಿಗೆ ಚಾಲನೆ ಕೊಟ್ಟು, ಕಾಂಗ್ರೆಸ್ಸಿನ ರಾಜಕಾರಣದ ಮಟ್ಟಿಗಾದರೂ ಸ್ವತಂತ್ರ ಕರ್ನಾಟಕ ಪ್ರಾಂತರಚನೆ ಸಾಧ್ಯವಾದದ್ದು ಇವರ ದುಡಿಮೆಯ ಫಲವಾಗಿ. ವಿಜಯನಗರ ಸ್ಮಾರಕೋತ್ಸವದ ಕಲ್ಪನೆ ಹುಟ್ಟಿದ್ದು ಇವರಿಂದಲೇ ಎನ್ನಬಹುದು.

ಇನ್ನು ಶ್ರೀಯುತರ ಎರಡು ಕನಸುಗಳು ಇನ್ನೂ ಕನಸಾಗಿ ಉಳಿದಿವೆ: ನಾನು ಬಿಜಾಪುರಕ್ಕೆ ಎರಡುಸಾರಿ ಹೋಗಿದ್ದಾಗಲೂ ಈ ಕನಸುಗಳನ್ನು ನನ್ನೊಡನೆ ಅವರು ಆಲೋಚಿಸಿದ್ದು—ಅವರ ಮನೆಯಲ್ಲೊಮ್ಮೆ, ತೋಟದಲ್ಲಿ ಅನಾರೋಗ್ಯದಲ್ಲೊಮ್ಮೆ—ನನಗೆ ಯಾವಾಗಲೂ ಸ್ಫೂರ್ತಿಯನ್ನು ಕೊಡುವುದು. ಬ್ರಿಟಿಷ್ ಮತ್ತು ಸಂಸ್ಥಾನ ಕರ್ನಾಟಕಗಳನ್ನು ಮೈಸೂರು ಆಡಳಿತಕ್ಕೆ ಸೇರಿಸಿ, ಮೈಸೂರು ಶ್ರೀಮನ್ಮಹಾರಾಜರವರನ್ನು ಕನ್ನಡ ನಾಡಿಗೆಲ್ಲಾ ಗವರ್ನರನ್ನಾಗಿ ಮಾಡಬೇಕೆಂಬುದು ಅವರ ಮೊದಲನೆಯ ಕನಸು. ಅವರು ೧೯೨೮ರ ಸರ್ವಪಕ್ಷೀಯ ಪರಿಷತ್ತಿನ ಸಮಯದಲ್ಲಿ ಈ ಸೂಚನೆಯನ್ನು ಕೊಟ್ಟಿದ್ದರು. ಈ ಸೂಚನೆಯನ್ನು ಮದ್ರಾಸಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀಮಾನ್ ಚಕ್ರವರ್ತಿ ರಾಜಗೋಪಾಲಾಚಾರ್ಯರು ಮೊನ್ನೆ ಮೊನ್ನೆ ಲಾಯೊಲಾ ಕಾಲೇಜಿನಲ್ಲಿ ಮಾಡಿದ ತಮ್ಮ ಒಂದು ಭಾಷಣದಲ್ಲಿ ಪ್ರಸ್ತಾಪಿಸಿ, ಎತ್ತಿ ಹಿಡಿದಿದ್ದಾರೆ. ಈ ಸೂಚನೆ ಕೈಗೂಡುವ ಸಾಧಕ ಬಾಧಕಗಳನ್ನು ಕನ್ನಡ ನಾಡಿನ ಹಿತಚಿಂತಕರು ಚರ್ಚಿಸಿ ಒಂದು ನಿರ್ಧಾರಕ್ಕೆ ಬರುವುದು ಅಗತ್ಯವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮೈಸೂರು ವಿಶ್ವವಿದ್ಯಾನಿಲಯವೇ ಅಖಿಲ ಕರ್ನಾಟಕದ ವಿದ್ಯಾಪೀಠವಾಗಬೇಕೆಂಬುದು ಶ್ರೀಯುತರ ಇನ್ನೊಂದು ಹೆಬ್ಬಯಕೆಯಾಗಿತ್ತು. ಈ ವಿಚಾರವಾಗಿ ಅವರು ೧೯೩೬ರಲ್ಲಿ ಮೈಸೂರಿಗೆ ಬಂದಿದ್ದಾಗ ಮೈಸೂರು ಸರ್ಕಾರದವರೊಡನೆ ಮಾತುಕತೆ ನಡಸಿದ್ದರು.

ಹೀಗೆ ಶ್ರೀಯುತರು ತಮ್ಮ ಹೆಬ್ಬಯಕೆಯ ಕಣ್ಣಿಯಿಂದ ಮೈಸೂರನ್ನು ಮಿಕ್ಕ ಕರ್ನಾಟಕಕ್ಕೆ ಕಟ್ಟಿ, ಇಡಿಯ ಕನ್ನಡ ನಾಡಿನ ಶ್ರೇಯಸ್ಸು ಈ ಒಕ್ಕೂಟದಲ್ಲಿದೆ ಎಂಬುದನ್ನು ಸಾರಿದರು. ಅವರು ರಾಜಕಾರಣ, ಸಾಹಿತ್ಯ, ಸಂಗೀತ, ಕಲೆ, ವೇದಾಂತ, ವ್ಯವಸಾಯ ಮುಂತಾದ ಕ್ಷೇತ್ರಗಳಲ್ಲಿ ನಿಪುಣತೆಯನ್ನು ಸಾಧಿಸಿಕೊಂಡಿದ್ದರು. ಕರ್ನಾಟಕದ ದಿವ್ಯಶಕ್ತಿಗಳಲ್ಲವರು ಅಗ್ರಶಕ್ತಿಯಾಗಿದ್ದರು. ಅವರ ಮರಣದಿಂದ ಕನ್ನಡ ನಾಡಿಗೆ ಅಪಾರವಾದ ನಷ್ಟ ಸಂಭವಿಸಿದೆ. ಅವರ ಆತ್ಮಕ್ಕೆ ಸದ್ಗತಿಯುಂಟಾಗಲಿ.

ಈ ಸಂಚಿಕೆಯ ಬೇರೊಂದು ಕಡೆಯಲ್ಲಿ ಅವರ ಪರಮಮಿತ್ರರಾದ ಕನ್ನಡ ಕಲಿ ಶ್ರೀ ಮುದವೀಡು ಕೃಷ್ಣರಾಯರ ಶ್ಲಾಘನಾಪೂರಿತವಾದ ಲೇಖನವನ್ನು ಕೊಟ್ಟಿದೆ. ಆ ಹಿರಿಯರ ಶ್ರದ್ಧಾಂಜಲಿಯೊಡನೆ ನನ್ನದನ್ನೂ ಕೊಟ್ಟು ಅಮರಗಣಕ್ಕೆ ಸೇರಿದ ಶ್ರೀನಿವಾಸರಾಯರಲ್ಲಿ ನನ್ನ ಭಕ್ತಿಪ್ರೀತಿಗಳನ್ನು ಅರ್ಪಿಸುತ್ತೇನೆ.

**ಬಿ. ಎಂ. ಶ್ರೀಕಂಠಯ್ಯ**

---

## ಪಂಪ ಕವಿಯ ದಶಶತಮಾನೋತ್ಸವ

ಕನ್ನಡದ ಆದಿಕವಿ ಎಂದು ಹೆಸರುವಾಸಿಯಾಗಿರುವ ಪಂಪ ಮಹಾಕವಿಯ ದಶಶತಮಾನೋತ್ಸವವನ್ನು ಅತ್ಯಂತ ವೈಭವದಿಂದ ನಡಸಬೇಕೆಂದು ಈಗಾಗಲೇ ಹಲವರು ಪ್ರಯತ್ನಿಸುತ್ತಿರುವರು. ಈ ಮಹೋತ್ಸವ ೧೯೪೦ರಲ್ಲಿ ನಡೆಯಬೇಕೇ, ೧೯೪೧ರಲ್ಲಿ ನಡೆಯಬೇಕೇ ಎಂಬುದು ಇನ್ನೂ ನಿಶ್ಚಿತವಾಗಿಲ್ಲ. ಈ ಬಗ್ಗೆ ಧಾರವಾಡದ 'ಕರ್ಮವೀರ' ಪತ್ರಿಕೆಯ ೧೯–೨–೪೦ರ ಸಂಚಿಕೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಶ್ರೀಮಾನ್ ಮಹಾಬಲೇಶ್ವರ ಬಂಕಿಕೊಡ್ಲ ಅವರು ಒಂದು ಲೇಖನವನ್ನು ಬರೆದು, ಪಂಪಕವಿಯ ದಶಶತಮಾನೋತ್ಸವವನ್ನು ಸಿರ್ಸಿಯಲ್ಲಾಗಲಿ ಬನವಾಸಿಯಲ್ಲಾಗಲೀ ೧೯೪೧ರಲ್ಲಿ ನಡಸಬೇಕೆಂದೂ, ಉತ್ಸವದ ಜೊತೆಗೆ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವನ್ನೂ ಕೂಡಿಸಬೇಕೆಂದೂ ಸಲಹೆ ಕೊಟ್ಟಿದ್ದಾರೆ.

---

## ಜಮುಖಂಡಿಯ ಆಡಳಿತ ಭಾಷೆ ಕನ್ನಡವೇ ಆಗಬೇಕು; ಲಿಪಿಯೂ ಕನ್ನಡದ್ದೇ ಇರಬೇಕು

### ಶ್ರೀಮಾನ್ ಶಂ. ಬಾ. ಜೋಶಿಯರ ಸೂಚನೆ

ಜಮುಖಂಡಿ ಸಂಸ್ಥಾನದಲ್ಲಿ ನೂರಕ್ಕೆ ತೊಂಬತ್ತೈದರಂತೆ ಕನ್ನಡಿಗರಿದ್ದಾರೆ. ಹೀಗಿರುವಾಗ ಅಲ್ಲಿನ ಓಲಗದ ಭಾಷೆ ಕನ್ನಡವೇ ಆಗಿರಬೇಕೆಂಬ ಬಗ್ಗೆ ಸಾಕ್ಷಿಗಳನ್ನು ಕೇಳುವುದೇ ಮೊದಲು ಅನಾವಶ್ಯಕ ಎಂದು ಮೊದಲು ಮಾಡಿ, ಧಾರವಾಡದ ಶ್ರೀ ಶಂ. ಬಾ. ಜೋಶಿಯವರು 'ಸಂಯುಕ್ತ ಕರ್ನಾಟಕ' ಪತ್ರಿಕೆಯ ೧೭–೨–೪೦ರ ಸಂಚಿಕೆಯಲ್ಲಿ ಒಂದು ಲೇಖನವನ್ನು ಬರೆದು, ಜಮುಖಂಡಿ 'ದಫ್ತರಿ'ನ ಭಾಷೆಯಲ್ಲಿ ದೇವನಾಗರಿ ಲಿಪಿಗೆ ಬದಲಾಗಿ ಕನ್ನಡ ಲಿಪಿಯನ್ನೇ ಬಳಸಬೇಕೆಂದು ಕೋರಿದ್ದಾರೆ.

ಹಿಂದೂದೇಶಕ್ಕೆಲ್ಲ ಏಕಲಿಪಿಯಾಗಬೇಕೆಂಬ ತತ್ತ್ವ, ಭಾವಿ ಭಾರತೀಯ ರಾಜ್ಯಾಂಗ ಘಟನೆ ಆಚರಣೆಗೆ ಬಂದ ಬಳಿಕ ಒಂದು ನಿಶ್ಚಿತ ಸ್ವರೂಪವನ್ನು ತಾಳತಕ್ಕದ್ದಿದೆಯೆಂದೂ, ಈಗಾಗಲೇ ಈ ದೇವನಾಗರಿ, ಉರ್ದು ಮತ್ತು ರೋಮನ್ ಲಿಪಿಗಳಲ್ಲಿ ಯಾವುದನ್ನು ತರಬೇಕೆಂಬ ವಾದವೆದ್ದಿದೆಯೆಂದೂ ಲೇಖಕರು ಹೇಳಿ ಸದ್ಯದ ಸಂದಿಗ್ಧಸ್ಥಿತಿಯಲ್ಲಿ 'ನಾವು ಕನ್ನಡಿಗರು ನಮ್ಮ ಸ್ವಂತದ ಲಿಪಿಯನ್ನು ಬಿಟ್ಟುಕೊಡುವುದು ಜಾಣತನವಾಗುವುದಿಲ್ಲ' ಎಂದು ಪ್ರತಿಪಾದಿಸಿದ್ದಾರೆ.

ಜಮುಖಂಡಿ ಸಂಸ್ಥಾನದವರು ಕನ್ನಡ ಲಿಪಿಯನ್ನು ಅಲಕ್ಷ್ಯಮಾಡಿ ನಾಗರಿಲಿಪಿಯನ್ನೇ ತಂದದ್ದಾದರೆ ಮರಾಟಿ ಕಲಿತ ಜಮಖಂಡಿ ಜನರಿಗೆ ಕನ್ನಡ ಬರುವುದೇ ಕಷ್ಟವೆಂದೂ, ಕನ್ನಡ ನಾಡಿನ ಇತರ ಪ್ರದೇಶಗಳೊಂದಿಗೆ ಅವರ ಸಂಬಂಧ ತಪ್ಪಿಹೋಗುವ ಭಯವಿದೆಯೆಂದೂ ಜೋಶಿಯವರು ಎಚ್ಚರಿಕೆಯ ಮಾತನ್ನಾಡಿದ್ದಾರೆ.




ಶುಕ್ರವಾರ, ಮಾರ್ಚಿ ೧, ೧೯೪೦

## ಶ್ರೀ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕೋತ್ಸವ

ಮೊನ್ನೆ ೨೬ನೆಯ ತಾರೀಖು ಸೋಮವಾರ ಕನ್ನಡ ನಾಡಿನ ಹೆಮ್ಮೆಯಾದ ಶ್ರೀಗೊಮ್ಮಟೇಶ್ವರಮೂರ್ತಿಯ ಮಸ್ತಕಾಭಿಷೇಕ ಕರ್ನಾಟಕ ಸಿಂಹಾಸನಾಧೀಶ್ವರರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಸಮ್ಮುಖದಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು. ಏರ್ಪಾಡುಗಳೆಲ್ಲಾ ಬಹು ಸಮರ್ಪಕವಾಗಿದ್ದುವೆಂದೂ, ಮೈಸೂರು ಮಾದರಿ ಸಂಸ್ಥಾನ ಮಾತ್ರವೇ ಅಲ್ಲ, ರಾಜರ್ಷಿಗಳ ಆಳಿಕೆಯಿಂದ ಧನ್ಯಸಂಸ್ಥಾನವೆಂದೂ, ಇಂದೂರಿನ ಪ್ರಮುಖ ಲಕ್ಷಾಧೀಶ್ವರರಾದ ದಾನವೀರ ಸರ್ ಹುಕುಂಚಂದ್ ಅವರು ಹೇಳಿದ್ದಾರೆ. ಹಿಂದೆ ೧೯೨೫ರಲ್ಲಿ ನಡೆದ ಮಸ್ತಕಾಭಿಷೇಕಕ್ಕೂ ಮಹಾಸ್ವಾಮಿಯವರು ದಯಮಾಡಿಸಿದ್ದರು. ಈ ಸಲದ ಉತ್ಸವ ಶ್ರೀಮನ್ಮಹಾರಾಜರವರ ಘನ ಸರ್ಕಾರದವರ ನೇತೃತ್ವದಲ್ಲೇ ನಡೆಯಿತು. ಇದರಿಂದ, ನಮ್ಮನ್ನಾಳುವ ಮಹಾಸ್ವಾಮಿಯವರಿಗೆ ಶ್ರೀ ಗೊಮ್ಮಟೇಶ್ವರನಲ್ಲೂ ಜೈನಧರ್ಮದಲ್ಲೂ ಎಂಥ ಗಾಢಭಕ್ತಿ ಇದೆಯೆಂಬುದು ಸ್ಪಷ್ಟವಾಗುತ್ತದೆ. ಜೈನಧರ್ಮದ ತಿರುಳಾದ ಅಹಿಂಸಾ ತತ್ತ್ವ ರಾಜರ್ಷಿಗಳಂತಿರುವ ಮಹಾಸ್ವಾಮಿಯವರಿಗೆ ಮೆಚ್ಚಿಕೆಯಾಗಿರುವುದರಲ್ಲಿ ಆಶ್ಚರ್ಯವೇನು? ಈ ವರ್ಷದ ಮಸ್ತಕಾಭಿಷೇಕದ ಸಂಬಂಧದಲ್ಲಿಯೇ ನಡೆದ ಜೈನ ಸಮ್ಮೇಳನದ ಪ್ರಾರಂಭೋತ್ಸವವನ್ನು ನೆರವೇರಿಸುವಂದು ಮಹಾಸ್ವಾಮಿಯವರು ದಯಪಾಲಿಸಿದ ಭಾಷಣದಲ್ಲಿ—

"ಈಗ್ಗೆ ನಾಲ್ವತ್ತು ವರ್ಷಗಳಿಂದಲೂ ನಮಗೆ ಈ ಕ್ಷೇತ್ರದ ಸಂಬಂಧವುಂಟಾಗಿದೆ. ನಮ್ಮ ಪೂರ್ವಜರಾದ ನಮ್ಮ ಪೂಜ್ಯಪಾದರುಗಳಿಗೂ ಮತ್ತು ನಮಗೂ ಸಹ ಜೈನಮತ ತತ್ತ್ವಗಳಲ್ಲಿ—ವಿಶೇಷತಃ ಅವುಗಳಲ್ಲಿ ಮುಖ್ಯವಾದುವುಗಳಲ್ಲೊಂದಾದ ಅಹಿಂಸಾಧರ್ಮದಲ್ಲಿ — ಪ್ರೀತ್ಯಾದರಪೂರ್ವಕವಾದ ಮೆಚ್ಚಿಕೆ. ಇಲ್ಲಿಯ ಶ್ರೀ ಗೊಮ್ಮಟೇಶ್ವರಸ್ವಾಮಿಯವರ ಮೂರ್ತಿಯಂತಹ ಸುಂದರವಾದ ಪ್ರಾಚೀನ ಸ್ಮಾರಕವಿರುವ ಈ ಕ್ಷೇತ್ರವು ನಮಗೆ ಸೇರಿರುವುದೇ ನಮ್ಮ ಮತ್ತು ಸರ್ಕಾರದ ಒಂದು ಸುಯೋಗವೆಂದು ನಾವು ಭಾವಿಸಿದ್ದೇವೆ"

ಎಂಬುದಾಗಿ ಅಪ್ಪಣೆ ಕೊಡಿಸಿರುವ ಮಾತುಗಳು ಮಹಾಸ್ವಾಮಿಯವರ ಹೃದಯದಿಂದ ಹೊರಟುವಾಗಿವೆ, ಅವರ ಸರ್ವಧರ್ಮ ಸಮತಾದೃಷ್ಟಿಯ ದ್ಯೋತಕವಾಗಿವೆ, ಕನ್ನಡ ಸಂಸ್ಕೃತಿಯ ಜಾಯಮಾನಕ್ಕೆ ಒಪ್ಪುವಂತಿವೆ.

ಶ್ರೀಮದ್ಯುವರಾಜ ಕುಮಾರರವರೂ ದೊಡ್ಡಪ್ಪನವರೊಡನೆ ಉತ್ಸವಕ್ಕೆ ದಯಮಾಡಿಸಿದ್ದರು.

ಈ ಮಹಾಮಸ್ತಕಾಭಿಷೇಕೋತ್ಸವ ಅಪೂರ್ವವಾದ ಕನ್ನಡ ನಾಡ ಹಬ್ಬ. ಶ್ರೀ ಗೊಮ್ಮಟೇಶ್ವರ ಮೂರ್ತಿ ಚಾಮುಂಡರಾಯನಿಂದ (ಕ್ರಿ. ಶ. ೯೮೩? ೧೦೨೮?) ಪ್ರತಿಷ್ಠಿತನಾದ ಮೇಲೆ ಈ ಅಭಿಷೇಕ ಹಲವು ಬಾರಿ ನಡೆದಿದೆ; ಮೊತ್ತಮೊದಲು ಕ್ರಿ. ಶ. ೧೩೯೮ರಲ್ಲಿ ನಡೆಯಿತು. ೧೬೧೨ರಲ್ಲಿ ಶಾಂತವರ್ಣಿ ಎಂಬವನು ಮಾಡಿಸಿದ ಅಭಿಷೇಕದ ಉಲ್ಲೇಖವಿದೆ. ಕ್ರಿ. ಶ. ೧೬೭೭ರಲ್ಲಿ ಶ್ರೀ ಚಿಕ್ಕದೇವರಾಜ ಒಡೆಯರೂ ೧೮೨೫ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರೂ ಅಭಿಷೇಕ ಮಾಡಿಸಿದರು ಎಂಬುದಾಗಿಯೂ ಉಲ್ಲೇಖವಿದೆ. ತರುವಾಯ ೧೮೮೭ರಲ್ಲೂ ೧೯೦೯ರಲ್ಲೂ ಅಭಿಷೇಕಗಳಾಗಿವೆ. ಈ ಸಲದ್ದು ನಮ್ಮನ್ನಾಳುವ ಪ್ರಭುಗಳ ಆಳಿಕೆಯಲ್ಲಿ ನಡೆದ ಎರಡನೆಯ ಅಭಿಷೇಕ. ಮೊದಲನೆಯ ಅಭಿಷೇಕ ೧೯೨೫ರಲ್ಲಿ ನಡೆಯಿತು.* ಈ ಸಲದ ಅಭಿಷೇಕದ ವಿವರಗಳು ಎಲ್ಲ ಕನ್ನಡ ಪತ್ರಿಕೆಗಳಲ್ಲಿಯೂ ಬಂದಿವೆ, ಅಥವಾ ಬರುವುವಾಗಿವೆ.



ಶ್ರೀ ಗೊಮ್ಮಟೇಶ್ವರನಿಗೆ ಕುಂಭಗಳಿಂದ ಮಸ್ತಕಾಭಿಷೇಕ ಮಾಡುತ್ತಿರುವ ನೋಟ

(ಪಡಿಯಚ್ಚು : 'ದೇಶಬಂಧು' ಕೃಪೆಯಿಂದ)

೧೮೮೭ರಲ್ಲಿ ನಡೆದ ಅಭಿಷೇಕದ ವರ್ಣನೆ 'ಎಪಿಗ್ರಾಫಿಯಾ ಕರ್ನಾಟಕ'ದಲ್ಲಿ (ಸಂ. ೨, ಪು. ೧೮–೧೯) ಕೊಟ್ಟಿದೆ. †

ಈ ವರ್ಷದ ಅಭಿಷೇಕ ಉತ್ಸವಕ್ಕೆ ಜೈನರೂ ಜೈನೇತರರೂ ಸುಮಾರು ೩ ಲಕ್ಷ ಜನ ಭಾರತ ದೇಶದ ನಾನಾ ಭಾಗಗಳಿಂದ ಬಂದಿದ್ದರು. ಪರಿಷತ್ತಿನ ಪರವಾಗಿ ಉಪಾಧ್ಯಕ್ಷರಾದ

* ಈ ಬಗ್ಗೆ ವಿವರಗಳನ್ನು ಶ್ರೀಮಾನ್ ಪಿ. ಆರ್. ರಾಮಯ್ಯನವರು 'ತಾಯಿನಾಡು' ಪತ್ರಿಕೆಯ ತಾ॥ ೨೪-೨-೪೦ರ ಸಂಚಿಕೆಯಲ್ಲಿ ಬರೆದಿದ್ದಾರೆ.

† ಈ ಉತ್ಸವ ಕಾಲಕ್ಕೆ ಸರಿಯಾಗಿ, ಮೈಸೂರಿನ ಡಾ॥ ಎಂ. ಎಚ್. ಕೃಷ್ಣ ಅವರು 'ಶ್ರವಣಬೆಳ್ಗೊಳ' ಎಂಬ ಚಿಕ್ಕ ಹೊತ್ತಗೆಯನ್ನೂ, ಶ್ರವಣಬೆಳ್ಗೊಳದ ಶ್ರೀ ಬ್ರಹ್ಮಸೂರಿ ಶಾಸ್ತ್ರಿಗಳು ತಮ್ಮ 'ಸುದರ್ಶನ' ಪತ್ರಿಕೆಯ ವಿಶೇಷ ಸಂಚಿಕೆಯನ್ನೂ ಪ್ರಕಟಿಸಿರುತ್ತಾರೆ. ಈ ಎರಡು ಪ್ರಕಟನೆಗಳಲ್ಲಿ ಮಸ್ತಕಾಭಿಷೇಕ ಮುಂತಾದ ಹಲವು ವಿಚಾರಗಳನ್ನು ಕುರಿತ ತಿಳಿವಳಿಕೆ ಪಡೆಯಬಹುದು. ಡಾ॥ ಕೃಷ್ಣರವರ ಪ್ರಕಟನೆ ಎಲ್ಲ ವಿಚಾರಗಳನ್ನು ಒಳಕೊಂಡು, ಸಚಿತ್ರವಾಗಿದ್ದು, ಸಂಗ್ರಾಹ್ಯವಾಗಿದೆ. ಶ್ರೀ ಗೊಮ್ಮಟೇಶ್ವರನ ಚರಿತ್ರೆಯ ವಿಷಯ ತಿಳಿಯಬೇಕೆನ್ನುವವರು ಶ್ರೀ ಜಿ. ಪಿ. ರಾಜರತ್ನಂ ಅವರ 'ಶ್ರೀ ಗೊಮ್ಮಟೇಶ್ವರ' ಎಂಬ ಗ್ರಂಥವನ್ನು ಓದಬಹುದು.

ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಉತ್ಸವಕ್ಕೆ ಹೋಗಿದ್ದರು. ಉತ್ಸವ ಯಶಸ್ವಿಯಾಗಿ ನಡೆಯಲು ಶ್ರವಣ ಬೆಳ್ಗೊಳದ ಶ್ರೀಮಠದ ಶ್ರೀ ಸ್ವಾಮಿಗಳ ಪ್ರಭಾವ ಮುಖ್ಯ ಕಾರಣ. ಜೊತೆಗೆ ಹಾಸನದ ಜಿಲ್ಲಾಧಿಕಾರಿಗಳಾದ ಶ್ರೀ ಟಿ. ರಾಮಯ್ಯನವರು, ಸಬ್-ಡಿವಿಜನ್ ಆಫೀಸರಾದ ಅಬ್ದುಲ್ ರಜಾಕ್ ಅವರು, ಚೆನ್ನರಾಯಪಟ್ಟಣ ತಾಲ್ಲೂಕು ಅಮಲ್ದಾರರಾದ ಶ್ರೀ ಎಸ್. ಎಂ. ಸೀತಾರಾಮಯ್ಯನವರು—ಇವರುಗಳ ನೆರವೂ ಒಂದು ಮುಖ್ಯ ಕಾರಣ. ಇವರೂ ಸರಕಾರದ ಇನ್ನಿತರ ಅಧಿಕಾರಿಗಳೂ ಹೊರಗಿನಿಂದ ಬಂದ ಭಕ್ತಜನಕ್ಕೆ ಶ್ರವಣಬೆಳ್ಗೊಳದ, ಕನ್ನಡ ನಾಡ ಒಂದು ದೊಡ್ಡ ಹಬ್ಬದ, ಸವಿನೆನಪು ಚಿರಕಾಲ ಇರುವಂತೆ ಮಾಡಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

ಮಹಾಸ್ವಾಮಿಯವರು ಪ್ರಾರಂಭಗೊಳಿಸಿದ ಶ್ರೀ ಅಖಿಲ ಭಾರತ ದಿಗಂಬರ ಜೈನ ಮಹಾಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಭಾರತದ ಕೇಂದ್ರಶಾಸನಸಭಾ ಸದಸ್ಯರಾದ ರಾಯ್ ಬಹದ್ದೂರ್ ಶ್ರೀಮಾನ್ ಸೇಠ್ ಭಾಗ್‌ಚಂದ್ ಸೋನಿಯವರು ಜೈನಧರ್ಮದ ಹಿರಿಮೆಯನ್ನು ವರ್ಣಿಸಿ, ಭಾರತಮಾತೆಯ ಸೇವೆಯಲ್ಲಿ ಜೈನಸಮಾಜವೂ ಮುಂದೆ ಬಂದು ದುಡಿಯುವಂತೆ ಶ್ರೀ ಗೊಮ್ಮಟೇಶ್ವರನು ಅನುಗ್ರಹಿಸಲೆಂದು ಕೋರಿ, ಜೈನ ಮಹಿಳೆಯರು ವಿದ್ಯಾಭ್ಯಾಸದಲ್ಲಿ ಇನ್ನೂ ಹೆಚ್ಚು ಪ್ರಗತಿ ಹೊಂದಬೇಕಾದ ಆವಶ್ಯಕತೆಯನ್ನು ಒತ್ತಿ ಹೇಳಿದರು. ಭಾರತದ ಮುನ್ನಡೆಗೆ ಮತಾಚಾರಗಳ ಗೊಂದಲ ಅಡ್ಡಿಯಾಗ ಬಾರದೆಂದು ಬೋಧಿಸಿದರು.

ಸಮ್ಮೇಳನದ ಪ್ರಾರಂಭ ಭಾಷಣದಲ್ಲಿ ಮಹಾಸ್ವಾಮಿಯವರು ಜೈನಧರ್ಮದಲ್ಲಿ ತಮಗಿರುವ ಭಕ್ತಿಗೌರವಗಳನ್ನು ವ್ಯಕ್ತಪಡಿಸಿ, ಜೈನಧರ್ಮದ ಸತ್ತ್ವ ಹೆಚ್ಚುಹೆಚ್ಚಾಗಿ ಹರಡಲೆಂದು ಬಯಸಿದರು. ಮಹಾಸ್ವಾಮಿಯವರ ಬಯಕೆ ನೆರವೇರಿ ಲೋಕ ಕಲ್ಯಾಣವಾಗಲೆಂಬುದೇ ನಮ್ಮೆಲ್ಲರ ಹಾರೈಕೆ. "ಜೀಯಾದ್ ಜೈನಧರ್ಮಂ"—(ಜನ್ನ).

---

## ಸಂಸ್ಕೃತ ಭಾಷೆಯ ಮಹತ್ವ

ಇದೇ ಫೆಬ್ರುವರಿ ೨೬ನೆಯ ತಾರೀಖಿನ ದಿನ, ಮದರಾಸಿನಲ್ಲಿ ಸಂಸ್ಕೃತ ಮಹಾಪಾಠಶಾಲೆಯ 'ಸ್ಥಾಪಕರ ಜಯಂತಿ'ಯ ಉತ್ಸವ ನಡೆಯಿತು. ಉತ್ಸವಕ್ಕೆ ಆಹ್ವಾನಿತರಾಗಿ ಹೋಗಿದ್ದ ಮೈಸೂರು ಸಂಸ್ಥಾನದ ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಆ ಸಂದರ್ಭದಲ್ಲಿ ಮಾಡಿದ ಭಾಷಣದಿಂದ, ಭರತಖಂಡದ ಪವಿತ್ರ ಭಾಷೆಯಾದ ಸಂಸ್ಕೃತದ ವಿಷಯದಲ್ಲಿ, ಕನ್ನಡ ಭಾಷೆಯ ವಿಷಯದಲ್ಲಿ ಹೇಗೋ ಹಾಗೆ, ಅವರಿಗೆ ಎಷ್ಟು ಅಭಿಮಾನ ಗೌರವಗಳಿವೆ ಎಂಬುದು ಕಾಣಬರುತ್ತದೆ.

ಹುಟ್ಟಿನಲ್ಲಿ ಬೇರೆ ಮನೆತನವಾದರೂ, ಕನ್ನಡ ನುಡಿವೆಣ್ಣು ಕೂಸಾಗಿದ್ದಾಗ ಸಂಸ್ಕೃತ ಭಾಷಾ ಜನನಿಯ ಮಡಿಲಿಗೆ ಬಿದ್ದು ಅಲ್ಲಿಯೇ ಲಾಲನೆ ಪಾಲನೆ ಹೊಂದಿದವಳು. ಅಂದಿನಿಂದ ಇಂದಿನವರೆಗೆ ಕನ್ನಡಕ್ಕೂ ಸಂಸ್ಕೃತಕ್ಕೂ ಅದೊಂದು ಬಗೆಯ ನಲ್ಮೆಯ ನಂಟು ಬೆಳೆದುಕೊಂಡು ಬಂದಿದೆ. ಸಂಸ್ಕೃತದ ಪೋಷಣೆಯೂ ಸಂಸ್ಕೃತಿ ರಕ್ಷಣೆಯೂ, ಕನ್ನಡಿಗರಲ್ಲಿ ಉತ್ತರಾಪಥಕ್ಕಿಂತ ಹೆಚ್ಚು ಅಭಿಮಾನಕ್ಕೆ ಆಸ್ಪದವಾಗಿದೆ. ಸಂಸ್ಕೃತ ಸಾಹಿತ್ಯ ಭಂಡಾರದ ಇನ್ನೂ ಎಷ್ಟೋ ರತ್ನಗಳನ್ನು ಕನ್ನಡ ಬೊಕ್ಕಸಕ್ಕೆ ತುಂಬಿಕೊಳ್ಳುವ ಕೆಲಸ ನಡೆಯಬೇಕಾಗಿದೆ. ಸಂಸ್ಕೃತದ ಮಹತ್ವ ನಮ್ಮೆಲ್ಲರ ಹೆಮ್ಮೆಯ ಸ್ವತ್ತಾಗಿದೆ.

ಸಂಸ್ಕೃತ ಸತ್ತ ನುಡಿಯಲ್ಲ. ಎಂದೂ ಅಳಿಯದ ನುಡಿ. ಈ ವಿಚಾರದಲ್ಲಿ ಸರ್ ಮಿರ್ಜಾ ಅವರ ಭಾಷಣದ ಭಾಗವನ್ನು ಎತ್ತಿಕೊಡಲು ಬಯಸುತ್ತೇವೆ:

"ಸಂಸ್ಕೃತ ಭಾಷೆ ಮೃತಭಾಷೆಯೆಂಬುದೊಂದು ಹೇಳಿಕೆಯೂ ಉಂಟು. ಅದು ಮೃತಭಾಷೆಯೆಂಬುದು ಒಂದು ದೃಷ್ಟಿಯಿಂದ ಮಾತ್ರ ನಿಜ; ಅದು ಜನಗಳು ಮಾತನಾಡುವ ಭಾಷೆಯಾಗಿ ಬಳಕೆಯಲ್ಲಿಲ್ಲವೆಂಬ ದೃಷ್ಟಿಯಿಂದ ಮಾತ್ರವೇ ಅದು ನಿಜ. ಅದಕ್ಕಿಂತಲೂ ಶ್ರೇಷ್ಠವೂ ಸಾರತರವೂ ಆದ ದೃಷ್ಟಿಯಿಂದ—ಎಂದರೆ, ಪ್ರಭಾವಶಾಲಿಯಾಗಿರುವ ದೃಷ್ಟಿಯಿಂದ—ಅದು ಇಂದಿಗೂ ಸಜೀವವಾಗಿ ಸತ್ತ್ವಯುತವಾಗಿಯೇ ಇರುವ ಭಾಷೆ. ಏಕೆಂದರೆ, ಇಂದಿಗೂ ಕೂಡ ಬಳಕೆಯಲ್ಲಿರುವ ಭಾರತೀಯ ಭಾಷೆಗಳಲ್ಲಿ ಅನೇಕ ಭಾಷೆಗಳು ಸಂಸ್ಕೃತ ಭಾಷೆಯ ಅಗಾಧವಾದ ಸಾಹಿತ್ಯ ಭಂಡಾರದಿಂದ ಈಗಲೂ ಪೋಷಿತವಾಗಿ ಪರಿಪುಷ್ಟವಾಗುತ್ತಿಲ್ಲವೆ? ಅನೇಕ ಕೋಟಿ ಜನ ಹಿಂದುಗಳಿಗೆ ಪ್ರಪಂಚದ ಯಾವ ಸಾಹಿತ್ಯದಲ್ಲಿ ಲಭಿಸತಕ್ಕವುಗಳಲ್ಲಾದರೂ ಭೂಷಣಪ್ರಾಯವಾದಂಥ ಘನವಾದ ಭಾವಗಳಿಂದಲೂ ಉದಾತ್ತವಾದ ಧ್ಯೇಯಗಳಿಂದಲೂ ಸಂಸ್ಕೃತ ಭಾಷೆ ಸ್ಫೂರ್ತಿಯನ್ನುಂಟುಮಾಡಿಲ್ಲವೆ? ಮತ್ತು ಸನಾತನ ಧರ್ಮವು ಉಳಿದಿರುವವರೆಗೂ ಸಂಸ್ಕೃತ ಭಾಷೆಯು ಅದೇ ರೀತಿ ಸ್ಫೂರ್ತಿಯನ್ನುಂಟುಮಾಡುತ್ತಿರುವುದಲ್ಲವೆ? ಸಂಸ್ಕೃತ ಸಾಹಿತ್ಯ ಭಂಡಾರವು ಅಪರಿಮಿತವೆನಿಸಿ ಅಗಾಧವಾಗಿದೆ. ಹೆಚ್ಚು ಹೆಚ್ಚು ಜನರು ಸಂಸ್ಕೃತ ಸಾಹಿತ್ಯವನ್ನು ವ್ಯಾಸಂಗಮಾಡಿ ತಮ್ಮ ಜೀವನಕ್ಕೆ ಸಂಸ್ಕಾರವನ್ನು ತುಂಬಿಕೊಳ್ಳುವರೆಂದು ಹಾರೈಸಬಹುದಾಗಿದೆ."

ಸರ್ ಮಿರ್ಜಾ ಅವರು ತಮ್ಮ ಅಮೋಘವಾದ ಭಾಷಣದಲ್ಲಿ ಸಂಸ್ಕೃತ ಭಾಷೆಯ ವ್ಯಾಸಂಗ, ಅದನ್ನು ಉತ್ತೇಜನಗೊಳಿಸಲು ಮಠಗಳ ಮೇಲಿರುವ ಹೊಣೆ, ಸಂಸ್ಕೃತ ವ್ಯಾಸಂಗ ನಷ್ಟವಾಗದಂತೆ ನೋಡಿಕೊಳ್ಳಬೇಕಾದ ಕರ್ತವ್ಯ, ಮೈಸೂರು ಸಂಸ್ಥಾನದಲ್ಲಿ ಶ್ರೀಮನ್ಮಹಾರಾಜರವರ ಆಶ್ರಯದಲ್ಲಿ ಸಂಸ್ಕೃತ ವ್ಯಾಸಂಗಕ್ಕೆ ದೊರೆಯುತ್ತಿರುವ ಪ್ರೋತ್ಸಾಹ ಮುಂತಾದ ಹಲವು ಮುಖ್ಯ ವಿಷಯಗಳನ್ನು ಪ್ರಸ್ತಾವಿಸಿರುತ್ತಾರೆ. ಕನ್ನಡದ ಅರಸರಾದ ಶ್ರೀಮನ್ಮಹಾರಾಜರವರೇ ಸ್ವತಃ ಸಂಸ್ಕೃತ ಭಾಷಾ ಪಾರಂಗತರೆಂದು ಪ್ರಶಂಸಿಸಿದ್ದಾರೆ.

ಸರ್ ಮಿರ್ಜಾ ಅವರು ಹೇಳುವಂತೆ, ಯೂರೋಪು ಖಂಡದಲ್ಲಿ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳು ಅಲ್ಲಿಯ ಜನಜೀವನಕ್ಕೆ ಸಂಬಂಧವಿಲ್ಲದಂತೆಯೇ ಉಳಿದಿರುವಂಥ ಸ್ಥಿತಿ ಸಂಸ್ಕೃತಕ್ಕೂ ಉಂಟಾದರೆ "ಭಾರತೀಯರ ಜೀವನದ ಒಂದು ತೇಜಸ್ಸೇ ಹೋದಂತೆ." "ಅದರೆ ಆ ಬಗೆಯ ಸನ್ನಿವೇಶ ಉಂಟಾಗುವ ಸಂಭವವಿಲ್ಲದಿರುವುದು ಸುಯೋಗ."

ಹೊಸ ಕಾಲಧರ್ಮಕ್ಕೆ ಹೊಂದಿಕೆಯಾಗುವಂತೆ ಸಂಸ್ಕೃತ ಭಂಡಾರವನ್ನು ವಿಮರ್ಶನ ಬುದ್ಧಿಯಿಂದ ವ್ಯಾಸಂಗ ಮಾಡಿ, ಜೀರ್ಣವಸ್ತ್ರಗಳನ್ನು ಬಿಟ್ಟು, ಜ್ಞಾನಸ್ಫೂರ್ತಿಗಳನ್ನು ಪಡೆದು, ಕನ್ನಡ ಸಾಹಿತ್ಯ ಸ್ವತಂತ್ರವಾಗಿ ಬೆಳೆಯಲೆಂಬುದೇ ಕನ್ನಡ ಭಕ್ತರ ಹೆಬ್ಬಯಕೆ.

# ಕನ್ನಡ ನಾಟಕ

ಶ್ರೀಮಾನ್ ಅ. ನ. ಕೃಷ್ಣರಾಯರಿಂದ

(ನವಿಲುಗುಂದದಲ್ಲಿ ಧಾರವಾಡ ಜಿಲ್ಲೆಯ ೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಡೆದ ನಾಟ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಸಾರಾಂಶ).

ಜೀವನ, ಸಾಹಿತ್ಯ, ಕಲೆ ಎಲ್ಲದರಲ್ಲಿಯೂ ನಾಟಕದ ಸ್ಥಾನ ವಿಶಿಷ್ಟವಾದುದಾಗಿದೆ. ಜೀವನದ ಹಾಳು ಹೊರೆಯ ಭಾರ ಹಗುರವಾಗಬೇಕಾದರೆ, ವ್ಯಕ್ತಿವ್ಯಕ್ತಿಗಳಲ್ಲಿ ಸಂಬಂಧ ಹೆಚ್ಚು ನಿಕಟವಾಗಬೇಕಾದರೆ, ದಯೆ, ಸಹನೆ, ಸ್ವತಂತ್ರ ವಿಚಾರಗಳು ಸಮಾಜದಲ್ಲಿ ಮೂಡಬೇಕಾದರೆ, ನಾಟಕ ಉತ್ತಮ ಸಾಧನ. ಪೌರಾಣಿಕ ಹಾಗೂ ಐತಿಹಾಸಿಕ ಕಾಲಗಳಲ್ಲಿ ಭಾರತವರ್ಷ ಗ್ರೀಕರಂತೆ ನಾಟಕವನ್ನು ಆರಾಧಿಸುತ್ತಿತ್ತು. ಭರತ, ನಂದಿಕೇಶ್ವರರನ್ನು ಋಷಿಗಳಂತೆ ಪರಿಗಣಿಸುತ್ತಿತ್ತು. ಇಂತಹ ಇಂಬು ಸಿಕ್ಕಿತೆಂದೇ ಭಾಸ, ಕಾಳಿದಾಸ, ಭವಭೂತಿಗಳಂತಹ ನಾಟಕಕರ್ತರು ವರ್ಧಿಸಿದರು; 'ಮೃಚ್ಛಕಟಿಕ'ದಂತಹ ನಾಟಕ ಹುಟ್ಟಲು ಅವಕಾಶವಾಯಿತು. ಜೀವನದಲ್ಲಿದ್ದಂತೆ ಸಾಹಿತ್ಯ ಕಲೆಗಳಲ್ಲಿಯೂ ನಾಟಕ ಹಿರಿಯ ಸ್ಥಾನವನ್ನು ಅಲಂಕರಿಸಿತ್ತು. ನಾಟಕ ಜ್ಞಾನವೇ ಸಾಹಿತ್ಯಾಭ್ಯಾಸದ ಕೊನೆಯೆಂಬ ಮತ ಪ್ರಬಲವಾಗಿತ್ತು.

ಆದರೆ ಇಂದು ಕಾಲಚಕ್ರವಿಭ್ರಮಣದಿಂದ ನಾಟಕದ ಸ್ಥಾನಕ್ಕೆ ಬೇರೆ ಬೇರೆ ವಸ್ತುಗಳು ಬಂದು ಕುಳಿತಿವೆ. ನಾಟಕದ ಪ್ರಧಾನಸ್ಥಾನ ಕಣ್ಮರೆಯಾಗಿರುವುದು ಮಾತ್ರವಲ್ಲದೆ, ಅದರ ಅಸ್ತಿತ್ವ ಕೂಡ ಉಳಿಯುವುದೋ ಇಲ್ಲವೋ ಎಂದು ಶಂಕಿಸುವ ಸ್ಥಿತಿ ಬಂದಿದೆ. ನಾಟಕವೆಂದರೆ 'ಮನೆಯ ಕೈಗಾರಿಕೆ' ಎಂದು ಭಾವಿಸುತ್ತಿದ್ದ ಷೇಕ್ಸ್‌ಪಿಯರ್ ಮಹಾಕವಿಯ ಇಂಗ್ಲೆಂಡೇ ಇಂದು ನಾಟಕದ ಕಡೆಗೆ ಸವತಿ ಪ್ರೇಮವನ್ನು ತೋರುತ್ತಿದೆ. ಆದರೆ ಕರ್ನಾಟಕಕ್ಕೆ ಬಂದಿರುವ ದುಃಸ್ಥಿತಿ ಬೇರೆ ಯಾವ ದೇಶಕ್ಕೂ ಬಂದಿಲ್ಲವೆಂದು ಹೇಳಬಹುದು. ನಾಟಕದ ಬಗ್ಗೆ ಕನ್ನಡ ನಾಡಿನ ಪ್ರಾಚೀನ ಕವಿಗಳು ತೋರಿದ ತಿರಸ್ಕಾರವನ್ನು ಮರೆತು ಇಂದಿನವರು ಹೊಸ ಹುರುಪಿನಲ್ಲಿ ಆರಂಭಿಸಿದ ನಾಟಕ ಸೃಷ್ಟಿಯ ಕಲೆಗೆ ಈಗ ದೊಡ್ಡ ಧಕ್ಕೆ ತಗುಲಿದೆ. ಯಂತ್ರಕಲೆಯಾದ ಸಿನಿಮಾ ತನ್ನ ಕೃತ್ರಿಮ ಸೌಂದರ್ಯದಿಂದ ನಾಟಕದ ಪ್ರಗತಿಯನ್ನು ಪ್ರತಿಬಂಧಿಸಿದೆ.

ಸಾಹಿತ್ಯದ ಎಲ್ಲ ಪ್ರಕಾರಗಳನ್ನು ತಮ್ಮ ಭಾವೋಚ್ಚಾರಣೆಗೆ ಅಳವಡಿಸಿಕೊಂಡ ಪ್ರಾಚೀನ ಕನ್ನಡ ಕವಿಗಳು ನಾಟಕವನ್ನು ಹೇಗೆ ಮರೆತರೋ ತಿಳಿಯದಾಗಿದೆ. ರನ್ನನ 'ಗದಾಯುದ್ಧ'ವೇ ಮೊದಲಾದ ಕೆಲವು ಚಂಪೂ ಗ್ರಂಥಗಳಲ್ಲಿ 'ನಾಟಕೀಯತೆ' ಹೇರಳವಾಗಿರುವುದರಿಂದ ನಾಟಕ ಬರೆಯುವ ಗೊಂದಲವೇಕೆಂದು ಬಿಟ್ಟಿರಬಹುದೇ? ಹಾಗಾದರೆ ಶ್ರೀ ಹರ್ಷನ 'ರತ್ನಾವಳಿ' ನಾಟಕವನ್ನು ಅಪಭ್ರಂಶ ಮಾಡಿಯಾದರೂ ಕನ್ನಡದಲ್ಲಿ 'ಮಿತ್ರವಿಂದಾ ಗೋವಿಂದ' ಎಂದು ಬರೆಯುವ ಗೋಜಿಗೆ ಸಿಂಗಾರಾರ್ಯ ಏತಕ್ಕೆ ಹೋಗಬೇಕಾಗಿತ್ತು? ಅವನ ಅನಂತರವಾದರೂ ನಾಟಕಗಳ ಸಂಖ್ಯೆ ಏತಕ್ಕೆ ಬೆಳೆಯಲಿಲ್ಲ? —ಇವೇ ಮೊದಲಾದ ಕೆಲವು ಪ್ರಶ್ನೆಗಳು ಇಂದಿಗೂ ನಮ್ಮನ್ನು ಕಾಡುತ್ತಿವೆ. ಕನ್ನಡ ನಾಟಕಗಳ ಇತಿಹಾಸವನ್ನು ನಾವು ಕಟ್ಟಬೇಕಾದರೆ ಬಸವಪ್ಪಶಾಸ್ತ್ರಿಗಳವರ 'ಶಾಕುಂತಲ ನಾಟಕ'ವೇ "ಅನುವಾದಿತವಾಗಿದ್ದರೂ ಸ್ವತಂತ್ರವಾಗಿ ಕಾಣುವ" ಮೊದಲನೆಯ ಕಲಾಕೃತಿಯಾಗಿದೆ ಎಂದು ಹೇಳಬಹುದು. ಬಸವಪ್ಪಶಾಸ್ತ್ರಿಗಳ ಮೇಲ್ಪಂಕ್ತಿಯನ್ನು ಅನುಸರಿಸಿ ಮೈಸೂರಿನ ಆಳುವ ಮಹಾಸ್ವಾಮಿಯವರ ಪೂಜ್ಯತಂದೆಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಪ್ರೋತ್ಸಾಹದಿಂದ ಅನೇಕ ಜನ ಪಂಡಿತರು ಸ್ವತಂತ್ರವಾಗಿಯೂ, ಸಂಸ್ಕೃತ ಇಂಗ್ಲಿಷು ನಾಟಕಗಳನ್ನು ಅವಲಂಬಿಸಿಯೂ ಅನೇಕ ನಾಟಕಗಳನ್ನು ಬರೆದರು. ಬಸವಪ್ಪಶಾಸ್ತ್ರಿಗಳವರ ತರುವಾಯ ನಾಟಕದ ಮಂಡಳಿಗಳಿಗೇ ಬರೆದುಕೊಡುವ ಅನೇಕ ಕವಿಗಳು ಹುಟ್ಟಿಕೊಂಡರು. ಅವರ ಕೈಯಲ್ಲಿ ಬಂಗಾಳಿ, ಮರಾಟಿ, ಇಂಗ್ಲಿಷು ನಾಟಕಗಳೂ ಕಾದಂಬರಿಗಳೂ ಸಿಕ್ಕಿ ಕೊರಗಿ ಹೋದವು. ಈ ಎಲ್ಲ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡರೆ ಸುಮಾರು ೧೯೩೦ರ ವರೆಗೆ ಬಂದ ಕನ್ನಡ ನಾಟಕಗಳನ್ನು—ಕೆಲವನ್ನು ಉಳಿದು—ಮರೆತು ನಾವು ಮುಂದೆ ಹೋಗಬಹುದು.

ಕನ್ನಡ ನಾಡಿನಲ್ಲಿ ನಾಟಕ ತನ್ನ 'ದೇಶಿ' ಸ್ವರೂಪದಲ್ಲಿ ಆರಂಭವಾದದ್ದು ಕೈಲಾಸಂರವರಿಂದ. 'ಟೊಳ್ಳುಗಟ್ಟಿ'ಯಿಂದ ಆರಂಭವಾದ ಅವರ ಸೃಷ್ಟಿ ಇನ್ನೂ ಅವಿಚ್ಛಿನ್ನವಾಗಿ ನಡೆಯುತ್ತಿದೆ. ಕೈಲಾಸಂರವರು ಹೊಸರೀತಿಯಲ್ಲಿ ನಾಟಕವನ್ನು ಬರೆಯುವುದಕ್ಕೆ ಆರಂಭಿಸಿದುದಲ್ಲದೆ ಹೊಸ ವಿಷಯಗಳನ್ನು ನಾಟಕದಲ್ಲಿ ಚರ್ಚಿಸುವುದಕ್ಕಾರಂಭಿಸಿದರು. ನಾಟ್ಯರಂಗದಲ್ಲಿ ವಿಶೇಷ ಕೆಲಸಮಾಡಿರುವ ಮತ್ತಿಬ್ಬರೆಂದರೆ ಧಾರವಾಡದ ಶ್ರೀರಂಗರು, ಪುತ್ತೂರಿನ ಕಾರಂತರು.

ಇದು 'ಸಾಮಾಜಿಕ' ನಾಟಕವೆನಿಸಿಕೊಳ್ಳುವ ಒಂದು ಪರಂಪರೆಗೆ ಸೇರಿದ ಕತೆಯಾಯಿತು. ನಮ್ಮಲ್ಲಿ ನಾಟಕವನ್ನು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಎಂದು ವಿಭಾಗಿಸುವ ಹವ್ಯಾಸ ಬಂದುಬಿಟ್ಟಿದೆ. ಕೃಷ್ಣನ ಕತೆಯಾದರೆ ಪೌರಾಣಿಕ, ಕೃಷ್ಣದೇವರಾಯನ ಕತೆಯಾದರೆ ಐತಿಹಾಸಿಕ, ಕೃಷ್ಣಮೂರ್ತಿಯ ಕತೆಯಾದರೆ ಸಾಮಾಜಿಕ ಎಂದು ಅವರ ಕಲ್ಪನೆ. ನಾಟಕದ ವಸ್ತು, ಅದರ ಹಿನ್ನೆಲೆ ಯಾವ ಯುಗಕ್ಕೆ ಸೇರಿದ್ದರೂ ವ್ಯಕ್ತಿಗಳ ನಡೆ–ನುಡಿಗಳು ಆಯಾ ಕಾಲದ ಸಮಾಜದ ಪ್ರತೀಕಗಳೆಂದೇ ನಾವು ಗಣಿಸಬೇಕು. ಈ ದೃಷ್ಟಿಯಿಂದ ನೋಡಿದರೆ ರಾಮಾಯಣ ಕೂಡ ಒಂದು ಸಾಮಾಜಿಕ ಚಿತ್ರ. ಅದರಲ್ಲಿ ಬರುವ ಸ್ವಯಂವರ ಪದ್ಧತಿ, ಬಹುಪತ್ನಿತ್ವ ಪದ್ಧತಿ, ಸ್ತ್ರೀ ಅಪಹರಣ ಚಿತ್ರಗಳೆಲ್ಲಾ ಒಂದು ಕಾಲದ ಒಂದು ಸಮಾಜದ ಚಿತ್ರಗಳೇ ಆಗಿವೆ. ಈ ಕೃತ್ರಿಮ ಬಂಧನಗಳನ್ನು ಹೂಡಿಕೊಂಡು ನಮ್ಮ ನಾಟಕಕಾರರು ತಮ್ಮ ಪ್ರತಿಭೆಗೆ ತಾವೇ ಅಡ್ಡಿ ಆತಂಕಗಳನ್ನು ತಂದುಕೊಳ್ಳುತ್ತಾರೆ. ರಾಮಾಯಣ ಕರ್ತೃವಿಗೆ ರಾಮ ಸೀತೆಯರನ್ನುಳಿದು ಬೇರೆ ಯಾರೂ ಹೆಚ್ಚೆನಿಸದಿರಬಹುದು; ಆದರೆ ಅದೇ ವಸ್ತುವನ್ನು ಬೇರೆ ದೃಷ್ಟಿಕೋನದಿಂದ ನೋಡುವ ನಾಟಕಕರ್ತ ರಾಮನನ್ನು ಕರ್ತವ್ಯದ ಬಂಧನಕ್ಕೆ ಸಿಲುಕಿದ ಒಂದು ಯಂತ್ರದಂತೆ ಕಾಣಿಸಿ, ಲಕ್ಷ್ಮಣನನ್ನು ಮಾನವನ ಆಶೆ–ನಿರಾಶೆಗಳ ಪ್ರತಿನಿಧಿಯನ್ನಾಗಿ ಮಾರ್ಪಡಿಸಿ ತೋರಿಸಬಹುದು. ನೀಚ ರಾಕ್ಷಸನೆಂದು ಹೆಸರು ಹೊತ್ತಿರುವ ದುರ್ಯೋಧನನ ಮಾನವ ಗುಣಗಳನ್ನು ರನ್ನಕವಿಯಂತೆ ಎತ್ತಿ ತೋರಬಹುದು. ಪಶ್ಚಾತ್ತಾಪದ ದಳ್ಳುರಿಗೆ ಸಿಲುಕಿದ ಅಶ್ವತ್ಥಾಮನನ್ನು ಚಿರಂಜೀವಿಯಾಗಿರು ಎಂದು ಹರಸುವುದರ ಬದಲು ಕನಿಕರದಿಂದ ಅವನಿಗೆ ಸಾವನ್ನು ಅನುಗ್ರಹಿಸಬಹುದು.

ಈ ಎಲ್ಲ ಮಾರ್ಪಾಟುಗಳನ್ನೂ ನಾವು ನಾಟಕಕಲೆಯ ಕಣ್ಣಲ್ಲೇ ಕಾಣಬೇಕು. ಆದರೆ ಮೇಲೆ ಧರ್ಮ-ನೀತಿಗಳ ಕನ್ನಡಕವನ್ನು ಹಾಕಿಕೊಂಡು ನೋಡಿದರೆ ಚಿತ್ರ ಮಾಸಲು ಮಾಸಲಾಗುತ್ತದೆ. ಕಲೆಯ ಗುರಿ ಬೇರೆ, ಧರ್ಮ ನೀತಿಗಳ ಗುರಿ ಬೇರೆ. ಧರ್ಮ ನೀತಿಗಳ ಕಸೋಟಿಯ ಮೇಲೆ ಜಗತ್ತಿನ ಘನ ಸಾಹಿತ್ಯವನ್ನೆಲ್ಲ ಪರೀಕ್ಷಿಸುತ್ತ ಬಂದರೆ ಪ್ರಾಯಶಃ ಒಂದೂ ಉಳಿಯಲಾರದು. ನಾಟಕಕಾರ ಯಾವ ದೃಷ್ಟಿಯನ್ನು ಕಣ್ಣು ಮುಂದೆ ಇಟ್ಟುಕೊಂಡಿದ್ದಾನೆ—ಆ ಗುರಿಯನ್ನು ಹೇಗೆ ಸಾಧಿಸಿದ್ದಾನೆ ಎಂದೇ ವಿಮರ್ಶಕರು ನೋಡಬೇಕು.

ಇಂದು ನಮ್ಮ ಕನ್ನಡ ನಾಡಿನಲ್ಲಿ ನಾಟಕ ಸಾಹಿತ್ಯ ನಾನಾ ಮುಖವಾಗಿ ಬೆಳೆಯುತ್ತಿದೆ. ಸರಳ ರಗಳೆ ಮತ್ತು ಗೀತ ನಾಟಕಗಳಂತೂ ಪ್ರಯೋಗ ಸ್ಥಿತಿಯನ್ನು ಮೀರಿ ನಮ್ಮದಾಗಿ ನಿಂತುಬಿಟ್ಟಿವೆ. ಗದ್ಯ ನಾಟಕಗಳಲ್ಲಿ ಕೂಡ ಶೈಲಿ, ಸಹಜತೆಯ ವಿಚಾರವಾಗಿ ಹೊಸ ಚರ್ಚೆಗಳೂ ಪ್ರಯೋಗಗಳೂ ನಡೆಯುತ್ತಿವೆ. ಸಾಹಿತ್ಯ ದೃಷ್ಟಿಯಿಂದ ಕರ್ನಾಟಕದಲ್ಲಿ ನಾಟಕದ ಬುಡ ಭದ್ರವಾಯಿತು ಎಂದು ಧಾರಾಳವಾಗಿ ಹೇಳಬಹುದು.

ಆದರೆ ಪ್ರಯೋಗದ ಕಡೆ ತಿರುಗಿದರೆ ನಮ್ಮ ದಾರಿದ್ರ್ಯ ವ್ಯಕ್ತವಾಗುತ್ತದೆ. ಸ್ವಪ್ರತಿಭೆಯಿಂದ ಬಗೆ ಬಗೆಯ ನಾಟಕಗಳನ್ನು ಅತ್ಯುಚ್ಚರೀತಿಯಲ್ಲಿ ಪ್ರದರ್ಶಿಸುತ್ತಿದ್ದ ದಿವಂಗತ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು ನಾಟಕ ಪ್ರದರ್ಶನವನ್ನು ಮೇಲುಮಟ್ಟಕ್ಕೆ ಒಯ್ದು ನಿಲ್ಲಿಸಿದರು. ಅವರಾದಮೇಲೆ ಅದು ಬೆಳೆಯಲೇ ಇಲ್ಲ.

ನಾಟಕ ರಸಪೂರ್ಣವಾದ ಕಲಾಪಾಕವಾಗಬೇಕಾದರೆ ನಾಟಕಕರ್ತ, ನಟ, ಸೂತ್ರಧಾರ, ಪ್ರೇಕ್ಷಕರು ಎಲ್ಲರೂ ಬೆರೆಯಬೇಕು. ವರದಾಚಾರ್ಯರ ಕಾಲಕ್ಕೆ ನಾಟಕಕರ್ತನನ್ನು ಕೇಳುವವರಿಲ್ಲವಾಗಿತ್ತು.

ಯಾವ ನಾಟಕವಾದರೂ ಅವರ ಅಭಿನಯಕೌಶಲ್ಯದ ಬಲದ ಮೇಲೆ ಸಾಗುತ್ತಿತ್ತು; ಕೈಲಾಸಂ ಬಂದ ಮೇಲೆ ಸ್ಥಿತಿ ಬದಲಾಯಿತು. ನಟನ ಸ್ಥಾನ ಗೌಣವಾಯಿತು. ನಾಟಕಕಾರನ ಪ್ರತಿಭೆ, ಪ್ರದರ್ಶನದ ಚಮತ್ಕಾರದ ಮೇಲೆ ನಾಟಕ ನಡೆಯುತ್ತಿತ್ತು. ಈಗ ಯಾರಿಗೂ ಸ್ಥಾನವಿಲ್ಲದಂತಾಗಿದೆ. ಎಲ್ಲಕ್ಕೂ ಹೆಚ್ಚಾಗಿ ಪ್ರೇಕ್ಷಕರ ಸಹಕಾರ ಬೇಕು. ಎಂತಹ ನಾಟಕ ಆಡಿದರೂ ನೋಡುವವರಿಲ್ಲದಂತಾಗಿದೆ. ನೋಡುವವರ ಆಸೆ ಅಭಿರುಚಿಗಳ ಮೇಲೆ ಅನೇಕ ಸಲ ನಾಟಕದ ಯಶಸ್ಸು ಅವಲಂಬಿಸುತ್ತದೆ.

ಇಂದು ಜನತೆಯ ಮನಸ್ಸು ವಾಕ್ಚಿತ್ರಗಳ ಕಡೆಗೆ ಲೀನವಾಗಿ ಬಿಟ್ಟಿದೆ. ನಾಟಕದ ಅಭಿಮಾನಿಗಳು ಇಂದು ಅದರಿಂದ ದೂರವಾಗಿ ವಾಕ್ಚಿತ್ರಗಳನ್ನು ಪ್ರೋತ್ಸಾಹಿಸುತ್ತಿದ್ದಾರೆ. ಇದರ ತಪ್ಪು ಪ್ರೇಕ್ಷಕರ ದಲ್ಲ; ನಾಟಕ ವ್ಯವಸಾಯಿಗಳದ್ದು. ಜನ್ಮಾಂತರದ ನಾಟಕ, ಪುರಾತನ ವೈಖರಿಗಳಿಲ್ಲದೆ ರಾತ್ರಿಯೆಲ್ಲಾ ಕೂಡಬೇಕಾದ ಉಪಟಳಗಳಿಗೆ ಬೇಸತ್ತು 'ಕಿರಿದೊರೊಳಂ ಪಿರಿದು' ಸುಖವನ್ನು ಕೊಡುವ ಸಿನೀಮಾಗಳಿಗೆ ಹೋಗುತ್ತಿದ್ದಾರೆ. ಇಂದು ಕೆಲವು ನಾಟಕದ ಕಂಪೆನಿಗಳ ಒಡೆಯರು ಜನತೆಯನ್ನು ಆಕರ್ಷಿಸುವುದಕ್ಕೆ ಸಿನೀಮಾಗಳನ್ನು ಅನುಕರಿಸಲಾರಂಭಿಸಿದ್ದಾರೆ. ಇದು ಕೇವಲ ಮೌಢ್ಯ. ಸಿನೀಮಾದ ರಜತ ಫರದೆಯ ಮೇಲೆ ಸಪ್ತಲೋಕಗಳನ್ನು ಕಾಣಬಹುದು, ಸಪ್ತ ಸಮುದ್ರಗಳನ್ನು ಕಾಣಬಹುದು, ಕೋಟ್ಯಂತರ ಜನಗಳನ್ನು ನೋಡಬಹುದು. ಅವುಗಳನ್ನು ಕೇವಲ ಸಾಂಕೇತಿಕವಾಗಿ ನಾಟಕರಂಗದ ಮೇಲೆ ತೋರಬಹುದು. ಆದರೆ ನಾಟಕದಲ್ಲಿ ಅಚ್ಚಳಿಯದ ಒಂದು ಶಕ್ತಿಯಿದೆ. ಜೀವಸಂಬಂಧವನ್ನು, ಜೀವಂತನಾಗಿರುವ ವ್ಯಕ್ತಿಯನ್ನು ಕಾಣಬಹುದು, ಅವನ ರಸ ಕ್ರಿಯೆಗಳನ್ನು ನೇರವಾಗಿ ಅನುಭವಿಸಬಹುದು. ಮನಶ್ಶಾಸ್ತ್ರಜ್ಞರು ಹೇಳುವಂತೆ, ಈ ಸಂಬಂಧವೇ ನಾಟಕದ ಜೀವಾಳ, ಬಂಡವಾಳ.

ಕನ್ನಡಿಗರು ತಮ್ಮ ಆಲಸ್ಯವನ್ನು ದೂರಮಾಡಿ ನಾಟಕ ಕಲೆಯ ಪುನರುದ್ಧಾರದ ಕಡೆಗೆ ಲಕ್ಷ್ಯವಿಡಬೇಕಾದ ಕಾಲ ಬಂದಿದೆ. ಇದು ಪಟ್ಟಣದವರಿಗೆಷ್ಟು ಸೇರಿದ ಕೆಲಸವೋ ಹಳ್ಳಿಯವರಿಗೂ ಅಷ್ಟೇ ಸೇರಿದುದು. ಕನ್ನಡದ ಪ್ರಚಾರಕ್ಕೆ ನಾಟಕಕ್ಕಿಂತ ಉತ್ತಮ ಸಲಕರಣೆ ಇಲ್ಲ. ಕನ್ನಡ ಮಹಾಪುರುಷರು, ಧರ್ಮವೀರರು, ಶರಣ ಶರಣೆಯರು, ಕವಿಗಳು ಇವರ ಜೀವನಗಳನ್ನು ನಾಟಕರೂಪವಾಗಿ ನೂರ್ಪಡಿಸಿ, ಪ್ರದರ್ಶಿಸಬೇಕಾದುದು ಆವಶ್ಯಕ. ಹಳ್ಳಿಗರಿಗಾಗಿ ಪ್ರತ್ಯೇಕ ನಾಟಕಗಳನ್ನು ಬರೆಯಿಸಿ, ಅವರಿಂದಲೇ ಅಭಿನಯವಾಗುವಂತೆ ಪ್ರಯತ್ನಿಸಬೇಕು. ಮಕ್ಕಳ ಸಲುವಾಗಿಯೂ ನಾಟಕದಲ್ಲಿ ನಾವು ಮಾಡಬೇಕಾದ ಕೆಲಸ ಬಹಳವಾಗಿದೆ.

ನಾಟಕವೆಂದರೆ ಎಂದೋ ಒಮ್ಮೆ ನೋಡಿ ಮರೆತುಬಿಡುವ ವಿಲಾಸ ಸಾಧನವಲ್ಲ. ನಾಟಕದ ಆದರ್ಶ ಭವ್ಯವಾದುದು, ಗುರುತರವಾದುದು. ದೇಶದ ಸಂಸ್ಕೃತಿಯ ಹೆಗ್ಗುರುತೆಂದರೆ ನಾಟಕ; ದೇಶದ ಸಂಸ್ಕೃತಿಯ ವಿಕಾಸಕ್ಕೆ ನಾಟಕ ಕೊಡುವಷ್ಟು ಇಂಬು ಬೇರೆ ಯಾವ ಸಾಧನವೂ ಕೊಡಲು ಶಕ್ಯವಿಲ್ಲ. ಮನಸ್ಸನ್ನು ಮುದಗೊಳಿಸುತ್ತ, ವಿಚಾರದ ಹಾದಿಯಲ್ಲಿ ಮಾನವನ ವಿಕಾಸವನ್ನು ಸಾಧಿಸುವುದೇ ನಾಟಕದ ಗುರಿ. ಇಂತಹ ಗುರಿ 'ಗಗನ ಕುಸುಮ'ವಾಗಿ ಉಳಿಯದೆ ಕನ್ನಡಿಗರ ಕೈಕಮಲವಾಗಲೆಂದು ಬಯಸುತ್ತೇನೆ.

---

## ಕನ್ನಡ ಗ್ರಂಥಗಳಿಗೆ ಬಹುಮಾನ

ಮದ್ರಾಸಿನ ಸ್ಕೂಲ್ ಬುಕ್ ಮತ್ತು ಲಿಟರೇಚರ್ ಸೊಸೈಟಿಯವರು ೧೯೪೦ನೆಯ ಇಸವಿ ಫೆಬ್ರುವರಿ ೨೬ನೆಯ ತಾ॥ ಸೋಮವಾರ ಸಾಯಂಕಾಲ ಸೇರಿದ ತಮ್ಮ ವಾರ್ಷಿಕ ಮಹಾಸಭೆಯಲ್ಲಿ ಈ ಕೆಳಗಣ ಎಂಟು ಕನ್ನಡ ಪುಸ್ತಕಗಳಿಗೆ ಇದರಡಿ ತಿಳಿಸಿದಂತೆ ಒಟ್ಟು ೩೨೫ ರೂ. ಸಹಾಯ ದ್ರವ್ಯವನ್ನು ದಯಪಾಲಿಸಿದ್ದಾರೆ.

೧. ಶಂಕರ ವಿಜಯ (ಪದ್ಯ ಕಾವ್ಯ): ೨. ಶಂಕರ ವಿಜಯ (ಗದ್ಯ ಕಾವ್ಯ) ೩. ಮದಾಲಸೋಪಾಖ್ಯಾನ (ಪದ್ಯಕಾವ್ಯ)—ಶ್ರೀ ಸಾಲಿಗ್ರಾಮದ ಶ್ರೀಕಂಠ ಶಾಸ್ತ್ರಿಗಳಿಂದ—ಮೂರಕ್ಕೂ ಒಟ್ಟು ೧೫೦ ರೂ. ೪. ಹಿಂದೂಸ್ಥಾನದ ಹೊಸ ಘಟನೆ (ಶ್ರೀ ವೆಂ. ಭೀ. ನಾಯಕ) ೫೦ ರೂ. ೫. ಶಿವರಹಸ್ಯ (ಶ್ರೀ ಶಂ. ಬಾ. ಜೋಶಿ) ೫೦ ರೂ. ೬. ರೈತನ ಪ್ರಪಂಚ (ಶ್ರೀ ಡಿ. ಕೃಷ್ಣಯ್ಯಂಗಾರ್) ೩೦ ರೂ. ೭. ಕಂಬನಿ (ದಿವಂಗತ ಸೌ॥ ಗೌರಮ್ಮನವರು) ೨೫ ರೂ. ೮. ಶ್ರೀ ಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆ (ಶ್ರೀ ನಾ. ಶ್ರೀ. ರಾಜಪುರೋಹಿತ) ೨೦ ರೂ.

## ಕರ್ನಾಟಕ ಏಕೀಕರಣವೂ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳೂ

ಶ್ರೀಮಾನ್ ಬೆನಗಲ್ ರಾಮರಾವ್ ಎಂ.ಎ., ಎಲ್ಎಲ್.ಬಿ. ಅವರು ಮುಂಬಯಿಯ 'ಕೆನರ ಸೋದರ ಸಂಘ'ದ ವಾರ್ಷಿಕ ಪತ್ರಿಕೆಯಲ್ಲಿ ಮೇಲ್ಕಂಡ ಹೆಸರಿನಿಂದ ವಿಚಾರಪೂರ್ಣವಾದ ಒಂದು ಲೇಖನವನ್ನು ಬರೆದು, ಅದರ ಪ್ರತಿಯೊಂದನ್ನು ನಮ್ಮೆಡೆಗೆ ಕಳುಹಿಸಿದ್ದಾರೆ. ಆದರಲ್ಲಿ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳನ್ನು ಪ್ರತ್ಯೇಕ ಕರ್ನಾಟಕ ಪ್ರಾಂತದಲ್ಲಿ ಸೇರಿಸುವುದರ ಆವಶ್ಯಕತೆ ಮತ್ತು ಉಪಯುಕ್ತತೆಗಳನ್ನು ಚರ್ಚಿಸಿದ್ದಾರೆ. ಈ ಜಿಲ್ಲೆಗಳು ಮುಂಬಯಿ ಮತ್ತು ಮದರಾಸು ಪ್ರಾಂತಗಳಿಗೆ "ಬರಿಯ ಬಾಲದಂತಿವೆಯೇ ವಿನಾ, ಅವುಗಳ ಪ್ರಭಾವ ಆ ಆ ಸರ್ಕಾರಗಳ ಮೇಲೆ ಕಿಂಚಿನ್ಮಾತ್ರವೂ ಬೀಳುತ್ತಿಲ್ಲ" ಎಂಬ ಅಂಶವನ್ನು ವಿವರಿಸಿ, ೧೮೬೨ರ ವಿಭಜನೆ ಮುಂತಾದ ರಾಜಕೀಯ ಕಾರಣಗಳಿಂದ ಅವನತಿಹೊಂದಿ ಸಾಂಸ್ಕೃತಿಕ ಐಕ್ಯತೆಯನ್ನು ಕಳೆದುಕೊಂಡಿರುವ ಈ ಜಿಲ್ಲೆಗಳ ಏಳಿಗೆ ಕರ್ನಾಟಕ ಏಕೀಕರಣದಿಂದ ಮಾತ್ರ ಸಾಧ್ಯ ಎಂಬುದಾಗಿ ಪ್ರತಿಪಾದಿಸಿದ್ದಾರೆ.

ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ "ಕನ್ನಡ ಮಾತನಾಡುವ ಜನರ ಸಂಖ್ಯೆಗಿಂತ ಅನ್ಯ ಭಾಷೆಗಳನ್ನಾಡುವ ಜನರ ಸಂಖ್ಯೆಯೇ ಹೆಚ್ಚಾಗಿರುವುದು". ಆದರೆ ಈ ಅಂಶ ಈ ಜಿಲ್ಲೆಗಳು ಕನ್ನಡ ನಾಡಿಗೆ ಸೇರಲು ಅನರ್ಹವೆಂಬುದನ್ನು ಪ್ರತಿಪಾದಿಸುವುದಿಲ್ಲ. ಈ ಜಿಲ್ಲೆಗಳಲ್ಲಿ "ಚಿರಕಾಲದಿಂದಲೂ ವಾಸಿಸುವ ಕೃಷೀವಲರೂ ಇತರ ಕಸುಬಿನ ಜನರೂ ಮೂಲನಿವಾಸಿಗಳಾಗಿದ್ದು ಕನ್ನಡವನ್ನೇ ಮಾತನಾಡುತ್ತ" ಅವನ್ನು ಇಂದಿಗೂ ಅಚ್ಚಗನ್ನಡದ ಜಿಲ್ಲೆಗಳನ್ನಾಗಿ ಉಳಿಸಿದ್ದಾರೆ.

ಇನ್ನು ಈ ಅಚ್ಚಗನ್ನಡ ಜಿಲ್ಲೆಗಳಲ್ಲಿ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ತುಳುವರು, ಮಲೆಯಾಳಿಗಳ ಸಮಸ್ಯೆಯ ಪರಿಹಾರದ ಮಾತು. ತುಳುವರಿಗೂ ಕನ್ನಡಿಗರಿಗೂ ಶತಮಾನಗಳ ಋಣಾನುಬಂಧವಿದೆ. ತುಳುವರಿಗೆ ತಮ್ಮದೇ ಆದ ಪ್ರತ್ಯೇಕ ಪ್ರಾಂತವನ್ನು ಮಾಡಿಕೊಳ್ಳುವುದಕ್ಕಿಂತ ಕನ್ನಡಿಗರೊಂದಿಗೆ ಎಂದಿನಂತೆ ಮಧುರ ಬಾಂಧವ್ಯವನ್ನಿಟ್ಟುಕೊಂಡು ಮಿಳಿತರಾಗಿ ಕನ್ನಡ ಪ್ರಾಂತದ ಆಡಳಿತಕ್ಕೆ ಒಳಗಿರಬೇಕಾದುದು ಉಭಯ ಪಕ್ಷದವರಿಗೂ ಶ್ರೇಯಸ್ಕರವೆಂಬುದನ್ನು ಶ್ರೀಮಾನ್ ರಾಮರಾಯರು ಸ್ಪಷ್ಟಪಡಿಸಿದ್ದಾರೆ.

ಮಲೆಯಾಳಿಗಳು ಕಾಸರಗೋಡು ತಾಲ್ಲೂಕಿನ ಅತ್ಯಂತ ದಕ್ಷಿಣದಲ್ಲಿ ಒತ್ತಾಗಿರುವುದರಿಂದ, ಈ ಭಾಗವನ್ನು ಮಾತ್ರ ಕೇರಳಕ್ಕೆ ನಾವು ಬಿಟ್ಟುಕೊಡೋಣ. ಹಾಗಿಲ್ಲದೆ ಆ ತಾಲ್ಲೂಕನ್ನು ಮಾತ್ರವಲ್ಲದೆ ಒಟ್ಟು ದಕ್ಷಿಣ ಕನ್ನಡ ಜಿಲ್ಲೆಯನ್ನೇ ತಮಗೆ ಕೊಡಬೇಕೆಂಬ ಮಲೆಯಾಳಿಗಳ ವಾದ ಸರಿಯಲ್ಲವೆಂಬುದನ್ನು ಅವರಿಗೆ ಸ್ಪಷ್ಟಮಾಡಿಕೊಡೋಣ—ಎಂದು ಶ್ರೀಯುತರು ಸೂಚಿಸಿದ್ದಾರೆ.

ಆಮೇಲೆ, ಕೊಂಕಣಿ ಮರಾಠಿ ಭಾಷೆಗಳನ್ನಾಡುವ ಜನರು ಈ ಎರಡು ಜಿಲ್ಲೆಗಳಲ್ಲಿ "ಯಾವ ಊರಲ್ಲಿಯೇ ಆಗಲಿ, ಎಲ್ಲಾದರೂ ಸರಿಯೆ, ಕಾಳು ಚೆಲ್ಲಿದ ಹಾಗೆ ಇರುವರೇ ವಿನಾ, ಒತ್ತಾಗಿ ದೊಡ್ಡ ಪ್ರಮಾಣದಲ್ಲಿ ಒಂದೇ ಕಡೆ ಇರುವುದಿಲ್ಲ........ಇವರಲ್ಲಿ ಕೆಲಕೆಲವರಿಗೆ ಕರ್ನಾಟಕ ಏಕೀಕರಣವೇ ಆಗಲಿ, ದಕ್ಷಿಣೋತ್ತರ ಜಿಲ್ಲೆಗಳು ಕರ್ನಾಟಕದಲ್ಲಿ ಅಂತರ್ಗತವಾಗಿರಬೇಕೆಂಬ ಅಪೇಕ್ಷೆಯೇ ಆಗಲಿ ಸ್ವಲ್ಪವೂ ಇರುವುದಿಲ್ಲ. ಹಾಗೆ ಎಲ್ಲಾದರೂ ಆದ ಪಕ್ಷದಲ್ಲಿ ಈಗ ತಮಗೆ ಇರತಕ್ಕ ಪ್ರಾಧಾನ್ಯವೂ ಮೂಲದೇಶದ ಬೆಂಬಲವೂ ಕಡಮೆಯಾಗಬಹುದೆಂಬ ಭಯ ಇವರನ್ನು ಬಾಧಿಸುತ್ತಿರುವಂತೆ ತೋರುತ್ತದೆ." ಆದರೆ ಶ್ರೀಮಾನ್ ರಾಮರಾಯರು ಹೇಳಿರುವಂತೆ, ಇಂತಹ ಭಯಕ್ಕಾಗಲಿ, ಶಂಕೆಗಾಗಲಿ ಕಾರಣವಿಲ್ಲವೆಂದು ಕನ್ನಡಿಗರು ಆಶ್ವಾಸನ ಕೊಡಲು ಸಿದ್ಧರಾಗಿದ್ದಾರೆ. ಹೀಗಿರುವಾಗ ಮರಾಠಿ ಕೊಂಕಣಿ ಮಾತನಾಡುವವರು "ಕನ್ನಡ ನಾಡಿನ ಜನರ ಮತ್ತು ಭಾಷೆಯ ಸರ್ವಾಂಗೀನ ಉನ್ನತಿಗೆ ತಮ್ಮ ಸಂಪೂರ್ಣವಾದ ಸಂಘಶಕ್ತಿಯನ್ನೂ (ಸಹಾನುಭೂತಿಯನ್ನೂ) ಸಮರ್ಪಿಸಿ ಕೀರ್ತಿಭಾಜನರಾಗುವರೆಂದು" ಶ್ರೀಮಾನ್ ಬೆನಗಲ್ ರಾಮರಾಯರು ನಿರೀಕ್ಷಿಸುತ್ತಾರೆ. ಕರ್ನಾಟಕ ಏಕೀಕರಣಕ್ಕಾಗಿ ಹಾತೊರೆಯುತ್ತ ದುಡಿಯುತ್ತಿರುವ ಕನ್ನಡಿಗರೆಲ್ಲರ ಆಶಯವಾದರೂ ಇದೇ ಆಗಿದೆಯೆಂದು ಧಾರಾಳವಾಗಿ ಹೇಳಬಹುದು.

# ಕೋಲ್‌ರಿಜ್ ಕವಿಯ ಮಾತು

## ಕಾವ್ಯ - ಪ್ರಕೃತಿ

ಕವಿ ಪ್ರಕೃತಿಯಿಂದ ಕದಿಯ ಕೂಡದು; ಬೇಕಾದಷ್ಟು ಎರವಲು ಪಡೆಯಲಿ; ಎರವಲು ಪಡೆಯುವುದರಿಂದಲೇ ತೆಗೆದ ಋಣ ತೀರಿಸುವ ರೀತಿಯಲ್ಲಿ ಎರವಲು ಪಡೆಯಲಿ. ಪ್ರಕೃತಿಯನ್ನು ಸರಿಯಾಗಿ ಪರಿಶೀಲಿಸಿರಿ, ಆದರೆ ನೆನಪಿನಿಂದ ಬರೆಯಿರಿ; ಮತ್ತು ನೆನಪಿಗಿಂತ ಹೆಚ್ಚಾಗಿ ನಿಮ್ಮ ಕಲ್ಪನಾಶಕ್ತಿಯನ್ನು ನೆಮ್ಮಿಕೊಳ್ಳಿ.

## ಧರ್ಮ

ನಿಜವಾದ ಧರ್ಮದಲ್ಲಿ ಭಾವಗಳು ಮತ್ತು ಸತ್ಯಾಂಶಗಳು ಎರಡೂ ಇರಬೇಕು. ಸತ್ಯಾಂಶಗಳಿಲ್ಲದೆ ಭಾವಗಳಿಂದ ಮಾತ್ರ ಕೂಡಿದ್ದರೆ ಅದು ಬರಿಯ ತತ್ತ್ವಶಾಸ್ತ್ರವಾದೀತು; ಭಾವಗಳ ಚೇಷ್ಟೆಗಳಾದ, ಇಲ್ಲವೆ ಭಾವಗಳಿಂದ ಹುಟ್ಟುವ, ಇಲ್ಲವೆ ಭಾವಗಳನ್ನು ಆಧಾರವಾಗಿ ಉಳ್ಳ ಸತ್ಯಾಂಶಗಳು ಮಾತ್ರ ಇದ್ದರೆ ಆಗ ಧರ್ಮ ಬರಿಯ ಇತಿಹಾಸವಾದೀತು.

—ಎಂ. ವಿ. ಸೀ.

---

# ಪರಿಷತ್ತಿನ ಸುದ್ದಿ

ಮೈಸೂರು ಪ್ರಾಂತಸಮಿತಿಯ ೩ನೆಯ ಅಧಿವೇಶನ ನೆನ್ನೆ ಸಂಜೆ ನಡೆಯಿತು. ಸಮಿತಿಯ ಆಶ್ರಯದಲ್ಲಿ ಒಂದು ನಾಟಕ ಶಾಖೆ ಏರ್ಪಟ್ಟಿತು. ಕೆಲವು ಉಪಸಮಿತಿಗಳೂ ರಚಿತವಾದುವು.

---

# ಕನ್ನಡ ಸುದ್ದಿ

**ಸೊಂಡೂರು : ಹೊಸ ಅರಮನೆಯ ಪ್ರವೇಶ**

ಸೊಂಡೂರು ರಾಜಾಸಾಹೇಬರು ಹೊಸ ಅರಮನೆಯ ಪ್ರವೇಶೋತ್ಸವವನ್ನು ಜರುಗಿಸಿ, ಅರಮನೆಯ ಮುಂದೆ ನೆರೆದಿದ್ದ ಜನಸಂದಣಿಗೆ ಉಪ್ಪರಿಗೆಯ ಮೇಲಿನಿಂದ ಕನ್ನಡದಲ್ಲಿ ಭಾಷಣ ಮಾಡುತ್ತಾ, ನಾಡಿನ ಏಳ್ಗೆಗಾಗಿ ಸಾರ್ವತ್ರಿಕ ಶಿಕ್ಷಣದ ಉಪಕ್ರಮವನ್ನು ಮೊದಲು ಮಾಡುವುದಾಗಿ ಆಶ್ವಾಸನವಿತ್ತು, ಸಂಸ್ಥಾನದ ಪ್ರಜೆಗಳನ್ನೆಲ್ಲ ಅಕ್ಷರಸ್ಥರನ್ನಾಗಿ ಮಾಡುವುದೇ ಸರಕಾರದ ಗುರಿ ಎಂದರು.

**ಕೋಲಾರ : 'ಶ್ರೀ'ಯವರ ಕಾರ್ಯಕ್ರಮ**

ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕೋಲಾರದ ಶ್ರೀ ಕೋಲಾರಮ್ಮ (ಚಾಮುಂಡೇಶ್ವರಿ) ರಥೋತ್ಸವದ ಸಂದರ್ಭದಲ್ಲಿ ಪುರಸಭೆಯವರು ಏರ್ಪಡಿಸಿರುವ ದನಗಳ ಪ್ರದರ್ಶನದ ಪ್ರಾರಂಭೋತ್ಸವವನ್ನು ಮಾರ್ಚಿ ೧೭ನೆಯ ತಾರೀಖು ನೆರವೇರಿಸುವರು.

**ಮಂಗಳೂರು : ಮಾಸ್ತಿಯವರ ಕಾರ್ಯಕ್ರಮ**

ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಮಂಗಳೂರಿನಲ್ಲಿ ಪ್ರವಾಸ ಮಾಡಿ ಹಿಂದಿರುಗಿದ್ದಾರೆ. ಹಲವು ಕಡೆ ಅವರ ಭಾಷಣಗಳು ನಡೆದುವು. ೧೭ನೆಯ ತಾರೀಖು ಸಂಜೆ ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ 'ಕನ್ನಡ ಸಂಸ್ಕೃತಿ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ೧೮ನೆಯ ತಾರೀಖು ಪುತ್ತೂರು ಬೋರ್ಡ್ ಹೈಸ್ಕೂಲಿನ ವಾರ್ಷಿಕೋತ್ಸವದಲ್ಲಿ ಭಾಗವಹಿಸಿದರು. ವಿಟ್ಲದ ಬೋರ್ಡ್ ಹೈಯರ್ ಎಲಿಮೆಂಟರಿ ಸ್ಕೂಲಿನಲ್ಲಿ "ನಮ್ಮ ಮುಂದಿನ ಧರ್ಮ"ವನ್ನು ಕುರಿತು ಮಾತನಾಡಿದರು. ೧೯ನೆಯ ತಾರೀಖು ಪುತ್ತೂರಿನ ಸಿಲ್ವರ್ ಜೂಬಿಲಿ ಹಾಲಿನಲ್ಲಿ 'ವಾಲ್ಮೀಕಿ ಮತ್ತು ರಾಮಾಯಣ' ಎಂಬ ವಿಷಯವನ್ನು ಕುರಿತು ಮಾತನಾಡಿದರು. ೨೨ನೆಯ ತಾರೀಖು ಮಂಗಳೂರಿನ ಮಿತ್ರಮಂಡಲಿಯ ಮತ್ತು ಕಲ್ಚರಲ್ ಅಸೋಸಿಯೇಷನ್ನಿನ ಆಶ್ರಯದಲ್ಲಿ ಮಾಸ್ತಿಯವರಿಗೆ ಸತ್ಕಾರ ನಡೆಯಿತು. ಶ್ರೀಮಾನ್ ಮುಕುಂದರಾಯರು ಅತಿಥಿಗಳ ಪರಿಚಯ ಮಾಡಿಸಿದರು. ತರುವಾಯ ಮಾಸ್ತಿಯವರು 'ತಮಿಳು ನಾಡಿನ ವೈಷ್ಣವ ಪ್ರಬಂಧ'ಗಳನ್ನು ಕುರಿತು ಭಾಷಣ ಮಾಡುತ್ತ, ತಾವು ಕನ್ನಡದಲ್ಲಿ ಅನುವಾದ ಮಾಡಿರುವ, ವೈಷ್ಣವ ಭಕ್ತರಾದ ಆಳ್ವಾರುಗಳ ಭಕ್ತಿಯ ಸ್ತೋತ್ರಗಳನ್ನು ಓದಿ ತೋರಿಸಿ, ಅವುಗಳಲ್ಲಿ ಇರುವ ಉದಾತ್ತ ಭಕ್ತಿಭಾವಗಳನ್ನು ರಸವತ್ತಾಗಿ ವಿವರಿಸಿದರು. ಕನ್ನಡ ನಾಡು ಸಕಲ ಧರ್ಮಗಳ, ಪಂಥಗಳ ಕೇಂದ್ರವಾಗಿದೆಯೆಂದೂ ವಿವಿಧ ಧರ್ಮಗಳು ತಿಕ್ಕಾಟವಿಲ್ಲದೆ ಮೈತ್ರಿಯಿಂದ ಬೆಳೆಯುತ್ತ ಹೋದರೆ ನಾಡಿನ ಏಳ್ಗೆ ಆಗುವುದೆಂದೂ ಹೇಳಿದರು. ಶ್ರೀಮಾನ್ ಎಂ. ಎನ್. ಕಾಮತ್ ಅವರು ಮಾಸ್ತಿಯವರಿಗೆ ಧನ್ಯವಾದಗಳನ್ನರ್ಪಿಸಿದರು.

**ಮಂಗಳೂರು : ಈಶ್ವರಾನಂದ ಕರ್ನಾಟಕ ಸಂಘ**

ಈ ಸಂಘದ ವಾರ್ಷಿಕೋತ್ಸವ ಡಿ. ಸಿ. ಎಂ. ಶಾಲೆಯಲ್ಲಿ ಕಳೆದ ೨೪ನೆಯ ತಾರೀಖು ನಡೆಯಿತು. ವಿದ್ವಾನ್ ಟಿ. ನಾರಾಯಣಭಟ್ಟರು ಅಧ್ಯಕ್ಷರಾಗಿದ್ದರು. ಅಧ್ಯಕ್ಷರು ಸಂಘದಿಂದ ಕನ್ನಡ ನಾಡಿನ ಮತ್ತು ನುಡಿಯ ಏಳ್ಗೆಯಾಗಲೆಂದು ಹಾರೈಸಿದರು.

**ಮುಂಬಯಿ : ಕನ್ನಡದಲ್ಲಿ ರೇಡಿಯೋ ಭಾಷಣ**

ಮುಂಬಯಿ ಆಕಾಶವಾಣಿಯವರು ಪ್ರಾಂತದ ಶಾಲಾ ಮಕ್ಕಳಿಗಾಗಿ ಏರ್ಪಡಿಸಿರುವ ಕನ್ನಡ ಭಾಷಣ ಮಾಲೆಯಲ್ಲಿ ಅಹಮದಾಬಾದಿನ ಎಸ್. ಎಲ್. ಡಿ. ಕಾಲೇಜಿನ ಪ್ರಿನ್ಸಿಪಾಲರಾದ ಡಾ॥ ವಿ. ಕೆ. ಆರ್. ವಿ. ರಾಯರು ಭಾಷಣ ಮಾಡುತ್ತ ಕನ್ನಡ ನಾಡಿನಲ್ಲಿ ಬೇಕಾದಷ್ಟು ಇರುವ ಭೂ - ವನ - ಖನಿಜ ಸಂಪತ್ತಿನಿಂದ ಲಾಭ ಪಡೆವ ವಿಚಾರವನ್ನು ವರ್ಣಿಸಿದರು. ನಾಡಿನ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವಂತೆ ನಾಡಿನ ಹಲವು ಭಾಗಗಳಲ್ಲಿ ದೊರೆಯುವ ಸಾಮಗ್ರಿಗಳನ್ನು ಬಳಸಿ, ಶಾಸ್ತ್ರೀಯ ದೃಷ್ಟಿಯಿಂದ ಪರಿಶೀಲನೆ ನಡಸಿ, ಕೈಗಾರಿಕೆಗಳನ್ನು ಹೆಚ್ಚಿಸಿ ನಿರುದ್ಯೋಗಿಗಳ ಸಂಖ್ಯೆಯನ್ನು ಕಡಮೆಮಾಡಬೇಕೆಂದು ಕೋರಿದರು.

**ಮಂಡ್ಯ : ಅಖಿಲ ಕರ್ನಾಟಕ ಮಕ್ಕಳ ಕೂಟ**

ಮಂಡ್ಯದ ಶಾಖೆಯ ಆಶ್ರಯದಲ್ಲಿ ಕೂಟದ ಬಹುಮಾನ ವಿನಿಯೋಗ ಸಮಾರಂಭ ಪುರಭವನದಲ್ಲಿ ಶ್ರೀಮತಿ ಇಂದಿರಾಬಾಯಿ ರಾಘವೇಂದ್ರರಾವ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮಕ್ಕಳ ಹಾಡುಗಾರಿಕೆಯ ಕೌಶಲ್ಯ, ಅಭಿನಯ ಚಾತುರ್ಯ ಮತ್ತು ಮುದ್ದುಮಾತುಗಳು ಎಲ್ಲರನ್ನೂ ಆನಂದಗೊಳಿಸಿದುವು. ಅಧ್ಯಕ್ಷರು ಮಾತನಾಡುತ್ತಾ ಇಂದಿನ ಮಕ್ಕಳೇ ಮುಂದಿನ ಜನಾಂಗವೆಂದೂ, ಮಕ್ಕಳ ಶಿಕ್ಷಣದ ವಿಷಯದಲ್ಲಿ ಅತ್ಯಂತ ಜಾಗರೂಕತೆಯನ್ನೂ ಶ್ರದ್ಧೆಯನ್ನೂ ವಹಿಸಬೇಕೆಂದೂ ಹೇಳಿದರು.

**ಧಾರವಾಡ : ಕೌಜಲಗಿ ದಿನಾಚರಣೆ**

'ಕನ್ನಡಕ್ಕಾಗಿ ಕೊನೆಯವರೆಗೂ ಕಾದಿದ ಕನ್ನಡ ಕುವರ' ಕರ್ನಾಟಕ ಭೂಷಣ ದಿವಂಗತ ಕೌಜಲಗಿ ಶ್ರೀನಿವಾಸರಾಯರ ಪುಣ್ಯದಿನವನ್ನು ಮಾರ್ಚಿ ೨ನೆಯ ತಾರೀಖು ಆಚರಿಸಬೇಕೆಂದು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಡಾ॥ ನಾಗನಗೌಡರು ಕನ್ನಡಿಗರಲ್ಲಿ ಬಿನ್ನವಿಸಿಕೊಂಡಿದ್ದಾರೆ.

**ಧಾರವಾಡ : ಕರ್ನಾಟಕ ವಿದ್ಯಾವರ್ಧಕ ಸಂಘ**

ಈ ಸಂಘದ ಆಶ್ರಯದಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನ ಸಂಸ್ಕೃತ ಅಧ್ಯಾಪಕರಾದ ಪ್ರೊ॥ ಆರ್. ವಿ. ಜಾಗಿರದಾರರು 'ಹೊಸ ಹಿಂದುಸ್ಥಾನ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

**ಕಲ್ಕತ್ತ : ಮೈಸೂರು ಸಂಘ**

ಮಾಲೀಖಂಡ (ಬಂಗಾಳ) ದಲ್ಲಿ ನಡೆದ ಗಾಂಧೀ ಸೇವಾ ಸಂಘದ ವಾರ್ಷಿಕಾಧಿವೇಶನಕ್ಕೆಂದು ಹೋಗುವುದಕ್ಕೆ ಮುಂಚೆ, ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀ ರಂಗರಾವ್ ದಿವಾಕರರೂ ಸುಪ್ರಸಿದ್ಧ ಮುಂದಾಳುಗಳಾದ ಶ್ರೀ ಹನುಮಂತರಾವ್ ಕೌಜಲಗಿಯವರೂ ಕಲ್ಕತ್ತೆಯ ಮೈಸೂರು ಸಂಘಕ್ಕೆ ೧೯-೨-೪೦ರಲ್ಲಿ ಭೇಟಿಯಿತ್ತರು. ಶ್ರೀ ದಿವಾಕರರು ಕಳೆದ ೨೦ ವರ್ಷಗಳಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಮುನ್ನಡೆ ಮತ್ತು ಕನ್ನಡ ವಾಙ್ಮಯದ ಇಂದಿನ ಸ್ಥಿತಿ—ಇವುಗಳನ್ನು ಕುರಿತು ಮಾತನಾಡಿದರು. ಶ್ರೀ ಕೌಜಲಗಿಯವರು, ಕನ್ನಡ ನಾಡಿನಿಂದ ದೂರವಾಗಿ ಇತರ ಪ್ರಾಂತಗಳಲ್ಲಿ ನೆಲಸಿರುವ ಕನ್ನಡಿಗರು ಕನ್ನಡ ನುಡಿಯ ಸೇವೆಗಾಗಿ ಮಾಡಬೇಕಾದ ಕರ್ತವ್ಯಗಳನ್ನು ಕುರಿತು ಮಾತನಾಡಿದರು. ಆಮೇಲೆ ಇಬ್ಬರೂ ಅಲ್ಲಿನ ಕೆಲವು ಬರಹಗಾರರೊಂದಿಗೆ ಕಲೆತು ವಿಚಾರವಿನಿಮಯ ಮಾಡಿದರು.

**ಕನ್ನಡ ಪುಸ್ತಕಕ್ಕೆ ಬಹುಮಾನ**

ಮದರಾಸಿನ ಲಾಯೊಲಾ ಕಾಲೇಜಿನ ಭೌತಶಾಸ್ತ್ರದ ಅಧ್ಯಾಪಕರಾದ ಶ್ರೀ ರಾಘವೇಂದ್ರಾಚಾರ್ಯ ಬಿ.ಎಸ್‌ಸಿ. (ಆನರ್ಸ್) ಅವರು ಕನ್ನಡದಲ್ಲಿ 'ಎಕ್ಸ್-ಕಿರಣಗಳು ಮತ್ತು ವೈದ್ಯಕೀಯ ಮತ್ತು ಶಾಸ್ತ್ರೀಯ ವಿಷಯಗಳಲ್ಲಿ ಅವುಗಳ ಉಪಯೋಗ' ಎಂಬ ವಿಷಯವನ್ನು ಕುರಿತು ಬರೆದಿರುವ ಪುಸ್ತಕಕ್ಕೆ ಮದರಾಸು ವಿಶ್ವವಿದ್ಯಾನಿಲಯದವರು ೭೫೦ ರೂ. ಗಳ ಬಹುಮಾನವನ್ನು ಕೊಟ್ಟಿದ್ದಾರೆ.

**ಹುಬ್ಬಳ್ಳಿ : 'ಶ್ರೀರಂಗ'ರ ನಾಟಕಾಭಿನಯ**

ಧಾರವಾಡದ ಕರ್ನಾಟಕ ಕಾಲೇಜಿನ ಸಂಸ್ಕೃತ ಅಧ್ಯಾಪಕರಾದ ಶ್ರೀಮಾನ್ ಆರ್. ವಿ. ಜಾಗಿರದಾರರ 'ಪ್ರಪಂಚ ಪಾಣಿಪತ್ತು' ಎಂಬ ಹಾಸ್ಯ ದುರಂತ ನಾಟಕವನ್ನು ಹುಬ್ಬಳ್ಳಿಯ ಮಿತ್ರಮಂಡಲಿಯವರು ಗಣೇಶಪೇಟೆಯ ನಾಟಕಮಂದಿರದಲ್ಲಿ ೨೫-೨-೪೦ನೆಯ ತಾರೀಖು ಭಾನುವಾರ ರಾತ್ರಿ ಅಭಿನಯಿಸಿದರು. ಅಭಿನಯ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಯಿತು.

**ಕೊಲ್ಲಾಪುರ : ಮೈಸೂರು ಸಂಘ**

ಈ ಸಂಘದ ಆಶ್ರಯದಲ್ಲಿ ಶ್ರೀಮಾನ್ ಟಿ. ಪಿ. ಕೈಲಾಸಂರವರು ಕಳೆದ ೨೧ನೆಯ ತಾರೀಖು ತಮ್ಮ ಕೆಲವು ನಾಟಕಗಳನ್ನು ಅಭಿನಯ, ಹಾಡಿಕೆಗಳ ಸಮೇತ ಓದಿ ತೋರಿಸಿದರು. ತಾವು ಇಂಗ್ಲಿಷಿನಲ್ಲಿ ಬರೆದಿರುವ ರುದ್ರ ನಾಟಕವಾದ 'ಕರ್ಣ' ನಾಟಕದ ಕೆಲವು ಭಾಗಗಳನ್ನು ಹೃದಯಂಗಮವಾಗಿ ಓದಿದರು.

**ತಿಪಟೂರು : ಕರ್ನಾಟಕ ಸಂಘ**

ಈ ಸಂಘದವರು ಹೋದ ವರ್ಷದಂತೆ ಈ ವರ್ಷವೂ ಕಿರಿಯರಿಗಾಗಿ 'ಭಾರತ ವಾಚನ ಸ್ಪರ್ಧೆ' ನಡಸಿದರು. ಸ್ಥಳೀಯ ಮೈಸೂರು ಬ್ಯಾಂಕಿನ ಶಾಖಾ ವ್ಯವಸ್ಥಾಪಕರಾದ ಶ್ರೀ ಸಿ. ಗುಂಡೂರಾಯರು ಅಧ್ಯಕ್ಷತೆ ವಹಿಸಿ ಗೆದ್ದವರಿಗೆ ಬಹುಮಾನ ಹಂಚಿದರು. ಸಾಹಿತ್ಯಾಭಿಮಾನಿಗಳಾದ ಪುರಜನರು ಅನೇಕರು ಸಭೆಗೆ ದಯಮಾಡಿಸಿದ್ದರು.

**ಈ ಪತ್ರಿಕೆ 'ಮೈಸೂರು ಪೇಪರ್ ಮಿಲ್ಸ್'ನಲ್ಲಿ ತಯಾರಾದ ಕಾಗದದಲ್ಲಿ ಅಚ್ಚಾಗಿದೆ.**

೨೭-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ



ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ:
ಸಂಚಿಕೆ ೨೦ | ಬೆಂಗಳೂರು, ಶುಕ್ರವಾರ, ಮಾರ್ಚಿ ೮, ೧೯೪೦ | ಬಿ. ವೆಂಕೋಬರಾವ್, ಬಿ.ಎ.

## ದರ್ಶನಗಳು

[ ಶ್ರೀ ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ. ]

(ತಾ|| ೨೨-೧೨-೧೯೩೯ನೆಯ ಸಂಚಿಕೆಯಿಂದ ಮುಂದುವರಿದುದು)

### ಜೈನ ದರ್ಶನ

ಜನರು ದುಃಖಪಡುವುದನ್ನು ಕಂಡು ಸಹಿಸಲಾರದೆ ಬುದ್ಧದೇವನು ತಪಸ್ಸುಮಾಡಿ ತನ್ನ ಮತವನ್ನು ಬೋಧಿಸಿದನು. ಜೈನಮತವೂ ಹೀಗೆಯೇ ಪ್ರಚಾರಕ್ಕೆ ಬಂತು. ಬೌದ್ಧಮತ ಏರ್ಪಡುವುದಕ್ಕಿಂತ ಮುಂಚೆಯೇ ಜೈನಮತ ಪ್ರಚಾರದಲ್ಲಿತ್ತು. ಕ್ರಿ. ಪೂ. ೬ನೆಯ ಶತಮಾನದಲ್ಲಿ ವರ್ಧಮಾನನೆಂಬ ಜೈನ ತೀರ್ಥಂಕರನಿದ್ದನು. ತೀರ್ಥಂಕರನೆಂದರೆ ಮಹಾ ಗುರುವೆಂದು ನಾವು ಅರ್ಥಮಾಡಬಹುದು. ವರ್ಧಮಾನನು ೨೪ನೆಯ ತೀರ್ಥಂಕರನು. ಬೌದ್ಧಮತದಂತೆಯೇ ಜೈನಮತದಲ್ಲಿಯೂ ಅಹಿಂಸೆಗೆ ಪ್ರಾಧಾನ್ಯ ದೊರೆತಿದೆ. ಜೈನರೂ ವೇದವನ್ನೂ, ಬ್ರಹ್ಮವನ್ನೂ ನಿರಾಕರಿಸಿದ್ದಾರೆ.

ಸಿದ್ಧಾರ್ಥನೆಂಬ ರಾಜನು ವಿದೇಹರಾಜ್ಯಕ್ಕೆ ಒಡೆಯನಾಗಿದ್ದನು. ಅವನ ಮಹಿಷಿ ತ್ರಿಶಲೆ. ಇವರಿಗೆ ಮಗನಾಗಿ ವೈಶಾಲಿಯಲ್ಲಿ ವರ್ಧಮಾನನು ಕ್ರಿ. ಪೂ. ೫೪೦ರಲ್ಲಿ ಜನ್ಮವೆತ್ತಿದನು. ರಾಜಭೋಗದಲ್ಲಿಯೇ ಕಾಲ ಕಳೆಯುವುದಕ್ಕೆ ಈತನಿಗೂ ಬೇಕಾದಷ್ಟು ಅವಕಾಶವಿತ್ತು. ಆದರೆ ಬುದ್ಧನಂತೆಯೇ ವರ್ಧಮಾನನೂ ತನ್ನ ಯೌವನದಲ್ಲಿ ಸತಿಸುತರನ್ನು ತ್ಯಜಿಸಿ ತಪಸ್ಸುಮಾಡಿ ವಿಶ್ವದ ರಹಸ್ಯವನ್ನು ಕಂಡುಹಿಡಿದನು. ಇವನು ಬಹಳಕಾಲ ಜೀವಿಸಿ ತೀರ್ಥಂಕರನೆಂಬ ಹೆಸರನ್ನು ಪಡೆದು ತನ್ನ ಮತವನ್ನು ಹರಡಿದನು. ಜೈನಮತವನ್ನು ಬೋಧಿಸುವ ಗ್ರಂಥಗಳು ಅರ್ಧ ಮಾಗಧೀ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಈ ಮತ ಹಿಂದೂ ದೇಶದ ಕೆಲವೆಡೆಗಳಲ್ಲಿ ಮಾತ್ರ ನೆಲಸಿದೆ.

ಈ ದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಅಥವಾ ಶಬ್ದ ಎಂದು ಮೂರು ಪ್ರಮಾಣಗಳುಂಟು. ಆಗಮವೆಂದರೆ ಸರ್ವಜ್ಞರಾದ ತೀರ್ಥಂಕರರು ನುಡಿದಿರುವ ಮಾತುಗಳು. ಅವರು ತಮ್ಮ ಪ್ರಭಾವದಿಂದ ಅನೇಕ ರಹಸ್ಯಗಳನ್ನು ತಿಳಿದು ಜನರ ಹಿತಕ್ಕಾಗಿ ಅವುಗಳನ್ನು ಸುಲಭವಾದ ಭಾಷೆಯಲ್ಲಿ ವಿಶದಪಡಿಸಿದ್ದಾರೆ. ಆದ್ದರಿಂದ ಆಗಮಗಳನ್ನು ಜೈನರು ಗೌರವದಿಂದ ಓದುತ್ತಾರೆ.

ಎಲ್ಲ ವಸ್ತುಗಳನ್ನೂ ಜೀವ ಮತ್ತು ಅಜೀವ ಎಂದು ಎರಡು ವಿಭಾಗ ಮಾಡಬಹುದು. ಜೀವನು ನಮ್ಮ ದೇಹದೊಳಗೆ ವ್ಯಾಪಿಸಿರುವ ಪ್ರಾಣ. ಜೀವರ ಸಂಖ್ಯೆ ಅನಂತ. ಜೀವರೆಲ್ಲರೂ ಒಂದೇ ವಿಧವಾಗಿದ್ದಾರೆ. ಅವರಲ್ಲಿ ಯಾವ ಗುಣಭೇದವೂ ಇಲ್ಲ. ಆದರೆ ಜೀವನು ನಿತ್ಯವಸ್ತು, ಯಾವಾಗಲೂ ಇರುತ್ತಾನೆ. ಜೈನರು ಅನೇಕ ದರ್ಜೆಯ ಜೀವರನ್ನು ಒಪ್ಪುತ್ತಾರೆ. ಒಂದು ಇಂದ್ರಿಯವುಳ್ಳ ಜೀವರು ಕೆಲವರು. ಕೆಲವರಿಗೆ ಎರಡು ಇಂದ್ರಿಯಗಳಿವೆ. ಈ ರೀತಿ ಜೀವರಲ್ಲಿ ಹೆಚ್ಚು ಕಡಮೆ ತೋರುತ್ತದೆ. ಯಾವ ಕೆಲಸವೇ ಆಗಲಿ, ಅದನ್ನು ಜೀವನೇ ಮಾಡಬೇಕು; ಹಾಗೆಯೇ ಆ ಕೆಲಸದ ಫಲವನ್ನು ಅವನೇ ಅನುಭವಿಸಬೇಕು. ಇದರಿಂದ ಜೀವನೇ ಕರ್ತಾ ಮತ್ತು ಭೋಕ್ತಾ ಎಂದಾಗುತ್ತದೆ. ಜ್ಞಾನ, ಶಕ್ತಿ ಮತ್ತು ಶಾಂತಿ ಎಂಬ ಗುಣಗಳು ಜೀವನ ಸಹಜವಾದ ಧರ್ಮ. ಇವು ಹೊಳೆಯದೆ ಮರೆಯಾಗಿರುವ ಸನ್ನಿವೇಶಕ್ಕೆ ಸಂಸಾರವೆಂದು ಹೆಸರು. ಈ ಮರೆಯನ್ನು ತೆಗೆದುಹಾಕುವುದೇ ನಮ್ಮೆಲ್ಲರ ಕರ್ತವ್ಯವಾಗಿರುತ್ತದೆ. ಜೀವನು ಯಾವ ದೇಹದಲ್ಲಿ ವಾಸಮಾಡುತ್ತಾನೆಯೋ ಅಷ್ಟೇ ಗಾತ್ರದವನಾಗಿರುತ್ತಾನೆ. ಅಂದರೆ ಆನೆಯ ದೇಹದಲ್ಲಿರುವ ಜೀವನು ಆನೆಯಷ್ಟೇ ದೊಡ್ಡವನು. ಇರುವೆಯಲ್ಲಿ ಜೀವನು ಬಹಳ ಸೂಕ್ಷ್ಮವಾಗಿರುತ್ತಾನೆ. ಹೀಗೆ ಜೀವನು ದೊಡ್ಡದಾಗುವುದು, ಚಿಕ್ಕದಾಗುವುದು ಮುಂತಾದ ವಿಕಾರಗಳಿಗೆ ಒಳಪಟ್ಟಿದ್ದಾನೆ.

ಜೀವನಲ್ಲಿರುವ ಜ್ಞಾನ ಒಂದು ವೇಳೆ ಇದ್ದು ಮತ್ತೊಂದು ವೇಳೆ ಇಲ್ಲದೆ ಇರುವಂಥ ಧರ್ಮವಲ್ಲ. ಅದು ಸರ್ವದಾ ಜೀವನಲ್ಲಿರುತ್ತದೆ. ಜ್ಞಾನವೇ ಜೀವನ ಸ್ವರೂಪ. ಆದ್ದರಿಂದ ಯಾವ ಸಹಾಯವೂ ಇಲ್ಲದೆ ಜೀವನು ತನಗೆ ಬೇಕಾದ ವಿಷಯವನ್ನು ತಿಳಿದುಕೊಳ್ಳಬಹುದು. ಈ ಜ್ಞಾನಕ್ಕೆ ಕೇವಲ ಜ್ಞಾನ ಅಥವಾ ಮುಖ್ಯ ಪ್ರತ್ಯಕ್ಷವೆಂದು ಹೆಸರು. ಇತರ ದಾರ್ಶನಿಕರು ಒಪ್ಪುವಂತೆ ಜೈನರು ಇಂದ್ರಿಯಗಳ ಮೂಲಕ ಉಂಟಾಗುವ ಜ್ಞಾನವನ್ನೂ ಒಪ್ಪುತ್ತಾರೆ. ಆದರೆ ಅವುಗಳ ಮೂಲಕ ಉಂಟಾಗುವ ಜ್ಞಾನ ಅಲ್ಪವಾಗಿರುತ್ತದೆ. ಇದನ್ನು ಪರೋಕ್ಷ ಜ್ಞಾನ ಅಥವಾ ಸಾಂವ್ಯವಹಾರಿಕ ಜ್ಞಾನ ಎಂದು ಹೇಳುತ್ತಾರೆ. ಮೋಡ ಸೂರ್ಯನನ್ನು ಆವರಿಸಿ ಅವನ ಬೆಳಕನ್ನು ಮಂಕುಮಾಡುವಂತೆ ಕರ್ಮವೂ ಜ್ಞಾನವನ್ನು ಆವರಿಸಿ ಅದನ್ನು ಚಿಕ್ಕದಾಗಿಮಾಡುತ್ತದೆ. ಯಾವನು ಕರ್ಮವನ್ನು ಹೋಗಲಾಡಿಸಿ ಕೇವಲ ಜ್ಞಾನವನ್ನು ಹೊಂದುತ್ತಾನೆಯೋ ಅವನೇ ಅರ್ಹತನಾಗುತ್ತಾನೆ. ಮಹಾವೀರನೂ ಅರ್ಹತನು. ಆತನ ಮತ 'ಅರ್ಹತ ಮತ'. ಇದನ್ನು ಜೈನಮತವೆಂದೂ ಹೇಳುವುದುಂಟು. ತಪಸ್ಸು ಮಾಡಿದರೆ ಕರ್ಮ ಕಳೆದು ನಾವು ಅರ್ಹತರಾಗುತ್ತೇವೆ.

ಅಜೀವ ವಸ್ತುಗಳಲ್ಲಿ ಕಾಲ, ಆಕಾಶ, ಧರ್ಮ, ಅಧರ್ಮ ಮತ್ತು ಪುದ್ಗಲ ಎಂದು ಐದು ಭಾಗಗಳು. ಕಾಲಕ್ಕೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಭೂತ, ಭವಿಷ್ಯತ್ತು ಮತ್ತು ವರ್ತಮಾನವೆಂದು ಮೂರು ಭಾಗವಾಗಿ ಕಾಲವನ್ನು ವಿಂಗಡಿಸಬಹುದು. ಆದರೆ ಜೈನರು ಕಾಲವನ್ನು ಇನ್ನೊಂದು ರೀತಿಯಲ್ಲಿ ವಿಭಾಗಮಾಡಿದ್ದಾರೆ. ಉತ್ಸರ್ಪಿಣೀ ಕಾಲ; ಅಂದರೆ ಧರ್ಮ ಹೆಚ್ಚುತ್ತ ಬರುವ ಒಳ್ಳೆಯ ಕಾಲ. ಅವಸರ್ಪಿಣೀ ಕಾಲದಲ್ಲಿ ಧರ್ಮ ಕ್ಷೀಣವಾಗುತ್ತ ಎಲ್ಲೆಲ್ಲಿಯೂ ಜನರು ನೀಚವೃತ್ತಿಯಲ್ಲಿ ಆಸಕ್ತಿಯನ್ನು ತೋರ್ಪಡಿಸುತ್ತಾರೆ.

ಆಕಾಶ—ಇದು ಲೋಕಾಕಾಶ ಮತ್ತು ಅಲೋಕಾಕಾಶ ಎಂದು ಎರಡು ವಿಧವಾಗಿದೆ. ನಮ್ಮೆಲ್ಲರಿಗೂ ತಿಳಿದಿರುವ ಆಕಾಶ ಲೋಕಾಕಾಶ. ಇದರಲ್ಲಿ ನಾವು ಸಂಚಾರಮಾಡುತ್ತೇವೆ. ಲೋಕಾಕಾಶದ ಮೇಲ್ಭಾಗದಲ್ಲಿ ಅಲೋಕಾಕಾಶವಿದೆ. ಇದರಲ್ಲಿ ಯಾವ ವಿಧವಾದ ಸಂಚಾರವೂ ಸಾಧ್ಯವಿಲ್ಲ. ಅಲ್ಲಿ ಯಾವ ವಸ್ತುವೂ ಇಲ್ಲ.

ಧರ್ಮ ಮತ್ತು ಅಧರ್ಮ—ಇವೆರಡೂ ಶಕ್ತಿ ಸ್ವರೂಪ. ನಾವು ಒಂದೆಡೆಯಿಂದ ಮತ್ತೊಂದೆಡೆಗೆ ಚಲಿಸಬೇಕಾದರೆ ನಮ್ಮಲ್ಲಿ ಒಂದು ಶಕ್ತಿ ಬೇಕು. ಆ ಚಲನಶಕ್ತಿಯೇ ಧರ್ಮ. ಹಾಗೆಯೇ ನಮ್ಮ ಚಲನವನ್ನು ತಡೆದು ಚಲಿಸದಂತೆ ನಿಲ್ಲಿಸುವುದಕ್ಕೂ ಒಂದು ಶಕ್ತಿ ಬೇಕು. ಅದೇ ಅಧರ್ಮ.

ಪುದ್ಗಲ—ಜೈನರು ಪ್ರಕೃತಿಯನ್ನು ಪುದ್ಗಲವೆನ್ನುತ್ತಾರೆ. ಪುದ್ಗಲದಲ್ಲಿ ರೂಪ, ರಸ, ಗಂಧ ಮತ್ತು ಸ್ಪರ್ಶಗಳೆಂಬ ನಾಲ್ಕು ಧರ್ಮಗಳು ತೋರಿಬರುತ್ತವೆ. ಈ ಧರ್ಮಗಳಿಗೆ ಆಶ್ರಯವಾಗಿರುವ ಪುದ್ಗಲ ಬಹಳ ಸೂಕ್ಷ್ಮವಾದ ಆಕಾರದಲ್ಲಿರುತ್ತದೆ. ಅಂಥ ಸೂಕ್ಷ್ಮವಾದ ಪುದ್ಗಲಕ್ಕೆ ಅಣುಗಳು ಎಂದು ಹೆಸರು. ಅಣುಗಳು ಅನಂತವಾಗಿವೆ. ಅಣುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಎಲ್ಲವೂ ಒಂದೇ ರೀತಿಯಾಗಿವೆ. ಅಣುಗಳಿಗೆ ಉತ್ಪತ್ತಿಯಾಗಲಿ, ವಿನಾಶವಾಗಲಿ ಇಲ್ಲ. ಅವುಗಳು ಒಟ್ಟಾಗಿ ಸೇರಿಕೊಂಡು ವಿಶ್ವದ ಪದಾರ್ಥಗಳನ್ನು ಉಂಟುಮಾಡುತ್ತವೆ. ಹೀಗೆ ಉತ್ಪನ್ನವಾದ ಪ್ರತಿಯೊಂದು ಪದಾರ್ಥದಲ್ಲಿಯೂ ಜೀವನಿರುವುದರಿಂದ ಜೀವವಿಲ್ಲದ ಪದಾರ್ಥ ಒಂದೂ ಇಲ್ಲ.

ಅಣುಗಳು ಒಂದೇ ವಿಧವಾಗಿದ್ದರೂ ಅವುಗಳಿಂದ ಉತ್ಪನ್ನವಾದ ವಸ್ತುಗಳು ಬೇರೆ ಬೇರೆಯಾಗಿ ತೋರುತ್ತವೆ. ಆಸ್ತಿಕ ದಾರ್ಶನಿಕರಲ್ಲಿ ಒಬ್ಬರಾದ ನೈಯಾಯಿಕರೂ ಪರಮಾಣುಗಳನ್ನು ಒಪ್ಪುತ್ತಾರೆ.

ಪೃಥಿವೀ, ಜಲ, ತೇಜಸ್ಸು ಮತ್ತು ವಾಯು ಎಂಬ ನಾಲ್ಕು ಜಾತಿಯ ಪರಮಾಣುಗಳು ಇವೆ. ಪ್ರತಿಯೊಂದು ಪರಮಾಣುವೂ ತನ್ನ ಜಾತಿಯ ವಸ್ತುವನ್ನು ಮಾತ್ರ ಸೃಷ್ಟಿಸಬಲ್ಲುದು. ಪೃಥಿವೀ ಪರಮಾಣುಗಳಿಂದ ಬೆಂಕಿ ಉತ್ಪನ್ನವಾಗಲಾರದು ಎಂದು ನೈಯಾಯಿಕರು ವಾದಿಸುತ್ತಾರೆ. ಆದರೆ ಜೈನರಿಗೆ ಈ ವಾದ ಸರಿಬೀಳುವುದಿಲ್ಲ. ಇವು ಪೃಥಿವೀ ಗುಂಪಿನವು, ಇವು ಜಲಕ್ಕೆ ಸೇರಿದುವು ಎಂದು ಪರಮಾಣುಗಳಲ್ಲಿ ಜಾತಿಭೇದವನ್ನು ಅವರು ಒಪ್ಪುವುದಿಲ್ಲ. ಒಂದು ಅಣುವಿಗೂ ಮತ್ತೊಂದಕ್ಕೂ ಯಾವ ರೀತಿಯ ವೈಲಕ್ಷಣ್ಯವೂ ಇಲ್ಲ. ಕೆಲವು ಅಣುಗಳು ಒಂದಾಗಿ ಸೇರಿದರೆ ಪೃಥಿವೀ ಪದಾರ್ಥಗಳು ಏರ್ಪಡುತ್ತವೆ. ಅದೇ ಅಣುಗಳು ಇನ್ನೊಂದು ವಿಧವಾಗಿ ಕೂಡಿದರೆ ಜಲ ಪದಾರ್ಥವೋ ಅಥವಾ ವಾಯು ಪದಾರ್ಥವೋ ಉಂಟಾಗುತ್ತದೆ.

ಹೀಗೆ ಅಣುಗಳು ಒಂದುಗೂಡಿದರೆ ಸ್ಥೂಲ ವಸ್ತುಗಳಾಗುತ್ತವೆ. ಕರ್ಮವೂ ಸಹ ಒಂದು ಜಾತಿಯ ಭೂತಪದಾರ್ಥ. ಅದು ಸೇರಿಕೊಂಡರೆ ಸಂಸಾರಾವಸ್ಥೆ ತೋರಿಬರುತ್ತದೆ.

ನಮ್ಮ ಜ್ಞಾನದಿಂದ ಎಲ್ಲ ಪದಾರ್ಥಗಳನ್ನೂ ತಿಳಿದುಕೊಳ್ಳಬಹುದು. ಆದರೆ ಜ್ಞಾನವು ಅಪೂರ್ಣವಾದ್ದರಿಂದ ನಮಗೆ ಗೋಚರವಾಗುವ ವಸ್ತುವಿನ ಸ್ವರೂಪ ಹೀಗೆಯೇ ಎಂದು ನಿರ್ಧರಿಸಿ ಹೇಳಲು ಆಗುವುದಿಲ್ಲ. ಅಂದಮಾತ್ರಕ್ಕೆ ನಮ್ಮ ಜ್ಞಾನವು ತಪ್ಪು ಎಂದು ತಿಳಿದುಕೊಳ್ಳಬಾರದು. ಪ್ರತಿಯೊಂದು ವಸ್ತುವೂ ಅನೇಕ ಮುಖವಾಗಿ ಗೋಚರವಾಗುವುದರಿಂದ ಯಾವ ಒಂದಂಶವನ್ನೂ ತಪ್ಪೆಂದು ನಾವು ತಿರಸ್ಕರಿಸುವಂತಿಲ್ಲ. ಆದ್ದರಿಂದ ಒಂದೇ ವಸ್ತು ಒಂದು ದೃಷ್ಟಿಯಿಂದ ಚಿನ್ನವಾಗಿ ತೋರಬಹುದು. ಮತ್ತೊಂದು ದೃಷ್ಟಿಯಿಂದ ಕಬ್ಬಿಣವಾಗಿ ತೋರಬಹುದು. ಎರಡು ದೃಷ್ಟಿಗಳನ್ನೂ ನಿಜವೆಂದೇ ಜೈನರು ಒಪ್ಪುತ್ತಾರೆ. ಈ ವಿಧವಾಗಿ ನಿರ್ಣಯಮಾಡುವ ಪ್ರಕಾರವು "ಸ್ಯಾತ್" ಎಂಬ ಸಂಸ್ಕೃತ ಶಬ್ದದಲ್ಲಿರುವುದರಿಂದ ಈ ಮತಕ್ಕೆ 'ಸ್ಯಾದ್ವಾದ'ವೆಂದು ಹೆಸರಾಯಿತು.

ನಮ್ಮ ಮುಂದೆ ಒಬ್ಬ ಮನುಷ್ಯನನ್ನು ನೋಡುತ್ತೇವೆ. ಅವನು ಇರುವ ದೇಶ, ಕಾಲ ಮತ್ತು ಅವನ ವೇಷ— ಇವು ನಮಗೆ ಗೊತ್ತಾಗುತ್ತವೆ. ಅವನು ನಮ್ಮೆದುರಿಗೆ ಇರುವುದರಿಂದ 'ಸ್ಯಾದಸ್ತಿ', ಅಂದರೆ 'ಇರಬಹುದು, ಇದ್ದಾನೆ', ಎಂದು ಹೇಳುತ್ತೇವೆ. ಅವನು ಕಣ್ಮರೆಯಾದಾಗ 'ಸ್ಯಾನ್ನಾಸ್ತಿ' ಅಂದರೆ 'ಇರಬಹುದು, ಇಲ್ಲ' ಎನ್ನುತ್ತೇವೆ. ಕೆಲವು ಸಂದರ್ಭದಲ್ಲಿ ಕಾಣಿಸಿಕೊಂಡು ಮತ್ತೆ ಕೆಲವು ಸಂದರ್ಭಗಳಲ್ಲಿ ಕಣ್ಮರೆಯಾದ್ದರಿಂದ ಅವನ ವಿಷಯವಾಗಿ "ಸ್ಯಾದಸ್ತಿ ಚ ನಾಸ್ತಿ ಚ" ಅಂದರೆ 'ಇರಬಹುದು ಇದ್ದಾನೆ, ಹಾಗೆಯೇ ಇಲ್ಲವೂ ಇಲ್ಲ' ಎಂದು ಹೇಳುತ್ತೇವೆ. ಮನುಷ್ಯನು ಇಲ್ಲ ಅಥವಾ ಇದ್ದಾನೆ ಎಂಬ ವಿರುದ್ಧ ಅರ್ಥಗಳನ್ನು ಏಕಕಾಲದಲ್ಲೇ ಗಮನಿಸಿದರೆ 'ಸ್ಯಾದವಕ್ತವ್ಯಂ' ಅಂದರೆ 'ಇರಬಹುದು, ಹೇಳುವುದಕ್ಕಾಗುವುದಿಲ್ಲ' ಎಂದು ವ್ಯವಹಾರ ಮಾಡುವ ಸಂದರ್ಭವೊದಗುತ್ತದೆ. ಈ ನಾಲ್ಕನೆಯ ದೃಷ್ಟಿಗೆ ಮತ್ತೆ ಮೂರು ರೀತಿಗಳನ್ನು ಕೂಡಿಸಿ **ಸಪ್ತಭಂಗೀ** ಅಥವಾ ಏಳು ರೀತಿಗಳು ಎಂಬುದಾಗಿ ಜೈನರು ಹೇಳುತ್ತಾರೆ. ಪದಾರ್ಥಗಳಿಗೆ ಅನೇಕ ಸ್ವಭಾವಗಳಿರುವುದರಿಂದ ಅವುಗಳು ಇರುವಂತೆಯೇ ನಾವು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಂಡರೆ ಅವುಗಳ ಸ್ವಭಾವ ನಾನಾ ರೀತಿಯಾಗಿದೆ ಎಂದೇ ಹೇಳಬೇಕಾಗುತ್ತದೆ. ಇದಕ್ಕೆ 'ಅನೇಕಾಂತವಾದ' ಎಂದು ಹೆಸರಾಗಿದೆ. ಮತ್ತು ಅವುಗಳನ್ನು ತಿಳಿದುಕೊಳ್ಳುವುದಕ್ಕೆ ನಾವು ಮಾಡುವ ಪ್ರಯತ್ನಗಳು ಏಳು ವಿಧವಾಗಿರುತ್ತವೆ. ಆದ್ದರಿಂದ ಈ ದೃಷ್ಟಿಗೆ ಸಪ್ತಭಂಗೀ ಅಥವಾ ಏಳುರೀತಿಯ ದೃಷ್ಟಿ ಎಂದು ಹೆಸರು. ಆ ಏಳು ಭಂಗಿಗಳು ಈ ರೀತಿ ಇವೆ :

(೧) ಸ್ಯಾದಸ್ತಿ—ಇರಬಹುದು, ಇದೆ.
(೨) ಸ್ಯಾನ್ನಾಸ್ತಿ—ಇರಬಹುದು, ಇಲ್ಲ.
(೩) ಸ್ಯಾದಸ್ತಿ ಚ ನಾಸ್ತಿ ಚ—ಇರಬಹುದು, ಉಂಟು ಮತ್ತು ಇಲ್ಲ.
(೪) ಸ್ಯಾದವಕ್ತವ್ಯಂ—ಇರಬಹುದು, ಹೇಳುವುದಕ್ಕಾಗುವುದಿಲ್ಲ.
(೫) ಸ್ಯಾದಸ್ತಿಚಾವಕ್ತವ್ಯಂ—ಇರಬಹುದು, ಇದೆ, ಹೇಳುವುದಕ್ಕಾಗುವುದಿಲ್ಲ.
(೬) ಸ್ಯಾನ್ನಾಸ್ತಿಚಾವಕ್ತವ್ಯಂ—ಇರಬಹುದು, ಇಲ್ಲ, ಹೇಳುವುದಕ್ಕಾಗುವುದಿಲ್ಲ.
(೭) ಸ್ಯಾದಸ್ತಿಚನಾಸ್ತಿಚಾವಕ್ತವ್ಯಂ—ಇರಬಹುದು,ಉಂಟು, ಇಲ್ಲ, ಹೇಳುವುದಕ್ಕಾಗುವುದಿಲ್ಲ.

**ಧರ್ಮ :** ಈ ದರ್ಶನದಲ್ಲಿ ಅನುಷ್ಠಾನಕ್ಕೆ ಮುಖ್ಯತೆ ಏರ್ಪಟ್ಟಿದೆ. ದುಃಖವನ್ನು ಹೋಗಲಾಡಿಸಬೇಕಾದರೆ ಕಠೋರವಾದ ನಿಯಮಗಳನ್ನು ಆಚರಿಸಬೇಕು. ಆದರೆ ಎಲ್ಲರೂ ಮಾಡುವ ಅನುಷ್ಠಾನವು ಕಾರ್ಯಕಾರಿಯಾಗುವುದಿಲ್ಲ. ಮೊದಲು ಜ್ಞಾನಿಯಾಗಿ ಅನಂತರ ಅನುಷ್ಠಾನ ಮಾಡಿದರೆ ಫಲವುಂಟಾಗುತ್ತದೆ. ಈ ಸಂದರ್ಭದಲ್ಲಿ **ರತ್ನತ್ರಯ** ಎಂಬ ಹೆಸರಿನಲ್ಲಿ ಸಮ್ಯಜ್ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ಚಾರಿತ್ರ ಎಂದು ಮೂರು ಪದಗಳು ಉಪಯೋಗಿಸಲ್ಪಟ್ಟಿವೆ. ಲೋಕದಲ್ಲಿ ಯಾವ ವಸ್ತು ಹೇಗಿದೆಯೋ ಅದನ್ನು ಹಾಗೆಯೇ ತಿಳಿದುಕೊಳ್ಳುವದು ಸಮ್ಯಜ್ಜ್ಞಾನ. ಜೈನಾಗಮಗಳಲ್ಲಿ ಪೂರ್ಣವಾಗಿ ಶ್ರದ್ಧೆ ಇಡುವುದೇ ಸಮ್ಯಗ್ದರ್ಶನ. ಆಗಮದಲ್ಲಿ ಉಪದೇಶಮಾಡಿರುವಂತೆ ನಡೆದುಕೊಳ್ಳುವುದಕ್ಕೆ ಸಮ್ಯಕ್ಚಾರಿತ್ರವೆಂದು ಹೆಸರು. ಈ ನಡತೆಯಿಂದ ಕರ್ಮಧ್ವಂಸವಾಗಬೇಕಾದರೆ ಅವಶ್ಯವಾಗಿ ನಾವು ಪಂಚವ್ರತವನ್ನು ಕೈಗೊಳ್ಳಬೇಕು. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬುವೇ ಪಂಚವ್ರತಗಳು.

೧. ಅಹಿಂಸಾ— ಮನಸಾ, ವಾಚಾ, ಕರ್ಮಣಾ ನಮ್ಮಿಂದ ಇತರರಿಗೆ ದುಃಖವಾಗಬಾರದು. ಒಂದು ವೇಳೆ ನಾವು ಉದಾಸೀನರಾಗಿರುವುದರಿಂದ ಇತರರಿಗೆ ದುಃಖವುಂಟಾದರೆ, ಆವಾಗ ನಾವು ಔದಾಸೀನ್ಯವನ್ನು ಬಿಟ್ಟು ನಮ್ಮ ಶಕ್ತಿಯಿದ್ದಷ್ಟು ಸಹಾಯ ಮಾಡಬೇಕು. ಹಾಗೆ ಮಾಡಬೇಕಾದ ಸಹಾಯವನ್ನು ನಿಲ್ಲಿಸುವುದೂ ಒಂದು ರೀತಿಯಲ್ಲಿ ಹಿಂಸೆಯೆಂದು ಭಾವಿಸಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ, ಜೈನಮತದಲ್ಲಿ ಸಮಾಜ ಸೇವೆಗೆ ಹೆಚ್ಚು ಅವಕಾಶವೂ ಪ್ರಾಶಸ್ತ್ಯವೂ ದೊರೆತಿದೆಯೆಂದು ಗೊತ್ತಾಗುತ್ತದೆ.

೨. ಸತ್ಯ—ಎಂದಿಗೂ ಸುಳ್ಳಾಡಬಾರದು.

೩. ಅಸ್ತೇಯ—ಇತರರ ವಸ್ತುಗಳನ್ನು ನಮಗೆ ಬೇಕು ಎಂಬ ಭಾವನೆಯಿಂದ ಸ್ವೀಕರಿಸಬಾರದು.

೪. ಬ್ರಹ್ಮಚರ್ಯ—ಮದುವೆ ಮಾಡಿಕೊಂಡು ಇಹಲೋಕದ ಸುಖಲೋಲುಪ್ತಿಯಲ್ಲಿ ಶಕ್ತಿಯನ್ನು ಕಳೆದುಕೊಳ್ಳಬಾರದು.

೫. ಅಪರಿಗ್ರಹ—ಇತರರು ಏನನ್ನಾದರೂ ನಮಗೆ ದಾನವಾಗಿ ಕೊಟ್ಟರೆ ಅದನ್ನು ಸ್ವೀಕರಿಸಬಾರದು.

ಹೀಗೆ ಐದುವಿಧವಾದ ವ್ರತಕ್ಕೆ ಮಹಾವ್ರತವೆಂದು ಹೆಸರು. ಇದನ್ನು ಕೈಗೊಳ್ಳುವುದು ಸನ್ಯಾಸಿಗಳು ಅಂದರೆ ಶ್ರಮಣರಿಗೆ ಮಾತ್ರ ಸಾಧ್ಯ. ಸಾಮಾನ್ಯ ಜನರು ಇಷ್ಟು ಕಠೋರವಾದ ವ್ರತವನ್ನು ಆಚರಿಸಲಾರರು. ಅವರಿಗೆ ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬ ಭಾಗಗಳಲ್ಲಿ ಕೊಂಚಮಟ್ಟಿಗೆ ನಿಯಮವನ್ನು ಸಡಿಲಪಡಿಸಿದೆ. ಆದ್ದರಿಂದ ಸಾಮಾನ್ಯ ಜನರು ಆಚರಿಸಬೇಕಾದ ವ್ರತಕ್ಕೆ ಅಣುವ್ರತವೆಂಬ ಹೆಸರನ್ನು ಕೊಡಲಾಗಿದೆ. ಈ ಎರಡು ವಿಧವಾದ ವ್ರತಗಳಲ್ಲಿ ಹೆಚ್ಚು ಅಂತರವಿಲ್ಲ.

(ಮುಂದುವರಿಯುವುದು)

## ಕರ್ನಾಟಕ ಏಕೀಕರಣ

### "ಕನ್ನಡ ನಾಡು ಮೈಸೂರಿಗೆ ಸೇರುವುದು ಶ್ರೇಯಸ್ಸು"

**೨೪ನೆಯ ಕನ್ನಡ ಸಾಹಿತ್ಯ ಸಮ್ಮೇಲನಾಧ್ಯಕ್ಷರಾದ ಶ್ರೀ ಮುದವೀಡುರವರ ಪ್ರಕಟನೆ**

ಸಂಸ್ಥಾನಾಧಿಪತಿಗಳು ತಮ್ಮ ಪ್ರಜೆಗಳಿಗೆ ಸಂಪೂರ್ಣ ಹೊಣೆಗಾರ ಪ್ರಭುತ್ವವನ್ನು ದಯಪಾಲಿಸುವುದಾದರೆ, ಸ್ವತಂತ್ರ–ಸಂಯುಕ್ತ–ಹಿಂದೂಸ್ಥಾನದ ಪ್ರಗತಿಗೆ ದೊಡ್ಡ ಆತಂಕವಾಗಿರುವ ಸಂಸ್ಥಾನಗಳ ಪ್ರಶ್ನೆ ಸುಲಭವಾಗಿ ಬಗೆಹರಿದುಬಿಡುವುದೆಂದೂ ಇಂಥ ನೂರಾರು ಸಂಸ್ಥಾನಗಳನ್ನು ಒಂದೇ ಭಾಷೆಯನ್ನಾಡುವ ಒಂದೇ ಸಂಸ್ಕೃತಿಯನ್ನುಳ್ಳ ಹಿಂದೂಸ್ಥಾನದ ನೆರೆಯ ಬ್ರಿಟಿಷ್ ಪ್ರದೇಶಗಳೊಂದಿಗೆ ಸಮಾವೇಶಗೊಳಿಸುವುದೊಂದೇ ಈ ತೊಂದರೆಯ ಕಾಲ್ತೊಡಕನ್ನು ದೂರಮಾಡಲು ತಕ್ಕ ಉಪಾಯವೆಂದೂ ಹಿಂದೆ ಮದರಾಸು ಪ್ರಾಂತದ ಮುಖ್ಯ ಅಮಾತ್ಯರಾಗಿದ್ದ ಶ್ರೀ॥ ಸಿ. ರಾಜಗೋಪಾಲಾಚಾರ್ಯರು ಮೊನ್ನೆ ಮೊನ್ನೆ ಮದರಾಸಿನಲ್ಲೊಂದು ಸಭೆಯಲ್ಲಿ ಮಾತನ್ನಾಡುವಾಗ ಹೇಳಿದರೆಂದು ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಯ ಕಡೆಗೆ ನನ್ನ ಲಕ್ಷ್ಯವನ್ನು ಎಳೆಯಲಾಗಿದೆ. ಈ ತತ್ವವನ್ನನುಸರಿಸಿ ಮೈಸೂರಿನ ಶ್ರೀಮನ್ಮಹಾರಾಜರವರು ತಮ್ಮ ಸಂಸ್ಥಾನದ ಪ್ರಜೆಗಳಿಗೆ ಸಂಪೂರ್ಣ ಹೊಣೆಗಾರ ರಾಜ್ಯ ಕಾರಭಾರ ಪದ್ಧತಿಯನ್ನು ಅನುಗ್ರಹಿಸುವುದಾದರೆ ಮುಂಬಯಿ ಪ್ರಾಂತದೊಳಗಿನ ಬೆಳಗಾಂವಿ ಧಾರವಾಡ ಮೊದಲಾದ ೪ ಜಿಲ್ಲೆಗಳು ಯಾವ ಆತಂಕವೂ ಇಲ್ಲದೆ ಮೈಸೂರು ರಾಜ್ಯವನ್ನು ಸೇರಬಹುದೆಂದೂ— ಹಾಗೆಯೇ ಮದರಾಸು ಪ್ರಾಂತದೊಳಗಿನ ದಕ್ಷಿಣ ಕನ್ನಡ ಬಳ್ಳಾರಿ ಜಿಲ್ಲೆಗಳೂ ಮಿಕ್ಕ ಕನ್ನಡ ಪ್ರದೇಶದ ಪ್ರಜೆಗಳೂ ಅದರೊಳಗೆ ಸಮಾವೇಶ ಹೊಂದುವಂತೆ ತಾವು ಅವರ ಮನವೊಲಿಸುವುದಾಗಿಯೂ ಹೇಳಿದರೆಂಬುದಾಗಿ ಪ್ರಸಿದ್ಧವಾದದ್ದನ್ನು ನನ್ನ ಅವಗಾಹನೆಗೆ ತರಲಾಗಿದೆ. ಕಾಂಗ್ರೆಸ್ಸಿನ ಪ್ರಮುಖ ಸೂತ್ರಧಾರರಲ್ಲೊಬ್ಬರಾಗಿರುವ ಶ್ರೀ॥ ರಾಜಗೋಪಾಲಾಚಾರ್ಯರು ತಮ್ಮ ಮುಖ್ಯಮಂತ್ರಿ ಪದವನ್ನು ಬಿಟ್ಟುಕೊಟ್ಟನಂತರದಲ್ಲಾದರೂ ಕನ್ನಡ ಜನಾಂಗದ ಬಹುದಿನದ ಆಶೆ ಆಕಾಂಕ್ಷೆಗಳನ್ನು ತಮ್ಮ ಈ ಸ್ಪಷ್ಟವಾದ, ಅಸಂದಿಗ್ಧವಾದ ಮಾತುಗಳಿಂದ ಎತ್ತಿ ಹಿಡಿದದ್ದಕ್ಕೆ ಕನ್ನಡಿಗರೆಲ್ಲರೂ ಅವರಿಗೆ ಅತ್ಯಂತ ಆನಂದದಿಂದ ಕೃತಜ್ಞರಾಗಿ ಇರಬೇಕಾಗಿದೆ.

ಮೊನ್ನೆ ತಾನೆ ಸ್ವರ್ಗಸ್ಥರಾಗಿರುವ 'ಕರ್ನಾಟಕ ಭೂಷಣ' ಕೌಜಲಗಿ ಶ್ರೀನಿವಾಸರಾಯರು, ಶ್ರೀಮಾನ್ ಆಲೂರ ವೆಂಕಟರಾಯರು,—ಇವರೇ ಮೊದಲಾದ ಕರ್ನಾಟಕದ ಮಾನ್ಯ ಮುಖಂಡರು ಕರ್ನಾಟಕದ ಏಕೀಕರಣದ ಪ್ರಶ್ನೆಯನ್ನು ಈ ರೀತಿಯಿಂದಲೂ ಸುಲಭವಾಗಿ ಬಿಡಿಸಬಹುದೆಂದು ಅನೇಕ ಸಭೆ ಸಮ್ಮೇಳನ ಪರಿಷತ್ತುಗಳಲ್ಲಿ ಸಾರಿಹೇಳಿದ್ದನ್ನು ಕರ್ನಾಟಕದ ಎಲ್ಲ ಭಾಗಗಳ ಜನರು ಕೇಳಿ ಮನಗಂಡಿರುವರು. ಮೈಸೂರು ವಿದ್ಯಾಪೀಠವನ್ನೇ ಕರ್ನಾಟಕದ ವಿದ್ಯಾಪೀಠವಾಗಿ ಮಾರ್ಪಡಿಸಬಹುದೆಂದು ೧೯೨೫—೨೬ರಿಂದ ಮುಂದೆ ಕೆಲವು ದಿನಗಳವರೆಗೆ ಕನ್ನಡ ನಾಡಿನ ಪ್ರಮುಖರಲ್ಲಿ ನಡೆದ ಚರ್ಚೆ ಇದೇ ಮೂಲಭೂಮಿಕೆಯನ್ನು ಅವಲಂಬಿಸಿತ್ತೆಂದು ಹೇಳಿದರೆ ತಪ್ಪಾಗಲಾರದು. ಕನ್ನಡ ನಾಡ ಧುರೀಣರ ಈ ವಿಚಾರಸರಣಿಯನ್ನು ಉಪಹಾಸಮಾಡಿ, ಗಹಗಹಿಸಿ ನಗುತ್ತಿದ್ದ ಮಹಾದೇಶಭಕ್ತರನೇಕರು ನಮ್ಮ ಕರ್ನಾಟಕದಲ್ಲಿ ಇನ್ನೂ ಬದುಕಿದ್ದಾರೆ. ಇಂತಹ ಮಹನೀಯರು ಶ್ರೀಮಾನ್ ರಾಜಗೋಪಾಲಾಚಾರ್ಯರ ಈ ಉದ್ಗಾರಗಳನ್ನು ಓದಿಕೊಂಡು, ಅವುಗಳ ತಿರುಳನ್ನು ತಿಳಿದುಕೊಂಡು, ತಮ್ಮ ಬುದ್ಧೀಂದ್ರಿಯವನ್ನು ಸರಿಪಡಿಸಿಕೊಂಡು ಕರ್ನಾಟಕದ ಏಕೀಕರಣವೆಂಬುದು 'ಸುರಚಾಪಾಯುಧ'ದಂತೆ, 'ಇಂದ್ರಜಾಲದ ಬಲ'ದಂತೆ ಎಂದು ಪರಿಹಾಸಮಾಡುತ್ತ, ಏಕೀಕರಣದ ಪುರಸ್ಕರ್ತರು ಮೃಗಜಲವನ್ನು ಬೆನ್ನುಹತ್ತಿ ಓಡುತ್ತಿರುವರೆಂಬ ದುಷ್ಪ್ರಚಾರದಿಂದ ಕನ್ನಡ ಜನಾಂಗದಲ್ಲಿ ಬುದ್ಧಿಭೇದವನ್ನುಂಟುಮಾಡುವುದನ್ನು ಇನ್ನುಮುಂದಾದರೂ ನಿಲ್ಲಿಸಿದರೆ ಕನ್ನಡ ನಾಡಿಗೆ ಮಹದುಪಕಾರಮಾಡಿದಂತಾಗುವುದು. ಶ್ರೀಮಾನ್ ರಾಜಗೋಪಾಲಾಚಾರ್ಯರ ಈ ಸ್ಪಷ್ಟೋಕ್ತಿಗಳಿಂದ ಕನ್ನಡ ನಾಡಿನ ವಿದ್ಯಮಾನ ರಾಜಕೀಯ ರಂಗದಲ್ಲಿ ಯಾವ ಬಗೆಯ ಸ್ಥಿತ್ಯಂತರಗಳು ಆಗಬಹುದೆಂಬುದನ್ನು ನಾನಿಲ್ಲಿ ಎಷ್ಟು ಮಾತ್ರವೂ ಹೇಳಬಯಸುವುದಿಲ್ಲ. ಕನ್ನಡ ಸಾಹಿತ್ಯದ ದೃಷ್ಟಿಯಿಂದ, ಕನ್ನಡ ಸಂಸ್ಕೃತಿಯ ವಿವಿಧಾಂಗಗಳ ಸಂರಕ್ಷಣೆ–ಸಂಗೋಪನ–ಸಂವರ್ಧನಗಳ ದೃಷ್ಟಿಯಿಂದ ವಸ್ತುತಃ ಕನ್ನಡ ರಾಜ್ಯರಮಾರಮಣರಾಗಿರುವ, ಪುರಾತನ 'ಕರ್ನಾಟಕ ಸಿಂಹಾಸನಾಧಿಷ್ಠಿತ'ರಾಗಿರುವ ಈಗಿನ ಮೈಸೂರಿನ ಶ್ರೀಮನ್ಮಹಾರಾಜರವರ ಏಕಾಧಿಪತ್ಯಕ್ಕೆ ಕನ್ನಡ ನಾಡು ಇಂದಿಲ್ಲ ನಾಳೆ ಒಳಗಾಗುವ ಸುಯೋಗ ಬರುವುದು ಎಲ್ಲ ದೃಷ್ಟಿಯಿಂದಲೂ ಶ್ರೇಯಸ್ಕರವಾಗಿರುವುದೆಂದು ಮಾತ್ರ ನಾನಿಂದು ಹೇಳಬಯಸುತ್ತೇನೆ. ಕನ್ನಡ ಜನಾಂಗದ ಈ ಪರಿಶುದ್ಧ ಅಂತಃಪ್ರವೃತ್ತಿಗೆ ತಮ್ಮ ಸರಳವಾದ, ಸ್ಪಷ್ಟವಾದ, ಸರ್ವಜನಸಮ್ಮತವಾಗಬಹುದಾದ ವಿಚಾರೋದ್ಗಾರಗಳ ಮೂಲಕ ಮಹತ್ವದ ಚಾಲನೆಯನ್ನು ಕೊಟ್ಟುದಕ್ಕಾಗಿ ಕನ್ನಡ ನಾಡೇ ಶ್ರೀಮಾನ್ ರಾಜಗೋಪಾಲಾಚಾರ್ಯರಿಗೆ ಸದಾಕಾಲ ಕೃತಜ್ಞವಾಗಿರುವುದು.

---

## ಕಂಬನಿ

ಬೆಂಗಳೂರಿನ ಹೆಸರಾದ ವಕೀಲರೂ ಸುಪ್ರಸಿದ್ಧ ಮೋಕ್ಷಗುಂಡಂ ವಂಶದವರೂ, ಪರಿಷತ್ತಿನ ಸದಸ್ಯರಾಗಿದ್ದುಕೊಂಡು ಕನ್ನಡ ನಾಡು ನುಡಿಗಳ ವಿಷಯದಲ್ಲಿ ಅತ್ಯಂತ ಅಭಿಮಾನ ಇಟ್ಟುಕೊಂಡಿದ್ದವರೂ ಆದ ಶ್ರೀ ಮೋಕ್ಷಗುಂಡಂ ಕೃಷ್ಣಮೂರ್ತಿಯವರು ದುರಂತ ಮರಣಕ್ಕೆ ಈಡಾದರೆಂದು ತಿಳಿಸಲು ನಾವು ಅತ್ಯಂತ ವಿಷಾದ ಪಡುತ್ತೇವೆ. ಅವರ ಆತ್ಮಕ್ಕೆ ಸದ್ಗತಿಯಾಗಲಿ.

---

## ಕೋಲ್‌ರೀಚ್ ಕವಿಯ ಮಾತು ✓

### ಪ್ರವರ್ಧಮಾನ ಸೂಚಕ ಕವಿತೆ

ಈಗಿನ ಕಾಲದಲ್ಲಿ, ಎಷ್ಟೇ ಒಳ್ಳೆಯ ಮಾದರಿಯ ಕವನಗಳಾದರೂ ಅವುಗಳಿಂದ ಅವನ್ನು ಬರೆದ ತರುಣ ಬರಹಗಾರ, ದೊಡ್ಡ ಕವಿಯಾಗುವುದು ಹಾಗಿರಲಿ, ಕವಿಯಾಗಬಲ್ಲ ಎಂದು ಭವಿಷ್ಯ ಹೇಳುವುದು ಅಸಾಧ್ಯವೇ ಸರಿ. ಕವಿತೆಯಲ್ಲಿ ಒಂದು ಅಭಿರುಚಿ, ಪದ್ಯರಚನೆಯ ಒಂದು ಕೌಶಲ, ಬುದ್ಧಿವಂತಿಕೆಯ ಅನುಕರಣ—ಇವೆಲ್ಲ ಸೇರಿ ಪ್ರವರ್ಧಮಾನಸೂಚಕವಾಗಿ ಕಾಣುವ ಕವನಗಳ ರಚನೆಗೆ ಕಾರಣವಾಗಬಹುದು. ಆದರೆ ಪ್ರತಿಭೆ, ಎಂದರೆ ಏನಾದರೂ ಹೊಸದನ್ನು ಸೃಷ್ಟಿಮಾಡುವ ಶಕ್ತಿ,—ಎಂಬುದು ಬೇರೆ.

### ಒಳ್ಳೆಯುವರು–ಕೆಟ್ಟವರು

ಒಳ್ಳೆಯವರಾಗಲಿ ಕೆಟ್ಟವರಾಗಲಿ ಅವರು ಮೇಲೆ ಕಾಣುವಷ್ಟು ಒಳ್ಳೆಯವರಾಗಿ ಅಥವಾ ಕೆಟ್ಟವರಾಗಿ ಇರುವುದಿಲ್ಲ.

—ಎಂ. ವಿ. ಸೀ




**ಶುಕ್ರವಾರ, ಮಾರ್ಚಿ ೮, ೧೯೪೦**

## ಕಲ್ಕತ್ತೆಯಲ್ಲಿ ಸರ್ ಮಿರ್ಜಾ ಅವರು

ಇದೇ ೨ನೆಯ ತಾರೀಖಿನ ದಿನ ಕಲ್ಕತ್ತೆಯ ವಿಶ್ವವಿದ್ಯಾನಿಲಯದ ಘಟಿಕೋತ್ಸವ ನಡೆಯಿತು. ಉತ್ಸವದ ಭಾಷಣ ಮಾಡಲು ಮೈಸೂರು ಸಂಸ್ಥಾನದ ದಿವಾನ್‌ರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರನ್ನು ಆಹ್ವಾನಿಸಿದ್ದರು. ಕಲ್ಕತ್ತೆಯ ವಿಶ್ವವಿದ್ಯಾನಿಲಯದವರು ಈ ರೀತಿ ಸರ್ ಮಿರ್ಜಾ ಅವರನ್ನು ಗೌರವಿಸುವುದರ ಮೂಲಕ ಕನ್ನಡ ನಾಡನ್ನು ಗೌರವಿಸಿದ್ದಾರೆಂದು ನಾವು ಭಾವಿಸುತ್ತೇವೆ. ಸರ್ ಮಿರ್ಜಾ ಅವರೂ ಸಹ ಅತ್ಯಂತ ಅಮೋಘವಾದ ಭಾಷಣವನ್ನು ಅಪ್ಪಣೆ ಕೊಡಿಸಿ ಮೈಸೂರಿಗೂ ಕನ್ನಡ ನಾಡಿಗೂ ಕೀರ್ತಿ ತಂದಿರುತ್ತಾರೆ. ಸರ್ ಮಿರ್ಜಾ ಅವರು ಕಲ್ಕತ್ತೆಗೆ ಹೋದ ಸಂದರ್ಭವನ್ನು ಉಪಯೋಗಿಸಿಕೊಂಡು ಅಲ್ಲಿನ ಮುಸ್ಲಿಮ್ ವಿದ್ಯಾರ್ಥಿಗಳ ಸಂಘವೂ ಮೈಸೂರು ಸಂಘವೂ ಅವರನ್ನು ತಮ್ಮ ಸಂಘಗಳಿಗೆ ಬರಮಾಡಿಕೊಂಡು ಆದರಿಸಿದುವು. ಆ ಸಂದರ್ಭಗಳಲ್ಲಿಯೂ ಸರ್ ಮಿರ್ಜಾ ಅವರು, ಸಣ್ಣವಾದರೂ ಸ್ಫೂರ್ತಿಯುತವಾದ ಭಾಷಣಗಳನ್ನು ಅಪ್ಪಣೆ ಕೊಡಿಸಿರುತ್ತಾರೆ.

ಸರ್ ಮಿರ್ಜಾ ಅವರು ಘಟಿಕೋತ್ಸವ ಭಾಷಣದಲ್ಲಿ ನಾಡಿನ ಏಳಿಗೆಯ ಕಾರ್ಯದಲ್ಲಿ, ಮುಖ್ಯವಾಗಿ ಜನಸಾಮಾನ್ಯದ ಏಳಿಗೆಯ ಕಾರ್ಯದಲ್ಲಿ, ನಮ್ಮ ವಿಶ್ವವಿದ್ಯಾನಿಲಯಗಳೂ, ಅವುಗಳ ತರುಣ ವಿದ್ಯಾರ್ಥಿಗಳೂ, ಅವುಗಳಿಂದ ಪ್ರಶಸ್ತಿ ಪಡೆದು ಹೊರಹೊರಡುವ ತರುಣರೂ ಯಾವ ರೀತಿ ನೆರವಾಗಬಹುದೆಂಬುದನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ. ನಮ್ಮ ವಿದ್ಯಾರ್ಥಿಗಳು ಪ್ರೌಢವ್ಯಾಸಂಗಕ್ಕಾಗಿ ಪರದೇಶಗಳಿಗೆ ಹೋಗುವುದು ತಪ್ಪುವಂತೆ ನಮ್ಮ ವಿಶ್ವವಿದ್ಯಾನಿಲಯಗಳಲ್ಲೆ ಅತ್ಯುಚ್ಚರೀತಿಯ ಪ್ರೌಢವ್ಯಾಸಂಗ ದೊರೆಯುವಂತಾಗಬೇಕು ಎಂಬ ಸರ್ ಮಿರ್ಜಾ ಅವರ ಘನ ಉದ್ದೇಶ ನೆರವೇರುವುದು ಯಾರಿಗೆ ತಾನೆ ಬೇಕಾಗಿಲ್ಲ? ಇದು ನೆರವೇರಬೇಕಾದರೆ, "ಗ್ರಾಜುಯೇಟ್ ಪ್ರಶಸ್ತಿಯನ್ನು ಪಡೆದವರು ಪ್ರೌಢವ್ಯಾಸಂಗವನ್ನು ಮುಂದುವರಿಸಿ ಸಂಶೋಧನೆಗಳನ್ನು ನಡಸಲು ಅನುಕೂಲಗಳನ್ನು ಕಲ್ಪಿಸುವ ವಿಷಯದಲ್ಲಿ ಭರತಖಂಡದ ನಾನಾ ವಿಶ್ವವಿದ್ಯಾನಿಲಯಗಳವರೂ ಪರಸ್ಪರವಾಗಿ ವ್ಯವಹರಿಸಿ, ತಮ್ಮ ಸ್ಥಿತಿಯನ್ನು ಪರಿಗಣಿಸಿ ಒಂದು ನಿಷ್ಕರ್ಷೆಗೆ ಬಂದು, ಒಂದೊಂದು ವಿಶ್ವವಿದ್ಯಾನಿಲಯದಲ್ಲಿಯೂ ಕೆಲಕೆಲವು ವ್ಯಾಸಂಗ ವಿಷಯಗಳ ವಿಚಾರವಲ್ಲಿ ಮಾತ್ರವೇ ಆ ಬಗೆಯ ಪ್ರೌಢವ್ಯಾಸಂಗ ಮತ್ತು ಸಂಶೋಧನ ವ್ಯವಸ್ಥೆಯಿರುವಂತೆ ಏರ್ಪಡಿಸಿ ಹಂಚಿಕೆ ಮಾಡಿಕೊಳ್ಳುವುದು ಯುಕ್ತವಲ್ಲವೇ, ಅವಶ್ಯವಲ್ಲವೇ–ಎಂಬುದನ್ನು ಪರ್ಯಾಲೋಚಿಸಬೇಕು" ಎಂದು ಸರ್ ಮಿರ್ಜಾ ಅವರು ಸೂಚಿಸಿದ್ದಾರೆ. ಈ ಸೂಚನೆ ಬೇಗ ಕಾರ್ಯರೂಪಕ್ಕೆ ಬರುವಂತಾಗಲೆಂಬುದೇ ನಮ್ಮ ಹಾರೈಕೆ; ಆಗ ಮೈಸೂರು ವಿಶ್ವವಿದ್ಯಾನಿಲಯದ ವೈಶಿಷ್ಟ್ಯವೇನಾಗಬೇಕು; ಅದು ಅಖಿಲ ಕರ್ನಾಟಕದ ವಿಶ್ವವಿದ್ಯಾನಿಲಯವಾದರೆ ಅದಕ್ಕೆ ಹೆಚ್ಚಿನ ವೈಶಿಷ್ಟ್ಯ ಬಂದೀತಲ್ಲವೆ; ಹಾಗಾದರೆ ಅದರಲ್ಲಿ ಯಾವ ಬಗೆಯ ಪ್ರೌಢ ವ್ಯಾಸಂಗಕ್ಕೆ ಮಹತ್ವ ಕೊಟ್ಟು ಕನ್ನಡ ನಾಡ ಕೀರ್ತಿ ಬೆಳಗಬೇಕು; ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ವರ್ಚಸ್ಸು ಮೈಸೂರು ವಿಶ್ವವಿದ್ಯಾನಿಲಯದ ಮೂಲಕ ಹೇಗೆ ಹೊರಗೆಲ್ಲ ಬೆಳಗಬೇಕು – ಎಂಬಿವೇ ಮುಂತಾದ ಹಲವು ಪ್ರಶ್ನೆಗಳನ್ನು ಪರ್ಯಾಲೋಚಿಸಬೇಕಾಗುತ್ತದೆ.

ಪ್ರಶಸ್ತಿ ಪಡೆದ ವಿದ್ಯಾರ್ಥಿಗಳು ಮುಂದೆ ಏನುಮಾಡಬೇಕೆಂಬ ಬಗ್ಗೆ ಸರ್ ಮಿರ್ಜಾ ಅವರು ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸ ಮಾಡಿರುವವರು ಹಳ್ಳಿಗಳಿಗೆ ಹೋಗಿ, ಹಳ್ಳಿಯವರೊಡನೆ ಬೆರೆತು, ಶಾಸ್ತ್ರೀಯವಾದ ವ್ಯವಸಾಯ ಕ್ರಮವನ್ನು ಅವರಿಗೆ ತಿಳಿಯ ಹೇಳಿ, ಹಳ್ಳಿಯವರೊಡನೆ ತಾವೂ ವ್ಯವಸಾಯ ವೃತ್ತಿಯನ್ನು ಅವಲಂಬಿಸಬಹುದು; ಮತ್ತು ವಿಶ್ವವಿದ್ಯಾನಿಲಯದ ಪ್ರಶಸ್ತಿ ಪಡೆದ ಪ್ರತಿಯೊಬ್ಬ ವಿದ್ಯಾರ್ಥಿಯೂ ಗ್ರಾಮಸೇವೆ ಮಾಡಬೇಕು; ವಿಶ್ವವಿದ್ಯಾನಿಲಯ ಗ್ರಾಮಸೇವೆಯ ವ್ಯವಸ್ಥೆ ಮಾಡಬೇಕು; ಸರ್ಕಾರ ಇದಕ್ಕೆ ತಕ್ಕ ಸಹಾಯ ಕೊಡಬೇಕು–ಇವೇ ಆ ಸಲಹೆಗಳು. ಈ ಸಲಹೆಗಳ ಮೇರೆಗೆ ವಿದ್ಯಾವಂತರಾದ ತರುಣರು ಹಳ್ಳಿಗಳಿಗೆ ಹೋಗಿ ನೆಲಸಬೇಕಾದ ಸಂದರ್ಭ ಬಂದಾಗ ಅವರೆಲ್ಲ ಒಟ್ಟು ಸೇರಿ ಒಂದು ವ್ಯವಸ್ಥಿತವಾದ ರೀತಿಯಲ್ಲಿ ಮಾಡಬಹುದಾದ ಮತ್ತೊಂದು ದೊಡ್ಡ ಸೇವೆ ಎಂದರೆ–ಮೊದಲು, ಹಳ್ಳಿಗರಿಗೆ ತಾಯ್‌ನುಡಿಯ ಅಕ್ಷರ ಕಲಿಸಿಕೊಟ್ಟು ಅವರ ಅನಕ್ಷರತೆ ತೊಲಗಿಸುವುದು; ಆಮೇಲೆ, ತಾವು ಕಲಿತ ತಿಳಿವನ್ನು ಸಾಧ್ಯವಾದಮಟ್ಟಿಗೆ ಅವರಿಗೂ ನೀಡುವುದು; ಈ ಮೂಲಕ ನುಡಿ ಸೇವೆ ಮಾಡುವುದು. ಈ ಬಗೆಯ ನುಡಿ ಸೇವೆಯೂ ಪರಿಣಾಮದಲ್ಲಿ ಗ್ರಾಮಸೇವೆಯೇ.

ಕೊನೆಯಲ್ಲಿ ಸರ್ ಮಿರ್ಜಾ ಅವರು ಹೊಸದಾಗಿ ಪ್ರಶಸ್ತಿ ಪಡೆದಿರುವವರಿಗೆ ಕೊಟ್ಟ ಬುದ್ಧಿವಾದದ ತಿರುಳೆಂದರೆ, ಅನ್ಯಮತ ಸಹಿಷ್ಣುತೆ ಮತ್ತು ಐಕಮತ್ಯ. ಈ ಬುದ್ಧಿವಾದ ವಿದ್ಯಾರ್ಥಿಗಳಿಗೆ ಮಾತ್ರ ಕೊಟ್ಟಿರುವುದಾದರೂ ಸಮಸ್ತ ಕಾರ್ಯಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರೂ ಅದನ್ನು ಅನುಸರಿಸಬೇಕಾಗಿದೆ. ನಮ್ಮ ರಾಜರ್ಷಿಗಳಾದ ಶ್ರೀಮನ್ಮಹಾರಾಜರವರೂ, ಮಂತ್ರಿವರ್ಯರಾದ ಸರ್ ಮಿರ್ಜಾ ಅವರೂ ಅದನ್ನು ನುಡಿದಂತೆ ನಡೆದು ತೋರಿಸುತ್ತಿದ್ದಾರೆ. ಸರ್ವಮತೀಯರಿಗೂ ಪ್ರೀತಿಪಾತ್ರರಾಗಿದ್ದಾರೆ.

ಸರ್ ಮಿರ್ಜಾ ಅವರು ಕಲ್ಕತ್ತೆಯ ಮುಸ್ಲಿಮ್ ವಿದ್ಯಾರ್ಥಿಗಳ ಸಂಘದಲ್ಲಿ ಭಾಷಣ ಮಾಡುತ್ತ, ವಿದ್ಯಾರ್ಥಿಗಳನ್ನು ಸಂಬೋಧಿಸಿ ಹೀಗೆ ಹೇಳಿದ್ದಾರೆ:

"ಬಂಗಾಳದಲ್ಲಿ ನೀವು ನಿಮ್ಮಲ್ಲೂ ನಿಮ್ಮ ಹಿಂದೂ ಸಹೋದರರಲ್ಲೂ ಒಕ್ಕಟ್ಟನ್ನು ಬೆಳಸಿಕೊಳ್ಳಲು ಬಹಳ ಸಹಾಯಕಾರಿಯಾದ ಸನ್ನಿವೇಶವಿದೆ; ಅದು ಏನೆಂದರೆ, ಭಾಷೆಯ

ಅಡ್ಡಕಟ್ಟು ಇಲ್ಲದಿರುವುದು. ವಿಶ್ವಪ್ರಸಿದ್ಧ ಕವಿಗಳಾದ ಡಾ|| ರವೀಂದ್ರನಾಥ ಠಾಕೂರರ ಪ್ರತಿಭೆಯಿಂದ ಪುಷ್ಟಿಗೊಂಡ ಒಂದು ಭಾಷೆಯಲ್ಲಿ ನೀವೆಲ್ಲ ಸಮಾನಭಕ್ತಿಯುಳ್ಳವರಾಗಿದ್ದೀರಿ. ಸರ್ವಸಮಾನವಾದ ತಾಯ್ನುಡಿ, ಸರ್ವಸಮಾನವಾದ ಆರ್ಥಿಕ ಹಿತಗಳು, ಮತ್ತು ಸರ್ವಸಾಮರಸ್ಯವುಳ್ಳ ಸಂಸ್ಕೃತಿ—ಇವುಗಳ ಅಸ್ತಿವಾರದ ಮೇಲೆ ಕೋಮುಗಳ ಪರಸ್ಪರ ಸೌಹಾರ್ದಸೌಧವನ್ನು ನೀವು ನಿರ್ಮಿಸಬಹುದು; ಅದನ್ನು ಯಾವ ಆವೇಶೋದ್ರೇಕದ ಬಿರುಗಾಳಿಯ ಹೊಡೆತಗಳೂ ಕದಲಿಸಲಾರವು."

ಕನ್ನಡ ನಾಡ ನುಡಿಯ ಏಕೀಕರಣಕ್ಕಾಗಿ ಶ್ರಮಿಸುತ್ತಿರುವ ಈ ಸಂದರ್ಭದಲ್ಲಿ, ಮೇಲಿನ ವಾಕ್ಯದ ಸತ್ಯವನ್ನು ಕನ್ನಡಿಗರಾದ ನಾವು ಬೇಗ ಮನಗಂಡುಕೊಳ್ಳಬೇಕಾಗಿದೆ. ಮುಸಲ್ಮಾನರೇ ಆಗಲಿ, ಹಿಂದುಗಳೇ ಆಗಲಿ, ಯಾವ ಕೋಮಿಗೇ ಸೇರಿರಲಿ, ಮನೆಯಲ್ಲಿ ಯಾವ ಮಾತನ್ನೇ ಆಡುತ್ತಿರಲಿ, ಕನ್ನಡ ನಾಡಿನಲ್ಲಿ ನೆಲಸಿರುವವರೆಲ್ಲ ನಾವು ಕನ್ನಡಿಗರು ಎಂಬ ಭಾವನೆ ತಂದುಕೊಂಡು, ಕನ್ನಡ ನಾಡಿನ ನುಡಿ, ಸಾಹಿತ್ಯ, ಕಲೆ, ಸಂಸ್ಕೃತಿ ಇವುಗಳಲ್ಲಿ ಅಭಿಮಾನ ತೋರಿಸುತ್ತ, ಕನ್ನಡ ತಾಯ ಮಕ್ಕಳಾದ ನಾವೆಲ್ಲ ಒಂದೇ ಮನೆಯವರು ಎಂದು ಎಣಿಸಿ ತಮ್ಮ ಮನೆಯ ಕಾವಲು ನಿಂತು ಅದನ್ನು ಬೆಳಗುತ್ತ ಬಂದರೆ, ಒಂದೇ ನುಡಿಯ ಮತ್ತು ಒಂದೇ ಮನದ ಬೆಸುಗೆಯಿಂದ ಬೆಸೆದ ನಾಡು ಒಂದುಗೂಡಿದಂತೆ ಆಗುವುದಿಲ್ಲವೆ? ಇದೇ ನಿಜವಾದ ಏಕೀಕರಣ; ಇದು ಬೇಗನೆ ಸಿದ್ಧಿಸಿ ಕರ್ನಾಟಕ ಪ್ರಾಂತ ಇತರ ಪ್ರಾಂತಗಳಿಗೆ ಮಾದರಿಯಾಗಲಿ.

---

## ಕವೀಂದ್ರ ರವೀಂದ್ರರಿಗೆ ಸನ್ಮಾನ

ಶ್ರೇಷ್ಠ ಬಂಗಾಳಿ ಸಾಹಿತಿಗಳೂ ಜಗನ್ಮಾನ್ಯ ಕವಿಗಳೂ ಆದ ಶ್ರೀ ರವೀಂದ್ರನಾಥ ಠಾಕೂರರಿಗೆ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದವರು 'ಡಾಕ್ಟರ್ ಆಫ್ ಲಿಟರೇಚರ್' (ಸಾಹಿತ್ಯ ವಿಶಾರದ) ಎಂಬ ಪ್ರಶಸ್ತಿಯನ್ನು ಕೊಟ್ಟಿರುವರೆಂದು ಕೇಳಿ ಹರ್ಷಿಸುತ್ತೇವೆ. ಇದು ಇಡಿಯ ಭರತಖಂಡಕ್ಕೆ ದೊರೆತ ದೊಡ್ಡ ಗೌರವ. ನಾಡಿಗೆ ಈ ಗೌರವ ತಂದ ಕವಿವರ್ಯರನ್ನು ಅಭಿನಂದಿಸುತ್ತೇವೆ, ಅಭಿವಂದಿಸುತ್ತೇವೆ.

---

## ಜಮುಖಂಡಿಯಲ್ಲಿ ಕನ್ನಡ

ಜಮುಖಂಡಿ ಸಂಸ್ಥಾನದಲ್ಲಿ ಬರಲಿರುವ ಆಡಳಿತ ಸುಧಾರಣೆಗಳ ಸಂಬಂಧವಾಗಿ ಆಡಳಿತ ಭಾಷೆ ಯಾವುದಿರಬೇಕು, ಆ ಭಾಷೆಯ ಲಿಪಿ ಯಾವುದಿರಬೇಕು ಎಂಬ ಬಗ್ಗೆ ಸಾಕ್ಷಿಗಳನ್ನು ಕೇಳುವ ಕೆಲಸ ಸಾಗುತ್ತಿದೆಯೆಂದು ಹೇಳಿ, ಈ ಸಂಬಂಧದ ಪ್ರಶ್ನೆಗಳ ಸಾಧಕ ಬಾಧಕಗಳನ್ನು ಚರ್ಚಿಸಿ, ಸಂಸ್ಥಾನದ ಕನ್ನಡಿಗರಿಗೆ ಕೆಲವು ಎಚ್ಚರಿಕೆಯ ಮಾತುಗಳನ್ನಾಡಿ ಶ್ರೀ ಶಂ. ಬಾ. ಜೋಶಿಯವರು 'ಸಂಯುಕ್ತ ಕರ್ನಾಟಕ'ದಲ್ಲಿ ಒಂದು ಲೇಖನ ಬರೆದಿದ್ದಾರೆ. ಈ ಲೇಖನದ ಸಾರಾಂಶವನ್ನು ಕಳೆದ ಸಂಚಿಕೆಯಲ್ಲಿ ಕೊಟ್ಟಿದ್ದೇವೆ.

ಶ್ರೀ ಜೋಶಿಯವರು ಹೇಳುವಂತೆ ೧೦೦ಕ್ಕೆ ೯೫ ಮಂದಿಯಂತೆ ಕನ್ನಡಿಗರಿರುವ ಜಮುಖಂಡಿ ಸಂಸ್ಥಾನದ ಓಲಗದ ಭಾಷೆ ಯಾವುದಿರಬೇಕೆಂದು ಸಾಕ್ಷಿ ಕೇಳುವ ಆವಶ್ಯಕತೆಯೇ ಇಲ್ಲ. ಆದರೂ ಸಾಕ್ಷಿ ಕೇಳುವ ಕೆಲಸ ಸಾಗುತ್ತಿದೆಯಂತೆ. ಈ ಸಂದರ್ಭದಲ್ಲಿ ಅಲ್ಲಿನ ಕನ್ನಡಿಗರಾರೂ ಕನ್ನಡಕ್ಕೆ ಎರಡು ಬಗೆಯಲಾರರೆಂದು ನಾವು ನಂಬಿದ್ದೇವೆ. ದರ್ಬಾರಿನವರೂ ಸರ್ಕಾರದ ಅಧಿಕಾರಿಗಳೂ ಸಹ ಸಾಕ್ಷ್ಯಗಳ ವಿಚಾರ ಬಿಟ್ಟು ಎರಡನೆಯ ಯೋಚನೆಯಿಲ್ಲದೆ ಕನ್ನಡವನ್ನೇ ಓಲಗದ ಭಾಷೆಯಾಗಿ ಇಟ್ಟುಕೊಳ್ಳುವರೆಂದು ಭರವಸೆಯುಳ್ಳವರಾಗಿದ್ದೇವೆ. ಪ್ರಜೆಗಳ ಭಾಷೆಯೇ ರಾಜಭಾಷೆಯೆಂಬುದು ಸ್ವತಸ್ಸಿದ್ಧವಲ್ಲವೇ?

ಇನ್ನು ಲಿಪಿಯ ವಿಚಾರ: ಕನ್ನಡ ಆಡಳಿತ ಭಾಷೆಯದ ಮೇಲೆ ಕನ್ನಡದ ಲಿಪಿ ಈಗ ಕನ್ನಡ ನಾಡಿನಲ್ಲೆಲ್ಲ ಬಳಕೆಯಲ್ಲಿರುವ ಕನ್ನಡ ಲಿಪಿಯೇ ಆಗಿರಬೇಕು. ಅಖಿಲ ಭಾರತಕ್ಕೆಲ್ಲ ಒಂದು ಲಿಪಿ ಆಗುವ ಪ್ರಸಂಗ ಬಂದರೆ ಆಗ ಕನ್ನಡದ ಲಿಪಿ ಆ ಅಖಿಲ ಭಾರತ ಲಿಪಿಯೇ ಆದೀತು. ಆ ಅಖಿಲ ಭಾರತ ಲಿಪಿ ಯಾವುದೆಂದು ನಿಷ್ಕರ್ಷೆಯಾಗಿ, ಎಲ್ಲ ಪ್ರಾಂತ ಭಾಷೆಗಳೂ ಅದನ್ನು ಅಂಗೀಕರಿಸುವ ವೇಳೆಗೆ ಕನ್ನಡ ನಾಡು ಒಂದು ಮಾತ್ರ ಮುಖ ತಿರುಗಿಸಿಕೊಳ್ಳುವುದೆಂದು ಯಾರೂ ಹೇಳಲಾರರು. ಈ ಭವಿಷ್ಯ ಪುರಾಣದ ಚರ್ಚೆ ಈಗ ಬೇಕಿಲ್ಲ. ಜಮುಖಂಡಿಯಲ್ಲಿ ಕನ್ನಡಕ್ಕೆ ಬೇರೊಂದು (ನಾಗರಿ) ಲಿಪಿಯನ್ನು ಹೇರುವುದರಿಂದ, ಅಲ್ಲಿನ ಅಲ್ಪ ಸ್ವಲ್ಪ ಕನ್ನಡದ ಮುನ್ನಡೆ ಹಿಮ್ಮೆಟ್ಟಬೇಕಾಗುತ್ತದೆ; ಜಮಖಂಡಿ ಕನ್ನಡ ನಾಡಿನಿಂದ ಹೋಳಾಗುವ ಪ್ರಸಂಗ ಬರುತ್ತದೆ. ಅಲ್ಲಿನ ಕನ್ನಡಿಗರ ಕನ್ನಡತನಕ್ಕೆ ಸಂಚಕಾರ ಬರುತ್ತದೆ. ಈ ಶೋಚನೀಯ ಸ್ಥಿತಿಗೆ ಅವಕಾಶವಾಗದಂತೆ ನಡೆದುಕೊಳ್ಳಬೇಕೆಂದು ಜಮುಖಂಡಿಯ ಕನ್ನಡಿಗರಲ್ಲಿ ಬಿನ್ನಹಮಾಡಿಕೊಳ್ಳುತ್ತೇವೆ. ಓಲಗದ ಭಾಷೆ ಕನ್ನಡವಾಗಿದ್ದು ಅದನ್ನು ಕನ್ನಡ ಲಿಪಿಯಲ್ಲಿ ಅಲ್ಲದೆ ಬೇರೊಂದು ಲಿಪಿಯಲ್ಲಿ ಬರೆಯುವ ಕಲ್ಪನೆಯನ್ನು ಮಾಡಬಾರದೆಂದು ಜಮುಖಂಡಿಯ ದರ್ಬಾರಿನವರನ್ನೂ ಸರ್ಕಾರದವರನ್ನೂ ವಿನಯದಿಂದ ಬೇಡಿಕೊಳ್ಳುತ್ತೇವೆ.

ಕನ್ನಡ ಲಿಪಿಯನ್ನು ಅರಿತ ಕನ್ನಡಿಗನು ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿಗಳೊಡನೆ ಹೊಂದಿಕೊಳ್ಳಬಲ್ಲನು. ಹೊರಗಿನ ಪುಸ್ತಕ ಮತ್ತು ಪತ್ರಿಕೆಗಳ ಪ್ರಪಂಚದಲ್ಲಿ ಓಡಾಡಬಲ್ಲನು. ತನ್ನ ಲೇಖನಗಳಲ್ಲಿ ಅಭಿಪ್ರಾಯಗಳನ್ನು ತನ್ನ ಇಡಿಯ ಕನ್ನಡನಾಡಿನ ಅಣ್ಣತಮ್ಮಂದಿರಲ್ಲಿ ಹೇಳಿಕೊಳ್ಳಬಲ್ಲನು. ಈ ಒಕ್ಕಟ್ಟನ್ನು ಮುರಿಯಬೇಕಾದರೆ ಕನ್ನಡ ಲಿಪಿಯನ್ನು ಬೇಕೆಂದು ಬಿಟ್ಟು ಬೇರೆ ಲಿಪಿಯನ್ನು ಹಿಡಿಯಬೇಕು. ಈ ಭೇದನೀತಿಯನ್ನು ಕನ್ನಡಿಗರು ಒಪ್ಪುವರೋ, ಅದಕ್ಕೆ ಬೆಂಬಲ ಕೊಡಬಹುದೋ?

ಈಗ್ಗೆ ೪ ವರ್ಷದ ಕೆಳಗೆ ಪರಿಷತ್ತು ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಲಿಪಿಸಂಸ್ಕರಣ ಸಮ್ಮೇಳನವನ್ನು ಸೇರಿಸಿದ್ದಿತು. ಆಗ ಕೂಲಂಕಷ ಚರ್ಚೆಯಾಗಿ, ಕನ್ನಡಕ್ಕೆ ಒಂದೆರಡು ಸುಲಭವಾದ ಸುಧಾರಣೆಗಳನ್ನು ಮಾಡಿ ಈಗಿರುವ ಕನ್ನಡ ಲಿಪಿಯನ್ನೇ ಇಟ್ಟುಕೊಳ್ಳಬೇಕೆಂದೂ ದೇವನಾಗರಿ ಲಿಪಿಯಾಗಲಿ ಬೇರೆ ಯಾವ ಲಿಪಿಯಾಗಲಿ ಹೊಂದುವುದಿಲ್ಲವೆಂದೂ ನಿರ್ಣಯವಾಯಿತು.

ಆ ನಿರ್ಣಯಗಳು ಯಾವುವೆಂದರೆ:

೧. ರೋಮನ್ (ಇಂಗ್ಲಿಷ್) ಲಿಪಿಯನ್ನು ಕನ್ನಡಕ್ಕೆ ಸ್ವೀಕರಿಸುವುದು ಈ ಸಮ್ಮೇಳನಕ್ಕೆ ಯುಕ್ತವಾಗಿ ಕಾಣುವುದಿಲ್ಲ.

೨. ದೇವನಾಗರಿ ಲಿಪಿಯನ್ನೇ ಆಗಲಿ ಸ್ವೀಕರಿಸುವುದು ಯುಕ್ತವಾಗಿ ಕಾಣುವುದಿಲ್ಲ.

೩. ಈಗಿನ ಕನ್ನಡ ಲಿಪಿಯಲ್ಲಿಯೇ ಭಾರತೀಯ ಕ್ರಮವನ್ನು ತಳಹದಿಯಾಗಿ ಇಟ್ಟುಕೊಂಡು ಆವಶ್ಯಕವಾದ ಎಡೆಗಳಲ್ಲಿ ಇತರ ಕ್ರಮಗಳನ್ನು ಅನುಸರಿಸಿ ಸಂಸ್ಕರಣ ಮಾಡಿಕೊಳ್ಳತಕ್ಕದ್ದು.

ವಿದ್ವಾಂಸರೂ, ಪತ್ರಿಕಾಕರ್ತರೂ, ಮುದ್ರಣಾಲಯದವರೂ, ವಿದ್ಯಾ ಇಲಾಖೆಯ ಅಧಿಕಾರಿಗಳೂ ಸೇರಿ ವಿಧಾಯಕ ಮಾಡಿದ ಈ ನಿರ್ಣಯದ ಬಲವನ್ನು ಕನ್ನಡಿಗರು ಯಾರೂ ತೆಗೆದುಹಾಕಲಾರರು. ತಮ್ಮ ಹಿಂದಿನ ಮತ್ತು ಇಂದಿನ ಸಂಸ್ಕೃತಿ ಪದ್ಧತಿಗಳನ್ನು ಅನಾವಶ್ಯಕವಾಗಿ, ಯಾವ ಕಾರಣವೂ ಇಲ್ಲದೆ, ಮುರಿಯಲಾರರು. ಜಮುಖಂಡಿಯ ಸರ್ಕಾರದವರು ಈ ಎಲ್ಲ ಅಂಶಗಳಿಗೂ ಗಮನಕೊಟ್ಟು ಕನ್ನಡ ಲಿಪಿಯನ್ನೇ ಸ್ವೀಕರಿಸುವರೆಂದು ನಾವು ನಂಬುತ್ತೇವೆ.

# ಶ್ರೀನಿವಾಸರ ಸಾಹಿತ್ಯದ ವೈಶಿಷ್ಟ್ಯ

ಬರೆದವರು : ಶ್ರೀಮತಿ ಶಾಂತಾದೇವಿ ಮಾಳವಾಡ, ಧಾರವಾಡ.

ಸಣ್ಣಕತೆಗಳ ಜನಕರೆಂದು ಹೆಸರು ಪಡೆದಿರುವ 'ಶ್ರೀನಿವಾಸ'ರ ಎಂದರೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಬರಹದ ಶೈಲಿಯಲ್ಲಿ ಹೃದಯಾಕರ್ಷಕ ಶಕ್ತಿ ಇರುತ್ತದೆ. ಅವರ ಯಾವ ಒಂದು ಕತೆಯನ್ನಾಗಲಿ, ಕಾವ್ಯವನ್ನಾಗಲಿ, ನಾಟಕವನ್ನಾಗಲಿ ಓದತೊಡಗಿದಾಗ ನಮ್ಮ ಸಂಸಾರದಲ್ಲಿಯ ಸುಖದುಃಖಗಳನ್ನು ಮರೆತು, ಅವರ ಬರಹದಲ್ಲಿಯ ವ್ಯಕ್ತಿಗಳ ಸುಖದುಃಖಗಳಲ್ಲಿ ಪಾಲುಗಾರರಾಗಬೇಕಾಗುತ್ತದೆ. ಇಂಥ ಒಂದು ಶೈಲಿ ಅವರ ಬರಹದಲ್ಲಿದ್ದಂತೆ ಮಾತಿನಲ್ಲಿಯೂ ಇದೆ ಎಂಬುದನ್ನು ಅವರೊಡನೆ ಮಾತನಾಡಿದವರು ಒಪ್ಪದೆ ಇರಲಾರರು. ನಾವು ಪ್ರತಿದಿವಸ ನಮ್ಮ ಜೀವನದಲ್ಲಿ ಕಾಣುವ ದೃಶ್ಯಗಳನ್ನೇ ಅವರು ಸುಂದರವಾಗಿ, ಸರಳವಾಗಿ, ಅರ್ಥಗರ್ಭಿತವಾಗಿ ಚಿತ್ರಿಸಬಲ್ಲರು.

ಅವರು ಐತಿಹಾಸಿಕ ಪೌರಾಣಿಕ ಸಾಮಾಜಿಕ ಕತೆ-ಕಾವ್ಯ-ನಾಟಕ ಮುಂತಾದುವನ್ನು ಬರೆದಿದ್ದಾರೆ. ಅವುಗಳಲ್ಲಿ ಆದರ್ಶ ರಸಿಕತೆಯೂ ಉಚ್ಚಶೃಂಗಾರವೂ ತುಂಬಿ ಹರಿಯುತ್ತವೆ.

ಮೊನ್ನೆ ನಡೆದ ಇಪ್ಪತ್ತನಾಲ್ಕನೆಯ ಸಾಹಿತ್ಯ ಸಮ್ಮೇಲದಲ್ಲಿ ಮಾಸ್ತಿಯವರು 'ಚಿಕ್ಕಮಲ್ಲಮ್ಮ' ಎಂಬ ಸುಂದರವಾದ ಕವನವನ್ನು ಓದಿ ಹೇಳಿದರು. ಅದರ ಸಾರಾಂಶ ಹೀಗಿದೆ :

ಕನ್ನಡ ನಾಡಿನಲ್ಲಿ ಮಲ್ಲಮ್ಮನೆಂಬ ಅತಿ ಚೆಲುವೆಯಾದ ಹೆಣ್ಣು ಮಗಳಿದ್ದಳು. ಅವಳಿಗೊಂದು ಕೂಸು ಇತ್ತು. ಅವಳು 'ಒಳ್ಳೆಯ ಮಗಳು; ಒಳ್ಳೆಯ ಗೆಳತಿ; ಒಳ್ಳೆಯ ಸೊಸೆ; ಒಳ್ಳೆಯ ಹೆಂಡತಿ; 'ಚೆಲವು ಹೆಚ್ಚೋ ಗುಣ ಹೆಚ್ಚೋ' ಎನ್ನುವಂತೆ ಎಲ್ಲರಿಗೂ ಮೆಚ್ಚಿನವಳಾಗಿದ್ದಳು. ಅವಳನ್ನು ಪುಂಡರು ಒಯ್ದು ಕೆಡಿಸಿದರು. ಅವಳ ಮನೆಯವರೆಲ್ಲಾ ಆಕೆಯ ಸಲುವಾಗಿ ಹಂಬಲಿಸುತ್ತಿರುವಾಗ ಕೊನೆಗೆ ಒಂದು ದಿವಸ ಬೆಳಗ್ಗೆ ತನ್ನ ಮನೆಯ ಮುಂದೆ ಬಂದು ಬಿದ್ದಳು. ಆಗ ಎಲ್ಲರೂ 'ಒಳಗೆ ಬಾ' ಎಂದು ಕರೆಯಲು 'ಒಲ್ಲೆ' ಎಂದು ನುಡಿದು ಹೊಲಸಾದ ತನ್ನ ಮೈಯನ್ನು ಸಂಜೆಯ ಮೊದಲೆ ಸುಡಬೇಕೆಂದು ಹಟ ಹಿಡಿದು, ಯಾರು ಎಷ್ಟು ಬೇಡವೆಂದರೂ ಒಪ್ಪದೆ, ಅವರಿಗೆ ಹೀಗೆ ಹೇಳಿದಳು :

'ಬಲ್ಲ ನಿಮಗೆ ನಾ ಹೇಳುವಳಲ್ಲ;
ಭಂಡರೆಂಜಲಿನ ಒಡಲನು ನನ್ನ ಗಂಡಗೆ ಬಡಿಸಲು ಒಲ್ಲದು ನನಗೆ;
ಹೆಂಡ ಸೋಕಿದ ಭಾಂಡದಿ ದೇವರು ದಿಂಡರ ಹಾಲನು ಇರಿಸೆನು ನಾನು.
ಅಂಬಲಿ ಉಂಡು ಎಸೆದ ಹಾಳೆಯಲಿ ತಂಬಿಟ್ಟಡುವೆನು ದೇವರ ಮುಂದೆ;
ಭಂಡ ಬಾಳ ಬಾಳೆನು, ಈ ಒಡಲನು ಕೊಂಡದಿ ಬಿಂಕಿಗೆ ಕೊಡುವೆನು' ಎಂದಳು
ಮಲ್ಲಮ್ಮಾ ಮಲ್ಲಮ್ಮಾ ಬಲ್ಲ ಹೆಣ್ಣು ನೀ ಮಲ್ಲಮ್ಮಾ.

ಕೊನೆಗೆ ಅವಳು ಬೆಂಕಿಗೆ ಆಹುತಿಯಾದಳು. ಅವಳ ಹೆಸರು ಉಳಿಸುವದಕ್ಕಾಗಿ ಒಂದು ಪ್ರತಿಮೆ ಸಿದ್ಧವಾಗುತ್ತದೆ.

ಈ ಪುಟ್ಟ ಕಾವ್ಯ ಹನ್ನೆರಡು ಪುಟದ್ದಿದೆ. ಹೃದಯವಿದ್ರಾವಕವಾದ ಈ ಕವಿತೆಯನ್ನು ಅಂದು ಶ್ರೀ ಮಾಸ್ತಿಯವರು ಓದಿ ಹೇಳುತ್ತಿರುವಾಗ ಎಲ್ಲರ ಕಣ್ಣಿನಲ್ಲೂ ನೀರು ಹರಿಯಿತು.

"ಜೀವನ" ಪತ್ರಿಕೆಯ ಜನವರಿ ಸಂಚಿಕೆಯಲ್ಲಿ ಮಾಸ್ತಿಯವರ 'ಗೌಡರ ಮಲ್ಲಿ' ಎಂಬ ಕವನ ಪ್ರಕಟವಾಗಿದೆ.

ಅದರ ಕತೆ :

ಮಲ್ಲಿ ಎಂಬ ಮದುವೆಯಾಗದ ಬೇಡರ ತರುಣಿಯನ್ನು, ಹೆಂಡತಿಯನ್ನು ಕಳೆದುಕೊಂಡ ಆ ಊರ ಗೌಡ ಮೋಹಿಸುತ್ತಾನೆ. ಮುಂದೆ ಮಲ್ಲಿ ಗೌಡರ ಮನೆಯಲ್ಲೇ ಇರುತ್ತಾಳೆ. ಅವಳು 'ಮದುವೆಯಾದವಳು ಗಂಡನಿಗೆ ಕೊಡುವ ಎಲ್ಲ ಸುಖ ಮದುವೆ ಆಗದ ಮಲ್ಲಿ ತನ್ನರಸಗೆ ಇತ್ತಳು'. ಅಷ್ಟಲ್ಲದೆ ಅವಳು ತನ್ನ ಸದ್ಗುಣಗಳಿಂದ ಊರವರಿಗೆ ಮನೆಯವರಿಗೆ ಬಹಳ ಪ್ರೀತಿಯವಳಾಗುವಳು. ಐವತ್ತು ವರುಷ ಗೌಡ ಮಲ್ಲಿ ಬಹಳ ಪ್ರೇಮದಿಂದ ಇರುತ್ತಾರೆ. ಮುಂದೆ ಗೌಡ ಸಾಯುವನು. ಸಾಯುವ ಮೊದಲು ಮಲ್ಲಿ ಗೌಡನಿಗೆ ಹೀಗೆ ಹೇಳುತ್ತಾಳೆ :

"ನೀನೀಗ ಹೋಗುತಿಹೆ; ಹಿಂದೆಯೇ ನಾ ಬರುವೆ.
ಹೋದವನು ನನ್ನ ಮರೆಯುವದು ಸಲ್ಲ,
ಕೈಹಿಡಿದು ಹೋದವಳು ಅಲ್ಲಿಹಳು, ಸೇರುವಳು ಆದರೂ ನೆನವಿರಲಿ ಬಡವಿ ಮಲ್ಲಿ.
ಇಲ್ಲಿ ದಿನ ಮುಗಿದು ನಾ ಸನ್ನಿಧಿಗೆ ಬಂದಂದು ಪರಿವಾರದವರು
ಇವಳಾರ ಹೆಣ್ಣು? ಎಂದು ಕೇಳುವ ಮೊದಲೆ ಎನ್ನವಳು
ಎನಬೇಕು ಗಂಡಿಂತು ನುಡಿವುದು ಅಪಾರ ಚೆನ್ನು"

ಕೆಲವು ದಿವಸಗಳ ಮೇಲೆ ಅವಳೂ ಸಾಯುವಳು. ಮುಂದೆ ಊರವರೆಲ್ಲ ಮಾನವಮಿ, ದೀವಳಿಗೆಗಳಲ್ಲಿ ಗೌಡ ಮಲ್ಲಿಯರ ಹೆಸರಿನಲ್ಲಿ ದೀಪ ಹಚ್ಚುತ್ತಾರೆ.

ಈ ಎರಡು ಕವನಗಳಲ್ಲಿ ಮಾಸ್ತಿಯವರ ಸಾಮಾಜಿಕ ಭಾವನೆಗಳು ಎಷ್ಟು ಉಚ್ಚವಾಗಿವೆಯೆಂಬುದನ್ನು ಅರಿಯಬಹುದು. 'ಚಿಕ್ಕಮಲ್ಲಮ್ಮ'ನಲ್ಲಿ ಪಾತಿವ್ರತ್ಯವೇ ಸ್ತ್ರೀಯರ ಜೀವಾಳವೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಆ ಪದ್ಯವನ್ನು ಓದಿದರೆ ಹೆಂಗಸು ದೃಢ ಪ್ರತಿಜ್ಞೆಯ, ಮೃದು ಹೃದಯದ ಮೂರ್ತಿ; ಒಂದು ಪೂಜ್ಯ ವಸ್ತು ಎನ್ನಿಸುತ್ತದೆ. ಅದರಂತೆಯೇ 'ಗೌಡರ ಮಲ್ಲಿ'ಯಲ್ಲಿ, ಉದಾರ ಜೀವನದ ಆದರ್ಶ ಪ್ರೇಮ ಕಾಣುತ್ತದೆ. ಪ್ರೇಮ ಕೇವಲ ಇಹಲೋಕದ ಸುಖಕ್ಕೆ ಸಾಧನ ಮಾತ್ರ ಆಗಿರದೆ ಪರಲೋಕದ ಸುಖಕ್ಕೂ ಸಾಧನವಾಗಿದೆ ಎಂದು ಚಿತ್ರಿಸಿದ್ದಾರೆ.

'ನಿಜಗಲ್ಲಿನ ರಾಣಿ' ಎಂಬ ಐತಿಹಾಸಿಕ ಕತೆಯಲ್ಲಿ ನಿಜಗಲ್ಲಿನ ಚಿಕ್ಕರಾಣಿ ಗಿರಿಜವ್ವೆಯನ್ನು ಮಾನ, ಧೈರ್ಯ, ಸ್ಥೈರ್ಯಗಳ ಮೂರ್ತಿಯನ್ನಾಗಿ ಮಾಡಿದ್ದಾರೆ.

"ಅರುಣ" ಎಂಬ ಅವರ ಕವನ ಸಂಗ್ರಹದಲ್ಲಿನ 'ಅಭಿಮನ್ಯು' ಎಂಬ ಕವನದಲ್ಲಿ ಕಾಳಗದಲ್ಲಿ ಅಭಿಮನ್ಯು ಮಡಿದನೆಂಬುದನ್ನು ಕೇಳಿದಾಗ ಸುಭದ್ರೆ ಹೇಳುವ ಮಾತು ಹೀಗಿದೆ :

ಹಾ ಕಂದ ಪೋದೆಯಾ ಬಾಳ್ವೆ ನಿನ್ನೆಂತುಟೋ,
ಏಕೆ ನೀಂ ರಣಕೈದಿದ್ಯೆ ಬೇಡವೆಂದೊಡೆಯು
ಮಾಕೆವಾಳ್ತನವ ಸಾಯದಿರೆ ಜನ ಪೊಗಳದೇ ಪೋಗದೇ ಬೇರೆ ಸೇನೆ.
ಹಾ ಕುವರ ಬಾಲ್ಯದೊಳ್ ಮಡಿಯಲೆನ್ನ ದರದೊಳ
ದೇಕೆ ಜನಿಸಿದೆ ಶೋಕಸಾಗರದೊಳಾಳೆಂದು
ನೂಕಿದೆಯ ತಾಯನೆನ್ನಯ್ಯ ನೀ ಪೋದೆಯಾ ಬಾಳಿಲೇ ನಾನೆಂದಳು.

ಇದರಲ್ಲಿ ಅವರು ಶೋಕರಸವನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಹೆಣ್ಣುಮಕ್ಕಳು ದುಃಖವಾರ್ತೆಯನ್ನು ಕೇಳಿ, ನೆನೆನೆನೆದು ಅಳುವುದು ಸಹಜವಾದ ಮಾತಾಗಿದೆ.

ಅವರ 'ರಂಗಪ್ಪನ ದೀಪಾವಳಿ', 'ರಂಗಪ್ಪನ ಕೋರ್ಟ್‌ಶಿಪ್' ಎಂಬ ಸಣ್ಣಕತೆಗಳಲ್ಲಿ ಎಳೆತನದ ರಸಿಕತೆ ತುಂಬಿ ತುಳುಕುತ್ತದೆ. ಮೊದಲನೆಯ ಸಲ ಹೆಂಡತಿಯನ್ನು ನೋಡುವ, ಮಾತನಾಡಿಸುವ, ಅವಳ ಪತ್ರಗಳನ್ನು ಕುತುಹಲದಿಂದ ಓದುವ ಹರೆಯದ ಹುಚ್ಚನ್ನು ಹಾಸ್ಯರಸದಲ್ಲಿ ತೋರಿಸಿದ್ದಾರೆ.

'ಶ್ರೀನಿವಾಸ'ರು 'ಸುಬ್ಬಣ್ಣ' ಎಂಬ ಸುಂದರವೂ ಗಂಭೀರವೂ ಆದ ಸಾಮಾಜಿಕ ಕತೆಯೊಂದನ್ನೂ ಬರೆದಿದ್ದಾರೆ.

ಸುಬ್ಬಣ್ಣನಲ್ಲಿ ಸ್ವಾಭಿಮಾನ, ಸಂಗೀತ ಪ್ರೇಮ, ದೃಢನಿಶ್ಚಯಗಳೂ ಅವನ ಹೆಂಡತಿ ಲಲಿತೆಯಲ್ಲಿ ಪ್ರೇಮ, ದಯೆ, ತಾಳ್ಮೆ, ಕನಿಕರ, ಕಷ್ಟ-ಸಹಿಷ್ಣುತೆಗಳೂ ನೆಲೆಗೊಂಡಿದ್ದುವು. ಪತಿಯೇ ಪರದೈವ ಎಂದು ಲಲಿತೆ ನಂಬಿದ್ದಳು. ಅತ್ತೆ ಮಾವನನ್ನು ಪೂಜ್ಯಭಾವದಿಂದ ನೋಡುತ್ತಿದ್ದಳು. ಅವಳ ಅತ್ತೆ ಬಹಳ ಕ್ರೂರಳಾಗಿದ್ದಳು.

"ತಾಯಿಯಾದವಳು ತನ್ನ ಮಗ ತಪ್ಪುಮಾಡಿದರೆ ಅವನು ಸ್ವತಃ ಅದನ್ನು ಮಾಡಿದನೆನ್ನಲಾರಳು, ಯಾರೋ ಹೇಳಿಕೊಟ್ಟಿರಬೇಕು. ಯಾರೆಂದು ಹುಡುಕಬೇಕಾದ್ದೆ ಇಲ್ಲ. ಯಕ್ಷಿಣಿ ಹತ್ತಿರವೇ ಇದಾಳೆ. ಹೀಗೆ ಮಗನ ಮೇಲೆ ಹಾಕಬೇಕಾದ ತಪ್ಪನ್ನು ಹಾಕುವುದಕ್ಕೆ ಇನ್ನೊಬ್ಬರು ಇರಲಿ ಎಂದೇ ತಾಯಿಯರು ಜಾಗ್ರತೆಯಾಗಿ ಸೊಸೆಯನ್ನು ಬರಮಾಡಿಕೊಳ್ಳುವದು" ಎಂಬುದಂತೂ ನಿಜ. ಸಂಸಾರದಲ್ಲಿ ಅತ್ತೆ ಸೊಸೆಯರಲ್ಲಿ ಸಣ್ಣಸಣ್ಣ ಮಾತುಗಳಿಂದ ಹುಟ್ಟುವ ಭಿನ್ನಾಭಿಪ್ರಾಯಗಳನ್ನೂ, ಸೊಸೆ ಬಂದ ಮೇಲೆ ತಾಯಿ ತನ್ನ ಮಗನನ್ನು ಯಾವ ರೀತಿಯಿಂದ ಕಾಣುವಳೆಂಬುದನ್ನೂ ಮಾಸ್ತಿಯವರು ಈ ಕತೆಯಲ್ಲಿ ಇದ್ದದ್ದನ್ನು ಇದ್ದಹಾಗೆ ಸಹಜವಾಗಿ ಚಿತ್ರಿಸಿದ್ದಾರೆ. ಇದನ್ನು ಓದುವಾಗ ಲಲಿತೆ ಅನುಭವಿಸುವಂಥ ಕಷ್ಟ ನಮಗೇ ಬಂದಿದೆಯೋ ಎಂಬಂತೆ ದುಃಖವಾಗುತ್ತದೆ.

'ಮಂಜುಳಾ' ಎಂಬ ಸಾಮಾಜಿಕ ನಾಟಕವನ್ನು ಓದಿ ಸೀತಮ್ಮನ ಜಾಣ್ಮೆಯನ್ನೂ, ರಾಮಚಂದ್ರ ಸೀತಮ್ಮನ ರೀತಿ ನೀತಿಗಳನ್ನೂ ನೋಡಿ ತಲೆದೂಗದವರುಂಟೇ? ತಾಯಿಯ ಮಾತನ್ನು ಮೀರಲಾರದೆ ಮತ್ತೊಬ್ಬಳನ್ನು ಲಗ್ನ ಮಾಡಿಕೊಳ್ಳಬೇಕೊ, ಇಲ್ಲವೆ ಪ್ರೇಮದ ಪುತ್ಥಳಿ ಮಂಜುಳೆಯನ್ನು ಬಿಡಬೇಕೊ ಎಂದು ಯೋಚಿಸುತ್ತಿರುವ ಪುಟ್ಟುವನ್ನು ಸೀತಮ್ಮ ತನ್ನ ಜಾಣತನದಿಂದ ಪಾರುಮಾಡುತ್ತಾಳೆ. ಅತ್ತ ಅವಳ ತಮ್ಮ ಲಕ್ಷ್ಮಣನಿಗೆ ಬೇಕಾದ ವಿಮಲೆಯೊಡನೆ ಅವನ ಮದುವೆಯನ್ನೂ ಮಾಡುತ್ತಾಳೆ. ಇದರಲ್ಲಿದ್ದಂತೆ ನಮ್ಮ ಕನ್ನಡ ನಾಡಿನಲ್ಲಿ ಕಾರ್ಯಚತುರರಾದ ಸೀತಮ್ಮನಂಥವರೂ ಲಕ್ಷಮ್ಮನಂಥ ಅವಿವೇಕಿಗಳೂ ಉಂಟು.

ಶ್ರೀನಿವಾಸರ ಪ್ರತಿಯೊಂದು ಕತೆ, ಕಾವ್ಯ, ನಾಟಕಗಳನ್ನು ಯಾವ ರೀತಿಯಿಂದ ಪರಿಶೀಲಿಸಿದರೂ ಅವುಗಳಲ್ಲಿ ಒಂದು ನಾವಿನ್ಯ, ಆದರ್ಶ, ನೈಸರ್ಗಿಕ ಪ್ರೇಮ, ಉದಾರತನ, ಆಕರ್ಷಕ ರೀತಿ ಇವು ಕಂಡುಬರುತ್ತವೆ.

ಕನ್ನಡ ನಾಡಿನಲ್ಲಿ ಉತ್ಕೃಷ್ಟವಾದ ಸಣ್ಣಕತೆಗಳನ್ನು ಬರೆದು ಹಿರಿಮೆಯನ್ನು ಗಳಿಸಿರುವ 'ಶ್ರೀನಿವಾಸ'ರು ಇನ್ನೂ ಹೆಚ್ಚು ಗ್ರಂಥಗಳನ್ನು ಬರೆದು ಕನ್ನಡಮ್ಮನಿಗರ್ಪಿಸಿ, ಕನ್ನಡಿಗರ ಜೀವನವನ್ನು ಹೆಚ್ಚು ಉಜ್ವಲಗೊಳಿಸಲೆಂದು ಆಶಿಸುತ್ತೇನೆ.

---

## ಅನುಭವ ಮಂಟಪದ ಆರಂಭೋತ್ಸವ

### ಶ್ರೀ ಶ್ರೀ ಮಹದೇವಸ್ವಾಮಿಗಳವರಿಂದ

ಬಾಗೇಪಲ್ಲಿ ತಾಲ್ಲೂಕು ಗೂಳೂರಿನಲ್ಲಿರುವ ಶ್ರೀಮನ್ನಿಡುಮಾಮಿಡಿ ಸಂಸ್ಥಾನದಲ್ಲಿ, ಬೆಂಗಳೂರಿನ ಶ್ರೀ ಸರ್ಪಭೂಷಣ ಮಠದ ಅಧ್ಯಕ್ಷರಾದ ಶ್ರೀ ಶ್ರೀ ಮಹದೇವಸ್ವಾಮಿಗಳು 'ಅನುಭವ ಮಂಟಪ'ದ ಪ್ರಾರಂಭೋತ್ಸವವನ್ನು ಕಳೆದ ತಿಂಗಳು ೨೪ನೆಯ ತಾರೀಖು ನೆರವೇರಿಸಿದರು.

ಉತ್ಸವಕ್ಕೆ ಸುತ್ತಮುತ್ತಣ ಪ್ರದೇಶಗಳಿಂದ ಸಾವಿರಾರುಮಂದಿ ದಯಮಾಡಿಸಿದ್ದರು. ನವಿಲುಗುಂದದ ಶ್ರೀ ಶ್ರೀ ಬಸವಲಿಂಗಸ್ವಾಮಿಗಳು, ಬಿಜಾಪುರ ಶ್ರೀ ಪಿ. ಜಿ. ಹಳಕಟ್ಟಿಯವರು ಮುಂತಾದ ಮಹನೀಯರು ಉತ್ಸವ ಸಾಂಗವಾಗಿ ನೆರವೇರಲೆಂದು ಶುಭಸಂದೇಶಗಳನ್ನು ಕಳಿಸಿದ್ದರು.

ಶ್ರೀ ಶ್ರೀ ಮಹದೇವಸ್ವಾಮಿಗಳು ತಮ್ಮ ಅಮೃತ ಹಸ್ತದಿಂದ ಅನುಭವ ಮಂಟಪದ ಉದ್ಘಾಟನೆಮಾಡಿ, ಆರು ಹಂತಗಳಿಂದ ನಿರ್ಮಿತವಾಗಿದ್ದ ಶೂನ್ಯಸಿಂಹಾಸನವನ್ನು ಆರೋಹಣ ಮಾಡಿದ ಬಳಿಕ, ಸ್ವಾಗತ ಗೀತೆ, ವಚನಗಳ ಹಾಡಿಕೆ ಇತ್ಯಾದಿ ಕಾರ್ಯಕ್ರಮಗಳಾದುವು. ನಿಡುಮಾಮಿಡಿ ಸಂಸ್ಥಾನದ ಮಠಾಧಿಪತಿಗಳಾದ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರು ತಮ್ಮ ಮತ್ತು ತಮ್ಮ ಶಿಷ್ಯರ ಪರವಾಗಿ ಶ್ರೀ ಶ್ರೀ ಮಹದೇವಸ್ವಾಮಿಗಳವರಿಗೆ ಬಿನ್ನವತ್ತಳೆಯನ್ನರ್ಪಿಸಿದರು.

ಬಿನ್ನವತ್ತಳೆಯಲ್ಲಿ ಹೀಗೆ ಹೇಳಿದೆ:

"ತಾವು ಶ್ರೀ ಸರ್ಪಭೂಷಣ ಮಠದ ಸ್ವಾಮಿಗಳಾದಂದಿನಿಂದ, ಅಲ್ಲಮಪ್ರಭುವಿನಂತೆ ಮಠದಲ್ಲಿ ಅವಿಚ್ಛಿನ್ನವಾಗಿ '**ಶಿವಾನುಭವ**'ವನ್ನು ತಮ್ಮ ಅಮೃತವಾಣಿಯಿಂದ ಬೋಧಿಸಿ ಭಕ್ತರ–ಭಾವುಕರ, ಸ್ತ್ರೀಯರ–ಶಿಶುಗಳ ಹೃದಯವನ್ನು ಸೆಳೆದು ಅನುಭವಾಮೃತದಿಂದ ದಣ್ಣನೆ ದಣಿಯುವಂತೆ ಮಾಡುತ್ತಿರುವುದು ವಚನವಾಙ್ಮಯದಲ್ಲಿರುವ ತಮ್ಮ ಅಪಾರವಾದ ಆಸಕ್ತಿ ಅಭಿಮಾನ ಆದರಗಳನ್ನು ಅಭಿವ್ಯಕ್ತಗೊಳಿಸುತ್ತಿದೆ.

"ಶರಣರ ವಚನಗಳನ್ನು ಪ್ರವಚನ ಮುಖದಿಂದ ಪ್ರಚುರಪಡಿಸುವುದಲ್ಲದೆ ಆಗಾಗ್ಗೆ ಆ ವಿಷಯದಲ್ಲಿ ತಮ್ಮ ಸಿದ್ಧಹಸ್ತದಿಂದ ಪ್ರಬುದ್ಧ ಲೇಖನಗಳನ್ನು ಬರೆದು ಇನ್ನೂ ಆತ್ಯಂತಿಕವಾದ ವಚನ ವಾಙ್ಮಯದ ಗೌರವ ಬೀರಿರುತ್ತೀರಿ. '**ಶರಣ ಸಾಹಿತ್ಯ**' ಮಾಸಿಕದ ಮೊದಲನೆಯ ವರುಷದ ಎರಡನೆಯ ಸಂಚಿಕೆಯಲ್ಲಿ **"ವೇದೋಪನಿಷತ್ತುಗಳು ಆರ್ಯರ ಸೊತ್ತು, ವಚನಗಳು ಕನ್ನಡಿಗರ ಸಂಪತ್ತು, ಅಖಿಲ ಮಾನವಕೋಟಿಯ ಗೊತ್ತು. ಇಲ್ಲಿ ಆಬಾಲವೃದ್ಧರಿಗೂ, ಅಖಿಲ ಸ್ತ್ರೀಪುರುಷರಿಗೂ ಎಲ್ಲ ಮತಪಂಥದವರಿಗೂ ಪ್ರವೇಶವಿದೆ' ಪ್ರಶಸ್ತಿಯಿದೆ. ಅವು ಗುಣಕ್ಕೆ ಗಮನಕೊಡುತ್ತಿವೆಯೇ ಹೊರತು ಜನ್ಮಕ್ಕಲ್ಲ. ಇವು ಹೇಳುವುದು ವಿಶ್ವವ್ಯಾಪಕವಾದ ವಿಶಾಲ ತತ್ತ್ವವೇ ವಿನಾ ಸಂಕುಚಿತ ಶಾಸ್ತ್ರವಲ್ಲ"** ಎಂದು ಮುಂತಾಗಿ ಬರೆದ ತಮ್ಮ ನಲ್ನುಡಿಗಳು 'ವಚನ ವಾಙ್ಮಯ'ದ ಬಗ್ಗೆ ಪ್ರೇಮನ್ನು ವ್ಯಕ್ತಮಾಡುತ್ತವೆ...............

"ಇಂದು ತಮ್ಮನ್ನು ನಾವೆಲ್ಲರೂ ಕೂಡಿ '**ಅಭಿನವ ಅಲ್ಲಮ**'ನೆಂದು ಕರೆಯಲು ಸಾತಿಶಯ ಸಂತೋಷಪಡುತ್ತೇವೆ. ಕಿರಿಯರಾದ ನಾವು ಅಕ್ಕರೆಯಿಂದ ಅರ್ಪಿಸಿದ ಈ ಭಕ್ತಿ ಕಾಣಿಕೆಯನ್ನು ಹಿರಿದಾಗಿ ಭಾವಿಸಿ ಇಂದಿನಿಂದ ತಮ್ಮ ಮಂಗಲಮಯವಾದ ನಾಮಮಾಲಿಕೆಯಲ್ಲಿ ಸೇರಿಸಿ ಲಿಖಿಸಬೇಕೆಂದು ತಮ್ಮಲ್ಲಿ ವಿನಯಪೂರ್ವಕವಾಗಿ ಪ್ರಾರ್ಥಿಸುವುಲ್ಲದೆ ತಮ್ಮಿಂದೊದಗುವ ಭಾಗ್ಯವೂ ತಮ್ಮ ಆಯುರಾರೋಗ್ಯಗಳೂ ಬಹುಕಾಲವಿರಲೆಂದು ಬೇಡುತ್ತೇವೆ."

ಬಳಿಕ ಶ್ರೀ ಶ್ರೀ ಮಹದೇವಸ್ವಾಮಿಗಳು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

"ವಚನಕಾರರು ಆತ್ಮಜ್ಞಾನಿಗಿರಬೇಕಾದ ಶೌರ್ಯವನ್ನು ಬೋಧಿಸಿದ್ದಾರೆ. ಹಿಂದೆ ಒಂದಾನೊಂದು ಕಾಲದಲ್ಲಿ ಬಹು ದುರ್ಗುಣಗಳಿಂದ ತುಂಬಿದ್ದ ಸನ್ನಿವೇಶದಲ್ಲಿ ಶ್ರೀ ಬಸವಣ್ಣನವರು ಆವಿರ್ಭವಿಸಿ, ಶಿವಾನುಭವ—ನಮ್ಮಲ್ಲಿರುವ ಶಿವನನ್ನು ಕಾಣುವ—ತತ್ತ್ವವನ್ನು ಸುಲಭವಾಗಿ ತಿಳಿಸಿರುವರು. ಆತ್ಮಾನುಭವದ ವಿಷಯದಲ್ಲಿ ಸರ್ವರಿಗೂ ಸ್ವಾತಂತ್ರ್ಯವಿದೆ. ನಮ್ಮಲ್ಲಿರುವ ಶಿವಚೈತನ್ಯವನ್ನರಿಯುವದೇ ಅನುಭವಮಂಟಪ. 'ಬೀಜದೊಳಗಿಹ ವೃಕ್ಷದ ಫಲವ ಸವಿಯಬಹುದೇ' ಎಂಬ ವಚನದಂತೆ ಭಾವನೆ–ಜ್ಞಾನ–ಕ್ರಿಯೆಗಳನ್ನು ಮಥಿಸಿ ತನ್ನೊಳಗಿರುವ ಆಧ್ಯಾತ್ಮಿಕ ತೇಜಸ್ಸನ್ನು ಅರಿಯಬೇಕೆಂಬುವುದು ಬೋಧವಾಗುತ್ತಿದೆ. ಜ್ಞಾನವೆಂದರೆ ತಿಳಿಯುವುದು, ಕ್ರಿಯೆಂದರೆ ಆಚರಿಸುವುದು. ಈ ಜ್ಞಾನ ಕ್ರಿಯೆಗಳ ಸಮರಸವನ್ನು ವಚನಗಳು ತಿಳಿಸುತ್ತಿವೆ. ಇಂತಹ ವಚನಗಳು ಕೇಳುವವರಿಗೆ ಕಹಿಯಾಗಿ ಇದ್ದರೂ ಅವು ಶರೀರಕ್ಕೆ ಅಮೃತಪ್ರಾಯವಾಗಿವೆ. 'ಸತಿ ಭಕ್ತೆಯ್ಯಾದರೆ ಹೊಲೆಗಂಜಲಾಗದು' ಎಂಬ ವಚನದಲ್ಲಿ ಸ್ತ್ರೀಪುರುಷರು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸರಿಸಮನಾದ ಬೆಳವಣಿಗೆ ಹೊಂದಲು ಅರ್ಹರೆಂದು ಬೋಧವಾಗುತ್ತಿದೆ. ಅನುಭವಶಾಸ್ತ್ರವೆಂದರೆ ಜೊಳ್ಳು–ಪೊಳ್ಳು ಹಾಳು ಕಲ್ಪನೆಗಳನ್ನು ಹೊಡೆದೋಡಿಸಿ ಸಂಸಾರದಲ್ಲಿ ಗಂಡುಗಲಿತನವನ್ನು ಬೋಧಿಸುವ ತತ್ತ್ವವಾಗಿದೆ. ಇದು ಹೊರಬಿದ್ದದ್ದು ಅಂದಿನ 'ಅನುಭವ ಮಂಟಪ'ದಿಂದ. ಇಂತಹ ಅನುಭವ ಮಂಟಪಗಳ ಸ್ಥಾಪನೆಯಿಂದ ಪುನಃ ನಮ್ಮ ಸಾಹಿತ್ಯ ಸಂಸ್ಕೃತಿಗಳು ಬದುಕುವ ಆಶೆ ಮೂಡುತ್ತದೆ. ಈ ಕಾರ್ಯ ನಮ್ಮ ಸಮಾಜದಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ನಡೆಯಬೇಕೆಂದು ಹಾರೈಸುತ್ತೇವೆ."

---

## ಮುಂಬಯಿಯಲ್ಲಿ ಶ್ರೀ ಮುದವೀಡು ಕೃಷ್ಣರಾಯರು

೫–೩–೪೦ಕ್ಕೆ ತಮ್ಮ ರೇಡಿಯೋ ಭಾಷಣಕ್ಕೆಂದು ಇಲ್ಲಿಗೆ ಬರಲಿದ್ದ ಶ್ರೀ ಮುದವೀಡು ಕೃಷ್ಣರಾಯರು ಇಲ್ಲಿಯ ಕರ್ನಾಟಕ ಸಂಘದವರ ಬಯಕೆಯ ಮೇರೆಗೆ ೩–೩–೪೦ಕ್ಕೆ ಬೆಳಿಗ್ಗೆ ೧೦॥ ಗಂಟೆಗೆ ಇಲ್ಲಿಗೆ ಬಂದರು. ಮೊದಲು ದಾದರ ಸ್ಟೇಷನ್ನಿನಲ್ಲಿ ನೂರಾರು ಜನ ಕನ್ನಡಿಗರು ಅವರಿಗೆ ಸ್ವಾಗತವನ್ನೀಯಲು ಸಜ್ಜಾಗಿ ನಿಂತಿದ್ದರು. ಶ್ರೀ ಮು. ಕೃಷ್ಣರಾಯರನ್ನು ಬಂಡಿಯಿಂದ ಇಳಿಸಿ ನೆರೆದವರೆಲ್ಲರೂ "ಕನ್ನಡ ಮಾತೆಗೆ ಗೆಲುವಾಗಲಿ" ಎಂಬ ಹುರುಪಿನ ಹರಕೆಗಳ ಕೋಲಾಹಲದಲ್ಲಿ ಅವರಿಗೆ ಮಾಲೆಗಳನ್ನು ಹಾಕಿದರು. ಸುಮಾರು ಹನ್ನೆರಡು ಬೇರೆ ಬೇರೆ ಸಂಸ್ಥೆಗಳು ಈ ಸಮಾರಂಭದಲ್ಲಿ ಒಂದಾಗಿ ಬಂದಿದ್ದವು. ಹಾಗೆಯೇ ವಿಕ್ಟೋರಿಯಾ ಟರ್ಮಿನಸ್ ಸ್ಟೇಷನ್ನಿನಲ್ಲಿ ಮುಂಬಯಿಯ ಕರ್ನಾಟಕ ಸ್ವಯಂಸೇವಕ ದಳದವರೂ ಬೇರೆ ಅನೇಕ ಸದ್ಗೃಹಸ್ಥರೂ ಶ್ರೀ ಕೃಷ್ಣರಾಯರನ್ನು ಎದುರುಗೊಂಡು ಪೂಮಾಲೆಗಳಿಂದ ಸತ್ಕರಿಸಿದರು. ಅನಂತರ ಇಲ್ಲಿ ಗವರ್ನಮೆಂಟ್ ವಕೀಲರಾಗಿರುವ ಶ್ರೀ ಜಹಾಗೀರದಾರ ರಂಗಾಚಾರ್ಯರ ನಿವಾಸಕ್ಕೆ ಅವರನ್ನು ಕರೆದೊಯ್ದರು.

ಅದೇ ಸಂಜೆ ೫ ಗಂಟೆಗೆ ಗಿರಗಾಂವಿನಲ್ಲಿರುವ ಬ್ರಾಹ್ಮಣ ಸಭಾ ಮಂದಿರದಲ್ಲಿ ಶ್ರೀ ಅ. ನ. ಕೃಷ್ಣರಾಯರ ಉಪನ್ಯಾಸ ಏರ್ಪಡಿಸಿದ್ದರು. ಶ್ರೀ ಮುದವೀಡು ಕೃಷ್ಣರಾಯರು ಅಧ್ಯಕ್ಷರಾಗಿದ್ದರು. ಶ್ರೀ ಅ. ನ. ಕೃಷ್ಣರಾಯರು 'ಎಚ್ಚತ್ತ ಜನಾಂಗಗಳಲ್ಲಿ ಕನ್ನಡಿಗರ ಸ್ಥಾನ' ಎಂಬ ವಿಷಯವಾಗಿ ಸುಮಾರು ೧॥ ಗಂಟೆ ಕಾಲ ಸರಸವಾಗಿ ಉಪನ್ಯಾಸ ಮಾಡಿದರು. ಅಧ್ಯಕ್ಷರ ಸಮಾರೋಪ ಭಾಷಣ ಸುಮಾರು ಅರ್ಧಗಂಟೆ ನಡೆಯಿತು. ಬಳಿಕ ಆರು ವರ್ಷದ ಚಿಕ್ಕ ಹುಡುಗ ಕನಕಾಪುರನು ಸುಮಾರು ಅರ್ಧಗಂಟೆಯ ವರೆಗೆ ಅತಿ ಮನೋಹರವಾಗಿ ಹಾರ್ಮೋನಿಯಂ ವಾದ್ಯ ಬಾರಿಸಿದನು. ಅಭಾರಮನ್ನಣೆಗಳಾದ ಬಳಿಕ ಸಮಾರಂಭ ಅತ್ಯಾನಂದದಿಂದ ಕೊನೆಗಂಡಿತು.

ನಾಲ್ಕನೆಯ ತಾರೀಖು ಸೋಮವಾರ ಗ್ರಾಂಟ್ ರೋಡಿನ ಗಾಮದೇವಿಯಲ್ಲಿರುವ ಕನ್ನಡ ರಾತ್ರಿ ಶಾಲೆಯನ್ನು ಶ್ರೀ ಮುದವೀಡು ಕೃಷ್ಣರಾಯರು ಅದರ ಚಾಲಕರ ಇಚ್ಛೆಯ ಮೇರೆಗೆ ಸಂದರ್ಶಿಸಿದರು. ೯ನೆಯ ತಾರೀಖು ಶನಿವಾರದ ವರೆಗೆ ಇಲ್ಲಿಯ ಬೇರೆ ಬೇರೆ ಕನ್ನಡ ಸಂಸ್ಥೆಗಳಿಗೆ ಭೇಟಿ ಕೊಡುವ ಏರ್ಪಾಟು ಮಾಡಲಾಗಿದೆ. ೧೦ನೆಯ ತಾರೀಖು ರವಿವಾರ ಪುಣೆಯ ಕರ್ನಾಟಕ ಸಂಘದವರು ಶ್ರೀ ಕೃಷ್ಣರಾಯರನ್ನು ಕರೆದಿದ್ದಾರೆ. ಬಹುಶಃ ಅವರು ಅಲ್ಲಿಗೆ ಹೋಗುವರು.

---

## ಶ್ರೀ ಶಿವಯೋಗ ಮಂದಿರ ಕ್ಷೇತ್ರದಲ್ಲಿ ಶಿವರಾತ್ರಿ ಉತ್ಸವ

ಮಹಾಶಿವರಾತ್ರಿ ಮಹೋತ್ಸವಕ್ಕಾಗಿ ವರ್ಷವರ್ಷವೂ ಶ್ರೀಶೈಲಾದಿ ಪುಣ್ಯ ಕ್ಷೇತ್ರಗಳಿಗೆ ಅನೇಕ ಜನರು ಭಕ್ತಿ ಶ್ರದ್ಧೆಗಳಿಂದ ಹೋಗುವಂತೆ ವಿಜಾಪುರ ಜಿಲ್ಲೆಯ ಬದಾಮಿ ಸ್ಟೇಷನ್ನಿನಿಂದ ೧೦ ಮೈಲಿ ದೂರದಲ್ಲಿರುವ ಶ್ರೀ ಶಿವಯೋಗ ಮಂದಿರಕ್ಕೂ ಹೋಗುವರು.

ಈ ಪುಣ್ಯಕ್ಷೇತ್ರದಲ್ಲಿ ಈ ವರ್ಷ ಮಹಾಶಿವರಾತ್ರಿ ಪ್ರಯುಕ್ತ ಶ್ರೀಮನ್ನಿರಂಜನ, ಹಾವೇರಿ, ಹಾಲಕೇರಿ, ರೋಣ, ಇಲಕಲ್ಲ, ನವಿಲುಗುಂದ, ಹಾನಗಲ್ಲು, ಸಿರ್ಸಿ, ಗುಳೇದಗುಡ್ಡ, ಬಾಗಲಕೋಟೆ ಮುಂತಾದ ಸ್ಥಳಗಳ ಸ್ವಾಮಿಗಳೂ, ಶ್ರೀಗಳಾದ ಡಾ॥ ನಂದೀಮಠ ಅವರು, ಪ್ರೊ॥ ಶೇಷಗಿರಿ ಅವರು, ಎಂ. ಆರ್. ಶ್ರೀನಿವಾಸಮೂರ್ತಿ ಅವರು, ಅ. ನ. ಕೃಷ್ಣರಾಯರು ಮುಂತಾದ ಪ್ರಸಿದ್ಧ ಸಾಹಿತಿಗಳೂ ಕೀರ್ತನಕಾರರೂ ಸಂಗೀತಗಾರರೂ ಆಹ್ವಾನಿತರಾಗಿದ್ದಾರೆ.

ಪುಣ್ಯಕ್ಷೇತ್ರವಿರುವುದು ಮಲಾಪಹಾರಿ ನದಿಯ ತೀರದಲ್ಲಿ. ದೇವರ ಪೂಜೆ, ಕಲಾರಾಧನೆಗಳು ನಡೆಯುವುವು. ಹತ್ತಿರದಲ್ಲೇ ಕನ್ನಡನಾಡಿನ ಕಡುಗಲಿ ಪುಲಕೇಶಿ ಪಟ್ಟವೇರಿದ ರಾಜಧಾನಿ ಪಟ್ಟದಕಲ್ಲು, ಐಹೊಳೆಗಳೂ ನೋಡತಕ್ಕ ಹಿರಿಯ ಬೀಡುಗಳು. ಯಾತ್ರಿಕರಿಗೆ ಆನಂದ! ಶಿವಯೋಗ ಮಂದಿರದಲ್ಲಿ ನಡೆವ ಉತ್ಸವ ಯಶಸ್ವಿಯಾಗಿ ನಡೆಯಲೆಂದು ಪರಿಷತ್ತು ಹಾರೈಸುತ್ತದೆ.

# ಕನ್ನಡ ಸುದ್ದಿ

**ಕೋಲಾರ : ಬಾಲ ಕರ್ನಾಟಕ ಸಂಘ**

ಕೋಲಾರದ ಕರ್ನಾಟಕ ಸಂಘದ ಅಂಗವಾದ ಈ ಸಂಘದ ವ್ಯವಸ್ಥಾಪಕರೂ ಹಲವು ಸದಸ್ಯರೂ ಬೇಸಗೆಯ ರಜದಲ್ಲಿ ವಯಸ್ಕರ ವಿದ್ಯಾಭ್ಯಾಸ ಪ್ರಚಾರ ಕಾರ್ಯವನ್ನು ನಡಸಲು ನಿಶ್ಚಯಿಸಿದ್ದಾರೆ. ಕೋಲಾರಕ್ಕೆ ನಾಲ್ಕು ಮೈಲಿ ದೂರದಲ್ಲಿರುವ ಭಟ್ಟರಹಳ್ಳಿಯಲ್ಲಿ ಕಳೆದ ನಾಲ್ಕನೆಯ ತಾರೀಖು ಸೋಮವಾರ ಮೊತ್ತಮೊದಲನೆಯ ಕಾರ್ಯಕ್ರಮವನ್ನು ನಡಸಿ, ಹಳ್ಳಿಗರಿಗೆ ವಿದ್ಯಾಭ್ಯಾಸದ ಆವಶ್ಯಕತೆ, ಶ್ರೇಷ್ಠತೆ ಇವನ್ನೂ, ಹಳ್ಳಿಗರ ಏಳ್ಗೆಗೆ ಬೇಕಾದ ಸಲಹೆಗಳನ್ನೂ ತಿಳಿಸಿದರು.

**ಕಲ್ಕತ್ತ : ಮೈಸೂರು ಸಂಘ**

ಮೈಸೂರು ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಭಾಷಣ ಮಾಡಲು ಆಹ್ವಾನಿತರಾಗಿ ಹೋಗಿದ್ದಾಗ ಮೈಸೂರು ಸಂಘಕ್ಕೂ ಭೇಟಿಯಿತ್ತರು. ಸಂಘದ ಅಧ್ಯಕ್ಷರಾದ ಡಾ॥ ಶ್ರೀನಿವಾಸರಾಯರೂ, ಕಾರ್ಯದರ್ಶಿಗಳಾದ ಶ್ರೀ ನಾರಾಯಣ ಸ್ವಾಮಿ ಅಯ್ಯರ್ ಅವರೂ ಅತಿಥಿಗಳಿಗೆ ಯೋಗ್ಯವಾದ ಸತ್ಕಾರವನ್ನು ನೀಡಿದರು. ಸರ್ ಎಸ್. ರಾಧಾಕೃಷ್ಣನ್, ಡಾ॥ ರಾಧಾ ಕುಮುದ ಮುಖರ್ಜಿ ಮುಂತಾಗಿ ಅನೇಕ ಪ್ರಮುಖರು ಸತ್ಕಾರಕ್ಕೆ ಆಮಂತ್ರಿತರಾಗಿದ್ದರು.

ಸಂಘದವರು ದಿವಾನರಿಗೆ ಅರ್ಪಿಸಿದ ಬಿನ್ನವತ್ತಳೆಯಲ್ಲಿ—

"ರಾಜರ್ಷಿಗಳೂ ಪ್ರಜಾಪ್ರೇಮಿಗಳೂ ಸುಸಂಸ್ಕೃತರೂ ಆದ ಶ್ರೀಮನ್ ಮಹಾರಾಜರವರ ಆಳಿಕೆಯಲ್ಲಿ, ಸಮರ್ಥರೂ ದಕ್ಷರೂ ಆದ ಆಡಳಿತಗಾರರಾದ ಸರ್ ಮಿರ್ಜಾ ಅವರ ನೇತೃತ್ವದಲ್ಲಿ ಮೈಸೂರು ಸಂಸ್ಥಾನ ರಾಮರಾಜ್ಯವೆಂದು ಕೀರ್ತಿಗಳಿಸಿದೆ" ಎಂದು ಹೇಳಿದೆ. ದಿವಾನ್ ಸರ್ ಮಿರ್ಜಾರವರು ತಮ್ಮ ಸರಸವಾದ ಭಾಷಣದಲ್ಲಿ ಕಲ್ಕತ್ತೆಯಲ್ಲಿರುವ ಮೈಸೂರಿನವರು ಬಂಗಾಳಿಗಳೊಂದಿಗೆ ಸಾಮಾಜಿಕವಾಗಿ ಸೌಹಾರ್ದದಿಂದ ಬೆರೆಯಲು ಮೈಸೂರಿನ ತಿಂಡಿಗಳು ನೆರವಾಗುವುವೆಂದು ವಿನೋದವಾಗಿ ಹೇಳಿದರು.

**ಮಲ್ಲೇಶ್ವರ : ಮಕ್ಕಳ ಕರ್ನಾಟಕ ಸಂಘ**

ಬೆಂಗಳೂರು ಮಲ್ಲೇಶ್ವರದ ಸ್ತ್ರೀ ಸಮಾಜದ ಮಕ್ಕಳ ಕರ್ನಾಟಕ ಸಂಘದ ಐದನೆಯ ಅಧಿವೇಶನ ಕಳೆದ ೨ನೆಯ ತಾರೀಖು ಶನಿವಾರ ಶ್ರೀಮಾನ್ ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಎಳೆಯ ಮಕ್ಕಳು ಅನುಕರಣ ಗೀತ, ನೃತ್ಯಗಳಿಂದ ಸಭಿಕರನ್ನು ಸಂತೋಷಪಡಿಸಿದರು. ಅಧ್ಯಕ್ಷರು 'ಮಕ್ಕಳಲ್ಲಿ ಭಗವಂತನ ಅಂಶ ಅತಿಶಯವಾಗಿರುವುದು. ಮಕ್ಕಳ ವಿದ್ಯಾಭ್ಯಾಸ ನಡೆಯುವ ಸ್ಥಳವೇ ಶ್ರೀ ಶಾರದಾ ದೇವಸ್ಥಾನ ಎಂದು ನುಡಿದು, ಮಕ್ಕಳ ಕರ್ತವ್ಯಗಳೇನೆಂಬುದನ್ನು ವಿನೋದ ಸರಣಿಯಲ್ಲಿ ಮಕ್ಕಳಿಗೆ ತಿಳಿಯುವಂತೆ ಹೇಳಿದರು.

**ಬೆಂಗಳೂರು : ಶಾಲಾ ವಾರ್ಷಿಕೋತ್ಸವ**

ಬೆಂಗಳೂರು ಯುನೈಟೆಟ್ ಮಿಷನ್ ಹೈಸ್ಕೂಲಿನ ವಾರ್ಷಿಕೋತ್ಸವ ಮಾರ್ಚಿ ೮ ಮತ್ತು ೯ನೆಯ ತಾರೀಖುಗಳಲ್ಲಿ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡೆಯುವುದು.

**ಬೆಂಗಳೂರು : ನಾಟಕ ಪ್ರದರ್ಶನ**

ದೇಶೀಯ ವಿದ್ಯಾಶಾಲೆಯ ರಂಗಭೂಮಿಯಲ್ಲಿ ೧೦ನೆಯ ತಾರೀಖು ಭಾನುವಾರ ಸಂಜೆ ಶ್ರೀ ಚಿ. ಸದಾಶಿವಯ್ಯ ಮತ್ತು ಯುನೈಟೆಡ್ ಆರ್ಟಿಸ್ಟ್ಸ್ ಸಂಘದವರು ದ್ವಿಜೇಂದ್ರಲಾಲ್‌ರಾಯರವರ 'ಚಂದ್ರಗುಪ್ತ' ನಾಟಕ (ಶ್ರೀಮಾನ್ ರಂಗರಾವ್ ಹಿರೇಕೆರೂರ್‌ರವರ ಅನುವಾದ)ವನ್ನು ಶಾಲೆಯ ನಿಧಿಗಾಗಿ ಅಭಿನಯಿಸುವರು.

**ಹಾನಗಲ್ : ವಸಂತ ಸಾಹಿತ್ಯೋತ್ಸವ ನಡಸುವ ಯೋಚನೆ**

ಹಾನಗಲ್ಲಿನ ಶ್ರೀಗಳಾದ ನರಸಿಂಗರಾವ್ ದೇಸಾಯಿ ಕಲ್ಲಾಪುರ, ಗಂಗಾಧರ ಮಲ್ಹಾರ ನಾಯಕ ಆಲೂರ ಮುಂತಾದ ಮಹನೀಯರು ಒಂದು ಹೇಳಿಕೆ ಹೊರಡಿಸಿ, ಈ ಬಾರಿ ವಸಂತ ಸಾಹಿತ್ಯೋತ್ಸವವನ್ನು ಹಾನಗಲ್ಲಿನಲ್ಲಿ ನಡಸುವಂತೆ ಏರ್ಪಾಟು ಮಾಡಬೇಕೆಂಬ ತಮ್ಮ ಬಯಕೆಯನ್ನು ವ್ಯಕ್ತಗೊಳಿಸಿದ್ದಾರೆ. ಈ ಬಗ್ಗೆ ತಾಲ್ಲೂಕಿನ ಪ್ರಮುಖರ ಸಭೆಯೊಂದು ಹಾನಗಲ್ಲಿನಲ್ಲಿ ನಡೆಯಿತೆಂದು ತಿಳಿದುಬಂದಿದೆ.

**ಮಂಗಳೂರು : ಕನ್ನಡ ಸಾಹಿತ್ಯ ಪರಿಷತ್ತಿನ ಪ್ರೌಢಪರೀಕ್ಷೆ**

ಈ ಪರೀಕ್ಷೆಯ ಶಿಕ್ಷಣದ ತರಗತಿಯನ್ನು ಮಂಗಳೂರಿನ ಗಣಪತಿ ಹೈಸ್ಕೂಲಿನಲ್ಲಿ ಪ್ರತಿ ಗುರುವಾರ ಮತ್ತು ಭಾನುವಾರ ನಡಸುವಂತೆ ನಿಶ್ಚಯವಾಗಿದೆ. ಮಾರ್ಚಿ ೩ನೆಯ ತಾರೀಖಿನಿಂದ ಪಾಠಕ್ರಮ ಆರಂಭವಾಗಿದೆ. ಶ್ರೀ ಮುಳಿಯ ತಿಮ್ಮಪ್ಪಯ್ಯನವರು 'ಕಾದಂಬರಿ ಸಂಗ್ರಹ'ವನ್ನು ಪಾಠ ಹೇಳುವರು. ಶ್ರೀಮಾನ್ ಶಿವರಾಮ ಕಾರಂತರು ತರಗತಿಯ ವ್ಯವಸ್ಥಾಪಕರು.

**ಕುಂದಾಪುರ : ಕರ್ನಾಟಕ ಸಾಹಿತ್ಯ ಸಂಘ**

ಈ ಸಂಘದ ವಾರ್ಷಿಕೋತ್ಸವ ಶ್ರೀ ಉಲ್ಲಾಳ ಮಂಗೇಶರಾವ್, ಬಿ.ಎ., ಎಲ್.ಟಿ. ಅವರ ಅಧ್ಯಕ್ಷತೆಯಲ್ಲಿ ಇದೇ ಮಾರ್ಚಿ ೯ ಮತ್ತು ೧೦ನೆಯ ತಾರೀಖುಗಳಲ್ಲಿ ಬೋರ್ಡ್ ಹೈಸ್ಕೂಲಿನಲ್ಲಿ ನಡೆಯುವುದು. ಆಗ ಸ್ಪರ್ಧೆಗಳು, ಕರ್ನಾಟಕ ಏಕೀಕರಣ ಸಭೆ, ಕನ್ನಡ ಸಾಹಿತ್ಯೋತ್ಸವ, ವಿನೋದ—ಈ ಕಾರ್ಯಕ್ರಮಗಳನ್ನು ನಡಸಲು ನಿಶ್ಚಯವಾಗಿದೆ.

# ಸಾದರ ಸ್ವೀಕಾರ

## ಹೊಸ ಪುಸ್ತಕಗಳು :

### ೧. "ಶ್ರೀ ಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆ",
### ಲೇಖಕರು : ಶ್ರೀ. ನಾ. ಶ್ರೀ. ರಾಜಪುರೋಹಿತರು, ಧಾರವಾಡ.

ಗ್ರಂಥದ ಮುನ್ನುಡಿಯಲ್ಲಿ ಶ್ರೀ ಎಸ್. ಆರ್. ಕುಲಕರ್ಣಿ, ಎಂ.ಎ., ಎಲ್‌ಎಲ್.ಬಿ. ಅವರು ಹೀಗೆ ಬರೆದಿರುತ್ತಾರೆ: "ಈ ಪುಸ್ತಕದಲ್ಲಿ ಶ್ರೀ ಯಾಜ್ಞವಲ್ಕ್ಯರು ಶುಕ್ಲ ಮತ್ತು ಕೃಷ್ಣ ಈ ಎರಡೂ ಯಜುರ್ವೇದಗಳ ಶಾಖಾ ಪ್ರವರ್ತಕ ಋಷಿಗಳಾಗಿದ್ದರೆಂಬುದನ್ನು ..........ಸಪ್ರಮಾಣವಾಗಿಯೂ ಪ್ರಾಚೀನ ಆಧಾರಗಳಿಂದಲೇ........ವಿವೇಚಿಸಿ ಸಿದ್ಧ ಮಾಡಿದ್ದಾರೆ........ಅವರ ಸಂಶೋಧನೆಯಿಂದ ಶ್ರೀ ಯಾಜ್ಞವಲ್ಕ್ಯರ ಚರಿತ್ರದ ಮೇಲೆ ಹೊಸ ಬೆಳಕು ಬಿದ್ದಂತಾಗಿದೆ..............." ಪುಸ್ತಕ ಲೇಖಕರಲ್ಲಿ ದೊರೆಯುವುದು. ಬೆಲೆ ೧ ರೂಪಾಯಿ.

### ೨. ಆರು ಕತೆಗಳು
### ಬೆಳಗಾಂವಿಯ ಕಥಾಕುಂಜದ ಪ್ರಕಟನಾಲಯದಿಂದ ಹೊರಬಿದ್ದಿರುವ ಕಥಾಸಂಗ್ರಹ

ಇದುವರೆಗೆ ಮಾಸಪತ್ರಿಕೆಯಾಗಿ ಹೊರಡುತ್ತಿದ್ದ ಕಥಾಕುಂಜ ಐದನೆಯ ವರ್ಷ ಗ್ರಂಥಮಾಲೆಯಾಗಿ ರೂಪಾಂತರ ಹೊಂದಿದೆ. ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಮುನ್ನುಡಿ ಬರೆದಿದ್ದಾರೆ. ಪಂ. ತಾರಾನಾಥರು, ಶ್ರೀ. ಕೆ. ಶಂಕರಭಟ್ಟರು ಮೊದಲಾದವರ ಕಥೆಗಳಿವೆ. ವಾರ್ಷಿಕ ಚಂದಾ ರೂ. ೨-೮-೦. ವಿ. ಪಿ. ಮೂಲಕ ರೂ. ೨-೧೩-೦. ಸಹಾಯಕರಿಗೆ ೫ ರೂ. ಪೋಷಕರಿಗೆ ರೂ. ೧೦. ಬಿಡಿ ಪ್ರತಿ ಬೆಲೆ ೬ ಆಣೆ.

### ೩. ಅಧ್ಯಾಪಕರ ಪತ್ರಿಕೆ
### ಸಂಪಾದಕರು ಮತ್ತು ಪ್ರಕಾಶಕರು : ಶ್ರೀ ಕೋ. ಸಂಪದ್ಗಿರಿರಾಯರು ದೇಶೀಯ ವಿದ್ಯಾಶಾಲೆ, ಬಸವನಗುಡಿ, ಬೆಂಗಳೂರು

ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ ೧೩ ಆಣೆ. ಬಿಡಿ ಸಂಚಿಕೆ ೧ ಆಣೆ.

ಬೆಂಗಳೂರು ಶಿಕ್ಷಣ ಸಂಘದ ಆಶ್ರಯದಲ್ಲಿ ಹೊರಡುತ್ತಿರುವ ಈ ಮಾಸ ಪತ್ರಿಕೆ ಐದನೆಯ ಸಂಚಿಕೆಯನ್ನು ನಾವು ಆದರದಿಂದ ಸ್ವೀಕರಿಸಿದ್ದೇವೆ. ಇದರಲ್ಲಿ "ಅಧ್ಯಾಪಕರ ದಿನಚರಿಯ ಕೆಲಸದಲ್ಲಿ ಉಪಯೋಗವಾಗುವಂತಹ ಅನುಭವಯುಕ್ತವಾದ ಸಣ್ಣ ಟಿಪ್ಪಣಿಗಳು, ಪಾಠಗಳ ಬೋಧನಾಕ್ರಮ, ಶಾಲಾ ಸಂವಿಧಾನ, ಆಡಳಿತ, ಪಾಠಪ್ರವಚನೇತರ ಶಾಲಾಕಾರ್ಯಕ್ರಮಗಳಿಗೆ" ಸಂಬಂಧಿಸಿದ ಸಮಸ್ಯೆಗಳ ವಿವೇಚನೆಯನ್ನು ಸರಳ ಶೈಲಿಯಲ್ಲಿ ಮಾಡುವ ಉದ್ದೇಶವಿರುವುದರಿಂದ ಇದು ಅಧ್ಯಾಪಕವರ್ಗಕ್ಕೆ ಮಾತ್ರವಲ್ಲದೆ ವಿದ್ಯಾರ್ಥಿಗಣಕ್ಕೂ ಪ್ರಯೋಜನಕರವಾಗಿದೆ. ಪ್ರಸಕ್ತ ಸಂಚಿಕೆಯಲ್ಲಿ ವ್ಯವಹಾರ್ಯ ಶಿಕ್ಷಣ ಮೊದಲಾದ ಲೇಖನಗಳಿವೆ. ಶಿಕ್ಷಣದಲ್ಲಿ ಆಸಕ್ತಿಯುಳ್ಳವರೂ ಸಂಸ್ಥಾನದ ಮಿಡ್ಲ್ ಸ್ಕೂಲು, ಹೈ ಸ್ಕೂಲು ಮತ್ತು ನಾರ್ಮಲ್ ಸ್ಕೂಲುಗಳಿಗೂ ಈ ಪತ್ರಿಕೆಗೆ ಪ್ರೋತ್ಸಾಹ ಕೊಡುವರೆಂದು ನಂಬಿದ್ದೇವೆ.

**೪. ವಿಶ್ವವಿದ್ಯಾನಿಲಯ ಸಂಘ ಪತ್ರಿಕೆ, ಬೆಂಗಳೂರು : ಸಂಪುಟ ೧—ಸಂಚಿಕೆ ೧**

ಬೆಂಗಳೂರು ವಿಶ್ವವಿದ್ಯಾನಿಲಯ ಸಂಘದ ಆಶ್ರಯದಲ್ಲಿ ಹೊಸದಾಗಿ ಹೊರಟಿರುವ ಈ ಪತ್ರಿಕೆಯನ್ನು ಅತ್ಯಂತ ಆದರದಿಂದ ಸ್ವೀಕರಿಸಿದ್ದೇವೆ. ಸಂಪಾದಕರು 'ನಮ್ಮ ಮಾತಿನಲ್ಲಿ' "ನಮ್ಮ ಸಂಘದ ಸದಸ್ಯರಿಗೆ 'ಬರೆಯುವ ಚಟ' ಹೆಚ್ಚಬೇಕೆಂಬ ಸದುದ್ದೇಶದಿಂದ ಈ ಪತ್ರಿಕೆ ಹೊರಟಿದೆ" ಎಂದು ಹೇಳಿದ್ದಾರೆ. ಈ ಚಟಕ್ಕೆ ಪತ್ರಿಕೆ ದೊಡ್ಡ ತೂಬು ಆಗಲಿ!

ಮೊದಲಿನ ಸಂಚಿಕೆಯಲ್ಲಿ ಸಂಘದ ಸದಸ್ಯರು ನಡಸಿದ ಚಟುವಟಿಕೆಗಳು, ಬರೆದ ಲೇಖನಗಳು, ಕವನಗಳು, ತೆಗೆದ ಚಿತ್ರಗಳು ಪ್ರಕಟವಾಗಿದ್ದು ಪತ್ರಿಕೆ ಆಕರ್ಷಕವಾಗಿದೆ. ರಕ್ಷಾಕವಚದ ಮೊದಲನೆಯ ಪುಟದ ಮೇಲೆ ಇರುವ "ಕರುಣಾಳು ಬಾ ಬೆಳಕೆ" ಎಂಬ ಮಂತ್ರ ಪತ್ರಿಕೆಯ ಬಾಳಿನ ನಡೆಯನ್ನು ಬೆಳಗಲಿ!

ಮುಖ್ಯವಾಗಿ ಈ ಸಂಚಿಕೆಯಲ್ಲಿರುವ 'ಕರ್ನಾಟಕ ಏಕೀಕರಣ ಮೊದಲೋ, ಭಾರತೀಯರ ಸ್ವಾತಂತ್ರ್ಯ ಮೊದಲೋ' ಎಂಬ ಲೇಖನವನ್ನು ವಾಚಕರ ಗಮನಕ್ಕೆ ತರಬಯಸುತ್ತೇವೆ: 'ಕನ್ನಡ ಭೀಷ್ಮ'ರೆಂತಿದ್ದ ದಿವಂಗತ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರ ನೆನಪಿಗಾಗಿ ಏರ್ಪಡಿಸಲಾಗಿದ್ದ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಪಡೆದ, ಸೀನಿಯರ್ ಬಿ.ಎಸ್‌ಸಿ. ತರಗತಿಯ ವಿದ್ಯಾರ್ಥಿ ಶ್ರೀ ಬಿ. ನೀಲಕಂಠ ಅವರು ಬರೆದ ಪ್ರಬಂಧ ಅದು. ಲೇಖಕರು ಅದರಲ್ಲಿ ಭಾರತೀಯ ಸ್ವಾತಂತ್ರ್ಯಕ್ಕಿಂತ ಮೊದಲು, ಜರೂರಾಗಿ ಕನ್ನಡ ನಾಡಿನ ಏಕೀಕರಣ ಕೈಗೂಡಬೇಕಾಗಿದೆಯೆಂದೂ, ಕೈಗೂಡಿದರೆ ಭಾರತೀಯ ಸ್ವಾತಂತ್ರ್ಯಸಾಧನೆಗೆ ಹೆಚ್ಚು ಬೆಂಬಲ ಸಿಕ್ಕಿ ಗೆಲವು ಉಂಟಾಗುವುದೆಂದೂ ಪ್ರತಿಪಾದಿಸಿದ್ದಾರೆ.

ಅನೇಕ ಸ್ವಾರಸ್ಯವಾದ ಲೇಖನಗಳಿಂದ ಕೂಡಿರುವ ಈ ಪತ್ರಿಕೆಯಲ್ಲಿ ಅಚ್ಚಿನ ತಪ್ಪುಗಳು ಹೆಚ್ಚಾಗಿರುವುದು ಸರಿಯಲ್ಲ. ಮುಂದೆ ಹೀಗಾಗದಂತೆ ಸಂಪಾದಕರು ನೋಡಿಕೊಳ್ಳುವರೆಂದು ನಂಬಿದ್ದೇವೆ.

ಪತ್ರಿಕೆಯಲ್ಲಿ ಕನ್ನಡ, ಇಂಗ್ಲಿಷ್, ಉರ್ದು ಭಾಷೆಗಳಲ್ಲಿ ಲೇಖನಗಳಿವೆ.

೨೮-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೨ ಆಣೆ



ಸಂಪುಟ ೨
ಸಂಚಿಕೆ ೨೧

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮಾರ್ಚಿ ೧೫, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ದಿವಂಗತ ಶ್ರೀಮದ್ಯುವರಾಜರವರು

ಬರೆದವರು: **ಶ್ರೀ ಬಿ. ಪುಟ್ಟಯ್ಯನವರು, ಬಿ.ಎ.**

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಅವರ ಅನಿರೀಕ್ಷಣೀಯವಾದ ಮರಣ ಇಡೀ ಮೈಸೂರು ಸಂಸ್ಥಾನದಲ್ಲಿ ದುಃಖದ ಕಾರ್ಮುಗಿಲನ್ನು ಕವಿಸಿದೆ. ಅವರು ಅನೇಕ ಪ್ರಜಾಹಿತ ಕಾರ್ಯಗಳಲ್ಲಿ ಆಸಕ್ತರಾಗಿದ್ದರು: ಅದರಲ್ಲೂ ಮುಖ್ಯವಾಗಿ ಬಡ ಜನತೆಯ ಏಳಿಗೆಯ ಕಾರ್ಯದಲ್ಲಿ ಬಹು ಇಷ್ಟವುಳ್ಳವರಾಗಿ ಪ್ರಜೋಪಕಾರಿಗಳಾಗಿದ್ದರು.



ದಿವಂಗತ ಶ್ರೀಮದ್ಯುವರಾಜರವರು
**ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್, ಬಹದ್ದೂರ್, ಜಿ.ಸಿ.ಐ.ಇ. ಅವರು**
ಜನನ: ೧೮೮೮] [ಮರಣ: ೧೯೪೦
[ಪಡಿಯಚ್ಚು: 'ಒಕ್ಕಲಿಗರ ಪತ್ರಿಕೆ'ಯ ಕೃಪೆಯಿಂದ]

ಮೈಸೂರು ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್ನಿನ (ಮೈಸೂರು ಪೌರಮತ್ತು ಸಾಮಾಜಿಕ ಪ್ರಗತಿಸಾಧಕಸಂಸ್ಥೆಯ) ಪೋಷಕರಾಗಿದ್ದು, ಎಲ್ಲಜನರ ಅಭಿವೃದ್ಧಿ ಮತ್ತು ನೆಮ್ಮದಿಗಾಗಿ ನಡೆಯುತ್ತಿದ್ದ ಕಾರ್ಯಗಳಿಗೆ ನೆರವಾಗುತ್ತ ಅನುಗ್ರಹ ಮಾಡುತ್ತಿದ್ದರು. ಅದರಲ್ಲೂ ಬದುಕಿನಲ್ಲಿ ಅದೃಷ್ಟಹೀನರಾಗಿ ಕೆಳದರ್ಜೆಯಲ್ಲಿರುವ ಜನರ ಉದ್ಧಾರಕ್ಕೋಸ್ಕರ ಬಹು ಸಹಾನುಭೂತಿಯುಳ್ಳವರಾಗಿದ್ದರು. ನಿಮ್ನ ವರ್ಗದವರ ಉನ್ನತಿಗಾಗಿಯೂ ಹೊಲಸುಗೇರಿಗಳ ಕ್ಷೇಮಲಾಭಕ್ಕಾಗಿಯೂ ಉದಾರ ದ್ರವ್ಯ ದಾನ ಮಾಡುತ್ತಿದ್ದರು. ಇಂಥ ಕೊಡುಗೈ ದೊರೆ ಬಡವರ ಗುಡಿಸಲುಗಳ ಕಡೆ ಸಂತೋಷದಿಂದ ಬಿಜಯಮಾಡಿಸಿ ಅಲ್ಲಿ ಜನರು ನಿರ್ವಹಿಸುತ್ತಿರುವ ದೀನಜೀವನವನ್ನು ಕಣ್ಣಾರ ನೋಡಿ ಮರುಗುತ್ತಿದ್ದರು. ನಿಮ್ನ ವರ್ಗದ ವಿದ್ಯಾರ್ಥಿನಿಲಯಗಳಿಗೆ ಪದೇಪದೇ ಭೇಟಿಯನ್ನಿತ್ತು ಅಲ್ಲಿನ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿ, ಸಂತೋಷ, ಹುಮ್ಮಸ್ಸುಗಳನ್ನು ಮೂಡಿಸಿ, ಪ್ರಭುವಿನ ದಯೆಯಿಂದ ತಮ್ಮ ಬದುಕು ಉತ್ತಮಗೊಳ್ಳುವುದು ಖಂಡಿತ ಎಂಬ ಭರವಸೆಯನ್ನುಂಟುಮಾಡುತ್ತಿದ್ದರು.

ನಮ್ಮ ಸಮಾಜದಲ್ಲಿನ ಹಾನಿಕರವಾದ ಸಂಪ್ರದಾಯಗಳು ತೊಲಗಬೇಕೆಂದು ಬಹು ತವಕಪಡುತ್ತಿದ್ದರು. ಬಾಲ್ಯವಿವಾಹಗಳು ತಪ್ಪಿ ವಧುಗಳ ವಿವಾಹದ ವಯಸ್ಸು ಹೆಚ್ಚಬೇಕು, ಹಿಂದೂ ವಿಧವೆಯರು ಪುನರ್ವಿವಾಹವಾಗಲು ಅವಕಾಶವಾಗಬೇಕು, ಮದುವೆಗಳ ವೆಚ್ಚವು ಕಡಮೆಯಾಗಬೇಕು, ವರದಕ್ಷಿಣೆ ಕನ್ಯಾಶುಲ್ಕಗಳ ಅನ್ಯಾಯದ ಸುಲಿಗೆ ನಿಲ್ಲಬೇಕು, ಅಸ್ಪೃಶ್ಯತೆ ತೊಲಗಬೇಕು, ಸ್ತ್ರೀಯರಲ್ಲಿ ವಿದ್ಯಾಭ್ಯಾಸ ಹೆಚ್ಚು ಪ್ರಚಾರವಾಗಬೇಕು, ಜನರಲ್ಲಿ ಮನೆಗಳನ್ನೂ ಬೀದಿಗಳನ್ನೂ ಚೊಕ್ಕಟವಾಗಿಟ್ಟುಕೊಳ್ಳುವ ಬುದ್ಧಿ ಬೆಳೆಯಬೇಕು ಎಂಬ ಆಶಯವುಳ್ಳವರಾಗಿದ್ದರು. ಹೀಗೆ ಸಮಾಜವನ್ನು ಉತ್ತಮಪಡಿಸುವ ಕಾರ್ಯದಲ್ಲಿ ತೊಡಗಿದ ಎಂಥ ದೀನ ಸಮಾಜಸೇವಕನಿಗೂ ಅವರಿಂದ ಬಹು ಮನ್ನಣೆ ದೊರೆಯುತ್ತಿದ್ದಿತು. ಮೈಸೂರು ಸಂಸ್ಥಾನವು ಸಮಾಜೋದ್ಧರಣ ಕಾರ್ಯದಲ್ಲಿ ಮೊದಲು ತೊಡಗಿದಾಗ ಮಹಿಳಾ ಸಮ್ಮೇಳನಗಳು, ಪಂಚಮರ ಸಮ್ಮೇಳನಗಳು ಮುಂತಾದ ಸಮ್ಮೇಳನಗಳೆಲ್ಲವೂ ಶ್ರೀಮದ್ಯುರಾಜರವರ ಸ್ಫೂರ್ತಿ ಮತ್ತು ಪೋಷಣೆಗಳನ್ನು ಹೊಂದಿ ಏರ್ಪಾಡಾಗುತ್ತಿದ್ದುವು. ಇಂತಹ ಅನೇಕ ಸಮ್ಮೇಳನಗಳನ್ನು ಅವರೇ ಸ್ವತಃ ಪ್ರಾರಂಭಿಸುತ್ತಿದ್ದರು. ಇಂದುಮೈಸೂರಿನಲ್ಲಿ ಕಾಣುತ್ತಿರುವ ಅನೇಕ ಸಮಾಜೋದ್ಧರಣ ಕಾರ್ಯಗಳೆಲ್ಲವುಗಳಲ್ಲಿಯೂ ಅವರ ಪ್ರಭಾವವೇ ಅಡಗಿರುವುದು.

ಅವರು ಮೈಸೂರು ಸಂಸ್ಥಾನದಲ್ಲಿ ಬಾಲಚಮೂ (ಬಾಯ್ಸ್ ಸ್ಕೌಟ್) ಚಳವಳಿ ಆರಂಭವಾದಂದಿನಿಂದ ಅದರ 'ಚೀಫ್ ಸ್ಕೌಟ್' ಆಗಿದ್ದು, ತಮ್ಮ ಸೇವಾಕಾಂಕ್ಷೆಯನ್ನು ಮೂರ್ತಿವತ್ತಾಗಿ ಮಾಡಿದ್ದರು. ನಮ್ಮ ತರುಣರು ದೇಶಭಕ್ತರೂ ರಾಜಭಕ್ತರೂ ಮತ್ತು ಸೇವಾತತ್ಪರರೂ ಆಗಿ ನಿಜವಾದ ನಾಗರಿಕರಾಗುವಂತೆ ಅವರಿಗೆ ಶಿಕ್ಷಣ ಕೊಡುವುದರಿಂದ ದೇಶ ಹಿತಕ್ಕೆ ಬಹು ಉಪಕಾರವಾಗುವುದೆಂದು ಎಣಿಸಿ ಅವರು ಈ ಚಳುವಳಿಯ ಏಳಿಗೆಯಲ್ಲಿ ತುಂಬಾ ಆಸಕ್ತರಾಗಿದ್ದರು. ಹಾಗೆಯೇ ಅವರು ರೆಡ್ ಕ್ರಾಸ್ ಮತ್ತು ಆಂಬ್ಯುಲೆನ್ಸ್ ಕಾರ್ಯಗಳಲ್ಲೂ ಆಸಕ್ತಿ ವಹಿಸಿ ಸಂಸ್ಥಾನದ ಸಾಮಾಜಿಕ ಏಳಿಗೆ ಮತ್ತು ಪುರೋಭಿವೃದ್ಧಿಗಳಿಗೆ ಸೇವೆಯೇ ಪ್ರಧಾನವೆಂಬುದನ್ನು ನಿದರ್ಶಿಸಿದ್ದರು.

ಕನ್ನಡ ಭಾಷೆಯ ಬಗ್ಗೆ ಅವರ ಪ್ರೇಮ ಅಪಾರವಾದುದು. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಘನ ಅಧ್ಯಕ್ಷರಾಗಿದ್ದರು. ಅವರ ಪೋಷಣೆ ಮತ್ತು ಪ್ರೋತ್ಸಾಹಗಳ ದೆಸೆಯಿಂದ ಇಂದು ಕನ್ನಡ ಭಾಷಾ ಸಾಹಿತ್ಯಗಳು ಘನತೆಯನ್ನು ಪಡೆದು ಜನಪ್ರಿಯವಾಗಿರುವುವು.

ಶ್ರೀಮದ್ಯುವರಾಜರವರು ಆಸಕ್ತಿ ತೋರುತ್ತಿದ್ದ ಮತ್ತೊಂದು ಕ್ಷೇತ್ರವೆಂದರೆ ಸಹಕಾರ. ಮಧ್ಯಮ ತರಗತಿಯ ಪ್ರಜೆಗಳ ಶ್ರೇಯಸ್ಸು ಸಹಕಾರ ಸಂಘಗಳ ಮೂಲಕವೇ ಸಾಧ್ಯ ಎಂದವರು ನಂಬಿದ್ದರು. ಅವರು ಬಹು ಸಹಕಾರ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿ, ಅನೇಕ ಸಹಕಾರ ಸಂಘಗಳಿಗೆ ಭೇಟಿಯಿತ್ತು, ಯುಕ್ತವಾದ ಸಲಹೆಗಳನ್ನು ಕೊಟ್ಟಿರುವರು. ತಮ್ಮ ಸ್ವಂತ ಹಣವನ್ನು ಹೊಸ ಹೊಸ ಸಂಘಗಳಲ್ಲಿ ಠೇವಣಿಯಿಟ್ಟು ಅವುಗಳ ಏಳಿಗೆಗೆ ಭದ್ರವಾದ ತಳಪಾಯವನ್ನು ಒದಗಿಸುತ್ತಿದ್ದ ಸಂದರ್ಭಗಳೂ ಉಂಟು. ಅವರು ಸಹಕಾರ ವಿಷಯದಲ್ಲಿ ಪ್ರದರ್ಶಿಸುತ್ತಿದ್ದ ಆಸಕ್ತಿಯ ಗೌರವಾರ್ಥವಾಗಿ ಒಂದು ವಸಾಹತವೂ ಉಪನಗರವೂ ಅವರ ಘನವಾದ ಹೆಸರಿನಲ್ಲಿ ಬೆಂಗಳೂರು ಬಸವನಗುಡಿಯಲ್ಲಿ ಸ್ಥಾಪಿತವಾಗಿರುವುವು.

ಶ್ರೀಮದ್ಯುವರಾಜರವರು ಕೃಪಾಪೂರಿತರೂ ಪ್ರಸನ್ನಮೂರ್ತಿಗಳೂ ಆಗಿದ್ದರು. ಅವರ ಸರಳತೆ, ಇಂಗಿತಜ್ಞತೆಗಳ ದೆಸೆಯಿಂದ ಅವರೊಡನೆ ಸಂಭಾಷಣೆ ಅವರ ಸಂದರ್ಶನ ಭಾಗ್ಯವಿದ್ದವರೆಲ್ಲರಿಗೂ ಆಹ್ಲಾದಕರವೂ ಉತ್ತೇಜನಕರವೂ ಆಗಿದ್ದಿತು. ಅವರು ಎಷ್ಟು ಸುಸಂಸ್ಕೃತರು, ಎಂತಹ ಉದಾತ್ತ ಭಾವನೆಯುಳ್ಳವರು, ಎಂತಹ ಉನ್ನತ ಧ್ಯೇಯವುಳ್ಳವರು ಎಂಬುದು ಇಂತಹ ಭೇಟಿಗಳಲ್ಲಿ ಎದ್ದು ಕಾಣುತ್ತಿದ್ದುವು.

ಶ್ರೀಮದ್ಯುವರಾಜರವರು ಉಜ್ವಲ ದೇಶಾಭಿಮಾನಿಗಳೂ, ನಿಜವಾದ ಪ್ರಜಾವತ್ಸಲರೂ, ಘನ ವ್ಯಕ್ತಿಗಳೂ ಆಗಿದ್ದರು. ಅವರ ನಿಧನದಿಂದ ಮೈಸೂರಿಗೆ ರತ್ನಪ್ರಾಯರಾಗಿದ್ದ ರಾಜವ್ಯಕ್ತಿಯೊಬ್ಬರ ನಷ್ಟವಾಗಿದೆ. ಇಂತಹ ಮಹನೀಯರ ನೆನಪನ್ನು ಮರೆಯುವುದೇ ಕಷ್ಟ. ರಾಜರ್ಷಿಗಳಾದ ಆಳುವ ಮಹಾಸ್ವಾಮಿಯವರು ತಮ್ಮ ಪ್ರೇಮಪಾತ್ರರಾದ ಸಹೋದರರನ್ನು ಕಳೆದುಕೊಂಡಿದ್ದಾರೆ: ನಮ್ಮ ಆಶಯಗಳ ನಿಧಿಯಾದ ಶ್ರೀಮದ್ಯುವರಾಜಕುಮಾರರು ತಮ್ಮ ಆದರ್ಶ ಪಿತೃವಿನ ವಿಯೋಗವನ್ನು ಹೊಂದಿದ್ದಾರೆ. ಅವರಿರ್ವರ ಮಹಾ ವ್ಯಸನವು ಸಂಸ್ಥಾನದ ಪ್ರಜಾಕೋಟಿಯ ನೈಜವಾದ ದುಃಖಪ್ರದರ್ಶನದಿಂದ ತಕ್ಕಮಟ್ಟಿಗೆ ಶಮನವಾಗುವುದೆಂದು ನಂಬಿದ್ದೇವೆ. ಭಗವಂತನು ದಿವಂಗತರ ದಿವ್ಯ ಆತ್ಮಕ್ಕೆ ಸುಖ ಸಮಾಧಾನಗಳನ್ನಿತ್ತು ಕಾಪಾಡಲಿ.

---

## ದರ್ಶನಗಳು

ಶ್ರೀ ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ|| ೮-೩-೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

ಜೀವನು ನಿತ್ಯವಸ್ತು ಎಂದು ಮೊದಲೇ ಹೇಳಿದೆ. ಅವನೊಳಗೆ ಕರ್ಮವೆಂಬ ಒಂದು ಸೂಕ್ಷ್ಮಪದಾರ್ಥ ಪ್ರವೇಶಮಾಡಿ ಅವನನ್ನು ತನ್ನ ಘನತೆಯಿಂದ ಕೆಳಕ್ಕೆಳೆಯುತ್ತದೆ. ಇಂದೇ ಸಂಸಾರ. ಜೀವನೊಳಗೆ ಸೇರಿಕೊಂಡಿರುವ ಕರ್ಮವನ್ನು ಪೂರ್ಣವಾಗಿ ಕಳೆದುಕೊಂಡರೆ, ಆಗ ಜೀವನು ತನಗೆ ಸಹಜವಾದ ಜ್ಞಾನದಿಂದ ಬೆಳಗುತ್ತಾ ಸದಾ ಇತರ ಜೀವರಿಗೆ ಆದರ್ಶನಾಗಿರುತ್ತಾನೆ.

ಜೀವನಿಗೆ ಸಂಸಾರಪ್ರಾಪ್ತಿಯೂ ಅದರಿಂದ ವಿಮೋಚನೆಯೂ ಈ ರೀತಿಯಾಗುತ್ತದೆ: ಮೊದಲಾಗಿ ಜೀವನು ಕರ್ಮವನ್ನು ತನ್ನಲ್ಲಿಗೆ ಆಕರ್ಷಿಸುತ್ತಾನೆ. ಇದಕ್ಕೆ 'ಆಸ್ರವ'ವೆಂದು ಹೆಸರು. ಹೀಗೆ ಕರ್ಮವನ್ನು ಆಕರ್ಷಣೆ ಮಾಡಿದಮೇಲೆ, ಅದು ಜೀವನಲ್ಲಿ ಸೇರಿಕೊಂಡು, ಅವನ ಜ್ಞಾನಕ್ಕೆ ಮರೆಯನ್ನುಂಟುಮಾಡಿ ಅವನನ್ನು ಕೆಳಗೆ ಎಳೆಯುತ್ತದೆ. ಇದು ಬಂಧ. ಇದಕ್ಕೆ 'ಸಂಸಾರ'ವೆಂದು ಹೆಸರು.

ಜೀವನಿಗೆ ವಿವೇಕ ಬಂದಾಗ ಇನ್ನೂ ಹೆಚ್ಚಿನ ಕರ್ಮ ಬಂದು ಆವರಿಸುವುದನ್ನು ತಡೆಯುತ್ತಾನೆ. ಇದು 'ಸಂವರ'. ಅನಂತರ ತನ್ನಲ್ಲಿ ಸೇರಿಕೊಂಡಿರುವ ಕರ್ಮ ಕ್ರಮೇಣ ಕಳೆದುಹೋಗುವಂತೆ ಮಾಡುತ್ತಾನೆ. ಇದಕ್ಕೆ 'ನಿರ್ಜರ'ವೆಂದು ಹೆಸರು. ಕರ್ಮ ಪೂರ್ಣವಾಗಿ ಕಳೆದು, ಜೀವನು ಶುದ್ಧನಾದರೆ ಅದಕ್ಕೆ ಮೋಕ್ಷವೆಂದು ಹೆಸರು.

ಜೈನರು ದೇವರನ್ನು ಒಪ್ಪುವುದಿಲ್ಲ. ಜೀವನಿಗೆ ಅಜ್ಞಾನವುಂಟಾದರೆ ರಾಗ, ದ್ವೇಷ ಮುಂತಾದ ಕೆಟ್ಟ ಗುಣಗಳು ತೋರುತ್ತವೆ. ಆಗ ಕರ್ಮ ಸಮೀಪಕ್ಕೆ ಬಂದು ಜೀವನಲ್ಲಿ ಪ್ರವೇಶಮಾಡಿ ತನ್ನ ಭಾರದಿಂದ ಅವನನ್ನು ಕೆಳಕ್ಕೆ ಎಳೆಯುತ್ತದೆ. ಈ ಕರ್ಮವನ್ನು ನಿವೃತ್ತಿ ಮಾಡಿಕೊಳ್ಳಬೇಕಾದರೆ ಹಿರಿಯರ ದಾರಿಯನ್ನು ಹಿಡಿದು ಸ್ವಬುದ್ಧಿಯಿಂದ ಸತ್ಯವನ್ನು ಕಂಡುಕೊಂಡು ಸ್ವಪ್ರಯತ್ನದಿಂದ ಮಹಾವ್ರತವನ್ನು ಸಾಧಿಸಿ ಅನಂತರ ಮೋಕ್ಷವನ್ನು ಹೊಂದಬೇಕು. ಮೋಕ್ಷದಲ್ಲಿ ಜೀವನು ಪೂರ್ಣ ಜ್ಞಾನಿಯಾಗಿ ಸದಾ ಆಕಾಶದಲ್ಲಿ ಮೇಲು ಮೇಲಕ್ಕೆ ಹೋಗುತ್ತಾ ಇರುತ್ತಾನೆ. ಹೀಗೆ ಮೇಲಕ್ಕೆ ಏರುತ್ತಲೇ ಇರುವ ಮುಕ್ತ ಜೀವರು ತಾರೆಗಳಂತೆ ನಮ್ಮ ಕಣ್ಣಿಗೆ ಗೋಚರಿಸುತ್ತಾರೆ. ಅವರನ್ನು ನೋಡಿಕೊಂಡು ನಾವು ಮೇಲುಮಾರ್ಗವನ್ನು ಅವಲಂಬಿಸಲು ಪ್ರಯತ್ನಪಡುತ್ತೇವೆ. ನಮ್ಮ ಬುದ್ಧಿ ಮತ್ತು ಶಕ್ತಿಯಿಂದಲೇ ಧ್ಯೇಯವನ್ನು ಸಂಪಾದಿಸಬೇಕು. ಇದೇ ಈ ಮತದ ಗುರಿ.

ಚಾರ್ವಾಕ, ಬೌದ್ಧ ಮತ್ತು ಜೈನ ಈ ಮೂರು ಮತಗಳಲ್ಲಿಯೂ ಕೆಲವು ಸಾಮಾನ್ಯ ಲಕ್ಷಣಗಳನ್ನು ನಾವು ಕಾಣಬಹುದು. ಈ ಮತಗಳು ದೇವರನ್ನು ಒಪ್ಪಿಲ್ಲ. ಸ್ವರ್ಗ ಮುಂತಾದ ಪರಲೋಕಗಳು ವಾಸ್ತವವಲ್ಲ. ದೇವರಲ್ಲಿ ಭಕ್ತಿಯಿಡುವುದರಿಂದ ಅವನು ನಮ್ಮಲ್ಲಿ ವಿಶ್ವಾಸವಿಟ್ಟು ಮೋಕ್ಷವನ್ನು ಕೊಡಿಸಿಕೊಡುತ್ತಾನೆ ಎಂಬುದು ಸುಳ್ಳು ಮಾತು. ಆ ಮಾತನ್ನು ನಂಬಿದರೆ ನಮ್ಮ ಕೆಲಸವನ್ನು ಬಿಟ್ಟು ಬರಿಯ ಸೋಮಾರಿಗಳಾಗಿ ಯಾವಾಗಲೂ ದುಃಖವನ್ನೇ ನಾವು ಅನುಭವಿಸಬೇಕಾಗುತ್ತದೆ. ಈ ರೀತಿಯ ಅಭಿಪ್ರಾಯಗಳು ಈ ಮೂರು ಮತಗಳಲ್ಲಿಯೂ ಕಂಡುಬರುವುದರಿಂದ ಈ ಮತಗಳನ್ನು ವೈದಿಕರು ನಾಸ್ತಿಕ ಮತಗಳೆನ್ನುತ್ತಾರೆ. ವೇದಗಳು, ದೇವರು, ಪರಲೋಕ, ಇವುಗಳಲ್ಲಿ ನಂಬಿಕೆ ಇಲ್ಲದವರು ನಾಸ್ತಿಕರಾಗುತ್ತಾರೆ ಎಂದು ವೈದಿಕರು ಅಭಿಪ್ರಾಯಪಡುತ್ತಾರೆ.

### ವೈದಿಕ ದರ್ಶನಗಳು

ಇದುವರೆಗೆ ವಿಚಾರ ಮಾಡಿದ ದರ್ಶನಗಳ ಪ್ರಕಾರ ದೇವರು, ಪರಲೋಕ, ವೇದೋಕ್ತವಾದ ಕರ್ಮಗಳು—ಇವುಗಳಲ್ಲಿ ನಂಬಿಕೆಗೆ ಅವಕಾಶವಿಲ್ಲ. ಆದ್ದರಿಂದ ಅವುಗಳನ್ನು ಅವೈದಿಕ ದರ್ಶನಗಳೆಂದರೆ ತಪ್ಪಾಗುವುದಿಲ್ಲ. ಆದರೆ ವೇದವನ್ನು ಪ್ರಮಾಣವನ್ನಾಗಿ ಒಪ್ಪಿಕೊಂಡವರು ಅವೈದಿಕರನ್ನು ನೋಡಿ ಕೆಲವು ಪ್ರಯತ್ನಗಳನ್ನು ಕೈಗೊಂಡರು. ಅವೈದಿಕರು ಅನುಮಾನ ಪ್ರಮಾಣವನ್ನು ಪೂರ್ಣವಾಗಿ ಬಳಸಿಕೊಂಡು ಸ್ವತಂತ್ರವಾಗಿ ಪ್ರಪಂಚ ಪರೀಕ್ಷೆಯಲ್ಲಿ ತೊಡಗಿ, ವೇದಕ್ಕೆ ವಿರುದ್ಧವಾದ ಕೆಲವು ರಹಸ್ಯಗಳನ್ನೂ ಸತ್ಯಗಳನ್ನೂ ಪ್ರಕಾಶಪಡಿಸಿದರು. ಇದನ್ನು ಕಂಡ ವೈದಿಕರೂ ಸಹ ವೇದಗಳಲ್ಲಿ ಹೇಳಿರುವ ಅರ್ಥಗಳನ್ನು ಕೂಲಂಕಷವಾಗಿ ವಿಮರ್ಶೆಮಾಡಿ, ಅವು ಹೇಗೆ ಯುಕ್ತಿಗಳಿಂದ ಕೂಡಿವೆ ಎಂಬುದನ್ನು ಸ್ಪಷ್ಟಪಡಿಸಲು ತೊಡಗಿದರು. ಈ ವಿಧವಾದ ಯತ್ನಗಳಲ್ಲಿ ನಾನಾ ಮಾರ್ಗಗಳು ತೋರಿಬಂದದ್ದರಿಂದ ವೈದಿಕ ದರ್ಶನಗಳೂ ಅನೇಕವಾದುವು. ಅವುಗಳಲ್ಲಿ ಮುಖ್ಯವಾದುವು **ಷಡ್ದರ್ಶನಗಳು** ಅಂದರೆ ಆರು ದರ್ಶನಗಳು. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಮತ್ತು ಉತ್ತರಮೀಮಾಂಸೆ—ಇವೇ ವೇದಗಳನ್ನು ಅವಲಂಬಿಸಿ ಹೊರಟ ಆರು ದರ್ಶನಗಳು. ಇವುಗಳನ್ನು ನ್ಯಾಯವೈಶೇಷಿಕ, ಸಾಂಖ್ಯಯೋಗ ಮತ್ತು ಮೀಮಾಂಸೆ ಎಂದು ಮೂರು ಗುಂಪಾಗಿಯೂ ಎಣಿಸಲಾಗಿದೆ. ಎರಡೆರಡು ಮತಗಳನ್ನು ಸೇರಿಸಿರುವುದಕ್ಕೆ ಅವುಗಳಲ್ಲಿ ಬಹಳ ಮಟ್ಟಿಗೆ ಕಂಡು ಬರುವ ಸಾದೃಶ್ಯವೇ ಕಾರಣ. ವೈದಿಕ ದರ್ಶನಗಳು ಮೇಲೆ ಹೇಳಿರುವ ಕ್ರಮದಲ್ಲೇ ಹುಟ್ಟಿದುವು ಎಂದು ಮಾತ್ರ ಭಾವಿಸಕೂಡದು. ವಿಚಾರದ ಅನುಕೂಲ್ಯಕ್ಕಾಗಿ ಈ ಕ್ರಮವನ್ನು ದಾರ್ಶನಿಕರು ಅನುಸರಿಸಿರುತ್ತಾರೆ.

### ನ್ಯಾಯ ಮತ್ತು ವೈಶೇಷಿಕ

ಇವು ಮೊದಲು ಎರಡು ದರ್ಶನಗಳಾಗಿದ್ದು ಸುಮಾರು ೧೦ನೆಯ ಶತಮಾನದಿಂದ ಒಂದಾಗಿ ಹೊಂದಿಕೊಂಡುವು. ಕಣಾದ ಮಹರ್ಷಿಗಳು ವೈಶೇಷಿಕ ಸೂತ್ರಗಳನ್ನೂ ಗೌತಮರು ನ್ಯಾಯ ಸೂತ್ರಗಳನ್ನೂ ರಚಿಸಿದರು. ಇವರ ಮಾರ್ಗವನ್ನನುಸರಿಸಿ ಅನೇಕರು ಗ್ರಂಥಗಳನ್ನು ರಚಿಸಿದ್ದಾರೆ. ಅವರಲ್ಲಿ ಪ್ರಮುಖರು ವಾತ್ಸ್ಯಾಯನ, ಪ್ರಶಸ್ತಪಾದ, ಉದ್ಯೋತಕರ, ವಾಚಸ್ಪತಿಮಿಶ್ರ, ಉದಯನ, ಗಂಗೇಶೋಪಾಧ್ಯಾಯ, ಗದಾಧರ ಭಟ್ಟಾಚಾರ್ಯ ಮುಂತಾದವರು.

ವಿಶೇಷ ಎಂಬ ಪದದಿಂದ ವೈಶೇಷಿಕ ಎಂದು ಏರ್ಪಟ್ಟಿದೆ. ವಿಶೇಷ ಅಂದರೆ ವೈಲಕ್ಷಣ್ಯ ಎಂದರ್ಥ. ಒಂದೊಂದು ವಸ್ತುವಿನಲ್ಲಿಯೂ ಇರುವ ವೈಲಕ್ಷಣ್ಯವನ್ನು ಕಂಡು ತನ್ಮೂಲಕ ಪದಾರ್ಥಗಳನ್ನು ಬೇರೆ ಬೇರೆಯಾಗಿ ತಿಳಿದುಕೊಳ್ಳುವುದು ವಿವೇಕಯುತವಾದ ಮಾರ್ಗ. ಈ ಮಾರ್ಗವನ್ನು ಅವಲಂಬಿಸಿರುವ ದರ್ಶನ ವೈಶೇಷಿಕ ದರ್ಶನವಾಗುತ್ತದೆ. ನ್ಯಾಯವೆಂದರೆ ಯುಕ್ತಿಯೆಂದರ್ಥ. ನಮ್ಮೆದುರಿಗೆ ಇರುವ ಪದಾರ್ಥಗಳು ಹೇಗುಂಟಾದುವು? ಇವುಗಳಿಗೆ ಕಾರಣ ಯಾವುದು? ಇವುಗಳ ಸ್ವರೂಪವೇನು? ಎಂಬ ಪ್ರಶ್ನೆಗಳಿಗೆ ಯುಕ್ತಿಸಹಿತವಾದ ವಿಚಾರ ಮಾತ್ರ ಉತ್ತರವಾಗುತ್ತದೆ. ಯುಕ್ತಿ ಇದ್ದರೆ ಸಂದೇಹ ನೀಗುತ್ತದೆ. ಆದ್ದರಿಂದ ಯುಕ್ತಿಯ ಆಧಾರದಿಂದ ಪದಾರ್ಥಗಳನ್ನು ವಿಂಗಡಿಸಿ ಅವುಗಳ ವೈಲಕ್ಷಣ್ಯವನ್ನು ತಿಳಿದುಕೊಳ್ಳುವುದು ನ್ಯಾಯ ವೈಶೇಷಿಕ ದರ್ಶನದ ಧ್ಯೇಯವಾಗಿದೆ.

ಮೊದಲಲ್ಲಿ ಪದಾರ್ಥಗಳನ್ನು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವ ಎಂದು ಏಳು ವಿಧವಾಗಿ ವಿಂಗಡಿಸಿದೆ. ಈ ಏಳು ಪದಾರ್ಥಗಳಲ್ಲಿ ಅಡಗದೆ ಬೇರೆಯಾಗಿರಬಹುದಾದ ವಸ್ತು ಯಾವುದೂ ಇಲ್ಲ. ದ್ರವ್ಯವೆಂಬ ಪದಾರ್ಥದಲ್ಲಿ ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಕಾಲ, ದಿಕ್ಕು, ಆತ್ಮ, ಮನಸ್ಸು ಎಂದು ಒಂಬತ್ತು ಭಾಗಗಳು. ಇವುಗಳಲ್ಲಿ ಭೂಮಿ, ನೀರು, ಬೆಂಕಿ ಮತ್ತು ಗಾಳಿ—ಈ ನಾಲ್ಕು ದ್ರವ್ಯಗಳೂ ತಮ್ಮ ಮೂಲಸ್ವರೂಪದಲ್ಲಿ ಅಣುಗಳಾಗಿರುತ್ತವೆ. ಅಣುಗಳು ನಮ್ಮ ಕಣ್ಣಿಗೆ ಕಾಣುವುದಿಲ್ಲ. ಹನಿಗಳು ಕೂಡಿ ಹಳ್ಳವಾಗುವಂತೆ, ಅಣುಗಳೂ ಒಂದಾಗಿ ಸೇರಿ ನಮಗೆ ಕಾಣಿಸಿಕೊಳ್ಳುವ ಸ್ಥೂಲದ್ರವ್ಯಗಳಾಗುತ್ತವೆ. ಈ ಪರಮಾಣುಗಳು ಒಂದೇ ರೂಪವಾಗಿರುವುದರಿಂದ ಒಂದು ಪರಮಾಣುವಿಗೂ ಮತ್ತೊಂದು ಪರಮಾಣುವಿಗೂ ಭೇದ ಗೊತ್ತಾಗುವುದು ಕಷ್ಟ. ಅದಕ್ಕಾಗಿ ಪ್ರತಿಯೊಂದು ಪರಮಾಣುವಿನಲ್ಲಿಯೂ ಒಂದೊಂದು ವಿಶೇಷವನ್ನು ಈ ದರ್ಶನದಲ್ಲಿ ಒಪ್ಪುತ್ತಾರೆ. ಒಂದು ವಿಶೇಷಕ್ಕೂ ಮತ್ತೊಂದು ವಿಶೇಷಕ್ಕೂ ಇರುವ ವ್ಯತ್ಯಾಸ ತಾನಾಗಿಯೇ ತೋರುತ್ತದೆ. ಬೇರೆ ಬೇರೆ ವಿಶೇಷಗಳಿರುವುದರಿಂದ ಪರಮಾಣುಗಳನ್ನು ಬೇರೆ ಬೇರೆಯಾಗಿ ತಿಳಿದುಕೊಳ್ಳಬಹುದು. ಈ ವಿಶೇಷ ಏಳು ಪದಾರ್ಥಗಳಲ್ಲಿ ಒಂದಾಗಿರುತ್ತದೆ.

ಭೂಮಿ, ನೀರು, ಬೆಂಕಿ, ಗಾಳಿ ಮತ್ತು ಆಕಾಶ—ಇವುಗಳನ್ನು **ಪಂಚಭೂತ**ಗಳೆಂದು ಹೇಳುತ್ತಾರೆ. ಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದ ಎಂಬ ಗುಣಗಳು ಇವುಗಳಿಗೆ ಅಸಾಧಾರಣವಾಗಿ ತೋರಿಬರುತ್ತವೆ. ಈ ಗುಣಗಳಿಗೆ **ವಿಶೇಷ** ಗುಣಗಳೆಂದು ಹೆಸರು. ಹೇಗೆಯೇ ಆತ್ಮನಲ್ಲಿಯೂ ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರಗಳೆಂಬ ಒಂಬತ್ತು ವಿಶೇಷ ಗುಣಗಳಿರುತ್ತವೆ. ಆತ್ಮನ ಸಂಖ್ಯೆ ಅನಂತವಾದುದು. ಪ್ರತಿ ಆತ್ಮನೂ ವಿಭುವಾಗಿ ಎಲ್ಲ ಕಡೆಯೂ ವ್ಯಾಪಿಸಿರುತ್ತಾನೆ. ಆತ್ಮರ ಪೈಕಿ ಒಬ್ಬ ಆತ್ಮನಿಗೆ ಈಶ್ವರ ಅಥವಾ ದೇವರು ಎಂದು ಹೆಸರು; ಇತರರಿಗೆ ಜೀವಾತ್ಮರೆಂದು ಹೆಸರು. ಈಶ್ವರನು ಜನರ ಹಿತಕ್ಕಾಗಿ ವೇದವನ್ನು ರಚಿಸಿದ್ದಾನೆ.

ಸೃಷ್ಟಿಕಾಲದಲ್ಲಿ ಈಶ್ವರನು ಪರಮಾಣುಗಳನ್ನು ಒಂದಾಗಿ ಸೇರಿಸಿ ಸ್ಥೂಲಪದಾರ್ಥಗಳನ್ನು ಮಾಡುತ್ತಾನೆ. ಪ್ರಳಯಕಾಲದಲ್ಲಿ ಪರಮಾಣುಗಳನ್ನು ಬೇರ್ಪಡಿಸುತ್ತಾನೆ. ಈಶ್ವರನಿಗೆ **ನಿಮಿತ್ತ ಕಾರಣ**ನೆಂದು ಹೆಸರು. ಮಡಕೆಯನ್ನು ನಿಮಿತ್ತ ಕಾರಣನಾದ ಕುಂಬಾರನು ಮಾಡುತ್ತಾನೆ. ಮಣ್ಣಿನಿಂದ ಮಡಕೆಯಾಗುವುದರಿಂದ ಮಣ್ಣು **ಸಮವಾಯಿ ಕಾರಣ**. ಮಣ್ಣಿನ ಭಾಗಗಳು ಒಂದಾಗಿ ಸೇರದಿದ್ದರೆ ಮಡಕೆಯಾಗುವುದಿಲ್ಲ. ಅವುಗಳು ಸೇರುವುದಕ್ಕೆ **ಅಸಮವಾಯಿ ಕಾರಣ**ವೆಂದು ಹೆಸರು. ಹೀಗೆ ಸಮವಾಯಿ, ಅಸಮವಾಯಿ ಮತ್ತು ನಿಮಿತ್ತ ಕಾರಣಗಳು ಸಹಕರಿಸಿದರೆ ಒಂದು ಕಾರ್ಯವಾಗುತ್ತದೆ. ಪ್ರಪಂಚವೆಂಬುದು ಒಂದು ದೊಡ್ಡ ಕಾರ್ಯ. ಅದಕ್ಕೆ ಸರ್ವಶಕ್ತನೂ ಸರ್ವಜ್ಞನೂ ಆದ ಒಬ್ಬ ಆತ್ಮನು ಕಾರಣನಾಗಿರಬೇಕು. ಆ ಆತ್ಮನೇ ಈಶ್ವರ ಎಂದು ನೈಯಾಯಿಕರು ವಾದಿಸುತ್ತಾರೆ.

ಆತ್ಮನಲ್ಲಿರುವ ವಿಶೇಷ ಗುಣಗಳಲ್ಲಿ ಬುದ್ಧಿ ಮುಖ್ಯವಾದದ್ದು. ಅದರಲ್ಲಿ ಅನುಭವ ಮತ್ತು ಸ್ಮೃತಿ ಎಂದು ಎರಡು ವಿಧ. ಅನುಭವದಲ್ಲಿ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂದು ನಾಲ್ಕು ಭೇದಗಳು. ಈ ನಾಲ್ಕನ್ನು ಮಾತ್ರ ನ್ಯಾಯವೈಶೇಷಿಕದಲ್ಲಿ ಪ್ರಮಾಣವನ್ನಾಗಿ ಒಪ್ಪಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಅನುಮಾನದ ಸ್ವರೂಪವನ್ನು ವಿಶದಪಡಿಸಬೇಕಾಗಿದೆ.

(ಮುಂದುವರಿಯುವುದು)

---

## ಅಖಿಲ ಭಾರತ ರೇಡಿಯೋದಲ್ಲಿ ಕನ್ನಡದ ಸ್ಥಾನ

ಅಖಿಲ ಭಾರತ ರೇಡಿಯೋ ಇಲಾಖೆಯವರು ಕನ್ನಡದಲ್ಲಿ ಸಂಗೀತ ಸುದ್ದಿ ಮುಂತಾದುವನ್ನು ಪ್ರಸಾರಣೆ ಮಾಡಬೇಕೆಂದು ಈಗ್ಗೆ ಕೆಲಕಾಲದಿಂದ ಚಳವಳಿ ನಡೆಯುತ್ತಿದೆಯಷ್ಟೆ. ಈ ಬಗ್ಗೆ ಕನ್ನಡ ನುಡಿಯಲ್ಲಿ, ಕಳೆದ ತಿಂಗಳು ೨೩ನೆಯ ತಾರೀಖಿನ ಸಂಚಿಕೆಯಲ್ಲಿ ಒಂದು ಸಂಪಾದಕೀಯ ಟಿಪ್ಪಣಿ ಬರೆದು ವಾಚಕರ ಮತ್ತು ಇಂಡಿಯಾ ಸರಕಾರದ ಗಮನವನ್ನು ಸೆಳೆಯಲಾಗಿತ್ತು. ಆ ಟಿಪ್ಪಣಿಯಲ್ಲಿ ಹೇಳಿದ್ದಂತೆ ಶ್ರೀಮಾನ್ ದಿವಾಕರ್‌ರವರು ದೆಹಲಿಗೆ ಹೋಗಿ, ಕೇಂದ್ರಶಾಸನ ಸಭೆಯಲ್ಲಿ ಕನ್ನಡಿಗರ ಪ್ರತಿನಿಧಿಗಳಾಗಿ ಸದಸ್ಯರಾಗಿರುವ ಶ್ರೀಮಾನ್ ಹೊಸಮನಿ ಸಿದ್ದಪ್ಪನವರು ಮತ್ತು ಶ್ರೀಮಾನ್ ಜಿನರಾಜ ಹೆಗ್ಗಡೆ ಇವರುಗಳೊಂದಿಗೆ, ಇಂಡಿಯಾ ಸರಕಾರದ 'ಕಮ್ಯೂನಿಕೇಷನ್ಸ್' ಸಚಿವರಾದ ಮಿ॥ ಕ್ಲೋರವರನ್ನು ಸಂದರ್ಶಿಸಿ, ಅಖಿಲ ಭಾರತ ಆಕಾಶವಾಣಿಯಲ್ಲಿ ಕನ್ನಡದ ಕಾರ್ಯಕ್ರಮಗಳಿಗೂ ಅವಕಾಶ ಕೊಡಬೇಕಾದುದರ ಆವಶ್ಯಕತೆಯನ್ನು ಅರಿಕೆಮಾಡಿಕೊಂಡರು. ಅಂಚೆ ಮತ್ತು ತಂತಿ ಇಲಾಖೆಗಳ ಡೈರೆಕ್ಟರ್ ಜನರಲ್‌ರಾದ ಸರ್ ಜಿ. ವಿ. ಬೇವೂರ್‌ರವರನ್ನೂ ಈ ಬಗ್ಗೆ ಭೇಟಿಮಾಡಿದರೆಂದು ತಿಳಿಯಬಂದಿದೆ. ಸರ್ ಬೇವೂರ್‌ರವರು ಕನ್ನಡಿಗರು. ಅವರಿಗೆ ಕನ್ನಡಿಗರ ಕುಂದುಕೊರತೆಗಳು ಚೆನ್ನಾಗಿ ಗೊತ್ತುಂಟು. ಕನ್ನಡಿಗರು ನಡಸುತ್ತಿರುವ ಈ ಚಳವಳಿಗೆ ಅವರ ಸಹಾಯ ದೊರೆತು ಪ್ರಯತ್ನ ಫಲಕಾರಿಯಾಗುತ್ತದೆಂದು ನಂಬಬಹುದಾಗಿದೆ.

ಅಂತು ಈ ಕೂಡಲೆ ಅಖಿಲ ಭಾರತ ರೇಡಿಯೋದಲ್ಲಿ ಕನ್ನಡಕ್ಕೆ ಸ್ಥಾನ ದೊರೆಯುವ ಲಕ್ಷಣಗಳು ಕಾಣಿಸುವುದಿಲ್ಲ. ಶ್ರೀ ದಿವಾಕರರು ಮತ್ತು ಗೆಳೆಯರ ಅರಿಕೆಗಳ ಫಲ 'ನಿರಾಶಾಜನಕವಾಗಿಲ್ಲ' ಎಂದು ತಿಳಿದು ಬಂದಿದೆಯೇ ಹೊರತು 'ಆಶಾಜನಕವಾಗಿದೆ' ಎಂದು ತಿಳಿದುಬಂದಿಲ್ಲ. ಆದ್ದರಿಂದ ಕನ್ನಡಿಗರು ತಮ್ಮ ಚಳವಳಿಯನ್ನು ಇನ್ನೂ ಹೆಚ್ಚು ಜೋರಿನಿಂದ ನಡಸಿ ಯಶಸ್ಸು ಪಡೆಯಬೇಕಾಗಿದೆ.

### ಮೈಸೂರಿನಲ್ಲಿ

ಈ ಸಂದರ್ಭದಲ್ಲಿ ಮೈಸೂರು ಸರಕಾರದವರು ಒಂದು ಬ್ರಾಡ್‌ಕಾಸ್ಟಿಂಗ್ ಸ್ಟೇಷನ್ನು ತೆರೆಯುವರೆಂಬ ಸುದ್ದಿ ಕನ್ನಡಿಗರನ್ನು ಸಂತೋಷಗೊಳಿಸುವುದಾಗಿದೆ. ಮೈಸೂರಿನ ಈ ಆಕಾಶವಾಣಿಯಲ್ಲಿ ಕನ್ನಡಕ್ಕೆ ಹೆಚ್ಚಿನ ಸ್ಥಾನವಿರುವುದೆಂದು ಧಾರಾಳವಾಗಿ ಹೇಳಬಹುದು. ಅದರಿಂದ ಮೈಸೂರಿನವರಿಗೆ ಹೇಗೆಯೋ ಕರ್ನಾಟಕದ ಮಿಕ್ಕ ಸ್ಥಳಗಳವರಿಗೂ ಪ್ರಯೋಜನವಾಗುವಂತೆ ಮೈಸೂರು ಮತ್ತು ಇಂಡಿಯಾ ಸರಕಾರದವರು ಪರಸ್ಪರ ಸಹಕರಿಸಿ ತಕ್ಕ ವ್ಯವಸ್ಥೆ ಮಾಡಬೇಕೆಂದು ಸೂಚಿಸಲಿಚ್ಛಿಸುತ್ತೇನೆ.

### ಹೈದರಾಬಾದಿನಲ್ಲಿ

ಒಂದು ತಿಂಗಳ ಕಾಲ ನಿಲ್ಲಿಸಿದ್ದ ಹೈದರಾಬಾದು ಆಕಾಶವಾಣಿಯ ಕೇಂದ್ರವನ್ನು ಪುನರ್ಘಟಿಸಿ ಮತ್ತೆ ಸದ್ಯದಲ್ಲಿಯೇ ಪ್ರಾರಂಭ ಮಾಡುವರೆಂದು ತಿಳಿಯಬಂದಿದೆ. ಈ ಬಾರಿ ಸಂಸ್ಥಾನದಲ್ಲಿ ಮೂರು ಕಡೆ—ಕಲ್ಬುರ್ಗಿಯಲ್ಲಿ ಕನ್ನಡ, ಓರಂಗಲ್ಲಿನಲ್ಲಿ ತೆಲುಗು ಮತ್ತು ಔರಂಗಾಬಾದಿನಲ್ಲಿ ಮರಾಠಿ—ಈ ರೀತಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲು ಮೂರು ಉಪಕೇಂದ್ರಗಳನ್ನು ಸ್ಥಾಪಿಸುವರಂತೆ. ನಿಜಾಮು 'ಸರ್ಕಾರವರು ತಮ್ಮ ಕನ್ನಡ ಪ್ರಜೆಗಳ ಕೋರಿಕೆಯನ್ನು ಈಡೇರಿಸಲು ಮುಂದೆ ಬಂದದ್ದಕ್ಕಾಗಿ ಕನ್ನಡಿಗರು ಅವರಿಗೆ ಕೃತಜ್ಞರು.



ಶುಕ್ರವಾರ, ಮಾರ್ಚಿ ೧೫, ೧೯೪೦

## ಮಹಾಸ್ವಾಮಿಯವರಾದ ಸರ್. ಶ್ರೀ ಕಂಠೀರವ ನರಸಿಂಹರಾಜ ಒಡೆಯರ್, ಜಿ.ಸಿ.ಐ.ಇ. ಅವರು

೧೧ನೆಯ ತಾರೀಖು ಸೋಮವಾರ ಮುಂಬೆಳಗ್ಗೆ ಬೊಂಬಾಯಿಯಲ್ಲಿ ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್, ಜಿ.ಸಿ.ಐ.ಇ. ಅವರು ನಿಧನರಾದರೆಂದು ಇಲ್ಲಿ ಬರೆಯಬೇಕಾದ ಅತ್ಯಂತ ವಿಷಾದಕರವಾದ ಸಂದರ್ಭವುಂಟಾಗಿ ನಾವು ಬಹಳವಾಗಿ ದುಃಖಿಸುತ್ತೇವೆ.

ಶ್ರೀಮದ್ಯುವರಾಜರವರು ಮೊದಲಿನಿಂದಲೂ ಪರಿಷತ್ತಿನ ಪೋಷಕರು, ಮತ್ತು ಕಳೆದ ೧೭ ವರ್ಷಗಳಿಂದಲೂ ಅಧ್ಯಕ್ಷರು; ಪರಿಷತ್ತಿನ ಏಳಿಗೆಯಲ್ಲೂ ಕನ್ನಡದ ಮುನ್ನಡೆಯಲ್ಲೂ ಅಪಾರವಾದ ಅಭಿಮಾನವಿಟ್ಟಿದ್ದವರು, ಪ್ರೋತ್ಸಾಹ ಕೊಟ್ಟಿದ್ದವರು. ಈಗ ಕೆಲವು ವರ್ಷಗಳಿಂದಲೂ ಅವರು ಅಖಿಲ ಕರ್ನಾಟಕದ ಮಂಗಳದರ್ಶನವನ್ನು ಮನಸ್ಸಿನಲ್ಲಿಟ್ಟು, ಪರಿಷತ್ತಿನ ಕಾರ್ಯಕಲಾಪಗಳನ್ನು ವಿಶೇಷ ಕುತೂಹಲಾಸಕ್ತಿಗಳಿಂದ ಗಮನಿಸುತ್ತ, ಅನೇಕ ಬಗೆಗಳಲ್ಲಿ ಸಹಾಯಮಾಡುತ್ತ, ಅದನ್ನು ಹರಸುತ್ತ ಬಂದಿದ್ದರು. ಪರಿಷತ್ತಿನ ವಿಶೇಷ ಕಾರ್ಯಗಳಿಗೆ ಹಣದ ಆವಶ್ಯಕತೆ ಬಿದ್ದಾಗ ಅವರು ತಮ್ಮ ಔದಾರ್ಯವನ್ನು ತೋರುತ್ತಿದ್ದರು; ಪರಿಷತ್ತಿನ ಕಟ್ಟಡಕ್ಕಾಗಿ ೩,೦೦೦ ರೂ. ಗಳನ್ನು ಕೊಟ್ಟರು. ವಾಙ್ಮಯ ನಿಧಿಯೆಂದು ೨,೫೦೦ ರೂ.ಗಳನ್ನು ಕೊಟ್ಟರು. (ಈ ನಿಧಿಯಿಂದಲೇ ಪರಿಷತ್ತಿನ 'ಜ್ಯೋತಿರ್ವಿನೋದಿನಿ' ಪ್ರಕಟವಾಗಿರುವುದು, 'ಕನ್ನಡನಾಡ ಚರಿತ್ರೆ' ಪ್ರಕಟನೆಗೆ ಅಣಿಯಾಗುತ್ತಿರುವುದು). ವಸಂತ ಸಾಹಿತ್ಯೋತ್ಸವಗಳಿಗೆ ಪ್ರತಿ ವರ್ಷವೂ ೧೦೦–೧೫೦ ರೂ.ಗಳನ್ನು ಕೊಡುತ್ತಿದ್ದರು; ಅವರ ನೇತೃತ್ವದಲ್ಲಿ ಪರಿಷತ್ತು ಧೈರ್ಯ ಭರವಸೆಗಳಿಂದ ಮುನ್ನುಗ್ಗುತ್ತಿತ್ತು.

ಶ್ರೀಮದ್ಯುವರಾಜರವರು ಪರಿಷತ್ತಿನ ಸಂಬಂಧವಿಟ್ಟುಕೊಂಡು ಕನ್ನಡ ನುಡಿಯ ಉದ್ಧಾರಕ್ಕೆ ನೆರವಾಗುತ್ತಿದ್ದಂತೆ ಸಂಸ್ಥಾನದ ಇನ್ನೂ ಹಲವು ಸಂಘ ಸಂಸ್ಥೆ ವ್ಯವಸ್ಥೆಗಳ ನಾಯಕರಾಗಿ ಬಹುಮುಖವಾದ ರೀತಿಯಲ್ಲಿ ನಾಡಿನ ಉದ್ಧಾರ ಕಾರ್ಯದಲ್ಲಿ ಮಾರ್ಗದರ್ಶಕರಾಗಿದ್ದುಕೊಂಡು ಆದರ್ಶ ಪ್ರಭುಗಳ ಆದರ್ಶ ಸಹೋದರರಾಗಿದ್ದರು. ಸರಳತೆ, ಸ್ನೇಹಭಾವ, ಸೇವಾಶ್ರದ್ಧೆ, ಕಲಾಪ್ರೇಮ, ಕನ್ನಡನಾಡಿನಲ್ಲಿ (ಅದರಲ್ಲಿಯೂ ಮೈಸೂರಿನಲ್ಲಿ) ಹೆಮ್ಮೆ—ಇವು ಅವರ ಮುಖ್ಯ ಗುಣಗಳಾಗಿದ್ದುವು. ಅವರ ವಿದೇಶಪ್ರಯಾಣಗಳ ಅನುಭವಗಳನ್ನೆಲ್ಲಾ ತಮ್ಮ ನಾಡಿನವರಿಗೆ ಧಾರೆಯೆರೆಯುತ್ತಿದ್ದರು; ಏಳಿಗೆಯ ಸೂಚನೆಗಳನ್ನು ಕೊಡುತ್ತಿದ್ದರು. ಧರ್ಮಸಮನ್ವಯತೆಯಿಂದ ತರುಣರು ಒಕ್ಕಟ್ಟಾಗಿ ಸ್ವತಂತ್ರಭಾರತವನ್ನು ಸಾಧಿಸಬೇಕೆಂದು ಹಾರೈಸುತ್ತಿದ್ದರು.

ಇಂಥ ಮಹಿಮಾವಂತರ ನಿಧನದಿಂದ ಪರಿಷತ್ತಿಗೆ ಮಾತ್ರವಲ್ಲ, ಮೈಸೂರಿನ ಪ್ರಜೆಗೆ ಮಾತ್ರವಲ್ಲ, ಇಡಿಯ ಕನ್ನಡ ನಾಡಿಗೇ, ಭಾರತಕ್ಕೇ ಅಪಾರ ನಷ್ಟವಾಗಿದೆ, ಅಮಿತ ಶೋಕವುಂಟಾಗಿದೆ.

ಪರಿಷತ್ತು ತನಗುಂಟಾದ ಶೋಕವನ್ನು ವ್ಯಕ್ತಪಡಿಸುವ ಸಲುವಾಗಿ ಮೊನ್ನೆ (ತಾ॥ ೧೩ ಬುಧವಾರ ಸಂಜೆ) ಸಾರ್ವಜನಿಕ ಸಭೆಯನ್ನು ಕರೆದಿತ್ತು. ಸಭಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಎಸ್. ಹಿರಿಯಣ್ಣಯ್ಯನವರು ಈ ರೀತಿ ಭಾಷಣ ಮಾಡಿದರು:—

"ಈ ದಿವಸ ನಾವು ಇಲ್ಲಿ ಅತ್ಯಂತ ದುಃಖದಿಂದ ಸೇರಿದ್ದೇವೆ. ಆಳುವ ಮಹಾಸ್ವಾಮಿಯವರ ಸೋದರರಾದ ಶ್ರೀಮದ್ಯುವರಾಜರವರು ಚಿಕ್ಕ ವಯಸ್ಸಿನಲ್ಲೇ ಮೂರು ದಿನಗಳ ಹಿಂದೆ ದೈವಾಧೀನರಾದುದು ನಮ್ಮೆಲ್ಲರ ದುರ್ದೈವ. ಇದರಿಂದ ಮೈಸೂರು ರಾಜಮನೆತನಕ್ಕೂ ಪ್ರಜಾಸಮುದಾಯಕ್ಕೂ ಅಪಾರವಾದ ದುಃಖ ಉಂಟಾಗಿದೆ. ಶ್ರೀಮದ್ಯುವರಾಜರವರು ಯೂರೋಪಿನಿಂದ ಹಿಂದಿರುಗಿದಂದಿನಿಂದಲೂ ಕಾಯಿಲೆಯ ಸ್ಥಿತಿಯಲ್ಲಿಯೇ ಇದ್ದರು. ಆದರೂ ಅವರು ಇಷ್ಟು ಜಾಗ್ರತೆಯಾಗಿ ನಮ್ಮನ್ನಗಲುವರೆಂದು ಯಾರೂ ತಿಳಿದಿರಲಿಲ್ಲ.

"ಶ್ರೀಮದ್ಯುವರಾಜರು ತರುಣರಾಗಿದ್ದಾಗಲೆ ರಾಜಕೀಯ ವಿಷಯಗಳಲ್ಲಿ ಬಹಳ ಬುದ್ಧಿ ಕುಶಲತೆ ತೋರಿಸುತ್ತಿದ್ದರು. ಅವರು ಕೈಕೊಂಡ ಕೆಲಸಗಳಲ್ಲೆಲ್ಲ ಅತ್ಯಂತ ಉತ್ಸಾಹ ಶ್ರದ್ಧೆಗಳು ವ್ಯಕ್ತವಾಗುತ್ತಿದ್ದುವು. ಅವರಲ್ಲಿ ಅಪ್ರತಿಮವಾದ ದೇಶವಾತ್ಸಲ್ಯವೂ ಪ್ರಜೆಗಳ ವಿಷಯದಲ್ಲಿ ಗಾಢವಾದ ಅನುರಾಗವೂ ಇದ್ದುವು. ಸ್ಕೌಟಿಂಗ್, ಸಹಕಾರ, ಪೌರ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಆಸಕ್ತಿಯನ್ನು ತೋರಿ, ಆಯಾ ಚಳವಳಿಗಳು ವಿಚಕ್ಷಣೆಯಿಂದ ನಡೆಯಲು ತಮ್ಮ ಅನುಭವದಿಂದ ಅಮೋಘವಾದ ಸಲಹೆಗಳನ್ನು ಕೊಡುತ್ತಿದ್ದರು.

"ಪರಿಷತ್ತಿಗೆ ಹಲವು ವರ್ಷಗಳಿಂದ ಪೋಷಕರಾಗಿದ್ದು ಅವರು ಅನುಗ್ರಹಪೂರ್ವಕವಾಗಿ ನೀಡುತ್ತಿದ್ದ ಪ್ರೋತ್ಸಾಹ ಮತ್ತು ಸಹಾಯಗಳು ಅಪಾರವಾದುವು. ೧೯೨೪ ರಿಂದ ಅಧ್ಯಕ್ಷರಾಗಿದ್ದು ಪರಿಷತ್ತಿನ ಕಾರ್ಯಕಲಾಪಗಳನ್ನು ಅತ್ಯಂತ ಆಸಕ್ತಿಯಿಂದ ನಿರೀಕ್ಷಿಸಿ, ಪರಿಷತ್ತಿನ ಉನ್ನತಿಗೆ ಹಲವು ಬಗೆಯಲ್ಲಿ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಪರಿಷತ್ತಿನ ಅನೇಕ ಉತ್ಸವಗಳಿಗೆ ಮತ್ತು ಗ್ರಂಥಪ್ರಕಟನೆಗೆ ಔದಾರ್ಯದಿಂದ ದ್ರವ್ಯಸಹಾಯ ಮಾಡಿದ್ದಾರೆ. ತಾಯ್ನುಡಿಯಾದ ಕನ್ನಡದ ಬಗ್ಗೆ ಅವರಿಗಿದ್ದ ಪ್ರೇಮ ಆದರಗಳು ಅಷ್ಟಿಷ್ಟಲ್ಲ. ಅವರ ನಿಧನದಿಂದ ಪರಿಷತ್ತಿಗೆ ಬಹಳ ದೊಡ್ಡ ನಷ್ಟ ಸಂಭವಿಸಿದೆ."

ಬಳಿಕ ಸಭಾಧ್ಯಕ್ಷರು ಸೂಚಿಸಿದ ಈ ಕೆಳಗಿನ ಸಂತಾಪ ಸೂಚಕ ನಿರ್ಣಯವನ್ನು ಸಭೆ ಎದ್ದು ನಿಂತು ಮೌನದಿಂದ ಅಂಗೀಕರಿಸಿತು.

**ಕನ್ನಡ ಸಾಹಿತ್ಯ ಪರಿಷತ್ತಿನ ಪೋಷಕರೂ, ಬಹುಕಾಲದಿಂದ ಪರಿಷತ್ತಿನ ಅಧ್ಯಕ್ಷರೂ ಆಗಿದ್ದು, ಕನ್ನಡದ ಮತ್ತು ಕನ್ನಡ ನಾಡಿನ ಏಳಿಗೆಗಾಗಿ ಮಮತೆ ವಾತ್ಸಲ್ಯಗಳಿಂದ ಅನುಗ್ರಹ ಮಾಡುತ್ತ ಕನ್ನಡದ ಉದ್ಧಾರಕ್ಕೆ ಆಶ್ರಯದಾತರಾಗಿದ್ದ ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ. ಮಹಾಸ್ವಾಮಿಯವರು ಬೊಂಬಾಯಿಯಲ್ಲಿ ಕಾಲಾಧೀನರಾದುದರಿಂದ ಕನ್ನಡ ಸಾಹಿತ್ಯ ಪರಿಷತ್ತಿಗೂ ಅಖಿಲ ಕರ್ನಾಟಕಕ್ಕೂ ಆಗಿರುವ ಅಪಾರವಾದ ನಷ್ಟವನ್ನೂ ಶೋಕವನ್ನೂ ಪರಿಷನ್ಮಂದಿರದಲ್ಲಿ ನೆರೆದಿರುವ ಈ ಸಾರ್ವಜನಿಕ**

ಸಭೆ ವ್ಯಕ್ತಪಡಿಸಲು ಅಪ್ಪಣೆ ಬೇಡುವುದಲ್ಲದೆ ಶ್ರೀಮನ್ಮಹಾರಾಜರವರಿಗೂ ಶ್ರೀ ಜಯಚಾಮರಾಜ ಒಡೆಯರವರಿಗೂ ರಾಜಕುಟುಂಬದವರಿಗೂ ಹೃತ್ಪೂರ್ವಕವಾದ ಸಂತಾಪವನ್ನು ಬಿನ್ನೈಸುತ್ತದೆ.

ಆಮೇಲೆ, ಪರಿಷತ್ತಿನ ಉಪಾಧ್ಯಕ್ಷರು ಸೋಮವಾರವೇ ಪರಿಷತ್ತಿನ ಪರವಾಗಿ ಸಂತಾಪದ ಬಿನ್ನಹವನ್ನು ತಂತಿಯ ಮೂಲಕ ಶ್ರೀಮನ್ಮಹಾರಾಜರವರ ಮತ್ತು ಶ್ರೀ ಜಯಚಾಮರಾಜ ಒಡೆಯರವರ ಆಪ್ತಕಾರ್ಯದರ್ಶಿಗಳಿಗೆ ತಿಳಿಸಲಾಯಿತೆಂದು ಹೇಳಿ, ಸಭಾಧ್ಯಕ್ಷರಿಗೆ ಸಭೆಯ ಪರವಾಗಿ ವಂದನೆಗಳನ್ನು ಅರ್ಪಿಸಿದರು.

ನಮ್ಮ ಮತ್ತು ನಮ್ಮ ವಾಚಕರ ಪರವಾಗಿ, ಮೇಲ್ಕಂಡ ನಿರ್ಣಯದ ಸಂತಾಪಸೂಚನೆಯಲ್ಲಿ ನಾವೂ ಭಾಗಿಗಳಾಗಿದ್ದೇವೆ.

---

## ಶ್ರೀಮದ್ಯುವರಾಜರ ಘನ ವ್ಯಕ್ತಿತ್ವ

### ಸರ್ ಮಿರ್ಜಾ ಅವರ ಕಾಣಿಕೆ

ಮಾರ್ಚಿ ೧೪ರ ಸಂಜೆ ರಾಜಧಾನಿಯ ಟೌನ್ ಹಾಲಿನಲ್ಲಿ ಶ್ರೀಮದ್ಯುವರಾಜರವರ ನಿಧನಕ್ಕಾಗಿ ಅನುತಾಪ ಸೂಚಿಸಲು ಸಾರ್ವಜನಿಕ ಸಭೆ ಸೇರಿತ್ತು. ಸಭಾಧ್ಯಕ್ಷರಾಗಿದ್ದ ಮೈಸೂರು ಸಂಸ್ಥಾನದ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್ ಸಾಹೇಬರು ಶ್ರೀಮದ್ಯುವರಾಜರವರ ಗುಣಾತಿಶಯಗಳನ್ನು ವರ್ಣಿಸಿ ಹೃದಯಂಗಮವಾದ ಭಾಷಣ ಮಾಡಿದರು.

ಭಾಷಣದ ಸಾರಾಂಶವನ್ನು ಎತ್ತಿಕೊಡಬಯಸುತ್ತೇವೆ :

'ಶ್ರೀಮದ್ಯುವರಾಜರ ಸಹಪಾಠಿಯಾಗಿ ವಿದ್ಯಾಭ್ಯಾಸಮಾಡಿದ ನಾನು ಅವರ ಬುದ್ಧಿಶಕ್ತಿ, ಹೃದಯಾದ್ರ್ರತೆ, ನಡೆವಳಿಯ ನಯ, ಮುಂತಾದುವುಗಳನ್ನು ಚೆನ್ನಾಗಿ ಅರಿತವನಾಗಿದ್ದೇನೆ. ಕ್ರೀಡಾ ವಿನೋದಗಳಲ್ಲಂತು ಅವರಿಗೆ ಬಹಳ ಆಸಕ್ತಿ. ಆಳಿದ ಮಹಾಸ್ವಾಮಿಯವರಾದ ಶ್ರೀಚಾಮರಾಜೇಂದ್ರ ಒಡೆಯರ್ ಅವರು ಪರಂಧಾಮವನ್ನೈದಲು ಆಡಳಿತದ ಬಹುಮಟ್ಟಿನ ಜವಾಬ್ದಾರಿಗಳನ್ನು ಶ್ರೀಮನ್ಮಹಾರಾಜರವರೊಡನೆ ಶ್ರೀಮದ್ಯುವರಾಜರವರೂ ವಹಿಸಿಕೊಳ್ಳಬೇಕಾಯಿತು. ಶ್ರೀಮದ್ಯುವರಾಜರವರು ಸಾರ್ವಜನಿಕ ಹಿತದೃಷ್ಟಿಯ ಅನೇಕ ಕಾರ್ಯಗಳಲ್ಲಿ ಶ್ರೀಮನ್ಮಹಾರಾಜರವರಿಗೆ ಬೆಂಬಲವಾಗಿದ್ದರು.

'೧೯೧೪ರಲ್ಲಿ ಶ್ರೀಮದ್ಯುವರಾಜರು ಸಂಸ್ಥಾನದ ಆಡಳಿತದಲ್ಲಿ ವಿಶೇಷ ಭಾಗವಹಿಸಲಾರಂಭಿಸಿದರು. ಶ್ರೀಮನ್ಮಹಾರಾಜರವರಿಗೆ ಮಿಲಿಟರಿ ಸೆಕ್ರೆಟರಿಗಳಾಗಿದ್ದರು; ಮತ್ತು ಎಕ್ಸಿಕ್ಯುಟಿವ್ ಕೌನ್ಸಿಲ್ಲಿನ ವಿಶೇಷ ಸದಸ್ಯರೂ ಆಗಿದ್ದರು. ಆಗ್ಗೆ ಅವರು ಪೋಲೀಸ್, ಮೆಡಿಕಲ್, ಮಿಲಿಟರಿ ಸ್ಯಾನಿಟೇಷನ್ ಮತ್ತು ಬಂದೀಖಾನೆಗಳ ಆಡಳಿತ ಸಂಬಂಧವಾದ ಅಧಿಕಾರಸೂತ್ರವಹಿಸಿದ್ದರು. ೧೯೧೧ರಲ್ಲಿ ನೈಟ್‌ಹುಡ್ ಪ್ರಶಸ್ತಿ ಇವರಿಗೆ ಲಭಿಸಿತು. ೧೯೧೪ರಲ್ಲಿ ಯುದ್ಧ ಆರಂಭವಾದಾಗ ಶ್ರೀಮದ್ಯುವರಾಜರವರು ಸಂಸ್ಥಾನದ ಮಿಲಿಟರಿ ಸೂತ್ರಧಾರಿಗಳಾಗಿದ್ದರು. ರಣಕ್ಷೇತ್ರದಲ್ಲಿದ್ದ ಮೈಸೂರು ಯೋಧರಿಗೆ ಸೌಕರ್ಯಗಳನ್ನೊದಗಿಸಲೂ ಅವರ ಕುಟುಂಬಗಳಿಗೆ ಸಹಾಯ ನೀಡಲೂ ಆರಂಭಿಸಲ್ಪಟ್ಟ ವಿಶೇಷನಿಧಿಗೆ ಇವರೇ ಕಾರಣಕರ್ತರು. ೧೯೧೫ರಲ್ಲಿ ಶ್ರೀಮದ್ಯುವರಾಜರವರು 'ಗ್ರ್ಯಾಂಡ್ ಕಮ್ಯಾಂಡರ್ ಆಫ್ ದಿ ಎಂಪೈರ್' ಪ್ರಶಸ್ತಿ ಪಡೆದರು. ೧೯೧೮ರಲ್ಲಿ ಯುದ್ಧ ಸಂಬಂಧವಾಗಿ ನಡಸಿದ ಕಾರ್ಯಕ್ಕೆ ಇವರಿಗೆ ಸಾರ್ವಭೌಮರು 'ಹಿಸ್ ಹೈನೆಸ್' ಎಂಬ ವಿಶಿಷ್ಟ ಪ್ರಶಸ್ತಿಯನ್ನು ದಯಪಾಲಿಸಿದರು.

'ಅವರ ಭಾಷಣಗಳೆಲ್ಲವನ್ನೂ ಸೇರಿಸಿದರೆ ಅದೊಂದು ಬೃಹದ್ಗ್ರಂಥವಾಗುತ್ತದೆ; ಆ ಭಾಷಣಗಳಲ್ಲಿ ದಯಾದ್ರ್ರವಾದ ಮೇಧಾಶಕ್ತಿ ತುಂಬಿರುತ್ತದೆ.

'ಅವರು ಇತ್ತೀಚೆಗೆ, ತಮ್ಮ ಜೀವನದ ಅಂತ್ಯ ವರ್ಷಗಳಲ್ಲಿ ಹೆಚ್ಚು ಹೆಚ್ಚಾಗಿ ವಿದೇಶಗಳ ಪ್ರವಾಸ ಕಾರ್ಯಕ್ರಮಗಳನ್ನಿಟ್ಟುಕೊಂಡಿದ್ದರು. ಅವರು ವಿದೇಶಗಳಲ್ಲಿ ಪಡೆದ ಅನುಭವ, ಅಲ್ಲಿ ಅವರು ಇಟ್ಟುಕೊಂಡಿದ್ದ ಕಾರ್ಯಕ್ರಮಗಳ ಫಲವಾಗಿ ಅವರು ವಿಶಾಲ ಮನೋಭಾವವುಳ್ಳವರಾದರು. ಅವರ ನಾಮಾಂಕಿತದಲ್ಲಿರುವ ವಿಶಾಲವೂ ಸುಂದರವೂ ಆದ ಸಾಲುಮರಗಳ ಬೀದಿ (boulevard) ಅವರ ವಿಶಾಲ ಮನೋಭಾವನೆ, ಸೌಂದರ್ಯೋಪಾಸನೆ, ಅವರ ಸರ್ವಸಮತಾ ತತ್ತ್ವಗಳ ಸಂಕೇತವೋ ಎಂಬಂತಿದೆ.

'ಮತೀಯ ವಿಷಯಗಳಲ್ಲೂ ಶ್ರೀಮದ್ಯುವರಾಜರವರಿಗೆ ವಿಶೇಷ ಆಸಕ್ತಿಯಿತ್ತು. ಅವರು ಜುಲೈ ೧೬ನೆಯ ತಾರೀಖು ಮೈಸೂರಿನವರಿಗೂ ಭಾರತೀಯರಿಗೂ ರೇಡಿಯೋ ಮೂಲಕ ಕೊಟ್ಟ ಸಂದೇಶವೂ, ಲಂಡನ್ನನ್ನು ಬಿಟ್ಟು ಹೊರಡುವುದಕ್ಕೆ ಮೊದಲು ಅವರು ವಿವಿಧ ಮತಗಳ ಸಮ್ಮೇಳನಕ್ಕೆ ಕೊಟ್ಟ ಸಂದೇಶವೂ ಪರಸ್ಪರ ಸಹನೆ, ಐಕಮತ್ಯ ಮತ್ತು ಆಧ್ಯಾತ್ಮಿಕ ಪರಿಜ್ಞಾನಗಳನ್ನೇ ಪ್ರತಿಪಾದಿಸುತ್ತವೆ.

'ಶ್ರೀಮದ್ಯುವರಾಜರವರು ಮೈಸೂರಿನ ಪ್ರಜೆಗಳಿಗೆ ಕಳುಹಿಸಿದ ಸೌಹಾದ್ರ್ರಪೂರಿತ ಸಂದೇಶಗಳಿಂದ ಕೆಲವು ವಾಕ್ಯಗಳನ್ನು ಉಲ್ಲೇಖಿಸಿ ನನ್ನ ಭಾಷಣವನ್ನು ಮುಕ್ತಾಯಗೊಳಿಸುತ್ತೇನೆ :

'ಭಾರತದ ಸೋದರ ಕೋಮುಗಳಾದ ಹಿಂದೂ ಮತ್ತು ಮುಸ್ಲಿಂ ಕೋಮುಗಳು ಏಕಾಭಿಪ್ರಾಯಕ್ಕೆ ಬರುವಂತೆ ಮಾಡಲು ನಾವು ಪ್ರಯತ್ನಿಸೋಣ. ಅವೆರಡು ಕೋಮುಗಳ ಐಕಮತ್ಯ ಭಾರತದ ರಾಜಕೀಯ ಮತ್ತು ಆರ್ಥಿಕ ಪ್ರಗತಿಗೆ ಅತ್ಯಾವಶ್ಯಕ. ಈ ಮತಗಳೂ ಪ್ರಪಂಚದ ಇತರ ಮತಗಳೂ ಮೂಲತಃ ಒಂದೇ ಆಗಿವೆ. ಆ ಮತಗಳ ಬಾಹ್ಯ ಸ್ವರೂಪದಲ್ಲಿ ಮಾತ್ರ ಕೆಲವು ಭೇದಗಳು ಗೋಚರಿಸಬಹುದು. ಮಾನವನು ಪರಿಶುದ್ಧವಾದ, ಭಕ್ತಿಪಾರವಶ್ಯವಾದ ಆಧ್ಯಾತ್ಮಿಕ ಜೀವನವನ್ನು ನಡಸುವುದಕ್ಕೆ ಈ ಅಲ್ಪಭೇದ ಭಾವಗಳು ಪ್ರತಿಬಂಧಕಗಳಲ್ಲ. ವಿವಿಧ ಮನೋಭಾವಗಳಿಗನುಗುಣವಾಗಿ ವಿವಿಧ ಮತಗಳಿರಬೇಕೆಂಬ ಅಂಶಕ್ಕೆ ನಾವು ಲಕ್ಷ್ಯಕೊಡಬೇಕು. ಈ ವಿವಿಧ ಮತಗಳು ಸುನಾದವೊಂದರ ವಿವಿಧ ಸ್ವರಗಳಿದ್ದಂತೆ. ಸೂರ್ಯಕಿರಣ ಕಾಮನ ಬಿಲ್ಲಿನಲ್ಲಿ ವಿವಿಧ ರಾಗಗಳನ್ನು ಪ್ರದರ್ಶಿಸುವಂತೆ. ಎಲ್ಲ ಮತಗಳೂ ದೇವರ ಒಂದೇ ಸತ್ಯಸ್ವರೂಪವನ್ನು ಸಾರುತ್ತವೆ.'

'ಅವರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ನೀಡಲಿ.'

---

## ಕನ್ನಡ ಶಿಕ್ಷಣ ಪ್ರಸಾರಣೆ

ಗಡಿನಾಡಿನಲ್ಲಿ ಕನ್ನಡ ಪ್ರಚಾರ ಕಾರ್ಯ ಮಾಡಿ, ಸ್ಥಳೀಯ ಪರಿಸ್ಥಿತಿಯ ಪ್ರಭಾವದಿಂದ ನೆರೆನುಡಿಯನ್ನು ಕಲಿಯುತ್ತಿರುವ ಅಲ್ಲಿನ ಕನ್ನಡಿಗರಿಗೆ ಕನ್ನಡದಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಒಂದು 'ಕನ್ನಡ ಶಿಕ್ಷಣ ಪ್ರಸಾರಕ ನಿಧಿ'ಯನ್ನು ಏರ್ಪಡಿಸಬೇಕೆಂಬ ವಿಚಾರವಾಗಿ ಶ್ರೀ ಮುದವೀಡು ಕೃಷ್ಣರಾಯರು ಬರೆದು ಕಳಿಸಿರುವ ಲೇಖನವನ್ನು ಬೇರೆಯ ಕಡೆ ಪ್ರಕಟಿಸಿರುತ್ತೇವೆ. (ಪುಟ ೧೯೬) ಆ ಲೇಖನದ ಎಲ್ಲ ಅಂಶಗಳೂ ಬಹು ಮುಖ್ಯವಾಗಿದ್ದು, ಕನ್ನಡದ ಅಭಿಮಾನಿಗಳೆಲ್ಲರೂ ಅಗತ್ಯವಾಗಿ ಗಮನಿಸಿ, ಉದ್ದೇಶ ಸಾಧನೆಯ ಬಗ್ಗೆ ತಮ್ಮ ಸಹಾನುಭೂತಿಯನ್ನೂ ನೆರವನ್ನೂ ಕೊಡಬೇಕೆಂದು ನಾವು ಬೇಡುತ್ತೇವೆ.

ಪರಿಷತ್ತಿನ ಹಲವು ಮುಖ್ಯವಾದ ಉದ್ದೇಶಗಳಲ್ಲಿ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಪ್ರಚಾರ ಮತ್ತು ಸಂರಕ್ಷಣೆಗಳೂ ಸೇರಿವೆ ಎಂಬುದು ಎಲ್ಲರಿಗೂ ತಿಳಿದ ಅಂಶವೇ ಆಗಿದೆ. ಗಡಿನಾಡಿನ ಕನ್ನಡ ಕಲಿಯದ ಕನ್ನಡಿಗರಿಗೆ ಕನ್ನಡದ ಅಭಿಮಾನ ಹುಟ್ಟಿಸಿ, ಕನ್ನಡ ಶಿಕ್ಷಣ ಕೊಡುವುದು ಮೇಲಿನ ಉದ್ದೇಶಕ್ಕೆ ಅನುಸಾರವಾಗಿಯೇ ಇದೆ. ಆದ್ದರಿಂದ ಈ ವಿಚಾರದಲ್ಲಿ ಪರಿಷತ್ತಿಗೆ ಎಷ್ಟುಮಟ್ಟಿನ ಆಸಕ್ತಿಯಿದೆ ಎಂಬುದನ್ನು ಹೆಚ್ಚು ಹೇಳಬೇಕಾದ ಆವಶ್ಯಕತೆಯೇ ಇಲ್ಲ.

ಪರಿಷತ್ತೂ, ಹಾಗೂ ಪರಿಷತ್ತಿನ ಅಧಿಕಾರಿಗಳೂ ಕಾರ್ಯಸಮಿತಿಯ ಸದಸ್ಯರೂ ಸಮಯ ಸಂದರ್ಭ ದೊರೆತಾಗಲೆಲ್ಲ

ನಾಡಿನಲ್ಲೆಲ್ಲ ಸುತ್ತಾಡಿ, ಸಂಘ ಸಂಸ್ಥೆಗಳಲ್ಲಿ ಭಾಷಣ ಮಾಡಿ, ಹೊಸ ಸಂಘಗಳನ್ನು ಹುಟ್ಟುಹಾಕಿ, ಕನ್ನಡಕ್ಕಾಗಿ ದುಡಿಯುವವರಲ್ಲಿ ಹುರಿವುದುಂಬಿ, ಕೈಯಲ್ಲಾದ ಮಟ್ಟಿನ ಪ್ರಚಾರ ಕಾರ್ಯಮಾಡಿಕೊಂಡು ಬರುತ್ತಿದ್ದಾರೆ. ಆದರೂ, ಮುಖ್ಯವಾಗಿ ಗಡಿನಾಡಿನಲ್ಲಿ, ಪರಿಷತ್ತು ಎಷ್ಟುಮಟ್ಟಿಗೆ ನಿರೀಕ್ಷಿಸಿಕೊಂಡಿದೆಯೋ ಅಷ್ಟುಮಟ್ಟಿಗೆ ಪ್ರಚಾರಕಾರ್ಯ ನಡೆಯುತ್ತಿಲ್ಲ. ಶ್ರೀ ಕೃಷ್ಣರಾಯರ ಯೋಜನೆ ಪರಿಷತ್ತಿನ ನಿರೀಕ್ಷೆಯನ್ನು ಸಂಪೂರ್ಣವಾಗಿ ಪೂರೈಸುವುದಾಗಿದೆ.

ಇನ್ನು ಕನ್ನಡ ಶಿಕ್ಷಣದ ವಿಚಾರ: ಕನ್ನಡನಾಡಿನಲ್ಲಿರುವ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಿ, ಕನ್ನಡವರಿಯದವರಿಗೆ ಕನ್ನಡ ಕಲಿಸಿ, ಪರಿಷತ್ತನ್ನು ಜನಸಾಮಾನ್ಯರ ವಿದ್ಯಾಪೀಠವನ್ನಾಗಿ ಮಾಡಬೇಕೆಂಬ ಉದ್ದೇಶದಿಂದಲೂ, ಕನ್ನಡದಲ್ಲಿ ತಕ್ಕ ಮಟ್ಟಿನ ಪಾಂಡಿತ್ಯ ಉಂಟುಮಾಡಿಕೊಡುವ ಉದ್ದೇಶದಿಂದಲೂ ಪರಿಷತ್ತು ಮೂರುಮಟ್ಟದ ಸಾಹಿತ್ಯ ಪರೀಕ್ಷೆಗಳನ್ನು ಏರ್ಪಡಿಸಿ, ಕೆಲಸವೂ ಮೊದಲಾಗಿದೆಯಷ್ಟೆ. ಈ ಸಾಹಿತ್ಯ ಪರೀಕ್ಷೆಗಳು ನಾಡಿನಲ್ಲೆಲ್ಲಾ ವ್ಯವಸ್ಥಿತವಾಗಿ, ಪರಿಣಾಮಕಾರಿಯಾಗಿ ನಡೆಯಬೇಕಾದರೆ ಹೇರಳವಾದ ಜನ ಧನ ಸಹಾಯ ಅಗತ್ಯ. ಶ್ರೀ ಕೃಷ್ಣರಾಯರು ಸಲಹೆಮಾಡಿರುವಂತೆ ನಿಧಿಯೂ ಘಟನೆಯೂ ಏರ್ಪಾಟಾದಾಗ, ಆ ಸಂಬಂಧದ ಉದ್ದೇಶ ಸಾಧನೆಗೆ ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳ ಏರ್ಪಾಟನ್ನು ಮುಖ್ಯ ಸಾಧನಯಂತ್ರವಾಗಿ ಉಪಯೋಗಿಸಿಕೊಳ್ಳಬಹುದೆಂದು ನಾವು ಸೂಚಿಸಲಿಚ್ಛಿಸುತ್ತೇವೆ. ಹಾಗೆ ಮಾಡುವುದರಿಂದ ಶ್ರೀ ಕೃಷ್ಣರಾಯರ ಉದ್ದೇಶವೂ ಸಾಧನೆಯಾಗುವುದಲ್ಲದೆ, ನಾಡಿನಲ್ಲೆಲ್ಲ ಒಂದೇ ಕ್ರಮಕ್ಕೆ ಒಳಪಟ್ಟ ಕನ್ನಡ ಶಿಕ್ಷಣ ಪ್ರಸಾರಣೆಯಾಧಂತಾಗಿ, ನಾಡಿನಲ್ಲೆಲ್ಲ ಪರಿಷತ್ತಿನ ವರ್ಚಸ್ಸು ನೆಲಸಲು ಸಾಧ್ಯವಾಗುವುದು. ಈ ಎರಡೂ ಉದ್ದೇಶಗಳು ಒಟ್ಟಿಗೆ ನೆರವೇರುವ ರೀತಿಯಲ್ಲಿ, ಶ್ರೀ ಕೃಷ್ಣರಾಯರ ಅಮೋಘವಾದ ಸೂಚನೆ ಬೇಗನೆ ಕಾರ್ಯರೂಪಕ್ಕೆ ಬರಲೆಂದು ಹಾರೈಸುತ್ತೇವೆ.

---

## ಶ್ರೀ ಎಂ. ಆರ್. ಶ್ರೀ. ಅವರಿಗೆ ಪ್ರಶಸ್ತಿ

ಮೊನ್ನೆ ನಡೆದ ಶಿವರಾತ್ರಿಯ ಮಹೋತ್ಸವಕ್ಕೆ ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಯವರನ್ನು ಬಾದಾಮಿ ಬಳಿಯಿರುವ "ಶಿವಯೋಗ ಮಂದಿರ" ಸಂಸ್ಥೆಯವರು ಆಹ್ವಾನಿಸಿದ್ದರೆಂದೂ, ಎಂ. ಆರ್. ಶ್ರೀ. ಅವರ ಉಪನ್ಯಾಸವಾದ ಮೇಲೆ ಮಾರನೆಯ ದಿನ ಒಂದು ವಿಶೇಷ ಸಭೆಯನ್ನು ಕೂಡಿಸಿ ಅವರಿಗೆ "ವಚನ ವಾಙ್ಮಯ ವಿಶಾರದ" ಎಂಬ ಪ್ರಶಸ್ತಿಯನ್ನು ದಯಪಾಲಿಸಿದರೆಂದೂ ತಿಳಿಯಬಂದಿದೆ. ಶಿವಯೋಗ ಮಂದಿರಕ್ಕೆ ಹಾವೇರಿಯ ಶ್ರೀ ಶ್ರೀ ಶಿವಬಸವ ಸ್ವಾಮಿಗಳವರೂ, ನವಿಲುಗುಂದದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರೂ ಅಲ್ಲದೆ ಸುತ್ತಮುತ್ತಲಿನ ಗುಳೇದಗುಡ್ಡ, ರೋಣ, ಬಾಗಲಕೋಟೆ ಮುಂತಾದ ಕಡೆಗಳಿಂದ ಹಲವರು ಶ್ರೀ ಶ್ರೀಗಳವರೂ ದಯಮಾಡಿಸಿದ್ದರು. ಹಲವು ವರ್ಷಗಳಿಂದ ವೀರಶೈವ ಸಾಹಿತ್ಯಕ್ಕೆ ಸೇವೆ ಮಾಡುತ್ತಿರುವ ಶ್ರೀ ಎಂ. ಆರ್. ಶ್ರೀ. ಅವರನ್ನು ಈ ರೀತಿ ವೀರಶೈವ ಮಠಾಧಿಪತಿಗಳೂ, ವೀರಶೈವ ಮಹಾಜನರೂ ಪ್ರಶಸ್ತಿಯನ್ನು ಕೊಟ್ಟು ಆದರಿಸಿರುವುದು ಸಂತೋಷಕರವಾಗಿದೆ. ಶ್ರೀ ಎಂ. ಆರ್. ಶ್ರೀ. ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

## 'ಕನ್ನಡ ಶಿಕ್ಷಣ ಪ್ರಸಾರಕ ನಿಧಿ'

ಬರೆದವರು: ಮುದವೀಡು ಕೃಷ್ಣರಾಯರು

### ಮೊದಲ ಮಾತು

ಹದಿನೆಂಟು ಕಡೆಗೆ ಹರಿದು ಹಂಚಿ ಬಿದ್ದಿರುವ ಮೂಲಕ ತನ್ನ ನಾಡು ನುಡಿಗಳ ಹಿರಿಮೆಯನ್ನರಿಯದೆ ತನ್ನತನದ ಅರಿವನ್ನು ಮರೆತು ನೂರಿನ್ನೂರು ವರ್ಷಗಳಿಂದ ಸತ್ತಂತೆ ಬಿದ್ದಿದ್ದ ಕನ್ನಡ ಜನಾಂಗವನ್ನು ಎಚ್ಚರಿಸಿ, ಎಬ್ಬಿಸುವ ಪ್ರಯತ್ನಕ್ಕೆ ಪ್ರಾರಂಭವಾಗಿ ೫೦ ವರ್ಷಗಳಾಗುತ್ತ ಬಂದವು. ಮೊದಮೊದಲು ಅಲ್ಲಲ್ಲಿ ವಿಘಟಿತವಾಗಿ ನಡೆಯುತ್ತಿದ್ದ ಪ್ರಯತ್ನಗಳನ್ನು ಸುಸಂಘಟಿತಗೊಳಿಸುವ ಉಪಕ್ರಮ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಮೊದಲ್ಗೊಂಡು ಕೈಕೊಳ್ಳಲಾಯಿತು. ಅಂದಿನಿಂದ ಇಂದಿನ ವರೆಗಿನ ಈ ೨೫ ವರ್ಷಗಳಲ್ಲಿ ಕನ್ನಡ ನಾಡಿನಲ್ಲೆಲ್ಲಾ ಕಡೆಗೆ ಕನ್ನಡತನದ ಅರಿವು ಉಂಟಾಗಿ ಕನ್ನಡ ಭಾಷೆ, ಕನ್ನಡ ಸಾಹಿತ್ಯ ಮೊದಲಾದ ಕನ್ನಡ ಸಂಸ್ಕೃತಿ ಸಾಧನಗಳ ಬೆಳವಣಿಗೆಗಾಗಿ ತಕ್ಕಮಟ್ಟಿಗೆ ಸಾಹಸ ಪಡಬೇಕೆಂಬ ಅಭಿಲಾಷೆ ಕನ್ನಡ ಜನಾಂಗದಲ್ಲಿ ಹಬ್ಬುತ್ತ ನಡೆದಿದೆ. ಆದರೂ ಇನ್ನೂವರೆಗೆ ನೆರೆನುಡಿಗಳ ಹಾವಳಿಯಲ್ಲಿ ಸಿಲುಕಿ ಮುಂಗಾಣದಂತಿರುವ ಲಕ್ಷೋಪಲಕ್ಷ ಕನ್ನಡಿಗರು ಕನ್ನಡನಾಡಿನಲ್ಲಿಯೇ ಬಳಲುತ್ತಿರುವುದು ನಮ್ಮ ಎಚ್ಚತ್ತ ಕನ್ನಡ ಬಾಂಧವರಿಗೆ ನಾಚಿಕೆಯ ಮಾತಾಗಿದೆ. ಆದುದರಿಂದ ಕನ್ನಡನಾಡಿನ ಇಂತಹ ಪ್ರದೇಶಗಳಲ್ಲಿ ಅಂದರೆ ಗಡಿನಾಡುಗಳಲ್ಲಿ ಕನ್ನಡ ವಿದ್ಯಾಭ್ಯಾಸದ ಆವಶ್ಯಕತೆಯನ್ನೂ ಮಹತ್ವವನ್ನೂ ಪ್ರಚಾರಕಾರ್ಯದ ಮೂಲಕ, ಅಲ್ಲಲ್ಲಿಯ ಕನ್ನಡಿಗರಿಗೆ ತಿಳಿಯ ಹೇಳಿ, ಅವರನ್ನು ಎಚ್ಚರಿಸಬೇಕಾದುದು ಅಗತ್ಯವಾಗಿದೆ. ಹಾಗೆಯೇ ಬೇರೆ ಪ್ರಯತ್ನಗಳಿಂದ, ಕನ್ನಡದ ಶಿಕ್ಷಣಕ್ಕೆ ಅನುಕೂಲತೆಯುಂಟಾಗಲಾರದ ಭಾಗಗಳಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸುವ ಹೆಚ್ಚಿನ ಕಾರ್ಯವನ್ನೂ ಕೈಕೊಳ್ಳಬೇಕಾಗಿದೆ. ಕನ್ನಡ ನಾಡಿನ ಆತ್ಯಂತಿಕ ಹಿತ ಸಂಬಂಧ ಅಡಕವಾಗಿರುವ ಈ ಮಹತ್ಕಾರ್ಯ ಹಣದ ಬಲವಿಲ್ಲದೆ, ಜನದ ಬಲವಿಲ್ಲದೆ ಎಂದಿಗೂ ನೀಗಲಾರದು. ಆದುದರಿಂದ ಈ ಕೆಲಸಕ್ಕೆ ಮೊದಲು ಬೇಕಾಗುವ ಹಣವನ್ನು ಕೂಡಿಸಲು 'ಕನ್ನಡ ಶಿಕ್ಷಣ ಪ್ರಸಾರಕ ನಿಧಿ'ಯನ್ನು ಏರ್ಪಡಿಸಲಾಗಿದೆ.

### ಘಟನೆ

೧. ಈ ನಿಧಿಗೆ 'ಕನ್ನಡ ಶಿಕ್ಷಣ ಪ್ರಸಾರಕ ನಿಧಿ' ಎಂದು ಹೆಸರು ಕೊಡಲಾಗಿದೆ.

೨. ಈ 'ಕನ್ನಡ ಶಿಕ್ಷಣ ಪ್ರಸಾರಕ ನಿಧಿಯ ಮುಖ್ಯವಾದ ಉದ್ದೇಶಗಳು ಹೀಗಿರುತ್ತವೆ:—

(ಅ) ಕನ್ನಡ ಶಿಕ್ಷಣಕ್ಕೆ ಅನುಕೂಲವಿಲ್ಲದೆ ನೆರೆನಾಡ ನುಡಿಗಳನ್ನು ಪರಿಸ್ಥಿತಿಯ ಒತ್ತಾಸೆಯ ಮೂಲಕ ಕಲಿಯಬೇಕಾಗುತ್ತಿರುವ ಕನ್ನಡ ನಾಡ ಗಡಿಸೀಮೆಗಳಲ್ಲಿ ವಾಸವಾಗಿರುವ ಕನ್ನಡಿಗರಿಗೆ ತಮ್ಮ ತಾಯಿನುಡಿಯಾದ ಕನ್ನಡವನ್ನು ಕಲಿಯುವ ಆವಶ್ಯಕತೆಯನ್ನೂ ಮಹತ್ವವನ್ನೂ ತಿಳಿಸಿಕೊಡಲು ಪ್ರಚಾರಮಾಡುವುದು.

(ಆ) ಕನ್ನಡ ನಾಡಿಗೆ ಸಂಬಂಧಪಟ್ಟ ಅಲ್ಲಲ್ಲಿಯ ಶಿಕ್ಷಣಾಧಿಕಾರಿಗಳೊಂದಿಗೆ ಚರ್ಚೆ ನಡಸಿ ಅವರ ಮನವೊಲಿಸಿ ಎಲ್ಲ ಕಡೆಗೂ ಕನ್ನಡ ಶಾಲೆಗಳಾಗುವಂತೆ ಪ್ರಯತ್ನಪಡುವುದು.

(ಇ) ಮೇಲಿನ (ಆ) ವಿಭಾಗದಲ್ಲಿ ಹೇಳಿದ ಪ್ರಯತ್ನಗಳು ಸಾಧ್ಯವಾಗದಿದ್ದಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಿ ಕನ್ನಡದ ಶಿಕ್ಷಣಕ್ಕೆ ಅನುಕೂಲತೆಗಳನ್ನು ಕಲ್ಪಿಸಿಕೊಡುವುದು.

(ಈ) ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ಇದೇ ಉದ್ದೇಶದಿಂದ ಕೆಲಸಮಾಡುತ್ತಿರುವ ಬೇರೆ ಸಂಘ ಸಂಸ್ಥೆಗಳಿಗೆ ಶಕ್ಯವಾದ ಮಟ್ಟಿಗೆ ಧನ ಬಲ ಜನ ಬಲವನ್ನೊದಗಿಸಿಕೊಟ್ಟು ಮತ್ತು ಬೇರೆ ವಿಧಗಳಿಂದ ಅವುಗಳಿಗೆ ನೆರವಾಗಿ ಅವುಗಳೊಡದ ಸಹಕರಿಸುವುದು.

(ಉ) ಗಡಿಸೀಮೆಗಳಲ್ಲಿ ಕನ್ನಡ ಭಾಷೆಯ ಹೆಚ್ಚಿನ ಪ್ರಸಾರಕ್ಕೆ ಸಹಾಯಕವಾಗಬಹುದಾದ ಬೇರೆ ಉಪಾಯಗಳನ್ನು ಹುಡುಕಿ ತೆಗೆದು ಅವುಗಳನ್ನು ಪ್ರಚಾರಮಾಡುವುದು.

**ಅಧಿಕಾರ ವಿವರಣೆ**

೩. ಈ ನಿಧಿಯನ್ನು ಕೂಡಿಸುವ ಹಾಗು ಅದನ್ನು ಉದ್ದಿಷ್ಟ ಕಾರ್ಯಗಳಿಗೆ ವಿನಿಯೋಗಿಸುವ ಸರ್ವಾಧಿಕಾರಗಳು ಅಖಿಲ ಕನ್ನಡ ನಾಡಿನ ಮಾನ್ಯ ಪ್ರತಿನಿಧಿಗಳನ್ನುಳ್ಳ ಒಂದು 'ವಿಶ್ವಸ್ತಮಂಡಲ' (Trust) ಕ್ಕೆ ಒಪ್ಪಿಸಲಾಗಿದೆ.

**ಮಂಡಲದ ರಚನೆ**

(ಅ) ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು.
(ಆ) ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷರು.
(ಇ) ನಡೆಯುವ ವರ್ಷದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರು.
(ಈ) ಮೇಲಿನ ಮೂವರೂ ತಮ್ಮೊಳಗೆ ವಿಚಾರಮಾಡಿ ನೇಮಿಸಿಕೊಳ್ಳಬಹುದಾದ ಕೊಡಗು–ದಕ್ಷಣ ಕನ್ನಡ ಪ್ರದೇಶದ ಪ್ರತಿನಿಧಿಗಳೊಬ್ಬರು.
(ಉ) ಮೇಲೆ ಳನೆಯ ವಿಧಿಯಲ್ಲಿ ಹೇಳಿದಂತೆ—ನೇಮಿಸಿಕೊಳ್ಳಬಹುದಾದ ನಿಜಾಮ ಕರ್ನಾಟಕ ಪ್ರಾಂತದ ಪ್ರತಿನಿಧಿಗಳೊಬ್ಬರು.

ಹೀಗೆ ೫ ಜನ ಸದಸ್ಯರಿರತಕ್ಕದ್ದು.

ಈ ನಿಧಿಯ ತಕ್ಕುದಾದ ವಿನಿಯೋಗಕ್ಕೆ ಈ ಐವರೂ ಸರಿಯಾಗಿಯೇ ಹೊಣೆಗಾರರು.

**ಕಾರ್ಯನಿರ್ವಾಹ ಸಂಸ್ಥೆ**

೫. ಈ ಐದು ಜನರ 'ವಿಶ್ವಸ್ತ ಮಂಡಲ'ದ ಸಭೆ ಸೇರಿದಾಗ ಮೂವರು ಸದಸ್ಯರು ಕೂಡಿದ್ದರೆ ಮಾತ್ರ ಮಂಡಲದ ಕೆಲಸಗಳು ಮುಂದೆ ನಡಸಲ್ಪಡತಕ್ಕದ್ದು.

**ಕಾರ್ಯನಿರ್ವಾಹ ಪದ್ಧತಿ**

ನಿಧಿಯನ್ನು ಕೂಡಿಸುವ ಉಪಕ್ರಮ, ಅದನ್ನು ವಿನಿಯೋಗಿಸುವ ರೀತಿ, ವಿಶ್ವಸ್ತಮಂಡಲದ ಅಧಿಕಾರಿಗಳನ್ನು ಆರಿಸುವುದು, ಮಂಡಲದ ಕೆಲಸಗಾರರನ್ನು ನಿಯಮಿಸುವದು, ಮಂಡಲದ ಕಾರ್ಯಪದ್ಧತಿ ಮೊದಲಾದವುಗಳ ನಿಷ್ಕರ್ಷೆಗಾಗಿ ಕಟ್ಟುನಿಟ್ಟಿನ ನಿಯಮನಿಬಂಧನೆಗಳನ್ನು ಗೊತ್ತುಪಡಿಸುವ ಅಧಿಕಾರ ವಿಶ್ವಸ್ತಮಂಡಲಕ್ಕಿದೆ.

**ನಿಧಿಯುನ್ನು ಕೂಡಿಸುವ ಮಾರ್ಗಗಳ ಬಗ್ಗೆ ಸೂಚನೆಗಳು**

೧ ಕನ್ನಡ ನಾಡಿನಲ್ಲೆಲ್ಲ ಕಡೆಗೆ 'ಕನ್ನಡ ಶಿಕ್ಷಣ ಪ್ರಸಾರಕ ಹಬ್ಬ'ವನ್ನಾಚರಿಸುವುದಕ್ಕಾಗಿ ೨ ದಿನಗಳನ್ನು ಗೊತ್ತುಪಡಿಸಬೇಕು. ಇವು ಶನಿವಾರ ರವಿವಾರ ನಡೆಯಬೇಕು.

೨ ಕನ್ನಡ ನಾಡಿನ ಪ್ರಾಥಮಿಕ ಮಾಧ್ಯಮಿಕ ಹಾಗೂ ಉಚ್ಚ ಶಿಕ್ಷಣ ಸಂಸ್ಥೆಗಳೂ, ಕರ್ನಾಟಕ ಸಂಘಗಳೂ, ಕನ್ನಡ ನಾಡು ನುಡಿಗಳ ಸೇವೆಗಾಗಿ ಕೆಲಸ ಮಾಡುತ್ತಿರುವ ಬೇರೆ ಸಂಘ ಸಂಸ್ಥೆಗಳೂ, ಎಲ್ಲ ಕಡೆಯ ಪ್ರಮುಖ ಕನ್ನಡನಾಡ ಭಕ್ತರೂ ಈ ಕಾರ್ಯದಲ್ಲಿ ಸಂಪೂರ್ಣ ಸಹಾನುಭೂತಿಯಿಂದ ಸಹಕರಿಸಬೇಕು.

೩ ಶನಿವಾರವನ್ನು 'ಕುವರರ ಹಬ್ಬ'ವಾಗಿಯೂ ರವಿವಾರವನ್ನು 'ಹಿರಿಯರ ಹಬ್ಬ'ವಾಗಿಯೂ ಆಚರಿಸಬೇಕು.

೪ ಈ ಹಬ್ಬವನ್ನಾಚರಿಸುವ ಆವಶ್ಯಕತೆಯನ್ನೂ, ಮಹತ್ವವನ್ನೂ, ಉಪಯುಕ್ತತೆಯನ್ನೂ ವಿವರಿಸುವ ಹಸ್ತಪತ್ರಿಕೆಗಳನ್ನು ಮೊದಲೇ ಹಂಚಿ ನಿಧಿಗೆ ಸಹಾಯ ಮಾಡಲು ಜನರಲ್ಲಿ ತಿಳಿವಳಿಕೆಯನ್ನುಂಟುಮಾಡಬೇಕು.

೫ ಶನಿವಾರದ ದಿನ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಸಭೆ ಕೂಡಿಸಿ ಪ್ರಕೃತದಲ್ಲಿ ಕನ್ನಡ ನಾಡಿನಲ್ಲಿ ಕನ್ನಡದ ಶಿಕ್ಷಣಕ್ಕೆ ಒದಗಿರುವ ದುರ್ದೆಸೆಯನ್ನು ತಿಳಿಸಿ ಹೇಳಿ, ಅದನ್ನು ನಿವಾರಿಸಲು ಕೈಕೊಳ್ಳಲಾಗುವ ಕ್ರಮಗಳನ್ನು ವಿಶದಪಡಿಸಿ ಕಾಲಾಣೆ, ಅರ್ಧಾಣೆ, ಒಂದಾಣೆ ಮೊದಲಾಗಿ ವಿದ್ಯಾರ್ಥಿಗಳಿಂದ ನಿಧಿಗೆ ಚಂದಾ ತೆಗೆದುಕೊಳ್ಳಬೇಕು.

೬ 'ಹಿರಿಯರ ಹಬ್ಬ'ದ ದಿವಸ ಬೆಳಗ್ಗೆ ಊರಲ್ಲಿ ನಗರ ಸಂಕೀರ್ತನೆಗಳನ್ನು ಏರ್ಪಡಿಸಿ ಜನಜಾಗೃತಿ ಮಾಡಿ ಮನೆಮನೆಗೆ ನಿಧಿ ಕೂಡಿಸುವ ವ್ಯವಸ್ಥೆ ಮಾಡಬೇಕು. ಸಾಯಂಕಾಲ ಸಾರ್ವಜನಿಕ ಸಭೆ ಸೇರಿಸಿ ನಿಧಿಯ ಉದ್ದೇಶ ವ್ಯವಸ್ಥೆಯ ಪ್ರಕಾರಗಳನ್ನು ತಿಳಿಸಿ ನಿಧಿಯ ಸುರಕ್ಷತತೆಯ ಹಾಗೂ ಸದ್ವಿನಿಯೋಗದ ಬಗ್ಗೆ ಅಲ್ಲಲ್ಲಿಯ ಪ್ರಮುಖ ಕಾರ್ಯಕರ್ತರು ಸಾರ್ವಜನಿಕರಿಗೆ ಆಶ್ವಾಸನ ಕೊಡಬೇಕು.

೭ ೧ ರೂಪಾಯಿ ಅಥವಾ ಅದಕ್ಕೂ ಹೆಚ್ಚಿನ ಹಣ ಕೊಡುವವರಿಗೆ ಅಧಿಕೃತವಾದ ರಸೀತಿಗಳನ್ನು ಕೊಡಬೇಕು.

೮ ಇಂಥ ರಸೀತಿಗಳನ್ನು, ಲೆಕ್ಕಪತ್ರದ ವ್ಯವಸ್ಥಿತ ನಿರೀಕ್ಷಣೆ ಬಗ್ಗೆ ಬೇಕಾಗಬಹುದಾದ ಎಲ್ಲ ವಿಧಗಳ ನಮೂನೆಗಳನ್ನು ಪ್ರಚಾರಕ್ಕೆ ಬೇಕಾಗುವ ಎಲ್ಲ ಬಗೆಯ ಪತ್ರಿಕೆಗಳನ್ನು ಮೊದಲಾದುವುಗಳನ್ನು ವಿಶ್ವಸ್ತ ಮಂಡಲದ ಅಧಿಕೃತ ಅಧಿಕಾರಿಗಳೇ ಮುದ್ರಿಸಿ ಎಲ್ಲ ಕಡೆಗೆ ಮುಟ್ಟಿಸಬೇಕು.

೯ ಎಲ್ಲ ಕಡೆಗೆ ಕಲೆಹಾಕಲಾದ ಹಣ ಕೇಂದ್ರ ಕಚೇರಿಗೆ ಸಕಾಲಕ್ಕೆ ಬರುವಂತೆಯೂ ಲೆಕ್ಕಪತ್ರಗಳೆಲ್ಲ ಸರಿಯಾಗಿರುವಂತೆಯೂ ತಕ್ಕುದಾದ ದಕ್ಷತೆಯ ವ್ಯವಸ್ಥೆಯನ್ನು ಮಾಡತಕ್ಕದ್ದು.

೧೦ ನಿಧಿಯ ಸುರಕ್ಷತತೆಯ ಬಗ್ಗೆ ಮತ್ತು ಅದರ ಯೋಗ್ಯ ವಿನಿಯೋಗದ ಬಗ್ಗೆ ಆವಶ್ಯಕವಾದ ಎಲ್ಲ ನಿಯಮ ನಿಬಂಧನೆಗಳನ್ನು ವಿಶ್ವಸ್ತಮಂಡಲದವರು ಮಾಡಿಕೊಂಡು ಆ ಪ್ರಕಾರವಾಗಿಯೇ ಮುಂದೆ ಕೆಲಸ ನಡಸತಕ್ಕದ್ದು.

---

## ಪರಿಷತ್ತಿನ ಸುದ್ದಿ

ಶ್ರೀಮದ್ಯುವರಾಜರವರು ನಿಧನರಾದುದಕ್ಕೆ ಪರಿಷತ್ತಿನ ಪರವಾಗಿ ಉಪಾಧ್ಯಕ್ಷರು ಕಳೆದ ಸೋಮವಾರ ಶ್ರೀಮನ್ಮಹಾರಾಜರವರಿಗೂ ರಾಜಕುಟುಂಬದವರಿಗೂ ಸಂತಾಪ ಸೂಚಕ ತಂತಿ ಕಳಿಸಿದ್ದಕ್ಕೆ ಮಹಾಸ್ವಾಮಿಯವರ ಹುಜೂರು ಕಾರ್ಯದರ್ಶಿಗಳವರಾದ ರಾಜಸಭಾಭೂಷಣ ಟಿ. ತಂಬೂಚೆಟ್ಟಿಯವರು ಪರಿಷತ್ತಿಗೆ ವಂದನೆಗಳನ್ನು ಕಳಿಸಿದ್ದಾರೆ.

ಇದೇ ಫೆಬ್ರುವರಿ ೧೩ನೆಯ ತಾರೀಖು ಬುಧವಾರ ಸಂಜೆ ೬ ಘಂಟೆಗೆ ಪರಿಷನ್ಮಂದಿರದಲ್ಲಿ ಶ್ರೀಮದ್ಯುವರಾಜರವರ ನಿಧನದ ಪ್ರಯುಕ್ತ ಸಂತಾಪಸೂಚಕ ಸಭೆ ರಾಜಸೇವಾಸಕ್ತ ಶ್ರೀಮಾನ್ ಎಸ್. ಹಿರಿಯಣ್ಣಯ್ಯ, ಎಂ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಗೆ ಶ್ರೀಗಳಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು, ರಾವ್‌ಬಹದ್ದೂರ್ ಬಿ. ವೆಂಕಟೇಶಾಚಾರ್ಯರು, ಬೆಳ್ಳಾವೆ ವೆಂಕಟನಾರಾಯಣಪ್ಪನವರು, ರಾಜಧರ್ಮಪ್ರಸಕ್ತ ಕೆ. ಶಂಕರನಾರಾಯಣರಾಯರು, ಪ್ರೊ॥ ಎಲ್. ರಾಮರಾಯರು, ಜಿ. ಪರಮಶಿವಯ್ಯನವರು, ಡಿ. ಸಿ. ಸುಬ್ಬರಾಯಪ್ಪನವರು ಜಿ. ಶಾಂತವೀರಪ್ಪನವರು, ಎನ್. ಬಾಲಕೃಷ್ಣಯ್ಯನವರು, ಬಿ. ಪುಟ್ಟಯ್ಯನವರು, ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು, ಸಿ. ಕೆ. ವೆಂಕಟರಾಮಯ್ಯನವರು, ಶ್ರೀಮತಿ ಆರ್. ಕಲ್ಯಾಣಮ್ಮನವರು, ಶ್ರೀಮತಿ ಸುಂದರಮ್ಮನವರು, ಶ್ರೀಮತಿ ಡಿ. ಚಂಪಾಬಾಯಿಯವರು ಇವರೇ ಮುಂತಾದ ಅನೇಕ ಮಹನೀಯರೂ ಮಹಿಳೆಯರೂ ಬಂದಿದ್ದರು.

ಸಭಾಧ್ಯಕ್ಷರು ಶ್ರೀಮದ್ಯುವರಾಜರವರ ಗುಣಾತಿಶಯಗಳನ್ನು ತಿಳಿಯಹೇಳಿ ಭಾಷಣ ಮಾಡಿ, ಸಂತಾಪಸೂಚಕ ನಿರ್ಣಯವನ್ನು ಸಭೆಯ ಮುಂದೆ ಇಟ್ಟರು. (ಅಧ್ಯಕ್ಷ ಭಾಷಣದ ಸಾರಾಂಶವನ್ನೂ ನಿರ್ಣಯವನ್ನೂ ಸಂಪಾದಕೀಯ ಲೇಖನದಲ್ಲಿ ಕೊಟ್ಟಿದೆ.) ಸಭೆ ಎದ್ದು ನಿಂತು ನಿರ್ಣಯವನ್ನು ಅಂಗೀಕರಿಸಿತು. ಪರಿಷತ್ತಿನ ಉಪಾಧ್ಯಕ್ಷರು, ಮಲ್ಲೇಶ್ವರದಿಂದ ಏಕೀಕರಣ ಸಂಘ ಮತ್ತು ಕರ್ನಾಟಕ ಸಂಘಗಳ ಪರವಾಗಿ ಶ್ರೀ ಬೆನಗಲ್ ರಾಮರಾಯರೂ, ಬೊಂಬಾಯಿಯಿಂದ ಶ್ರೀ ಚೆನ್ನಕೇಶವಯ್ಯಂಗಾರ್ ಅವರೂ ಸಂತಾಪಸೂಚಿಸಿ ಪತ್ರಗಳನ್ನು ಬರೆದಿರುತ್ತಾರೆಂದು ತಿಳಿಸಿ, ಸಭಾಧ್ಯಕ್ಷರಿಗೆ ವಂದನೆ ಸಲ್ಲಿಸಿದ ಮೇಲೆ ಸಭೆ ಮುಗಿಯಿತು.

ಸೋಮವಾರ ಮತ್ತು ಗುರುವಾರ ಪರಿಷತ್ತಿನ ಕಚೇರಿ, ವಾಚನಾಲಯ ಮತ್ತು ಅಚ್ಚುಕೂಟಗಳನ್ನು ದಿವಂಗತ ಶ್ರೀಮದ್ಯುವರಾಜರವರ ಸ್ಮರಣಾರ್ಥವಾಗಿ ಮುಚ್ಚಲಾಗಿತ್ತು.

**ಮೈಸೂರು ಪ್ರಾಂತ ಸಮಿತಿ**

ನಾಟಕ ಉಪಸಮಿತಿಯ ವ್ಯವಸ್ಥಾಪಕರು ಕರೆದಿದ್ದ ನಾಟಕಾಭಿಮಾನಿಗಳ ಸಭೆ ಕಳೆದ ೧೦ನೆಯ ತಾರೀಖು ಭಾನುವಾರ ಸೇರಿ ಶ್ರೀ ಮಾಸ್ತಿಯವರ 'ಕಾಕನ ಕೋಟೆ', ಶ್ರೀ ಕೈಲಾಸಂ ಅವರ 'ಬಾತು ತೌರುಮನೆ' ಮತ್ತು 'ಸಂಸ' ಅವರ 'ವಿಗಡವಿಕ್ರಮರಾಯ'—ಈ ಮೂರು ನಾಟಕಗಳನ್ನು ಅಭಿನಯಿಸಲು ತೆಗೆದುಕೊಳ್ಳಬಹುದೆಂದು ಸಲಹೆ

**ಉತ್ತರ ಕರ್ನಾಟಕ ಪ್ರಾಂತಸಮಿತಿ**

ಕನ್ನಡ ಸಾಹಿತ್ಯ ಪರಿಷತ್ತಿನ ಉತ್ತರ ಕರ್ನಾಟಕ ಭಾಗದ ಪ್ರಾಂತಸಮಿತಿಯವರು ನಿರ್ಧರಿಸಿದ ಮೇರೆಗೆ ಬೆಳಗಾವಿ ಜಿಲ್ಲೆಗಾಗಿ 'ಜಿಲ್ಲಾ ಸಮಿತಿ'ಯೊಂದನ್ನು ಏರ್ಪಡಿಸಲು, ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರೆಲ್ಲರದೊಂದು ಸಭೆಯನ್ನು ಶನಿವಾರ ತಾ॥ ೧೬-೩-೪೦ನೆಯ ದಿವಸ ಸಂಜೆಯ ೫ ಘಂಟೆಗೆ ಬೆಳಗಾವಿಯಲ್ಲಿ, ಹನುಮನ ಬೀದಿಯೊಳಗಿನ ಕರ್ನಾಟಕ ಸಂಘದ ಕಚೇರಿಯಲ್ಲಿ ಕೂಡಿಸುವದು ಗೊತ್ತಾಗಿದೆ. ಆದುದರಿಂದ ಬೆಳಗಾವಿ ಜಿಲ್ಲೆಯೊಳಗಿನ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರೆಲ್ಲರೂ ಆ ಸಭೆಗೆ ದಯವಿಟ್ಟು ಬಂದು 'ಜಿಲ್ಲಾ ಸಮಿತಿ'ಯನ್ನು ಏರ್ಪಡಿಸಿ ಅದರ ಮುಖಾಂತರ ಜಿಲ್ಲೆಯಲ್ಲೆಲ್ಲ ಕನ್ನಡ ನುಡಿಯ ಏಳ್ಗೆಗಾಗಿ ಅವಶ್ಯವಿದ್ದ ಚಟುವಟಿಕೆಗಳನ್ನು ಕೈಕೊಳ್ಳುವುದಕ್ಕಾಗಿ ಸಹಕಾರಿಗಳಾಗಬೇಕೆಂದು ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾದ ಶ್ರೀ ಎಂ. ಪಿ. ವಾಲಿ ಅವರು ಬಿನ್ನವಿಸುತ್ತಾರೆ.

# ಕನ್ನಡ ಸುದ್ದಿ

**ಶಿಡ್ಲಘಟ್ಟ : ಕರ್ನಾಟಕ ಸಂಘ ಸ್ಥಾಪನೆ**

ಕೋಲಾರ ಜಿಲ್ಲೆಯ ಶಿಡ್ಲಘಟ್ಟದಲ್ಲಿ ಇದೇ ಮಾರ್ಚಿ ೯ನೆಯ ತಾರೀಖು ಶನಿವಾರ ಕರ್ನಾಟಕ ಸಂಘ ಸ್ಥಾಪಿತವಾಯಿತು. ಅಮಲ್ದಾರರಾದ ಶ್ರೀ ಜಿ. ಚನ್ನಬಸವಪ್ಪನವರು ಅಧ್ಯಕ್ಷರು. ಶ್ರೀ ಎಸ್. ರಾಜಶೇಖರಯ್ಯನವರು ಕಾರ್ಯದರ್ಶಿಗಳು.

ಕನ್ನಡನುಡಿಗೆ ಉತ್ತೇಜನ ಕೊಡುವುದು, ಪಂಡಿತರಿಂದ ಉಪನ್ಯಾಸ ಮಾಡಿಸುವುದು, ಗ್ರಾಮಾಭಿವೃದ್ಧಿ ಕಾರ್ಯ ಇವನ್ನು ನಡಸುವುದು ಸಂಘದ ಮುಖ್ಯ ಅಭಿಲಾಷೆಯಾಗಿವೆ. ಸಂಘ ತಿಂಗಳಿಗೆ ಎರಡು ಬಾರಿ ಸಭೆ ಸೇರಿ ವಿಚಾರ ವಿನಿಮಯ ಮಾಡಲು ತೀರ್ಮಾನಿಸಿದೆ.

**ನಲ್ಲೂರು ಗ್ರಾಮ : ಕರ್ನಾಟಕ ಸಂಘ ಸ್ಥಾಪನೆ**

ತಾ॥ ೨೨—೨—೧೯೪೦ನೆಯ ದಿನ ಚನ್ನಗಿರಿ ತಾಲ್ಲೂಕು ನಲ್ಲೂರು ಗ್ರಾಮದ ಮಾಧ್ಯಮಿಕ ಶಾಲೆಯಲ್ಲಿ, ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರೂ ಶಿವಮೊಗ್ಗ ಕರ್ನಾಟಕ ಸಂಘದ ಕಾರ್ಯದರ್ಶಿಗಳೂ ಆದ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಒಂದು ಕರ್ನಾಟಕ ಸಂಘವನ್ನು ಸ್ಥಾಪಿಸಿದರು. ಸ್ಥಳೀಯ ಡಾಕ್ಟರಾದ ಶ್ರೀ ಸೀತಾರಾಮ ಅಯ್ಯರ್ ಅವರು ಅಧ್ಯಕ್ಷರಾಗಿಯೂ, ಶ್ರೀ ಶರಣಪ್ಪ ಮತ್ತು ರಾಮಶೆಟ್ಟಿ ಇವರುಗಳು ಕಾರ್ಯದರ್ಶಿಗಳಾಗಿಯೂ ಇರತಕ್ಕದ್ದೆಂದು ತೀರ್ಮಾನವಾಗಿ ೮೩ ಜನರ ಒಂದು ಕಾರ್ಯಸಮಿತಿಯ ರಚನೆಯಾಯಿತು. ಅಧ್ಯಕ್ಷತೆ ವಹಿಸಿದ್ದ ಶ್ರೀ ಕೃಷ್ಣಮೂರ್ತಿರಾಯರು 'ಕನ್ನಡದ ಸಮಸ್ಯೆ ಮತ್ತು ಕರ್ನಾಟಕ ಸಂಘಗಳ ಕರ್ತವ್ಯ' ಎಂಬ ವಿಷಯವಾಗಿ ಭಾಷಣ ಮಾಡಿದರು.

**ಶಿವಮೊಗ್ಗ : ಕರ್ನಾಟಕ ಸಂಘ**

ತಾ॥ ೧೧—೩—೪೦ನೆಯ ದಿನ ಸಂಘದ ಗೌರವ ಅಧ್ಯಕ್ಷರಾದ ಶ್ರೀಮಾನ್ ಎಂ. ಶೇಷಾದ್ರಿ ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಸೇರಿದ ಕಾರ್ಯಸಮಿತಿಯ ವಿಶೇಷ ಸಭೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಕಲೆ, ಸಾಹಿತ್ಯ, ಸಂಸ್ಕೃತಿಗಳಿಗೆ ಪ್ರೋತ್ಸಾಹಕರೂ ಆಗಿದ್ದ ಶ್ರೀಮದ್ಯುವರಾಜರಾದ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ನಿಧನದ ಪ್ರಯುಕ್ತ ಕನ್ನಡ ನಾಡಿಗೆ ಆಗಿರುವ ಅಪಾರ ನಷ್ಟಕ್ಕಾಗಿ ಸಂತಾಪಸೂಚಕ ನಿರ್ಣಯವನ್ನು ಮಾಡಲಾಯಿತು. ನಿರ್ಣಯವನ್ನು ಶ್ರೀಮನ್ಮಹಾರಾಜರವರ ಹುಜೂರ್ ಕಾರ್ಯದರ್ಶಿಗಳಿಗೆ ತಂತಿ ಮೂಲಕ ಕಳುಹಿಸಲಾಯಿತು.

**ರುದ್ರಪಟ್ಟಣ : ಕರ್ನಾಟಕ ಸಂಘ**

ಈ ಸಂಘದ ೫ನೆಯ ವಾರ್ಷಿಕೋತ್ಸವ ೧೭ನೆಯ ತಾರೀಖು ಭಾನುವಾರ ಹಾಸನದ ಜಿಲ್ಲಾಧಿಕಾರಿಗಳಾದ ಶ್ರೀ ಟಿ. ರಾಮಯ್ಯ, ಬಿ. ಎ. (ಆನರ್ಸ್) ಅವರ ಅಧ್ಯಕ್ಷತೆಯಲ್ಲಿ ನಡೆಯುವುದು.

**ರಾಣೀಬೆನ್ನೂರು : ಕರ್ನಾಟಕ ಸಂಘ**

ಸಂಘದ ಅಧ್ಯಕ್ಷರಾದ ಡಾ॥ ಬಜೇಕಳ, ಎಂ.ಬಿ.ಬಿ.ಎಸ್. ಅವರ ಅಧ್ಯಕ್ಷತೆಯಲ್ಲಿ ಕಳೆದ ೯ನೆಯ ತಾರೀಖು ಮೇಲ್ಕಂಡ ಸಂಘದ ವಿಶೇಷಣ ಸುಧಾರಣ ಸಭೆ ಸೇರಿತ್ತು.

ದಿವಂಗತ ದೇಶಭಕ್ತ 'ಕರ್ನಾಟಕಭೂಷಣ' ಕೌಜಲಗಿ ಶ್ರೀನಿವಾಸರಾಯರ ಆತ್ಮಕ್ಕೆ ಚಿರಶಾಂತಿಯನ್ನು ಪರಮಾತ್ಮನು ದಯಪಾಲಿಸಲೆಂಬ ಪ್ರಾರ್ಥನೆಯ ಗೊತ್ತುವಳಿ ಸರ್ವಾನುಮತದಿಂದ ಸ್ವೀಕೃತವಾದ ಮೇಲೆ, ಘಟನಾ ಸಮಿತಿಯವರು ಮುಂದಿಟ್ಟ ವರದಿಯನ್ನು ಪರಿಶೀಲಿಸಿ ಹಲಕೆಲವು ತಿದ್ದುಪಡಿಗಳೊಡನೆ ಅದನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು.

ಶ್ರೀ ಜಿ. ಪಿ. ನಾಯಕರು ಸಂಯುಕ್ತ ಕರ್ನಾಟಕವಲ್ಲಿ 'ಕನ್ನಡ ಕಾಪಿರೈಟ್ ಲೈಬ್ರರಿ' ವಿಷಯವಾಗಿ ಸೂಚಿಸಿದ ಗೊತ್ತುವಳಿಗಳಿಗೆ ಮನ್ನಣೆಯನ್ನಿತ್ತು ಯೋಗ್ಯ ಅಧಿಕಾರಿಗಳ ಕಡೆಗೆ ಕಳಿಸಿಕೊಡಬೇಕೆಂದು ನಿರ್ಣಯಿಸಲಾಯಿತು.

ಮೊನ್ನೆ, ವಿಜಾಪುರದಲ್ಲಿ ಜರುಗಿದ ಅಖಿಲ ಕರ್ನಾಟಕಸ್ಥ ಮತ್ತು ಸಂಲಗ್ನ ಪ್ರಾಂತೀಯ ಮರಾಟಿಗರ ಸ್ನೇಹ ಸಮ್ಮೇಳನದವರು ಕೈಕೊಂಡ ಕನ್ನಡ ನಾಡ ಮತ್ತು ನುಡಿಯ ಅಪಮಾನಕಾರಕ ಮತ್ತು ಆಕ್ರಮಣಶೀಲ ವೃತ್ತಿಯನ್ನು ಕಡುತರವಾಗಿ ಟೀಕಿಸಿ, ಅವರ ಧೋರಣೆಯನ್ನು ಖಂಡಿಸಲಾಯಿತು.

ಕನ್ನಡ ಸಾಹಿತ್ಯ ಪರಿಷತ್ತಿನವರು ತಮ್ಮ ಅಂಗಸಂಸ್ಥೆಗಳನ್ನೆಲ್ಲ ಒಂದೇ ಹೆಸರಿನಲ್ಲಿ ನಡೆಯುವಂತೆ ಯೋಜನೆಯನ್ನು ಕೈಕೊಳ್ಳಬೇಕೆಂದು ಬಿನ್ನವಿಸಲಾಯಿತು. ಸಭಾಪತಿಗಳ ಅಭಾರ ಮನ್ನಣೆಯೊಂದಿಗೆ ಸಭೆಯ ಕಾರ್ಯಗಳು ಮುಗಿದುವು.

**ಧಾರವಾಡ : ಕನ್ನಡ ಸಂಶೋಧನ ಮಂಡಲ**

ಈ ಮಂಡಲದ ಆಶ್ರಯದಲ್ಲಿ ಸುಪ್ರಸಿದ್ಧ ಕನ್ನಡ ವಿದ್ವಾಂಸರೂ, ಸಾಹಿತಿಗಳೂ, ಪ್ರಾಕ್ತನ ಸಂಶೋಧಕರೂ ಆದ ಶ್ರೀಮಾನ್ ಗೋವಿಂದ ಪೈ, ಮಂಜೇಶ್ವರ ಅವರು ಕಳೆದ ೧೨, ೧೩, ೧೪ನೆಯ ತಾರೀಖುಗಳಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸಭಾಮಂಟಪದಲ್ಲಿ (೧) ರನ್ನನ ಪರಶುರಾಮಚರಿತ ಮತ್ತು ಚಕ್ರೇಶ್ವರ ಚರಿತೆಗಳನ್ನೂ ಗದಾಯುದ್ಧದ ರಚನಕಾಲವನ್ನೂ, (೨) ಬಸವೇಶ್ವರನ ಕಾಲ ನಿರ್ಣಯ ಮತ್ತು (೩) ನೃಪತುಂಗನ ಹಿಂದೆ ಕ್ರಿ. ಶ. ೩ನೆಯ ಶತಮಾನದ ವರೆಗಿನ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನೂ ಕುರಿತು ಮೂರು ಉಪನ್ಯಾಸಗಳನ್ನು ಮಾಡಿದರು.

**ಕೋಲಾರ : ಕನ್ನಡ ಸಾಹಿತ್ಯೋತ್ಸವ**

ಕೋಲಾರದ ಶ್ರೀ ಕೋಲಾರಮ್ಮನ (ಶ್ರೀ ಚಾಮುಂಡೇಶ್ವರಿ) ರಥೋತ್ಸವದ ಸಂಬಂಧವಾಗಿ ನಗರಸಭೆಯವರು ಏರ್ಪಡಿಸಿರುವ ಕನ್ನಡ ಸಾಹಿತ್ಯೋತ್ಸವದ ಪ್ರಾರಂಭ ಭಾಷಣ ಮಾಡಲು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಒಪ್ಪಿರುತ್ತಾರೆ. ಜಿಲ್ಲಾಧಿಕಾರಿಗಳಾದ ಶ್ರೀಮಾನ್ ಜಿ. ಸುಂದರರಾಯರು ಅಧ್ಯಕ್ಷತೆ ವಹಿಸುತ್ತಾರೆ. ಉತ್ಸವ ೧೭—೩—೪೦ ರಿಂದ ೨೩—೩—೪೦ರವರೆವಿಗೆ ನಡೆಯುತ್ತದೆ. ವಿದ್ವಾಂಸರಿಂದ ಉಪನ್ಯಾಸಗಳು, ಲಾವಣಿ ಸ್ಪರ್ಧೆಗಳು, ಮಕ್ಕಳ ಕಂಠಸ್ಪರ್ಧೆಗಳು, ಹಾಡುಗಾರಿಕೆ, ಅಭಿನಯ, ಆಟಪಾಟಗಳು, ಸಂಗೀತ, ಕೇಳಿಕೆ (ಬಯಲು ನಾಟಕ), ಕಾವ್ಯವಾಚನ ಮುಂತಾದ ಕಾರ್ಯಕ್ರಮಗಳು ನಡೆಯುವುವು. ಪೌರ ಸಭಾಧ್ಯಕ್ಷರೂ ಉತ್ಸವ ಸಮಿತಿಯ ಅಧ್ಯಕ್ಷರೂ ಆದ ಶ್ರೀ ಜಿ. ಬಿ. ಮಲ್ಲಾರಾಧ್ಯರು ಗೆಳೆಯರೊಡನೆ ಉತ್ಸವವನ್ನು ವಿಜೃಂಭಣೆಯಿಂದ ನಡಸಲು ದುಡಿಯುತ್ತಿದ್ದಾರೆ.

**ಬೆಳಗಾಂವಿ : ಕನ್ನಡ ಶಾಲೆಯ ಸ್ಥಾಪನೆಗೆ ಸಹಾಯ**

ಬೆಳಗಾಂವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ತೋಲಗಿಯಲ್ಲಿ ಸರಕಾರದವರು ಕನ್ನಡ ಶಾಲೆಯನ್ನು ಕಟ್ಟಿಸಿಕೊಟ್ಟರೆ ತಾವು ಸ್ವತಃ ೫೦೦ ರೂಪಾಯಿ ಕೊಡುವುದಾಗಿ ಶ್ರೀಮಾನ್ ಮಡಿವಾಳಪ್ಪ ಪಾಟೀಲರವರು ಮಾತು ಕೊಟ್ಟಿದ್ದಾರೆ. ತೋಲಗಿಯ ಜನ ತಮ್ಮೂರಿನಲ್ಲಿ ಬೇಗ ಕನ್ನಡ ಶಾಲೆ ಏರ್ಪಡಲೆಂದು ಹಾರೈಸುತ್ತಿದ್ದಾರೆ.

**ಧಾರವಾಡ : ಕರ್ನಾಟಕ ವಿದ್ಯಾವರ್ಧಕ ಸಂಘ**

ಮುಂಬಯಿ ಪ್ರಾಂತದ ದಕ್ಷಿಣಭಾಗದ ಅಸಿಸ್ಟೆಂಟ್ ಕಮಿಷನರಾದ ಶ್ರೀ ಹುಬ್ಬಳ್ಳಿಯವರು ಮೇಲ್ಕಂಡ ಸಂಘಕ್ಕೆ ಭೇಟಿ ಕೊಟ್ಟು, ಕನ್ನಡಿಗರೆಲ್ಲರೂ ಅದಕ್ಕೆ ಸಹಾಯಮಾಡಬೇಕೆಂದು ಬಿನ್ನವಿಸಿಕೊಂಡರು.

**ಸೊಲ್ಲಾಪುರ : ಕನ್ನಡ ಪರಿಷತ್ತು**

ಸೊಲ್ಲಾಪುರ ಜಿಲ್ಲೆಯಲ್ಲಿರುವ ಕನ್ನಡಿಗರಲ್ಲಿ ಜಾಗ್ರತಿಯನ್ನು ಕೆರಳಿಸಿ, ಅವರ ಏಳ್ಗೆಗಾಗಿಯೂ ಕನ್ನಡ ನುಡಿಯ ಪ್ರಚಾರಕ್ಕಾಗಿಯೂ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳಲು ಅಲ್ಲಿನ ಕರ್ನಾಟಕ ಸಂಘದವರು ಸದ್ಯದಲ್ಲಿಯೇ ಒಂದು ಸಮ್ಮೇಳನವನ್ನು ನಡಸಲು ನಿಶ್ಚಯಿಸಿರುವರೆಂದು ೧೬—೨—೪೦ ರ ಕನ್ನಡ ನುಡಿಯಲ್ಲಿ ತಿಳಿಸಲಾಗಿತ್ತಷ್ಟೆ. ಸಮ್ಮೇಳನದ ಪೂರ್ವಸಿದ್ಧತೆಗಳು ಭರದಿಂದ ಸಾಗುತ್ತಿವೆ. ಬ್ಯಾರಿಸ್ಟರ್ ಸರ್ದಾರರು ಗೆಳೆಯರೊಂದಿಗೆ ಸಮ್ಮೇಳನವನ್ನು ಯಶಸ್ವಿಯಾಗಿ ನಡಸಲು ದುಡಿಯುತ್ತಿದ್ದಾರೆ. ಈ ಸಂದರ್ಭದಲ್ಲಿ ವಿಜಾಪುರದ 'ಕರ್ನಾಟಕ ವೈಭವ'ದ ಸಂಪಾದಕರಾದ ಶ್ರೀ ನಾಯಕ ವೆಂಕಟರಾಯರು ಸಮ್ಮೇಳನದ ವ್ಯವಸ್ಥಾಪಕರೊಂದಿಗೆ ಮಾತು ಕತೆ ನಡಸಿ, ಸಹಕಾರ ನೀಡುವುದಾಗಿ ತಿಳಿಸಿದರೆಂದು ಗೊತ್ತಾಗಿದೆ.

**ಕಲ್ಕತ್ತ : ಪಿ. ಇ. ಎನ್. ಸಂಸ್ಥೆಯಲ್ಲಿ ಕನ್ನಡ ಸಾಹಿತಿಗಳ ಸನ್ಮಾನ**

ಶ್ರೀಮಾನ್ ರಂಗನಾಥ ದಿವಾಕರರೂ ದಿವಂಗತ ಕೌಜಲಗಿ ಶ್ರೀನಿವಾಸರಾಯರೂ ಕಲ್ಕತ್ತೆಗೆ ಹೋಗಿದ್ದಾಗ, ಬಂಗಾಳದ ಪಿ. ಇ. ಎನ್. (P.E.N.—ಸಾಹಿತಿಗಳು, ಪ್ರಬಂಧಕಾರರು ಮತ್ತು ಕಾದಂಬರಿಕಾರರ ಸಂಸ್ಥೆ) ಯವರು ಅವರನ್ನೂ, ಮೈಸೂರು ಸಂಘದ ಕಾರ್ಯದರ್ಶಿಗಳಾದ ಶ್ರೀ ಎ. ನಾರಾಯಣಸ್ವಾಮಿ ಮತ್ತು ಭಾರತ ಸಂಚಾರಿ ಗೋಸಾವಿಯವರನ್ನೂ ಆಮಂತ್ರಿಸಿ ಸತ್ಕರಿಸಿದರು. ಪಿ. ಇ. ಎನ್. ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಪ್ರಿಯರಂಜನ್ ಸೇನರಿಗೆ ಕನ್ನಡ ಭಾಷಾ ಸಾಹಿತ್ಯ ಸಂಸ್ಕೃತಿಗಳ ಪರಿಚಯ ತಕ್ಕಮಟ್ಟಿಗೆ ಇದೆ. ಶ್ರೀ ದಿವಾಕರರು ಕನ್ನಡ ಸಾಹಿತ್ಯದ ಬಗ್ಗೆ ಸ್ವಲ್ಪ ಹೊತ್ತು ಮಾತನಾಡಿದರು. ಬಳಿಕ ಶ್ರೀ ಗೋಸಾವಿಯವರು ಶ್ರೀ ಬೇಂದ್ರೆಯವರ 'ಕುಣಿಯೋಣ ಬಾರ' ಎಂಬ ಗೀತವನ್ನು 'ಗಥವಾಲಿ' ಕುಣಿತದ ಪದ್ಧತಿಗನುಗುಣವಾಗಿ ಹಾಡಿ ತೋರಿಸಿದರು. ಬಂಗಾಳಿ ಗೆಳೆಯರು ಗೀತದ ಮಾಧುರ್ಯಕ್ಕೆ ಮುಗ್ಧರಾದರು. ಒಬ್ಬರು ಕುತೂಹಲದಿಂದ ಅರ್ಥ ಕೇಳಿದರು. ಶ್ರೀ ದಿವಾಕರರು ಕೆಲವು ಸಾಲುಗಳ ಅರ್ಥ ಹೇಳಿದಾಗ ಬಂಗಾಳಿ ಗೆಳೆಯರ ಸಂತೋಷ ಇಮ್ಮಡಿಸಿತು.

---

# ಸಾದರ ಸ್ವೀಕಾರ

**ನವಚೇತನ :** ಮಾಸಪತ್ರಿಕೆ; ಸಂಪಾದಕರು: ಶ್ರೀ ರಾ. ವೆ. ವಾಲಗಳ್ಳಿ, ವೈದ್ಯ ಸಿರ್ಸಿ. ಕ್ರೌನ್ ೧/೪ ೪೦ ಪುಟಗಳು. ವಾರ್ಷಿಕ ವರ್ಗಣಿ ೧ ರೂ. ೮ ಆ. ಬಿಡಿ ಪತ್ರಿಕೆ ೧॥ ಆಣೆ.

ಸಿರ್ಸಿಯಿಂದ ಹೊರಡುತ್ತಿರುವ ಈ ಹೊಸ ಪತ್ರಿಕೆಯ ಐದನೆಯ ಸಂಚಿಕೆಯನ್ನು ಬಹಳ ಸಂತೋಷದಿಂದ ಸ್ವೀಕರಿಸಿದ್ದೇವೆ. 'ಕನ್ನಡಿಗರ ಹೃದಯ ತಂತಿಗಳನ್ನು ಮಿಾಟ ತನ್ನದೇ ಆದ ಒಂದು ರಾಗವನ್ನು ಇಂಪಾಗಿ ಹಾಡಿ ನಲಿದಾಡಬೇಕು' ಎಂಬ ಉದ್ದೇಶದಿಂದ ಹೊರಟಿರುವ ಪತ್ರಿಕೆ ಇದು. ಕನ್ನಡ ನಾಡಿನ ಏಳ್ಗೆಗಾಗಿ ದುಡಿಯುತ್ತಿರುವ ಇತರ ಪತ್ರಿಕೆಗೆ ಇದೂ ತನ್ನ ಕಾರ್ಯವನ್ನು ಯಶಸ್ವಿಯಾಗಿ ನಡಸಿ ಕೃತಕೃತ್ಯವಾಗಲೆಂದು ಹಾರೈಸುತ್ತೇವೆ.

೩೦-೯೦೦ —೧೯೪೦

ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ಕಾಸು




ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ



ಸಂಪುಟ ೨
ಸಂಚಿಕೆ ೨೨

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮಾರ್ಚಿ ೨೨, ೧೯೪೦

ಸಂಪಾದಕ: ಬಿ. ವೆಂಕೋಬರಾವ್, ಬಿ.ಎ.

ಕಾವ್ಯ ಸಮೀಕ್ಷೆ—೧.

## ವಾಗರ್ಥಾವಿವ

ಬರೆದವರು: ಶ್ರೀ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು

[ದೇಶ ಕಾಲ ವರ್ತಮಾನಗಳಿಗೆ ಅನುಸಾರವಾಗಿ ಪ್ರಕೃತಿಯ ಚಲನವಲನಗಳನ್ನೂ, ಒಟ್ಟು ಜಗತ್ತಿನ ಸ್ವರೂಪವನ್ನೂ ಒಳಗಣ್ಣ ನೋಟದಿಂದ ನೋಡಿ, ತನ್ನೊಂದು ಪ್ರತಿಭೆಯಿಂದ—ಸಾರ್ಥಕವಾದ ವಾಕ್ಪ್ರವಾಹದ ತುಂಬಿನಿಂದ—ಕೃತಿಸಾಗರವನ್ನು ನಿರ್ಮಿಸುವವನು ಕವಿ. ಕವಿಯ ಮನಸ್ಸಿಗೆ ಗೋಚರವಾಗುವ ವಿಶ್ವವಿಧಾನವೆಲ್ಲ ಪ್ರತಿಭೆಯ ಮೂಲಕ ಅವನು ನಿರ್ಮಿಸುವ ಕೃತಿಗೆ ಸಾಮಗ್ರಿ. ಕೃತಿ ಮಾಡಬೇಕೆಂಬ ಹಂಬಲು ಅವನಲ್ಲಿ ತುಂಬಿರುವುದೋ ಇಲ್ಲವೋ ಅದನ್ನು ಯಾರೂ ನಿರ್ಣಯಿಸುವಂತಿಲ್ಲ. ಈ ವಿಷಯದಲ್ಲಿ ವಿಮರ್ಶಕರ ದೃಷ್ಟಿ ಏನೆಂಬುದನ್ನು ಮುಂದಣ ಲೇಖನಗಳಲ್ಲಿ ವಿವೇಚಿಸಲಾಗುವುದು. ಅಂತು ಹಕ್ಕಿ ಹಾಡುವಂತೆ, ಕುಸುಮ ಬಿರಿದು ನರುಗಂಪು ಸೂಸುವಂತೆ, ತಂಗಾಳಿ ತೀಡುವಂತೆ ಕವಿ ಕೃತಿಮಾಡುತ್ತಾನೆ. ಹಾಗೆ ಕವಿ ಮಾಡಿದ ಕೃತಿಯ ರೀತಿಯನ್ನು ವಿವೇಚಿಸಿ ಅದರ ಸ್ವರೂಪವನ್ನು ವರ್ಣಿಸುವುದು ಈ ಲೇಖನಮಾಲೆಯ ಉದ್ದೇಶ. ಈ ಮೊದಲ ಲೇಖನ ಈ ಉದ್ದೇಶ ಸಾಧನೆಗೆ ತಳಹಾಯ. ಇದನ್ನು ಅನುಸರಿಸಿಯೇ ಮುಂದಣ ಲೇಖನಗಳನ್ನೆಲ್ಲ ಬರೆಯಲಾಗುವುದು. ಕವಿ ಮಾಡಿರುವ ಅಥವಾ ಮಾಡಹೋಗುವ ಕೃತಿಗಳ ಸಮೀಕ್ಷೆಯ ಅರಿವಿಗೆ ಇದು ನೆರವಾವರೆ—ಆಗಬಹುದೆಂದು ನನ್ನ ನಂಬುಗೆ—ನನ್ನ ಪ್ರಯತ್ನ ಹಣ್ಣಾದಂತೆ.]

ಅರ್ಥಪುಷ್ಟಿಯಿಲ್ಲದ ಶಬ್ದವೃಷ್ಟಿ, ಶಬ್ದಸೌಷ್ಠವವಿಲ್ಲದ ಅರ್ಥಪುಷ್ಟಿ ಇವೆರಡೂ ಸಹೃದಯರನ್ನು ಸಂತೋಷಗೊಳಿಸಲಾರದು. ಕವಿರಚನೆ ಇವೆರಡರಿಂದ ದೂರವಾಗಿ, ದೋಷವರ್ಜಿತವಾದ ಶಬ್ದಾರ್ಥಗಳೆರಡೂ ಅದರಲ್ಲಿ ಅಡಕವಾಗಿ ರಸಿಕನ ಹೃದಯಕ್ಕೆ ಆಹ್ಲಾದಕವಾಗಿರುತ್ತದೆ (**ಪದಾರ್ಥೌ ದೋಷವರ್ಜಿತೌ**). ಅರ್ಥವನ್ನನುಸರಿಸಿ ಶಬ್ದ ಆಗಿದೆಯೋ, ಶಬ್ದವನ್ನನುಸರಿಸಿ ಅರ್ಥ ಆಗಿದೆಯೋ ಅದು ಬಿಡಿಸಲಾಗದ ಗಂಟು. ಆದರೆ ಈ ಶಬ್ದಾರ್ಥಗಳಿಗೆ ಅಗಲದ ನಂಟು ಎಂದು ಅರಿತವರ ಗ್ರಹಿಕೆ. ಕಮನೀಯವಾದ ಶಬ್ದ ಕಾವ್ಯವೇ, ರಮಣೀಯವಾದ ಅರ್ಥ ಕಾವ್ಯವೇ ಎಂದು ಯಾರೂ ಸಂದೇಹಿಸದಿರರು. ಸಂದೇಹವಿಲ್ಲದಿರಲೆಂದೇ ದೋಷದೂರವಾದ ಶಬ್ದಾರ್ಥಗಳೆರಡರ ಸಮಾವೇಶ—ಪ್ರಸಾರ—ವೇ ಕಾವ್ಯದ ಮುಖ್ಯ ಸಾಮಗ್ರಿಯೆಂದು ಸಾಹಿತಿಗಳ ತೀರ್ಪು. ಈ ಕಾವ್ಯ ಸಾಮಗ್ರಿ ಸಮೃದ್ಧವಾಗಿರುವುದೇ ಕವಿತ್ವಸಿದ್ಧಿಗೆ (ಕಾವ್ಯಕ್ಕೆ) ಲಕ್ಷಣ. ಇದನ್ನೇ ಮಹಾಕವಿ ಕಾಳಿದಾಸನು, ಅಗಲದ ನಂಟುಳ್ಳ ವಾಗರ್ಥಗಳನ್ನು ಹರಪಾರ್ವತಿಯರಿಗೆ ಉಪಮಾನಕೊಟ್ಟು, ಆ ವಾಗರ್ಥಗಳ ಪ್ರತಿಪತ್ತಿಗಾಗಿ ಅವರನ್ನು ಸ್ತುತಿಸಿದ್ದಾನೆ (**ವಾಗರ್ಥಾವಿವ ಸಂಪೃಕ್ತೌ**). ಈ ಶಬ್ದಾರ್ಥಗಳ ಪರಿಪುಷ್ಟಿಯೇ ಕಾವ್ಯಧರ್ಮ. ಈ ಧರ್ಮವೊಂದು ಅಚ್ಚಳಿಯದಿದ್ದರೆ ಸಾಹಿತಿಗಳು ಹೇಳಿರುವ ಕಾವ್ಯ ಲಕ್ಷಣಗಳೆಲ್ಲ ಸಮನ್ವಯವಾದಂತೆಯೆ.

ಚಿತ್ರ ಬರೆಯುವವನಿಗೆ ವರ್ಣಸಂತತಿಯೆಂತೊ, ಅಂತೆ ಹೊರಗಣ ಒಳಗಣ ಭಾವದೃಶ್ಯಪ್ರದರ್ಶನಕ್ಕೆ ಕವಿಗಿರುವ ಸಾಧನ ಶಬ್ದಸಂತತಿ. ಚಿತ್ರಕಾರ ವರ್ಣ ಸಮ್ಮಿಶ್ರಣದಿಂದ ಕುಂಚದ ಮೂಲಕ ರೂಪವನ್ನು ಚಿತ್ರಿಸಿ ಪ್ರೇಕ್ಷಕನನ್ನು ಮುಗ್ಧಗೊಳಿಸುತ್ತಾನೆ. ಚಿತ್ರವನ್ನು ಕಂಡವನು ಅದು ವರ್ಣಗಳ ಒಕ್ಕೂಟವೆಂಬ ಭಾವಕ್ಕೆ ವಶ್ಯನಾಗದೆ ಚಿತ್ರಗತವ್ಯಕ್ತಿಯಲ್ಲಿರುವ ಸಮಸ್ತ ಭಾವಗಳ ಆಕರ್ಷಣೆಗೆ ತಲೆದೂಗುತ್ತಾನೆ (**ಯಥಾ ವಾ ಚಿತ್ರಲೇಖಕಃ**). ಕವಿ ಉತ್ತಮ ಭಾವುಕನೇ ಆದರೂ, ಉಚಿತ ಪದಸಂಗ್ರಹಣದಿಂದ ಅರ್ಥಪುಷ್ಟಿ ಬರುವಂತೆ ಯೋಜಿಸದಿದ್ದರೆ ಅವನು ಬರೆದ ಕಾವ್ಯ ರಸಿಕಮೋಹಕವೆನಿಸದು. ಉಚಿತ ಪದಸಂಗ್ರಹ, ಅದರ ಸಂಯೋಜನ ರೀತಿ—ಇವೆರಡೂ ಉತ್ತಮ ಕವಿಕೃತಿಯ ಹಾಸುಹೊಕ್ಕುಗಳು.

ಕವಿ ಉಚಿತ ಪದಸಂಗ್ರಹಣಕ್ಕಾಗಲಿ, ಪದಸಂಯೋಜನಕ್ಕಾಗಲಿ ಕ್ಲೇಶಪಡುವುದಿಲ್ಲ. ಕ್ಲೇಶಪಟ್ಟು ಬರೆದವನ ಬರಹ ಕಾವ್ಯವೆನಿಸುವುದಿಲ್ಲ. ಅಂಥವನು ಕವಿಯೆನಿಸುವನೆ! '**ಪದವಿಟ್ಟಳಿಸದೊಂದಗ್ಗಳಿಕೆ**' ಯಿಲ್ಲದವನು ಕವಿಯಾಗುವುದೆಂತು? ನೀಲಕಂಠ ಕವಿ ಹೇಳಿರುವಂತೆ '**ಉಚಿತ ಪದಾನ್ವೇಷಣಚಿತ್ತವೃತ್ತಿ**' ಯುಳ್ಳವನು ಕವಿಯೆನಿಸುವನೆ? ಉಚಿತ ಪದಗಳು ದೊರಕಿ ಅವುಗಳನ್ನು ಜೋಡಿಸಿ ಪದ್ಯಮಾಡಿದರೂ ಅರ್ಥ ಪದ ಜೋಡಣೆಯನ್ನು ಹೊಂದಿಕೊಂಡಿರಬೇಡವೆ? ಬೆದಕಿ ಬೆದಕಿ ಪದ ಕೂಡಿಸುವವನ ಕವಿತೆ(?) ಯಲ್ಲಿ ಅರ್ಥವೆಲ್ಲಿ ಬಂದೀತು? ಪದ ಪದಾರ್ಥ ಎರಡೂ ಸ್ನೇಹದಿಂದಿರುವುದು ಕವಿಯ ಕವಿತೆಯಲ್ಲಿ; ಪದ್ಯ ಲೇಖಕನ ಪದ್ಯದಲ್ಲಲ್ಲ. ಭವಭೂತಿ ಕವಿ ಹೇಳಿರುವಂತೆ '**ಲೌಕಿಕರಾದ ಸಜ್ಜನರ ವಾಗರ್ಥವನ್ನು ವಾಕ್ಕು ಅನುಸರಿಸುತ್ತದೆ. ಆದರೆ ಋಷಿ (ಕವಿ)ಯ ವಾಕ್ಕನ್ನು ಅರ್ಥವೇ ಅನುಸರಿಸಿ ಹೋಗುತ್ತದೆ**' (ಇಲ್ಲಿ 'ನಾನೃಷಿಃ ಕುರುತೇ ಕಾವ್ಯಂ' ಎಂಬ ಪ್ರಮಾಣದಿಂದ ಋಷಿ ಶಬ್ದಕ್ಕೆ ಕವಿಯೆಂದು ಅರ್ಥಮಾಡಿದೆ).

ವಾಗರ್ಥಗಳೆರಡೂ ಸಮರಸವಾಗಿ ಹೊಂದಿಕೊಂಡು ಕಾವ್ಯ ಹೃದಯಂಗಮವಾಗಬೇಕಾದರೆ ಕವಿಯಲ್ಲಿ ಪ್ರತಿಭೆ ಮೂರ್ತಿಮತ್ತಾಗಿರಬೇಕು. ಪ್ರತಿಭೆಯೆಂದರೆ ಕ್ಷಣ ಕ್ಷಣಕ್ಕೂ ಉಕ್ಕಿಬರುತ್ತಿರುವ ಶೀಲವುಳ್ಳ ಪ್ರಜ್ಞೆ (**ಪ್ರಜ್ಞಾಂ ನವನವೋನ್ಮೇಷಶಾಲಿನೀಂ ಪ್ರತಿಭಾಂ ವಿದುಃ**). ಈ ಪ್ರತಿಭೆಯೊಂದಿದ್ದರೆ ಭಾವೋನ್ನತಿ—ರಸಪುಷ್ಟಿ—ಪದಾರ್ಥ ವೈಭವ ಎಲ್ಲ ತಾನಾಗಿಯೇ ಬರುತ್ತದೆ. ಪ್ರತಿಭಾವಂತರನೇಕರಿರಬಹುದು. ಕವಿಗಳಿರುವುದು ವಿರಳ. ನಮ್ಮವರು ಈ ಪ್ರತಿಭೆ ಹಿಂದಣ ಜನ್ಮ ಸಂಸ್ಕಾರದ ಫಲವೆಂದು ಹೇಳುವರು. ಕವಿ ಪ್ರತಿಭಾವಂತನಾಗಿದ್ದು ಯಾವ ವಿಷಯವನ್ನು ಹೇಗೇ ಹೇಳಿದರೂ ಕವಿ ಸಹಜವಾದ ಶೈಲಿಯಲ್ಲಿಯೇ ಹೇಳಿ, ಸಮಸ್ತ ರಸವನ್ನೂ **ಕಿವಿಯಿಂದೀಂಟಿಸುತ್ತಾನೆ**. ಕಪ್ಪು ಬಿಳುಪಾಗಿ, ಬಿಳುಪು ಕಪ್ಪಾಗಿ, ಲತೆ ಪೆಣ್ಣಾಗಿ, ಪೆಣ್ಣೆ ಲತೆಯಾಗಿ, ಕಣ್ಣೆ ತಾವರೆಯಾಗಿ, ತಾವರೆ ಕಣ್ಣಾಗಿ, ಸ್ತುತಿ ನಿಂದೆಯಾಗಿ, ನಿಂದೆ ಸ್ತುತಿಯಾಗಿ ಮೆರೆಯುವುದು **ಕವಿಪ್ರತಿಭೆಯಿಂದ**—ಅವನ **ವಾಗರ್ಥವೈಭವದಿಂದ**. ಈ ವಿಷಯದಲ್ಲಿ 'ಲೀಲಾವತಿ' ಕಾರನಾದ ನೇಮಿಚಂದ್ರ ಮುಗಿಲುಮುಟ್ಟಿಸಿರುವ ಕವೀಂದ್ರ ವೈಭವವನ್ನು ಸ್ಮರಿಸಬಯಸುವೆವು:

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ, ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟದರ್
ಮುಟ್ಟದರಿಕ್ಕಿ ಮೆಟ್ಟದರಿದೇನಳವಗ್ಗಳಮೋ ಕವೀಂದ್ರರಾ

ಅಂತು ವಾಗರ್ಥ ವಿವೇಕ, ಭಾವೋನ್ನತಿ, ಇವೆಲ್ಲಕ್ಕೂ **ಬೀಜರೂಪವಾದ ಪ್ರತಿಭೆ ಇದ್ದರೆ ಕವಿ. ಅವನಿಂದ ಕಾವ್ಯ.**

**ಬೀಜಂ ಹಿ ತಸ್ಯಾಃ ಕವಿತಾ ಲತಾಯಾಃ**
**ಪ್ರಾಂಚೋವದಂತಿ ಪ್ರತಿಭಾ ವಿಶೇಷಂ**

# ಕನ್ನಡ ಸಂಸ್ಕೃತಿಯ ವಿಶೇಷ ಕುರುಹುಗಳು

ರೇಡಿಯೋ ಭಾಷಣ: ಶ್ರೀ॥ ಮುದವೀಡು ಕೃಷ್ಣರಾಯರಿಂದ

ನಮ್ಮ ಕನ್ನಡ ನಾಡು ಬಹು ಪುರಾತನಕಾಲದಿಂದಲೂ ಹಿಂದೂಸ್ಥಾನದ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಪ್ರಾಚೀನ ಮಹಾ ಕಾವ್ಯಗಳಾಗಿರುವ ರಾಮಾಯಣ ಭಾರತಗಳಲ್ಲಿಯೂ ಇದರ ಉಲ್ಲೇಖವುಂಟು. ಆಗಿನಿಂದಲೇ ಇದು ತನ್ನದೇ ಆದ ಒಂದು ವಿಶಿಷ್ಟ ಬಗೆಯ ಸಂಸ್ಕೃತಿಯ ಬೆಳವಣಿಗೆ ಸ್ವತಂತ್ರವಾದ ಜನಪದವೆಂದು ಕೀರ್ತಿವೆತ್ತು ಮೆರೆದಿದೆ. ಕನ್ನಡನಾಡಿನ ಈ ವಿಶಿಷ್ಟ ಸಂಸ್ಕೃತಿಯ ಸ್ವರೂಪವೆಂತಹುದೆಂಬುದನ್ನು ಈಗ ನಿಮಗೆಲ್ಲ ಸಂಕ್ಷೇಪವಾಗಿ ವಿವರಿಸಬೇಕೆನ್ನುತ್ತೇನೆ. ಜನಜೀವನದ ವಿವಿಧ ಬಗೆಯ ಒಡಮೂಡಿನಂತಿರುವ ಅನೇಕ ಅಂಶಗಳ ಸಂಪೂರ್ಣ ಆವಿಷ್ಕರಣ 'ಸಂಸ್ಕೃತಿ' ಎಂಬುದೊಂದೇ ಶಬ್ದದಿಂದ ಅಭಿವ್ಯಕ್ತವಾಗುತ್ತಿದೆ. ಜನಾಂಗದ ಆಧ್ಯಾತ್ಮಿಕ, ಭೌತಿಕಾದಿ ಅಂತಃಕೋಶಗಳಲ್ಲಿ ಬೆಳೆದು ಬಂದಿರುವ ಶಕ್ತಿ ಸಾಮರ್ಥ್ಯಗಳಿಂದ ಆ ಸಂಸ್ಕೃತಿಯ ಸ್ವರೂಪ ನಿಚ್ಚಳವಾಗಿ ಕಣ್ಣಿಗೆ ಕಾಣುತ್ತದೆ. ಇದನ್ನು ವಿಂಗಡಿಸಿ ತಿಳಿದುಕೊಳ್ಳುವುದಾದರೆ, ಕನ್ನಡನಾಡಿನ ಆಧ್ಯಾತ್ಮಿಕ ತೇಜಸ್ಸು ಬೆಳೆಯಲು ಕಾರಣವಾಗಿರುವ ಅನೇಕ ಧರ್ಮ ಪಂಥಗಳಲ್ಲಿ ಕಂಡು ಬರುವ ಸಹಿಷ್ಣುತೆ, ಭಕ್ತಿ ಮಾರ್ಗದ ಭಂಡಾರವನ್ನೇ ಜಗತ್ತಿಗೆ ತೆರೆದಿಟ್ಟು ತೋರಿಸುವ ಭಾವನೆಗಳು, ಸಾಹಿತ್ಯ, ಸಂಗೀತಾದಿ ವಿವಿಧ ಬಗೆಯ ಲಲಿತ ಕಲೆಗಳ ಪರಮಾವಧಿಯ ಬೆಳವಣಿಗೆಯಲ್ಲಿ ಕಂಡು ಬರುವ ವಿಚಿತ್ರ ಅಭಿರುಚಿ, ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ಆದರಪೂರ್ವಕ ಸಲ್ಲಿಸಲಾಗುವ ಸತ್ಕಾರ ತತ್ಪರತೆ—ಇವೇ ಮೊದಲಾದ ಸದ್ಗುಣಗಳನ್ನು ಕಣ್ಣಿಗೆ ಕಟ್ಟುವ ಕನ್ನಡ ಜನಾಂಗದ ನೈಸರ್ಗಿಕ ಮನೋಧರ್ಮಗಳ ವಿವಿಧ ಪ್ರಕಾರಗಳನ್ನು ನಾವು ಅರಿತುಕೊಳ್ಳಬೇಕಾಗುತ್ತದೆ. ಇಂದಿನ ಇತಿಹಾಸಗಳಲ್ಲಿಯೂ, ಭೂಪಟಗಳಲ್ಲಿಯೂ ಹೆಸರು ಕೂಡ ಕಣ್ಣಿಗೆ ಬೀಳಲಾರದಂತಿದ್ದು ಹಿಂದೂಸ್ಥಾನದ ಬೇರೆ ಬೇರೆ ಒಳವಿಭಾಗಗಳಲ್ಲಿ ಸಮಾವಿಷ್ಟವಾಗಿರುವ ನಮ್ಮ ಹಿಂದಿನ ಕಾಲದ ಇಡಿಯ ಕನ್ನಡ ನಾಡಿನ ಸಂಸ್ಕೃತಿಯಲ್ಲಿ ಎದ್ದು ಕಾಣುವ ಸರ್ವ ಸಾಧಾರಣ ಗುಣಧರ್ಮಗಳಾವುವು? ವಿಶಾಲವಾಗಿದ್ದ ಆ ಕನ್ನಡನಾಡಿನ ವಿವಿಧ ಭಾಗಗಳಲ್ಲಿ ಕೆಲವೊಂದು ಸಂಗತಿಗಳಲ್ಲಿ ಕೆಲಮಟ್ಟಿಗೆ ವಿವಿಧತೆಯ ವಿಚಿತ್ರತೆ ಕಂಡು ಬರುತ್ತಿದ್ದರೂ, ಆ ವಿವಿಧತೆಯ ವಿಚಿತ್ರತೆಗಳೆಲ್ಲವೂ ನಮ್ಮ ನಾಡಿನ ಸಂಸ್ಕೃತಿಯ ಏಕರೂಪತೆಯಲ್ಲಿ ಹೇಗೆ ಹೃದಯಂಗಮವಾಗಿ ಅಡಕವಾಗಿರುವುವು ಎಂಬುದನ್ನು ನಾವು ತಿಳಿದು ನೋಡಿ ಅರಿತುಕೊಳ್ಳಬೇಕಾಗಿದೆ.

## ಪುರಾಣ ಕಾಲ

ನಮ್ಮ ಕನ್ನಡ ನಾಡಿನ ಐತಿಹಾಸಿಕ ಪರಂಪರೆ ಸದ್ಯಕ್ಕಂತೂ ಕ್ರಿ. ಶ. ೩ನೆಯ ಶತಮಾನದಿಂದ ಗೊತ್ತಾಗುವಂತಿದೆ. ಅದಕ್ಕೂ ಮೊದಲು 'ಭರತ ವರ್ಷ' ದಕ್ಷಿಣದ ವಿಂಧ್ಯಾದ್ರಿಯ ಕೆಳಗೆ 'ದಕ್ಷಿಣಾಪಥ'ವೆಂದು ಕರೆಯಲಾಗುತ್ತಿದ್ದ ಈ ಪ್ರದೇಶವೆಲ್ಲ 'ದಂಡಕಾರಣ್ಯ' ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಗೋದಾವರೀ ತೀರದ ನಾಸಿಕ ಪಂಚವಟಿಗಳೂ, ತುಂಗಭದ್ರಾ ತೀರದ ಪಂಪಾಕ್ಷೇತ್ರ ಪಂಪಾ ಸರೋವರ ಮೊದಲಾದ ಸ್ಥಳಗಳೂ ವೈದಿಕ ಧರ್ಮದ ಪವಿತ್ರ ಕ್ಷೇತ್ರಗಳೆಂದು ಇಂದಿಗೂ ಪ್ರಸಿದ್ಧವಾಗಿವೆ. ಹಂಪೆಯ ಹತ್ತಿರದ ಕಿಷ್ಕಿಂಧೆಯ ಐತಿಹ್ಯದಿಂದ ಈ ಭಾಗದಲ್ಲಿ 'ವಾನರ'ರ ರಾಜ್ಯವಿದ್ದಿತೆಂದೂ, 'ವಾನರ'ರ ಸಂಸ್ಕೃತಿಯ ಪ್ರಭಾವ ಇಲ್ಲಿ ನೆಲೆಗೊಂಡಿದ್ದಿತೆಂದೂ ರಾಮಾಯಣ ಸ್ಪಷ್ಟವಾಗಿ ಸಾರುತ್ತದೆ. ಈ 'ವಾನರರ ಸಂಸ್ಕೃತಿ'ಯೇ ದ್ರಾವಿಡ ಸಂಸ್ಕೃತಿಯ ಒಂದು ಸ್ವರೂಪವಾಗಿರಬೇಕೆಂದು ಊಹಿಸಲಡ್ಡಿಯಿಲ್ಲ. ಈ ಕಿಷ್ಕಿಂಧೆಯಲ್ಲಿ ಎಂದರೆ ಇಂದಿನ ಆನೆಗೊಂದಿಯಲ್ಲಿ ಆರ್ಯರ ಅಧಿಪತಿಯಾದ ರಾಮನಿಗೂ, ವಾನರರ ಅರಸನಾದ ಸುಗ್ರೀವನಿಗೂ ಉಂಟಾದ ಸಖ್ಯ ಸಮ್ಮೇಳನಗಳ ಯೋಗದಿಂದ ಆರ್ಯ ಮತ್ತು ವಾನರರ ಎಂದರೆ ದ್ರಾವಿಡ ಸಂಸ್ಕೃತಿಗಳ ಹೃದಯಂಗಮ ಸಮ್ಮೇಳನಕ್ಕೆ ಅವಕಾಶವಾಯಿತೆಂದು ಹೇಳಬಹುದು. ವಿಶಾಲವಾದ ದಂಡಕಾರಣ್ಯದ ಭಾಗವಾಗಿದ್ದ ಕನ್ನಡ ನಾಡಿನ ಎಲ್ಲ ಕಡೆಯ ಜನರ ನಡೆನುಡಿಗಳಲ್ಲಿ, ಆಹಾರವಿಹಾರಗಳಲ್ಲಿ, ಆಧ್ಯಾತ್ಮಿಕ ಆಚಾರ ವಿಚಾರಗಳಲ್ಲಿ ಆಗಿನಿಂದಲೂ ವೈದಿಕ ಧರ್ಮ ತನ್ನ ಪ್ರಭಾವವನ್ನು ನೆಲೆಗೊಳಿಸುತ್ತ ನಡೆಯಿತು ಎಂಬುದು ಸ್ಪಷ್ಟವಾಗಿದೆ.

## ಐತಿಹಾಸಿಕ ಕಾಲ

ಈ ಪುರಾಣ ಕಾಲಕ್ಕಿಂತ ಮುಂದೆ ಐತಿಹಾಸಿಕ ಕಾಲದಲ್ಲಿ ಮೌರ್ಯ ಚಂದ್ರಗುಪ್ತನು ಭರತಖಂಡವನ್ನು ಆಳುತ್ತಿದ್ದಾಗ, ಜೈನ ಧರ್ಮ ಮೆಲ್ಲಡಿ ಇಡುತ್ತ ಮುಂದುವರಿದು ಬಂದು ಮೈಸೂರು ಸೀಮೆಯಲ್ಲಿ ತಳ ಊರಿ ನಿಂತುಕೊಂಡದ್ದು ಪ್ರಸಿದ್ಧವೇ ಆಗಿದೆ. ಈ ಚಂದ್ರಗುಪ್ತನ ಮೊಮ್ಮಗನಾದ ಅಶೋಕ ಮಹಾರಾಜನು ತನ್ನ ಬೌದ್ಧ ಧರ್ಮೋಪದೇಶಕರನ್ನು ಬನವಾಸಿಗೆ ಕಳಿಸಿದ್ದನೆಂದು ತಿಳಿದುಬರುತ್ತದೆ. ಕೊಪ್ಪಳದಲ್ಲಿ ಇತ್ತೀಚಿಗೆ ದೊರೆತಿರುವ ಅದೇ ಅಶೋಕ ಮಹಾರಾಜನ ಪ್ರಾಕೃತ ಶಾಸನಗಳಿಂದ, ಮೈಸೂರು ಸೀಮೆಯ ಸಿದ್ದಾಪುರದ ಪ್ರಾಕೃತ ಶಾಸನಗಳಿಂದ ಹಾಗೆಯೇ ಹೈದರಾಬಾದ್ ಪ್ರಾಂತದ ಮಾಸ್ಕಿಯೊಳಗಿನ ಅಶೋಕನ ಶಾಸನದಿಂದ ಅಲ್ಲಲ್ಲ ಕಡೆಗೆ ಬೌದ್ಧ ಧರ್ಮ ನೆಲೆಗೊಂಡಿತ್ತೆಂದು. ಸ್ಪಷ್ಟವಾಗಿದೆ. ಹೀಗೆ ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿ ವೈದಿಕ ಧರ್ಮದೊಂದಿಗೆ ಜೈನ ಮತ್ತು ಬೌದ್ಧ ಧರ್ಮಗಳು ಜನಾಂಗದ ಆದರ ಮನ್ನಣೆಗಳಿಗೆ ಪಾತ್ರವಾಗಿದ್ದುವೆಂಬುದು ನಿದರ್ಶನಕ್ಕೆ ಬರುತ್ತದೆ. ಇತ್ತ ಕೊಪ್ಪಳ, ಲಕ್ಷ್ಮೇಶ್ವರ ಅತ್ತ ಬೆಳಗಾಂವಿ, ಶ್ರವಣಬೆಳಗೊಳ, ಮೂಡಬಿದ್ರೆ, ಕಾರ್ಕಳ ಮೊದಲಾದುವುಗಳು ಜೈನ ಧರ್ಮದ ಕೇಂದ್ರಗಳಾಗಿದ್ದವು. ಹೀಗೆ ವೈದಿಕ, ಜೈನ, ಬೌದ್ಧ ಧರ್ಮಗಳು ಕ್ರಿಸ್ತಶಕಕ್ಕಿಂತ ಮೊದಲಿನಿಂದಲೂ ಕನ್ನಡ ನಾಡಿನಲ್ಲಿ ಪ್ರಸಾರ ಹೊಂದಿ ಬೆಳೆಯುತ್ತ ನಡೆದಿದ್ದವೆಂಬುದು ಐತಿಹಾಸಿಕ ಆಧಾರದಿಂದಲೇ ಸಿದ್ಧವಾಗುತ್ತದೆ. ಈ ಮೂರು ಧರ್ಮಗಳ ಅನುಯಾಯಿಗಳಲ್ಲಿ ಪರಸ್ಪರ ಸಹಿಷ್ಣುತೆ ಅತ್ಯಂತ ಪ್ರಭಾವಶಾಲಿಯಾಗಿದ್ದಿತೆಂಬುದಕ್ಕೆ ಅನೇಕ ಆಧಾರಗಳುಂಟು. 'ತಾಳುಗುಂದದ ಪ್ರಣವೇಶ್ವರ' ದೇವಾಲಯದ ವೈದಿಕ ದೇವರನ್ನು ೨–೩ನೆಯ ಶತಮಾನದ ಬೌದ್ಧ ಧರ್ಮಿಗಳಾದ ಸಾತಕರ್ಣಿ ರಾಜರು ಪೂಜಿಸುತ್ತಿದ್ದರು. ೩ನೆಯ ಶತಮಾನದ ಚುಟುಕುಂಧ ಅರಸರು ಬೌದ್ಧ ಧರ್ಮದವರಾಗಿದ್ದರೂ ವೈದಿಕ ಧರ್ಮದ ಬ್ರಾಹ್ಮಣರಿಗೆ ಅನೇಕ ದಾನ ಧರ್ಮಗಳನ್ನು ಮಾಡಿದ್ದಾರೆ. ೪–೬ನೆಯ ಶತಮಾನದ ಬನವಾಸಿಯ ಕದಂಬ ಅರಸರು ವೈದಿಕ ಧರ್ಮದ ಬ್ರಾಹ್ಮಣರಾಗಿದ್ದರೂ ಜೈನ ಧರ್ಮ ಪ್ರಸಾರಕ್ಕಾಗಿ ಅನೇಕ ಚೈತ್ಯಾಲಯಗಳನ್ನು ಕಟ್ಟಿಸಿ, ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. ವೈಷ್ಣವರಾಗಿದ್ದ ಬಾದಾಮಿಯ ಚಾಲುಕ್ಯರ ರಾಜ್ಯದಲ್ಲಿ ರಾಜಾಶ್ರಯದಿಂದ ಪೋಷಿತವಾಗುತ್ತಿದ್ದ ಅನೇಕ ಬೌದ್ಧ ವಿಹಾರಗಳಿದ್ದವೆಂದು ಆ ಕಾಲಕ್ಕೆ ಇಲ್ಲಿ ಬಂದಿದ್ದ ಚೀನದ ಜಗತ್ಪ್ರಸಿದ್ಧ ಹುಯೆನ್‌ತ್ಸಾಂಗನು ಹೇಳುತ್ತಾನೆ. ಅಖಂಡ ಭಾರತದ ಮೊದಲನೆಯ ಕನ್ನಡ ಚಕ್ರವರ್ತಿಯಾಗಿದ್ದ ಬಾದಾಮಿಯ ಚಾಲುಕ್ಯ ವಂಶದ ಪರಮೇಶ್ವರ ಪುಲಕೇಶಿಯ ಮಂತ್ರಿಮಂಡಲದಲ್ಲಿ ಜೈನಧರ್ಮಧುರಂಧರನಾಗಿದ್ದ ರವಿಕೀರ್ತಿ ಪ್ರಮುಖನಾಗಿದ್ದನು. ಅತ್ತ ಮೈಸೂರಿನ ಗಂಗರು (ಕ್ರಿ. ಶ. ೫–೧೦ ಶತಮಾನಗಳು) ಜೈನರಾಗಿದ್ದರೂ ವೈದಿಕ ಧರ್ಮಕ್ಕೆ ಪ್ರೋತ್ಸಾಹ ಕೊಟ್ಟ ಅನೇಕ ದೃಷ್ಟಾಂತಗಳಿವೆ. ಇತ್ತ ಮಳಖೇಡದ ರಾಷ್ಟ್ರಕೂಟರು ಜೈನರು. ಅವರು ವೈದಿಕಧರ್ಮಕ್ಕೆ ಕೊಟ್ಟ ದೇವಾಲಯ ಧರ್ಮಾದಾಯಗಳನ್ನು ನೋಡಿದರೆ ಅವರ ಧಾರ್ಮಿಕ ಔದಾರ್ಯ ಸ್ಪಷ್ಟವಾಗಿ ಕಂಡು ಬರುತ್ತದೆ. ಕಲ್ಯಾಣದ ಚಾಲುಕ್ಯರು, ಹೊಯಿಸಳರು, ಕಲಚೂರ್ಯರು ಮೊದಲಾದವರ ಕಾಲಕ್ಕೆ ಜೈನ ವೈದಿಕ ಧರ್ಮಗಳಿಗೆ ಅಲ್ಪಸ್ವಲ್ಪ ತಾಕಲಾಟವಾದದ್ದು ಅಲ್ಲಲ್ಲಿ ಕಂಡುಬರುವುದಾದರೂ ಅದರ ಪರಿಣಾಮ ಉಭಯ ಧರ್ಮಗಳಲ್ಲಿ ಹೃದಯಂಗಮವಾದ ಸಮ್ಮೇಳನಕ್ಕೆ ಕಾರಣವಾದದ್ದು ಕಂಡುಬರುತ್ತದೆ.

## ಪರಮತ ಸಹಿಷ್ಣುತೆ ಮತ್ತು ಸರ್ವ ಧರ್ಮಸಮನ್ವಯ

ಸಾವಿರ ವರುಷಗಳ ಹಿಂದಿನ ಬೇಲೂರಿನ ಶಾಸನವೊಂದರಲ್ಲಿ—

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ
ಅರ್ಹನ್ನಿತ್ಯಥ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತ ಫಲಂ ಶ್ರೀ ಕೇಶವಃ ಸರ್ವದಾ

ಎಂಬ ಸರ್ವಧರ್ಮ ಸಮನ್ವಯದ ಹೃದಯಂಗಮ ಶ್ಲೋಕ ಕೆತ್ತಲಾಗಿದೆ. 'ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣಪಟುಗಳಾದ ನೈಯ್ಯಾಯಿಕರು ಕರ್ತನೆಂದೂ, ಜೈನರು ಅರ್ಹತ್‌ನೆಂದೂ, ಮೀಮಾಂಸಕರು ಕರ್ಮನೆಂದೂ ಉಪಾಸನ ಮಾಡುತ್ತಿರುವ ಶ್ರೀಕೇಶವನೇ ನಮಗೆ ಬೇಡಿದ್ದನ್ನು ಕೊಡು" ಎಂಬುದಾಗಿ ತಟ್ಟನೆ ಮನವನ್ನು ಮುಟ್ಟುವ ಮುತ್ತಿನಂತಹ ಮಾತುಗಳಿಂದ ಜಗತ್ಕರ್ತನಾದ ಪರಮೇಶ್ವರನ ಸತ್ಯಸ್ವರೂಪವೇ ಸರ್ವಧರ್ಮಗಳ ಸಾರವೆಂದು ಸಾರುತ್ತಿರುವ ಈ ಶಿಲಾಶಾಸನ ಕನ್ನಡ ಜನಾಂಗದ ಧರ್ಮ ಸಹಿಷ್ಣುತಾ ಬುದ್ಧಿಗೆ ಆಧಾರವಾದ ಪ್ರಮಾಣ ಸೂತ್ರವಾಗಿದೆ. ಇದೇ ಶ್ರೇಷ್ಠಪರಂಪರೆ ಮುಂದೆಯೂ ನಮ್ಮ ಕನ್ನಡ ನಾಡಿನಲ್ಲಿ ಅಖಂಡವಾಗಿ ನಡೆದುಬಂದಿರುವುದು ನಿದರ್ಶನಕ್ಕೆ ಬರುತ್ತದೆ. ಜಿನನು 'ಸರ್ವಾಂತರ್ಯಾಮಿಯಾದ ಶಿವ, ಬ್ರಹ್ಮ, ಸುಗತ' ಎಂದು ೧೨ನೆಯ ಶತಮಾನದ ಒಂದು ಶಿಲಾಶಾಸನದಲ್ಲಿ ಸ್ತುತಿಸಲಾಗಿದ್ದಾನೆ. ಮೈಸೂರಿನ ಬಳ್ಳಿಗಾಂವೆಯಲ್ಲೂ, ಗದುಗಿನ ಹತ್ತಿರದ ಡಂಬಳದಲ್ಲಿಯೂ ಬೌದ್ಧ ಮತ್ತು ಶೈವಧರ್ಮಾಲಯಗಳು ಸರ್ವ ಜನರ ಆದರಣೆಗೆ ಪಾತ್ರವಾಗಿದ್ದವೆಂದು ಶಾಸನಗಳು ಸಾರುತ್ತಿವೆ. ಬಳ್ಳಿಗಾಂವೆಯಲ್ಲಿ ಶೈವರ ಪಂಚ ಮಠಗಳೂ, ಚೈತ್ಯಾಲಯ ಬಸದಿಗಳೂ ಬೌದ್ಧರ ವಿಹಾರಗಳೂ ಪರಸ್ಪರ ತಿಕ್ಕಾಟವಿಲ್ಲದೆ ತಮ್ಮ ತಮ್ಮ ಧರ್ಮ ಪರಂಪರೆಗಳನ್ನು ಮುಂದುವರಿಸುತ್ತಿದ್ದುವೆಂಬ ಉಲ್ಲೇಖವುಂಟು. ವೈದಿಕ ಧರ್ಮದ ಶಿವೋಪಾಸಕ ರಾಜನೂ ಜೈನ ಧರ್ಮದ ಅವನ ಪಟ್ಟದರಸಿಯೂ ತಮ್ಮ ತಮ್ಮ ಅಂತಃಪ್ರೇರಣೆಗಳಿಗೆ ಅನುಸಾರವಾಗಿ ತಮ್ಮ ತಮ್ಮ ಧರ್ಮಗಳನ್ನೇ ಆಚರಿಸುತ್ತ ಅತ್ಯಂತ ಪ್ರೇಮ ಭಕ್ತಿ ವಿಶ್ವಾಸಗಳಿಂದ ದಾಂಪತ್ಯ ಜೀವನವನ್ನು ಸಾಗಿಸಿದ ದಿವ್ಯದೃಷ್ಟಾಂತಗಳು ನಮ್ಮ ಕನ್ನಡನಾಡಿನ ಇತಿಹಾಸದಲ್ಲಿ ಮಿನುಗುತ್ತವೆ. ವಿಜಯನಗರದ ಬುಕ್ಕ ಸಮ್ರಾಟನ ಕಾಲಕ್ಕೆ ಜೈನ ಶ್ರೀ ವೈಷ್ಣವರಲ್ಲಿ ಅಂತಸ್ತಾಪ ಉಂಟಾದಾಗ ಆತನು ತನ್ನ ಪ್ರಜೆಗಳ ಎಲ್ಲ ಧರ್ಮದರ್ಶನಗಳೂ ಸಮಾನಯೋಗ್ಯತೆಯವೆಂದು ಗಣಿಸಲಾಗುವುದೆಂದು ರಾಜಶಾಸನವನ್ನು ಸಾರಿ, ಎರಡು ಧರ್ಮಗಳ ಮುಖಂಡರನ್ನೂ ಕರೆಯಿಸಿ, ಅವರಿಂದ ಸೌಹಾರ್ದ ಪ್ರತಿಜ್ಞೆಯನ್ನು ಮಾಡಿಸಿ, ಪರಸ್ಪರ ಶಾಂತಿಯನ್ನು ನೆಲೆಗೊಳಿಸಿದನೆಂದು ೧೪ನೆಯ ಶತಮಾನದ ಶಾಸನವೊಂದರಲ್ಲಿ ಉಲ್ಲೇಖವುಂಟು. ಕಾಲಕ್ರಮದಲ್ಲಿ ಬೌದ್ಧ, ಜೈನ ಧರ್ಮಗಳು ಇಳಿತರಕ್ಕೆ ಬಿದ್ದು ವೈದಿಕ ಧರ್ಮ ಬೆಳೆದು ನಿಂತರೂ ಆ ಧರ್ಮಗಳು ಸರಿಸಮಾನವಾದ ರಾಜಮಾನ್ಯತೆಯನ್ನೂ ರಾಜಾಶ್ರಯವನ್ನೂ ಹೊಂದುತ್ತಲೇ ಇದ್ದವು.

## ಇಸ್ಲಾಂ ಧರ್ಮಕ್ಕೆ ಆಶ್ರಯ

ಕನ್ನಡ ನಾಡಿನಲ್ಲಿ ಇಸ್ಲಾಂ ಧರ್ಮ ತಲೆಯೆತ್ತಿದಾಗಲೂ ಕನ್ನಡ ಜನಪದದಲ್ಲಿ ಬೆಳೆದು ಬಂದಿದ್ದ ಧರ್ಮಸಹಿಷ್ಣುತಾ ಬುದ್ಧಿಯಲ್ಲಿ ವ್ಯತ್ಯಾಸವಾಗಲಿಲ್ಲ. ವಿಜಯನಗರದ ಸಮ್ರಾಟನ ಆಶ್ರಯಕ್ಕೆ ಬಂದು ನಿಂತಿದ್ದ ಮಹಮ್ಮದೀಯ ಪ್ರಜೆಗಳಿಗೆ ಅಖಂಡವಾದ, ಅನಿರ್ವಚನೀಯವಾದ ಧರ್ಮರಕ್ಷಣೆಯ ಆಶ್ವಾಸನ ರಾಜರಿಂದ ದೊರೆತಿದ್ದಿತೆಂಬುದು ಐತಿಹಾಸಿಕ ಸತ್ಯವಾಗಿದೆ. ಮರಾಟರ ಹಿಂದೂ ದಳವಾಯಿಯೊಬ್ಬನು ಶೃಂಗೇರಿಯ ಶ್ರೀ ಶಾರದಾಂಬೆಯ ಗುಡಿಯನ್ನು ಸುಲಿದ ಸಂದರ್ಭದಲ್ಲಿ, ಆಗ ಮೈಸೂರಿನ ದೊರೆಯಾಗಿದ್ದ ಟೀಪು ಸುಲ್ತಾನನು ಆರ್ಕಾಟಿನ ಶೃಂಗೇರಿಯ ಪೀಠಸ್ಥ ಗುರುಗಳಿಗೆ ತನ್ನ ಅತ್ಯಂತ ವಿಷಾದ ಪೂರ್ಣ ವಂದನೆಗಳೊಂದಿಗೆ ದೇವಸ್ಥಾನದ ಶುದ್ಧೀಕರಣಕ್ಕೆ ಬೇಕಾಗುವ ಎಲ್ಲ ಸಂಧಾನ ಸಲಕರಣೆಗಳನ್ನೂ ಕೊಟ್ಟುಕಳಿಸಿ, ಮುಂದೆ ಪರರಾಜರಿಂದ ಈ ಬಗೆಯ ಉಪದ್ರವವಾಗದಂತೆ ದಕ್ಷತೆಯಿಂದ ನೋಡಿಕೊಳ್ಳುವುದಾಗಿ ಆಶ್ವಾಸನವನ್ನು ಕೊಟ್ಟದ್ದುಂಟು. ಹೀಗೆ ಸಾವಿರಾರು ವರ್ಷಗಳ ವರೆಗೆ ಇಲ್ಲಿಯ ಜನಜೀವನದಲ್ಲಿ ಅಖಂಡ ಪರಂಪರೆಯಾಗಿ ನಡೆದು ಬಂದಿರುವ ಪರಧರ್ಮ ಸಹಿಷ್ಣುತಾ ಬುದ್ಧಿಯಿಂದ ನಮ್ಮ ಜನಾಂಗದ ಉಜ್ವಲವಾದ ಸಂಸ್ಕೃತಿಯ ಹೆಚ್ಚಿನ ಹಿರಿಮೆ ಚೆನ್ನಾಗಿಯೇ ಮನದಟ್ಟಾಗುವುದು. ಈ ವಿವೇಚನೆಯಿಂದ ಧಾರ್ಮಿಕವಾದ ವಿವಾದಗಳೂ ಚರ್ಚೆಗಳೂ ಕನ್ನಡ ನಾಡಿನಲ್ಲಿ ನಡೆದಿರಲಾರವೆಂದು ಮಾತ್ರ ತಿಳಿಯಲಾಗದು. ಇಂಥ ವಾದವಿವಾದ ಚರ್ಚೆಗಳು ಶುದ್ಧ ಸತ್ಯಾನ್ವೇಷಣದ ತತ್ವಾನುಸಂಧಾನದಿಂದ ನಡೆಯುತ್ತಿದ್ದವಲ್ಲದೆ, ಸಾಮಾನ್ಯ ಜನಜೀವನದ ಹಿತಾಹಿತಗಳ ದೃಷ್ಟಿಯಿಂದ ಅಥವಾ ವ್ಯಕ್ತಿವ್ಯಕ್ತಿಗಳ ತಿಕ್ಕಾಟ ಸೆಳೆದಾಟಗಳಿಂದ ಇವು ಹುಟ್ಟಿ ಬೆಳೆಯುತ್ತಿರಲಿಲ್ಲ. ಬೇರೆಬೇರೆ ಧರ್ಮಗಳೆಲ್ಲ, ಪರಸ್ಪರ ಸೋದರಭಾವದ ಮನ್ನಣೆಯನ್ನೂ ಪೋಷಣೆಯನ್ನೂ ಪಡೆಯುತ್ತಿದ್ದವು. ಭಿನ್ನ ಭಿನ್ನ ಧರ್ಮಗಳ ಒಳ ಪಂಗಡಗಳಲ್ಲಿ ತಾತ್ವಿಕ ಮತಭೇದವಿದ್ದರೂ ಆ ಪಂಗಡಗಳು ಆಯಾ ಅನುಯಾಯಿ ವರ್ಗಗಳಲ್ಲಿ ಪೂರ್ಣ ಸೌಹಾರ್ದಭಾವದಿಂದ ನಡೆದುಕೊಳ್ಳುತ್ತಿದ್ದವು. ವೈದಿಕ ಧರ್ಮದ ದ್ವೈತಾದ್ವೈತ ವಿಶಿಷ್ಟಾದ್ವೈತ ಮೊದಲಾದ ವೇದಾಂತ ಸಿದ್ಧಾಂತ ಭೇದಗಳೂ, ಶೈವ ವೀರಶೈವ ವೈಷ್ಣವಾದಿ ಪಂಥ ಭೇದಗಳೂ ಇಲ್ಲಿಯೇ ಹುಟ್ಟಿ ಪ್ರಸಾರ ಹೊಂದಿ ಬೆಳೆದವು. ಇವುಗಳ ತತ್ತ್ವ ವಿಚಾರದಲ್ಲಿ ತೀಕ್ಷ್ಣವಾದ, ತೀವ್ರವಾದ ಮತಭೇದವಿದ್ದರೂ ವ್ಯವಹಾರದಲ್ಲಿ ಎಲ್ಲ ಧರ್ಮಪಂಥಗಳ ಅನುಯಾಯಿಗಳು ಬಂಧು ಭಾವನೆಯಿಂದಲೇ ನಡೆಯುತ್ತಿದ್ದರು. ಭಾರತೀಯ ಸಂಸ್ಕೃತಿಯ ಅತ್ಯಂತ ಉಜ್ಜ್ವಲ ಸ್ವರೂಪವಾಗಿರುವ ಈ ಧರ್ಮ ಸಹಿಷ್ಣುತಾಬುದ್ಧಿಯನ್ನು ನಮ್ಮ ಕನ್ನಡ ನಾಡು ಈ ಬಗೆಯಾಗಿ ಮೈಗೂಡಿಸಿಕೊಂಡು ಹೃದಯಂಗಮವಾಗಿ ಆಚರಣೆಯಲ್ಲಿ ತಂದಿದೆ.

## ವಿಶ್ವಬಂಧುತ್ವದ ಕಲ್ಪನೆ

ವಿದ್ಯಮಾನ ಜಗತ್ತಿನಲ್ಲಿ ಬೇರೆ ಕಡೆಯಲ್ಲೆಲ್ಲಿಯೂ ಕಂಡುಬರದ ಈ ಬಗೆಯ ಧರ್ಮ ಸಹಿಷ್ಣುತಾ ಬುದ್ಧಿ ನಮ್ಮ ಕನ್ನಡ ನಾಡಿನಲ್ಲಿ ನೆಲೆಗೊಂಡಿರುವುದಕ್ಕೆ ನಮ್ಮ ಜನಾಂಗಕ್ಕೆ ನಿಸರ್ಗ ಸಿದ್ಧವಾಗಿರುವ ಉದಾರ ಹೃದಯವೂ, ಕೋಮಲಾಂತಃಕರಣವೂ, ಮೃದುಮಧುರ ಭಾವನೆಗಳೂ ಕಾರಣವಾಗಿವೆ. ಈ ಸದ್ಗುಣಗಳ ಉತ್ಕರ್ಷದಿಂದಲೇ ಕನ್ನಡಿಗರ ಆಧ್ಯಾತ್ಮಿಕ ಜೀವನದಲ್ಲಿ ಭಕ್ತಿ ಮಾರ್ಗಕ್ಕೆ ಅತ್ಯಂತ ಶ್ರೇಷ್ಠವಾದ ಸ್ಥಾನ ದೊರೆತಿದೆ. ವೈದಿಕ ಧರ್ಮದ ಈ ಭಕ್ತಿಮಾರ್ಗ ಅದಕ್ಕೆ ಮೊದಮೊದಲು ವಿರೋಧವಾಗಿದ್ದ ಜೈನ ಬೌದ್ಧ ಧರ್ಮಗಳಮೇಲೆಯೂ ತನ್ನ ಪ್ರಭಾವವನ್ನು ಬೀರದಿರಲಿಲ್ಲ. ಮಾಹಾತ್ಮ್ಯಜ್ಞಾನ ಪೂರ್ವಕವಾದ, ಸದೃಢವಾದ, ಸರ್ವತೋಧಿಕವಾದ ಸ್ನೇಹದಿಂದುಟಾಗುವ ಪ್ರೇಮದ ಪರಮಾವಧಿಯೇ ಭಕ್ತಿಯೆನಿಸುತ್ತದೆ. ಈ ಬಗೆಯ ಅನಿರ್ವಚನೀಯವಾದ ಭಕ್ತಿಭಾವನೆ ಕನ್ನಡ ನಾಡಿನ ಅಸಂಖ್ಯಾತ ಮಹಾಪುರುಷರಲ್ಲಿ ಸ್ವಾಭಾವಿಕವಾಗಿಯೇ ಒಡಮೂಡಿ ಬೆಳೆದು ಬಂದದ್ದು ನಿದರ್ಶನಕ್ಕೆ ಬರುತ್ತದೆ. ಶೈವ, ವೀರಶೈವ, ವೈಷ್ಣವ, ಶ್ರೀವೈಷ್ಣವ ಮೊದಲಾದ ಅನೇಕ ಮತ ಮತಾಂತರಗಳ ಎಲ್ಲ ಸತ್ಪುರುಷರ ಜೀವನದಲ್ಲಿ ತುಂಬಿ ಸೂಸಿ ಹರಿಯುತ್ತಿದ್ದ ಈ ಭಕ್ತಿಭಾವನೆಗಳೇ ಸಾಮಾನ್ಯ ಜನಜೀವನದಲ್ಲಿಯೂ ಬಿಂಬಿಸಿ ಬೆಳೆದು ಬಂದುದರಿಂದ, ಕನ್ನಡ ಜನಾಂಗದ ಪ್ರಾಪಂಚಿಕ ಜೀವನವೂ ರಸಮಯವಾಗಿ, ಉದಾರವಾಗಿ, ಪ್ರೇಮಪೂರ್ಣವಾಗಿ, ವಿಶ್ವಬಂಧುತ್ವದ ಕಲ್ಪನೆ ಇಲ್ಲಿ ನೆಲೆಯಾಗಿ ನಿಂತುಕೊಂಡಿತು. ವೇದಾಂತದ ಭಕ್ತಿಮಾರ್ಗದಲ್ಲಿ ಉಗಮಹೊಂದಿ ಜನಜೀವನದೊಡನೆ ಸಮರಸವಾಗಿ ಪ್ರವಾಹಗೊಂಡು ಹರಿಯ ಹತ್ತಿದ ಕನ್ನಡ ಜನಾಂಗದ ಈ ಆಂತರಿಕ ಪ್ರೇಮಮಯ ಸದ್ಭಾವನೆಗಳು ಸೌಂದರ್ಯೋಪಾಸನೆಯಿಂದ ಪರಿಣತಿಹೊಂದಿ, ವಿವಿಧ ಕಲೆಗಳ ರೂಪದಿಂದ ಆವಿರ್ಭವಿಸಿ, ಪ್ರಾಚೀನ ಕನ್ನಡ ನಾಡಿನಲ್ಲೆಲ್ಲ ಇಂದಿಗೂ ತಲೆಯೆತ್ತಿ ನಿಂತಿವೆ. ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿಕೊಂಡಿರುವ ವಿಶಾಲವಾದ ಕರ್ನಾಟಕದ ಹಳ್ಳಿಪಳ್ಳಿಗಳಲ್ಲಿಯೂ ಕನ್ನಡಿಗರ ಕಲಾಭಿರುಚಿಯ ಪ್ರತ್ಯಕ್ಷ ದೃಷ್ಟಾಂತಗಳು ಸದ್ಯದ ಅವರ ಅವನತಿ ಕಾಲದಲ್ಲಿಯೂ ಹೆಜ್ಜೆಹೆಜ್ಜೆಗೆ ದೃಷ್ಟಿಗೆ ಬೀಳುತ್ತದೆ. ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ಚಿತ್ರಕಲೆ, ವರ್ಣಕಲೆ ಮೊದಲಾದ ಜನಜೀವನಕ್ಕೆ ಸಂಬಂಧಪಟ್ಟ ಯಾವ ಸಂದರ್ಭಗಳಲ್ಲಿ ನೋಡಿದರೂ ಕನ್ನಡ ಸಂಸ್ಕೃತಿಯ ಪರಮಾವಧಿ ಸ್ವರೂಪ ಇಂದಿಗೂ ನಿದರ್ಶನಕ್ಕೆ ಬಾರದಿರದು.

(ಮುಂದುವರಿಯುವುದು)




ಶುಕ್ರವಾರ, ಮಾರ್ಚಿ ೨೨, ೧೯೪೦

## ಕನ್ನಡ ಸಾಹಿತ್ಯೋತ್ಸವಗಳು

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಆಧುನಿಕ ವಿಜ್ಞಾನ, ಕಲೆ, ಧರ್ಮ ಮುಂತಾದ ವಿಷಯಗಳನ್ನು ಕುರಿತು ಜನ ಸಾಮಾನ್ಯಕ್ಕೆ ತಿಳಿವಳಿಕೆ ಕೊಡುವ ಉದ್ದೇಶದಿಂದ ಪರಿಷತ್ತು ಈಗ ೭ ವರ್ಷಗಳಿಂದಲೂ 'ವಸಂತ ಸಾಹಿತ್ಯೋತ್ಸವ'ವನ್ನು ಬೆಂಗಳೂರಿನಲ್ಲಿ ನಡಸಿಕೊಂಡು ಬರುತ್ತಿದೆಯಷ್ಟೆ. ಉತ್ಸವದ ಪ್ರಯೋಜನವನ್ನು ನಾಡಿನ ಇತರ ಭಾಗಗಳಿಗೂ ದೊರಕಿಸಿಕೊಟ್ಟು ಗ್ರಾಮ ಪ್ರಾಂತಗಳಲ್ಲಿ ಕನ್ನಡದ ಅಭಿಮಾನ ಹುಟ್ಟಿಸುವ ಗುರಿಯಿಂದ, ಕಳೆದ ವರ್ಷದಿಂದ ಈ ಉತ್ಸವವನ್ನು ಬೆಂಗಳೂರಿನಲ್ಲಿ ಮಾತ್ರವಲ್ಲದೆ ಬೆಂಗಳೂರಿನ ಹೊರಗೆ ಮೈಸೂರು ಸಂಸ್ಥಾನದಲ್ಲಿ ಒಂದು ಕಡೆ, ಉತ್ತರ ಕರ್ನಾಟಕ ಪ್ರಾಂತದಲ್ಲಿ ಒಂದು ಕಡೆ, ದಕ್ಷಿಣ ಕರ್ನಾಟಕ ಪ್ರಾಂತದಲ್ಲಿ ಒಂದು ಕಡೆ ಪರಿಷತ್ತು ನಡಸಲು ಮೊದಲುಮಾಡಿದೆ. ಈ ಕಾರ್ಯದಲ್ಲಿ ಪರಿಷತ್ತಿನ ಪ್ರಾಂತ ಸಮಿತಿಗಳೂ, ಕನ್ನಡದ ಅಭಿಮಾನಿಗಳೂ, ಕನ್ನಡ ಸಂಘಗಳವರೂ ಸಹಕರಿಸುತ್ತಿದ್ದಾರೆ. ಪರಿಷತ್ತಿನ ಈ ವರ್ಷದ ವಸಂತೋತ್ಸವ ಇಂದಿನಿಂದ ಮಡಿಕೇರಿಯಲ್ಲಿ ನಡೆಯಲಿರುವ ಉತ್ಸವದಿಂದ ಮೊದಲಾಗುತ್ತದೆ.



ಕೋಲಾರದ ಶ್ರೀ ಕೋಲಾರಮ್ಮನ ಜಾತ್ರೆಯ ಜೊತೆಗೆ ನಡೆದ ಕನ್ನಡ ಸಾಹಿತ್ಯೋತ್ಸವದ ಸಂದರ್ಭದಲ್ಲಿ ತೆಗೆದ ಚಿತ್ರ. ವೇದಿಕೆಯ ಮೇಲೆ, ಉತ್ಸವದ ಸ್ವಾಗತಾಧ್ಯಕ್ಷರಾದ ಶ್ರೀ ಜೆ. ಬಿ. ಮಲ್ಲಾರಾಧ್ಯರೂ, ಉತ್ಸವದ ಅಧ್ಯಕ್ಷರಾದ ಶ್ರೀ ಜಿ. ಸುಂದರರಾಯರೂ, ಉತ್ಸವವನ್ನು ಪ್ರಾರಂಭಗೊಳಿಸಿದ ಶ್ರೀ ಬಿ. ಎಂ. ಶ್ರೀಕಂಠಯ್ಯನವರೂ ಇರುವುದನ್ನು ಕಾಣಬಹುದು.

[ಪಡಿಯಚ್ಚು : ಉತ್ಸವ ಸಮಿತಿಯವರ ಕೃಪೆಯಿಂದ]

ಜಿಲ್ಲಾ ಸಾಹಿತ್ಯ ಸಮ್ಮೇಳನ, ಸಂಘ ಸಮ್ಮೇಳನ, ಕವಿ ಸಮ್ಮೇಳನ, ಕತೆಗಾರರ ಸಮ್ಮೇಳನ ಮುಂತಾಗಿ ಯಾವ ಹೆಸರಿನಿಂದಲಾದರೂ ಸರಿಯೆ, ಕನ್ನಡಿಗರೆಲ್ಲ ಒಂದು ಕಡೆ ನೆರೆದು ಕನ್ನಡ ನುಡಿಯ ಸೇವೆ ಮಾಡಿದರೆ, ಅದು ಸಾಹಿತ್ಯೋತ್ಸವ ಎನ್ನಿಸಿಕೊಳ್ಳುತ್ತದೆ. ಮೈಸೂರು ವಿಶ್ವವಿದ್ಯಾನಿಲಯದವರು ನಡಸುತ್ತಿರುವ ಪ್ರಚಾರೋಪನ್ಯಾಸ ಮಾಲೆಗಳೂ ಸಾಹಿತ್ಯೋತ್ಸವಗಳೆ. ಇಂಥ ಸಾಹಿತ್ಯೋತ್ಸವಗಳು ಈಚೀಚೆಗೆ ನಾಡಿನ ಹಲವು ಭಾಗಗಳಲ್ಲಿ ಹೆಚ್ಚು ಹೆಚ್ಚಾಗಿ ನಡೆಯುತ್ತಿರುವುದು ಆಶಾಜನಕವಾಗಿದೆ. ಪರಿಷತ್ತು ಒಂಟಿಯಾಗಿ ಏನು ಮಾಡಲಾದೀತು? ಹಲವು ಸಂಘ ಸಂಸ್ಥೆಗಳ, ನಾಡಿನವರೆಲ್ಲರ, ದುಡಿಮೆಯಿಂದ ಮಾತ್ರ ಪರಿಷತ್ತಿನ ಗುರಿಗಳು ಈಡೇರುವುದು ಸಾಧ್ಯ.

ನಮ್ಮ ಗಮನಕ್ಕೆ ಬಂದಮಟ್ಟಿಗೆ ಈ ಸಾಹಿತ್ಯೋತ್ಸವಗಳು ಮುಖ್ಯವಾಗಿ ಸಾಹಿತ್ಯ ಸೇವೆಯನ್ನೇ ಗುರಿಯಾಗುಳ್ಳ ಸಂಘ ಸಂಸ್ಥೆಗಳ ಆಶ್ರಯದಲ್ಲಿ ನಡೆಯುತ್ತಿವೆ. ಈ ಉತ್ಸವಗಳಲ್ಲಿ ಹೆಚ್ಚಾಗಿ ದುಡಿಯುವವರು ಸಾಹಿತ್ಯದಲ್ಲಿ ವಿಶಿಷ್ಟವಾದ ಅಭಿಮಾನವಿಟ್ಟುಕೊಂಡಿರುವವರು, ಕೆಲಸ ಮಾಡುತ್ತಿರುವವರು. ಸಾಹಿತ್ಯ ಬರಿಯ ಸಾಹಿತಿಗಳ ಸ್ವತ್ತಲ್ಲ; ಸಾಹಿತ್ಯೋತ್ಸವ 'ಸಾಹಿತಿಗಳ ಉತ್ಸವ' ಮಾತ್ರವಲ್ಲ; ಜನದ ಬದುಕು ನಯವಾಗಿ ಮೇಲಾಗಲು, ನಾಡು ಏಳಿಗೆಗೊಳ್ಳಲು, ಸಾಹಿತ್ಯ ಎಲ್ಲ ಜನಕ್ಕೂ ಬೇಕು; ಹಬ್ಬ ಮಾಡುವಂತೆ ಸಾಹಿತ್ಯೋತ್ಸವಗಳನ್ನು ಎಲ್ಲರೂ ನಡಸಬೇಕು; ನಾಡಿನ ಎಲ್ಲ ಚಟುವಟಿಕೆಗಳಲ್ಲೂ ಸಾಹಿತ್ಯ ಹೂವಿನಲ್ಲಿ ಕಂಪಿನಂತೆ ಬೆರೆತಿರಬೇಕು— ಎಂಬ ಈ ಭಾವ ಇನ್ನೂ ಖಚಿತವಾಗಿ, ಕಾರ್ಯರೂಪದಲ್ಲಿ ವ್ಯಕ್ತಗೊಂಡಿರಲಿಲ್ಲ.

ಈ ಪರಿಸ್ಥಿತಿಯಲ್ಲಿ, ಕೋಲಾರದಲ್ಲಿ ನಡೆದ ಶ್ರೀ ಕೋಲಾರಮ್ಮನ ಜಾತ್ರೆಯ ಸಂಬಂಧದಲ್ಲಿ ಅಲ್ಲಿನ ಉತ್ಸವ ಸಮಿತಿಯವರು (ಮುಖ್ಯವಾಗಿ ಅದರ ಅಧ್ಯಕ್ಷರಾದ ಶ್ರೀ ಜೆ. ಬಿ. ಮಲ್ಲಾರಾಧ್ಯರು) ಕೋಲಾರ ಪೌರಸಭೆಯವರ ಮತ್ತು ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಸುಂದರರಾಯರ ಅನುಜ್ಞೆಯನ್ನು ಪಡೆದು 'ಕನ್ನಡ ಸಾಹಿತ್ಯೋತ್ಸವ'ವನ್ನು ಏರ್ಪಡಿಸಿ ನಾಡಿಗೆ ಒಂದು ಹೊಸ ಮೇಲುಪಂಕ್ತಿಯನ್ನು ಹಾಕಿಕೊಟ್ಟು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

**"ಸಹಸ್ರಾರು ಜನರು ಸೇರಿರುವ ಸನ್ನಿವೇಶ ಯಾವುದೇ ಆಗಲಿ ಅದು ಸಾಹಿತ್ಯ ಸೇವೆಗೆ ಸೂಕ್ತವಾದ ಅವಕಾಶ"** ಎಂಬುದಾಗಿ ಶ್ರೀ ಮಲ್ಲಾರಾಧ್ಯರು ತಮ್ಮ ಸ್ವಾಗತ ಭಾಷಣದಲ್ಲಿ ಹೇಳಿದರು.

ಉತ್ಸವವನ್ನು ಪ್ರಾರಂಭ ಮಾಡಿದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರೂ ಸಹ ತಮ್ಮ ಭಾಷಣದಲ್ಲಿ ಈ ವಿಷಯವನ್ನು ಈ ರೀತಿ ಒತ್ತಿಹೇಳಿದ್ದಾರೆ:

ಪೌರಸಭೆಯ ಗುರಿ ಪ್ರಜಾಸೇವೆ, ಪ್ರಜೆಗಳಿಗೆ ಪೌರ ಸಾಮಾಜಿಕ ಸೌಕರ್ಯಗಳನ್ನು ಒದಗಿಸಿಕೊಡುವುದು, ಮತ್ತು ಅವರನ್ನು ನೆಮ್ಮದಿಯಾಗಿಟ್ಟಿರುವುದು; ಇದು ಸರಿಯೆ. ಆದರೆ ಇಷ್ಟು ಸಾಲದು. ಅವರ ಬುದ್ಧಿವಿಕಾಸ ಆತ್ಮವಿಕಾಸಗಳಿಗೂ ಅವಕಾಶ ಒದಗಿಸಬೇಕಾದ್ದು ಪೌರಸಭೆಯ ಕರ್ತವ್ಯ. ಈ ದೃಷ್ಟಿಯಿಂದ ಪೌರಸಭೆಗಳು ಅವಕಾಶ ದೊರೆತಾಗಲೆಲ್ಲ ಸಾಹಿತ್ಯೋತ್ಸವ

# ಕೋಲಾರಮ್ಮನ ಜಾತ್ರೆಯ ಸಂಬಂಧದಲ್ಲಿ

## ಕನ್ನಡ ಸಾಹಿತ್ಯೋತ್ಸವ

ಇದೇ ತಿಂಗಳು ೧೭ನೆಯ ತಾರೀಖಿನ ದಿನ ಕೋಲಾರದಲ್ಲಿ ಕೋಲಾರಮ್ಮನ ಜಾತ್ರೆಯ ಉತ್ಸವಗಳು ಜಿಲ್ಲಾಧಿಕಾರಿಗಳಾದ ಶ್ರೀ ಜಿ. ಸುಂದರರಾಯರ ಅಧ್ಯಕ್ಷತೆಯಲ್ಲಿ ಪ್ರಾರಂಭವಾದುವು. ಜಾತ್ರೆಯ ಸಂಬಂಧವಾಗಿ ದನಗಳ ಪರಿಷೆಯೂ, ವಸ್ತುಪ್ರದರ್ಶನವೂ, ಕನ್ನಡ ಸಾಹಿತ್ಯೋತ್ಸವವೂ ಏರ್ಪಾಟಾಗಿದ್ದುವು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಸಾಹಿತ್ಯೋತ್ಸವದ ಪ್ರಾರಂಭನ್ನು ಮಾಡಿದರು.

ಉತ್ಸವ ಸಮಿತಿಯ ಅಧ್ಯಕ್ಷರಾದ ಶ್ರೀ ಜಿ. ಬಿ. ಮಲ್ಲಾರಾಧ್ಯರು ಎಲ್ಲರಿಗೂ ಸ್ವಾಗತ ಬಯಸಿ ಭಾಷಣ ಮಾಡುತ್ತ, ದನಗಳ ಪರಿಷೆ ಯಶಸ್ವಿಯಾಗಿ ನಡೆಯುವ ಭರವಸೆಯಿದೆಯೆಂದೂ, ಮೈಸೂರಿನಲ್ಲಿ ನಡೆಯುವ ಕೇಂದ್ರ ವಸ್ತುಪ್ರದರ್ಶನದ ಜೊತೆಗೆ ಜಿಲ್ಲಾ ಪ್ರದರ್ಶನಗಳನ್ನೂ ನಡಸುವುದರಿಂದ ನಾಡಿಗೆ ಹೆಚ್ಚು ಪ್ರಯೋಜನವುಂಟೆಂದೂ ತಿಳಿಸಿ, ಜಾತ್ರೆಯ ಸಂಬಂಧದಲ್ಲಿ ಸಾಹಿತ್ಯೋತ್ಸವವನ್ನು ಏರ್ಪಡಿಸಿರುವುದರ ಔಚಿತ್ಯವನ್ನು ಕುರಿತು ಹೀಗೆ ಹೇಳಿದರು:



( ಕೋಲಾರದ ಶ್ರೀ ಕೋಲಾರಮ್ಮನ ಜಾತ್ರೆಯ ಜೊತೆಗೆ ನಡೆದ ಕನ್ನಡ ಸಾಹಿತ್ಯೋತ್ಸವದ ಕಾಲದಲ್ಲಿ ತೆಗೆದ ಇನ್ನೊಂದು ಚಿತ್ರ

[ಪಡಿಯಚ್ಚು : ಉತ್ಸವ ಸಮಿತಿಯವರ ಕೃಪೆಯಿಂದ]

"ಈ ವ್ಯವಸ್ಥೆಯ ವಿಷಯದಲ್ಲಿ ಸಮಿತಿಯವರ ಗಮನಕ್ಕೆ ನಾನಾ ಬಗೆಯ ಅಭಿಪ್ರಾಯಗಳು ಬಂದಿವೆ. ದನಗಳ ಪರಿಷೆಗೂ ಸಾಹಿತ್ಯಕ್ಕೂ ಯಾವ ಸಂಬಂಧ? ವಸ್ತು ಪ್ರದರ್ಶನಕ್ಕೂ ಉಪನ್ಯಾಸ ಮಾಲೆಗೂ ಯಾವ ನಿಕಟ ಸಂಬಂಧ ಇತ್ಯಾದಿ ಇತ್ಯಾದಿ. ಈ ಅಭಿಪ್ರಾಯಗಳಿಗೆ ಸ್ವಂತವಾಗಿ ನಾನು ಸದುತ್ತರ ಕೊಡಬಲ್ಲೆನಾದರೂ ಪ್ರಕೃತ ಅಸಂಬದ್ಧಪ್ರಲಾಪಕ್ಕೆ ಕೈಹಾಕುವುದು ಅನುಚಿತವೆಂದು ತೋರುತ್ತೆ. ಸಹಸ್ರಾರು ಜನರು ಸೇರುವ ಸನ್ನಿವೇಶ ಯಾವುದೇ ಆಗಲಿ, ಅದು ಸಾಹಿತ್ಯಸೇವೆಗೆ ಸೂಕ್ತವಾದ ಅವಕಾಶ. ಜನಪದ ಸಾಹಿತ್ಯದ ಅಭಿವೃದ್ಧಿ ಸಾಧನೆಗೆ ಅದೇ ಯೋಗ್ಯವಾದ ಕಾಲ. ಈ ಸ್ವಂತ ಅಭಿಪ್ರಾಯದ ಫಲವಾಗಿಯೇ ಈ ಸಾಹಿತ್ಯ ಸಪ್ತಾಹವನ್ನು ಏರ್ಪಡಿಸಿದ್ದಾಗಿದೆ. ಅಲ್ಲದೆ ದನಗಳ ಪರಿಷೆ ಅಷ್ಟು ಯಶಸ್ವಿಯಾಗದಿರಬಹುದು. ವಸ್ತು ಪ್ರದರ್ಶನವೂ ಅಷ್ಟು ಉತ್ತಮ ರೀತಿಯಲ್ಲಿ ರೂಪುಗೊಳ್ಳದಿರಬಹುದು. ಆದರೆ ಈ ಸಾಹಿತ್ಯೋತ್ಸವದಿಂದಲಾದರೂ ನಾವು ಕೃತಾರ್ಥರಾಗುವ ಎಂಬ ಮಹತ್ವಾಕಾಂಕ್ಷೆ ಸಮಿತಿಯವರನ್ನು ಸಕಾಲದಲ್ಲಿ ಎಚ್ಚರಗೊಳಿಸಿತು.

ಇನ್ನು ಪೌರಸಭೆಗೂ, ಸಾಹಿತ್ಯೋತ್ಸವಕ್ಕೂ ಯಾವ ಬಾಂಧವ್ಯ? ಊರಿನ ಚರಂಡಿಗಳು ಕೊಳೆಯುತ್ತಾ ಇವೆ; ಬೀದಿಗಳಲ್ಲಿ ಹಳ್ಳಬಿದ್ದರೆ ಮಣ್ಣು ಹಾಕಿ ಮುಚ್ಚಲಿಕ್ಕೆ ದುಡ್ಡಿಲ್ಲ; ಸಂದಿಗೊಂದಿಗಳಲ್ಲಿ ಪಾಕೀಜು ವ್ಯವಸ್ಥೆ ಹೇಳತೀರದು ; ನಲ್ಲಿ ಕೇಳಿದರೆ, ದೀಪ ಕೇಳಿದರೆ, ಹಣವಿಲ್ಲ; ಹೀಗಿರುತ್ತಾ ಸಾಹಿತ್ಯದ ಸುಗ್ಗಿ ಬೇರೆ!—ಎಂತ ಕೆಲವರ ಟೀಕೆ. ಈ ಆಪಾದನೆಗಳು ಅಪ್ರಾಸಂಗಿಕವಾದರೂ ಸ್ವಲ್ಪಮಟ್ಟಿಗೆ ನಿಜ. ಆದರೆ ಈ ವರ್ಷ ಏರ್ಪಾಡಾಗಿರುವ ಸಾಹಿತ್ಯೋತ್ಸವದ ವಿಷಯವನ್ನು ಸಕಾಲದಲ್ಲಿ ಗಮನಕ್ಕೆ ತಂದಿದ್ದರೆ ನಮ್ಮ ಪೌರಸಭೆಯವರು ನಿಜವಾಗಿಯೂ ಹೆಚ್ಚಿನ ದ್ರವ್ಯ ಸಹಾಯ ಮಾಡುತ್ತಿದ್ದರು ಎಂದು ನನ್ನ ನಂಬಿಕೆ.

"ಪೌರಸಭೆಯವರ ಆಶ್ರಯದಲ್ಲಿ ಕನ್ನಡ ಉತ್ಸವವನ್ನು ಬಹುಶಃ ಇನ್ನಾರೂ ಮೈಸೂರು ಸಂಸ್ಥಾನದಲ್ಲಿ ಏರ್ಪಡಿಸಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಕೇಂದ್ರ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತೇನೋ ತನ್ನ ಕಾರ್ಯರಂಗವನ್ನು ವಿಶಾಲಗೊಳಿಸುವ ಉದ್ದೇಶದಿಂದ ಮುನಿಸಿಪಾಲಿಟಿಗಳನ್ನೂ, ಇತರ ಸ್ಥಳೀಯ ಸಂಸ್ಥೆಗಳನ್ನೂ ಮೇಲಿಂದ ಮೇಲೆ ದ್ರವ್ಯ ಸಹಾಯಕ್ಕಾಗಿ ಒತ್ತಾಯ ಪಡಿಸುತ್ತಿದೆ. ಹೀಗಿರುವಲ್ಲಿ ೧೪,೦೦೦ ಪ್ರಜಾ ಸಂಖ್ಯೆಗೆ ಮೇಲ್ಪಟ್ಟು ಇರತಕ್ಕ ಈ ಮುನಿಸಿಪಾಲಿಟಿಯಲ್ಲಿ, ೧೦,೦೦೦ ಜನರಿಗೆ ಮೇಲ್ಪಟ್ಟು ಕನ್ನಡವೇ ಮಾತೃಭಾಷೆಯಾಗಿರುವ ಈ ಪ್ರದೇಶದಲ್ಲಿ ಪ್ರತಿ ವರ್ಷವೂ ಸಾಹಿತ್ಯೋತ್ಸವ ನಡೆಯುವುದರಲ್ಲಿ ತಪ್ಪೇನಿದೆ? ಪುರನಿವಾಸಿಗಳಿಂದ ವಸೂಲಾದ ದ್ರವ್ಯದ ಮೊತ್ತದಲ್ಲಿ ಒಂದಂಶವನ್ನು ಸಾಹಿತ್ಯ ದೇವಿಯ ಆರಾಧನೆಗಾಗಿ ವಿನಿಯೋಗಿಸುವುದರಲ್ಲಿ ಕಾಣುವ ಕೊರತೆ ಏನು? ಒಟ್ಟಿನಲ್ಲಿ ಸಂಸ್ಥಾನದ ಪ್ರತಿಯೊಂದು ಮುನಿಸಿಪಾಲಿಟಿಯವರೂ ಈ ವಿಷಯಕ್ಕೆ ತಮ್ಮ ಸಂಪೂರ್ಣವಾದ ಸಹಾಯ ಸಹಾನುಭೂತಿಗಳನ್ನು ಒದಗಿಸಬೇಕೆಂದು ನನ್ನ ಆಕಾಂಕ್ಷೆ. ಈ ನಮ್ಮ ಪ್ರಥಮ ಪ್ರಯತ್ನ ಸಾರ್ಥೋದ್ಧಾರವಾಗಿ ನಡೆಯುವಂತೆ ಪುರಜನರಾದ ತಾವು ಸಹಕರಿಸಬೇಕು. ಇಲ್ಲಿ ನೆರೆದಿರತಕ್ಕ ಕನ್ನಡ ದೇವಿಯ ಭಕ್ತರ ಬಳಗವನ್ನು ನೋಡಿ ನನಗೆ ಅಪೂರ್ವ ಆನಂದವೂ, ಸ್ಫೂರ್ತಿಯೂ ಉಂಟಾಗಿದೆಯಲ್ಲದೆ ಕನ್ನಡ ನುಡಿಯ ಭವಿಷ್ಯದ ಬಗ್ಗೆ ಒಂದು ಮಹತ್ತರವಾದ ನಂಬಿಕೆ ಅಂಕುರಿಸುತ್ತಿದೆ. ಅದನ್ನು ತಮಗೆ ನಿವೇದನ ಮಾಡಲು ಅಪೇಕ್ಷಿಸುತ್ತೇನೆ.

"ಕನ್ನಡದ ಮೇಲೆ ನಾವು ತೋರಿಸುವ ಪ್ರೀತಿ ಕೇವಲ ಆವೇಶ ಮಾತ್ರದ್ದಲ್ಲ. ಅದು ಅತ್ಯಂತ ಉಪಯೋಗವಾದ ವಿಚಾರದಿಂದ ಕೂಡಿದ್ದು. ಕನ್ನಡ ಭಾಷೆಗೆ ಇರುವ ಬೆಲೆ ಕೇವಲ ಅಭಿಮಾನದ್ದಲ್ಲ. ಭಾಷೆಯೇ ಪರಮೋದ್ದೇಶವಲ್ಲ. ಅದು ಮನುಷ್ಯನ ಜೀವನಕ್ಕೆ ಆವಶ್ಯಕವಾದ ಒಂದು ಸಾಧನ ಮಾತ್ರ. ಕನ್ನಡ ದೇಶದಲ್ಲಿರತಕ್ಕ ಜನರ ಮನಸ್ಸನ್ನೂ, ಆತ್ಮವನ್ನೂ ಮುಟ್ಟಬೇಕಾದರೆ ಕನ್ನಡ ಅದಕ್ಕೆ ಯುಕ್ತವಾದ ಸಾಧನ. ಕನ್ನಡಕ್ಕೆ ಬೆಲೆ ಈ ದೃಷ್ಟಿಯಿಂದ. ಕನ್ನಡ ನಾಡಿನ ಜನರಲ್ಲಿ ಒಂದು ಹೊಸ ತೇಜಸ್ಸು, ಒಂದು ನವಚೈತನ್ಯ, ಒಂದು ಹೊಸ

---

ಗಳನ್ನು ಏರ್ಪಡಿಸಬೇಕು; ಶ್ರೀಮನ್ಮಹಾರಾಜರವರ ಮತ್ತು ಘನ ಸರ್ಕಾರದವರ ಆಶ್ರಯದಲ್ಲಿ ನುಡಿ ಸೇವೆಯ ಮೂಲಕ ಜನಸೇವೆ ಮಾಡುತ್ತಿರುವ ಪರಿಷತ್ತಿನೊಡನೆ ಸಹಕರಿಸಿ ಸಹಾಯ ಮಾಡಬೇಕು.

ಮೇಲ್ಕಂಡ ಅಭಿಪ್ರಾಯವನ್ನು ನಾವು ಸಂಪೂರ್ಣವಾಗಿ ಅನುಮೋದಿಸುವುದಲ್ಲದೆ ಕೋಲಾರದ ಪೌರಸಭೆಯ ಮೇಲು ಪಂಕ್ತಿಯನ್ನು ಅನುಸರಿಸಿ, ನಾಡಿನ ಪೌರಸಭೆಗಳೇ ಮುಂತಾದ (ಸಾಹಿತ್ಯ ಸೇವೆಯನ್ನೇ ಮುಖ್ಯ ಗುರಿಯಾಗಿಟ್ಟುಕೊಳ್ಳದ) ಇತರ ಸಾರ್ವಜನಿಕ ಸಂಸ್ಥೆಗಳೂ ಮುಂದೆ ಬಂದು, ಜನೋಪಯುಕ್ತವಾದ ಕಾರ್ಯಗಳಲ್ಲಿ ಒಂದಾದ ಸಾಹಿತ್ಯೋತ್ಸವವನ್ನು ಏರ್ಪಡಿಸಬೇಕೆಂದು ಪರಿಷತ್ತಿನ ಪರವಾಗಿ ಬೇಡಿಕೊಳ್ಳುತ್ತೇವೆ. ಈ ಭಾಗದಲ್ಲಿ ಪರಿಷತ್ತು ತನ್ನ ಕೈಲಾದಮಟ್ಟಿನ ನೆರವು ಕೊಡಲು ಸಿದ್ಧವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

### ನವಿಲುಗುಂದದಲ್ಲಿ ತಾ|| ೪-೨-೧೯೪೮ನೆಯ ದಿವಸ ನೆರೆದ ಧಾರವಾಡ ಜಿಲ್ಲೆಯ ೪ನೆಯ ಸಾಹಿತ್ಯ ಸಮ್ಮೇಳನದಲ್ಲಿ ಡಾ|| ಎಸ್. ಸಿ. ನಂದಿಮಠ, ಎಂ.ಎ., ಪಿ.ಎಚ್‌ಡಿ. ಅವರು ಮಾಡಿದ ಅಧ್ಯಕ್ಷ ಭಾಷಣದ ಸಾರಾಂಶ

ಕನ್ನಡದೇಶ ಮತ್ತು ಕನ್ನಡ ಭಾಷೆ ಇವುಗಳಲ್ಲಿ ಉಜ್ವಲವಾದ ಇತಿಹಾಸವುಂಟು. ಈ ಇತಿಹಾಸ ಅತಿ ಪ್ರಾಚೀನ ಕಾಲದಿಂದ ನಡೆಯುತ್ತ ಬಂದಿದೆ. ಇತಿಹಾಸ ಹಿಂದಿನವರ ಗುಣದೋಷಗಳನ್ನು ತಿಳಿಸಿಕೊಡುವುದಲ್ಲದೆ ಮುಂದಿನವರಿಗೆ ಮಾರ್ಗದರ್ಶಕವಾಗಿರುವುದು. ನಮ್ಮ ಪೂರ್ವಜರ ಗುಣಗಳನ್ನು ಅನುಕರಣ ಮಾಡಿ ನಮ್ಮ ಈಗಿನ ಜೀವನವನ್ನು ಹೆಚ್ಚು ಉಜ್ವಲವಾದುದನ್ನಾಗಿ ಮಾಡಲಿಕ್ಕೂ, ನಮಗನಿಸುವ ಅವರಲ್ಲಿಯ ದೋಷಗಳನ್ನು ಬಿಟ್ಟು ಬಿಡಲಿಕ್ಕೂ ಇತಿಹಾಸ ಅನುಕೂಲವಾಗುವುದು. ಸ್ವಲ್ಪವೇ ಶಬ್ದಗಳಲ್ಲಿ ಹೇಳಬೇಕಾದರೆ ಕಾರ್ಗತ್ತಲೆಯಲ್ಲಿ ಪ್ರವಾಸಮಾಡುವ ದಾರಿಕಾರನಿಗೆ ಇತಿಹಾಸ ಕೈದೀವಿಗೆಯಾಗಿರುವುದು. ಆದುದರಿಂದ ಇತಿಹಾಸವನ್ನು ಮೇಲಿಂದ ಮೇಲೆ ಸಿಂಹಾವಲೋಕನ ಮಾಡುವುದರಿಂದ ನಮಗೆ ಸ್ಫೂರ್ತಿಯೂ ಹೆಚ್ಚು ಬೆಳಕೂ ಬೀಳುವುದು.

ಇನ್ನು ನಮ್ಮ ಇತಿಹಾಸ ಎಂತಹುದೆಂದು ನೋಡೋಣ:

ಹಿಂದೂಸ್ಥಾನದಲ್ಲಿ ಆರ್ಯರು ಪ್ರವೇಶಮಾಡುವುದಕ್ಕಿಂತ ಮೊದಲು ಇಲ್ಲಿ ವಾಸವಾಗಿದ್ದ ಜನರಿಗೆ ಸಂಸ್ಕೃತಿಯಿತ್ತೆಂದೂ ಈಗಿನ ಬಹುಜನ ಪಂಡಿತರು ಒಪ್ಪಿಕೊಳ್ಳುತ್ತಾರೆ. ಈ ಸಂಸ್ಕೃತಿ ಅನೇಕ ವಿಷಯಗಳಲ್ಲಿ ಆರ್ಯರ ಸಂಸ್ಕೃತಿಗಿಂತ ಹೆಚ್ಚಿನದಿತ್ತೆಂದೂ ಅಭಿಪ್ರಾಯಪಡುತ್ತಾರೆ. ಆರ್ಯರು ತಮ್ಮ ಸಂಸ್ಕೃತಿಯಲ್ಲಿ ಇವುಗಳನ್ನೂ ಕೂಡಿಸಿಕೊಂಡರೆಂದು ಕಂಡುಬರುತ್ತದೆ. ಮುಖ್ಯವಾಗಿ ಜಗತ್ಕರ್ತೃವಾದ ದೇವರನ್ನು ಮೂರ್ತಸ್ವರೂಪದಿಂದ ಪೂಜಿಸುವುದನ್ನೂ, ಪವಿತ್ರವಾದ ಸ್ಥಾನಗಳಲ್ಲಿ ದೇವಾಲಯಗಳನ್ನು ಕಟ್ಟಿಸುವುದನ್ನೂ, ರಾಜನ ಅಧಿಕಾರದ ಕೆಳಗೆ ಸಮಾಜ ಮತ್ತು ದೇಶ ಇವನ್ನು ಕಟ್ಟಿನಲ್ಲಿ ತಂದು ಅವನ್ನು ಸುವ್ಯವಸ್ಥೆಯಿಂದ ಆಳುವುದನ್ನೂ ಆರ್ಯರು ಈ ಜನರಿಂದ ಕಲಿತುಕೊಂಡರು. ಆರ್ಯರ ಭಾಷೆ ಇವರ ಸಂಪರ್ಕದಿಂದ ಬೇರೆ ಸ್ವರೂಪವನ್ನು ಹೊಂದಿತು. ಅದನ್ನು ಶುದ್ಧಮಾಡಿ ಅದರ ಪೂರ್ವದ ಸ್ವರೂಪವನ್ನು ಕೊಡಲು ಯತ್ನಿಸಿದವರಲ್ಲಿ ಪಾಣಿನಿಯೂ ಒಬ್ಬನು. ಅಂದಿನಿಂದ ಆರ್ಯರ ಭಾಷೆ ಸಂಸ್ಕೃತಿಯನ್ನು ಹೊಂದಿದುದರಿಂದ ಅದಕ್ಕೆ ಸಂಸ್ಕೃತವೆಂದು ಹೆಸರಾಯಿತು.

ಈ ಮೂಲನಿವಾಸಿಗಳ ಬಗ್ಗೆ ನಮಗೆ ಇನ್ನೂ ಸಾಕಷ್ಟು ಸಂಗತಿಗಳು ದೊರೆತಿಲ್ಲ. ಆದರೂ ಈಗ ದೊರೆತಿರುವ ಸಂಗತಿಗಳಿಂದ ಅವರ ಭಾಷೆ, ಜೀವನಕ್ರಮ ಇತ್ಯಾದಿ ವಿಷಯಗಳ ಮೇಲೆ ಸಾಕಷ್ಟು ಪ್ರಕಾಶ ಬೀಳುವುದು. ಹಿಂದೂಸ್ಥಾನದಲ್ಲಿ ಪ್ರಚಾರದಲ್ಲಿರುವ ಅನೇಕ ಭಾಷೆಗಳನ್ನು ವಿಂಗಡಿಸಿ ಮುಖ್ಯವಾಗಿ ಎರಡು ಗುಂಪುಗಳನ್ನಾಗಿ ಮಾಡಬಹುದು. ಅವುಗಳಲ್ಲಿ ಒಂದು ಆರ್ಯರ ಭಾಷಾವರ್ಗಕ್ಕೆ ಸೇರುವುದು. ಮತ್ತೊಂದು ದ್ರಾವಿಡ ಭಾಷಾವರ್ಗಕ್ಕೆ ಸೇರುವುದು. ಆರ್ಯರ ಭಾಷಾವರ್ಗಕ್ಕೆ ಸೇರುವ ಭಾಷೆಗಳಲ್ಲಿ (ದಕ್ಷಿಣ ಹಿಂದೂಸ್ಥಾನದಲ್ಲಿ) ಮರಾಠಿ ಗುಜರಾಥಿಗಳು ಮುಖ್ಯ. ದ್ರಾವಿಡ ಭಾಷಾ ವರ್ಗಕ್ಕೆ ಸೇರುವ ಭಾಷೆಗಳಲ್ಲಿ ಕನ್ನಡ ತಮಿಳು ತೆಲುಗುಗಳು ಮುಖ್ಯವಾದುವು. ಇದರಿಂದ ಈ ಎರಡೂ ವರ್ಗಗಳಲ್ಲಿ ಪರಸ್ಪರ ಪ್ರಭಾವ ಇಲ್ಲವೆಂದು ಮಾತ್ರ ಭಾವಿಸಬಾರದು. ದ್ರಾವಿಡರು ಹಿಂದೂಸ್ಥಾನದ ಮೂಲನಿವಾಸಿಗಳು. ಇದರಿಂದ ನಮ್ಮ ಕನ್ನಡ ಭಾಷೆಯ ಪ್ರಾಚೀನತೆ ಬಹಳ ದೂರ ಹೋಗುವುದು. ಋಗ್ವೇದ ಸಂಹಿತೆಯಲ್ಲಿಯೂ ಕೂಡ ದ್ರಾವಿಡ ಭಾಷೆಯ ಪ್ರಭಾವ ಕಂಡುಬರುವುದು.

ಇತ್ತಿತ್ತಲಾಗಿ ಪ್ರಾಚ್ಯವಸ್ತು ಸಂಶೋಧನ ಖಾತೆಯವರು ಬೆಳಕಿಗೆ ತಂದ ಹರಪ್ಪ ಮತ್ತು ಮೊಹೆಂಜೊದಾರೋ ಸ್ಥಳಗಳಲ್ಲಿ ದೊರೆತ ಅನೇಕ ವಸ್ತುಗಳು ಮೂಲನಿವಾಸಿಗಳ ಸಂಸ್ಕೃತಿಯನ್ನು ದೃಢೀಕರಿಸುತ್ತವೆ. ಅಲ್ಲಿ ದೊರೆತ ಸುಟ್ಟ ಸಣ್ಣ ಇಟ್ಟಂಗಿಗಳಂತಹ ಮಣ್ಣಿನ ಬಿಲ್ಲೆಗಳ (Tablets) ಮೇಲಿನ ಮುದ್ರೆಗಳೂ ಅಕ್ಷರಗಳೂ ಮೂಲನಿವಾಸಿಗಳ ಸಂಸ್ಕೃತಿಗೆ ಸಾಕ್ಷಿಯಾಗಿವೆ. ಇವುಗಳಲ್ಲಿ ಬಸವ, ಸಮಾಧಿಯಲ್ಲಿದ್ದ ಶಿವ, ದೇವಿ ಮೊದಲಾದ ಚಿತ್ರಗಳಿವೆ. ಅಕ್ಷರಗಳನ್ನು ಓದಲು ಪ್ರಯತ್ನಗಳು ನಡೆದಿವೆ. ಈ ಮುದ್ರಿಕೆಗಳ ಕಾಲ ವೇದ ಕಾಲಕ್ಕಿಂತಲೂ ಹಿಂದಿನದೆಂದು ಬಹುತರ ಎಲ್ಲ ಸಂಶೋಧಕರೂ ಅಭಿಪ್ರಾಯಪಡುತ್ತಾರೆ. ಹೆರಾಸ್ ಎಂಬ ಇತಿಹಾಸಜ್ಞರು ಈ ಲೇಖನಗಳಲ್ಲಿಯ ಭಾಷೆ ಕನ್ನಡ–ತಮಿಳು–ತೆಲುಗು ಭಾಷೆಗಳ ಮೂಲಹಾದ ದ್ರಾವಿಡ ಭಾಷೆಯೆಂದು ಅಭಿಪ್ರಾಯಪಡುತ್ತಾರೆ. ಎಂದಮೇಲೆ ಕನ್ನಡದ ಪ್ರಾಚೀನತೆ ವೇದ ಕಾಲಕ್ಕೂ ಹಿಂದಿನದು ಎನ್ನಬಹುದು. ಕೆಳಗಣ ಈಜಿಪ್ತ ದೇಶದಲ್ಲಿರುವ ಅಗ್ಸಿರಿಂಕಸ್ ಎಂಬ ಸ್ಥಳದಲ್ಲಿ ದೊರೆತ ಸುಮಾರು ಕ್ರಿ.ಶ. ೨೦೦ರಲ್ಲಿ ಬರೆಯಲ್ಪಟ್ಟ ಒಂದು ಗ್ರೀಕ್ ಪ್ರಹಸನದಲ್ಲಿಯ ಅನೇಕ ಪಾತ್ರಗಳು ಆಡುವ ಮಾತು ಕನ್ನಡವೆಂದು ನಮಗೆಲ್ಲರಿಗೂ ಪೂಜ್ಯರಾದ ದಿವಂಗತ ಆರ್. ನರಸಿಂಹಾಚಾರ್ಯರ ಮತ. ಮಹಾಭಾರತದಲ್ಲಿ ಕರ್ನಾಟಕದ ಉಲ್ಲೇಖವಿದೆ. ಜೈಮಿನಿ ಭಾರತದಲ್ಲಿ ದೊರೆಯುವ ಕಥೆಯಲ್ಲಿಯ ಚಂದ್ರಹಾಸನು ಕನ್ನಡ ನಾಡಿನ ದೊರೆ. ಈ ಚಂದ್ರಹಾಸನ ಕಥೆ ಅರಬರಿಂದ ಯೂರೋಪಿಗೆ ಒಯ್ಯಲ್ಪಟ್ಟು ಮೊದಲು ಇಟಾಲಿಯನ್ ಭಾಷೆಗೆ ಭಾಷಾಂತರ ಹೊಂದಿದೆ. ಇದನ್ನೇ ಸ್ವಲ್ಪ ವ್ಯತ್ಯಾಸದಿಂದ William Morris ಎಂಬ ಆಂಗ್ಲ ಕವಿಯ A Man Born to be a King ಎಂಬ ಕೃತಿಯಲ್ಲಿ ನೋಡಬಹುದು.

ಕರ್ನಾಟಕದ ಪ್ರಸಿದ್ಧ ಅರಸುಮನೆತನಗಳಲ್ಲಿ ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದವರು ಮುಖ್ಯರು. ಇವರ ಆಳಿಕೆಯಲ್ಲಿ ಕರ್ನಾಟಕ ಘನತೆಯನ್ನು ಹೊಂದಿ ಹೆಸರುವಾಸಿಯಾದ ದೇಶವಾಗಿತ್ತು. ಚಾಲುಕ್ಯರು ಕರ್ನಾಟಕದ ಕೀರ್ತಿಯನ್ನು ಬೆಳಸಿದರು. ರಾಷ್ಟ್ರಕೂಟರು ಕರ್ನಾಟಕದ ಧ್ವಜವನ್ನು ಹಿಂದೂಸ್ಥಾನದ ಬಹುಭಾಗಗಳಲ್ಲಿ ನೆಟ್ಟರು. ಗುಜರಾಥ, ಕಾಠೇವಾಡ ಭಾಗಗಳು ಇವರ ಆಧಿಪತ್ಯಕ್ಕೆ ಒಳಪಟ್ಟದ್ದುವಾದುದರಿಂದ ಅಲ್ಲಿ ಇನ್ನೂ ಪ್ರಚಾರದಲ್ಲಿರುವ ಹಲಕೆಲವು ಕನ್ನಡ ಶಬ್ದಗಳು ಆ ಕಾಲದಿಂದ ಬಂದಿರಬೇಕು. ರಾಷ್ಟ್ರಕೂಟರಲ್ಲಿ ಪ್ರಸಿದ್ಧ ದೊರೆಯಾದ ನೃಪತುಂಗನು ಕನ್ನಡ ಭಾಷೆಗೆ ಬಹಳವಾಗಿ ಸಹಾಯಮಾಡಿದ್ದಾನೆ. ಈತನ ಹೆಸರಿನಲ್ಲಿರುವ 'ಕವಿರಾಜಮಾರ್ಗ' ಕನ್ನಡ ಭಾಷೆಯಲ್ಲಿ ಈಗ ದೊರೆತಿರುವ ಪ್ರಾಚೀನ ಗ್ರಂಥಗಳಲ್ಲಿ ಮೊದಲನೆಯದು. 'ಕವಿರಾಜಮಾರ್ಗ'ದಲ್ಲಿ ಕನ್ನಡ ನಾಡಿನ ಸೀಮೆಯನ್ನು ನಿಷ್ಕರಿಸಿರುವುದಲ್ಲದೆ ತಿರುಳ್ಗನ್ನಡದ ಪ್ರದೇಶವೂ ಉಲ್ಲೇಖವಾಗಿದೆ. ತಿರುಳ್ಗನ್ನಡದ ಚತುಸ್ಸೀಮೆ ಈಗಿನ ಬೆಳಗಾಂವಿ ಜಿಲ್ಲೆಯ ಒಕ್ಕುಂದ, ವಿಜಾಪುರ ಜಿಲ್ಲೆಯ ಪಟ್ಟದಕಲ್ಲು, ನಿಜಾಮ ಸೀಮೆಯ ಕೊಪ್ಪಳ, ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ. ನಕಾಶದಲ್ಲಿ ಈ ಊರುಗಳನ್ನು ಕೂಡಿಸುವುದರಿಂದುಂಟಾಗುವ ಆಕೃತಿ ಕರ್ನಾಟಕ ದೇಶದ ಮಧ್ಯದಲ್ಲಿ ನಾಡಿನ ಹೃದಯದಂತೆ ಇರುವುದು. ಈ ಭಾಗದಲ್ಲಿ ಕನ್ನಡ ಭಾಷೆಯ ಪ್ರಗತಿ ಜೋರಿನಿಂದ ನಡೆದರೆ ಕರ್ನಾಟಕದಲ್ಲೆಲ್ಲಾ ಚೈತನ್ಯವುಂಟಾಗುವುದು. ಹೃದಯ ಹೇಗೆ ದೇಹಕ್ಕೆಲ್ಲಾ ರಕ್ತವನ್ನು ಪೂರೈಸುವುದೋ ಹಾಗೆಯೇ ಈ ಭಾಗ ನಮ್ಮ ಭಾಷೆಯ ಬೆಳವಣಿಗೆಗೆ ಸಾಕಷ್ಟು ಸಾಧನಗಳನ್ನು ಒದಗಿಸಿಕೊಡಬೇಕು. ಈ ಚತುಸ್ಸೀಮೆಯೊಳಗಿನ ಮಹತ್ತ್ವದ ಪಟ್ಟಣಗಳಲ್ಲಿ ನವಿಲುಗುಂದವೂ ಒಂದಾಗಿದೆ. ನವಿಲುಗುಂದದಲ್ಲಿ ಕೂಡಿದ ಈ ಸಾಹಿತ್ಯ ಸಮ್ಮೇಳನ ಕನ್ನಡದ ಬೆಳವಣಿಗೆಗೆ ಮಾರ್ಗದರ್ಶಕವಾಗಲೆಂದು ನನ್ನ ಹಾರೈಕೆ.

ಕನ್ನಡ ಪ್ರಾಚೀನ ಸಾಹಿತ್ಯ ವಿಪುಲತೆಯಲ್ಲಿ ಯಾವ ಪ್ರಾಚೀನ ಭಾಷೆಗೂ ಕಡಮೆಯಾಗಿಲ್ಲವೆಂದು ಹೇಳಬಹುದು. ಸಾಹಿತ್ಯದ

ದೃಷ್ಟಿಯಿಂದ ಉಚ್ಚತಮವಾಗಿ ನೀತಿ-ಭಕ್ತಿ-ಜ್ಞಾನ-ವೈರಾಗ್ಯ ಮೊದಲಾದ ಆಧ್ಯಾತ್ಮಿಕ ಉನ್ನತಿಯ ವಿಷಯಗಳ ದೃಷ್ಟಿಯಿಂದ ಅನುಪಮವಾಗಿದೆ. ಶರಣರ ವಚನಸಾಹಿತ್ಯವನ್ನು ಕನ್ನಡ ಉಪನಿಷತ್ತು ಎನ್ನಬಹುದು. ಶರಣರ ಮತ್ತು ದಾಸರ ಪದಗಳು ಜನರ ಹೃದಯದ ಮಲಿನತೆಯನ್ನು ತೊಳೆದು ಶಾಂತಿಯನ್ನು ನೀಡುವುವು. ಸುಮಾರು ಕ್ರಿ. ಶ. ೧೨ನೆಯ ಶತಮಾನದಿಂದ ಮುಂದೆ ಬೆಳೆದ ಕನ್ನಡ ಸಾಹಿತ್ಯ ಬಹುತರವಾಗಿ ಸಾಮಾನ್ಯರ ಸಲುವಾಗಿಯೇ ಇರುತ್ತದೆ. ಶೈಲಿಯಲ್ಲಿ, ಛಂದಸ್ಸಿನಲ್ಲಿ ಮತ್ತು ಶಬ್ದಗಳ ಪ್ರಯೋಗದಲ್ಲಿ ಪಾಮರರಿಗೂ ಕೂಡ ಸುಲಭವಾಗಿ ಅರ್ಥವಾಗುವಂತೆ ಬರೆದಂತಹ ಸಾಹಿತ್ಯವೇ ಹೆಚ್ಚಾಗಿದೆ. ಗ್ರಂಥಕಾರರು ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ಲಕ್ಷ್ಯಗೊಡದೆ ಸರ್ವರಿಗೂ ಸುಲಭವಾಗಿ ಗಮನವಾಗಬೇಕೆಂಬ ಧ್ಯೇಯದ ಕಡೆಗೆ ಹೆಚ್ಚು ಲಕ್ಷ್ಯಕೊಟ್ಟಂತೆ ತೋರುವುದು. ಮುಂದೆ ಸುಮಾರು ೧೬-೧೭ನೆಯ ಶತಮಾನದ ತರುವಾಯ ಎಂದರೆ ವಿಜಯನಗರ ಸಾಮ್ರಾಜ್ಯ ಕೊನೆಗಂಡಮೇಲೆ, ದೇಶದ ಅರಾಜಕತೆಯ ಮೂಲಕ ಕನ್ನಡದ ಬೆಳವಣಿಗೆ ಕುಂಠಿತವಾಯಿತು. ಬ್ರಿಟಿಷರ ರಾಜ್ಯ ಹಿಂದೂಸ್ಥಾನದಲ್ಲಿ ಸ್ಥಾಪನೆಯಾದಂದಿನಿಂದ ಉಳಿದ ಭಾಷೆಗಳಿಗೆ ದೊರೆತ ಚೈತನ್ಯ ಕನ್ನಡಕ್ಕೂ ದೊರೆಯಬಹುದಾಗಿತ್ತು. ಆದರೆ ಕರ್ನಾಟಕ ಸಂಸ್ಥಾನಗಳ ಮತ್ತು ಬ್ರಿಟಿಷ್ ಪ್ರಾಂತಗಳ ನಡುವೆ ವಿಭಾಗವಾಗಿ ಹೋದುದರಿಂದ, ಸಂಸ್ಥಾನಗಳಲ್ಲಿಯಾಗಲಿ, ಬ್ರಿಟಿಷ್ ಪ್ರಾಂತಗಳಲ್ಲಿಯಾಗಲಿ ಕನ್ನಡಕ್ಕೆ ದೊರೆಯತಕ್ಕ ಪ್ರಾಮುಖ್ಯತೆ ದೊರೆಯಲಿಲ್ಲ. ಆದುದರಿಂದ ಕನ್ನಡ ಭಾಷೆ, ಕನ್ನಡಿಗರ ಸಂಸ್ಕೃತಿ, ಕನ್ನಡಿಗರ ಪ್ರಗತಿ, ಇವೆಲ್ಲವೂ ಹಿಂದುಳಿದುವು. ಇದೇ ಪರಿಸ್ಥಿತಿ ಮುಂದಾದರೂ ನಡೆದರೆ ಕರ್ನಾಟಕದ ಭಾವೀ ಪ್ರಗತಿ ತೃಪ್ತಿಕರವಾಗಿ ಸಾಗಲಾರದು. ಆದುದರಿಂದ ಕರ್ನಾಟಕದ ಏಕೀಕರಣ ಕನ್ನಡ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದಲೂ ಕೂಡ ಬಹು ಮಹತ್ತ್ವದ್ದಾಗಿದೆ. ಈಗ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಷಯವನ್ನು ಅಭ್ಯಾಸಮಾಡುವ ವಿದ್ಯಾರ್ಥಿಗಳ ಸಂಖ್ಯೆಯನ್ನು ನೋಡಿದರೆ ನಿರಾಶೆಯಾಗುವುದು. ಉಳಿದ ಮರಾಠಿ ಮತ್ತು ಗುಜರಾಥಿ ಭಾಷೆಗಳಲ್ಲಿ ಗತಿಸಿದ ಐದು ವರ್ಷಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ದ್ವಿಗುಣಿತವಾಗಿರುವುದು. ಕನ್ನಡ ವಿದ್ಯಾರ್ಥಿಗಳ ಸಂಖ್ಯೆ ಮಾತ್ರ ಇದ್ದಷ್ಟೇ ಇರುವುದೆನ್ನಬಹುದು. ಕನ್ನಡಕ್ಕಿಂತಲೂ ತೀರ ಹಿಂದುಳಿದಿದ್ದ ಸಿಂಧಿ ಈಗ ಕನ್ನಡಕ್ಕಿಂತ ಮುಂದಾಗಿದೆ. ಇದರ ಕಾರಣವೇನೆಂಬುದನ್ನು ಕನ್ನಡಿಗರು ವಿಚಾರಮಾಡತಕ್ಕ ವಿಷಯ. ನಮ್ಮ ಶಾಲೆ ಮತ್ತು ಕಾಲೇಜುಗಳಲ್ಲಿ ಓದುವಂತಹ ವಿದ್ಯಾರ್ಥಿಗಳಿಗೆ ನಮ್ಮ ಭಾಷೆಯ ಬಗ್ಗೆ ಹೆಚ್ಚು ಅನುಕೂಲತೆಯನ್ನೂ ಪ್ರೋತ್ಸಾಹವನ್ನೂ ಉಂಟುಮಾಡಿಕೊಡುವುದು ಮೊದಲನೆಯ ಕೆಲಸ. ನಮ್ಮ ಸಾಹಿತ್ಯದಲ್ಲಿ ಆಧುನಿಕ ವಿಷಯಗಳನ್ನು ತಿಳಿಸಿಕೊಡುವಂತಹ ಗ್ರಂಥಗಳು ತೀರ ಕಡಮೆ. ಅದಕ್ಕೆ ಕಾರಣಗಳಾದರೂ ಹಲಕೆಲವುಂಟು. ಕಾರಣಗಳನ್ನು ಶೋಧಿಸಿ ಜನರಲ್ಲಿ ಓದುವ ಚಟವನ್ನು ಹಚ್ಚಬೇಕು. ಅವರಿಗೆ ಯೋಗ್ಯವಾದಂತಹ ಸಾಹಿತ್ಯವನ್ನು ಹೆಚ್ಚು ಹೆಚ್ಚಾಗಿ ಪ್ರಕಟಿಸುವ ಅನುಕೂಲತೆಯನ್ನು ಒದಗಿಸಿಕೊಡಬೇಕು. ಸಾಹಿತ್ಯ ಸಮ್ಮೇಳನಗಳು ಈ ಕಡೆಗೆ ದೃಷ್ಟಿಯನ್ನು ಕೊಟ್ಟು ಆಧುನಿಕ ಸಾಹಿತ್ಯದ ಬೆಳವಣಿಗೆ, ಸಾಮಾನ್ಯ ಜನರಲ್ಲಿ ಓದುವ ಅಭಿರುಚಿ ಇವುಗಳನ್ನು ಉಂಟುಮಾಡಿದರೆ ಭಾಷೆಯ ಪ್ರಗತಿ ಹೆಚ್ಚು ತೀವ್ರವಾಗಿ ಆಗುವುದು.

---

## ಕರ್ನಾಟಕ ಸಂಘ, ಶಿವಮೊಗ್ಗ

ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರು ಶಿವಮೊಗ್ಗ ನಗರ ಭವನದಲ್ಲಿ ಇದೇ ೨೨ನೆಯ ಶುಕ್ರವಾರ 'ವಯಸ್ಕರ ವಿದ್ಯಾಭ್ಯಾಸ', ೨೩ನೆಯ ಶನಿವಾರ 'ವಚನ ವಾಙ್ಮಯ', ೨೪ನೆಯ ಭಾನುವಾರ 'ಪ್ರಭು ದೇವರು' ಎಂಬ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಮಾಡುತ್ತಾರೆ. ಸರ್ವರಿಗೂ ಆಹ್ವಾನವಿದೆ. ಉಪನ್ಯಾಸಗಳು ನಿತ್ಯವೂ ಸಂಜೆ ೬ ಘಂಟೆಗೆ ಪ್ರಾರಂಭವಾಗುತ್ತವೆ.

## ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

### ಗಮಕ ಗೋಷ್ಠಿ, ೧೯೪೦

(೧) ಕನ್ನಡ ಪದ್ಯ ಕಾವ್ಯಗಳನ್ನು ಕಿವಿಗಿಂಪಾಗುವಂತೆಯೂ, ಅರ್ಥ ವಿಶದವಾಗುವಂತೆಯೂ ಓದುವ ವಿದ್ಯೆಯನ್ನು ಪ್ರಚುರಪಡಿಸುವ ಉದ್ದೇಶದಿಂದ ಕಳೆದ ೫ ವರ್ಷಗಳು ನಡಸಿದಂತೆ ಈ ವರ್ಷವೂ ಗಮಕ ಕಲಾಭ್ಯಾಸ ಗೋಷ್ಠಿಯನ್ನು ಏರ್ಪಡಿಸಬೇಕೆಂದು ಪರಿಷತ್ತು ನಿಶ್ಚಯಿಸಿದೆ.

(೨) ಈ ಗೋಷ್ಠಿ ಇದೇ ಏಪ್ರಿಲ್ ತಿಂಗಳು ೯ನೆಯ ತಾರೀಖಿನಿಂದ ಪ್ರಾರಂಭವಾಗಿ ಮೂರು ತಿಂಗಳ ಕಾಲ ಪರಿಷನ್ಮಂದಿರದಲ್ಲಿ ನಡೆಯುವುದು.

(೩) ಗಮಕ ವಿದ್ವಾನ್ ಶ್ಲೋಕ ಸಂಗೀತ ಶ್ರೀ|| ಕೆ. ಜಿ. ಸಂಪತ್ಕುಮಾರಾಚಾರ್, ಬಿ.ಎ., ಬಿ.ಟಿ. ಅವರು ಗೋಷ್ಠಿಯ ಶಿಕ್ಷಕರಾಗಿರಲು ದಯವಿಟ್ಟು ಒಪ್ಪಿರುತ್ತಾರೆ.

(೪) ಗೋಷ್ಠಿ ರಜಾ ದಿನಗಳ ಹೊರತು ಸಾಮಾನ್ಯವಾಗಿ ಪ್ರತಿ ದಿನವೂ ಬೆಳಗ್ಗೆ ೭|| ಘಂಟೆಗೆ ಪ್ರಾರಂಭವಾಗಿ ನಡೆಯುವುದು.

(೫) ಸಾಕಷ್ಟು ಮಂದಿ ಹೆಣ್ಣುಮಕ್ಕಳು ಗೋಷ್ಠಿಗೆ ಸೇರುವುದಾದರೆ ಅವರಿಗಾಗಿ ಪ್ರತ್ಯೇಕ ತರಗತಿಯನ್ನು ತೆರೆಯಲಾಗುವುದು.

(೬) ಗೋಷ್ಠಿಗೆ ಸೇರಲಿಚ್ಛಿಸುವವರು ಕನ್ನಡ ಭಾಷೆಯಲ್ಲಿ ತಕ್ಕಷ್ಟು ಪರಿಶ್ರಮವನ್ನು ಹೊಂದಿರಬೇಕು; ಗಾನಕ್ಕೆ ಅನುಕೂಲವಾದ ಶಾರೀರಸಂಪತ್ತುಳ್ಳವರಾಗಿರಬೇಕು. ಸ್ವಲ್ಪಮಟ್ಟಿಗಾದರೂ ಸಂಗೀತ ಜ್ಞಾನ, ರಾಗ ಜ್ಞಾನ, ತಾಳ ಜ್ಞಾನಗಳನ್ನು ಪಡೆಯದೆ ಇರುವವರಿಗೆ ಈ ಗೋಷ್ಠಿ ಉಪಯುಕ್ತವಾಗಲಾರದು.

(೭) ಗೋಷ್ಠಿಗೆ ಸೇರಿದವರು ತಿಂಗಳಿಗೆ ಒಂದು ರೂಪಾಯಿಯಂತೆ ತೆರ ಕೊಡಬೇಕು.

(೮) ಗೋಷ್ಠಿಗೆ ಸೇರಲಿಚ್ಛಿಸುವವರು ತಮ್ಮ ಅಪೇಕ್ಷಾಪತ್ರವನ್ನು ಮೇಲೆ ಹೇಳಿರುವ ತೆರದೊಂದಿಗೆ ೧೯೪೦ನೆಯ ಏಪ್ರಿಲ್ ೬ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ತಲಪುವಂತೆ ಬರೆದು ಕಳಿಸಬೇಕು. ಅಪೇಕ್ಷಾಪತ್ರದಲ್ಲಿ ಈ ಕೆಳಗಣ ವಿವರಗಳನ್ನು ತಿಳಿಸಿರಬೇಕು.

(i) ಹೆಸರು, (ii) ವಯಸ್ಸು, (iii) ಉದ್ಯೋಗ, (iv) ಇರುವ ಭಾಷಾ ಸಾಮರ್ಥ್ಯ, ಸಂಗೀತ ಪರಿಚಯ, (v) ವಿಶೇಷಾಂಶಗಳು, (vi) ವಿಳಾಸ.

(೯) ಅಪೇಕ್ಷಾ ಪತ್ರಗಳನ್ನು ಅಂಗೀಕಾರ ಮಾಡುವುದಕ್ಕೂ ಮಾಡದಿರುವುದಕ್ಕೂ ಪರಿಷತ್ತಿಗೆ ಅಧಿಕಾರವಿರುತ್ತದೆ. ಅಪೇಕ್ಷಾಪತ್ರ ಯಾವ ಕಾರಣದಿಂದಲಾದರೂ ಅಂಗೀಕಾರವಾಗದಿದ್ದರೆ ತೆರದ ಹಣವನ್ನು ವಾಪಸ್ಸು ಮಾಡಲಾಗುವುದು. ಅಂಗೀಕಾರವಾಗಿ ಅಪೇಕ್ಷಕರು ಗೋಷ್ಠಿಗೆ ಬಾರದೆ ನಿಂತಲ್ಲಿ ತೆರವನ್ನು ಹಿಂದಕ್ಕೆ ಕೊಡಲಾಗುವುದಿಲ್ಲ.

(೧೦) ಅಭ್ಯಾಸಕ್ಕಾಗಿ ಈ ಕೆಳಗಿನ ಕಾವ್ಯ ಗ್ರಂಥಗಳಿಂದ ಭಾಗಗಳನ್ನು ಗೊತ್ತುಮಾಡಿದೆ:

(i) ಕುಮಾರವ್ಯಾಸ ಭಾರತ—ಉದ್ಯೋಗ ಪರ್ವ.
(ii) ಜೈಮಿನಿ ಭಾರತ.
(iii) ಹರಿಶ್ಚಂದ್ರ ಕಾವ್ಯಸಂಗ್ರಹ.
(iv) ಹದಿಬದೆಯ ಧರ್ಮ.
(v) ಪುರಂದರ ದಾಸರ ಮತ್ತು ಕನಕ ದಾಸರ ಕೀರ್ತನೆಗಳು.

ಎಲ್ಲರೂ ಅಭ್ಯಾಸಕ್ಕಾಗಿ ಗೊತ್ತುಮಾಡಿರುವ ಗ್ರಂಥಗಳ ಪ್ರತಿಗಳನ್ನು ತಾವೇ ಸಂಪಾದಿಸಿಕೊಂಡಿರಬೇಕು.

(೧೧) ಗೋಷ್ಠಿ ಮುಗಿದ ಬಳಿಕ ಒಂದು ಪರೀಕ್ಷೆ ನಡಸಿ ತೇರ್ಗಡೆ ಹೊಂದಿದವರಿಗೆ ಪ್ರಶಸ್ತಿಪತ್ರಗಳನ್ನು ಕೊಡಲಾಗುವುದು.

(೧೨) ಅಪೇಕ್ಷಕರು ಸಾಕಷ್ಟು ಮಂದಿ ದೊರೆಯದೆ ಹೋದರೆ ಪರಿಷತ್ತು ಈ ಗೋಷ್ಠಿಯ ಏರ್ಪಾಟನ್ನು ಬಿಟ್ಟುಬಿಡಬಹುದು.

ಕನ್ನಡ ಸಾಹಿತ್ಯದ ಸ್ವಾರಸ್ಯವನ್ನು ಜನರಿಗೆ ಅನುಭವ ಮಾಡಿಸಿಕೊಡುವುದಕ್ಕೂ, ಕನ್ನಡದ ಅಭಿಮಾನವನ್ನು ಬೆಳಸುವುದಕ್ಕೂ ಈ ಗೋಷ್ಠಿ ಅತ್ಯಂತ ಉಪಯುಕ್ತವಾದ ಸಾಧನವೆಂದು ಪರಿಷತ್ತು ಭಾವಿಸಿದೆ. ಎಲ್ಲ ಕನ್ನಡಿಗರೂ ಈ ವಿಚಾರಕ್ಕೆ ತಕ್ಕ ಗಮನ ಕೊಟ್ಟು ಈ ಏರ್ಪಾಟು ಶ್ರೇಯಸ್ಕರವಾಗಿ ನಡೆಯುವಂತೆ ಸಹಕರಿಸಬೇಕೆಂದು ಪರಿಷತ್ತು ಬೇಡುತ್ತದೆ.

**ಡಿ. ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್.,**
ಗೌರವ ಕಾರ್ಯದರ್ಶಿಗಳಿಗಾಗಿ.
ಕನ್ನಡ ಸಾಹಿತ್ಯ ಪರಿಷತ್ತು.

ತಾ|| ೧೮-೩-೧೯೪೦
ಬೆಂಗಳೂರು.

ಉಲ್ಲಾಸ ಆವಿರ್ಭವಿಸಬೇಕಾದರೆ ಕನ್ನಡ ಸಾಹಿತ್ಯ ಅದಕ್ಕೆ ಒಂದು ಸಲಕರಣೆ ಅಥವಾ ಉಪಕರಣವಾಗುತ್ತದೆ. ಈ ನಂಬಿಕೆಯಿಂದ ಕೋಲಾರ ಪೌರಸಭೆಯವರ ಪರವಾಗಿ ಈ ಉತ್ಸವವನ್ನು ಏರ್ಪಡಿಸಿದ್ದೇನೆ. ಈ ದೊಡ್ಡ ಉದ್ದೇಶವನ್ನು ತಾವು ಮನಸ್ಸಿಗೆ ತಂದುಕೊಂಡರೆ ತಮ್ಮೆಲ್ಲರ ಸಹಾನುಭೂತಿ ದೊರೆಯುವ ಧೈರ್ಯ ನನಗೆ ಸಂಪೂರ್ಣವಾಗಿದೆ. ಏಕೆಂದರೆ, ಸಾಮಾನ್ಯವಾಗಿ ಸಾಹಿತ್ಯವೆಂದರೆ ಕೇವಲ ಪಂಡಿತ ವರ್ಗದವರ ಹವ್ಯಾಸ; ಏನೂ ಕೆಲಸವಿಲ್ಲದವರು ಕಾಲ ಯಾಪನೆಗಾಗಿ ಸಾಮಾನ್ಯಜನಕ್ಕೆ ಅರ್ಥವಾಗದ ಮಾತುಗಳಲ್ಲಿ ತೋರಿಸುವ ಬುದ್ಧಿ ಚಮತ್ಕಾರ ಎಂದು ಪಾಮರರು ಕೆಲವರು ತಿಳಿದುಕೊಂಡಿರುವಂತಿದೆ. ಶ್ರೀ. ಬಿ. ಎಂ. ಶ್ರೀಕಂಠಯ್ಯನವರಂಥ ಸಾಹಿತಿಗಳು ಸಾಹಿತ್ಯಶಬ್ದಕ್ಕೆ ಸಂಕುಚಿತಭಾವವನ್ನು ತೆಗೆದು ಹಾಕಿ ಒಂದು ವಿಶಾಲವಾದ ಅರ್ಥವನ್ನು ಕೊಡುವುದರಲ್ಲಿದ್ದಾರೆ. ಆ ಬಗ್ಗೆ ಅಹರ್ನಿಶಿ ಪ್ರಯತ್ನಿಸುತ್ತಿದ್ದಾರೆ. ಆದ್ದರಿಂದಲೇ ಈ ದಿನ ಇಷ್ಟು ದೂರ ದಯಮಾಡಿಸಿದ್ದಾರೆ.

"ಇನ್ನು ಅಧ್ಯಕ್ಷರ ವಿಷಯ. ಮೈಸೂರಿನಲ್ಲಿ ನಡೆಯುವ ಕನ್ನಡ ಸಾಹಿತ್ಯೋತ್ಸವಕ್ಕೆ ಮಂಗಳೂರು ಕನ್ನಡಿಗರಾದ ಶ್ರೀ ಸುಂದರರಾಯರನ್ನು ಏಕೆ ಅಧ್ಯಕ್ಷರಾಗಿ ಆರಿಸಿದೆ ಎಂದು ಕೇಳಬಹುದು. ಇದರಲ್ಲಿ ಔಚಿತ್ಯವಿಲ್ಲದಿಲ್ಲ. ಯಾವ ಪ್ರಾಂತದ ಕನ್ನಡವಾದರೇನು? ಎಲ್ಲ ಪ್ರಾಂತಗಳ ಕನ್ನಡ ನುಡಿಯ ಏಕೀಕರಣವಾಗಬೇಕು. ಎಲ್ಲ ಪ್ರಾಂತಗಳೂ ಸೇರಿಯೇ 'ಕರ್ನಾಟಕ' ಎನಿಸಬೇಕು. ಮೈಸೂರು ಕರ್ನಾಟಕದ ಸಂಸ್ಕೃತಿಕೇಂದ್ರವಾಗಬೇಕು. ಆಳುವ ಮಹಾಸ್ವಾಮಿಯವರು ಕರ್ನಾಟಕ ಸಿಂಹಾಸನಾಧೀಶ್ವರರಾಗಿ, ಇಡಿಯ ಭಾವೀ ಕರ್ನಾಟಕದ ಆದರ್ಶ ಪ್ರಭುಗಳಾಗಬೇಕು. ಇದು ಶ್ರೀ ಸುಂದರರಾಯರವರ ಹೃದಯಾಂತರಾಳದ ಬಯಕೆ. ಈ ದೃಷ್ಟಿಯಿಂದಲೇ ಅಧ್ಯಕ್ಷತೆ ವಹಿಸಲು ಶ್ರೀ ಸುಂದರರಾಯರಿಗೆ ಇರುವ ಹೆಚ್ಚಿನ ಅಧಿಕಾರ.

"ಕರ್ತವ್ಯರೂಪವಾದ ಒಂದು ವಿಷಯವನ್ನು ಮಾತ್ರ ಸೂಚಿಸಿ ಭಾಷಣ ಮುಗಿಸಲಿಚ್ಛಿಸುತ್ತೇನೆ: ಅಚ್ಚ ಕನ್ನಡಿಗರೂ, ಅಚ್ಚ ಮೈಸೂರಿನವರೂ, ಕನ್ನಡದ ಹಿತಕ್ಕಾಗಿ ಸತತ ಪ್ರಯತ್ನಶೀಲರೂ, ಕನ್ನಡ ಸೇವೆಯನ್ನೇ ತಪಸ್ಸಾಗಿ ಆಚರಿಸುತ್ತಿರುವವರೂ ಆದ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರನ್ನು ಅತ್ಯಾದರದಿಂದ ಸ್ವಾಗತಿಸುವ ಸುಸಂಧಿ ಅವರ ಶಿಷ್ಯರಲ್ಲಿ ಒಬ್ಬನಾದ ನನಗೆ ದೊರೆತದ್ದಕ್ಕಾಗಿ ಹರ್ಷಿಸುತ್ತೇನೆ. 'ಶ್ರೀ'ಯವರು ಕನ್ನಡಿಗರಲ್ಲಿ ನವಚೈತನ್ಯವನ್ನು ತುಂಬಿರುವದು ತಮಗೆಲ್ಲರಿಗೂ ವೇದ್ಯವಿದೆ. ತಮ್ಮ ಸರಳವಾದ, ನೈಜವೃತ್ತಿಯಿಂದ ಸಹಸ್ರಾರು ವಿದ್ಯಾರ್ಥಿಗಳಿಗೆ ಕನ್ನಡ ನಾಡು ನುಡಿಗಳ ವಿಶ್ವಾಸದ ಬಗ್ಗೆ ಹೃದಯಪರಿವರ್ತನಗೊಳಿಸಿದ್ದು ಕನ್ನಡಕ್ಕೆ ಅವರು ಸಲ್ಲಿಸಿರುವ ಅಮೋಘ ಸೇವೆಯಾಗಿದೆ. ಕನ್ನಡ ದೇವಿಯ ಗುಡಿಯಲ್ಲಿ ಅಸ್ಪೃಶ್ಯತೆಯಿಲ್ಲ, ಜಾತಿಮತ ಪಂಥಗಳ ಕೋಲಾಹಲಕ್ಕೆ ಎಡೆಯಿಲ್ಲ ಎಂಬ ಸಿದ್ಧಾಂತವನ್ನು ಸ್ಥಿರಗೊಳಿಸಿದ ಕೀರ್ತಿ 'ಶ್ರೀ'ಯವರಿಗೆ ಸಲ್ಲತಕ್ಕದ್ದಾಗಿದೆ. ರಾಜಕುಮಾರನಾಗಲಿ, ಒಕ್ಕಲಿಗನಾಗಲಿ, ಸ್ತ್ರೀಯರಾಗಲಿ, ಪುರುಷರಾಗಲಿ, ಬಡವರಾಗಲಿ, ಯಾವ ಜಾತಿಯವರಾಗಲಿ, ಸರ್ಕಾರದ ಅಧಿಕಾರಿಗಳಾಗಲಿ, ಖಾಸಗಿ ಜನರಾಗಲಿ, ಕನ್ನಡ ದೇವಿಯ ಎಲ್ಲ ಭಕ್ತರೂ ಈ ಕ್ಷೇತ್ರದಲ್ಲಿ ಕೆಲಸ ಮಾಡಲಿಕ್ಕೆ ಸಮಾನವಾದ ಅವಕಾಶವಿದೆ ಎಂಬ ನವಸ್ಫೂರ್ತಿಯನ್ನು ಹುರಿದುಂಬಿಸಿದವರು 'ಶ್ರೀ'ಯವರು.

"ಕನ್ನಡಿಗರನ್ನು ಒಟ್ಟುಗೂಡಿಸುವ ಕಾರ್ಯದಲ್ಲಿ 'ಶ್ರೀ'ಯವರು ನಿರತರಾಗಿದ್ದಾರೆ. ಕನ್ನಡದ ಬಾವುಟವನ್ನು ಎತ್ತಿ ಹಿಡಿದು, ಅದನ್ನು ಇಡಿಯ ಹಿಂದೂಸ್ಥಾನದಲ್ಲಿ ಮೆರಸುವ ಸಾಹಸ ಕಾರ್ಯವನ್ನು ಕೈಗೊಂಡಿದ್ದಾರೆ. ಈ ಕಾರ್ಯ ಕೈಗೂಡುವಂತೆ, ಕನ್ನಡಾಂಬೆಯ ನಾಡಿಗೆ, ಕನ್ನಡ ವಾಗ್ದೇವಿಗೆ 'ಶ್ರೀ'ಯವರಿಂದ ಬಹುಕಾಲ ಸೇವೆ ಸಲ್ಲುವಂತೆ ಜಗನ್ನಿಯಾಮಕನಾದ ಪರಮಾತ್ಮನು ಇತೋಪ್ಯತಿಶಯವಾದ ಆಯುಸ್ಸನ್ನೂ, ಆರೋಗ್ಯವನ್ನೂ ಅವರಿಗೆ ಕೊಟ್ಟು ಕಾಪಾಡಲೆಂದು ನನ್ನ ಪರವಾಗಿ, ನಿಮ್ಮೆಲ್ಲರ ಪರವಾಗಿ ಪ್ರಾರ್ಥಿಸುತ್ತೇನೆ."

# ಪರಿಷತ್ತಿನ ಸುದ್ದಿ

**ಮೈಸೂರು ಪ್ರಾಂತ ಸಮಿತಿ: ಉಪನ್ಯಾಸ**

ಬುಧವಾರ (ತಾ|| ೨೭-೩-೪೦) ಸಂಜೆ ೬ ಘಂಟೆಗೆ ಪರಿಷನ್ಮಂದಿರದಲ್ಲಿ ಧಾರವಾಡದ ಶ್ರೀ ರಾಜಪುರೋಹಿತರು 'ಚಾಲುಕ್ಯರು' ಎಂಬ ವಿಷಯವನ್ನು ಕುರಿತು ಭಾಷಣ ಮಾಡುವರು.

**ದಕ್ಷಿಣ ಕರ್ನಾಟಕ ಪ್ರಾಂತ ಸಮಿತಿ: ವಸಂತ ಸಾಹಿತ್ಯೋತ್ಸವ**

ಈ ಸಮಿತಿಯ ನೇತೃತ್ವದಲ್ಲಿ ಕೊಡಗು ಕರ್ನಾಟಕ ಸಂಘದ ಆಶ್ರಯದಲ್ಲಿ ಇದೇ ತಿಂಗಳು ೨೨ರಿಂದ ೨೪ರ ವರೆಗೆ ವಸಂತ ಸಾಹಿತ್ಯೋತ್ಸವ ನಡೆಯುವುದು.

**ಉತ್ತರ ಕರ್ನಾಟಕ ಪ್ರಾಂತ ಸಮಿತಿ: ಜಿಲ್ಲಾ ಸಾಹಿತ್ಯ ಸಮಿತಿ**

ಹೋದ ವಾರ 'ಕನ್ನಡ ನುಡಿ'ಯಲ್ಲಿ ತಿಳಿಸಿದ್ದಂತೆ, ಈ ಸಮಿತಿಯ ಆಶ್ರಯದಲ್ಲಿ, ಜಿಲ್ಲೆಯಲ್ಲಿರುವ ಪರಿಷತ್ತಿನ ಸದಸ್ಯರು ೧೬ನೆಯ ತಾರೀಖು ಸಭೆ ಸೇರಿ ಬೆಳಗಾಂವಿ ಜಿಲ್ಲಾ ಸಾಹಿತ್ಯ ಸಮಿತಿಯನ್ನು ಸ್ಥಾಪಿಸಿದರು. ೧೫ ಜನರನ್ನು ಒಳಗೊಂಡ ಒಂದು ಕಾರ್ಯ ನಿರ್ವಾಹಕ ಮಂಡಲಿ ರಚಿತವಾಯಿತು.

# ಕನ್ನಡ ಸುದ್ದಿ

## ಶ್ರೀಮದ್ಯುವರಾಜರವರ ನಿಧನಕ್ಕಾಗಿ ಸಂತಾಪ ಸೂಚನೆಗಳು

೧. ಜಮಖಂಡಿಯ ವಿದ್ಯಾರಣ್ಯ ವಾಚನಾಲಯ ಸಂಘದ ಸಭೆ ೧೩-೩-೪೦ರಲ್ಲಿ ಶ್ರೀ ಸಾಬಡೆ ವಕೀಲರ ಅಧ್ಯಕ್ಷತೆಯಲ್ಲಿಯೂ, ೨. ಕನ್ನಡಿಗರ ಕೂಟದ ಪರವಾಗಿ ಒಂದು ಸಭೆ ಶ್ರೀ ನಾ. ಶ್ರೀ. ಗಲಗಲಿ ಅವರ ಅಧ್ಯಕ್ಷತೆಯಲ್ಲಿಯೂ ನಡೆದು ಪರಿಷತ್ತಿನ ಅಧ್ಯಕ್ಷರೂ ಪೋಷಕರೂ ಆಗಿದ್ದ ಮೈಸೂರು ಶ್ರೀಮದ್ಯುವರಾಜರವರ ನಿಧನಕ್ಕಾಗಿ ಸಂತಾಪ ಸೂಚಕ ನಿರ್ಣಯಗಳಾದುವು. ೩. ಜಮಖಂಡಿಯ ಶ್ರೀ ರಾಮ ಸೇವಾ ಸಂಘದಲ್ಲೂ ಕಳೆದ ೧೩ನೆಯ ತಾರೀಖು ಇಂಥ ನಿರ್ಣಯವಾಯಿತು. ೪. ಮೈಸೂರಿನ ಶ್ರೀ ಚಾಮರಾಜೇಂದ್ರ ಅರಸು ಬೋರ್ಡಿಂಗ್ ಸ್ಕೂಲಿನಲ್ಲಿ ಕಳೆದ ೧೫ನೆಯ ತಾರೀಖು ರಾಜಸೇವಾಸಕ್ತ ಶ್ರೀ ಎಂ. ರಾಮರಾಯರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಸಂತಾಪ ಸೂಚಕ ನಿರ್ಣಯವಾಯಿತು. ೫. ಗದುಗಿನ ಅಕ್ಕನ ಬಳಗದವರು ಕಳೆದ ೧೬ನೆಯ ತಾರೀಖು ಶ್ರೀಮತಿ ಚೆನ್ನಮ್ಮ ಮಾನ್ವಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಸಂತಾಪಸೂಚಕ ನಿರ್ಣಯ ಮಾಡಿದರು. ಶ್ರೀಮತಿ ಗೌರಿದೇವಿ ಇಂಚಲಮಠ ಅವರು ದಿವಂಗತ ಶ್ರೀಮದ್ಯುವರಾಜರ ವಿಷಯವಾಗಿ ಭಾಷಣಮಾಡಿದರು.

**ತಿರುಪತಿ: ಪ್ರಾಚ್ಯ ಪರಿಷತ್ತು**

ಅಖಿಲ ಭಾರತ ಪ್ರಾಚ್ಯಪರಿಷತ್ತಿನ (ಓರಿಯಂಟಲ್ ಕಾನ್ಫರೆನ್ಸ್) ಹತ್ತನೆಯ ಅಧಿವೇಶನ ತಿರುಪತಿಯಲ್ಲಿ ಇದೇ ತಿಂಗಳು ೨೧ರಿಂದ ೨೪ರ ವರೆಗೆ ನಡೆಯುವುದು. ಕನ್ನಡ ವಿಭಾಗಕ್ಕೆ ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸುವರು. ಡಾ|| ಎಂ. ಎಚ್. ಕೃಷ್ಣ ಅವರು ಪ್ರಾಚೀನ ಜನಾಂಗ ವಿಜ್ಞಾನ ಮತ್ತು ಜನಪದ ಸಂಸ್ಕೃತಿ ವಿಭಾಗಕ್ಕೆ ಅಧ್ಯಕ್ಷರು.

**ಸೊಲ್ಲಾಪುರ: ಕನ್ನಡ ಮತ್ತು ಏಕೀಕರಣ ಪರಿಷತ್ತುಗಳು**

ಸೊಲ್ಲಾಪುರದ ಕರ್ನಾಟಕ ಸಂಘದ ಆಶ್ರಯದಲ್ಲಿ ಕಳೆದ ೧೭ನೆಯ ತಾರೀಖು ಮೇಲ್ಕಂಡ ಸಮ್ಮೇಳನಗಳನ್ನು ನಡಸುವ ಬಗ್ಗೆ ಸ್ವಾಗತ ಸಮಿತಿಯ ಸದಸ್ಯರ ಮತ್ತು ಇತರ ಕನ್ನಡಿಗರ ಸಭೆಯೊಂದು ನಡೆದು, ಕನ್ನಡ ಪರಿಷತ್ತಿಗೆ 'ಶ್ರೀ'ಯವರು ಅಧ್ಯಕ್ಷರಾಗಿಯೂ ಕರ್ನಾಟಕ ಏಕೀಕರಣ ಪರಿಷತ್ತಿಗೆ ಶ್ರೀ ಬಿ. ಎನ್. ದಾತಾರರು ಅಧ್ಯಕ್ಷರಾಗಿಯೂ ಆರಿಸಲ್ಪಟ್ಟರು. ಪರಿಷತ್ತುಗಳು ಏಪ್ರಿಲ್ ೩ನೆಯ ವಾರ ನಡೆಯಬೇಕೆಂದು ಗೊತ್ತಾಗಿದೆ.

**ಕುಂದಗೋಳ: ಜಮಖಂಡಿ ೨ನೆಯ ತಾಲ್ಲೂಕು ಸಮ್ಮೇಳನ**

ಈ ಸಮ್ಮೇಳನ ಕರ್ನಾಟಕದ ಮಾನ್ಯದೇಶಭಕ್ತರೂ ಪ್ರಮುಖ ಮುಂದಾಳುಗಳಲ್ಲೊಬ್ಬರೂ ಆದ ಡಾ|| ಎನ್. ಎಸ್. ಹರ್ಡೀಕರರ ಅಧ್ಯಕ್ಷತೆಯಲ್ಲಿ ಕಳೆದ ವಾರ ನಡೆಯಿತು. ಸ್ವಾಗತಾಧ್ಯಕ್ಷರಾದ ಶ್ರೀ ಶಿವರಾವ್ ಗಂಗಾಧರ ಕುಲಕರ್ಣಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

'ಕನ್ನಡ ನಾಡಿನ ನಡುಸೀಮೆಯಲ್ಲಿರುವ ನಮ್ಮ ಸಂಸ್ಥಾನ ಕನ್ನಡ ಸಂಸ್ಥಾನ. ನಮ್ಮ ನುಡಿಯೂ ಕನ್ನಡ. ರಾಜಭಾಷೆ ಕನ್ನಡವೆಂಬುದು ಮನವರಿಕೆಯಾಗಿದ್ದರೂ ರಾಜರ ಮಾತೃಭಾಷೆಯಾದ ಮರಾಠಿಯನ್ನು ಒತ್ತಾಯದಿಂದ ರಾಜಭಾಷೆಯನ್ನಾಗಿ ಉಪಯೋಗಿಸುತ್ತಿರುವುದು ಸರಿಯಲ್ಲ. ಮರಾಠಿಯನ್ನು ಆಲೋಚನೆಯಲ್ಲಿಟ್ಟುಕೊಂಡಿರುವ ೫೦ ನೌಕರರು ಅತ್ಯಲ್ಪ ಅವಧಿಯಲ್ಲಿ ಕನ್ನಡ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದುದನ್ನು ನೋಡಿದರೆ ಇನ್ನು ಒಂದೆರಡು ವರ್ಷಗಳಲ್ಲಿ ಕನ್ನಡವನ್ನು ದಫ್ತರಿನ ಭಾಷೆಯನ್ನಾಗಿ ಮಾಡುವುದು ಬಹಳ ಸುಲಭವೆಂದು ಹೇಳಬಹುದು. ದರ್ಬಾರಿನವರು ಈ ವಿಚಾರಕ್ಕೆ ತಕ್ಕ ಗಮನ ಕೊಡಬೇಕು.'

ಅಧ್ಯಕ್ಷರಾದ ಡಾ|| ಹರ್ಡೀಕರರು ತಮ್ಮ ಭಾಷಣದಲ್ಲಿ ಬ್ರಿಟಿಷ್ ಕರ್ನಾಟಕ ಮತ್ತು ಸಂಸ್ಥಾನಗಳ ಸಂಬಂಧ ಮೈತ್ರಿಗಳ ವಿಚಾರವನ್ನು ಪ್ರಸ್ತಾಪ ಮಾಡಿ, ನಾಡಿನ ಏಳ್ಗೆಗಾಗಿ ದುಡಿಯುವವರಲ್ಲಿ ಪರಸ್ಪರ ವಿಶ್ವಾಸವೂ, ಸ್ವಾವಲಂಬನ ಸಹನೆ ಮತ್ತು ಸಂಘಟನೆಗಳೂ ಇರಬೇಕೆಂದು ಬುದ್ಧಿವಾದ ಹೇಳಿದರು. ಕನ್ನಡಿಗರು ಅಣ್ಣತಮ್ಮಂದಿರಂತೆ ಹಗಲಿಗೆ ಹಗಲಿತ್ತು ದುಡಿದು, ಕರ್ನಾಟಕ ಇತರ ಪ್ರಾಂತಗಳಿಗಿಂತ ಹಿಂದೆ ಬಿದ್ದಿರುವ ಪರಿಸ್ಥಿತಿಯನ್ನು ತಿದ್ದಬೇಕೆಂದು ಕೋರಿದರು.

೩೦-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ




ಸಂಪುಟ ೨
ಸಂಚಿಕೆ ೨೩

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು, ಶುಕ್ರವಾರ, ಮಾರ್ಚಿ ೨೯, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ಕನ್ನಡಿಗರ ದೇವಾಲಯ

ಬರೆದವರು: ಶ್ರೀ. ಎಸ್. ಎಸ್. ಮಾಳವಾಡ, ಎಂ.ಎ., ಧಾರವಾಡ

ತೆವರೆಲ್ಲಂ ದೇವತಾಮಂದಿರವಾದ ಕನ್ನಡನಾಡು ನಮ್ಮದು. ಜಕ್ಕಣನ ಶಿಲ್ಪ ಕಲೆಯ ಬೀಡು ನಮ್ಮದು. ಚಾಲುಕ್ಯ, ಹೊಯ್ಸಳ, ವಿಜಯನಗರ ಅರಸರ ಶಿಲ್ಪಕಲಾ ಕುಸುರಿಯ ವೈಭವದ ಆಗರ ನಮ್ಮದು. ಜೈನರು ಜೈನ ಬಸದಿಗಳನ್ನೂ ವೈಷ್ಣವರೂ ಶೈವರೂ ತಮ್ಮ ತಮ್ಮ ದೇವಾಲಯುಗಳನ್ನೂ ಕಟ್ಟಿ ಬೆಳಗಿದ ಭಾಂಡಾರವೆಮ್ಮ ನಾಡು. ವೈಷ್ಣವ ಅರಸನ ರಾಣಿ ಜೈನ ಬಸದಿಗಳನ್ನು ಕಟ್ಟಿಸಿದ ವಿಶಾಲ ಭಾವ ದೊಂದಿಗೆ ಪರಮತೀಯರ ದೇಗುಲಂಗಳನು ಪಾಳ್ಗೆಯ್ದು ತಮ್ಮ ದೇವಾಲಯಗಳನ್ನು ಬಿತ್ತರಿಸಿದ ಮಾತ್ಸರ್ಯಭಾವದ ಮಾತೂ ನಮ್ಮ ಚರಿತ್ರೆಯಲ್ಲಿದೆ. ನಮ್ಮ ಗುಡಿಗಳು ಧರ್ಮದ ಬೆಳಕಾಗಿರುವಂತೆ, ರಸಿಕತೆಯ ತವರುಮನೆಗಳೂ ಆಗಿವೆ. ಕುಲರಸಿಕರಾದ ಕನ್ನಡಿಗರು ದೇವಾಲಯಗಳನ್ನು ಕಟ್ಟಿಸಿ ಇಹಪರಗಳನ್ನು ಸಾಧಿಸಿದ್ದಾರೆ. ನೆಲದೊಳಗೆ ಪೊಂಗಳನು ಹೂಳುವವರ ಬೀಳುಗಳೆದು ನೆಲದಮೇಲೆ ಗುಡಿ ಕಟ್ಟಿ ಹೊನ್ನ ಕಲಶವ ನಿಲ್ಲಿಸಿದ ಜಾಣರು ನಮ್ಮ ಕನ್ನಡಿಗರು.

ನಮ್ಮ ನಾಡಿನಲ್ಲಿ ಜೈನರ ಬಸದಿಗಳಿವೆ. ಶೈವ ವೈಷ್ಣವರ ಗುಡಿಗಳಿವೆ. ಆದರೆ ಜೈನ, ಶೈವ, ವೈಷ್ಣವ, ಹಾಗೂ ಕರ್ನಾಟಕದ ಇನ್ನುಳಿದ ಮತೀಯರೆಲ್ಲರಿಗೂ ಪ್ರವೇಶ ದೊರೆಯಬೇಕಾದ ಒಂದೆ ಒಂದು ಗುಡಿಯನ್ನು ಯಾರೂ ಕಟ್ಟಿಸಲಿಲ್ಲ. ಹೊಯ್ಸಳರ ಕಲೆಯನ್ನು, ಚಾಲುಕ್ಯರ ಕಲೆಯನ್ನು ಮೆರೆಯಿಸುವ ಶಿಲ್ಪ ವೈಭವ ನಮ್ಮಲ್ಲಿದೆ. ಆದರೆ ಚಾಲುಕ್ಯರು, ಹೊಯ್ಸಳರು, ವಿಜಯನಗರದವರು ಎಲ್ಲರೂ ಒಂದೆ ಕರ್ನಾಟಕದವರೆಂಬ ಮಾತನ್ನು ಸೂಚಿಸುವ ಶಿಲ್ಪಕಲೆಯಲ್ಲಿಯ ವಿವಿಧ ಬಗೆಗಳ ಸಮನ್ವಯ ಮಾಡಿದ ಒಂದೆ ಒಂದು ಭಂಗಿಯ ರೀತಿಯ ಕಟ್ಟಡಗಳನ್ನು ಯಾವ ಜಕ್ಕಣರೂ ಕಟ್ಟಿಯಲಿಲ್ಲ; ಕಟ್ಟಲಿಲ್ಲ. ಬಹು ಪ್ರಾಚೀನ ಕಾಲದ ದೇಗುಲಗಳು ನಮ್ಮಲ್ಲಿವೆ. ಆದರೆ ಕಾಲನ ಕ್ರೂರ ದೃಷ್ಟಿಗೆ ಪಕ್ಕಾಗಿ, ಪರಕೀಯರ ಕೀಳ್ನೋಟದ ಆಘಾತವನ್ನು ಹೊಂದಿ ಅವು ಬೀಳಾಗಿ ಹೋಗಿವೆ. ಅಜ್ಞ ಜನರ ಹಾವಳಿಗೆ ಈಡಾಗಿ ಕೆಲವು ಕುಗ್ಗಿವೆ. ಅಂತು ನಮ್ಮ ಕನ್ನಡನಾಡಿನ ದೇವಾಲಯಗಳು ಬೇರೆ ಬೇರೆಯಾಗಿದ್ದ ಪಾಳ್ದೇಗುಲಗಳಾಗಿವೆ. ಅವು ಎಲ್ಲರ ಸೊತ್ತಾಗಿಲ್ಲ. ಎಲ್ಲವೂ ಭದ್ರವಾಗಿ ಉಳಿದಿಲ್ಲ.

ಇದೀಗ ಭದ್ರವಾದ, ನವೀನವಾದ ಸರ್ವ ಸಮನ್ವಯವನ್ನೊಳಗೊಂಡ ಒಂದು ದೇವಾಲಯವನ್ನು ನಿರ್ಮಿಸಬೇಕಾಗಿದೆ. ಹೊಸ ದೇವಾಲಯ ಕನ್ನಡಿಗರೆಲ್ಲರ ಸೊತ್ತಾಗಬೇಕಾಗಿದೆ. ಅಲ್ಲಿ ಕನ್ನಡಮ್ಮನ ಪೂಜೆಯೊಂದೇ ನಡೆದು ಹಲವಾರು ಪೂಜೆಗಳ ಗಲಭೆ ನಿಲ್ಲಬೇಕಾಗಿದೆ. ಆ ದೇವಾಲಯದಲ್ಲಿ ಪಂಪನ ಆದಿಪುರಾಣವನ್ನೂ, ಭೀಮಕವಿಯ ಬಸವ ಪುರಾಣವನ್ನೂ, ಕುಮಾರವ್ಯಾಸನ ಮಹಾಭಾರತವನ್ನೂ ಎಲ್ಲರೂ ಒಕ್ಕೊರಲಿನಿಂದ ಹಾಡಬೇಕಾಗಿದೆ. ಜೈನ ಜನ್ನ, ಬಳೆಗಾರ ರನ್ನ, ವೀರಶೈವ ವಿರೂಪಾಕ್ಷ, ಬ್ರಾಹ್ಮಣ ರುದ್ರಭಟ್ಟ, ವೀರ ವಿರಕ್ತಿ ಅಕ್ಕ ಮಹಾದೇವಿ, ಸಂಚಿಯ ಹೊನ್ನಮ್ಮ, ತ್ಯಾಗಿ ನಾಗಚಂದ್ರ, ರಸಿಕ ರತ್ನಾಕರ ಇವರೆಲ್ಲರ ಹಾಡಿನ ಸಮ್ಮಿಲನದ ರಾಷ್ಟ್ರಗೀತವನ್ನು ಹಾಡಬೇಕಾಗಿದೆ. ಅಲ್ಲಿ ಮಠದ ಸ್ವಾಮಿಗಳು, ರಾಜಕೀಯ ಮುಖಂಡರು, ಸರಕಾರದ ಅಧಿಕಾರಿಗಳು, ಸಾರ್ವಜನಿಕರು, ಒಕ್ಕಲುಮಕ್ಕಳು, ವೈಶ್ಯ ವೃತ್ತಿಯವರು, ಪುಸ್ತಕ ಬರೆಯುವವರು ಮುದ್ರಿಸುವವರು ಮಾರುವವರು ಓದುವವರು—ಹೀಗೆ ಎಲ್ಲರೂ ಸೇರಬೇಕಾಗಿದೆ. ಸಿರಿವಂತರೂ ಬಡವರೂ ಅಲ್ಲಿ ಜೊತೆಯಾಗಿ ಕಾಣಿಕೆ ಸಲ್ಲಿಸಬೇಕಾಗಿದೆ.

ನಮ್ಮ ಹಿಂದಿನ ಗುಡಿಗಳಿಗೆ ರಾಜರ ಕಾಣಿಕೆ ಸಲ್ಲುತ್ತಿತ್ತು. ಇಂದಿನ ಹೊಸ ಗುಡಿಗೂ ಕನ್ನಡ ರಾಜರ್ಷಿಗಳ ಕಾಣಿಕೆ ಸಲ್ಲಬೇಕಾಗಿದೆ. ಈ ಹೊಸ ಗುಡಿಯ ಆಡಳಿತಕ್ಕಾಗಿ ಛಿದ್ರೀಕೃತ ಕರ್ನಾಟಕದ ಎಲ್ಲ ಭಾಗಗಳ ಪ್ರತಿನಿಧಿಗಳು ಮುಂದೆ ಬರಬೇಕಾಗಿದೆ. ಸ್ಥಳಿಕವಾಗಿ ಹಿರಿಯ ಆಡಳಿತಗಾರರೊಬ್ಬರು ಇದ್ದುಕೊಂಡು ಈ ಗುಡಿ ಒಂದು ಭಾಗದ, ಒಂದು ಜನಾಂಗದ ಗುಡಿಯಾಗದೆ ಒಂದಾದ ಕರ್ನಾಟಕದ, ಮುಂದಾಗಬೇಕಾಗಿರುವ ಎಲ್ಲ ಕನ್ನಡಿಗರ ಒಂದೆ ಒಂದಾದ ಸಾರ್ವತ್ರಿಕ ದೇವಾಲಯವಾಗಬೇಕಾಗಿದೆ. ಅನುಕೂಲಕ್ಕಾಗಿ ಒಂದು ಪ್ರದೇಶದಲ್ಲಿ ಈ ಗುಡಿ ಇರಬೇಕಾದರೂ ಈ ಗುಡಿಯಲ್ಲಿರುವ ಮೂರ್ತಿ ದರ್ಶನ ವಾರ್ಷಿಕ ರಥೋತ್ಸವದ ಮೂಲಕ ಕನ್ನಡನಾಡಿನ ಮೂಲೆಮೂಲೆಗೂ ಚಲಿಸಬೇಕಾಗಿದೆ. ನಿನ್ನೆ ಬಳ್ಳಾರಿ, ಇಂದು ಬೆಳಗಾವಿ—ಹೀಗೆ ರಥೋತ್ಸವ ನಡೆದರೆ ಮುಂದೆ ಸೊಲ್ಲಾಪುರ ಕೊಲ್ಲಾಪುರಗಳಲ್ಲಿ ಅದು ನಡೆಯಬೇಕು. ವರುಷಕ್ಕೊಮ್ಮೆ ಕನ್ನಡಮ್ಮನ ಸತ್ಪುತ್ರರಲ್ಲಿ ಒಬ್ಬರನ್ನು ಹಿರಿಯ ಪೂಜಾರಿಯಾಗಿ ಆಯ್ದುಕೊಂಡು ಆ ಸುಪುತ್ರನ ನೇತೃತ್ವದಲ್ಲಿ ಕನ್ನಡದೇವಿಯ ರಥೋತ್ಸವವನ್ನು ನಡೆಯಿಸಬೇಕಾಗಿದೆ. ಕನ್ನಡ ದೇವಿಯ ಉತ್ಸವ ಮೂರ್ತಿಯ ದರ್ಶನ ಎಲ್ಲರಿಗೂ ಸಾಧ್ಯವಾಗಿ ನಮ್ಮ ಹಿರಿಯ ಪೂಜಾರಿಗೆ ನಮ್ಮ ಗೌರವವನ್ನು ಸಲ್ಲಿಸುವುದರ ಜೊತೆಗೆ ಎಲ್ಲ ಕನ್ನಡಿಗರನ್ನು ಒಂದೆಡೆ ಸೇರಿಸಿ ಒಕ್ಕೂಟಕ್ಕೆ, ಒಕ್ಕೊರಲಿಗೆ ಅನುಕೂಲ ಮಾಡಿ ಬೇಕಾಗಿದೆ. ಈ ರಥೋತ್ಸವದ ಮೂಲಕ ಜ್ಞಾನದ ಕನ್ನಡ ದೀಪ ಬೆಳಗಹತ್ತುವದು. ಈ ನಂದಾದೀಪ ಇಡಿಯ ವರುಷವೂ ಬೆಳಗುವಂತೆ ದೇವಾಲಯದಲ್ಲಿ ಆಡಳಿತ ನಡೆಯಲಿ. ನಮ್ಮ ಆ ದೇವಾಲಯದಲ್ಲಿ ನಡೆಯುತ್ತಿರುವ ಕನ್ನಡ ದೇವಿಯ ಪೂಜೆಯಲ್ಲಿ ಬೆಳಗುತ್ತಿರುವ ನಂದಾದೀಪಕ್ಕೆ ಕನ್ನಡಿಗರೆಲ್ಲರೂ ತಮ್ಮ ತನು ಮನ ಧನ ಅರ್ಪಿಸಿ ಸೇವೆ, ಜ್ಞಾನದಾನಗಳಿಂದ ಆ ದೀಪವನ್ನು ಉಜ್ವಲವಾಗಿ, ದಪ್ಪವಾಗಿ, ಇನ್ನೂ ಹೆಚ್ಚಾಗಿ ಬೆಳಗುವಂತೆ ಮಾಡಲಿ. ಕನ್ನಡದೇವಿಯ

(೨೧೪ನೆಯ ಪುಟಕ್ಕೆ)

# ದರ್ಶನಗಳು

ಶ್ರೀ ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ|| ೧೫—೩—೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

ಒಂದು ಹೊಲದಲ್ಲಿ ಹುಲ್ಲಿನ ಮೆದೆ ಹೊತ್ತಿಕೊಂಡು ಉರಿಯುತ್ತಿದ್ದುದನ್ನು ನೋಡಿದಾಗ, ನಮ್ಮ ಕಣ್ಣಿಗೆ ಬೆಂಕಿಯೂ ಹೊಗೆಯೂ ಕಾಣಿಸಿಕೊಳ್ಳುತ್ತದೆ. ಹೀಗೆ ಎರಡೂ ತೋರುವುದು ಪ್ರತ್ಯಕ್ಷಾನುಭವ. ಹಾಗೆಯೇ ದೂರದಲ್ಲಿ ಒಂದುಕಡೆ ಹೊಗೆ ಮಾತ್ರ ನಮಗೆ ಪ್ರತ್ಯಕ್ಷವಾಗುತ್ತದೆ. ಅದನ್ನು ನೋಡಿ ನಮ್ಮ ಕಣ್ಣಿಗೆ ಕಾಣದಿದ್ದರೂ ಅಲ್ಲಿ ಬೆಂಕಿ ಇದೆ ಎಂದು ನಿಷ್ಕರ್ಷಿಸುತ್ತೇವೆ. ಹೀಗೆ ಕಣ್ಣಿಗೆ ಕಾಣದೆ ಪರೋಕ್ಷವಾದ ಬೆಂಕಿ ಇದೆ ಎನ್ನುವುದಕ್ಕೆ ಹೊಗೆಯನ್ನು ಕಂಡ ಒಡನೆ ಉಂಟಾಗುವ ವ್ಯಾಪ್ತಿಜ್ಞಾನ ಸಹಾಯಕವಾಗುತ್ತದೆ. ಪರೋಕ್ಷವಾದ ಬೆಂಕಿ ಇದೆ ಎಂಬ ನಿಶ್ಚಯವು **ಅನುಮಿತಿ.** ಇದಕ್ಕೆ ಮುಖ್ಯ ಕಾರಣವಾದ ವ್ಯಾಪ್ತಿಜ್ಞಾನವೇ **ಅನುಮಾನ.** ಯಾವುದನ್ನು ನಿಶ್ಚಯಿಸುತ್ತೇವೆಯೋ ಅದು **ಸಾಧ್ಯ.** ಪ್ರಕೃತದಲ್ಲಿ ಬೆಂಕಿ **ಸಾಧ್ಯ**ವಾಗುತ್ತದೆ. ಬೆಂಕಿ ಇಲ್ಲದಿರುವ ಕಡೆ ಇರಲಾರದಂಥ ಸಂಬಂಧವನ್ನು ಇಟ್ಟುಕೊಂಡಿರುವ ಹೊಗೆಗೆ **ಹೇತು** ಅಥವಾ **ಸಾಧನ** ಎಂದು ಹೆಸರು. ಬೆಂಕಿಯೂ ಹೊಗೆಯೂ ಒಟ್ಟಿಗಿರುವ ಕಡೆಗೆ **ಪಕ್ಷ**ವೆಂದು ಹೆಸರು. ಇವೆರಡೂ ಒಟ್ಟಿಗಿರುವುದನ್ನು ಎಲ್ಲಿ ಕಂಡಿದ್ದೇವೆಯೋ ಆ ಜಾಗಕ್ಕೆ **ಸಪಕ್ಷ**ವೆಂದೂ, ಅವೆರಡೂ ಇಲ್ಲದಿರುವ ಸ್ಥಳಕ್ಕೆ **ವಿಪಕ್ಷ**ವೆಂದೂ ಹೆಸರು.

ಒಟ್ಟಿನಮೇಲೆ ಅನುಮಾನವನ್ನು ಕೆಳಗೆ ಕಂಡಂತೆ ಉಪಯೋಗಿಸುವುದು ವಾಡಿಕೆಯಾಗಿದೆ.

೧ ಬೆಟ್ಟದಲ್ಲಿ ಬೆಂಕಿಯಿದೆ— ಇದು ಪ್ರತಿಜ್ಞಾ ವಾಕ್ಯ ಅಂದರೆ ನಾವು ಮಾಡುವ ನಿರ್ಧಾರ. ಇದಕ್ಕೆ ಕಾರಣ,

೨ ಅಲ್ಲಿ ಹೊಗೆಯಿದೆ—ಇದು ಹೇತು ವಾಕ್ಯ.

೩ ಎಲ್ಲಿ ಹೊಗೆಯನ್ನು ಕಾಣುತ್ತೇವೆಯೋ, ಅಲ್ಲಿ ಬೆಂಕಿಯೂ ಇದ್ದೇ ತೀರಬೇಕು. ಇದಕ್ಕೆ ಉದಾಹರಣೆ ಅಡಿಗೆ ಮನೆಯ ಅನುಭವ.

೪ ಈ ಬೆಟ್ಟದಲ್ಲಿ ಬೆಂಕಿಯಿಂದ ಉಂಟಾದ ಹೊಗೆ ಇದೆ—ಇದು ಉಪನಯ.

೫ ಆದ್ದರಿಂದ ಈ ಬೆಟ್ಟದಲ್ಲಿ ಬೆಂಕಿಯಿದೆ—ಇದು ನಿಗಮನ.

ಹೀಗೆ ಐದು ಅವಯವಗಳುಳ್ಳ ಅನುಮಾನವನ್ನು ಪ್ರಯೋಗಮಾಡಿ ಪ್ರತ್ಯಕ್ಷವಾಗದ ವಿಷಯಗಳನ್ನೂ ಸಹ ತಿಳಿದುಕೊಳ್ಳಬಹುದು. ಆದರೆ ಅನುಮಾನವನ್ನು ಶುದ್ಧವಾಗಿ ಬಹಳ ಎಚ್ಚರಿಕೆಯಿಂದ ಉಪಯೋಗಿಸಬೇಕು. ಇಲ್ಲದೆ ಹೋದರೆ ಕೆಲವು ದೋಷಗಳು ಅನುಮಾನದಲ್ಲಿ ಸೇರಿಕೊಂಡು ನಮ್ಮ ಜ್ಞಾನವನ್ನು ಕೆಡಿಸಿಬಿಡುತ್ತವೆ. ಇದಕ್ಕಾಗಿ ಅನುಮಾನವನ್ನು ಅಶುದ್ಧಪಡಿಸುವ ದೋಷಗಳನ್ನೂ ಸಹ ಕೂಲಂಕಷವಾಗಿ ತಿಳಿದುಕೊಂಡಿರಬೇಕು. ದೋಷಗಳು ಯಾವಾಗಲೂ ಸಾಧನದೊಂದಿಗೆ ಕಲೆಯುವುದರಿಂದ ಅವುಗಳಿಗೆ **ಹೇತ್ವಾಭಾಸ**ಗಳು ಅಂದರೆ ಸಾಧನದಂತೆ ತೋರ್ಪಡಿಸಿಕೊಳ್ಳುವ ದೋಷಗಳು ಎಂದು ಹೆಸರಾಗಿದೆ.

ಅನುಮಾನದಲ್ಲಿ ಐದು ವಿಧವಾಗಿ ದೋಷಗಳು ಕಾಣುತ್ತವೆ. ಅವು ಅನೇಕಾಂತ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧ ಮತ್ತು ಬಾಧ ಎಂಬ ದೋಷಗಳು.

**ಅನೇಕಾಂತ**—ಹೊಗೆಯನ್ನು ಬೆಟ್ಟದಲ್ಲಿ ಕಂಡು ಬೆಟ್ಟದಲ್ಲಿ ಬೆಂಕಿಯಿದೆ ಎಂದು ನಿರ್ಧರಿಸುವುದು ಸರಿಯಾದ ಅನುಮಾನ. ಇದರಂತೆ ಬೆಂಕಿಯನ್ನು ಕಂಡು ಅಲ್ಲಿ ಹೊಗೆಯೂ ಇದೆ ಎಂದು ನಿರ್ಧರಿಸುವುದು ತಪ್ಪಾದ ಅನುಮಾನ. ಬೆಂಕಿ ಇಲ್ಲದ ಕಡೆ ಹೊಗೆ ಇರುವುದಿಲ್ಲ. ಇದು ನಿಜ. ಆದರೆ ಬೆಂಕಿ ಇರುವ ಕಡೆಯೆಲ್ಲಾ ಹೊಗೆ ಇದೆ ಎಂದು ಹೇಳುವುದು ಸರಿಯಲ್ಲ. ಕೆಂಡದಂತಿರುವ ಕಬ್ಬಿಣದಲ್ಲಿ ಬೆಂಕಿ ಇದೆ; ಅಲ್ಲಿ ಹೊಗೆ ಇಲ್ಲ. ಬೆಂಕಿ ಕಾಣುವ ಕಡೆಯಲ್ಲೆಲ್ಲ ಹೊಗೆಯೂ ತೋರಿದ್ದರೆ ಅನುಮಾನ ಸರಿಯಾಗುತ್ತಿತ್ತು. ಹಾಗಿಲ್ಲವಾದ್ದರಿಂದ, ಬೆಂಕಿಯಿದ್ದದ್ದರಿಂದ ಹೊಗೆ ಏರ್ಪಡುತ್ತದೆ ಎಂದು ಮೂಡುವ ಅನುಮಾನದಲ್ಲಿ ಅನೇಕಾಂತ ದೋಷ ತೋರುತ್ತದೆ.

**ವಿರುದ್ಧ**—ನಾವು ಒಂದು ಸಾಧ್ಯವನ್ನು ಸಾಧಿಸುವುದಕ್ಕಾಗಿ ಉಪಯೋಗಿಸುವ ಹೇತುವಿನಿಂದ ಅದಕ್ಕೆ ವಿರೋಧವಾದ ಸಾಧ್ಯ ಏರ್ಪಟ್ಟರೆ ಆ ದೋಷಕ್ಕೆ ವಿರುದ್ಧವೆಂದು ಹೆಸರು.

**ಸತ್ಪ್ರತಿಪಕ್ಷ**—ಒಂದು ಸಾಧನದಿಂದ ಒಂದು ಬಗೆಯಾದ ಸಾಧ್ಯವನ್ನು ಸಾಧಿಸುತ್ತೇವೆ. ಆದರೆ ಮತ್ತೊಂದು ಸಾಧನದಿಂದ ಮೊದಲಿನ ಸಾಧ್ಯಕ್ಕೆ ವಿರುದ್ಧವಾದ ಸಾಧ್ಯ ಏರ್ಪಟ್ಟರೆ ಆ ದೋಷಕ್ಕೆ ಸತ್ಪ್ರತಿಪಕ್ಷವೆಂದು ಹೆಸರು.

**ಅಸಿದ್ಧಿ**—ಸಾಧ್ಯವೋ ಅಥವಾ ಸಾಧನವೋ ಪಕ್ಷದಲ್ಲಿ ತೋರದೆ ಇದ್ದರೆ ಆಗ ಅಸಿದ್ಧಿ ಎಂಬ ದೋಷವಿರುತ್ತದೆ.

**ಬಾಧ**— ಅನುಮಾನದಿಂದ ನಾವು ಸಾಧಿಸಿರುವ ಅರ್ಥ ತಪ್ಪಾದದ್ದು ಎಂದು ಪ್ರತ್ಯಕ್ಷ ಮುಂತಾದ ಇತರ ಪ್ರಮಾಣಗಳಿಂದ ಏರ್ಪಟ್ಟರೆ, ಆಗ ಬಾಧವೆಂಬ ದೋಷ ಅನುಮಾನದಲ್ಲಿ ಕಂಡುಬರುತ್ತದೆ.

ಈ ರೀತಿಯಾದ ದೋಷಗಳು ಸೇರದೆ ಶುದ್ಧವಾದ ಅನುಮಾನವನ್ನು ಬಳಸುವುದು ಎಷ್ಟು ಆವಶ್ಯಕವೋ, ಅದು ಅಷ್ಟೇ ಕಷ್ಟವಾದದ್ದು. ಆದ್ದರಿಂದಲೇ 'ಕ್ಷಣಾದೂರ್ಧ್ವಂ ಅತಾರ್ಕಿಕಃ' ಎಂದರೆ ತಾರ್ಕಿಕನು ಒಂದು ಕ್ಷಣ ಮೈಮರೆತರೆ, ತನ್ನ ತರ್ಕ ಸಾಮರ್ಥ್ಯವನ್ನು ಹಾಳುಮಾಡಿಕೊಳ್ಳುತ್ತಾನೆ ಎಂದು ಲೋಕದಲ್ಲಿ ರೂಢಿಯಾಗಿದೆ.

ಪ್ರಮಾಣಗಳನ್ನು—ಅದರಲ್ಲಿಯೂ ಮುಖ್ಯವಾಗಿ ಅನುಮಾನವನ್ನು—ಕೂಲಂಕಷವಾಗಿ ಪರೀಕ್ಷೆಮಾಡಿ ಪರಿಷ್ಕಾರ ಪಡಿಸಲು ಮಾತ್ರ ಗಮನವನ್ನು ಹೆಚ್ಚಾಗಿ ಕೊಟ್ಟದ್ದರಿಂದ ಬರುಬರುತ್ತ ಪ್ರಮೇಯ ಭಾಗಗಳಿಗೆ ಅಷ್ಟು ಗಮನಕೊಡಲು ನ್ಯಾಯವೈಶೇಷಿಕದಲ್ಲಿ ಸಾಧ್ಯವಾಗಲಿಲ್ಲ.

ಆ ಕಾಲದಿಂದ **ನವ್ಯನ್ಯಾಯ** ಎಂಬ ಹೆಸರಿನಿಂದ ಈ ದರ್ಶನದಲ್ಲಿ ಭೇದವೊಂದು ಅಂಕುರಿಸಿತು. ಇದನ್ನೇ ಸರ್ವರೂ ಸರ್ವಪ್ರಯತ್ನಗಳಿಂದಲೂ ಬೆಳಸಿಕೊಂಡು ಬಂದದ್ದರಿಂದ, ನ್ಯಾಯದರ್ಶನವು ಕೇವಲ ಪ್ರಮಾಣಗ್ರಂಥವಾಗಿ ಪರಿಣಮಿಸಿತು. ಈಗ ನವ್ಯನ್ಯಾಯ ಎಲ್ಲ ದರ್ಶನಗಳಿಗೂ ಅತ್ಯಂತ ಉಪಕಾರಿಯಾಗಿದೆ. ವೇದಾಂತಿಗಳೆಲ್ಲರೂ ನ್ಯಾಯಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿ ಅನಂತರ, ವೇದಾಂತವನ್ನು ವ್ಯಾಸಂಗಮಾಡುವ ಪದ್ಧತಿಯನ್ನಿಟ್ಟುಕೊಂಡಿದ್ದಾರೆ. 'ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಂ' ಅಂದರೆ, ನ್ಯಾಯಶಾಸ್ತ್ರವೂ ವ್ಯಾಕರಣವೂ ಎಲ್ಲ ಶಾಸ್ತ್ರಗಳಿಗೂ ಬಹಳ ಸಹಾಯಕವಾಗಿರುತ್ತವೆ ಎಂದು ಹೇಳುವುದು ಸಂಪ್ರದಾಯ.

ಉಪಮಾನ ಎಂಬುದು ಮತ್ತೊಂದು ಪ್ರಮಾಣ. ಗವಯ ಎಂದು ಒಂದು ಜಾತಿಯ ಮೃಗಕ್ಕೆ ಹೆಸರು. ಅದು ಗೋವಿನಂತೆ ಇದೆ. ಯಾವನೋ ಒಬ್ಬನು ಗವಯ ಎಂಬ ಶಬ್ದವನ್ನು ಕೇಳಿದನು. ಅವನಿಗೆ ಅದು ಯಾವ ಮೃಗ ಎಂದು ತಿಳಿಯಲಿಲ್ಲ. ಆಗ ಪಕ್ಕದಲ್ಲಿದ್ದವನು ಗೋವಿನಂತಿರುವ ಮೃಗ ಕಾಡಿನಲ್ಲಿ ವಾಸಮಾಡುತ್ತದೆ; ಅದಕ್ಕೆ ಗವಯವೆಂದು ಹೆಸರು ಎಂಬುದಾಗಿ ಹೇಳಿದನು. ಅದನ್ನು ಕೇಳಿ ಅವನು ಕಾಡಿನಲ್ಲಿ ಗೋವಿನಂತಿದ್ದ ಮೃಗವನ್ನು ಕಂಡು ಈ ರೀತಿಯಾದ ಮೃಗಕ್ಕೆ ಗವಯವೆಂದು ಹೆಸರು ಎಂದು ತಿಳಿದುಕೊಳ್ಳುತ್ತಾನೆ. ಈ ಪ್ರಮಾಣದಿಂದ ಶಬ್ದಕ್ಕೂ ಅದರ ಅರ್ಥಕ್ಕೂ ಇರುವ ಸಂಬಂಧ ಗೊತ್ತಾಗುತ್ತದೆ. ಈ ಪ್ರಮಾಣಕ್ಕೆ ಉಪಮಾನವೆಂದು ಹೆಸರು.

ಶಬ್ದವೂ ಒಂದು ಪ್ರಮಾಣ. ಕಂಡದ್ದನ್ನು ಕಂಡಂತೆ ಹೇಳುವವನು ಆಪ್ತ. ಆಪ್ತನ ಮಾತು ಶಬ್ದ ಪ್ರಮಾಣ. ಅವನ ಮಾತುಗಳಿಂದ ಅನೇಕ ವಿಷಯಗಳನ್ನು ತಿಳಿದುಕೊಳ್ಳುತ್ತೇವೆ. ವೇದವೂ ಪ್ರಮಾಣ. ವೇದವನ್ನು ನಿಷ್ಪಕ್ಷಪಾತಿಯೂ ಸತ್ಯಸಂಧನೂ ಆದ ಈಶ್ವರನು ರಚಿಸಿದ್ದಾನೆ. ಆದ್ದರಿಂದ ವೇದವಾಕ್ಯಗಳನ್ನು ನಂಬಿ ಅಲ್ಲಿ ಹೇಳಿರುವಂತೆ ನಾವು ನಡೆದುಕೊಳ್ಳಬೇಕು.

ಈ ದರ್ಶನದ ಪ್ರಕಾರ ಜ್ಞಾನ, ಸುಖ ಮುಂತಾದುವು ಜೀವನಲ್ಲಿ ಕಾಣಿಸಿಕೊಳ್ಳುವ ಗುಣಗಳು. ಜ್ಞಾನವಾಗಲಿ, ಅಥವಾ ಸುಖವಾಗಲಿ ಜೀವನ ಸ್ವರೂಪವಲ್ಲ. ಅವುಗಳು ಅನಿತ್ಯ. ಕೆಲವು ವೇಳೆಗಳಲ್ಲಿ ತೋರುತ್ತವೆ. ಮತ್ತೆ ಕೆಲವು ವೇಳೆಗಳಲ್ಲಿ ತೋರುವುದಿಲ್ಲ. ಮನಸ್ಸೆಂಬ ಇಂದ್ರಿಯದ ಮೂಲಕ ಅವು ಗೊತ್ತಾಗುತ್ತವೆ. ಮನಸ್ಸಿಗೂ ಆತ್ಮನಿಗೂ

ಇರುವ ಸಂಬಂಧ ತಪ್ಪಿದರೆ ಜ್ಞಾನ, ಸುಖ ಅಥವಾ ದುಃಖ, ದ್ವೇಷ ಮುಂತಾದ ಯಾವ ಗುಣವೂ ಗೋಚರವಾಗುವುದಿಲ್ಲ. ದುಃಖದಿಂದ ಪಾರಾಗುವುದೇ ಈ ದರ್ಶನದಲ್ಲಿಯೂ ಗುರಿ. ಇದನ್ನು ಗಳಿಸಬೇಕಾದರೆ ಮನಸ್ಸಿನ ಸಂಪರ್ಕ ನೀಗಬೇಕು. ಸಂಪರ್ಕ ಕಳೆದರೆ ಜ್ಞಾನ ಮುಂತಾದುವು ವೇದ್ಯವಾಗುವುದಿಲ್ಲ. ಆಗ ಜೀವನಿಗೆ ಮೋಕ್ಷವಾಯಿತು ಎಂದರ್ಥ.

ಈ ದರ್ಶನದಲ್ಲಿ ಕೆಲವು ಮುಖ್ಯವಾದ ಅಂಶಗಳಿವೆ. ಯಾವ ವಸ್ತುವನ್ನು ತೆಗೆದುಕೊಂಡರೂ ಅದರಲ್ಲಿರುವ ಭಾಗಗಳನ್ನೆಲ್ಲ ಪ್ರತ್ಯೇಕ ವಾಗಿ ಪರಿಶೀಲಿಸುವ ಸ್ವಭಾವ ಕಂಡುಬರುತ್ತದೆ. ಇದಕ್ಕೆ ಸಹಾಯ ವಾಗಿರಲೆಂದು ಪ್ರಮಾಣಗಳನ್ನು ಸಂಪೂರ್ಣವಾಗಿ ವಿಮರ್ಶೆ ಮಾಡಿ, ಅವುಗಳಲ್ಲಿ ದೋಷ ಲೇಶವೂ ಸೇರದಿರುವಂತೆ ಪ್ರಮಾಣಗಳನ್ನು ಶುದ್ಧ ವಾಗಿಟ್ಟುಕೊಂಡಿರುವುದು ಮತ್ತೊಂದು. ಈ ಎರಡು ಪ್ರಬಲವಾದ ಕಾರಣಗಳಿಂದ ವೈದಿಕರಿಗೆಲ್ಲ ಈ ಶಾಸ್ತ್ರದಲ್ಲಿ ಅಭಿರುಚಿಯೂ ಶ್ರದ್ಧೆಯೂ ಹೆಚ್ಚಿತು. ಮತ್ತು ಇದರ ಪ್ರಭಾವ ಇತರ ದರ್ಶನಗಳಲ್ಲಿಯೂ ತೋರಿ ಬರುತ್ತಿತ್ತು. ಕಾಲಕ್ರಮದಲ್ಲಿ ಈ ದರ್ಶನ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು **ಪ್ರಮಾಣಶಾಸ್ತ್ರವಾದ** ಅಥವಾ **ತರ್ಕಶಾಸ್ತ್ರ** ಎಂಬ ಹೆಸರಿನಿಂದ ಇತರ ದರ್ಶನಗಳಿಗೆ ಬಹಳ ಸಹಾಯಕವಾದ ಒಂದು ಅಂಗವಾಯಿತು. (ಮುಂದುವರಿಯುವುದು)

## ಕನ್ನಡ ಸಂಸ್ಕೃತಿಯ ವಿಶೇಷ ಕುರುಹುಗಳು

ರೇಡಿಯೋ ಭಾಷಣ: ಶ್ರೀ ಮುದವೀಡು ಕೃಷ್ಣರಾಯರಿಂದ

### ಸಾಹಿತ್ಯ, ಕಲೆ, ವಾಸ್ತುಶಿಲ್ಪ ಮುಂತಾದ್ದು

(ಕಳೆದ ಸಂಚಿಕೆಯಿಂದ ಮುಂದುವರಿದದ್ದು)

ಕ್ರಿಸ್ತಶಕದ ೧ನೆಯ ಶತಮಾನಕ್ಕಿಂತಲೂ ಮೊದಲಿನಿಂದ ಕನ್ನಡ ಸಾಹಿತ್ಯ ಹೇಗೆ ಬೆಳೆದುಬಂದಿದೆ ಎಂಬುದು ಈಗ ಎಲ್ಲರಿಗೂ ತಿಳಿದ ಮಾತಾಗಿದೆ. ಕರ್ನಾಟಕದ ಸಂಗೀತ ಕಲೆ ಒಂದಾನೊಂದು ಕಾಲಕ್ಕೆ ಅಖಂಡ ಭಾರತವನ್ನೇ ವ್ಯಾಪಿಸಿ, ತನ್ನ ಹಿರಿಮೆಯನ್ನು ಎಲ್ಲೆಲ್ಲಿಯೂ ಮೆರೆಯುತಿದ್ದುದು ಪ್ರಸಿದ್ಧವಾಗಿದೆ. ಉತ್ತರ ಹಿಂದೂಸ್ಥಾನದ ಕೊನೆಯ ಹಿಂದೂ ಚಕ್ರವರ್ತಿಯಾಗಿದ್ದ ಪೃಥ್ವಿರಾಜನ ಆಸ್ಥಾನದಲ್ಲಿಯೂ ನಮ್ಮ ಕರ್ನಾಟಕ ಸಂಗೀತ ತನ್ನ ಬಾವುಟವನ್ನು ಮೆರೆಯಿಸುತ್ತಿದ್ದ ಸಂಗತಿ ಯನ್ನು ಆತನ ಜೀವದ ಗೆಳೆಯನಾಗಿದ್ದ ಚಾಂದಕವಿ ತನ್ನ ಕೃತಿಯಲ್ಲಿ ವರ್ಣಿಸಿದ್ದಾನೆ. ನಮ್ಮ ವಾಸ್ತುಶಿಲ್ಪವಂತೂ ಕ್ರಿ.ಶ.ದ ೬-೭ನೆಯ ಶತ ಮಾನಗಳಿಂದ ೧೬ನೆಯ ಶತಮಾನದ ಕೊನೆಯವರೆಗೆ ಅವ್ಯಾಹತವಾಗಿ ಬೆಳೆದುಬಂದುದಕ್ಕೆ ಕನ್ನಡನಾಡಿನ ತುಂಬ ಹಬ್ಬಿಕೊಂಡಿರುವ ಅಸಂ ಖ್ಯಾತ ಗುಡಿಗೋಪುರಗಳೇ ಮೂರ್ತಿಮಂತ ಸಾಕ್ಷಿಯಾಗಿವೆ. ಕಂಡ ಕಂಡಲ್ಲಿ ಕಣ್ಣಿಗೆ ಬೀಳುವ ಈ ಗುಡಿಗೋಪುರಗಳನ್ನು ಕನ್ನಡಿಗರ ವಿವಿಧ ಕಲಾಭಿರುಚಿಯ ನಿರೀಕ್ಷಣೆಯ ದೃಷ್ಟಿಯಿಂದ ನೋಡಿದರೆ, ಅವುಗಳಲ್ಲಿ ಚಿತ್ರ, ವರ್ಣ, ಗಾಯನ, ವಾದನ, ನರ್ತನ ಮೊದಲಾದ ವಿವಿಧ ಲಲಿತ ಕಲೆಗಳ ಪರಮೋತ್ಕರ್ಷದ ಮನೋಹರ ನೋಟವೇ ಕಣ್ಣಿಗೆ ಕಟ್ಟುತ್ತದೆ. ಕನ್ನಡ ಜನಾಂಗದ ಬೇರೆ ಬೇರೆ ಕಾಲದ ಬೇರೆ ಬೇರೆ ರೀತಿ ನಡತೆಗಳು, ಉಡುಪು ತೊಡುಪುಗಳು, ಒಡವೆತೊಡವೆಗಳು, ವಸ್ತ್ರಪಾತ್ರಗಳು, ವಾದ್ಯ ವಿಶೇಷಗಳು, ಸಮರ ಸಲಕರಣೆಗಳು, ಶಸ್ತ್ರಾಯುಧಗಳು, ಆಟ ಪಾಟಗಳು, ವಿನೋದ ವಿಹಾರಗಳು ಮೊದಲಾದ ಜನಜೀವನದ ಬೇರೆ ಬೇರೆ ಬಗೆಗಳನ್ನು ಇಂದಿನವರಾದ ನಾವು ಅರಿತುಕೊಳ್ಳಲು ನಮ್ಮ ಪೂರ್ವಜರ ಈ ಪ್ರಾಚೀನ ಕೃತಿಗಳು ವಿಶ್ವಕೋಶಗಳಂತೆ ಪ್ರಯೋಜನ ಕಾರಕವಾಗಿವೆ. ಇವೆಲ್ಲವುಗಳನ್ನು ನಿರುಕಿಸಿ, ಪರಿಕಿಸಿ, ಗುರುತಿಸಿ, ಅರಿತುಕೊಳ್ಳುವ ಬುದ್ಧಿಯೂ, ಪ್ರವೃತ್ತಿಯೂ, ಕುತೂಹಲವೂ, ಜಾಣ್ಮೆಯೂ, ತತ್ಪರತೆಯೂ ಮಾತ್ರ ನಮಗೆ ಬೇಕಾಗಿದೆ.

### ಕನ್ನಡ ಜನಾಂಗದ ಗುಣವೈಶಿಷ್ಟ್ಯಗಳು

ಕನ್ನಡ ಜನಾಂಗದ ಈ ಬಗೆಯ ಉದಾರ ಚಾರಿತ್ರ್ಯಕ್ಕೆ ಅನು ಗುಣವಾದ ಅವರ ಆತಿಥ್ಯ ಸತ್ಕಾರದ ಅಪೂರ್ವ ಮಾದರಿಯನ್ನು ಬೇರೆಡೆಗಳಲ್ಲಿ ಕ್ವಚಿತ್ತಾಗಿಯೇ ಕಾಣಬಹುದು. ಮನೆಗೆ ಬಂದ ಅತಿಥಿ ದೇವರ ಸಮಾನನೆಂಬ ಭಾವಿತ ಮನೋವೃತ್ತಿ ಅನಾದಿಕಾಲದಿಂದಲೂ ನಮ್ಮಲ್ಲಿ ಬೇರುಗೊಂಡು ಬೆಳೆದು ನಿಂತಿದೆ. ಕನ್ನಡ ನಾಡಿನ ಪರಂಪರೆ ಯಲ್ಲಿ ಎಲ್ಲಿ ನೋಡಿದರೂ ವಿಪುಲವಾಗಿ ಕಂಡುಬರುವ ಅನ್ನ ಛತ್ರಗಳು, ಅಗ್ರಹಾರಗಳು, ಅರವಟ್ಟಿಗೆಗಳು, ಮಠಮಂದಿರಗಳು, ಇವುಗಳಿಗಾಗಿ ಮಾಡಲಾಗಿರುವ ದಾನಗಳು, ಬಿಡಲಾಗಿರುವ ದತ್ತಿಗಳು ಈ ಸದ್ಭಾ ವನೆಯ ಕುರುಹುಗಳೇ ಆಗಿವೆ. ರೊಟ್ಟಿಯ ಬುಟ್ಟಿಗಳನ್ನೂ ಬೆಣ್ಣೆ ಪದಾರ್ಥಗಳ ಗಡಿಗೆಗಳನ್ನೂ ಆಳುಗಳ ಮೇಲೆ ಹೊರಿಸಿಕೊಂಡು ಊರ ಲ್ಲೆಲ್ಲ ತಿರುಗಾಡಿ ಪರಸ್ಥಳದಿಂದ ಬಂದವರ ಹಸಿವು ನೀರಡಿಕೆಗಳನ್ನು ತಣಿಸಿದನಂತರ ಕೃತಾರ್ಥತೆಯ ಹಿಗ್ಗಿನಿಂದ ತಿರುಗಿ ಮನೆಗೆ ಬಂದು ಅನಂತರ ಊಟಮಾಡುವ ನಾಡಗೌಡ–ನಾಡ ನಾಯಕರ ಸಾವಿರಾರು ಚರಿತ್ರೆಗಳು ಕನ್ನಡನಾಡಿನ ಐತಿಹ್ಯದಲ್ಲಿ ಇಂದಿಗೂ ಕೇಳಲು ದೊರೆಯು ತ್ತಿದೆ. ಪ್ರಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಸಿದ್ಧಾನ್ನವನ್ನೂ ಸಿದ್ಧಾ ಹಾರಗಳನ್ನೂ ಮಾರಾಟ ಮಾಡುವ ವ್ಯವಹಾರ ನೈಪುಣ್ಯ ಮಿತಿಮೀರಿ ಬೆಳೆದಿರುವ ಈ ಕಾಲದಲ್ಲಿಯೂ ಕನ್ನಡಿಗರ ಸತ್ಕಾರ ಸಾಂಪ್ರದಾಯ ವೆಂಬುದು ಎಲ್ಲ ಕಡೆಗೆ ಗಾದೆಯ ಮಾತಾಗಿ ಪ್ರಚಾರದಲ್ಲಿದೆ. ಹಿಂದೂ ಸ್ಥಾನದ ಪರಪ್ರಾಂತಗಳಿಂದ ಬಂದ ಯಾವ ಮನುಷ್ಯರ ಬಾಯಿ ಯಿಂದಲೂ ಈ ವಿಷಯದಲ್ಲಿ ಕನ್ನಡಿಗರಿಗೆ ಧನ್ಯವಾದಗಳು ದೊರೆಯ ದಿರಲಾರವು. ಕನ್ನಡ ಜನಾಂಗದ ಈ ಪರಮೌದಾರ್ಯ 'ಮನೆ ಮುರುಕುತನವ ದುರ್ಗುಣ ಸೀಮೆಗೆ ಮುಟ್ಟುವಂತಿರುವದು' ಎಂದು ನಮ್ಮ ನೆರೆ ಪ್ರಾಂತದವರು ವಿನೋದವಾಗಿ ನುಡಿಯುವದೂ ಉಂಟು. ಈ ಬಗೆಯ ಆತಿಥ್ಯ ಸತ್ಕಾರದ ಔದಾರ್ಯ ವಿಶಾಲವಾದ ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿಯೂ ಏಕಪ್ರಕಾರವಾಗಿ ಬಳಕೆಯಲ್ಲಿರುವದು ಸರ್ವವ್ಯಾಪಿಯಾಗಿರುವ ಕನ್ನಡ ಸಂಸ್ಕೃತಿಯ ಸಾಮಾನ್ಯ ಲಕ್ಷಣಗಳಲ್ಲಿ ಒಂದಾಗಿದೆ.

ಧರ್ಮ, ಸಾಹಿತ್ಯ, ಸಂಗೀತಾದಿ ಕಲೆಗಳು, ಸತ್ಕಾರದ ಬಗೆ ಇವೇ ಮೊದಲಾದ ಕನ್ನಡ ಸಂಸ್ಕೃತಿಯ ಸ್ವರೂಪವನ್ನು ತಕ್ಕಮಟ್ಟಿಗೆ ಸಂಕ್ಷೇಪ ವಾಗಿ ವಿವರಿಸಿದಂತಾಯಿತು. ನಮ್ಮ ಕನ್ನಡ ನಾಡಿನ ಪ್ರಭಾವಶಾಲಿ ಯಾದ ಸಂಸ್ಕೃತಿ ಈ ತೆರನಾಗಿ ಸಾವಿರಾರು ವರ್ಷಗಳ ಬೆಳವಣಿಗೆಯಿಂದ ಒಂದು ವಿಶ್ವಸ್ವರೂಪದ್ದಾಗಿ ಕಂಡುಬಂದರೂ ಅದರಲ್ಲಿ ವಿವಿಧತೆಗೆ ಕೊರತೆಯಿಲ್ಲವೆಂಬ ಸಂಗತಿಯನ್ನು ನಾವು ನೆನಪಿನಲ್ಲಿಡತಕ್ಕದ್ದು. ವಿವಿಧ ಧರ್ಮಪಂಥ ಪಂಗಡಗಳ ಜನ್ಮಸ್ಥಾನ, ಆಶ್ರಯಸ್ಥಾನವಾಗಿ ಅವುಗಳನ್ನು ಒಂದೇ ದೃಷ್ಟಿಯಿಂದ ಪೋಷಿಸಿದ ನಮ್ಮ ಕನ್ನಡನಾಡು ಅವೆಲ್ಲವುಗಳಿಗೂ ಸಾಮಾನ್ಯವಾದ 'ಮಾನವ ಧರ್ಮ'ವನ್ನೇ ತನ್ನ ಮುಖ್ಯವಾದ ಗುರಿ ಯಾಗಿಟ್ಟುಕೊಂಡು ತನ್ನ ಧಾರ್ಮಿಕ ಸಹಿಷ್ಣುತೆಯಿಂದಲೇ ತನ್ನ ಸಂಸ್ಕೃತಿಯನ್ನು ಬೆಳಗಿಸುತ್ತ ಬಂದಿದೆ. ಇದೇ ಬಗೆಯಾಗಿ ಸಾಹಿತ್ಯಾದಿ ವಿಷಯಗಳಲ್ಲಿಯೂ ನಾವು ವಿವಿಧತೆಯನ್ನು ಕಾಣದಿರಲಾರೆವು. ಸಾಹಿತ್ಯ ಸಂಪದಕ್ಕೆ ಮೂಲವಾದ ಭಾಷೆಯೇ ಸ್ಥಾನಿಕ ಪರಿಸ್ಥಿತಿಯನ್ನು ಅನುಸರಿಸಿ ಕೆಲವೊಂದು ವಿಶಿಷ್ಟ ಬಗೆಯಿಂದ ಪ್ರಚಾರದಲ್ಲಿರುವುದು ಸ್ವಾಭಾವಿಕವಾಗಿದೆ. ಹಾಗೆಯೇ ಜನಾಂಗದ ರೀತಿನೀತಿಗಳು, ನಡತೆ ನುಡಿಗಳು, ಉಡುಗೆ ತೊಡಗೆಗಳು, ಊಟ ಉಪಚಾರಗಳು ಮೊದಲಾ ದವುಗಳಲ್ಲಿ ಅಲ್ಪಸ್ವಲ್ಪ ಪ್ರಾದೇಶಿಕ ಭೇದಗಳು ಕಂಡುಬಂದರೂ ಇವೆಲ್ಲ ವುಗಳ ವಿವಿಧತೆಯಲ್ಲಿಯೂ ಒಂದು ಬಗೆಯ ಏಕರೂಪತೆಯನ್ನು ತೋರಿಸುವುದೇ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿದೆ. ನಮ್ಮ ವಾಸ್ತು ಶಿಲ್ಪದಲ್ಲಿ ಕದಂಬರ ಪ್ರಕಾರ, ಚಾಲುಕ್ಯರ ಬಗೆ, ಹೊಯಿಸಳರ ರೀತಿ, ವಿಜಯನಗರದ ಪದ್ಧತಿ ಮೊದಲಾದ ಬೇರೆ ಬೇರೆ ಕಟ್ಟು ಮಾತುಗಳು ಕಂಡುಬಂದರೂ ಅವೆಲ್ಲವುಗಳ ಸಮನ್ವಯ 'ಕರ್ನಾಟಕ ಸಂಪ್ರ ದ್ರಾಯ'ದಲ್ಲಿ ಆಗುತ್ತಿತ್ತೆಂಬುದನ್ನು ನಾವು ಮರೆಯಲಾಗದು. ಒಂದು ವಿಶಾಲವಾದ ನಾಡಿನ, ವಿಶಾಲವಾದ ಕ್ಷೇತ್ರದ, ವಿಶಾಲವಾದ ಜನಾಂಗ ದಲ್ಲಿ ವಿವಿಧತೆಯೂ, ವಿಚಿತ್ರತೆಯೂ ತಪ್ಪಿದ್ದಲ್ಲ. ಅದು ನಿಸರ್ಗ ನಿಯಮ. ಜನಾಂಗವೆಂಬುದು ನಿರ್ಜೀವ ಯಂತ್ರದಿಂದ ಹುಟ್ಟಿದ ನಿರ್ಜೀವ ಸರಕುಗಳ ರಾಶಿರಾಶಿಯಾದ ಒಟ್ಟಿಲಲ್ಲ. ನಿಸರ್ಗದ ಸೃಷ್ಟಿಯಲ್ಲಿ ನಿಸರ್ಗದ ಪ್ರೇರಣೆಯಿಂದ, ನಿಸರ್ಗದ ಪರಂಪರೆಯನ್ನೇ ಮುಂದೆ ನಡೆಸುವುದಕ್ಕೆ ಹುಟ್ಟಿ ಬೆಳೆದು ತನ್ನ ಬೆಳವಣಿಗೆಯಿಂದ ಮುಂದಾದರೂ ಬೆಳಗುವಂತೆ ಬಾಳಬೇಕಾಗಿರುವ ಸಚೇತನ, ಸಜೀವ, ಸುಬುದ್ಧ

(೨೧೨ನೆಯ ಪುಟಕ್ಕೆ)

### ಕನ್ನಡ ಕವಿ ಸೂಕ್ತಿ

[ಸರಸ್ವತಿಯ ಸಾಕಾರವರ್ಣನೆಯನ್ನು ಹಲವರು ಮಾಡಿದ್ದಾರೆ. ಆದಿಕವಿ ಪಂಪನ ಹೊಸ ಬಗೆಯ ವರ್ಣನೆಯನ್ನು ಇಲ್ಲಿ ಎತ್ತಿಕೊಟ್ಟಿದೆ.]

**ಪರಮ ಜಿನೇಂದ್ರ ವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ**
**ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ**
**ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ**
**ಕೆಱೆದಪೆನಾ ಸರಸ್ವತಿಯೆ ಮಾೞ್ಕೆಮಗಿಲ್ಲಿಯೆ ವಾಗ್ವಿಳಾಸಮಂ**

ಆದಿಪುರಾಣ I—೯

[ಎಱೆದಪೆನ್ — ಬೇಡುತ್ತೇನೆ]




ಶುಕ್ರವಾರ, ಮಾರ್ಚಿ ೨೯, ೧೯೪೦

## ಶ್ರೀ ಜಯಚಾಮರಾಜ ಒಡೆಯರವರಿಗೆ ಯುವರಾಜ ಪದವಿ

**"ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್ ಅವರ ವಿಷಾದಕರ ನಿಧನವು ಸಂಭವಿಸಿದುದರಿಂದ, ಅವರ ಕುಮಾರರಾದ ಶ್ರೀ ಜಯಚಾಮರಾಜ ಒಡೆಯರವರಿಗೆ 'ಶ್ರೀಮದ್ಯುವರಾಜರು' ಎಂಬ ಅಭಿಧಾನವನ್ನೂ, ಯುವರಾಜ ಪದವಿಯ ಸ್ಥಾನಮಾನಗಳನ್ನೂ ಶ್ರೀಮನ್ಮಹಾರಾಜರವರು ಕೃಪೆಯಿಟ್ಟು ದಯಪಾಲಿಸಿದ್ದಾರೆ"**

ಎಂಬುದಾಗಿ ಮೈಸೂರು ಸರಕಾರದವರು ಒಂದು ವಿಶೇಷ ಗೆಜೆಟ್ಟನ್ನು ನೆನ್ನೆಯ ದಿನ ಹೊರಡಿಸಿದ್ದಾರೆ.

ಪರಿಷತ್ತಿನ ಪರವಾಗಿ ಶ್ರೀಮದ್ಯುವರಾಜ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರಿಗೆ ಉಪಾಧ್ಯಕ್ಷರು ಭಕ್ತಿ ಗೌರವಪೂರ್ವಕವಾದ ಅಭಿನಂದನೆಗಳನ್ನು ತಂತಿಯ ಮೂಲಕ ಅರ್ಪಿಸಿರುತ್ತಾರೆ.

ಈ ಮಂಗಳ ಮಹೋತ್ಸವದ ಸಮಯದಲ್ಲಿ ಮೈಸೂರಿನ ಶ್ರೇಯೋಲಾಭಗಳನ್ನು ಕುರಿತ ಪ್ರಾರ್ಥನೆಯಿಂದ ನಮ್ಮ ಹೃದಯ ತುಂಬಿ ಉಕ್ಕುತ್ತಿದೆ. ದಯಾಮಯನಾದ ಭಗವಂತನು ಶ್ರೀಮದ್ಯುವರಾಜರಿಗೆ ಸಕಲಸನ್ಮಂಗಳಗಳನ್ನು ಕರುಣಿಸಲೆಂದೂ, ಶ್ರೀಮನ್ಮಹಾರಾಜರವರು ತಂದೆಗಳಾಗಿ, ತಮ್ಮ ಕುಮಾರರು ರಾಜ್ಯಭಾರಕ್ಕೆ ಸಂಪೂರ್ಣಸಿದ್ಧತೆ ಪಡೆಯುವಂತೆ ನೋಡಿಕೊಳ್ಳುವುದಕ್ಕಾಗಿ ಮಹಾಸ್ವಾಮಿಯವರಿಗೆ ತುಂಬು ಆಯುಸ್ಸನ್ನು ದಯಪಾಲಿಸಲೆಂದೂ, ಮಾದರಿಯ ಮೈಸೂರು ಇನ್ನೂ ಹೆಚ್ಚಾಗಿ ಮಾದರಿಯ ಮೈಸೂರಾಗಿ ಸಕಲ ಪ್ರಜೆಗಳ ಸಂತೋಷ ಸಂತೃಪ್ತಿಗಳಿಂದ ಕೂಡಿರುವಂತಾಗಲೆಂದೂ, ಮೈಸೂರು ಇಡಿಯ ಕನ್ನಡನಾಡಿನ ಶಿರೋಮಣಿಯಾಗಿ ಮೈಸೂರು ರಾಜಮನೆತನದಲ್ಲಿ ಹೆಚ್ಚು ಹೆಚ್ಚು ಭಕ್ತಿವಿಶ್ವಾಸಗಳನ್ನು ಸೆಳೆಯುವಂತಾಗಲೆಂದೂ, ಆ ಮನೆತನದ ಪೋಷಣೆಯಲ್ಲಿ ಸಿರಿಗನ್ನಡ ಗೆಲ್ಲಲೆಂದೂ, ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

"ಕಾಯೌ ಶ್ರೀ ಗೌರೀ"

## ಪ್ರಾಚ್ಯ ವಿದ್ವತ್ ಸಮ್ಮೇಳನ

ಪ್ರಾಚ್ಯ ವಿದ್ವತ್ ಸಮ್ಮೇಳನದ ಹತ್ತನೆಯ ಅಧಿವೇಶನ ಇದೇ ೨೧ನೆಯ ತಾರೀಖಿನಿಂದ ಮೊದಲಾಗಿ ೨೩ ಪೂರ್ತ ಮೂರು ದಿನ ತಿರುಪತಿಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆದುದಾಗಿ ತಿಳಿಯಬರುತ್ತದೆ. ಈ ಸಮ್ಮೇಳನದ ಮೊದಲನೆಯ ಅಧಿವೇಶನ ೧೯೧೯ರಲ್ಲಿ ಪುಣೆಯಲ್ಲಿ ನಡೆಯಿತು; ೮ನೆಯ ಅಧಿವೇಶನ ೧೯೩೫ರಲ್ಲಿ ಮೈಸೂರು ನಗರದಲ್ಲಿ ನಡೆದ ಸಂಗತಿಯನ್ನು ನಮ್ಮ ನಾಡಿನವರು ಯಾರೂ ಮರೆತಿರಲಾರರು; ೯ನೆಯ ಅಧಿವೇಶನ ೧೯೩೭ರಲ್ಲಿ ತಿರುವನಂತಪುರದಲ್ಲಿ ನಡೆಯಿತು.

ಸಾಮಾನ್ಯವಾಗಿ ಭರತಖಂಡದ ಎಲ್ಲ ಪ್ರಾಂತಗಳಲ್ಲೂ ಆಯಾ ಪ್ರಾಂತದ ಭಾಷೆ, ಸಾಹಿತ್ಯ, ಕಲೆ ಮುಂತಾದವುಗಳ ಪೋಷಣೆ ಮತ್ತು ಏಳಿಗೆಗಾಗಿ ಬೇರೆ ಬೇರೆ ಸಂಸ್ಥೆ ವ್ಯವಸ್ಥೆಗಳು ಇದ್ದೇ ಇವೆ. ಆದರೆ, ಇಡಿಯ ಭರತ ಖಂಡದ ಇತಿಹಾಸ, ಸಂಸ್ಕೃತಿ, ಕಲೆ, ಭಾಷಾ ಸಾಹಿತ್ಯಗಳು ಮುಂತಾದವುಗಳ ಹಳಮೆ ಹಿರಿಮೆಗಳನ್ನು ವ್ಯಷ್ಟಿ - ಸಮಷ್ಟಿ ದೃಷ್ಟಿಯಿಂದ ವಿವೇಚಿಸಿ, ಈ ಎಲ್ಲ ಜ್ಞಾನಭಾಗಗಳಲ್ಲಿ ನಡೆಯುವ ಸಂಶೋಧನ ಕಾರ್ಯಗಳಿಗೆ ಹುರಿಪುಕೊಟ್ಟು, ಎಲ್ಲ ಭಾರತೀಯರಲ್ಲೂ ಸ್ವಾಭಿಮಾನ, ಸೋದರಭಾವ, ಪ್ರಾಚೀನ ಭಾರತದ ತಳಪಾಯದ ಮೇಲೆ ನೂತನ ಭಾರತವನ್ನು ನಿರ್ಮಿಸಲು ಬೇಕಾದ ಸರ್ವಸಮಾನವಾದ ಒಂದು ಹೊಸ ದೃಷ್ಟಿ-ಇವನ್ನು ತುಂಬಿ, ಅವರೆಲ್ಲರನ್ನೂ ಒಕ್ಕೂಡಿಸಲು ಭಾರತೀಯರಿಂದಲೇ ಈ ಪ್ರಾಚ್ಯ ವಿದ್ವತ್ ಸಮ್ಮೇಳನದ ವ್ಯವಸ್ಥೆ ಬರುಬರುತ್ತ ಪರಿಣಾಮಕಾರಿಯಾದ ಸಾಧನವಾಗಿ ಮಾರ್ಪಡುತ್ತಿರುವುದು ಹೆಮ್ಮೆಯ ಸಂಗತಿ.

ಈ ಸಲದ ಸಮ್ಮೇಳನ ತಿರುಪತಿಯ ಶ್ರೀ ವೆಂಕಟೇಶ್ವರ ಪ್ರಾಚ್ಯ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ಏರ್ಪಟ್ಟಿತ್ತು. ಈ ಸಂಸ್ಥೆ ನೂತನವಾಗಿ ಸ್ಥಾಪಿತವಾದುದು. ತಿರುಪತಿಯ ದೇವಸ್ಥಾನದ ಉತ್ಪತ್ತಿಯ ಉಳಿತಾಯ ನಿಧಿಯನ್ನು ಉಪಯೋಗಿಸಿಕೊಂಡು ಒಂದು ವಿಶ್ವವಿದ್ಯಾನಿಲಯವನ್ನೊ ಕಾಲೇಜನ್ನೊ ತೆರೆಯಬಹುದೆಂದು ೧೯೩೩ರಲ್ಲಿ ಆದ ದೇವಸ್ಥಾನದ ಆಡಳಿತ ಶಾಸನ ಸಲಹೆ ಮಾಡಿತ್ತು. ಆ ಸಲಹೆಗೆ ರೂಪುಕೊಟ್ಟು ಈ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಇದರ ಕುಲಪತಿಗಳು ಸುಪ್ರಸಿದ್ಧ ಸಾಹಿತಿಗಳೂ ವಿದ್ವಾಂಸರೂ ಆದ ರಾವ್ ಬಹದ್ದೂರ್ ಶ್ರೀ ಕೆ. ವಿ. ರಂಗಸ್ವಾಮಿ ಅಯ್ಯಂಗಾರ್ ಅವರು. ಹಿಂದೂ ಧರ್ಮ, ಹಿಂದೂ ಸಂಸ್ಕೃತಿ, ಹಿಂದೂ ದರ್ಶನಗಳು, ತತ್ತ್ವಶಾಸ್ತ್ರ, ಸಂಸ್ಕೃತ ಭಾಷೆ, ಪ್ರಾಂತ ಭಾಷೆಗಳಾದ ತಮಿಳು, ತೆಲುಗು, ಈ ಜ್ಞಾನ ಶಾಖೆಗಳಲ್ಲಿ ವ್ಯಾಸಂಗಕ್ಕೂ ಸಂಶೋಧನೆಗೂ ಅವಕಾಶ ಸೌಕರ್ಯಗಳನ್ನು ಏರ್ಪಡಿಸಿಕೊಡುವುದೇ ಈ ಸಂಸ್ಥೆಯ ಹೆಗ್ಗುರಿ.

ಭಾರತೀಯ ಸಂಸ್ಕೃತಿಯ ಉಜ್ವಲ ಅಭಿಮಾನಿಗಳಾದ ಶ್ರೀ ಪಂಡಿತ ಮದನ ಮೋಹನ ಮಾಳವ್ಯರವರು ಈ ಸಲದ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಆದರೆ ಅವರು ಅಸ್ವಸ್ಥತೆಯ ಕಾರಣದಿಂದ ಸಮ್ಮೇಳನಕ್ಕೆ ಬರಲಾಗದೆ, ಅವರ ಜ್ಞಾನಪೂರ್ಣವಾದ ಭಾಷಣವನ್ನು ರಾವ್ ಬಹದ್ದೂರ್ ಕೆ. ವಿ. ರಂಗಸ್ವಾಮಿ ಅಯ್ಯಂಗಾರ್ಯರವರು ಓದಿದರು. ಅವರ ಸ್ಥಾನದಲ್ಲಿ ಢಾಕ ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರಾದ ಡಾ॥ ಆರ್. ಸಿ. ಮಜುಂದಾರರವರು ಅಧ್ಯಕ್ಷರಾಗಿದ್ದರು.

ಕನ್ನಡ ನಾಟಕ ಸಾಹಿತ್ಯವನ್ನು ಸಂಪದ್ಯುಕ್ತವನ್ನಾಗಿ ಮಾಡುತ್ತಿರುವರೆಂದು ಹೇಳಿದರು. ಕೊನೆಗೆ, ಭಾಷಣಕಾರರು ಗತವೈಭವದ ಮಧುರ ಸ್ಮರಣೆಯಲ್ಲಿ ಮನಸ್ಸನ್ನು ಹರಿಯಬಿಡದೆ ಗುರಿಯನ್ನು ಸಾಧಿಸಲು ಪ್ರಯತ್ನಿಸುವುದು ಕನ್ನಡ ನಾಟಕಪ್ರೇಮಿಗಳ ಆಶಯವಾಗಿರಬೇಕೆಂದು ಕೋರಿದರು.

## ಸಮ್ಮೇಳನದ ಕೆಲವು ಮುಖ್ಯ ಗೊತ್ತುವಳಿಗಳು

೧. ಮುಂಬಯಿ ಕರ್ನಾಟಕ ಪ್ರಾಂತದಿಂದ ಮುಂಬಯಿಯ ಕಾಯದೆ ಮಂಡಳದಲ್ಲಿ ಪ್ರತಿನಿಧಿಗಳಾಗಿ ಹೋದವರು ಕರ್ನಾಟಕದ ಏಕೀಕರಣದ ಅವಶ್ಯಕತೆಯನ್ನು ಸ್ಪಷ್ಟಗೊಳಿಸುವುದಕ್ಕಾಗಿ, ಪ್ರಾಂತಮಂಡಲಿಗಳ ಕಾರ್ಯಕಲಾಪಗಳು ನಡೆಯುತ್ತಿರುವಾಗ ಯಾವಾಗಲೂ ಕನ್ನಡದಲ್ಲಿಯೇ ಮಾತನಾಡಲೇಬೇಕೆಂದು ಈ ಸಮ್ಮೇಳನ ಪ್ರತಿನಿಧಿಗಳನ್ನು ಒತ್ತಾಯಪಡಿಸುತ್ತದೆ.

೨. ಮುಂಬಯಿ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಮೊದಲ ಎರಡು ತರಗತಿಗಳಲ್ಲಿಯ ಅಭ್ಯಾಸಕ್ರಮದಲ್ಲಿ ದೇಶಭಾಷೆಗಳಿಗೆ ಈಗ ಇರುವ ಸ್ಥಾನಮಾನಗಳು ಯಾವ ರೀತಿಯಿಂದಲೂ ಕಡಮೆಯಾಗದಂತೆ ನೋಡಿಕೊಳ್ಳಬೇಕೆಂದು ಈ ಸಮ್ಮೇಳನ ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ಪ್ರಾರ್ಥಿಸುತ್ತದೆ.

೩. ಕನ್ನಡ ನಾಡು ನುಡಿಗಳ ಅಭ್ಯುನ್ನತಿಗಾಗಿ ಎಲ್ಲಕ್ಕಿಂತ ಮೊದಲು ಹೊರಟ ಸಂಸ್ಥೆಯಾದ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಸುವರ್ಣ ಮಹೋತ್ಸವ ೧೯೪೦ನೆಯ ಇಸವಿ ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ನಡೆಯಲಿದೆ. ಅದಕ್ಕಾಗಿ ಅಖಿಲ ಕರ್ನಾಟಕದ ಸಹಾನುಭೂತಿ ಸಹಕಾರಗಳ ಅವಶ್ಯಕತೆಯಿದೆಯೆಂದೂ ಸಂಘವು ಧಾರವಾಡದಲ್ಲಿ ಇದ್ದುದರಿಂದ ಧಾರವಾಡ ಜಿಲ್ಲೆಯ ಕನ್ನಡಿಗರೆಲ್ಲರೂ ಹೆಚ್ಚಿನ ಸಹಾಯಕೊಡಲು ಮುಂದಾಗಬೇಕೆಂದೂ ಈ ಸಮ್ಮೇಳನ ಅಪೇಕ್ಷಿಸುತ್ತದೆ.

೪. ಮುಂಬಯಿ ಸರಕಾರದವರು ಧಾರವಾಡಕ್ಕೆ ಕನ್ನಡ ರೀಜನಲ್ ಲೈಬ್ರರಿಯನ್ನು ತರಲು ನಿರ್ಣಯಿಸಿದ್ದಕ್ಕಾಗಿ ಅವರನ್ನು ಈ ಸಮ್ಮೇಳನ ಅಭಿನಂದಿಸುತ್ತದೆ. ಅಲ್ಲದೆ ಆ ಲೈಬ್ರರಿಯನ್ನು ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಒಪ್ಪಿಸಿ ಆ ಸಂಘದ ಮುಖಾಂತರವಾಗಿಯೆ ಅದರ ಎಲ್ಲ ಆಡಳಿತವನ್ನು ನಡೆಯಿಸುವುದಕ್ಕೆ ಮುಂಬಯಿ ಸರಕಾರ ಎಲ್ಲ ಬಗೆಯ ಅನುಕೂಲತೆಗಳನ್ನು ಏರ್ಪಡಿಸಿ ಕೊಡಬೇಕೆಂದು ಈ ಸಮ್ಮೇಳನದ ಖಂಡಿತ ಅಭಿಪ್ರಾಯವಿದೆ.

೫. ಮುಂಬಯಿ ಮದ್ರಾಸು ರೇಡಿಯೋ ಕಾರ್ಯಕ್ರಮಗಳಿಗೆ ಹೋಗುವ ಕನ್ನಡ ನಾಡಿನ ಸಂಗೀತ ಕಲಾವಿದರು, ಅಲ್ಲಿ ತಾವು ಹಾಡಬೇಕಾಗಿರುವ ಹಾಡುಗಳು ಕನ್ನಡ ಭಾಷೆಯವೇ ಇರುವಂತೆ ಹೆಚ್ಚಾಗಿ ಲಕ್ಷ್ಯ ಪೂರಯಿಸಬೇಕೆಂದು ಈ ಸಮ್ಮೇಳನ ಒತ್ತಾಯದಿಂದ ಪ್ರಾರ್ಥಿಸಿಕೊಳ್ಳುತ್ತದೆ.

೬. ಈಗ ಕನ್ನಡ ನಾಡಿನಲ್ಲಿ ಆಧುನಿಕ ಸಾಹಿತ್ಯ ಸರ್ವತೋಮುಖವಾಗಿ ಬೆಳೆಯಹತ್ತಿದೆ. ಆದರೆ ಸ್ತ್ರೀಯರಿಗೆ ಉಪಯುಕ್ತವಾದಂಥ ಗ್ರಂಥಗಳಿಲ್ಲ. ಸಾಹಿತ್ಯ ಪರಿಷತ್ತಿನವರು ಅಂಥ ಗ್ರಂಥಗಳನ್ನು ಒದಗಿಸಿಕೊಡುವ ವ್ಯವಸ್ಥೆಯನ್ನು ಮಾಡಬೇಕೆಂದು ಬೇಡುತ್ತದೆ.

೭. ಕನ್ನಡ ಸಾಹಿತ್ಯ ಪರಿಷತ್ತಿನ ಪತ್ರಿಕೆಯಾದ 'ಕನ್ನಡ ನುಡಿ'ಯಲ್ಲಿ ಸ್ತ್ರೀಯರಿಗಾಗಿ ಒಂದು ಪುಟವನ್ನು ಮೀಸಲಾಗಿರಿಸಬೇಕು. ಇದರಿಂದ ಸ್ತ್ರೀ ಸಾಹಿತ್ಯವನ್ನು ಅಭಿವೃದ್ಧಿಗೆ ತರಲು ಅನುಕೂಲವಾಗುತ್ತವೆ ಎಂದು ಈ ಸಮ್ಮೇಳನ ಕನ್ನಡ ಸಾಹಿತ್ಯ ಪರಿಷತ್ತಿನ ಚಾಲಕರನ್ನು ಪ್ರಾರ್ಥಿಸುತ್ತದೆ.

೮. ಇದೀಗ ಧಾರವಾಡದಲ್ಲಿ ಸ್ಥಾಪಿತವಾಗಲಿರುವ ಕೇಂದ್ರ ಕಾಪಿರೈಟ್ ಕನ್ನಡ ಲೈಬ್ರರಿ ಇಡಿಯ ಕನ್ನಡ ನಾಡಿನ ಪ್ರತಿನಿಧಿತ್ವವನ್ನು ಪಡೆಯುವುದಾದರೆ ಅದು ಇನ್ನಿಷ್ಟು ವಿಸ್ತೃತವಾಗುವುದು ಒಳಿತು. ಈ ಯೋಜನೆಯಲ್ಲಿ ಮೈಸೂರು, ಹೈದರಾಬಾದು, ಮದ್ರಾಸು, ಮುಂಬಯಿ ಸರಕಾರಗಳು ಸಹಕರಿಸಿ, ಪ್ರತಿ ವಿಭಾಗದಲ್ಲಿಯೂ ಒಂದೊಂದು ಕಾಪಿರೈಟ್ ಲೈಬ್ರರಿಯನ್ನು ಸ್ಥಾಪಿಸಿಕೊಂಡು, ಅವುಗಳಲ್ಲಿ ಪ್ರತಿಯೊಂದಕ್ಕೆ ಪ್ರತಿ ವಿಭಾಗದಲ್ಲಿಯೂ ಪ್ರಕಟವಾಗುವ ಪ್ರತಿಯೊಂದು ಕನ್ನಡ ಪುಸ್ತಕದ ಒಂದೊಂದು ಪ್ರಕಟನೆಯನ್ನು ಪೂರೈಸುವ ವ್ಯವಸ್ಥೆ ಮಾಡಿದರೆ ಧಾರವಾಡ, ಬೆಂಗಳೂರು, ಮಂಗಳೂರು, ನಿಜಾಂ ಹೈದರಾಬಾದುಗಳಲ್ಲಿ ಕನ್ನಡ ನಾಡಿನ ಅಖಂಡ ಗ್ರಂಥ ನಿಷ್ಪತ್ತಿಯನ್ನೊಳಗೊಂಡ ಸಮಗ್ರ ಕನ್ನಡ ಗ್ರಂಥ ಭಂಡಾರಗಳು ಏರ್ಪಡುವುವು; ಮತ್ತು ಕನ್ನಡ ಭಾಷೆ ಸಾಹಿತ್ಯಗಳ ಬೆಳವಣಿಗೆಗೆ ತುಂಬಾ ಸಹಾಯವಾಗುವುದು. ಆದ್ದರಿಂದ ಈ ಯೋಜನೆಯನ್ನು ಆಯಾ ಆಡಳಿತದವರು ಕೂಡಲೇ ಕೈಕೊಳ್ಳಬೇಕೆಂದು ಈ ಸಮ್ಮೇಳನ ಕೇಳಿಕೊಳ್ಳುತ್ತದೆ.

೯. ಮೈಸೂರಿನ ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರು ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ಮೊದಲುಮಾಡಲು ಸಮ್ಮತಿ ದಯಪಾಲಿಸಿದುದಕ್ಕಾಗಿ ಈ ಸಮ್ಮೇಳನ ಅವರಿಗೆ ತನ್ನ ಭಕ್ತಿಪೂರ್ವಕ ಕೃತಜ್ಞತೆಯನ್ನೂ ವಂದನೆಗಳನ್ನೂ ಸಮರ್ಪಿಸುತ್ತದೆ.

೧೦. ಧಾರವಾಡ ಜಿಲ್ಲೆಯ ಕನ್ನಡ ಸಾಹಿತ್ಯ ಸಮ್ಮೇಳನ ಪ್ರತಿವರ್ಷ ಜರುಗುವಂತೆ ಏರ್ಪಾಡು ಮಾಡುವುದರ ಸಲುವಾಗಿ ಉತ್ತರ ಕರ್ನಾಟಕ ಪ್ರಾಂತ ಸಮಿತಿ ತಕ್ಕ ಯೋಜನೆಯನ್ನು ಮಾಡಬೇಕೆಂದು ಈ ಸಮ್ಮೇಳನ ವಿನಂತಿ ಮಾಡಿಕೊಳ್ಳುತ್ತದೆ.

## ನೇಗಿಲ ಹರಟೆ

ಕೃಷೀವಲ, ನನ್ನೊಡೆಯ, ನಾನು ಬರಿಯ ಮರದ ಕೊರಡು ಅಂದುಕೊಂಡಿದ್ದೀಯೇನು? ಎತ್ತಿನ ಬಾಲ ನೋಡಿಕೊಂಡು ಸುಮ್ಮನೆ ಮೂಗಿನ ನೇರಕ್ಕೆ ಹೋಗುವುದು ಮಾತ್ರ ನನಗೆ ಬರುವುದು ಎಂದು ತಿಳಿದಿದ್ದೀಯೇನು? ನಾನೂ ಹಿಂದಿರುಗಿ ನೋಡುತ್ತೇನೆ. ಆದರೆ, ಒಡೆಯ, ನೀನು ದೇಶದ ಬೆನ್ನುಮೂಳೆ ಎಂದು ಎಷ್ಟೋ ಜನ ಹೇಳುತ್ತಾರೆ; ದೇಶಕ್ಕೆಲ್ಲಾ ಬೆನ್ನುಮೂಳೆ ಆಗಿರುವ ನಿನಗೇ ಆ ಬೆನ್ನುಮೂಳೆ ಇರುವ ಹಾಗಿಲ್ಲವಲ್ಲ! ನನ್ನ ಹಿಂದೆ ನಡೆದೂ ನಡೆದೂ ಹಾಗಾಗಿದ್ದೀಯಾ ಏನು? ನಾನೇನು ಮಾಡಲಿ ಹೇಳು, ನನ್ನನ್ನು ನೀನು ಚೆನ್ನಾಗಿ ಇಟ್ಟುಕೊಂಡಿದ್ದರೆ ನಾನೂ ನಿನ್ನನ್ನು ಚೆನ್ನಾಗಿ ಇಟ್ಟುಕೊಂಡಿರುತ್ತಿದ್ದೆ. ತಪ್ಪಾಯಿತು, ನನ್ನೊಡೆಯ, ನಿನ್ನನ್ನು ಅನ್ನೋದಕ್ಕೆ ನಾನೆ? ಶಿವ ಶಿವ.

ಬಡತನ ಅಂದರೆ ಹೀಗೆ? ಮಾತು, ಕತೆ, ಬಾಳು, ಬಣ್ಣ ಎಲ್ಲಾ ಹೊಲಸೆದ್ದು ಹೋಗೋದು. ಕೃಷೀವಲ, ನಿನಗೆ ಕಿವಿ ಕೂಡ ಮಂದವಾಗಿದೆಯೆಂದು ತಿಳಿದುಕೊಂಡಿದ್ದಾರಲ್ಲ ಜನ. ಒಮ್ಮೆ ಸ್ವಲ್ಪ ನಗು. ನಿನಗೆ ಕೇಳಿಸಬೇಕಾದರೆ ತೆಗೆದಪ್ಪಳಿಸಿದ ಹಾಗೆ ಮಾತನಾಡಬೇಕಾದುದೇನೂ ಇಲ್ಲ ಎಂದು ಅವರಿಗೆಲ್ಲ ಹೇಳಲೇನು?

ನೋಡು, ನಾನು ಚೆನ್ನಾಗಿ ಉತ್ತುಕೊಟ್ಟ ನೆಲದಲ್ಲಿ ಬೆಳೆಗಳೆಲ್ಲಾ ಸೊಂಪಾಗಿ ಬೆಳೆದಾಗ ಆ ಹೂಗಳೆಲ್ಲಾ ಅರಳಿ ಅಂದವನ್ನು ಬೀರುತ್ತವಲ್ಲಾ, ಆ ಅಂದವಿರಬೇಕು ಮಾತಿನಲ್ಲಿ. ತೆಗೆದು ಮುತ್ತಿಟ್ಟುಕೊಳ್ಳುವ ಹಾಗಿರಬೇಕು ಮಾತು.

ಹೂಗಳ ನಡುವೆ ಹೂಗಳಾಗಿ ಓಡಾಡುವ ಮಕ್ಕಳ ಮೊಗಗಳಲ್ಲಿ ನಲಿದಾಡುವ ನಗೆಯಂತೆ ಮುದ್ದಾಗಿರಬೇಕು ಮಾತು.

ನೀನು ನನ್ನ ಹಿಂದೆ ದುಡಿದೂ ದುಡಿದೂ ಸೋತಿರುವಾಗ, ಅಮ್ಮ ಹೊತ್ತಿಗೆ ಸರಿಯಾಗಿ ಬುತ್ತಿಯನ್ನು ತಂದು ನಿನ್ನನ್ನು ನೆಳಲಿನಲ್ಲಿ ಕೂಡಿಸಿ ತಿನ್ನು ಎಂದು ಹೇಳುತ್ತಾಳಲ್ಲ, ಆ ಆದರವಿರಬೇಕು ನುಡಿಗಳಲ್ಲಿ.

ನಾವು ಬೆಳೆ ಬೆಳೆದು ಕೊಡುವ 'ಮಲ್ಲಿಗೆ ಗುಲಾಬಿಗಳ ಬಣ್ಣವೆಲ್ಲಿಹುದಲ್ಲಿ, ಸಂಪಿಗೆಯ ಜಾಜಿಯಾ ಪರಿಮಳದ ಎಡೆಯಲ್ಲಿ, ಬತ್ತದಾಸಸಿ ಗಾಳಿಯೊಳಗಾಡುತಿರುವಲ್ಲಿ, ಕಿತ್ತೀಳೆ ದಾಳಿಂಬ ಮಾಗುತಿರುವಲ್ಲಿ,' 'ವನದೇವಿ ನಗೆವೆರೆದು ನಲಿವಲ್ಲಿ' ವನದೇವಿಯರಾಗಿ ಓಡಾಡುವ ನವಯುವತಿಯರ ಉಲ್ಲಾಸವಿರಬೇಕು ಆಡಿದ ಮಾತುಗಳಲ್ಲಿ.

ಸಹಿಸಲಾರೆ ಒಡೆಯ, ಮಾರಮ್ಮನ ಹಣೆಯ ಕೆರಳಿದ ಕೆಂಪು ಎದ್ದುಬಂದು ಕಣ್ಣಿಗೆ ಬಡಿದಹಾಗೆ ಬಡಿಯುತ್ತದೆ ಇತರರು ನಿನಗೆ ಹೇಳುವ ಮಾತುಗಳು; ಹಾವು ಕಂಡರೆ ಹಲವು ದೊಣ್ಣೆಗಳು ಹೊಡೆಯುವ ಹಾಗೆ ಹೊಡೆಯುತ್ತವೆ ಆ ಮಾತುಗಳು. ಬೇಡಪ್ಪ. ಕನ್ನಡ ನುಡಿ ಬೆಣ್ಣೆಯಂತೆ ಮೃದು: ನಿನಗೆ ಮಾತ್ರ ಕಠಿನವಾಗಬೇಕೆ!

ನಿಲ್ಲೊಮ್ಮೆ, ನಗು ಒಮ್ಮೆ. ಇಗೊ, ನಿನ್ನನ್ನು ನಾನು ತಿರುಗಿ ನೋಡುತ್ತಿರುವೆ.

ನಿನ್ನನ್ನು ಇನ್ನು ಮೇಲೆ ಮಾತನಾಡಿಸಬೇಕಾದರೆ, ನಿನ್ನ ಸೊಸೆಯೂ ಮಗಳೂ ಜಾಗರಣೆ ಮಾಡಿ, ರಾಗಿ ಬೀಸಿ, ರಾಗಿಹಿಟ್ಟು ಜೇಯಿಸಿ, ತೊಳಸಿ, ಮುದ್ದೆ ಮಾಡಿಡುತ್ತಾರೆ ನೋಡು, ಹಾಗೆ— ಗುಣಾಕಾರ ಹಾಕಿ, ಪೋಣಿಸಿ, ಮಾತು ಮೆತುವಾಗಿರಬೇಕು, ಅರ್ಥ ಅನರ್ಥವಾಗಬಾರದು–ಎಂದು ಎಚ್ಚರಿಕೆಯಿಂದ ಮಾತನಾಡಿಸುವಂತೆ ಅವರಿಗೆಲ್ಲಾ ಹೇಳುತ್ತೇನೆ, ಇರಲಿ.

—'ನೇಗಿಲು'

---

### ಕರ್ನಾಟಕ ಸಂಘ: ಮಲ್ಲೇಶ್ವರ

ಬೆಂಗಳೂರು ಮಲ್ಲೇಶ್ವರದ ಶ್ರೀರಾಮ ಭಜನ ಸಭೆಯವರು ೮-೪-೪೦ರಿಂದ ಜರುಗಿಸಲಿರುವ ಶ್ರೀರಾಮೋತ್ಸವದ ಸಮಯದಲ್ಲಿ ಪ್ರತಿದಿನವೂ ಸಂಜೆ ೬ ಗಂಟೆಯಿಂದ ಸುಮಾರು ಮುಕ್ಕಾಲು ಗಂಟೆ ಹೊತ್ತು ರಾಮಾಯಣದ ವಿಷಯವಾಗಿ ಕನ್ನಡದಲ್ಲಿ ಭಾಷಣಗಳನ್ನು ಏರ್ಪಡಿಸಲು ಈ ಸಂಘಕ್ಕೆ ಅವಕಾಶ ಕೊಟ್ಟಿರುತ್ತಾರೆ. ಇದರಂತೆ ೮-೪-೪೦ರಿಂದ ೯ ದಿನಗಳು ತಜ್ಞರಿಂದ ಭಾಷಣಗಳನ್ನು ಮಾಡಿಸಲು ಸಂಘದವರು ಏರ್ಪಾಡು ಮಾಡಿದ್ದಾರೆ. ಕಾರ್ಯಕ್ರಮವನ್ನೂ ವಿಷಯಗಳನ್ನೂ ಭಾಷಣಕಾರರ ಹೆಸರುಗಳನ್ನೂ ಮುಂದೆ ತಿಳಿಸಲಾಗುತ್ತದೆ. ಈ ಭಾಷಣಗಳು ಮಲ್ಲೇಶ್ವರದ ಶ್ರೀರಾಮ ಭಜನ ಸಭೆಯ ಮಂದಿರದಲ್ಲಿ ನಡೆಯುವುವು.

(ಮೊದಲನೆಯ ಪುಟದಿಂದ)

ತೇಜಸ್ಸು, ವೈಭವ ಅಖಂಡವಾಗಿ ಬೆಳೆಯಲಿ. ಆ ಕನ್ನಡ ದೇವಿಯ ಗುಡಿಯಲ್ಲಿಯ ನಂದಾದೀಪದಿಂದ ಕನ್ನಡಿಗರ ಅಜ್ಞಾನ ಅಳಿದು ನಮ್ಮ ನಾಡು ಜನತೆ ಹಿರಿದಾಗಿ ಮೆರೆಯಿರಿ. ಕನ್ನಡ ದೇವಿಗೆ ಜಯವಾಗಲಿ. ಉದಯವಾದ ಕನ್ನಡ ಎದ್ದು ನಿಂತು ತನ್ನ ತಲೆಯನ್ನು ಎಲ್ಲರ ಕಡೆಗೂ ಎತ್ತಲಿ. ಕನ್ನಡಿಗರ ದೇವಾಲಯದಲ್ಲಿಯ ನಂದಾದೀಪದ ಪ್ರಭೆ ಎಲ್ಲ ಕಡೆಗೂ ಹಬ್ಬಲಿ. ಕನ್ನಡ ಬಾಳಲಿ; ಗೆಲ್ಲಲಿ.

[ಶ್ರೀ. ಮಾಳವಾಡರು ಕನ್ನಡಿಗರ ದೇವಾಲಯವನ್ನು ಅಂದರೆ ಕನ್ನಡಮ್ಮನ ಗುಡಿಯನ್ನು ಕುರಿತು ಹೇಳುವಾಗ ಅಖಿಲ ಕರ್ನಾಟಕ ಸಂಸ್ಥೆಯಾದ ಪರಿಷತ್ತನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿದ್ದಾರೆಂದು ಬೇರೆ ಹೇಳಬೇಕಾಗಿಲ್ಲ. **ಪರಿಷತ್ತೆ ಕನ್ನಡಮ್ಮನ ಗುಡಿ** ಎಂಬ ಅಂಶವನ್ನು ನಾವು ಮತ್ತೊಮ್ಮೆ ಎಲ್ಲರ ಗಮನಕ್ಕೂ ತರಬಯಸುತ್ತೇವೆ. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಇದನ್ನು ಆಗಿಂದಾಗ್ಗೆ ಹೇಳುತ್ತ ಬಂದಿದ್ದಾರೆ. —ಸಂ.]

## ಪರಿಷತ್ತಿನ ಸುದ್ದಿ

### ‘ಶ್ರೀ’ಯವರ ಪ್ರವಾಸ

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಏಪ್ರಿಲ್ ತಿಂಗಳ ಮೊದಲನೆಯ ತಾರೀಖಿನಿಂದ ಕನ್ನಡನಾಡಿನಲ್ಲಿ ಪ್ರವಾಸಮಾಡುವರು. ಉತ್ತರ ಮತ್ತು ದಕ್ಷಿಣ ಕರ್ನಾಟಕ ಪ್ರಾಂತ ಸಮಿತಿಗಳು ಅವರ ಪ್ರವಾಸದಲ್ಲಿ ನೆರವಾಗುವುವು.

**ಕಾರ್ಯಕ್ರಮ:** ಸಭೆಯಲ್ಲಿ ಉಪನ್ಯಾಸಗಳು; ಕನ್ನಡದ ಕೆಲಸಗಾರರೊಡನೆ ಮಾತುಕತೆ; ಪರಿಷತ್ತಿನ ರಜತ ಮಹೋತ್ಸವದ ಏರ್ಪಾಟು.

**ಉತ್ತರ ಕರ್ನಾಟಕ ಪ್ರಾಂತ**

| ತಾರೀಖು | | ಊರು |
|---|---|---|
| ಏಪ್ರಿಲ್ ೧ | .... | ಅನಂತಪುರ |
| ೨ | .... | ಆದವಾನಿ |
| ೩ | .... | ಬಳ್ಳಾರಿ, ಸೊಂಡೂರು |
| ೪ | .... | ಗದಗು |
| ೫ | .... | ಧಾರವಾಡ |
| ೬–೯ | .... | ಮುಂಬಯಿ |
| ೧೦ | .... | ಪುಣೆ |
| ೧೧ | .... | ಬೆಳಗಾಂವಿ |
| ೧೨ | .... | ಚಿಕ್ಕೋಡಿ, ನಿಪ್ಪಾಣಿ |
| ೧೩–೧೪ | .... | ಬೈಲಹೊಂಗಲ (ವಸಂತೋತ್ಸವ) |
| ೧೫–೧೬ | .... | ಹುಬ್ಬಳ್ಳಿ (ವಸಂತೋತ್ಸವ) |
| ೧೭ | .... | ಹಾನಗಲ್ಲು (ವಸಂತೋತ್ಸವ) |
| ೧೮ | .... | ರಾಣಿಬೆನ್ನೂರು |
| ೧೯ | .... | ಹಾವೇರಿ |
| ೨೦ | .... | ಕುಂದಗೋಳ |
| ೨೧–೨೩ | .... | ಸೊಲ್ಲಾಪುರ (ಜಿಲ್ಲಾ ಸಾಹಿತ್ಯ ಸಮ್ಮೇಳನ) |
| ೨೪ | .... | ಬಿಜಾಪುರ, ಬಾಗಲಕೋಟೆ |
| ೨೫–೨೭ | .... | ಉತ್ತರ ಸಂಸ್ಥಾನಗಳು |
| ೨೮–೨೯ | .... | ಕಾರವಾರ ಜಿಲ್ಲೆ |

**ಆರ್. ಬಿ. ಪೋತ್ದಾರರು,**
ಕಾರ್ಯದರ್ಶಿ,
ಉತ್ತರ ಕರ್ನಾಟಕ ಪ್ರಾಂತ ಸಮಿತಿ.

**ದಕ್ಷಿಣ ಕರ್ನಾಟಕ ಪ್ರಾಂತ**

| | | |
|---|---|---|
| ೩೦–ಮೇ ೧–೨ | .... | ಮೂಡಬಿದರೆ (ವಸಂತೋತ್ಸವ) |
| ೩–೭ | .... | ಮಂಗಳೂರು, ಕೊಡಗು ಪ್ರಾಂತ |
| ೯ | ... | ಮೈಸೂರು |

**ಕೆ. ಎಸ್. ಕಾರಂತರು,**
ಕಾರ್ಯದರ್ಶಿ,
ದಕ್ಷಿಣ ಕರ್ನಾಟಕ ಪ್ರಾಂತ ಸಮಿತಿ.

### ಭಾಷಣ

ಧಾರವಾಡದ ಸುಪ್ರಸಿದ್ಧ ಸಂಶೋಧಕರಾದ ಶ್ರೀ ನಾ. ಶ್ರೀ. ರಾಜಪುರೋಹಿತರು ಕಳೆದ ಬುಧವಾರ ಸಂಜೆ ಪರಿಷನ್ಮಂದಿರದಲ್ಲಿ ‘ಚಾಲುಕ್ಯರು’ ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

**ವಸಂತ ಸಾಹಿತ್ಯೋತ್ಸವ:**

ದಕ್ಷಿಣ ಕರ್ನಾಟಕ ಪ್ರಾಂತಸಮಿತಿಯ ನೇತೃತ್ವದಲ್ಲಿ ಮಡಿಕೇರಿಯ ಕರ್ನಾಟಕ ಸಂಘದ ಆಶ್ರಯದಲ್ಲಿ ಮೇಲ್ಕಂಡ ಉತ್ಸವ ಕಳೆದ ೨೨, ೨೩, ೨೪ನೆಯ ತಾರೀಖುಗಳಲ್ಲಿ ಅತ್ಯಂತ ಯಶಸ್ವಿಯಾಗಿ ನಡೆಯಿತು. ಸಂಘದ ಅಧ್ಯಕ್ಷರಾದ ಶ್ರೀ ಮುದ್ದಪ್ಪನವರು ಮೂರು ದಿವಸಗಳೂ ಉತ್ಸವದ ಅಧ್ಯಕ್ಷತೆ ವಹಿಸಿ, ಕಾರ್ಯಕ್ರಮಗಳನ್ನು ನಡಸಿಕೊಟ್ಟರು.

ಪರಿಷತ್ತಿನ ಮಾನ್ಯ ಪೋಷಕರೂ ಅಧ್ಯಕ್ಷರೂ ಆಗಿದ್ದ ಮೈಸೂರು ಶ್ರೀಮದ್ಯುವರಾಜರವರು ನಿಧನರಾದುದಕ್ಕಾಗಿ ಸಭೆಯಲ್ಲಿ ಸಂತಾಪಸೂಚಕ ನಿರ್ಣಯವಾಯಿತು.

೨೨ನೆಯ ಶುಕ್ರವಾರ ಶ್ರೀ ಕೆ. ಶಂಕರಭಟ್ಟರು ‘ಕಾಳಿದಾಸನ ಶಾಕುಂತಳ’ ನಾಟಕವನ್ನು ಕುರಿತು ಉಪನ್ಯಾಸ ಮಾಡಿದರು. ಶ್ರೀ ಕೃಷ್ಣಗಿರಿ ಕೃಷ್ಣರಾಯರು ಭಾರತ ವಾಚನ ಮಾಡಿದರು.

೨೩ನೆಯ ತಾರೀಖು ಬೆಳಗ್ಗೆ ಶ್ರೀ ಜಿ. ಪಿ. ರಾಜರತ್ನಂ ಅವರು ‘ಸಾಹಿತ್ಯ – ವಿಡಂಬನ’ ಎಂಬ ವಿಷಯವಾಗಿಯೂ, ಶ್ರೀ ಕಾರಂತರು ‘ಗ್ರಾಮ ಜೀವನದ ಆರ್ಥಿಕ ಪ್ರಶ್ನೆಗಳು’ ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಆಮೇಲೆ ಮಧ್ಯಾಹ್ನ ಮಹಿಳೆಯರಿಗಾಗಿ ಶ್ರೀ ಕೆ. ಕೃಷ್ಣರಾಯರು ಕುಮಾರವ್ಯಾಸ ಭಾರತ ವಾಚನ ಮಾಡಿದರು. ಸಂಜೆ ಶ್ರೀ ಮುಕುಂದರಾಯರು ‘ವಿದ್ಯಾಭ್ಯಾಸ ಪದ್ಧತಿಯ ಪುನರ್ವಿರಚನೆ’ ಎಂಬ ವಿಷಯವಾಗಿಯೂ, ಶ್ರೀ ವಿ. ಸೀತಾರಾಮಯ್ಯನವರು ‘ಸಂಸ್ಕೃತಿಯಲ್ಲಿ ಕಲೆ ಸಾಹಿತ್ಯಗಳ ಕೆಲಸ’ ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಶ್ರೀ ಕೋ. ಶಿವರಾಮ ಕಾರಂತರು ತಮ್ಮ ‘ನಾಟಕ ಎಂಬ ನಾಟಕ’ವನ್ನು ಓದಿದರು.

೨೪ನೆಯ ತಾರೀಖು ಬೆಳಗ್ಗೆ ಶ್ರೀ ಕೆ. ಗೋಪಾಲ ಕೃಷ್ಣರಾಯರು “ಕನ್ನಡ ಸಣ್ಣ ಕತೆಗಳೂ ಇಂದಿನ ಸಮಾಜವೂ’ ಎಂಬ ವಿಷಯವಾಗಿಯೂ, ಶ್ರೀ ಕೆ. ವಿ. ರಾಘವಾಚಾರ್ಯರು “ಗ್ರೀಕ್ ನಾಟಕ ಪದ್ಧತಿ’ ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಅನಂತರ ಉಪಸಂಹಾರ ಭಾಷಣವಾಗಿ ಉತ್ಸವ ಕೊನೆಗಂಡಿತು.

**ಬೆಳಗಾಂವಿ ಜಿಲ್ಲಾ ಸಾಹಿತ್ಯ ಸಮಿತಿ**

ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಆಶ್ರಯದಲ್ಲಿ ಮೇಲ್ಕಂಡ ಸಮಿತಿ ಸ್ಥಾಪಿತವಾದುದನ್ನು ಕಳೆದ ವಾರ ತಿಳಿಸಲಾಗಿತ್ತಷ್ಟೆ. ಆ ಸಮಿತಿಯ ಸದಸ್ಯರು ಯಾರೆಂದರೆ:

ಶ್ರೀಗಳಾದ (೧) ಎಂ. ಪಿ. ವಾಲಿಯವರು (ಅಧ್ಯಕ್ಷರು), (೨) ಬೆಟಗೇರಿ ಭೀಮರಾಯರು (ಉಪಾಧ್ಯಕ್ಷರು), (೩) ಪ್ಯಾಟಿ ಶಾಮರಾಯರು (ಗೌರವ ಕಾರ್ಯದರ್ಶಿಗಳು), (೪) ಮುತಾಲಿಕ ವೆಂಕಟರಾಯರು, (೫) ಶಿವಲಿಂಗಪ್ಪ ಪ್ರಭು ದೇಸಾಯಿ ರುದ್ರಾಪುರ ಅವರು, (೬) ಡಾ॥ ನಂದಿಮಠ ಅವರು, (೭) ಪ್ರೊ॥ ವಿ. ಜಿ. ಕುಲಕರ್ಣಿಯವರು, (೮) ಪ್ರೊ॥ ಎಸ್. ಎಸ್. ಬಸವನಾಳ ಅವರು, (೯) ಜಿ. ಬಿ. ಸಾತ್ವಿಕ ಅವರು, (೧೦) ಜೋಷಿ ಅರವಿಂದರಾಯರು, (೧೧) ಕೋಟ ಶ್ರೀನಿವಾಸರಾಯರು, (೧೨) ಕೆ. ಡಿ. ಸಂಗೋರಾಮ ಅವರು, (೧೩) ಚ. ಚ. ಅಬಕಾರ ಅವರು, (೧೪) ಮಾಧವ ತಿರುಮಲರಾವ್ ದೇಶಪಾಂಡೆ ಹೊನ್ನೂರು ಅವರು, (೧೫) ಡಿ. ಎಸ್. ಕರ್ಕಿ ಮಾಸ್ತರ ಅವರು.

## ಕನ್ನಡ ಸುದ್ದಿ

**ಸಾಹಿತ್ಯೋತ್ಸವ: ಕೋಲಾರ**

ಬೆಂಗಳೂರು ಕರ್ನಾಟಕ ಏಕೀಕರಣ ಸಂಘದ ಅಧ್ಯಕ್ಷರಾದ ಶ್ರೀ ಬೆನಗಲ್ ರಾಮರಾಯರವರು ಕಳೆದ ವಾರ ಕೋಲಾರದಲ್ಲಿ ನಡೆದ ಜಾತ್ರೆಯ ಸಮಯದಲ್ಲಿ ಏರ್ಪಡಿಸಿದ್ದ ಕನ್ನಡ ಉತ್ಸವದ ಸ್ವಾಗತ ಸಮಿತಿಯವರಿಂದ ಆಹ್ವಾನಿತರಾಗಿ ಉಪನ್ಯಾಸ ಮಾಡಲು ಹೋಗಿದ್ದರು. ಅಲ್ಲಿ ೧೯–೩–೪೦ರ ಸಂಜೆ ಸಂಘದ ಕಾರ್ಯದರ್ಶಿ ಶ್ರೀ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕೋಲಾರದ ಕನ್ನಡ ಉತ್ಸವದ ಆಶ್ರಯದಲ್ಲಿ ಕರ್ನಾಟಕ ಏಕೀಕರಣದ ವಿಷಯವಾಗಿ ಭಾಷಣ ಮಾಡಿದರು. ಶ್ರೀ ಬೆನಗಲ್ ರಾಮರಾಯರವರು ಅಧ್ಯಕ್ಷತೆ ವಹಿಸಿದ್ದರು.

ಮೇಲ್ಕಂಡ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಈ ತಿಂಗಳು ೨೨ನೆಯ ಶುಕ್ರವಾರ ಬೆಳಗ್ಗೆ ಗಮಕವಿದ್ವಾನ್ ಶ್ರೀ ಕೆ. ಜಿ. ಸಂಪತ್ಕುಮಾರಾಚಾರ್, ಬಿ.ಎ., ಬಿ.ಟಿ. ಅವರು ತಕ್ಕ ಪಕ್ಕವಾದ್ಯಗಳೊಡನೆ ‘ಪುರಂದರ ದಾಸರ’ ಕೀರ್ತನೆಗಳನ್ನು ಹಾಡಿದರು. ಆ ದಿನ ಸಂಜೆ ಅದೇ ಸ್ಥಳದಲ್ಲಿ ಗಮಕ ಕಲೆಯ ವಿಷಯವನ್ನು ಕುರಿತು ಭಾಷಣಮಾಡಿ, ಗದುಗಿನ ಭಾರತದಿಂದ “ಕುಂತೀ ಕರ್ಣ ಸಂವಾದ” ಎಂಬ ಭಾಗವನ್ನು ಸುಶ್ರಾವ್ಯವಾಗಿ ವಾಚನ ಮಾಡಿದರು.

ಸಾಹಿತ್ಯೋತ್ಸವದ ಇತರ ಕಾರ್ಯಕ್ರಮಗಳೆಲ್ಲಾ ಸಾಂಗವಾಗಿ ನಡೆದು, ೨೩ನೆಯ ಶನಿವಾರ ಶ್ರೀ ಜಿ. ಸುಂದರರಾಯರ ಅಧ್ಯಕ್ಷತೆಯಲ್ಲಿ ಉತ್ಸವ ಮುಗಿಯಿತು. ಅಧ್ಯಕ್ಷರು ತಮ್ಮ ಮುಕ್ತಾಯ ಭಾಷಣದಲ್ಲಿ “ಭಾರತೀಯರೂ ಮುಖ್ಯವಾಗಿ ಕನ್ನಡಿಗರೂ ಮುಂದಕ್ಕೆ ಬರಬೇಕಾದರೆ ಸಂತೋಷದ ಉಪಾಸನೆ ಮಾಡಬೇಕು. ಆ ಸಂತೋಷವನ್ನು ನೀಡಲು ಸಾಹಿತ್ಯದಂತಹ ವಸ್ತು ಬೇರೊಂದಿಲ್ಲ” ಎಂದರು.

೩೫–೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ




ಸಂಪುಟ ೨
ಸಂಚಿಕೆ ೨೪

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಏಪ್ರಿಲ್ ೫, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ದರ್ಶನಗಳು

ಶ್ರೀ ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ|| ೨೯-೩-೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

### ಸಾಂಖ್ಯ ಮತ್ತು ಯೋಗ

ಸಾಂಖ್ಯಮತ ಬಹಳ ಪುರಾತನವಾದದ್ದು. ವೇದಗಳಲ್ಲಿಯೂ ಸಾಂಖ್ಯಮತದ ಪ್ರಕ್ರಿಯೆಗಳು ಕೆಲವು ತೋರಿಬರುತ್ತವೆ. ಈ ದರ್ಶನವನ್ನು ಮೊದಲು ಸ್ಥಾಪಿಸಿದವರು ಕಪಿಲಮಹರ್ಷಿಗಳು ಎಂದು ಪ್ರತೀತಿ. ಇವರು **ಸಾಂಖ್ಯಸೂತ್ರ**ವೆಂಬ ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ವಿಜ್ಞಾನಭಿಕ್ಷುವೆಂಬ ವಿದ್ವಾಂಸನು ಮಾಡಿದ **ಸಾಂಖ್ಯ ಪ್ರವಚನ ಭಾಷ್ಯ** ಎಂಬ ವ್ಯಾಖ್ಯಾನ ಇದೆ. ಹಾಗೆಯೇ ಯೋಗದರ್ಶನದಲ್ಲಿ ಯೋಗ ಸೂತ್ರಗಳನ್ನು ಪತಂಜಲಿ ಮಹರ್ಷಿಗಳು ರಚಿಸಿದ್ದಾರೆ. ಇದಕ್ಕೆ ವ್ಯಾಸರು ಮಾಡಿದ ಭಾಷ್ಯವಿದೆ. ಎರಡು ದರ್ಶನಗಳನ್ನೂ ಒಟ್ಟಿ ಸೇರಿಸಿ ಸಾಂಖ್ಯಯೋಗವೆಂದು ವ್ಯವಹರಿಸುವುದು ರೂಢಿಯಾಗಿದೆ.

ಸಾಂಖ್ಯವೆಂಬುದು ಸಂಖ್ಯಾ ಎಂಬ ಶಬ್ದದಿಂದ ಉಂಟಾಗಿದೆ. ಪ್ರಕೃತಿ, ಮಹಾನ್ ಮುಂತಾದ ತತ್ತ್ವಗಳ ಸಂಖ್ಯೆಯನ್ನು ಗಮನದಲ್ಲಿಟ್ಟು ಸಾಂಖ್ಯವೆಂದು ಈ ದರ್ಶನಕ್ಕೆ ಹೆಸರಾಗಿದೆ ಎಂದು ಹೇಳುವುದು ಅವಿವೇಕದ ಮಾತು. ಸಂಖ್ಯಾ ಎಂಬ ಶಬ್ದಕ್ಕೆ ಜ್ಞಾನವೆಂದು ಅರ್ಥವಿರುವುದರಿಂದ ಪ್ರಕೃತಿ ಪುರುಷರ ವಿವೇಕವನ್ನು ತಿಳಿಸುವ ಈ ಶಾಸ್ತ್ರಕ್ಕೆ ಸಾಂಖ್ಯವೆಂದು ಹೆಸರಾಗಿದೆ—ಎಂದು ಸಹಜವಾಗಿ ಅಭಿಪ್ರಾಯಪಡಲಾಗಿದೆ. ಸಾಂಖ್ಯದರ್ಶನ ಬೌದ್ಧದರ್ಶನಕ್ಕೆ ಪ್ರತಿಕಕ್ಷಿ. ಬೌದ್ಧರು **'ಸರ್ವಂ ಶೂನ್ಯಂ'** ಎಂದು ವಾದಿಸಿದರೆ ಸಾಂಖ್ಯರು **'ಸರ್ವಂ ಸತ್ಯಂ'** ಎಂದು ವಾದಿಸುತ್ತಾರೆ. ಈ ಮತದ ಪ್ರಕಾರ ಎಲ್ಲಾ ಪದಾರ್ಥಗಳೂ ಯಾವಾಗಲೂ ಇವೆ. ತಮ್ಮ ಸ್ಥೂಲಾವಸ್ಥೆಯಲ್ಲಿ ಪದಾರ್ಥಗಳು ಕಾರ್ಯಕ್ಕೆ ಬರುತ್ತವೆ. ಆದರೆ ತಮ್ಮ ಸೂಕ್ಷ್ಮಾವಸ್ಥೆಯಲ್ಲಿ ನಮಗೆ ಗೋಚರವಾಗದಿದ್ದರೂ, ಕಾರ್ಯಕ್ಕೆ ಬಾರದಿದ್ದರೂ ತಮ್ಮ ಕಾರಣಗಳಲ್ಲಿ ಅಡಗಿರುತ್ತವೆ. ಉದಾಹರಣೆಗಾಗಿ – ಮಣ್ಣಿನಿಂದ ಮಡಕೆಯನ್ನು ಮಾಡುತ್ತೇವೆ. ಮಡಕೆಯಿದ್ದರೆ ನೀರು ತರಬಹುದು. ಮಣ್ಣಿನಲ್ಲಿ ಮಡಕೆಯಿದ್ದರೆ ಮಣ್ಣಿನಿಂದಲೇ ನೀರು ತರಬಹುದಾಗಿತ್ತು. ಆದರೆ ಹಾಗಾಗುವುದಿಲ್ಲ. ಆದ್ದರಿಂದ ಮಣ್ಣಿನಲ್ಲಿ ಇಲ್ಲದ ಒಂದು ಹೊಸ ಪದಾರ್ಥ ಆರಂಭವಾಗುತ್ತದೆ ಎಂದು ನ್ಯಾಯವೈಶೇಷಿಕರು ವಾದಿಸುತ್ತಾರೆ. ಆದರೆ ಸಾಂಖ್ಯದ ಪ್ರಕಾರ ಮಣ್ಣಿನಲ್ಲಿ ಸೂಕ್ಷ್ಮರೂಪವಾಗಿ ಮಡಕೆ ಕೂತಿದೆ. ಮಡಕೆಯಾಗುವ ಶಕ್ತಿ ಮಣ್ಣಿನಲ್ಲಿದೆ. ಮಣ್ಣನ್ನು ನೋಡಿದ ಕ್ಷಣ ಇದರಿಂದ ಮಡಕೆ ಮಾಡಿ ನೀರನ್ನು ತರಬಹುದು ಎಂದು ನಮಗನ್ನಿಸುತ್ತದೆ. ಮಣ್ಣೇ ಮಡಕೆಯಾಗಿ ಮಾರ್ಪಡುತ್ತದೆಯಾದ್ದರಿಂದ ಈ ವಾದವನ್ನು **ಸತ್ಕಾರ್ಯವಾದ** ಅಥವಾ **ಪರಿಣಾಮವಾದ** ಎಂದು ಹೇಳುತ್ತಾರೆ.

**ಪುರುಷ** ಮತ್ತು **ಪ್ರಕೃತಿ** ಎಂದು ಎರಡು ವಿಧವಾಗಿ ಪದಾರ್ಥಗಳನ್ನು ವಿಭಾಗಿಸಬಹುದು. ಆತ್ಮನನ್ನು ಈ ದರ್ಶನದಲ್ಲಿ **ಪುರುಷ** ಎನ್ನುತ್ತಾರೆ. ಪುರುಷನ ಸಂಖ್ಯೆ ಅನಂತ. ಪುರುಷನು ಚೈತನ್ಯಸ್ವರೂಪ. ಅವನು ಎಲ್ಲೆಲ್ಲಿಯೂ ವ್ಯಾಪಿಸಿ ವಿಭುವಾಗಿರುತ್ತಾನೆ. ಪ್ರಕೃತಿಯ ಸಂಬಂಧದಿಂದ ಸುಖದುಃಖಗಳನ್ನು ಅನುಭವಿಸುವ ಯೋಗ ಮಾತ್ರ ಪುರುಷನಿಗೆ ಇರುತ್ತದೆ. ಆದ್ದರಿಂದ ಅವನನ್ನು **ಭೋಕ್ತಾ** ಎನ್ನುತ್ತಾರೆ. ಪ್ರಕೃತಿಗೂ ಪುರುಷನಿಗೂ ನಿಜವಾಗಿ ಯಾವ ಸಂಬಂಧವೂ ಇಲ್ಲ. ಆದರೂ ಪ್ರಕೃತಿಯು ಪ್ರಪಂಚವಾಗಿ ಪರಿಣಮಿಸುತ್ತ ಪುರುಷನಿಗೆ ಭೋಗಸಾಮಗ್ರಿಗಳನ್ನು ಒದಗಿಸಿಕೊಡುತ್ತದೆ. ಪುರುಷನ ಭೋಗಕ್ಕಾಗಿ ಪ್ರಕೃತಿ ಪರಿಣಮಿಸುತ್ತದೆ.

ಪ್ರಕೃತಿ ಪುರುಷನನ್ನು ಆಕರ್ಷಿಸಿ ಬಂಧನದಲ್ಲಿಡುತ್ತದೆ. ಅದು ಅಚೇತನ ಪದಾರ್ಥ. ಅದಕ್ಕೆ ಜ್ಞಾನವಿಲ್ಲ. ಅದು ಸತ್ತ್ವ, ರಜಸ್ಸು ತಮಸ್ಸು ಎಂದು ಮೂರು ಗುಣಗಳೊಡನೆ ಕೂಡಿ ಇರುತ್ತದೆ. ಈ ಮೂರು ಗುಣಗಳೂ ಹಗ್ಗದಂತೆ ಹೆಣೆದುಕೊಂಡು ಸಮಭಾಗವಾಗಿ ಒಟ್ಟಿಗೆ ಇರುವುದಕ್ಕೆ **ಪ್ರಕೃತಿ**ಯೆಂದು ಹೆಸರು. ಪ್ರಕಾಶಕ್ಕೆ ಅನುಕೂಲವಾದದ್ದು ಸತ್ತ್ವಗುಣ. ಚಲನಕ್ಕೆ ಸಾಧನವಾದದ್ದು ರಜಸ್ಸು. ತಮಸ್ಸು ಅಜ್ಞಾನ, ಆಲಸ್ಯ ಮುಂತಾದುವನ್ನು ಉಂಟುಮಾಡುತ್ತದೆ. ಈ ಮೂರು ಗುಣಗಳೂ ಏಕಪ್ರಮಾಣದಲ್ಲಿ ಕೂಡಿರುವ ಅವಸ್ಥೆ ಪ್ರಕೃತಿಯಾಗುತ್ತದೆ. ಇವುಗಳಿಗೆ ಪ್ರಕೃತಿಯು ಆಶ್ರಯವಾದ ಧರ್ಮಿ ಎಂಬುದಾಗಿ ವೇದಾಂತಿಗಳು ಹೇಳುವುದನ್ನು ಸಾಂಖ್ಯರು ಒಪ್ಪುವುದಿಲ್ಲ.

ಸೃಷ್ಟಿ ಸಮಯದಲ್ಲಿ ಈ ಗುಣಗಳು ಸಮವಾಗಿರುವುದು ತಪ್ಪಿ, ಅವುಗಳಲ್ಲಿ ಹೆಚ್ಚು ಕಡಮೆ ತೋರುತ್ತದೆ. ಆಗ ಪ್ರಕೃತಿಯೊಳಗಡಗಿರುವ ಇತರ ತತ್ತ್ವಗಳು ಆವಿರ್ಭವಿಸುತ್ತವೆ. ಅವುಗಳಿಗೆ **ವಿಕೃತಿ** ಎಂದರೆ ಪ್ರಕೃತಿಯ ವಿಕಾರಗಳು ಎಂದು ಹೆಸರು. ಪ್ರಕೃತಿಯನ್ನೂ ಸೇರಿಸಿಕೊಂಡರೆ ಒಟ್ಟು ಇಪ್ಪತ್ತುನಾಲ್ಕು ತತ್ತ್ವಗಳು ಈ ದರ್ಶನದ ಪ್ರಕಾರ ಏರ್ಪಡುತ್ತವೆ. ಅವುಗಳ ಕ್ರಮ ಈ ರೀತಿಯಿದೆ.

ಪ್ರಕೃತಿ—ಮಹಾನ್—ಅಹಂಕಾರ—ಹನ್ನೊಂದು ಇಂದ್ರಿಯಗಳು—ಐದು ಭೂತಾದಿಗಳು ಮತ್ತು ಐದು ಭೂತಗಳು. ನಮಗೆ ಗೋಚರವಾಗುತ್ತ ಈ ಪ್ರಪಂಚದಲ್ಲಿರುವ ಪದಾರ್ಥಗಳೆಲ್ಲ ಪಂಚಭೂತಗಳಿಂದ ಉಂಟಾಗಿದೆ.

ಈ ದರ್ಶನದಲ್ಲಿ ಒಂದು ವಿಶೇಷಾಂಶ ಇದೆ. ಪುರುಷನಿಗೆ ಚೈತನ್ಯವೇ ಅಂದರೆ ಜ್ಞಾನವೇ ಸ್ವರೂಪ. ಅದಕ್ಕೂ ನಮ್ಮ ಅನುಭವದಲ್ಲಿ ಬರುವ ತಿಳುವಳಿಕೆಗೂ ಯಾವ ಸಂಬಂಧವೂ ಇಲ್ಲ. ಅಚೇತನವೂ

ಜಡವೂ ಆದ ಪ್ರಕೃತಿಯಿಂದ ಹುಟ್ಟಿದ ಬುದ್ಧಿತತ್ತ್ವವೂ ಅಚೇತನ. ಇದರಿಂದ ಪದಾರ್ಥಗಳ ಜ್ಞಾನವುಂಟಾಗುತ್ತದೆ. ಇದು ಆಶ್ಚರ್ಯವಾಗಿ ತೋರಿದರೂ ನಿಜವಾದದ್ದು. ಮರದ ಗೊಂಬೆಯೊಂದನ್ನು ಕನ್ನಡಿಯ ಮುಂದೆ ಇಟ್ಟರೆ ಕನ್ನಡಿಯಲ್ಲಿ ಗೊಂಬೆಯ ಬಿಂಬ ತೋರುತ್ತವೆ. ಹಾಗೆಯೇ ಬುದ್ಧಿಯೆಂಬ ಕನ್ನಡಿಯಲ್ಲಿ ಇತರ ಪದಾರ್ಥಗಳೂ ಪ್ರಕಾಶಿಸುತ್ತವೆ. ಗದ್ದೆಯಲ್ಲಿ ಹರಿಯುವ ನೀರು ಗದ್ದೆಯ ಆಕಾರ ವನ್ನು ತಾಳುವಂತೆ ಬುದ್ಧಿಯೂ ತಾನು ಗ್ರಹಿಸುವ ವಿಷಯದ ಆಕಾರ ವನ್ನು ತಾಳುತ್ತದೆ. ಈ ಆಕಾರಭೇದದಿಂದ ಪದಾರ್ಥಗಳ ಜ್ಞಾನ ಉಂಟಾಗುತ್ತದೆ.

ಪುರುಷನ ಬಂಧಕ್ಕೆ ಪ್ರಕೃತಿಯೇ ಕಾರಣ. ಪ್ರಕೃತಿಯಲ್ಲಿ ಬುದ್ಧಿತತ್ತ್ವ ಅಡಗಿದ್ದರೂ ಅದು ಜಡರೂಪವಾದ್ದರಿಂದ, ಬುದ್ಧಿಗಾಗಲಿ ಅಥವಾ ಅದರ ಮೂಲವಾದ ಪ್ರಕೃತಿಗಾಗಲಿ, ಅದು ಪುರುಷನ-ಭೋಗ ಕ್ಕಾಗಿ ಏರ್ಪಟ್ಟ ವಸ್ತು ಎಂಬ ಜ್ಞಾನವಿಲ್ಲ. ಅದರೂ ಪುರುಷನ ಸಾಮೀಪ್ಯದಿಂದ ಪ್ರಕೃತಿ ಪರಿಣಮಿಸುವುದಕ್ಕೆ ಮೊದಲುಮಾಡಿ, ಅದರ ಪರಿಣಾಮಗಳೆಲ್ಲ ಪುರುಷನಿಗೆ ಭೋಗಸಾಮಗ್ರಿಗಳಾಗುವುದರಿಂದ, ಹೇಗೋ ಒಂದು ರೀತಿಯಲ್ಲಿ, ಅಚೇತನವಾದರೂ, ಪ್ರಕೃತಿ ಸದಾ ಪುರುಷನಿಗಾಗಿಯೇ ದುಡಿಯುತ್ತದೆ ಎಂದು ಹೇಳಬಹುದು. ಪುರುಷನ ಭೋಗಗಳಲ್ಲಿ ದುಃಖವೇ ಬಹಳ ಹೆಚ್ಚಾಗಿರುವುದರಿಂದ ಸಂಸಾರ ದುಃಖರೂಪವಾದದ್ದು ಎಂದು ಹೇಳಬೇಕಾಗಿದೆ. ಆದರೂ ದೀರ್ಘ ವಾಗಿ ಆಲೋಚನೆ ಮಾಡಿದರೆ ಪುರುಷನಿಗೆ ಮೊದಲು ಭುಕ್ತಿಯನ್ನು ಒದಗಿಸಿಕೊಟ್ಟು ಅನಂತರ ಅವನಿಗೆ ವಿವೇಕವುಂಟಾಗುವಂತೆ ಮಾಡಿ ಅವನ ಮೋಕ್ಷವನ್ನು ಸಾಧಿಸಿಕೊಡುತ್ತದೆ. ಉಪದೇಶಮಾತ್ರದಿಂದ ಪುರುಷನಿಗೆ ಉಂಟಾಗುವ ವಿವೇಕ ಸಾಲದು. ಅದು, ನಮ್ಮಲ್ಲಿ ಆಗಾಗ್ಗೆ ತೋರಿಬರುವ ವಿರಕ್ತಿಯಂತೆ ಆಪಾತವಾದದ್ದಾಗಿ ನಮ್ಮಲ್ಲಿ ನೆಲಸುವುದಿಲ್ಲ. ದುಃಖವನ್ನು ಅನುಭವಿಸಿ ತನ್ಮೂಲಕ ಬರುವ ವಿರಕ್ತಿ ಉಪಯೋಗವಾಗುವಂತೆ ನಿಜವಾದ ವಿವೇಕ ಬಂದರೆ ಪ್ರಯೋಜನ ವುಂಟು. ಈ ವಿವೇಕ ಪ್ರಕೃತಿಯಿಂದುಂಟಾದ ಭೋಗಗಳನ್ನು ಅನು ಭವಿಸಿದವನಿಗೆ ಬರುವುದಾದ್ದರಿಂದ, ಬಂಧವನ್ನು ಕಲ್ಪಿಸುವುದರ ಮೂಲಕ ಪ್ರಕೃತಿ ಪುರುಷನಿಗೆ ಮುಕ್ತಿಯನ್ನು ಸಾಧಿಸಿಕೊಡುತ್ತದೆ ಎಂದು ಹೇಳಬಹುದು. ಈ ಮುಕ್ತಿಗೆ **ಕೈವಲ್ಯ**ವೆಂದು ಹೆಸರಾಗಿದೆ.

ಸಾಂಖ್ಯಮತದಲ್ಲಿ ದೇವರನ್ನು ಒಪ್ಪಿಲ್ಲ. ಪ್ರಪಂಚದ ಸೃಷ್ಟಿ ಮತ್ತು ಪ್ರಳಯ, ಹಾಗೆಯೇ ಪುರುಷನಿಗೆ ವಿವೇಕ, ಮೋಕ್ಷ ಇವು ಗಳನ್ನು ಉಂಟುಮಾಡುವುದಕ್ಕಾಗಿ ಜನರು ದೇವರನ್ನು ಒಪ್ಪುತ್ತಾರೆ. ಸಾಂಖ್ಯದ ಪ್ರಕಾರ ಪ್ರಕೃತಿ ಸೃಷ್ಟಿಕಾರ್ಯವನ್ನು ಕೈಗೊಂಡಿದೆ. ಅದೇ ಪುರುಷನ ಭೋಗಕ್ಕೂ ಮೋಕ್ಷಕ್ಕೂ ತಕ್ಕ ಏರ್ಪಾಟುಗಳನ್ನು ಅಚೇತನ ವಾಗಿದ್ದರೂ ಮಾಡುತ್ತದೆ. ಆದ್ದರಿಂದ ಪುರುಷನು ನಿಜವಾದ ವಿವೇಕವನ್ನು ಹೊಂದಿದಾಗ ತಾನಾಗಿಯೇ ತನಗೂ ಪ್ರಕೃತಿಗೂ ವಾಸ್ತವವಾಗಿ ಯಾವ ಸಂಬಂಧವೂ ಇಲ್ಲ ಎಂದು ತಿಳಿದು ಕೊಳ್ಳುತ್ತಾನೆ. ಆದ್ದರಿಂದ ಈ ದರ್ಶನದ ಪ್ರಕಾರ ದೇವರನ್ನು ಒಪ್ಪಿ ಮಾಡಬೇಕಾದ ಕೆಲಸ ಯಾವುದೂ ಇಲ್ಲ. ಪುರುಷನು ಚೈತನ್ಯ ಸ್ವರೂಪನಾದರೂ ಕೈವಲ್ಯಾವಸ್ಥೆಯಲ್ಲಿ ಅವನಿಗೆ ಜ್ಞಾನಾನುಭವ ಇಲ್ಲ. ಜ್ಞಾನಕ್ಕೆ ಬುದ್ಧಿಯೇ ಕಾರಣವಾದದ್ದರಿಂದಲೂ ಜಡವಾದ ಬುದ್ಧಿಗೂ ಪುರುಷನ ಚೈತನ್ಯಕ್ಕೂ ಸ್ವಲ್ಪವೂ ಸಂಬಂಧವಿಲ್ಲದ್ದರಿಂದಲೂ ಪುರುಷನ ಸ್ಥಿತಿ ಕೈವಲ್ಯದಲ್ಲಿ ಅತಿ ವಿಚಿತ್ರವಾಗಿರುತ್ತದೆ.

ಯೋಗದರ್ಶನದಲ್ಲಿಯೂ ಸಾಂಖ್ಯದಂತೆಯೇ ಪ್ರಕೃತಿ ಪುರುಷರ ಸ್ಥಿತಿಗತಿಗಳು ತೋರಿಬರುತ್ತವೆ. ಯೋಗದಲ್ಲಿ ಅನುಷ್ಠಾನಕ್ಕೆ ಮುಖ್ಯ ಗಮನವನ್ನು ಕೊಡಲಾಗಿದೆ. ಬಹಳ ಕಷ್ಟಪಟ್ಟು ಮನುಷ್ಯ ಜನ್ಮ ವೆತ್ತಿದವನಿಗೆ ಕೈವಲ್ಯ ಸಂಪಾದನೆಗೆ ಸಮಯ ಮತ್ತು ಸಹಾಯ ಸಿಕ್ಕದಿದ್ದರೆ ಅವನ ಜನ್ಮ ವ್ಯರ್ಥವಾಗುತ್ತದೆ. ಯೋಗಾಭ್ಯಾಸವನ್ನು ಮಾಡಿದರೆ ನಮ್ಮನ್ನು ಸುತ್ತುವರಿದ ಅಡಚಣೆಗಳೆಲ್ಲಾ ಹೋಗಿ ನಾವು ಸ್ವತಂತ್ರರಾಗಿರಬಹುದು. ಯೋಗವೇ ಉತ್ತಮವಾದ ಸಹಾಯ. ಆದ್ದರಿಂದ ಕೈವಲ್ಯವನ್ನಪೇಕ್ಷಿಸುವವರಿಗೆ ಆಗಿಂದಾಗ್ಗೆ ಯೋಗಾಭ್ಯಾಸ ವನ್ನು ಮಾಡಬೇಕೆಂದು ಋಷಿಗಳು ಉಪದೇಶಮಾಡುತ್ತಾರೆ. ಸ್ವೇಚ್ಛೆ ಯಾಗಿ ಹರಿಯುತ್ತಿರುವ ಮನಸ್ಸನ್ನು ತಡೆದು ಅಧೀನದಲ್ಲಿಡುವುದಕ್ಕೆ ಯೋಗವೆಂದು ಸಾಮಾನ್ಯವಾಗಿ ಹೆಸರು. **'ಯೋಗಃ ಚಿತ್ತವೃತ್ತಿ ನಿರೋಧಃ'** ಎಂಬುದಾಗಿ ಪತಂಜಲಿ ಮಹರ್ಷಿಗಳು ಸೂತ್ರವನ್ನು ಬರೆದಿದ್ದಾರೆ, ಯೋಗವು ಪುರುಷನಲ್ಲಿ ಒಂದು ವಿಧವಾದ ಸಾಮರ್ಥ್ಯ ವನ್ನು ಕೊಡುತ್ತದೆ. ಈ ಸಾಮರ್ಥ್ಯವನ್ನು ಎಂಟು ಅಂತಸ್ತುಗಳಲ್ಲಿ ಸಿಕ್ಷೇಪಮಾಡಲಾಗಿದೆ. ಇದಕ್ಕೆ **ಅಷ್ಟಾಂಗ ಯೋಗ**ವೆಂದು ಹೆಸರು:

**೧. ಯಮ:** ಇದಕ್ಕೆ ಅಧೀನದಲ್ಲಿ ಇಡುವಿಕೆ ಎಂದರ್ಥ. ಇದು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂದು ಐದು ವಿಧವಾಗಿದೆ. ಯಮವನ್ನು ನಾಸ್ತಿಕರಾದ ಜೈನರೂ ಬೌದ್ಧರೂ ಸಹ ಒಪ್ಪಿಕೊಂಡಿದ್ದಾರೆ.

**೨. ನಿಯಮ:** ಇದು ಎರಡನೆಯದು. ಇದರಲ್ಲಿಯೂ ಐದು ವಿಧಗಳಿವೆ. ಶೌಚ – ಸಂತೋಷ – ತಪಸ್ಸು – ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನ. ಶರೀರದಲ್ಲಿ, ನುಡಿಯಲ್ಲಿ ಮತ್ತು ನಡೆಯಲ್ಲಿ ನಿರ್ಮಲವಾಗಿ ಇದ್ದರೆ ಶೌಚ ಅಥವಾ ಶುಚಿತ್ವ ಸಿದ್ಧಿಸುತ್ತದೆ. ಸದಾ ನಾವು ಸಂತೋಷಚಿತ್ತರಾಗಿರಬೇಕು. ಹಾಗೆಯೇ ತಪಸ್ಸನ್ನು ಕೈಗೊಳ್ಳುತ್ತಿರಬೇಕು. ಗುರುಮುಖವಾಗಿ ನಮಗೆ ಸಂಬಂಧಪಟ್ಟ ವೇದಭಾಗಗಳನ್ನು ಓದುತ್ತಾ, ಅರ್ಥಮಾಡುತ್ತಾ, ಹೆಚ್ಚು ವಿಷಯ ಗಳನ್ನು ತಿಳಿದುಕೊಳ್ಳುವುದು ಸ್ವಾಧ್ಯಾಯವೆನ್ನಿಸಿಕೊಳ್ಳುತ್ತದೆ. ಈಶ್ವರ ಪ್ರಣಿಧಾನವೆಂದರೆ ದೇವರಲ್ಲಿ ಭಕ್ತಿಯಿಡುವುದು ಎಂದರ್ಥ.

**೩. ಆಸನ:** **'ಸ್ಥಿರಸುಖಮಾಸನಂ'.** ಯಾವುದಾದರೂ ಮಹತ್ತರವಾದ ಕಾರ್ಯವನ್ನು ನಾವು ಕೈಗೊಂಡರೆ ಅದು ವಿಘ್ನವಿಲ್ಲದೆ ನೆರವೇರುವುದು ಅತಿ ಕಷ್ಟ. ಜಪ ಮಾಡಬೇಕಾದರೆ ಯಾವುದಾದರೂ ಒಂದು ರೀತಿಯಲ್ಲಿ ಕುಳಿತು ಕೈಕಾಲುಗಳನ್ನು ಸ್ವಲ್ಪವೂ ಚಲಿಸದೆ ಜಪ ಮಾಡಿ ಮುಗಿಸಬೇಕು. ಹಾಗೆ ಏಕ ಪ್ರಕಾರವಾಗಿ ಕುಳಿತು ಕೊಳ್ಳದೆ ಹೋದರೆ ಮನಸ್ಸಿನ ಏಕಾಗ್ರತೆಗೆ ಅಡ್ಡಿಯುಂಟಾಗುತ್ತದೆ. ನಾವು ಇಂಥ ಒಂದು ರೀತಿಯಲ್ಲೇ ಕುಳಿತುಕೊಳ್ಳಬೇಕು ಎಂಬ ನಿಯಮ ವಿಲ್ಲ. ಯಾವ ವಿಧದಲ್ಲಿ ಕುಳಿತುಕೊಂಡರೆ ನಮಗೆ ಬಾಧೆ ಕೊಂಚವೂ ಇರುವುದಿಲ್ಲವೋ ಅದು ನಾವು ಉಪಯೋಗಿಸಬೇಕಾದ ಆಸನ.

**೪. ಪ್ರಾಣಾಯಾಮ:** ದೇಹದಲ್ಲಿ ಸಂಚರಿಸುವ ಗಾಳಿ ಯನ್ನು ಒಂದು ಕ್ರಮದಲ್ಲಿ ಇರಿಸುವಿಕೆ. ಇದು ರೇಚಕ, ಪೂರಕ, ಮತ್ತು ಕುಂಭಕ ಎಂದು ಮೂರು ವಿಧ. ಮೊದಲು ದೇಹದಲ್ಲಿರುವ ಕಶ್ಮಲವಾದ ಗಾಳಿಯನ್ನು ರೇಚಕಮಾರ್ಗದಿಂದ ದೇಹದಿಂದ ಹೊರಕ್ಕೆ ಕಳುಹಿಸುತ್ತೇವೆ. ಅನಂತರ ಶುಭ್ರವಾದ ಗಾಳಿಯನ್ನು ಪೂರಕದ ವಿಧಾನದಿಂದ ದೇಹದಲ್ಲಿ ತುಂಬಿಕೊಳ್ಳುತ್ತೇವೆ. ಅನಂತರ ಆ ಗಾಳಿ ಯನ್ನು ದೇಹದಲ್ಲಿಯೇ ನಿರ್ದಿಷ್ಟವಾದ ಕಾಲದ ವರೆಗೆ ಕುಂಭಕವೆಂಬ ವಿಧಾನದಿಂದ ಇಟ್ಟಿರುತ್ತೇವೆ. ಈ ವಿಧವಾಗಿ ಪ್ರಾಣಾಯಾಮವನ್ನು ಮಾಡಿ ದೇಹದಲ್ಲಿ ವಾಯುವಿನ ಸಂಚಾರಕ್ರಮವನ್ನು ಸರಿಪಡಿಸಿದರೆ ನಾವು ಅನೇಕ ಮಹತ್ಕಾರ್ಯಗಳನ್ನು ಸಾಧಿಸಬಹುದು.

**೫. ಪ್ರತ್ಯಾಹಾರ:** ನಮ್ಮಲ್ಲಿರುವ ಇಂದ್ರಿಯಗಳು ಯಾವಾ ಗಲೂ ಹೊರಮುಖವಾಗಿ ಹೋಗಿ ಪ್ರಕೃತಿಯನ್ನು ಅನುಭವಿಸುವುದಕ್ಕೆ ಸಹಾಯ ಮಾಡುತ್ತವೆ. ಇವುಗಳು ಹಾಗೆ ತಮಗೆ ತೋರಿದಂತೆ ಹೋಗು ವುದನ್ನು ತಡೆದು ಪುನಃ ಹಿಂದಕ್ಕೆ ಎಳೆದುಕೊಳ್ಳುವುದು ಪ್ರತ್ಯಾಹಾರ ಎಂಬ ಪ್ರಯತ್ನ.

**೬. ಧಾರಣ:** ಯಾವ ವಸ್ತು ನಮಗೆ ಪ್ರಕೃತವೋ ಅದನ್ನು ನಮ್ಮ ಮನಸ್ಸಿನ ಮುಂದೆ ಇಟ್ಟು ಅದರ ಮೇಲೆ ನಮ್ಮ ಮನಸ್ಸು ನಿಲ್ಲುವಂತೆ ಮಾಡುವುದು.

**೭. ಧ್ಯಾನ:** ನಮಗೆ ಬೇಕಾದ ವಸ್ತುವನ್ನು ಗ್ರಹಿಸಿದ ಮನಸ್ಸು ಚಂಚಲ ಸ್ವಭಾವದ್ದು. ಕೊಂಚ ಹೊತ್ತಾದ ಮೇಲೆ ಮನಸ್ಸು ಕದಲುತ್ತಾ ನಮ್ಮ ಕಾರ್ಯ ಸಿದ್ಧಿಸುವುದಿಲ್ಲ. ನಮ್ಮ ಕಾರ್ಯ ಸಿದ್ಧಿಸುವವರೆಗೂ ಮನಸ್ಸು ಚಲಿಸದೆ ಒಂದೇ ವಸ್ತುವಿನ ಮೇಲೆ ಇರುವುದು ಧ್ಯಾನವೆಂಬ ಯತ್ನದಿಂದ ಸಾಧ್ಯವಾಗುತ್ತದೆ.

**೮. ಸಮಾಧಿ:** ಕೊನೆಯದಾಗಿ ಸಮಾಧಿಯೆಂಬ ಅಂಗ ಎರಡು ಬಗೆಯಾಗಿದೆ. ಮೊದಲು ಸಂಪ್ರಜ್ಞಾತ ಸಮಾಧಿ. ಎಂದರೆ ನಾವು

ಯಾವ ವಸ್ತುವನ್ನು ಧ್ಯಾನಮಾಡುತ್ತೇನೆಯೋ ಅದೂ, ಹಾಗೆಯೇ ನಮಗೆ ಜ್ಞಾನವನ್ನುಂಟುಮಾಡುವ ಸಾಧನವೂ, ನಾವೂ ಸಹ ಏಕ ಕಾಲದಲ್ಲಿ ಜ್ಞಾನಕ್ಕೆ ಗೋಚರವಾಗುತ್ತೇವೆ. ಅಂದರೆ ಒಂದು ವಸ್ತುವನ್ನು ನಾವು ತಿಳಿದುಕೊಂಡಿದ್ದೇವೆಂದೂ ಆ ವಸ್ತುವನ್ನು ಈ ಸಾಧನದಿಂದ ತಿಳಿದುಕೊಂಡಿದ್ದೇವೆಂದೂ ಮತ್ತು ನಾವು ಇದನ್ನೆಲ್ಲಾ ತಿಳಿದುಕೊಂಡಿದ್ದೇವೆಂದೂ ಏಕಕಾಲವಲ್ಲಿಯೇ ನಮಗೆ ತೋರುತ್ತವೆ. ಇದರ ಅನಂತರ ನಮ್ಮನ್ನು ಮರೆತು ನಮಗೆ ಸಹಾಯವನ್ನು ನೀಡಿದ ಸಾಧನವನ್ನೂ ಮರೆತು, ಕೇವಲ ವಿಷಯ ಮಾತ್ರ ಹೊಳೆಯುತ್ತಿರುವಿಕೆಯು **ಅಸಂಪ್ರಜ್ಞಾತ** ಸಮಾಧಿಯಾಗುತ್ತದೆ. ಇಂಥಾ ಯೋಗವನ್ನು ಸಾಧಿಸಿದರೆ ಎಲ್ಲವನ್ನೂ ತಿಳಿದ ವಿವೇಕಿಗಳಾಗುತ್ತೇವೆ. ವಿವೇಕದಿಂದ ಕೈವಲ್ಯ ಲಭಿಸುತ್ತದೆ. ಯೋಗಾಭ್ಯಾಸಮಾಡಲು ಬೇಕಾದಷ್ಟು ಶಕ್ತಿಯಿಲ್ಲದವರು ದೇವರನ್ನು ಭಕ್ತಿಯಿಂದ ಕಾಣಬೇಕು. ಆಗ ದೇವರು ಕರುಣಿಸಿ ಹೆಚ್ಚು ಸಾಮರ್ಥ್ಯವನ್ನು ಕೊಡುತ್ತಾನೆ. ಹೀಗೆ ಶಕ್ತಿಯನ್ನು ಪಡೆದು ಅನಂತರ ಯೋಗವನ್ನು ಅಭ್ಯಾಸ ಮಾಡಿದರೆ ದುಃಖವನ್ನು ನಿವಾರಿಸಬಹುದು. ಯಾರಿಗೆ ಶಕ್ತಿಯಿದೆಯೆಂದು ತಿಳಿದಿದೆಯೋ ಅಂಥವರು ಈಶ್ವರನನ್ನು ಭಜಿಸಬೇಕಾಗಿಲ್ಲ. ಅಂದಮೇಲೆ ಈ ಅಲ್ಪಕಾರ್ಯಕ್ಕಾಗಿ ಈಶ್ವರನನ್ನು ಒಪ್ಪುವುದು ಸ್ವಾರಸ್ಯವಲ್ಲವೆಂದು ಭಾವಿಸಿ ಸಾಂಖ್ಯವಲ್ಲಿ ಅವನನ್ನು ಪೂರ್ಣವಾಗಿ ನಿರಾಕರಿಸಿದ್ದಾರೆ.

ಹೀಗೆ ಸಾಂಖ್ಯಯೋಗಗಳಿಂದ ಪ್ರಕೃತಿ ಪುರುಷರ ಸ್ವರೂಪವೂ ಯೋಗಾಭ್ಯಾಸದ ವೈಖರಿಯೂ ವಿಶದವಾಗುತ್ತದೆ. ಪ್ರಕೃತಿಯ ಸ್ವರೂಪ ಮತ್ತು ಪರಿಣಾಮಗಳ ವಿಚಾರವಾಗಿ ಈಗಿನ ವಿಜ್ಞಾನಿಗಳು ಭೌತಿಕ ಶಾಸ್ತ್ರದಲ್ಲಿ ಬಹಳ ಮುಖ್ಯವಾದ ವ್ಯಾಸಂಗಗಳನ್ನು ಮಾಡುತ್ತಿದ್ದಾರೆ. ಮೀಮಾಂಸಕರೂ, ವೇದಾಂತಿಗಳೂ ಸಹ ಅನೇಕವಾಗಿ ಪ್ರಕೃತಿ ವಿಮರ್ಶೆಯಲ್ಲಿ ಸಾಂಖ್ಯಮತವನ್ನು ಒಪ್ಪಿದ್ದಾರೆ. ಸಾಂಖ್ಯವು ನಾಸ್ತಿಕ ದರ್ಶನಗಳಂತೆ ಸ್ವಪ್ರವೃತ್ತಿಯಿಂದ ಕೈವಲ್ಯವನ್ನು ಹೊಂದಬೇಕೆಂದೂ ಆ ಪ್ರವೃತ್ತಿಗೆ ವಿವೇಕವೇ ಕಾರಣವೆಂದೂ ಸಾರುತ್ತದೆ. ನಾಸ್ತಿಕ ದರ್ಶನಗಳಲ್ಲಿರುವಂತೆಯೇ ಈ ದರ್ಶನವಲ್ಲಿಯೂ ಪುರುಷನಿಗೆ ಕೈವಲ್ಯದಲ್ಲಿ ಆನಂದವಿಲ್ಲ. ಪ್ರಪಂಚದಿಂದ ಬಂಧ ಸುಖ ದುಃಖ ಮುಂತಾದ ದೋಷಗಳು ಹೋಗಿ ಪುರುಷನು ಕೈವಲ್ಯದಲ್ಲಿ ಅಬಾಧಿತನಾಗಿರುತ್ತಾನೆ.

---

## ನನಗೆ ಆಶ್ಚರ್ಯವಾಗುತ್ತದೆ

ಬರೆದವರು: ಶ್ರೀ. ಎಸ್. ವಿ. ಶ್ರೀನಿವಾಸರಾವ್, ಬಿ.ಎ., ಬಿ.ಟಿ.

ನಮ್ಮ ಮೌಢ್ಯವನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ. ಇದನ್ನು ನೋಡಿ ನಗಬೇಕೆ, ಅಳಬೇಕೇ? 'ನೀನು ವಿಷಯವನ್ನೇನಾದರೂ ಬರಿ' ಎಂದು........ಸಾಹೇಬ ಹೇಳಿದ. 'ವ್ಯಾಕರಣದ ತಪ್ಪುಗಳಿಲ್ಲದೆ ಉತ್ತರವನ್ನು ಎರಡು ಪುಟದಷ್ಟು ಬರೆದರೆ ಸಾಕು. ನೀವೇನಾದರೂ ಬರೆದುಕೊಳ್ಳಿ; ಫಸ್ಟ್‌ಕ್ಲಾಸ್ ನಂಬರು ಬರುತ್ತದೆ' ಎಂದು ಪರೀಕ್ಷೆಯಾದ ಮೇಲೆ ಹುಡುಗರು ಹೇಳುತ್ತಿದ್ದುದು ನನ್ನ ಕಿವಿಗೆ ಬಿದ್ದಿತು. ಈಗ ಎಲ್ಲೆಲ್ಲೂ ಪರೀಕ್ಷೆಗಳು ನಡೆಯುತ್ತಿವೆ. ಈ ಮಾತನ್ನು ಹೇಳಿದ್ದು ಕಾಲೇಜಿನ ಹುಡುಗರು ಮತ್ತು ಇಂಗ್ಲಿಷಿನ ಪ್ರಶ್ನೆಪತ್ರಿಕೆಯ ವಿಚಾರವಾಗಿ. ಇಂಗ್ಲಿಷಿನವರು ಹಾಗೆ ಹೇಳುವುದು ಸಹಜ ತಾನೆ. ಹುಡುಗರು ಬರೆದಿರುವ ಭಾಷೆ ಮೊದಲು ಶುದ್ಧವಾಗಿದ್ದರೆ ಆಮೇಲೆ ವಿಷಯ ಸರಿಯೆ, ಸಾಕೇ, ಎಂದು ನೋಡಬಹುದು. ಭಾಷೆಯೇ ವ್ಯಾಕರಣ ಶುದ್ಧವಲ್ಲದಿರಲು ವಿಷಯವೇನಿದ್ದು ತಾನೆ ಪ್ರಯೋಜನ? ಅದರಲ್ಲಿಯೂ, ಇಂಗ್ಲಿಷಿನವರೇ ಪರೀಕ್ಷಕರಾಗಿರುವಾಗ ತಮ್ಮ ಇಂಗ್ಲಿಷ್ ಭಾಷೆಯನ್ನು ತಪ್ಪು ತಪ್ಪಾಗಿ ಬರೆದದ್ದನ್ನು ಓದಿದವಾಗಲೀ, ತಪ್ಪು ತಪ್ಪಾಗಿ ಮಾತನಾಡುವುದನ್ನು ಕೇಳಿದರಾಗಲೀ, ಅವರಿಗೆ ಕತ್ತಿಯಿಂದ ಇರಿದಂತಾಗುತ್ತದೆ. ಕನ್ನಡ ಗೊತ್ತಿಲ್ಲದ ತಮಿಳರು ಕನ್ನಡವನ್ನು ಮಾತನಾಡಿದ್ದು ಕಿವಿಯ ಮೇಲೆ ಬಿದ್ದರೆ ನಮಗೆ ಆಗುವಂತೆ.

ಆದರೆ ಇದು ಬಹು ಶೋಚನೀಯ ಸ್ಥಿತಿ. ನಮ್ಮ ಹುಡುಗರು ಇಂಗ್ಲಿಷನ್ನು ವ್ಯಾಸಂಗ ಮಾಡುವುದು ಎಷ್ಟು ವರ್ಷವೆಂದು ಲೆಖ್ಖ ಹಾಕಿ. ಮಾಧ್ಯಮಿಕ ಶಾಲೆಯಲ್ಲಿ ನಾಲ್ಕು ವರ್ಷಗಳು, ಹೈಸ್ಕೂಲಿನಲ್ಲಿ ಮೂರು ವರ್ಷಗಳು ಮತ್ತು ಕಾಲೇಜಿನಲ್ಲಿ ಸಾಮಾನ್ಯವಾಗಿ ನಾಲ್ಕು ವರ್ಷಗಳು. ಈ ಹನ್ನೊಂದು ವರ್ಷಗಳಲ್ಲಿಯೂ ಇಂಗ್ಲಿಷು ಪ್ರಥಮ ಭಾಷೆ. ಅದಕ್ಕೇ ಅಗ್ರಪೂಜೆ. ಪರೀಕ್ಷೆಯ ಪ್ರಾರಂಭದ ದಿನವೇ ಇಂಗ್ಲಿಷಿನ ಪ್ರಶ್ನೆಪತ್ರಿಕೆ. ಎಲ್ಲ ಪಾಠಗಳಿಗೂ ಒಂದು ಪ್ರಶ್ನೆಪತ್ರಿಕೆಯಾದರೆ ಇಂಗ್ಲಿಷಿಗೆ ಎರಡು; ಮಿಕ್ಕ ಪಾಠಗಳಿಗೆ ಎರಡು ಪ್ರಶ್ನೆಪತ್ರಿಕೆಗಳಾದಾಗ ಇಂಗ್ಲಿಷಿಗೆ ಮೂರು. ತೇರ್ಗಡೆಯಾಗಲು ಪಡೆಯಬೇಕಾದ ಕನಿಷ್ಠಾಂಕಗಳು ಎಲ್ಲ ಪಾಠಗಳಲ್ಲಿ ೩೦–೩೫ ಇದ್ದಲು, ಇಂಗ್ಲಿಷಿನಲ್ಲಿ ೪೦. ಸಾಧಾರಣವಾಗಿ ಶಾಲೆ ಮತ್ತು ಕಾಲೇಜುಗಳಲ್ಲಿ ವ್ಯವಹಾರ, ಮಾತುಕಥೆ ಎಲ್ಲವೂ ಇಂಗ್ಲಿಷಿನಲ್ಲಿ. ಮೆಮೊ, ನೋಟೀಸುಗಳ ಭಾಷೆ ಇಂಗ್ಲಿಷು. ಅಲ್ಲದೆ ಕಾಲೇಜಿನ ಎಲ್ಲ ಪಾಠಗಳ ಬೋಧನೆಯೂ ಇಂಗ್ಲಿಷಿನಲ್ಲಿ. ಹೀಗಿದ್ದರೂ, ನಮ್ಮ ಪೂರ್ವೀಕರು ಹನ್ನೆರಡು ವರ್ಷ ವ್ಯಾಸಂಗಮಾಡಿ ಚತುಶ್ಶಾಸ್ತ್ರ ಪಂಡಿತನಾಗಿದ್ದಾನೆ ಎಂದು ಹೇಳುವಂತೆ, ನಮ್ಮ ಬಾಲಕರು ಸುಮಾರು ಅಷ್ಟೇ ವರ್ಷ ವ್ಯಾಸಂಗಮಾಡಿ, ತಾವು ಪಾಂಡಿತ್ಯವನ್ನು ಸಂಪಾದಿಸಿದ ಭಾಷೆಯಲ್ಲಿ ಎರಡು ವಾಕ್ಯಗಳನ್ನು ಇಂಗ್ಲಿಷರು ಮೆಚ್ಚುವಂತೆ ಬರೆಯಲಾರರು! ತಾವು ಕೊಟ್ಟ ಪ್ರಶ್ನೆಗಳಿಗೆ ವ್ಯಾಕರಣ ಶುದ್ಧವಾದ – ಶೈಲಿಯ ವಿಶೇಷ ಗುಣಗಳು ಹಾಗಿರಲಿ – ಭಾಷೆಯಲ್ಲಿ ಎರಡು ಪುಟದಷ್ಟು **ಏನಾದರೂ** ವಿಷಯವನ್ನು ಬರೆದರೆ ಪರೀಕ್ಷಕರು ತೃಪ್ತಿ ಪಡೆಯುವ ಸ್ಥಿತಿಯಿದ್ದರೆ, ನಮ್ಮ ಶಿಕ್ಷಣ ಎಲ್ಲ ವಿಚಾರದಲ್ಲಿಯೂ ಸಮರ್ಪಕವಲ್ಲವೆಂದು ತೋರುತ್ತದೆ.

ದೇಶ ದಾಸ್ಯದಲ್ಲಿರುವುದು ಸುಶಿಕ್ಷಿತರೆಲ್ಲರಿಗೂ ಮನದಟ್ಟಾಗಿದೆ. ಆದುದರಿಂದಲೇ ಅದನ್ನು ನೀಗಬೇಕೆಂದು ಪ್ರಯತ್ನಗಳು ನಡೆಯುತ್ತಿವೆ. ಆದರೆ ಒಂದು ಹೊರಗಿನ ಭಾಷೆ ಯಾವ ಮನೋದೌರ್ಬಲ್ಯವನ್ನು ಹುಟ್ಟಿಸಿದೆಯೆಂದು ಅನೇಕರು ತಿಳಿದಿಲ್ಲ. ಒಂದು ವೇಳೆ ದೇಶದ ಸ್ವಾತಂತ್ರ್ಯವನ್ನು ಪಡೆಯುವುದು ನಿಧಾನವಾದರೂ ಚಿಂತೆಯಿಲ್ಲ; ನಮ್ಮ ನುಡಿಯ ಗೌರವ, ಪ್ರಾಮುಖ್ಯತೆಯನ್ನು ಉಳಿಸಿಕೊಳ್ಳುವುದು ತೀರ ಅಗತ್ಯಕಾರ್ಯ. ಅದರಿಂದ ಜನರ ಬಧ್ಧುಕು ನೆಟ್ಟಗಾದೀತು, ತುಂಬೀತು.

ಯಾವ ಭಾಷೆಯನ್ನು ಹನ್ನೆರಡು ವರ್ಷ ವ್ಯಾಸಂಗಮಾಡಿದೆವೋ ಆ ಭಾಷೆಯಲ್ಲಿ ನಮಗೆ ಬರವಣಿಗೆಯಂತೂ ಸಾಧ್ಯವೇ ಇಲ್ಲ. ಯಾವ ಭಾಷೆಯಲ್ಲಿ ನಾವು ಬರೆದು ಸಾಹಿತ್ಯ ನಿರ್ಮಾಣ ಮಾಡಬಹುದೋ ತಿಳಿವಳಿಕೆಯನ್ನು ಜನಸಾಮಾನ್ಯದಲ್ಲಿ ಹರಡಬಹುದೋ ಅಂತಹ ದೇಶಭಾಷೆಗೆ ಶಿಕ್ಷಣದಲ್ಲಿ ಸಾಕಾದಷ್ಟು ಗಮನವಿಲ್ಲ, ಪ್ರಾಶಸ್ತ್ಯವಿಲ್ಲ. ಹೀಗಾಗಿ ಕೈಗೆಟುಕುವ ಹಣ್ಣನ್ನು ಕಿತ್ತೆಸೆದು, ಕೈಗೆಟುಕದ ದೂರದ ಹಣ್ಣಿಗೆ ನೆಗೆಯುತ್ತ, ಬಿದ್ದು, ಮಣ್ಣುಮುಕ್ಕುವಂತೆ ನಗುಪಾಟಲಾಗಿದೆ ನಮ್ಮ ಶಿಕ್ಷಣ. ಬದುಕನ್ನು ತಿದ್ದುವುದು ಶಿಕ್ಷಣ. ಶಿಕ್ಷಣವೇ ಹೀಗಿರಲು ನಮ್ಮ ಬದುಕಿನ ವಿಚಾರವಾಗಿ ಹೇಳುವುದೇನಿದೆ? ನಮ್ಮ ಯುವಕರ ಎಷ್ಟು ಪ್ರಯತ್ನ, ಸಾಹಸ ಮತ್ತು ದೇಶದ ಸಂಪತ್ತು ಇದರಿಂದ ಪೋಲಾಗಿದೆಯೆಂದು ಊಹಿಸಿ.

'ಕಿಂದರಿ ಜೋಗಿ' ('The Pied Piper of Hamelin') ಪದ್ಯದಲ್ಲಿ ಇಲಿಗಳ ಕಾಟವನ್ನು ತಡೆಯಲಾರದ ಆ ಪುರನಿವಾಸಿಗಳು ಪುರದ ಅಧ್ಯಕ್ಷರಿಗೂ, ಸದಸ್ಯರಿಗೂ ಹಾಕಿದ ಪ್ರಶ್ನೆಯನ್ನು ನಮ್ಮ ದೇಶದ ಜನ ನಮ್ಮ ಶಾಲೆ ಕಾಲೇಜುಗಳಿಗೆ ಹಾಕಬಾರದೇಕೆ?

"Rouse up sirs! Give your brains
a racking
To find the remedy we are lacking,
Or, cure as fate, we'll send you
packing!"

### ಕನ್ನಡ ಕವಿ ಸೂಕ್ತಿ

(ನೃಪತುಂಗನು ಮೆಚ್ಚುವ ಕವಿ)

ಕುಱಿವಂತು ಪೆಱರ ಬಗೆಯಂ
ತೆಱದಿರೆ ಪೇೞ್ಗೞಪಲಾರ್ಪವಂ ಮಾತಱವಂ
ಕಿಱಿದಱೊಳೆ ಪಿರಿದುಮರ್ಥಮ
ನಱಪಲ್ ನೆಱೆವಾತನಾತನಿಂದಂ ನಿಪುಣಂ

ನುಡಿಯಂ ಛಂದದೊಳೊಂದಿರೆ
ತೊಡರ್ಚಲಱವಾತನಾತನಿಂದಂ ಜಾಣಂ
ಕಡೆಯದೆ ಮಹಾರ್ಥ ಕೃತಿಗಳ
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ

—ಕವಿರಾಜಮಾರ್ಗ I—೧೫, ೧೬



ಶುಕ್ರವಾರ, ಏಪ್ರಿಲ್ ೫, ೧೯೪೦

## ಕನ್ನಡ ಭಾಷೆಯ ಏಕೀಕರಣ

ಸಂಸ್ಕೃತಿಯ ದೃಷ್ಟಿಯಿಂದಲೂ ಭಾಷೆಯ ದೃಷ್ಟಿಯಿಂದಲೂ ಕನ್ನಡ ನಾಡು ಒಂದಾಗಬೇಕೆಂಬುದೇ ಪರಿಷತ್ತಿನ ಮತ್ತು ಕನ್ನಡ ಅಭಿಮಾನಿಗಳ ಹೆಗ್ಗುರಿ ಎಂಬುದನ್ನು ಪರಿಷತ್ತು ಆಗಿಂದಾಗ್ಗೆ ಒತ್ತಿ ಹೇಳುತ್ತಲೇ ಇದೆ. ಈಚೆಗೆ ಕೆಲವು ವರ್ಷಗಳಲ್ಲಿ ಈ ಗುರಿ ತಕ್ಕಮಟ್ಟಿಗೆ ಈಡೇರುತ್ತ ಬಂದಿರುವುದು ಸಂತೋಷದ ಸಂಗತಿ. ಇದಕ್ಕೆ ಪರಿಷತ್ತಿನ ವಾರ್ಷಿಕ ಸಮ್ಮೇಳನ ಮುಂತಾದ ಹಲವು ಏರ್ಪಾಟುಗಳೂ ಪ್ರಯತ್ನಗಳೂ ಬಹುಮಟ್ಟಿಗೆ ಕಾರಣವಾಗಿವೆಯೆಂದರೆ ಅತ್ಯುಕ್ತಿಯಾಗಲಾರದು. ಜೊತೆಗೆ, ವೃತ್ತಪತ್ರಿಕೆಗಳ ಸಂತತವಾದ ದುಡಿಮೆಯೂ, ಸಾಹಿತಿಗಳ ಗ್ರಂಥಪ್ರಕಟನೆ, ನಾಡ ಸಂಚಾರ ಮುಂತಾದ ಚಟುವಟಿಕೆಗಳೂ ಈ ಭಾಗದಲ್ಲಿ ವಿಶೇಷ ಸಹಕಾರಿಯಾಗಿವೆ. ಇಷ್ಟಾದರೂ, ನಾವು ಇನ್ನೂ ಗುರಿ ಮುಟ್ಟಿಲ್ಲವೆಂದೇ ಹೇಳಬೇಕು. ಗ್ರಂಥಗಳ, ವೃತ್ತಪತ್ರಿಕೆಗಳ ಬರವಣಿಗೆಯ ಭಾಷೆಯಲ್ಲಿ ಏಕರೂಪತೆಯ ಚಿಹ್ನೆಗಳೇನೋ ಕಂಡುಬರುತ್ತಿವೆ; ಆದರೂ, ಇನ್ನೂ ಪ್ರಾದೇಶಿಕ ವ್ಯತ್ಯಾಸಗಳೂ ವೈಲಕ್ಷಣ್ಯಗಳೂ ಎದ್ದು ಕಾಣುತ್ತಲೇ ಇವೆ. ಆಡುವ ನುಡಿಯಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿದ್ದರೆ ಹಾನಿಯಿಲ್ಲ; ಬರೆವ ನುಡಿಯಲ್ಲಿ ಏಕರೂಪತೆ ಇರಬೇಕಾದ್ದು ಅತ್ಯಾವಶ್ಯಕ.

ಬರೆವ ನುಡಿಯಲ್ಲಿ ಏಕರೂಪತೆಯನ್ನು ಸಾಧಿಸಲು ಕೈಕೊಳ್ಳಬೇಕಾದ ಅತ್ಯಂತ ಪರಿಣಾಮಕಾರಿಯಾದ ಸಾಧನವೆಂದರೆ ಕನ್ನಡ ನಾಡಿನಲ್ಲೆಲ್ಲ — ಕಡೆಯಪಕ್ಷ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಾದರೂ — ಒಂದೇ ಬಗೆಯ ಕನ್ನಡ ಪಠ್ಯ ಪುಸ್ತಕಗಳನ್ನು ಗೊತ್ತುಮಾಡುವುದು.

ಹಲವು ಪ್ರಾಂತಗಳಲ್ಲಿ ತಮತಮಗೆ ಸರಿಹೋಗುವಂತೆ ಪಠ್ಯ ಪುಸ್ತಕಗಳನ್ನು ಏರ್ಪಡಿಸಿಕೊಂಡಿದ್ದಾರೆ. ಈಚೆಗೆ ಮೈಸೂರು ಪ್ರಾಂತದ ರೀಡರುಗಳನ್ನು ಪರಿಷ್ಕರಿಸುವಾಗ ಕೆಲವು ಗೊತ್ತಾದ ಧ್ಯೇಯಗಳನ್ನಿಟ್ಟುಕೊಂಡು ಪರಿಷ್ಕರಿಸಿದಂತೆ ತೋರುತ್ತದೆ. ಅವುಗಳಲ್ಲಿ ಇಡಿಯ ಕನ್ನಡನಾಡಿನ ಇತಿಹಾಸ, ಕಲೆ, ಸಂಸ್ಕೃತಿ ಇವುಗಳಿಗೆ ಸಂಬಂಧಪಟ್ಟ ಪಾಠಗಳನ್ನು ಹೆಚ್ಚಾಗಿ ಸೇರಿಸಿದ್ದಾರೆ. ಮತ್ತು ಎಲ್ಲ ಪ್ರಾಂತಗಳ ಕವಿಗಳ ಕವಿತೆಗಳನ್ನೂ ಆಯ್ಕೆಮಾಡಿ ಹಾಕಿದ್ದಾರೆ. ಆದ್ದರಿಂದ ಹಿಂದಿದ್ದ ರೀಡರುಗಳಿಗಿಂತ ಈಗ ಇವು ಎಷ್ಟೋ ಮೇಲಾಗಿವೆ.

ಈಚೆಗೆ ಹೈದರಾಬಾದು ಸರ್ಕಾರದವರು ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಕನ್ನಡ ರೀಡರುಗಳನ್ನು ತಮ್ಮ ಸಂಸ್ಥಾನದ ಕನ್ನಡ ಭಾಗಗಳಲ್ಲಿ ಉಪಯೋಗಕ್ಕಾಗಿ ಅಂಗೀಕರಿಸಿರುತ್ತಾರೆಂದು ಕೇಳಿ ಸಂತೋಷಿಸುತ್ತೇವೆ.

ಈ ರೀಡರುಗಳನ್ನು ಆಧಾರವಾಗಿಟ್ಟುಕೊಂಡು ಎಲ್ಲ ಪ್ರಾಂತದವರಿಗೂ ಉಪಯೋಗಕ್ಕೆ ಬರುವಂತೆ ಏನೇನು ಬದಲಾವಣೆಗಳನ್ನು ಮಾಡಬಹುದು ಎಂಬುದನ್ನು ಒಂದು ಸಮಿತಿ ಆಲೋಚಿಸಬಹುದಾಗಿದೆ. ಪಠ್ಯಪುಸ್ತಕಗಳ ವಿಚಾರದಲ್ಲಿ ಅಖಿಲ ಕರ್ನಾಟಕಕ್ಕೆ ಅನ್ವಯಿಸುವಂತೆ ಏಕರೂಪತೆ ತರಲು ಒಂದು ಸಮಿತಿ ನೇಮಕವಾಗಬೇಕೆಂದು ರಾಯಚೂರು ಸಮ್ಮೇಳನದಲ್ಲಿ ಒಂದು ನಿರ್ಣಯವೂ ಆಗಿತ್ತು; ಮೈಸೂರು ವಿದ್ಯಾಭ್ಯಾಸದ ಇಲಾಖೆಯವರೂ, ಮೈಸೂರು ವಿಶ್ವವಿದ್ಯಾನಿಲಯದವರೂ ಬೊಂಬಾಯಿ ಸರಕಾರದವರೂ ಮಾತ್ರ ಪ್ರತಿನಿಧಿಗಳನ್ನು ನೇಮಿಸಿದರು. ಮೇಲ್ಕಂಡ ಸಮಿತಿಯ ಯೋಜನೆಗೇ ಮತ್ತೆ ರೂಪುಕೊಟ್ಟು ಕಾರ್ಯಪ್ರಯತ್ನ ಮಾಡುವುದು ಸಾಧ್ಯ. ಉಳಿದ ಸರಕಾರಗಳೂ ಸಹಕರಿಸಿದರೆ ಮಾತ್ರ ಸಮಿತಿ ಅಖಿಲ ಕರ್ನಾಟಕ ಪ್ರಾತಿನಿಧ್ಯವುಳ್ಳದ್ದಾಗುತ್ತದೆ. ಈ ಸಮಿತಿಯ ಸಹಾಯದಿಂದ ರೀಡರುಗಳನ್ನು ಎಲ್ಲ ಪ್ರಾಂತಗಳಿಗೂ ಹೊಂದುವಂತೆ ಅಣಿ ಮಾಡಿಕೊಡಲು ಪರಿಷತ್ತು ಸಿದ್ಧವಾಗಿದೆ. ಈ ಬಗ್ಗೆ, ಕನ್ನಡನಾಡನ್ನು ಆಳುವ ಬೇರೆಬೇರೆ ಸರಕಾರಗಳ ಅಧಿಕಾರಿಗಳು ತಮ್ಮ ಕೃಪಾಪೂರ್ವಕವಾದ ಗಮನ ಕೊಡಬೇಕೆಂದು ಬೇಡುತ್ತೇವೆ.

---

## ಕನ್ನಡ ನಾಡಿನಲ್ಲಿ ಸಮ್ಮೇಳನಾಧ್ಯಕ್ಷರ ಮತ್ತು ಪರಿಷತ್ತಿನ ಉಪಾಧ್ಯಕ್ಷರ ಪ್ರವಾಸ

(ಬರೆದು ಬಂದುದು)

[ಹಿಂದೆಯೇ ತಿಳಿಸಿದ್ದಂತೆ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಕಳೆದ ೧ನೆಯ ತಾರೀಖಿನಿಂದ ಕನ್ನಡ ನಾಡಿನಲ್ಲಿ ಪ್ರವಾಸವನ್ನು ಕೈಗೊಂಡರು. 'ಶ್ರೀ'ಯವರ ಜೊತೆಗೆ ಸಮ್ಮೇಳನಾಧ್ಯಕ್ಷರಾದ ಶ್ರೀಮಾನ್ ಮುದವೀಡು ಕೃಷ್ಣರಾಯರೂ ಪ್ರವಾಸಮಾಡುತ್ತಿದ್ದಾರೆ.]

**ಅನಂತಪುರ :** ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರೂ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಶ್ರೀ ಮುದವೀಡು ಕೃಷ್ಣರಾಯರೂ ೧-೪-೪೦ರ ಮಧ್ಯಾಹ್ನ ಇಲ್ಲಿಗೆ ಆಗಮಿಸಿದರು. ಇಲ್ಲಿಯ ಕಾಲೇಜಿನ ಕನ್ನಡ ಪಂಡಿತರಾದ ಶ್ರೀ ಸುಂದರಶಾಸ್ತ್ರಿಗಳ ಪರಿಶ್ರಮದ ಮೂಲಕ ಊರೊಳಗಿನ ಅನೇಕ ಜನ ಕನ್ನಡದ ಅಭಿಮಾನಿಗಳೊಂದಿಗೆ ಪರಿಷತ್ತಿನ ರಜತ ಮಹೋತ್ಸವ, ಕನ್ನಡ ನಾಡು ನುಡಿಗಳ ಭವಿತವ್ಯತೆಯ ವಿಷಯಗಳನ್ನು ಚರ್ಚಿಸಿ ಮುಂದಿನ ಕಾರ್ಯದ ರೂಪರೇಷೆಯನ್ನು ನಿವೇದಿಸಿದರು. ಪರಿಷತ್ತಿನ ರಜತ ಮಹೋತ್ಸವಕ್ಕೆ ಅಗತ್ಯ ನೆರವಾಗಿ ಮುಂದಿನ ಪ್ರಯತ್ನಗಳನ್ನು ಮಾಡುವುದಾಗಿ ಎಲ್ಲರೂ ಅಭಿವಚನವನ್ನಿತ್ತರು. ಅತಿಥಿಗಳಿಬ್ಬರೂ ಮರುದಿನ ಆದವಾನಿಗೆ ಪ್ರಯಾಣ ಮಾಡಿದರು.

**ಆದವಾನಿ :** ೨ನೇ ಏಪ್ರಿಲ್ ಮಂಗಳವಾರ ಬೆಳಗ್ಗೆ ೧೦ ಗಂಟೆಗೆ ಶ್ರೀಯವರೂ ಶ್ರೀ ಮುದವೀಡು ಕೃಷ್ಣರಾಯರೂ ಇಲ್ಲಿಗೆ

ಅನಂತಪುರದಿಂದ ಬಂದರು. ಕರ್ನಾಟಕ ಸಂಘದ ಶ್ರೀ ಎಚ್. ಎಂ. ರಾಚೋಟಿ ಸ್ವಾಮಿಯವರೂ ಕನ್ನಡಗೆಳೆಯರ ಗುಂಪಿನವರೂ ಅವರನ್ನು ಸ್ವಾಗತಿಸಿ ವೀರಶೈವ ಕನ್ನಡ ಶಾಲೆಗೆ ಕರೆದೊಯ್ದು ಶಾಲೆಯನ್ನು ತೋರಿಸಿದರು. ಮಧ್ಯಾಹ್ನ ನಾಲ್ಕು ಗಂಟೆಗೆ ಇಬ್ಬರೂ ಇಲ್ಲಿಯ ಮ್ಯುನಿಸಿಪಲ್ ಕಮಿಷನರನ್ನು ಕಂಡು ಆದವಾನಿಯ ಕನ್ನಡ ಬಾಲಕರಿಗೆಲ್ಲ ತೆಲುಗು ಕಲಿಸುತ್ತಿರುವುದರಿಂದ ಕನ್ನಡಿಗರಿಗೆ ಆಗುತ್ತಿರುವ ಅನ್ಯಾಯವನ್ನು ಚರ್ಚಿಸಿ ಅದನ್ನು ದೂರಮಾಡಲು ಪ್ರಯತ್ನಿಸಬೇಕೆಂದು ಪ್ರಾರ್ಥಿಸಿದರು. ಕಮಿಷನರ್ ಅವರೂ ಸಹಾನುಭೂತಿಯಿಂದ ಎಲ್ಲವನ್ನೂ ಕೇಳಿಕೊಂಡು ವಿಷಯವನ್ನು ಚರ್ಚಿಸಿ ಕೈಲಾದ ಮಟ್ಟಿಗೆ ಕನ್ನಡಿಗರ ತೊಂದರೆಗಳನ್ನು ದೂರಮಾಡಲು ಯತ್ನಿಸುವುದಾಗಿ ಭರವಸೆಯಿತ್ತರು. ರಾತ್ರಿ ೯ ಗಂಟೆಗೆ ಇಲ್ಲಿಯ ಶ್ರೀ ವೆಂಕಟೇಶ್ವರ ದೇವಾಲಯದಲ್ಲಿ ನಾಗರಿಕರ ಸಭೆ ಡಾ॥ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಸೇರಿತು. ಶ್ರೀ ಮುದವೀಡು ಕೃಷ್ಣರಾಯರು ವಿಭಕ್ತವಾದ ಕನ್ನಡನಾಡಿನಲ್ಲಿ ಕನ್ನಡಿಗರ ಉನ್ನತಿಗೆ ಉಂಟಾಗುತ್ತಿರುವ ಗೋಳನ್ನು ಮನಕರಗುವಂತೆ ವಿವರಿಸಿ ಕನ್ನಡ ನಾಡು ಒಂದಾಗುವುದಕ್ಕೆ ಮೊದಲು ಗಡಿನಾಡುಗಳ ಕನ್ನಡಿಗರಲ್ಲಿ ತಾವು ಕನ್ನಡಿಗರೆಂಬ ತಿಳಿವಳಿಕೆ ಹುಟ್ಟುವಂತೆ ಅವರಿಗೆಲ್ಲ ಕನ್ನಡ ಶಿಕ್ಷಣದ ಅನುಕೂಲ ಕಲ್ಪಿಸಬೇಕು. ಕನ್ನಡತನವನ್ನು ಬೆಳಸಿ ೧೯೪೧ರ ಜನಗಣಿತಿಯಲ್ಲಿ ಕನ್ನಡಿಗರ ನಿಜವಾದ ಸಂಖ್ಯೆ ತಿಳಿಯುವಂತೆ ಸತತ ಪ್ರಯತ್ನಿಸಬೇಕಾಗಿದೆ ಎಂದು ಹೇಳಿದರು. "ಶ್ರೀ"ಯವರು ಕನ್ನಡ ನುಡಿ ಕನ್ನಡ ಜನಾಂಗದ ಪುರಾತನ ಕಾಲದ ವೈಭವಸಂಪನ್ನವಾದ ಸೊತ್ತಾಗಿದೆಯೆಂದು ಹೇಳಿ, ಅದನ್ನು ಕನ್ನಡಿಗರು ಉಳಿಸಿಕೊಂಡು ಬಂದು ಬೆಳೆಯುವಂತೆ ಬದುಕಬೇಕೆಂದು ಹೇಳಿದರು. ರಾತ್ರಿ ೧೧॥ ಘಂಟೆಗೆ ಸಭೆ ಮುಗಿಯಿತು. ಮರುದಿನ ಬೆಳಗ್ಗೆ ಇಬ್ಬರೂ ಬಳ್ಳಾರಿಗೆ ಹೋದರು.

**ಎಮ್ಮಿಗನೂರು:** ಆದವಾನಿಗೆ ಬಂದಿದ್ದ ಶ್ರೀ. ಶ್ರೀಕಂಠಯ್ಯನವರನ್ನೂ ಶ್ರೀ ಮುದವೀಡು ಕೃಷ್ಣರಾಯರನ್ನೂ ಇಲ್ಲಿಯ ತರುಣ ಕನ್ನಡಿಗರಾದ ಎಂ. ಭೀಮರಾಯರು ತಮ್ಮಲ್ಲಿಗೆ ಸಂಜೆ ૪॥ಗೆ ಕರೆದು ತಂದರು, ಬ್ಯಾಂಡು ವಾದ್ಯವೈಭವದಿಂದ ಊರೊಳಗೆಲ್ಲ ಮೆರವಣಿಗೆ ಹೊರಡಿಸಿ ಕರ್ನಾಟಕ ವಾಚನಾಲಯದ ವಾರ್ಷಿಕ ಸಮಾರಂಭ ಸುದ್ದಿಯನ್ನು ಸಾರಿದರು. ೬॥ ಗಂಟೆಗೆ ತೇರಬೀದಿಯಲ್ಲಿ ಸಾರ್ವಜನಿಕ ಸಭೆ ಸೇರಿ ವಾಚನಾಲಯದ ವಾರ್ಷಿಕೋತ್ಸವದೊಂದಿಗೆ ಕರ್ನಾಟಕ ಸಂಘದ ಪ್ರತಿಷ್ಠಾಪನಾ ಸಮಾರಂಭವನ್ನೂ ನೆರವೇರಿಸಿದರು. ಶ್ರೀ. ಶ್ರೀಕಂಠಯ್ಯನವರು 'ಕನ್ನಡ ಸಾಹಿತ್ಯ ಸಂಪತ್ತು' ಎಂಬ ವಿಷಯವಾಗಿಯೂ, ಶ್ರೀ ಮುದವೀಡು ಕೃಷ್ಣರಾಯರು 'ಕನ್ನಡ ಜನಾಂಗದ ಭವಿತವ್ಯತೆ' ಎಂಬ ವಿಷಯವಾಗಿಯೂ ಭಾಷಣಮಾಡಿದರು. ರಾತ್ರಿ ೮॥ಗೆ ಸಭೆಯ ಕೆಲಸ ಮುಗಿದ ಬಳಿಕ ಮಹನೀಯರಿಬ್ಬರೂ ಆದವಾನಿಗೆ ವಾಪಸುಹೋದರು.

### ಎಮ್ಮಿಗನೂರಿನಲ್ಲಿ 'ಶ್ರೀ'ಯವರ ಭಾಷಣ

ಪ್ರಪಂಚದ ನಾಗರಿಕ ಜನಾಂಗಗಳಲ್ಲಿ ಒಬ್ಬರಾದ ನಾವು ಅಮರರಾಗಿ ಉಳಿಯಬೇಕು. ಉತ್ತಮ ರೀತಿಯಿಂದ ಬಾಳಬೇಕು. ನಮ್ಮ ನಾಡು ಉಜ್ವಲವಾಗಿ ಬೆಳಗಿ ಸೌಖ್ಯದ ನೆಲೆವೀಡಾಗಬೇಕು. ನಮ್ಮ ನಲ್ನುಡಿ ಚಿನ್ನದ ಸೊಂಪು ತಳೆಯಬೇಕು. ಇದಕ್ಕೆಲ್ಲ ಸಂಘ ಬಲವಿರಬೇಕಾದ್ದು ಅವಶ್ಯಕ. ಸಂಘದಲ್ಲಿನ ವ್ಯಕ್ತಿಗಳು ಪರಿಶುದ್ಧ ಮನಸ್ವಿಗಳೂ ಸ್ವಾರ್ಥತ್ಯಾಗಿಗಳೂ ಸಹಕರಿಸಿ ದುಡಿಯುವವರೂ ಆಗಿದ್ದಲ್ಲಿ ಸಂಘದ ಸ್ಥಿತಿ ಮೇಲ್ಮಟ್ಟಕ್ಕೇರುತ್ತದೆ.

ಯಾರೇ ಆಗಲಿ ನಾಡ–ನುಡಿ ದೇವತೆಯ ಕೃಪೆ ದೊರಕಿಸುವುದಕ್ಕೆ, ಬಲವನ್ನು ಗಳಿಸುವುದಕ್ಕೆ, ಅಕ್ಕಪಕ್ಕಗಳ ಮುಂದುವರಿದ ಪ್ರಾಂತಗಳವರಂತೆ ತಲೆಯೆತ್ತಿ ಮೆರೆಯುವುದಕ್ಕೆ, ತಮ್ಮ ಪ್ರಾಂತದ ಕೀರ್ತಿಯನ್ನು ದಿಗಂತದವರೆಗೆ ಹರಡಿಸುವುದಕ್ಕೆ, ಭಾಷೆಯ ಸೊಂಪು, ಸೌಂದರ್ಯ ಗಾಂಭೀರ್ಯಗಳನ್ನು ಉನ್ನತ ಮಟ್ಟಕ್ಕೇರಿಸುವುದಕ್ಕೆ–ಆನೂಲಕ ಭಾರತಾಂಬೆಯ ಪಾದತಲದಲ್ಲಿ ಕಾಣಿಕೆಯನ್ನರ್ಪಿಸುವುಕ್ಕೆ ಸಂಘಬಲವೇ ಮೊದಲ ಸಾಧನವೆಂದು ಹೇಳದಿರಲಾರರು.

ಕನ್ನಡಿಗರಾದ ನಾವು ಸುಸಂಘಟಿತರಾಗಬೇಕು. ನಮ್ಮ ನಾಡು–ನುಡಿಯ ಸೇವೆ ಸಲ್ಲಿಸಲು ಮುಂದುವರಿಯುವಾಗ ಹಿಂದೂ-ಮುಸಲ್ಮಾನ, ಬ್ರಾಹ್ಮಣ– ಬ್ರಾಹ್ಮಣೇತರ ಎಂಬ ಸಂಕುಚಿತಾಭಿಪ್ರಾಯಗಳನ್ನು ಬದಿಗೊತ್ತಿ ನಮ್ಮ ಕುಲ ಕನ್ನಡ ಕುಲ, ಗೋತ್ರ–ಸೂತ್ರಗಳೆಲ್ಲವೂ ಕನ್ನಡವೇ, ನಮಗೆ 'ಕನ್ನಡ ಗೆಲ್ಗೆ'–'ಕನ್ನಡ ಬಾಳ್ಗೆ' ಎಂಬುದೇ ನಿತ್ಯವೂ ಪಠಿಸುವ ಪಂಚಾಕ್ಷರ ಮಹಾಮಂತ್ರವೆಂದು ಭಾವಿಸಬೇಕು. ಪ್ರತಿಯೊಬ್ಬ ಕನ್ನಡಿಗನೂ ಕನ್ನಡಮ್ಮನ ಪೂಜಾರಿಯಾಗಬೇಕು. ಆಕೆಯ ಆಶೀರ್ವಾದ ಹೊಂದಿ ಭಾರತಮಾತೆಯ ಪೂಜೆಗೆ ಮುಂದಡಿಯಿಡಬೇಕು.

'ಒಂದು ಭಾಷೆಯಾಡುವವರೆಲ್ಲಾ ಒಂದು ಜಾತಿ. ಅವರು ಅಧಿಕ ಸಂಖ್ಯಾಕರಾಗಿ ಎಷ್ಟು ಭೂಭಾಗವನ್ನು ವ್ಯಾಪಿಸಿಕೊಂಡಿರುವರೋ ಅದು ಅವರ ಪ್ರಾಂತ' ಎಂಬ ಭಾವನೆ ನಮ್ಮ ಬಂಧುಗಳಾದ ಬಂಗಾಳ, ಆಂಧ್ರ ಮುಂತಾದ ಪ್ರಾಂತಗಳವರಲ್ಲಿ ಪ್ರಬಲವಾಗಿದೆ. ಆದರೆ ನಮ್ಮ ಕನ್ನಡಿಗರಲ್ಲಿ ಈ ಭಾವನೆ ಇನ್ನೂ ಚೆನ್ನಾಗಿ ಮೂಡಿಲ್ಲ.

ನಮ್ಮ ಭಾಷೆ, ಆ ಮೂಲಕ ನಮ್ಮ ಜನರ ಮನಸ್ಸು, ನಮ್ಮ ರಾಷ್ಟ್ರ; ಉನ್ನತೋನ್ನತ ದೆಸೆಯನ್ನು ಮುಟ್ಟುವುದಕ್ಕೆ ಕರ್ನಾಟಕ ಸಂಘದ ಆವಶ್ಯಕತೆಯುಂಟು. ನಮ್ಮ ನಾಡಿನ ಪ್ರಾಚೀನತೆ, ಮಹಿಮೆ—ಕನ್ನಡ ಸಾಹಿತ್ಯದ ಹಿರಿಮೆ— ಲಲಿತ ಕಲೆಗಳ ಮೇಲ್ಮೆ— ಕನ್ನಡ ಸಂಸ್ಕೃತಿಯ ಒಲ್ಮೆ—ಕನ್ನಡಿಗರ ಜಾಣ್ಮೆ ಇವುಗಳನ್ನು ತಿಳಿದುಕೊಳ್ಳುವದಕ್ಕೂ ಕನ್ನಡಿಗರ ಒಳಭೇದಗಳನ್ನೂ ಜಾತಿಮತಗಳ ಸಂಕುಚಿತಾಭಿಪ್ರಾಯಗಳನ್ನೂ ಹರಿದು ಅವರ ಹೃದಯಗಳನ್ನು ಒಂದುಗೂಡಿಸುವುದಕ್ಕೂ ಜನರಲ್ಲಿ ನಿರಕ್ಷರತೆಯನ್ನು ಹೋಗಲಾಡಿಸುವದಕ್ಕೂ, ಧಾರ್ಮಿಕ–ಸಾಮಾಜಿಕ–ರಾಜಕೀಯ ವಿಷಯಗಳಲ್ಲಿ ನವಜ್ಞಾನ, ನವಚೈತನ್ಯಗಳನ್ನುಂಟುಮಾಡುವುದಕ್ಕೂ, ನಮ್ಮ ಈಗಿನ ಕರ್ನಾಟಕ ಸಂಘಗಳು ಬಹಳ ಸಹಕಾರಿಯಾಗುವುವು.

ಪ್ರಕೃತ, ಕನ್ನಡ ನಾಡಿನಲ್ಲಿ ಹಲವಾರುಕಡೆಗಳಲ್ಲಿ ಕನ್ನಡಿಗರು ಎಚ್ಚತ್ತಿದ್ದಾರೆ. ಅನೇಕ ಹಿರಿಯ ಸಾಹಿತಿಗಳು—ಭಾಷಾಭಿಮಾನಿಗಳು ಜನರ ಬೆಂಬಲಕ್ಕೆ ನಿಂತು ತಕ್ಕ ಸಹಾಯವನ್ನು ಹೃದಯಪೂರ್ವಕವಾಗಿ ನೀಡುತ್ತಿದ್ದಾರೆ. ಆದರೆ ಅಕ್ಕಪಕ್ಕ ರಾಷ್ಟ್ರಗಳವರ ಅತಿಕ್ರಮಣದ ಜೋರಿನಲ್ಲಿ ಕನ್ನಡಿಗರು ಗಟ್ಟಿಯಾಗಿ ಶ್ವಾಸಬಿಡಲೂ ಸಾಧ್ಯವಿಲ್ಲವಾಗಿದೆ. ಗಡಿನಾಡಿನಲ್ಲಿ ವಾಸಿಸುವ ಕನ್ನಡಿಗರ ಸ್ಥಿತಿ ಬಹಳ ಶೋಚನೀಯವಾಗಿದೆ. ಅವರಿಗೆ ತಮ್ಮ ವಿಷಯದಲ್ಲಿ ಇರುವ ಅಜ್ಞಾನ, ಮಾತೃಭಾಷೆಯ ಮೇಲಣ ತಾತ್ಸಾರ ಇವೇ ಈ ಹೀನಸ್ಥಿತಿಗೆ ಕಾರಣ. ಈ ಜಿಲ್ಲೆಯಲ್ಲಿ ಬಹು ಸಂಖ್ಯಾತರ ಮನೆಮಾತು ಕನ್ನಡ. ಇದು ನಿಸ್ಸಂಶಯ. ಆಲೂರು, ಆದವಾನಿ, ರಾಯದುರ್ಗ ತಾಲ್ಲೋಕಿನಲ್ಲಿ ಕನ್ನಡಿಗರು ಅಧಿಕ ಸಂಖ್ಯಾತರಿದ್ದರೂ ಮನೆಮಾತಿನಲ್ಲಿ ಶಿಕ್ಷಣ ಸಿಕ್ಕುವುದು ದುರ್ಲಭ. ಈ ತಪ್ಪಿಗೆ ಅನ್ಯರಾರೂ ಕಾರಣರಲ್ಲ. ನಮ್ಮ ನಿರಭಿಮಾನಿ ಕನ್ನಡಿಗರೇ ಕಾರಣವೆಂದೂ ಧಾರಾಳವಾಗಿ ಹೇಳಬಹುದು. ಹಾಲು ಚೆಲ್ಲಿತು. ನೆಲದಲ್ಲಿ ಬತ್ತಿಹೋಯ್ತು. ಇನ್ನಾದರೂ ಎಚ್ಚತ್ತುಕೊಳ್ಳುವ. ಕನ್ನಡದೇವಿಯ ಸೇವೆಗೆ ಸಿದ್ಧರಾಗುವ. ನಾವು ಯಾವ ದೇಶದಲ್ಲಿರಲಿ—ಎಂತಹ ಕಠಿಣ ಪ್ರಸಂಗಕ್ಕೆ ಗುರಿಯಾಗಿರಲಿ—ಯಾವ ಸ್ಥಿತಿಯಲ್ಲಿರಲಿ, ನಮ್ಮ ನಾಡು–ನುಡಿ–ಸಂಸ್ಕೃತಿ ಸ್ವಾತಂತ್ರ್ಯಗಳನ್ನು ಉಳಿಸಿಕೊಳ್ಳಲು ಹೆಣಗಾಡುತ್ತ ಅಮರರಾಗಿ ಬಾಳುವ.

---

### ಕನ್ನಡ ಸಾಹಿತಿಗಳ ಸಂಘ: ಏಕಾಂಕ ನಾಟಕ ವಿಚಾರಕೂಟ

ಮೇಲ್ಕಂಡ ಸಂಘದ ಆಶ್ರಯದಲ್ಲಿ ಇದೇ ೧೪ನೆಯ ಭಾನುವಾರ ಏಕಾಂಕ ನಾಟಕ ವಿಚಾರಕೂಟವೊಂದನ್ನು ಪರಿಷನ್ಮಂದಿರದಲ್ಲಿ ನಡಸುವ ಉದ್ದೇಶವಿದೆ. ಬೆಳಗ್ಗೆ ಏಕಾಂಕ ನಾಟಕದ ವಿಚಾರವಾಗಿ ಭಾಷಣ ಪ್ರಬಂಧವಾಚನಗಳೂ, ಮಧ್ಯಾಹ್ನ ಕನ್ನಡ ಏಕಾಂಕ ನಾಟಕಗಳ ಓದೂ ನಡೆಯುವುವು. ಅಂದು ಏಕಾಂಕ ನಾಟಕಗಳನ್ನು ಓದಬೇಕೆಂದು ಇಷ್ಟಪಡುವ ಏಕಾಂಕ ನಾಟಕ ಕರ್ತರು ತಮ್ಮ ಹೆಸರು ವಿಳಾಸಗಳನ್ನೂ ತಾವು ಓದಬೇಕೆಂದಿರುವ ನಾಟಕದ ಹೆಸರನ್ನೂ ೧೧ನೆಯ ತಾರೀಖಿನ ಒಳಗಾಗಿ ತಿಳಿಸಬೇಕೆಂದು ಕೋರಿಕೆ—ಎಂಬುದಾಗಿ ಸಂಘದ ಕಾರ್ಯದರ್ಶಿಗಳು ಬಿನ್ನವಿಸಿಕೊಳ್ಳುತ್ತಾರೆ.

**ಸಣ್ಣ ಕಥೆ**

## ತಾಂತ್ರಿಕ ಬಲ

[ವಿದ್ವಾನ್ ಟಿ. ಕೃಷ್ಣಮಾಚಾರ್ಯರು ಹೇಳಿದ ಪ್ರಸಂಗದ ಆಧಾರದ ಮೇಲೆ ಬರೆದದ್ದು.]

ನಮ್ಮ ಶಾಲೆಯಲ್ಲಿ ಪಾಠಪ್ರವಚನಗಳೆಲ್ಲವೂ ಮುಗಿದಮೇಲೆ ನಮ್ಮ ಗುರುಗಳು ನಮಗೆಲ್ಲಾ ಯಾವುದಾದರೊಂದು ಹಿತೋಕ್ತಿಯನ್ನು ಹೇಳುವುದು ಬಹಳ ದಿನದಿಂದ ಬಂದ ಪದ್ಧತಿ. ಈ ದಿನವೂ ಪಾಠ ಮುಗಿದು ನಾವೆಲ್ಲ ಸುಮ್ಮನೆ ಕುಳಿತಿದ್ದಾಗ, ನಮ್ಮಲ್ಲಿ ಒಬ್ಬರು ತಾಂತ್ರಿಕರ ವಿಷಯವನ್ನೆತ್ತಿ, ತಂತ್ರವೂ ಉಪನಿಷತ್ತಿನಂತೆಯೇ ಒಂದು ಜ್ಞಾನ ಭಾಗವೇ ? ಎಂದು ಗುರುಗಳನ್ನು ಪ್ರಶ್ನಿಸಿದರು. ಅದಕ್ಕೆ ಅವರು 'ಹೌದು' ಎಂದು, ಅದು ಏನೆಂಬುದನ್ನು ಸ್ವಲ್ಪ ವಿವರಿಸಿ, "ನಿಮ್ಮಲ್ಲಿ ಯಾರಾದರೂ ಬಂಗಾಳಕ್ಕೆ ಹೋಗಿದ್ದೀರಾ ?" ಎಂದು ಪ್ರಶ್ನಿಸಿದರು. ನಾವು ಒಬ್ಬರ ಮುಖವನ್ನೊಬ್ಬರು ನೋಡಿದೆವು. ಒಬ್ಬರು "ಇಲ್ಲ ಗುರುಗಳೆ, ದುಡ್ಡೇ ಇಲ್ಲ. ಹೀಗಾಗಿ ಈಕಡೆ ಕೆಡಕೊಳ, ಆಕಡೆ ಕಣ್ಣಂಬಾಡಿ, ಈ ಮಧ್ಯೆಯೇ ನಮ್ಮ ಪ್ರಪಂಚ" ಎಂದರು.

"ಸರಿ ಸರಿ ; ಏನು ಓದುತ್ತೀರೋ ನೀವೆಲ್ಲಾ ; ಸ್ವಲ್ಪ ಊರು ತಿರುಗಿಬರಬೇಕು. ಆಗ ಪ್ರಪಂಚದಲ್ಲಿ ಏನಿದೆ ಎನ್ನುವುದು ತಿಳಿಯುತ್ತದೆ. ತಾಂತ್ರಿಕರ ಸಂಬಂಧವಾಗಿ ನನ್ನ ಒಂದು ಅನುಭವ ಹೇಳುತ್ತೇನೆ ಕೇಳಿ" ಎಂದು ಮುಂದಿನ[illegible] ಹೇಳಿದರು.

ನಾನು ಡೆಕ್ಕಾ ಕಾಲೇಜಿನ[illegible]ಸನ್ಯಾಸವನ್ನು ಮುಗಿಸಿ ಹೊರಗಡೆ ಬಂದೆ. ಬಾಗಿಲಲ್ಲಿಯೇ ಒಬ್ಬ ಸಂನ್ಯಾಸಿ ; ಮುಖಕ್ಕೆಲ್ಲಾ ಕೆಂಪಗೆ ಕುಂಕುಮ ಬಳಿದುಕೊಂಡಿದ್ದಾನೆ; ಉಟ್ಟಿರುವುದು ಕೆಂಪು ಮಗುಟ ; ಹೊದೆದಿರುವುದೂ ಕೆಂಪು ವಸ್ತ್ರ; ಯಜ್ಞೋಪವೀತ ಹೆಗಲಿನಿಂದ ಮೊಣಕಾಲಿನವರೆಗೂ ಇದೆ ; ಬಹು ಸ್ಥೂಲದೇಹಿ. ನಾನು ಹೊರಗೆ ಕಾಲಿಡುತ್ತಲೇ ನನ್ನನ್ನು ಆಲಂಗಿಸಿಕೊಂಡು ಒಂದೆರಡು ಪ್ರಶಂಸಾ ವಾಕ್ಯಗಳನ್ನಾಡಿ,

"ನಿನಗೇನು ಬೇಕೋ ಕೇಳು ನಾನು ವರವೀಯುತ್ತೇನೆ" ಎಂದ.

"ನನಗೇನೂ ಬೇಕಿಲ್ಲ; ನಿಮ್ಮ ದಯವೊಂದಿದ್ದರೆ ಸಾಕು" ಎಂದೆ.

"ಊ, ಆಗಲಿ ; ನಿನಗೆ ನಾನು ಬೇರೆ ವರವಿತ್ತಿದ್ದೇನೆ" ಎಂದು ಹೇಳಿ ಹೊರಟುಹೋದ.

ಮಾರನೆಯ ದಿನ ಬೆಳಗ್ಗೆ ನಾನು ಇಳಿದುಕೊಂಡಿದ್ದ ಸ್ಥಳಕ್ಕೆ ಆತ ಬಂದ. ಅದೇ ಉಡುಪು.

"ನೀನು ನನ್ನೊಡನೆ ಕೆಲವು ಕಾಲ ಸಂಚರಿಸಬೇಕು. ಏನು ಹೇಳುತ್ತೀಯೆ ?" ಎಂದ.

"ಆಗಬಹುದು ; ಅಗತ್ಯವಾಗಿ" ಎಂದು ಒಪ್ಪಿಕೊಂಡೆ.

"ನಾಳೆಯೇ ನಾನು ಇಲ್ಲಿಂದ ಹೋಗುತ್ತೇನೆ. ನೀನು ಸಿದ್ಧವಾಗಿರು."

"ಆಗಲಿ ; ಆದರೆ ನನ್ನದೊಂದು ಮಾತು, ಅದನ್ನು ನಡಸಿಕೊಟ್ಟರೆ ಆಗಬಹುದು"

"ಏನು ?"

"ನನಗೆ ಸ್ವಯಂಪಾಕಕ್ಕೆ ಅವಕಾಶವಿರಬೇಕು."

"ಓ, ಇಷ್ಟೇತಾನೇ, ಆಗಲಿ."

ಮಾರನೆಯ ದಿನ ರೈಲಿನಲ್ಲಿ ಪ್ರಯಾಣ ಮಾಡಿದೆವು. ನನ್ನ ಟಿಕೇಟಿಗೂ ಆತನೇ ದುಡ್ಡು ಕೊಟ್ಟ. ಸುಮಾರು ನಾನ್ನೂರು ಮೈಲಿ ಪ್ರಯಾಣ ಮಾಡಿ, ರೈಲಿನಿಂದಿಳಿದೆವು. ಆಮೇಲೆ ಒಂದೆರಡು ಮೈಲಿ ಕಾಲು ನಡಗೆಯಲ್ಲಿ ಪ್ರಯಾಣ ಮಾಡಿದೆವು. ದಾರಿಯಲ್ಲಿ ಆತನ ಗುಂಪಿಗೆ ಸೇರಿದ ಸುಮಾರು ಐವತ್ತುಮಂದಿ ಕೊಂಬು, ಕಹಳೆ, ತಮಟೆ, ಡಮರುಗ, ತಾಳ, ಮದ್ದಲೆ ಮುಂತಾದ ವಾದ್ಯಗಳನ್ನು ಹೊತ್ತುಕೊಂಡು ಬಂದು ನಮ್ಮನ್ನು ಎದುರುಗೊಂಡರು.

ಅಲ್ಲಿಂದ ಮುಂದೆ ಒಂದು ಬೆಟ್ಟ ; ಒಂದು ಇಕ್ಕಟ್ಟಾದ ಕಣಿವೆಯ ಮೂಲಕ ಬೆಟ್ಟವನ್ನು ಹತ್ತಿದೆವು. ಅಲ್ಲಿ ಒಂದು ದೊಡ್ಡದಾದ ಬಂಡೆ: ಎದುರಿಗೆ ನೂರುನೂರು ಮಾರದಲ್ಲಿ ಒಂದು ದೇವಸ್ಥಾನ. ನಾವೆಲ್ಲ ಬಂಡೆಯ ಮೇಲೆ ಯಾವುದೋ ವಿಷಯ ಮಾತನಾಡುತ್ತ ಕುಳಿತಿದ್ದೇವೆ. ಸ್ವಲ್ಪ ಹೊತ್ತಾದಮೇಲೆ ನನ್ನ ಸ್ನೇಹಿತನಂತೆಯೇ ಅಲಂಕಾರಮಾಡಿಕೊಂಡಿದ್ದವನೊಬ್ಬನು ಬಂದು, ತನಗೆ ಏನಾದರೂ ಸಹಾಯಮಾಡಬೇಕೆಂದು ಕೇಳಿಕೊಂಡ. ನನ್ನ ಸ್ನೇಹಿತ, ಅವನ ಉಡಿಗೆತೊಡಿಗೆ ಅವನ ಪರಿವಾರ, ಅವರ ವಾದ್ಯಗಳು, ಅವನಂತೆಯೇ ಇದ್ದ ಈ ಹೊಸ ವ್ಯಕ್ತಿ, ನಾವಿದ್ದ ಜಾಗ, ಎದುರಿಗೆ ದೇವಸ್ಥಾನ—ಎಲ್ಲವನ್ನೂ ನೋಡಿ, ನನ್ನ ಮನಸ್ಸಿಗೆ ಒಂದು ವಿಧವಾದ ಹೆದರಿಕೆಯಾಯಿತು. ಸಾಲದ್ದಕ್ಕೆ ನನ್ನಲ್ಲಿ ಇನ್ನೂರು ರೂಪಾಯಿಗಳು ಬೇರೆ ಇದ್ದುವು. ಆದರೂ ಹೆದರಿಕೆಯನ್ನು ತೋರ್ಪಡಿಸದೆ, 'ಇಗೋ ನನ್ನಲ್ಲಿ ಇನ್ನೂರು ರೂಪಾಯಿಗಳಿವೆ. ತೆಗೆದುಕೊ' ಎಂದೆ. 'ಅಯ್ಯೋ ನನಗೇಕೆ ಅಷ್ಟೊಂದು. ಒಂದೇ ಒಂದು ರೂಪಾಯಿ ಸಾಕು.' ಎಂದ. 'ಆಗಲಿ' ಎಂದು ಸೊಂಟಕ್ಕೆ ಕಟ್ಟಿದ್ದ ಬಟ್ಟೆಯ ಚೀಲವನ್ನು ಬಿಚ್ಚಿ, ಒಂದು ರೂಪಾಯಿ ತೆಗೆದು ಕೊಟ್ಟೆ. ಅವನದನ್ನು ತೆಗೆದುಕೊಂಡ. ಮತ್ತೆ ಚೀಲವನ್ನು ಸೊಂಟಕ್ಕೆ ಕಟ್ಟೋಣವೆಂದು ಸೊಂಟಕ್ಕೆ ಕೈಹೋಯಿತು. ಆದರೆ ಚೀಲವೂ ಇಲ್ಲ! ಹಣವೂ ಇಲ್ಲ!!

ಈ ಮಧ್ಯೆ ಸ್ನೇಹಿತ 'ಬಾ, ದೇವಸ್ಥಾನಕ್ಕೆ ಹೋಗೋಣ' ಎಂದ. ಹಣ ಮಾಯವಾದ ಬಗ್ಗೆ ಆಶ್ಚರ್ಯ, ವ್ಯಥೆ, ಹೆದರಿಕೆ ಇವು ಮಿಶ್ರವಾದ ಭಾವ ಮನಸ್ಸಿಗೆ ಬಂತು. ಆದರೆ ಎದೆ ಗಟ್ಟಿಮಾಡಿಕೊಂಡು ಮರುಮಾತಾಡದೆ ಅವನ ಹಿಂದೆ ಹೊರಟೆ. ದೇವಸ್ಥಾನದ ಹತ್ತಿರ ಹೋಗುತ್ತಲೇ ನನ್ನ ಮೈಮೇಲೆ ಒಂದು ಚೂರು ಬಟ್ಟೆಯೂ ಉಳಿಯಲಿಲ್ಲ. ನನ್ನ ಸ್ನೇಹಿತ 'ಹೆದರಬೇಡ, ಏನೂ ಆಗುವುದಿಲ್ಲ' ಎಂದು ಧೈರ್ಯ ಹೇಳಿದ. ನಾನು ಧೈರ್ಯವಾಗಿಯೇ ಇದ್ದೆ.

ದೇವಸ್ಥಾನದೊಳಕ್ಕೆ ಪ್ರವೇಶಿಸಿದೆವು. ನನ್ನ ಮೈ ಎಲ್ಲವೂ ಕೆಂಪು ಬಣ್ಣಕ್ಕೆ ತಿರುಗಿತು—ಕುಂಕುಮ ಲೇಪವಾದಂತೆ. ದೇವಸ್ಥಾನದೊಳಗೆ ನನ್ನ ಸ್ನೇಹಿತನಂತೆಯೇ ಬಟ್ಟೆಬರೆ ಧರಿಸಿ ಕೆಲವರು ಹವನ, ಹೋಮ ಮಾಡುತ್ತಿದ್ದಾರೆ. ಮತ್ತೊಂದು ಕಡೆ, ಅನೇಕ ಮಂದಿ ಗಂಡಸರೂ, ಹೆಂಗಸರೂ, ಮಕ್ಕಳೂ ಕುಳಿತಿದ್ದಾರೆ. ಮಧ್ಯೆ ಕಾಳಿಯ ವಿಗ್ರಹ; ಉಗ್ರಮೂರ್ತಿ : ತಲೆಯೆಲ್ಲಾ ಕೆದರಿದೆ ; ನಾಲಿಗೆ ಚಾಚಿದೆ ; ಎರಡು ಭುಜಗಳ ಮೇಲೂ ಎಂಟೆಂಟು ಕೈಗಳು : ಪ್ರತಿಯೊಂದು ಕೈಯಲ್ಲೂ ವಿಧವಿಧವಾದ ಹೊಳೆಯುವ ತೀಕ್ಷ್ಣ ಆಯುಧಗಳು ; ಕೆಂಪು ಹೂಮಾಲೆಗಳ ಅಲಂಕಾರ. ಇವೆಲ್ಲವನ್ನೂ ನೋಡಿ ಕಷ್ಟಪಟ್ಟು ತಂದುಕೊಂಡಿದ್ದ ಧೈರ್ಯವೆಲ್ಲ ಉಡುಗಿತು ; ಬಲವೆಲ್ಲ ಅಡಗಿತು. ಈ ಕಾಳಿ ವಿಗ್ರಹಕ್ಕೆ ಬಲಿ ಕೊಡಲು ನನ್ನನ್ನು ಅಲ್ಲಿಗೆ ಕರೆದೊಯ್ದಿರುವರೆಂದು ಖಂಡಿತ ಮಾಡಿದೆ. ಒಳ್ಳೆಯ ಸ್ನೇಹಿತ ಗಂಟುಬಿದ್ದ ಎಂದುಕೊಂಡೆ. ಪಂಚಾಕ್ಷರಿಯನ್ನು ಜಪಿಸಲಾರಂಭಿಸಿದೆ.

ಹವನ ಹೋಮ ಮಾಡುತ್ತಿದ್ದವರು ನನ್ನ ಸ್ನೇಹಿತನಿಗೆ ನಮಸ್ಕಾರ ಮಾಡಲು ಎದ್ದುಬಂದರು. 'ನನಗೆ ಬೇಡ, ಅವನಿಗೆ ಮಾಡಿ' ಎಂದು ನನ್ನ ಕಡೆ ತೋರಿಸಿದ. ಕೂಡಲೇ ಎಲ್ಲರೂ, ಹೆಂಗಸರೂ ಮಕ್ಕಳೂ ಸಹ ಎದ್ದುಬಂದು ನನಗೆ ಒಬ್ಬೊಬ್ಬರಾಗಿ ನಮಸ್ಕಾರ ಮಾಡಿದರು. ನಮಸ್ಕಾರ ಮಾಡಿದವರಿಗೆ ಆಶೀರ್ವಾದಮಾಡುವುದಕ್ಕೂ ನನಗೆ ಹೆದರಿಕೆಯಲ್ಲಿ ತೋಚದೆ ಹೋಯಿತು.

ದೇವಿಯ ನೈವೇದ್ಯಕ್ಕೆ ನಾನೇ ಸಿದ್ಧಮಾಡಬೇಕೆಂದು ಹೇಳಿ, ಗೋಧಿಹಿಟ್ಟು, ತುಪ್ಪ ಮೊದಲಾದ ಸಾಮಾನು ಸರಂಜಾಮುಗಳನ್ನು ತಂದು ನನ್ನ ಮುಂದಿಟ್ಟರು. ಅದನ್ನು ತೆಗೆದುಕೊಂಡು ಹೊರಗೆಹೊರಟೆ. ನನ್ನಿಂದ ರೂಪಾಯಿ ತೆಗೆದುಕೊಂಡುಹೋದವನು ಅಲ್ಲಿದ್ದ, ನನ್ನ ಹಣದ ಚೀಲ, ಬಟ್ಟೆಬರೆಯೊಂದಿಗೆ. ಅದನ್ನು ತೆಗೆದುಕೊಂಡೆ. ಚೀಲದಲ್ಲಿ ನಾನಿಟ್ಟ ಹಣ, ಯಜ್ಞೋಪವೀತ, ಶ್ರೀಚೂರ್ಣ ಎಲ್ಲಾ ಇದ್ದುವು. ಸ್ನಾನಮಾಡಿ ಪೂರಿಯನ್ನು ಮಾಡಿಕೊಟ್ಟೆ. ಅದನ್ನು ದೇವರಿಗೆ ನೈವೇದ್ಯಮಾಡಿದರು.

ಸಂಜೆ ನನ್ನ ಸ್ನೇಹಿತ ನನ್ನಲ್ಲಿಗೆ ಬಂದ.

"ನಾನು ನಿನಗೆ ವರ ಕೊಟ್ಟಿದ್ದೇನೆ. ಅದೇನು ಗೊತ್ತೆ ?"

"ನನಗೆ ಗೊತ್ತಿಲ್ಲ"

"ನಾನು ನಿನಗೆ ವರ ಕೊಡದಿದ್ದರೆ ನೀನು ಉಳಿಯುತ್ತಿರಲಿಲ್ಲ. ಇಲ್ಲಿ ಒಂದು ಮಹಿಮೆ ಇದೆ ತೋರಿಸುತ್ತೇನೆ ಬಾ," ಎಂದು ಕರೆದುಕೊಂಡು ಹೋದ.

ಸ್ವಲ್ಪ ದೂರ ಹೋಗುವುದರೊಳಗೆ ದಟ್ಟವಾದ ಕಾಡು ಸಿಕ್ಕಿತು. ಅಲ್ಲಿ ಹುಲಿ ಸಿಂಹ ಮೊದಲಾದ ಕಾಡುಮೃಗಗಳು ಸಂಚರಿಸುತ್ತಿದ್ದುವು. 'ಏ ಇಲ್ಲಿ ಬಾ' ಎಂದು ನನ್ನ ಸ್ನೇಹಿತ ಸಂಜ್ಞೆ ಮಾಡುತ್ತಲೇ ಅವು ನಾಯಿ, ಬೆಕ್ಕಿನ ಮರಿಗಳಂತೆ ಬಾಲ ಮುದುರಿಕೊಂಡು ನನ್ನ ಸ್ನೇಹಿತ ನಲ್ಲಿಗೆ ಬಂದುವು. ಇದನ್ನು ನೋಡಿ ನಾನು ಬೆಕ್ಕಸಬೆರಗಾದೆ.

ನನ್ನ ಸ್ನೇಹಿತ, "ನಾನು ನಿನಗೆ ಒಂದು ಯಂತ್ರ ಕಟ್ಟುತ್ತೇನೆ. ನೀನು ಎಲ್ಲಿಗೆ ಹೋಗುತ್ತೀಯೆ?" ಎಂದು ಪ್ರಶ್ನಿಸಿದ.

"ನಾನು ನವದ್ವೀಪಕ್ಕೆ ಪರೀಕ್ಷೆಗೆ ಹೋಗುವುದಾಗಿ ತಿಳಿಸಿದೆ.

"ಹಾಗಾದರೆ ಪರೀಕ್ಷೆಯಲ್ಲಿ ನಿನಗೆ ತೇರ್ಗಡೆಯಾಗಲು ಯಂತ್ರ ಕಟ್ಟುತ್ತೇನೆ. ಅಲ್ಲಿ ನೀನು ಏನು ಹೇಳಿದರೂ ಸರಿಯಾಗಿರಬೇಕು" ಎಂದ.

ಯಂತ್ರ ಕಟ್ಟಿಸಿಕೊಳ್ಳಲು ಹೆದರಿಕೆ, ಅದರಿಂದ ಏನು ತೊಂದರೆ ಆಗುತ್ತದೆಯೋ ಎಂದು. ಅಂತೆಯೇ ಕಟ್ಟಿಸಿಕೊಳ್ಳದಿದ್ದರೆ ಏನು ಮಾಡುತ್ತಾನೆಯೋ ಎನ್ನುವ ಹೆದರಿಕೆ. ಸುಮ್ಮನೆ ಇದ್ದೆ. ಆತ ಆಗಲೇ ನನ್ನ ಬಲತೋಳಿಗೆ ಯಂತ್ರವನ್ನು ಕಟ್ಟಿಯೇಬಿಟ್ಟಿದ್ದ.

ಆಮೇಲೆ ನನ್ನನ್ನು ಆತ ಮತ್ತೆ ಡೆಕ್ಕಾಕ್ಕೆ ಕರೆದುತಂದು ಬಿಟ್ಟ. 'ಬದುಕಿದೆಯಾ ಬಡಜೀವವೇ' ಎಂದುಕೊಂಡೆ.

* * * *

ಇದುವರೆಗೂ ಮೂಕರಂತೆ ಕುಳಿತಿದ್ದ ನಾವು "ಇಂಥ ಮಹಾನು ಭಾವರು ಜೀವಸಹಿತ ಬಂದದ್ದು ನಮ್ಮ ಭಾಗ್ಯವಿಶೇಷ" ಎಂದು ಕೊಂಡೆವು.

ಆಮೇಲೆ ಗುರುಗಳು, "ತಾಂತ್ರಿಕ ಬಲ ಎಂದರೆ ಇದೇ" ಎಂದರು.

—'ಮಂಕಾಲ್'

---

## ಮದರಾಸು ಪ್ರಾಂತದಲ್ಲಿ ಕನ್ನಡಿಗರ ಕುಂದುಕೊರತೆಗಳು

ಬಳ್ಳಾರಿಯ ಕರ್ನಾಟಕ ಸಂರಕ್ಷಕ ಸಂಘದ (ಕನ್ನಡ ಡಿಫೆನ್ಸ್ ಲೀಗ್) ಅಧ್ಯಕ್ಷರಾದ ಶ್ರೀ ಟಿ. ಎಚ್. ಎಂ. ಚಂದ್ರಶೇಖರಶಾಸ್ತ್ರಿಗಳು ಮದರಾಸು ಪ್ರಾಂತದಲ್ಲಿಯ ಕನ್ನಡಿಗರ ಕುಂದುಕೊರತೆಗಳನ್ನು ಕುರಿತು ಗವರ್ನರಿಗೆ ದೀರ್ಘವಾದ ಒಂದು ಮನವಿಯನ್ನು ಕಳಿಸಿದ್ದಾರೆ. ಮನವಿ 'ಸಂಯುಕ್ತ ಕರ್ನಾಟಕ'ದ ಮಾರ್ಚಿ ೨೬ನೆಯ ತಾರೀಖಿನ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಅದರಲ್ಲಿ ಮದರಾಸು ಪ್ರಾಂತದಲ್ಲಿರುವ ಕನ್ನಡ ಪ್ರದೇಶಗಳಾದ ಬಳ್ಳಾರಿ, ಅನಂತಪುರ, ಚಿತ್ತೂರು, ಸೇಲಂ, ಕೊಯಿಮುತ್ತೂರು, ನೀಲಗಿರಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯ ಕನ್ನಡಿಗರ ಸ್ಥಿತಿ ಮೈಸೂರು ಸಂಸ್ಥಾನ ಮತ್ತು ಮುಂಬಯಿ ಪ್ರಾಂತಗಳಲ್ಲಿಯ ಕನ್ನಡಿಗರ ಸ್ಥಿತಿಗಿಂತ ಹೀನವಾಗಿದೆಯೆಂದು ಹೇಳಿ, ಬಳ್ಳಾರಿ ಕನ್ನಡ ಪ್ರದೇಶವಾದರೂ ಕನ್ನಡ ಶಿಕ್ಷಣಕ್ಕೆ ಸ್ವಲ್ಪವೂ ಸೌಕರ್ಯವಿಲ್ಲದಿರುವುದನ್ನು ಗವರ್ನರ ಗಮನಕ್ಕೆ ತಂದಿದ್ದಾರೆ.

ಮನವಿಯಲ್ಲಿ ಅರಿಕೆ ಮಾಡಿಕೊಂಡಿರುವ ಮುಖ್ಯ ಅಂಶಗಳಿವು:

(೧) ಜೀವನದ ಯಾವ ಕ್ಷೇತ್ರವನ್ನು ತೆಗೆದುಕೊಂಡರೂ ಮದರಾಸು ಪ್ರಾಂತದಲ್ಲಿರುವ ಕನ್ನಡಿಗರ ಸ್ಥಿತಿ ಬಹಳ ಶೋಚನೀಯವಾಗಿದೆ.

(೨) ಕನ್ನಡ ಪ್ರಜೆಗಳಿಗೆ ಅವರ ಆಜನ್ಮಸಿದ್ಧ ಹಕ್ಕಾದ ಕನ್ನಡ ಶಿಕ್ಷಣದ ಬೇಡಿಕೆಗೆ ಸರಕಾರದ ಮನ್ನಣೆ ಇದುವರೆಗೆ ದೊರೆತಿಲ್ಲ. ಬಳ್ಳಾರಿ ಜಿಲ್ಲೆಯ ಪೂರ್ವ ಪ್ರದೇಶಗಳಲ್ಲಿಯೂ ಮೈಸೂರಿಗೆ ಒತ್ತಿಕೊಂಡಿರುವ ಜಿಲ್ಲೆಗಳ ಕನ್ನಡ ಪ್ರದೇಶಗಳಲ್ಲಿಯೂ ಕನ್ನಡ ಪ್ರಾಥಮಿಕ ಶಾಲೆಗಳೇ ಇಲ್ಲ. ಹೀಗಾಗಿ ೮–೯ ವರುಷ ವಯಸ್ಸಿನ ಕನ್ನಡ ಬಾಲಕರು ತೆಲುಗು, ತಮಿಳು, ಇಂಗ್ಲೀಷುಗಳನ್ನೂ ಜೊತೆಗೆ ಹಿಂದಿಯನ್ನೂ ಕಲಿಯಬೇಕಾಗಿದೆ. ಬಳ್ಳಾರಿಯಲ್ಲಿ ತೆಲುಗು ಟ್ರೈನಿಂಗ್ ಸ್ಕೂಲ್ ಇದ್ದು ಕನ್ನಡ ಮೂಲೆಗೆ ಬಿದ್ದಿದೆ. ಸರಕಾರದ ಗರ್ಲ್ಸ್ ಹೈಸ್ಕೂಲಿನಲ್ಲಿಯೂ ಇದೇ ಗತಿಯೇ.

(೩) ಬಳ್ಳಾರಿ ಕನ್ನಡ ಪ್ರದೇಶವಾದರೂ ತೆಲುಗು ಭಾಷೆಯನ್ನೇ ಸರಕಾರದ ಕಾಗದ ಪತ್ರಗಳಲ್ಲಿ ಬಳಸಲಾಗುತ್ತಿದೆ.

(೪) ಪ್ರಾಂತದ ಸರಕಾರಿ ಉದ್ಯೋಗಗಳಲ್ಲಿ ೩೦ ಲಕ್ಷ ಕನ್ನಡಿಗರಿಗೆ ಯೋಗ್ಯವಾದ ಪ್ರಾತಿನಿಧ್ಯ ದೊರೆತಿಲ್ಲ. ೧೯೧೧ರಿಂದ ಮದರಾಸು ವೀರಶೈವ ವಿದ್ಯಾವರ್ಧಕ ಸಂಘ ಬಳ್ಳಾರಿ ಜಿಲ್ಲೆಯಲ್ಲಿ ವಿದ್ಯಾಪ್ರಚಾರ ಮಾಡಿ, ಪ್ರಾಂತದ ವಿವಿಧ ಭಾಗಗಳ ಕನ್ನಡ ವಿದ್ಯಾರ್ಥಿಗಳಿಗೆ ಬೇಕಾದಷ್ಟು ಸೌಕರ್ಯಗಳನ್ನು ನೀಡುತ್ತಿದೆ. ಕನ್ನಡಿಗರು ತಮ್ಮ ಏಳಿಗೆಗಾಗಿ ಆತ್ಮಾವಲಂಬನೆಯಿಂದ ಕೆಲಸ ಮಾಡಿಕೊಳ್ಳುತ್ತಿದ್ದಾರೆಯೇ ಹೊರತು ಸರಕಾರದವರು ಹೆಚ್ಚು ಸಹಾಯ ಸೌಕರ್ಯ ಗಳನ್ನು ಒದಗಿಸಿಕೊಡುತ್ತಿಲ್ಲ.

(೫) ಅಖಿಲ ಭಾರತ ರೇಡಿಯೋ ಸಂಸ್ಥೆಯವರಾಗಲಿ, ಅದರ ಶಾಖೆಗಳವ ರಾಗಲಿ ಆಯಾ ಕೇಂದ್ರದ ಪ್ರಸಾರಣ ಕಾರ್ಯಕ್ರಮಗಳಲ್ಲಿ ಕನ್ನಡಕ್ಕೂ ಯೋಗ್ಯ ಸ್ಥಾನ ಕೊಡಬೇಕೆಂದು ಕನ್ನಡಿಗರು ಎಷ್ಟು ಕೇಳಿಕೊಂಡರೂ ಗಮನ ದೊರೆತಿಲ್ಲ.

(೬) ಒಂದು ಕಾಲದಲ್ಲಿ ಕನ್ನಡಿಗರು ಭಾರತದಲ್ಲಿ ಅತ್ಯಂತ ವೈಭವಾಧಿಕಾರ ಗಳಿಂದ ಕೂಡಿದ್ದವರು. ಸಾಮ್ರಾಜ್ಯಗಳನ್ನು ಕಟ್ಟಿ ಆಳಿದವರು. ಟಿಪ್ಪು ಸುಲ್ತಾನನು ಸತ್ತಮೇಲೆ ಕರ್ನಾಟಕ ಹರಿದು ಹಂಚಿಹೋಗಿ ತನ್ನ ಪ್ರಭಾವವನ್ನು ನೀಗಿಕೊಂಡಿದೆ. ಸದ್ಯದ ಹೀನಪರಿಸ್ಥಿತಿಯನ್ನು ಕೊನೆಗಾಣಿಸಲು ಪ್ರತ್ಯೇಕ ಪ್ರಾಂತೀಕರಣವೇ ಮದ್ದು. ನೆಹ್ರೂ ರಾಜ್ಯಾಂಗ ರಚನಾ ಸಮಿತಿಯವರು ಕೂಡ ತಮ್ಮ ವರದಿಯಲ್ಲಿ **'ಸದ್ಯದಲ್ಲಿ ಯಾವುದಾದರೂ ಪ್ರಾಂತವನ್ನು ಪ್ರತ್ಯೇಕಿಸಿ ರೂಪುಗೊಳಿಸಬೇಕಾದ ಆವಶ್ಯಕತೆ ಇದ್ದರೆ ಅದು ಕರ್ನಾಟಕ'** ಎಂಬುದಾಗಿ ಸ್ಪಷ್ಟಪಡಿಸಿರುತ್ತಾರೆ.

---

## ಮುಧೋಳ ಸಂಸ್ಥಾನದಲ್ಲಿ ಕನ್ನಡಿಗರ ಹೀನಾವಸ್ಥೆ

ಮುಧೋಳ ಸಂಸ್ಥಾನದ ರೈತ ಅಸೆಂಬ್ಲಿಯ ಉಪಾಧ್ಯಕ್ಷರಾದ ಶ್ರೀ ಎಸ್. ಎಸ್. ಪಾಟೀಲ ಅವರು 'ಸಂಯುಕ್ತ ಕರ್ನಾಟಕ'ದ ಮಾರ್ಚಿ ೨೬ನೆಯ ತಾರೀಖಿನ ಸಂಚಿಕೆಯಲ್ಲಿ ಒಂದು ಹೇಳಿಕೆಯನ್ನು ಕೊಟ್ಟು ಅದರಲ್ಲಿ ಸಂಸ್ಥಾನದ ಶಾಲೆಗಳಲ್ಲಿ ಕನ್ನಡವನ್ನೇ ಕಲಿಸಬೇಕೆಂದು ದರ್ಬಾರಿನವರು ೧೯೩೭ರಲ್ಲಿ ನಿಶ್ಚಯಮಾಡಿದ್ದರೂ ರಾಮದುರ್ಗ, ಜಮಖಂಡಿ ಸಂಸ್ಥಾನಗಳಲ್ಲಿ ಕನ್ನಡದ ಮನ್ನಣೆ ಆಗಿರುವಷ್ಟು ಮುಧೋಳದಲ್ಲಿ ಆಗಿಲ್ಲವೆಂದು ಹೇಳಿ, ಕೆಳಗೆಕಂಡ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕೆಂದು ಮಾತೃಶ್ರೀ ರಾಣಿ ಸರಕಾರ ಅವರಿಗೂ ದಿವಾನ್ ಸಾಹೇಬರಿಗೂ ಬಿನ್ನೈಸಿಕೊಂಡಿದ್ದಾರೆ:

೧. ಎಲ್ಲ ದರ್ಬಾರ ದಫ್ತರ ಕನ್ನಡ ಆಗಿ ಎಲ್ಲ ಕೆಲಸವೂ ಕನ್ನಡದಲ್ಲಿಯೇ ನಡೆಯಬೇಕು. ೨. ಇನ್ನು ಮುಂದೆ ನೌಕರಿ ಮತ್ತು ಇತರ ಧಂದೆಗಳಲ್ಲಿ ಕನ್ನಡ ಕಲಿತ ಜನರಿಗೆ ಹೆಚ್ಚು ಪ್ರಾಶಸ್ತ್ಯ ದೊರೆಯಬೇಕು. ೩. ಎಲ್ಲ ಅಧಿಕಾರಿಗಳಿಗೆ ಕನ್ನಡ ಓದುಬರೆಹ ಬರುವಂತೆ ಒತ್ತಾಯಪಡಿಸಬೇಕು. ೪. ಜಾಹಿರ್‌ನಾಮೆ, ನೋಟೀಸು, ಸರ್ಕ್ಯುಲರ್, ಪಾವತಿ ಮುಂತಾದುವನ್ನೆಲ್ಲ ಕನ್ನಡದಲ್ಲಿ ಹೊರಡಿಸ ಬೇಕು.

---

## ಸಾದರ ಸ್ವೀಕಾರ

**ಕನ್ನಡಿಗ:**—ಸೈಂಟ್ ಜೋಸೆಫ್ಸ್ ಕಾಲೇಜಿನ ಕನ್ನಡ ಸಂಘದ ಹೊಸ ವಾರ್ಷಿಕ ಪತ್ರಿಕೆ. ಡೆಮ್ಮಿ ಅಷ್ಟಪತ್ರ ೮೦ ಪುಟಗಳು.

ಶಾಲೆ ಕಾಲೇಜುಗಳು ವರ್ಷದ ತಮ್ಮ ತಮ್ಮ ಕನ್ನಡ ಚಟುವಟಿಕೆಗಳನ್ನೂ ವಿದ್ಯಾರ್ಥಿ ವಿದ್ಯಾರ್ಥಿನಿಯರ ಬರಹಗಳನ್ನೂ ಈ ರೀತಿ ವರ್ಷದ ಕೊನೆಯಲ್ಲಿ ಪುಸ್ತಕ ರೂಪವಾಗಿ ಹೊರಗೆಡಹುವುದು ಯೋಗ್ಯವಾಗಿದೆ. ಇಂಥ ಪತ್ರಿಕೆಗಳಿಂದ ಕನ್ನಡ ನಾಡು ನುಡಿಗಳ ವಿಷಯವಾಗಿ ಆಯಾ ಶಾಲೆ ಕಾಲೇಜುಗಳ ಆದರ ಎಷ್ಟು ಗಾಢವಾಗಿದೆ, ಅವುಗಳಿಂದ ಸೇವೆ ಎಷ್ಟು ಶ್ರದ್ಧೆಯಿಂದ ನಡೆದಿದೆ ಎಂಬುದು ಗೊತ್ತಾಗುತ್ತದೆ. ಈ ದೃಷ್ಟಿಯಿಂದ 'ಕನ್ನಡಿಗ' ಪತ್ರಿಕೆಯ ಸ್ಥಾನ ಮೇಲ್ಮಟ್ಟದ್ದು ಎನ್ನಬಹುದು.

ಪತ್ರಿಕೆ ಅನೇಕ ಕವನ, ಕತೆ, ಲೇಖನ, ಚಿತ್ರಗಳಿಂದ ಆಕರ್ಷಕವಾಗಿದೆ. ಸಂಪಾದಕೀಯ ಮಂಡಲಿಯಲ್ಲಿ ಒಬ್ಬರು ಕ್ರೈಸ್ತ ಬಾಂಧವರೂ, ಇನ್ನೊಬ್ಬರು ಮುಸಲ್ಮಾನ ಬಾಂಧವರೂ ಇರುವುದು ನಿಜವಾಗಿ ಹೆಮ್ಮೆಯ ವಿಷಯ. ಶ್ರೀ ಎಂ. ಫಜ್ಲುಲ್ ಹಸನ್‌ರವರ 'ಕನ್ನಡವೂ - ಮುಸಲ್ಮಾನರೂ' ಎಂಬ ಲೇಖನ ದಿಂದ ಕನ್ನಡದ ಊಳಿಗಕ್ಕೆ ಕನ್ನಡಿಗರೇ ಆದ ನಮ್ಮ ಮುಸಲ್ಮಾನ ಬಾಂಧವರು ಇನ್ನೂ ಹೆಚ್ಚು ಸಂಖ್ಯೆಯಿಂದ ಮುಂದೆ ಬರಲು ಪ್ರೇರಣೆ ಒದಗಲೆಂದು ಹಾರೈಸು ತ್ತೇವೆ.

---

### ಬಸವ ಜಯಂತಿಯ ದಿನ

### ಮುಂಬಯಿ ಆಕಾಶವಾಣಿಯಲ್ಲಿ ಕನ್ನಡ ಕಾರ್ಯಕ್ರಮ

೯—೫—೧೯೪೦ನೆಯ ದಿನ ನಡೆಯುವ ಶ್ರೀ ಬಸವ ಜಯಂತಿಯ ಸಂದರ್ಭ ದಲ್ಲಿ ಮುಂಬಯಿ ಆಕಾಶವಾಣಿಯಲ್ಲಿ ಕನ್ನಡ ಭಾಷಣ ಮತ್ತು ವಚನ ಗಾಯನ ಕಾರ್ಯಕ್ರಮಗಳನ್ನು ಏರ್ಪಡಿಸಬೇಕೆಂದು ಗದುಗಿನ ವೀರಶೈವ ತರುಣ ಸಂಘ ದವರು ಮಾಡಿಕೊಂಡ ಪ್ರಾರ್ಥನೆಗೆ ಮುಂಬಯಿ ಆಕಾಶವಾಣಿ ಕೇಂದ್ರದ ನಿರ್ದೇಶಕರು ಒಪ್ಪಿಗೆ ಕೊಟ್ಟಿದ್ದಾರೆಂದು ತಿಳಿದು ಹರ್ಷಿಸುತ್ತೇವೆ.

# ಕನ್ನಡ ಸುದ್ದಿ

**ಬೆಂಗಳೂರು: ಅಖಿಲ ಕರ್ನಾಟಕ ಮಕ್ಕಳಕೂಟ**

ಮೇಲ್ಕಂಡ ಸಂಸ್ಥೆಯ ೬ನೆಯ ವಾರ್ಷಿಕ ಸಮಾರಂಭೋತ್ಸವವನ್ನು ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಈ ದಿವಸ ಪ್ರಾತಃಕಾಲ ನಡಸಿದರು. ಉತ್ಸವ ಕೋಟೆಯಲ್ಲಿರುವ ಹೈಸ್ಕೂಲಿನಲ್ಲಿ ನಡೆಯುತ್ತಿರುವುದು.

೬ನೆಯ ತಾರೀಖು ಬೆಳಗಿನ ಕಾರ್ಯಕ್ರಮಗಳು: ಉತ್ಸವದ ಅಧ್ಯಕ್ಷರಾದ ಕುಮಾರ ಶಿವಮೂರ್ತಿಯವರ ಮೆರವಣಿಗೆ, ಸಮ್ಮೇಳನದ ಪ್ರಾರಂಭ ಭಾಷಣಗಳು, ಸಂದೇಶಗಳ ಓದು, ಠರಾವುಗಳ ಸೂಚನೆ, ವಂದನಾಸಮರ್ಪಣೆ. ಮಧ್ಯಾಹ್ನ: ಹಿರಿಯರಿಂದ ಮಕ್ಕಳಿಗಾಗಿ ಭಾಷಣ ಮತ್ತು ಮಕ್ಕಳಿಂದ ವಿವಿಧ ವಿನೋದಾವಳಿ.

೭ನೆಯ ತಾರೀಖು ಬೆಳಗಿನ ಕಾರ್ಯಕ್ರಮ: ಮಕ್ಕಳಿಂದ ಕತೆ, ಕವಿತೆ, ಗದ್ಯ ಮೊದಲಾದುವುಗಳ ವಾಚನ. ಮಕ್ಕಳ ಕೂಟದ ಸದಸ್ಯರ ಸಭೆಯಲ್ಲಿ ಠರಾವಿನ ಮೇಲಣ ಚರ್ಚೆಗಳು, ಸಮ್ಮೇಳನದ ಮುಕ್ತಾಯ. ಮಧ್ಯಾಹ್ನ: ಧರ್ಮಪ್ರಕಾಶ ಧರ್ಮಾತ್ಮಾ ಎಸ್. ಸಜ್ಜನರಾಯರವರಿಂದ ಬಹುಮಾನ ವಿನಿಯೋಗ, ವಿವಿಧ ವಿನೋದಾವಳಿ, ಅಧ್ಯಕ್ಷರ ಮುಕ್ತಾಯ ಭಾಷಣ, ವಂದನಾಸಮರ್ಪಣೆ.

**ಹೊಳೆನರಸೀಪುರ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಕಳೆದ ೨೮-೩-೪೦ನೆಯ ಗುರುವಾರ ಪುರಭವನದಲ್ಲಿ ಮೈಸೂರು ಇಂಟರ್ ಮೀಡಿಯೇಟ್ ಕಾಲೇಜಿನ ಭೌತ ಶಾಸ್ತ್ರದ ಅಧ್ಯಾಪಕರಾದ ಶ್ರೀ ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ. ಅವರು 'ವಿದ್ಯುಚ್ಛಕ್ತಿ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಸ್ಕೂಲ್‌ಬೋರ್ಡ್ ಅಸಿಸ್ಟೆಂಟ್ ಆಫೀಸರಾದ ಶ್ರೀ ಬಿ. ಗೋಪಾಲಸ್ವಾಮಿ, ಬಿ.ಎ. ಅವರು ಅಧ್ಯಕ್ಷತೆ ವಹಿಸಿದ್ದರು.

**ಹೊಸಕೋಟೆ: ಕನ್ನಡ ಗೆಳೆಯರ ಕೂಟ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಯುಗಾದಿಯ ಹಬ್ಬದ ದಿನ (೮-೪-೪೦) "ಕನ್ನಡ ಹಬ್ಬ" ನಡೆಯುವುದು. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎಂ.ಎ ಅವರು ಅಧ್ಯಕ್ಷತೆಯನ್ನು ವಹಿಸುವರು. ಕೆಲವು ಪ್ರಸಿದ್ಧ ಸಾಹಿತಿಗಳು ಉಪನ್ಯಾಸ ಮಾಡುವರು.

**ಕರ್ನಾಟಕ ಸಂಘ: ಮಂಡ್ಯ**

ಈ ಸಂಘದ ಆಶ್ರಯದಲ್ಲಿ 'ಸರಸ್ವತಿ ಗ್ರಂಥಮಾಲೆ' ನಡೆಯುತ್ತಿದ್ದು ಈಗಾಗಲೇ ನಾಲ್ಕು ಪುಸ್ತಕಗಳು ಪ್ರಕಟವಾಗಿವೆ. ಸಂಚಾರಿ ಪುಸ್ತಕ ಭಂಡಾರವೂ ಬಹಳ ಯಶಸ್ವಿಯಾಗಿ ಕೆಲಸ ಮಾಡುತ್ತಿದೆ. ಸದ್ಯದಲ್ಲಿಯೇ 'ಪ್ರತಿಭೆ' ಎಂಬ ಮಾಸಪತ್ರಿಕೆ ಹೊರಡುವುದಾಗಿದೆಯೆಂದು ತಿಳಿಯ ಬರುತ್ತದೆ.

**ಕರ್ನಾಟಕ ಸಂಘ: ಆನೇಕಲ್**

ಈ ಸಂಘದವರು ಈ ತಿಂಗಳು ಬೆಂಗಳೂರಿನ ಕೆಲವು ಸಾಹಿತಿಗಳನ್ನು ಆಹ್ವಾನಿಸಿ ಉಪನ್ಯಾಸಗಳನ್ನು ಏರ್ಪಡಿಸಲಿದ್ದಾರೆಂದು ತಿಳಿಯ ಬರುತ್ತದೆ.

**ಹುಂಗೇನಹಳ್ಳಿ: ಕರ್ನಾಟಕ ಸಂಘ ಸ್ಥಾಪನೆಗೆ ಸಲಹೆ**

ಶ್ರೀ. ಬೆನಗಲ್ ರಾಮರಾಯರು ಕೋಲಾರದ ಸಾಹಿತ್ಯೋತ್ಸವದಲ್ಲಿ ಭಾಗವಹಿಸಿ ಬೆಂಗಳೂರಿಗೆ ಹಿಂತಿರುಗುತ್ತ ಮಾರ್ಗದಲ್ಲಿ ಹುಂಗೇನಹಳ್ಳಿ ಜಮೀನ್‌ದಾರರಾದ ಶ್ರೀ ಎಚ್. ಎಸ್. ಮಾಧವರಾಯರ ಆಹ್ವಾನವನ್ನು ಮನ್ನಿಸಿ ಆ ಗ್ರಾಮದಲ್ಲಿ ಇಳಿದು, ಆ ಪುರಜನರ ಕೋರಿಕೆಯಂತೆ ಅಲ್ಲಿ ನೆರೆದಿದ್ದ ಸಭೆಯಲ್ಲಿ 'ಕರ್ನಾಟಕ ಏಕೀಕರಣ'ದ ವಿಷಯವಾಗಿ ಉಪನ್ಯಾಸವನ್ನು ಮಾಡಿದರು. ಅಲ್ಲದೆ ಹುಂಗೇನಹಳ್ಳಿ ಗ್ರಾಮದಲ್ಲೊಂದು ಕರ್ನಾಟಕ' ಸಂಘವನ್ನು ಸ್ಥಾಪಿಸಿಕೊಳ್ಳಬೇಕೆಂದು ಸೂಚನೆ ಕೊಟ್ಟರು. ಆದಷ್ಟು ಜಾಗ್ರತೆ ಸ್ಥಾಪಿಸುವುದಾಗಿ ಗ್ರಾಮಸ್ಥರು ಒಪ್ಪಿಕೊಂಡರು.

**ಮಾರ್ಕೋನಹಳ್ಳಿ: ಕರ್ನಾಟಕ ಸಂಘ**

ಮೈಸೂರು ವಿಶ್ವವಿದ್ಯಾನಿಲಯದ ಸೆಟ್ಲ್‌ಮೆಂಟ್‌ನವರು ಏರ್ಪಡಿಸಿರುವ ಗ್ರಾಮಸೇವಾ ಶಿಬಿರ ಇಲ್ಲಿ ಸುಮಾರು ಒಂದು ತಿಂಗಳಿಂದಲೂ ಇರುವ ಸಂದರ್ಭವನ್ನು ಉಪಯೋಗಿಸಿಕೊಂಡು ಸ್ಥಳೀಯ ಕರ್ನಾಟಕ ಸಂಘದವರು ಕೆಲವು ವಿಶೇಷ ಕಾರ್ಯಕಲಾಪಗಳನ್ನು ಕೈಗೊಂಡರು. ಕಳೆದ ವಾರ ಸಂಘದವರು ಶ್ರೀ ಟಿ. ಪಿ. ಕೈಲಾಸಂ ಅವರ 'ಬೊಳ್ಳುಗಟ್ಟಿ' ಮತ್ತು ಶ್ರೀ ಕೆ. ವಿ. ಪುಟ್ಟಪ್ಪನವರ 'ಯಮನ ಸೋಲು' ಎಂಬ ಎರಡು ನಾಟಕಗಳನ್ನು ಬಹು ಯಶಸ್ವಿಯಾಗಿ ಪ್ರದರ್ಶಿಸಿದರು. ಆ ಸಂದರ್ಭದಲ್ಲಿ ಸಂಘದ ಅಧ್ಯಕ್ಷರಾದ ಶ್ರೀ ಎಂ. ನರಸಿಂಹಯ್ಯ, ಬಿ.ಇ., ಎಂ.ಐ.ಇ. ಅವರು ಸಂಘದ ಬೆಳವಣಿಗೆಯನ್ನು ಕುರಿತು ಪ್ರಸ್ತಾವಿಸಿ, ವಿಶ್ವವಿದ್ಯಾನಿಲಯದವರು ದೀರ್ಘಕಾಲ ಇಲ್ಲಿ ಸೆಟ್ಲ್‌ಮೆಂಟ್ ಏರ್ಪಡಿಸುವ ಉದ್ದೇಶ ಸಫಲಗೊಂಡರೆ, ಕರ್ನಾಟಕ ಸಂಘದವರು ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಈ ಸಂಘವನ್ನು ಪರಿಷತ್ತಿನ ಅಂಗಸಂಸ್ಥೆಯಾಗಿ ಸೇರಿಸಲು ಸಾಧ್ಯವಾಗುತ್ತದೆಯೆಂದು ಸಭೆಗೆ ತಿಳಿಸಿದರು.

ಎರಡನೆಯದಾಗಿ ಸಂಘದವರು "ಈಗಿನ ವಿದ್ಯಾಭ್ಯಾಸದಿಂದ ನಮ್ಮ ದೇಶಕ್ಕೆ ಬಹಳ ಹಾನಿಯುಂಟಾಗಿದೆ" ಎಂಬ ವಿಷಯದ ಮೇಲೆ ಒಂದು ಚರ್ಚಾಕೂಟವನ್ನು ಏರ್ಪಡಿಸಿದ್ದರು. ಕಾಲೊನಿಯ ನಿವಾಸಿಗಳೂ ಸೆಟ್ಲ್‌ಮೆಂಟ್ ವಿದ್ಯಾರ್ಥಿಗಳೂ ಇದರಲ್ಲಿ ಬಹು ಉತ್ಸಾಹದಿಂದ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಮೈಸೂರು ಪ್ರಾಂತ ಸಮಿತಿಯ ಸದಸ್ಯರೂ, ಸೆಟ್ಲ್‌ಮೆಂಟ್ ನಾಟಕ ಶಾಖೆಯ ಚಾಲಕರೂ ಆದ ಶ್ರೀ ಎನ್. ಎಸ್. ರಾಮಚಂದ್ರಯ್ಯನವರು, ಈ ಸಂಘ ಪರಿಷತ್ತಿನ ಉದ್ದೇಶವನ್ನು ನೆರವೇರಿಸುತ್ತಿರುವುದಕ್ಕಾಗಿ ಸಂಘವನ್ನು ಅಭಿನಂದಿಸಿ, ಸಂಘ ಬೇಗನೆ ಪರಿಷತ್ತಿನ ಅಂಗಸಂಸ್ಥೆಯಾಗುವಂತಾಗಲೆಂದು ಹಾರೈಸಿದರು.

ಸಂಘದ ಆಶ್ರಯದಲ್ಲಿ ಸೆಟ್ಲ್‌ಮೆಂಟ್‌ನವರು ಶ್ರೀ ಡಿ. ಎಂ. ಸುಬ್ಬರಾಮಯ್ಯ, ಬಿ.ಎ., ಬಿ.ಟಿ. ಅವರ ಸಂಗೀತ ಕಚೇರಿಯನ್ನು ಏರ್ಪಡಿಸಿದ್ದರು; ಮತ್ತು ರೈತರ ಸಮಸ್ಯೆಗಳನ್ನೊಳಗೊಂಡ 'ಬೋರೇ ಗೌಡನ ವ್ಯವಹಾರ' ಎಂಬ ಒಂದು ಸಾಮಾಜಿಕ ನಾಟಕವನ್ನು ಪ್ರದರ್ಶಿಸಿದರು. ಈ ಎಲ್ಲ ಉತ್ಸವಗಳಿಗೂ ನೂರಾರು ಮಂದಿ ರೈತರೂ, ಅಧಿಕಾರಿಗಳೂ ಬಂದು ಭಾಗವಹಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

**ಧಾರವಾಡ: ಕರ್ನಾಟಕ ವಿದ್ಯಾವರ್ಧಕ ಸಂಘ**

ಮೇಲ್ಕಂಡ ಸಂಘದವರು ಕರ್ನಾಟಕ ಮಹಾರಾಷ್ಟ್ರಗಳ ಪರಸ್ಪರ ಸೌಹಾರ್ದ ಸಾಧನೆಗಾಗಿ ತಕ್ಕ ಯೋಜನೆಗಳನ್ನು ಕೈಗೊಳ್ಳಲು ಸಭೆ ನಡೆಸಿ ವಿಚಾರ ವಿನಿಮಯ ಮಾಡಿದರು.

**ಧಾರವಾಡ: ಕನ್ನಡ ಸಂಶೋಧನೆ**

ಮುಂಬಯಿ ಸರಕಾರದವರು ಧಾರವಾಡದಲ್ಲಿ ಸ್ಥಾಪಿಸಿರುವ ಕನ್ನಡ ಸಂಶೋಧನ ಸಂಘದ ಡೈರೆಕ್ಟರಾದ ಶ್ರೀ ಆರ್. ಎಸ್. ಪಂಚಮುಖಿಯವರು ಇಂಡಿಯಾ ಸರಕಾರದ ಪ್ರಾಚ್ಯ ಶಾಖಾಧಿಕಾರಿಗಳೊಂದಿಗೆ ವಿಚಾರ ವಿನಿಮಯ ಮಾಡಿ ಸಲಹೆ ಪಡೆದು ಕನ್ನಡ ಸಂಶೋಧನೆಯ ಕೆಲಸ ನಡಸಲು ಒಂದು ಯೋಜನೆಯನ್ನು ರಚಿಸಿದ್ದಾರೆಂದು ತಿಳಿಯಬರುತ್ತದೆ.

**ಬೆಳಗಾಂವಿ: ಕನ್ನಡ ಟ್ರೈನಿಂಗ್ ಕಾಲೇಜು ಸ್ಥಾಪನೆ**

ಕರ್ನಾಟಕ ಲಿಂಗಾಯತ ಶಿಕ್ಷಣ ಸಂಘದವರು ಬರುವ ಜೂನ್ ತಿಂಗಳಿಂದ ಬೆಳಗಾಂವಿಯಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಕರ ಸಲುವಾಗಿ ಒಂದು ಟ್ರೈನಿಂಗ್ ಕಾಲೇಜನ್ನು ತೆರೆಯಲು ನಿಶ್ಚಯಿಸಿದ್ದಾರೆಂದು ತಿಳಿಯಬರುತ್ತದೆ.

**ಮುಂಬಯಿ: ಕನ್ನಡ ಸಂಘ**

ಮೇಲ್ಕಂಡ ಸಂಘದ ನಾಲ್ಕನೆಯ ವಾರ್ಷಿಕೋತ್ಸವ ಕಳೆದ ೩೧ನೆಯ ತಾರೀಖು ಭಾನುವಾರ ನಡೆಯಿತು. ನ್ಯಾಯವೇದಾಂತ ವಿದ್ವಾನ್ ಮಹಾಮುಲಿ ಆರ್. ಗೋಪಾಲಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು.

ಶ್ರೀ ವಿ. ಎನ್. ಚಂದಾವರ್ಕರ್, ದಿವಾನ್ ಬಹದ್ದೂರ್ ಶ್ರೀ ಕೆ. ರಾಮಸ್ವಾಮಿ ಮುಂತಾಗಿ ಅನೇಕ ಕನ್ನಡ ಅಭಿಮಾನಿಗಳಾದ ಮಹನೀಯರೂ ಮಹಿಳೆಯರೂ ಉತ್ಸವಕ್ಕೆ ದಯಮಾಡಿಸಿದ್ದರು.

ಅದೇ ದಿನ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾದ ರಾಜಕಾರ್ಯಪ್ರವೀಣ ಶ್ರೀ ಎನ್. ಎಸ್. ಸುಬ್ಬರಾಯರವರು ಸಂಘದ ಪುಸ್ತಕ ಭಂಡಾರದ ಆರಂಭೋತ್ಸವವನ್ನು ನಡಸುತ್ತ, "ನಾವು ಓದುತ್ತಿದ್ದ ಕಾಲದಲ್ಲಿ ಇಂಗ್ಲಿಷ್ ಮೊದಲಿತ್ತು, ಕನ್ನಡ ಕೊನೆಗಿತ್ತು. ಒಬ್ಬ ಮದ್ಯಾಭಿಮಾನಿ ವಿಸ್ಕಿ, ಬ್ರಾಂದಿ ಮುಂತಾದ ಯಾವ ಮದ್ಯದ ತೊಟ್ಟನ್ನು ಬಾಯಿಗೆ ಹಾಕಿದರೂ ಅದರ ಹೆಸರನ್ನು ಹೇಳಿ, ಒಂದು ತೊಟ್ಟು ಹಾಲು ಹಾಕಲು ಅದರ ಹೆಸರನ್ನು ಹೇಳದೆ ಹೋದನಂತೆ. ಈ ರೀತಿ ಇತ್ತು ನಮ್ಮ ಕಾಲ. ಕನ್ನಡ ನುಡಿ ತಾಯಿ ಹಾಲಿನಂತೆ. ಕನ್ನಡವನ್ನು ಮರೆಯಬೇಡಿ" ಎಂದು ಹೇಳಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಕನ್ನಡದ ಅಭಿವೃದ್ಧಿಗೆ ಎಲ್ಲರ ಸಹಾಯವನ್ನು ಕೋರಿದರು.

---

## ಕನ್ನಡ ಶೀಘ್ರಲಿಪಿ ಶಿಕ್ಷಣ

ಬೆಂಗಳೂರು ಶೀಘ್ರಲಿಪಿಕಾರರ ಸಂಘದ ಆಶ್ರಯದಲ್ಲಿ ಕನ್ನಡ ಶೀಘ್ರಲಿಪಿ ಶಿಕ್ಷಣ ತರಗತಿ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಸದ್ಯದಲ್ಲಿಯೇ ಆರಂಭವಾಗಲಿದೆ.

---

## ಬೆಂಗಳೂರಿನಲ್ಲಿ ಸುಪ್ರಸಿದ್ಧ ಸಂಗೀತ ವಿದ್ವಾಂಸರು

ಕನ್ನಡ ನಾಡಿನ ಸುಪ್ರಸಿದ್ಧ ಸಂಗೀತ ವಿದ್ವಾಂಸರೂ, ಸಂಗೀತಸಾಗರ ಮುಂತಾಗಿ ಬಿರುದಾಂಕಿತರೂ ಆದ ಶ್ರೀ ಪಂಚಾಕ್ಷರಿ ಗವಾಯಿಗಳು ತಾವು ನಡಸುತ್ತಿರುವ ಶ್ರೀ ಶಿವಯೋಗ ಮಂದಿರ ಕುರುಡ ಮತ್ತು ಅನಾಥ ಬಾಲಕರ ಸಂಗೀತ ಮತ್ತು ಜ್ಯೋತಿಷ್ಯ ಪಾಠಶಾಲೆಯ ಸಹಾಯಾರ್ಥವಾಗಿ ಶ್ರೀ ಶಿವಾನಂದ ನಾಟಕ ಶಾಲೆಯಲ್ಲಿ ತಮ್ಮ ಶಿಷ್ಯರೊಂದಿಗೆ ೮-೪-೪೦ರಲ್ಲಿ ಸಂಗೀತ ಕಚೇರಿ ನಡಸುವವರಾಗಿದ್ದಾರೆ.

೩೯-೬೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡನುಡಿ



ಸಂಪುಟ ೨
ಸಂಚಿಕೆ ೨೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೨, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಹೊಸ ವರುಷದ ಹರಕೆ

ಹೊಸಗಾಲ ಬಂದುದಿದೊ ಹಸನಾಗಿ ದುಡಿದೆಮ್ಮ
  ಹೊಸ ನಾಡ ಕಟ್ಟಲಿಕೆ ಹುರಿಪು ಕೊಡಲು ॥
ಹೊಸ ಉಸಿರು ಹೊಸ ಒಗರು ಹೊಸ ರೀತಿ ನೀತಿಗಳ
  ವಿಸರಗಳ ನಳವಡಿಸಿ ಮುನ್ನಡೆಯಲು ॥ ೧ ॥

'ವಿಕ್ರಮ'ದ ವರುಷವೆಂದೆಂಬರಿದನು ನಮ್ಮ
  ವಿಕ್ರಮವನೋಡೆ ಬಂದಿಹುದೆಂಬೆನು ॥
'ವಿಕ್ರಮ ಚಾಲುಕ್ಯ'ನ ಪರಾಕ್ರಮವ ನೆನೆಧ್ಧು ತ್ರಿ
  ವಿಕ್ರಮನೊಲೇಳುವರೆ ಕನ್ನಡಿಗರು? ॥ ೨ ॥

ನುಡಿ ಮೊದಲು ಸಾಹಿತ್ಯ– ನಡೆ ಮೊದಲು ಚಾರಿತ್ರ್ಯ–
  ದೊಡನೆಲ್ಲ ಕನ್ನಡಿಗರೊಕ್ಕೂಟವು ॥
ಎಡೆತಡೆಗಳನು ಮೆಟ್ಟಿ ಉಡುಗಣದ ನೆಲೆಮುಟ್ಟಿ
  ಒಡಗೂಡಲೆಂದೆನ್ನ ಬಡ ಹರಕೆಯು ॥ ೩ ॥

ವಿಕ್ರಮ ಚೈತ್ರ ಶು॥ ೧
೮-೪-೪೦

**ಮುದವೀಡು ಕೃಷ್ಣರಾಯರು**
ಸಮ್ಮೇಳನಾಧ್ಯಕ್ಷರು

---

## ಕನ್ನಡ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವ

ಪರಿಷತ್ತಿನ ಮಹಾಪೋಷಕರಾದ ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಮನ್ ಮಹಾರಾಜರವರು ಕನ್ನಡ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವ ಸಮಾರಂಭವನ್ನು ಜೂನ್ ತಿಂಗಳು ೩ನೆಯ ತಾರೀಖು ಭಾನುವಾರ ಬೆಳಗ್ಗೆ ೯ ಗಂಟೆಗೆ ನೆರವೇರಿಸಲು ಅನುಗ್ರಹಪೂರ್ವಕವಾಗಿ ಒಪ್ಪಿರುತ್ತಾರೆ.

# ದರ್ಶನಗಳು

ಶ್ರೀ ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ॥ ೬-೪-೧೯೪೫ನೆಯ ಸಂಚಿಕೆಯಿಂದ ಮುಂದುವರಿದುದು)

## ಪೂರ್ವ ಮೀಮಾಂಸೆ

ಶ್ರುತಿಗಳಲ್ಲಿ ತೋರಿಬಂದ ಯಾಗಮಾರ್ಗವನ್ನು ಅವಲಂಬಿಸಿ, ಯಾಗದ ಮಹಿಮೆಯನ್ನು ಸ್ಪಷ್ಟಪಡಿಸಲು ಮೀಮಾಂಸಾ ಮತ ಪ್ರಯತ್ನ ಮಾಡಿತು. ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಮತ್ತು ಅನುಪಲಬ್ಧಿ ಎಂದು ಆರು ಪ್ರಮಾಣಗಳನ್ನು ಈ ದರ್ಶನದಲ್ಲಿ ಒಪ್ಪುತ್ತಾರೆ. ಶಬ್ದಪ್ರಮಾಣವೆಂದರೆ ಆಪ್ತರ ವಚನವೂ ವೇದವೂ ಆಗುತ್ತದೆ. ವೇದವೇ ಉತ್ತಮವಾದ ಪ್ರಮಾಣ. ಅದರಲ್ಲಿ ಇರುವ ವಾಕ್ಯಗಳು ನಿತ್ಯವಾದುವು. ಅವುಗಳನ್ನು ಯಾರೂ ರಚಿಸಿಲ್ಲ. ಆ ವಾಕ್ಯಗಳನ್ನು ಸರಿಯಾಗಿ ಅರ್ಥಮಾಡುವುದೇ ಮೀಮಾಂಸೆಯ ಮುಖ್ಯ ಧ್ಯೇಯ. ವೇದವಾಕ್ಯಗಳನ್ನು ಸರಿಯಾಗಿ ತಿಳಿದುಕೊಳ್ಳದೆ ಹೋದರೆ ಯಾಗಗಳನ್ನು ಸಂಪೂರ್ಣವಾಗಿ ಮಾಡುವುದಕ್ಕೆ ಆಗುವುದಿಲ್ಲ. ಹಾಗೆ ಮಾಡದೆ ಹೋದರೆ ಯಾಗಗಳಿಂದ ದೊರೆಯಬಹುದಾದ ಫಲವೂ ದೊರೆಯದೆ ನಾವು ವೃಥಾ ಆಯಾಸಪಟ್ಟಂತಾಗುವುದು. ಈ ರೀತಿ ವೇದಗಳ ಶಬ್ದಕ್ಕೂ ಅವುಗಳಲ್ಲಿ ತೋರಬಹುದಾದ ಅರ್ಥಕ್ಕೂ ಸಂಬಂಧವನ್ನು ಕಲ್ಪಿಸುತ್ತಾ ವಾಕ್ಯಗಳನ್ನು ಸರಿಯಾಗಿ ವ್ಯಾಖ್ಯಾನ ಮಾಡುವ ಬಗೆಯನ್ನು ವಿಶದಪಡಿಸುವುದು ಮೀಮಾಂಸೆಯ ಕರ್ತವ್ಯಗಳಲ್ಲಿ ಮುಖ್ಯವಾದದ್ದಾಗಿದೆ.

ಗೌರವ ಪುರಸ್ಸರವಾಗಿ ಮಾಡುವ ವಿಚಾರ ಎಂಬ ಅರ್ಥದಲ್ಲಿ ಮೀಮಾಂಸಾ ಪದವನ್ನು ಉಪಯೋಗಿಸಲಾಗಿದೆ. ವೇದವಾಕ್ಯಗಳನ್ನು ಅರ್ಥಮಾಡಿಕೊಳ್ಳುವುದು ಮಾತ್ರ ಸಾಲದು. ಆ ವಾಕ್ಯಗಳಲ್ಲಿ ಪೂರ್ಣ ವಿಶ್ವಾಸವನ್ನೂ ಗೌರವವನ್ನೂ ತೋರಿಸಬೇಕು. ಹೀಗೆ ಭಕ್ತಿಯಿಂದ ತಿಳಿದ ಅರ್ಥದ ಪ್ರಕಾರ ಸ್ವಲ್ಪವೂ ತಪ್ಪದೆ ಯಾಗ ಮಾಡಿದರೆ ನಮಗೆ ಫಲ ಲಭ್ಯವಾಗುತ್ತದೆ. ಮೊದಲು ಸ್ವರ್ಗ ಮುಂತಾದ ಸ್ಥಾನಗಳಲ್ಲಿ ಸುಖವನ್ನು ಅನುಭವಿಸುವುದಕ್ಕೋಸ್ಕರ ಯಾಗಗಳನ್ನು ಮಾಡಬೇಕು ಎಂದು ಉಪದೇಶವಿತ್ತು. ಬರುಬರುತ್ತಾ ಸ್ವರ್ಗಕ್ಕೆ ಬದಲಾಗಿ ಮೋಕ್ಷದಲ್ಲಿ ಮನಸ್ಸಿಟ್ಟು ಅದಕ್ಕೆ ಈ ಶಾಸ್ತ್ರ ಹೇಗೆ ಉಪಕಾರವಾಗಬಹುದು ಎಂಬುದಾಗಿ ವಿಚಾರವಾಯಿತು. ಅಂದಿನಿಂದ ಮೀಮಾಂಸೆ ದರ್ಶನ ಶಾಸ್ತ್ರವಾಯಿತು.

ಈ ದರ್ಶನಕ್ಕೆ ಜೈಮಿನಿ ಋಷಿಗಳು ಪ್ರವರ್ತಕರಾದರು. ಇವರು ಹನ್ನೆರಡು ಅಧ್ಯಾಯಗಳಲ್ಲಿ ಧರ್ಮಸೂತ್ರಗಳನ್ನು ರಚಿಸಿದರು. ಇವಕ್ಕೆ ಉಪವರ್ಷಾಚಾರ್ಯರ ವೃತ್ತಿಯೂ ಶಬರಸ್ವಾಮಿಗಳು ಅತಿ ರಮಣೀಯವಾದ ಶೈಲಿಯಲ್ಲಿ ರಚಿಸಿದ ಭಾಷ್ಯವೂ ಇವೆ. ಈ ದರ್ಶನ ಸುಮಾರು ಏಳನೆಯ ಶತಮಾನದಿಂದ ಎರಡು ಕವಲಾಗಿ ಒಡೆಯಿತು. ಒಂದು ಪ್ರಭಾಕರನಿಂದ ಏರ್ಪಟ್ಟ **ಪ್ರಾಭಾಕರಮತ.** ಮತ್ತೊಂದು ಕುಮಾರಿಲ ಭಟ್ಟನಿಂದ ಏರ್ಪಟ್ಟ **ಭಾಟ್ಟಮತ.** ಇವರಿಬ್ಬರ ಪ್ರಯತ್ನದಿಂದ ಮೀಮಾಂಸಾ ದರ್ಶನ ಬಹಳಮಟ್ಟಿಗೆ ವಿಚಾರಪೂರ್ವಕವಾದ ದರ್ಶನ ಗ್ರಂಥವಾಯಿತು.

ನ್ಯಾಯವೈಶೇಷಿಕ ದರ್ಶನಕ್ಕೂ ಈ ದರ್ಶನಕ್ಕೂ ಬಹಳ ಮಟ್ಟಿಗೆ ಪ್ರಮೇಯ ಭಾಗದಲ್ಲಿ ಹೋಲಿಕೆಯಿದೆ. ಆದರೂ ಕೆಲವು ಮುಖ್ಯ ಸಂದರ್ಭಗಳಲ್ಲಿ ವಿಶೇಷ ತೋರಿಬರುತ್ತದೆ. ದ್ರವ್ಯಗಳೆಲ್ಲಾ ನಿತ್ಯ; ಅವುಗಳಲ್ಲಿ ಅನಿತ್ಯಾಂಶವೂ ಇದೆ; ಒಂದೇ ದ್ರವ್ಯ ಅನೇಕ ವಿಧವಾಗಿ ಮಾರ್ಪಡುತ್ತದೆ; ಆದರೂ ಹೀಗೆ ಮಾರ್ಪಡುವ ದ್ರವ್ಯ ಒಂದಿರುವುದರಿಂದ ಪ್ರತಿಯೊಂದು ವಸ್ತುವಿನಲ್ಲಿಯೂ ಮಾರ್ಪಡದೆ ಇರುವ ಒಂದಂಶವೂ ಮಾರ್ಪಡುವ ಮತ್ತೊಂದಂಶವೂ ತೋರುತ್ತದೆ. ಈ ವಾದಕ್ಕೆ **ಭೇದಾಭೇದ**ವೆಂದು ಹೆಸರು. ನಮ್ಮ ದೇಹ ಹುಟ್ಟಿ ಸಾಯುವ ವರೆಗೂ ಒಂದೇ ವಿಧವಾಗಿರುವುದಿಲ್ಲ. ದೇಹದಲ್ಲಿ ಪ್ರತಿ ಕ್ಷಣವೂ ಅನೇಕ ಬದಲಾವಣೆಗಳು ತೋರುತ್ತವೆ. ಆದರೂ ದೇಹ ಮಾಯವಾಗಿ ಹೋಗುವುದಿಲ್ಲ. ಈ ಪರಿಣಾಮವೇ ಭೇದಾಭೇದ ರೂಪವಾದ ಪರಿಣಾಮ. ದ್ರವ್ಯಗಳು ನಿತ್ಯವಾದ್ದರಿಂದ ಸೃಷ್ಟಿ ಮತ್ತು ಪ್ರಳಯ ಎಂಬುದು ನಿಜವಲ್ಲ. ಆದಕಾರಣ ಪ್ರಪಂಚವನ್ನು ಸೃಷ್ಟಿಸಿದ ಈಶ್ವರನನ್ನು ಒಪ್ಪಬೇಕಾದ್ದಿಲ್ಲ. ಸಾಂಖ್ಯರಂತೆ ಮೀಮಾಂಸಕರೂ ಈಶ್ವರನನ್ನು ನಿರಾಕರಿಸಿದ್ದಾರೆ. ಜೀವರು ವಿಭುವಾಗಿ ಎಲ್ಲೆಲ್ಲಿಯೂ ವ್ಯಾಪಿಸಿದ್ದಾರೆ. ಅವರ ಸಂಖ್ಯೆ ಅನಂತ. ಅವರಿಗೆ ಜ್ಞಾನವು ಸ್ವರೂಪವಲ್ಲ. ಕಲ್ಲು ಮಣ್ಣು ಮುಂತಾದ ವಸ್ತುಗಳಂತೆ ಆತ್ಮನು ಜಡಪದಾರ್ಥ. ಆದರೆ ಆತ್ಮನಲ್ಲಿ ಬುದ್ಧಿಯೆಂಬ ಒಂದು ಶಕ್ತಿ ವಿಶೇಷವಿದೆ. ಅದು ನಮಗೆ ಪ್ರತ್ಯಕ್ಷವಲ್ಲ. ಬುದ್ಧಿಯು ಮನಸ್ಸು ಮುಂತಾದ ಇಂದ್ರಿಯಗಳ ಮೂಲಕ ಪದಾರ್ಥಗಳನ್ನು ಮುಟ್ಟಿ ಅವುಗಳಲ್ಲಿ ಪ್ರಕಾಶವನ್ನು ಉಂಟುಮಾಡುತ್ತದೆ. ಅದಕ್ಕೆ **ಪ್ರಾಕಟ್ಯ**ವೆಂದು ಹೆಸರು. ಆ ಪ್ರಕಾಶವನ್ನು ನೋಡಿದ್ದರಿಂದ, ಅದಕ್ಕೆ ಮೊದಲು ಆತ್ಮನಲ್ಲಿ ಜ್ಞಾನ ಉಂಟಾಗಿರಬೇಕು ಎಂದು ನಿಷ್ಕರ್ಷಿಸುತ್ತೇವೆ. ಆ ಪ್ರಕಾಶದಲ್ಲಿ ವಿಷಯವೂ ಆತ್ಮನೂ ಸಹ ವೇದ್ಯವಾಗುತ್ತಾರೆ. ಜ್ಞಾನವನ್ನು ಮಾತ್ರ ಅನುಮಾನದಿಂದಲೇ ಸ್ಥಾಪಿಸಬೇಕು.

ನಮ್ಮ ಜಾಗ್ರದವಸ್ಥೆಯಲ್ಲಿ ಅನುಭವ ಹೇಗೆ ಉಂಟಾಗುತ್ತದೆಯೋ ಹಾಗೆಯೇ ಸ್ವಪ್ನದಲ್ಲಿಯೂ ಆಗುತ್ತದೆ. ಆದರೆ ಬಾಹ್ಯೇಂದ್ರಿಯಗಳ ವ್ಯಾಪಾರ ಮಾತ್ರ ಆಗ ಇರುವುದಿಲ್ಲ. ಸುಷುಪ್ತಿ ಅಂದರೆ ನಿದ್ರೆಯಲ್ಲಿ ಆತ್ಮನಿಗೆ ಯಾವ ಅನುಭವವೂ ಇಲ್ಲ. ಜ್ಞಾನವು ಆಗ ಅತಿ ಸೂಕ್ಷ್ಮಾವಸ್ಥೆಯಲ್ಲಿರುತ್ತದೆ. ಸುಷುಪ್ತಿಯಲ್ಲಿ ಆತ್ಮನು ಯಾವ ರೀತಿ ಇದ್ದಾನೆ ಎಂಬುದು ವೇದ್ಯವಾಗುತ್ತದೆ. ವೇದಾಂತಿಗಳ ಪ್ರಕಾರ ಆತ್ಮನು ಆನಂದ ಸ್ವರೂಪನಾದ್ದರಿಂದ ಸುಷುಪ್ತಿಯಲ್ಲಿ ತನ್ನ ಆನಂದವನ್ನು ಅನುಭವಿಸುತ್ತಿರುತ್ತಾನೆ. ಇದನ್ನು ಮೀಮಾಂಸಕರು ಒಪ್ಪುವುದಿಲ್ಲ. ನಾವು ನಿದ್ರೆ ಮಾಡುತ್ತಿರುವಾಗ ಕೆಲವು ರಮಣೀಯವಾದ ಅನುಭವಗಳನ್ನು ನಮ್ಮ ಸ್ನೇಹಿತರು ಅನುಭವಿಸಿ, ನಾವು ಎಚ್ಚತ್ತ ಮೇಲೆ ಆ ಅನುಭವಗಳನ್ನು ನಮಗೆ ವರ್ಣಿಸುತ್ತಾರೆ. ಆಗ ನಾವು ನಿದ್ರೆಗೆ ವಶರಾದದ್ದಕ್ಕಾಗಿ ವ್ಯಸನಪಡುತ್ತೇವೆ. ಆತ್ಮನು ಆನಂದಮಯನಾಗಿದ್ದಿದ್ದರೆ, ಆ ಆನಂದವನ್ನು ನಿದ್ರೆಯಲ್ಲಿ ಅನುಭವಿಸುತ್ತಿದ್ದ ನಾವು ವ್ಯಸನ ಪಡಬೇಕಾಗಿರಲಿಲ್ಲ. ಈ ಕಾರಣದಿಂದ ಆತ್ಮನೂ ಜಡದ್ರವ್ಯಗಳಲ್ಲಿ ಒಂದು ಎಂದು ಅಭಿಪ್ರಾಯ ಪಡಲಾಗಿದೆ.

ಯಾವ ಪದಾರ್ಥವನ್ನು ತಿಳಿದುಕೊಳ್ಳಬೇಕಾದರೂ ಜ್ಞಾನವು ಅದರಲ್ಲಿ ಪ್ರಕಾಶವನ್ನುಂಟುಮಾಡಬೇಕು. ಜ್ಞಾನ ಎರಡು ಕವಲಾಗಿ ಒಡೆದು, ಒಂದು ವಿಷಯವನ್ನೂ ಮತ್ತೊಂದು ಆತ್ಮನನ್ನೂ ಸಮಕಾಲದಲ್ಲಿ ಪ್ರಕಾಶಪಡಿಸುತ್ತದೆ. ಈ ರೀತಿ ಎಲ್ಲ ಅನುಭವಗಳಲ್ಲಿಯೂ ಜ್ಞಾನ ಆತ್ಮನನ್ನು ವ್ಯಕ್ತಪಡಿಸುತ್ತದೆ.

ಪ್ರಾಭಾಕರ ಮತದ ಪ್ರಕಾರವಾಗಿ ಅಲ್ಪಸ್ವಲ್ಪ ಭೇದಗಳನ್ನು ಗಮನಿಸಬೇಕು. ವಿಷಯವೂ ಅದನ್ನು ತಿಳಿದುಕೊಳ್ಳುವ ಆತ್ಮನೂ ಸಂಬಂಧವಿಲ್ಲದ ಎರಡು ವಸ್ತುಗಳಾಗಿ ತೋರುವುದಿಲ್ಲ. ಆತ್ಮನು ವಿಷಯವನ್ನರಿಯುವ ಜ್ಞಾತನಾಗಿ ಭಾಸವಾಗುತ್ತಾನೆ. ಅಷ್ಟೇ ಅಲ್ಲದೆ ಜ್ಞಾನವೂ ಸಹ ವಿಷಯವನ್ನೂ ಆತ್ಮನನ್ನೂ ತೋರಿಸುವಂತೆ ತನ್ನನ್ನೂ ವ್ಯಕ್ತಪಡಿಸುತ್ತದೆ. ಆದ್ದರಿಂದ ಪ್ರತಿಯೊಂದು ಜ್ಞಾನದಲ್ಲಿಯೂ ವಿಷಯ, ಅದನ್ನು ತಿಳಿಯುವ ಆತ್ಮ, ಇವುಗಳನ್ನು ಪ್ರಕಾಶಪಡಿಸುವ ಜ್ಞಾನ—ಈ ಮೂರೂ ವೇದ್ಯವಾಗುತ್ತವೆ. ಇದಕ್ಕೆ **ತ್ರಿಪುಟೀ ಜ್ಞಾನ**ವೆಂದು ಹೆಸರು.

ವೇದಗಳ ವಿಷಯವಾಗಿ ಹೆಚ್ಚು ಗೌರವ ಮೀಮಾಂಸಕರಿಗೆ ಉಂಟಾಗುವುದಕ್ಕೆ ಅವುಗಳಲ್ಲಿ ಅವರಿಗೆ ಕಂಡುಬಂದ ಪ್ರಾಮಾಣಿಕತೆಯೇ ಮುಖ್ಯ ಕಾರಣ. ಜ್ಞಾನ **ಪ್ರಮಾಣ**ವಾಗಿಯೋ ಅಥವಾ **ಅಪ್ರಮಾಣ**ವಾಗಿಯೋ ಇರಬೇಕು. ನೈಯಾಯಿಕರ ಮತದಲ್ಲಿ ಜ್ಞಾನ ಸ್ವತಃ ಎರಡೂ ಅಲ್ಲ. ಜ್ಞಾನದಲ್ಲಿ ಗುಣ ತೋರಿಬಂದರೆ ಅದು ಪ್ರಮಾಣ; ಅದರಲ್ಲಿ ದೋಷ ಕಲೆತರೆ ಅದು ಅಪ್ರಮಾಣ. ಬೌದ್ಧಮತದ ಪ್ರಕಾರ ಜ್ಞಾನ ಸ್ವತಃ ಅಪ್ರಮಾಣ. ಬಹಳ ಶ್ರಮಪಟ್ಟು ಅದರಲ್ಲಿರುವ ಕಲ್ಪನೆಗಳನ್ನೆಲ್ಲ ಹೋಗಲಾಡಿಸಿದರೆ ಅದು ಪ್ರಮಾಣವಾಗುತ್ತದೆ. ಮೀಮಾಂಸಕರು ಮತ್ತೊಂದು ಮಾರ್ಗವನ್ನು ಅವಲಂಬಿಸಿದ್ದಾರೆ. ಜ್ಞಾನ ಸ್ವತಃ ಪ್ರಮಾಣ. ಯಾವುದಾದರೂ ದೋಷ ಹೊರಗಿಂದ ಬಂದು ಸೇರಿಕೊಂಡರೆ, ಆಗ ಅದು ಅಪ್ರಮಾಣವಾಗುತ್ತದೆ. ನಮ್ಮೊಡನೆ ಯಾರಾದರೂ ಮಾತಾಡುತ್ತಿದ್ದರೆ ಅವರು ಸಹಜವಾಗಿ ನಿಜವನ್ನೇ ನುಡಿಯು

ತ್ತಾರೆಂದು ನಾವೂ ನಂಬುತ್ತೇವೆ; ಅವರೂ ಹಾಗೆಯೇ ನಮ್ಮ ವಿಷಯವಾಗಿ ಅಭಿಪ್ರಾಯಪಡುತ್ತಾರೆ. ನಮ್ಮ ಮಾತು ಅಸಂಗತವಾಗಿದ್ದರೆ ಅಥವಾ ಕಪಟದಿಂದ ಕೂಡಿದ್ದರೆ ಆಗ ಅದು ಅಪ್ರಮಾಣವಾಗುತ್ತದೆ. ಆದ್ದರಿಂದ **ಕಾರಣದೋಷ,** ಮತ್ತು **ಬಾಧಕ ಪ್ರತ್ಯಯ** ಎಂಬ ಎರಡು ಬಗೆಯಾದ ದೋಷಗಳು ತೋರದೆ ಇರುವ ಜ್ಞಾನವೆಲ್ಲ ಪ್ರಮಾಣವೆಂದು ಮೀಮಾಂಸಕರ ಮತ. ಜ್ಞಾನವನ್ನು ಉಂಟುಮಾಡುವ ಸಾಧನಗಳಲ್ಲಿ ದೋಷವಿದ್ದರೆ ಅದನ್ನು ಕಾರಣದೋಷವೆನ್ನುತ್ತಾರೆ. ಬಿಳಿಯ ಶಂಖವನ್ನು ನೋಡಿ ಇದರ ಬಣ್ಣ ಹಳದಿ ಎಂದು ಯಾರಾದರೂ ಹೇಳಿದರೆ, ಆತನ ಕಣ್ಣಿನಲ್ಲಿ ಪಿತ್ತದ ದೋಷ ಕೂಡಿದೆ ಎಂದು ಸುಲಭವಾಗಿ ಗೊತ್ತಾಗುತ್ತದೆ. ಹಾಗೆಯೇ ಸೀಸವನ್ನು ನೋಡಿ ಇದು ಬೆಳ್ಳಿಯೆಂದು ಭ್ರಮಿಸಿದವನಿಗೆ ಬಾಧಕಪ್ರತ್ಯಯದಿಂದ ಭ್ರಮೆ ನೀಗುತ್ತದೆ. ಅವನು ಬೆಳ್ಳಿಯೆಂಬ ಭಾವನೆಯಿಂದ ಸೀಸವನ್ನು ತೆಗೆದುಕೊಂಡು ಹೋಗಿ ಮಾರುವುದಕ್ಕೆ ಪ್ರಯತ್ನಪಡುತ್ತಾನೆ. ಆದರೆ ಅಂಗಡಿಯವರು ಅದಕ್ಕೆ ಸೀಸದ ಬೆಲೆಯನ್ನು ಮಾತ್ರ ಕಟ್ಟುತ್ತಾರೆ. ಆಗ ಭ್ರಾಂತಿ ಪಟ್ಟವನಿಗೆ ತಪ್ಪು ತಿಳಿವಳಿಕೆ ಹೋಗುತ್ತದೆ. ಈ ಬಗೆಯಿಂದ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಸ್ಥಾಪಿಸಿದರೆ, ವೇದ ಪ್ರಮಾಣವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಮೀಮಾಂಸಕರ ಪ್ರಕಾರ ವೇದಾಕ್ಷರಗಳು ನಿತ್ಯವಾದುವು. ಅವುಗಳನ್ನು ಯಾರೂ ರಚಿಸಲಿಲ್ಲ. ಮತ್ತು ವೇದಗಳಲ್ಲಿ ಪರಲೋಕ, ಧರ್ಮ ಮುಂತಾದ ವಿಷಯಗಳನ್ನು ಮಾತ್ರ ಚರ್ಚಿಸಲಾಗಿದೆ. ಆ ವಿಷಯಗಳನ್ನು ಇತರ ಪ್ರಮಾಣಗಳು ವಿಚಾರ ಮಾಡುವ ಹಾಗಿಲ್ಲ. ಆದ್ದರಿಂದ ಖಂಡಿತವಾಗಿಯೂ ವೇದ ಪ್ರಮಾಣವೆಂದೇ ಹೇಳಬೇಕು. ಆದಕಾರಣ ಇತರ ದಾರ್ಶನಿಕರು ಒಪ್ಪುವಂತೆಯೇ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಪ್ರಮಾಣವೆಂದು ಅಂಗೀಕರಿಸಿ ಶಬ್ದಪ್ರಮಾಣವನ್ನೂ, ಅದರಲ್ಲಿ ಮುಖ್ಯವಾಗಿ ವೇದವನ್ನೂ, ಮೀಮಾಂಸಕರು ಅಂಗೀಕರಿಸಿದ್ದಾರೆ. ನೈಯಾಯಿಕರು ಒಪ್ಪಿದ ಉಪಮಾನವನ್ನೂ ಸಹ ಮೀಮಾಂಸಕರು ಒಪ್ಪಿದ್ದಾರೆ. ಈ ನಾಲ್ಕು ಪ್ರಮಾಣಗಳಿಗೆ ಭಾಟ್ಟಮತದಲ್ಲಿ ಇನ್ನೂ ಎರಡು ಪ್ರಮಾಣಗಳನ್ನು ಸೇರಿಸಿದೆ. ಅವು **ಅರ್ಥಾಪತ್ತಿ** ಮತ್ತು **ಅನುಪಲಬ್ಧಿ.**

ದೇವದತ್ತನೆಂಬ ಮನುಷ್ಯನು ತುಂಬ ಪುಷ್ಟನಾಗಿ ಕಾಣುತ್ತಾನೆ. ಊಟವಿಲ್ಲದವನು ಹೀಗೆ ಕಾಣುವುದಿಲ್ಲ. ದೇವದತ್ತನು ಹಗಲು ಹೊತ್ತು ಊಟಮಾಡುವುದಿಲ್ಲ. ಆದರೂ ಪುಷ್ಟನಾಗಿದ್ದಾನೆ. ಇದು ಹೇಗೆ ಸಾಧ್ಯ ಎಂದು ವಿಚಾರ ಬಂದರೆ ರಾತ್ರಿ ಹೊತ್ತು ಊಟಮಾಡುತ್ತಾನೆಯಾದ್ದರಿಂದ ಹೀಗೆ ಕಾಣುತ್ತಾನೆ ಎಂದು ಸಮಾಧಾನ ಹೇಳಬಹುದು. ಎರಡು ವಿಷಯಗಳು ಪರಸ್ಪರ ಹೊಂದಿಕೊಳ್ಳದಂತೆ ನಮಗೆ ತೋರಿಬಂದರೆ, ಅವುಗಳ ವಿರೋಧವನ್ನು ವಿಮರ್ಶೆಮಾಡಿ ಹೇಗೆ ಅವು ಹೊಂದಿಕೊಳ್ಳಬಹುದು ಎಂದು ನಿಷ್ಕರ್ಷೆಮಾಡುವ ಪ್ರಮಾಣಕ್ಕೆ **ಅರ್ಥಾಪತ್ತಿ**ಯೆಂದು ಹೆಸರು.

ಯಾವುದಾದರೂ ಒಂದು ಪದಾರ್ಥ ಇದ್ದರೆ ಅದನ್ನು ನಾವು ಕಾಣುತ್ತೇವೆ. ಆ ಪದಾರ್ಥವಿಲ್ಲದಿದ್ದರೆ ಅದು ಇಲ್ಲವೆನ್ನುತ್ತೇವೆ. ಹೀಗೆ ಇಲ್ಲವೆಂದು ಹೇಳುವುದಕ್ಕೆ ಪದಾರ್ಥ ಇಲ್ಲದಿರುವುದನ್ನು ನಾವು ಕಂಡಿರಬೇಕು. ಅದಕ್ಕೆ ಸಾಧನವಾದ ಪ್ರಮಾಣವೇ **ಅನುಪಲಬ್ಧಿ.** ಪ್ರತ್ಯಕ್ಷವು ವಸ್ತುಗಳು ಇರುವುದನ್ನು ತಿಳಿಸುತ್ತದೆ, ಅನುಪಲಬ್ಧಿ ವಸ್ತುಗಳು ಇಲ್ಲದಿರುವುದನ್ನು ತೋರಿಸುತ್ತದೆ, ಎಂದು ಮೀಮಾಂಸಕರು ಹೇಳುತ್ತಾರೆ. ಪ್ರಾಭಾಕರಮತದವರು **ಅಭಾವ** ಎಂಬ ಪದಾರ್ಥವನ್ನು ಒಪ್ಪುವುದಿಲ್ಲ. ಆದ್ದರಿಂದ ಅನುಪಲಬ್ಧಿಯನ್ನು ಅವರು ಅಂಗೀಕರಿಸುವುದಿಲ್ಲ. ನೈಯ್ಯಾಯಿಕರಿಗೆ ಅರ್ಥಾಪತ್ತಿ ಅನುಮಾನದ ಅಂಗವಾಗಿಯೂ, ಅನುಪಲಬ್ಧಿ ಪ್ರತ್ಯಕ್ಷದ ಪ್ರಭೇದವಾಗಿಯೂ ತೋರುತ್ತದೆ.

(ಮುಂದುವರಿಯುವುದು)

---

### 'ಸಂಯುಕ್ತ ಕರ್ನಾಟಕ'ಕ್ಕೆ 'ಶ್ರೀ'ಯವರ ಉದಾರದಾನ

'ಸಂಯುಕ್ತ ಕರ್ನಾಟಕ'ದ ಧರ್ಮದರ್ಶಿಗಳಾದ ಶ್ರೀಮಾನ್ ದಿವಾಕರರು ಪತ್ರಿಕೆಯ ಅಸಪ್ಟನವನ್ನು ಜೀಸಲು ಕನ್ನಡಿಗರ ಉದಾರ ಸಹಾಯಕ್ಕಾಗಿ ಬಿನ್ನಹ ಮಾಡಿಕೊಂಡಿರುವರಷ್ಟೆ. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಪ್ರವಾಸದಲ್ಲಿ ಧಾರವಾಡಕ್ಕೆ ಹೋಗಿದ್ದಾಗ್ಗೆ ೧೦೦ರೂ.ಗಳನ್ನು ನಿಧಿಗೆ ಕೊಡುವುದಾಗಿ ವಾಗ್ದಾನ ಮಾಡಿ, ಪತ್ರಿಕೆ ಇತೋಪ್ಪತಿಶಯವಾಗಿ ಬೆಳೆಯಲೆಂದು ಹಾರೈಸಿದರು.

### ಕಾಂಗ್ರೆಸ್ ಪ್ರದರ್ಶನದಲ್ಲಿ ಶಿಕ್ಷಣ-ಕಲೆ

ಕಳೆದ ತಿಂಗಳು ಮಹಾತ್ಮಾ ಗಾಂಧಿಯವರು ತೆರೆದ ರಾಮಘಡ ಕಾಂಗ್ರೆಸ್ ಪ್ರದರ್ಶನದಲ್ಲಿ, ವರ್ಧಾ ಮೂಲಶಿಕ್ಷಣ ಯೋಜನೆಗೆ ಸಂಬಂಧಿಸಿದ ಕೆಲವು ವಸ್ತುಗಳು ಅನೇಕರ ಮನಸ್ಸನ್ನು ಸೆಳೆದುವು. ಅದರಲ್ಲೂ ಪ್ರದರ್ಶನಶಾಲೆಯ ಶಿಕ್ಷಣ ಶಿಬಿರದ ಗೋಡೆಗಳನ್ನು ಅಲಂಕರಿಸಿದ್ದ ಚಿತ್ರಗಳು ಮನೋಹರವಾಗಿದ್ದುವು. ಅವುಗಳ ವಿಚಾರವಾಗಿ ಶ್ರೀಮತಿ ಅಮೃತ ಕುವರಿಯವರು 'ಹರಿಜನ ಪತ್ರಿಕೆ'ಯ ಏಪ್ರಿಲ್ ೬ನೆಯ ತಾರೀಖಿನ ಸಂಚಿಕೆಯಲ್ಲಿ ಹೀಗೆ ಬರೆದಿದ್ದಾರೆ:

ಈ ಚಿತ್ರಗಳನ್ನು ಬರೆದವನು ತರುಣ ಕಲಾವಿದ, ಹೆಸರು ಶ್ರೀ ಸಿಹಾರ ರಂಜನ ಚೌಧುರಿ—ಶ್ರೀ॥ ನಂದಾಲಾಲ್ ಬೋಸರ ಶಿಷ್ಯ. ವರ್ಧಾ ಶಿಕ್ಷಣ ಯೋಜನೆಗೆ ಸಂಬಂಧಿಸಿದ ಸಾಹಿತ್ಯವನ್ನೆಲ್ಲ ಅಧ್ಯಯನ ಮಾಡಿ, ವಿವಿಧ ಪ್ರಾಂತಗಳಲ್ಲಿ ಆ ಯೋಜನೆಗೆ ಅನುಸಾರವಾಗಿ ನಡೆಯುತ್ತಿದ್ದ ವಿಧಾನವನ್ನು ನೋಡಿದ ಫಲವಾಗಿ ವರ್ಧಾಶಿಕ್ಷಣದ ಹೃದಯವನ್ನು, ತಿರುಳನ್ನು ಕಲೆಯ ಮೂಲಕ ಚಿತ್ರಿಸಬೇಕೆಂಬ ಸ್ಫೂರ್ತಿ, ಪ್ರೇರಣೆ ಆತನಲ್ಲಿ ಮೂಡಿತು. ಆತನು ರಚಿಸಿದ ಚಿತ್ರಗಳಲ್ಲಿ ನಾಲ್ಕು ಕಸಬುಗಳು — ನೂಲುವುದು, ಮರಗೆಲಸ, ರಟ್ಟಿನ ಕೆಲಸ ಮತ್ತು ಬೇಸಾಯ— ಕಲೆಯ ರೂಪವನ್ನು ತಾಳಿರುವುವು. ಇವುಗಳ ಜೊತೆಗೆ, ಕಾಶ್ಮೀರ, ಅಲಹಾಬಾದುಗಳಲ್ಲಿ ಕಾಗದ ಮಾಡುವುದು, ಬುಟ್ಟಿ ಹೆಣೆಗೆ ಮುಂತಾದುವುಗಳ ಬಗ್ಗೆ ನಡೆಯುತ್ತಿದ್ದ ಪ್ರಯೋಗ ಪರೀಕ್ಷೆಗಳನ್ನು ತಿಳಿದುಕೊಂಡು, ಅವುಗಳನ್ನೂ ತನ್ನ ಕಲೆಗೆ ವಸ್ತುಗಳನ್ನಾಗಿ ಬಳಸಿಕೊಂಡಿರುವನು.

ಆತನ ವರ್ಣಚಿತ್ರಗಳಲ್ಲಿ ತೋರಿಬಂದ ಗುಣಗಳಿವು: ಮುಟ್ಟುಗಳನ್ನು ಉಪಯೋಗಿಸುವ ರೀತಿ; ವಿದ್ಯಾರ್ಥಿಗಳು ಹೇಗೆ ಕುಳಿತುಕೊಳ್ಳಬೇಕು ಇಲ್ಲವೇ ನಿಂತುಕೊಳ್ಳಬೇಕು; ಉಡುಗೆ ತೊಡುಗೆಗಳು ಹೇಗಿರಬೇಕು; ಯಾವ ಭಂಗಿಯಲ್ಲಿ ಕೂತು ಕೆಲಸಮಾಡಿದರೆ ಕೆಲಸ ಹಸನಾಗುವುದು; ಕೆಲಸ ಸರಿಯಾಗಿ, ದೋಷದೂರವಾಗುವಂತೆ ನೋಡಿಕೊಳ್ಳುವುದರ ಆವಶ್ಯಕತೆ ಹೇಗೆ ಉಂಟು; ಶಾಲೆಯ ಕೊಠಡಿಗಳನ್ನು ಅಂದವಾಗಿಯೂ ಆಕರ್ಷಕವಾಗಿಯೂ ಇಡುವುದು ಹೇಗೆ; ಮುಟ್ಟುಗಳನ್ನು ಬುದ್ಧಿವಂತಿಕೆಯಿಂದಲೂ ಜಾಣ್ಮೆಯಿಂದಲೂ ಉಪಯೋಗಿಸಿದರೆ ಹೇಗೆ ಕೆಲಸದಲ್ಲಿ ಒಂದು ಕ್ರಮವೂ ಚೆಲುವೂ ತೋರಿಕೊಳ್ಳುವುವು; ಮಿದುಳೂ ಕೈಗಳೂ ಸರಿಯಾದ ನಂಟನಿಂದ, ಸಮರಸವಾಗಿ ಕೆಲಸಮಾಡಿದರೆ ಮನುಷ್ಯನು ಹೇಗೆ ತಾಳ್ಮೆಯನ್ನು ಕಲಿಯಬಲ್ಲನು; 'ಕೈ ಕೆಸರಾದರೆ ಬಾಯಿ ಮೊಸರು' ಎಂಬ ಗಾದೆಯ ಮಾತು ಹೇಗೆ ಸತ್ಯ; ಗುರು ಶಿಷ್ಯರಿಬ್ಬರೂ ಶ್ರದ್ಧೆಯಿಂದ ದುಡಿದರೆ ಸ್ವಂತ ಪರಿಶ್ರಮದ ಫಲ ಎಷ್ಟು ಶ್ರೇಯಃಪ್ರದವಾಗುವುದು ಮುಂತಾದುವನ್ನು ಸೂಕ್ಷ್ಮವಾಗಿ ಚಿತ್ರಿಸಿರುವುದು. ಆ ಚಿತ್ರಗಳ ಹಿಂದೆ ಕಲಾವಿದನ ಅಧ್ಯಯನ ಸ್ಪಷ್ಟವಾಗಿ ತೋರ್ಪಡುವುದಲ್ಲದೆ, ಚಿತ್ರಗಳ ವರ್ಣವಿನ್ಯಾಸ ನವುರಾಗಿಯೂ ಜೀವಕಳೆಯಿಂದ ಕೂಡಿಯೂ ಇರುವುದು. ನದಿ ಮತ್ತು ಗ್ರಾಮ ಪ್ರದೇಶದ ಕಡೆ ಮಾಡಿದ ಸಂತೋಷಪ್ರವಾಸದ ಚಿತ್ರಗಳಂತೂ ಆತ್ಮಾನಂದವನ್ನುಂಟು ಮಾಡುವುವು. ಹೊಸ ಶಿಕ್ಷಣ ಯೋಜನೆಯ ಭವಿಷ್ಯತ್ತು ಆಶಾಜನಕವಾಗಿರುವುದೆಂಬುದನ್ನು ಚಿತ್ರಗಳ ಮೂಲಕ ಕಣಿ ನುಡಿದಂತಿರುವುದು. ಇಂಥ ಶಿಕ್ಷಣ ಪಡೆದ ಮಕ್ಕಳು ಮಾದರಿ ಪ್ರಜೆಗಳಿಗಾಗಿ, ಬೇರೆತನದ ಸೋಂಕಿಲ್ಲದೆ ಉದಾರ ಚರಿತರಾಗುವರೆಂದು ಕಲಾವಿದನು ಹಾರೈಸಿದ್ದಾನೆ.

ಕಲಾವಿದನು ತನ್ನ ಕೃತಿಯ ರಚನೆಗೆ ಇಂಡೋ-ಪರ್ಷಿಯನ್ ಕಲಾ ಸಂಪ್ರದಾಯವನ್ನು ಅನುಸರಿಸಿರುವನು. ವರ್ಣಚಿತ್ರಗಳೆಲ್ಲ ಕೈಯಲ್ಲಿ ತಯಾರಿಸಿದ ಕಾಗದದ ಮೇಲೆ ರಚಿತವಾಗಿ, ಖದ್ದರ್ ಬಟ್ಟೆಯ ಚೌಕಟ್ಟನ್ನು ಪಡೆದಿರುವುವು.

---

### ಸಾದರ ಸ್ವೀಕಾರ

೧. **ಕಂದನ ಕಾಣಿಕೆ :** ಬರೆದವರು: ಶ್ರೀ॥ಗಳಾದ ಎಂ. ಎಸ್. ಮೂರ್ತಿ, ಅ. ರಾ. ಚಂದ್ರ ಮತ್ತು ಯೋಗ. ಪ್ರಕಾಶಕರು: ಮನೋಹರ ಗ್ರಂಥ ಭಂಡಾರ, ಧಾರವಾಡ. ಕ್ರೌನ್ ಅಷ್ಟಪತ್ರ, ೨೪ ಪುಟಗಳು, ಬೆಲೆ ೧ ಆಣೆ.

ಹಾಸನದ ಸ್ಕೂಲ್ ಬೋರ್ಡ್ ಆಸಿಸ್ಟೆಂಟರಾದ ಶ್ರೀ॥ ಸಿ. ಆರ್. ಮಾಧವರಾಯರು "ಮಕ್ಕಳು ಹಾಡಿ, ಪಾಡಿ, ಒಲಿದು, ನಲಿದು ಕುಣಿಯಲು ತಕ್ಕಂಥ ಕವಿತೆಗಳು" ಎಂದೂ, ಶ್ರೀ॥ ದಾ. ರಾ. ಬೇಂದ್ರೆಯವರು "ಮಕ್ಕಳ ಮನಸ್ಸಿಗೆ ಮಿಠಾಯಿಯಂತಿವೆ"ಯೆಂದೂ ಈ ಪುಸ್ತಕದ ವಿಚಾರವಾಗಿ ಬರೆದಿದ್ದಾರೆ.

೨. **ಮಹಾಕವಿ ಪುರುಷ ಸರಸ್ವತಿ :** ಬರೆದವರು ಮತ್ತು ಪ್ರಕಾಶಕರು : ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ. ಅವರು. ಶಾಕ್ಯಸಾಹಿತ್ಯ ಮಂಟಪ, ಮಲ್ಲೇಶ್ವರ ಬೆಂಗಳೂರು. ಮಾರುವವರು : ಸತ್ಯಶೋಧನ ಪ್ರಕಟನ ಮಂದಿರ, ಬೆಂಗಳೂರು. ಡೆಮ್ಮಿ ಅಷ್ಟಪತ್ರ ೪೯+೭೨ ಪುಟಗಳು. ಬೆಲೆ ೧—೮—೦.

೩. **ಬುದ್ಧನ ಕತೆಗಳು** (ಸಚಿತ್ರ) : ಬರೆದವರು ಮತ್ತು ಪ್ರಕಾಶಕರು : ಶ್ರೀ॥ ಜಿ. ಪಿ. ರಾಜರತ್ನಂ ಅವರು. ಕ್ರೌನ್ ಅಷ್ಟಪತ್ರ ೨೨+೨೪೫ ಪುಟಗಳು.

೪. **ನಾನು ಯಾರು ? :** ಬರೆದವರು: ಶ್ರೀ ರಮಣ ಮಹರ್ಷಿಗಳು. ಕನ್ನಡಿಸಿದವರು: ಶ್ರೀ ರಮಣ ಸೇವಾಸಮಿತಿ, ಬೆಂಗಳೂರು. ಪ್ರಕಾಶಕರು : ಶ್ರೀ ನಿರಂಜನಾನಂದಸ್ವಾಮಿ, ಸರ್ವಾಧಿಕಾರಿ, ಶ್ರೀರಮಣಾಶ್ರಮ. ತಿರುವಣ್ಣಾಮಲೆ ಕ್ರೌನ್ ಅಷ್ಟಪತ್ರ ೧೩ ಪುಟಗಳು. ಬೆಲೆ ೧ ಆಣೆ.

ಕನ್ನಡದಲ್ಲಿ ಶ್ರೀರಮಣ ಮಹರ್ಷಿಗಳ ಆಲೋಚನೆಗಳನ್ನು ತಿಳಿಸುವ ಕನಡ ಗ್ರಂಥಗಳು ಅಪೂರ್ವ. ಈ ಕೊರತೆಯನ್ನು ನಿವಾರಿಸಲು ಮುಂದೆ ಬಂದು ಮೊದಲನೆಯ ಪುಸ್ತಕವನ್ನು ಹೊರಗೆಡಹಿದ ಶ್ರೀರಮಣ ಸೇವಾ ಸಮಿತಿಯವರು ಅಭಿನಂದನಾರ್ಹರು.

### ಕನ್ನಡ ಕವಿ ಸೂಕ್ತಿ

(ಪಂಪ ಮೆಚ್ಚುವ ಕವಿತೆ)

**ಬಗೆ ಪೊಸತಪ್ಪುದಾಗಿ ಮೃದು ಬಂಧನೊಳೊಂದುವುದೊಂದಿ ದೇಸಿಯೊಳ್**<br>
**ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ**<br>
**ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಜೆಯಿಂ ಬಳಲ್ದು ತುಂ**<br>
**ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್**

**ಪಂಪಭಾರತ I-೮**




**ಶುಕ್ರವಾರ, ಏಪ್ರಿಲ್ ೧೨, ೧೯೪೦**

## ವಸಂತ ಸಾಹಿತ್ಯೋತ್ಸವ

ಈಗ್ಗೆ ಆರು ವರ್ಷಗಳಿಂದಲೂ ಪರಿಷತ್ತು ವಸಂತ ಸಾಹಿತ್ಯೋತ್ಸವವನ್ನು ತನ್ನ ಕೈಯಲ್ಲಾದಮಟ್ಟಿನ ವಿಜೃಂಭಣೆಯಿಂದ ನಡಸುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಹೊಸದಾದ ಒಂದು ಮೇಲ್ಮೆಯನ್ನೂ ಗುರಿಯನ್ನೂ ಸಾಧಿಸಬೇಕೆಂಬ ಪ್ರಯತ್ನ ೧೯೩೪ರಲ್ಲಿ ಮೊದಲಾದದ್ದು ಪರಿಷತ್ತಿಗೆ ಒಂದು ವಿಶೇಷ ಬಗೆಯ ಹೆಸರನ್ನೂ ಮಾನ್ಯತೆಯನ್ನೂ ಅಖಿಲ ಕರ್ನಾಟಕ ಪ್ರಾತಿನಿಧ್ಯವನ್ನೂ ತಂದುಕೊಟ್ಟಿತೆನ್ನಬೇಕು. ಪರಿಷತ್ತಿನ ಮುಖ್ಯ ಕಾರ್ಯಾಲಯವಿರುವ ಬೆಂಗಳೂರಲ್ಲಿಯೇ ಅಂಥ ಒಂದು ಸಂಸ್ಥೆ ಇರುವುದೂ ಕನ್ನಡಕ್ಕಾಗಿ ಅದು ದುಡಿಯುತ್ತಿರುವುದೂ ನಿನ್ನೆಮೊನ್ನೆಯವರೆಗೂ ಜನರ ಕಣ್ಣಿಗೆ ಬಿದ್ದಿರಲಿಲ್ಲ. ಕನ್ನಡ ದೇಶದಲ್ಲಿ ಕನ್ನಡಕ್ಕೂ ಕನ್ನಡಿಗರಿಗೂ ಒಂದು ಸ್ಥಾನಮಾನ ದೊರಕಿಸಬೇಕು ಎಂಬ ಉದ್ದೇಶ ಮೊದಲಿಂದಲೂ ಪರಿಷತ್ತಿಗಿದ್ದರೂ, ಇದು ಕೇವಲ ಪುರಾತನ ಕವಿಕಾವ್ಯ ವಿಚಾರಗಳಲ್ಲಿಯೂ ತಾಳೆಓಲೆ ಮತ್ತು ಶಾಸನಗಳ ಪರೀಕ್ಷಣದಲ್ಲಿಯೂ ತೊಡಗಿದ ಒಂದು ಸಂಸ್ಥೆ, ಇದಕ್ಕೆ ಪ್ರೋತ್ಸಾಹ ಕೊಡಬೇಕು, ಒಳ್ಳೆಯ ಕೆಲಸ ನಡೆಯುತ್ತಿದೆ, ಎಂದು ಆಕಡೆ ಒಲವು ಉಳ್ಳವರು ಕೆಲವು ಮಂದಿ ಮಾತ್ರ ಅದರ ವಿಚಾರ ಮಾತನಾಡಿ ಮುಗಿಸಿಬಿಡುತ್ತಿದ್ದರು; ಅಥವಾ ವರ್ಷಕ್ಕೊಂದುಸಲ ನಾಡಿನ ಯಾವುದೊ ಒಂದು ಕಡೆ ಹಲವಾರು ಅಭಿಮಾನಿ ಜನ ನೆರೆದು ಅತಿ ಮುಖ್ಯವಾದ ಅತ್ಯಗತ್ಯವಾದ ನಿರ್ಣಯಗಳನ್ನು ಸರ್ವಾನುಮತದಿಂದ ಅಂಗೀಕರಿಸಿದರೂ ಇವುಗಳನ್ನು ಕಾರ್ಯರೂಪಕ್ಕೆ ತರುವ ಬಗೆ ಹೇಗೆಂದು ಪೇಚಾಡುತ್ತ ಇರುತ್ತಿದ್ದುದೂ ಉಂಟು. ಆದರೆ ವ್ಯವಹಾರ ಜೀವನದಲ್ಲಿ ನಾಡಿನ ಒಂದು ಶಕ್ತಿಯಾಗಿ ನಿಂತು ಪ್ರಬಲಿಸಿದ ಹೊರತು ಈ ಸಂಸ್ಥೆಗೆ ಯಾವ ಕಾರ್ಯಸಿದ್ಧಿಯೂ ಆಗದೆಂಬ ತಿಳಿವಳಿಕೆ ಕೆಲಸ ಮಾಡುವವರೆಲ್ಲರಿಗೂ ಮಂದಟ್ಟಾಗಿ ಇದನ್ನು ಉತ್ತಮವಾದ ಒಂದು ಕಾರ್ಯಯಂತ್ರವಾಗಿ ಸಮೆಯುವ ಬಗೆ ಹೇಗೆ ಎಂಬ ಯೋಚನೆ ಹುಟ್ಟಿತು. ಇಂದಿನ ಪ್ರಪಂಚದಲ್ಲಿ ಯಾವ ಯಾವ ಪ್ರಭಾವಗಳು ಜೀವನವನ್ನು ನಡಸುವುವೊ ಅವುಗಳನ್ನು ಅರಿತು ಅವಕ್ಕೆ ಅನುಕೂಲವಾಗಿ ನಡೆವ ಹೊರತು ಸಂಸ್ಥೆಗೆ ಬಲವಿಲ್ಲವೆಂದು ತಿಳಿಯಿತು. ಆಧುನಿಕ ಪ್ರಪಂಚದಲ್ಲಿ ವಿಜ್ಞಾನಕ್ಕೂ ಲೌಕಿಕ ಮತ್ತು ಸಮಾಜ ಶಾಸ್ತ್ರಗಳಿಗೂ ಇರುವ ಮಹತ್ವವನ್ನು ತಿಳಿದು ಅವುಗಳ ಪರಿಚಯ ಜನಕ್ಕೆ ಚೆನ್ನಾಗಿ ಆದ ಹೊರತು ಜನರ ಮನಸ್ಸು ವಸ್ತುಶೀಲವಾಗದು, ಅವರ ವರ್ಚಸ್ಸು ಬೆಳೆಯಲಾರದು ಎಂದು ಕಂಡಿತು. ಆಮುದರಿಂದ ಎಷ್ಟುಮುಖದಲ್ಲಿ ಸಾಧ್ಯವಾದರೆ ಅಷ್ಟುಮುಖದಲ್ಲಿ ಈ ಹೊಸಕಾಲದ ಜ್ಞಾನಪ್ರಸಾರಣ ಕಾರ್ಯವನ್ನು ಮಾಡಬೇಕು, ಜನರಲ್ಲಿ ಅಕ್ಷರ ಜ್ಞಾನ ಹರಡಬೇಕು, ಪರಿಷತ್ತಿನ ವ್ಯಾಪನೆ ಹೆಚ್ಚಿಸಬೇಕು, ಕನ್ನಡ ಸಂಘಗಳನ್ನು ಹುಟ್ಟಿಹಾಕಬೇಕು, ಇರುವವುಗಳಿಗೆ ಉತ್ತೇಜನ ಕೊಡಬೇಕು, ಅಂಗಸಂಸ್ಥೆಗಳನ್ನು ಕಟ್ಟಬೇಕು, ಜಿಲ್ಲಾ ಸಮ್ಮೇಳನಗಳನ್ನು ಏರ್ಪಡಿಸಬೇಕು, ಎಲ್ಲೆಲ್ಲಿಯೂ ಕರ್ತೃತ್ವ ಶಕ್ತಿಯುಳ್ಳ ಕನ್ನಡದ ಅಭಿಮಾನಿಗಳನ್ನು ಕಲೆಹಾಕಿ ಕನ್ನಡ ನಾಡಿನಕೆಲಸ ಒಂದು ಮೊನೆಯಲ್ಲಿ ಮುಂದುವರಿಯುವಂತೆ ಮಾಡಬೇಕು ಎಂದು ಉತ್ಸಾಹ ಹಬ್ಬಿತು. ಪರಿಷತ್ತು ಈ ಕೆಲಸವನ್ನು ತನ್ನ ಕಾರ್ಯಕಲಾಪಗಳಲ್ಲೆಲ್ಲ ಮೆರಸಿತು. ವಸಂತ ಸಾಹಿತ್ಯೋತ್ಸವದ ಕಾಲವಲ್ಲಿ ನೇರವಾಗಿ ಬೆಂಗಳೂರಿನಲ್ಲಿಯೂ ಪರೋಕ್ಷವಾಗಿ ನಾಡ ಹಬ್ಬಗಳಲ್ಲಿ, ಜಿಲ್ಲಾ ಸಾಹಿತ್ಯ ಸಮ್ಮೇಳನಗಳಲ್ಲಿ ಮತ್ತು ವಾರ್ಷಿಕ ಸಮ್ಮೇಳನಗಳ ಕಾಲಗಳಲ್ಲಿ ಇತರ ಕಡೆಗಳಲ್ಲಿಯೂ ಅನೇಕ ಬಗೆಯ ಕಾರ್ಯಕ್ರಮ ಏರ್ಪಡಿಸಿದುದಲ್ಲದೆ, ಇಂತಹ ಕೆಲಸ ಮಾಡುವ ಇತರ ಸಂಸ್ಥೆಗಳೊಡನೆ ಎಲ್ಲ ಬಗೆಯಲ್ಲಿಯೂ ಸಹಕರಿಸಿತು.

ಮೊದ ಮೊದಲು ವಸಂತೋತ್ಸವ ಕಾಲದಲ್ಲಿ ಏಳುದಿನ, ಎಂಟು ದಿನ, ಒಂದೇಸಮನೆ ಕಾವ್ಯ, ನಾಟಕ, ವಿನೋದ, ಶಾಸ್ತ್ರ, ಕಲಾ ಮತ್ತು ಪುಸ್ತಕ ಪ್ರದರ್ಶನ ವಿಚಾರಗೋಷ್ಠಿ ಮುಂತಾದ ಕೆಲಸ ನಡೆದು ಪರಿಷತ್ತಿಗೆ ಒಂದು ವಿಶೇಷ ಬಗೆಯ ಕೀರ್ತಿಯೂ ಸ್ಥಾನವೂ ದೊರೆತು ಅದರ ವಿಷಯದಲ್ಲಿ ಜನರ ಆಸಕ್ತಿ ಬೆಳೆಯಿತು. ಪರಿಷತ್ತನ್ನು ಕುರಿತು ಮಾತನಾಡುವುದು, ಅದರಲ್ಲಿ ಆಸಕ್ತಿವಹಿಸುವುದು, ಅದು ಇನ್ನೂ ಹೀಗೆ ಮಾಡಬೇಕು, ಹಾಗೆ ಮಾಡಬೇಕು, ಮತ್ತೊಂದನ್ನು ಮಾಡಬೇಕು ಎಂದು ಹೆಚ್ಚಿನ ಕೆಲಸ ಮಾಡಕೇಳುವುದೂ ದಿನ ದಿನಕ್ಕೆ ಹೆಚ್ಚಿತು. ಎಚ್ಚತ್ತ ಕನ್ನಡನಾಡಿನ ಹೊಸ ಬದುಕಿನ ಸಾಧನೆಯಲ್ಲಿ ಪರಿಷತ್ತು ತನಗೆ ಪ್ರತಿಷ್ಠೆ ತಂದುಕೊಂಡು ಅನೇಕ ಮುಖವಾದ ಕೆಲಸ ಮಾಡುವುದು ಅಗತ್ಯ ಮತ್ತು ಅದರ ಕರ್ತವ್ಯ ಎಂದು ಕನ್ನಡ ನಾಡಿನಲ್ಲೆಲ್ಲ ಮಾತು ಹಬ್ಬಿತು. ಇದರ ಜೊತೆಗೆ ನಾಲ್ಕೈದು ವರ್ಷ ಏಕಪ್ರಕಾರವಾಗಿ ಪರಿಷತ್ತಿನ ಪ್ರಚಾರ ಕಾರ್ಯ ಬೆಂಗಳೂರಿನಲ್ಲಿ ನಡೆದಿದೆ, ಇನ್ನು ಈ ಕೆಲಸವನ್ನು ನಾಡಿನಮೇಲೆ ಹರಡಿ ಹಂಚಬೇಕೆಂದು ಯೋಚನೆ ಬಂದು ಹೊಸದಾಗಿ ಬಳ್ಳಾರಿಯಲ್ಲಿ ಏರ್ಪಟ್ಟ ಸುಧಾರಣೆಗೆ ತಕ್ಕಂತೆ ಕನ್ನಡ ನಾಡಿನ ನಾಲ್ಕು ಪ್ರಾಂತಗಳಲ್ಲಿ ವಸಂತೋತ್ಸವ ನಡೆಯತಕ್ಕದ್ದೆಂದು ಹೋದ ವರ್ಷವೇ ನಾಲ್ಕಾರು ಕಡೆ ಉತ್ಸವ ಏರ್ಪಟ್ಟಿತು. ಈಸಲ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಎಲ್ಲೆಲ್ಲಿ ಸಾಧ್ಯವಾದರೆ ಅಲ್ಲೆಲ್ಲ ವಸಂತೋತ್ಸವ ಸಮಾರಂಭವನ್ನು ನಡಸಬಹುದೆಂದು ಪ್ರಾಂತಸಮಿತಿಗಳವರಿಗೇ ಆ ಕೆಲಸವನ್ನು ಒಪ್ಪಿಸಲಾಯಿತು. ಅದರಂತೆ ಎಲ್ಲೆಲ್ಲಿಯೂ ಉತ್ಸವ ನಡೆಯುತ್ತಿರುವುದನ್ನು ಕನ್ನಡ ಪತ್ರಿಕೆಗಳ ತುಂಬ ಕಾಣಬಹುದು.

ಪರಿಷತ್ತು ಎಂದರೆ ಎಲ್ಲ ಕನ್ನಡ ನಾಡು, ಎಲ್ಲೊಬ್ಬ ಕನ್ನಡಿಗನಿದ್ದರೆ ಅಲ್ಲಿ ಪರಿಷತ್ತಿನ ಕಾರ್ಯ ನಡೆಯಲು ಒಂದು ಕೇಂದ್ರ

ಏದ್ದಂತೆ. ಕನ್ನಡ ನಾಡಿನ ಕಾರ್ಯವೆಲ್ಲ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪರಿಷತ್ತಿಗೆ ಸಂಬಂಧಪಟ್ಟದ್ದೇ; ಎಲ್ಲಿ ಕನ್ನಡ ಕೆಲಸ ನಡೆಯಲಿ ಪರಿಷತ್ತು ಉದ್ದೇಶಿಸಿದ ಕೆಲಸವಲ್ಲಿ ಅಷ್ಟು ಭಾಗ ಕೆಲಸ ನೆರವೇರಿದಂತೆ ಎಂಬ ತಿಳಿವು ಕನ್ನಡಿಗರೆಲ್ಲರಿಗೂ ಬಂದ ದಿನ ನಾಡಿನ ಜಾಗ್ರತಿ ಒಂದು ಹದಕ್ಕೆ ಬಂದಿತೆನ್ನಬಹುದು; ಅದರ ಉದ್ದೇಶ ಫಲಕಾರಿಯಾಗುವುದಕ್ಕೆ ಅತಿಶಯವಾದ ಅನುಕೂಲ ಪರಿಸ್ಥಿತಿ ಏರ್ಪಟ್ಟಿತೆನ್ನಬಹುದು; ಕನ್ನಡದ ಜನ ಒಂದು ಬಲವಾಗಿ ಭರತಖಂಡದಲ್ಲಿ ಎದ್ದು ನಿಲ್ಲುವುದು ಸಾಧ್ಯವಾಗುವುದೆಂದು ಖಂಡಿತವಾಗಿ ಹೇಳಬಹುದಾಗುವುದು. ಆದ್ದರಿಂದ ಈ ಸ್ಥಿತಿ ಸಿದ್ಧಿಸುವುದಕ್ಕೆ ನೆರವಾದವರೆಲ್ಲ ನಾಡಿನ ಪುನರುಜ್ಜೀವನ ಕಾರ್ಯದಲ್ಲಿ ಭಾಗವಹಿಸಿದವರೇ ಆಗುತ್ತಾರೆ. ನಾಳೆಗೆ ಮಕ್ಕಳಿಗೆ ಒಂದು ಹೆಚ್ಚಿನ ಸಂಪತ್ತಿಯನ್ನು ಗಳಿಸಿಕೊಟ್ಟು ಕೃತಾರ್ಥರಾಗುತ್ತಾರೆ. ದೇವ ಋಣ, ಋಷಿ ಋಣ, ಪಿತೃ ಋಣಗಳಿಗೆ ಕಡಮೆಯಲ್ಲದ ಋಣ **ನಾಡ ಋಣ.** ಈ ಋಣವನ್ನು ತೀರಿಸಬೇಕಾದ್ದೂ ನಾಡ ಮಕ್ಕಳೆಲ್ಲರ ಪಾಲಿಗೂ ಬರಬೇಕಾದ ಭಾಗ್ಯ.

---

## ಮೆಲ್ಲಾಳಿ

ಬಾರಾ, ಬಾರೈ ಮೆಲ್ಲಾಳಿ ! ॥ ಪಲ್ಲ ॥
ಪ್ರೇಮತರಂಗ ತುಷಾರದಿ ನಾಂದು ॥ ೧ ॥
ಸುಜನರ ನಲ್ನುಡಿಯೊಲ್ಪಿನೊಳಾಳ್ದು ! ॥ ೨ ॥
ಸತಿಯರ ಸುಕೃತಾಮೃತದಲಿ ಮಿಂದು ! ॥ ೩ ॥
ಪಾವನರಂಗದ ಪುಣ್ಯದೊಳೊಂದಿ ! ॥ ೪ ॥
ಸುಜನರ ಹೃತ್ಸುಮಗಂಧದೆ ಬಲಿದು ! ॥ ೫ ॥

—ಸಾಲಿ ರಾಮಚಂದ್ರರಾಯರು

---

## ಪರಿಷತ್ತಿನ ಸುದ್ದಿ

### ಕನ್ನಡ ಸಾಹಿತ್ಯ ಪರೀಕ್ಷೆಗಳು

೧. ಈ ವರ್ಷ ಎರಡನೆಯ ಪರೀಕ್ಷೆಯನ್ನೂ ಮೂರನೆಯ (ಪ್ರೌಢ) ಪರೀಕ್ಷೆಯನ್ನೂ ಜೂನ್ ತಿಂಗಳ ಮಧ್ಯಭಾಗದಲ್ಲಿ ಮುಂದೆ ಕಾಣಿಸಿರುವ ವೇಳಾ ಪತ್ರಿಕೆಯಂತೆ ನಡಸಲಾಗುತ್ತದೆ—

(ಅ) ಎರಡನೆಯ ಪರೀಕ್ಷೆ:

| ತಾರೀಖು | ದಿನ | ಕಾಲ | ಪ್ರಶ್ನಪತ್ರಿಕೆ | ಅಂಕಗಳು |
|---|---|---|---|---|
| ಜೂನ್ ೧೪ | ಶುಕ್ರವಾರ | ಬೆಳಗ್ಗೆ ೮ರಿಂದ ೧೧ | ಸಾಹಿತ್ಯಭಾಗ (ನಾಟಕ, ಕಾವ್ಯ ಮತ್ತ ಗದ್ಯ) | ೧೨೫ |
| „ ೧೫ | ಶನಿವಾರ | „ „ | ವ್ಯಾಕರಣ ಮತ್ತು ಸಂಸ್ಕೃತಿ | ೭೫ |

(ಅ) ಮೂರನೆಯ ಪರೀಕ್ಷೆ:

| ತಾರೀಖು | ದಿನ | ಕಾಲ | ಪ್ರಶ್ನಪತ್ರಿಕೆ | ಅಂಕಗಳು |
|---|---|---|---|---|
| ಜೂನ್ ೧೪ | ಶುಕ್ರವಾರ | ಬೆಳಗ್ಗೆ ೮ರಿಂದ ೧೧ | ಸಾಹಿತ್ಯಭಾಗ (ನಾಟಕ, ಕಾವ್ಯ ಮತ್ತು ಗದ್ಯ) | ೧೫೦ |
| „ ೧೫ | ಶನಿವಾರ | „ „ | ವ್ಯಾಕರಣ, ಭಾಷಾ ಚರಿತ್ರೆ, ಸಾಹಿತ್ಯಚರಿತ್ರೆ ಮತ್ತು ವಿಮರ್ಶೆ | ೭೫ |
| „ ೧೬ | ಭಾನುವಾರ | „ „ | ಸಂಸ್ಕೃತಿ ಮತ್ತು ಚರಿತ್ರೆ | ೭೫ |

೨. ಒಟ್ಟಿನಲ್ಲಿ ಸೇಕಡ ೪೦ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವರೆಂದು ಭಾವಿಸಲಾಗುತ್ತದೆ. ಸೇಕಡ ೬೦ ಮತ್ತು ಹೆಚ್ಚಿಗೆ ಅಂಕಗಳನ್ನು ಪಡೆದವರನ್ನು ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾದವರೆಂದು ಭಾವಿಸಲಾಗುತ್ತದೆ.

೩. ಆಯಾ ಪರೀಕ್ಷೆಗೆ ಕಟ್ಟಬೇಕಾದ ತೆರವನ್ನು ಮೇ ತಿಂಗಳು ೨೦ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ತಲಪುವಂತೆ ಅರಿಕೆಯೋಲೆಯೊಂದಿಗೆ ಕಳಿಸಬೇಕು. ವಾಯಿದೆ ಮೀರಿ ಬರುವ ಅರಿಕೆಯೋಲೆಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. (ಮೂರನೆಯ ಪರೀಕ್ಷೆಗೆ ತೆರ ೨ ರೂ., ಎರಡನೆಯ ಪರೀಕ್ಷೆಗೆ ತೆರ ೧ ರೂ.).

೪. ಪರೀಕ್ಷೆಗಳನ್ನು ಮುಂದೆ ಹೇಳಿರುವ ಕೇಂದ್ರಗಳಲ್ಲಿ ನಡಸಲಾಗುತ್ತದೆ:—

ಬೆಂಗಳೂರು, ಮೈಸೂರು, ಧಾರವಾಡ, ಬಿಜಾಪುರ, ಮಂಗಳೂರು. (ಹೆಚ್ಚಿಗೆ ಕೇಂದ್ರಗಳನ್ನು ಆವಶ್ಯಕ ಕಂಡುಬಂದಲ್ಲಿ ಮುಂದೆ ಏರ್ಪಡಿಸಲಾಗುವುದು)

ಒಮ್ಮೆ ಆರಿಸಿಕೊಂಡ ಪರೀಕ್ಷಾ ಕೇಂದ್ರವನ್ನು ವಿದ್ಯಾರ್ಥಿಗಳು ಬದಲಾಯಿಸಕೂಡದು.

---

## ಹೈದರಾಬಾದ್ ಪ್ರಾಂತ ಸಮಿತಿ

ತಾ॥ ೨೩–೨–೧೯೪೦ರಲ್ಲಿ ಸೇರಿದ್ದ ಪ್ರಾಂತ ಸಮಿತಿಯ ಅಧಿವೇಶನದಲ್ಲಿ ಈ ಕೆಳಗಿನ ಚುನಾವಣೆಗಳು ನಡೆದವು.

ಅಧ್ಯಕ್ಷರು: ವ್ಯಾಕರಣತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು, ಪ್ರಿನ್ಸಿಪಾಲರು, ಶ್ರೀ ಶಂಕರ ಸಂಸ್ಕೃತ ಕಾಲೇಜು, ಯಾದಗಿರಿ.

ಕಾರ್ಯದರ್ಶಿ: ವಿದ್ವಾನ್ ಶ್ರೀ ವೀರೇಶ್ವರ ಶಾಸ್ತ್ರಿಗಳು, ಕನ್ನಡ ಪಂಡಿತರು, ಶ್ರೀ ಶಂಕರ ಸಂಸ್ಕೃತ ಕಾಲೇಜು, ಯಾದಗಿರಿ.

ಕೋಶಾಧಿಕಾರಿ: ಶ್ರೀಮಂತ ರುದ್ರಪ್ಪ ಶಿಣ್ಣೂರ, ಅವರು, ಯಾದಗಿರಿ.

ಶ್ರೀ ಜಯಶಾಂತ ಸ್ವಾಮಿಗಳು, ರುದ್ರದೇವರ ಮಠ, ಯಾದಗಿರಿ, ಇವರನ್ನು ಸಮಿತಿಯ ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಯಿತು.

---

## ವಿದ್ವಾನ್ ಪಂಚಾಕ್ಷರಿ ಗವಾಯಿಗಳ ಮತ್ತು ಅವರ ಶಿಷ್ಯಮಂಡಳಿಯವರ ಸಂಗೀತ ಕಚೇರಿ

ಈ ತಿಂಗಳು ೧೧ನೆಯ ತಾರೀಖು ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಮೈಸೂರು ಪ್ರಾಂತಸಮಿತಿಯವರು ಉತ್ತರ ಕನ್ನಡ ಪ್ರಾಂತದ ಪ್ರಸಿದ್ಧ ಗಾಯಕರಾದ ಶ್ರೀ॥ ಪಂಚಾಕ್ಷರ ಗವಾಯಿಗಳ ಮತ್ತು ಅವರ ಶಿಷ್ಯ ಮಂಡಳಿಯವರ ಅಮೋಘ ಸಂಗೀತ ಕಚೇರಿಯನ್ನು ಏರ್ಪಡಿಸಿದ್ದರು. ಪರಿಷನ್ಮಂದಿರ ಸ್ತ್ರೀಪುರುಷರಿಂದ ಕಿಕ್ಕಿರಿದು ತುಂಬಿದ್ದಿತು. ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು ಅಗ್ರಾಸನವನ್ನು ಅಲಂಕರಿಸಿದ್ದರು. ಶ್ರೀ॥ ಪಂಚಾಕ್ಷರ ಗವಾಯಿಗಳು "ಕರುಣಿಸು ಕಾಡದಿರೆನ್ನನು" ಎಂಬ ನಿಜಗುಣಶಿವಯೋಗಿಗಳಿಂದ ರಚಿತವಾದ ಕನ್ನಡ ಪದವನ್ನು ಹಾಡಿ ತಮ್ಮ ಅಸಾಧಾರಣವಾದ ಪಾಂಡಿತ್ಯವನ್ನು ಪ್ರದರ್ಶಿಸಿದರು. ಶ್ರೀ॥ ಗವಾಯಿಗಳು ಉತ್ತರಾದಿ ಮತ್ತು ದಕ್ಷಿಣಾದಿ ಸಂಪ್ರದಾಯದ ಹಾಡುಗಾರಿಕೆಯಲ್ಲಿ ಸಮಾನವಾದ ಪಾಂಡಿತ್ಯವನ್ನು ಪಡೆದಿರುವುದು ಬಹಳ ಹೆಚ್ಚಿನದು. ದಕ್ಷಿಣಾದಿ ಸಂಗೀತವನ್ನು ಹಾಡಿದಾಗ ಉತ್ತರಾದಿ ಕ್ರಮವನ್ನು ಬೆರಸದೆ ಶುದ್ಧ ದಕ್ಷಿಣಾದಿ ಕ್ರಮದಲ್ಲಿಯೇ ಹಾಡಿದ್ದು ಸ್ತೋತ್ರಾರ್ಹವಾಗಿದೆ. ಉತ್ತರಾದಿ ಸಂಗೀತದಲ್ಲಿ ಅವರು ಅದ್ವಿತೀಯ ಪಾಂಡಿತ್ಯವನ್ನು ಪಡೆದಿರುವರು. ಅವರ ಪ್ರಿಯಶಿಷ್ಯರಾದ ಶ್ರೀ॥ ಪುಟ್ಟಯ್ಯನವರು ಬಾಯಿಹಾಡಿಕೆಯಿಂದಲೂ, ಹಾರ್ಮೋನಿಯಂ, ಪಿಟೀಲ್, ಸಾರಂಗಿ ಮೊದಲಾದ ವಾದ್ಯಗಳನ್ನು ಬಾರಿಸುವುದರಿಂದಲೂ ಶ್ರೋತೃಗಳನ್ನು ಮುಗ್ಧರನ್ನಾಗಿ ಮಾಡಿದರು. ಶ್ರೀ॥ ಗವಾಯಿಗಳ ಶಿಷ್ಯರಲ್ಲೊಬ್ಬರಾದ ಮಾಸ್ಟರ್ ಬಸವರಾಜರು ಈಗಾಗಲೇ ಬೊಂಬಾಯಿ ರೇಡಿಯೋ ಸ್ಟೇಷನ್ನಿನಲ್ಲಿ ಆಗಿಂದಾಗ್ಗೆ ಹಾಡಿ ಕೀರ್ತಿಯನ್ನು ಗಳಿಸಿರುವರು. ಇವರು ಪಟ್ಟದೀಪ್ ರಾಗದಲ್ಲಿ "ಭವಬಂಧನ" ಎಂಬ ಬಸವಣ್ಣನವರ ವಚನವನ್ನು ತಮ್ಮ ಕೋಗಿಲೆಯ ಕಂಠದಲ್ಲಿ ಹಾಡಿ ಸಭಿಕರಿಗೆ ಸಂಗೀತದ ಸವಿಯನ್ನು ದೊರಕಿಸಿದರು. ಶ್ರೀ॥ ಬಿ. ಆರ್. ಪುರಾಣೀಕರು ತಮ್ಮ ಗಾಳಶಾರೀರದಿಂದ ಬಸವಣ್ಣನವರ ವಚನಗಳನ್ನು ಹಾಡಿ ಸಭಾಂಗಣವನ್ನು ನಾದದಿಂದ ತುಂಬಿದರು. ಗಾಯಕರೆಲ್ಲರೂ ಕನ್ನಡ ಪದಗಳನ್ನೇ ಆರಿಸಿ ಹಾಡಿ ನಮ್ಮ ನಾಡಿನ ಗಾಯಕರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವುದರಿಂದ ಕನ್ನಡಿಗರೆಲ್ಲರೂ ಶ್ರೀ॥ ಪಂಚಾಕ್ಷರ ಗವಾಯಿಗಳಿಗೂ ಅವರ ಶಿಷ್ಯ ಮಂಡಳಿಯವರಿಗೂ ಕೃತಜ್ಞತೆಯನ್ನು ಅರ್ಪಿಸಬೇಕಾಗಿದೆ.

—ಕೆ. ಜಿ. ಸಂ.

**ಕಿರಿಯರ ಕತೆಗಳು—೧.**

## ಪಂಚಾಯುಧನ ಕತೆ

ಹಿಂದೆ, ವಾರಣಾಸಿಯಲ್ಲಿ ಒಬ್ಬ ರಾಜನಿದ್ದ. ಅವನ ಹೆಸರು ಬ್ರಹ್ಮದತ್ತ. ಅವನಿಗೆ ಒಬ್ಬ ಮಗನಾದ. ಆ ಮಗನಿಗೆ ಹೆಸರಿಡುವ ದಿವಸ ಎಂಟುನೂರು ಬ್ರಾಹ್ಮಣರು ಬಂದಿದ್ದರು. ಅವರು ಆ ಕುಮಾರನ ಲಕ್ಷಣಗಳನ್ನು ಕಂಡು "ಈ ಕುಮಾರನು ಪುಣ್ಯವಂತ. ಇವನು ಐದು ಆಯುಧಗಳನ್ನು ಬಳಸುವುದರಲ್ಲಿ ಪ್ರವೀಣನಾಗಿ ಪ್ರಸಿದ್ಧನಾಗುವನು. ಇಡೀ ಜಂಬೂದ್ವೀಪದಲ್ಲಿ ಮುಖ್ಯನಾಗುವನು" ಎಂದರು. ಆದರಿಂದ ಅವನಿಗೆ '**ಪಂಚಾಯುಧ ಕುಮಾರ**' ಎಂದು ಹೆಸರಾಯಿತು.

ಪಂಚಾಯುಧನಿಗೆ ಹದಿನಾರು ವರ್ಷವಾದಾಗ, ಅವನ ತಂದೆ ಅವನು ವಿದ್ಯೆ ಕಲಿಯಲೆಂದು ಹಣ ಕೊಟ್ಟು ತಕ್ಷಶಿಲಾನಗರಕ್ಕೆ ಕಳುಹಿಸಿದನು. ಅಲ್ಲಿ ಕುಮಾರನು ಪ್ರಸಿದ್ಧನಾದ ಒಬ್ಬ ಆಚಾರ್ಯನಿಂದ ಬಿಲ್ಲು, ಬಾಣ, ಖಡ್ಗ, ಕಣೆ, ಮುದ್ಗರ ಎಂಬ ಐದು ಆಯುಧಗಳ ಉಪಯೋಗದಲ್ಲಿಯೂ ಪ್ರವೀಣನಾದನು. ವಿದ್ಯಾಭ್ಯಾಸ ಮುಗಿದಮೇಲೆ ಐದು ಆಯುಧಗಳನ್ನೂ ತೆಗೆದುಕೊಂಡು ತಕ್ಷಶಿಲೆಯಿಂದ ವಾರಣಾಸಿಗೆ ಹೊರಟನು.

ಹೀಗೆ ಬರುವಾಗ ದಾರಿಯಲ್ಲಿ ಒಂದು ಕಾಡು ಸಿಕ್ಕಿತು. ಅಲ್ಲಿ ಒಬ್ಬ ಯಕ್ಷ ಮನೆ ಮಾಡಿಕೊಂಡಿದ್ದ. ಅವನ ಹೆಸರು ಶ್ಲೇಷರೋಮ. ಪಂಚಾಯುಧನು ಆ ಕಾಡಿನೊಳಕ್ಕೆ ಹೋಗುವುದನ್ನು ಕಂಡವರು "ಅಯ್ಯಾ, ಅಲ್ಲಿ ಹೋಗಬೇಡ. ಅಲ್ಲಿ ಒಬ್ಬ ಯಕ್ಷನಿದ್ದಾನೆ. ಅವನು ಕಂಡವರನ್ನೆಲ್ಲ ಸಾಯಿಸುತ್ತಾನೆ" ಎಂದು ತಡೆದರು. ಆದರೂ ಕುಮಾರನು ಹೆದರಿಕೆಯಿಲ್ಲದೆ ಸಿಂಹದಂತೆ ಕಾಡನ್ನು ಹೊಕ್ಕನು.

ಕಾಡಿನ ನಡುವಿಗೆ ಬಂದಾಗ ಕುಮಾರನಿಗೆ ಆ ಯಕ್ಷನು ಕಾಣಿಸಿಕೊಂಡನು. ಅವನ ಎತ್ತರ ತಾಳೆಮರದಷ್ಟು, ತಲೆ ಮನೆಯಷ್ಟು ದಪ್ಪ, ಕಣ್ಣು ಪಾತ್ರೆಗಳ ಅಗಲ; ಗೆಣಸುಗೆಡ್ಡೆಯಂತೆ ಎರಡು ದಾಡೆ; ಮುಖ ಗಿಡುಗನಂತೆ; ಹೊಟ್ಟೆಯ ಮೇಲೆ ಅಂಗೈಯಗಲ ಕೆಂಪು ಮಚ್ಚೆ; ಕೈ ಕಾಲು ನೀಲಿ. ಇಂತಹ ಯಕ್ಷನು ಕುಮಾರನಿಗೆ ಕಾಣಿಸಿಕೊಂಡು "ಎಲ್ಲಿ ಹೋಗುವೆ? ನಿಲ್ಲು. ನೀನು ನನ್ನ ಆಹಾರ" ಎಂದನು.

ಆಗ ಕುಮಾರನು ಹೆದರದೆ "ಯಕ್ಷ, ನೀನು ಇಲ್ಲಿ ಇರುವದನ್ನು ತಿಳಿದೇ ನಾನು ಬಂದಿದ್ದೇನೆ. ಜೋಪಾನವಾಗಿ ಹತ್ತಿರ ಬಾ. ವಿಷದ ಬಾಣದಿಂದ ಹೊಡೆದು ನಿನ್ನನ್ನು ಬೀಳಿಸುವೆನು" ಎಂದು ಗದರಿಸಿ, ಹಾಲಾಹಲ ವಿಷ ಕುಡಿದ ಸರಳನ್ನು ಸಂಧಾನಮಾಡಿ ಬಿಟ್ಟನು. ಅದು ಅಲ್ಲಿ ಯಕ್ಷನ ರೋಮದಲ್ಲಿ ಸಿಕ್ಕಿಬಿತ್ತು. ಕುಮಾರನು ಪುನಃ ಪುನಃ ಐವತ್ತು ಸರಳುಗಳನ್ನು ಬಿಟ್ಟನು. ಎಲ್ಲವೂ ಅವನ ರೋಮದಲ್ಲೇ ಸಿಕ್ಕಿಬಿತ್ತು. ಯಕ್ಷನು ತನ್ನ ಮೈಯನ್ನು ಕೊಡವಿ ಆ ಸರಳುಗಳನ್ನು ಕಾಲ ಬಳಿ ಬೀಳಿಸಿ ಕುಮಾರನ ಹತ್ತಿರಕ್ಕೆ ಬಂದನು. ಕುಮಾರನು ಅವನನ್ನು ಪುನಃ ಗದರಿಸಿ, ಖಡ್ಗವನ್ನು ಎಳೆದು ಹೊಡೆದನು. ಮೂವತ್ತುಮೂರು ಅಂಗುಲ ಉದ್ದದ ಆ ಖಡ್ಗವೂ ಸಿಕ್ಕಿಬಿತ್ತು. ಬಳಿಕ ಕಣೆಯಿಂದ ಹೊಡೆದನು. ಅದೂ ರೋಮದಲ್ಲೇ ಸಿಕ್ಕಿಬಿತ್ತು. ಅನಂತರ ಮುದ್ಗರದಿಂದ ಹೊಡೆದನು. ಅದೂ ಸಿಕ್ಕಿಕೊಂಡಿತು.

ಆಗ ಕುಮಾರನು "ಅಯ್ಯಾ ಯಕ್ಷ, ನನ್ನ ಹೆಸರು ಪಂಚಾಯುಧ ಕುಮಾರ. ಆದರೂ ನಾನು ಈ ಆಯುಧಗಳನ್ನು ನಂಬಿ ನಿನ್ನ ಕಾಡಿನೊಳಗೆ ಬರಲಿಲ್ಲ. ನನ್ನ ಶಕ್ತಿಯಲ್ಲಿ ನಂಬಿಕೆಯಿಟ್ಟು ಬಂದೆ. ಇದೋ, ನಿನ್ನನ್ನು ಪುಡಿಪುಡಿ ಮಾಡುವೆನು" ಎಂದು ಕೂಗುತ್ತ ಬಲಗೈಯಿಂದ ಯಕ್ಷನನ್ನು ಹೊಡೆದನು. ಕೈಯೂ ಕೂದಲಿನಲ್ಲಿ ಸಿಕ್ಕಿಬಿತ್ತು. ಎಡಗೈಯಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ಬಲಗಾಲಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ಎಡಗಾಲಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ತಲೆಯಿಂದ ಹೊಡೆದನು. ಅದೂ ಕೂದಲಿನಲ್ಲೇ ಸಿಕ್ಕಿಬಿತ್ತು. ಹೀಗೆ ಐದು ಕಡೆ ಸಿಕ್ಕಿಬಿದ್ದು ಜೋತಾಡುತ್ತಿದ್ದರೂ ಕುಮಾರನು ಹೆದರಲಿಲ್ಲ.

ಅವನ ಧೈರ್ಯವನ್ನು ಕಂಡು ಯಕ್ಷನು "ಇವನು ಸಾಮಾನ್ಯ ಪುರುಷನಲ್ಲ. ಇವನು ಪುರುಷಸಿಂಹ. ಇಂತಹ ಧೀರನನ್ನು ನಾನು ಇದುವರೆಗೂ ಕಂಡಿಲ್ಲ" ಎಂದು ಆಶ್ಚರ್ಯಪಟ್ಟು, "ಅಯ್ಯಾ, ನೀನು ಸಾಯುವುದಕ್ಕೆ ಹೆದರದಿರಲು ಏನು ಕಾರಣ?" ಎಂದು ಕೇಳಿದನು. ಆಗ ಪಂಚಾಯುಧನು "ಯಕ್ಷ, ನಾನು ಏಕೆ ಹೆದರಬೇಕು? ಹುಟ್ಟಿದವರಿಗೆ ಸಾವು ಒಂದ ಸಲ ತಾನೆ ಬರುವುದು. ಅಲ್ಲದೆ ನನ್ನ ದೇಹದಲ್ಲಿ ಜ್ಞಾನವೆಂಬ ವಜ್ರಾಯುಧವಿದೆ. ನನ್ನನ್ನು ತಿಂದರೆ, ನೀನು ಆ ಆಯುಧವನ್ನು ಜೀರ್ಣಿಸಿಕೊಳ್ಳಲಾರೆ. ಅದು ನಿನ್ನ ಕರುಳನ್ನು ಕತ್ತರಿಸಿ ಬಿಡುವುದು. ಆದ್ದರಿಂದ ನೀನು ತಿಂದೀಯೆ ಎಂದು ನಾನು ಹೆದರುವುದಿಲ್ಲ" ಎಂದನು.

ಆ ಮಾತು ಕೇಳಿ, ಯಕ್ಷನು "ಇದು ನಿಜ. ಇಂತಹ ಪುರುಷಸಿಂಹದ ಮೈಯಿನ ಒಂದು ಬೇಳೆಯಷ್ಟು ಮಾಂಸವನ್ನೂ ನನ್ನ ಹೊಟ್ಟೆ ಜೀರ್ಣಿಸಿಕೊಳ್ಳಲಾರದು" ಎಂದು ಬೆದರಿ, "ಅಯ್ಯಾ, ನಾನು ನಿನ್ನನ್ನು ತಿನ್ನುವುದಿಲ್ಲ. ನೀನು ಹೋಗು. ನಿನ್ನವರಿಗೆ ಸಂತೋಷವಾಗಲಿ" ಎಂದು ಪಂಚಾಯುಧನನ್ನು ಬಿಟ್ಟನು.

ಆಗ ಕುಮಾರನು "ಅಯ್ಯಾ ಯಕ್ಷ, ಹಿಂದಿನ ಜನ್ಮದಲ್ಲಿ ಕೆಟ್ಟ ಕೆಲಸ ಮಾಡಿ, ಈಗ ಮಾಂಸ ತಿನ್ನುವ ಯಕ್ಷನಾಗಿರುವೆ. ಈಗಲೂ ಕೆಟ್ಟ ಕೆಲಸ ಮಾಡಿ ನರಕಕ್ಕೆ ಹೋಗಬೇಡ. ಪ್ರಾಣಿ ಹಿಂಸೆ ಮಾಡಬೇಡ. ಬಿಡು" ಎಂದು ಯಕ್ಷನಿಗೆ ಬುದ್ಧಿವಾದ ಹೇಳಿ, ಅವನನ್ನು ಒಳ್ಳೆಯ ದಾರಿಗೆ ತಂದನು.

ಹೀಗೆ ಯಕ್ಷನನ್ನು ಉತ್ತಮ ಮಾರ್ಗಕ್ಕೆ ತಿದ್ದಿ, ಪಂಚಾಯುಧ ಕುಮಾರನು ಮುಂದೆ ನಡೆದು, ವಾರಣಾಸಿಯನ್ನು ಸೇರಿ, ತಾಯಿ ತಂದೆಯವರ ಜೊತೆಯಲ್ಲಿ ಸುಖವಾಗಿ ಬಾಳಿ ಬದುಕಿದನು.

**ಜಿ. ಪಿ. ರಾಜರತ್ನಂ.**

---

## ಕನ್ನಡ ನಾಡಿನಲ್ಲಿ ಸಮ್ಮೇಳನಾಧ್ಯಕ್ಷರ ಮತ್ತು ಪರಿಷತ್ತಿನ ಉಪಾಧ್ಯಕ್ಷರ ಪ್ರವಾಸ

(ಮುಂದುವರಿದುದು)

**ಬಳ್ಳಾರಿ:** ಶ್ರೀಮಾನ್ ಮುದವೀಡು ಕೃಷ್ಣರಾಯರೂ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರೂ ಆದವಾನಿಯಿಂದ ೨ನೆಯ ತಾರೀಖು ರಾತ್ರಿ ಹೊರಟು ಮರುದಿನ ಬೆಳಗ್ಗೆ ೧೦ ಗಂಟೆಗೆ ಬಳ್ಳಾರಿಯನ್ನು ತಲುಪಿದರು. ರೈಲ್ವೆ ನಿಲ್ದಾಣದಲ್ಲಿ ಅವರಿಗೆ ಗೆಳೆಯರ ಗುಂಪಿನವರೂ ಶ್ರೀ॥ಗಳಾದ ಹುಯಿಲಗೋಳ ನಾರಾಯಣರಾಯರೂ, ಬೆಲ್ಲೋಣಿ ಭೀಮರಾಯರೂ ಸುಸ್ವಾಗತವನ್ನು ನೀಡಿದರು.

ಶ್ರೀ॥ ಬೆಲ್ಲೋಣಿ ಭೀಮರಾವ್, ಎಂ.ಎಲ್.ಸಿ. ಅವರು ಇಬ್ಬರನ್ನೂ ತಮ್ಮ ಮನೆಗೆ ಆತಿಥ್ಯಕ್ಕಾಗಿ ಕರೆದೊಯ್ದರು. ಊಟ ವಿಶ್ರಾಂತಿಗಳಾದ ಬಳಿಕ ಬಳ್ಳಾರಿ ಮುನಿಸಿಪಲ್ ಹೈಸ್ಕೂಲಿನಲ್ಲಿ ಸಂಜೆ ೪ ಗಂಟೆಗೆ ವಿದ್ಯಾರ್ಥಿಗಳ ಸಭೆಯಲ್ಲಿ ಇಬ್ಬರೂ ಭಾಷಣಮಾಡಿದರು. ಶ್ರೀ॥ ಮುದವೀಡುರವರು ತಮ್ಮ ಭಾಷಣದಲ್ಲಿ ಕನ್ನಡ ನಾಡು ನುಡಿಗಳ ಪ್ರಾಚೀನತೆಯನ್ನೂ ಪೂರ್ವ ವೈಭವವನ್ನೂ ವಿವರಿಸಿ ಕನ್ನಡಿಗರು ಎಚ್ಚತ್ತು ತಮ್ಮ ಸಾಹಿತ್ಯ ಸಂಪತ್ತನ್ನು ಕಾಯ್ದುಕೊಳ್ಳಲು ಪ್ರಯತ್ನಿಸದಿದ್ದರೆ ಕನ್ನಡಕುಲವೇ ನಿರ್ನಾಮವಾಗುವುದೆಂದು ಎಲ್ಲರಿಗೂ ಮನದಟ್ಟಾಗುವಂತೆ ಸ್ಫೂರ್ತಿವತ್ತಾಗಿ ಹೇಳಿದರು. 'ಶ್ರೀ'ಯವರು ಕನ್ನಡ ನಾಡು ನುಡಿಗಳ ಪ್ರಗತಿಯ ದಾರಿಯಲ್ಲಿರುವ ಎಡೆತಡೆಗಳನ್ನೂ ಎಡರು ತೊಡರುಗಳನ್ನೂ ವಿವರಿಸಿ; ಗುರಿ ಮುಟ್ಟಬೇಕಾದರೆ ಅವನ್ನು ದೃಢ ನಿಶ್ಚಯದಿಂದ, ಧೈರ್ಯಸ್ಥೈರ್ಯಗಳಿಂದ ದಾಟಬೇಕೆಂದು ಬೋಧಿಸಿದರು.

ಸಂಜೆ ೬ ಗಂಟೆಗೆ ವಾರ್ಡ್‌ಲಾ ಹೈಸ್ಕೂಲಿನಲ್ಲಿ ಕನ್ನಡ ಪ್ರಮುಖರ ಸಭೆ ನಡೆಯಿತು. ಶ್ರೀ॥ ವೈ. ಮಹಾಬಲೇಶ್ವರಪ್ಪನವರು ಅಧ್ಯಕ್ಷತೆ ವಹಿಸಿದ್ದರು. 'ಶ್ರೀ'ಯವರು ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆ

ಗಳನ್ನೂ, ಪರಿಷತ್ತು ನಿಜವಾಗಿ ಅಖಿಲ ಕರ್ನಾಟಕ ಪ್ರಾತಿನಿಧಿಕ ಸಂಸ್ಥೆಯಾಗುವಂತೆ ಅದರ ಘಟನೆಯಲ್ಲಿ ಆಗಿರುವ ಮಾರ್ಪಾಟು ಗಳನ್ನೂ ವಿವರಿಸಿ, ಪರಿಷತ್ತಿನ ಮೂಲಕ ನಾಡು ನುಡಿಗಳ, ಸಂಸ್ಕೃತಿಯ ಚಾರಿತ್ರ್ಯಕ್ಕೆ ಉಜ್ವಲವಾದ ಶ್ರೇಯಸ್ಸನ್ನು ತಂದುಕೊಳ್ಳಲು ಬಳ್ಳಾರಿಯ ಕನ್ನಡಿಗರು ಪರಿಷತ್ತಿಗೆ ನೆರವಾಗಬೇಕೆಂದೂ ಪರಿಷತ್ತಿನ ಬೆಳ್ಳಿ ಹಬ್ಬ ವೈಭವದಿಂದ ನಡೆಯುವುದಕ್ಕೆ ಸಹಾಯ ಸಹಕಾರಗಳನ್ನು ನೀಡಬೇಕೆಂದೂ ಕೋರಿದರು.

**ಸೊಂಡೂರು:** ತರುವಾಯ ಇಬ್ಬರೂ ಸೊಂಡೂರಿಗೆ ದಯಮಾಡಿಸಿದರು. ರಾಜಾ ಸಾಹೇಬರು ಕಾರ್ಯನಿಮಿತ್ತ ಮುಂಬಯಿಗೆ ಪಯಣ ಮಾಡಿದುದರಿಂದ 'ಶ್ರೀ'ಯವರೂ ಮುದವೀಡುರವರೂ ಅರಮನೆಯ ಮತ್ತು ಸರಕಾರದ ಅಧಿಕಾರಿಗಳೊಂದಿಗೆ ಸಂಸ್ಥಾನದಲ್ಲಿ ಕನ್ನಡದ ಮುನ್ನಡೆಯ ವಿಷಯವಾಗಿ ಚರ್ಚೆ ನಡಸಿದರು. ೪ನೆಯ ತಾರೀಖು ಮಧ್ಯಾಹ್ನ ಸೊಂಡೂರು ಬಿಟ್ಟು ಗದುಗಿಗೆ ಇಬ್ಬರೂ ಪಯಣ ಬೆಳಸಿದರು.

**ಗದುಗು:** ೪ನೆಯ ತಾರೀಖು ಮಧ್ಯಾಹ್ನ ೪ ಗಂಟೆಗೆ ಶ್ರೀ|| ಮುದವೀಡುರವರೂ 'ಶ್ರೀ'ಯವರೂ ಗದುಗಿನ ಸರಸ್ವತಿ ವಾಕ್ಪಟ ಮಂದಿರದಲ್ಲಿ ನೆರೆದಿದ್ದ ಸಭೆಯಲ್ಲಿ ಭಾಷಣಮಾಡಿದರು. ಮಂದಿರದಲ್ಲಿ ಕನ್ನಡ ಪ್ರೇಮಿಗಳು ಕಿಕ್ಕಿರಿದು ನೆರೆದಿದ್ದರು. ಶ್ರೀ|| ಮುದವೀಡುರವರ ಗಂಭೀರ ಮೇಘನಾದ ಸದೃಶವಾಣಿಯೂ 'ಶ್ರೀ'ಯವರ ವೀಣಾವಿತಾನ ಸದೃಶವಾಣಿಯೂ ೨ ಗಂಟೆಗಳ ಕಾಲ ಸಭಾಸದರನ್ನು ಮೈಮರೆಸಿ, ಅವರನ್ನು ಕನ್ನಡ ಸೇವೆಯ ಕಡೆಗೆ ಒಲಿಸಿಕೊಂಡುವು. ಸಂಜೆ ೬ ಗಂಟೆಗೆ 'ಸದಾಚಾರ ಗೃಹ'ದಲ್ಲಿ ಸತ್ಕಾರವನ್ನು ಸ್ವೀಕರಿಸಿ ಇಬ್ಬರೂ ರಾತ್ರಿ ೮ ಗಂಟೆಗೆ ರೈಲಿನಲ್ಲಿ ಧಾರವಾಡಕ್ಕೆ ಪಯಣಮಾಡಿದರು.

**ಧಾರವಾಡ:** ೫ನೆಯ ತಾರೀಖು ಬೆಳಗ್ಗೆ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಕನ್ನಡ ಕೆಲಸಗಾರರ ಸಭೆ ಸೇರಿತ್ತು. ಶ್ರೀ|| ದೀಕ್ಷಿತ ನರಸಿಂಗರಾಯರು ಅಧ್ಯಕ್ಷತೆ ವಹಿಸಿದ್ದರು. 'ಶ್ರೀ'ಯವರೂ ಶ್ರೀ|| ಮುದವೀಡುರವರೂ ಕನ್ನಡ ಕೆಲಸಗಾರರೊಡನೆ ವಿಚಾರವಿನಿಮಯ ಮಾಡಿ, ಪರಿಷತ್ತಿನ ಸದಸ್ಯಸಂಪತ್ತನ್ನು ಬೆಳಸುವ ಕಾರ್ಯವನ್ನು ಹೆಚ್ಚು ದಕ್ಷತೆಯಿಂದ ನಡಸಬೇಕೆಂದು ಬಯಸಿದರು. ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ|| ರಂಗಪ್ಪ ಪೋತ್‌ದಾರರೂ, ಶ್ರೀ|| ಕಲಮುದಾನಿಯವರೂ ಶ್ರೀ|| ಗಣಪತಿರಾವ್ ಪಾಂಡೇಶ್ವರರೂ ಚರ್ಚೆಯಲ್ಲಿ ಭಾಗವಹಿಸಿದ್ದರು.

ಮಧ್ಯಾಹ್ನ ಕೆ. ಎ. ಬೋರ್ಡ್ ಟ್ರೈನಿಂಗ್ ಕಾಲೇಜನ್ನು ಸಂದರ್ಶಿಸಿ 'ಶ್ರೀ'ಯವರು ಸಂಜೆಯ ಮೆಯಿಲ್ ಗಾಡಿಯಲ್ಲಿ ಕುಳಿತು ಮುಂಬಯಿಗೆ ಪಯಣಮಾಡಿದರು.

---

## ಕನ್ನಡ ಅಕ್ಷರ ಶಿಲ್ಪಿ
### ಶ್ರೀಮಾನ್ ಅನಂತಾಚಾರಿಯುವರು

ಮಂಗಳೂರಿನ ವಿದ್ವಾನ್ ಶ್ರೀ|| ಕಯ್ಯಾರ ಕಿಯ್ಞಣ್ಣ ರೈ ಅವರು 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಒಂದು ಲೇಖನ ಬರೆದು, ಕನ್ನಡ ಮುದ್ರಣಾಕ್ಷರಗಳನ್ನು ಮುದ್ದಾಗಿ ತಯಾರುಮಾಡಿ, ಇಂದಿನ ಮುದ್ರಣ ಕಲೆಗೆ ಅಸ್ತಿಭಾರ ಹಾಕಿದ ಶ್ರೀ|| ಅನಂತಾಚಾರಿಯವರ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಆ ಲೇಖನದ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿದೆ:

ಮೊದಲು ಕನ್ನಡ ನಾಡಿನಲ್ಲಿ ಅಚ್ಚುಕೂಟಗಳನ್ನು ಸ್ಥಾಪಿಸಿ ನಡಸಿದ ಕೀರ್ತಿ ಮತಪ್ರಚಾರಕರಾಗಿ ಬಂದ ಜರ್ಮನ್ ಕ್ರೈಸ್ತ ಮಿಷನರಿಗಳಿಗೆ ಸಲ್ಲತಕ್ಕದ್ದು. ಮಂಗಳೂರಿನಲ್ಲಿ ಜರ್ಮನ್ ಮಿಷನರಿಗಳು ಮುದ್ರಣಾಲಯವನ್ನು ಸ್ಥಾಪಿಸಿದಾಗ ಕನ್ನಡ ಮೊಳೆಗಳನ್ನು ಕೆತ್ತಿಕೊಡಲು ಕುಶಲ ಕೆಲಸಗಾರರನ್ನು ಕಂಡುಹಿಡಿಯಬೇಕಾಗಿ ಬಂತು. ಮೊತ್ತಮೊದಲು ಈ ಕಾರ್ಯ ಮಾಡಲು ಮುಂದೆ ಬಂದವರು ಸೊನೆಗಾರ ಜಾತಿಯ ಶ್ರೀ|| ಪಾಂಡುರಂಗಶೆಟ್ಟಿ ಎಂಬುವರು.

ಆಮೇಲೆ ಇಟಲಿಯ ರೋಮನ್ ಕ್ಯಾಥೋಲಿಕ್ ಮತಪ್ರಚಾರಕರು ಮಂಗಳೂರಿಗೆ ಬಂದು ತಮ್ಮ ಒಂದು ಮುದ್ರಣಾಲಯನ್ನು ಸ್ಥಾಪಿಸಿದರು. ಆಗ ಶ್ರೀ|| ಅತ್ತಾವರ ಅನಂತಾಚಾರಿಯವರು ಈಗಿನ 'ಕೊಡಿಯಾಲ ಬೈಲು' ಅಚ್ಚುಕೂಟದಲ್ಲಿ ಕೆಲಸ ಮಾಡುತ್ತಿದ್ದರು. ಫಾದರ್ ರೋಶಿ ಎಂಬುವರು ಅದರ ಮೇಲ್ವಿಚಾರಕರಾಗಿದ್ದರು. ಅಂದಿನ ಕನ್ನಡ ಅಕ್ಷರಗಳು ಅಷ್ಟು ಅಂದವಾಗಿ ಇರಲಿಲ್ಲ. ಶ್ರೀ|| ಅನಂತಾಚಾರಿಯವರ ಮನಸ್ಸಿನಲ್ಲಿ ಅಕ್ಷರಗಳನ್ನು ಮುದ್ದಾಗಿ ಕೆತ್ತಿಕೊಡಬೇಕೆಂಬ ಸಂಕಲ್ಪ ದುಡಿಯುತ್ತಿತ್ತು. ಫಾದರ್ ರೋಶಿಯವರು ಅವರಿಗೆ ಆ ಕೆಲಸವನ್ನು ವಹಿಸಿ, ಆ ಸಂಕಲ್ಪ ಕಾರ್ಯರೂಪಕ್ಕೆ ಬರಲು ನೆರವಾದರು. ಅಲ್ಲಿಂದೀಚೆಗೆ ಅವರು ಅನೇಕ ಅಕ್ಷರಗಳ 'ಪಂಚ'ನ್ನು ತಯಾರಿಸಿ, ಉದ್ಯೋಗಕ್ಕಾಗಿ ನಾಡಿನಲ್ಲಿ ಸಂಚರಿಸಿ ಕನ್ನಡ ಮುದ್ರಣ ಕಲೆ ಹೊಸ ದಾರಿಯಲ್ಲಿ ಸಾಗುವಂತೆ ಮಾಡಿದರು ಎನ್ನಬಹುದು.



ಶ್ರೀಮಾನ್ ಅನಂತಾಚಾರಿಯರು

ಶ್ರೀಯುತರು ಮಂಗಳೂರಿನ 'ಕೊಡಿಯಾಲಬೈಲು ಪ್ರೆಸ್', ಮತ್ತು 'ಶಾರದಾ ಪ್ರೆಸ್', 'ಮುಂಬಯಿಯ ಪ್ರೆಸ್', 'ಗುಜರಾಥಿ ಟೈಪ್ ಫೌಂಡ್ರಿ' (ಇವರು ಮಾಡಿಕೊಟ್ಟಿರುವ ನಾಗರಿ ಅಕ್ಷರಕ್ಕೆ 'ಅನಂತ ಷೇಡೆಡ್' ಎಂದು ಹೆಸರು ಇಡಲಾಗಿದೆ.) ಧಾರವಾಡದ 'ಕರ್ನಾಟಕ ಪ್ರಿಂಟಿಂಗ್ ಪ್ರೆಸ್'ಗಳಿಗೆ ಸುಂದರವಾದ ಅಕ್ಷರಗಳನ್ನು ಕೆತ್ತಿಕೊಟ್ಟರುವರು. ಕೊನೆಗೆ ಮಂಗಳೂರಿಗೆ ಹಿಂತಿರುಗಿ, 'ಬಾಸೆಲ್ ಮಿಷನ್ ಪ್ರೆಸ್,' 'ಶಾರದಾ ಪ್ರೆಸ್,' ಉಡುಪಿಯ 'ಪ್ರಭಾಕರ ಪ್ರೆಸ್'ಗಳಿಗೆ ಅಕ್ಷರಗಳನ್ನು ಒದಗಿಸಿಕೊಟ್ಟರಲ್ಲದೆ, ಬೆಂಗಳೂರಿನ 'ನ್ಯಾಷನಲ್ ಟೈಪ್ ಫೌಂಡ್ರಿ'ಗೆ ತೆಲುಗು ಅಕ್ಷರಗಳನ್ನೂ, ಹೈದರಾಬಾದಿಗೆ ಉರ್ದು ಅಕ್ಷರಗಳನ್ನೂ ಮಾಡಿಕೊಟ್ಟರು. ಮಂಗಳೂರಿನ ಶಾರದಾ ಪ್ರೆಸ್‌ನಲ್ಲೂ ಮುಂಬಯಿಯ ನಿರ್ಣಯಸಾಗರ ಪ್ರೆಸ್ಸಿನಲ್ಲಿಯೂ ಇಂದಿಗೂ ಅವರು ಮಾಡಿಕೊಟ್ಟ ಅಕ್ಷರಗಳು ಪ್ರಚಾರದಲ್ಲಿವೆ.

ಕೊನೆಗೆ ವಿದ್ವಾನ್ ಶ್ರೀ|| ಕ್ಯಯಾರ ಕಿಯ್ಞಣ್ಣ ರೈ ಅವರು ಪರಿಚಯ ಲೇಖನವನ್ನು ಹೀಗೆ ಮುಗಿಸಿದ್ದಾರೆ:

'ಇಂದು ಅವರ ವಯಸ್ಸು ೭೦ರ ಗಡಿ ದಾಟಿದೆ. ಕಣ್ಣಿಗೆ ನಿರಂತರ ಕೆಲಸ ಕೊಟ್ಟುದರಿಂದಲೋ ಏನೋ ಕಣ್ಣುಗಳೆರಡೂ ಕುರುಡಾಗಿವೆ. ಮಂಗಳೂರಲ್ಲಿರುವ ತಮ್ಮ ಸ್ವಂತ ಮನೆಯಲ್ಲಿಯೇ ವಾಸಿಸುತ್ತಾರೆ. ಬುದ್ಧಿ ಇಂದಿಗೂ ಬಹಳ ಚುರುಕಾಗಿದೆ. ಮಿತಭಾಷಿಗಳಾಗಿದ್ದಾರೆ. ಕನ್ನಡ ಲೋಕಕ್ಕೆ ತಾವು ಮಾಡಿದ ಸೇವೆಯನ್ನು ಕುರಿತು ಯಾರಾದರೂ ಅಭಿಮಾನದಿಂದ ಮಾತನಾಡಿದರೆ, ಅದಕ್ಕಾಗಿ ಹಿಗ್ಗುವುದಿಲ್ಲ. ಕನ್ನಡ ಮುದ್ರಣಾಕ್ಷರದ ಇತಿಹಾಸದಲ್ಲಿ ಶ್ರೀ|| ಅತ್ತಾವರ ಅನಂತಾಚಾರಿಯವರ ಹೆಸರು ಸುವರ್ಣಾಕ್ಷರಗಳಿಂದ ಉಲ್ಲಿಖಿತವಾಗತಕ್ಕದ್ದು. ಈ ಮಹನೀಯರು ತಮ್ಮ ಸಾಹಸದಿಂದ ನಿರಂತರ ಪರಿಶ್ರಮದಿಂದ ಅಖಿಲ ಕರ್ನಾಟಕದ ಮುದ್ರಣಾಕ್ಷರಗಳ ಅಭಿವೃದ್ಧಿಗಾಗಿ ಸಲ್ಲಿಸಿದ ಸೇವೆ ಅಪಾರವಾದದು.'

# ಕನ್ನಡ ಸುದ್ದಿ

**ಬೆಂಗಳೂರು: ಕನ್ನಡ ಸಾಹಿತಿಗಳ ಸಂಘ**

ಕಳೆದ ವಾರ ತಿಳಿಸಿದ್ದಂತೆ ಮೇಲ್ಕಂಡ ಸಂಘದ ಆಶ್ರಯದಲ್ಲಿ ೧೪ನೆಯ ತಾರೀಖು ಭಾನುವಾರ ಏಕಾಂಕನಾಟಕ ವಿಚಾರಕೂಟ ಶ್ರೀ ಕೃಷ್ಣರಾಜೇಂದ್ರ ಮಂದಿರದಲ್ಲಿ ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡೆಯುವುದು. ಬೆಳಗಿನ ಕಾರ್ಯಕ್ರಮ: ಬೆಂಗಳೂರು ಸೆಂಟ್ರಲ್ ಕಾಲೇಜು ಅಸಿಸ್ಟೆಂಟ್ ಪ್ರೊ| ಶ್ರೀನಿವಾಸ್ ಕೆ. ಅನಂತರಾಮಯ್ಯ ಎಂ.ಎ. ಅವರು ಇಂಗ್ಲಿಷ್ ಏಕಾಂಕ ನಾಟಕಗಳನ್ನು ಕುರಿತು ಭಾಷಣ ಮಾಡುವರು. ಶ್ರೀಮಾನ್ ಎಲ್. ಗುಂಡಪ್ಪನವರು ಸಂಸ್ಕೃತ ಏಕಾಂಕ ನಾಟಕಗಳನ್ನೂ ಶ್ರೀಮಾನ್ ಎಂ. ವಿ. ಸೀತಾರಾಮಯ್ಯನವರು ಕನ್ನಡ ಏಕಾಂಕ ನಾಟಕಗಳನ್ನೂ ಕುರಿತು ಮಾತನಾಡುವರು. ಮಧ್ಯಾಹ್ನದ ಕಾರ್ಯಕ್ರಮ ಶ್ರೀ|| ಎಂ. ಆರ್. ಶ್ರೀನಿವಾಸಮೂರ್ತಿಗಳ ಅಧ್ಯಕ್ಷತೆಯಲ್ಲಿ ಶ್ರೀಗಳಾದ ಜಿ. ಪಿ. ರಾಜರತ್ನಂ, ಎಂ.ಎ., ಬಿ. ಎಸ್. ವೆಂಕಟರಾಮ್, ಟಿ. ಸದಾಶಿವಯ್ಯ, ಕೆ. ರಾಜಾರಾವ್, ಎಸ್. ವೆಂಕಟಾಚಲಪತಿ ಮೊದಲಾದವರು ಏಕಾಂಕ ನಾಟಕಗಳನ್ನು ಓದುವರು.

**ಶ್ರೀರಾಮ ನವರಾತ್ರಿಯ ಉಪನ್ಯಾಸಮಾಲೆ:**

ಮಲ್ಲೇಶ್ವರದ ಕರ್ನಾಟಕ ಸಂಘದ ಆಶ್ರಯದಲ್ಲಿ ಮಲ್ಲೇಶ್ವರದ ಶ್ರೀರಾಮ ಮಂದಿರದಲ್ಲಿ ಮೇಲ್ಕಂಡ ಉಪನ್ಯಾಸ ಮಾಲೆ ೮-೪-೪೦ರಿಂದ ಉಪಕ್ರಮವಾಗಿ ನಡೆಯುತ್ತಿದೆ. ೮ನೆಯ ಸೋಮವಾರ ಸಾಹಿತ್ಯರತ್ನ, ವಿದ್ಯಾನಿಧಿ ಶ್ರೀಮಾನ್ ಪಾನ್ಯಂ ಸುಂದರ ಶಾಸ್ತ್ರಿಗಳವರು ವಾಲ್ಮೀಕಿ ರಾಮಾಯಣದ ವಿಚಾರವಾಗಿಯೂ, ೯ನೆಯ ಮಂಗಳವಾರ ಶ್ರೀ|| ಕೆ. ವೆಂಕಟರಾಮಪ್ಪ ಎಂ.ಎ. ಅವರು, ಜೈಮಿನಿ ರಾಮಾಯಣದ ವಿಷಯವಾಗಿಯೂ, ೧೦ನೆಯ ಬುಧವಾರ ಶ್ರೀ|| ಓ. ಎನ್. ಲಿಂಗಯ್ಯನವರು ತೊರವೆ ರಾಮಾಯಣವನ್ನೂ ಕುರಿತೂ ಉಪನ್ಯಾಸಗಳನ್ನು ಮಾಡಿದರು. ೧೧ನೆಯ ಗುರುವಾರ ಗಮಕಿ ಶ್ರೀ|| ಎಂ. ರಾಘವೇಂದ್ರರಾಯರು ತೊರವೆ ರಾಮಾಯಣದಲ್ಲಿ ಸೀತಾಕಲ್ಯಾಣದ ಭಾಗವನ್ನು ಸುಶ್ರಾವ್ಯವಾಗಿ ಓದಿದರು. ಇನ್ನೂ ಐದು ದಿನಗಳ ಕಾರ್ಯಕ್ರಮವೇರ್ಪಟ್ಟಿದೆ. ೧೨ನೆಯ ಶುಕ್ರವಾರ ಶ್ರೀಮಾನ್ ಡಿ. ಕೆ. ಭಾರದ್ವಾಜರು ತುಳಸೀದಾಸ ಹಿಂದೀ ರಾಮಾಯಣದ ಮೇಲೆಯೂ, ೧೩ನೆಯ ಶನಿವಾರ ಶ್ರೀ|| ಪಿ. ಎಂ. ಸೋಮಸುಂದರಂ ಪಿಳ್ಳೆ ಎಂ.ಎ.,ಎಲ್.ಟಿ. ಅವರು ಕಂಬಕವಿಯ ತಮಿಳು ರಾಮಾಯಣದ ಮೇಲೆಯೂ, ೧೪ನೆಯ ಭಾನುವಾರ ಶ್ರೀ|| ಅಸ್ಥಾನ ವಿದ್ವಾನ್ ಎನ್. ವಿ. ಪದ್ಮನಾಭಾಚಾರ್ಯ ಅವರು ಸುಂದರಕಾಂಡದ ವಿಚಾರವಾಗಿಯೂ, ಭಾಷಣ ಮಾಡುವರು. ೧೫ನೆಯ ಸೋಮವಾರ "ರಾಮಾಯಣದ ಕೆಲವು ವ್ಯಕ್ತಿ ಶ್ರೇಷ್ಠರು" ಎಂಬ ವಿಷಯವಾಗಿ ಸುಬೋಧ ಸಂಪಾದಕರಾದ ಶ್ರೀ|| ಯಂ. ರಾಮರಾಯರವರಿಂದಲೂ ಮತ್ತು ೧೬ನೆಯ ಮಂಗಳವಾರ ಅಧ್ಯಾತ್ಮ ರಾಮಾಯಣದ ವಿಷಯವಾಗಿ ಶ್ರೀ|| ವಿದ್ವಾನ್ ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳವರಿಂದಲೂ ಉಪನ್ಯಾಸಗಳು ನಡೆಯುವುದಕ್ಕೆ ಏರ್ಪಾಡಾಗಿದೆ.

**ಬೆಂಗಳೂರು: ಅಖಿಲ ಕರ್ನಾಟಕ ಮಕ್ಕಳಕೂಟ ಮತ್ತು ಮಕ್ಕಳ ಸಾಹಿತ್ಯದ ಬರಹಗಾರರ ಸಂಘ**

ಮೇಲ್ಕಂಡ ಕೂಟದ ಮೂರನೆಯ ವಾರ್ಷಿಕ ಸಮ್ಮೇಳನ ಕಳೆದ ೫, ೬, ೭ನೆಯ ತಾರೀಖುಗಳಲ್ಲಿ ನಡೆಯಿತು. ಸ್ವಾಗತಾಧ್ಯಕ್ಷರಾದ ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರು ಮಕ್ಕಳಕೂಟದ ಉದ್ದೇಶಗಳನ್ನೂ, ಅದು ತನ್ನ ಮುಂದಿಟ್ಟುಕೊಂಡಿರುವ ಕಾರ್ಯಕ್ರಮಗಳನ್ನೂ ಅವಗಾಹನೆಗೆ ತಂದು ಸ್ವಾಗತ ಭಾಷಣ ಮಾಡಿದ ತರುವಾಯ, ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಇಸ್ಮೈಲ್ ಅವರು ಪ್ರಾರಂಭ ಭಾಷಣ ಮಾಡಿದರು. ಅವರು ತಮ್ಮ ಭಾಷಣದಲ್ಲಿ—

'ಈ ಸಂಸ್ಥೆಯ ಆಶ್ರಯದಲ್ಲಿ ಹೀಗೆ ಸಮ್ಮೇಳನಗಳು ನಡೆಯುತ್ತಿರುವುದು ಸಂತೋಷಕರವಾದ ಅಂಶ. ಇದರಿಂದ ತಾವೆಲ್ಲರೂ ಒಬ್ಬಳೇ ದೇಶಮಾತೆಯ ಮಕ್ಕಳೆಂಬ ಭಾವನೆ ಬಾಲಕ ಬಾಲಕಿಯರ ಮನಸ್ಸಿನಲ್ಲಿ ಚಿಕ್ಕ ವಯಸ್ಸಿನಿಂದಲೇ ಬೆಳೆಯುತ್ತದೆ. ನಾನಾ ಪ್ರಾಂತಗಳ ಕನ್ನಡಿಗರೆಲ್ಲರ ಒಕ್ಕಟ್ಟಿಗೆ ಅದರಿಂದ ಸಹಾಯವಾಗುತ್ತದೆ' ಎಂದು ಹೇಳಿದರು.

ಈ ಸಮ್ಮೇಳನದ ಜೊತೆಗೆ, ಮಕ್ಕಳ ಸಾಹಿತ್ಯದ ಬರಹಗಾರರ ಸಂಘದವರು ಕಳೆದ ಭಾನುವಾರ ಸಮ್ಮೇಳನ ನಡಸಿದರು. ಶ್ರೀ 'ಹೊಯಿಸಳ'ರು ಅಧ್ಯಕ್ಷತೆ ವಹಿಸಿದ್ದರು. ಸುಮಾರು ೩೦ ಮಂದಿ ಬರಹಗಾರರು ಭಾಗವಹಿಸಿದ್ದರು. ಮಕ್ಕಳ ಸಾಹಿತ್ಯದ ಏಳಿಗೆಯನ್ನು ಕುರಿತ ಭಾಷಣ ವಿಚಾರವಿನಿಮಯಾನಂತರ ಕೆಳಗೆ ಕಂಡ ಮಹನೀಯರು ಸಂಘದ ಕಾರ್ಯಕಾರಿ ಮಂಡಲಿಗೆ ಆಯ್ಕೆಗೊಂಡರು. ಶ್ರೀ|| 'ಹೊಯಿಸಳ'ರು (ಅಧ್ಯಕ್ಷರು); ಶ್ರೀ|| ಜಿ. ಪಿ. ರಾಜರತ್ನಂ (ಉಪಾಧ್ಯಕ್ಷರು); ಶ್ರೀ ಬಿ. ಎಸ್. ಪಾಂಡುರಂಗರಾಯರು (ಕಾರ್ಯದರ್ಶಿಗಳು). ಸದಸ್ಯರು:— ಶ್ರೀಗಳಾದ ಎಂ. ವೆಂಕಟಕೃಷ್ಣಪ್ಪನವರು, ಶೌರಿ ಅವರು, ಯೋಗಾನರಸಿಂಹರವರು, ಬಿ. ರಂಗನಾಥರಾಯರು, ಗುರುಮೂರ್ತಿಯವರು ಮತ್ತು ಶ್ರೀಮತಿ ಆರ್. ಕಲ್ಯಾಣಮ್ಮನವರು.

**ಹೊಸಕೋಟೆ: ಕನ್ನಡ ಹಬ್ಬ**

ಈ ಊರಿನ ಕನ್ನಡ ಗೆಳೆಯರ ಕೂಟದವರು ಯುಗಾದಿಯ ಹಬ್ಬದ ದಿನ (೮-೪-೧೯೪೦) ಕನ್ನಡ ಹಬ್ಬವನ್ನು ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡಸಿದರು. ಉತ್ಸವಕ್ಕೆ ಬೆಂಗಳೂರಿನಿಂದ ಹಲವು ಮಹನೀಯರು ದಯಮಾಡಿಸಿದ್ದರು. ಊರಿನ ಹಿರಿಯರು, ಕಿರಿಯರು, ಹೆಂಗಸರು, ಮಕ್ಕಳು, ಹಿಂದೂಗಳು, ಮುಸಲ್ಮಾನರು ಎಲ್ಲರೂ ಶ್ರೀಕೃಷ್ಣರಾಜೇಂದ್ರ ಉದ್ಯಾನದಲ್ಲಿ ಸಾಯಂಕಾಲ ಹೊಂಗೆಯ ನೆಳಲಲ್ಲಿ, ಕನ್ನಡ ತಾಯ ಮಡಿಲಲ್ಲಿ, ಸೇರಿ ಉತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಿದರು. ಪ್ರಾರ್ಥನೆ ಸಂಗೀತಗಳಾದ ಬಳಿಕ, ಬೆಂಗಳೂರಿನಿಂದ ದಯಮಾಡಿಸಿದ್ದ ಶ್ರೀ|| ವಿ. ಸೀತಾರಾಮಯ್ಯನವರೂ ಶ್ರೀ|| ಕೆ. ವಿ. ರಾಘವಾಚಾರ್ಯರೂ ಸ್ವಲ್ಪ ಹೊತ್ತು ಮಾತನಾಡಿದ ಮೇಲೆ ಅಧ್ಯಕ್ಷರು ತಮ್ಮದೇ ಆದ ತಿಳಿಯಾದ ಶೈಲಿಯಲ್ಲಿ ರಸವತ್ತಾದ ಮತ್ತು ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿದರು. ವಂದನಾಸಮರ್ಪಣೆಯಾದ ಮೇಲೆ 'ಮೈಸೂರು ರಾಷ್ಟ್ರಗೀತೆ'ಯಿಂದ ಸಭೆ ಮುಕ್ತಾಯವಾಯಿತು.

**ಹೊಳೆನರಸಿಪುರ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ವಾರ್ಷಿಕೋತ್ಸವ ಇದೇ ೨೦ನೆಯ ತಾರೀಖು ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡೆಯುವುದೆಂದು ತಿಳಿಯಬಂದಿದೆ.

**ಧಾರವಾಡ: ಕನ್ನಡ ಸಾಹಿತ್ಯ ಸಂಶೋಧನ ಮಂಡಲ**

ಮೇಲ್ಕಂಡ ಮಂಡಲಕ್ಕೆ ಧಾರವಾಡ ಕರ್ನಾಟಕ ಕಾಲೇಜಿನ ಇತಿಹಾಸ ಮತ್ತು ತರ್ಕಶಾಸ್ತ್ರದ ಅಧ್ಯಾಪಕರಾದ ಶ್ರೀ|| ಎ. ಡಿ. ಧೋಪೇಶ್ವರಕರ್ ಅವರು ಮೇ ೧೯೪೧ರ ವರೆಗೆ ಸದಸ್ಯರಾಗಿ ನೇಮಕವಾಗಿದ್ದಾರೆ.

**ಕೊಳ್ಳೇಗಾಲ: ಕನ್ನಡ ಪ್ರಚಾರ**

ಮೇಲ್ಕಂಡ ತಾಲ್ಲೂಕಿನ ಕಾಮಗೆರೆ ಗ್ರಾಮದಲ್ಲಿ ಈ ತಿಂಗಳು ೯ ಮತ್ತು ೧೦ನೆಯ ತಾರೀಖು ಕಾಮಗೆರೆ ವಿದ್ಯಾಕೇಂದ್ರದ ಉಪಾಧ್ಯಾಯರ ಸಂಘದ ವಾರ್ಷಿಕೋತ್ಸವ ನಡೆಯಿತು. ೯ನೆಯ ತಾರೀಖಿನ ದಿನ ಶ್ರೀ|| ದೇವುಡು ಅವರು 'ವಯಸ್ಕರ ವಿದ್ಯಾಭ್ಯಾಸ' ಎಂಬ ವಿಷಯವಾಗಿಯೂ, ಶ್ರೀ|| ಜಿ. ಪಿ. ರಾಜರತ್ನಂ ಅವರು 'ಶಿಶು ಸಾಹಿತ್ಯ'ದ ವಿಷಯವಾಗಿಯೂ ಭಾಷಣ ಮಾಡಿದರು. ಸಭೆಯಲ್ಲಿ ಸುಮಾರು ೧೫೦೦ ಕನ್ನಡಿಗರು ನೆರೆದಿದ್ದರು. ರಾತ್ರಿ ಉಪಾಧ್ಯಾಯರು 'ಕಾಳಿದಾಸ' ಎಂಬ ಕನ್ನಡ ನಾಟಕವನ್ನು ಉತ್ತಮ ರೀತಿಯಲ್ಲಿ ಪ್ರದರ್ಶಿಸಿದರು. ಪ್ರೇಕ್ಷಕರು ಇನ್ನೂ ಹೆಚ್ಚು ಸಂಖ್ಯೆಯಲ್ಲಿ ಸುತ್ತ ಹತ್ತು ಹದಿನೈದು ಮೈಲಿಗಳ ದೂರದಿಂದಲೂ ಬಂದಿದ್ದರು. ಸಮ್ಮೇಳನವನ್ನು ಹತ್ತನೆಯ ತಾರೀಖು ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ|| ಪಳನಿಸ್ವಾಮಿ ಗೌಂಡರ್ ಅವರು ಆರಂಭಿಸಿದರು.

---

**ಸೊಲ್ಲಾಪುರ ಸಮ್ಮೇಳನಗಳ ಕಾರ್ಯಕ್ರಮ**

೧. ಜಿಲ್ಲಾ ಸಾಹಿತ್ಯ ಸಮ್ಮೇಳನ.

ಏಪ್ರಿಲ್ ೨೧ನೆಯ ಭಾನುವಾರ: ಅತಿಥಿಗಳಿಗೆ ಸ್ವಾಗತ — ೨೨ನೆಯ ಸೋಮವಾರ: ಬೆಳಗ್ಗೆ ೮ರಿಂದ ೧೧—ಪ್ರಾರ್ಥನೆ; ಸ್ವಾಗತ ಸಮಿತಿ ಅಧ್ಯಕ್ಷ ಭಾಷಣ: ಶ್ರೀ|| ಸಿ. ಎಂ. ವಾರದರವರಿಂದ—ಅಧ್ಯಕ್ಷ ಭಾಷಣ: ಶ್ರೀ|| ಬಿ. ಎಂ. ಶ್ರೀಕಂಠಯ್ಯನವರಿಂದ—ಮಧ್ಯಾಹ್ನ ೧ರಿಂದ ೩: ವಿಷಯ ನಿಯಾಮಕ ಸಮಿತಿ ಅಧಿವೇಶನ–ಸಾಯಂಕಾಲ ೪ರಿಂದ ೮: ಸಮ್ಮೇಳನ – ರಾತ್ರಿ ೯-೩೦ರಿಂದ ೧೧-೩೦: ವಿವಿಧ ವಿನೋದಾವಳಿ.

೨. ಎಂಟನೆಯ ಕರ್ನಾಟಕ ಏಕೀಕರಣ ಸಮ್ಮೇಳನ

೨೩ನೆಯ ಮಂಗಳವಾರ: ಬೆಳಗ್ಗೆ ೮ರಿಂದ ೧೧—ಪ್ರಾರ್ಥನೆ; ಆರಂಭ ಭಾಷಣ ಶ್ರೀ|| ಜಿ. ಹೆಗ್ಗಡೆಯವರಿಂದ—ಸ್ವಾಗತಿ ಸಮಿತಿ ಅಧ್ಯಕ್ಷರ ಭಾಷಣ: ಶ್ರೀ|| ಎಂ. ಎಸ್. ಸರದಾರ ಅವರಿಂದ—ಅಧ್ಯಕ್ಷ ಭಾಷಣ: ಡಾ|| ಆರ್. ನಾಗನಗೌಡರಿಂದ—ಮಧ್ಯಾಹ್ನ ೧೨-೩೦ರಿಂದ ೨-೩೦: ವಿಷಯ ನಿಯಾಮಕ ಸಮಿತಿ ಅಧಿವೇಶನ—ಸಾಯಂಕಾಲ ೬ ಘಂಟೆಗೆ: ಸಮ್ಮೇಳನ.

೩. ಕರ್ನಾಟಕ ಮಹಿಳಾ ಪರಿಷತ್ತು

೨೩ನೆಯ ಮಂಗಳವಾರ: ಮಧ್ಯಾಹ್ನ ೨ರಿಂದ ೬ರ ವರೆಗೆ. ಪ್ರಾರ್ಥನೆ—ಸ್ವಾಗತ ಸಮಿತಿ ಅಧ್ಯಕ್ಷ ಭಾಷಣ: ಶ್ರೀಮತಿ ವಾರದರವರಿಂದ. ಅಧ್ಯಕ್ಷ ಭಾಷಣ: ಡಾ|| ಕೃಷ್ಣಾಬಾಯಿ ಪಾಟೀಲ್ ಅವರಿಂದ–ಗೊತ್ತುವಳಿಗಳು.

೪೫-೯೦೦—೧೯೪೦
ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ




ಸಂಪುಟ ೨
ಸಂಚಿಕೆ ೨೬

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೯, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.



ಪರಿಷತ್ತಿಗೆ ಪೋಷಕರಾಗಿದ್ದುಕೊಂಡು ವರ್ಷಾಶನ ದಯಪಾಲಿಸಲು ಕೃಪೆಯಿಟ್ಟು ಒಪ್ಪಿರುವ
ಸಂಡೂರು ಸಂಸ್ಥಾನದ ರಾಜಾ ಸಾಹೇಬರವರಾದ

ಶ್ರೀಮಂತ ಯಶವಂತರಾವ ಘೋರ್ಪಡೆಯವರು

**ಕನ್ನಡ ನುಡಿ ಭಕ್ತರು–೨೪.**

# ಕಣ್ಮರೆಯಾದ ಕಂಠೀರವರು ಅಮರರಾದರು!

ಲೇಖಕರು: ಶ್ರೀ॥ ದ. ಕೃ. ಭಾರದ್ವಾಜರು

ಈಗ್ಗೆ ಸುಮಾರು ೯ ವರುಷಗಳ ಹಿಂದಣ ಮಾತು. ೧೯೩೧ನೆಯ ಸಾಲು. ಆ ವರುಷ ಮೈಸೂರಿನಲ್ಲಿ ನೆರೆದ ಎಕನಾಮಿಕ್ ಕಾನ್ ಫರೆನ್ಸಿಗೆ "ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ"ಯ ಅಧ್ಯಕ್ಷರೂ ನನ್ನ ಮಾನ್ಯ ಮಿತ್ರರೂ ಆಗಿದ್ದ ದಿವಂಗತ ಶ್ರೀ॥ ಜಿ. ಕೆ. ದೇವಧರ್ ಅವರು ಅಧ್ಯಕ್ಷಪದಕ್ಕೆ ಆಹ್ವಾನಿತರಾಗಿದ್ದರು. ಆಗ ಅವರು ಬೆಂಗಳೂರಿನ ಮುಖಾಂತರವೇ ಹೋಗಬೇಕಾಗಿತ್ತಾದ್ದರಿಂದ, ನಮ್ಮ ಮನೆ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗಲು ಬಂದಿದ್ದರು. ಟೀ–ಉಪಾಹಾರಗಳಾದ ಬಳಿಕ, ಅವರು ನೋಡಬೇಕಾಗಿದ್ದ ಕೆಲವೆಡೆಗಳಿಗೆ ನನ್ನನ್ನೂ ಕರೆದುಕೊಂಡು ಹೋಗಿದ್ದರು. ಕೊನೆಗೆ ಅವರು ಬಸವನಗುಡಿಯನ್ನು ಬಿಡುವಾಗ ನಾನು ಇನ್ನು ಮನೆಗೆ ಹೋಗುವೆನು ಎಂದೆ. ಆಗ ಅವರು 'Come on, you will have your grub with me now' ಎಂದು ಅವರ ಕಾರಿನೊಳಕ್ಕೆ ಎಳೆದು ಕುಳ್ಳಿರಿಸಿಕೊಂಡರು. ಆಗ ಊಟದ ಹೊತ್ತಾದ್ದರಿಂದ, ಕಾರು ದಂಡಿನಲ್ಲಿ ಅವರಿಳಿದಿರುವ ಸ್ಥಳಕ್ಕೆ ಹೋಗುವುದೋ ಎನ್ನುತ್ತಿರುವಾಗ, ಅದು ನೆಟ್ಟಗೆ ಅರಮನೆಯ ಕಡೆಗೆ ಹೊರಟು, ಶ್ರೀಮದ್ಯುವರಾಜರವರ ಬಂಗಲೆಯ ಮುಂದುಗಡೆಯೆ ನಿಂತುಬಿಟ್ಟಿತು. ಅಲ್ಲಿ ಬೈಠಕಖಾನೆಯಲ್ಲಿ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರವರು ದರ್ಬಾರು ಪೋಷಾಕಿನಲ್ಲಿದ್ದ ಬೆಂಗಳೂರಿನ ಪ್ರಮುಖ ಸಮಾಜಸೇವಕರಲ್ಲೊಬ್ಬರಾದ ಶ್ರೀ॥ ಗೋಪಾಲಸ್ವಾಮಿ ಅಯ್ಯರ್ (ಚಾಮರಾಜಪೇಟೆ) ಅವರೊಂದಿಗೆ ಸಂಭಾಷಿಸುತ್ತಿದ್ದರು. ಶ್ರೀ॥ ದೇವಧರರು ಕಾರಿನಿಂದ ಇಳಿದ ಕೂಡಲೆ, ಯುವರಾಜರು ಬಂದು ಹಸ್ತಲಾಘವವನ್ನಿತ್ತು, ಅವರನ್ನು ಕರೆದುಕೊಂಡು ಒಳಗೆ ಹೋಗಿ ಇಬ್ಬರೂ ಒಂದೇ ಸೋಫಾದ ಮೇಲೆ ಕುಳಿತುಕೊಂಡರು. ಬಳಿಕ ಶ್ರೀ॥ ಅಯ್ಯರ್ ಅವರಿಗೆ ಅಪ್ಪಣೆ ಕೊಟ್ಟು ಕಳುಹಿಸಿ, ಅವರಿಬ್ಬರೂ ಸುಮಾರು ಅರ್ಧ ಗಂಟೆ ಕಾಲ ಮಾತನಾಡುತ್ತಿದ್ದರು.

ಆ ಸಮಯದಲ್ಲಿ ನಾನು ಹಾಕಿಕೊಂಡಿದ್ದ ಉಡುಪು ಬಹು ವಿಚಿತ್ರವಾಗಿತ್ತು. ನಾನು ದೇವಧರ್ ಅವರಿಗೆ ನ್ಯಾಷನಲ್ ಹೈಸ್ಕೂಲನ್ನು ತೋರಿಸಿದ ಬಳಿಕ ಮನೆಗೆ ಹಿಂತಿರುಗುವ ಉದ್ದೇಶದಿಂದ ಹೊರಟವನು. ನಾನು ಕೇವಲ ಖದ್ದರ್‌ವಾಲಾ ಆದ್ದರಿಂದ, ಒಂದು ಪಾಯಿಜಾಮ, ಒಂದು ಕುಡತ, ಹೆಗಲ ಮೇಲೆ ಒಂದು ಖಾದಿ ಟವಲು, ತಲೆಯ ಮೇಲೆ ಬಿಳಿ ಖಾದಿ ಟೋಪಿ ಇಷ್ಟನ್ನು ಧರಿಸಿದ್ದೆ. ಕಾಲಿಗೆ ಚಪ್ಪಲಿ ಹಾಕಿಕೊಂಡಿದ್ದೆ. ಈ ವೇಷದಲ್ಲಿ ರಾಜದರ್ಶನಕ್ಕೆ ಮನಸ್ಸು ಒಪ್ಪಲಿಲ್ಲ. ಮಹಾತ್ಮಾ ಗಾಂಧಿಯವರು ಮೊಣಕಾಲುವರೆಗಿನ ಸಣ್ಣ ವಸ್ತ್ರವನ್ನುಟ್ಟು ಚಕ್ರವರ್ತಿಗಳನ್ನು ಸಂದರ್ಶಿಸಿದರು! ಆದರೆ ನಾನು ಮಹಾತ್ಮನಲ್ಲ. ಸಂಪ್ರದಾಯಕ್ಕೆ ಬಲಿಬಿದ್ದವನ ಮನಸ್ಸು ಬೇಗ ಬದಲಾಯಿಸುವುದು ಕಷ್ಟ. ಆದ್ದರಿಂದ ನಾನು ಕಾರಿನಲ್ಲಿಯೆ ಒಂದು ಮೂಲೆಯಲ್ಲಿ ಅಡಗಿಕೊಂಡಿರಲು ಪ್ರಯತ್ನಿಸಿದೆ. ಕೊನೆಗೆ ಶ್ರೀಮದ್ಯುವರಾಜರೂ ಶ್ರೀ॥ ದೇವಧರರೂ ಎದ್ದು ಬಾಗಿಲ ಬಳಿಗೆ ಬಂದಾಗ, 'Oh, I forgot to introduce my workers to your Highness' ಎಂದು ಪುಣೆಯಿಂದ ಅವರೊಂದಿಗೆ ಬಂದಿದ್ದ ಇಬ್ಬರನ್ನು ಕರೆದು ಅವರ ಪರಿಚಯವನ್ನು ಮಾಡಿಸಿದರು. ಅನಂತರ 'ಮಿ॥ ಭಾರದ್ವಾಜ್' ಎಂದು ಕರೆದರು. ನಾನು ಕಾರಿನಿಂದಿಳಿದು ಹೋದ ಬಳಿಕ 'ಇವರ ಪರಿಚಯ ತಮಗೆ ಇರಬಹುದು. ಬ್ರಿಟಿಷ್ ಇಂಡಿಯದ ರಾಜಕೀಯ ಕ್ಷೇತ್ರವನ್ನು ಬಿಟ್ಟ ಬಳಿಕ ಇಲ್ಲಿಯೆ ಸಾಹಿತ್ಯ ಸೇವೆ, ವೈದ್ಯಕೀಯ ಸೇವೆ ಸಲ್ಲಿಸುತ್ತಿರುವವರಿವರು. ಕನ್ನಡ ಮತ್ತು ಇಂಗ್ಲೀಷಿನಲ್ಲಿ ಪುಸ್ತಕಗಳನ್ನೂ ಬರೆಯುತ್ತಿರುವರು' ಎಂದು ಪರಿಚಯಮಾಡಿಸಿದರು. ಯುವರಾಜರು ಎಲ್ಲರಿಗೂ ಹಸ್ತಲಾಘವವನ್ನಿತ್ತು ಮತ್ತೆ ಒಳಗೆ ಕರೆದುಕೊಂಡು ಹೋದರು. ಮತ್ತೆ ಹತ್ತು ನಿಮಿಷ ಮಾತುಕತೆಗಳು ನಡೆದ ಬಳಿಕ, 'ದಿವಾನರು ನನಗಾಗಿ ಕಾಯುತ್ತಿರುವಂತೆ ಮಾಡುವುದು ನನಗೆ ಇಚ್ಛೆಯಿಲ್ಲ. ನಾನು ಮತ್ತೆ ತಮ್ಮನ್ನು ಮೈಸೂರಿನಲ್ಲಿ ಕಾಣುತ್ತೇನೆ' ಎಂದು ಶ್ರೀ॥ ದೇವಧರರೆದ್ದರು. ನಾವೆಲ್ಲರೂ ಎದ್ದೆವು. ಯುವರಾಜರವರು ಮತ್ತೆ ಎಲ್ಲರಿಗೂ ಹಸ್ತಲಾಘವವನ್ನೀಯುವಾಗ, ನನ್ನ ಕೈಯನ್ನು ಹಿಡಿದು 'So glad to have met you' ಎಂದರು. ಅದುವರೆಗೆ ಮೂಕನಂತಿದ್ದ ನಾನು 'ನನಗೂ ಅಷ್ಟೇ ಆನಂದವಾಗಿದೆ. ಪ್ರಭುಗಳು ಸ್ವೀಕರಿಸುವುದಾದರೆ ನನ್ನ ಕೆಲವು ಗ್ರಂಥಗಳನ್ನು ಅರ್ಪಿಸಬೇಕೆಂದಿದ್ದೇನೆ' ಎಂದು ಹೇಳಿದೆ. ಅವರು 'Most willingly' ಎಂದರು. ಆಗಿನ ನನ್ನ ಸ್ಥಿತಿಯನ್ನು ವರ್ಣಿಸುವುದು ಅಸಾಧ್ಯ. ಅಲ್ಲಿಂದ ಹೊರಟು ಶ್ರೀ॥ ದೇವಧರರ ಪಙ್ತಿಲಾಭವನ್ನು ಪಡೆದೆ. ನಮ್ಮ ಕನ್ನಡ ನಾಡಿನ ಕತೆಗಾರರಾಗಿ ಎಲ್ಲರಿಗೂ ಪರಿಚಿತರಾಗಿರುವ, ಆಗ ಖಾದಿ ವಸ್ತ್ರಾಲಯದ ಮ್ಯಾನೇಜರಾಗಿದ್ದ ಶ್ರೀ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರೂ ದೇವಧರರನ್ನು ಯಾವುದೊ ಕಾರ್ಯಕ್ಕೆ ಆಹ್ವಾನಿಸಲು ಬಂದಿದ್ದರು. ಭೋಜನವಾದ ಬಳಿಕ ನಾವಿಬ್ಬರೂ ಶ್ರೀ॥ ದೇವಧರರ ಅಪ್ಪಣೆಯನ್ನು ಪಡೆದು ಹಿಂತಿರುಗಿದೆವು.

ಈ ರಾಜಭೇಟಿಯ ವಿಚಾರವನ್ನು ನಾನು ಆಗ ವಿದ್ಯಾಶಾಖಾಧಿಕಾರಿಗಳಾಗಿದ್ದ ಸನ್ಮಾನ್ಯ ಶ್ರೀ॥ ಎನ್. ಎಸ್. ಸುಬ್ಬರಾಯರಿಗೆ ನಿವೇದಿಸಿದಾಗ, ಅವರು ಸಂತೋಷಪಟ್ಟು, 'ನಿನ್ನ ಪುಸ್ತಕಗಳನ್ನು ಪ್ರತ್ಯಕ್ಷವಾಗಿಯೆ ಹೋಗಿ ಕೊಡುವುದು ಒಳ್ಳೆಯದು' ಎಂದರು. ಅದರಂತೆಯೆ ನಾನು ಭೇಟಿಗಾಗಿ ಅವಕಾಶ ಕೇಳಲು 'ಜುಲೈ ೩ನೆಯ ಗುರುವಾರ ಬೆಳಿಗ್ಗೆ ೧೦ ಗಂಟೆಗೆ ಸರಿಯಾಗಿ ಬಂದು ಶ್ರೀಮದ್ಯುವರಾಜರ ಭೇಟಿಯಾಗಲು ಅವಕಾಶವೀಯಲಾಗಿದೆ' ಎಂದು ಉತ್ತರ ಬಂದಿತು. ಆ ದಿನ ನಾನು ಪಾಯಿಜಾಮವನ್ನು ಬಿಟ್ಟು, ಪಂಚಕಚ್ಚೆ ಹಾಕಿ ಧೋತರವನ್ನುಟ್ಟು, ಶುಭ್ರವಾದ ಖಾದಿ ಕುಡತ, ಟೋಪಿ, ಶಾಲನ್ನು ಧರಿಸಿ, ನನ್ನ ಪುಸ್ತಕಗಳನ್ನು ಒಂದು 'ನೆಟ್‌ಬ್ಯಾಗ್'ನಲ್ಲಿ ಹಾಕಿಕೊಂಡು, ಬೈಸ್ಕಲ್ಲಿನ ಮೇಲೆ ಕುಳಿತು ಅರಮನೆಯ ಕಡೆಗೆ ತೆರಳಿದೆ. ಪಹರೆಯವರು 'ಎಲ್ಲಿಗೆ?' ಎಂದು ಕೇಳಿದಾಗ ಅರಮನೆಯ ಪತ್ರವನ್ನು ತೋರಿಸಿದೆ. ಆಗ ಅವರು ನನಗೆ ದಾರಿಯನ್ನು ತೋರಿದರು. ನಾನು ಮುಂದೆ ಹೋಗುವುದರೊಳಗಾಗಿ ಅವರ ಖಾಸಗಿ ಕಾರ್ಯದರ್ಶಿಗಳು (ಅವರು ಮ॥ ರಾ॥ ತಮ್ಮಯ್ಯನವರೆಂದು ಅನಂತರ ತಿಳಿಯಿತು) ಬಂದು, 'ನೀವೇನೋ ಭಾರದ್ವಾಜರೆಂಬವರು? ಪ್ರಭುಗಳು ೯॥ ಗಂಟೆಯಿಂದ ನಿಮ್ಮ ದಾರಿಯನ್ನು ನೋಡುತ್ತಿದ್ದಾರೆ' ಎಂದು ಇಂಗ್ಲಿಷಿನಲ್ಲಿ ಹೇಳಿದರು. ನನ್ನ ಗಡಿಯಾರದಲ್ಲಿ ೧೦ ಗಂಟೆಗೆ ಇನ್ನೂ ೨ ನಿಮಿಷ ಇದ್ದುದರಿಂದ, ನನಗೆ ಗೊತ್ತುಮಾಡಿದ ಸಮಯ ೧೦ ಗಂಟೆಯೆಂದು ನಾನು ಕಾಗದವನ್ನು ತೋರಿಸಿದೆ. ಅವರು ನನ್ನನ್ನು ಕರೆದುಕೊಂಡು ಹೋಗಿ ಬೈಠಕಖಾನೆಯಲ್ಲಿ ಕುಳ್ಳಿರಿಸಿ, 'ನೀವು ಬಂದ ಸಂಗತಿ ತಿಳಿಸುತ್ತೇನೆ' ಎಂದು ಹೋದರು. ಅಲ್ಲಿಂದ ಹಿಂತಿರುಗಿ ಬಂದು, 'His Highness wants you in his study room' ಎಂದು ಹೇಳಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಿ, ಕೋಣೆಯ ಬಾಗಿಲನ್ನು ತೆರೆದು, 'Mr. Bharadwaj has come' ಎಂದರು. ಕೂಡಲೆ 'Yes' ಎಂಬ ಧ್ವನಿ ಕೇಳಿತು. ನಾನು ಕೋಣೆಯನ್ನು ಪ್ರವೇಶಿಸಿ ತಲೆಬಾಗಿ ವಂದಿಸಿದೆ. ಶ್ರೀಮದ್ಯುವರಾಜರು ಎದ್ದು ನಿಂತು ಕೈಚಾಚಿ, ಹಸ್ತಲಾಘವವನ್ನಿತ್ತು, ಕುರ್ಚಿಯ ಮುಂದಿನ ಮೇಜಿನ ಬಲಭಾಗದಲ್ಲಿದ್ದ ಸೋಫಾವನ್ನು ತೋರಿಸಿ, 'Please take your seat' ಎಂದರು. ಕಾರ್ಯದರ್ಶಿಗಳು ಬಾಗಿಲನ್ನು ಹಾಕಿಕೊಂಡು ಹೊರಟುಹೋದರು. ಬಳಿಕ ಯುವರಾಜರು—'I am very glad to see you again' ಎಂದರು. ನನ್ನ ಮನಸ್ಸು ಅಲ್ಲೋಲಕಲ್ಲೋಲವಾಗಿದ್ದುದನ್ನು ಸ್ವಲ್ಪ ಸುಧಾರಿಸಬೇಕೆಂದು, ನಾನು ನನ್ನ ಪುಸ್ತಕಗಳನ್ನೆಲ್ಲ ಹೊರದೆಗೆದು, ಯುವರಾಜರ ಮೇಜಿನ ಮೇಲಿಟ್ಟು, 'These are the books written

by me and published so far' ಎಂದೆ. ಅವರು ಪುಸ್ತಕಗಳನ್ನು ಒಂದೊಂದಾಗಿ ತೆಗೆದು ಹಾಳೆಗಳನ್ನು ತಿರುವಿಹಾಕು ತ್ತಿರುವಾಗ ನಾನು ಆ 'ಸ್ಟಡಿರೂಮ'ನ್ನು ನೋಡಿದೆ. ಒಂದು ಕಡೆ ಒಂದು ಮೇಜಿನ ಮೇಲೆ ಅನೇಕ ಬಗೆಬಗೆಯ ಚೌಕಟ್ಟುಗಳುಳ್ಳ ಭಾವ ಚಿತ್ರಗಳು. ಅವರ ಮೇಜಿನ ಮೇಲೆ ಕೆಲವು ಪುಸ್ತಕಗಳು. ಆ ಮೇಜಿನ ಮುಂದೆ, ಉನ್ನತ ದೇಹರಾಗಿ, ನೆಟ್ಟಗೆ ಕುಳಿತಿದ್ದ ಶ್ರೀಮದ್ಯುವರಾಜರು. ಅವರ ಶರೀರದ ನಿಲುವನ್ನು ಹೆಚ್ಚು ಉನ್ನತ ಗೊಳಿಸುವಂತೆ ಧರಿಸಿದ ಪಂಜಾಬಿ ಕಟ್ಟಿನ, ಮೈಲು ಖೋರ ರಂಗಿನ ಪೇಟಾ, ಸಾದಾ ಅಂಗಿ, ಷರಾಯಿ, ಅವೆಲ್ಲ ಒಬ್ಬ ದೊಡ್ಡ ಅಧಿಕಾರಿಯ ಥಾಟಿನಂತಹವಿದ್ದುವು. ಆಗ ನಾನು ಶ್ರೀಮದ್ಯುವರಾಜರಿಗೆ ೧೭ ಪುಸ್ತಕಗಳನ್ನು ಸಮರ್ಪಿಸಿದೆ.*

ಇವುಗಳಲ್ಲದೆ ಆಗ ನನ್ನಿಂದ ಭಾಷಾಂತರವಾಗಿ ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಗುತ್ತಿದ್ದ Tout's History of Great Britain ಪುಸ್ತಕದ ಪ್ರೂಫುಗಳನ್ನೂ, ನನ್ನ ಸಂಪಾದಕತ್ವದಲ್ಲಿದ್ದ ರಂಗಭೂಮಿ ಯಲ್ಲಿ ಪ್ರಕಟವಾಗುತ್ತಿದ್ದ ಭರತಮುನಿಯ 'ನಾಟ್ಯ ಶಾಸ್ತ್ರ'ದ ಪ್ರೂಫ್ ಗಳನ್ನೂ ಅವರಿಗೆ ತೋರಿಸಿದೆ. ಮತ್ತೆ ನಾನು ಹೊರಡಿಸಬೇಕೆಂದಿದ್ದ 'ವಾಣಿ' ಎಂಬ ಮತ್ತೊಂದು ಬಾಲಕಿಯರ ಮಾಸಿಕದ ಪ್ರೂಫುಗಳನ್ನೂ ತೋರಿಸಿದೆ. ಅಲ್ಲಿಂದ ನಮ್ಮ ಸಂಭಾಷಣೆ ಕೊನೆಯವರೆಗೂ ಇಂಗ್ಲಿಷಿನಲ್ಲಿ ನಡೆಯಿತು. ಅದರಲ್ಲಿ ಪ್ರಪಂಚಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳೂ ಬಂದವು. ದಾಂಪತ್ಯ ವಿಜ್ಞಾನಾದಿಗಳನ್ನು ನೋಡಿ, "ಹೋ, ನೀವು ಹ್ಯಾವ್‌ಲಕ್ ಎಲ್ಲಿಸ್ ಗ್ರಂಥಗಳನ್ನು ನೋಡಿದ್ದೀರಿ' ಎಂದರು. ನೀತಿಧರ್ಮ ಎಂಬ ಗ್ರಂಥದಲ್ಲಿ ಪ್ರಕಾಶಕರು ಮುದ್ರಿಸಿದ ನನ್ನ ಭಾವಚಿತ್ರದ ಕೆಳಗಿನ ವಾಕ್ಯಗಳನ್ನು ಓದಿಕೊಂಡು 'ನೀವು ಮಂಗಳೂರಿನಲ್ಲಿದ್ದಾಗ ರಾಜಕೀಯ ಕೈದಿಗಳಾಗಿ ಜೈಲಿಗೂ ಹೋಗಿ ದ್ದಿರಿ. ಅಲ್ಲಿ ಎಷ್ಟು ಕಾಲವಿದ್ದಿರಿ?' 'ಒಂದು ವರುಷ.' ಅನಂತರ ಹಲವು ರಾಜಕೀಯ ವಿಚಾರಗಳು ಬಂದವು. ಅನಂತರ ನಾಟ್ಯ ಶಾಸ್ತ್ರದ ಪ್ರೂಫ್‌ಗಳನ್ನು ನೋಡಿ 'ರಂಗಭೂಮಿ' ಮಾಸ ಪತ್ರಿಕೆಯ ವಿಚಾರದಲ್ಲಿಯೂ ತಮ್ಮ ಮೆಚ್ಚಿಗೆಯನ್ನು ಸೂಚಿಸಿದರು. ಬೆಂಗಳೂರಿನ ಅಮೆಚೂರ್ ನಾಟಕ ಸಂಘದವರ ಕಟ್ಟಡ ನಿವೇಶನಕ್ಕಾಗಿ ಶ್ರೀಮದ್ಯುವ ರಾಜರು ಉದಾರವಾದ ಸಹಾಯವನ್ನು ನೀಡಿರುವರು.— ಬೇರೆ ಬೇರೆ ಪ್ರಾಂತಿಕ ಭಾಷೆಗಳಲ್ಲಿ ಪ್ರಜೆಗಳ ಪ್ರೋತ್ಸಾಹದಿಂದ ಎಂತೆಂತಹ ಪುಸ್ತಕ ಗಳು ಹೊರಬೀಳುತ್ತಿರುವವೆಂದೂ, ಕನ್ನಡ ನುಡಿ ಅವುಗಳಿಗಿಂತಲೂ ಹೆಚ್ಚು ಪ್ರಕಾಶಿಸುವಂತಾಗಿ ವೈಜ್ಞಾನಿಕ ಸಾಹಿತ್ಯವೂ ಸಾಮಾನ್ಯರಿಗೂ ಲಭಿಸುವಂತಾಗಬೇಕೆಂದು ನನ್ನ ಹಿರಿಯಾಸೆ, ಅದಕ್ಕಾಗಿ ನಾನೂ ನನ್ನ ಕೈಲಾದ ಸೇವೆಯನ್ನು ಸಲ್ಲಿಸಲು ಪ್ರಯತ್ನಿಸುತ್ತಿರುವೆನು' ಎಂದೂ ನಾನು ಹೇಳಿದೆ. ಅನಂತರ ವೈದ್ಯಕೀಯ ಶಾಸ್ತ್ರವಿಚಾರ ಬಂದು ಪಾಶ್ಚಾತ್ಯ ಪೌರ್ವಾತ್ಯ ಶಾಸ್ತ್ರಗಳ ತುಲನೆಯ ವಿಚಾರವೂ ನಡೆಯಿತು. ಮಧ್ಯ ದಲ್ಲಿಯೆ ಶ್ರೀಮದ್ಯುವರಾಜರು—'ನಿಮ್ಮ ವಯಸ್ಸೆಷ್ಟು ಈಗ?' ಎಂದು ಕೇಳಿದರು.

'ನಾಳೆ ಬರುವ ಡಿಸೆಂಬರ ಅಂತ್ಯಕ್ಕೆ ೪೦ ವರುಷ ತುಂಬುವುದು.'

'You seem to be a prolific writer. When do you find time to read and then write so many books'

'ನಾನು ಆಜನ್ಮ ವಿದ್ಯಾರ್ಥಿಯಾಗಿರಲು ಸಂಕಲ್ಪಿಸಿದ್ದೇನೆ. ಮತ್ತೆ ಒಂದು ವಿಷಯ ಬೇಸರವಾದಾಗ ವಿಷಯಾಂತರ ಮಾಡಿಕೊಳ್ಳುವುದೇ ನನಗೆ ವಿಶ್ರಾಂತಿಯೆಂದು ಭಾವಿಸಿ, ಅದರಂತೆ ಆಚರಿಸುತ್ತಿರುವುದರಿಂದ ಈ ಕಾರ್ಯವು ನನಗೆ ಸಾಧ್ಯವಾಗಿದೆಯೆಂದು ತೋರುತ್ತಿದೆ.'

'ಹಾಗಾದರೆ ತುಳಸೀದಾಸರಾಮಾಯಣವನ್ನು ಪೂರ್ತಿ ಏಕೆ ಮಾಡಲಿಲ್ಲ?'

'ನನ್ನ ಭಾಷಾಂತರ ಕಾರ್ಯ ಮುಗಿದಿದೆ. ಆದರೆ ಮೊದಲ ನೆಯ ಬಾಲಕಾಂಡ ಪ್ರಕಟನೆಯಲ್ಲಿ ನನಗೆ ಸಾಲದ ಹೊರೆಯುಂಟಾದು ದರಿಂದ, ಉಳಿದ ಭಾಗಗಳನ್ನು ನಾನಾಗಿ ಪ್ರಕಟಿಸಲು ಹೋಗಿಲ್ಲ.'

'ಹಾಗಾದರೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಹಾಯವನ್ನು ಕೋರಲಿಲ್ಲವೇಕೆ?'

'ಪರಿಷತ್ತಿನ ಆರ್ಥಿಕ ಸ್ಥಿತಿಯನ್ನು ಕಂಡರೆ, ಆ ಸಂಸ್ಥೆಯನ್ನು ನಡಸಿಕೊಂಡು ಹೋಗಲು ಪರಿಷತ್ತಿನ ಅಧಿಕಾರಿಗಳೇ ಸರಕಾರದಿಂದ ದೊರೆವ ಸಹಾಯದ ಜೊತೆಗೆ ತಮ್ಮಂಥವರ ಸಹಾಯವನ್ನೂ ಕೋರು ತ್ತಿರುವರು. ಅದರ ಸದಸ್ಯ ಸಂಖ್ಯೆ ಕಾಂಗ್ರೆಸ್ಸಿನ ಸದಸ್ಯ ಸಂಖ್ಯೆಯಂತೆ ಹೆಚ್ಚಾಗಬೇಕು. ಮತ್ತೆ ನಮ್ಮಲ್ಲಿ ಗುಡಿ, ಚತ್ರಾದಿಗಳನ್ನು ಕಟ್ಟಿಸಲು ಧನಿಕರು ಮುಂದೆ ಬಂದಂತೆ, ಸಾಹಿತ್ಯದಲ್ಲಿ ಬಗೆಬಗೆಯ ಸವಿಯೂಟ ಗಳನ್ನು ಜನರಿಗೆ ಉಣಿಸಲಾಶಿಸಿ, ಉದಾರಹೃದಯರಾದ ಧನಿಕರು ಮುಂದೆ ಬಂದು ಸಹಾಯಮಾಡಿದರೆ, ಪರಿಷತ್ತು ಬೇಕಾದಂಥ ಪಾಕ ಶಾಸ್ತ್ರಿಗಳನ್ನು ಒದಗಿಸಬಹುದು.'

ಈ ಬಗೆಯಾಗಿ ಹಲವು ವಿಚಾರಗಳ ಸಂಬಂಧವಾಗಿ ನಮ್ಮ ಸಂಭಾಷಣೆ ೧೦ ಗಂಟೆಯಿಂದ ೧೧ ಗಂಟೆ ೧೭ ನಿಮಿಷಗಳವರೆಗೆ ನಡೆ ಯಿತು. ಮಧ್ಯದಲ್ಲಿ ಸಿಬ್ಬಂದಿ ಬಾಗಿಲಿನ 'ಕೀಹೋಲಿ'ನಿಂದ ಆಗಾಗ್ಗೆ ನೋಡುತ್ತಿದ್ದುದನ್ನು ಕಂಡು ನಾನು ಪ್ರಭುಗಳ ಹೆಚ್ಚು ಸಮಯವನ್ನು ತೆಗೆದುಕೊಂಡಿರುವೆನೆಂದು, ೧೧ ಗಂಟೆಗೊಂದು ಸಲ ಮೇಲಕ್ಕೆ ಎದ್ದಾಗ ಪ್ರಭುಗಳೆ ನನ್ನನ್ನು ಕುಳ್ಳಿರಿಸಿ ಮತ್ತೆ ಬೇರೆ ವಿಚಾರಗಳನ್ನೆತ್ತಿದರು. ಕೊನೆಗೆ ನಾನು 'ಇನ್ನೂ ಪ್ರಭುದರ್ಶನಕ್ಕಾಗಿ ಹಲವರು ಕಾದಿರಬಹುದು. ನಾನು ಪ್ರಭುಗಳ ಹೆಚ್ಚು ಸಮಯವನ್ನು ತೆಗೆದುಕೊಳ್ಳಲಿಚ್ಛಿಸುವುದಿಲ್ಲ. ನನಗೆ ಇಷ್ಟು ಸಮಯ ಸಿಕ್ಕಿದುದಕ್ಕೆ ನಾನೇ ಧನ್ಯನೆಂದು ಭಾವಿಸು ವೆನು'

'ನೀವು ಆಗಾಗ್ಗೆ ಬಂದು ನಮ್ಮನ್ನು ಕಾಣುತ್ತಿರಬಹುದು.'

'ಪ್ರಭುಸಮಯ ಅತ್ಯಮೌಲ್ಯವಾದುದು. ಆದ್ದರಿಂದ ಪ್ರಭು ಚಿತ್ತಕ್ಕೆ ನನ್ನ ಸೇವೆ ಅಪೇಕ್ಷೆಯಾದಾಗಲೆಲ್ಲ, ನನಗೆ ಅಜ್ಞಾಪಿಸ ಬಹುದು. ಇನ್ನು ಅಪ್ಪಣೆಯಾಗಬೇಕು' ಎಂದು ಹೇಳಿ ಎದ್ದು ನಿಂತೆ. ಮತ್ತೆ ಅವರು ಹಸ್ತಲಾಘವವನ್ನಿತ್ತು ನನ್ನನ್ನು ಬೀಳ್ಕೊ ಟ್ಟರು. ನಾನು ಹೊರಗೆ ಬಂದಕೂಡಲೆ ಒಬ್ಬ ಮಹನೀಯರು 'ಎಷ್ಟಕ್ಕೆ ಸಿಕ್ಕಿತು?' ಎಂದರು. 'ಏನು'? 'ಚೆಕ್ಕು.' 'ನನಗೆ ಸಿಕ್ಕ ಚೆಕ್ಕಿನ ಬೆಲೆ ೭೭ ನಿಮಿಷಗಳ ರಾಜಸಂದರ್ಶನ—ಅದು ಅತ್ಯಮೌಲ್ಯವಾದುದು' ಎಂದು ಹೇಳಿ ಹೊರಟೆ. ಕನ್ನಡ ನುಡಿಯಲ್ಲಿ ಪಾಶ್ಚಾತ್ಯ ವಿಚಾರಗಳನ್ನೆಲ್ಲ ಹೇಳಬಹುದೊ ಎಂಬ ವಿಚಾರವನ್ನು ಚರ್ಚಿಸುವುದಕ್ಕಾಗಿಯೆ ಆ ದಿನ ನನ್ನೊಂದಿಗೆ ಅವರು ಅಷ್ಟು ದೀರ್ಘಕಾಲ ಸಂಭಾಷಿಸಿದರೆಂದು ನನಗೆ ಮನವರಿಕೆಯಾಗಿತ್ತು. ಕನ್ನಡಿಗರ, ಕನ್ನಡ ನುಡಿಯ ಪ್ರಗತಿಗಾಗಿ ಪ್ರಭು ಗಳಲ್ಲಿ ಎಂತಹ ಹಿರಿಯಾಸೆ ಇತ್ತೆಂಬುದು ಅವರಾಡಿದ ಪ್ರತಿಯೊಂದು ಮಾತಿನಲ್ಲಿಯೂ ಹೊರಸೂಸುತ್ತಿತ್ತು. ಅದನ್ನು ವರ್ಣಿಸುವುದು ಈ ಸಂಕ್ಷಿಪ್ತ ಲೇಖನದಲ್ಲಿ ಸಾಧ್ಯವಿಲ್ಲ. ಅದರಂತೆ ಶ್ರೀಮದ್ಯುವರಾಜರು ಪರಿಷತ್ತಿನ ಅಧ್ಯಕ್ಷರಾಗಿದ್ದುಕೊಂಡು, ನಾಡ ನುಡಿಗಾಗಿ ತಮ್ಮಿಂದಾದ ಸಹಾಯವನ್ನೂ ನೀಡಿದ್ದಾರೆ. ಅಂದಿನಿಂದ ಈವರೆಗೆ ಪ್ರಕಟವಾದ ನನ್ನ ಬೇರೆ ಗ್ರಂಥಗಳನ್ನು ಅವರಿಗರ್ಪಿಸಲು ನಾನು ಕಾತರಗೊಂಡು, ಸಮಯ ವನ್ನು ಸಾಧಿಸುತ್ತಿದ್ದೆ. ಆದರೆ ದೈವೇಚ್ಛೆಯೆ ಬೇರೆಯಾಯಿತು. ಮೈಸೂರಿನ ಕಂಠೀರವರು ಕಣ್ಮರೆಯಾಗಿ ಅಮರರಾದರು! ಅವರ ಕುಮಾರರಾದ ಶ್ರೀಮದ್ಯುವರಾಜ ಜಯಚಾಮರಾಜ ಒಡೆಯರು, ಅವರ ಪೂಜ್ಯ ತಂದೆಯವರ ಸ್ಥಾನಕ್ಕೆ ಬಂದು, ಕನ್ನಡ ನಾಡ ನುಡಿಗಳ ಗುಡಿ ಅವರ ಅಧಿಕಾರಾವಕಾಶದಲ್ಲಿ ಇತೋಪ್ಯತಿಶಯವಾಗಿ ಅಭಿವೃದ್ಧಿ ಗೊಳ್ಳುವಂತಾಗಲೆಂದು ಭಗವಂತನಲ್ಲಿ ನನ್ನ ಪ್ರಾರ್ಥನೆ.

---

*(೧) ಶ್ರೀ ತುಲಸೀದಾಸ ರಾಮಾಯಣ (ಸಚಿತ್ರ ಬಾಲಕಾಂಡ), (೨) ರಾಷ್ಟ್ರ ಸಭೆಯ ಇತಿಹಾಸ (Congress History up to Belgaum Congress), (೩) ಕರ್ಣಾಟಕ ಕೈಪಿಡಿ (ಕನ್ನಡ), (೪) Karnataka Hand book (English), (೫) ಹಿಂದೀ ಸ್ವರಾಜ್ಯ, (೬) ನೀತಿಧರ್ಮ ಅಥವಾ ಧರ್ಮನೀತಿ, (೭) ಅನಾಸಕ್ತಿಯೋಗ (ಇವು ಮೂರೂ ಮಹಾತ್ಮಾ ಗಾಂಧಿಯವರ ಗ್ರಂಥಗಳ ಭಾಷಾಂತರ), (೮) ಭೀಷ್ಮ (ನಾಟಕ), (೯) ಸೀತಾ ದೇವಿ (ನಾಟಕ), (೧೦) ದಾಂಪತ್ಯ ವಿಜ್ಞಾನ (Psychology of Sex), (೧೧) ಸಂತಾನ ವಿಜ್ಞಾನ (Eugenics), (೧೨) ಬ್ರಹ್ಮಚರ್ಯೆಯೋ ಕಾಮ ಸಾಧನೆಯೊ? (Translation of Mahatmaji's Self-Restraint Versus Self-Indulgence), (೧೩) ಅಮೃತಸರ ಪಟ್ಟಣ, (೧೪) ಶ್ರೀಕೃಷ್ಣ ಜನ್ಮಾಷ್ಟಮಿ, (೧೫) ಅಸಹಕಾರ ಪತ್ರಗಳು (Translation Rev. C. F. Andrew's letter), (೧೬) ಸಿಂಹಳದ್ವೀಪದಲ್ಲಿ ಗುಲಾಮಗಿರಿ (Slavery in Ceylon), (೧೭) ನಾಟ್ಯರೂಪ ಹಿಂದುಸ್ಥಾನ.

### ಕನ್ನಡ ಕವಿ ಸೂಕ್ತಿ

**ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚ ಬ**
**ಲ್ಲನನಱಿಸಲ್ಕೆವೇೞ್ಪುದವನಂ ಜಗದೊಳ್ ಪಡೆಯಲ್ಕೆ ಬಾರದಾ**
**ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಱುಮೇನೊ ಮಾಲೆಗಾ**
**ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ**

— ಜನ್ನ: ಅನಂತನಾಥ ಪುರಾಣ I–೪೫

[ಒಱಲ್ದು—ಆಕ್ಕರೆಯಿಂದ; ಱಿವಸ—ಱಿಸುಮಾಡುತ್ತಾನೆ.]




ಶುಕ್ರವಾರ, ಏಪ್ರಿಲ್ ೧೯, ೧೯೪೦

## ಪರಿಷತ್ತಿಗೆ ಸಂಡೂರಿನ ಶ್ರೀಮಂತ ರಾಜಾಸಾಹೇಬರ ಉದಾರಾಶ್ರಯ

ಪರಿಷತ್ತು ಮೈಸೂರಿನ ಶ್ರೀಮನ್ಮಹಾರಾಜರವರ ಉದಾರಾಶ್ರಯದಲ್ಲಿ ಕನ್ನಡ ನಾಡನುಡಿಯ ಸೇವೆ ಮಾಡುತ್ತಿರುವುದು ಎಲ್ಲರಿಗೂ ತಿಳಿದೇ ಇದೆ. ಮೈಸೂರಿನ ಶ್ರೀಮನ್ಮಹಾರಾಜರವರಂತೆಯೇ ಉತ್ತರ ಕರ್ನಾಟಕ ಸಂಸ್ಥಾನಗಳ ರಾಜರೂ ಸಹ ಪರಿಷತ್ತಿಗೆ ತಮ್ಮ ಪ್ರೋತ್ಸಾಹ ಸಹಾಯಗಳನ್ನು ಕೊಡಬೇಕೆಂದು ಪರಿಷತ್ತೂ ಪರಿಷತ್ತಿನ ಸಮ್ಮೇಳನಗಳೂ ಆಗಿಂದಾಗ್ಗೆ ಬೇಡಿಕೊಳ್ಳುತ್ತಲೇ ಇವೆ. ಆದರೆ ಇದುವರೆಗೂ ಉತ್ತರ ಕರ್ನಾಟಕ ಸಂಸ್ಥಾನಗಳ ರಾಜರುಗಳಿಂದ ಯಾವ ಸಹಾಯದ ಭರವಸೆಯೂ ದೊರೆತಿರಲಿಲ್ಲ.

ಉತ್ತರ ಕರ್ನಾಟಕ ಸಂಸ್ಥಾನಗಳ ರಾಜರಲ್ಲಿ ಸಂಡೂರಿನ ಶ್ರೀಮಂತ ರಾಜಾ ಸಾಹೇಬರು ಎಂದಿನಿಂದಲೂ ತಮ್ಮ ಕನ್ನಡ ಪ್ರಜೆಗಳ ವಿಷಯದಲ್ಲಿ ವಿಶ್ವಾಸ ತೋರುತ್ತಿದ್ದಾರೆ; ತಮ್ಮ ಸಂಸ್ಥಾನದಲ್ಲಿ ಕನ್ನಡದ ಮುನ್ನಡೆಗೆ ಪ್ರೋತ್ಸಾಹ ಕೊಡುತ್ತಿದ್ದಾರೆ; ಈಚೆಗೆ, ಸಂಸ್ಥಾನದಲ್ಲಿ ಅನಕ್ಷರತೆಯನ್ನು ತೊಲಗಿಸಬೇಕೆಂಬ ಘನೋದ್ದೇಶವನ್ನು ಕೈಕೊಂಡಿದ್ದಾರೆ; ಹೀಗೆ, ಕನ್ನಡ ಭಾಷೆ ಸಾಹಿತ್ಯಗಳ ವಿಷಯದಲ್ಲಿ ಅವರ ಪ್ರೇಮ ದಿನದಿನಕ್ಕೆ ಬೆಳೆಯುತ್ತಿದೆ. ಈ ಹಿಂದೆ, ಶ್ರೀಮಂತ ರಾಜಾ ಸಾಹೇಬರು ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಪ್ರಾರಂಭಗೊಳಿಸಿದ ಸಂಗತಿಯನ್ನು ಕನ್ನಡಿಗರಾರೂ ಮರೆತಿರಲಾರರು. ಅಂದು ಅವರು ಮಾಡಿದ ಭಾಷಣದಲ್ಲಿ ಅವರ ಕನ್ನಡದ ಅಭಿಮಾನ ಚೆನ್ನಾಗಿ ವ್ಯಕ್ತಗೊಂಡಿದೆ; ಆಗ ಅವರು ಸಾಹಿತ್ಯ ಸಮ್ಮೇಳನಕ್ಕೆ ೫೦೦ ರೂಪಾಯಿಯ ಸಹಾಯ ದ್ರವ್ಯವನ್ನು ದಯಪಾಲಿಸಿ ತಮ್ಮ ಕನ್ನಡದ ಅಭಿಮಾನವನ್ನು ಪ್ರದರ್ಶಿಸಿದರು.

ಕನ್ನಡ ನಾಡ ಪ್ರವಾಸ ಮಾಡುತ್ತಿರುವ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಮೊನ್ನೆ ಬೊಂಬಾಯಿಗೆ ಹೋಗಿದ್ದಾಗ (ತಾ॥ ೬–೪–೪೦ರಲ್ಲಿ) ಅಲ್ಲಿಗೆ ದಯಮಾಡಿಸಿದ್ದ ಸಂಡೂರಿನ ಶ್ರೀಮಂತ ರಾಜಾ ಸಾಹೇಬರ ದರ್ಶನ ತೆಗೆದುಕೊಂಡರು. ಆಗ್ಗೆ ಶ್ರೀಮಂತ ರಾಜಾ ಸಾಹೇಬರು, ಪರಿಷತ್ತಿನ ಪೋಷಕರಾಗಿರುವುದಕ್ಕೂ ಈಗ ೫೦೦ ರೂಪಾಯಿ ಕೊಡುವುದಾಗಿಯೂ ಇನ್ನು ಮುಂದಕ್ಕೆ ಪರಿಷತ್ತಿನ ಉದ್ದೇಶಗಳ ಸಾಧನೆಗಾಗಿ ಒಂದು ವರ್ಷಾಶನವನ್ನು ಕೊಡುವುದಾಗಿಯೂ ಕೃಪೆಯಿಟ್ಟು ಒಪ್ಪಿದರೆಂದು ತಿಳಿಸಲು ಅತ್ಯಂತ ಹರ್ಷಿಸುತ್ತೇವೆ. ಶ್ರೀಮಂತ ರಾಜಾ ಸಾಹೇಬರ ಕೃಪಾಪೂರ್ವಕವಾದ ಈ ಆಶ್ವಾಸನಕ್ಕಾಗಿ ಅವರನ್ನು ಹೃತ್ಪೂರ್ವಕವಾಗಿ ಅಭಿವಂದಿಸುತ್ತೇವೆ.

ಸಂಡೂರಿನ ಶ್ರೀಮಂತ ರಾಜಾ ಸಾಹೇಬರ ಉದಾರಾಶ್ರಯಕ್ಕಾಗಿ ಪರಿಷತ್ತಿನ ಕೃತಜ್ಞತೆಯನ್ನು ಅವರಿಗೆ ಅರ್ಪಿಸುವುದಲ್ಲದೆ, ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಇನ್ನುಳಿದ ಉತ್ತರ ಕರ್ನಾಟಕ ಸಂಸ್ಥಾನಗಳ ರಾಜರುಗಳೂ ಅಖಿಲ ಕರ್ನಾಟಕ ಸಂಸ್ಥೆಯಾದ ಪರಿಷತ್ತಿಗೆ ಸಹಾಯ ಪ್ರೋತ್ಸಾಹಗಳನ್ನು ಕೊಡುವರೆಂದು ನಿರೀಕ್ಷಿಸುತ್ತೇವೆ.

---

## ಕನ್ನಡ ನಾಟಕಗಳು

### ಬೆಳಗಾಂವಿ ಸಾಹಿತ್ಯ ಸಮ್ಮೇಳನದ ನಾಟ್ಯಗೋಷ್ಠಿಯ ಸ್ವಾಗತಾಧ್ಯಕ್ಷರಾದ ಪ್ರೊ॥ ವಿ. ಜಿ. ಕುಲಕರ್ಣಿಯವರ ಭಾಷಣ

(೧)

ಕನ್ನಡದಲ್ಲಿ ಕಾವ್ಯ ಮೊದಲಾದ ಬೇರೆ ಸಾಹಿತ್ಯ ವಿಭಾಗಗಳಿಗೆ ಇರುವಂತೆ ನಾಟಕಕ್ಕೂ ಒಂದು ಪ್ರಾಚೀನ ಪರಂಪರೆ ಇಲ್ಲದಿರುವುದು ಶೋಚನೀಯವಾಗಿದೆ. ಹಳಗನ್ನಡದಲ್ಲಿ ನಮಗೆ ದೊರೆತಿರುವುದು ಒಂದೇ ಒಂದು ನಾಟಕವೆಂದರೆ—ಸಿಂಗರಾರ್ಯನ ಮಿತ್ರವಿಂದಾ ಗೋವಿಂದ. ಇದೂ ಒಂದು ಸಂಸ್ಕೃತ ನಾಟಕದ ಅಷ್ಟೇನು ಸಮಂಜಸವಲ್ಲದ ಭಾಷಾಂತರ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕಗಳು ಇದ್ದಿರಬಹುದೆಂಬ ಊಹೆಗೆ ಅವಕಾಶ ಉಂಟು. ಯಕ್ಷಗಾನ, ಬಯಲಾಟ ಮೊದಲಾದ ಜಾನಪದ ನಾಟಕಗಳಂತೂ ನಿಶ್ಚಯವಾಗಿ ಇದ್ದೇ ಇದ್ದುವು. ಆದರೆ ಅವುಗಳಿಗೆ ಸಾಹಿತ್ಯದಲ್ಲಿ ಸ್ಥಾನ ಸಿಕ್ಕಿಲ್ಲ. ಆದುದರಿಂದ ಈಗ ಉಪಲಬ್ಧವಾದ ಸಾಹಿತ್ಯದ ಮೇಲಿಂದ, ನಮ್ಮಲ್ಲಿ ನಾಟಕಗಳು ಆಧುನಿಕ ಯುಗದಲ್ಲಿಯೇ ಪ್ರಾರಂಭವಾದುವೆಂದು ಹೇಳಬೇಕಾಗುತ್ತದೆ.

ಆಧುನಿಕ ಯುಗದ ಪ್ರಾರಂಭದಲ್ಲಿ ಮೈಸೂರಿನ ಕೀರ್ತಿಶೇಷರಾದ **ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು** ‘ಶಾಕುಂತಲ’ ನಾಟಕವನ್ನು ಕನ್ನಡಕ್ಕೆ ಪರಿವರ್ತಿಸಿದರು; ಇತ್ತ ಕಡೆಗೆ **ವೈ. ನಾ. ಚುರಮುರಿ ಶೇಷಗಿರಿರಾಯರು** ಅದೇ ನಾಟಕವನ್ನು ಭಾಷಾಂತರಿಸಿದರು. ಇವುಗಳ ಪ್ರಯೋಗಗಳೂ ಅಲ್ಲಲ್ಲಿ ಆದುವು. ಆಮೇಲೆ ಕೆಲವು ಕಾಲದವರೆಗೆ ಹಲವು ನಾಟಕ ಮಂಡಳಿಗಳು ಅನೇಕ ನಾಟಕಗಳನ್ನು ಪ್ರದರ್ಶಿಸುತ್ತ ಕನ್ನಡ ನಾಡಿನಲ್ಲಿ ಸುತ್ತಾಡುತ್ತಿದ್ದುವು. ಆದರೆ ಅವರು ಆಡುವ ನಾಟಕಗಳಲ್ಲಿ ಕಲಾದೃಷ್ಟಿಯಿಂದ ಉತ್ತಮವಾದ ಸ್ವತಂತ್ರ ನಾಟಕಗಳು ಯಾವುವೂ ಇರಲಿಲ್ಲ. ಆದರೆ ನಾಟ್ಯಕಲೆಯಲ್ಲಿ ನಮ್ಮ ಜನತೆಯ ಅಭಿರುಚಿಯನ್ನು, ಯಾವ ರೀತಿಯಿಂದಲೇ ಆಗಲಿ, ಉಳಿಸಿಕೊಂಡು ಬಂದ ಮಾನ ಈ ಕಂಪೆನಿಯವರಿಗೆ ಸಲ್ಲಲೇ ಬೇಕು; ಇದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು.

ಕನ್ನಡದಲ್ಲಿ ಕಲಾದೃಷ್ಟಿಯಿಂದ ಅತ್ಯುತ್ತಮವೂ, ಸ್ವತಂತ್ರವೂ ನವೀನವೂ ಆದ ನಾಟಕವನ್ನು ಮೊದಲು ರಚಿಸಿದವರೆಂದರೆ **ಶ್ರೀ॥ ಕೈಲಾಸಂ**ರವರು. ೧೯೧೯ನೆಯ ಇಸವಿಯಲ್ಲಿ ಆದ ಅವರ ‘ಟೊಳ್ಳು-ಗಟ್ಟಿ’ ಎಂಬ ನಾಟಕದ ಪ್ರಯೋಗದಿಂದ ಕನ್ನಡ ನಾಟ್ಯ ಸಾಹಿತ್ಯ ಚರಿತ್ರೆಯಲ್ಲಿ ಒಂದು ಹೊಸ ಯುಗವೇ ಪ್ರಾರಂಭ ಆಯಿತೆಂದು ಹೇಳಬಹುದು. ಅವರ ನಾಟಕಗಳಲ್ಲಿ ಕಾಣಬರುವ ವಾಸ್ತವತೆ, ಸಾಮಾನ್ಯ ಜನರ ಜೀವನ ಚಿತ್ರಗಳು, ಸಾಮಾನ್ಯ ಜನರಾಡುವ ಭಾಷೆ, ಮೇಲಾದ ಕತೆಗಾರಿಕೆ ಇವೆಲ್ಲವೂ ಕನ್ನಡ ನಾಟಕಗಳಿಗೆ ಒಂದು ಹೊಸ ಹಾದಿಯನ್ನೇ ತೋರಿಸಿಕೊಟ್ಟುವು. ಈ ಮಾದರಿಯ ಮೇಲೆ ನಮ್ಮಲ್ಲಿ ಅನೇಕ ಸಾಮಾಜಿಕ ನಾಟಕಗಳು ರಚಿತವಾಗಿವೆ. ಇಂತಹ ನಾಟಕಗಳಲ್ಲಿ ಕೆಲವಾದರೂ ಅತ್ಯುತ್ತಮ ಪಾಶ್ಚಾತ್ಯ ಸಾಮಾಜಿಕ ನಾಟಕಗಳ ರೇಖೆಗೆ ಬರುವವೆಂದು ನಾವು

ಧೈರ್ಯದಿಂದ ಹೇಳಬಹುದು. ಸಾಮಾಜಿಕ ನಾಟಕಗಳಲ್ಲದೆ ಇನ್ನು ಬೇರೆ ಪ್ರಕಾರದ ನಾಟಕಗಳೂ ನಮ್ಮಲ್ಲಿ ಉದಯಿಸಿವೆ. ನಮ್ಮ ನಾಟಕಕಾರರು ನಾಟಕ ರಚನೆಯಲ್ಲಿ ಹೊಸಹೊಸ ಪ್ರಯೋಗಗಳನ್ನು ಮಾಡಹತ್ತಿದ್ದಾರೆ. ಸರಳರಗಳೆಯಲ್ಲಿ ಬರೆದ ಕಾವ್ಯಮಯವಾದ ನಾಟಕಗಳೂ, ಗ್ರೀಕ ರುದ್ರನಾಟಕಗಳ ಭಾಷಾಂತರಗಳೂ ಎಷ್ಟೋ ಇವೆ. ಇದಲ್ಲದೆ, ಛಾಯಾ ನಾಟಕಗಳೂ ಕೇವಲ ಹಾಡಿನಲ್ಲಿಯೇ ಬರೆದ ನಾಟಕಗಳೂ ಇತ್ತೀಚಿಗೆ ರಚಿತವಾಗಿವೆ. ನಮ್ಮ ನಾಟಕಕಾರರು ಪೌರಾಣಿಕ ಮತ್ತು ಐತಿಹಾಸಿಕ ವಿಷಯಗಳನ್ನು ಕುರಿತೂ ಬರೆದಿದ್ದಾರೆ. ಏಕಾಂಕ ನಾಟಕಗಳೂ ಪ್ರಹಸನಗಳೂ ಬೇಕಾದಷ್ಟಿವೆ. ಒಟ್ಟಿನಲ್ಲಿ, ನಮ್ಮ ನಾಟ್ಯ ಸಾಹಿತ್ಯ ವಿಷಯ ವೈಶಾಲ್ಯದಿಂದಲೂ, ರೂಪವೈವಿಧ್ಯದಿಂದಲೂ, ನವೀನ ದೃಷ್ಟಿಯಿಂದಲೂ ಕಲಾಪೂರ್ಣತೆಯಿಂದಲೂ, ಉಚ್ಚ ತರಗತಿಗೆ ಮುಟ್ಟಿದೆಯೆಂದು ಅಭಿಮಾನದಿಂದ ಹೇಳಬಹುದು. ನಾಟ್ಯ ಸಾಹಿತ್ಯದ ಸಂಬಂಧದಲ್ಲಿ ಹಿಂದುಸ್ಥಾನದ ಬೇರೆ ಯಾವ ಸಾಹಿತ್ಯಕ್ಕೂ ನಾವು ತಲೆ ತಗ್ಗಿಸಬೇಕಾಗಿಲ್ಲ.

ಈ ರೀತಿಯಾಗಿ ನಮ್ಮ ನಾಟ್ಯ ಸಾಹಿತ್ಯ ಹೊಸ ದೃಷ್ಟಿಯಿಂದಲೂ ಹೊಸ ಚೆಲುವಿನಿಂದಲೂ ಬೆಡಗುವಡೆದಿದ್ದರೂ ನಮ್ಮ ರಂಗಭೂಮಿ ಇನ್ನೂ ಹೀನದೆಶೆಯಲ್ಲಿಯೇ ಇದೆ. ಒಳ್ಳೆಯ ನಾಟಕಗಳು ನಮ್ಮಲ್ಲಿ ಇದ್ದರೂ ಅವುಗಳನ್ನು ಆಡುವ ಸಂಘಗಳೂ ಅವುಗಳ ರಸವನ್ನು ಗ್ರಹಿಸಬಲ್ಲ ಶ್ರೋತೃವೃಂದಗಳೂ ಇನ್ನೂ ನಮ್ಮ ನಾಡಿನಲ್ಲಿ ಬೆಳೆದಿಲ್ಲ. ಇದೊಂದು ವಿಚಾರಾರ್ಹವಾದ ವಿಷಯ. ಕನ್ನಡದಲ್ಲಿದ್ದ ಹಲವು ಒಳ್ಳೆಯ ನಾಟಕಗಳು ಜನಪ್ರಿಯವಾಗದಿರಲಿಕ್ಕೆ ಕಾರಣಗಳೇನು? ನಾಟಕಕಾರರು ಸಾಮಾನ್ಯ ಜನರ ಅಭಿರುಚಿಯನ್ನು ಅಸುಲಕ್ಷಿಸದೆ, ಬೇರೆಯಾವುದೋ ಒಂದು ದೇಶದ ಮಾದರಿಗಳನ್ನು ಮುಂದಿಟ್ಟುಕೊಂಡು ಬರೆಯುತ್ತಿರಬಹುದೆ? ಇಲ್ಲವೆ, ನಮ್ಮ ಜನತೆಯೆ ಅಷ್ಟು ಸದಭಿರುಚಿಯನ್ನು ತಳೆದಿಲ್ಲವೆಂದು ಹೇಳಬೇಕೆ? ಕೇವಲ ನಾಲ್ಕು ಜನ ಇಂಗ್ಲಿಷ್ ಸಾಹಿತ್ಯವನ್ನು ಬಲ್ಲ ನಮ್ಮಂಥವರಿಗೆ ಮಾತ್ರ ರುಚಿಸಿದರೆ ನಮ್ಮ ನಾಟಕಗಳ ಸಫಲತೆಯಾಗಲಿಲ್ಲವೆಂದು ನಾನು ಬಗೆಯುತ್ತೇನೆ. ಇಂದು ನಮಗೆ ನಿಜವಾಗಿಯೂ ರಾಷ್ಟ್ರೀಯವಾದ ರಂಗಭೂಮಿ ಬೇಕಾಗಿದೆ. ನಾವು ಅಶಿಕ್ಷಿತರೆಂದು ಹೇಳುವ ಜನರು ಕೂಡ ನಮ್ಮ ನಾಟಕಗಳನ್ನು ನೋಡಿ ನಲಿಯಬೇಕು; ಅವುಗಳಿಂದ ಚೈತನ್ಯವನ್ನೂ ಉತ್ಸಾಹವನ್ನೂ ಬೋಧೆಯನ್ನೂ ಪಡೆಯಬೇಕು. ಜನಸಾಮಾನ್ಯರ ಅಭಿರುಚಿಯನ್ನು ಅನುಲಕ್ಷಿಸಿ ಬರೆದ ನಾಟಕಗಳು ಕಲಾದೃಷ್ಟಿಯಿಂದ ಉಚ್ಚತರಗತಿಯವಾಗಿರಲಿಕ್ಕೆ ಶಕ್ಯವೇ ಇಲ್ಲ ಎಂಬ ನಿಯಮವೇನೂ ಇಲ್ಲ. ನಮ್ಮ ನಾಟಕಕಾರರು ಈ ವಿಚಾರಕ್ಕೆ ಗಮನ ಕೊಡಬೇಕೆಂದು ನಾನು ನಮ್ರವಾಗಿ ಸೂಚಿಸುತ್ತೇನೆ.

---

**ಕಾವ್ಯ ಸಮೀಕ್ಷೆ—೨.**

# ಕಾವ್ಯ ಪ್ರಯೋಜನ

ಬರೆದವರು: ಶ್ರೀ॥ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು

ಕವಿ ನಿರ್ಮಿಸಿದ ಕಾವ್ಯ ಪ್ರಯೋಜನಸಹಿತವೇ ಅಲ್ಲವೇ ಎಂಬ ಪ್ರಶ್ನೆ ಎಲ್ಲ ಲಾಕ್ಷಣಿಕರೂ ವಿವೇಚಿಸಿರುವುದೇ. ಯಶೋಲಾಭ, ಅರ್ಥ ಸಂಪಾದನೆ, ನಡತೆಯ ತಿಳಿವು, ಆಗಬಾರದ್ದು ಆಗದೆ ಇರುವಿಕೆ, ಕೇಳಿದ ಮರುಗಳಿಗೆಯಲ್ಲಿಯೇ ಆನಂದವಾಗುವಿಕೆ, ನಲ್ಲೆಯ ನಲ್ನುಡಿಗೆ ಎಣೆಯಾದ ನುಡಿಗಳಿಂದ ಒಳ್ಳೆಯದು ಕೆಟ್ಟದ್ದರ ಉಪದೇಶ - ಇವೆಲ್ಲ ಕವಿ ಕಾವ್ಯದಿಂದಾಗುವ ಪ್ರಯೋಜನಗಳೆಂದು **ಕಾವ್ಯ ಪ್ರಕಾಶ***ದಲ್ಲಿ ಹೇಳಿದೆ. ಭರತನ ಅಭಿಪ್ರಾಯದಲ್ಲಿ **ಕಾವ್ಯ ಎಂದರೆ ನಾಟಕವೇ** ಆದರೂ, ಮೂರೂ ಲೋಕಗಳ ಭಾವಾನುಕೀರ್ತನವೇ — **ಲೋಕವೃತ್ತಾನುಕರಣವೇ** — ಅದರ ಲಕ್ಷಣವಾದರೂ ಅದರಿಂದಾಗುವ ಪ್ರಯೋಜನಗಳನ್ನು ಕಾವ್ಯ ಪ್ರಯೋಜನಗಳನ್ನಾಗಿಯೇ ಅಂಗೀಕರಿಸಬಹುದು. ಆತನ ಮತದಂತೆ ಪ್ರಾಕೃತರಿಗೂ ಸುಲಭವಾಗಿ ಗ್ರಾಹ್ಯವಾಗುವ ಸದ್ಬೋಧೆ; ಅರಿತವರೂ ಮೋಹಗೊಳ್ಳುವ ಅಪೂರ್ವ ವಿಚಾರ; ದೈವಾಸುರ ಸಂಪತ್ತುಗಳು, ಅವುಗಳ ಸ್ವರೂಪ; ದುಃಖದಿಂದ ಕಂದಿದವರಿಗೆ ಸ್ಥೈರ್ಯ; ಅರ್ಥಾಪೇಕ್ಷೆಯುಳ್ಳವರಿಗೆ ಅದನ್ನು ಸಂಪಾದಿಸುವ ಮಾರ್ಗ; ದುರ್ಬಲರಿಗೂ ಧೈರ್ಯಸಾಧನೆಯ ರೀತಿ— ಇವು ಪ್ರಯೋಜನಗಳು. ಆಂಧ್ರ ಲಾಕ್ಷಣಿಕನಾದ ನನ್ನಯ ಭಟ್ಟನು **ವಿಶ್ವಶ್ರೇಯಃ ಕಾವ್ಯಂ** — ವಿಶ್ವದ ಶ್ರೇಯಸ್ಸನ್ನೊಳಕೊಂಡುದು ಕಾವ್ಯ—ಎಂದು ಹೇಳಿದ್ದಾನೆ. **ಶಂಭುರಹಸ್ಯ**ದಲ್ಲಿ, **ಕವಿಃಕಾವ್ಯಂಚ ಲೋಕೇಽಸ್ಮಿನ್ ಪರಮಂ ಶ್ರೇಯಸಾಂ ಪದಂ**—ಈ ಲೋಕದಲ್ಲಿ ಕವಿ ಮತ್ತು ಕಾವ್ಯ, ಈ ಎರಡೂ ಶ್ರೇಯಸ್ಸಿಗೆ ಉತ್ತಮವಾದ ನೆಲೆ — ಎಂದು ಹೇಳಿದೆ.

ಈ ಪ್ರಯೋಜನಗಳನ್ನೇ ಉದ್ದೇಶಿಸಿ ಕವಿ ಕಾವ್ಯರಚನೆಗೆ ತೊಡಗುವನೇ ಎಂದು ಕೆಲವರು ಸಂದೇಹ ಪಡಬಹುದು. ಹಲವರು, ಪ್ರಯೋಜನವಿಲ್ಲದೆ ಗಾಂಪನು ಸಹ ಯಾವ ಕೆಲಸಕ್ಕೂ ತೊಡಗುವುದಿಲ್ಲವೆಂದ ಬಳಿಕ, ಉದ್ದೇಶವೇ ಇಲ್ಲದೆ ಕವಿ ಕಾವ್ಯವನ್ನು ರಚಿಸುವುದೇ ಇಲ್ಲ ಎಂದು ವಾದಿಸಿ, ಕಾವ್ಯನಿರ್ಮಿತಿಯ ವಿಷಯದಲ್ಲಿ ಕವಿಗೆ ಯಾವುದಾದರೂ ಒಂದು ಉದ್ದೇಶವಿದ್ದೇ ಇರುತ್ತದೆ ಎಂದು ನಿರ್ಧರಿಸುತ್ತಾರೆ. ಆ ಉದ್ದೇಶ ಮೇಲಣ ಪ್ರಯೋಜನಗಳಲ್ಲಿ ಯಾವುದಾದರೂ ಒಂದು ಎಂದು ಅವರ ಗ್ರಹಿಕೆ. ಆದರೆ ಕೀರ್ತಿ ಗಳಿಸಬೇಕೆಂಬ ಆಶೆ, ಹಣ ಸಂಪಾದಿಸಬೇಕೆಂಬ ಬಯಕೆ, ಎಲ್ಲರಿಗೂ ನಡತೆಯ ಅರಿವನ್ನುಂಟುಮಾಡಬೇಕೆಂಬ ಅಪೇಕ್ಷೆ, ಆಗಬಾರದ್ದನ್ನು ಆಗದಂತೆ ತಡೆಯಬೇಕೆಂಬ ಪ್ರಯತ್ನ, ಕೇಳಿದವರಿಗೆ ಆನಂದವನ್ನುಂಟುಮಾಡಲೇಬೇಕೆಂಬ ಪ್ರತಿಜ್ಞೆ, ಎಲ್ಲರಿಗೂ ಉಪದೇಶ ಮಾಡಬೇಕೆಂಬ ಹಂಬಲು ಇಷ್ಟೂ ಕಾವ್ಯ ನಿರ್ಮಾಣವಾಗುವ ಮೊದಲು ಕವಿಯ ಹೃದಯದಲ್ಲಿ ಇರುವುದೇ ಎಂಬುದನ್ನು ನಿರ್ಧರಿಸುವುದು ಸ್ವಲ್ಪ ಪ್ರಯಾಸ. ಕೃತಿಯನ್ನು ನಿರ್ಮಿಸಿದ ಮೇಲೆ ಈ ಎಲ್ಲ ಉದ್ದೇಶಗಳೂ ಕವಿಗೆ ತಿಳಿಯದಂತೆಯೇ ಈಡೇರಬಹುದು. ಇದು ಹೊರತು, **ಉದ್ದೇಶವೇ ಮೊದಲು – ಕಾವ್ಯ ಆಮೇಲೆ** ಎಂದು ಹೇಳುವ ಸಾಹಸ ಸಲ್ಲದು ಎಂದು ಕೆಲವರ ವಾದ. ಆದರೂ ಕೆಲವೊಂದು ವೇಳೆ ಕವಿ ಉದ್ದೇಶಪೂರ್ವಕವಾಗಿಯೇ ಕಾವ್ಯನಿರ್ಮಿತಿಗೆ ತೊಡಗುವುದುಂಟು. ಇದಕ್ಕೆ ಅನೇಕ ಉದಾಹರಣೆಗಳೂ ಇವೆ.*

ಅರ್ಥ, ನೀತಿ, ತಂತ್ರ, ಮಂತ್ರ, ವೈದ್ಯ ಮೊದಲಾದ ಹಲವು ಶಾಸ್ತ್ರಗಳು ಮೇಲಣ ಎಲ್ಲಾ ಪ್ರಯೋಜನಗಳನ್ನು ಸಾಧಿಸಿಕೊಡಲಿರುವಾಗ, ಕವಿ ಕಾವ್ಯವನ್ನು ಈ ಪ್ರಯೋಜನಗಳಿಗಾಗಿಯೇ ರಚಿಸಬೇಕೆ? ಕವಿ ಹೃದಯದಲ್ಲಿ ಮೂಡುವ ವಿವಿಧ ಭಾವತರಂಗಗಳು ರುಚಿರ ಪದಾರ್ಥ ಪ್ರವಾಹರೂಪವಾಗಿ ಹರಿದಾಗ, ಅವನು ಅನುಭವಿಸಿದಂತೆಯೇ ರಸಿಕನೂ ಆನಂದವನ್ನು ಅನುಭವಿಸಬಹುದು. ಇದು ಕಾವ್ಯದಿಂದಾಗುವ ಮುಖ್ಯ ಪ್ರಯೋಜನ. ಕವಿ ಇಷ್ಟು ಮಾತ್ರ ಬಯಸುತ್ತಾನೆ: **ಇನಿಯಳ ಸೋಂಕಿನಂತೆ, ಪೊಸಮಾವಿನ ಪೂವಿನ ಜೊಂಪದಂತೆ, ಚಂದನ ರಸದಣ್ಪಿನಂತೆ, ನನೆಯೇರಿದ ಮಲ್ಲಿಗೆಯಂತೆ, ಪೂರ್ಣಚಂದ್ರನ ಸಿರಿಯಂತೆ, ಬಂದಲೆವ ತೆಂಕಣ ತೆಂಬೆಲರಂತೆ†** ತನ್ನ ಕವಿತಾರಸ ಸಜ್ಜನರ ಮನಸ್ಸನ್ನು ಸೂರೆಗೊಳ್ಳಲಿ. ತಾನು ಮಾಡುವ ಕಾವ್ಯ ತನಗೂ ಶ್ರೋತೃವಿಗೂ ಆನಂದಪರ್ಯವಸಾಯಿಯಾಗಿ ಪರಿಣಮಿಸಿದರೆ ಕವಿ ಕೃತಾರ್ಥನಾದೆನೆಂದುಕೊಳ್ಳುತ್ತಾನೆ. ಇದೇ ಅವನು ಬಯಸುವ ಪ್ರಯೋಜನ. ಇನ್ನುಳಿದ ಎಲ್ಲ ಪ್ರಯೋಜನಗಳೂ ಆದರೂ ಆಗಬಹುದು; ಆಗುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲ— ಆದರೆ ಸಂತೋಷ!

ಮಮ್ಮಟಾಚಾರ್ಯನು ಕಾವ್ಯ ಪ್ರಯೋಜನಗಳನ್ನು ಉದಾಹರಣೆಗಳೊಡನೆ ಪ್ರತಿಪಾದಿಸುತ್ತ, **ಸದ್ಯಃ ಪರ ನಿರ್ವೃತಿ**—ಕೇಳಿದ ಮರುಗಳಿಗೆಯಲ್ಲಿಯೇ ಉಂಟಾಗುವ ಅನಿರ್ವಚನೀಯ ಆನಂದ— **ಸಕಲ ಪ್ರಯೋಜನ ಲಲಾಮಭೂತ** ಎಂದು ಹೇಳುತ್ತಾನೆ.

(೨೩೮ನೆಯ ಪುಟಕ್ಕೆ)

---

* ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರ ಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ ॥
—ಮಮ್ಮಟ: ಕಾವ್ಯಪ್ರಕಾಶ.

* ಒಂದು ಉದಾಹರಣೆಗೆ— ಸುಧೆಯಂ ಗೆಲಲೀ ಕೃತಿಯನುಸುರಿದಂ ಸೋಮನೃಪಂ— ಉದ್ಭಟಕಾವ್ಯ.

† ರುದ್ರಭಟ್ಟ : ಜಗನ್ನಾಥ ವಿಜಯ.

## ಬಾಳುವೆಯ ಹಾಡು

ಬಾಳು ನಶ್ವರವೆಂದು ।
ಬರಿದೆಂದು ಕನಸೆಂದು ।
ಗೋಳಿಟ್ಟು ಮನನೊಂದು ।
ಸೊರಗಲೇಕೆ ? ॥
ಸೊರಗಲೇಕೆ ?– ತಮ್ಮ !– ಮರುಗಲೇಕೆ ? ॥ ಪ ॥

ಮಾಯೆ ಕಾಣುವುದೆಲ್ಲ ।
ಕಾಯವಿದು ಸ್ಥಿರವಲ್ಲ ।
ಆಯ ಬೀಯದ ಸೊಲ್ಲ ।
ಹೇಯವೆಂದು ॥
ಹೇಯವೆಂದು– ಭವವ– ಪಾಯವೆಂದು ॥ ೧ ॥

ಸಾವಳಿವೆ ಒಡಲ ಗುರಿ ।
ಜೀವಿತೇಶ್ವರನು ಹರಿ ।
ಜಡಭರಿತ ದೇಹಿ ಬರಿ ।
ನಡೆವ ಶವನು ॥
ನಡೆವ ಶವನು– ಎಣಿಪೊ– ಡೇವನವನು ? ॥ ೨ ॥

ಶಾಸ್ತ್ರಕಲೆ ನೂರಾರು ।
ಕಲಿತು ಜಯಿಸುವನಾರು ? ॥
ಬದುಕು ಬರು ದಿನ ಮೂರು ।
ನೀಗುತಿಹುದು ॥
ನೀಗುತಿಹುದು–ಕಳೆದು– ಪೋಗುತಿಹುದು ॥ ೩ ॥

ಮುಳ್ಳಲ್ಲ ಪೊಳ್ಳಲ್ಲ ।
ಸುಳ್ಳಲ್ಲ ಬಾಳುವೆಯು ।
ತಳ್ಳದಿರು ಬಿಡಸಲ್ಲ ।
ಉಳ್ಳ ತನಕ ॥
ಉಳ್ಳ ತನಕ– ದಿಟವು– ಅಲ್ಲವಣಕ ॥ ೪ ॥

ಸೇವೆಯೊಳೆ ಸುಖವರಿತು ।
ನೋವಂಜಿಕೆಯ ಮರೆತು ।
ತಾವರಿತು ಸರಿ ಬೆರೆತು ।
ಜೀವಿಸಲಿಕೆ ॥
ಜೀವಿಸಲಿಕೆ– ಬಳಿಕೆ– ದೇವರೇಕೆ ? ॥ ೫ ॥

ಕರ್ಮ ಮಾನವ ಧರ್ಮ ।
ಕರ್ಮ ಜೀವನ ಮರ್ಮ ।
ಕರ್ಮ ಮಾರ್ಗದೆ ದುಡಿದು ।
ಮಡಿದು ಬಾಳು ॥
ಮಡಿದು ಬಾಳು– ವೀರ– ನುಡಿಗೆ ತಾಳು ॥ ೬ ॥

ಗಾವಿಲರ ಸೊಡರಾಗಿ ।
ಭಾವುಕರ ಮರೆವೋಗಿ ।
ದೇವನಲಿ ಬಗೆ ಬೀಗಿ ।
ಪರಮ ಪದವ ॥
ಪರಮ ಪದವ– ಗಳಿಸೊ– ತಿರೆಗೆ ಮುದವ ॥ ೭ ॥

—ಬೆನಗಲ್ ರಾಮರಾವ್

---

## ಕನ್ನಡ ನಾಡಿನಲ್ಲಿ ಪರಿಷತ್ತಿನ ಉಪಾಧ್ಯಕ್ಷರ ಪ್ರವಾಸ

### ಮುಂಬಯಿಯಲ್ಲಿ ಕಾರ್ಯಕ್ರಮ

(ಬರೆದು ಬಂದುದು)

ಕಳೆದ ೬–೪–೪೦ನೆಯ ತಾರೀಖು ಶನಿವಾರ ಬೆಳಗ್ಗೆ 'ಶ್ರೀ' ಯವರೂ ಪರಿಷತ್ತಿನ ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ॥ ರಂಗಪ್ಪ ಪೋತ್ದಾರರೂ ಮುಂಬಯಿ ಮುಟ್ಟಿದರು. ವಿಕ್ಟೋರಿಯಾ ನಿಲ್ದಾಣದಲ್ಲಿ ಅವರನ್ನು ಶ್ರೀಗಳಾದ ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿ, ಜೆ. ಪಿ., ಜಿ. ಕೆ. ಬೆಟಗೇರಿ, ಎಸ್. ಆರ್. ಜೋಶಿ, ಇಮಾರತಿ ಹನುಮಂತರಾಯರು, ದೇಶಪಾಂಡೆ ಭೀಮರಾಯರು, ವೆಂಕಟೇಶ ಮೂರ್ತಿಯವರು ಮುಂತಾಗಿ ಸ್ಥಳೀಯ ಕನ್ನಡ ಮುಂದಾಳುಗಳೂ ಮುಂಬಯಿಯಲ್ಲಿರುವ ಹಲವು ಕನ್ನಡ ಸಂಸ್ಥೆಗಳವರೂ ಹೂಮಾಲೆಗಳನ್ನು ಹಾಕಿ ಸ್ವಾಗತಿಸಿದರು.

'ಶ್ರೀ' ಯವರು ಸೊಂಡೂರಿಗೆ ಹೋಗಿದ್ದಾಗ ಅವರು ರಾಜಾಸಾಹೇಬರನ್ನು ಸಂದರ್ಶಿಸಲು ಸಾಧ್ಯವಾಗಿರಲಿಲ್ಲ. ರಾಜಾಸಾಹೇಬರು ಕಾರ್ಯನಿಮಿತ್ತ ಮುಂಬಯಿಗೆ ಹೋಗಿದ್ದರು. 'ಶ್ರೀ'ಯವರು ರಾಜಾಸಾಹೇಬರನ್ನು ೬ನೆಯ ತಾರೀಖು ಅವರು ಇಳಿದುಕೊಂಡಿದ್ದಲ್ಲಿಗೆ ಹೋಗಿ ಸಂದರ್ಶಿಸಿ ಪರಿಷತ್ತಿನ ಚಟುವಟಿಕೆಗಳ ವಿಚಾರವಾಗಿ ಅರಿಕೆ ಮಾಡಿಕೊಂಡರು. ರಾಜಾಸಾಹೇಬರು ೫೦೦ ರೂಪಾಯಿಗಳನ್ನು ದಾನ ಮಾಡಿ ಪರಿಷತ್ತಿನ ಪೋಷಕರಾಗಲು ಉದಾರ ಭಾವನೆಯಿಂದ ಒಪ್ಪಿ, ಪರಿಷತ್ತಿನ ಉದ್ದೇಶಗಳು ನೆರವೇರಲು ನೆರವಾಗುವಂತೆ ವರ್ಷಾಶನ ನೀಡುವುದಾಗಿ ಆಶ್ವಾಸನವಿತ್ತರು.

ಸಂಜೆ ೪॥ ಗಂಟೆಗೆ 'ಶ್ರೀ'ಯವರು ಮುಂಬಯಿ ಕರ್ನಾಟಕ ಸಂಘದ ಆಶ್ರಯದಲ್ಲಿ ಬ್ರಾಹ್ಮಣ ಸಭೆಯ ಗೋಖಲೆ ಸಭಾಮಂದಿರದಲ್ಲಿ "ಕನ್ನಡ ಸಾಹಿತ್ಯ ಮತ್ತು ಇಂದು ಅದರ ಬೆಲೆ" ಎಂಬ ವಿಷಯವಾಗಿ ಭಾಷಣ ಮಾಡಿದರು. ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು. ಸಭೆಗೆ ಮುಂಬಯಿ ನಗರದ ನಾನಾ ಭಾಗಗಳಿಂದ ಅನೇಕ ಕನ್ನಡಿಗರು ನೆರೆದಿದ್ದರು.

೭ನೆಯ ಭಾನುವಾರ ಬೆಳಗ್ಗೆ 'ಶ್ರೀ'ಯವರು ಮಾತುಂಗ ವಿಸ್ತೀರ್ಣದಲ್ಲಿರುವ ಕನ್ನಡ ಶಾಲೆಯಲ್ಲಿ, ಕನ್ನಡಕ್ಕಾಗಿ ಮುಂಬಯಿಯಲ್ಲಿ ದುಡಿಯುತ್ತಿರುವವರೊಡನೆ ವಿಚಾರ ವಿನಿಮಯ ಮಾಡಿದರು. 'ಶ್ರೀ' ಯವರು ಪರಿಷತ್ತಿನ ಧ್ಯೇಯಗಳನ್ನು ವಿವರಿಸಿ, ಕನ್ನಡಿಗರಲ್ಲಿ ಒಕ್ಕಟ್ಟು, ಸಂಘಟನೆ ಇರಬೇಕೆಂದು ಒತ್ತಿ ಹೇಳಿ, ಪರಿಷತ್ತಿನ ಬಲವನ್ನು ಹೆಚ್ಚಿಸಲು ಕನ್ನಡಿಗರು ಮುಂದೆ ಬರಬೇಕೆಂದು ಕೋರಿದರು. ಸಭೆಯಲ್ಲಿ ನೆರೆದಿದ್ದವರ ಪೈಕಿ ೧೫ ಮಂದಿ ಸೇವೆಗೆ ಸಿದ್ಧವಾಗಿರುವುದಾಗಿ ಆಶ್ವಾಸನವಿತ್ತರು.

ಸಂಜೆ, ಮುಂಬಯಿಯಲ್ಲಿರುವ ಸುಮಾರು **ನಲವತ್ತೆರಡು ಕನ್ನಡ ಸಂಘ**ಗಳ ಆಶ್ರಯದಲ್ಲಿ ಮಾತುಂಗದಲ್ಲಿರುವ ಆಸ್ತಿಕ ಸಮಾಜ ಸಭಾಮಂಟಪದಲ್ಲಿ ಸಾರ್ವಜನಿಕ ಸಭೆ ಸೇರಿತ್ತು. 'ಶ್ರೀ'ಯವರು "ಕನ್ನಡ ಸಾಹಿತ್ಯ ಮತ್ತು ಅದರ ಭವಿಷ್ಯ" ಎಂಬ ವಿಚಾರವಾಗಿ ಭಾಷಣಮಾಡಿದರು. ಶ್ರೀ॥ ಕೆ. ರಾಮಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು.

೮ನೆಯ ಸೋಮವಾರ ಸಂಜೆ 'ಶ್ರೀ'ಯವರು ಪಿ. ಇ. ಎನ್. (P. E. N. India Centre) ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ಸೋಫಿಯಾ ವಾಡಿಯಾರವರ ಆಮಂತ್ರಣದಂತೆ ಭೋಜನ ಸಮಾರಂಭಕ್ಕೆ ದಯಮಾಡಿಸಿದ್ದರು. ಭೋಜನಾನಂತರ 'ಶ್ರೀ'ಯವರು ಆಧುನಿಕ ಕನ್ನಡ ಸಾಹಿತ್ಯದ ಪ್ರವೃತ್ತಿ ಮತ್ತು ಸಂಸ್ಕೃತಿಯ ವಿಷಯವಾಗಿ ನೆರೆದಿದ್ದವರೊಡನೆ ವಿಚಾರವಿನಿಮಯಮಾಡಿದರು. ಆಧುನಿಕ ಕನ್ನಡ ಚಳವಳಿಯ ಧ್ಯೇಯಗಳ ಮತ್ತು ಗೊತ್ತುಗುರಿಗಳ ಹಾಗೂ ಅಖಿಲ ಭಾರತ ಪಿ. ಇ. ಎನ್. ಸಂಸ್ಥೆಯ ಧ್ಯೇಯಗಳು ಗೊತ್ತುಗುರಿಗಳ ಸಂಬಂಧಸಮನ್ವಯಗಳನ್ನು ಕುರಿತ ಚರ್ಚೆ ನಡೆಯಿತು.

ಮಂಗಳವಾರ ಬೆಳಗ್ಗೆ 'ಶ್ರೀ'ಯವರು ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಏಕೀಕರಣಗಳಲ್ಲಿ ಆಸಕ್ತಿಯಿಂದ ಕೂಡಿ ಕೆಲಸಮಾಡುವವರೊಂದಿಗೆ ಮಾತುಕತೆಯಾಡಿದರು. ಸಂಜೆ ಮೊಗವೀರ ರಾತ್ರಿ ಶಾಲೆಗೆ ಭೇಟಿಕೊಟ್ಟು, ಮೊಗವೀರ ಕೋಮಿನ ಮುಂದಾಳುಗಳ ಪರಿಚಯ ಮಾಡಿಕೊಂಡರು. ಮೊಗವೀರ ಕೋಮಿನ ತರುಣರಿಗೆ ಕೆಲವು ಹಿತವಾಕ್ಯಗಳನ್ನು ಹೇಳುತ್ತಾ ತರುಣರು ಆಧುನಿಕತೆ ಮತ್ತು ಪ್ರಗತಿಗಳ ಕಡೆ ಹೆಚ್ಚು ಲಕ್ಷ್ಯವಿಡಬೇಕಾದುದು ಮುಖ್ಯವೆಂದೂ ಸುಖಸ್ವಾತಂತ್ರ್ಯ

ತೃಪ್ತಿಗಳಿಂದ ಕೂಡಿದ ಭಾರತದಲ್ಲಿ ಕರ್ನಾಟಕ ಒಂದು ಅಂಗವಾಗಿದ್ದು ವಿಕಾಸಹೊಂದುವಂತೆ ಮಾಡಲು ಒಕ್ಕಟ್ಟಿನಿಂದ ಎಲ್ಲರೂ ದುಡಿಯ ಬೇಕೆಂದೂ ಕೋರಿದರು. ಅಂದೇ ರಾತ್ರಿ ಮುಂಬಯಿ ಸರಕಾರದ ಸರಕಾರಿ ವಕೀಲರಾದ ಶ್ರೀ|| ಆರ್. ಎ. ಜಾಗಿರದಾರರವರು ಏರ್ಪಡಿಸಿದ್ದ ಭೋಜನಕ್ಕೆ 'ಶ್ರೀ'ಯವರು ಆಹ್ವಾನಿತರಾಗಿ ಹೋಗಿದ್ದರು. ಅಲ್ಲಿ ಶ್ರೀ||ಗಳಾದ ರಾಮಸ್ವಾಮಿ, ಗುಮಾಸ್ತೆ, ಜಠಾರ, ಬೆಟಗೇರಿ, ಬೆಳವಿ, ಜೋಶಿ, ಮಧುಭಾವಿ, ಮರುಡೇಶ್ವರ ಮುಂತಾದ ಮುಂಬಯಿಯಲ್ಲಿರುವ ಪ್ರಮುಖ ಕನ್ನಡಿಗರೂ ದಯಮಾಡಿಸಿದ್ದರು.

ಮುಂಬಯಿಯಲ್ಲಿ 'ಶ್ರೀ'ಯವರು ನಡಸಿದ ನಾಲ್ಕು ದಿನಗಳ ಪ್ರವಾಸ ಯಶಸ್ವಿಯಾಗಿ ಮುಕ್ತಾಯವಾಯಿತು. ಕನ್ನಡ ನಾಡು ನುಡಿಗಳ ಏಳಿಗೆ, ಸಂಸ್ಕೃತಿಯ ಸಂವರ್ಧನೆಗಳೇ 'ಶ್ರೀ'ಯವರ ಬಾಳಗುರಿ. ಈ ಗುರಿ ಮುಟ್ಟಲು ಮುಂಬಯಿ ಕನ್ನಡಿಗರು ಎದೆಯಾರ ಸಹಕರಿಸುವುದಾಗಿ ಭರವಸೆಯಿತ್ತಿದ್ದಾರಲ್ಲದೆ, ಆ ದೊಡ್ಡ ನಗರದಲ್ಲಿ ದುಡಿಯುತ್ತಿರುವ ೪೨ ಸಂಘಗಳು ಒಂದು ಸಂಯುಕ್ತ ಸಂಘವಾಗಿ ಸಂಘಟನೆಯಾಗಿ ಪರಿಷತ್ತಿನೊಂದಿಗೆ ಸಂಪರ್ಕವಿಟ್ಟುಕೊಳ್ಳಲೂ, ಪರಿಷತ್ತಿನ ರಜತಮಹೋತ್ಸವಕ್ಕೆ ಪ್ರತಿನಿಧಿಗಳನ್ನು ಕಳಿಸಲೂ ಒಪ್ಪಿರುವುದು ನಿಜವಾಗಿ ಹೆಮ್ಮೆಯ ಸಂಗತಿಯಾಗಿದೆ.

'ಶ್ರೀ'ಯವರೂ ಅವರ ಸಂಗಡ ಬಂದಿದ್ದ ಶ್ರೀ|| ರಂಗಪ್ಪ ಪೋತ್ದಾರರೂ ಮುಂಬಯಿಯಲ್ಲಿ ದಿವಾನ್ ಬಹದ್ದೂರ್ ಶ್ರೀ|| ಕೆ. ರಾಮಸ್ವಾಮಿಯವರ ಅತಿಥಿಗಳಾಗಿದ್ದರು.

**ಚಿಕ್ಕೋಡಿ:** ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ಶ್ರೀ|| ರಂಗಪ್ಪ ಪೋತ್ದಾರ್ ಅವರೊಡನೆ ೧೧-೪-೪೦ ರ ಸಂಜೆ ೫|| ಗಂಟೆಗೆ ಇಲ್ಲಿಗೆ ಆಗಮಿಸಿದರು. ಸಂಜೆಯ ೬ ಗಂಟೆಗೆ ಇಲ್ಲಿಯ ಕರ್ನಾಟಕ ಸಂಘದ ಕಚೇರಿಯಲ್ಲಿ ಸಂಘದ ಸದಸ್ಯರೂ, ಇತರ ಸದ್ಗೃಹಸ್ಥರೂ, ವಿದ್ಯಾರ್ಥಿಗಳೂ ಅವರನ್ನು ಸ್ವಾಗತಿಸಿದ ಬಳಿಕ ಕಾರ್ಯದರ್ಶಿಗಳಾದ ಶ್ರೀ|| ಕೋಟಿ ಶ್ರೀನಿವಾಸರಾಯರು ಸಂಘದ ೩ನೆಯ ವರ್ಷದ ವಾರ್ಷಿಕ ವರದಿಯನ್ನು ಓದಿ ತೋರಿಸಿ ಇತರ ಸಂಗತಿಗಳನ್ನು ವಿಸ್ತರಿಸಿ ಹೇಳಿದ್ದಲ್ಲದೆ ಸಂಘದ ಪರವಾಗಿ ಕನ್ನಡ ಶಾಲೆಯ ಚಿಕ್ಕ ಬಾಲಕರು ಪ್ರತಿ ರವಿವಾರ ಧಾನ್ಯಭಿಕ್ಷೆ ಬೇಡಿ ಸಂಘಕ್ಕೆ ವಿಶೇಷ ಸಹಾಯವನ್ನು ಮಾಡುತ್ತಿರುವರೆಂದು ಹೇಳಿ ಧನ್ಯವಾದಗಳನ್ನು ಅರ್ಪಿಸಿದರು.

ಬಳಿಕ 'ಶ್ರೀ'ಯವರು ೧|| ಗಂಟೆ ಕಾಲ ಭಾಷಣ ಮಾಡಿ ಪರಿಷತ್ತಿನ ರಜತಮಹೋತ್ಸವ, ಕನ್ನಡ ನಾಡು ನುಡಿಗಳ ಭವಿತವ್ಯತೆಯ ವಿಷಯಗಳನ್ನು ಚರ್ಚಿಸಿ ಮುಂದಿನ ಕಾರ್ಯದ ರೂಪರೇಷೆಯನ್ನು ವಿವರಿಸಿದರು. ರಾತ್ರಿ ೯ ಗಂಟೆಗೆ ಶ್ರೀ ವೆಂಕಟೇಶ ಮಂದಿರದಲ್ಲಿ ಸಾರ್ವಜನಿಕ ಉಪನ್ಯಾಸದ ವ್ಯವಸ್ಥೆ ಮಾಡಲಾಗಿತ್ತು. ಆದರೆ ಮಳೆ ನಿಮಿತ್ತ ಕಾರ್ಯಕ್ರಮವನ್ನು ನಿಲ್ಲಿಸಬೇಕಾಯಿತು. ಮರುದಿನ (೧೨-೪-೪೦) ಬೆಳಗ್ಗೆ ೮|| ಗಂಟೆಗೆ ಶ್ರೀ ವೆಂಕಟೇಶ ಮಂದಿರದಲ್ಲಿ ವಕೀಲ ಸಂಘದ ಪರವಾಗಿ 'ಶ್ರೀ'ಯವರು ಇಂಗ್ಲೀಷಿನಲ್ಲಿ ೧ ಗಂಟೆಯ ಹೊತ್ತು ಕನ್ನಡ ಸಾಹಿತ್ಯದ ಬೆಳವಣಿಗೆ, ಷೇಕ್ಸ್‌ಪಿಯರ್, ಸಂಯುಕ್ತ ಕರ್ನಾಟಕದ ಯೋಜನೆ ಮೊದಲಾದವುಗಳನ್ನು ಕುರಿತು, ಭಾಷಣ ಮಾಡಿದರು. ಬಳಿಕ ೧೦ ನಿಮಿಷ ವಿಶ್ರಾಂತಿ ಹೊಂದಿ ಅದೇ ವಿಷಯವನ್ನು ಬೆಳಸಿ ೨ ಗಂಟೆ ಕಾಲ ಕನ್ನಡದಲ್ಲಿ ಉಪನ್ಯಾಸ ಮಾಡಿದರು. ತಾವು ಪ್ರಸಿದ್ಧಪಡಿಸಿದ "ಕನ್ನಡದ ಬಾವುಟ"ದಿಂದ ಕನ್ನಡ ನಾಡು ನುಡಿಗಳ ಪ್ರಾಚೀನತೆ, ಹಿರಿಮೆ, ಸೌಂದರ್ಯ ಮೊದಲಾದವುಗಳನ್ನು ಕುರಿತ ಭಾಗಗಳನ್ನು ಆಯ್ದು ಮನದಟ್ಟಾಗುವಂತೆ ವಿವರಿಸಿದರು. ಮಧ್ಯಾಹ್ನ ೪ ಗಂಟೆಗೆ ಈ ತಾಲ್ಲೂಕಿನ ಸದಲಗೀ ಗ್ರಾಮದ ಒತ್ತಾಯದ ಆಮಂತ್ರಣದಂತೆ ಅಲ್ಲಿಗೆ ಹೋಗಿ ಶ್ರೀ|| ಹಾಲಪ್ಪನವರು ನಡಸುತ್ತಿರುವ ವಾಚನಾಲಯವನ್ನು ಸಂದರ್ಶಿಸಿದರು. ಬಳಿಕ ಅವರ ಮಹಡಿಯ ಮೇಲೆ ನೆರೆದ ಜನರ ಸಮುದಾಯವನ್ನುದ್ದೇಶಿಸಿ ಎಲ್ಲರಿಗೂ ತಿಳಿಯುವಂತೆ, ರಜತ ಮಹೋತ್ಸವ, ಕನ್ನಡ ನಾಡು ನುಡಿಗಳ ಮಹತ್ವ ಮೊದಲಾದವುಗಳನ್ನು ಚರ್ಚಿಸಿ ರಜತ ಮಹೋತ್ಸವಕ್ಕೆ ನೆರವಾಗಬೇಕೆಂದು ಪ್ರಾರ್ಥಿಸಿಕೊಂಡರು. ಅಲ್ಲಿಯ ಪ್ರಮುಖ ಜನರು ಅಭಿವಚನವನ್ನಿತ್ತ ಬಳಿಕ ತಿರುಗಿ ಬರುವಾಗ ವಡಗೋಲ ಗ್ರಾಮದಲ್ಲಿ ನಡೆದ ಸುಧಾರಣೆಗಳನ್ನು ಸಂದರ್ಶಿಸಿ, ಆನಂದಪಟ್ಟು, ಚಿಕ್ಕೋಡಿಗೆ ೬|| ಗಂಟೆಗೆ ಬಂದು, ಅಲ್ಲಿಂದ ನಿಪ್ಪಾಣಿಗೆ ಪ್ರಯಾಣ ಬೆಳಸಿದರು.

## ಏಕಾಂಕ ನಾಟಕ ವಿಚಾರಕೂಟ

### ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ

ಕನ್ನಡ ಸಾಹಿತಿಗಳ ಸಂಘ ಕಳೆದ ಜನವರಿ ತಿಂಗಳಲ್ಲಿ ಎರಡನೆಯ ಕತೆಗಾರ ಸಮ್ಮೇಳನವನ್ನು ನಡಸಿದ್ದು ಸರಿಯಷ್ಟೆ. ನಾಟಕ, ಕವಿತೆ, ಪ್ರಬಂಧ ಮೊದಲಾದ ಕನ್ನಡ ಸಾಹಿತ್ಯದ ಬೇರೆ ಬೇರೆ ಶಾಖೆಗಳಲ್ಲಿ ಇದುವರೆಗೆ ಎಷ್ಟುಕೆಲಸ ನಡೆದಿದೆ, ಅವುಗಳ ಮುಂದಿನ ಬೆಳವಣಿಗೆಗೆ ಸಾಹಿತಿಗಳು ಇಟ್ಟುಕೊಳ್ಳಬೇಕಾದ ಗುರಿಯಾವುದು, ಮಾಡಬೇಕಾದ ಕೆಲಸ ಏನು—ಎಂಬೀ ವಿಚಾರಗಳನ್ನು ಚರ್ಚಿಸಲು 'ವಿಚಾರಕೂಟ'ಗಳನ್ನು (Symposium) ನಡಸುತ್ತ ಬರಬೇಕೆಂದು ಸಂಘ ಉದ್ದೇಶಿಸಿದೆ. ಇದಕ್ಕೆ ಅನುಸಾರವಾಗಿ 'ಏಕಾಂಕ ನಾಟಕ'ವನ್ನು ಕುರಿತ ಮೊದಲನೆಯ ವಿಚಾರಕೂಟವನ್ನು ೧೪-೪-೪೦ನೆಯ ಭಾನುವಾರ ಬೆಳಗ್ಗೆ ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಪ್ರಾರಂಭಿಸಲಾಯಿತು.

ಮೊತ್ತಮೊದಲು ಸಂಘದ ಕಾರ್ಯದರ್ಶಿಗಳಾದ ಶ್ರೀ|| ಕೆ. ಗೋಪಾಲಕೃಷ್ಣರಾಯರು ಸಂಘದ ಉದ್ದೇಶಗಳನ್ನು ವಿವರಿಸಿ, ಸಂಘದ ಉಪಾಧ್ಯಕ್ಷರಾದ ಮಾಸ್ತಿಯವರು ಅಧ್ಯಕ್ಷತೆ ವಹಿಸಿ ವಿಚಾರಕೂಟದ ಕಾರ್ಯಕ್ರಮಗಳನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸಿದರು.

ಮಾಸ್ತಿಯವರು ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿದ ತರುವಾಯ, ಶ್ರೀ|| ಪು. ತಿ. ನರಸಿಂಹಾಚಾರ್ಯರಿಂದ ರಚಿತವಾದ 'ಶಾರದೆಗೆ ಹರಕೆ' ಎಂಬ ಕೃತಿಯನ್ನು ಶ್ರೀ|| ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳು ಸುಶ್ರಾವ್ಯವಾಗಿ ಹಾಡಿ ಪ್ರಾರ್ಥನೆ ಮಾಡಿದರು. ಬಳಿಕ ಕಾರ್ಯಕ್ರಮ ಮೊದಲಾಯಿತು.

ಅಧ್ಯಕ್ಷರು ತಮ್ಮ ಮೊದಲ ಮಾತಿನಲ್ಲಿ, ಸಾಹಿತ್ಯ ಸೇವೆಯಲ್ಲಿ ನಿರತರಾಗಿರುವ ನಾವೆಲ್ಲ ಇದುವರೆಗೆ ಆಗಿರುವ ಕೆಲಸವನ್ನು ಶಾಸ್ತ್ರ, ಪ್ರಯೋಗ ಮತ್ತು ಅನುಭವಗಳ ದೃಷ್ಟಿಯಿದ ವಿವೇಚಿಸಿ, ಮುಂದಿನ ಕಾರ್ಯವನ್ನು ನಡಸುವುದು ಉಚಿತವಾಗಿದೆ ಎಂದು ನುಡಿದು ಭಗವಂತನ ದಯದಿಂದ ಅದು ಯಶಸ್ವಿಯಾಗಿ ನಡೆಯಲೆಂದು ಹಾರೈಸಿದರು. ಅನಂತರ 'ಏಕಾಂಕ ನಾಟಕ' ವಿಚಾರವಾದ ಭಾಷಣ ಮಾಲೆ ನಡೆಯಿತು.

ಶ್ರೀ|| ಕೆ. ಅನಂತರಾಮಯ್ಯ, ಎಂ.ಎ. ಅವರು 'ಇಂಗ್ಲಿಷ್ ಏಕಾಂಕ ನಾಟಕ'ದ ವಿಚಾರವಾಗಿಯೂ, ಶ್ರೀ|| ಎಲ್. ಗುಂಡಪ್ಪ, ಎಂ.ಎ. ಅವರು 'ಸಂಸ್ಕೃತ ಏಕಾಂಕ ನಾಟಕ'ದ ವಿಚಾರವಾಗಿಯೂ, ಶ್ರೀ|| ಎಂ. ವಿ. ಸೀತಾರಾಮಯ್ಯ, ಎಂ.ಎ. ಅವರು 'ಕನ್ನಡ ಏಕಾಂಕ ನಾಟಕ'ದ ವಿಚಾರವಾಗಿಯೂ ಸ್ವಾರಸ್ಯವಾದ ಭಾಷಣಗಳನ್ನು ಮಾಡಿದರು. (ಈ ಮೂರು ಭಾಷಣಗಳ ಸಾರಾಂಶವನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು.)

ಅಧ್ಯಕ್ಷರು ಕಾರ್ಯಕ್ರಮವನ್ನು ಮುಕ್ತಾಯಗೊಳಿಸುತ್ತಾ, ತಮ್ಮದೇ ಆದ ಸರಳ ಶೈಲಿಯಲ್ಲಿ, ಅತ್ಯಂತ ಸ್ಫೂರ್ತಿದಾಯಕವಾದ ಭಾಷಣ ಮಾಡಿದರು. ಅವರು ತಮ್ಮ ಭಾಷಣದಲ್ಲಿ ಜನದ ಬಾಳಿನ ನೆಮ್ಮದಿಗೆ, ನಾಡಿನ ಮೇಲ್ಮೆಗೆ ಸಾಹಿತ್ಯದಿಂದಲೂ ಸಾಹಿತಿಗಳಿಂದಲೂ ಎಂಥ ಸೇವೆ ನಡೆಯಬೇಕೆಂಬುದನ್ನು ತಿಳಿಸಿದರು. ಅವರ ಭಾಷಣದ ಮುಖ್ಯಾಂಶಗಳಿವು:

ಸಾಹಿತ್ಯ ನಿಯಮ, ಕಟ್ಟಲೆಗಳ ಶೃಂಖಲೆಗೆ ಸಿಕ್ಕುವಂಥದಲ್ಲ. ನಾಟಕವಾಗಲಿ, ಕಾವ್ಯವಾಗಲಿ, ಕಾದಂಬರಿಯಾಗಲಿ, ಸಣ್ಣಕತೆಯಾಗಲಿ, ಏಕಾಂಕ ನಾಟಕವಾಗಲಿ ಮುಖ್ಯವಾಗಿ ಜನಕ್ಕೆ ಆಹ್ಲಾದವನ್ನೂ ಆನಂದವನ್ನೂ ಉಂಟು ಮಾಡಬೇಕು. ಜನದ ಬದುಕನ್ನು ತಿದ್ದುವುದೂ ನಾಡಿನ ಮೇಲ್ಮೆಗೆ ನೆರವಾಗುವುದೂ ಅದರ ಉದ್ದೇಶವೇ. ಆದರೆ ಸಮಾಜವನ್ನು ತಿದ್ದಬಯಸುವ ಸಾಹಿತಿ ಬಹಳ ಎಚ್ಚರಿಕೆಯಿಂದ ಹೆಜ್ಜೆಯಿಡಬೇಕು; ತಗ್ಗಿ ನಡೆಯಬೇಕು. ಅವನಲ್ಲಿ ಅಹಂಕಾರವಿರಬಾರದು. 'ನಾನು ತಿಳಿದವನು, ತಿದ್ದುತ್ತೇನೆ' ಎಂಬ ಹೆಮ್ಮೆ ಅವನಲ್ಲಿ ಇರಕೂಡದು. ಭಯವಿರಬೇಕು, ವಿನಯದಿಂದ ವರ್ತಿಸಬೇಕು. ಉದ್ಧಾರ ಮಾಡುವವನು ಬೇರೆ ಇದ್ದಾನೆ; ತಾನು ನಿಮಿತ್ತ ಮಾತ್ರ ಎಂದು ತಿಳಿದು, ತಾನು ತಿದ್ದುವವರ ವಿಷಯದಲ್ಲಿ ಪ್ರೇಮದಿಂದ, ಸಹಾನುಭೂತಿಯಿಂದ ವರ್ತಿಸುತ್ತ ಬರೆಯಬೇಕು. ಮಾಡುವ ವಿಡಂಬನೆ ಜನಕ್ಕೆ ಹಿತಕಾರಿಯಾಗಿರಬೇಕು.

ಸಾಹಿತಿಯ ಮೇಲೆ ಇಂದು ದೊಡ್ಡ ಹೊಣೆ ಇದೆ. ಅವನು ಬಿಡಿಸಬೇಕಾದ ಕಗ್ಗಂಟುಗಳು ಬೇಕಾದಷ್ಟಿವೆ. ಇಂದು ನಮ್ಮ ಭರತವರ್ಷದಲ್ಲಿ ಸಹಪಂಕ್ತಿಯ ಊಟ ಬೇಕೆ ಬೇಡವೆ ಎಂಬ ಸಣ್ಣಸಮಸ್ಯೆಯಿಂದ ಹಿಡಿದು ಭರತವರ್ಷವೇ

ಇರಬೇಕೆ, ಹಾಳಾಗಿಹೋಗಬೇಕೆ ಎಂಬ **ಮಹಾ ಸಮಸ್ಯೆಯ ವರೆಗೆ** ನಾನಾ ಸಮಸ್ಯೆಗಳು ಎದ್ದು ಕೂತಿವೆ. ಈ ಸಮಸ್ಯೆಗಳನ್ನು ಎದುರಿಸುವ ಪುಣ್ಯ ಯಾರಿಗೆ? ಧರ್ಮ ಆ ಕೆಲಸ ಮಾಡಲು ಸಾಧ್ಯವಿಲ್ಲ. ಮತದಿಂದಲೂ ಸಾಧ್ಯವಿಲ್ಲ. ಸಾಹಿತ್ಯ ಆ ಕೆಲಸ ಮಾಡಬೇಕಾಗಿದೆ.

ಈ ಕೆಲಸ ಮಾಡಬೇಕಾದರೆ, ಎಲ್ಲರನ್ನೂ ಸೋದರಭಾವದಿಂದ ಕೂಡಿಸಿ, ನಾಡನ್ನು ಒಕ್ಕಟ್ಟಿನಿಂದ ಮೇಲಕ್ಕೆ ಎತ್ತಲು ಸ್ಫೂರ್ತಿ ಕೊಡುವಂಥ ಸಾಹಿತ್ಯವನ್ನು ರಚಿಸಬೇಕಾದರೆ, ನಮ್ಮ ಜನ ಪರಸಂಸ್ಕೃತಿ, ಪರನಾಗರಿಕತೆಗಳ ವ್ಯಾಮೋಹವನ್ನು ಬಿಟ್ಟುಬಿಡಬೇಕು. ನಮ್ಮ ಸಂಸ್ಕೃತಿ ಧರ್ಮಗಳ ನಿಜವಾದ ಸ್ವರೂಪವನ್ನು ಅರಿತುಕೊಂಡು, ಬೇಕಾದರೆ ಪಶ್ಚಿಮದ ಸಾರಭೂತವಾದ ಸಂಸ್ಕೃತಿಯ ಬೆಳಕನ್ನು ತಂದುಕೊಂಡು, ಅದರ ಉಪಕಾರದಿಂದ ನಮ್ಮ ಸಂಸ್ಕೃತಿಯ ತೇಜಸ್ಸನ್ನು ಇನ್ನೂ ಉಜ್ವಲವಾಗಿ ಬೆಳಗಿಕೊಳ್ಳುವ ಬುದ್ಧಿ ನಮ್ಮ ಸಾಹಿತಿಗಳಲ್ಲಿ ಬೆಳೆಯಬೇಕು. ನಮ್ಮ ಜನ ನಮ್ಮ ವಾರಣಾಸಿಯನ್ನು ಗಂಗಾತೀರದಲ್ಲಿ ಕಾಣುತ್ತಿಲ್ಲ. ಆಕ್ಸ್‌ಫರ್ಡ್, ಕೇಂಬ್ರಿಡ್ಜ್‌ಗಳಲ್ಲಿ ಕಾಣುತ್ತಿದ್ದಾರೆ. ನಾವು ನಮ್ಮ ಮನಸ್ಸಿನ ಕೇಂದ್ರವನ್ನು ಹೊರಗಡೆ ಎಲ್ಲೋ ಇಟ್ಟು, ಕಣ್ಣುಕುರುಡನಾಗಿ, ಕುರುಡನು ಕುರುಡನ ಊರಗೋಲಾದಂತೆ ಒಬ್ಬರೊಬ್ಬರನ್ನು ಹಳ್ಳಕ್ಕೆ ಕೆಡವುತ್ತ ಹೀನವಾದ ಸ್ಥಿತಿಗೆ ಬಂದು ಮುಟ್ಟಿದ್ದೇವೆ. ಈ ಪರಿಸ್ಥಿತಿ ಹೋಗಬೇಕಾದರೆ ಮತ್ತೆ ವಾರಣಾಸಿಯನ್ನು ಗಂಗಾತೀರದಲ್ಲಿ, ಅದರ ಮುಂಚಿನ ಸ್ಥಳದಲ್ಲಿ ನಾವು ಕಾಣಲು ನಮ್ಮ ಕಣ್ಣುಗಳಿಗೆ ನೋಟ ಬರಬೇಕು. ಬಂದು ನಮ್ಮ ಆತ್ಮಶಕ್ತಿ ಬೆಳೆದು, ನಮ್ಮ ನಾಡಿನ ಸಮಸ್ಯೆಗಳನ್ನು ಬಗೆಹರಿಸಿ, ಎಲ್ಲರೂ ಸಾಮರಸ್ಯದಿಂದ ಬಾಳುತ್ತ ನಾಡನ್ನು ಉಳಿಸಿಕೊಳ್ಳಲು, ಉದ್ಧಾರಮಾಡಲು ಸೇವೆ ಮಾಡುವಂತಾಗಬೇಕು. ಈ ಸೇವೆ ನಡೆಯಬೇಕಾದರೆ ಸಾಹಿತ್ಯ ಮುಂದಾಗಬೇಕು. ಸಾಹಿತ್ಯದ ಅನೇಕ ಪ್ರಕಾರಗಳಂತೆ ಏಕಾಂಕ ನಾಟಕವೂ ಮುಂದೆ ಬರಬೇಕು. ಉತ್ತಮ ಏಕಾಂಕ ನಾಟಕಗಳನ್ನು ಬರೆಯುವ ಶಕ್ತಿ ತರುಣ ಸಾಹಿತಿಗಳಲ್ಲಿ ಬೆಳೆಯಲೆಂದು ಹಾರೈಸುತ್ತೇನೆ.

ಶ್ರೀಮಾನ್ ವಿ. ಸೀತಾರಾಮಯ್ಯನವರು ಸಂಘದ ಪರವಾಗಿ ಅಧ್ಯಕ್ಷರಿಗೂ ಭಾಷಣಕಾರರಿಗೂ ಧನ್ಯವಾದಗಳನ್ನರ್ಪಿಸಿದರು.

ಸಂಜೆ ೬ ಗಂಟೆಗೆ ವಿಚಾರಕೂಟ ಶ್ರೀ|| ಎಂ. ಆರ್. ಶ್ರೀನಿವಾಸ ಮೂರ್ತಿ, ಬಿ.ಎ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ||ಗಳಾದ ಕೆ. ರಾಜಾರಾವ್, ಜಿ. ವರದರಾಜಾರಾವ್, ಬಿ. ಎಸ್. ವೆಂಕಟರಾಮ್, ಎಸ್. ವೆಂಕಟಾಚಲಪತಿ ಇವರು ತಮ್ಮ ತಮ್ಮ ಏಕಾಂಕ ನಾಟಕಗಳನ್ನೂ ಶ್ರೀ|| ಎಸ್. ಎಸ್. ಮಾಳವಾಡ, ಎಂ.ಎ. ಅವರು ಶ್ರೀರಂಗರ 'ಯಮನ ಸೋಲು' ಎಂಬ ಏಕಾಂಕ ನಾಟಕವನ್ನೂ ಶ್ರೀ|| ಜಿ. ಪಿ. ರಾಜರತ್ನಂ, ಎಂ.ಎ. ಅವರು ಶ್ರೀ|| ಕೆ. ಎಸ್. ಕಾರಂತರ 'ಯಾರೋ ಅಂದರು' ಎಂಬ ಏಕಾಂಕ ನಾಟಕವನ್ನು ಓದಿದರು.

ಅಧ್ಯಕ್ಷರು ಕೊನೆಯಲ್ಲಿ ಸ್ವಾರಸ್ಯವಾದ ಭಾಷಣಮಾಡಿ, ಕಿರಿಯ ಏಕಾಂಕ ನಾಟಕಕರ್ತರಿಗೆ ಕೆಲವು ಉಪಯುಕ್ತವಾದ ಸಲಹೆಗಳನ್ನು ಕೊಟ್ಟರು:

"ಏಕಾಂಕ ನಾಟಕಗಳನ್ನು ಬರೆಯಲಿಚ್ಛಿಸುವ ಕಿರಿಯರು ತಮ್ಮ ಸುತ್ತಮುತ್ತಣ ಸಮಾಜ ಜೀವನವನ್ನು ಕಣ್ಣಿಟ್ಟು ನೋಡಬೇಕು. ನಮ್ಮ ದೇಶದ ಇತಿಹಾಸವನ್ನು ಚೆನ್ನಾಗಿ ಓದಿ ಅದರಲ್ಲಿರುವ ಘಟನೆಗಳನ್ನು ಬುದ್ಧಿವಂತಿಕೆಯಿಂದ ಆರಿಸಿಕೊಳ್ಳಬೇಕು. ತಕ್ಕಷ್ಟು ಸಾಮಗ್ರಿಯನ್ನು ಒದಗಿಸಿಕೊಂಡಿದ್ದಾದರೆ ಏಕಾಂಕ ನಾಟಕಗಳಿಗೆ ತಕ್ಕ ಸನ್ನಿವೇಶಗಳು ಬೇಕಾದಷ್ಟು ದೊರೆಯುತ್ತವೆ; ಏಕಾಂಕ ನಾಟಕಗಳಲ್ಲಿ ವೈವಿಧ್ಯವೂ ಉಂಟಾಗುತ್ತದೆ. ಇನ್ನೊಂದು ಮುಖ್ಯ ವಿಚಾರವೇನೆಂದರೆ, ಏಕಾಂಕ ನಾಟಕ ಬರೆಯುವವರು ಬಹಳ ಎಚ್ಚರಿಕೆಯಿಂದ ನಾಟಕೀಯವಾದ ಸನ್ನಿವೇಶಗಳನ್ನು ಆರಿಸಿಕೊಂಡು, ಅವನ್ನು 'ನಾಟಕೀಯ'ವಾಗುವಂತೆ ಚಿತ್ರಿಸಬೇಕು. ಬರಿಯ ಸಂವಾದದ ಮೂಲಕ ಒಂದು ಕತೆಯನ್ನಷ್ಟೆ ತಿಳಿಸಿಬಿಟ್ಟರೆ ಅದರಲ್ಲಿ ಸಣ್ಣ ಕತೆಯ ಛಾಯೆ ತೋರಬಹುದು; ನಾಟಕವಾಗಲಾರದು."

ಕೊನೆಯಲ್ಲಿ ಶ್ರೀ| ಕೆ. ಗೋಪಾಲಕೃಷ್ಣರಾಯರು ಧನ್ಯವಾದಗಳನ್ನು ಸಮರ್ಪಿಸಿದ ಮೇಲೆ ವಿಚಾರಕೂಟ ಮುಗಿಯಿತು.

---

# ಪರಿಷತ್ತಿನ ಸುದ್ದಿ

## ಸಾಹಿತ್ಯ ಪರೀಕ್ಷೆ

ಪರಿಷತ್ತಿನ ಆಶ್ರಯದಲ್ಲಿ ಏರ್ಪಟ್ಟಿರುವ ಕನ್ನಡ ಸಾಹಿತ್ಯ ಪರೀಕ್ಷೆಗಳಿಗೆ ಕೂಡಬಯಸುವ ವಿದ್ಯಾರ್ಥಿಗಳು **ಅಪೇಕ್ಷಾ ಪತ್ರವನ್ನು** ಪರಿಷತ್ತಿನ ಕಾರ್ಯದರ್ಶಿಯವರಿಂದಾಗಲಿ, ಉತ್ತರ ಕರ್ನಾಟಕ ಮತ್ತು ಮಂಗಳೂರು–ಕೊಡಗು ಪ್ರಾಂತ ಸಮಿತಿಗಳ ಕಾರ್ಯದರ್ಶಿಗಳಿಂದಾಗಲಿ ಅಥವಾ ಪರೀಕ್ಷೆಗಳಿಗೆ ಶಿಕ್ಷಣ ಕೊಡಲು ಏರ್ಪಟ್ಟಿರುವ ತರಗತಿಗಳ ವ್ಯವಸ್ಥಾಪಕರಿಂದಾಗಲಿ ಪಡೆಯಬಹುದು.

**[ಪರೀಕ್ಷೆ ದಿನ ಮುಂತಾದ ವಿವರಗಳಿಗೆ ೧೨-೪-೪೦ ರ 'ಕನ್ನಡ ನುಡಿ' ನೋಡಿ]**

## ಕಾವ್ಯ ಪ್ರಯೋಜನ

(೨೩೭ನೆಯ ಪುಟದಿಂದ)

ಈ ಆನಂದ ಯಾಗಮಾಡಿದಮೇಲೆ ಎಲ್ಲಿಯೋ ಪರಲೋಕದಲ್ಲಿ ಅಥವಾ ಜನ್ಮಾಂತರದಲ್ಲಿ, ಇಲ್ಲವೇ ಮಾವಿನಗಿಡ ನೆಟ್ಟಮೇಲೆ ಮುಂದೆ ಯಾವಾಗಲೋ ದೊರಕುವ ಫಲದಂತಲ್ಲ. ಕಾವ್ಯದಲ್ಲಿ ಕವಿ ಹುದುಗಿಸಿರುವ ಸ್ಥಾಯಿಭಾವ(ರಸ)ದ (**ಸ್ಥಾಯಿಭಾವೋ ರಸಃಸ್ಮೃತಃ —ಭರತ**) ಆಸ್ವಾದನೆಯಾದ ಮರುಗಳಿಗೆಯಲ್ಲಿಯೇ ಆ ಆನಂದ ದೊರಕುವಂಥದು. ಕವಿ **ರಸಾತ್ಮಕ**ವಾಗಿಯೇ ಕಾವ್ಯವನ್ನು ರಚಿಸುವನಾದ್ದರಿಂದ, ರಸರುಚಿ ಸುಖಸ್ವರೂಪವಾಗಿ, ಸುಲಭಗ್ರಾಹ್ಯವಾದ್ದರಿಂದ ಕವಿಕೃತಿಗೆ ಮುಖ್ಯ ಪ್ರಯೋಜನವಾದ ಆನಂದ ಎಲ್ಲರಿಗೂ ದೊರಕುವುದು. ಆಧುನಿಕರು **ಲೋಕೋತ್ತರಾನಂದವನ್ನುಂಟುಮಾಡುವ ಅರ್ಥಪ್ರತಿಪಾದಕಶಬ್ದ** ಕಾವ್ಯವೆಂದು ಹೇಳುವುದರಿಂದ, ಅಂಥ ಆನಂದ ಕಾವ್ಯದ ಪರಮ ಪ್ರಯೋಜನ.

ಒಟ್ಟಿನಮೇಲೆ ಕಾವ್ಯದ ಪ್ರಯೋಜನ ಕಾವ್ಯಶೈಲಿಯಲ್ಲಿ ಹೇಳಬೇಕಾದರೆ—**ಎಳಗಿಳಿವಿಂಡಿನಂತೆ, ಮಿಳಿರ್ದಾಡುವ ತುಂಬಿಯ ಬಂಬಲಂತೆ, ಕೆಂದಳಿರ್ಗಳ ತೊಂಗಲಂತೆ, ನಡೆ ನೋಡುವ ಪೆಂಡಿರ ನೋಟದಂತೆ, ಪೂಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ, ತೋರ್ಪ ತಿಂಗಳ ಸಿರಿಯಂತೆ*** ಎಲ್ಲರನ್ನೂ ಆನಂದಗೊಳಿಸುವುದೆಂದೇ ನಿರ್ಣಯವಾಗುವುದು. ಈ ರೀತಿ ಕಾವ್ಯದಿಂದ ಆಗುವ ಆನಂದ **ಮೋಕ್ಷಕಾಲದಲ್ಲಿ ಮುಕ್ತನಿಗೆ ಉಂಟಾಗುವ ಬ್ರಹ್ಮಾನಂದಕ್ಕೆ ಎಣೆಯಾದುದು** ಎಂಬುದು ಭಟ್ಟವಾಮನನ ವ್ಯಾಖ್ಯಾನ.

---

* ಆಂಡಯ್ಯ : ಕಬ್ಬಿಗರ ಕಾವ.

---

# ಕನ್ನಡ ಸುದ್ದಿ

**ಕರ್ನಾಟಕ ಸಂಘ : ಮಧುಗಿರಿ**

ಮೇಲ್ಕಂಡ ಸಂಘದ ಆಶ್ರಯದಲ್ಲಿ, ಮಧುಗಿರಿಗೆ ಒಂದು ಮೈಲಿ ದೂರದಲ್ಲಿ ಇರುವ ಸಿದ್ದಾಪುರದಲ್ಲಿ ವಯಸ್ಕರ ಶಿಕ್ಷಣಶಾಲೆ ನಡೆಯುತ್ತಿದೆ. ಈ ಶಾಲೆಯ ಆರಂಭೋತ್ಸವ ಸಬ್ ಡಿವಿಜನ್ ಆಫೀಸರಾದ ಶ್ರೀ|| ರಾಮರಾಜೆ ಅರಸಿನವರು ನಡಸಿದರು. ೩೦ ಮಂದಿ ವಯಸ್ಕರು ಓದುಬರಹ ಕಲಿಯುತ್ತಿರುವರು. ಆರು ಏಳು ಮಂದಿ ಕಾಲೇಜು ವಿದ್ಯಾರ್ಥಿಗಳು ಶಿಕ್ಷಣ ಕಾರ್ಯದಲ್ಲಿ ನಿರತರಾಗಿರುವರು. ಶ್ರೀ|| ದೇವುಡು ನರಸಿಂಹ ಶಾಸ್ತ್ರಿಗಳ ಶಿಕ್ಷಣಕ್ರಮವನ್ನು ಅನುಸರಿಸುತ್ತಿರುವರೆಂದು ತಿಳಿಯಬಂದಿದೆ. ಕಳೆದ ೧೪-೪-೪೦ನೆಯ ದಿನ ಸ್ಥಳೀಯ ಸ್ಕೂಲ್ ಬೋರ್ಡ್ ಅಧಿಕಾರಿಗಳಾದ ಶ್ರೀ| ಬಿ. ಶಿವರಾಮಯ್ಯನವರು ಶಿಕ್ಷಣಶಾಲೆಗೆ ಭೇಟಿಯಿತ್ತು ಕಾರ್ಯಕಲಾಪಗಳನ್ನು ನೋಡಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರಲ್ಲದೆ ಶಿಕ್ಷಣ ಕಾರ್ಯ ಯಶಸ್ವಿಯಾಗಿ ನಡೆಯಲು ತಕ್ಕ ಸಲಹೆಗಳನ್ನಿತ್ತರು.

**ವಿಜ್ಞಾನ ವಿಷಯದ ಭಾಷಣಗಳು**

ನಂಜನಗೂಡಿನ ವಕೀಲರಾದ ಶ್ರೀ|| ಬಿ. ಎಂ. ಶಿವರಾಮಯ್ಯನವರು ಮೈಸೂರು ವಿದ್ಯಾಭ್ಯಾಸ ಇಲಾಖೆಯ ಆಶ್ರಯದಲ್ಲಿ ೧೬–೧೮ನೆಯ ತಾರೀಖು ಗೊರೂರು ಅಕ್ಷರ ಶಿಬಿರದಲ್ಲಿ ವಿಜ್ಞಾನ ವಿಷಯವಾಗಿ ಕನ್ನಡದಲ್ಲಿ ಭಾಷಣ ಮಾಡಿದರು. ೧೯ ಮತ್ತು ೨೦ನೆಯ ತಾರೀಖುಗಳಲ್ಲಿ ತುಮಕೂರಿನಲ್ಲೂ ೨೩ರಿಂದ ೨೬ನೆಯ ತಾರೀಖಿನ ವರೆಗೆ ಕ್ಲೋಸ್‌ಪೇಟೆ ಮತ್ತು ಬಿಡದಿ ಮುಂತಾದ ಗ್ರಾಮಗಳಲ್ಲೂ ಉಪನ್ಯಾಸಗಳನ್ನು ಮಾಡುವರು.

**ಗೊರೂರು : ಅಕ್ಷರ ಪ್ರಚಾರ ಶಿಬಿರ**

ಕರ್ನಾಟಕ ಸಂಘ, ಗೊರೂರು ಮತ್ತು ಮೈಸೂರು ಗ್ರಾಮ ಸೇವಾ ಸಂಘಗಳ ಆಶ್ರಯದಲ್ಲಿ ಮೇಲ್ಕಂಡ ಶಿಬಿರ ಏಪ್ರಿಲ್ ೧೬ನೆಯ ತಾರೀಖು ಹಾಸನದ ಜಿಲ್ಲಾಧಿಕಾರಿಗಳಾದ ಶ್ರೀ|| ಟಿ. ರಾಮಯ್ಯನವರ ಅಧ್ಯಕ್ಷತೆಯಲ್ಲಿ ಆರಂಭವಾಗಿ ಈ ತಿಂಗಳೂ ಮುಂದಿನ ತಿಂಗಳೂ ನಡೆಯುವುದು. ಮೊದಲ ದಿನ ಶ್ರೀ|| ದೇವುಡು ನರಸಿಂಹ ಶಾಸ್ತ್ರಿಗಳೂ ಬಿ. ಎಂ. ಶಿವರಾಮಯ್ಯನವರೂ ಭಾಷಣವನ್ನು ಮಾಡಿದರು. ಸರಸ್ವತೀ ಭಂಡಾರದ ಪ್ರಾರಂಭೋತ್ಸವವೂ ನಡೆಯಿತು. ೧೬, ೧೮, ೧೯ನೆಯ ತಾರೀಖುಗಳು ಶ್ರೀಗಳಾದ ನಂ. ಶಿವರಾಮ ಶಾಸ್ತ್ರಿ, ತೀ. ನಂ. ಶ್ರೀಕಂಠಯ್ಯ, ಬಿ. ಎಂ. ಶಿವರಾಮಯ್ಯ, ಎಸ್. ಕೆ. ರಾಜಂ ಇವರುಗಳ ಭಾಷಣಗಳೂ, ಮಕ್ಕಳಿಗೆ ಸಿನಿಮಾ ಪ್ರದರ್ಶನಗಳೂ ನಡೆದುವು. ೨೦ ಮತ್ತು ೨೧ನೆಯ ತಾರೀಖುಗಳು ಶ್ರೀ|| ಕೃಷ್ಣಯ್ಯಂಗಾರ್ಯರು ರೈತನ ಏಳಿಗೆ ಎಂಬ ವಿಷಯವಾಗಿ ಭಾಷಣಮಾಡುವರು.

೪೭—೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೨೭

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಏಪ್ರಿಲ್ ೨೬, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ಕನ್ನಡ ನಾಟಕಗಳು

### ಬೆಳಗಾಂವಿ ಸಾಹಿತ್ಯ ಸಮ್ಮೇಳನದ ನಾಟ್ಯಗೋಷ್ಠಿಯ ಸ್ವಾಗತಾಧ್ಯಕ್ಷರಾದ ಪ್ರೊ|| ವಿ. ಜಿ. ಕುಲಕರ್ಣಿಯವರ ಭಾಷಣ

(೨)

ನಾಟಕಕಾರನಿಗಾಗಲೀ ಇನ್ನು ಬೇರೆ ಯಾವ ಕಲಾ ಶಿಲ್ಪಿಗೇ ಆಗಲೀ ನಿರ್ಬಂಧಗಳನ್ನು ಹಾಕಲು ಯತ್ನಿಸುವುದು ಅಧಿಕಪ್ರಸಂಗವೆಂದು ನನಗೆ ಗೊತ್ತಿದೆಯಾದರೂ, "ನಿರಂಕುಶಾಃ ಕವಯಃ" ಎಂಬ ಮಾತನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತಿರುವೆನಾದರೂ, ಸಾಮಾನ್ಯ ಜನರ ಪ್ರತಿನಿಧಿಯಾಗಿ ಈ ಕೆಳಗಿನ ಕೆಲವು ಸೂಚನೆಗಳನ್ನು ನಮ್ಮ ನಾಟಕಕಾರರ ಅವಗಾಹನೆಗೆ ತರಲಿಚ್ಛಿಸುತ್ತೇನೆ.

(೧) ತೀರ ಚಿಕ್ಕ ನಾಟಕಗಳಿಂದ ನಮ್ಮ ಜನರಿಗೆ ತೃಪ್ತಿಯಿಲ್ಲ. ಆದುದರಿಂದ ನಾಟಕಗಳು ಸುಮಾರು ಮೂರು ಮೂರೂವರೆ ತಾಸುಗಳವರೆಗಾದರೂ ನಡೆಯಬೇಕು.

(೨) ನಾಟಕದಲ್ಲಿ ಒಂದು ಕಥೆಯಿರಬೇಕು; ಏನಾದರೂ ಕ್ರಿಯೆ ನಡೆಯಬೇಕು. ಕೇವಲ ವಾಗ್ವಾದದಿಂದಲೇ ತುಂಬಿ ವಾಗ್ವಾದದಲ್ಲಿಯೇ ಕೊನೆಗಾಣಬಾರದು.

(೩) ಬುದ್ಧಿಗಿಂತ ಭಾವಕ್ಕೆ, ಚಾತುರ್ಯಕ್ಕಿಂತ ಮಾನವಸ್ವಭಾವಕ್ಕೆ ನಾಟಕಗಳಲ್ಲಿ ಪ್ರಾಧಾನ್ಯವಿರಬೇಕು.

(೪) ರಾಜರಾಣಿಯರ ಕಥೆಗಳಲ್ಲಿಯೂ ಪುರಾಣದ ಪ್ರಸಂಗಗಳಲ್ಲಿಯೂ ನಮ್ಮ ಜನರ ಆಸ್ಥೆ ಇನ್ನೂ ಕಡಮೆಯಾಗಿಲ್ಲ. ಆದ್ದರಿಂದ ಇಂಥ ಪ್ರಸಂಗಗಳನ್ನು ಸಹಾನುಭೂತಿಯಿಂದ ಚಿತ್ರಿಸುವ ನಾಟಕಗಳೂ ಬೇಕು.

(೫) ಅನುಚಿತವೆನಿಸದ ರೀತಿಯಲ್ಲಿ ಸಂಗೀತವನ್ನೂ ನೃತ್ಯವನ್ನೂ ನಾಟಕಗಳಲ್ಲಿ ಬೆರಸಬಹುದು.

ಮೇಲೆ ಕಾಣಿಸಿದ ಸೂಚನೆಗಳನ್ನು ಅನುಸರಿಸಿ ಬರೆದ ನಾಟಕಗಳೂ ಕಲಾದೃಷ್ಟಿಯಿಂದ ಒಳ್ಳೆಯವಾಗಿರಲಿಕ್ಕೆ ಶಕ್ಯವಿದೆ. ನಾಟಕಕಾರನು ಸಮಾಜ ಮೊದಲಾದ ವಿಷಯಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನೂ ತತ್ತ್ವಗಳನ್ನೂ ಇಂತಹ ನಾಟಕಗಳಲ್ಲಿಯೂ ಸಾರಬಹುದು. ಕೇವಲ ಸಾಮಾನ್ಯರ ಒಲವನ್ನು ನೋಡಿಕೊಂಡು ಕಲೆಯ ಕೊಲೆಯನ್ನೂ ಸದಭಿರುಚಿಯ ಕೇಡನ್ನೂ ಮಾಡಬೇಕೆಂದು ನಾನು ಹೇಳುವುದಿಲ್ಲ. ಇಂತಹ ಕೀಳಾದ ಕೆಲಸ ಇಲ್ಲಿಯವರೆಗೆ ಬಹಳವಾಗಿ ನಡೆದು ನಮ್ಮ ರಂಗಭೂಮಿಯನ್ನೇ ಹಾಳುಮಾಡಿದೆ ಎಂಬ ಮಾತು ನಿಚ್ಚಳವಾಗಿದೆ. ಆದರೆ ನಾಟಕಗಳು ಕೇವಲ ಕಲಿತಂಥವರ, ಅದರಲ್ಲಿಯೂ ಇಂಗ್ಲಿಷ್ ಕಲಿತಂಥವರ ಸೊತ್ತಾಗಿ ಪರಿಣಮಿಸಬಾರದು. ಸಾಹಿತ್ಯದ ವಿವಿಧಾಂಗಗಳಲ್ಲಿ ನಾಟಕವೂ ಪಂಡಿತರಿಗೂ ಪಾಮರರಿಗೂ ಕೂಡಿಯೇ ರಂಜನೆಗೊಳಿಸುವ ಶಕ್ತಿಯುಳ್ಳದ್ದೆಂದು ನಾವು ಲಕ್ಷ್ಯದಲ್ಲಿಡಬೇಕು.

ಇತ್ತೀಚೆಗೆ ಕರ್ನಾಟಕದಲ್ಲಿ ಮಾತ್ರವಲ್ಲದೆ ಉಳಿದ ಪ್ರಾಂತಗಳಲ್ಲಿಯೂ ರಂಗಭೂಮಿಯ ಮೇಲೆ ಒಂದು ಪ್ರಬಲವಾದ ಆಘಾತ ಬಂದೊದಗಿದೆ. ಅದಾವುದೆಂದರೆ ವಾಕ್ಪಟಗಳು. ರಂಗಭೂಮಿಯ ಪ್ರಗತಿಯಾದ ಮಹಾರಾಷ್ಟ್ರದಲ್ಲಿಯೂ ಇತ್ತೀಚೆಗೆ ನಾಟಕಗಳ ಪ್ರಯೋಗಗಳೇ ಕಡಮೆಯಾಗಿವೆ; ನಾಟಕಕಂಪನಿಗಳೂ ತೀರ ವಿರಳವಾಗಹತ್ತಿವೆ. ನಮ್ಮ ನಾಡಿನಲ್ಲಿಯೂ ನಾಟಕ ಮಂಡಲಿಗಳು ಮುಗ್ಗಿಹೋಗಿವೆ. ನಮ್ಮ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮರಾಠಿ, ಹಿಂದಿ, ಉರ್ದು, ಇಂಗ್ಲಿಷು, ತೆಲುಗು, ತಮಿಳು ವಾಕ್ಪಟಗಳ ಪ್ರಾಬಲ್ಯವೇ ಪ್ರಾಬಲ್ಯ. ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿಯ ಜನರು ತಮ್ಮ ಭಾಷೆಯ ವಾಕ್ಪಟಗಳನ್ನಾದರೂ ನೋಡುತ್ತಾರೆ. ಆದರೆ ನಮ್ಮ ನುಡಿಯಲ್ಲಿ ವಾಕ್ಪಟಗಳೇ ಇಲ್ಲವೆಂದರೂ ಸಲ್ಲುವುದು. ಇದ್ದ ಬಿದ್ದ ಒಂದೆರಡು ಚಿತ್ರಪಟಗಳೂ ಈಗ ಹಳಸಿಹೋಗಿವೆ. ಆದುದರಿಂದ ಉತ್ತಮ ತರಗತಿಯ ವಾಕ್ಪಟಗಳು ನಿರ್ಮಾಣವಾಗುವುದಕ್ಕೆ ನಾವೆಲ್ಲರೂ ಪ್ರೋತ್ಸಾಹವನ್ನು ಕೊಡುವುದು ಯೋಗ್ಯವೂ ಆವಶ್ಯಕವೂ ಆಗಿದ್ದರೂ, ನಾಟಕಗಳ ಸ್ಥಾನವನ್ನು ವಾಕ್ಪಟಗಳು ಎಂದಿಗೂ ಆಕ್ರಮಿಸಲಾರವೆಂಬುದನ್ನು ನಾವು ಮರೆಯಕೂಡದು.

ನಾಟ್ಯಪ್ರಯೋಗಗಳಲ್ಲಿ ನಟರಲ್ಲಿಯೂ ಸಾಮಾಜಿಕರಲ್ಲಿಯೂ, ಎಂದರೆ ಪ್ರೇಕ್ಷಕರಲ್ಲಿಯೂ ಒಂದು ನಿಕಟವಾದ ಸಂಬಂಧವುಂಟಾಗುತ್ತದೆ. ಈ ಎರಡು ವರ್ಗಗಳಲ್ಲಿ ಪರಸ್ಪರ ಪರಿಣಾಮವುಂಟಾಗಿ, ನಾಟಕ ಒಂದು ದಿವ್ಯ ರಸಸೃಷ್ಟಿಯಾಗುವುದು. ಕುಶಲನಾದ ನಟನು ಒಂದೇ ಪಾತ್ರವನ್ನು ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ರೀತಿಯಾಗಿ ಅಭಿನಯಿಸಬಹುದು. ಅದು ಕೇವಲ ಯಾಂತ್ರಿಕವಾಗಿಬಿಡುತ್ತದೆ. ಯಂತ್ರಜಾಲದಲ್ಲಿ ಸಿಲುಕಿ ಧ್ವನಿಯೂ ಆಕಾರಗಳೂ ಏನೋ ಒಂದು ವಿಕೃತಿಯನ್ನು ಹೊಂದುತ್ತವೆ. ಯಂತ್ರಪ್ರಧಾನವಾದ ಈ ಯುಗದಲ್ಲಿ ಇಂತಹ ಯಾಂತ್ರಿಕ ತಮಾಷೆಗಳೂ ಬೇಕೆಂದು ಇಟ್ಟುಕೊಂಡರೂ, ನಾಟಕಗಳಿಂದ ದೊರೆಯುವ ಶ್ರೇಷ್ಠ ತರಗತಿಯ ರಸಾನುಭೂತಿಯೂ ಆನಂದವೂ ಗಳಿಗೆಯ ಮೋಜಿನ ವಾಕ್ಪಟಗಳಿಂದ ಎಂದೂ ಸಿಕ್ಕಲಾರವು. ಇಂಗ್ಲಂಡು ಮೊದಲಾದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಾಕ್ಪಟಗಳು ಬಹಳಮಟ್ಟಿಗೆ ಪ್ರಚುರವಾಗಿದ್ದರೂ ನಮ್ಮ ದೇಶದಲ್ಲಿ ಆದಂತೆ ನಾಟಕಗಳ ಉಚ್ಚಾಟನೆಯಾಗಿಲ್ಲ. ಹೀಗಾಗುವುದಕ್ಕೆ ನಮ್ಮ ದೇಶದ ನಿಕೃಷ್ಟ ಆರ್ಥಿಕ ಪರಿಸ್ಥಿತಿಯ ಹಾಗೂ ರಸಿಕತೆಯ ಕೊರತೆಯೂ, ಜನರ ಮನಸ್ಸನ್ನು ಹಿಡಿಯುವ ನಾಟಕಗಳ ಅಭಾವವೂ ನಾಟ್ಯಪ್ರಯೋಗಗಳಲ್ಲಿ ಕಾಣಬರುವ ಕಲಾಹೀನತೆಯೂ ಕಾರ್ಪಣ್ಯವೂ ಕಾರಣಗಳಾಗಿರಬೇಕು.

## ಇಂದಿನ ಕವಿಗಳನ್ನು ಕುರಿತು

(ಪಿ. ಇ. ಎನ್. ಪತ್ರಿಕೆಯಿಂದ)

ಕಳೆದ ವರ್ಷದ ಡಿಸೆಂಬರ್ ೩೦ರ 'ಟೈಮ್ಸ್' ಪತ್ರಿಕೆಯ 'ಲಿಟರೆರಿ ಸಪ್ಲಿಮೆಂಟ್' (ಸಾಹಿತ್ಯ ಸಂಚಿಕೆ) ಸಂಪಾದಕೀಯ ಲೇಖನದಲ್ಲಿ ಇಂದಿನ ಕವಿಗಳನ್ನು ಕುರಿತು ಒಂದು ಪ್ರಶ್ನೆ ಯಿದೆ. ಪ್ರಪಂಚವನ್ನು ಮುತ್ತುವ, ಬೆದರಿಕೆ ಹಾಕುತ್ತಿರುವ ಹೊಸ ಅಂಧಕಾರ ಯುಗದೆದುರು ಕವಿಗಳು ಏನು ಮಾಡಬಲ್ಲರು ಎಂಬುದೇ ಆ ಪ್ರಶ್ನೆ.

ಕವಿಗಳು ಉದಾಸೀನರಾದರೂ ಸರಿಯೆ, ನಿರಾಶೆಗೊಂಡರೂ ಸರಿಯೆ, ರಾಜಕೀಯ ಸೂತ್ರಗಳಲ್ಲಿ ವಿಮೋಚನೆ ಹುಡುಕತೊಡಗಿದರೂ ಸರಿಯೆ ಅಂಧಕಾರ ಯುಗದ ಪ್ರಾಪ್ತಿ ಖಂಡಿತ.

ಈಗಿನ ಹೋರಾಟದಲ್ಲಿ ನಿರ್ಮಾಣಶಕ್ತಿಯನ್ನು ಎಚ್ಚರಗೊಳಿಸುವ ಹೊಸತನವಿಲ್ಲ; ಕವಿತೆ ಇನ್ನೂ ೧೯೧೪–೧೮ರ ಯುದ್ಧದ ನೆನಪಿನಿಂದಲೆ ತುಂಬಿದೆ. ಈ ಶತಮಾನದ ಮೊದಲ ೨೫ ವರ್ಷಗಳಲ್ಲಿ, ಪ್ರಪಂಚದ ಹಳೆಯ ವ್ಯವಸ್ಥೆಯ ಸ್ಥಾನದಲ್ಲಿ ಯಾವ ಹೊಸ ವ್ಯವಸ್ಥೆ ಬಂದು ನೆಲಸಬೇಕೆಂಬ ಬಗೆಗೆ ಕವಿತೆ ಯಾವದೂ ಸ್ಪಷ್ಟ ಕಲ್ಪನೆಯನ್ನು ಬೆಳಸಿಲ್ಲ. ಹಿಂದಿನ ಸ್ಥಿತಿಯೇ ಮತ್ತೆ ಮುಖವಿಕ್ಕುತ್ತಿರುವ ಈ ಸಂದರ್ಭದಲ್ಲಿ ಕವಿಗಳಾದವರು, ಅಂಧಕಾರಯುಗದ ಪ್ರಾರಂಭವನ್ನಲ್ಲ, ಆದರೆ ಹೊಸ ಹುಟ್ಟಿನ (Renaissance) ಮುಂಬೆಳಕನ್ನು ಕಾಣಲು ಸಾಧ್ಯವಿಲ್ಲವೆ? ಹೊಸತಾದ, ಹೆಚ್ಚು ಸೊಗಸಾದ ವ್ಯವಸ್ಥೆಯ ಹುಟ್ಟಿನ ಕರೆ ಹಾಡಲು ಸಾಧ್ಯವಿಲ್ಲವೆ?

ಹೊಸ ಕವಿತೆಯ ಚೆಲುವು ಅದರ ಸತ್ಯತೆಯಲ್ಲಿರುವುದು; ಅದು ಗಂಭೀರವಾಗಿರುವುದು, ಖಂಡಿತವಾಗಿರುವುದು, ಕಠೋರವಾಗಿರುವುದು—ಏಕೆಂದರೆ ಅದು ದುಷ್ಟತಮವಾದದ್ದನ್ನು ತತ್ಪರವಾಗಿ ಸಮೀಕ್ಷಿಸಬೇಕಾಗುತ್ತದೆ; ಆದರೆ ಅದು ಕ್ಷಣಾಂತರದ, ಸಂಕಟಕರ ಸತ್ಯಾಂಶಗಳನ್ನು ಸರ್ವವ್ಯಾಪಿಯಾದ ಭಾಷೆಯಲ್ಲಿ ಸಾರುವುದು.

## ಕಾದಂಬರಿಕಾರರ ಹೊಣೆ

ಇಂಗ್ಲಿಷ್ ಕಾದಂಬರಿಕಾರಳಾದ ಆ್ಯನ್‌ಬ್ರಿಜ್ ಎಂಬಾಕೆ ಈಚೆಗೆ ಲಂಡನ್ನಿನಲ್ಲಿ ಮಾತನಾಡುತ್ತ, ಪ್ರಪಂಚದ ಬೇರೆ ಬೇರೆ ಜನಾಂಗಗಳು ಒಂದನ್ನೊಂದು ಅರಿತುಕೊಳ್ಳುವಂತೆ ಮಾಡುವ ಕಾರ್ಯದಲ್ಲಿ ಕಾದಂಬರಿಕಾರರ ಹೊಣೆಯ ವಿಷಯವೆತ್ತಿ ಹೀಗೆ ಹೇಳಿದರು:

ಅನೇಕ ಜನ ಸಾಮಾನ್ಯವಾಗಿ ಪ್ರತಿಯೊಂದು ವಿಷಯವಾಗಿಯೂ ತಮ್ಮ ಅಭಿಪ್ರಾಯ ಇಟ್ಟುಕೊಳ್ಳುವಾಗ ಅದನ್ನು (ರೇಡಿಯೊ, ವೃತ್ತಪತ್ರಿಕೆ, ಸಿನಿಮಾ ಇವುಗಳ ಜೊತೆಗೆ) ಕಾದಂಬರಿಗಳಿಂದಲೂ ಗ್ರಹಿಸುತ್ತಾರೆ; ಆದ್ದರಿಂದ ಈ ಭಾಗದಲ್ಲಿ ಬರಹಗಾರನ ಹೊಣೆ ಈಗ ಬಹು ಮುಖ್ಯತೆಯುಳ್ಳದ್ದಾಗಿದೆ. ತನ್ನ ನಾಡಿನವರ ವಿಚಾರವಾಗಿ ಬರೆಯುವ ಚಿತ್ರ ಪ್ರಾಮಾಣಿಕತೆಯಿಂದ ಕೂಡಿದ್ದಾಗಿಯೂ ಯಥಾರ್ಥವಾಗಿಯೂ ಇರಬೇಕು. ಇತರ ದೇಶಗಳ ವಿಚಾರವಾಗಿ ಬರೆಯುವ ಬರಹಗಾರನಾದರೊ, ಸಹಾನುಭೂತಿಯಿಂದ ಅರಿತುಕೊಳ್ಳುವವನಾಗಿಯೂ ಸೂಕ್ಷ್ಮಪರಿಶೀಲನೆಯುಳ್ಳವನಾಗಿಯೂ ಇರಬೇಕು. ಜನಾಂಗಗಳ ಪರಸ್ಪರಾವಲಂಬನೆ ಹೆಚ್ಚುತ್ತಿರುವ ಈ ಕಾಲದಲ್ಲಿ, ಪರಸ್ಪರ ಸೌಹಾರ್ದವನ್ನು ಬೆಳಸುವ ಕೆಲಸದಲ್ಲಿ ಕಾದಂಬರಿಕಾರನ ಹೊಣೆ ಎಂದಿಗಿಂತ ಹೆಚ್ಚಾಗಿದೆ.

—ಎಂ. ವಿ. ಸೀ.

---

## ಪರಿಷತ್ತಿನ ಕಾರ್ಯಕಲಾಪಗಳ ಪ್ರಶಂಸೆ

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಏಕೀಕರಣದ ಬಗ್ಗೆ ಸಾಹಿತ್ಯ ಪರಿಷತ್ತು ಎರಡು ಮೂರು ವರ್ಷಗಳಿಂದ ವಿಶೇಷವಾಗಿ ದುಡಿಯುತ್ತಿದೆ. ಅದರ ಉಪಾಧ್ಯಕ್ಷರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ನಾಡ ಎಂಟೂ ಮೂಲೆಗಳನ್ನು ಪ್ರತಿವರ್ಷ ಸಂಚರಿಸುತ್ತಿದ್ದು, ತಮ್ಮ ಮೃದು ಮಧುರವಾದ ಭಾಷಣದಿಂದ ಹೊಸ ಹುರುಪನ್ನು ತುಂಬಿಸುತ್ತಿದ್ದು, ಕನ್ನಡಿಗರಲ್ಲಿ ಒಂದು ಬಗೆಯ ಎಚ್ಚರವನ್ನು ಹುಟ್ಟಿಸಿದ್ದಾರೆಂದರೆ ತಪ್ಪಾಗಲಾರದು. ಸಾಹಿತ್ಯ ಪರಿಷತ್ತಿನ ಪ್ರಾಂತಸಮಿತಿಗಳು ಬೇರೆಬೇರೆ ಭಾಗದಲ್ಲಿದ್ದು ಈ ಬಗ್ಗೆ ಈಗ ಹಗಲಿರುಳೆನ್ನದೆ ದುಡಿಯುವದು ಕಂಡುಬರುತ್ತಿದೆ. ಉತ್ತರ ಕರ್ನಾಟಕ, ದಕ್ಷಿಣ ಕನ್ನಡ ಹಾಗೂ ನಮ್ಮ ನಾಡ ಬೇರೆ ಬೇರೆ ಭಾಗಗಳಲ್ಲಿ ಸುಗ್ಗಿಯ ಹಬ್ಬ (ವಸಂತ ಸಾಹಿತ್ಯೋತ್ಸವ) ಈ ಸಾರೆ ವಿಶೇಷ ಉತ್ಸಾಹದಿಂದ ಜರುಗಿತೆಂದು ಹೇಳಲು ಆನಂದವೆನಿಸುತ್ತದೆ. ಇದೇ ರೀತಿ ನಾಡಹಬ್ಬ ಹಾಗೂ ಸುಗ್ಗಿಯ ಹಬ್ಬಗಳು ಯಶಸ್ವಿಯಾಗಿ ಜರುಗಿ ಕನ್ನಡ ಸಾಂಸ್ಕೃತಿಕ ಏಕೀಕರಣ ಆದಷ್ಟು ಬೇಗನೆ ಆದರೆ ಕನ್ನಡ ನಾಡ ಪ್ರಾಂತೀಕರಣದ ಗುರಿ ಬೇಗನೆ ಸಿದ್ಧಿಸಬಹುದು. ಹೀಗೆ ಗುರಿಯನ್ನು ಸಾಧಿಸಬೇಕಾದರೆ ಎಲ್ಲ ಭಾಗಗಳ ಕನ್ನಡಿಗರು ಒಂದಾಗಿ ಪ್ರತಿವರ್ಷ ಇಂಥ ಹಬ್ಬಗಳನ್ನು ಆಚರಿಸಿ ತಾವೆಲ್ಲ ಒಂದೆಂಬುದನ್ನು ತಿಳಿದುಕೊಂಡು ಬೇರೆ ಬೇರೆ ಭಾಗದ ಕನ್ನಡಿಗರೊಡನೆ ವಿಶೇಷ ಹೊಕ್ಕು ಬಳಕೆಯನ್ನು ಮಾಡಿಕೊಳ್ಳಬೇಕು ಮುಂದಾದರೂ ಹಾಗೆಯೆ ಆಗಿ ಈ ಪ್ರಯತ್ನಗಳು ಯಶಸ್ವಿಯಾಗಿ "ಕನ್ನಡವಲ್ಲದೆ ಅನ್ಯಗತಿಯೆನಗಿಲ್ಲ" ಎಂಬ ಶ್ರೀ॥ ಬೆನಗಲ್ ರಾಮರಾಯರ ಅಮೋಘ ವಾಣಿಯಂತೆ ನಡೆದುಕೊಂಡರೆ ಮಾತ್ರ ಕನ್ನಡಿಗರಲ್ಲಿ ನವಚೈತನ್ಯ ಬರಬಹುದು. ಉಳಿದ ಪ್ರಾಂತಗಳಿಗೆ ಸರಿಸಮಾನವಾಗಿ ಮೆರೆಯಬಹುದು. ಇಲ್ಲವಾದರೆ ಶಕ್ಯವಿಲ್ಲವೆಂಬುದನ್ನು ನಾವು ನಮ್ಮವರಿಗೆ (ಕನ್ನಡಿಗರಿಗೆ) ಸಕಾಲದಲ್ಲಿ ಹೇಳಬಯಸುವೆವು.

ಇದೇ ಜೂನ ತಿಂಗಳಲ್ಲಿ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬ ಜರುಗಲಿದೆ. ಆ ಬಗ್ಗೆ ವಿಶೇಷ ಹಣದ ಸಹಾಯ ಅತ್ಯಗತ್ಯವೆಂಬುದನ್ನು ಪ್ರತಿಯೊಬ್ಬ ಕನ್ನಡಿಗನೂ ಮೊಟ್ಟಮೊದಲು ತಿಳಿದುಕೊಳ್ಳುವದು ಕರ್ತವ್ಯವಿದೆ. ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು ಕನ್ನಡನಾಡು, ನುಡಿ, ಸಂಸ್ಕೃತಿ, ಹಾಗು ಭಾಷಾ ಏಳ್ಗೆಗೆ ಹಗಲಿರುಳು ದುಡಿದು ಹಣ್ಣಾದ ಶ್ರೀಯವರು ಕನ್ನಡ ನಾಡನ್ನೆಲ್ಲ ಸಂಚರಿಸುತ್ತಿರುವರು. ಈ ಸಂದರ್ಭದಲ್ಲಿ ನಮ್ಮ ನಾಡ ಎಲ್ಲ ಸಂಘ ಸಂಸ್ಥೆಗಳು ಹಾಗು ವರ್ತಕರು ಅವರ ಪ್ರಯತ್ನಕ್ಕೆ ವಿಶೇಷ ನೆರವಾಗಿ ತಮ್ಮ ಪ್ರಾಂತೀಯ ಸಾಂಸ್ಕೃತಿಕ ಸಂಸ್ಥೆಯೆನಿಸಿದ ಸಾಹಿತ್ಯ ಪರಿಷತ್ತು ಚಿರಾಯುವಾಗಿ ಬಾಳಿ ಚಿರಕೀರ್ತಿಗೆ ಪಾತ್ರವಾಗುವಂತೆ ಮಾಡಬೇಕು. ಕೇವಲ ಸಂಕುಚಿತ ದೃಷ್ಟಿಯಿಂದ ತಮ್ಮ ಸ್ವಾರ್ಥದ ಕಡೆಗೆ ಹೆಚ್ಚೆಚ್ಚಾಗಿ ನೋಡಹತ್ತಿ ಕನ್ನಡಿಗರಿಗೆ ಈ ಬಗೆಯ ದುರ್ದೆಸೆಯಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ನಾಗರಿಕ ಜನಾಂಗಗಳೊಡನೆ ಸರಿಸಮಾನವಾಗಿ ಮುಂದೊತ್ತಲು ಹವಣಿಸುತ್ತಿರುವ ಕನ್ನಡಿಗರು ತಮ್ಮಲ್ಲಿರುವ ಪರಸ್ಪರ ಅಸೂಯೆ ಹಾಗು ಮಾತ್ಸರ್ಯವನ್ನು ನೂಕಿ ಕಳೆದು ಬೆಳ್ಳಿಯ ಹಬ್ಬವು ಯಶಸ್ವಿಯಾಗಿ ಜರುಗುವಂತೆ ಮಾಡಿ ತಮ್ಮಲ್ಲಿ ಅಚಲವಾದ ಒಕ್ಕಟ್ಟನ್ನು ಉಂಟುಮಾಡಿಕೊಳ್ಳಬೇಕೆಂದು ಕನ್ನಡಿಗರೆಲ್ಲರಿಗೆ ವಿನಂತಿಸುತ್ತೇವೆ.

—'ಕರ್ಮವೀರ'

---

## ಏಕಾಂಕ ನಾಟಕ ವಿಚಾರಕೂಟ

### ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ

[ಕಳೆದ ವಾರ ಕನ್ನಡ ನುಡಿಯಲ್ಲಿ ವಿಚಾರಕೂಟದ ಕಾರ್ಯಕಲಾಪಗಳ ವರದಿಯನ್ನು ಕೊಡಲಾಗಿತ್ತಷ್ಟೆ. ಈ ಸಂಚಿಕೆಯಲ್ಲಿ ಮೂರು ಭಾಷಣಗಳ ಸಾರಾಂಶವನ್ನು ಕೊಟ್ಟಿದೆ.—ಸಂ.]

#### ಇಂಗ್ಲಿಷ್ ಏಕಾಂಕ ನಾಟಕ

ಮೊದಲು ಶ್ರೀ॥ ಕೆ. ಅನಂತರಾಮಯ್ಯ, ಎಂ.ಎ. ಅವರು ಇಂಗ್ಲಿಷ್ ಭಾಷೆಯಲ್ಲಿ ಏಕಾಂಕ ನಾಟಕದ ಹುಟ್ಟು, ಬೆಳವಣಿಗೆ ಮತ್ತು ಸ್ವರೂಪವನ್ನು ವಿವೇಚಿಸಿದರು.

ಇಂಗ್ಲಿಷ್ ಏಕಾಂಕ ನಾಟಕಗಳು ಇಪ್ಪತ್ತನೆಯ ಶತಮಾನದಲ್ಲಿ ಹೆಚ್ಚಾಗಿ ಹುಟ್ಟಿದುವು. ಅದಕ್ಕೆ ಹಿಂದೆ ಮತಸಂಬಂಧವಾದ ಸಣ್ಣ ಸಣ್ಣ ದೃಶ್ಯಗಳು ಪ್ರಚಾರದಲ್ಲಿದ್ದುವು. ವಿನೋದಕ್ಕಾಗಿ, ವಿಡಂಬನೆಗಾಗಿ ಬರೆದ ದೃಶ್ಯಗಳೂ ಇದ್ದುವು. ಆದರೆ ಏಕಾಂಕ ನಾಟಕಕ್ಕೆ ಕಲೆಯ ಸ್ವರೂಪ ಬಂದದ್ದು ಈ ಶತಮಾನದಲ್ಲಿ. ಪಾಶ್ಚಾತ್ಯರ ಮನಸ್ಸು ಸಣ್ಣ ಕತೆಗಳಿಗೆ ಒಲಿದಂತೆ ಸಣ್ಣ ನಾಟಕಗಳಿಗೂ ಒಲಿದುವು. ಇದಕ್ಕೆ ಕಾರಣ ಅವರ ತುಂಬು ಚಟುವಟಿಕೆಯ ಜೀವನಕ್ರಮದಲ್ಲಿ ದೊಡ್ಡ ದೊಡ್ಡ ನಾಟಕ ಕಾದಂಬರಿಗಳನ್ನು ಓದಲು ಬಿಡುವು ಇಲ್ಲದಂತಾದುದು. ಇಂದಿನ ವೈಜ್ಞಾನಿಕರು ಭಿನ್ನ ಭಿನ್ನ ರುಚಿಯ ಜನರ ಸೌಕರ್ಯಕ್ಕೆ ಉಪಯೋಗಕ್ಕೆ ಹೇಗೆ ಅನೇಕಾನೇಕ ಸಣ್ಣ ಸಣ್ಣ ವಸ್ತುಗಳನ್ನು ಒದಗಿಸಿ ಕೊಡು

ತ್ತಿರುವರೊ ಹಾಗೆಯೇ ಸಾಹಿತಿಗಳೂ ಓದಲು ಹೆಚ್ಚಾಗಿ ಬಿಡುವಿಲ್ಲದವರ ಆನಂದಕ್ಕಾಗಿ ಸಣ್ಣ ಸಣ್ಣ ಕತೆಗಳನ್ನೂ ನಾಟಕಗಳನ್ನೂ ರಚಿಸುತ್ತಾ ಬಂದರು. ಬರಹಗಾರರ ಸಂಸ್ಕಾರ, ಪ್ರತಿಭೆಗಳಿಗೆ ತಕ್ಕಂತೆ ಅವರ ಕೃತಿಗಳೂ ಚೆಲುವಾಗಿ, ರಸವತ್ತಾಗಿ ಮೂಡುತ್ತಾ ಬಂದುವು.

ಕಾಳಿದಾಸ ಮಹಾಕವಿ ಹೇಳುವಂತೆ ದೊಡ್ಡ ನಾಟಕ ಭಿನ್ನ ಭಿನ್ನ ರುಚಿಗಳು ಉಳ್ಳವರಿಗಾಗಿ ಮಾಡಿದ ಒಂದು ದೊಡ್ಡ 'ಸಮಾರಾಧನೆ' ಇದ್ದಂತೆ. ಏಕಾಂಕ ನಾಟಕ 'ಉಪಾಹಾರ'ದಂತೆ. ಸಮಾರಾಧನೆಯಿಂದ ದೊರೆಯುವ ತೃಪ್ತಿ ಉಪಾಹಾರಗಳಿಂದಲೂ ದೊರೆಯುತ್ತದೆ. ದೊಡ್ಡ ನಾಟಕಗಳಲ್ಲಿ ಬರಹಗಾರ ಎಷ್ಟು ಜಾಣ್ಮೆಯನ್ನು ತೋರುತ್ತಾನೆಯೋ ಅಷ್ಟೇ ಜಾಣ್ಮೆಯನ್ನು ಏಕಾಂಕ ನಾಟಕದಲ್ಲೂ ತೋರಿಸಬೇಕಾಗುತ್ತದೆ. ಅದರಲ್ಲೂ ಸಣ್ಣ ಪ್ರಪಂಚದಲ್ಲಿ ಅವನ ಕೈವಾಡ ನಡೆಯಬೇಕಾದ್ದರಿಂದ ಪಾತ್ರನಿರೂಪಣೆ, ಸನ್ನಿವೇಶ, ಮಾನವ ಜೀವನದ ತಿರುಳು ಮುಂತಾದುವವನ್ನು ಬಹಳ ಸೂಕ್ಷ್ಮವಾಗಿ ಚಿತ್ರಿಸಬೇಕಾಗುತ್ತದೆ.

ಏಕಾಂಕ ನಾಟಕದಿಂದ ದೊರಕುವ ಆನಂದವನ್ನು ಎಲ್ಲರೂ ಬಹಳ ಸುಲಭವಾಗಿ ಪಡೆಯುವ ಮಾರ್ಗ ಒಂದಿದೆ. ಸಾಹಿತಿಗಳು ಬರೆದ ಏಕಾಂಕ ನಾಟಕಗಳನ್ನು ಎಲ್ಲರೂ ನೋಡಿ ಆನಂದಿಸಬಹುದು. ನಾಟಕಕ್ಕೆ ಹೋಗಲು ಸಾಧ್ಯವಿಲ್ಲದವರು ಮನೆಯಲ್ಲಿ ತಾವೇ ಏಕಾಂಕ ನಾಟಕಗಳನ್ನು ಆಡಬಹುದು. ಮಕ್ಕಳಿಂದ ಆಡಿಸಬಹುದು. ಇದು ಹೊಸದಾಗಿ ಕಾಣಬಹುದು; ಆದರೆ ಅಸಾಧ್ಯವಲ್ಲ. ಸಾಹಿತಿಗಳು ಬರೆದ ಏಕಾಂಕ ನಾಟಕಗಳಾದರೆ ಆಡಲು ಹೆಚ್ಚು ಶಿಕ್ಷಣ ಪಡೆಯಬೇಕು, ಹೆಚ್ಚು ಜನ ಬೇಕು. ನಮ್ಮಲ್ಲಿ ಹೇಗಿದ್ದರೂ ನವರಾತ್ರಿ ಮುಂತಾದ ಹಬ್ಬ ಹರಿದಿನಗಳಲ್ಲಿ ಮಕ್ಕಳಿಗೂ ಹೆಂಗಸರಿಗೂ 'ವೇಷ', 'ಅಲಂಕಾರ' ಹಾಕುವ ರೂಢಿ ಇದೆ. ಇಬ್ಬರಿಗೆ ಅಲಂಕಾರ ಹಾಕಿ, ಅವರು ಮಾತನಾಡಿದರೆ ಅದು ಒಂದು ಸಣ್ಣ ದೃಶ್ಯವಾಗುವುದು. ಪ್ರಸಿದ್ಧ ಕಾವ್ಯಗಳಿಂದ ಸಂವಾದ ಭಾಗಗಳನ್ನು ಆಯ್ದುಕೊಂಡು, ಅವನ್ನು ತಿಳಿಗನ್ನಡ ಗದ್ಯಕ್ಕೆ ತಿರುಗಿಸಿದರೆ, ಮನೆಯಲ್ಲಿ ಆಡುವ ಏಕಾಂಕ ನಾಟಕಕ್ಕೆ ಸಂವಾದ ದೊರೆತಂತಾಯಿತು. ಹೀಗೆ ಹಬ್ಬ ಹರಿದಿನಗಳಲ್ಲಿ ನೆರೆಹೊರೆಯವರನ್ನು ಕರೆದು ದೃಶ್ಯಗಳನ್ನು ಆಡಿ ತೋರಿಸಿ ಸಂತೋಷಪಡಿಸಬಹುದು. ಇದರಿಂದ ಜನರಿಗೆ ಸಾಹಿತಿಗಳು ಬರೆದ ಏಕಾಂಕ ನಾಟಕಗಳೆಗೆ ಹೆಚ್ಚಿನ ಪ್ರೋತ್ಸಾಹ ದೊರೆಯುವುದು.

## ಸಂಸ್ಕೃತ ಏಕಾಂಕ ನಾಟಕ

ಬಳಿಕ ಶ್ರೀ॥ ಎಲ್. ಗುಂಡಪ್ಪ, ಎಂ.ಎ., ಅವರು ಸಂಸ್ಕೃತದಲ್ಲಿನ ಏಕಾಂಕ ನಾಟಕಗಳ ವಿಚಾರವನ್ನು ಕುರಿತು ಭಾಷಣಮಾಡಿದರು:

ಸಂಸ್ಕೃತದಲ್ಲಿ ಏಕಾಂಕ ನಾಟಕಗಳುಂಟು. ಮುಖ್ಯ ರೂಪಕಗಳು ೧೦. ಉಪರೂಪಕಗಳು ೧೮. ಈ ೨೮ ಬಗೆಯ ರೂಪಕಗಳಲ್ಲಿ ಅರ್ಧಕ್ಕಿಂತ ಹೆಚ್ಚು ಬಗೆಯವು ಏಕಾಂಕ ನಾಟಕಗಳು. ಭಾಣ, ಪ್ರಹಸನ, ವ್ಯಾಯೋಗ, ಅಂಕ, ಪ್ರೇಕ್ಷಣಿಕ ಮೊದಲಾದ ಬೇಕಾದಷ್ಟು ಪ್ರಭೇದಗಳಿದ್ದರೂ ಅದೇಕೋ ಈ ಸಣ್ಣ ಏಕಾಂಕ ನಾಟಕಗಳು ತಕ್ಕಷ್ಟು ಬೆಳೆಯಲಿಲ್ಲ. ಹಾಸ್ಯಪ್ರಧಾನವಾದ ಪ್ರಹಸನ ಮಾತ್ರ ತಕ್ಕಮಟ್ಟಿಗೆ ಬೆಳೆಯಿತು. ಸಮಾಜದ ಕುಂದುಕೊರತೆಗಳನ್ನು ಎತ್ತಿ ತೋರಿಸಿ, ನಗುಬರುವಂತೆ ಚಿತ್ರಿಸಿರುವುದನ್ನು ಈ ಪ್ರಹಸನಗಳಲ್ಲಿ ಕಾಣಬಹುದು. ಸಾಮಾನ್ಯವಾಗಿ ಇವುಗಳಲ್ಲಿ ಅಶ್ಲೀಲವಾದ ಶೃಂಗಾರವೇ ಹೆಚ್ಚು. ಸಮಾಜದ ಕೆಲವು ಕೀಳು ದರ್ಜೆಯವರನ್ನು ಮಾತ್ರ ಇಲ್ಲಿ ಕಾಣಬಹುದು. ಇವುಗಳಲ್ಲಿ ಕಾಣಬರುವುದನ್ನೇ ಹಿಂದಿನಕಾಲದ ಸಮಾಜದ ಪೂರ್ಣ ಚಿತ್ರವೆನ್ನಲಾಗುವುದಿಲ್ಲ. ಹಲ್ಲೀಶ ಮೊದಲಾದ ಕೆಲವು ರೂಪಕಗಳಲ್ಲಿ ಹಾಡು, ಕುಣಿತಗಳಿಗೆ ಹೆಚ್ಚು ಪ್ರಾಧಾನ್ಯ. ಕೆಲವು ಏಕಾಂಕ ನಾಟಕಗಳಲ್ಲಿ ಒಂದೇ ಪಾತ್ರ. ಒಬ್ಬನೇ ನಟ ಆಕಾಶಭಾಷಿತಗಳ ಮೂಲಕ ಹಲವು ಸಂಗತಿಗಳನ್ನು ತಾನೇ ಅಭಿನಯಿಸುತ್ತಾನೆ. ಮತ್ತೆ ಕೆಲವುಗಳಲ್ಲಿ ಇಬ್ಬರು ಮೂವರು, ಮತ್ತು ಹೆಚ್ಚು ಜನರೂ ಇರುತ್ತಾರೆ. ವಸ್ತು ಪ್ರಸಿದ್ಧವಾದ ಪೌರಾಣಿಕ ವಿಷಯವುಂಟು. ಕವಿಕಲ್ಪನೆಯದೂ ಉಂಟು. ಪ್ರಸಿದ್ಧ ವಿಷಯವಾದರೂ ಕಲ್ಪನೆಯಿಂದ ಬೆಳಸಿರುವುದೂ ಉಂಟು.

ಸಂಸ್ಕೃತ ಏಕಾಂಕ ನಾಟಕಗಳನ್ನು ಆಡುವುದಿರಲಿ ಓದುವುದೂ ಬಹು ವಿರಳ. ವಿದ್ಯಾರ್ಥಿಗಳ ಪಾಠಕ್ಕೂ ಇವನ್ನು ಇಡುತ್ತಿಲ್ಲ. ಅಚ್ಚಾಗಿರುವುವೂ ಬಹು ಕಡಮೆ. ಹೀಗಾಗಿ ಪ್ರಾಚ್ಯ ಕೋಶಾಗಾರಗಳಲ್ಲಿ ಇವನ್ನು ಹುಡುಕಬೇಕಾಗಿದೆ.

ಈಗ ದೊರೆತಿರುವ ಏಕಾಂಕ ನಾಟಕಗಳೆಲ್ಲೆಲ್ಲ ಭಾಸನ ನಾಟಕಗಳೇ ಅತ್ಯುತ್ತಮವಾದುವು. 'ಮಧ್ಯಮ ವ್ಯಾಯೋಗ', 'ದೂತವಾಕ್ಯ' ಮೊದಲಾದ ಐದು ಏಕಾಂಕ ನಾಟಕಗಳು ಎಲ್ಲ ಲಕ್ಷಣಗಳಿಗೂ ಹೊಂದುವಂಥವು. ರಂಗದಲ್ಲಿ ಅಭಿನಯಿಸಿದರೆ ವಿಶೇಷ ಕಳೆಕಟ್ಟುವಂಥವು. ಅತಿ ಪ್ರಾಚೀನವಾಗಿ ಸರ್ವೋತ್ಕೃಷ್ಟವಾಗಿರುವ ಏಕಾಂಕ ನಾಟಕಗಳಿವು. ಈಗಿನ ನಮಗೆ ಇವು ಒಳ್ಳೆಯ ಮೇಲ್ಪಂಕ್ತಿಯಾಗಿವೆ.

## ಕನ್ನಡ ಏಕಾಂಕ ನಾಟಕ

ಆಮೇಲೆ ಶ್ರೀ॥ ಎಂ. ವಿ. ಸೀತಾರಾಮಯ್ಯ, ಎಂ.ಎ., ಅವರು ಕನ್ನಡದಲ್ಲಿನ ಏಕಾಂಕ ನಾಟಕಗಳನ್ನು ಕುರಿತು ಮಾತನಾಡಿದರು:

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿಕೊಂಡಿರುವ ಹೊಸ ಹೊಸ ಪ್ರಕಾರಗಳಲ್ಲಿ ಏಕಾಂಕ ನಾಟಕವೂ ಒಂದು. ಇದಕ್ಕೆ ಹೆಚ್ಚಾಗಿ ಇಂಗ್ಲಿಷ್ ಏಕಾಂಕ ನಾಟಕಗಳಿಂದ ಬಂದ ಸ್ಫೂರ್ತಿ ಪ್ರಭಾವಗಳೇ ಕಾರಣ. ಸುಮಾರು ೨೦-೨೫ ವರ್ಷಗಳ ಹಿಂದೆ ಕನ್ನಡ ಏಕಾಂಕ ನಾಟಕ ಸೃಷ್ಟಿಗೆ ಮೊದಲಾಯಿತೆನ್ನಬಹುದು. ಮೈಸೂರಿನಲ್ಲಿ 'ಶ್ರೀನಿವಾಸ'ರೂ ಮಂಗಳೂರಿನಲ್ಲಿ ಶ್ರೀ॥ ಎಂ. ಎನ್. ಕಾಮತ್ ಅವರೂ ಮೊದಲು ಏಕಾಂಕ ನಾಟಕ ರಚನೆಗೆ ಕೈಹಾಕಿದರೆನ್ನಬಹುದು. ಇವರಿಬ್ಬರ ಮತ್ತು ಅಲ್ಲಿಂದೀಚೆಗೆ ಶ್ರೀಗಳಾದ ಕೈಲಾಸಂ, ಬೇಂದ್ರೆ, ಪುಟ್ಟಪ್ಪ, ರಾಜರತ್ನಂ, ಕಾರಂತ್, ಜಾಗಿರದಾರ್ ಮೊದಲಾದವರ ಕೃತಿಗಳು ಕನ್ನಡ ಏಕಾಂಕ ನಾಟಕದ ಭವ್ಯವಾದ ಕಟ್ಟಡಕ್ಕೆ ತಳಪಾಯಗಳಾಗಿ ಪರಿಣಮಿಸಿದುವು. ಇವರಲ್ಲಿ ಕೆಲವರು ತಮ್ಮ ಕೃತಿಗಳನ್ನು ಏಕಾಂಕ ನಾಟಕಗಳೆಂದು ಕರೆಯದಿದ್ದರೂ, ಕೆಲವು ಸಂದರ್ಭಗಳಲ್ಲಿ ಒಂದಕ್ಕಿಂತ ಹೆಚ್ಚಾದ ದೃಶ್ಯಗಳನ್ನು ಅವು ಒಳಗೊಂಡಿದ್ದರೂ, ಕಾಲಕ್ರಿಯೆ ಭಾವಗಳ ಏಕಮುಖತೆಯ ದೃಷ್ಟಿಯಿಂದ ಅವನ್ನು ಏಕಾಂಕ ನಾಟಕಗಳೆಂದು ಕರೆಯಬಹುದಾಗಿದೆ.

ಕನ್ನಡ ಏಕಾಂಕ ನಾಟಕದ ಲಕ್ಷಣವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇಂಗ್ಲಿಷ್ ಏಕಾಂಕ ನಾಟಕದ ಲಕ್ಷಣಗಳೇ ಅದಕ್ಕೂ ಅನ್ವಯಿಸುವುವು. ಮುಖ್ಯವಾಗಿ ಏಕಾಂಕ ನಾಟಕದಲ್ಲಿ ಹೆಚ್ಚು ಪಾತ್ರಗಳಿರದೆ ಕೆಲವು ಪಾತ್ರಗಳು ಮಾತ್ರ ಇರಬೇಕು; ಒಂದೇ ಸನ್ನಿವೇಶವನ್ನು ಚಿತ್ರಿಸಬೇಕು; ಅದರಿಂದ ನೀತಿ ಹೊರಟರೂ ಹೊರಡಬಹುದು. ಆದರೆ ಆನಂದವೇ ಮುಖ್ಯ ಉದ್ದೇಶವಾಗಿರಬೇಕು. ಮತ್ತು ಅದು ೨೦-೩೦ ನಿಮಿಷಗಳಲ್ಲಿ ಮುಗಿಯಬೇಕು. ಸಣ್ಣ ಕತೆ ಕಾದಂಬರಿಯ ಒಂದು ಅಧ್ಯಾಯ ಹೇಗೆ ಅಲ್ಲವೋ ಹಾಗೆಯೇ ಏಕಾಂಕ ನಾಟಕ ದೊಡ್ಡ ನಾಟಕದ ಒಂದು ಅಂಕ ಅಥವಾ ದೃಶ್ಯವಲ್ಲ. ಅದು ಚಿಕ್ಕದಾಗಿದ್ದು ಸ್ವಸಂಪೂರ್ಣವಾಗಿರುವುದು.

ಇದುವರೆಗೆ ಕನ್ನಡದಲ್ಲಿ ನೂರಾರು ಏಕಾಂಕ ನಾಟಕಗಳು ಪ್ರಕಟವಾಗಿವೆ. ಇವುಗಳಲ್ಲಿ ಬಹಳ ಸಂಖ್ಯೆಯ ನಾಟಕಗಳು ಅನೇಕ ಪತ್ರಿಕೆಗಳಲ್ಲಿ ಚೆದರಿಹೋಗಿವೆ. ಈಗಾಗಲೇ ೯-೧೦ ಏಕಾಂಕ ನಾಟಕಗಳ ಸಂಗ್ರಹಗಳು ಹೊರಬಿದ್ದಿವೆ. ಏಕಾಂಕ ನಾಟಕಗಳ ಬೆಳವಣಿಗೆಗೆ ಪತ್ರಿಕೆಗಳು ತುಂಬ ಪ್ರೋತ್ಸಾಹ ಕೊಟ್ಟಿವೆ.

ಇಷ್ಟು ಅಲ್ಪಾವಧಿಯಲ್ಲಿ ಇಷ್ಟು ದೊಡ್ಡ ಬೆಳೆ ಆಗಿರುವುದು ಆಶಾಜನಕವೆನ್ನಬೇಕು. ಇಷ್ಟುಮಟ್ಟಿಗೆ ಬೆಳೆದಿರುವ ಕನ್ನಡ ಏಕಾಂಕ ನಾಟಕವನ್ನು ವಿಭಜನೆ ಮಾಡಿದರೆ ಸ್ಥೂಲವಾಗಿ ಕೆಲವು ವಿಭಾಗಗಳು ಕಂಡುಬರುತ್ತವೆ: ಪದ್ಯದಲ್ಲಿ, ಮುಖ್ಯವಾಗಿ ಸರಳ ರಗಳೆಯಲ್ಲಿ, ಬರೆದ ನಾಟಕಗಳು ಒಂದು ಗುಂಪು; ಎರಡನೆಯದು ಗೀತನಾಟಕ (Operetta); ಮೂರನೆಯ ಗುಂಪು ಸಾಮಾಜಿಕ ನಾಟಕಗಳು. ವಸ್ತುದೃಷ್ಟಿಯಿಂದ, ರಾಮಾಯಣ ಮಹಾಭಾರತ ಪುರಾಣಾದಿಗಳಿಂದ ವಸ್ತುಗಳನ್ನೂ ಸನ್ನಿವೇಶಗಳನ್ನೂ ಆಧಾರವಾಗಿಟ್ಟುಕೊಂಡು ಬರೆದ ನಾಟಕಗಳು, ಐತಿಹಾಸಿಕ ಘಟನೆಗಳನ್ನು ಆಧಾರವಾಗಿಟ್ಟುಕೊಂಡು ಬರೆದ ನಾಟಕಗಳು, ಸಮಾಜ ಜೀವನವನ್ನು ಚಿತ್ರಿಸುವ ನಾಟಕಗಳು — ಹೀಗೆ ವಿಭಜನೆ ಮಾಡಬಹುದು. ಪುರಾಣಾದಿಗಳಿಂದ ಆಯ್ದ ವಸ್ತುಗಳನ್ನು ಚಿತ್ರಿಸುವಾಗ ಲೇಖಕರು ಒಂದು ಹೊಸ ದೃಷ್ಟಿಯಿಂದ ಪರಿಶೀಲಿಸಿ, ಅಪೂರ್ವ ಪಾತ್ರಗಳನ್ನು ನಿರ್ಮಿಸಿರುತ್ತಾರೆ. ಐತಿಹಾಸಿಕ ವಸ್ತುಗಳನ್ನು ಚಿತ್ರಿಸುವ ಏಕಾಂಕ ನಾಟಕಗಳು ಹೆಚ್ಚಾಗಿ ಹುಟ್ಟಿಲ್ಲ. ಉಳಿದುವೆಲ್ಲಾ ಸಮಾಜ ಜೀವನವನ್ನು ಚಿತ್ರಿಸುವ ನಾಟಕಗಳು. ಸಾಮಾಜಿಕ ನಾಟಕಗಳಲ್ಲಿ, ಉದ್ದೇಶಗಳನ್ನು ಉಳ್ಳ ನಾಟಕಗಳು, ಪಾತ್ರ ಪರಿಚಯ ಮಾಡಿಕೊಡುವ ನಾಟಕಗಳು, ಸಮಾಜ ಜೀವನವನ್ನು ವಿಮರ್ಶೆ ಮಾಡುವ ಅಥವಾ ವಿಡಂಬನೆಮಾಡುವ ನಾಟಕಗಳು—ಹೀಗೆ ಬೇರೆ ಬೇರೆ ಬಗೆಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಎಲ್ಲ ಸಾಮಾಜಿಕ ನಾಟಕಗಳಲ್ಲೂ ಹೆಚ್ಚಾಗಿಯೋ ಮಿತಿಯಾಗಿಯೋ ಹಾಸ್ಯ ಕಂಡುಬರುತ್ತದೆ. ಏಕಾಂಕ ನಾಟಕಗಳು ನಗೆಯನ್ನು ಮುಂದುಮಾಡಿಕೊಂಡು, ನಲಿವುಕೊಟ್ಟು, ಆ ಮೂಲಕ ಸಮಾಜವನ್ನು ತಿದ್ದುವ ಕೆಲಸಕ್ಕೆ ಹೊರಟಿವೆ. ಇದು ಸ್ತುತ್ಯವಾದದ್ದು. ಈ ರೀತಿ ಸಾಮಾಜಿಕ ನಾಟಕಗಳನ್ನು ಉಪಯುಕ್ತವಾದ ರೀತಿಯಲ್ಲಿ ಬರೆಯುತ್ತಿರುವವರಲ್ಲಿ ಶ್ರೀಗಳಾದ ಎಂ. ಎನ್. ಕಾಮತ್, ಬೇಂದ್ರೆ, ಕಾರಂತ್, ಶ್ರೀರಂಗ, ಮುಗಳಿ, ಕೆ. ಗೋಪಾಲಕೃಷ್ಣರಾವ್, ಅ. ನ. ಕೃಷ್ಣರಾವ್, ಕೆ. ಶಂಕರಭಟ್ಟ, ಕೆ. ರಾಜಾರಾವ್ ಮುಂತಾದವರು ನನ್ನ ನೆನಪಿಗೆ ಬರುತ್ತಾರೆ. ಇನ್ನೂ ಎಷ್ಟೋ ಮಂದಿಯ ಹೆಸರುಗಳನ್ನು ಹೇಳಲು ಇಚ್ಛೆಯಿದ್ದರೂ ಪ್ರಕೃತದಲ್ಲಿ ಸಾಧ್ಯವಿಲ್ಲವಾಗಿದೆ. ಹೆಂಗಸರಲ್ಲಿ "ತಪಸ್ವಿನಿ"ಯ ಕರ್ತರಾದ "ಭಾರತಿ" (ಶ್ರೀಮತಿ ತಿರುಮಲೆ ರಾಜಮ್ಮ) ಯವರೊಬ್ಬರೆ ನನ್ನ ಗಮನಕ್ಕೆ ಬಂದಿರುವವರು.

ಮಕ್ಕಳಿಗಾಗಿಯೂ ಕೆಲವು ಏಕಾಂಕ ನಾಟಕಗಳು ಹೊರಬಿದ್ದಿವೆ; ಆದರೆ ಈ ಭಾಗದಲ್ಲಿ ನಡೆದಿರುವ ಕೆಲಸ ಸಾಲದು. ಏಕಾಂಕ ನಾಟಕಕರ್ತರು ಮಕ್ಕಳ ಮನಸ್ಸಿಗೆ ಹಿಡಿಯುವ, ಅವರು ಅಭಿನಯಿಸಲು ತಕ್ಕ ನಾಟಕಗಳನ್ನು ಬರೆಯಬೇಕೆಂದು ವಿಜ್ಞಾಪಿಸಿಕೊಳ್ಳುತ್ತೇನೆ.

ಕನ್ನಡ ಏಕಾಂಕ ನಾಟಕಕ್ಕೆ ಉತ್ತಮ ಭವಿಷ್ಯತ್ತಿದೆ. ಅದು ಬೆಳೆಯಬೇಕಾದರೆ ಅಖಿಲ ಕರ್ನಾಟಕ ಏಕಾಂಕ ನಾಟಕ ಸ್ಪರ್ಧೆಗಳನ್ನು ಏರ್ಪಡಿಸಬೇಕು. ಏಕಾಂಕ ನಾಟಕ ಬರೆಯುವ ನನ್ನ ಕಿರಿಯ ಸೋದರರು ಏಕಾಂಕ ನಾಟಕದ ಜೀವಾಳಗಳಾದ ಹೋರಾಟ, ಕುತೂಹಲಗಳನ್ನು ಕೆರಳಿಸುವಂಥ ಮತ್ತು ತೀವ್ರಗತಿಯುಳ್ಳ ಹಿತಮಿತವಾದ ಮಾತುಗಾರಿಕೆ, ಮುಂದೇನಾಗುತ್ತೆ ಮುಂದೇನಾಗುತ್ತೆ ಎಂಬ ಕುತೂಹಲ ಹುಟ್ಟಿಸಿ ಅಪರೀಕ್ಷಿತವಾದ ರೀತಿಯಲ್ಲಿ ಕೊನೆಗೊಳ್ಳುವ ಕಥಾಸಂವಿಧಾನ, ಕೊಚ್ಚಿಕೊಂಡು ಹೋಗುವ ಭಾವ, ರಸ ಪ್ರವಾಹ—ಇವುಗಳ ಉತ್ಕರ್ಷದ ಕಡೆಗೆ ಗಮನಕೊಡಬೇಕು; ವಿಷಯ ವೈವಿಧ್ಯವನ್ನೂ ಬೆಳಸಿಕೊಳ್ಳಬೇಕು; ಘನವಾದ ಉದ್ದೇಶವನ್ನಿಟ್ಟುಕೊಂಡು, ಸಾಹಿತ್ಯ ಸೇವೆಯನ್ನೂ ತನ್ಮೂಲಕ ಸಮಾಜಸೇವೆಯನ್ನೂ ಮಾಡಬೇಕು.

---

## ಪರಿಷತ್ತಿನ ವ್ಯಾಸಂಗ ಗೋಷ್ಠಿ

ಬರುವ ಮೇ ತಿಂಗಳು ೩ ಮತ್ತು ೪ನೆಯ ತಾರೀಖು ಶುಕ್ರವಾರ ಶನಿವಾರ ಸಂಜೆ ೬ ಗಂಟೆಗೆ ಪರಿಷನ್ಮಂದಿರದಲ್ಲಿ, ಶ್ರೀ॥ ಎಂ. ಆರ್. ಶ್ರೀನಿವಾಸಮೂರ್ತಿಗಳು 'ಪ್ರಭುಲಿಂಗ ಲೀಲೆ'ಯ ವ್ಯಾಸಂಗ ನಡಸುವರು. ಸಾಹಿತ್ಯಾಭಿಮಾನಿಗಳೆಲ್ಲರಿಗೂ ಪ್ರವೇಶವುಂಟು.

### ಕನ್ನಡ ಕವಿ ಸೂಕ್ತಿ

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತಿಱಿಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ

ಸರಸತಿಯನಬಲೆಯಂ ಗೋಣ್
ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹನವನನಾರ್ ಮುಟ್ಟುವರೋ

—ರನ್ನ : ಅಜಿತನಾಥಪುರಾಣ



ಶುಕ್ರವಾರ, ಏಪ್ರಿಲ್ ೨೬, ೧೯೪೦

## ಕನ್ನಡ ಬಾನುಲಿ

ಆಕಾಶವಾಣಿಯ ರೂಪದಲ್ಲಿ ಹಗಲು, ರಾತ್ರಿ ದೇಶದ—ಪ್ರಪಂಚದ—ಬೇರೆ ಬೇರೆ ಭಾಗಗಳಿಂದ ತಿಳಿವಳಿಕೆಯೂ ವಿನೋದವೂ ನಾಡಿನಲ್ಲೆಲ್ಲ ಹಬ್ಬುತ್ತಿರುವುದು ಬಹು ಜನರಿಗೆ ಉಪಕಾರಮಾಡುತ್ತಿದೆ. ಈ ದೇಶದಲ್ಲಿ ಅಖಿಲ ಇಂಡಿಯ ರೇಡಿಯೊ ಸಂಸ್ಥೆಯವರು ಸರ್ಕಾರದ ಸಹಾಯದಿಂದ ಎಷ್ಟು ಕೆಲಸಗಳನ್ನು ಮಾಡಬಲ್ಲವರಾಗಿದ್ದಾರೆ ಎಂಬುದನ್ನು ದಿನವೂ ಬಾನುಲಿ ಕೇಳುವವರೆಲ್ಲರೂ ಬಲ್ಲರು. ಗಂಡಸರು, ಹೆಂಗಸರು, ಕಲೆಗಾರರು ರಾಜಕಾರಣ ಪಟುಗಳು, ಶಾಸ್ತ್ರಜ್ಞರು, ಕಾರ್ಯಕುಶಲರು, ಶಾಲೆಯ ಮಕ್ಕಳು, ಭಜನೆಯವರು, ಕೀರ್ತನೆಕಾರರು, ವ್ಯಾಪಾರ ಉದ್ಯೋಗಸ್ಥರು, ಹಳ್ಳಿಯ ಜನರು, ಎಲ್ಲರೂ ತಮಗೆ ತಿಳಿದಿರುವ ಸಂಗತಿಗಳನ್ನು ರೇಡಿಯೊ ಮೂಲಕ ಜಗತ್ತಿಗೆ ತಿಳಿಸಲು ಬೇರೆ ಬೇರೆ ಕೇಂದ್ರಗಳಲ್ಲಿ ಸೇರುತ್ತಾರೆ; ಮನೋರಂಜನೆಯನ್ನು ಮಾಡುತ್ತಾರೆ. ಎಲ್ಲಿ ಒಂದು ರೇಡಿಯೊ ಯಂತ್ರ ಇದ್ದರೆ—ವಿದ್ಯುತ್‌ಶಕ್ತಿಯ ಸಹಾಯವಿರುವೆಡೆಗಳಲ್ಲೆಲ್ಲ— ಈ ತಿಳಿವಳಿಕೆ ಮನೋರಂಜನೆಗಳ ಪ್ರಯೋಜನ ದೊರಕಬಲ್ಲದಾಗಿರುವುದು. ಮನೆ ಮಂದಿರಗಳ ಏಕಾಂತದಲ್ಲಿಯೂ ಸಂಸ್ಥೆಗಳಲ್ಲಿಯೂ ಉದ್ಯಾನಗಳಲ್ಲಿಯೂ ಮೆಲ್ಲಗೂ ಗಟ್ಟಿಯಾಗಿಯೂ ಬೇಕಾದಂತೆ ಈ ಸಂತೋಷ ಪಡೆಯಲಾಗುವುದು. ಇಂಡಿಯಾ ದೇಶವಲ್ಲಿ ಎಂಟು ಹತ್ತು ಕೇಂದ್ರಗಳಿಂದ ಈಗ ಈ ಸಂತೋಷವನ್ನು ಹಂಚುವ ಏರ್ಪಾಡಿದೆ. ಇನ್ನೂ ಕೆಲವು ಕಡೆ ಅದಕ್ಕಾಗಿ ಉದ್ಯಮ ನಡೆಯುತ್ತಿದೆ. ಈ ಕೇಂದ್ರಗಳಲ್ಲಿ ಸುಮಾರು ಎಲ್ಲ ಕಡೆಯಲ್ಲಿಯೂ ರಾಜಭಾಷೆಯಾದ ಇಂಗ್ಲಿಷಿನಲ್ಲಿ ಬೆಳಗ್ಗೆ, ಮಧ್ಯಾಹ್ನ, ಸಂಜೆ ತ್ರಿಕಾಲದಲ್ಲಿಯೂ ವರ್ತಮಾನಗಳೂ ಉಪನ್ಯಾಸಗಳೂ ಉಳ್ಳ ಕಾರ್ಯಕ್ರಮ ಗೊತ್ತಾಗಿ ಏರ್ಪಡುವುದು. ಜೊತೆಗೆ ಆಯಾ ಕಡೆಯ ಜನರಿಗೆ ರುಚಿಸುವ ಸಂಗೀತ ವಿನೋದಗಳು ಅಲ್ಲಿಂದ ಕಳಿಸಲ್ಪಡುವುವು. ಆಗೊಂದು ಸಲ ಈಗೊಂದು ಸಲ ಬೇರೊಂದು ಪ್ರಾಂತದ ಸಂಗೀತವನ್ನು ಏರ್ಪಡಿಸಿದರೂ ಬಹು ಭಾಗ ಆ ಪ್ರಾಂತಕ್ಕೆ ಮಾತ್ರ ಅರ್ಥವಾಗುವ ಮತ್ತು ಅಲ್ಲಿನ ಜನರನ್ನು ಒಲಿಸಬಲ್ಲ ಕಾರ್ಯಕಲಾಪವೇ ಹೆಚ್ಚಾಗಿ ರಚಿತವಾಗುವುದು ವಾಡಿಕೆ. ಮನುಷ್ಯವರ್ಗಕ್ಕೆಲ್ಲ ರುಚಿಸಬಹುದಾಗಿರುವ ಸಂಗೀತವೇ ಆಯಾ ಪ್ರಾಂತ ಭಾಷೆ, ಸಂಪ್ರದಾಯಕಿಳಲ್ಲಿ ನಡೆಯುವುದಾಗಿರುವಾಗ ಅಲ್ಲಿಂದ ಹೊರಡುವ ವರ್ತಮಾನಗಳ ಭಾಷೆಯೂ ಪ್ರಾಂತದಲ್ಲಿ ಬಳಕೆಯಲ್ಲಿರುವ ಮುಖ್ಯ ಭಾಷೆಯಾಗಿಯೇ ಇರುವುದು ಸಹಜ. ದೆಹಲಿಯಲ್ಲಿ ಉರ್ದು, ಕಲಕತ್ತಾದಲ್ಲಿ ಬಂಗಾಳಿ, ಬೊಂಬಾಯಲ್ಲಿ ಹಿಂದಿ-ಮರಾಠಿ, ಮದರಾಸಿನಲ್ಲಿ ತೆಲುಗು-ತಮಿಳು, ಮುಂತಾಗಿ ಈಗಾಗಲೆ ಎರಡು ಪ್ರಾಂತಭಾಷೆಗಳಲ್ಲಿ ಕೆಲಸಗಳು ನಡೆಯುತ್ತಿವೆ. (ಮದರಾಸಿನಲ್ಲಂತು ಬಾನುಲಿ ಕಳಿಸುವ ಯಂತ್ರಶಾಲೆಯಲ್ಲಿ ಯಂತ್ರದ ಆಕಡೆ ಈಕಡೆ ತೆಲುಗರು, ತಮಿಳರು ಕುಳಿತು ಕೊಂಡು ಪೈಪೋಟಿ ಮಾಡುತ್ತಿರುವರೊ ಎಂಬಂತೆ ವರ್ತಮಾನವನ್ನು ಕಳಿಸುವ ಕೆಲಸವನ್ನು ಹಂಚಿಕೊಳ್ಳುತ್ತಿದ್ದಾರೆ. ಶಕ್ತರಿಗೆ ಹುರುಡು ತಡೆಯುವುದು ; ಫಲಿಸುವುದು.)

ದೇಶಕ್ಕೆಲ್ಲ ಅರ್ಥವಾಗುವ ಇಂಗ್ಲಿಷಿನಂತಹ ದೇಶಭಾಷೆ ಒಂದು ವೇಳೆ ಇದ್ದಿದ್ದರೆ ಒಂದೇ ಸಂಗತಿಯನ್ನು ನಾಲ್ಕಾರು ಭಾಷೆಗಳಲ್ಲಿ ಕೇಳಿ ಬೇಸರಪಡುವ ಅಗತ್ಯವಿರುತ್ತಿರಲಿಲ್ಲ. ಹಿಂದುಸ್ಥಾನಿಯೊ ಜನ ಬೇರೆ ಯಾವುದಾದರುವೊ ರಾಷ್ಟ್ರಭಾಷೆ ಆದಾಗ ಈ ಕಷ್ಟ ಸ್ವಲ್ಪಮಟ್ಟಿಗೆ ತಪ್ಪೀತೇನೊ. ಆದರೆ ಆ ಕಾಲ ಇನ್ನೂ ದೂರವಾಗಿರುವಂತೆ ಕಾಣುತ್ತಿದೆ. ಆ ಸಮಯ ಬರುವವರೆಗೂ ಅಲಸರಾಗಿ ಕುಳಿತಿರುವುದು ಯಾರಿಗೂ ಸಲ್ಲದಾದುದರಿಂದ ಈಗಿನಂತಹ ಏರ್ಪಾಡೇ ಇನ್ನೂ ಸ್ವಲ್ಪಕಾಲ ನಡೆಯುತ್ತ ಹೋಗಬೇಕು.

ಕನ್ನಡ ಪ್ರಾಂತದಲ್ಲಿ ಈ ಪ್ರಯೋಜನ ಸಮರ್ಪಕವಾಗಿ ದೊರೆಯುವಂತೆ ಕನ್ನಡದಲ್ಲಿಯೂ ಕಾರ್ಯಕ್ರಮಗಳನ್ನು ಏರ್ಪಡಿಸಿ ನಮ್ಮ ಜನ ವರ್ಗಕ್ಕೂ ಉಪಕಾರಮಾಡಿರೆಂದು ದೆಹಲಿಯ ಅಧಿಕಾರಿಗಳಿಗೂ ಪ್ರಾಂತ ಕೇಂದ್ರಗಳಿಗೂ ಎಡಬಿಡದೆ ಮೊರೆಯಿಟ್ಟರೂ ಮೊರೆಗೆ ಮಾನ್ಯತೆ ದೊರೆಯಲಿಲ್ಲ. ಕನ್ನಡ ಹರಿದು ಹಂಚಿರುವ ಮದರಾಸು, ಬೊಂಬಾಯಿ ಸರಕಾರಗಳಲ್ಲಿ ಕನ್ನಡ ಜನಕ್ಕೆ ಯಾವ ಪ್ರಾಧಾನ್ಯವೂ ಇಲ್ಲ. ಹೀಗಿರುವಾಗ ಹೆಚ್ಚಿನ ಪ್ರಾಧಾನ್ಯ ಈ ವಿಷಯಕ್ಕೆ ಹೇಗೆ ದೊರಕಬೇಕು? ಆದ್ದರಿಂದ ಈಗಿಗೂ ನಮ್ಮ ಮೊರೆ ಮೊರೆಯಾಗಿಯೇ ಉಳಿಯಬೇಕಾಯಿತು. ಹೈದರಾಬಾದಿನಲ್ಲಿ ಗುಲ್ಬರ್ಗಾ ಕೇಂದ್ರದಲ್ಲೊಂದು ಕಡೆ ಕನ್ನಡದಲ್ಲಿಯೂ ಕಾರ್ಯಕ್ರಮ ಏರ್ಪಡುವುದೆಂದು ತಿಳಿದುಬಂದಿದೆಯಾದರೂ ಅದರ ಪ್ರಯೋಜನ ಇನ್ನೂ ಹುಟ್ಟಿ ಬೆಳೆಯಬೇಕಾಗಿದೆ. ಮೈಸೂರಲ್ಲಿ ಮೊನ್ನೆಮೊನ್ನೆಯವರೆಗೂ ನಡೆಯುತ್ತಿದ್ದ 'ಆಕಾಶವಾಣಿ' ಯಲ್ಲಿ ಕನ್ನಡಕ್ಕೆ ಸ್ಥಾನವಿತ್ತು. ಆದರೆ ದುರದೃಷ್ಟದಿಂದ ಅದು ಈಗ ನಿಂತುಹೋಗಿದೆ. ಯುದ್ಧ ಕಾಲದಲ್ಲಿ ಖಾಸಗಿ ಸಂಸ್ಥೆಗಳವರು ಆಕಾಶವಾಣಿ ಯಂತ್ರಗಳನ್ನು ಹೂಡುವುದಾಗಲಿ ನಡಸುವುದಾಗಲಿ ಶಕ್ಯವಾಗದೆ ಇರಬಹುದು. ಆದ್ದರಿಂದ ಎಲ್ಲಿಯೇ ಆಗಲಿ ಸರಕಾರದ ನೆರವು ಅಧಿಕಾರಗಳಿಗೆ ಒಳಪಟ್ಟೇ ಈ ವ್ಯವಸ್ಥೆ ನಡೆಯಬೇಕಾದೀತು. ಕರ್ನಾಟಕದಲ್ಲಿ ಒಂದು ಸರಕಾರ ಇಲ್ಲದ ಪ್ರಯುಕ್ತ ಸರಕಾರಗಳಿಗೆ ಮಾಡಿಕೊಳ್ಳುವ ಪ್ರಾರ್ಥನೆ ಇಂದಿನಂತೆಯೇ ಮುಂದೆಯೂ ಆದೀತು ಎನ್ನಿಸುವಷ್ಟು ನಿರುತ್ಸಾಹ ಅನೇಕರಿಗೆ ಉಂಟಾಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಕನ್ನಡ ಜನವರ್ಗ

ದಲ್ಲಿಯೂ ತಕ್ಕಷ್ಟು ಉತ್ಸಾಹ, ಸಾಹಸ, ಸ್ವಾಭಿಮಾನ, ಸಂಘಶಕ್ತಿ, ಸಂಘಪ್ರಯತ್ನ ಇಲ್ಲದಿರುವುದು ಈ ಸ್ಥಿತಿಗೆ ಬಹುಮಟ್ಟಿನ ಕಾರಣವಾಗಿದೆ. ಈ ಪ್ರಾಂತಕ್ಕೆ ಸೇರಿದ ಜನಕ್ಕೆ ಬೇರೊಂದರ ಮೇಲಿನ ಅಭಿಮಾನ ಹೆಚ್ಚಾಗಿರುವಂತೆ ಕಾಣುವುದೇ ಹೊರತು ತನ್ನ ಸತ್ವವನ್ನು ಕೆರಳಿಸಿಕೊಂಡು, ಅದರಿಂದ ವಿಶಿಷ್ಟವಾದ ಒಂದು ತೇಜೋಬಲವನ್ನೂ ಸ್ಥಾನಮಾನವನ್ನೂ ತನಗಾಗಿ ಗಳಿಸಿಕೊಳ್ಳಬೇಕು, ಭರತಖಂಡದ ಜೀವನದಲ್ಲಿ ಅವನ್ನು ಪ್ರತಿಷ್ಠೆಗೊಳಿಸಿ ಮೆರಸಬೇಕು ಎಂಬ ಮಮತೆ ಇನ್ನೂ ಉಂಟಾಗಲಿಲ್ಲ. ಅದನ್ನು ಸಾಧಿಸುವ ಪ್ರಯತ್ನವೇ ಈ ಪ್ರಾಂತದವರ ಮೊದಲ ಕೆಲಸವಾಗಿದೆ. ಅದಕ್ಕೆ ಸಹಾಯವಾಗುವಂತೆ ಒಂದು ಪ್ರಚಾರಕಾರ್ಯವೂ ಹಲವು ಬಗೆಯಲ್ಲಿ ಏರ್ಪಡುತ್ತಿರುವುದು ಅಲ್ಲಲ್ಲಿ ಕಾಣುತ್ತಿದ್ದರೂ ಮುಖ್ಯ ಕೇಂದ್ರವೊಂದರಿಂದ ರೇಡಿಯೊ ಪ್ರಚಾರ ನಡೆಯುವಂತೆ ಮಾಡಿದರೆ ಒಂದು ಹೆಚ್ಚಾದ ಪ್ರಭಾವ ಹರಡಿ ಜನಕ್ಕೆಲ್ಲ ತಿಳಿಯುವ ಒಂದು ಭಾಷೆಯಲ್ಲಿ ಬೆಳಗ್ಗಿನಿಂದ ರಾತ್ರಿಯವರೆಗೂ ಪ್ರಯೋಜನ ದೊರಕುವಂತಾಗುವುದು. ಹತ್ತು ವರುಷ ಹದಿನೈದು ವರುಷ ಶಾಲೆ ಕಾಲೇಜುಗಳಲ್ಲಿ ಅನ್ಯಭಾಷೆಗಳ ಮೂಲಕ ಕೊಡುವ ಶಿಕ್ಷಣದ ಪ್ರಯೋಜನವನ್ನೆಲ್ಲ ಅತ್ಯಲ್ಪಕಾಲದಲ್ಲಿ ಅತಿ ಸುಲಭವಾಗಿ ಜನಕ್ಕೆ ಮಾಡಿಕೊಟ್ಟಲ್ಲಿ ಅವರ ಮನಸ್ಸನ್ನು ಹಸನುಮಾಡಿ ಇಂದಿನ ಪ್ರಪಂಚಕ್ಕೆ ತಿದ್ದಿಕೊಳ್ಳುವ ಕೆಲಸ ನೆರವೇರುವುದು. ಈಗಿನಂತೆ ಕಾಯುತ್ತ ಕುಳಿತರೆ ಇಪ್ಪತ್ತನೇ ಶತಮಾನದಲ್ಲಿದ್ದೇವೆಂಬ ತಿಳಿವಳಿಕೆ ನಮ್ಮ ಜನಕ್ಕೆ ಬರುವುದರೊಳಗಾಗಿ ಈ ಶತಮಾನವೇ ಮುಗಿದುಹೋದೀತು. ಪ್ರಪಂಚ ಧಾವಿಸಿ ಮುಂದೋಡುತ್ತಿರುವಾಗ ಕಾಲವನ್ನು ಪೋಲುಮಾಡುವುದು ವಿವೇಕವಲ್ಲ. ನಮಗೆ ತೋರುತ್ತದೆ: ಕನ್ನಡ ದೇಶದ ಎಲ್ಲ ಮುಖ್ಯ ಪಟ್ಟಣಗಳಲ್ಲಿಯೂ ವಿದ್ಯುತ್‌ಶಕ್ತಿಯ ಸೌಕರ್ಯವಿದೆ. ಕೆಲವು ಕಡೆಯಂತೂ ಹಳ್ಳಿ ತಾಲ್ಲೂಕುಗಳಲ್ಲಿ ಕೂಡ ಈ ಅವಕಾಶ ಉಂಟಾಗಿದೆ. ಸರಕಾರಗಳವರೂ ಸ್ಥಳ ಸಂಸ್ಥೆಗಳವರೂ ಮಹಾಜನವರ್ಗಗಳವರೂ ಮನಸ್ಸುಮಾಡಿ ರೇಡಿಯೋ ಯಂತ್ರಗಳನ್ನು ಇಟ್ಟುಕೊಂಡರೆ ಈಗ ನೆಪ ಹೇಳುತ್ತಿರುವ ಅಖಿಲ ಇಂಡಿಯ ಸಂಸ್ಥೆಯವರೂ ನಮ್ಮಲ್ಲಿ ಹೆಚ್ಚು ಗೌರವ ತೋರಿಸಿಯಾರು; ತಾವಾಗಿ ಮುಂದೆ ಬಂದು ಕನ್ನಡ ಕಾರ್ಯಕ್ರಮಗಳನ್ನು ಏರ್ಪಡಿಸಿ ಈ ಜನವನ್ನೂ ತೃಪ್ತಿಪಡಿಸುವುದು ಯೋಗ್ಯವೆಂದು ತಿಳಿದಾರು.

ಇದು ಅವರಿಗೆ ಆಡುವ ಮಾತು; ನಮಗಾಗಿ ನಾವು ಮಾಡಿಕೊಳ್ಳಬೇಕಾದ ಕೆಲಸ ಮತ್ತೊಂದಿದೆ. ಕೋಟೆಗಳ ಕಟ್ಟಳೆ ಜನೋಪಯೋಗಕ್ಕಾಗಿ ವೆಚ್ಚ ಏರ್ಪಡುವ ಕನ್ನಡ ನಾಡಿನಲ್ಲಿ ಮೈಸೂರು ಬೆಂಗಳೂರುಗಳಲ್ಲಿಯೊ ಕನ್ನಡ ನಾಡಿನ ಬೇರೊಂದು ಮುಖ್ಯಕೇಂದ್ರದಲ್ಲಿಯೊ ಪ್ರಬಲವಾದ ಬಾನುಲಿಯ ಒಂದು ಯಂತ್ರಶಾಲೆಯನ್ನು ಸ್ಥಾಪಿಸಲು ಜನ ಶ್ರದ್ಧೆವಹಿಸಬೇಕು. ವಿಜ್ಞಾನ ಕಲಾಶಾಲೆಗಳೂ, ತಾತಾ ವಿಜ್ಞಾನ ಸಂಸ್ಥೆಯೂ ಇರುವ ಬೆಂಗಳೂರಿನಂತಹ ಪಟ್ಟಣದಲ್ಲಿ ಅಧಿಕ ಶಕ್ತಿಯ ಇಂಥ ಯಂತ್ರಶಾಲೆಯನ್ನು ಸ್ಥಾಪಿಸುವುದಕ್ಕೆ ಅತಿಶಯವಾದ ಸೌಲಭ್ಯವಿರುತ್ತದೆ. ಎಷ್ಟು ಬೇಗ ಈ ಕೆಲಸ ನೆರವೇರುತ್ತದೆಯೋ ಅಷ್ಟುಬೇಗ ದೇಶದ ಪ್ರಯೋಜನವನ್ನು ಹೆಚ್ಚಿಸುವ ಕಾರ್ಯ ಹೂಡಿದಂತಾಗುತ್ತದೆ. ಅಷ್ಟಾದರೆ ಸಾಲದು: ಅಂಥ ಕಾರ್ಯ ಏರ್ಪಟ್ಟಮೇಲೂ ಇಲ್ಲಿನ ಕಾರ್ಯಕಲಾಪಗಳಿಗೆಲ್ಲ ಬಹುಭಾಗ ಕನ್ನಡವನ್ನೇ ಬಳಸುವ ನೀತಿ ಅಗತ್ಯ. ಯಾವುದೇ ಕಾರಣದಿಂದಲಾಗಲಿ ಈ ಸಾಧನೆ ಆಗದೆ ಹೋದರೆ ಕನ್ನಡ ದೇಶಕ್ಕೆ ಇಂಥ ಕಾರ್ಯದ ಪರಮಪ್ರಯೋಜನ ದೊರೆಯದೆ ಹೋಗಬಹುದು. ಪ್ರಪಂಚದ ಜ್ಞಾನವನ್ನೆಲ್ಲ ತಂದು ನಮ್ಮ ಜನಕ್ಕೆ ಊಡಬೇಕು. ಎಲ್ಲ ಬಗೆಯ ಸಂತೋಷವನ್ನೂ ಶಕ್ತಿಸ್ಫೂರ್ತಿಗಳನ್ನೂ ಅದಕ್ಕೆ ಎರೆಯಬೇಕು. ಕನ್ನಡ ನಾಡಿನ ಯಾವ ಮೂಲೆಯಲ್ಲಿಯೇ ಜನ ಇರಲಿ ಅವರ ಕಾಯಶಕ್ತಿ, ಕಾರ್ಯಶಕ್ತಿ, ಮನಶ್ಶಕ್ತಿಗಳು ದಿನದಿನಕ್ಕೆ ಹೆಚ್ಚಿ ಕಳೆಗೊಳ್ಳಬೇಕು. ಕನ್ನಡ ನಾಡಿನ ತುಂಬ ಕಲೆ, ಶಾಸ್ತ್ರ ತಿಳಿದವರ ಸಂಖ್ಯೆ ಹೆಚ್ಚಿ ಅವರು ಮಾಡುವ ಕೆಲಸದ ಗುಣವೂ ಪ್ರಯೋಜನವೂ ಬೆಳೆದು ಅವು ದೇಶಕ್ಕೆಲ್ಲ ತಿಳಿಯುವಂತಾಗಿ ಅವುಗಳನ್ನು ತಿಳಿಯುವುದು ತಮಗೆ ಪ್ರಯೋಜನ ಸಂತೋಷ ಎಂದು ಭರತಖಂಡದ ಇತರ ಪ್ರಾಂತಗಳವರೂ ಹೊರಗಿನ ಸಮಸ್ತ ಪ್ರಪಂಚವೂ ಕಂಡುಕೊಳ್ಳುವಂತಾಗಬೇಕು. ಪ್ರಪಂಚದ ಭೂಪಟದ ಮೇಲೆ ಕನ್ನಡದೇಶವೊಂದಿದೆ, ಪ್ರಪಂಚದ ಜನವರ್ಗದಲ್ಲಿ ಕನ್ನಡ ವರ್ಗವೂ ಸತ್ವಯುತವಾಗಿದೆ ಎಂಬುದನ್ನು ಎಲ್ಲರೂ ಕಾಣುವ ಕಾಲ ಬೇಗ ಬರುವಂತೆ ಯಶಸ್ವಿಯಾಗಬೇಕು ಇಲ್ಲಿನ ಬಾಳು, ಅದನ್ನು ಮೆರಸುವ ನುಡಿ.

---

## ಕನ್ನಡ ಸಾಹಿತ್ಯ ಪರೀಕ್ಷೆಗಳು

### ೧೯೪೦

ಪರೀಕ್ಷೆಯ ದಿನಗಳು:—ಜೂನ್ ೧೪, ೧೫, ೧೬.

ತೆರ: ೨ನೆಯ ಪರೀಕ್ಷೆ ೧ ರೂ.

೩ ,, ,, ೨ ರೂ.

ಅಪೇಕ್ಷೆಪತ್ರಗಳನ್ನು ಕಳಿಸಲು ಕಡೆಯ ದಿನ: ಮೇ ೨೦

ಸೂಚನೆ: ಅಪೇಕ್ಷೆಪತ್ರಗಳನ್ನು ಪರಿಷತ್ತಿನ ಕಾರ್ಯದರ್ಶಿಗಳಿಂದಾಗಲಿ ಆಯಾ ಪ್ರಾಂತ ಸಮಿತಿಯ ಕಾರ್ಯದರ್ಶಿಗಳಿಂದಾಗಲಿ ತರಿಸಿಕೊಳ್ಳಬಹುದು. ವಿವರಗಳಿಗಾಗಿ 'ಕನ್ನಡನುಡಿ'ಯ ಏಪ್ರಿಲ್ ೧೨ನೆಯ ತಾರೀಖಿನ ಸಂಚಿಕೆಯನ್ನು ನೋಡಿ.

---

**ಸೊಲ್ಲಾಪುರ: ಜಿಲ್ಲಾ ಸಾಹಿತ್ಯ ಸಮ್ಮೇಳನ**

ಕಳೆದ ೨೨ನೆಯೂ ತಾರೀಖು ಮೇಲ್ಕಂಡ ಸಮ್ಮೇಳನ ಶ್ರೀ॥ ಮುದವೀಡು ಕೃಷ್ಣರಾಯರ ಆಧ್ಯಕ್ಷತೆಯಲ್ಲಿ ನಡೆಯಿತು. (ನಿಯೋಜಿತ ಅಧ್ಯಕ್ಷರಾದ 'ಶ್ರೀ' ಯವರು ಕರ್ತವ್ಯ ಕಾರಣದಿಂದ ಮೈಸೂರಿಗೆ ಹಿಂತಿರುಗಿದ್ದರಿಂದ ಅಧ್ಯಕ್ಷತೆ ವಹಿಸಿರಲಿಲ್ಲ) ಶ್ರೀ॥ ಮುದವೀಡುರವರು ಭಾಷಣಮಾಡುತ್ತಾ ಕನ್ನಡದ ಪೂರ್ವ ವೈಭವವನ್ನೂ ಅದರ ಇಂದಿನ ದುರವಸ್ಥೆಯನ್ನೂ ವಿವರಿಸಿ, ಮುಂದಿನ ಏಳಿಗೆಗಾಗಿ ಕನ್ನಡಿಗರು ಸುಸಂಘಟಿತರಾಗಿ ಸೇವೆ ನಡಸಬೇಕೆಂದು ಹೇಳಿದರು.

**ಧಾರವಾಡ: ದಿವಂಗತ ಸೌ॥ ಗೌರಮ್ಮನವರ ನೆನಪಿಗಾಗಿ ನಡೆದ ಸಣ್ಣ ಕತೆಗಳ ಸ್ಪರ್ಧೆಯ ಫಲಿತಾಂಶ**

ಹೆಣ್ಣುಮಕ್ಕಳಿಗಾಗಿ ಏರ್ಪಡಿಸಿದ್ದ ಕಥಾಸ್ಪರ್ಧೆಗೆ ಕನ್ನಡ ನಾಡಿನ ಎಲ್ಲ ಭಾಗಗಳಿಂದಲೂ ೨೩ ಹೆಣ್ಣುಮಕ್ಕಳಿಂದ ಒಟ್ಟು ೨೪ ಕತೆಗಳು ಬಂದಿದ್ದುವು. ಅವುಗಳನ್ನು ಪರೀಕ್ಷಿಸುವುದಕ್ಕಾಗಿ ಶ್ರೀ॥ ಎಚ್. ಪಿ. ಜೋಶಿ, ಬಿ.ಎ., ಅವರ ಅಧ್ಯಕ್ಷತೆಯಲ್ಲಿ ಶ್ರೀಗಳಾದ ಸಂಗಮ ನಾರಾಯಣರಾಯರು (ಗುಂತೂರು ಜಿಲ್ಲೆಯ ವಿದ್ಯಾವನದ ಪ್ರಿನ್ಸಿಪಾಲರು) ಚುಳಕಿ ಗೋವಿಂದರಾಯರು, ಮೇವುಂಡಿ ಮಲ್ಲಾರಿಯವರು (ಜಯಕರ್ಣಾಟಕದ ಸಹ ಸಂಪಾದಕರು), ಕೊಟ್ಟಲಗಿ ರಾಮಚಂದ್ರರಾಯರು ವಿಜಾಪುರ, ಕುಲಕರ್ಣಿ ಶೇಷಗಿರಿರಾಯರು, ಕುಲಕರ್ಣಿ ದತ್ತಾತ್ರೇಯರಾಯರು ಇವರನ್ನೊಳಗೊಂಡ ಏಳು ಜನರದೊಂದು ಪರೀಕ್ಷಕ ಮಂಡಲವನ್ನು ರಚಿಸಲಾಗಿದ್ದು ತಾ॥ ೧೬ರಲ್ಲಿ ಪರೀಕ್ಷೆ ನಡೆಯಿತು. ಆ ಕತೆಗಳಲ್ಲಿ ಶ್ರೀಮತಿ ಎಚ್. ಸುಮಿತ್ರಮ್ಮ ಬೆಂಗಳೂರು ಅವರ 'ನನ್ನ ಪರೀಕ್ಷೆ' ಎಂಬುದಕ್ಕೆ ಮೊದಲನೆಯ ಬಹುಮಾನವನ್ನೂ, ಶ್ರೀಮತಿ 'ವಾಣಿ' ಮೈಸೂರು ಅವರ 'ಕನಸೋ ನನಸೊ' ಎಂಬುದಕ್ಕೆ ಎರಡನೆಯ ಬಹುಮಾನವನ್ನೂ, ಶ್ರೀಮತಿ ಕುಸುಮಾ ದೇಶಪಾಂಡೆ ಹುಬ್ಬಳ್ಳಿ ಅವರ 'ಶಾಲ್ಮಲೆಗೆ' ಎಂಬುದಕ್ಕೆ ಮೂರನೆಯ ಬಹುಮಾನವನ್ನೂ ಕೊಡಬೇಕೆಂದು ಸರ್ವಾನುಮತದಿಂದ ಪರೀಕ್ಷಕರ ಸಭೆ ನಿರ್ಣಯಿಸಿತು. ಈ ಮೂರು ಕತೆಗಾರ್ತಿಯರಿಗೆ ಕ್ರಮವಾಗಿ ೧೨ ರೂ; ೮ ರೂ; ೫ ರೂ. ಬೆಲೆಯ ಪುಸ್ತಕಗಳನ್ನು ಬಹುಮಾನವಾಗಿ ಸಲ್ಲಿಸಲಾಯಿತು.

# ಪಠ್ಯಪುಸ್ತಕಗಳ ಕನ್ನಡ

ಬರೆದವರು: ಶಿವರಾಮ ಕಾರಂತ

ಕೆಲವು ಕಾಲದಿಂದ ನಮ್ಮಲ್ಲಿ ಭಾಷೆಯ ಏಕೀಕರಣದ ವಿಚಾರ ಪ್ರಚಾರ ನಡೆಯುತ್ತಿರುವುದು ತಿಳಿದೇ ಇದೆ. ಗ್ರಂಥದ ಭಾಷೆ ಕರ್ಣಾಟಕದಲ್ಲಿ ಏಕರೂಪತೆಯನ್ನೇ ತಾಳಬೇಕು—ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದಂತೆ ಕಾಣುವುದಿಲ್ಲ. ಆದರೆ ಇದನ್ನು ಹೇಗೆ ಸಾಧಿಸಬೇಕೆನ್ನುವ ವಿಚಾರದಲ್ಲಿ ಮಾತ್ರ ಅಭಿಪ್ರಾಯ ಭೇದವೋ ಅಭಾವವೋ ಕಾಣಿಸುತ್ತದೆ. ಕಳೆದ ಕನ್ನಡನುಡಿಯ ಅಗ್ರಲೇಖನ ದಿಂದ—ಒಂದೇ ರೀಡರುಗಳನ್ನು ಅಖಿಲ ಕರ್ಣಾಟಕವೂ ಬಳಸಿದರೆ ಒಳಿತಾದೀತು — ಎಂಬ ಸೂಚನೆಯಿದ್ದಂತೆ ಕಾಣುವುದಲ್ಲದೆ ಪರಿಷತ್ತು ಅಂಥ ಪಠ್ಯಪುಸ್ತಕಗಳನ್ನು ಹೊರಡಿಸುವುದು ಒಳಿತೆಂಬ ಅಭಿಪ್ರಾಯವೂ ಕಾಣುತ್ತಿದೆ.

ಭಾಷೆಯ ಏಕೀಕರಣದ ಪ್ರಶ್ನೆಯನ್ನು ಯೋಚಿಸುವಾಗ ನಮ್ಮ ಮುಂದೆ ಬರುವ ಕೆಲವೊಂದು ಪ್ರಶ್ನೆಗಳನ್ನು ವಾಚಕರ ಮುಂದಿಡುವುದೇ ನನ್ನ ಉದ್ದೇಶ. ನಾನೂ ಒಬ್ಬ ಪಠ್ಯಪುಸ್ತಕ ಲೇಖಕ, ಅದರ ಮೇಲೆ ಉಪಜೀವಿ—ಎಂಬ ವಿಷಯವನ್ನೆ ಮೊದಲಿಗೇನೆ ಹೇಳುತ್ತೇನೆ. ಆದರೆ ಈ ವಿಷಯದ ಚರ್ಚೆಯಲ್ಲಿ ಪುಸ್ತಕ ವ್ಯಾಪಾರಿಯಾದವನ ಆರ್ಥಿಕ ಪ್ರಶ್ನೆ ಯಲ್ಲದೆ ಶಿಕ್ಷಣದ ತೊಡಕುಗಳೂ ಬೆರೆತಿವೆ—ಎಂಬುದನ್ನು ಮಾತ್ರ ಸೂಚಿಸಬೇಕಾಗಿದೆ.

ಮೊದಲಿಗೆ ಕನ್ನಡನುಡಿಯ ಅಗ್ರಲೇಖನದಲ್ಲಿ ಸೂಚಿಸಿದ ವಿಚಾರ ನೋಡುವ. ನನಗೆ ತಿಳಿದಂತೆ ಇದು ಮೊದಲು ಪಠ್ಯಪುಸ್ತಕಗಳ "ಭಾಷೆಯ ಏಕತೆ" ಎಂದಿತ್ತು. ಹೈದರಾಬಾದಿನ ಸರಕಾರ ಮೈಸೂರು ರೀಡರುಗಳನ್ನು ಉಪಯೋಗಿಸುತ್ತಿದೆ—ಎಂದು ಸಂತೋಷ ಸೂಚಿಸಿದುದರ ಮೇಲಿಂದ, ಈಗ ಆ ಅಭಿಪ್ರಾಯ ಬದಲಾಗಿ "ಒಂದೇ ರೀಡರು ಅಖಿಲ ಕರ್ಣಾಟಕಕ್ಕೆ"—ಎಂದು ಹೊಸ ಅಭಿಪ್ರಾಯ ಹುಟ್ಟಿದೆ ಎಂದು ನಾನು ತಿಳಿಯಬೇಕಾಗಿದೆ.

ಮೊದಲಿಗೆ ಕನ್ನಡನಾಡಿನ ನಾಲ್ಕು ಮೂಲೆಗಳಲ್ಲಿ ಪ್ರಚಾರವಿರುವ ಮಾತಿನಲ್ಲಿ ಇಂತಹದು ಉತ್ತಮ, ಇಂಥದು ಕೀಳು—ಎಂದು ನಾನು ಹೇಳಲಾರೆ. ಅವುಗಳಲ್ಲಿ ಭಿನ್ನತೆ ಇದೆ. ಇದು—ವಾಕ್ಯರಚನೆಯ ರೀತಿ, ದೇಸಿ, ಶಬ್ದಗಳು—ಇವುಗಳಲ್ಲೆಲ್ಲಾ ಬರುತ್ತದೆ. ಇವುಗಳಲ್ಲಿ ಯಾವುದನ್ನು ತಿದ್ದುವ ಗುರಿ ನಮ್ಮದು ?

ಪಠ್ಯಪುಸ್ತಕಗಳಲ್ಲಿ ಭಾಷೆ—ಇದೊಂದನ್ನು ಯೋಚಿಸುವ. ತೀರ ಮೊದಲಿನ ಪುಸ್ತಕಗಳಲ್ಲಿ—ಮಗುವಿಗೆ ಓದು ಬರುವ ಮೊದಲು ಸಂಭಾಷಣೆ ಕನ್ನಡದಲ್ಲಿ ಬಂದಿರಬೇಕು. ಇಂಥ ಸಂಭಾಷಣೆಯಲ್ಲಿ ಪರಿಚಯವಾದ ವಾಕ್ಯ, ರೀತಿ, ಶಬ್ದಗಳನ್ನು ಓದಲು ಮಗು ಕಲಿಯು ವುದು. ಅಲ್ಲಿಂದ ಅದು ಬರೆಯಲು ಕಲಿಯಬೇಕು. ಇದು ಹಲವರು ಮಾನಸಶಾಸ್ತ್ರಜ್ಞರು ಒಪ್ಪಿದ ರೀತಿ. ಅದಕ್ಕಾಗಿಯೇ ಪರಿಚಿತ ಮಾತನ್ನು ಓದಲು ಮಗು ಕಲಿಯುವುದು. ಅದರಿಂದಾಗಿ ಮೊದಲನೆ ರೀಡರುಗಳಲ್ಲಿ—ಆಯಾ ಪ್ರಾಂತೀಯ ಶಬ್ದಗಳು (ಗ್ರಾಮ್ಯರೂಪಗಳಲ್ಲಿ) ವಾಕ್ಯರೀತಿಗಳು — ಪಠ್ಯಪುಸ್ತಕಗಳಲ್ಲಿ ಬರಬೇಕಾಗಿದೆ. ಹೊಸ ಯಾವುದೇ ಶೈಲಿ ಇಲ್ಲವೆ—ಶಬ್ದಗಳನ್ನು ಸೇರಿಸುವ ಕಾಲವು—ಈ ಪ್ರಥಮ ಅವಸ್ಥೆಯಲ್ಲ.

ಒಂದು ಪುಟ್ಟ ಉದಾಹರಣೆ ಹೇಳುತ್ತೇನೆ. ನಮಗೆ ದನದ ವಿಷಯ ಹೇಳಬೇಕಾಗುತ್ತದೆ. ಆದರೆ ಅದೇ ಪ್ರಾಣಿಗೆ 'ಹಸು' ಎಂದು ಕರೆಯುವ ಪ್ರಾಂತಗಳೂ ಇವೆ. ಅಂಥ ಪ್ರಾಂತಗಳಲ್ಲಿ 'ಹಸು' ಎಂದೇ ಹೇಳಬೇಕಾಗುವುದು. ಆ ಮಾತಿನಿಂದ ಮಗುವಿಗೆ 'ಹ–ಸು' ಎಂಬ ಎರಡು ಅಕ್ಷರಗಳ ಪರಿಚಯವಾದೀತು. ದ–ನ–ಅಕ್ಷರಗಳ ಪರಿಚಯವಾಗದು. ಮುಂದೆ ೩–೪ನೇ ರೀಡರುಗಳಲ್ಲಿ ಅದು ಹಸುವಿಗೆ, ಇನ್ನೊಂದು ಹೆಸರಿದೆ 'ದನ' ಎಂದು ಶಬ್ದಸಂಪತ್ತಿ ಹೆಚ್ಚಿಸಬಹುದು. ಆದರೆ ಈ ಯತ್ನ ಮೊದಲು ಸಾಧ್ಯವಲ್ಲ.

'ಹಸು' ಎನ್ನುವುದು ಊರಲ್ಲಿ ರೂಢಿ ಇರಲು ಮೊದಲನೆ ರೀಡರಿನಲ್ಲಿ 'ದನ' ಕಲಿಸಹೋದರೆ ಮಗುವು ದನದ ಚಿತ್ರದ ಮುಂದಿನ ಬರಹವನ್ನು 'ಹ–ಸು' ಆಗಿ ಓದೀತೇ ಹೊರತು ದ–ನವಾಗಿ ತಿಳಿಯು ವುದಿಲ್ಲ. ಚಿತ್ರವನ್ನೂ ಅದರ ಹೆಸರನ್ನೂ ಜತೆಗೆ ಹಾಕುವ ಶಿಕ್ಷಣ ಕ್ರಮದಲ್ಲಿ ಹೆಸರು 'ಪರಿಚಿತ'ವಾಗಿರಬೇಕು. ಚಿತ್ರಕಲ್ಪನೆಯನ್ನು ಕೆರಳಲು. ಎರಡನ್ನೂ ಹೇಳಿಕೊಡುವಂಥದಲ್ಲ.

ಮೊದಲು ಮೊದಲು ಓದುವ ಮಗುವಿನ ಪುಸ್ತಕಗಳಲ್ಲಿ ಮಿತ ಶಬ್ದಸಂಪತ್ತಿನಿಂದ ಮಗು ಆದಷ್ಟು ಓದನ್ನೂ, ಅಭಿಪ್ರಾಯ ಪ್ರಕಟನೆಯನ್ನೂ ಮಾಡುವುದು ಅವಶ್ಯ. ಅಲ್ಲಿ ಪ್ರಾದೇಶಿಕ ಶಬ್ದಗಳು ಶುದ್ಧರೂಪದಲ್ಲಿ ಪರಿಚಯವಾದಾವೇ ಹೊರತು—ಅನ್ಯಭಾಗದ ಶಬ್ದ ಗಳನ್ನು ತರುವುದು ಸಮನಾಗದು. ಆ ವಯಸ್ಸಿನಲ್ಲಿಯೇ ನಮಗೆ ಏಕರೂಪಭಾಷೆಯ ಪರಿಚಯಮಾಡಿಸುವ ಹಂಬಲವಾದರೆ, ಅಂಥ ಭಾಷೆಯನ್ನೇ ಮಗು ಮೊದಲಿಗೆ ಉಪಾಧ್ಯಾಯನ ಮತ್ತು ಹಿರಿಯರ ಬಾಯಿಂದ ಕೇಳಿ ತಿಳಿಯಬೇಕಾಗುವುದು.

ಮುಂದೆ ಮೇಲಿನ ತರಗತಿಗಳಲ್ಲಿ—ಶಬ್ದಸಂಪತ್ತಿ ಹೆಚ್ಚಿದಾಗ ಎಲ್ಲ ನಾಡಿನ ಮಕ್ಕಳಿಗೂ ಅರ್ಥವಾಗುವ ಭಾಷೆಯನ್ನು ತರುವುದು ಶಕ್ಯ. ಆದರೆ ಎಲ್ಲರಿಗೂ 'ಒಂದೇ' ರೀಡರು ತರುವುದು ತಪ್ಪು. ಮೈಸೂರು ಸಂಸ್ಥಾನದ ಸರಕಾರದವರು ಹೊರಡಿಸಿದ ರೀಡರುಗಳು ಶಿಕ್ಷಣದ ರೀತಿಯಿಂದ ಆದರ್ಶವಾಗಿವೆ ಎನ್ನಲು ಸಾಧ್ಯವೇ? ಅಲ್ಲದೆ—ಭಾಷಾಶಿಕ್ಷಣದ ರೀತಿಯಿಂದ ನೋಡಲು—ಹಲವು ಪದ್ಧತಿಗಳು ರೂಢಿ ಯಲ್ಲಿವೆ. ಅವುಗಳಲ್ಲಿ ಇದೇ ಸೂಕ್ತ, ಇದು ಅಲ್ಲ—ಎನ್ನುವ ಸಾಹಸ ನಾನಂತು ಮಾಡಲಾರೆ. ಆಂಗ್ಲ ಭಾಷಾ ರೀಡರುಗಳನ್ನು ಪರಿಶೀಲಿ ಸಿದರೆ ಹಲವರು ಪಂಡಿತರು—ಬೇರೆ ಬೇರೆ ಹಾದಿ ಹಿಡಿದಂತೆ ಕಾಣು ವುದು. ಅವುಗಳಲ್ಲಿ ಒಂದೊಂದು ಒಂದೊಂದು ವಿಶೇಷ ಲಕ್ಷಣ ವುಳ್ಳದು. ರೀಡರುಗಳಲ್ಲಿ—ಭಾಷೆಯ ಏಕತೆ ಒಂದೇ ಗುರಿಯಲ್ಲ. ಅದಕ್ಕೂ ಮುಖ್ಯವಾಗಿ ಭಾಷಾಶಿಕ್ಷಣದ ರೀತಿ, ತತ್ವಗಳು ಸೇರಿವೆ. ಹೀಗಿರಲು—ಒಂದೇ ರೀಡರು—ಎಂಬ ಕೂಗು ಯಾವ ಸಂಸ್ಥೆಯಿಂದ ಹೊರಟರೂ ತಪ್ಪು ಕೂಗಾಗುವುದು. ನಾವು ಭಾಷೆಯ ಏಕತೆ ಸಾಧಿ ಸುವ ಗಡಿಬಿಡಿಯಲ್ಲಿ ಅದನ್ನು ಮರೆಯಬಾರದು. ಪರಿಷತ್ತು ಈ ವಿಷಯ ದಲ್ಲಿ ಮಾಡಬಹುದಾದ ಕೆಲಸವೆಂದರೆ—ಒಂದು ಸಮಿತಿಯೇರ್ಪಡಿಸಿ, ಅಲ್ಲಿ ಹಲವು ಪ್ರಾಂತೀಯ ಭಾಷಾಪರಿಚಯವುಳ್ಳ ಜನರನ್ನು ಕೂಡಿಸಿ, ಅವರಿಂದ—ಬರಹಗಳು ಎಲ್ಲ ಪ್ರಾಂತಕ್ಕೂ ಅರ್ಥವಾಗುವ ರೀತಿಯಲ್ಲಿ ಹೊಂದುವಂತೆ ಶೈಲಿ, ವಾಕ್ಯರಚನೆ, ಶಬ್ದಸಂಪತ್ತು—ಇವುಗಳ ವಿಷಯ ಸೂಚನೆ ಕೊಡಬಹುದು.

ಇವು ತೀರ ಮೇಲಿನ ರೀಡರುಗಳ ವಿಷಯ ಸಾಧ್ಯ. ಆದರೆ ಇತರ ಹಲವು ಸಾಹಿತ್ಯಗ್ರಂಥಗಳ ವಿಷಯದಲ್ಲಿ ಮತ್ತೂ ಸಾಧ್ಯ. ಪರಿಷತ್ತು ತನ್ನ ಪರಿಚಿತ ಬರಹಗಾರರ, ಪ್ರಕಟಣಾಕರ್ತರ, ಪತ್ರಕರ್ತರ ಮೇಲೆ ವರ್ಚಸ್ಸುಂಟುಮಾಡಿ—ಮುಂದೆ ಬರುವ ಪುಸ್ತಕಗಳಲ್ಲಿ ಆದಷ್ಟು ಎಲ್ಲರಿಗೂ ತಿಳಿಯುವ ಭಾಷೆಯುಂಟಾಗಲು ಪ್ರಯತ್ನಿಸಬಹುದು. ವರ್ತಮಾನ ಪತ್ರಗಳಲ್ಲಿ ಬರುವ ಲೇಖನಗಳಲ್ಲಿ ಒಂದು ಮಾದರಿಯ ಏಕರೂಪತೆ ಬರುವಂತೆ—ಹಲವು ಲೇಖನಗಳನ್ನು ಆರಿಸಿ, ಅವುಗಳಲ್ಲಿ ಭಿನ್ನಪ್ರಾಂತದವರಿಗೆ ಅರ್ಥವಾಗದ, ವಿಪರೀತ ಅರ್ಥವಾಗುವ ಮಾತು ಗಳನ್ನು ಹುಡುಕಿ ತೋರಿಸಬಹುದು.

ಇನ್ನೊಂದು ಮಾತೆಂದರೆ ಭಾಷೆಯ ಏಕರೂಪತೆಗೆ—ಬರಹ ಗಳಿಂದ ಬಂದ ಮಾತು, ಮನೆಮಾತು ಬಹಳ ಕಾರಣವಾಗಿದೆ. ಒಂದೇ ಜಾತಿಯ ರೀಡರುಗಳನ್ನು ಓದುವುದರಿಂದ, ಪ್ರಾಂತೀಯ ಶೈಲಿ ಅಳಿಸೀತು, ಪದಗಳು ಒಂದಾದಾವು—ಎಂಬುದೂ ತಪ್ಪು ಕಲ್ಪನೆ. ಭಾಷೆಯ ವೈವಿಧ್ಯ ಉಳಿಸಲು — ಮಾತಾಡುವ ಭಾಷೆ ಗ್ರಂಥದ ಭಾಷೆಗೂ ಮಿಗಿಲೆನಿಸಿದ ವರ್ಚಸ್ಸನ್ನು ತೋರುತ್ತದೆ. ಜನರ ಒಡನಾಟ ದಿಂದ ಮಾತು ಏಕತೆಯನ್ನು ಹೊಂದೀತು. ಎಲ್ಲಿಯತನಕ ಸೇಕಡ ೧೦–೨೦ಕ್ಕೂ ಕಡಮೆ ಓದು ಬಲ್ಲವರಿದ್ದಾರೋ—ಅಲ್ಲಿಯತನಕ ಯಾವ ಆಸೆಯೂ ಫಲಿಸದು.

# ಕನ್ನಡ ನಾಡಿನಲ್ಲಿ 'ಶ್ರೀ'ಯವರ ಪ್ರವಾಸ

(ಶ್ರೀ॥ ರಂಗಪ್ಪ ಭೀ. ಪೊದ್ದಾರ ಅವರಿಂದ)

**ಬೆಳಗಾಂವಿ:** ೧೧-೪-೪೦ ಗುರುವಾರ ಬೆಳಗ್ಗೆ ೮॥ ಗಂಟೆಗೆ ಬೆಳಗಾಂವಿಯಲ್ಲಿ ಕನ್ನಡ ಕೆಲಸಗಾರರೊಡನೆ 'ಶ್ರೀ'ಯವರು ಮಾತನಾಡಿದರು. ಇಳಿಹೊತ್ತಿನಲ್ಲಿ ಬೆಳಗಾಂವಿಯಿಂದ ಹೊರಟು ಚಿಕ್ಕೋಡಿಗೆ ತಲುಪಿ ಅಲ್ಲಿಯ ಕರ್ನಾಟಕ ಸಂಘದ ವಾರ್ಷಿಕೋತ್ಸವವನ್ನು ನೆರವೇರಿಸಿದರು. ಅಲ್ಲಿರುವ ಕೆಲಸಗಾರರೊಡನೆ ಮಾತುಕತೆಯಾಡಿ ಪರಿಷತ್ತಿನ ಗುರಿಗಳನ್ನು ಅರುಹಿದರು.

ಮರುದಿನ ರಾತ್ರಿ ೯ ಗಂಟೆಗೆ **ನಿಪ್ಪಾಣಿಗೆ** ಹೋಗಿ ಉಪನ್ಯಾಸ ಮಾಡಿದರು. ನಿಪ್ಪಾಣಿ ಕನ್ನಡದ ಗಡಿನಾಡಿನಲ್ಲಿರುವ ದೊಡ್ಡ ಪಟ್ಟಣ. ಅಲ್ಲಿರುವ ವರ್ತಕರಲ್ಲಿ ಬಹುಜನರು ಕನ್ನಡಿಗರಾದ ಜೈನರು ಮತ್ತು ಲಿಂಗವಂತರು; ಆದರೆ ಕನ್ನಡದ ಮುನ್ನಡೆಗಾಗಿ ಇಂತಹ ದೊಡ್ಡ ಪಟ್ಟಣದಲ್ಲಿ ದುಡಿಯುತ್ತಿರುವವರು ಮೂರೇ ಮಂದಿ; ಇವರಲ್ಲಿ ಶ್ರೀ॥ ತೋಟಪ್ಪನವರು ಮುಂದಾಳು. ಕನ್ನಡಕ್ಕಾಗಿಯೂ ರಾಷ್ಟ್ರಸಭೆಯ (ಕಾಂಗ್ರೆಸ್) ಕಾರ್ಯಗಳನ್ನು ಮುಂಬರಿಸುವುದಕ್ಕಾಗಿಯೂ ಶ್ರೀ॥ ತೋಟಪ್ಪನವರು ಮಾಡಿದ ಮತ್ತು ಮಾಡುತ್ತಿರುವ ತ್ಯಾಗ ಬಲು ಹಿರಿದು. ಇವರಿಗೆ ಬೆಂಬಲವಾಗಿ ಶ್ರೀ॥ ಕೋಟಿವಾಡೆ ಎಂಬ ವೀರಶೈವ ವರ್ತಕರೊಬ್ಬರು ಮತ್ತು ಶ್ರೀ॥ ಕುಂದುಗೋಳ ಎಂಬ ಹೆಸರಿನ ಬ್ರಾಹ್ಮಣ ಶಿಕ್ಷಕರೊಬ್ಬರು ನಿಂತಿದ್ದಾರೆ.

"ನಿಪ್ಪಾಣಿ ಕನ್ನಡಿಗರ ಹಿರಿಯೂರು; ಇಲ್ಲಿರುವ ಕನ್ನಡಿಗರೆಲ್ಲರೂ ಬರುವ ಜನಗಣಿತಿಯ ಸಮಯದಲ್ಲಿ ನಮ್ಮ ಮನೆಮಾತು ಕನ್ನಡವೆಂದು ಹೆದರದೆ ಎದೆತಟ್ಟಿ ಹೇಳಬೇಕು. ಬರೆದುಕೊಳ್ಳುವವರು ಹಾಗೆಯೇ ಬರೆದುಕೊಳ್ಳುತ್ತಾರೋ ಇಲ್ಲವೋ ಎಂಬುದನ್ನು ಬಲ್ಲವರು ನೋಡಿಕೊಳ್ಳಬೇಕು. ಕನ್ನಡದ ಬಾವುಟವನ್ನು ಇಲ್ಲಿರುವ ಜೈನರೂ ವೀರಶೈವರೂ ಬ್ರಾಹ್ಮಣರೂ ಎತ್ತಿ ಹಿಡಿಯಬೇಕು" ಎಂದು 'ಶ್ರೀ'ಯವರು ನುಡಿದರು. ಅಲ್ಲಿರುವ ಕನ್ನಡಿಗರು ಎಚ್ಚರಗೊಂಡರು. ನಿಪ್ಪಾಣಿಯಿಂದ ಹೊರಟು, ರಾತ್ರಿ ೧೧ ಗಂಟೆಗೆ **ಸಂಕೇಶ್ವರಕ್ಕೆ** ಹೋಗಿ, ಅಲ್ಲಿರುವ ವರ್ತಕರಲ್ಲಿ ಹಿರಿಯರಾದ ಶ್ರೀ॥ ಮಹದೇವಪ್ಪ ಮೊಡಗುಡ್ಡಿಯವರು ಏರ್ಪಡಿಸಿದ ಸಭೆಯಲ್ಲಿ 'ಶ್ರೀ'ಯವರು ಒಂದು ಗಂಟೆಯವರೆಗೆ ಮಾತನಾಡಿದರು. ಆ ಊರಿನಲ್ಲಿ ಮಧ್ಯರಾತ್ರಿಯಲ್ಲಿ ಒಂದು ಕನ್ನಡ ಕೂಟವನ್ನು ಹುಟ್ಟಹಾಕಿದರು.

೧೩-೪-೪೦ ಶನಿವಾರದ ಇಳಿಹೊತ್ತಿನ ೫ ಗಂಟೆಗೆ **ಬೆಳಗಾಂವಿ**ಯಲ್ಲಿಯ ಸಾರ್ವಜನಿಕ ವಾಚನಾಲಯದ ಸಭಾಮಂದಿರದಲ್ಲಿ 'ಶ್ರೀ'ಯವರು, "ಬೆಳಗಾಂವಿಯ ಕನ್ನಡಿಗರೆಲ್ಲರೂ ಒಂದೇ ಕನ್ನಡ ಕೂಟವನ್ನು ಮಾಡಿಕೊಂಡು ಪರಿಷತ್ತಿಗೆ ಹೆಚ್ಚು ಜನರು ಸದಸ್ಯರಾಗಿ ಸೇರುವಂತೆಯೂ ಕನ್ನಡ ಸಾಹಿತ್ಯ ಪರೀಕ್ಷೆಯ ಪಾಠಗಳು ಈ ಕೂಟದ ಪರವಾಗಿ ಚೆನ್ನಾಗಿ ಸಾಗುವಂತೆಯೂ ಬೆಳಗಾಂವಿ ಪಟ್ಟಣದಿಂದ ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ಪ್ರತಿನಿಧಿಗಳು ಬರುವಂತೆಯೂ ಬೆಳಗಾಂವಿಯಿಂದ ಹಬ್ಬಕ್ಕೆ ಕಾಣಿಕೆಯೆಂದು ಹಣ ಸಲ್ಲುವಂತೆಯೂ ಬೇಗನೆ ಕೆಲಸಗಳನ್ನು ಕೈಕೊಳ್ಳಬೇಕು" ಎಂದು ಕನ್ನಡಿಗರಿಗೆ ಬಿನ್ನವಿಸಿಕೊಂಡರು.

ಅಂದಿನ ಸಂಜೆ ೭ ಗಂಟೆಗೆ ಕ್ರೀಡಾಭವನದ ಸಭಾಮಂದಿರದಲ್ಲಿ 'ಶ್ರೀ'ಯವರು "ಕ್ರಿಸ್ತನೂ ಬಸವೇಶ್ವರನೂ" ಎಂಬ ವಿಷಯವನ್ನು ಕುರಿತು ಆಂಗ್ಲಭಾಷೆಯಲ್ಲಿ ಉಪನ್ಯಾಸ ಮಾಡಿದರು. ಈ ಸಭೆಗೆ ಶ್ರೀ॥ ಬೆಳವಿಯವರು ಹಿರಿಯರಾಗಿದ್ದರು. 'ಶ್ರೀ'ಯವರಿಗೆ ನೆನಕೆಯನ್ನು ಸಲ್ಲಿಸುವಾಗ, "'ಶ್ರೀ'ಯವರು ಎಷ್ಟು ಸಲ ನಮ್ಮ ಬೆಳಗಾಂವಿಗೆ ಬಂದು ಕನ್ನಡಿಗರನ್ನೂ ಕನ್ನಡಿಗರಲ್ಲದವರನ್ನೂ ತಮ್ಮ ಮೆಲ್ನುಡಿಗಳಿಂದ ಎಚ್ಚರಿಸಿದರೂ ನನಗೆ ಸಂತಸವೇ; ಬಿಡುವು ದೊರೆತ ಒಡನೆಯೇ 'ಶ್ರೀ'ಯವರು ದಯವಿಟ್ಟು ಬೆಳಗಾಂವಿಗೆ ಬರುತಿರಬೇಕು. ಆಂಗ್ಲಭಾಷೆಯಲ್ಲಿಯೂ ಕನ್ನಡದಲ್ಲಿಯೂ ಮಾತನಾಡಿ ನಮಗೆ ತಿಳುಹನ್ನು ಬೀರುತಿರಬೇಕು. ನಾನು ಈಗ ಮುದುಕನಾಗಿದ್ದೇನೆ; ಆದರೆ 'ಶ್ರೀ'ಯವರ ಮಾತುಗಳನ್ನು ಕೇಳಿ ನಾನು ಮರುಳಾದ ಜವ್ವನಿಗನಾಗಿದ್ದೇನೆ. 'ಶ್ರೀ'ಯವರು ಪಾಠವನ್ನು ಹೇಳಿಕೊಡುತ್ತಿರುವ ವಿದ್ಯಾಲಯದಲ್ಲಿ ನಾನು ವಿದ್ಯಾರ್ಥಿಯಾಗಿ ಅವರ ಪಾಠಗಳನ್ನು ಕೇಳುವಂತೆ ದೇವರು ನನಗೆ ಹರೆಯತನವನ್ನು ಕೊಡಲೆಂದು ಈಶನಲ್ಲಿ ನನ್ನ ಪ್ರಾರ್ಥನೆ" ಎಂದು ಶ್ರೀ॥ ಬೆಳವಿಯವರು ನುಡಿದರು.

**ಧಾರವಾಡ:** ೧೪-೪-೪೦ ರವಿವಾರದ ಸಂಜೆಯ ೫॥ ಗಂಟೆಗೆ ಧಾರವಾಡದಲ್ಲಿಯ ವಿದ್ಯಾವರ್ಧಕ ಸಂಘದ ಸಭಾಮಂದಿರದಲ್ಲಿ ಕನ್ನಡ ಸಾಹಿತ್ಯ ಪರೀಕ್ಷೆಗಳಿಗಾಗಿ ಏರ್ಪಡಿಸಿರುವ ಎರಡನೆಯ ಪರೀಕ್ಷೆಯ ಪಾಠಗಳನ್ನು 'ಸರ್ವಜ್ಞನ ಸಂದೇಶ'ವೆಂಬ ಗ್ರಂಥದ ಪಾಠದಿಂದ ಪ್ರಾರಂಭಿಸಿದರು. ೬॥ ಗಂಟೆಯಿಂದ ೭॥ ಗಂಟೆಯವರೆಗೆ ಧಾರವಾಡ ನಗರಸಭಾ ಮಂದಿರದಲ್ಲಿ ಶ್ರೀ॥ ದೇಶಪಾಂಡೆ ರಾಮಚಂದ್ರರಾಯರ ಭಾವಚಿತ್ರದ ಅನಾವರಣ ಸಮಾರಂಭವನ್ನು 'ಶ್ರೀ'ಯವರು ನೆರವೇರಿಸಿದರು. ಈ ಸಭೆಗೆ ಶ್ರೀ॥ ಮುದವೀಡು ಕೃಷ್ಣರಾಯರು ಹಿರಿಯರಾಗಿದ್ದರು. ಸಭಾಮಂದಿರವು ಕನ್ನಡಿಗರಿಂದ ಕಿಕ್ಕಿರಿದು ತುಂಬಿದ್ದಿತು. ಶ್ರೀ॥ ದೇಶಪಾಂಡೆ ರಾಮಚಂದ್ರರಾಯರು ಉತ್ತರ ಕರ್ನಾಟಕದ ಕನ್ನಡಿಗರಲ್ಲಿ 'ಎಂ. ಎ.' ಪದವಿಯನ್ನು ಪಡೆದವರಲ್ಲಿ ಮೊದಲಿಗರು; ವಿದ್ಯಾವರ್ಧಕ ಸಂಘದ ಸಂಸ್ಥಾಪಕರಲ್ಲಿ ಸನ್ಮಾನ್ಯರಾದ ಮಹನೀಯರು; ವೀರರಾದ ಕನ್ನಡಿಗರು. ಕನ್ನಡದ ಮುನ್ನಡೆಗಾಗಿ, ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ತನು ಮನ ಧನಗಳಿಂದ ದುಡಿದವರು, ಈ ಬಗೆಯ ಹಿರಿಮೆಯನ್ನು ಪಡೆದಿರುವ ಕನ್ನಡಿಗರೊಬ್ಬರ ಭಾವಚಿತ್ರವು ಸಂಘದ ಸಭಾಮಂದಿರದಲ್ಲಿ ಕಂಗೊಳಿಸುವುದು ತೀರ ಸರಿಯಾದ ಸಂಗತಿ; ಈ ಭಾವಚಿತ್ರವನ್ನು ಶ್ರೀ॥ ರಾಮಚಂದ್ರರಾಯರ ಶಿಷ್ಯರಾಗಿಯೂ ಧಾರವಾಡದಲ್ಲಿಯ ಪ್ರಖ್ಯಾತ ಭಾವಚಿತ್ರಕಾರರಾಗಿಯೂ ಇರುವ ಶ್ರೀ॥ ನೆರಲೇಕರ ನಾನಾ ಸಾಹೇಬರು ಗುರುಭಕ್ತಿಪೂರ್ವಕವಾಗಿ ಸಂಘಕ್ಕೆ ಕಾಣಿಕೆಯೆಂದು ಸಲ್ಲಿಸಿದ್ದಾರೆ. ಭಾವಚಿತ್ರದ ಅನಾವರಣ ಮಾಡಿದ ಬಳಿಕ 'ಶ್ರೀ'ಯವರು ಪರಿಷತ್ತಿನ "ಬೆಳ್ಳಿಯ ಹಬ್ಬ, ಸಂಘದ ಚಿನ್ನದ ಹಬ್ಬ" ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದರು: ಉಪನ್ಯಾಸ ಮುಗಿದೊಡನೆಯೇ 'ಶ್ರೀ'ಯವರು "ನಾನು ನಿನ್ನೆಯ ದಿನದ ಮುಂಜಾವದಲ್ಲಿ ಬೆಳಗಾಂವಿಯಲ್ಲಿರುವವರಾದ ಒಂಟಮುರಿಯ ದೇಸಗತ್ತಿಯ ಒಡೆಯರಾದ ಶ್ರೀಮಂತ ಬಸವಪ್ರಭು ದೇಸಾಯಿಯವರನ್ನು ಕಂಡೆನು; ಅವರು ನಲುಮೆಯಿಂದ ನನ್ನನ್ನು ಬರಮಾಡಿಕೊಂಡು ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ಘಟನೆಯನ್ನೂ ಕೆಲಸಗಳನ್ನೂ ಕೇಳಿಕೊಂಡು ನಲಿದಾಡಿದರು. ಪರಿಷತ್ತಿಗೆ ತಮ್ಮಂತಹವರ ಬೆಂಬಲವು ಬೇಕಾಗಿದೆ. ತಾವು ಬೆಳ್ಳಿಯ ಹಬ್ಬಕ್ಕೆ ಬೆಳಗಾಂವಿ ಜಿಲ್ಲೆಯಲ್ಲಿಯ ದೇಸಾಯಿಯವರ ಪ್ರತಿನಿಧಿಗಳಾಗಿ ದಯಮಾಡಿಸಬೇಕು. ನಮ್ಮ ಮಹಾರಾಜರ ಸಂದರ್ಶನವನ್ನೂ ತಾವು ಮಾಡಿಕೊಳ್ಳಬೇಕು ಎಂದು ಬೇಡಿಕೊಂಡು ಬಂದೆನು. ಅವರು ಇಂದಿನ ಮುಂಜಾವದಲ್ಲಿ ತಮ್ಮ ಆಪ್ತಮಂತ್ರಿಯನ್ನು ನನ್ನೆಡೆಗೆ ಕಳುಹಿದರು. **'ಶ್ರೀಮಂತ ಬಸವಪ್ರಭು ಸರದೇಸಾಯಿಯವರು ೫೦೦ ರೂಪಾಯಿಗಳನ್ನು ಕೊಟ್ಟು ಪರಿಷತ್ತಿಗೆ 'ಪ್ರದಾತೃ'ಗಳಾಗಿರಲು ಒಪ್ಪಿದ್ದಾರೆ; ಪ್ರತಿ ವರ್ಷಕ್ಕೂ ೨೦ ರೂಪಾಯಿಗಳ 'ಕೊಡುಗೆ'ಯನ್ನು ಈಯಲು ಬಯಸುತ್ತಾರೆ. ಈ ಅಂಶಗಳನ್ನು ಪ್ರಕಟವಾಗಿ ಹೇಳಬಹುದು' ಎಂದು ಸಂದೇಶವನ್ನು ತಿಳುಹಿದ್ದಾರೆ. ಸಂಡೂರಿನ ರಾಜರನ್ನೂ ಒಂಟಮುರಿಯ ದೇಸಾಯಿಯವರನ್ನೂ ಕಂಡರೆ ಕನ್ನಡಿಗರೆಲ್ಲರಿಗೂ ಹೆಮ್ಮೆಯುಂಟಾಗುವುದೆಂದು ತಮ್ಮೆಲ್ಲರ ಪರವಾಗಿ ನಾನು ಸಾರುತ್ತೇನೆ"** ಎಂದು ಹೇಳಿದರು. (ಸಂಡೂರಿನ ರಾಜಾ ಸಾಹೇಬರು ಪರಿಷತ್ತಿಗೆ ಪೋಷಕರಾಗಿದ್ದುಕೊಂಡು ವರ್ಷಾಶನ ನೀಡಲು ಕೃಪೆಯಿಟ್ಟು ವಾಗ್ದಾನಮಾಡಿದ ಅಂಶ ಕಳೆದವಾರ 'ಕನ್ನಡ ನುಡಿ'ಯಲ್ಲಿ ಪ್ರಕಟಿಸಿದೆ) ಸಂಘದ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಶ್ರೀಯುತ **ಬೆಟಗೇರಿ ಕೃಷ್ಣಶರ್ಮರು "ಈ ದಿವಸ ಶ್ರೀಯವರು ೫೦ ರೂಪಾಯಿಗಳನ್ನು ಸಲ್ಲಿಸಿ ಸಂಘದ ಮೊದಲನೆಯ ತರಗತಿಯ ಆಜೀವ ಸದಸ್ಯರಾಗಲು ಒಪ್ಪಿದ್ದಾರೆ" ಎಂದು ಪ್ರಕಟಿಸಿದರು.**

೧೫-೪-೪೦ ಸೋಮವಾರದ ಮುಂಜಾವದ ಒಂಬತ್ತು ಗಂಟೆಗೆ ಶ್ರೀಯವರು ಹುಬ್ಬಳ್ಳಿಗೆ ದಯಮಾಡಿಸಿ ಕನ್ನಡಿಗರ ಮುಂದಾಳುಗಳನ್ನೂ ಕನ್ನಡ ಕೂಟಗಳ, 'ಸಂಯುಕ್ತ ಕರ್ನಾಟಕ'ದ ಮತ್ತು ಮಹಾವೀರ ವಾಚನಾಲಯದ ಅಧಿಕಾರಿಗಳನ್ನೂ ಮೂರು ಸಾವಿರ ಮಠದ ಸ್ವಾಮಿಗಳವರನ್ನೂ ಸರ್ ಸಿದ್ದಪ್ಪ ಕಂಬಳಿಯವರನ್ನೂ ಶ್ರೀ॥ ದೀಕ್ಷಿತರವರನ್ನೂ ಶ್ರೀ॥ ಬೆಣ್ಣೆಯವರನ್ನೂ ಕಂಡು ಮಾತಾಡಿದರು.

ಶ್ರೀ ಮಹಾವೀರ ವಾಚನಾಲಯದಲ್ಲಿ 'ಶ್ರೀ'ಯವರನ್ನು ಸ್ಥಳೀಯ ವಿದ್ಯಾಖಾತೆಯ ಆಡಳಿತಗಾರರಾದ ಶ್ರೀ॥ ಗಾಂವಕರರೂ ವ್ಯಾಕರಣ ತೀರ್ಥ ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳೂ, ಶ್ರೀ॥ ಬೆಂಗೇರಿ ಪ್ರಹ್ಲಾದ ರಾಯರೂ ಸ್ವಾಗತಿಸಿದರು. 'ಶ್ರೀ'ಯವರು ವಾಚನಾಲಯದ ಕಾರ್ಯಕಲಾಪಗಳನ್ನು ಪ್ರಶಂಸಿಸಿ ಜೈನ ಕವಿಗಳು ಬೆಳಸಿದ ಕನ್ನಡ ನುಡಿಯ ವಿಚಾರವಾಗಿ ಭಾಷಣಮಾಡಿ, ನಾಡು ನುಡಿಗಳ ಮೇಲ್ಮೆಗಾಗಿ ಎಲ್ಲರೂ ಅಲ್ಲಲ್ಲಿ ಸಂಘಗಳನ್ನು ಮಾಡಿಕೊಂಡು ದುಡಿಯಬೇಕೆಂದೂ ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಅವರ ಉದ್ದೇಶಸಾಧನೆಗೆ ಸಹಕರಿಸಬೇಕೆಂದೂ ಪ್ರಾರ್ಥಿಸಿದರು. ಬಳಿಕ ಶಾಂತಿನಾಥ ದೇವಾಲಯಕ್ಕೆ ಭೇಟಿಯಿತ್ತು ದೇವರದರ್ಶನ ಪಡೆದು ಫಲಾಶೀರ್ವಾದಗಳನ್ನು ಸ್ವೀಕರಿಸಿದರು. ವಕೀಲರ ಸಂಘದಲ್ಲಿ ೩ ಗಂಟೆಗೆ ಪರಿಷತ್ತಿನ ಗುರಿಗಳನ್ನು ಇಂಗ್ಲಿಷಿನಲ್ಲಿ ವಿವರಿಸಿದರು.

ಸಂಜೆ ಆರೂವರೆ ಘಂಟೆಗೆ ಹುಬ್ಬಳ್ಳಿಯ ನಗರ ಸಭಾ ಮಂದಿರಕ್ಕೆ ಬಂದರು; ಹುಬ್ಬಳ್ಳಿಯ ಕನ್ನಡಿಗರು ಭಾನುವಾರದಿಂದ (೧೪-೪-೪೦) ಮೂರು ದಿನಗಳ ವರೆಗೆ ಏರ್ಪಡಿಸಿರುವ ವಸಂತೋತ್ಸವದ (ಸುಗ್ಗಿಯ ಹಬ್ಬದ) ಎರಡನೆಯ ದಿವಸದ ಕೆಲಸಗಳನ್ನು ಮೊದಲುಗೊಳಿಸಿದರು. ಬಳಿಕ 'ಕನ್ನಡದ ಹಿರಿಮೆ'ಯನ್ನು ಕುರಿತು ಮಾತನಾಡಿದರು. ಹುಬ್ಬಳ್ಳಿಯ ಕನ್ನಡಿಗರೆಲ್ಲರೂ ಸೇರಿ, ಕನ್ನಡಕೂಟವೊಂದನ್ನು ಬೇಗನೆ ಏರ್ಪಡಿಸಿ ಪರಿಷತ್ತು ಕೈಕೊಂಡಿರುವ ಕೆಲಸಗಳಿಗೆ ಎಲ್ಲ ಬಗೆಯಿಂದಲೂ ಬೆಂಬಲವನ್ನು ಕೊಡಬೇಕೆಂದು ಬೇಡಿಕೊಂಡರು. ರಾತ್ರಿಯ ಹತ್ತು ಘಂಟೆಯ ಉಗಿಬಂಡಿಯಿಂದ ಸಾಂಗಲಿಯ ರಾಜರನ್ನು ಕಾಣಲೆಂದು ಹುಬ್ಬಳ್ಳಿಯಿಂದ ಹೊರಟರು. ಹುಬ್ಬಳ್ಳಿಯವರು ಏರ್ಪಡಿಸಿದ ಸುಗ್ಗಿಯ ಹಬ್ಬ ಸಂಜೆಯ ೮ ಘಂಟೆಗೆ ಶ್ರೀ॥ ಮುದವೀಡು ಕೃಷ್ಣರಾಯರ ಹಿರಿಯತನದಲ್ಲಿ ಸೊಗಸಾಗಿ ನೆರವೇರಿತು.

**ಸಾಂಗ್ಲಿ:** 'ಶ್ರೀ'ಯವರು ೧೬ ಮತ್ತು ೧೭ನೆಯ ತಾರೀಖುಗಳಲ್ಲಿ ಸಾಂಗ್ಲಿಯಲ್ಲಿ ನಿಂತು ಅಲ್ಲಿನ ಸರ್ಕಾರದ ಪ್ರಮುಖ ಅಧಿಕಾರಿಗಳನ್ನು ಕಂಡು ಮಾತಾಡಿದರು. ಶ್ರೀ॥ ಅಶ್ವತ್ಥರಾವ್ ಮಹಿಷಿಯವರ ಶ್ರೀ॥ ಗೋಕಾಕ್‌ರವರ ಆತಿಥ್ಯವನ್ನು ಸ್ವೀಕರಿಸಿ ತಿಲಕ್ ಮಂದಿರದಲ್ಲಿ 'ರಾಷ್ಟ್ರೀಯ ಸಂಸ್ಕೃತಿ' ಎಂಬ ವಿಷಯವಾಗಿ ಇಂಗ್ಲಿಷಿನಲ್ಲೂ, 'ಕನ್ನಡ ಸಾಹಿತ್ಯ'ದ ವಿಚಾರವಾಗಿ ಕನ್ನಡದಲ್ಲೂ ಭಾಷಣಮಾಡಿದರು.

**ಹಾನಗಲ್ಲು:** 'ಶ್ರೀ'ಯವರು ೧೮-೪-೪೦ನೆಯ ಪ್ರಾತಃಕಾಲ ಹಾನಗಲ್ಲಿಗೆ ತೆರಳಿ, ಅಲ್ಲಿ ೧೮, ೧೯ನೆಯ ತಾರೀಖುಗಳಲ್ಲಿ ನಡೆದ ವಸಂತ ಸಾಹಿತ್ಯೋತ್ಸವದಲ್ಲಿ ಭಾಗವಹಿಸಿದರು.

ಉತ್ಸವದ ಸಂಬಂಧವಾಗಿ ಮೊದಲನೆಯ ದಿನ ಬೆಳಗ್ಗೆ ಸಮ್ಮೇಳನಾಧ್ಯಕ್ಷರು, ಪರಿಷತ್ತಿನ ಉಪಾಧ್ಯಕ್ಷರು, ನವಿಲುಗುಂದ ಮತ್ತು ಹಾನಗಲ್ಲಿನ ಶ್ರೀ ಸ್ವಾಮಿಗಳವರು, ಸ್ವಾಗತ ಸಮಿತಿಯ ಅಧ್ಯಕ್ಷರು—ಇವರ ಮೆರವಣಿಗೆ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಧ್ವಜವಂದನೆಯಾದ ಬಳಿಕ ಉತ್ಸವವನ್ನು ನವಿಲುಗುಂದದ ಶ್ರೀ ಶ್ರೀ ಬಸವಲಿಂಗಸ್ವಾಮಿಗಳು ಮೊದಲು ಮಾಡಿಕೊಟ್ಟರು. 'ಶ್ರೀ'ಯವರು ಬಸವಣ್ಣನವರ ವಿಚಾರವಾಗಿ ಉಪನ್ಯಾಸಮಾಡಿದರು.

ಸಂಜೆ ಧಾರವಾಡ ಜಿಲ್ಲಾ ಸಂಸ್ಥೆಯ ಶಾಲಾ ಸಮಿತಿಯ ಅಧ್ಯಕ್ಷರೂ ಸುಪ್ರಸಿದ್ಧ ದೇಶಭಕ್ತರೂ ಆದ ಶ್ರೀಮಾನ್ ಕೆ. ಎಫ್. ಪಾಟೀಲರು ವಿಚಾರಪ್ರಚೋದಕವಾದ ಮತ್ತು ಸ್ಫೂರ್ತಿದಾಯಕವಾದ ಭಾಷಣ ಮಾಡಿದರು. ರಾತ್ರಿ ಸ್ಥಳೀಯ ಸಂಗೀತಗಾರರ ಹಾಡುಗಾರಿಕೆ ಇತ್ತು.

೧೯ನೆಯ ತಾರೀಖು ಬೆಳಗ್ಗೆ ೮ರಿಂದ ೧೨ರ ವರೆಗೆ 'ಶ್ರೀ'ಯವರು ಹಾವೇರಿಗೆ ಹೋಗಿ, ಅಲ್ಲಿ ಡಾ॥ ಗೋಕರ್ಣರವರು ನಡಸುತ್ತಿರುವ ಹೆಣ್ಣುಮಕ್ಕಳ ಖಾಸಗಿ ಶಾಲೆಯ ಬಹುಮಾನ ವಿನಿಯೋಗ ಸಮಾರಂಭದಲ್ಲಿ ಭಾಗವಹಿಸಿ ಹೆಣ್ಣುಮಕ್ಕಳು ಸರಿಯಾದ ವಿದ್ಯೆಯನ್ನು ಪಡೆದು ಕನ್ನಡಕ್ಕೆ ಸಲ್ಲಿಸಬೇಕಾದ ಸೇವೆಯನ್ನು ಒತ್ತಿಹೇಳಿದರು. ಮಧ್ಯಾಹ್ನ ೩ರಿಂದ ೪ ಗಂಟೆಯವರೆಗೆ 'ಪ್ರಪಂಚದ ನಾಟಕಗಳು' ಎಂಬ ವಿಷಯವನ್ನು ಕುರಿತು ಸ್ಥಳೀಯ ಕ್ಲಬ್ ಕಟ್ಟಡದಲ್ಲಿ ಇಂಗ್ಲಿಷಿನಲ್ಲಿ ಭಾಷಣ ಮಾಡಿದರು. ಬಳಿಕ ಹಾನಗಲ್ಲಿಗೆ ಮರಳಿ ಹೋಗಿ ಸಾಹಿತ್ಯೋತ್ಸವದ ಮುಕ್ತಾಯದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. 'ಶ್ರೀ'ಯವರೂ, ಶ್ರೀ॥ ಮುದವೀಡು ಕೃಷ್ಣರಾಯರೂ, ನವಿಲುಗುಂದ ಮತ್ತು ಹಾನಗಲ್ಲು ಸ್ವಾಮಿಗಳೂ ಭಾಷಣ ಮಾಡಿ ಉತ್ಸವದ ಚಾಲಕರನ್ನು ಅಭಿನಂದಿಸಿದರು. ಸ್ಥಳದ ತರುಣರ ಉತ್ಸಾಹದಿಂದಲೂ, ಶಾಲಾ ಶಿಕ್ಷಕರ ಸಹಕಾರದಿಂದಲೂ ಶ್ರೀ॥ ನರಸಿಂಗರಾವ್ ದೇಸಾಯಿ ಮುಂತಾದ ಹಿರಿಯರ ಬೆಂಬಲದಿಂದಲೂ ಹಾನಗಲ್ಲಿನ ಸಾಹಿತ್ಯೋತ್ಸವ ಬಹಳ ಯಶಸ್ವಿಯಾಗಿ ಜರುಗಿತು.

**ಸಿಗ್ಗಾಂವಿ:** ಅದೇ ರಾತ್ರಿ ೧೨ ಗಂಟೆಗೆ 'ಶ್ರೀ'ಯವರು ಸಿಗ್ಗಾಂವಿಗೆ ತೆರಳಿ, ಆ ನಟ್ಟಿರುಳಿನಲ್ಲೂ ಉತ್ಸಾಹದಿಂದ ಕಿಕ್ಕಿರಿದು ನೆರೆದಿದ್ದ ಸಾವಿರಾರು ಕನ್ನಡಿಗರ ಸಭೆಯಲ್ಲಿ ಮಾತನಾಡಿ ಕನ್ನಡ ಪ್ರಚಾರ ಮಾಡಿದರು.

**ರಾಣಿಬೆನ್ನೂರು:** ೨೦ನೆಯ ತಾರೀಖು ರಾಣೀಬೆನ್ನೂರಿಗೆ ತೆರಳಿ ಅಲ್ಲಿನ ಕರ್ನಾಟಕ ಸಂಘಕ್ಕೆ ಭೇಟಿಯಿತ್ತರು. ಪೌರಸಭಾ ಮಂದಿರದಲ್ಲಿ ಸಾಹಿತ್ಯ ಪರಿಷತ್ತಿನ ಉದ್ದೇಶಗಳನ್ನು ಕುರಿತು ಭಾಷಣ ಮಾಡಿದರು.

**ಮುಂದಿನ ಕಾರ್ಯಕ್ರಮ**

ಕರ್ತವ್ಯ ಕಾರಣ ಮೈಸೂರಿಗೆ ಹಿಂತಿರುಗಬೇಕಾಗಿ, ಸೋಲಾಪುರ, ಬಿಜಾಪುರ ಮುಂತಾದ ಕಡೆಯ ಪ್ರವಾಸವನ್ನು ಸದ್ಯಕ್ಕೆ ನಿಲ್ಲಿಸಬೇಕಾದುದರಿಂದ, ಆ ಕಡೆಯ ಕಾರ್ಯಕರ್ತರಿಗೆ ಆದ ಅನನುಕೂಲಕ್ಕಾಗಿ 'ಶ್ರೀ'ಯವರು ವಿಷಾದಿಸುತ್ತಾರೆ. ಇದೇ ತಿಂಗಳು ೨೮ರಿಂದ ಮುಂದೆ ಕಾರವಾರ, ಮಂಗಳೂರು, ಕೊಡುಗು ಪ್ರಾಂತಗಳಲ್ಲೂ, ಮೇ ೧೨ರಿಂದ ಆಚೆಗೆ ಸೋಲಾಪುರ, ಬಿಜಾಪುರ, ಹೈದರಾಬಾದುಗಳಲ್ಲೂ, ಆ ತರುವಾಯ ಮೈಸೂರು ಮತ್ತು ಕೊಡಗು ಪ್ರಾಂತಗಳಲ್ಲೂ ಕನ್ನಡ ಪ್ರಚಾರ ಸಂಚಾರ ನಡಸುವರು.

## ಕನ್ನಡ ಸುದ್ದಿ

**ಮೈಸೂರು: ಶ್ರೀ ಮಹಾವೀರ ಜಯಂತಿ**

ಮೇಲ್ಕಂಡ ಉತ್ಸವವನ್ನು ಮೈಸೂರಿನ ಜೈನ ಸಮಾಜದ ದಿಗಂಬರ, ಶ್ವೇತಾಂಬರ ಮತ್ತು ಸ್ಥಾನಕವಾಸಿಗಳು ರಂಗಾಚಾರ್ಲು ಸ್ಮಾರಕಭವನದಲ್ಲಿ ಕಳೆದ ೨೦ನೆಯ ಶನಿವಾರ ಸಂಜೆ ೬-೩೦ಕ್ಕೆ ಡಾ॥ ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್., ಅವರ ಅಧ್ಯಕ್ಷತೆಯಲ್ಲಿ ನಡಸಿದರು. ಬೆಳಗ್ಗೆ ಜಿನ ಚೈತ್ಯಾಲಯಗಳಲ್ಲಿ ಪ್ರಾರ್ಥನೆ, ಭಗವಾನ್ ಶ್ರೀ ಮಹಾವೀರಸ್ವಾಮಿಯ ಉತ್ಸವಗಳು ನಡೆದುವು. ಸಂಜೆ ಸಾರ್ವಜನಿಕ ಸಭೆ ನಡೆಯಿತು. ಭಾಷಣಗಳು, ಆಸ್ಥಾನ ವಿದ್ವಾನ್ ಟಿ. ಚೌಡಯ್ಯನವರು ಮತ್ತು ಅವರ ಮಿತ್ರರ ಸಂಗೀತ ಮುಂತಾದ ಕಾರ್ಯಕ್ರಮಗಳು ಜರುಗಿದುವು.

**ಹೊಳೆನರಸೀಪುರ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಮೊದಲನೆಯ ವಾರ್ಷಿಕೋತ್ಸವ ಕಳೆದ ೨೧ನೆಯ ಭಾನುವಾರ ಶ್ರೀಮಾನ್ ಮಾಸ್ತಿ ವೆಂಕಟೇಶಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ರಾತ್ರಿ ಶ್ರೀ॥ ಕೆ. ವಿ. ಪುಟ್ಟಪ್ಪನವರ 'ಸ್ಮಶಾನ ಕುರುಕ್ಷೇತ್ರ' ಮತ್ತು 'ವಾಲ್ಮೀಕಿಯ ಭಾಗ್ಯ' ಎಂಬ ಎರಡು ನಾಟಕಗಳ ಪ್ರದರ್ಶನ ನಡೆಯಿತು.

**ಮಂಡ್ಯ: ಒಂದು ಅರಿಕೆ**

'ಕನ್ನಡ ನುಡಿ'ಯ ೫-೪-೪೦ ರ ಸಂಚಿಕೆಯಲ್ಲಿ ಕರ್ನಾಟಕ ಸಂಘದ ಆಶ್ರಯದಲ್ಲಿ ಕೆಲವು ಕಾರ್ಯಕಲಾಪಗಳು ನಡೆಯುತ್ತಿರುವುದೆಂದು ಪ್ರಕಟವಾಗಿತ್ತಷ್ಟೆ. ಆ ಕಾರ್ಯಕಲಾಪಗಳನ್ನು ನಡಸುತ್ತಿರುವುದು ಸಂಘವಲ್ಲವೆಂದೂ, ಶ್ರೀ॥ ಮ. ಸು. ಶ್ರೀನಿವಾಸರಾಯರೆಂಬ ಕನ್ನಡ ಭಾಷಾಭಿಮಾನಿಗಳು ಸಾರ್ವಜನಿಕರ ಪ್ರೋತ್ಸಾಹದಿಂದ ನಡಸುತ್ತಿರುವರೆಂದೂ ಶ್ರೀ॥ ಆರ್. ನರಸಿಂಹಮೂರ್ತಿಯವರು ತಿಳಿಸುತ್ತಾರೆ.

೪೯-೯೦೦—೧೯೪೦
ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು




ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

ಸಂಪುಟ ೨ | ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ | ಸಂಪಾದಕ :
ಸಂಚಿಕೆ ೨೮ | ಬೆಂಗಳೂರು, ಶುಕ್ರವಾರ, ಮೇ ೩, ೧೯೪೦ | ಬಿ. ವೆಂಕೋಬರಾವ್, ಬಿ.ಎ.

## ಕನ್ನಡ ನಾಟಕಗಳು

### ಬೆಳಗಾಂವಿ ಸಾಹಿತ್ಯ ಸಮ್ಮೇಳನದ ನಾಟ್ಯಗೋಷ್ಠಿಯ ಸ್ವಾಗತಾಧ್ಯಕ್ಷರಾದ ಪ್ರೊ|| ವಿ. ಜಿ. ಕುಲಕರ್ಣಿಯವರ ಭಾಷಣ

(೩)

ಜನರು ವಾಕ್ಪಟಗಳಿಗೆ ಮೆಚ್ಚಿದ ಈ ಕಾಲದಲ್ಲಿ, ಕಂಪನಿಗಳು ಮುಗ್ಗಿದ ಈ ಕಾಲದಲ್ಲಿ ನಾಟಕಗಳ ಪ್ರಚಾರವನ್ನು ಮಾಡುವ ಬಗೆ ಯಾವುದು? ನಾಟಕಗಳ ಪ್ರಸಾರವಂತೂ ನಮ್ಮ ನಿಮ್ಮ ಅಭಿಪ್ರಾಯ ದಂತೆ ಆಗಲೇಬೇಕು. ಏಕೆಂದರೆ ನಾಟಕಗಳು ಜನರಿಗೆ ಮೇಲ್ತರಗತಿಯ ರಸಾನಂದವನ್ನುಂಟುಮಾಡುವುದಲ್ಲದೆ ಒಳ್ಳೆಯ ಬೋಧೆಯನ್ನು ಮಾಡುವುದಕ್ಕೂ ಸಹಾಯಕಾರಿಯಾಗಿವೆಯೆಂದು ನಾವು ನಂಬಿದ್ದೇವೆ. ಉತ್ತಮ ನಾಟಕಗಳು ಜನತೆಯ ಹೃದಯವನ್ನು ಸುಸಂಸ್ಕೃತಗೊಳಿಸುವುವು; ಒಳಿತುಕೇಡುಗಳನ್ನು ತಿಳಿಸಿಕೊಡುವವು. ಸಾಮಾನ್ಯ ಜನರಲ್ಲಿ ಸಂಸ್ಕಾರವನ್ನು ಹರಡುವ ಮಹಾಕಾರ್ಯವನ್ನು ಇಲ್ಲಿಯ ವರೆಗೆ ರಾಮಾಯಣ ಮಹಾಭಾರತಾದಿ ಪುರಾಣ ಪ್ರವಚನಗಳು ಮಾಡಿದುವು. ಪುರಾಣಗಳಲ್ಲಿ ವಿಶ್ವಾಸ ಕಡಮೆಯಾಗುತ್ತಿರುವ ಈ ಕಾಲದಲ್ಲಿ ನಾಟಕಗಳು ಈ ಬಗೆಯಾದ ಕಾರ್ಯವನ್ನು ಮಾಡಬಲ್ಲುವು.

ಒಳ್ಳೆಯ ನಾಟಕಗಳ ಪ್ರಚಾರವನ್ನು ಮಾಡುವುದು ಕಂಪನಿಗಳಿಗಂತೂ ಸಾಧ್ಯವಿಲ್ಲ. ವಾಕ್ಪಟಗಳ ಸ್ಪರ್ಧೆಯನ್ನು ಅವು ಎದುರಿಸಲಾರವು. ಅಲ್ಲದೆ, ಕೇವಲ ಒಳ್ಳೆಯ ನಾಟಕಗಳನ್ನೇ ಆಡಿದರೆ ಕಂಪನಿಗಳು ಲಾಭದಾಯಕವಾಗಲಿಕ್ಕಿಲ್ಲ. ಆದುದರಿಂದ ಈ ಕಾರ್ಯವನ್ನು ತಮ್ಮೊಂದು ಉತ್ಸಾಹಕ್ಕಾಗಿ ಮಾಡುವ ಸುಶಿಕ್ಷಿತ ತರುಣ ತರುಣಿಯರು ಕೈಕೊಳ್ಳಬೇಕು. ಊರೂರಿಗೆ ಅಮೆಚೂರ್ ನಾಟಕ ಸಂಘಗಳು ಏರ್ಪಡಬೇಕು. ಕರ್ನಾಟಕದ ಎಷ್ಟೋ ಪಟ್ಟಣಗಳಲ್ಲಿ ಅಮೆಚೂರ್ ಸಂಘಗಳಿವೆ. ಇವುಗಳಲ್ಲಿ ಕೆಲವು ಸ್ಥಾಪನೆಯಾಗಿ ಬಹಳ ವರ್ಷಗಳಾದುವು; ಕೆಲವು ಈ ಕ್ಷೇತ್ರದಲ್ಲಿ ಉತ್ತಮಕಾರ್ಯ ಮಾಡಿವೆ. ಇಂತಹ ಸಂಸ್ಥೆಗಳಲ್ಲಿ ಬೆಂಗಳೂರಿನ ಅಮೆಚೂರ್ ಸಂಘ (A.D.A.), ಧಾರವಾಡದ ನಾಟ್ಯವಿಲಾಸಿ ಸಂಘ, ಬಾಗಿಲುಕೋಟೆಯ ವಾಸುದೇವ ವಿನೋದಿನೀ ಸಭೆ, ಪುತ್ತೂರಿನಲ್ಲಿ ಶ್ರೀ|| ಕಾರಂತರ ನೇತೃತ್ವದಲ್ಲಿ ಜರುಗುವ ದಸರಾ ಮಹೋತ್ಸವ ಇವುಗಳನ್ನು ನಿರ್ದೇಶಿಸದಿರಲಾರೆ. ಅಲ್ಲದೆ, ಕರ್ನಾಟಕದಲ್ಲಿಯ ಶಾಲೆ ಕಾಲೇಜುಗಳಲ್ಲಿ ತಮ್ಮಲ್ಲಿ ಜರುಗುವ ವಿವಿಧ ಉತ್ಸವಗಳಿಗಾಗಿ ನಾಟ್ಯಪ್ರಯೋಗಗಳನ್ನು ಮಾಡುತ್ತಾರೆ. ಈ ಬಗೆಯಾಗಿ ನಮ್ಮ ಪ್ರಾಂತದಲ್ಲಿ ಅಮೆಚೂರ್ ಸಂಘಗಳ ಚಟುವಟಿಕೆಗಳು ತಕ್ಕ ಮಟ್ಟಿಗೆ ಚೆನ್ನಾಗಿ ಸಾಗಿವೆಯೆನ್ನಬಹುದಾದರೂ ಇಷ್ಟೆ ಸಾಲದೆಂದು ನಾನು ಅಭಿಪ್ರಾಯಪಡುತ್ತೇನೆ. ಆದುದರಿಂದ ಊರೂರಿಗೆ ಅಮೆಚೂರ್ ನಾಟಕಸಂಘಗಳು ಸ್ಥಾಪನೆಯಾಗುವಂತೆ ನಾವು ಯತ್ನಿಸಬೇಕು.

ಅಮೆಚೂರ್ ಸಂಘಗಳಿಗೆ ಮುಕ್ತ ಹಸ್ತದಿಂದ ಸಹಾಯಮಾಡುವ ಪ್ರವೃತ್ತಿ ನಮ್ಮ ಜನರಲ್ಲಿ ಹುಟ್ಟುವುದು ಅವಶ್ಯವಿದೆ. ಅಮೆಚೂರ್ ನಾಟಕಗಳೆಂದಕೂಡಲೆ ಫ್ರೀ ಪಾಸಿನ ನಿರೀಕ್ಷಣೆಮಾಡುವ ಜನರೇ ಹೆಚ್ಚು. ಹಣದ ಕೊರತೆಯ ಮೂಲಕ ಇಂತಹ ಸಂಘಗಳಿಗೆ ತಮ್ಮ ಪ್ರಯೋಗಗಳನ್ನು ಯಶಸ್ವಿಯಾಗಿ ಮಾಡುವುದಾಗುವುದಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಒಂದೊಂದು ನಾಟಕಪ್ರಯೋಗಕ್ಕೆ ಎಷ್ಟು ಧನವ್ಯಯ ಮಾಡಿ ಕಲಾದೃಷ್ಟಿಯಿಂದಲೂ ಔಚಿತ್ಯ ದೃಷ್ಟಿಯಿಂದಲೂ ಅದನ್ನು ಸರ್ವಾಂಗ ಪರಿಪೂರ್ಣಗೊಳಿಸಲಿಕ್ಕೆ ಯತ್ನಿಸುತ್ತಾರೆಂಬುದನ್ನೂ ನಮ್ಮಲ್ಲಿಯ ಹರಕು ಮುರುಕಾದ ಪ್ರಯೋಗಗಳನ್ನೂ ತುಲನೆಮಾಡಿದರೆ ನಮ್ಮ ಜನರ ಕಲಾಸಂಬಂಧದಲ್ಲಿಯ ಅನಾಸ್ಥೆ ಸ್ಪಷ್ಟವಾಗುತ್ತದೆ. ಮಹಾಜನರ ಉದಾರಾಶ್ರಯ ಹೆಚ್ಚಾಗಬೇಕು.

ಸಾರ್ವಜನಿಕರು ಇಂಥ ಆಸ್ಥೆಯನ್ನು ತೋರಿಸುವವರೆಗೆ ಮುನಿಸಿಪಾಲಿಟಿ, ಲೋಕಲ್ ಬೋರ್ಡು ಮೊದಲಾದ ಸ್ಥಾನಿಕ ಸಂಸ್ಥೆಗಳೂ ಸರಕಾರದವರೂ ನಾಟ್ಯಕಲೆಗೆ ಸಹಾಯವನ್ನು ಸಲ್ಲಿಸುವಂತೆ ನಾವು ಯತ್ನಿಸಬೇಕು. ನಾಟ್ಯಕಲೆ ಸರ್ವಜನೋಪಯೋಗಿಯೂ ಸರ್ವಜನರಂಜಕವೂ ಎಂಬ ಮಾತನ್ನು ಅವರ ನಿದರ್ಶನಕ್ಕೆ ತರಬೇಕು. ವಾಕ್ಪಟಗಳ ಈ ಯುಗದಲ್ಲಿ ಎಷ್ಟೋ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನಾಟಕಗಳನ್ನು ಆಡಬೇಕೆಂದರೆ ಥಿಯೇಟರುಗಳೇ ದೊರೆಯುವುದಿಲ್ಲ. ಇಂಥ ಪಟ್ಟಣಗಳಲ್ಲಿ ಮುನಸಿಪಾಲಿಟಿಯವರು ನಾಟಕ ಗೃಹಗಳನ್ನು ಕಟ್ಟಿಸಿ ಅಮೆಚೂರ್ ಸಂಘಗಳಿಗೂ ನಾಟಕಮಂಡಳಿಗಳಿಗೂ ಉಪಯೋಗಿಸಲಿಕ್ಕೆ ಏಕೆ ಕೊಡಬಾರದು? ಇದೊಂದೇ ಅಲ್ಲದೆ ಬೇರೆ ವಿಧದಲ್ಲಿಯೂ ಅವರು ನಾಟ್ಯಕಲೆಗೆ ಪ್ರೋತ್ಸಾಹಕೊಡಬಹುದು.

ಇನ್ನು ಒಂದೆರಡು ಸೂಚನೆಗಳನ್ನು ಮಾತ್ರ ತಮ್ಮೆದುರಿಗಿಟ್ಟು ನನ್ನ ಭಾಷಣವನ್ನು ಮುಗಿಸುತ್ತೇನೆ.

(೧) ಕರ್ನಾಟಕದ ಬೇರೆ ಬೇರೆ ಅಮೆಚೂರ್ ಸಂಘಗಳ ಹಾಗೂ ನಾಟಕ ಕಂಪನಿಗಳ ಪರಸ್ಪರ ಪರಿಚಯಕ್ಕೂ ಸಹಕಾರ್ಯಕ್ಕೂ ಒಂದು ಯೋಜನೆಯನ್ನು ಸಿದ್ಧಮಾಡಬೇಕು.

(೨) ಪ್ರತಿವರ್ಷವೂ ಅಖಿಲ ಕರ್ನಾಟಕದಲ್ಲಿ ಅತ್ಯುತ್ತಮವೆಂದು ತಜ್ಞರು ನಿರ್ಣಯಿಸಿದ ಅಮೆಚೂರ್ ನಾಟಕ ಪ್ರಯೋಗಕ್ಕೆ ಒಂದು ಬಹುಮಾನವನ್ನು ಕೊಡುವ ವ್ಯವಸ್ಥೆ ಮಾಡಬೇಕು. ಅದು Rolling Shield ಆಗಿರಬೇಕು.

(೩) ನಾಟ್ಯಕಲೆಯ ವಿಷಯವಾಗಿಯೂ, ಪ್ರಯೋಗ ಶಾಸ್ತ್ರದ ವಿಷಯವಾಗಿಯೂ, ಅಭಿನಯ ಕಲೆಯ ವಿಷಯವಾಗಿಯೂ ಕೆಲವು ಸುಲಭವಾದ ಗ್ರಂಥಗಳನ್ನು ಹೊರಡಿಸುವ ಯೋಜನೆಯನ್ನು ಕೈಕೊಳ್ಳಬೇಕು.

## ಕನ್ನಡ ನುಡಿ

(ಮಹಾ ವಿದ್ವಾನ್, ಶ್ರೀ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯರು)

ಕನ್ನಡ ನುಡಿ ಎಂದರೇನು? ಕನ್ನಡ ಎಂದರೆ ಒಂದು ದೇಶ ವಿಶೇಷ; ನುಡಿ ಎಂದರೆ ಆ ದೇಶದ ಜನಗಳ ಭಾಷೆ; ಅಥವಾ ಕನ್ನಡ ಎಂಬ ನುಡಿ ಕನ್ನಡ ನುಡಿ ಎಂತಲೂ ಹೇಳಬಹುದು. ಕನ್ನಡ ನುಡಿಯ ರೂಪವಾದ ಪತ್ರಿಕೆಯನ್ನೂ 'ಕನ್ನಡ ನುಡಿ'ಯೆಂದು ಕರೆಯುತ್ತಾರೆ. ಈ ಪತ್ರಿಕೆಯು ಈ ದೇಶದ ಎಲ್ಲಾ ಜನಗಳಿಗೂ ಬೇಕಾಗಬಹುದಾದ ಸಾಮಾನ್ಯವಾದ ವಿಷಯಗಳನ್ನು ತಿಳಿಯಪಡಿಸುವದು. ಅಂದರೆ ಕನ್ನಡ ಭಾಷೆಯ ವಿಚಾರ, ದೇಶದ ಸಮಾಚಾರ, ಕೈಗ್ಗಾರಿಕೆ ಮುಂತಾದ ಜನಜೀವನ ಸಾಧನಗಳು, ಜ್ಞಾನಾಭಿವೃದ್ಧಿಕರವಾದ ಶಾಸ್ತ್ರದ ಸಂಗತಿ ಇವು ಮೊದಲಾದ ಮುಖ್ಯ ವಿಷಯಗಳಲ್ಲಿ ಕನ್ನಡಿಗರೆಲ್ಲರಿಗೂ ತಿಳಿಯ ಬೇಕಾದ ಸರ್ವಸಾಧಾರಣ ಸಂಗತಿಗಳನ್ನು ಈ ಪತ್ರಿಕೆ ಒಳಗೊಂಡಿರುವದು. ಕನ್ನಡ ಸಾಹಿತ್ಯ ವಿಷಯವನ್ನು ಬೇರೊಂದು ಪತ್ರಿಕೆಯು ವಿಸ್ತಾರವಾಗಿ ಪ್ರಕಟಪಡಿಸುವುದು. ಅದಂತಿರಲಿ, ಕನ್ನಡ ಮಾತಾಡುವ ಜನಗಳಿರುವ ದೇಶವೆಲ್ಲಾ ಕನ್ನಡ ನಾಡು. ಕನ್ನಡ ನಾಡನ್ನಾಳುವವರು ನನ್ನ ತಾಯಿತಂದೆಗಳೆಂತಲೂ, ಕನ್ನಡಿಗರೆಲ್ಲರೂ ನನ್ನ ಸಹೋದರರೆಂತಲೂ ಭಾವಿಸುತ್ತೇನೆ. "ಯಾದೃಶೀ ಭಾವನಾ ಯತ್ರ ಸಿದ್ಧಿರ್ಭವತಿ ತಾದೃಶೀ"—ಈ ರೀತಿ ಎಲ್ಲರೂ ಆಚರಿಸಿದರೆ ಕನ್ನಡದ ಏಕೀಕಣರ ಸುಲಭ. ಕನ್ನಡವನ್ನು ಕಸ್ತೂರಿಯೆಂದು ಕೆಲವರು ಹೊಗಳುತ್ತಾರೆ. 'ಸಿರಿಗನ್ನಡಂಗೆಲ್ಗೆ' ಎಂದು ಕನ್ನಡಕ್ಕೆ ಸಿರಿಯನ್ನು ಮತ್ತೆ ಕೆಲವರು ಪೋಣಿಸುತ್ತಾರೆ. ಇವುಗಳೂ ಭಾವನಾ ವಿಶೇಷಗಳೇ. ಕೇಳುವಂಥವರಿಗೆ ಗಾಬರಿಯಾಗುವಂತೆ ಗಡಿಬಿಡಿಯಿಲ್ಲದೆ ಕೇಳುವದಕ್ಕೆ ಇಂಪಾಗುವ ಹಾಗೆ ಕನ್ನಡದಲ್ಲಿ ಮೃದುವಾದ ಶಬ್ದಗಳಿರುವಿಕೆಯೇ ಅಂತಹ ಭಾವನಾವಿಶೇಷಕ್ಕೆ ಕಾರಣ. ಕನ್ನಡಿಗರೇ! ನನ್ನ ಪ್ರಾರ್ಥನೆಯನ್ನು ಲಾಲಿಸಿ, ನೀವೆಲ್ಲರೂ 'ಕನ್ನಡ ನುಡಿ'ಯನ್ನು ಓದಿ, ವಿಷಯ ವಿಚಾರವನ್ನು ಮಾಡಿ, ಜ್ಞಾನವನ್ನು ಅಭಿವೃದ್ಧಿ ಪಡಿಸಿಕೊಳ್ಳಿರಿ.

"ನಹಿ ಜ್ಞಾನೇನಸದೃಶಂ ಪವಿತ್ರಮಿಹವಿದ್ಯತೇ"
"ಸರ್ವೇಜನಾಸ್ಸುಖಿನೋಭವನ್ತು"

---

## ಹೊಂಬಿಸಿಲು

ಬುವಿಯೆಣ್ದೆಸೆಯಲಿ, ಹಸಲೆಯ ಹಸುರಲಿ,
ಹೊಮ್ಮಿದೆ ಹೊಂಬಿಸಿಲು.
ಕವಿದೈತನ್ನಿರಿ, ಸವಿಯಲು ಬನ್ನಿರಿ,
ಕಣ್ಗಳ ತುಂಬಿಸಲು. ॥ ೧ ॥

ಹಸುರೊಳಗೊಸರುವ ಬಿಸಿಲಿನ ರಶಿಮೆಗೆ
ಹಿಡಿಯಿರಿ ಹೃದಯವನು.
ಕರಗಲಿ ಕತ್ತಲು, ತೆರೆಯಿರಿ ಸುತ್ತಲು
ಭಾವದ ಪದರವನು. ॥ ೨ ॥

ಸುಂದರ ಸುರನದಿ, ಸಂಜೆಯ ಸಲಿಲದಿ
ಇಳಿಯಿದು ವಿಾಯುತಿದೆ.
ಗಂಗೆಯ ಸ್ನಾನದಿ ಚಂಗನೆ ಮೈಗರೆ–
ದಲಸತೆ ಸಾಯುತಿದೆ! ॥ ೩ ॥

ಜಡತೆಯ ತುಳಿಯಿರಿ, ಜಾಡ್ಯವನುಳಿಯಿರಿ,
ಪ್ರಕೃತಿಯ ಜಾತ್ರೆಯಲಿ.
ಯಾತ್ರೆಯ ಗೈಯಿರಿ, ತೀರ್ಥವನೊಯ್ಯಿರಿ
ನಿಮ್ಮೆದೆ ಪಾತ್ರೆಯಲಿ. ॥ ೪ ॥

—ಎಂ. ರಾಮರಾವ್, ದಾವಣಗೆರೆ

## ಧಾರವಾಡ ಜಿಲ್ಲೆಯ ಹಾನಗಲ್ಲಿನಲ್ಲಿ ವಸಂತ ಸಾಹಿತ್ಯೋತ್ಸವ

**ಹಾನಗಲ್ಲಿನಲ್ಲಿ ಕಳೆದ ತಿಂಗಳು ೧೮, ೧೯ರಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಸ್ವಾಗತಾಧ್ಯಕ್ಷರಾದ ಶ್ರೀ॥ ಕಲ್ಲಾಪುರದ ದೇಶಾಯಿ ನರಸಿಂಗರಾಯರು ಮಾಡಿದ ಭಾಷಣ**

ನಮ್ಮ ಈ ಹಾನಗಲ್ಲು ತಾಲ್ಲೂಕಿನ ಪ್ರಾಚೀನ ವೈಭವ ಕನ್ನಡ ನಾಡಿಗೇ ಹೆಮ್ಮೆಯನ್ನು ತರುವಂತಹದಿರುವುದು. ಮಹಾಭಾರತ ಕಾಲದಲ್ಲಿ ಶ್ರೀ ಕೃಷ್ಣ ಪರಮಾತ್ಮನ ಪಂಚಪ್ರಾಣರಾಗಿದ್ದ ಪಾಂಡವರು ಒಂದು ವರ್ಷದ ಅಜ್ಞಾತವಾಸವನ್ನು ಕಳೆದ ವಿರಾಟನಗರಿ ಇದೇ ಹಾನಗಲ್ಲು ಎಂದು ಐತಿಹ್ಯವುಂಟು. ಬಲ್ಲವ ರೂಪಧಾರಿಯಾದ ಭೀಮಸೇನನು ಕೀಚಕನನ್ನು ಸದೆಬಡಿದ ಗರಡಿಮನೆ ನಮ್ಮ ಈಗಿನ ನಿರ್ನಾಮವಾದ ಕೋಟೆಯೊಳಗೇ ಇತ್ತೆಂದು ನಮ್ಮ ಹಿರಿಯರು ಹೇಳುತ್ತಿದ್ದುದನ್ನು ನಾವು ಕೇಳಿದ್ದೇವೆ. ಮುಂದೆ ಐತಿಹಾಸಿಕ ಕಾಲದಲ್ಲಿ ಬನವಾಸಿಯ ಕದಂಬ ರಾಜರು ಕನ್ನಡ ರಾಜ್ಯವನ್ನು ಕಟ್ಟಿ ಆಳುತ್ತಿದ್ದ ಕಾಲಕ್ಕೆ ನಮ್ಮಾ ಹಾನಗಲ್ಲು ಒಂದು ರಾಜಮನೆತನದ ರಾಜಧಾನಿಯಾಗಿದ್ದಿತೆಂದು ಪ್ರಸಿದ್ಧಿಯುಂಟು. ಕನ್ನಡ ಜನಾಂಗದ ಘನತೆಯ ಪರಮಾವಧಿಯ ಉತ್ಕರ್ಷಕಾಲವಾದ ವಿಜಯನಗರ ಸಮ್ರಾಟರ ಆಳಿಕೆಯಲ್ಲಿ ಈ ಹಾನಗಲ್ಲ ಪ್ರದೇಶ ಸಕಲ ಸಂಪತ್ತುಗಳ ಆಗರವಾಗಿದ್ದಿತು ಎಂಬುದನ್ನು ಇಂದಿಗೂ ನಿದರ್ಶನಕ್ಕೆ ತಂದುಕೊಡುತ್ತಿರುವ ಧರ್ಮಾನದಿಯ ಕಾಲುವೆಯ ಅವಶೇಷ ಇಂದಿನ ಅದರ ಹರಕುಮುರುಕು ಅವಸ್ಥೆಯಲ್ಲಿಯೂ ತಮ್ಮ ಕಣ್ಮನಗಳನ್ನು ತಣಿಸದಿರಲಾರದು. ಹಾಗೆಯೇ ನಮ್ಮಲ್ಲಿಯ ಭವ್ಯವಾದ, ವಿಶಾಲವಾದ, ಕಲಾಪ್ರಪೂರ್ಣವಾಗಿ ಮನೋಹರವಾಗಿರುವ ತಾರಕೇಶ್ವರನ ದೇವಾಲಯ ನಮ್ಮ ಪೂರ್ವಜರ ಕಲಾಭಿಸಂಧಿಯ ಚಿತ್ತಾಕರ್ಷಕ ದೃಷ್ಟಾಂತವಾಗಿರುದನ್ನು ತಾವು ಕಾಣದಿರಲಾರಿರಿ. ನಮ್ಮ ಹಿಂದಿನ ಕಾಲದ ಹಿರಿಮೆಯ ಈ ಹೆಗ್ಗುರುತುಗಳನ್ನು ನೋಡಿದರೆ ನಮ್ಮಾ ಹಾನಗಲ್ಲ ನಾಡು ತನ್ನ ಸಾಹಿತ್ಯ ಸಂಸ್ಕೃತಿಯ ಸೊಬಗಿನಲ್ಲಿಯೂ ಕನ್ನಡನಾಡಿನ ಬೇರೆ ಭಾಗಗಳಂತೆ ಚೆನ್ನಾಗಿಯೇ ಮುಂದುವರಿದಿತ್ತೆಂದು ನಾನು ತಮಗೆ ನಿಸ್ಸಂದೇಹವಾಗಿ ಹೇಳಬಲ್ಲೆನು. ಈ ಸಂಗತಿಯನ್ನು ಸಿದ್ಧಗೊಳಿಸುವುದಕ್ಕೆ ಅವಶ್ಯಕವಾದ ಅನೇಕ ಆಧಾರಗಳು ಶಿಲಾಲೇಖ, ವೀರಗಲ್ಲು, ತಾಮ್ರಪಟ ಮುಂತಾದವುಗಳ ಸ್ವರೂಪದಲ್ಲಿ ಇತ್ತಕಡೆಗೆ ವಿಪುಲವಾಗಿ ದೊರೆಯುತ್ತವೆಂಬುದನ್ನು ನಾನು ಬಲ್ಲಮಟ್ಟಿಗೆ ತಮಗೆ ನಿವೇದಿಸಬಯಸುತ್ತೇನೆ. ಆದರೆ ಅಖಂಡ ಕನ್ನಡನಾಡಿಗೆ ಒದಗಿರುವ ಈ ಕಾಲದ ಕಡುತರವಾದ ದುರ್ದೆಸೆಯಲ್ಲಿ ಪಾಲುಗಾರರಾಗಿರುವ ನಾವು ನಮ್ಮ ಪ್ರಾಚೀನ ಪರಂಪರೆಯ ಸಂಸ್ಕಾರಗಳಿಗೆ ಎಲ್ಲರಂತೆಯೇ ಎರವಾಗಿ, ಈ ಬಗೆಯ ಅನುಕಂಪನೀಯವಾದ ಅಸಹಾಯ ಸ್ಥಿತಿಯಲ್ಲಿ ನೂರಾರು ವರ್ಷಗಳನ್ನು ಕಳೆಯಬೇಕಾಗಿರುವುದಾದರೂ ಭಾಗವತರಾಟ, ಗೊಂಬೆಯಾಟ, ಲಾವಣಿಗಳ ಮಜಲು, ಹೆಣ್ಣುಮಕ್ಕಳ ಅಳ್ಳೀಕೋಟೆಯ ಕೋಲಾಟ ಮೊದಲಾದ ನಮ್ಮ ಪ್ರಾಚೀನ ಸಂಸ್ಕೃತಿಯ ಕುರುಹುಗಳು ನಮ್ಮಿತ್ತ ಕಡೆಯ ಜನಜೀವನದಲ್ಲಿ ಇನ್ನೂ ಬದುಕಿರುವುವೆಂಬ ಸಂತೋಷದ ಸಂಗತಿಯನ್ನು ತಮಗೆ ತಿಳಿಸದಿರಲಾರೆನು. ನಮ್ಮ ಜನಪದದ ಜೀವಂತತನದ ಲಕ್ಷಣಗಳಾಗಿರುವ ಈ ಪ್ರಕಾರಗಳೆಲ್ಲ ಪೂರಾ ನಿರ್ನಾಮವಾಗುವ ಮೊದಲೇ ತಮ್ಮಂತಹ ಮಹಾನುಭಾವರ ಪರಿಚಯವನ್ನು ಮಾಡಿಕೊಂಡು, ತಮ್ಮ ಸುಸಂಸ್ಕೃತವಾದ ಸಹವಾಸದಲ್ಲಿ ಕೆಲವೊಂದು ಕಾಲವನ್ನಾದರೂ ಆತ್ಮೋದ್ಧಾರದ ಬಗೆಗಳನ್ನು ತಿಳಿದುಕೊಳ್ಳುವುದಕ್ಕೆ ವಿನಿಯೋಗಿಸಿ, ನಮ್ಮ ಪ್ರಗತಿಯ ಮುಂದಿನ ದಾರಿಯನ್ನು ಕಂಡುಕೊಂಡು ಇನ್ನುಮುಂದಾದರೂ ನಮ್ಮೊಳಗೆ ಜೀವದ ಜೀವಾಳವಾಗಿ ನೆಲೆನಿಂತು ಬೆಳೆಯಬೇಕಾಗಿರುವ ಕನ್ನಡತನದ ಭಾವನೆಯನ್ನು ಎಚ್ಚರಿಸಿಕೊಂಡು ನಮ್ಮ ಮನುಷ್ಯತ್ವವನ್ನು ಉಳಿಸಿಕೊಂಡು ಬೆಳಸಿಕೊಂಡು ಬಾಳಬೇಕೆಂಬ ಹೆಚ್ಚಿನ ಹಂಬಲದಿಂದ ತಮ್ಮನ್ನೆಲ್ಲ ಬಹುಬಗೆಯ ತೊಂದರೆಗಳಿಗೆ ಈಡುಮಾಡಿ ಇಲ್ಲಿಯವರೆಗೆ ಬರಮಾಡಿಕೊಂಡಿದ್ದೇವೆ. ಸಂಕುಚಿತವಾದ ಕೌಟುಂಬಿಕ ಸಂಸಾರದ ಪರಲು

ಹರಿದುಕೊಂಡು ಸಂಪೂರ್ಣ ವಿರಕ್ತಿಯನ್ನವಲಂಬಿಸಿ ಆತ್ಮಸಾಕ್ಷಾತ್ಕಾರದ ಮೂಲಕ ಲಿಂಗಾಂಗಸಾಮರಸ್ಯದ ಕೈವಲ್ಯವನ್ನು ಕೈವಶಮಾಡಿಕೊಳ್ಳುವ ಮಾರ್ಗವನ್ನು ಅನುಸರಿಸುತ್ತಿರುವರಾದರೂ ಆತ್ಮೋದ್ಧಾರದ ಜೊತೆಯಲ್ಲಿಯೇ ಲೋಕೋದ್ಧಾರ ಕಾರ್ಯವನ್ನು ಕೈಕೊಂಡರೆ ಕೈವಲ್ಯ ಕರತಲಾಮಲಕವಾಗುವುದೆಂಬ ಪರಿಶುದ್ಧವಾದ ಭಾವನೆಯಿಂದ ಕನ್ನಡನಾಡು ನುಡಿಗಳ ಉನ್ನತಿಯ ಮಾರ್ಗಗಳನ್ನು ಜನತೆಗೆ ಬೋಧಿಸುವ ತಪಸ್ಸನ್ನು ಅಖಂಡವಾಗಿ ಆಚರಿಸುತ್ತಿರುವ ನವಿಲುಗುಂದದ ಗವೀಮಠದ ಪರಮ ಪೂಜ್ಯ ಶ್ರೀ ಬಸವಲಿಂಗ ಮಹಾಸ್ವಾಮಿಗಳವರು ನಮ್ಮ ಉಪಕ್ರಮವನ್ನು ತಮ್ಮ ಶುಭಂಕರವಾದ ಮಂಗಳಾಶೀರ್ವಾದಗಳಿಂದ ಆರಂಭಿಸುವ ಅನುಗ್ರಹ ಮಾಡಿರುವುದು ನಮಗೆ ಮಹತ್ಪುಣ್ಯಪ್ರದವಾಗಿದೆ. ಹಾಗೆಯೇ ಕನ್ನಡ ನಾಡು ನುಡಿಗಳ ಸೇವೆಗಾಗಿ ತಮ್ಮ ಸರ್ವಸ್ವವನ್ನೇ ಧಾರೆಯೆರೆದು ವಿತರಣಬುದ್ಧಿಯಿಂದ ತಮ್ಮ ದೇಹವನ್ನೇ ಕನ್ನಡಮ್ಮನ ಊಳಿಗಕ್ಕೆ ಮೀಸಲಾಗಿಟ್ಟು, ಗಂಧದ ಕೊರಡು ಸವೆದಂತೆ ತಾವು ಸವೆದರೂ ತಮ್ಮ ಆಹ್ಲಾದಕರವಾದ ಸೌಗಂಧಿತ ವಿಚಾರತರಂಗಗಳಿಂದ ಕನ್ನಡನಾಡಿನ ವಾಯುಮಂಡಲವನ್ನೆಲ್ಲ ಪರಿಮಳದಿಂದ ತುಂಬಿ ಕನ್ನಡ ಯುವಕ ಯುವತಿಯರ ಅಂತಃಕರಣಗಳನ್ನು ಪ್ರಸನ್ನಗೊಳಿಸಿ ನಾಡುನುಡಿಗಳ ಸೇವೆಗೆ ಅವರನ್ನೆಲ್ಲ ಒಂದೇಸಮನೆ ಹುರಿಗೊಳಿಸುತ್ತ ಕನ್ನಡ ನಾಡನ್ನೆಲ್ಲ ಸುತ್ತುವ ಸಂಕಲ್ಪದಿಂದ ಹೊರಟಿರುವ "ಕನ್ನಡಕುಲರನ್ನ"ರಾಗಿರುವ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ನೇತೃತ್ವದಲ್ಲಿ ನಮ್ಮ ಸಾಹಿತ್ಯೋತ್ಸವ ನಡೆಯುವಂತೆ ಆಶ್ವಾಸನವನ್ನಿತ್ತು ನಮ್ಮನ್ನು ಪ್ರೋತ್ಸಾಹಿಸಿರುವುದು ನಮ್ಮ ಮುಂದಿನ ಭಾಗ್ಯೋದಯದ ಪೂರ್ವಚಿಹ್ನೆಯಾಗಿರುವುದೆಂದು ನಾವು ಭಾವಿಸಿರುತ್ತೇವೆ.

ಇಂತಹ ಶುಭಶಕುನಗಳಿಂದ ಆರಂಭವಾಗುತ್ತಿರುವ ಸಾಹಿತ್ಯೋತ್ಸವ ಇತ್ತಕಡೆಯ ಜನಜೀವನದಲ್ಲಿ ಸ್ಪೃಹಣೀಯವಾದ ಕ್ರಾಂತಿಯನ್ನುಂಟುಮಾಡಿ ನಾವು ಕನ್ನಡಿಗರು ನಮ್ಮ ಪ್ರಾಚೀನ ಸುಸಂಸ್ಕೃತ ಜೀವನ ಪರಂಪರೆಗೆ ಅನುಗುಣವಾಗಿ "ಪದನರಿದು ನುಡಿಯಲುಂ ನುಡಿದದುದನಾರಯಿದುಕೊಳಲುಂ" ಸಮರ್ಥರಾಗಿ, "ಚದುರ"ರಾಗಿ, "ಕಾವ್ಯ ಪ್ರಯೋಗಪರಿಣತಮತಿ"ಗಳಾಗಿ, ಸುಖಿಗಳಾಗಿ, ಸಂತೃಪ್ತರಾಗಿ, ಸಕಲ ಜನಸಮ್ಮರ್ದ ಸಂತೋಷಕಾರಿಗಳಾಗಿ ನಮ್ಮ ಬಾಳನ್ನು ಸರಿಪಡಿಸಿಕೊಳ್ಳುವ ಸುಯೋಗ ಭಗವದನುಗ್ರಹದಿಂದ ಒದಗಲೆಂದು ಅನನ್ಯಭಾವದಿಂದ ಬೇಡಿಕೊಂಡು ತಮಗೆಲ್ಲ ಮತ್ತೊಮ್ಮೆ ಸುಸ್ವಾಗತವನ್ನು ಸಮರ್ಪಿಸಿ, ಶ್ರೀ ಸ್ವಾಮಿಗಳವರು ತಮ್ಮ ಅಮೋಘವಾದ ಆಶೀರ್ವಾದಗಳನ್ನು ಅನುಗ್ರಹಿಸಬೇಕೆಂದು ವಿನಮ್ರಭಾವದಿಂದ ಪ್ರಾರ್ಥಿಸುತ್ತೇನೆ.

---

## ನವಿಲುಗುಂದದ ಶ್ರೀಮನ್ನಿರಂಜನ ಶ್ರೀ ಬಸವಲಿಂಗ ಸ್ವಾಮಿಗಳು ಮಾಡಿದ ಪ್ರಾರಂಭ ಭಾಷಣ

ವೀರ ಕನ್ನಡಿಗ ವಿರಾಟರಾಯನ ರಾಜಧಾನಿಯೆಂದೂ ಲೋಕವಿಖ್ಯಾತರಾದ ಪಂಚಪಾಂಡವರಿಗೆ ಪಿತೃತರ್ಪಣದಿಂದ ತೃಪ್ತಿಪಡಿಸಿದ ಪರೀಕ್ಷಿತರಾಜನ ಜನ್ಮಸ್ಥಾನವೆಂದೂ ಪುರಾಣ ಪ್ರಸಿದ್ಧವಾದ ಹಾನಗಲ್ಲು ಇಂದು ತಾಲ್ಲೂಕಿನ ಮುಖ್ಯಸ್ಥಳವಾಗಿರುವುದಲ್ಲದೆ ಮಲೆನಾಡಿನ ಹೆಬ್ಬಾಗಿಲಾಗಿದೆ. ಇಲ್ಲಿ ಬಹು ಪುರಾತನವಾದ ಪೂಜ್ಯ **ತಾರಕೇಶ್ವರನ** ಗುಡಿಯೂ ಕರ್ನಾಟಕದಲ್ಲಿ ಯೋಗಸಂಸ್ಥೆಯನ್ನು ಸ್ಥಾಪಿಸಿ ಕೀರ್ತಿವೆತ್ತ ಗತಿಸಿದ **ಶ್ರೀ ಕುಮಾರಸ್ವಾಮಿಗಳ** ಭವ್ಯವಾದ ಮಠವೂ ಇನ್ನಿತರ ಸೃಷ್ಟಿಯ ನಿಸರ್ಗ ನಿರ್ಮಾಣಗಳೂ ದರ್ಶನೀಯವಾಗಿವೆ. ಇಲ್ಲಿ ನಾಲ್ಕಾರು ವರುಷಗಳಿಂದಲೂ ನಾಡಹಬ್ಬದ ಉತ್ಸವಗಳು ನಡೆದುದರ ಫಲವಾಗಿ ಇಂದು ವಸಂತೋತ್ಸವ ನಡೆಯಲಿದೆ. ಈ ಮುಖದಿಂದ ಸಾಹಿತ್ಯದೇವಿಯ ಸೇವೆಗೈಯುತ್ತಿರುವ ಸ್ವಾಗತಾಧ್ಯಕ್ಷರು ಹಾಗೂ ಸಮಿತಿಯವರು ಧನ್ಯರು.

ತಾಯ್ನುಡಿಯ ಸೇವೆಯಲ್ಲಿ ಮಾತು, ಮೈ, ಮನಗಳನ್ನು ಸವಿಸುತ್ತಿರುವ ಸಾಹಿತ್ಯವಿಶಾರದರು ಅನೇಕವಾಗಿರುವರು. ಅವರನ್ನು ಉಳಿದು ಸನ್ಯಾಸ ಸಾಧಕನಾದ ನನಗೆ ಈ ಸ್ಥಾನ ಗೌರವ ದೊರೆತದ್ದು ನನ್ನ ಹಿರಿಮೆಯ ಗುರುತಲ್ಲ. ಲೋಕಸೇವೆ– ಸ್ವಾರ್ಥತ್ಯಾಗಗಳ ಶಿಕ್ಷಣವನ್ನು ಕೊಡುತ್ತಿರುವ **ಶ್ರೀ ಶಿವಯೋಗಮಂದಿರ ಸಂಸ್ಥೆಯ ಹಾಗೂ ಸಾಹಿತ್ಯಸಂಘಗಳ ನಿರಂತರ ಸೇವೆಯ ಫಲವಾಗಿ** ಎಂಬುದನ್ನು ನಾನು ಬಲ್ಲೆನು. ಈ ಸಂದರ್ಭದಲ್ಲಿ ನಮ್ಮ ನಾಡು-ನುಡಿಗಳ ದೇಹದಲ್ಲಿ ಅದ್ಭುತ ಶಕ್ತಿ ಸಾಮರ್ಥ್ಯವನ್ನು ತುಂಬಿ ಇಂದಿಗೂ ದಿವ್ಯಕಾಯರಾಗಿ ಮೆರೆಯುವ, **ಶ್ರೀ ವಿದ್ಯಾರಣ್ಯ – ಶ್ರೀ ಅಲ್ಲಮಪ್ರಭು** ಮೊದಲಾದ ಹಿಂದಿನ ಹಿರಿಯ ಸನ್ಯಾಸಿಗಳನ್ನು ಸ್ಮರಿಸದೇ ಗತ್ಯಂತರವಿಲ್ಲ. ಅವರ ಆ ತಪಶ್ಶಕ್ತಿ ನನಗೆ ಎಂದಿಗೂ ಮಾರ್ಗದರ್ಶಿಯಾಗಲಿ.

ಸಾಹಿತ್ಯ ಜನಜೀವನವನ್ನು ಉತ್ತಮಗೊಳಿಸುವ ಮುಖ್ಯ ಸಾಧನ ಆಗಿದೆ. "ಸಾಹಿತ್ಯ ಬೆಳೆಯದೆ ಮನುಷ್ಯನ ವಿಕಾಸವಿಲ್ಲ" ಎಂದು ಓರ್ವ ವಿಖ್ಯಾತ ಪಂಡಿತನು ಹೇಳಿರುವನು. ಈ ತತ್ವವನ್ನನುಲಕ್ಷಿಸಿ ಕನ್ನಡನುಡಿ ಎಲ್ಲ ಬಗೆಯಿಂದಲೂ ಏಳ್ಗೆಯನ್ನೈದಲೆಂಬ ಸದುದ್ದೇಶವನ್ನಿಟ್ಟುಕೊಂಡು, ಕನ್ನಡ ಸಾಹಿತ್ಯ ಪರಿಷನ್ಮಹಾಸಂಸ್ಥೆ ಅಖಂಡವಾಗಿ ಎರಡು ತಪ (೨೪ ವರ್ಷ) ಗಳಿಂದ ಪ್ರಯತ್ನಮಾಡಹತ್ತಿದೆ.

ಅದರ ಫಲವಾಗಿ ಅಲ್ಲಿಲ್ಲಿ ಕರ್ನಾಟಕ ಸಂಘಗಳು ಉದಯಹೊಂದಿ- ಅನೇಕ ಕನ್ನಡಿಗರ ಕಣ್ಣು ತೆರಸಿವೆ. ಪ್ರಾಂತ ಸಮ್ಮೇಳನ, ಜಿಲ್ಲಾ ಸಮ್ಮೇಳನ, ವಸಂತೋತ್ಸವಗಳು ನಡೆಯುತ್ತಿರುವುದರಿಂದ ಕನ್ನಡಮ್ಮನ ಬಗ್ಗೆ ಆದರಾಭಿಮಾನಗಳು ಉತ್ಪನ್ನವಾಗಹತ್ತಿವೆ. ಅಮ್ಮನನ್ನು ಅಲಂಕರಿಸಲು ಹಿರಿಯರು – ಕಿರಿಯರು ಹಾತೊರೆಯುತ್ತಿದ್ದಾರೆ. ಇದೆಲ್ಲವೂ ತೇಲುನೋಟ. ಇನ್ನೂ ಒಳಹೊಕ್ಕು ನಿಟ್ಟಿಸಿದರೆ, ನಾವು "ಮಾಡಿದ್ದು ಕಡ್ಡಿಯಷ್ಟು ಮಾಡಬೇಕಾದದ್ದು ಗುಡ್ಡದಷ್ಟಿದೆ." ಎಂಬುದು ಮನವರಿಕೆಯಾಗುವುದು. ನಮ್ಮ ನೆರೆ ಪ್ರಾಂತದವರ ಅದಕ್ಕೂ ಆಚೆಗಿರುವ ಬಂಗಾಳಿ-ಇಂಗ್ಲಿಷು ಸಾಹಿತ್ಯದ ಬೆಳವಣಿಗೆಯನ್ನು ಕಣ್ಣೆದುರಿಗಿಟ್ಟುಕೊಂಡು ನಾವು ಪ್ರಯತ್ನಮಾಡಬೇಕಾಗಿದೆ. ಇದ್ದದ್ದು ವಿಪುಲವಾಗಿದೆ, ಚನ್ನಾಗಿದೆ ಎನ್ನುವ ಕಾಲ ಕನ್ನಡದ ಮಟ್ಟಿಗೆ ಮಾತ್ರ ಇನ್ನೂ ಬಂದಿಲ್ಲ. ಆದ್ದರಿಂದ ನಮ್ಮ ಬಗೆಯಲ್ಲಿ, ನಮ್ಮ ಕೃತಿಯಲ್ಲಿ, ವಿಶಾಲತ್ವವನ್ನು ಅಳವಡಿಸಿಕೊಂಡು **ರನ್ನ-ಪಂಪ-ಷಡಕ್ಷರಿ** ಮೊದಲಾದ ಹಿಂದಿನ ಹಿರಿಯರಂತೆ ಸಾಹಿತ್ಯಕ್ಷೇತ್ರದಲ್ಲಿ **ಜಾತಿ–ಮತ–ಪಂಥಗಳ ಮಾತನ್ನೆತ್ತದೆ ಎಲ್ಲರೂ ಒಮ್ಮನಸ್ಸಿನಿಂದ ಸೇರಿ, ಒಂದುಗೂಡಿದ ಶಕ್ತಿಯಿಂದ ಸಾಹಸ ಮಾಡಬೇಕು.** ಭಾರತವರ್ಷದಲ್ಲಿ ಅನೇಕಾನೇಕ ಜಾತಿ–ಮತಗಳಿರುವವು. ಅವುಗಳ ಮೂಲ ಸ್ಥಾಪಕರ ಅಥವಾ ಉದ್ಧಾರಕರ ವಿಷಯಕವಾಗಿ ವಿಚಾರಿಸಿದರೆ ಕೆಲವರಿಗೆ ಜನ್ಮಕ್ಷೇತ್ರವಾಗಿಯೂ ಕೆಲವರಿಗೆ ಕಾರ್ಯಕ್ಷೇತ್ರವಾಗಿಯೂ ಕನ್ನಡನಾಡು ಉಪಕರಿಸಿದೆಯೆಂಬುದು ಅಭಿಮಾನಾಸ್ಪದವಾದ ಸಂಗತಿ.

ನಮ್ಮ ನಾಡು ಪ್ರಕೃತಿಸೌಂದರ್ಯ, ಖನಿಜ, ಜನಸಂಖ್ಯೆ, ವಿಸ್ತಾರ, ಭೂಮಿ, ನದಿ, ಆರ್ಥಿಕ ಉತ್ಪತ್ತಿ ಮೊದಲಾದ ಯಾವತ್ತೂ ದೃಷ್ಟಿಯಿಂದ ಪ್ರಾಂತೀಕರಣಕ್ಕೆ ಬಹು ಯೋಗ್ಯವಾಗಿದೆ. ಹೀಗಿದ್ದರೂ ಬೇಡುವ ರೀತಿಯಿಂದ ನಾವು ಬೇಡಿಲ್ಲವಾಗಿ ನಮ್ಮ ಕನ್ನಡ ಪ್ರಾಂತೀಕರಣ ಬಿಸಿಲ್ಗುದುರೆಯಂತೆ ದೂರ ಸರಿಯಹತ್ತಿದೆ. ಅದರ ವಿಷಯದಲ್ಲಿಯಾದರೂ ನಾವಿಂದು ದೀರ್ಘಪ್ರಯತ್ನ ಮಾಡಬೇಕಾಗಿದೆ.

**ಚನ್ನ ಕನ್ನಡಿಗರೇ,** ಇಂದಿನ ಸಭೆಗೆ ಕನ್ನಡ ಸಾಹಿತ್ಯಾಚಾರ್ಯರೆಂದು ಪ್ರಸಿದ್ಧಿಪಡೆದ ಶ್ರೀಮಾನ್ **ಬಿ. ಎಂ. ಶ್ರೀಕಂಠಯ್ಯ**ನವರನ್ನು ಅಧ್ಯಕ್ಷಸ್ಥಾನಕ್ಕೆ ಆರಿಸಿದ್ದು ಸ್ವಾಗತ ಸಮಿತಿಯವರ ಕಾರ್ಯಕುಶಲತೆಯನ್ನು ತೋರಿಸುತ್ತದೆ. ಶ್ರೀ। ಶ್ರೀಕಂಠಯ್ಯನವರ ಕಂಠಶ್ರೀಯ ಪರಿಚಯವಿಲ್ಲದವನು ಕನ್ನಡಿಗನೇ ಅಲ್ಲ ಎನ್ನುವಷ್ಟರಮಟ್ಟಿಗೆ 'ಶ್ರೀ'ಯವರು ಕನ್ನಡನಾಡಿಗೆ ಪರಿಚಿತರಾಗಿದ್ದಾರೆ. ಅವರ ನಡೆಯಲ್ಲಿ, ನುಡಿಯಲ್ಲಿ ಕನ್ನಡದ ಕಟ್ಟಾಭಿಮಾನ ತುಂಬಿ ತುಳುಕುತ್ತಿದೆ. ಇಂಥವರ ಅಧ್ಯಕ್ಷತೆಯಲ್ಲಿ ನಡೆಯುವ ಸಭೆ ಸಾಂಗವಾಗಿ ಸಾಗಿ ಮುಗಿಯಲೆಂದು ಹಾರೈಸಿ, ನನ್ನ ವಿಷಯಕವಾಗಿ ನಿಮ್ಮೆಲ್ಲರ ಎದೆಹಣತೆಯಲ್ಲಿ ಬೆಳಗುತ್ತಿರುವ ಅಕ್ಕರದ ದೀವಿಗೆ ಆರದಿರಲೆಂದು ಕೇಳಿಕೊಂಡು, ದಯಾಘನನಾದ ಜಗದೀಶನ ಪ್ರಾರ್ಥನೆಯೊಡನೆ ಈ ಸಭೆ ಪ್ರಾರಂಭವಾಯಿತೆಂದು ಸಾರಬಯಸುತ್ತೇನೆ.

**ಜಯ ಕರ್ನಾಟಕಾಂಬೆ!**

## ಕನ್ನಡ ಕವಿ ಸೂಕ್ತಿ

ಮಳೆಯಿಲ್ಲದೆ ಪೊಯ್‌ನೀರಿಂ
ಬೆಳಗುಮೆ ಧರೆ ಮಱುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇಳ್ದೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ

—ನಯಸೇನ: ಧರ್ಮಾಮೃತ




ಶುಕ್ರವಾರ, ಮೇ ೩, ೧೯೪೦

## ನಮ್ಮನ್ನಗಲಿದ ಕಾಮತರು

ನಾನು ಹೈಸ್ಕೂಲಿನ ತರಗತಿಗಳಲ್ಲಿ ಓದುತ್ತಿರುವಾಗಲೇ—ಅದು ಬಲು ಹಿಂದಿನ ಮಾತು—ಶ್ರೀಯುತ ಎಂ. ಎನ್. ಕಾಮತರು ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡ ಸಾಹಿತ್ಯ ಜೀವನದ ಕಾರಣಪುರುಷರೆಂದು ಹೆಸರುವಾಸಿಯಾಗಿದ್ದರು. ಅವರ ವಿಷಯವಾಗಿ ನನ್ನಲ್ಲಿ ಇತರರ ಹೇಳಿಕೆಯಿಂದ ಉಂಟಾದ ಅಭಿಮಾನ ಅವರ ಪರಿಚಯದಿಂದ ಇನ್ನಷ್ಟು ಹೆಚ್ಚಾಯಿತು. ಅಂತಹ ವ್ಯಕ್ತಿತ್ವ ಅವರದು. ಉತ್ಸಾಹದ ಉಸಿರಿನಂತೆಯೂ ಹಾಸ್ಯದ ಜೀವಾಳದಂತೆಯೂ ಇದ್ದ ಅವರು ಎಲ್ಲಿ ಇದ್ದರೂ ಎಲ್ಲಿ ಹೋದರೂ ಸ್ಫೂರ್ತಿದಾಯಕವೂ ಸಂತೋಷಕರವೂ ಆದ ವಾತಾವರಣವನ್ನೇ ಸೃಷ್ಟಿಸುತ್ತಿದ್ದರು. ಇದರಿಂದ ಮಂಗಳೂರಿನ ಕನ್ನಡ ಉತ್ಸಾಹೀ ತರುಣರು ಅವರನ್ನು ಎಲ್ಲೆಲ್ಲಿಯೂ ಹಿಂಬಾಲಿಸಿ ಅವರ ಮುಂದಾಳುತನವನ್ನು ಸ್ವೀಕರಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಶ್ರೀ|| ಕಾಮತರು ಮಾತ್ರ ತಾವು ಒಬ್ಬ ಮುಂದಾಳುಗಳೆಂದೆನಿಸದೆ ತರುಣರೊಡನೆ ತರುಣರಾಗಿ ಮಕ್ಕಳೊಡನೆ ಮಗುವಾಗಿ ಅವರಲ್ಲಿ ಉತ್ಸಾಹವನ್ನೂ ಸ್ಫೂರ್ತಿಯನ್ನೂ ತುಂಬುತ್ತಿದ್ದರು.

ಶ್ರೀ|| ಕಾಮತರ ಸಹವಾಸವೆಂದರೆ ಅದೊಂದು ಅಪೂರ್ವ ಅನುಭವವೇ ಆಗಿತ್ತು. ಅವರೊಡನೆ ಇದ್ದಾಗ ಯಾರಿಗೂ ಕೃತ್ರಿಮತೆಯ ಗೌರವವನ್ನು ಇಟ್ಟುಕೊಳ್ಳಲಿಕ್ಕೆ ಸಾಧ್ಯವಾಗುತ್ತಿರಲಿಲ್ಲ. ಅವರ ಸಹವಾಸದಲ್ಲಿ ಎಂತಹ ಗಂಭೀರನೂ ಎರಡೇ ನಿಮಿಷಗಳೊಳಗೆ ತನ್ನ ವ್ಯಕ್ತಿತ್ವವನ್ನು ಮರೆತು ಹಾಸ್ಯರಸದಿಂದ ಕೂಡಿದ ಅವರ ವಾಕ್ಚಾತುರ್ಯಕ್ಕೆ ಮನಸೋತು ಎಳೆಯ ಮಗುವಿನಂತೆ ಗಹಗಹಿಸಿ ನಗುತ್ತಿದ್ದ. ಇಂತಹ ಅಪಾರವಾದ ಶಕ್ತಿ ಶ್ರೀ|| ಕಾಮತರಿಗೆ ಇತ್ತು. ದೊಡ್ಡವರಾಗಲಿ, ಸಣ್ಣವರಾಗಲಿ, ಧನಾಢ್ಯರಾಗಲಿ, ಬಡವರಾಗಲಿ ಎಲ್ಲರ ಕೂಡೆಯೂ ಶ್ರೀ|| ಕಾಮತರ ವರ್ತನೆ ಒಂದೇ ರೀತಿಯಾಗಿತ್ತು. ಇದರಿಂದ ಶ್ರೀ|| ಕಾಮತರು ಎಲ್ಲರ ಪ್ರೇಮ ಗೌರವ ಆತ್ಮೀಯತೆಗಳನ್ನು ಸಂಪಾದಿಸಿದ್ದರು. ಅವರಲ್ಲಿದ್ದ ಯಾವ ಗುಣ ನಮ್ಮ ಮನಸ್ಸಿನಲ್ಲಿ ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತಿತ್ತೆಂದು ಹೇಳುವುದು ಸುಲಭವಲ್ಲ. ಅವರಲ್ಲಿದ್ದ ಹಾಸ್ಯದ ಭಂಡಾರವೊ, ಕನ್ನಡವೆನ್ನಿಸಿಕೊಳ್ಳುವ ಪ್ರತಿಯೊಂದು ವಿಷಯದಲ್ಲಿ ಅವರು ತೋರಿಸುತ್ತಿದ್ದ ಸ್ಫೂರ್ತಿಯೊ ಅಥವಾ ಅವರಲ್ಲಿ ಸಹಜವಾಗಿ ನೆಲೆಗೊಂಡ ಆತ್ಮೀಯತೆಯೊ ಇವುಗಳಲ್ಲಿ ಯಾವುದೆಂದು ಹೇಳುವುದು ಕಷ್ಟ. ಅದು ಹೇಗೂ ಇರಲಿ ಅವರನ್ನು ಒಮ್ಮೆ ಭೇಟಿಯಾಗಿ ಮಾತನಾಡಿಸಿದವರು ಅವರ ವ್ಯಕ್ತಿತ್ವವನ್ನೂ ಪ್ರತಿಭೆಯನ್ನೂ ಎಂದೂ ಮರೆಯಲಾರರು.



ಶ್ರೀ|| ಕಾಮತರ ಜೀವನಚರಿತ್ರೆಯೆಂದರೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗ್ಗೆ ಮೂವತ್ತು ವರ್ಷಗಳಿಂದ ವೃದ್ಧಿಗೊಳ್ಳುತ್ತಿರುವ ಕನ್ನಡ ಸಾಹಿತ್ಯದ ಚರಿತ್ರೆಯೇ ಆಗಿದೆ. ಅವರ ನಿಕಟ ಸಂಬಂಧ ಇಟ್ಟುಕೊಳ್ಳದಿದ್ದ ಯಾವ ವಾರ ಪತ್ರಿಕೆಯಾಗಲಿ ಮಾಸ ಪತ್ರಿಕೆಯಾಗಲಿ ನಮ್ಮ ಜಿಲ್ಲೆಯಲ್ಲಿ ಇಲ್ಲ. ಅವರಿಂದ ಹುರುಪುಗೊಂಡಿರದ ಯಾವ ತರುಣರ ಸಂಘವೂ ಇಲ್ಲ. ಅವರೇ ಮಂಗಳೂರಿನ ಮಿತ್ರಮಂಡಲಿಯ ಸ್ಥಾಪಕರೆಂದು ನನ್ನ ನೆನಪು. ಅದರ ಸಂಚಾಲಕರಾಗಿ ಅದನ್ನು ಒಂದು ವ್ಯವಸ್ಥಿತ ಸ್ಥಿತಿಗೆ ತಂದವರೂ ಅವರೇ ಆಗಿರುವರು. ಅವರು ಬರೆದಿರುವ ಪಾಠಪುಸ್ತಕಗಳ ಲೆಕ್ಕವನ್ನು ಇಡುವ ಕೆಲಸ ತೀರಾ ಅಸಾಧ್ಯ! ಅವರು ಮಕ್ಕಳಿಗಾಗಿ ಬರೆದಿರುವ ಪದ್ಯಗಳು ದಿವಂಗತ ಪಂಜೆ ಮಂಗೇಶರಾಯರ ವಿಶೇಷ ಆದರಕ್ಕೆ ಪಾತ್ರವಾಗಿದ್ದವು. ಅವುಗಳಲ್ಲಿ ಕೆಲವನ್ನು ಹಾಡಿ ಹೇಳುವುದರಲ್ಲಿ ಪಂಜೆ ಮಂಗೇಶರಾಯರಿಗೆ ಬೇಸರವೆಂಬುದೇ ಇರುತ್ತಿರಲಿಲ್ಲ. ಇಷ್ಟುಮಾತ್ರವಲ್ಲ,—ಶ್ರೀ|| ಕಾಮತರ ಪ್ರತಿಭೆ ಅನೇಕ ಸಣ್ಣ ಕಥೆಗಳಲ್ಲಿಯೂ ಏಕಾಂಕ ನಾಟಕಗಳಲ್ಲಿಯೂ ಹಾಸ್ಯಭರಿತವಾದ ಅನೇಕಾನೇಕ ಹರಟೆಗಳಲ್ಲಿಯೂ ಒಡೆದು ಕಾಣುತಿತ್ತು. ತನ್ನ ಅಧ್ಯಾಪಕ ವೃತ್ತಿಯಲ್ಲಿಯೂ ಅವರು ಒಂದು ವಿಶೇಷವಾದ ಕೀರ್ತಿಯನ್ನು ಗಳಿಸಿದ್ದರು. ಯಾವ ವಿಷಯವನ್ನಾದರೂ ಅತ್ಯಂತ ಮನೋರಂಜಕವಾಗಿ ಹೇಳುವ ಚಾತುರ್ಯ ಅವರಿಗಿದ್ದುದರಿಂದ ಅವರ ಕ್ಲಾಸುಗಳನ್ನು ತಪ್ಪಿಸಿಕೊಂಡು ಹೋಗುವ ವಿದ್ಯಾರ್ಥಿಗಳೇ ಇರುತ್ತಿದ್ದಿಲ್ಲ. ಇತ್ತಲಾಗಿ ಅವರು ತನ್ನ ಪ್ರೀತಿಯ ವಿಷಯವೆಂದಿಟ್ಟುಕೊಂಡ ಭೂಗೋಳ ಶಾಸ್ತ್ರದ ವಿಷಯ ಅವರು ಮಾತನಾಡಲು ಪ್ರಾರಂಭಿಸಿದರೆ ವಿದ್ಯಾರ್ಥಿಗಳು ಮಾತ್ರವಲ್ಲ ನಮ್ಮಂಥ ಹಳಬರೂ ಆತುರತೆಯಿಂದ ಕೇಳುವಂತಿತ್ತು.

ಇಂದು ಅಂತಹ ಪ್ರತಿಭಾಶಾಲಿಯಾದ ಜೀವರತ್ನವನ್ನು ಕಳೆದುಕೊಂಡು ನಮ್ಮ ದಕ್ಷಿಣ ಕನ್ನಡ ಜಿಲ್ಲೆ ಬಹಳ ಬಡವಾಗಿದೆ. ಅವರ ಯೋಗ್ಯತೆ ಸ್ಥಾನಮಾನಾದಿಗಳಿಂದ ಕೂಡಿರುವ ಇನ್ನೊಂದು ವ್ಯಕ್ತಿ ನಮಗೆ ಸಿಗುವುದು ದುರ್ಲಭ. ಇಡಿಯ ಕನ್ನಡ ನಾಡು ಅವರ ಅಪಾರವಾದ ಯೋಗ್ಯತೆಯನ್ನು ಗಮನಿಸುವ ಮೊದಲೇ ಅವರು ಅದೃಶ್ಯವಾದುದು ಒಂದು ಅತಿ ದಾರುಣವಾದ ಸಂಗತಿಯಾಗಿದೆ.

ಪ. ರಮಾನಂದ

# ದಿನ ಜೀವನದಲ್ಲಿ ಕನ್ನಡ

ಎಸ್. ಎಸ್. ಮಾಳವಾಡರವರು

[ಪರಿಷತ್ತಿನ ಮಾನ್ಯ ಸದಸ್ಯರೂ ಧಾರವಾಡದ ಕರ್ನಾಟಕ ಕಾಲೇಜಿನ ಕನ್ನಡ ಅಧ್ಯಾಪಕರೂ ಆದ ಶ್ರೀ॥ ಎಸ್. ಎಸ್. ಮಾಳವಾಡರವರ ವಿಚಾರ ಪ್ರಚೋದಕವಾದ ಈ ಲೇಖನವನ್ನು ನಮ್ಮ ವಾಚಕರು ಶ್ರದ್ಧೆಯಿಂದ ಓದಬೇಕೆಂದು ಕೋರುತ್ತೇವೆ. ಕನ್ನಡಿಗರಲ್ಲಿ ಎಷ್ಟು ಮಂದಿ ತಮ್ಮ ದಿನದ ಬದುಕಿನಲ್ಲಿ ಕನ್ನಡಕ್ಕೆ ತಕ್ಕ ಸ್ಥಾನಮಾನಗಳನ್ನು ಕೊಡುತ್ತಿರುವರು ಎಂಬುದನ್ನು ಚೆನ್ನಾಗಿ ವಿಚಾರಮಾಡಬೇಕು. ಕನ್ನಡಕ್ಕೆ ಆಗಬೇಕಾದ ಸೇವೆಯಲ್ಲಿ ಅರಕೆಯಾಗದಂತೆ ಸೇವೆ ನಡೆಯಲು ಇಂಥ ಲೇಖನಗಳು ನೆರವಾಗುವುವೆಂದು ನಂಬಿದ್ದೇವೆ.—ಸಂ.]

ಕನ್ನಡಿಗರಿಗೆ ತಮ್ಮ ಗತವೈಭವದ ಅರಿವಾಗಿ, ಈಗ ತಾವೂ ಮುಂದುವರಿಯಬೇಕೆಂಬ ಎಚ್ಚರ ಹುಟ್ಟಿ ಈಗಾಗಲೆ ಇಪ್ಪತ್ತು ವರುಷಗಳಾಗಿ ಹೋಗಿವೆ. 'ಸಿರಿಗನ್ನಡಂ ಗೆಲ್ಗೆ', 'ಕರ್ನಾಟಕಾಂತರ್ಗತ ಭಾರತಕ್ಕೆ ಜಯವಾಗಲಿ', 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' 'ಏರಿಸಿ, ಹಾರಿಸಿ ಕನ್ನಡದ ಬಾವುಟ' ಎಂಬ ಕೂಗುಗಳನ್ನು ಕನ್ನಡಿಗರು ಹುರುಪಿನಿಂದ ಹೇಳತೊಡಗಿಯೂ ಕೆಲವರುಷಗಳಾಗಿ ಹೋದವು. ಕನ್ನಡದ ಕೂಗಾಟ, ಜಪ, ಏಕೀಕರಣ ಮಂತ್ರ ಇವು ಎಲ್ಲೆಲ್ಲಿಯೂ ಕೇಳಬರುತ್ತಿವೆ. ಸಮ್ಮೇಳನ, ಹಬ್ಬ, ಉತ್ಸವ, ಕೂಟ, ಚರ್ಚೆ ಇವುಗಳೂ ಸಾಕಷ್ಟು ನಡೆದಿವೆ. ಕನ್ನಡದ ಬಾವುಟವನ್ನು ಭಕ್ತಿಯಿಂದ ಹಾರಿಸುವ ಕಾರ್ಯಕ್ರಮವೂ ನಮ್ಮ ಉತ್ಸವಗಳಲ್ಲಿ ಬರಹತ್ತಿದೆ. ಹೀಗಿದ್ದಮೇಲೆ ಕನ್ನಡಿಗರ ಬಳಕೆಯಲ್ಲೆಲ್ಲ ಕನ್ನಡವೇ ಕಂಡುಬರಬೇಕಷ್ಟೇ. ಗಾಳಿ ಬೀಸಿದರೆ ಕನ್ನಡದ ಉಲಿ ಕೇಳಿದಂತೆ ಬರುತ್ತಿದೆ, ಪ್ರವಾಹ ಹರಿಯುತ್ತಿದ್ದರೆ ಕನ್ನಡ ಶಬ್ದಮಾಡುತ್ತಿದೆ ಎಂಬಷ್ಟು ಹೊರಗಿನ ಕೂಗಾಟ ಕರ್ನಾಟಕದಲ್ಲಿ ಕೇಳಬರುವ ದಿನಗಳು ಇವು. ಇಂತಹ ದಿನಗಳಲ್ಲಿ ಕೂಡ ಕನ್ನಡಿಗರ — ಕನ್ನಡಾಭಿಮಾನಿಗಳ, ಉತ್ಕಟ ಕನ್ನಡ ಪ್ರೇಮಿಗಳ—ದೈನಂದಿಕ ಜೀವನದಲ್ಲಿ ಕನ್ನಡಕ್ಕೆ ಯಾವ ಸ್ಥಾನವಿದೆಯೆಂಬುದನ್ನು ವಿಚಾರಿಸಿದಾಗ ನಮಗೆಲ್ಲ ಆಶ್ಚರ್ಯವೂ ವಿಷಾದವೂ ಒಮ್ಮೆಲೆ ಅನಿಸಬಹುದು. ಈ ಲೇಖನ ಬರೆಯುತ್ತಿರುವ ನನ್ನನ್ನೂ ಸೇರಿಸಿಕೊಂಡು ಎಲ್ಲ ಕನ್ನಡಿಗರೂ ಆತ್ಮ ನಿರೀಕ್ಷಣೆಯ ದೃಷ್ಟಿಯಿಂದ ಕೆಳಗಿನ ಕೆಲವು ಪ್ರಶ್ನೆಗಳಿಗೆ ನಿರ್ವಿಕಾರ ಮನಸ್ಸಿನಿಂದ ಉತ್ತರ ಕೊಡಲು ಪ್ರಯತ್ನಿಸಬೇಕು.

೧. ನಿಮ್ಮ ಕನ್ನಡ ಸ್ನೇಹಿತರೊಂದಿಗೆ ಪತ್ರವ್ಯವಹಾರ ಮಾಡುತ್ತ ಇರುವಾಗ ನೀವು ಯಾವ ಭಾಷೆಯನ್ನು ಉಪಯೋಗಿಸುವಿರಿ?

೨. ನಿಮ್ಮ ಕಾಗದದಲ್ಲಿ ನಿಮ್ಮ ಹೆಸರು, ವಿಳಾಸ ಯಾವ ಭಾಷೆಯಲ್ಲಿ ಅಚ್ಚಾಗಿವೆ? ಯಾವ ವಸ್ತುಗಳ ಮೇಲಾದರೂ ನಿಮ್ಮ ಹೆಸರು ಹಾಕಿಸಬೇಕಾದಾಗ ಅದು ಯಾವ ಭಾಷೆಯಲ್ಲಿರುತ್ತದೆ?

೩. ನೀವು 'ಡೈರಿ' ಉಪಯೋಗಿಸುತ್ತಿದ್ದರೆ ಅದರಲ್ಲಿಯ ಬರೆಹವೆಲ್ಲ ಯಾವ ಭಾಷೆಯಲ್ಲಿದೆ?

೪. ನಿಮ್ಮ ಕೋಣೆಯಲ್ಲಿಯ 'ಕ್ಯಾಲೆಂಡರ್', ನಿಮ್ಮ ಮೇಜಿನ ಮೇಲಿರುವ 'ಪ್ಯಾಡ್' ಯಾವ ಭಾಷೆಯವು?

೫. ನೀವು ಯಾವ ಭಾಷೆಯ ದಿನ ಪತ್ರಿಕೆಗಳನ್ನು ಹೆಚ್ಚಾಗಿ ಓದುತ್ತಿದ್ದೀರಿ? ನೀವು ಓದುತ್ತಿರುವ ಮಾಸ ಪತ್ರಿಕೆ ಮುಂತಾದ ನಿಯತಕಾಲಿಕ ಪತ್ರಿಕೆಗಳಲ್ಲಿ ಯಾವ ಭಾಷೆಗೆ ಪ್ರಾಧಾನ್ಯವಿದೆ?

೬. 'ಪೋಸ್ಟ್ ಆಫೀಸ್', 'ಬ್ಯಾಂಕ್' ಇವುಗಳಲ್ಲಿ ಯಾವ ಭಾಷೆಯ 'ಫಾರ್ಮ್'ಗಳನ್ನು ಉಪಯೋಗಿಸುವಿರಿ?

೭. ನಿಮ್ಮಲ್ಲಿ 'ರೇಡಿಯೊ' ಇದ್ದರೆ ಯಾವ ಭಾಷೆಯ ಮಾತುಗಾರಿಕೆ ಹಾಡು ಕೇಳುವಿರಿ? ನಿಮ್ಮಲ್ಲಿ 'ಗ್ರಾಮೋಫೋನ್' ಇದ್ದರೆ ಯಾವ ಭಾಷೆಯ 'ರಿಕಾರ್ಡ್ಸ್' ಇಟ್ಟಿರುವಿರಿ, ಕೇಳುವಿರಿ?

೮. ನಿಮ್ಮ ಗ್ರಂಥ ವಾಚನದಲ್ಲಿ ಕನ್ನಡಕ್ಕೆ ಯಾವ ಸ್ಥಾನವಿದೆ?

೯. ಕನ್ನಡ ನಾಟಕ ಸಿನೆಮಾಗಳಿಗೆ ನೀವು ಎಷ್ಟು ಪ್ರೋತ್ಸಾಹ ಕೊಡುತ್ತಿರುವಿರಿ?

೧೦. ನೀವು ಆವೇಶದಲ್ಲಿರುವಾಗ ನಿಮ್ಮ ಸಂಭಾಷಣೆ ಯಾವ ಭಾಷೆಯಲ್ಲಿ ನಡೆಯುತ್ತಿದೆ?

ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಕನ್ನಡಕ್ಕೇ ಪ್ರಾಧಾನ್ಯ ಕೊಡುತ್ತಿರುವೆವೆಂದು ಎದೆತಟ್ಟಿ ಹೇಳುವವರು ಕೆಲವರಾದರೂ ದೊರೆಯಬಹುದೆ? ದೊರೆಯುವುದಿಲ್ಲವಾದರೆ ನಮ್ಮ ದೈನಂದಿಕ ಜೀವನದಲ್ಲಿ ನಾವು ಕನ್ನಡಕ್ಕೆ ಹೆಚ್ಚಿನ ಸ್ಥಾನವನ್ನು ಇನ್ನೂ ತಂದುಕೊಟ್ಟಿಲ್ಲವೆಂದು ತಾನಾಗಿಯೇ ಸಿದ್ಧವಾಗುವುದಿಲ್ಲವೇ? ಮೇಲೆ ಪ್ರಶ್ನೆಗಳ ಮೂಲಕ ಸೂಚಿಸಿದ ಕೆಲವು ವಿಷಯಗಳಲ್ಲಿ ಕನ್ನಡದ ಅಭಾವಕ್ಕಾಗಿ ನಾವು ಹೊಣೆಗಾರರಿರದೆ ಪರಿಸ್ಥಿತಿ ಕಾರಣವಾಗಿರಬಹುದು. ಉದಾಹರಣಾರ್ಥವಾಗಿ, ದುಡ್ಡು ತೆತ್ತು ನಮ್ಮ ಮನೆಯಲ್ಲಿ ನಾವು ಕೇಳುತ್ತಿರುವ ಬಾನುಲಿ (Radio)ಯ ಕಾರ್ಯಕ್ರಮಗಳು ನಮಗೆ ಬೇಕಾದ ಕನ್ನಡದಲ್ಲಿ ಇಲ್ಲದೆ ಇರಬಹುದು. ಬಾನುಲಿಯಲ್ಲಿ ಭಾರತದ ಅನೇಕ ಭಾಷೆಗಳಿಗೆ ಅವಕಾಶವಿರುವಾಗ ನಮ್ಮ ಭಾಷೆಗೆ ಇಲ್ಲದೆ ಇರುವುದು ಶೋಚನೀಯ ಸಂಗತಿಯೇ ಸರಿ. (ಆಕಾಶವಾಣಿಯೂ—ಅಶರೀರವಾಣಿಯೂ—ಕನ್ನಡಕ್ಕೆ ಸಹಾನುಭೂತಿಯನ್ನು ತೋರಿಸದೆ ಇರಲಿಕ್ಕೆ ಕನ್ನಡಿಗರ ಆಲಸ್ಯವೇ ಕಾರಣವೋ ಏನೊ). ಆದರೆ ನಮ್ಮ ಪ್ರಯತ್ನದಿಂದ ಸಾಧ್ಯವಾಗುವ ಉಳಿದ ಅನೇಕ ವಿಷಯಗಳಲ್ಲಾದರೂ ಉತ್ಕಟ ಕನ್ನಡಾಭಿಮಾನಿಗಳು ಕನ್ನಡಕ್ಕೆ ಸರಿಯಾದ ಸ್ಥಾನ ಕೊಡುತ್ತಿರುವರೇ ಎಂಬುದು ನನ್ನ ಪ್ರಶ್ನೆ. ಮೇಲೆ ಸೂಚಿಸಿದ ಬಾನುಲಿಯಂತಹ ಒಂದೆರಡು ವಿಷಯಗಳು ನಮ್ಮ ಅಂಕಿತಕ್ಕೆ ಒಳಗಾಗಿಲ್ಲ. ಒಂದೆರಡು ವಿಷಯಗಳಲ್ಲಿ—ದಿನ ಪತ್ರಿಕೆ, ಗ್ರಂಥವಾಚನ—ಕೇವಲ ಕನ್ನಡವನ್ನೇ ಅವಲಂಬಿಸಿರಲು ಸಾಧ್ಯವಿರದಿರಬಹುದು. ಏಕೆಂದರೆ ಶಾಸ್ತ್ರ ವಿಷಯ, ಹೊಸ ಶೋಧಗಳು, ಗಂಭೀರ ವಿಷಯ ಸಂಗ್ರಹಗಳು ಇನ್ನೂ ಕನ್ನಡ ಭಾಷೆಯಲ್ಲಿ ಬಂದಿಲ್ಲ. ಅವು ಬಂದಮೇಲೆಯೇ ಕನ್ನಡವನ್ನು ಉಪಯೋಗಿಸಬೇಕೆಂದು ಕೂತರೆ ಅವು ಬರುವುದೇ ಸಾಧ್ಯವಾಗಲಿಕ್ಕಿಲ್ಲ. ತಿಳಿದವರು, ಮುಂದುವರಿದವರು ಆ ವಿಷಯಗಳನ್ನು ಕನ್ನಡಕ್ಕೆ ಇಳಿಸಲಿಕ್ಕೆ ಪ್ರಯತ್ನಮಾಡಬೇಕು. ಗಂಭೀರ ವಿಷಯಗಳ ಮೇಲೆ ಗ್ರಂಥಗಳನ್ನು ಬರೆದು ಕನ್ನಡಿಗರಲ್ಲಿ ಕನ್ನಡದ ಮೂಲಕ ತಿಳಿವನ್ನು ಹರಡಬೇಕು. ಕನ್ನಡ ಮಾತಿನಿಂದ, ಕನ್ನಡ ಗ್ರಂಥಗಳ ಮೂಲಕ, ಪತ್ರಿಕೆಗಳಲ್ಲಿಯ ಸುಲಭವಾದ ಲೇಖನಗಳ ಮೂಲಕ ಈ ಕಾರ್ಯವನ್ನು ಮಾಡಬಹುದು. ಗಂಭೀರ ವಿಷಯಗಳ ಮೇಲಣ ಗ್ರಂಥರಚನೆ, ನಿತ್ಯದ ವ್ಯವಹಾರದಲ್ಲಿಯ ಉಪಯೋಗ ಈ ಎರಡೂ ಮಾರ್ಗಗಳನ್ನು ನಾವು ಅನುಸರಿಸಬೇಕು. ಆವೆರಡೂ ಮಾರ್ಗಗಳು ಒಮ್ಮೆ ಒಂದುಗೂಡುವ ಉದ್ದೇಶವನ್ನಿಟ್ಟುಕೊಂಡೇ ನಾವು ಕಾರ್ಯ ಮಾಡಬೇಕಾಗಿದೆ. ಕನ್ನಡವನ್ನು ಎಲ್ಲ ಕಡೆಗೂ ಉಪಯೋಗಿಸದಿದ್ದರೆ ಅದು ಬೆಳೆಯುವುದು ಹೇಗೆ? ಅದು ಬೆಳೆದ ಮೇಲೆಯೇ ಅದನ್ನು ಉಪಯೋಗಿಸುವ ಆಶೆ ಸಫಲವಾಗುವುದು ಹೇಗೆ? ಇಷ್ಟಲ್ಲದೆ ನಮ್ಮ ಅಂಕಿತದೊಳಗಿರುವ, ಕನ್ನಡಕ್ಕೆ ಸ್ಥಾನ ಕೊಡಲು ಸಾಧ್ಯವಿರುವ ವಿಷಯಗಳಲ್ಲಿಯೂ ನಾವು ಕನ್ನಡವನ್ನು ಕಡೆಗಣಿಸಿದ್ದೇವೆಂಬುದು ನನ್ನ ಆಕ್ಷೇಪ. ನಮ್ಮ ದಿನದ ಜೀವನದಲ್ಲಿ ಕನ್ನಡಕ್ಕೆ ತೀರ ಕೆಳಗಣ ಸ್ಥಾನ ಕೊಟ್ಟಂತಿದೆ. ಕಣ್ಣಿಗೆ, ಕಿವಿಗೆ ಹೆಚ್ಚಾಗಿ ಬೀಳುವುದು ಕನ್ನಡವಲ್ಲದ ಭಾಷೆ. ಶಾಲೆ, ಕಾಲೇಜು ಕೋರ್ಟುಗಳಲ್ಲಿ ಇಂಗ್ಲಿಷು, ಸುಶಿಕ್ಷಿತರೊಡನೆ ಸಂಭಾಷಣೆ ಮರಾಠಿ ತೆಲುಗು ತಮಿಳುಗಳಲ್ಲಿ, ರಾಜಕೀಯ ವಿಷಯದಲ್ಲಿ ಹಿಂದಿ, ಮಡಿಯಲ್ಲಿ ಸಂಸ್ಕೃತ. ತಿಳಿವಿನ ಸಾಧನ, ಮನೋರಂಜನೆಯ ಸಾಧನ ಇವುಗಳಲ್ಲಿಯೂ ಕನ್ನಡಕ್ಕೆ ಸ್ಥಾನವಿಲ್ಲ. ಹೀಗಾಗಿ ಕನ್ನಡ ಭಾಷೆಯ ಉಪಯೋಗ ತೀರ ಕಡಮೆ ಸಂದರ್ಭಗಳಲ್ಲಿ ಮಾತ್ರ ಬರುತ್ತದೆ. ಆಫೀಸಿನಲ್ಲಿ ಇಂಗ್ಲಿಷು, ಜವಾನರೊಂದಿಗೆ ಉರ್ದು, ಗೆಳೆಯರೊಂದಿಗೆ ಕನ್ನಡವಲ್ಲದ ಭಾಷೆ ಆದರೆ ಕನ್ನಡದ ಉಪಯೋಗವಾಗುವುದು ಯಾವಾಗ? ಮನೆಯಲ್ಲಿ ಮಡದಿ ಮಕ್ಕಳು, ಆಳುಗಳೊಂದಿಗೆ ಮಾತನಾಡಬೇಕಾದಾಗ ಮಾತ್ರ. ಕೆಲವರಿಗೆ ಈ ಸೌಲಭ್ಯವೂ ಇರುವುದಿಲ್ಲ. ವ್ಯವಹಾರ, ತಿಳಿವಿನ ಸಾಧನ, ಮನೋರಂಜನೆಯ ಅನುಕೂಲತೆ ಇವೆಲ್ಲವುಗಳಿಂದ ನಾವು ಕನ್ನಡವನ್ನು ದೂರವಾಗಿಟ್ಟಿದ್ದೇವೆ. ಒಮ್ಮೊಮ್ಮೆ ಅದು ಅನಿವಾರ್ಯವೆಂದು ತೋರಬಹುದು. ಆದರೆ ಅದನ್ನು ಸುಲಭಸಾಧ್ಯಮಾಡುವುದು ಕನ್ನಡ ಪ್ರೇಮಿಗಳ ಕರ್ತವ್ಯವಾಗಿರುವುದಷ್ಟೇ. ಇನ್ನು ಸರ್ವಸಾಮಾನ್ಯ ಪ್ರಸಂಗಗಳಲ್ಲಿ, ಕನ್ನಡಕ್ಕೆ ಸ್ಥಾನ ಕೊಡುವುದು ಸುಲಭವಾಗಿರುವ ವಿಚಾರದಲ್ಲಿಯಾದರೂ ಕನ್ನಡಕ್ಕೆ ಹೆಚ್ಚಿನ ಸ್ಥಾನ ದೊರೆಯಬೇಕೆಂಬುದೇ ಈ ಬರೆಹದ ಕೂಗು.

## ಸೊಲ್ಲಾಪುರ ಜಿಲ್ಲಾ ಸಾಹಿತ್ಯ ಸಮ್ಮೇಳನದ ಗೊತ್ತುವಳಿಗಳು

ಶ್ರೀ॥ ಮುದವೀಡು ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನಡೆದ ಮೇಲ್ಕಂಡ ಸಮ್ಮೇಳನದಲ್ಲಿ ಅನುಮೋದಿತವಾದ ಗೊತ್ತುವಳಿಗಳಿವು:

೧. ಬರುವ ಜನಗಣತಿಯಲ್ಲಿ ಸೊಲ್ಲಾಪುರ ಜಿಲ್ಲೆಯ ಕನ್ನಡಿಗರೆಲ್ಲರೂ ತಮ್ಮ ಮಾತೃಭಾಷೆ ಕನ್ನಡವೇ ಎಂದು ಬರೆಯಿಸಲು ದಕ್ಷತೆವಹಿಸಬೇಕು.

೨. ಜಿಲ್ಲೆಯಲ್ಲಿ ಕನ್ನಡ ಪ್ರೌಢ ಶಿಕ್ಷಣ ವ್ಯವಸ್ಥೆಯಾಗಬೇಕು. ಕನ್ನಡಿಗರೆಲ್ಲರೂ ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೇ ಕಳಿಸಬೇಕು.

೩. ಅಕ್ಕಲಕೋಟಿ, ಕುರಂದವಾಡ (ಕಿರಿಯ) ಸಂಸ್ಥಾನಗಳಲ್ಲಿ ಮತ್ತು ಸೊಲ್ಲಾಪುರದ ಹತ್ತಿರದ ಪ್ರದೇಶದಲ್ಲಿ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕು. ಮೇಲ್ಕಂಡ ಪ್ರದೇಶಗಳಲ್ಲಿ ಕನ್ನಡವನ್ನೇ ಕೋರ್ಟು ಕಛೇರಿಗಳ ಭಾಷೆಯನ್ನಾಗಿ ಮಾಡಬೇಕು.

೪. ವಳಸಂಗದಲ್ಲಿ ಈಗ ಇರುವ ಕನ್ನಡ ಶಾಲೆಗಳನ್ನು ತೆಗೆದುಹಾಕಬಾರದು. ಸೊಲ್ಲಾಪುರದಲ್ಲಿ ಕನ್ನಡ ಮರಾಠಿ ಎರಡನ್ನೂ ಕೋರ್ಟು ಕಛೇರಿಗಳ ಭಾಷೆಗಳಾಗಿ ಬಳಸಬೇಕು.

ಸೊಲ್ಲಾಪುರದ ವಾಚನಾಲಯಗಳಿಗೆ ಕನ್ನಡ ವೃತ್ತಪತ್ರಿಕೆಗಳನ್ನೂ ಪುಸ್ತಕಗಳನ್ನೂ ತರಿಸಬೇಕೆಂದು ಅಧಿಕಾರಿಗಳಲ್ಲಿ ಬಿನ್ನವಿಸಿಕೊಳ್ಳಲಾಯಿತು. ಸೊಲ್ಲಾಪುರದಲ್ಲಿ ಕನ್ನಡ ಚಟುವಟಿಕೆಗಳನ್ನು ನಡಸಿ, ಕನ್ನಡನುಡಿಯ ಪ್ರಚಾರವನ್ನು ಕೈಗೊಳ್ಳುವುದಕ್ಕಾಗಿ ಒಂದು ಸಮಿತಿ ನೇಮಕವಾಯಿತು.

---

## ಏಕೀಕರಣ ಪರಿಷತ್ತು

ಕಳೆದ ೨೨ನೆಯ ತಾರೀಖು ಸೊಲ್ಲಾಪುರದಲ್ಲಿ ನಡೆದ ೮ನೆಯ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷತೆ ವಹಿಸಿ ಡಾ॥ ನಾಗನಗೌಡರವರು ಮಾಡಿದ ಭಾಷಣದ ಸಾರಾಂಶ:—

ಮೊತ್ತಮೊದಲು ಅಧ್ಯಕ್ಷರು ಕರ್ನಾಟಕ ಏಕೀಕರಣಕ್ಕೆ ಮಹಾತ್ಮಾ ಗಾಂಧಿಯವರ ಹಾಗೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಬೆಂಬಲವಿದೆಯೆಂದು ಹೇಳಿ, ಅಖಿಲ ಕರ್ನಾಟಕ ಏಕೀಕರಣಕ್ಕೆ ಮೊದಲ ಹೆಜ್ಜೆಯಾಗಿ ಬ್ರಿಟಿಷ್ ಕರ್ನಾಟಕವನ್ನು ಒಂದುಗೂಡಿಸುವುದು ವ್ಯವಹಾರ್ಯವೆಂದೂ ಆರ್ಥಿಕದೃಷ್ಟಿಯಿಂದ ಅವ್ಯವಹಾರ್ಯವೆಂದು ಹೇಳುವುದು ಸರಿಯಲ್ಲವೆಂದೂ ನುಡಿದರು. ಇದಕ್ಕೆ ಪೋಷಕವಾಗಿ ನೆಹ್ರೂ ರಾಜ್ಯಾಂಗ ರಚನಾ ಸಮಿತಿಯವರು "ಆರ್ಥಿಕ ವಿಷಯದಲ್ಲಿ (ಭಾವಿ) ಕರ್ನಾಟಕ (ಪ್ರಾಂತ)ದ ಸ್ಥಿತಿ ಬಹಳ ಭದ್ರವಾಗಿದೆ" ಎಂದು ಹೇಳಿರುವುದನ್ನು ಸಭೆಗೆ ಜ್ಞಾಪಿಸಿ, ಈಚೆಗೆ ಹಲವು ಕನ್ನಡ ಅರ್ಥಶಾಸ್ತ್ರಜ್ಞರು ಕರ್ನಾಟಕ ಪ್ರಾಂತೀಕರಣಕ್ಕೆ ಆರ್ಥಿಕದೃಷ್ಟಿಯಿಂದ ಯಾವ ಅಡಚಣೆಯೂ ಇಲ್ಲವೆಂದಿರುವರು ಎಂಬುದಾಗಿ ಒತ್ತಿ ಹೇಳಿದರು. ಬಳಿಕ ಗಡಿನಾಡುಗಳಲ್ಲಿಯ ಕನ್ನಡಿಗರು ತಮ್ಮ ಕನ್ನಡಿಗತನವನ್ನು ಕಾಯ್ದುಕೊಳ್ಳುವ ಬಗೆ ಹೇಗೆಂಬುದನ್ನು ಕುರಿತು ಅಮೂಲ್ಯವಾದ ಸಲಹೆಗಳನ್ನು ಕೊಟ್ಟರು. ಕನ್ನಡಿಗರಲ್ಲಿ ವಿದ್ಯೆ ಹರಡಲು ಕೈಗೊಳ್ಳಬೇಕಾದ ಕಾರ್ಯಕ್ರಮ, ಕನ್ನಡವೇ ಶಿಕ್ಷಣದ ಭಾಷೆಯಾಗಬೇಕಾದುದರ ಅವಶ್ಯಕತೆ, ರೇಡಿಯೋದಲ್ಲಿ ಕನ್ನಡದ ಸ್ಥಾನ, ಕನ್ನಡದ ಆರ್ಥಿಕಸ್ಥಿತಿ ಉತ್ತಮಗೊಳ್ಳಲು ಭಟ್ಕಲ್, ಮಲ್ಪೆ ಮುಂತಾದ ಬಂದರುಗಳನ್ನು ತೆರೆಯಬೇಕಾದ ಆವಶ್ಯಕತೆ ಮೊದಲಾದ ನಾಡಿನ ಜೀವಾಳದ ಸಮಸ್ಯೆಗಳ ಬಗ್ಗೆ ತಮ್ಮ ಅನುಭವಸಿದ್ಧವಾದ ಅಭಿಪ್ರಾಯಗಳನ್ನು ಕೊಟ್ಟು, ಕರ್ನಾಟಕ ಏಕೀಕರಣ ಸಾಧನೆಗಾಗಿ ಏಕೀಕರಣ ಪರಿಷತ್ತು ಇನ್ನೂ ಹೆಚ್ಚು ಚಟುವಟಿಕೆಯಿಂದ ದುಡಿಯಬೇಕೆಂದು ಕೋರಿದರು.

ಭಾಷಣವನ್ನು ಮುಗಿಸುತ್ತಾ ಹೀಗೆ ಹೇಳಿದರು:—

"ಕೆಲವು ತಿಂಗಳುಗಳ ಕೆಳಗೆ ಸುಪ್ರಸಿದ್ಧ ಕಾಂಗ್ರೆಸ್ ಮುಂದಾಳುಗಳಾದ ಮದರಾಸಿನ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ॥ ಚಕ್ರವರ್ತಿ ರಾಜಗೋಪಾಲಾಚಾರ್ಯರು, ಮೈಸೂರಿನಲ್ಲಿ ಜವಾಬ್ದಾರಿ ಸರಕಾರ ಸ್ಥಾಪಿತವಾಗಿ ಶ್ರೀಮನ್ಮಹಾರಾಜರು ಘಟನಾತ್ಮಕ ರಾಜರಾದರೆ ಮುಂಬಯಿ ಮತ್ತು ಮದರಾಸು ಪ್ರಾಂತಗಳಲ್ಲಿರುವ ಕರ್ನಾಟಕ ಪ್ರದೇಶಗಳು ಮೈಸೂರಿಗೆ ಸೇರಿ ಇಡಿಯ ಕರ್ನಾಟಕದ ಏಕೀಕರಣವಾಗಬಹುದೆಂದು ಹೇಳಿದರು. ಹೀಗಾಗಬಾರದೇಕೆ? ಇದು ಅನುಕೂಲವಾದರೆ ನಮ್ಮ ಸಮಸ್ಯೆಗಳಲ್ಲನೇಕ ಪರಿಹಾರವಾಗುವುವು.

"ವಿಜಯನಗರ ಸಾಮ್ರಾಜ್ಯ ಬಿದ್ದಂದಿನಿಂದ ಈ ನಾಲ್ಕು ನೂರು ವರ್ಷಗಳು ಕನ್ನಡಿಗರು ಮನೆಯಿಲ್ಲದವರಂತೆ ನೆರೆಯವರ ಆಶ್ರಯಕ್ಕೆ ಬಿದ್ದಂತೆ ಇರುವರು. ಈ ಸಂಕಟಪರಿಸ್ಥಿತಿ ಇನ್ನು ಹೆಚ್ಚು ದಿನಗಳವರೆಗೆ ಇರಲು ಸಾಧ್ಯವಿಲ್ಲ. ಕನ್ನಡಿಗನ ಅವಮಾನವೆಂದರೆ ಅಷ್ಟಿಷ್ಟಲ್ಲ. ಅವುಗಳನ್ನು ಸೈರಿಸುವುದು ಇನ್ನು ಸಾಧ್ಯವಿಲ್ಲ. ಕನ್ನಡಿಗನು ಈಗ ಎಚ್ಚತ್ತಿರುವನು. ದಕ್ಷಿಣ ಹಿಂದೂಸ್ಥಾನದ ಹಿಂದೂ ಸಂಸ್ಕೃತಿಯನ್ನು ತಾನೊಮ್ಮೆ ಕಾಪಾಡಿರುವನೆಂದು ಅವನ ನೆನಪಿಗೆ ಬಂದಿದೆ. ಈಗ ಅವನು ತನ್ನ ಸಂಸ್ಕೃತಿ ಹಾಳಾಗಿ, ಅದರ ಪೋಷಣೆಗೆ ಇತರರನ್ನು ಆಶ್ರಯಿಸಬೇಕಾಗಿರುವುದು.

"ಕರ್ನಾಟಕ ಒಂದಾನೊಂದು ಕಾಲಕ್ಕೆ ಇಡಿಯ ಹಿಂದೂಸ್ಥಾನದೊಳಗೇ ಗುಡುಗಾಡಿ ಪ್ರಭಾವ ಬೀರಿದ ನಾಡು. ......... ಇಂಥ ಕರ್ನಾಟಕ ಇಂದು ನಮ್ಮ ಕಾರ್ಯಕರ್ತೃತ್ವ, ಸಾಹಸ, ವಿಶಾಲದೃಷ್ಟಿ, ದೇಶಾಭಿಮಾನ ಇವೆಲ್ಲವುಗಳ ಅಭಾವದ ಕಾರಣದಿಂದ ಹಿಂದೆ ಬಿದ್ದಿದೆ. ನಮ್ಮಲ್ಲೀಗ ಹೊಸ ನೋಟ ಮೂಡಿದೆ. ಹೊಸ ಅಭಿಮಾನ ಅಂಕುರಿಸಿದೆ. ಆದುದರಿಂದ ನಾವು ಇಡಿಯ ಕರ್ನಾಟಕವನ್ನು 'ಜಯಕರ್ನಾಟಕ' ಎಂಬ ಮಂತ್ರದಿಂದ ಚೈತನ್ಯಗೊಳಿಸಿ, ಅದನ್ನೊಂದುಗೊಳಿಸುವಾ. ಕನ್ನಡಿಗರು ಸಾತಾರೆಯಲ್ಲಿರಲಿ, ಸೊಲ್ಲಾಪುರದಲ್ಲಿರಲಿ, ಅನಂತಪುರದಲ್ಲಿರಲಿ, ನೀಲಗಿರಿಯಲ್ಲಿರಲಿ ಎಲ್ಲರನ್ನೂ ಕಲೆ ಹಾಕಿ, ಅವರನ್ನು ಒಂದೆಂಬ ಭಾವನೆಯಿಂದ ಹುರಿಗೊಳಿಸುವಾ. ಅವರಲ್ಲಿ ಮಿಕ್ಕ ಜನಾಂಗದವರಂತೆ ಹುರುಪನ್ನು ತುಂಬುವಾ. ತೇಜಸ್ಸನ್ನು ಬೆಳಗುವಾ."

---

## ಹೊರ ಭಾಷೆಯ ಮೂಲಕ ಶಿಕ್ಷಣ *

(ಡಾ॥ ಅನ್ವರ್ ಇಕ್ಬಲ್ ಖುರೇಷಿ)

ನಾವು ಹೊರ ಭಾಷೆಯ ಮೂಲಕ ಎಲ್ಲ ವಿಷಯಗಳನ್ನೂ ಕಲಿಸುತ್ತಿರುವುದೇ ನಮ್ಮ ವಿಶ್ವವಿದ್ಯಾನಿಲಯ ಶಿಕ್ಷಣದ ದೊಡ್ಡ ದೋಷ. ಈ ಶಿಕ್ಷಣಪದ್ಧತಿಯಿಂದ ಪ್ರಗತಿಗೆ ದೊಡ್ಡ ತಡೆಯಾಗಿದೆ. ವಿಶ್ವವಿದ್ಯಾನಿಲಯದ ಮುಖ್ಯವಾದ ಕರ್ತವ್ಯವೆಂದರೆ ಮಿದುಳನ್ನು ತಿದ್ದಿ ಬುದ್ಧಿಯನ್ನು ಪ್ರಚೋದಿಸುವುದು. ಪರಭಾಷೆಯನ್ನು ಬಳಸಿದರೆ ಈ ಕೆಲಸ ಕೈಗೂಡುವುದಿಲ್ಲ. ನಮ್ಮ ನಾಡಿನ ವಿಶ್ವವಿದ್ಯಾನಿಲಯಗಳಲ್ಲಿ ಆಯಾ ಪ್ರಾಂತ ಭಾಷೆಗಳ ಮೂಲಕ ಶಿಕ್ಷಣ ಕೊಡುವುದಕ್ಕೆ ಮೊದಲು ಮಾಡಿದರೆ ಕಾಲವೂ ಪೋಲಾಗುವುದಿಲ್ಲ, ಕೆಲಸವೂ ವಿತರಣೆಯಿಂದ ನಡೆದು ಉದ್ದೇಶ ಕೈಗೂಡುವುದು.

ಪ್ರಾಂತಭಾಷೆಗಳು ಅಷ್ಟೊಂದು ಇರುವಾಗ ಯಾವ ಭಾಷೆಯನ್ನು ಶಿಕ್ಷಣದ ಭಾಷೆಯಾಗಿ ಬಳಸಬೇಕೆಂಬ ಪ್ರಶ್ನೆ ಹುಟ್ಟಬಹುದು. ಭಾರತ ರಾಷ್ಟ್ರೀಯ ಮಹಾಸಭೆ ಹಿಂದೂಸ್ಥಾನಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ. ನಾವು ಉದಾರಮನಸ್ಕರಾದಲ್ಲಿ ಹಿಂದೂಸ್ಥಾನಿಯನ್ನೇ ನಮ್ಮ ನಾಡಿನ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿಯೂ ಶಿಕ್ಷಣದಭಾಷೆಯನ್ನಾಗಿ ಅಳವಡಿಸಿಕೊಳ್ಳಬಹುದೆಂದು ನಾನು ನಂಬಿದ್ದೇನೆ. ಆದರೆ ಇಂಗ್ಲಿಷಿನಲ್ಲಿಯೂ ನಮಗೆ ಚೆನ್ನಾದ ಜ್ಞಾನವಿರಬೇಕು. ಇದ್ದರೆಯೇ ಪಶ್ಚಿಮದ ಜ್ಞಾನಭಂಡಾರದಿಂದ ನಾವು ಲಾಭ ಹೊಂದಬಹುದು.

ಇನ್ನು ದೇಶ ಭಾಷೆಗಳಲ್ಲಿ ಸಾಕಷ್ಟು ಸಾಹಿತ್ಯವಿಲ್ಲ. ಪರಿಭಾಷಾ ಶಬ್ದಕೋಶವಂತೂ ಬಹು ಕಡಮೆ ಎಂದು ಟೀಕಿಸುವವರಿಗೆ ಸಮಾಧಾನ ಹೇಳಬೇಕಾಗಿದೆ. ಅವರ ಆಕ್ಷೇಪಣೆಗೆ ಬುಡವಿಲ್ಲದೆ ಇಲ್ಲ. ಆದರೆ ನಾವು ಆಕ್ಷೇಪಣೆಯನ್ನೊಪ್ಪಿಕೊಂಡು ಸುಮ್ಮನೆ ಕುಳಿತುಕೊಳ್ಳುವ ಹಾಗಿಲ್ಲ. ಕುಳಿತುಕೊಂಡು ನಮ್ಮ ಬುದ್ಧಿಯ ಕೇಡನ್ನು ನೋಡುತ್ತ ಕಾಲಹರಣಮಾಡುವಂತಿಲ್ಲ.

ನಮ್ಮ ವಿಶ್ವವಿದ್ಯಾನಿಲಯಗಳಿಂದ ಹೊರಬೀಳುವ ಸಾಮಾನ್ಯ ಪದವೀಧರರ ಜ್ಞಾನ ಅಷ್ಟು ಕೆಳಮಟ್ಟದಲ್ಲಿ ಏಕಿರುತ್ತದೆ? ಎಂಬ ಪ್ರಶ್ನೆಗೆ ನನ್ನ ಉತ್ತರ ಇಷ್ಟೆ: ನಮ್ಮ ಕಾಲೇಜು ವಿದ್ಯಾರ್ಥಿಗಳಿಗೆ ಅವರು ಓದುತ್ತಿರುವ ವಿಷಯದ ಪೂರ್ಣ ಅರಿವೇ ಇರುವುದಿಲ್ಲ. ದೇಶಭಾಷೆಗಳಲ್ಲಿ ಸಾಕಷ್ಟು ಸಾಹಿತ್ಯವಿಲ್ಲದಿರುವುದು, ಪರಿಭಾಷಾಶಬ್ದಸಂಪತ್ತು ಸಾಲದಿರುವುದು ಸ್ವಲ್ಪಮಟ್ಟಿಗೆ ನಿಜವಾದರೂ ತತ್ಫಲವಾಗಿ ಉಂಟಾಗಿರುವ ಕಷ್ಟದ ಸ್ಥಿತಿಯನ್ನು ಅತಿಮಾಡಿ ವರ್ಣಿಸಿದೆ ಎಂದರೆ ತಪ್ಪಲ್ಲ. ಉದಾಹರಣೆಗಾಗಿ, ನಮ್ಮ ಕಾಲೇಜುಗಳಲ್ಲಿ ಪ್ರಾಚೀನ ಭಾಷೆಗಳನ್ನು (Classical Languages) ಪಾಠ ಹೇಳುವ ಕ್ರಮವನ್ನು ನೋಡೋಣ. ವಿದ್ಯಾರ್ಥಿ ಈ ಪ್ರಾಚೀನ ಭಾಷೆಯನ್ನು ಇಂಗ್ಲಿಷಿಗೆ ಭಾಷಾಂತರ ಮಾಡಬೇಕಾದ ಕಷ್ಟಕ್ಕೇಕೆ ಗುರಿಯಾಗಬೇಕು? ನನ್ನ ಅನುಭವವನ್ನು ಹೇಳಬೇಕಾದರೆ, ಪಂಜಾಬ್

* ಲಾಹೋರಿನಲ್ಲಿ ಕೆಲವು ದಿನಗಳ ಹಿಂದೆ ನಡೆದ ಅರ್ಥಿಕ ಶಿಕ್ಷಕರ ಸಮ್ಮೇಳನದಲ್ಲಿ ಡಾ॥ ಖುರೇಷಿಯವರು ಓದಿದ ಒಂದು ಪ್ರಬಂಧದ ಸಾರಾಂಶ.

ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳು ಅತ್ಯಂತ ಪ್ರೌಢ ಪರೀಕ್ಷೆಗಳಲ್ಲಿ ಪ್ರಾಚೀನ ಭಾಷಾ ವಿಭಾಗಗಳಲ್ಲಿ ತೇರ್ಗಡೆ ಹೊಂದಿದರೂ ಇಂಟರ್ ಮೀಡಿಯೆಟ್ ಪರೀಕ್ಷೆಯ ಭಾಷಾ ವಿಭಾಗದಲ್ಲಿ ಅನೇಕರು ತೇರ್ಗಡೆ ಹೊಂದಲಿಲ್ಲ. ಏಕೆಂದರೆ ಅವರಿಗೆ ಇಂಗ್ಲಿಷ್ ಜ್ಞಾನ ಬಹಳ ಕಡಮೆಯಾಗಿದ್ದು ಪ್ರಾಚೀನ ಭಾಷಾ ವಾಕ್ಯ ಸಮೂಹಗಳನ್ನು ಇಂಗ್ಲಿಷಿಗೆ ಸರಿಯಾಗಿ ಭಾಷಾಂತರಮಾಡಲು ಅವರು ಸಮರ್ಥರಾಗಿರಲಿಲ್ಲ.

ಈ ಕಷ್ಟಗಳನ್ನೆಲ್ಲ ಉಸ್ಮಾನಿಯ ವಿಶ್ವವಿದ್ಯಾನಿಲಯದವರು ಪರಿಹರಿಸಲು ಯತ್ನಿಸಿ ಯಶಸ್ಸನ್ನು ಪಡೆದಿರುವರೆಂದು ಧಾರಾಳವಾಗಿ ಹೇಳಬಹುದು. ಅಲ್ಲಿ ಇಂಟರ್‌ಮೀಡಿಯೆಟ್ ವರ್ಗದಿಂದ ಪಿಎಚ್.ಡಿ. ವರ್ಗದವರೆಗೆ ಎಲ್ಲ ವಿಷಯಗಳನ್ನೂ ಉರ್ದು ಭಾಷೆಯ ಮೂಲಕ ಪಾಠ ಹೇಳಲಾಗುತ್ತಿದೆ. ಕಳೆದ ಮೂರು ವರ್ಷಗಳಿಂದ ನಾನು ಬಹು ಕಷ್ಟವಾದ ವಿಷಯಗಳಲ್ಲಿ (ಬ್ಯಾಂಕಿಂಗ್ ಮತ್ತು ಕರೆನ್ಸಿ) ಪ್ರಶ್ನಪತ್ರಿಕೆಗಳನ್ನು ಕೊಡುತ್ತಿದ್ದೇನೆ. ಒಂದು ವರ್ಷದಲ್ಲಂತು ಐವತ್ತು ವಿದ್ಯಾರ್ಥಿಗಳಲ್ಲಿ ಒಬ್ಬನನ್ನೂ 'ಫೈಯ್ಲ್' ಮಾಡಿಸಲು ನನ್ನಿಂದ ಆಗಲಿಲ್ಲ. ಕಳೆದ ಇಪ್ಪತ್ತು ವರ್ಷಗಳಿಂದ ನಾವು ಸಾವಿರಾರು ಹೊಸ ಹೊಸ ಪದಗಳನ್ನು ಸೃಷ್ಟಿಮಾಡಿದ್ದೇವೆ. ನೂರಾರು ಪ್ರಮಾಣ ಗ್ರಂಥಗಳನ್ನು ಉರ್ದುವಿಗೆ ಭಾಷಾಂತರಮಾಡಿಸಿದ್ದೇವೆ. ಈ ಮೇಲ್ಪಂಕ್ತಿಯನ್ನು ಮಿಕ್ಕ ವಿಶ್ವವಿದ್ಯಾನಿಲಯಗಳವರೂ ಅನುಸರಿಸಿದಲ್ಲಿ ಎಲ್ಲ ದೇಶಭಾಷೆಗಳಲ್ಲೂ ಸಾಹಿತ್ಯವಿಜ್ಞಾನಾದಿ ವಿಭಾಗಗಳಲ್ಲಿ ಗ್ರಂಥಗಳೂ ಪರಿಭಾಷಾ ಶಬ್ದಸಂಪತ್ತೂ ಬೇಗ ಹೆಚ್ಚುವುದರಲ್ಲಿ ಸಂದೇಹವಿಲ್ಲ.

---

## ಪರಿಷತ್ತಿನ ಸುದ್ದಿ

### ಕನ್ನಡ ಸಾಹಿತ್ಯ ಪರೀಕ್ಷೆಗಳು—೧೯೪೦

ಪರೀಕ್ಷೆಯ ದಿನಗಳು :—ಜೂನ್ ೧೪, ೧೫, ೧೬.

ತೆರ: ೨ನೆಯ ಪರೀಕ್ಷೆ ೧ ರೂ.

೩ ,, ,, ೨ ರೂ.

ಅಪೇಕ್ಷೆಪತ್ರಗಳನ್ನು ಕಳಿಸಲು ಕಡೆಯ ದಿನ: ಮೇ ೨೦

ಸೂಚನೆ: ಅಪೇಕ್ಷೆಪತ್ರಗಳನ್ನು ಪರಿಷತ್ತಿನ ಕಾರ್ಯದರ್ಶಿಗಳಿಂದಾಗಲಿ ಆಯಾ ಪ್ರಾಂತ ಸಮಿತಿಯ ಕಾರ್ಯದರ್ಶಿಗಳಿಂದಾಗಲಿ ತರಿಸಿಕೊಳ್ಳಬಹುದು. ವಿವರಗಳಿಗಾಗಿ 'ಕನ್ನಡ ನುಡಿ'ಯ ಏಪ್ರಿಲ್ ೧೨ನೆಯ ತಾರೀಖಿನ ಸಂಚಿಕೆಯನ್ನು ನೋಡಿ.

ಪ್ರೌಢ ಪರೀಕ್ಷೆಯ ವಿದ್ಯಾರ್ಥಿಗಳಿಗೆ ಈ ಕೆಳಗಣ ಕನ್ನಡ ಕವಿಗಳ ಜೀವನ ಚರಿತೆ ಮತ್ತು ಅವರ ಕೃತಿಗಳ ವಿಷಯ ತಿಳಿದಿರಬೇಕು. ಅಲ್ಲದೆ ಆಯಾ ಕವಿಗಳ ಕಾಲದ ನುಡಿಯ ಸ್ವರೂಪದ ಮತ್ತು ಐತಿಹಾಸಿಕ ಹಿನ್ನೆಲೆಯ ಅರಿವೂ ಇರಬೇಕು.

೧. **ಜೈನ ಕವಿಗಳು :** ೧. ನೃಪತುಂಗ, ೨. ಪಂಪ, ೩. ಪೊನ್ನ, ೪. ನಾಗವರ್ಮ–I, ೫. ಚಾವುಂಡರಾಯ, ೬. ರನ್ನ, ೭. ನಾಗಚಂದ್ರ, ೮. ನಯಸೇನ, ೯. ಜನ್ನ ೧೦. ನಾಗವರ್ಮ–II, ೧೧. ನೇಮಿಚಂದ್ರ, ೧೨. ಶಿಶುಮಾಯಣ. ೧೩. ಆಂಡಯ್ಯ, ೧೪. ಮಲ್ಲಿಕಾರ್ಜುನ, ೧೫. ಕೇಶಿರಾಜ, ೧೬. ಕುಮುದೇಂದು, ೧೭. ಮಧುರ, ೧೮. ಭಾಸ್ಕರ, ೧೯. ಅಭಿನವ ವಾದಿವಿದ್ಯಾನಂದ, ೨೦. ರತ್ನಾಕರವರ್ಣಿ.

೨. **ವೀರಶೈವ ಕವಿಗಳು :** ೧. ಬಸವೇಶ್ವರ, ೨. ಚನ್ನಬಸವೇಶ್ವರ, ೩. ಪ್ರಭುದೇವ, ೪. ಸಿದ್ಧರಾಮ, ೫. ಮಹಾದೇವಿಯಕ್ಕ, ೬. ಹರೀಶ್ವರ, ೭. ರಾಘವಾಂಕ, ೮. ಭೀಮಕವಿ, ೯. ಚಾಮರಸ, ೧೦. ನಿಜಗುಣ ಶಿವಯೋಗಿ, ೧೧. ಗುಬ್ಬಿ ಮಲ್ಲಣ್ಣಾರ್ಯ, ೧೨. ನಂಜುಂಡ, ೧೩. ವಿರೂಪಾಕ್ಷ, ೧೪. ಷಡಕ್ಷರದೇವ, ೧೫. ಸರ್ವಜ್ಞ.

೩. **ಬ್ರಾಹ್ಮಣ ಮತ್ತು ಇತರ ಕವಿಗಳು :** ೧. ದುರ್ಗಸಿಂಹ, ೨. ರುದ್ರಭಟ್ಟ, ೩. ಕವಿಕಾಮ, ೪. ಚೌಂಡರಸ, ೫. ಕುಮಾರವ್ಯಾಸ, ೬. ಕುಮಾರ ವಾಲ್ಮೀಕಿ, ೭. ಚಾಟು ವಿಠಲನಾಥ, ೮. ಪುರಂದರದಾಸ, ೯. ಕನಕದಾಸ, ೧೦. ಚಿಕ್ಕದೇವರಾಜ, ೧೧. ತಿರುಮಲಾರ್ಯ, ೧೨. ಚಿಕುಪಾಧ್ಯಾಯ, ೧೩. ಸಿಂಗರಾರ್ಯ, ೧೪. ಹೊನ್ನಮ್ಮ, ೧೫. ಲಕ್ಷ್ಮೀಶ.

## ಸಾದರ ಸ್ವೀಕಾರ

(೧) ಯಜುರ್ವೇದಿ ಶ್ರೀ ಸೂಕ್ತ—ಪುರುಷಸೂಕ್ತ (ಎರಡು ಪ್ರತಿಗಳು). (೨) ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ (ನಾಮಾವಳಿ ಸಹಿತ). (೩) ಶ್ರೀ ಕೃಷ್ಣಾಷ್ಟೋತ್ತರ ಶತಮಾನ ಸ್ತೋತ್ರ (ನಾಮಾವಳಿ ಸಹಿತ). (೪) ದಶಾವತಾರ ಸ್ತುತಿ, ಶ್ರೀ ಕೃಷ್ಣಾಷ್ಟಕ ಮತ್ತು ಕರಾವಲಂಬನ ಸ್ತೋತ್ರ. (೫) ವಾಯುಸ್ತುತಿ. (೬) ಆದಿತ್ಯ ಹೃದಯ. (೭) ರಾಘವೇಂದ್ರ ಸ್ತೋತ್ರ. (೮) ದೇವಪೂಜಾ ವಿಧಿ. (೯) ದ್ವಾದಶಸ್ತೋತ್ರ. ಪ್ರತಿಯೊಂದೂ ಕ್ರೌನ್ ಅಷ್ಟಪತ್ರಾಕಾರದ್ದು. ಬೆಲೆ ೯ ಪುಸ್ತಕಗಳಿಗೆ ೦–೧೫–೬ ಆಣೆ.

ಮೇಲ್ಕಂಡ ಪುಸ್ತಕಗಳನ್ನು ಸಾಹಿತ್ಯ ವಿದ್ವಾನ್ ವೇದಾಂತ ಶಿರೋಮಣಿ ಪಿ. ಶ್ರೀನಿವಾಸ ತಂತ್ರಿಗಳು ಪರಿಶೋಧಿಸಿದ್ದಾರೆ. ಬೆಂಗಳೂರು ಎ. ಎಸ್. ಸ್ಟೇಟನಲ್ಲಿರುವ ಉಡುಪಿ ಸ್ಟೋರ್ಸ್ ಮಾಲಕರಾದ ಶ್ರೀ|| ಪಿ. ಎ. ಉಪಾಧ್ಯಾಯರು ಪ್ರಕಟಿಸಿದ್ದಾರೆ. ಈ ಪುಸ್ತಕಗಳನ್ನು ಪ್ರಕಾಶಕರು ಪರಿಷತ್ತಿಗೆ ದಾನಮಾಡಿದ್ದಾರೆ. ಇವಕ್ಕಾಗಿ ಪರಿಷತ್ತು ಅವರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತದೆ.

**ಆನಂದ ಗೀತಾವಳಿ :**— ಬರೆದವರು: ಶ್ರೀ|| ಜೆ. ವಿ. ವೆಂಕಟಗಿರಿಯಪ್ಪ (ಜಕ್ಕೂರು ಶಾಮಣ್ಣ) ಕ್ರೌನ್ ಅಷ್ಟಪತ್ರ ೩೦ ಪುಟಗಳು. ಬೆಳೆ ೨ ಆಣೆ.

ಇದೊಂದು ಹೊಸ ಗೀತಸಂಗ್ರಹ. ಲೇಖಕರು ದಾಸ ಸಾಹಿತ್ಯದ ಮತ್ತು ಹಳೆಯ ಹಾಡುಗಳ ಧಾಟಿಯನ್ನು ಹಿಡಿದು ತಮ್ಮ ಕೃತಿಗಳನ್ನು ಬರೆದಿದ್ದಾರೆ. ಸುಪ್ರಸಿದ್ಧ ಕೀರ್ತನಕಾರರಾದ, ಹರಿಕಥಾಂಬುಧಿ ಚಂದ್ರ ಮುಂತಾಗಿ ಬಿರುದಾಂಕಿತರಾದ ಶ್ರೀ|| ವೇಣುಗೋಪಾಲದಾಸರು ಮುನ್ನುಡಿ ಬರೆಯುತ್ತ ಲೇಖಕರ ಕವಿತ್ವ ಸಂಸ್ಕಾರವನ್ನು ಹೊಗಳಿ, "ಅವರ ನಡೆಯಲ್ಲಿ ಇರುವ ಸರಳವೇ ಕವನದಲ್ಲೂ ಮೂಡಿದೆ. ಮಾತಿನಲ್ಲಿ ರಸವಿದೆ. ಮನಮುಟ್ಟುವಂತಿದೆ" ಎಂದು ಹೇಳಿರುವ ವಾಕ್ಯಗಳಲ್ಲಿ ಅತಿಶಯೋಕ್ತಿ ಇಲ್ಲವೆಂದು ಹೇಳಬಹುದು. ಕನ್ನಡಿಗರು, ಈ ಕೃತಿಯನ್ನು ಆದರದಿಂದ ಬರಮಾಡಿಕೊಂಡು, ಅವರ ಕನ್ನಡ ಸೇವೆಗೆ ನೆರವಾಗುವರೆಂದು ಹಾರೈಸುತ್ತೇವೆ.

೧೧. **ದೂರ ಹೋದಳು** (ಒಂದು ನೀಳ್ಗತೆ) :— ಬರೆದವರು: ಶ್ರೀ|| ಭಾರತೀಸುತ. ಶ್ರೀ ಬೆಟಗೇರಿ ಕೃಷ್ಣಶರ್ಮರ ಮುನ್ನುಡಿ ಇದೆ. ಪ್ರಕಾಶಕರು: ಶ್ರೀ|| ಎಂ. ಕೆ. ಜಿನಚಂದ್ರಗೌಡರು, ವಿಜಯಮಂದಿರಂ, ಕಲ್ಪಟ್ಟ (ವೈನಾಡು). ಕ್ರೌನ್ ಅಷ್ಟಪತ್ರ, ೬೮ ಪುಟಗಳು. ಬೆಲೆ ೬ ಆಣೆ.

೧೨. **ಕೈಗನ್ನಡಿ** (ಹಸ್ತಸಾಮುದ್ರಿಕೆ) :— ಬರೆದವರು: ಶ್ರೀ|| ಕಲಮದಾನಿ ಗುರುರಾಯರು. ಪ್ರಕಾಶಕರು: ಸಮಾಜ ಕಾರ್ಯಾಲಯ, ಧಾರವಾಡ. ಕ್ರೌನ್ ಅಷ್ಟಪತ್ರ ೧೫೪ ಪುಟಗಳು. ಬೆಲೆ ೧ ರೂ.

೧೩. **ಬೆಳಗಾವಿಯ ಗಿಲಗಿಂಚಿ ಅರಟಾಳ ಹೈಸ್ಕೂಲಿನ ಶಾಲಾಪತ್ರಿಕೆ:**— ಸಂಪಾದಕರು: ಶ್ರೀ|| ಎಸ್. ಡಿ. ಇಂಚಲ, ಬಿ.ಎ., ಪ್ರಕಾಶಕರು: ಶ್ರೀ|| ಎಸ್. ವೈ. ಸಿಂಧೆ, ಬಿ.ಎ., ಡಿ.ಪಿ.ಇ. ವಾರ್ಷಿಕ ಚಂದಾ ಒಂದು ರೂಪಾಯಿ.

ಮೇಲ್ಕಂಡ ಹೈಸ್ಕೂಲಿನವರು ವರ್ಷಕ್ಕೆರಡು ಬಾರಿ ಮಾರ್ಚಿ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹೊರಡಿಸುವ ಪತ್ರಿಕೆ ಇದು. ಇಂಗ್ಲಿಷ್, ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿ ಅತ್ಯುತ್ತಮ ಲೇಖನಗಳನ್ನೊಳಗೊಂಡಿದೆ. ಸಂಪಾದಕರಾದ ಶ್ರೀ|| ಇಂಚಲ ಅವರು ಬರೆದ "ಕಳೆದ ಕಿತ್ತೂರ" ಎಂಬ ಕವನವೂ ಆರನೆಯ ತರಗತಿಯಲ್ಲಿ ಓದುವ ವಿದ್ಯಾರ್ಥಿ ಶ್ರೀಮತಿ ಗಂಗಾಕುಮಾರಿಯವರು ಬರೆದ "ಕನ್ನಡಿಗರು ಕನ್ನಡದೇವಿಗೆ ಸಲ್ಲಿಸಬೇಕಾದ ಸೇವೆ" ಎಂಬ ಲೇಖನವೂ ಪ್ರಶಂಸೆಗೆ ಪಾತ್ರವಾಗಿವೆ. ಈ ಪತ್ರಿಕೆಯಿಂದ ಮುಖ್ಯವಾಗಿ ಕನ್ನಡ ಚಳವಳಿಯ ಧ್ಯೇಯ ಕೈಗೂಡಲು ತಕ್ಕ ಸೇವೆ ಸಲ್ಲುವುದೆಂದು ನಾವು ಹಾರೈಸಬಹುದಾಗಿದೆ.

೧೪. **ಎಕ್ಸ್-ರೇ :**— ಬರೆದವರು: ಶ್ರೀ|| ಯು. ರಾಘವೇಂದ್ರ ಆಚಾರ್ಯ, ಬಿ.ಎಸ್.ಸಿ. (ಆನರ್ಸ್), ಭೌತಶಾಸ್ತ್ರದ ಅಧ್ಯಾಪಕರು, ಲಾಯೊಲಾ ಕಾಲೇಜು, ಮದರಾಸು. ಮುನ್ನುಡಿ ಬರೆದವರು: ಡಾ|| ಯು. ರಾಮರಾಯರು, ಮದರಾಸು ಲೆಜಿಸ್ಲೆಟಿವ್ ಕೌನ್ಸಿಲ್‌ನ ಅಧ್ಯಕ್ಷರು. ಕ್ರೌನ್ ಅಷ್ಟಪತ್ರ ೯೨+೧೨ ಪುಟಗಳು.

ದೇಶಭಾಷೆಗಳಲ್ಲಿ ವಿಜ್ಞಾನಸಂಬಂಧವಾದ ಗ್ರಂಥಗಳು ಹೆಚ್ಚಲೆಂಬ ಉದ್ದೇಶದಿಂದ ಮದರಾಸು ವಿಶ್ವವಿದ್ಯಾನಿಲಯದವರು ವರ್ಷ ವರ್ಷವೂ ಕೊಡುವ ಬಹುಮಾನಕ್ಕೆ (೧೯೩೯–೧೯೪೦ರಲ್ಲಿ) ಪಾತ್ರವಾಗಿರುವ ಗ್ರಂಥಗಳಲ್ಲಿ ಇದೂ ಒಂದು.

೧೫. **ಹಿತಸಾಧಕರ ಕತೆಗಳು :**— ಬರೆದವರು ಮತ್ತು ಪ್ರಕಾಶಕರು: ಶ್ರೀ|| ಡಿ. ಆರ್. ರಾಮಯ್ಯನವರು, ಬಿ.ಎ., ಕನ್ನಡ ಟ್ರಾನ್ಸ್‌ಲೇಟರವರ ಆಫೀಸು, ಜನರಲ್ ಅಂಡ್ ರೆವೆನ್ಯೂ ಸೆಕ್ರಿಟೇರಿಯಟ್, ಬೆಂಗಳೂರು. ಕ್ರೌನ್ ಅಷ್ಟಪತ್ರ ೪೮ ಪುಟಗಳು. ಬೆಲೆ ೬ ಆಣೆ.

---

### ಬಳ್ಳಾರಿ : ಕನ್ನಡಕ್ಕೆ ಮನ್ನಣೆ

ಬಳ್ಳಾರಿ ಜಿಲ್ಲೆಯ ರಾಯದುರ್ಗ ತಾಲ್ಲೂಕಿನ ಹಿರೇಹಾಳ ಪಂಚಾಯಿತಿ ಸಂಸ್ಥೆಯವರು ಕಳೆದ ವಾರ ಸಭೆ ಸೇರಿ, ಸಂಸ್ಥೆ ಹುಟ್ಟಿದಂದಿನಿಂದ ತನ್ನ ಕಾರ್ಯಕಲಾಪಗಳನ್ನು ತೆಲುಗಿನಲ್ಲಿ ನಡಸುತ್ತಿದ್ದುದನ್ನು ಮಾರ್ಪಡಿಸಿ, ತಾಯ್ನುಡಿಯಾದ ಕನ್ನಡವನ್ನೇ ಸಂಸ್ಥೆಯ ಅಧಿಕೃತ ಭಾಷೆಯನ್ನಾಗಿ ಸ್ವೀಕರಿಸಬೇಕೆಂಬ ಗೊತ್ತುವಳಿಯನ್ನು ಅಂಗೀಕರಿಸಿದರು.

# ಕನ್ನಡ ನುಡಿ

**ಕನ್ನಡ ಸಾಹಿತಿಗಳ ಸಂಘ: ನಾಟಕ ವಾಚನ**

ಕಳೆದ ತಿಂಗಳು ೨೮ನೆಯ ತಾರೀಖು ಭಾನುವಾರ ಬೆಳಗ್ಗೆ ೮-೩೦ಕ್ಕೆ ಸಂಘದ ಸದಸ್ಯರ ಮತ್ತು ಸಾಹಿತ್ಯಾಭಿಮಾನಿಗಳ ಸಭೆ ಪರಿಷತ್ತಿನ ಮಂದಿರದಲ್ಲಿ ಸೇರಿತ್ತು. ಕಾರ್ಯಕ್ಕೆ ಮೊದಲು, ಅಂದಿನ ಅಧ್ಯಕ್ಷರಾಗಿದ್ದ ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಶ್ರೀ|| ಎಂ. ಎನ್. ಕಾಮತ್ ಅವರು ನಿಧನರಾದ ಸುದ್ದಿಯನ್ನು ಸಭೆಗೆ ತಿಳಿಸಿ, ದಿವಂಗತರ ಗುಣಗಾನವನ್ನು ಮಾಡಿ, ಈ ಕೆಳಗಿನ ನಿರ್ಣಯವನ್ನು ಒಪ್ಪಿಗೆಗಾಗಿ ಸೂಚಿಸಿದರು—

"ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳೂ, ಸಾಹಿತಿಗಳ ಸಂಘದ ಮಾನ್ಯ ಸದಸ್ಯರೂ, ಸಂಘದ ಆಶ್ರಯದಲ್ಲಿ ಕಳೆದ ಜನವರಿಯಲ್ಲಿ ನಡೆದ ಎರಡನೆಯ ಸಣ್ಣಕತೆಗಾರರ ಸಮ್ಮೇಳನದ ಅಧ್ಯಕ್ಷರಾಗಿ ಸೇವೆ ಮಾಡಿದವರೂ ಆದ ಶ್ರೀ|| ಎಂ. ಎನ್. ಕಾಮತ್ ಅವರು ಬುಧವಾರ ಕಾಲಾಧೀನರಾದರೆಂದು ಕೇಳಿ, ಸಂಘದಲ್ಲಿ ಸೇರಿರುವ ಈ ಸಭೆ ಬಹಳ ಸಂತಾಪಪಡುತ್ತದೆ, ಮತ್ತು ದಿವಂಗತರ ಕುಟುಂಬಕ್ಕೆ ಆಗಿರುವ ವಿಯೋಗಕ್ಕಾಗಿ ತನ್ನ ಅನುತಾಪವನ್ನು ಸೂಚಿಸಿ, ದಿವಂಗತರ ಆತ್ಮಕ್ಕೆ ಶಾಂತಿ ಉಂಟಾಗಲೆಂದು ಭಗವಂತನನ್ನು ಪ್ರಾರ್ಥಿಸುತ್ತದೆ."

ಸಭೆ ಎದ್ದು ನಿಂತು, ಕ್ಷಣಕಾಲ ಮೌನವನ್ನು ತೋರಿ, ನಿರ್ಣಯವನ್ನು ಒಪ್ಪಿತು.

ಆಮೇಲೆ, ಮೊದಲೇ ನಿಶ್ಚಯವಾಗಿದ್ದ ಕಾರ್ಯಕ್ರಮದಂತೆ, ಪ್ರೊ|| ಕೆ. ವಿ. ಅಯ್ಯರ್ ಅವರು ಶ್ರೀ|| ಟಿ. ಪಿ. ಕೈಲಾಸಂ ಅವರ "ಹುತ್ತದಲ್ಲಿ ಹುತ್ತ" ಎಂಬ ಸಾಮಾಜಿಕ ನಾಟಕವನ್ನು ಸ್ವಾರಸ್ಯವಾಗಿ ಓದಿದರು.

ಉಪಾಹಾರವಾದಮೇಲೆ, ಕಾರ್ಯದರ್ಶಿಗಳ ವಂದನಾ ಸಮರ್ಪಣೆಯೊಡನೆ ಸಭೆ ಮುಗಿಯಿತು.

**ಕರ್ನಾಟಕ ಸಂಘ: ಮಲ್ಲೇಶ್ವರ**

ಈ ಸಂಘದ ಆಶ್ರಯದಲ್ಲಿ ಕಳೆದ ತಿಂಗಳು ೧೯ನೆಯ ತಾರೀಖು ಶುಕ್ರವಾರ ಮಲ್ಲೇಶ್ವರದ ಮಹಿಳಾ ಸಮಾಜದಲ್ಲಿ ಶ್ರೀಮಾನ್ ಜಿ. ಆರ್. ರಂಗಸ್ವಾಮಿ, ಎಂ.ಎ. ಅವರಿಂದ 'ವಾರ್ಧಾ ಶಿಕ್ಷಣ ಪದ್ಧತಿ ಮತ್ತು ಮೈಸೂರಿನಲ್ಲಿ ಅದರ ಪ್ರಯೋಗ' ಎಂಬ ವಿಚಾರದಲ್ಲಿ ಉತ್ತಮವಾದ ಉಪನ್ಯಾಸ ನಡೆಯಿತು. ಶ್ರೀಮಾನ್ ಪಿ. ಯಂ. ಸೋಮಸುಂದರಂಪಿಳ್ಳೆ, ಎಂ.ಎ., ಎಲ್.ಟಿ. ಅವರು ಅಧ್ಯಕ್ಷತೆ ವಹಿಸಿದ್ದರು. "ಈಗಿನ ಶಿಕ್ಷಣಕ್ರಮದಲ್ಲಿ ಪುಸ್ತಕಗಳನ್ನೇ ಆಧಾರವಾಗಿ ಇಟ್ಟುಕೊಂಡು ಬೋಧನೆಯನ್ನು ನಡಸಲಾಗುತ್ತದೆ. ಮುಖ್ಯವಾಗಿ ಮಕ್ಕಳ ಪಾಠಶಾಲೆಯಲ್ಲಿ ಈ ಕ್ರಮದಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ವಾರ್ಧಾ ಶಿಕ್ಷಣ ಪದ್ಧತಿಯಂತೆ ಮಕ್ಕಳಿಗೆ ಒಂದು ವೃತ್ತಿಯನ್ನು ಕೇಂದ್ರವಾಗಿ ಇಟ್ಟುಕೊಂಡು ಅಭ್ಯಾಸಮಾಡಿಸುತ್ತಾ ಅದರ ಅಂಗವಾಗಿ ಹಾಡುಗಾರಿಕೆ, ಭಾಷೆ, ಗಣಿತ ಮತ್ತು ಭೂಗೋಳ, ಚರಿತ್ರೆ ಪಾಠಗಳನ್ನು ಮುಖತಃ ಬೋಧಿಸುತ್ತಾ ಬಂದರೆ, ಮಕ್ಕಳಿಗೆ ಉಲ್ಲಾಸವುಂಟಾಗಿ ಅವರ ದೈಹಿಕ ಮಾನಸಿಕ ಶಕ್ತಿಗಳು ಕ್ರಮವಾಗಿ ವೃದ್ಧಿಯಾಗಿ ಮುಂದೆ ಅವರು ಸತ್ಪ್ರಜೆಗಳಾಗುತ್ತಾರೆ" ಎಂಬುದಾಗಿ ಉಪನ್ಯಾಸಕರು ತಮ್ಮ ಭಾಷಣದಲ್ಲಿ ಹೇಳಿ, ಈ ಕ್ರಮದಲ್ಲಿ ಪಾಠ ನಡಸುತ್ತಿರುವುದರಿಂದ ಉಂಟಾಗುತ್ತಿರುವ ಪ್ರಯೋಜನವನ್ನು ತಿಳಿಸಿದರು.

ಬಳಿಕ ಮಾನ್ಯ ಅಧ್ಯಕ್ಷರು "ಹಿಂದೆ ಮೂರು 'ಆರ್'ಗಳಿಗೆ (Three R's) ಗಮನ ಕೊಡುತ್ತಿದ್ದರು. ಇದಕ್ಕೆ ಬದಲಾಗಿ ಈಗ ನಾಲ್ಕು 'ಎಚ್'ಗಳಿಗೆ (Four H's) ಗಮನ ಕೊಡುವುದು ಉತ್ತಮವೆಂದು ಹೇಳಿ, ಅದರ ಅರ್ಥವನ್ನು ಚೆನ್ನಾಗಿ ವಿವರಿಸಿದರು. ಮೂರು ಆರ್ ಎಂದರೆ ಓದುವುದು, ಬರೆಯುವುದು ಮತ್ತು ಗಣಿತ. ಹಾಗೆಯೇ ನಾಲ್ಕು ಎಚ್ ಎಂದರೆ (ಹೆಡ್, ಹಾರ್ಟ್, ಹ್ಯಾಂಡ್, ಹೆಲ್ತ್) ಮೆದಳು, ಹೃದಯ, ಹಸ್ತ ಮತ್ತು ಆರೋಗ್ಯ ಇವುಗಳ ಅಭಿವೃದ್ಧಿಗೆ ಬಾಲ್ಯದಿಂದಲೂ ಗಮನಕೊಡುತ್ತಾ ಬಂದರೆ ಮಕ್ಕಳು ಮುಂದೆ ಉತ್ತಮ ನಾಗರಿಕರಾಗುತ್ತಾರೆಂದು ಹೇಳಿದರು.

ಈ ಸಂಘದ ಆಶ್ರಯದಲ್ಲಿ ಇದೇ ತಿಂಗಳ ಮಧ್ಯಭಾಗದಲ್ಲಿ ೨-೩ ದಿನ ವಸಂತ ಸಾಹಿತ್ಯೋತ್ಸವವನ್ನು ಜರುಗಿಸಲು ಆಲೋಚನೆಯಿದೆಯೆಂದು ತಿಳಿಯಬಂದಿದೆ.

**ಕೋಲಾರ: ಅಕ್ಷರ ಪ್ರಚಾರ**

ಕೋಲಾರದ ಪೌರಸಭೆಯವರು ಶ್ರೀ|| ದೇವುಡು ನರಸಿಂಹಶಾಸ್ತ್ರಿಗಳವರ ವಯಸ್ಕರ ಅಕ್ಷರ ಪ್ರಚಾರ ಪದ್ಧತಿಯನ್ನು ನಗರದಲ್ಲಿ ಜಾರಿಗೆ ತಂದಿರುವರು. ಶಿಕ್ಷಣ ಆರು ವಾರ ನಡೆಯುವುದು. ಶ್ರೀ|| ದೇವುಡುರವರು ಶಿಕ್ಷಕರು. ಅನೇಕ ಗಂಡಸರು ಹೆಂಗಸರು ಓದುಬರಹ ಕಲಿಯಲು ಬಂದಿದ್ದಾರೆ.

**ಮಂಗಳೂರು: ವಸಂತ ಸಾಹಿತ್ಯೋತ್ಸವ**

ಮಂಗಳೂರು ಬೆಸೆಂಟ್ ಹೈಸ್ಕೂಲಿನಲ್ಲಿ ಕಳೆದ ತಿಂಗಳು ಮಧ್ಯಭಾಗದಲ್ಲಿ ಮೇಲ್ಕಂಡ ಉತ್ಸವ, ಮೈಸೂರು ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರಾದ ಶ್ರೀ|| ಕೆ. ಶಂಕರನಾರಾಯಣರಾಯರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಉತ್ಸವದ ಜೊತೆಗೆ ಮಕ್ಕಳ ಕೈಗಾರಿಕೆ ಪ್ರದರ್ಶನವನ್ನೂ ಏರ್ಪಡಿಸಲಾಗಿತ್ತು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ದಿವಂಗತ ಡಾ|| ಬೆಸೆಂಟರು ಭಾರತೀಯ ಶಿಕ್ಷಣಕ್ರಮದಲ್ಲಿ ರಾಷ್ಟ್ರೀಯತಾ ಪ್ರವೃತ್ತಿಯನ್ನು ತಂದು ವಾರಣಾಸಿ ಮತ್ತು ಮದನಪಲ್ಲಿ ಕಾಲೇಜುಗಳನ್ನು ಸ್ಥಾಪಿಸಿ ನಾಡಸೇವೆ ಮಾಡಿದುದನ್ನು ಪ್ರಶಂಶಿಸಿದರು.

**ಮೂಡಬಿದ್ರೆ: ಧರ್ಮಾರ್ಥ ವಾಚನಾಲಯದ ವರ್ಧಂತಿ**

ಮೇಲ್ಕಂಡ ಉತ್ಸವ 'ಶ್ರೀ'ಯವರ ಅಧ್ಯಕ್ಷತೆಯಲ್ಲಿ ನೆನ್ನೆಯ ದಿನ ನಡೆಯಿತು.

**ಬಾಗಲಕೋಟೆ: ನಾಟಕ ಸ್ಪರ್ಧೆ**

ಬಾಗಲಕೋಟೆಯ 'ವಾಸುದೇವ ಅಮೆಚೂರ್ ನಾಟಕ ಸಭೆ'ಯವರು ವಾರ್ಷಿಕ ನಾಟಕ ಲೇಖನ ಸ್ಪರ್ಧೆಯೊಂದನ್ನು ಏರ್ಪಡಿಸಿರುವರು. ಇಡಿಯ ಕನ್ನಡ ನಾಡಿನ ಪ್ರತಿಭಾಶಾಲಿಗಳಾದ ಕನ್ನಡ ನಾಟಕ ಲೇಖಕರಿಗೆ ಉತ್ತೇಜನ ಕೊಟ್ಟು ಹೊಸ ತೆರನ ಶ್ರೇಷ್ಠ ನಾಟಕಗಳು ಹೊರಬೀಳುವಂತೆ ಮಾಡುವುದೇ ಈ ಸ್ಪರ್ಧೆಯ ಉದ್ದೇಶ. ಲೇಖಕರು ಈ ಸಲದ ಸ್ಪರ್ಧೆಗೆ ಸಾಮಾಜಿಕ ನಾಟಕವನ್ನೇ ಕಳಿಸಬೇಕೆಂದು ಸಂಘದವರು ನಿಶ್ಚಯಿಸಿದ್ದಾರೆ. ಪ್ರವೇಶ ಧನ ೧ ರೂ. ನಾಟಕದ ಪ್ರಮಾಣ ೧೦೦ರಿಂದ ೧೨೦ ಪುಟಗಳವರೆಗೂ ಇದ್ದು ಅರ್ಧ ಫುಲ್ಸ್‌ಕೇಪ್ ಹಾಳೆಯ ಒಂದೇ ಕಡೆ ಸ್ಫುಟವಾಗಿ ಬರೆದಿರಬೇಕು. ನಾಟಕದೊಡನೆ ಬರೆದವರ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ಬರೆದು ಕಳಿಸಬೇಕು. ನಾಟಕ ಕಳಿಸಲು ಕೊನೆಯ ತಾರೀಖು ೩೦-೬-೪೦. ಸ್ಪರ್ಧೆಯಲ್ಲಿ ಹೆಚ್ಚು ಗುಣ ಪಡೆದು ಗೆದ್ದವರಿಗೆ ವಾಸುದೇವ ಪದಕ (ಚಿನ್ನದ್ದು) ಕೊಡಲಾಗುವುದು. ಸ್ಪರ್ಧೆಯ ಫಲಿತಾಂಶವನ್ನು ಸಂಘದ ವಾರ್ಷಿಕೋತ್ಸವ ನಡೆವ ಗಣೇಶ ಚತುರ್ಥಿಯ ದಿನ ಪ್ರಕಟಿಸಲಾಗುವುದು. ಮಿಕ್ಕ ವಿವರಗಳನ್ನು ವಾಚಕರು ಶ್ರೀ|| ಎಚ್. ಆರ್. ಬೆಣ್ಣೂರ, ಪ್ರಧಾನ ಗೌರವ ಕಾರ್ಯದರ್ಶಿ, ವಾಸುದೇವ ಅಮೆಚೂರ ನಾಟಕ ಸಭೆ, ಬಾಗಲಕೋಟೆ, ಬಿಜಾಪುರ ಜಿಲ್ಲೆ—ಈ ವಿಳಾಸದಿಂದ ತಿಳಿದುಕೊಳ್ಳಬಹುದು.

**ಗೊರೂರು: ಅಕ್ಷರ ಪ್ರಚಾರ ಶಿಬಿರ**

ಮೇಲ್ಕಂಡ ಶಿಬಿರದ ಪ್ರಾರಂಭೋತ್ಸವ ಕಳೆದ ತಿಂಗಳು ೧೬ನೆಯ ತಾರೀಖು ಹಾಸನ ಜಿಲ್ಲಾಧಿಕಾರಿಗಳಾದ ಶ್ರೀ|| ಟಿ. ರಾಮಯ್ಯನವರು ನೆರವೇರಿಸಿದರು. ಉತ್ಸವ ೧೬, ೧೭, ೧೮ನೆಯ ತಾರೀಖುಗಳಲ್ಲಿ ನಡೆದು ವಿವಿಧ ವಿದ್ವಾಂಸರುಗಳಿಂದ ಭಾಷಣ, ನಾಗಸ್ವರ, ಭಾರತ ವಾಚನ, ಹರಿಜನರಿಂದ ಕೋಲಾಟ ಮುಂತಾದ ಕಾರ್ಯಕ್ರಮಗಳು ನಡೆದು. ಶ್ರೀಗಳಾದ ವೀರಭದ್ರಶೆಟ್ಟರು (ಚನ್ನರಾಯಪಟ್ಟಣದ ಕರ್ನಾಟಕ ಸಂಘ), ಬಿ. ಎಂ. ಶಿವರಾಮಯ್ಯ, ತಿ. ನಂ. ಶ್ರೀಕಂಠಯ್ಯ ಮುಂತಾದ ಮಹನೀಯರು ಶಿಬಿರಕ್ಕೆ ದಯಮಾಡಿಸಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಉತ್ಸವದ ಅಂಗವಾಗಿ ಸರಸ್ವತಿ ಭಂಡಾರದ ಪ್ರಾರಂಭೋತ್ಸವ ನಡೆಯಿತು. ಉತ್ಸವಕ್ಕೆ ಯಶಸ್ಸು ಕೋರಿ ಮೈಸೂರು ಸಂಸ್ಥಾನದ ದಿವಾನರಾದ ಅಮಿನ್-ಉಲ್-ಮುಲ್ಕ್ ಸರ್ ಮಿರ್ಜಾ ಇಸ್ಮಾಯಿಲ್‌ರವರು, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ|| ಕೆ. ಟಿ. ಭಾಷ್ಯಂರವರು, ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು ಸಂದೇಶಗಳನ್ನು ಕಳಿಸಿದ್ದರು.

೨೨-೪-೪೦ನೆಯ ದಿನ ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಗೊರೂರಿನಲ್ಲಿ ಭಾಷಣಮಾಡಿದರು.

**ಸೋಮವಾರಪೇಟೆ: ಮಹಾದೇವಿಯಕ್ಕನ ಜಯಂತಿ**

ಉತ್ತರ ಕೊಡಗು ಸೋಮವಾರಪೇಟೆಯಲ್ಲಿ 'ಮಹಾದೇವಿಯಕ್ಕ'ನ ಜಯಂತಿಗಾಗಿ ೨೨-೪-೪೦ನೆಯ ದಿನ ಸ್ಥಳೀಯ ತರುಣ ಸಂಘದವರು ಉಪನ್ಯಾಸವನ್ನು ಏರ್ಪಡಿಸಿದ್ದರು. ಸಂಘದ ಅಧ್ಯಕ್ಷರಾದ ಶ್ರೀ ಗುರುಸಿದ್ಧದೇವಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಆಹ್ವಾನಿತರಾಗಿ ದಯಮಾಡಿಸಿದ್ದ ಶ್ರೀ ಮಹದೇವಸ್ವಾಮಿಗಳ ಶಿಷ್ಯರಾದ ಬೆಂಗಳೂರು ಶ್ರೀ ವೀರದೇವರು ಪ್ರಾರ್ಥನೆ ಪ್ರಕಾರ 'ಕನ್ನಡ ಮಹಿಳೆ ಮಹಾದೇವಿಯಕ್ಕ' ಎಂಬ ವಿಷಯವನ್ನು ಕುರಿತು ಮಾತನಾಡುತ್ತಾ "ಕನ್ನಡ ಸಾಹಿತ್ಯದಲ್ಲಿ ಮಹಾದೇವಿಯಕ್ಕನವರು ಮಾಡಿರುವ ಸೇವೆ ಅಗಾಧವಾದುದು. ಆಕೆಯ ಆ ಹಿರಿಯ ಸಾಹಿತ್ಯಕ್ಕೆ ತಲೆದೂಗಿದ ಕಲ್ಯಾಣದ ಜ್ಞಾನಿಗಳು ಆಕೆಯ ಕನ್ನಡ ವಚನಗಳನ್ನು ಹೆಮ್ಮೆಯಿಂದ ಹೊಗಳಿದ್ದಾರೆ. ಈ ತರದ ಜೀವನ ವೈಶಿಷ್ಟ್ಯವು ಇಡೀ ಪ್ರಪಂಚದಲ್ಲೇ ನಡೆದಿಲ್ಲ. ಅವರು ಮಹಿಳೆಯರಾಗಿದ್ದು ಸಾಧಿಸಿದ ಜೀವನದ ಅದ್ಭುತ ಸಾಧನೆಗಳಿಗಾಗಿ, ಕನ್ನಡ ಮಹಿಳೆಯರು ವಿಶೇಷವಾಗಿ ಹೆಮ್ಮೆಪಡಬೇಕು. ಅವರಿಗೆ ಕನ್ನಡ ಸಾಹಿತ್ಯದಲ್ಲಿ ಉಚ್ಚಸ್ಥಾನವಿದೆ. ಇಂಥ ಮಹಾತ್ಮರ ಜಯಂತಿಯನ್ನು ಕನ್ನಡಿಗರು ಆಚರಿಸುವುದು ಯುಕ್ತವಾದದ್ದೆ. ಇಂಥ ದಿನಗಳಲ್ಲಿ ನಮ್ಮ ಸಾಹಿತ್ಯದ ಸವಿಯನ್ನು ಜನಸಾಮಾನ್ಯಕ್ಕೆ ಹಂಚಬೇಕು. ಕನ್ನಡದ ಹಿರಿಮೆಯನ್ನು ಸಾರಬೇಕು. ಅದಕ್ಕಾಗಿ ಕನ್ನಡಿಗರು ಕಾರ್ಯಮಾಡಬೇಕು. ಕೊಡಗು ಕರ್ನಾಟಕದಲ್ಲಿ ಕನ್ನಡ ಪ್ರಸಾರದ ಸಂಘಗಳೇ ಇದ್ದಂತೆ ತೋರುವುದಿಲ್ಲ. ತಿಳಿದ ಕನ್ನಡಿಗರನ್ನು ಕರೆಯಿಸಿ ಇಂಥ ಜಯಂತಿಗಳನ್ನು ಮಾಡಿದರೆ, ಕನ್ನಡ ಪ್ರಚಾರ ತಾನಾಗಿಯೇ ಆಗುವುದು" ಎಂದು ತಿಳಿಸಿದರು. ಅನಂತರ ಅಧ್ಯಕ್ಷ ಭಾಷಣವಾಯಿತು.

೫೧-೬೦೦-೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೨೯

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮೇ ೧೦, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.



ಮೈಸೂರಿನ ಯುವರಾಜರಾದ

**ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರು**

ಪರಿಷತ್ತಿನ ಕಾರ್ಯಸಮಿತಿಯ ಪ್ರಾರ್ಥನೆಯನ್ನು ಮನ್ನಿಸಿ ಪರಿಷತ್ತಿನ ಸ್ಥಿರ ಪೋಷಕರೂ ಅಧ್ಯಕ್ಷರೂ ಆಗಿರಲು ಕೃಪೆಮಾಡಿ ಒಪ್ಪಿರುತ್ತಾರೆ.

## ಕಂಪೆನಿಯ ನಾಟಕಗಳಲ್ಲಿ ಹಾಸ್ಯರಸ

(ಕನ್ನಡ ಸಾಹಿತಿಗಳ ಸಂಘದಿಂದ ಬಂದದ್ದು)

**ಸದಾರಮೆ** ನಾಟಕದಲ್ಲಿ ಅವತರಿಸಿರುವ ಆದಿಮೂರ್ತಿಯನ್ನು ಮರೆಯುವುದು ಕಷ್ಟ. ಏನು ಕಳೆ ಏನು ಬಣ್ಣ, ಏನು ವರ್ಚಸ್ಸು, ಅಲಂಕಾರ! ವ್ಯಾಪಾರ ವ್ಯವಹಾರಗಳಲ್ಲಿ ತಂದೆಯನ್ನೇ ಮರುಳು ಮಾಡುವ ಬುದ್ಧಿ ಸಾಮರ್ಥ್ಯ—ಶಿಕ್ಷಿತವಾದದ್ದಲ್ಲ, ನೈಜವಾದದ್ದು, ರಕ್ತಗತವಾದದ್ದು, ಮೀನಿಗೆ ಈಜುವ ಸಾಮರ್ಥ್ಯವಿದ್ದಂತೆ. ಸದಾರಮೆಯಂತಹ ಅಕ್ಕನನ್ನು ಪಡೆದ ಭಾಗ್ಯದಿಂದ ಸಿಂಹಾಸನ ಕೈಸೇರುತ್ತದೆ. ಸಿಂಹಾಸನವನ್ನೇರುವ ದರ್ಪ, ಗಾಂಭೀರ್ಯ ಕಾಣಬೇಕಾದರೆ ಇವನ ಪಟ್ಟಾಭಿಷೇಕ ದೃಶ್ಯದಲ್ಲಿ! ತನ್ನ ಶಕ್ತಿಯನ್ನಳೆಯಲು ತಂದೆಯ ಕತ್ತನ್ನು ಕೊಯ್ಯುವಂತೆ ಆಜ್ಞಾಪಿಸಿದ ಇವನ ಶೌರ್ಯ, ಅದನ್ನು ಛೇದಿಸಲು ಮೇಲೆ ಬಿದ್ದ ಕಟುಕ ಭೃತ್ಯರಿಂದ ತಂದೆಯನ್ನು ಪಾರು ಮಾಡಿದ ಇವನ ಕರುಣ, ಮಂತ್ರಿಗಳ ಸಂಬಳವನ್ನು ಥಟಕ್ಕನೆ ಐದು ಸಾವಿರದಿಂದ ಹತ್ತುರೂಪಾಯಿಗೆ ಇಳಿಸಿದ ಇವನ ಹಿಡಿತ ಇವೇ ಮೊದಲಾದ ಸದ್ಗುಣಗಳಿಂದ ಈ ದಿವ್ಯಮೂರ್ತಿ ನಮ್ಮ ಕಣ್ಣಿಗೆ ಬಿದ್ದಂದಿನಿಂದ ನಮಗೆ ಚಿರಪರಿಚಿತನಾಗುತ್ತಾನೆ. ಯಾವುದಾದರೂ ತೊಂದರೆಗಳು ದುರ್ವ್ಯಸನಗಳು ಮೂಡಿ ತಲೆಯನ್ನು ಬಗ್ಗಿಸಿರುವ ವೇಳೆ ಒಂದೊಂದು ಬಾರಿ ಈ ಮೂರ್ತಿ ಮೆತ್ತಗೆ ಜಾರಿ ಕಣ್ಣುಮುಂದೆ ನಿಲ್ಲುತ್ತದೆ. ಕೂಡಲೆ ನಗುವು ನುಗ್ಗಿಬಂದು, ಕಸವನ್ನೆಲ್ಲ ಬಳಿದು ಮನಸ್ಸನ್ನು ಶುದ್ಧಿಮಾಡುತ್ತದೆ. ಕೋಮಟಿಯ ಪಾತ್ರ ಕಾಣುವ ಇನ್ನೊಂದು ನಾಟಕ **ಕಬೀರದಾಸ.** ಈ ಕೋಮಟಿಯೂ ಆದಿಮೂರ್ತಿಯ ಕುಲಕ್ಕೆ ಸೇರಿದವನೆ. ಅದೇ ಬಣ್ಣ, ಸೌಂದರ್ಯ, ಉಡಿಗೆ ತೊಡಿಗೆಗಳು, ಕಳೆ, ಮರ್ಯಾದೆ, ಬುದ್ಧಿ ಮತ್ತು ನಮ್ಮ ಮನಸ್ಸನ್ನು ಸೂರೆಗೊಳ್ಳುವ ಸಾಮರ್ಥ್ಯ. ವೈಶ್ಯಕುಲದೀಪಗಳು ಬೇರಾವ ನಾಟಕವನ್ನು ಬೆಳಗಿದಾರೊ ನಾನು ಕಾಣೆ. ಆದರೆ ಎಲ್ಲಿದ್ದರೂ ಅವರ ಚಿತ್ರ, ಸ್ವರೂಪ ಇದೇ ಎಂದು ಧಾರಾಳವಾಗಿ ಹೇಳಬಲ್ಲೆ. ನಾಟಕಕಾರನಿಗೆ ಈ ಜಾತಿಯೆಂದರೆ ನಗು. ಅವರಲ್ಲಿ ಕಾಣುವ ಕಾರ್ಪಣ್ಯವನ್ನು ಮನದಣಿಯುವಷ್ಟು ಅಣಕಿಸಿ ಅವರನ್ನು ಹೀಯಾಳಿಸಿ ಪ್ರೇಕ್ಷಕರಿಂದ ಅವರ ಮುಖಕ್ಕೆ ಮಂಗಳಾರತಿ ಎತ್ತಿಸುತ್ತಾನೆ. ಕೋಮಟಿಗರಿಂದ ಯಾರಿಗೂ ಆಗದ ಮೋಸ ಇವನಿಗೆ ಏನು ಆಗಿದೆಯೊ? ಪ್ರಾಮಾಣಿಕನಾದ ವ್ಯಾಪಾರಿ ಇವನ ಕಣ್ಣಿಗೆ ಬಿದ್ದೇ ಇಲ್ಲವೊ? ಅಥವಾ ನಮ್ಮ ವಿಷಯದಲ್ಲಿ ಸತ್ಯಶೀಲನಾಗಿದ್ದರೂ ನಾಟಕಕಾರರನ್ನು ಕಂಡರೆ, ಪುಸ್ತಕದ ಬದನೆಕಾಯಿ, ಸುಲಭವಾಗಿ ಟೋಪಿ ಹಾಕಬಹುದು ಎಂದು ಕೋಮಟಿಯ ಕುಟಿಲ ಬುದ್ಧಿ ಚುರುಕಾಗುತ್ತದೆಯೊ? ಸಂದರ್ಭ ಗೊತ್ತಾಗುವುದಿಲ್ಲ. ಅಂತೂ ಇವರಿಬ್ಬರಿಗೂ ಬೆಕ್ಕಿಗೂ - ಇಲಿಗೂ ಇರುವ ಸಹಜವಾದ ಪ್ರೇಮ. ಈ ನಾಟಕಗಳನ್ನೋದಿ ಅಥವಾ ನೋಡಿ ಈ ಜನರ ಶೀಲಸ್ವಭಾವಗಳನ್ನು ಗುಣಿಸುವವನಿಗೆ ಒಳ್ಳೆಯದಾವುದೂ ಕಾಣುವುದಿಲ್ಲ. ಇಂಥ ನಾಟಕಗಳನ್ನು ನೋಡಿದರೆ ಈ ಜನ ಹೇಗೆ ಸೈರಿಸಿಯಾರು? ಸದಾರಮೆಯನ್ನು ಸೇಲಂನಲ್ಲಿ ಆಡಿದಾಗ ಅಲ್ಲಿಯ ಕೋಮಟಿಗರು ಕಂಪೆನಿ ತಮ್ಮ ಮೇಲೆ ಅಪಪ್ರಚಾರ ನಡೆಸುತ್ತಿದೆ ಎಂದು ಕೇಸ್ ಹೂಡಿ ನಾಟಕವನ್ನು ನಿಲ್ಲಿಸಿದರಂತೆ. ನನ್ನ ಮಿತ್ರ ಕೋಮಟಿಯೊಬ್ಬ ಬಿಟ್ಟಿ ಟಿಕೆಟ್ಟು ದೊರೆತರೂ ಈ ನಾಟಕಕ್ಕೆ ಕಾಲಿಡಲಿಲ್ಲ.

ಮನುಷ್ಯ ಜಾತಿಯಲ್ಲಿ ನಾಟಕಕಾರನಿಗೆ ಇರುವ ಇನ್ನೊಬ್ಬ ಶತ್ರು ಬಡ ವಿಧವೆ. ಇವಳ ದರ್ಶನ ಅಮಂಗಳವೆಂದು ಸಾರುವ ಕಲಾಭಿಜ್ಞನೂ ಇವಳಿದ್ದರೆ ತನ್ನ ನಾಟಕಕ್ಕೆ ಒಂದು ಅಪೂರ್ವಕಳೆ ಎಂದು ನಂಬಿರುವಂತೆ ಕಾಣುತ್ತದೆ. ಅಂತೂ ನಿತ್ಯಮುತ್ತೈದೆಯ ಜೊತೆಗೆ ಇವಳೂ ಇದ್ದೇ ಇರುತ್ತಾಳೆ. ಈ ಅಮಂಗಲೆಯರೆಲ್ಲರೂ ವಿಭೂತಿ ಹಚ್ಚುವವರು. ನಾಟಕಕಾರನ ಮನಸ್ಸಿನಲ್ಲಿ ವೈಧವ್ಯಕ್ಕೂ ವಿಭೂತಿಗೂ ನಿಕಟ ಬಾಂಧವ್ಯ ಬೆಳೆದುಹೋಗಿದೆ. ಬೇರೆ ಜಾತಿಯ ವಿತಂತುಗಳು ರಂಗದಲ್ಲಿ ಶೋಭಿಸುವುದಿಲ್ಲವೆಂಬ ಅವನ ತೀರ್ಮಾನಕ್ಕೆ ಕಾರಣ ತಿಳಿಯುವುದು ಕಷ್ಟ. ಇನ್ನೊಂದು ವೈಶಿಷ್ಟ್ಯವೇನೆಂದರೆ—ಇವರೆಲ್ಲರಿಗೂ ಹಲ್ಲುಬ್ಬು ಅಥವಾ ಬೊಚ್ಚುಬಾಯಿ. ವಯಸ್ಸಿನ ಭಾರದಿಂದ ನಡು ಬಗ್ಗಿರುತ್ತದೆ. ಇತ್ತೀಚೆಗೆ ಕಣ್ಣಿಗೆ ಕನ್ನಡಕ, ಕತ್ತಿಗೆ ಕೈಗೆ ಆಭರಣಗಳನ್ನು ತೊಡಿಸಿ ಇವರನ್ನು ಅಲಂಕರಿಸುವುದು ವಾಡಿಕೆಯಾಗಿದೆ. ಎಲ್ಲರಿಗೂ ಒಬ್ಬೊಬ್ಬ ಸೊಸೆಯರಿರುತ್ತಾರೆ. ಅವರನ್ನು ಅರೆದು ಹಿಂಡುವುದೇ ಇವರ ಜೀವನದ ಮುಖ್ಯ ಕೆಲಸ. ವಿಧವೆಯರು ಎಂಥ ಕಠಿಣ ಹೃದಯರು, ಬೂಟಾಟಿಕೆಯವರು, ನೀಚರು; ಅವರು ಇರುವ ಪರ್ಯಂತ ಸಂಸಾರ ನೆಟ್ಟಗಾಗುವ ಬಗೆ ಹೇಗೆ ಎಂದು ತೋರಿಸುವುದೇ ನಾಟಕಕಾರನ ಮುಖ್ಯ ಗುರಿಗಳಲ್ಲೊಂದು. **ಸಂಸಾರ ನೌಕ**ವನ್ನು ನೋಡಿ ಹೆಚ್ಚು ವಿವರಗಳನ್ನು ಪರಿಚಯ ಮಾಡಿಕೊಳ್ಳಬಹುದು. ಆಷಾಢಭೂತಿ, **ಟೊಳ್ಳುಗಟ್ಟಿ**ಗಳಲ್ಲಿ ಕಾಣುವ ಚಿತ್ರಗಳು ಈ ಸಮಕ್ಕೆ ಬರುವುದಿಲ್ಲ. ಆದರೂ ಬರಹಗಾರರ ಲೇಖನಿ ಹರಿತವಾಗಿಯೇ ಇದೆ. ವೈಧವ್ಯ ವಕ್ಕರಿಸಿದೊಡನೆ ಇವರ ಪ್ರೇಮರಾಶಿಯು ತಮ್ಮ ಸುತ್ತಮುತ್ತಲ ಜನರ, ಮಕ್ಕಳು ಮರಿಗಳ ಮೇಲೆ ಹರಡಿ ಅವರೆಲ್ಲರನ್ನೂ ಸಾಕಿ ಸಲಹುವ ವ್ರತವೇ ತಮ್ಮ ಜೀವನದ ಉಸಿರು ಎನ್ನುವ "ಗೌರಜ್ಜಿ"ಯಂಥವರಿಲ್ಲವೆ? ಅವರೇಕೆ ನಮ್ಮ ನಾಟಕಕಾರರ ಕಣ್ಣಿಗೆ ಬೀಳುವುದಿಲ್ಲ? ಅಂಥವರಲ್ಲಿ ನಾಟಕೀಯವಾದುದು ಯಾವುದೂ ಇಲ್ಲವೆಂದು ಇವರ ಅಭಿಪ್ರಾಯವೊ? ಅಣಕಿಸಿ ಹಾಸ್ಯಮಾಡುವುದೇ ಉದ್ದಿಶ್ಯವಾದರೆ ಇಂಥ ಪಾತ್ರದಲ್ಲಿ ಇದಕ್ಕೆ ಹೆಚ್ಚು ಅವಕಾಶವಿಲ್ಲ ಎನ್ನಬಹುದು. ಆದರೆ ಸಾಮಾನ್ಯ ನಾಟಕಕಾರನ ಮನಸ್ಸಿನಲ್ಲಿರುವ ತುಚ್ಛ ಹಾಸ್ಯಕ್ಕೆ ಅವಕಾಶವಿಲ್ಲದಿದ್ದರೂ ಕುಶಲತೆಯಿದ್ದವನು ಇಂಥ ಪಾತ್ರಗಳಲ್ಲಿಯೂ 'ಗೌರಜ್ಜಿ'ಯಲ್ಲಿ ಕಾಣುವ ಸ್ವಚ್ಛಹಾಸ್ಯವನ್ನು ಚಿತ್ರಿಸಬಹುದು. ದಿಕ್ಕಿಲ್ಲದವರನ್ನು ನೋಡಿ ನಗುವುದು ಯುಕ್ತವಲ್ಲ. ಅವರಲ್ಲಿ ಕಾಣುವ ಸದ್ಗುಣಗಳನ್ನು ಎತ್ತಿ ತೋರಿಸುವುದೇ ಲೇಸು. ಪ್ರಭಾತ್‌ರವರ **ಆದ್ಮಿ**ಯನ್ನು ನೋಡಿ! ನಾಯಕನ ತಾಯಿ ವಿಧವೆ. ಆದರೆ ಅವಳಿಲ್ಲದಿದ್ದರೆ ಅವನಿಗೆ ಬೆಳಕೆಲ್ಲಿರುತ್ತಿತ್ತು? ಇವಳನ್ನು ನೋಡಿದರೆ ನಗು ಬರುವುದಿಲ್ಲವೆಂದು ನಾವು ಬೇಜಾರುಪಟ್ಟುಕೊಳ್ಳುತ್ತೇವೆಯೆ? ತಾಯಿಯ ಪ್ರೇಮ ಮತ್ತು ಸನಾತನ ಸಂಸ್ಕೃತಿ ಎರಡೂ ಮೂರ್ತೀಭವಿಸಿ ನಮ್ಮ ಹೃದಯದಲ್ಲಿ ಇವಳನ್ನು ಶಾಶ್ವತಗೊಳಿಸುವುದಿಲ್ಲವೆ?

ವಿಡಂಬನದ ಕುಟುಕು ಇನ್ನೂ ತೀಕ್ಷ್ಣವಾಗುವುದು ದೇವರ ಪೂಜೆಯ ಆಚಾರ್ರು, ಪಂಚಾಗದ ಶಾಸ್ತ್ರಿ ಅಥವಾ ಪುರೋಹಿತನ ಪಾತ್ರದಲ್ಲಿ. ಮೊನ್ನೆ ನಮ್ಮ ಶಾಸ್ತ್ರಿಗಳ ಹತ್ತಿರ ಮಾತಾಡುತ್ತಿದ್ದೆ. ವಿಷಯ ಒಂದರಿಂದ ಒಂದಕ್ಕೆ ಬೆಳೆದು ನಾಟಕದ ಪ್ರಸ್ತಾಪ ಹೇಗೋ ತಲೆಹಾಕಿತು. ನಾಟಕವೆಂದರೆ ಅವರಿಗೆ ವರದಾಚಾರಿಯ ನೆನಪು. ಅವನ ಮೇಲೆ ಮಿತಿಮೀರಿದ ಕೋಪ. ಕಣ್ಣುಗಳು ಕೆಂಪೇರಿ ಬಾಯಲ್ಲಿ ಸಹಸ್ರನಾಮ ಲೀಲಾಜಾಲವಾಗಿ ಹೊರಡುತ್ತದೆ. ನಾನೂ ವರದಾಚಾರಿಯ ನಾಟಕಕ್ಕೆ ಮಣ್ಣು ಹಾಕಿರುವವನು. ಶಾಪ ಕಿವಿಗೆ ಬಿದ್ದು ಸಹಿಸದೆ ಅ ದಿನ ಈ ರೀತಿ ಒದರಿಬಿಟ್ಟೆ. "ವರದಾಚಾರಿಯ ಮೇಲೆ ಏಕೆ ಉರಿದು ಬೀಳುತ್ತೀರಿ? ಅವರ ಅಭಿನಯ ಕೌಶಲ್ಯದಿಂದ ಮುಗ್ಧರಾಗದವರಿಲ್ಲ. ನವರಸಗಳೂ ಅವರಿಗೆ ಕರತಲಾಮಲಕ. ವಕ್ರವಕ್ರವಾದ ಕುಣಿತ, ಭಾಷೆ, ರುಚಿಗಳಿಂದ ಮಲಿನವಾಗಿದ್ದ ನಮ್ಮ ನಾಟಕರಂಗವನ್ನು ಶುದ್ಧಿಮಾಡಿ ಅದಕ್ಕೆ ರೂಪ, ಕಳೆ, ಜೀವವನ್ನು ಕೊಟ್ಟವರೇ ಅವರು. ನಮ್ಮ ಈಚಿನ ನಾಟಕದ ಆದಿಗುರುಗಳೆಂದು ಎಲ್ಲೆಲ್ಲೂ ಅವರಿಗೆ ಕೀರ್ತಿ ಗೌರವ ಇದೆ. ಜೊತೆಗೆ ಕರ್ಣನ ಉದಾರತ್ವ. ತಮ್ಮನ್ನು ಸೇರಿದ ಪ್ರತಿಯೊಬ್ಬರಿಗೂ ಕಲೆಯನ್ನು ಕಲಿಸಿ, ನೆರಳು ನೀರಿಗೆ ಅನುಕೂಲ ಮಾಡಿಕೊಟ್ಟರು. ಕಣ್ಣಿಗೆ ಬಿದ್ದ ಬಡವರಿಗೆಲ್ಲ ಮನದಣಿಯ ದಾನಮಾಡಿದರು. ಯಾರಿಗೂ ಇಲ್ಲದ ಅನ್ಯಾಯ ನಿಮಗೆ ಏನು ಮಾಡಿದರು? ನಿಮ್ಮ ದುಡ್ಡೇನಾದರೂ ಕಸಿದುಕೊಂಡರೆ? ಅಥವಾ ಬಣ್ಣಹಚ್ಚಿಕೊಂಡು ಜಾತಿಭ್ರಷ್ಟರಾದರು ಎಂದೊ?"—ಸ್ವಲ್ಪ ಹೊತ್ತು ಏನೂ ಜವಾಬು ಬರಲಿಲ್ಲ. ಪ್ರಶ್ನೆ ಹಾಕಿದರೆ ಉತ್ತರ ಕೊಟ್ಟೇ ಕೊಡಬೇಕೆಂಬ ಹಂಗೇನು ಅವರಿಗೆ? ಅಥವಾ ನನ್ನಂಥ ಮುಟ್ಠಾಳರು ಮತ್ತು ಎದರುವಾದಿಗಳ ಹತ್ತಿರ ಮಾತಾಡಿ ಪ್ರಯೋಜನವೇನೆಂಬ ಭಾವವೊ? ಈ ತರ್ಕ ನನ್ನ ಮನಸ್ಸಿನಲ್ಲಿ ಏಳುವಷ್ಟರಲ್ಲಿ ಅವರು "ನಾನೂ ನಾಟಕ ನೋಡಿದೇನಯ್ಯ. ಅದರ ಮರ್ಯಾದೆ ನನಗೂ ಗೊತ್ತಿದೆ. ವಿಷಯವನ್ನು ರಂಗದ ಮೇಲೆ ನೋಡಿದರೆ ಚೆನ್ನಾಗಿ ಮನಸ್ಸಿಗೆ ಹಿಡಿಯುತ್ತದೆ ಎಂದು ನಾನೂ ಬಲ್ಲೆ. ನಾಟಕದಲ್ಲಿ ಪಾತ್ರ ವಹಿಸುವುದು

ತಪ್ಪೆನ್ನುವ ಗೊಡ್ಡು ಅಂಧನಲ್ಲ ನಾನು. ಅಥವಾ ವರದಾಚಾರಿ ನನಗೇನು ದಾಯಾದಿಯಲ್ಲ. ನನ್ನ ಕಾಸನ್ನು ಮುಟ್ಟುವಷ್ಟು ದಾರಿದ್ರ್ಯ ಅವನಿಗೆ ಇರಲೂ ಇಲ್ಲ. ಆದರೆ ನೋಡು! ಕುಡಿತ ಸೂಳೆಗಾರಿಕೆ ರಂಗಕ್ಕೆ ಇಳಿದದ್ದು ಅವನಿಂದಲೇ. ಈ ಕೆಲಸಗಳಿಗೆ ಲಗ್ನ ಕಟ್ಟುವವನು ಒಡನಾಡಿಯಾಗುವವನು ಪುರೋಹಿತ ಅಥವ ಜೋಯಿಸ. ವೈದೀಕರು ಎಂದರೆ ಏನು ಅಭಿಮಾನ ಹುಟ್ಟಬೇಕು ನೋಡು! ಅವರ ಗುಣ ಇದು. ಉದ್ಯೋಗ ಏನು ಎನ್ನುತ್ತೀಯೊ? ಮಿತಿಮೀರಿ ತಿಂದು ಗುಂಡೋದರರಾಗಿ ಅಂಚಿನ ಪಂಚೆ, ಕಲಾಪತ್ತು ಶಾಲು ಧರಿಸಿ ಹಣೆಯ ತುಂಬ ವಿಭೂತಿಯನ್ನೊ ಅಕ್ಷತೆಯನ್ನೋ ಹಚ್ಚಿಕೊಂಡು ರಾಜನ ಸಮಯವನ್ನು ಕಾಯುತ್ತಿರುವುದು; ಧರ್ಮವನ್ನೂ, ಆಚಾರವನ್ನೂ, ಶಾಸ್ತ್ರವನ್ನೂ ಅವನ ರುಚಿಗೆ ತಕ್ಕಂತೆ ಪಾಕ ಇಳಿಸುವುದು. ನಮ್ಮ ದುರದೃಷ್ಟ ಈ ಕೆಲಸಕ್ಕೆಲ್ಲ ಸ್ಮಾರ್ತರನ್ನೇ ಇಟ್ಟಿದ್ದ! ಮಡಿ, ಆಚಾರ ದೇವರಪೂಜೆ ಎಂದರೆ ಆಚಾರ್ರೇ ಬರಬೇಕು. ಇದು ಯಾವ ನ್ಯಾಯ? ನಮ್ಮಲ್ಲಿ ಮಡಿ ಇಲ್ಲವೆ? ಅವನಂಥ ಅಯ್ಯಂಗಾರ್ಯರಂತೆ ನಾವೂ ಅನಾಚಾರಿಗಳು ಎಂದು ತಿಳಿಯಲು ಅವನಿಗೆ ಕಾರಣವೇನು? ಇದೆಲ್ಲ ನಿನಗೆ ಸಮ್ಮತವೊ? ನಾನೇನೊ ಅವನ ದಾಯಾದಿ ಅಲ್ಲ ಎಂದು ಒಪ್ಪಿಕೊಳ್ಳುತ್ತೇನೆ. ನಿನಗೇನು ಅಷ್ಟೈಶ್ವರ್ಯ ಕಟ್ಟಿಕೊಟ್ಟ, ಈ ರೀತಿ ಅವನ ಪರ ವಕಾಲತ್ತು ವಹಿಸುವುದಕ್ಕೆ?" ಎಂದರು. ನನಗೆ ಸ್ವಲ್ಪ ನಗು ಬಂತು. ತಡೆದುಕೊಂಡು, "ಮಧ್ವಪಕ್ಷಪಾತಿ ಎಂಬ ನಿಮ್ಮ ಕೊರಗು ನ್ಯಾಯವಾದ್ದಲ್ಲ. ಮಾಧ್ವರಿಗೆ ಪೂಜೆಗೆ ಅಧಿಕಾರ ಬರುವುದಕ್ಕೆ ಇಷ್ಟೇ ಕಾರಣ. ಮಂಡಿ ಮೇಲಕ್ಕೆ ಒದ್ದೆ ಮಡಿಯನ್ನುಟ್ಟು ಮೈಗೆಲ್ಲ ಪಟ್ಟಿ ಪಟ್ಟಿಯಾಗಿ ಗಂಧ ಹಚ್ಚಿಕೊಂಡು ಅಂಗಾರವನ್ನು ಮೂಗಿನಿಂದ ಕೂದಲಿನ ವರೆಗೂ ಅನಾಮತ್ ಬಳಿದು, ಕೈಯಲ್ಲಿ ತಾಮ್ರದ ಥಾಲಿ ಹಿಡಿದು, ನೀರನ್ನು ಚಿಮಿಕಿಸಿಕೊಂಡು 'ನ್ನಾರಾಯಣ! ನ್ನಾರಾಯಣ!' ಎಂದು ಕುಣಿದಾಡುತ್ತಾ ಬರುವ ಪ್ರಾಣಿಯನ್ನು ನೋಡಿದರೆ ಪ್ರೇಕ್ಷಕರೆಲ್ಲರೂ ಏಕಕಂಠದಿಂದ ನಕ್ಕು ಹುಣ್ಣಾಗುತ್ತಾರೆ. ವೈದಿಕ ಶಾಸ್ತ್ರಿಯ ಅವತಾರದಲ್ಲಿ ನಗುವಿಗೆ ಇಷ್ಟೊಂದು ಅವಕಾಶವಿಲ್ಲ. ಇಷ್ಟು ಹೊಳೆಯಬೇಡವೆ ನಿಮಗೆ? ಇನ್ನೊಂದು ವಿಷಯ ಹೇಳಿದಿರಿ. ಹೇಯವಾದ ಕೆಲಸಗಳಿಗೆಲ್ಲ ಇಂಥ ಆಚಾರಶೀಲರನ್ನು ಹೊಣೆಮಾಡಿ ನಮ್ಮ ಧರ್ಮವನ್ನು ಹಾಸ್ಯಕ್ಕೆ ಗುರಿಮಾಡಿದಾನೆ ಎಂದು. ಇದರಲ್ಲಿ ಸ್ವಲ್ಪ ನಿಜವಿದೆ ಎಂದು ನಾನೂ ಒಪ್ಪುತ್ತೇನೆ. ಆದರೆ ಇತ್ತೀಚಿನ ನಾಟಕಗಳಲ್ಲಿ ಕಾಣುವ ತುಚ್ಛ ಸೃಷ್ಟಿ ಅವನ ರಂಗದಲ್ಲಿ ಕಾಣುತ್ತಿರಲಿಲ್ಲ!" ಎಂದೆ. ಶಾಸ್ತ್ರಿಗಳು ತಮ್ಮ ಅಭಿಪ್ರಾಯವನ್ನು ಬದಲಾಯಿಸಲಿಲ್ಲ. ನಮ್ಮ ತರುಣರಿಗೆ ಅಕ್ಷತೆ, ನಾಮ ಮತ್ತು ಮುದ್ರೆಯಲ್ಲಿ, ಒಟ್ಟು ನಮ್ಮ ಪೂರ್ವಾಚಾರದಲ್ಲಿ ಅಗೌರವ ಹುಟ್ಟುವುದಕ್ಕೆ ಈ ನಾಟಕಗಳೇ ಕಾರಣ. ವರದಾಚಾರಿ ಇವುಗಳಿಗೆ ಅಂಕುರ. ಈ ಚಂಡಾಲ ಹುಟ್ಟಿ ನಮ್ಮ ಕುಲವನ್ನೆಲ್ಲ ಹಾಳುಮಾಡಿದ ಇತ್ಯಾದಿಯಾಗಿ ವಾದಿಸಿದರು.

ಈ ವಾದದಲ್ಲಿ ಬಹಳಮಟ್ಟಿನ ನಿಜಾಂಶವಿದೆ. ಸನ್ಯಾಸಿ ರಾವಣ ಸೀತೆಯನ್ನು ಅಪಹರಿಸಿದ ದಿನದಿಂದೆ ಅವತಾರಕ್ಕೂ ಆಚಾರಕ್ಕೂ ಅಂತರವಿರಬಹುದು ಎನ್ನುವ ವಿಷಯ ಸ್ಪಷ್ಟವಾಗಿದೆ. ಧರ್ಮ ಮನುಷ್ಯ ಪ್ರಾಣಿಯ ನೈಜವಾದ ಮಲಿನ ಭಾವಗಳನ್ನು ಹೋಗಲಾಡಿಸಿ ಶುದ್ಧವಾದ ತಿಳಿವನ್ನು ಕೊಡಲು ಬಯಸುತ್ತದೆ. ಇದು ಹೆಚ್ಚು ಪ್ರಯತ್ನದ ಕೆಲಸ, ಪ್ರವಾಹಕ್ಕೆ ಎದುರಾಗಿ ಈಜುವಂತೆ. ಹೀಗೆ ದುಡಿಯುವವರಿಗೆ ಪರಸ್ಪರ ಪರಿಚಯವಾಗಲು, ತಮ್ಮ ಕೆಲಸಕ್ಕೆ ಅನುಕೂಲಿಸುವ ಉಡುಪು, ಚಿಹ್ನೆ, ಕೆಲವು ಸಾಮಾನ್ಯ ಆಚಾರಗಳು ವಿಧಾಯಕವಾದವು. ಮೂಲಪುರುಷನು ಅಂತರ್ಧಾನನಾದಮೇಲೆ ಭಾವದ ಬಿಸಿಯೂ ಆರಿ ಬಾಹ್ಯಾಡಂಬರ ಮಾತ್ರ ಉಳಿದುಕೊಳ್ಳುತ್ತದೆ. ಪ್ರತಿಯೊಂದು ಮತದ ಚರಿತ್ರೆಯೂ ಇಷ್ಟೆ. ಆದರೆ ಮೂಲ ಧರ್ಮದ ಬೆಳಕನ್ನು ಕಾಣಲು ಅಪೇಕ್ಷಿಸುವ, ಪ್ರಯತ್ನಿಸುವ ಮಹನೀಯರು ಇದ್ದೇ ಇರುತ್ತಾರೆ. ಮೂಲಧರ್ಮ ಜನತೆಯ ಉತ್ತಮ ಜೀವನಕ್ಕೆ ಸಾಧಕ. ಅದರ ವಿಷಯದಲ್ಲಿ ಪೂಜ್ಯ ಬುದ್ಧಿ ಅಚ್ಚಳಿಯದೆ ಇದ್ದೇ ಇರುತ್ತದೆ. ಈ ಧರ್ಮದ ಅನುಯಾಯಿಗಳೆಂದು ಮೆರೆಯುವ ಕೆಲವು ಕಪಟಿಗಳನ್ನು ಸೃಷ್ಟಿಸಿ ಅವರನ್ನು ಅಣಕಿಸುವುದರಿಂದ ಅನೇಕ ವೇಳೆ ನಿಜವಾದ, ಆರ್ಷೇಯವಾದ, ನಮ್ಮ ಉದಾತ್ತ ಜೀವನಕ್ಕೆ ತಾಯಿಬೇರಂತಿರುವ ಧರ್ಮ ಮೂಲವನ್ನೇ ಕಲಕಿ ನೋಯಿಸಿದಂತಾಗುತ್ತದೆ. ಬೂಟಾಟಿಕೆಯನ್ನು ಹೊರಗೆಡಹಿದಲ್ಲದೆ ಜೀವನ ಉತ್ತಮವಾಗುವುದಿಲ್ಲ. ನಿಜ. ಆದರೆ ಈ ಪ್ರಯತ್ನದಲ್ಲಿ ಜೀವವನ್ನು ಉಳಿಸಬೇಡವೆ? ಒಂದು ನಾಟಕದಲ್ಲಿ ಪೂರ್ಣಪಂಡಿತನಾದ, ಮಾತಿನಲ್ಲಿ ಆಚಾರದಲ್ಲಿ ಮತ್ತು ವೇಷದಲ್ಲಿ ವೈದಿಕ ಧರ್ಮದ ಮೂರ್ತಿಯೆಂದೆನಿಸಿ ಸಕಲರ ಗೌರವಕ್ಕೂ ಪಾತ್ರನಾಗಿರುವ ವೈದಿಕಸಂಪನ್ನನು ಇದ್ದಕ್ಕಿದ್ದ ಹಾಗೆ ತನ್ನ ನಚ್ಚಿನ ಶಿಷ್ಯನ ಹೆಂಡತಿಯನ್ನು ಕೆಣಕಲೆತ್ನಿಸುವುದು; ಇನ್ನೊಂದರಲ್ಲಿ ಸದಾಚಾರಶೀಲನೆಂದೂ, ವೇದರತ್ನನೆಂದೂ ಸ್ತುತ್ಯನಾದ ವಿಪ್ರವರ್ಯನು ಒಂದು ತೋಟಕ್ಕೆ ನುಗ್ಗಿ ಬಾಳೆಯ ಗೊನೆಯನ್ನು ಕದಿಯುವ ಪ್ರಯತ್ನದಲ್ಲಿ ಕಾವಲಗಾರರ ಕೈಗೆ ಸಿಕ್ಕಿ ಕತ್ತೆ ಸವಾರಿಗೆ ಗುರಿಯಾಗುವುದು; ಬೇರೊಂದರಲ್ಲಿ ಆಚಾರಶೀಲನೊಬ್ಬನು ನಿಜವಾದ ಭಕ್ತನನ್ನು ನೋಡಿ ಅಸೂಯೆಪಟ್ಟು ಅವನನ್ನು ದುಷ್ಟರ ಕೈಗೆ ಸಿಕ್ಕಿಸಿ ಪಾದರಕ್ಷಾಪ್ರಯೋಗ ಮಾಡಿಸುವುದು ಅಥವಾ ಹರಿಕಥೆಯನ್ನು ಮುಗಿಸಿ ಮಿಕ್ಕ ಪೂಜೆಯನ್ನು ವೇಶ್ಯಾಗೃಹದಲ್ಲಿಯೇ ನಡಸುವುದು — ಮೇಲಿಂದಮೇಲೆ ಇಂಥ ನಾಟಕಗಳನ್ನು ನೋಡುವವರೆಗೆ ನಮ್ಮ ವೃದ್ಧಾಚಾರಗಳ ವಿಷಯದಲ್ಲಿ ಎಂಥ ಅಭಿಪ್ರಾಯ ಬರುತ್ತದೆ ಊಹಿಸಿ. ಎಷ್ಟೋ ನಾಟಕಗಳು ಅನ್ಯಮತಸ್ಥರು ಅಥವಾ ಅನ್ಯದೇಶೀಯರು ನಮ್ಮ ಜನ ಮತ್ತು ನಮ್ಮ ಧರ್ಮದಮೇಲೆ ನಡಸುತ್ತಿರುವ ಅಪಪ್ರಚಾರದಂತೆಯೇ ಕಾಣುತ್ತವೆ. ಈ ತರಹ ಪ್ರದರ್ಶನಗಳಿಂದ ನಮ್ಮ ಜೀವನ ವಿಷಮಯವಾಗುತ್ತಿದೆಯೆಂಬ ಅಂಶವನ್ನು ನಾಟಕಕಾರರು ನೆನಪಿನಲ್ಲಿಟ್ಟುಕೊಂಡು ಈ ರೀತಿಯ ತುಚ್ಛ ದೃಶ್ಯಗಳಿಗೆ ಪ್ರೇರಕರಾಗಕೂಡದು.

ಅನೇಕ ನಾಟಕಕಾರರಿಗೆ ಇಂಥ ಸನ್ನಿವೇಶಗಳಿಲ್ಲದಿದ್ದರೆ ನಾಟಕ ಶೋಭಿಸುವುದಿಲ್ಲ. ಜನರಂಜನೆಯಾಗುವುದಿಲ್ಲ ಕಾಸೇಳುವುದಿಲ್ಲ ಎಂಬ ಭಯ ಮತ್ತು ಸಂದೇಹ. ಜನರು ತಮ್ಮ ರುಚಿಗೆ ತಕ್ಕ ಆಹಾರವನ್ನು ಅಪೇಕ್ಷಿಸುತ್ತಾರೆ. ಈ ರುಚಿ ಸ್ವಾಭಾವಿಕವಾದುದಲ್ಲ, ಕಲ್ಪಿತವಾದುದು. ನಮ್ಮ ಸುತ್ತಮುತ್ತ ಕಾಣುವ ಆಹಾರ ರುಚಿಯಲ್ಲಿ ಇರುವ ವೈವಿಧ್ಯ ಕಲೆಗೂ ಅನ್ವಯಿಸುತ್ತದೆ. ಅದನ್ನು ಬದಲಾಯಿಸುವುದಕ್ಕೆ ಪ್ರಯತ್ನಬೇಕು, ಸನ್ನಿವೇಶದ ಸಹಾಯಬೇಕು. ಪ್ರೇಕ್ಷಕರಲ್ಲಿ ಈಗ ಕಾಣುವ ತುಚ್ಛರುಚಿಗೆ ನಾಟಕ ಕರ್ತರೇ ಕಾರಣ. ಇದನ್ನು ಶುದ್ಧ ಮತ್ತು ಉನ್ನತವಾಗಿ ಮಾಡುವ ಭಾರ ಅವರಿಗೆ ಸೇರಿದ್ದು. ಅಶ್ಲೀಲ ದೃಶ್ಯಗಳಿಲ್ಲದಿದ್ದರೆ ದುಡ್ಡು ಹುಟ್ಟುವುದಿಲ್ಲವೆಂಬ ಭಯಕ್ಕೆ ಈಗಲೂ ಕಾರಣವಿಲ್ಲ. **ಪುಕಾರ್** ಎಂಬ ಚಲನ ಚಿತ್ರದಲ್ಲಿ ಈ ರೀತಿಯ ಸೋಂಕೆ ಇರಲಿಲ್ಲವಲ್ಲ! ಆದಕ್ಕೆ ನುಗ್ಗುತ್ತಿದ್ದ ಜನರ ಹಿಂಡು ಬೇರಾವ ನಾಟಕಕ್ಕೆ ಸೇರಿದೆ? ಹಾಸ್ಯರಸ ಅದರಲ್ಲಿಲ್ಲವೆಂದು ಹೀಯಾಳಿಸುವುದಾದರೆ ಇದರ ಅಗತ್ಯವೇನು? ಸಾವಿರಾರು ಜನರು ಇದನ್ನು ನೋಡಿ ಆನಂದಿಸಿದರೆಂದ ಮೇಲೆ ಈ ಕುಟಿಲ ಹಾಸ್ಯ ಅವರಿಗೆ ಅತ್ಯಗತ್ಯವಲ್ಲವೆಂದು ಸಿದ್ಧವಾಗುವುದಿಲ್ಲವೆ? ಆದುದರಿಂದ ಇದರ ಅಗತ್ಯ ನಾಟಕಕಾರನಿಗೆ ಮಾತ್ರವೆಂದು ನಂಬೋಣವೆ? ತನ್ನ ಕಲೆಯನ್ನು ಚೆನ್ನಾಗಿ ಅರಿತ ಲೇಖಕನು ಈ ಗೋಜಿಗೆ ಹೋಗುವುದಿಲ್ಲ. ಹಾಸ್ಯರಸದ ಸ್ವರೂಪವನ್ನು ಅವನು ಚೆನ್ನಾಗಿ ತಿಳಿದಿರುತ್ತಾನೆ. ತುಚ್ಛಮಾತುಗಳು, ವಕ್ರವಾದ ರೂಪ ಅಥವಾ ಉಡಿಗೆ ತೊಡಿಗೆಗಳು, ಅಶ್ಲೀಲ ವರ್ತನೆ— ಇವುಗಳು ನಿಜವಾದ ಹಾಸ್ಯದ ಸ್ವರೂಪವಲ್ಲವೆಂದು ಅವನು ಬಲ್ಲ. ನಿಜವಾದ ಹಾಸ್ಯಗಾರನಲ್ಲಿ ವ್ಯವಹಾರಜ್ಞಾನ, ಕಲಾಭಿರುಚಿ, ಪಾಂಡಿತ್ಯ, ರಸವತ್ತಾದ ಶೈಲಿ ಎಲ್ಲವೂ ಸಮಧಾತುವಿನಲ್ಲಿ ಮಿಳಿತವಾಗಿರುತ್ತವೆ. ಈ ರೀತಿ ಪರಿಪೂರ್ಣತೆಯು ಬಹಳ ವಿರಳ. ಇದರ ಅವಶ್ಯಕತೆಯನ್ನು ತೋರಿಸಬೇಕೆಂಬುದೇ ಅವನ ಧ್ಯೇಯ. ಜನರ ಕುಂದು ಕೊರತೆಗಳಿಂದ ಕನಲಿ ಅವರ ಮೇಲೆ ಕೆಂಡವನ್ನು ಕಾರುವದು ಸುಲಭ. ಆದರೆ ಅವರೊಡನೆಯೇ ಸೇರಿಕೊಂಡು ಉತ್ಪ್ರೇಕ್ಷೆಗೆ ಅಡಿಯಾಳಾಗದೆ ಅವರ ಲೋಪಗಳನ್ನು ಎತ್ತಿತೋರಿಸಿ ಅಣಕಿಸಿ ಎಲ್ಲರೂ ತಾವೂ ಸಹ ನಗುವಂತೆ ಮಾಡಿ, ಅವರನ್ನು ಸರಿಯಾದ ಮಾರ್ಗಕ್ಕೆ ಒಯ್ಯುವುದು ಹೆಚ್ಚಿನ ಸಾಹಸದ ಮತ್ತು ಬುದ್ಧಿಯ ಕೆಲಸ. ನಾಗರಿಕತೆಗೆ ಈ ರೀತಿ ಹಾಸ್ಯ ಆವಶ್ಯಕ. ಮತ್ತು ಯಾವುದನ್ನು ನೋಡಿ ಜನರು ನಗುತ್ತಾರೆ

(೨೬೦ನೆಯ ಪುಟಕ್ಕೆ)

## ಕನ್ನಡ ಕವಿ ಸೂಕ್ತಿ

**ಮರನೀಗುಂ ಮಣಿಯಾಗುವೊಂದು ಪಶುವೀಗುಂ ಕೇಳಿಮೆಂದೋಳಿಯೊಳ್**
**ಪುರುಡಂ ಪುಟ್ಟಿಸಿ ಕಾಪ್ಯಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್**
**ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು**
**ರ್ವರೆಯೊಳ್ ಸಂದ ಕವಿ ಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ**

—ನೇಮಿಚಂದ್ರ: ಲೀಲಾವತಿ I, ೧೩.




ಶುಕ್ರವಾರ, ಮೇ ೧೦, ೧೯೪೦

## ಪರಿಷತ್ತಿನ ಬೆಳ್ಳಿಯ ಹಬ್ಬ

ಕಳೆದ ವಾರ ಮೇ ೩ಕ್ಕೆ ಪರಿಷತ್ತಿಗೆ ೨೫ ವರ್ಷ ತುಂಬಿತು. ಹರಿದು ಹಂಚಿಹೋಗಿರುವ ಕನ್ನಡ ನಾಡನ್ನೂ, ಜಾತಿ ಮತ ಪಂಥ ದೃಷ್ಟಿಗಳಿಂದ ಹಲವು ಪಂಗಡಗಳಾಗಿರುವ ಕನ್ನಡಿಗರನ್ನೂ ಭಾಷೆ ಸಂಸ್ಕೃತಿಗಳ ದೃಷ್ಟಿಯಿಂದ ಒಂದುಗೂಡಿಸುವ ಕೆಲಸವನ್ನು ರಾಜ ಪ್ರಜೆಗಳ ಬೆಂಬಲದಿಂದ ತಕ್ಕಮಟ್ಟಿಗೆ ಮಾಡಿ ತನ್ನ ಇರವನ್ನು ಸಾರ್ಥಕಪಡಿಸಿಕೊಂಡು ಅಖಿಲ ಕರ್ನಾಟಕಸಂಸ್ಥೆ ಎನ್ನಿಸಿಕೊಂಡಿದೆ ಪರಿಷತ್ತು. ನಮ್ಮ ವಾಚಕ ವೃಂದಕ್ಕೆ ಅದರ ಬೆಳ್ಳಿಯ ಹಬ್ಬದ ನೆನಪನ್ನು ತಂದುಕೊಡಲು ಸಂತೋಷಿಸುತ್ತೇವೆ.

ಹಬ್ಬದ ಉತ್ಸವ ಬರುವ ಜೂನ್ ೩ನೆಯ ತಾರೀಖಿನ ದಿನ ನಡೆಯುವುದೆಂಬ ಸುದ್ದಿಯೂ, ಕನ್ನಡದ ಮತ್ತು ಪರಿಷತ್ತಿನ ಮಹಾ ಪೋಷಕರಾದ ಮೈಸೂರಿನ ಶ್ರೀಮನ್ಮಹಾರಾಜರವರು ಉತ್ಸವವನ್ನು ಪ್ರಾರಂಭ ಮಾಡಿಕೊಡಲು ಕೃಪೆಯಿಟ್ಟು ಒಪ್ಪಿರುತ್ತಾರೆಂಬ ಸಂಗತಿಯೂ ಈಗಾಗಲೇ ಎಲ್ಲರಿಗೂ ತಿಳಿದ ವಿಷಯವಾಗಿದೆ. ಈ ಸಂಬಂಧದಲ್ಲಿ ನಮ್ಮ ಕರ್ತವ್ಯಭಾಗವನ್ನು ಅರಿಕೆಮಾಡಿ ಕೊಳ್ಳಲು ಅವಕಾಶ ಬೇಡುತ್ತೇವೆ.

ಪರಿಷತ್ತಿನ ಬೆಳ್ಳಿಯ ಹಬ್ಬ ಬರುವುದು ಒಮ್ಮೆ ಮಾತ್ರ; ಕನ್ನಡ ದೇವಾಲಯವಲ್ಲಿ ಅಂದು ವಿಶೇಷವಾದ ದೀಪೋತ್ಸವ; ಕನ್ನಡಿಗರೆಲ್ಲ ಅಂದು ಇಲ್ಲಿಗೆ ಬಂದು ಕನ್ನಡ ತಾಯ ಸೇವೆಯಲ್ಲಿ ಭಾಗ ವಹಿಸಬೇಕೆಂದು ಪರಿಷತ್ತಿನ ಪರವಾಗಿ ಬಿನ್ನವಿಸಿಕೊಳ್ಳುತ್ತೇವೆ. ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ಅದರ ಸದಸ್ಯರೆಲ್ಲಿ ಸೇರಿ ನಡಸುವರಾದರೂ ಅದು ಎಲ್ಲ ಕನ್ನಡಿಗರೂ ಕೂಡಿಯೇ ನಡಸಬೇಕಾದ್ದು: ಏಕೆಂದರೆ, ಪರಿಷತ್ತಿನ ಬೆಳ್ಳಿ ಹಬ್ಬವೆಂದರೆ ಕನ್ನಡ ನವೋದಯದ ಹಬ್ಬ. ಪರಿಷತ್ತಿನ ಸದಸ್ಯರಂತೂ ಬೆಳ್ಳಿಯ ಹಬ್ಬದಲ್ಲಿ ಬೆರೆಯುವುದು ತಮ್ಮ ಪವಿತ್ರ ಕರ್ತವ್ಯವೆಂದು ಭಾವಿಸಿ ಹಾಗೆ ಮಾಡುವುದರಲ್ಲಿ ಸಂದೇಹವಿಲ್ಲ. ಸದಸ್ಯರು ಮಾತ್ರವಲ್ಲದೆ, ಪರಿಷತ್ತಿನ ೨೫ ವರ್ಷಗಳ ಚರಿತ್ರೆಯಲ್ಲಿ ಅದರೊಡನೆ ಒಂದಲ್ಲ ಒಂದು ರೀತಿ ಸಂಬಂಧ ಬೆಳಸಿರುವವರೆಲ್ಲ ಹಬ್ಬಕ್ಕೆ ತಪ್ಪದೆ ಬರಬೇಕೆಂದು ಪ್ರಾರ್ಥಿಸುತ್ತೇವೆ.

ಪರಿಷತ್ತಿನ ಈ ಬೆಳ್ಳಿಯ ಹಬ್ಬ ಯಶಸ್ವಿಯಾಗಿ ನಡೆಯಬೇಕಾದರೆ ಅದಕ್ಕೆ ಅಪಾರವಾದ ಜನ-ಧನ ಸಹಾಯ ಅತ್ಯಾವಶ್ಯಕವೆಂಬ ಬಗ್ಗೆ ಹೆಚ್ಚು ಒತ್ತಿ ಹೇಳಬೇಕಾದ ಪ್ರಮೇಯವಿಲ್ಲ. ಕನ್ನಡ ನಾಡಿನ ನಾನಾ ಭಾಗಗಳಿಂದ ಕನ್ನಡಿಗರು ತಂಡ ತಂಡವಾಗಿ ಬರಬೇಕೆಂದು ಬೇಡಿಕೊಳ್ಳುತ್ತಿದ್ದೇವೆ, ಬಂದಾರೆಂಬ ನಿರೀಕ್ಷೆಯಿದೆ; ಬಂದ ಅತಿಥಿಗಳಿಗೆ ಕೆಲವು ಅವಶ್ಯವಾದ ಅನುಕೂಲ ಸೌಕರ್ಯಗಳನ್ನು ಒದಗಿಸಿಕೊಡಬೇಕಾಗುತ್ತದೆ; ಉತ್ಸವ ಸಂಬಂಧವಾದ ಪ್ರಕಟನೆಗಳಿಗೂ, ಇತರ ಉತ್ಸವಕಾರ್ಯಗಳಿಗೂ ಹೇರಳವಾಗಿ ಹಣ ಬೇಕಾಗುತ್ತದೆ; ಮೇಲಾಗಿ, ಬೆಳ್ಳಿಯ ಹಬ್ಬದ ನೆನೆಪು ಎಂದೆಂದೂ ಬೆಳಗುತ್ತಿರುವಂತೆ ಏನಾದರೊಂದು ಚಿರಸ್ಥಾಯಿಯಾದ ಸ್ಮಾರಕ ಕಾರ್ಯ ಮಾಡಬೇಕೆಂಬ ಉದ್ದೇಶವೂ ಇದೆ. ಇಷ್ಟೆಲ್ಲ ಆಗಬೇಕಾದರೆ ಕನ್ನಡಿಗರ ಉದಾರವಾದ ಸಹಾಯದಿಂದ ಮಾತ್ರ ಸಾಧ್ಯ. ಪರಿಷತ್ತಿನ ಘನತೆ ಗೌರವಗಳಿಗೆ ತಕ್ಕಂತೆ ಅದರ ಬೆಳ್ಳಿಯ ಹಬ್ಬವನ್ನು ವೈಭವದಿಂದ ನಡಸಲು ಸಾಧ್ಯವಾಗುವಂತೆ ಕನ್ನಡಿಗರೆಲ್ಲರೂ, ಕನ್ನಡದಲ್ಲೂ, ಪರಿಷತ್ತಿನಲ್ಲೂ ಅಭಿಮಾನವುಳ್ಳವರೆಲ್ಲರೂ, ಬಿಚ್ಚುಗೈಯಿಂದ ಧನ ಸಹಾಯ ಮಾಡಬೇಕೆಂದು ಪರಿಪತ್ತಿನ ಪರವಾಗಿ ಬೇಡಿಕೊಳ್ಳುತ್ತೇವೆ.

ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಈಗ ಕಳೆದ ಒಂದೂವರೆ ತಿಂಗಳಿಂದ ಕನ್ನಡ ನಾಡಿನ ಮೂಲೆ ಮೂಲೆಗೂ ಹೋಗಿ, ಕನ್ನಡದ ಪ್ರಚಾರಮಾಡಿ, ಬೆಳ್ಳಿಯ ಹಬ್ಬದ ವಿಚಾರವಾಗಿ ಅಲ್ಲಲ್ಲಿಯ ಕನ್ನಡ ಮುಂದಾಳುಗಳೊಡನೆ ಮಾತುಕತೆಯಾಡಿ, ತಾವು ಕಂಡ ಕನ್ನಡಿಗರೆಲ್ಲರನ್ನೂ ಬೆಳ್ಳಿಯ ಹಬ್ಬಕ್ಕೆ ಆಹ್ವಾನಿಸಿದ್ದಾರೆ. ಅವರು ಎಲ್ಲ ಕಡೆಗೂ ಪ್ರತ್ಯಕ್ಷವಾಗಿ ಬಂದು ಆಹ್ವಾನ ಕೊಡಲು ಸಾಧ್ಯವಿಲ್ಲವಾಗಿ, ಎಲ್ಲ ಕನ್ನಡಿಗರನ್ನೂ ಅವರು ಹಬ್ಬಕ್ಕೆ ಈ ಮೂಲಕ ಆಹ್ವಾನಿಸಿರುತ್ತಾರೆ. ಪರಿಷತ್ತಿನ ಪರವಾಗಿ ಅವರು ಕೊಟ್ಟಿರುವ ಆಹ್ವಾನವನ್ನು ಕನ್ನಡಿಗರೆಲ್ಲರೂ ಸ್ವೀಕರಿಸಿ ಹಬ್ಬಕ್ಕೆ ದಯಮಾಡಿಸಿ ಹಬ್ಬ ಯಶಸ್ವಿಯಾಗಿ ಜರುಗುವುದಕ್ಕೆ ಎಲ್ಲ ಬಗೆಯಿಂದಲೂ ಬೆಂಬಲ ನೀಡಬೇಕೆಂದು ಮತ್ತೊಮ್ಮೆ ಬೇಡಿಕೊಳ್ಳುತ್ತೇವೆ.

---

### ಮೂಡಬಿದ್ರೆಯಲ್ಲಿ

## ಕನ್ನಡ ವಸಂತ ಸಾಹಿತ್ಯೋತ್ಸವ

ಎಸ್. ಪಿ. ಮುರಾಯರ್ ಅವರಿಂದ ಬರೆದು ಬಂದುದು

ಮೇಲ್ಕಂಡ ಉತ್ಸವ ೩೦-೪-೪೦ನೆಯ ಮಂಗಳವಾರ ಪ್ರಾತಃಕಾಲ ೮ ಘಂಟೆಗೆ ಬೋರ್ಡ್ ಹೈಯರ್ ಎಲಿಮೆಂಟರಿ ಶಾಲೆಯಲ್ಲಿ ಪ್ರಾರಂಭವಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಯಂ. ಶ್ರೀಕಂಠಯ್ಯನವರು ಅಗ್ರಾಸನವನ್ನು ಸ್ವೀಕರಿಸಿದ್ದರು. ಹೆಣ್ಣುಮಕ್ಕಳು ದೇವರ ಪ್ರಾರ್ಥನೆಯನ್ನು ಮಾಡಿದ ನಂತರ ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀಯುತ ಗೋಪಾಲ ಪೈಜಿಯವರೂ, ದಕ್ಷಿಣ ಕರ್ಣಾಟಕ ಪ್ರಾಂತಸಮಿತಿಯ ಕಾರ್ಯದರ್ಶಿಗಳಾದ ಶ್ರೀ॥ ಕೆ. ಶಿವರಾಮ ಕಾರಂತರೂ ಸ್ವಾಗತ ಭಾಷಣಗಳನ್ನು ಮಾಡಿದರು.

ಶ್ರೀ॥ ಬಿ. ಯಂ. ಶ್ರೀಕಂಠಯ್ಯನವರು, 'ಕನ್ನಡ ಪರಿಷತ್ತನ್ನು ನಮ್ಮ ಒಡೆಯರು ಸ್ಥಾಪಿಸಿಕೊಂಡರು. ಛಿದ್ರಛಿದ್ರವಾದ ಕನ್ನಡ ನಾಡನ್ನು ಒಂದುಗೂಡಿಸಿ, ಕನ್ನಡ ನುಡಿಯನ್ನು ಬೆಳಸಿ, ಕನ್ನಡ ಕಲೆಗಳನ್ನು ಪೋಷಿಸಿ, ಕನ್ನಡಿಗರ ಸಂಸ್ಕೃತಿಯನ್ನು ಕಾಪಾಡುವುದೇ ಪರಿಷತ್ತಿನ ಗುರಿ. ಕನ್ನಡಿಗರು ಎಚ್ಚತ್ತು, ಕನ್ನಡ ನುಡಿ, ಸಾಹಿತ್ಯ ಮೊದಲಾದುವುಗಳನ್ನು ಮೆಚ್ಚಬೇಕು; ಹಾಗಾದರೆ ಸಾಹಿತ್ಯ ಬೆಳೆಯುವುದು. ಈ ತೆರನ ವಸಂತೋತ್ಸವಗಳ ಪರಿಷತ್ತು ವರ್ಷವರ್ಷವೂ ಜರುಗಿಸುತ್ತಲಿರುವ ಉದ್ದೇಶ ಇಷ್ಟೇ' ಎಂದು ತಮ್ಮ ಪ್ರಾರಂಭ ಭಾಷಣದಲ್ಲಿ ಮಾಡಿದರು.

ಶ್ರೀ|| ಜಿ. ಪಿ. ರಾಜರತ್ನಂ ಅವರು 'ಕನ್ನಡ ಸಾಹಿತ್ಯದಲ್ಲಿ ವಿಡಂಬನೆ' ಎಂಬ ವಿಷಯವನ್ನು ಕುರಿತು ಭಾಷಣ ಮಾಡುತ್ತಾ, "ಸಾಹಿತ್ಯ ನಮ್ಮ ಜೀವನದ ಪ್ರತಿಬಿಂಬ. ಅದು ನಮ್ಮ ಉದಾತ್ತ ಧ್ಯೇಯಗಳ ಪ್ರದರ್ಶನ ಮತ್ತು ಟೀಕೆ. ವಿಡಂಬನೆಯೆಂದರೆ ಹಾಸ್ಯದ ಒಂದು ರೂಪ. ಟೀಕೆ ಸುರಸವಾಗಿರಬಹುದು, ಬಿಸಿಯಾಗಿರಬಹುದು. ಬಿಸಿಯಾಗಿಯೂ ಚುರುಕಾಗಿಯೂ ಇದ್ದರೆ ವಿಡಂಬನೆಯಾಗುವುದು; ಕೇವಲ ಸುರಸವಾಗಿದ್ದರೆ ತಿಳಿಹಾಸ್ಯವಾಗುವುದು. ನಮ್ಮ ಪ್ರಾಚೀನ ಸಾಹಿತ್ಯದಲ್ಲಿಯೂ ವಿಡಂಬನೆ ಅಲ್ಲಲ್ಲಿ ಕಾಣುತ್ತದೆ. ನಯಸೇನ, ವೃತ್ತವಿಲಾಸರ ಕೃತಿಗಳಲ್ಲಿ ಕಂಡುಬರುವುದು. ನಮ್ಮ ಪುರಾಣದ ಅನೇಕ ಚಿತ್ರಗಳು ಜೀವನದ ಮೇಲಿನ ವಿಡಂಬನೆಯಂತಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶ್ರೀ|| ಜಾಗಿರದಾರರು, ಕೈಲಾಸಂ, ಕಾರಂತರು ಮೊದಲಾದ ವಿಡಂಬನಕಾರರಿದ್ದಾರೆ" ಎಂದು ಹೇಳಿದರು.

ಸಾಯಂಕಾಲ ೬ ಘಂಟೆಗೆ ಶ್ರೀಯುತ ಜಿ. ಆರ್. ರಂಗಸ್ವಾಮಿಯವರು 'ಚಲಚ್ಚಿತ್ರಗಳಿಂದ ಲಾಭ ಹಾನಿಗಳು' ಎಂಬ ವಿಷಯವನ್ನು ಕುರಿತು ಮಾತನಾಡಿದರು. 'ಶ್ರೀ'ಯವರು ಸಭಾಪತಿಗಳಾಗಿದ್ದರು.

'ಶ್ರೀ'ಯವರು "ಕನ್ನಡದ ಕೂಗೇಕೆ" ಎಂಬ ವಿಷಯವಾಗಿ ಮಾತನಾಡುತ್ತ "ಕನ್ನಡದೇವಿ ಅಮರಳು. ಕಳೆದುಹೋದ ತನ್ನ ಗೌರವವನ್ನು ಪುನಃ ಪಡೆಯದಿರಳು. ಅವಳ ಕುವರರು ಎಚ್ಚತ್ತಿರುವರು............ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ಬೆಳಸಿ, ಅವುಗಳ ಜ್ಞಾನವನ್ನು ಕನ್ನಡಿಗರಲ್ಲೂ, ಹೊರಗಿನವರಲ್ಲೂ ಹರಡಿ ಕನ್ನಡಿಗರ ಸಾಂಸ್ಕೃತಿಕ ಏಕೀಕರಣವನ್ನು ಸಾಧಿಸುವುದಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಹೊಂದಿದೆ. ಅದರ ೨೫ ವರ್ಷದ ಬೆಳ್ಳಿಯ ಹಬ್ಬ ಜೂನ್ ತಿಂಗಳಲ್ಲಿ ಜರುಗಲಿದೆ. ಪರಿಷತ್ತು ಕನ್ನಡ ನಾಡಿನ ಮೆರವಣಿಗೆಯಲ್ಲಿ ಏಕರೂಪತೆಯನ್ನು ತರುವುದು; ಹೊರಗಿನವರಲ್ಲಿ ಕನ್ನಡಿಗರ ವಿಷಯದಲ್ಲಿ ಗೌರವ ಸಹಾನುಭೂತಿಗಳನ್ನು ಹುಟ್ಟಿಸುವುದು; ಕೊನೆಗೆ ಹೃದಯಗಳ ಒಕ್ಕೂಟದಿಂದ ಕನ್ನಡ ನಾಡಿನ ಒಕ್ಕೂಟವನ್ನು, ರಾಜಕೀಯ ಕಾರ್ಯಕರ್ತರು ಸಾಧಿಸುವುದಕ್ಕೆ ದಾರಿಮಾಡುವುದು" ಎಂದು ಹೇಳಿದರು.

ಅನಂತರ ಶ್ರೀಯುತ ಶಿವರಾಮ ಕಾರಂತರು "ನಾಟಕವೆಂಬ ನಾಟಕ" ಎಂಬ ಪ್ರಹಸನವನ್ನು ಓದಿದರು.

೧–೫–೧೯೪೦ ಬುಧವಾರ ಪ್ರಾತಃಕಾಲ ೮ ಘಂಟೆಗೆ ಶ್ರೀ|| ಮುಳಿಯ ತಿಮ್ಮಪ್ಪಯ್ಯನವರು "ನಮ್ಮ ಮುದ್ದಣ"ನನ್ನು ಕುರಿತು ಭಾಷಣಮಾಡಿದರು. 'ಶ್ರೀ'ಯವರು ಅಧ್ಯಕ್ಷರಾಗಿದ್ದರು.

ಶ್ರೀ|| ಜಿ. ಪಿ. ರಾಜರತ್ನಂರವರು "ಜೈನ ಜಾತಕಗಳು" ಎಂಬ ವಿಷಯವಾಗಿ ಭಾಷಣಮಾಡಿದರು.

ಸಾಯಂಕಾಲ ೬ ಘಂಟೆಗೆ ಶ್ರೀ|| ಕಡಂಗೊಡ್ಲು ಶಂಕರಭಟ್ಟರು "ಕರ್ನಾಟಕ ಏಕೀಕರಣ"ವನ್ನು ಕುರಿತು ಭಾಷಣಮಾಡಿದರು. ಶ್ರೀ|| ಜಿನರಾಜ ಹೆಗ್ಗಡೆ, ಅಡ್ವೊಕೇಟ್, ಎಂ.ಎಲ್.ಎ. ಅವರು ಅಗ್ರಾಸನವನ್ನು ವಹಿಸಿದ್ದರು.

ಅಧ್ಯಕ್ಷರ ಕೋರಿಕೆ ಮೇರೆಗೆ, 'ಶ್ರೀ'ಯವರು ಮಾತಾಡುತ್ತಾ, ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕ ಏಕೀಕರಣಕ್ಕೆ ನೆಲವನ್ನು ಹದಗೊಳಿಸುತ್ತಿದೆ. ಅದು ಬರೆಯಿಸಲಿರುವ 'ಕನ್ನಡ ನಾಡ ಚರಿತ್ರೆ' ಯೆಂಬ ಗ್ರಂಥದಿಂದ ಕನ್ನಡಿಗರು ತಮ್ಮ ಪೂರ್ವಚರಿತ್ರೆ, ತಾವು ಕಟ್ಟಿದ ಸಾಮ್ರಾಜ್ಯಗಳು, ಶಿಲ್ಪಕಲೆ, ಸಾಹಿತ್ಯ, ಮತಸಾಮರಸ್ಯಬುದ್ಧಿ, ಮುಂತಾದ ಗುಣಗಳನ್ನು ಸ್ಮರಿಸಿಕೊಂಡು, ಆತ್ಮಸ್ವರೂಪವನ್ನು ತಿಳಿದು, ಎಚ್ಚತ್ತು ಮಂಕುತನವನ್ನೂ ಹೇಡಿತನವನ್ನೂ ತೊರೆದು, ಹೆರರ ಆಕ್ರಮಣವನ್ನು ತಡೆದು, ಇಡಿಯ ಕನ್ನಡ ನಾಡಿಗೆ ನವಚೈತನ್ಯವನ್ನು ತುಂಬಿ ಹೊಸಕಾಲಕ್ಕೆ ತಕ್ಕ ಹೊಸ ಕರ್ನಾಟಕವನ್ನು ನಿರ್ಮಿಸಬೇಕೆಂದು ಪ್ರತಿಪಾದಿಸಿದರು. ಯೂರೋಪಿನ ಸಣ್ಣ ಜನಾಂಗಗಳೂ ಕೂಡಾ ತಮ್ಮ ನುಡಿ, ನಾಡು, ಸಂಸ್ಕೃತಿ, ಸ್ವಾತಂತ್ರ್ಯಗಳಿಗಾಗಿ ಹೋರಾಡುತ್ತಿರುವರು. ದೃಢಸಂಕಲ್ಪವೊಂದು ನಮ್ಮಲ್ಲಿ ಮೊಳೆಯಲಿ; ಸಣ್ಣಪುಟ್ಟ ಭೇದ, ಅಸೂಯೆಗಳು ಹೋಗಲಿ. ಇಷ್ಟಾದರೆ ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡಿಗರೆಲ್ಲಾ ಒಂದು ಕುಲವಾಗಿ, ಕಾರ್ಯಸಾಧನೆ ತೋರಿಸುವಂತೆ, ರಾಜಕೀಯ ಕ್ಷೇತ್ರದಲ್ಲಿಯೂ ತೋರಿಸಬಲ್ಲರು ಎಂದು ಹೇಳಿ ಏಕೀಕರಣ ಎಷ್ಟುಬೇಗ ಕೈಗೂಡಿದರೆ ಅಷ್ಟುಬೇಗ ಕನ್ನಡಿಗರು ಒಮ್ಮುಖವಾಗಿ ತಮ್ಮ ಸಂಸ್ಕೃತಿಯನ್ನು ಇನ್ನೂ ಹೆಚ್ಚಾಗಿ ಉಜ್ವಲಗೊಳಿಸಲು ಸಾಧ್ಯವಾಗುವುದೆಂದು ಹೇಳಿದರು.

ಆ ಹೊತ್ತಿನ ಕಾರ್ಯಕ್ರಮವನ್ನು ಮುಕ್ತಾಯಗೊಳಿಸುತ್ತಾ, ಅಧ್ಯಕ್ಷರು, 'ಕನ್ನಡ ಗಡಿನಾಡುಗಳಲ್ಲಿ ಕನ್ನಡಿಗರ ದುರವಸ್ಥೆ, ಬೊಂಬಾಯಿ ಮತ್ತು ಮದರಾಸು ಸರ್ಕಾರಗಳು ತೋರುತ್ತಿರುವ ಅಲಕ್ಷ್ಯ, ಸ್ವತಂತ್ರ ಪ್ರಾಂತವಾಗಲು ಕರ್ನಾಟಕಕ್ಕಿರುವ ಅರ್ಹತೆ, ಪ್ರಾಕೃತಿಕ, ಸಾಂಪತ್ತಿಕ ಮತ್ತು ವಾಸ್ತವಿಕ ಅನುಕೂಲತೆಗಳನ್ನು ಕುರಿತು ಪ್ರಸ್ತಾಪಿಸಿ, ಕರ್ನಾಟಕ ಸಾಮ್ರಾಜ್ಯ ಧರ್ಮದಿಂದ ಎಷ್ಟೋ ಶತಮಾನಗಳ ವರೆಗೆ ಬೆಳಗಿತು. ಅದ್ವಿತೀಯ ಶಿಲ್ಪಿಕಲೆಗಳನ್ನು ಕಟ್ಟಿದೆ. ಈ ನಾಡನ್ನು ಪುನಃ ಚೇತರಿಸಲು ಬದ್ಧಕಂಕಣವಾದ ಸಂಸ್ಥೆಗಳು ಒಂದಾಗಿ ಪ್ರಯತ್ನಿಸಬೇಕು. ನಾನು ಈ ಭಾಗದಲ್ಲಿ ಶ್ರೀಕಂಠಯ್ಯನವರ ಶಿಷ್ಯನಂತಿದ್ದು ಅವರನ್ನು ಹಿಂಬಾಲಿಸಿ ಕಾರ್ಯಮಾಡುವೆನು" ಎಂದರು.

೨–೫–೪೦ ಗುರುವಾರ ಬೆಳಿಗ್ಗೆ ೮ ಘಂಟೆಗೆ ಶ್ರೀ|| ರಾಘವೇಂದ್ರ ಆಚಾರ್ಯರು, 'ವಿದ್ಯುತ್ತಿ'ನ ವಿಷಯವಾಗಿ ಉಪನ್ಯಾಸ ಮಾಡಿದರು. ಶ್ರೀ|| ಧರ್ಮಸ್ಥಳ ಮಂಜಯ್ಯ ಹೆಗ್ಡೆ ಎಂ.ಎಲ್.ಸಿ. ಅವರು ಅಗ್ರಾಸನ ವಹಿಸಿದ್ದರು.

ಶ್ರೀ|| ಶಿವರಾಮ ಕಾರಂತರು 'ಜೀವನದ ಹೊಸದೃಷ್ಟಿ' ಎಂಬ ವಿಷಯದ ಮೇಲೆ ಭಾಷಣ ಮಾಡಿದರು.

ಸಾಯಂಕಾಲ ೬ ಘಂಟೆಗೆ ಶ್ರೀಮಾನ್ ಕೆ. ಬಿ. ಜಿನರಾಜ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ಕೂಡಿದ ಮಹಾಸಭೆಯಲ್ಲಿ ಮೂಡುಬಿದ್ರೆ ನಿವಾಸಿಗಳು 'ಶ್ರೀ'ಯವರಿಗೆ ಮಾನಪತ್ರ ಸಮರ್ಪಿಸಿದರು.

'ಶ್ರೀ'ಯವರು "ಪಡುವಣ ಸಾಹಿತ್ಯದಿಂದ ನಮಗಾಗಿರುವ ಲಾಭವೇನು?" ಎಂಬುದನ್ನು ಕುರಿತು ಮಾತಾಡುತ್ತ ಹೀಗೆ ಹೇಳಿದರು.

"ಪಡುವಣ ಸಾಹಿತ್ಯ ಸಂಸ್ಕೃತಿಗಳಿಂದ ನಮಗೆ ಲಾಭವೇನೂ ಇಲ್ಲ, ನಷ್ಟವೇ ಆಗಿದೆ ಎಂದು ಕೆಲವರು ಈ ಪ್ರಶ್ನೆಗೆ ಉತ್ತರ ಹೇಳಬಹುದು. ಇಲ್ಲ, ಈ ಉತ್ತರ ಸರಿಯಲ್ಲ. ಸ್ವಾತಂತ್ರ್ಯಪ್ರೇಮ, ಸ್ವತಂತ್ರವಿಚಾರಬುದ್ಧಿ ಇವುಗಳು, ನಮಗೆ ಹೊಸ ವಿಶ್ವವಿದ್ಯಾನಿಲಯಗಳ ವಿದ್ಯಾಭ್ಯಾಸ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳಿಂದ ದೊರೆತಿವೆಯೆಂದು ಮೊತ್ತಮೊದಲು ಭಾರತೀಯರು ತಿಳಿಯಬೇಕು. ಗೋಖಲೆ, ಠಾಕೂರ್, ತಿಲಕ್, ಮಹಾತ್ಮಾ ಗಾಂಧಿ, ಜವಾಹರಲಾಲ್ ಮುಂತಾದವರು ಪಡುವಣ ಸಂಸ್ಕೃತಿಯ ಪ್ರಭಾವಕ್ಕೆ ಒಳಪಟ್ಟವರೇ. ನಮ್ಮಲ್ಲಿ ಹಿಂದೆ ಸಂಸ್ಕೃತಿ, ಸ್ವಾತಂತ್ರ್ಯಪ್ರೇಮ, ಸ್ವತಂತ್ರವಿಚಾರ ಇದ್ದೇ ಇದ್ದುವು; ಜೈನ, ಬೌದ್ಧ, ದ್ವೈತಾದ್ವೈತ, ವಿಶಿಷ್ಟಾದ್ವೈತಗಳು ಈ ಸ್ವತಂತ್ರ ವಿಚಾರದ ಫಲ; ನಡುವೆ ನಮ್ಮ ಸ್ವಾತಂತ್ರ್ಯ ಹೋಗಿ ಬುದ್ಧಿವಿಶಾಲತೆ ಕುಗ್ಗಿ ಮತ, ಜಾತಿ, ಭೇದ ವೈಷಮ್ಯಗಳು ಹುಟ್ಟಿ ನಮ್ಮ ತೇಜಸ್ಸಿಗೆ ಅಂಧಕಾರ ಕವಿದು ಸ್ವತಂತ್ರ್ಯ ವಿಚಾರ ಬುದ್ಧಿ ಮರೆಯಾಯಿತು. ಆ ಕರ್ಮದ ಫಲ, ಇಂದಿನ ನಮ್ಮ ಒಡಕು, ಅಂತಃಕಲಹ, ದಾಸ್ಯ, ದಾರಿದ್ರ್ಯ. ಈ ಜಾಡ್ಯ ಹಿಡಿದು ನಿದ್ದೆಹೋಗುತ್ತಿದ್ದವರನ್ನು ಎಚ್ಚರಿಸಿದ ಕೀರ್ತಿ ಪಾಶ್ಚಾತ್ಯರಿಗೆ ಸಲ್ಲುತ್ತದೆ."

ಸಾಯಂಕಾಲ ೬ ಘಂಟೆಗೆ ಸಾರ್ವಜನಿಕ ಧರ್ಮಾರ್ಥ ವಾಚನಾಲಯದ ಎಂಟನೆಯ ವಾರ್ಷಿಕೋತ್ಸವ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಜರುಗಿತು. ಸ್ವಾಗತ ಭಾಷಣ, ವರದಿ ವಾಚನಾನಂತರ ಅಧ್ಯಕ್ಷರು ಭಾಷಣಮಾಡುತ್ತಾ "ವಾಚನಾಲಯದ ವಾರ್ಷಿಕೋತ್ಸವದಲ್ಲಿ ಭಾಗವಹಿಸಲು ನನಗೆ ತುಂಬಾ ಸಂತೋಷವಾಗಿದೆ. ನೀವು ವಸಂತ ಸಾಹಿತ್ಯೋತ್ಸವವನ್ನು ಏರ್ಪಡಿಸಿ ಉಪಕಾರಮಾಡಿದ್ದೀರಿ. ನಿಮ್ಮ ಗುರಿ, ಪರಿಷತ್ತಿನ ಗುರಿ ಒಂದೇ. ವಾಚನಾಲಯದಲ್ಲಿ ಹೆಣ್ಣುಮಕ್ಕಳಿಗೆ ಸ್ಥಾನವನ್ನು ಕಲ್ಪಿಸಿರಿ. ನಿಮ್ಮ ಸಹಾಯಕರು ಹಲವರು ಮುಸಲ್ಮಾನ ಭ್ರಾತೃಗಳು ಇರುವುದು ಕಂಡು ನನಗೆ ಬಲು ಸಂತೋಷವಾಯಿತು. ನಾವೇ ಬೇರೆ ಜನ, ನಮ್ಮದೇ ಬೇರೆ ಸಂಸ್ಕೃತಿ, ನಮ್ಮದೇ ಬೇರೆ ನುಡಿ, ಎಂಬ ಭೇದಭಾವನೆಯನ್ನು ಬಿತ್ತದೆ, ಕರ್ನಾಟಕದಲ್ಲಿ, ಭಾರತದಲ್ಲಿ, 'ಅವರು ನಮ್ಮೊಡನೆ ಬೆರೆತು ಒಂದು ರಾಷ್ಟ್ರಭಕ್ತಿಯನ್ನು ಬೆಳಸುವರೆಂಬುದಕ್ಕೆ

(೨೬೨ನೇ ಪುಟಕ್ಕೆ)

(೩೫೭ನೆಯ ಪುಟದಿಂದ)

ಎನ್ನುವುದರಿಂದ ಒಂದು ಜನತೆಯ ನಾಗರಿಕ ಸ್ಥಿತಿಯನ್ನೂ ಅಳೆಯಬಹುದು. ‘There never will be civilization where comedy is not possible’ ಎಂಬ ಜಾರ್ಜ್ ಮೆರ್ಡಿತ್ ಅವರ ವಾಕ್ಯದ ಅಭಿಪ್ರಾಯ ಇದೇ. ಶುದ್ಧಹಾಸ್ಯ ವಿಡಂಬನವಷ್ಟು ಮೊನಚಾದ್ದಲ್ಲ. ಅದರಂತೆ ಮರೆಯಲ್ಲಿ ನಿಂತು ಇರಿಯುವಂಥದಲ್ಲ. ಇತರರಿಗೆ ಬುದ್ಧಿ ಕಲಿಸುವ ದುರಭಿಮಾನವೂ ಅದರಲ್ಲಿಲ್ಲ. ಇತರರನ್ನು ನೋಡಿ ತಾನು ನಕ್ಕು ಇತರರು ತನ್ನನ್ನು ನೋಡಿ ನಗುವಾಗ ಅವರೊಡನೆ ತಾನೂ ಸೇರಿ ನಕ್ಕು ಎಲ್ಲರ ಮೆದುಳನ್ನೂ ಸ್ವಲ್ಪಮಟ್ಟಿಗೆ ಬಿಸಿಮಾಡುವುದೇ ಅದರ ಶುದ್ಧಸ್ವರೂಪ. ಇದನ್ನು ಲೇಖಕರು ಮರೆಯದಿರಲಿ. ಇಂಥ ಸೃಷ್ಟಿಯಿಂದ ನಮ್ಮ ಸಾಹಿತ್ಯದ ಕಳೆ ಹೆಚ್ಚಲಿ.

—ಜಿ. ಆರ್. ರಂಗಸ್ವಾಮಿ

---

ಗ್ರಂಥವಿಮರ್ಶೆ

## ಎಕ್ಸ್-ರೇ *

ಇಂದಿನ ನಾಗರಿಕತೆಗೂ ವಿಜ್ಞಾನದ ಬೆಳವಣಿಗೆಗೂ ಇರುವ ಹತ್ತಿರದ ಸಂಬಂಧವನ್ನು ಸಾಮಾನ್ಯವಾಗಿ ಎಲ್ಲರೂ ಬಲ್ಲರು. ದಿನದಿನದ ಜೀವನದಲ್ಲಿ ನಮ್ಮ ಸುಖ ಸೌಕರ್ಯಗಳಿಗಾಗಿ ಉಪಯೋಗಿಸಲ್ಪಡುತ್ತಿರುವ ಟೆಲಿಫೋನ್, ರೇಡಿಯೋ, ಸಿನಿಮಾ, ಮೋಟಾರ್, ಇನ್ನೂ ನೂರಾರು ಸಾಧನಗಳು ವಿಜ್ಞಾನ ನಮಗೆ ಕೊಟ್ಟಿರುವ ಫಲಗಳು. ಆದರೆ ಯುದ್ಧದ ಭೀಕರತೆಯನ್ನು ಕಂಡು ತಲ್ಲಣಿಸಿ ವಿಜ್ಞಾನದ ಓಟ ಅಂಕೆ ಮೀರಿ ಮನುಷ್ಯನನ್ನು ಪಶುವನ್ನಾಗಿ ಮಾಡುತ್ತಿದೆ, ಮೇಲಕ್ಕೆ ಹಿತಮಿತ್ರನಂತೆ ಕಾಣಿಸಿಕೊಂಡರೂ ಅಂತರಂಗದಲ್ಲಿ ವಿಜ್ಞಾನ ದುಷ್ಟ ಶತ್ರು, ಇದರ ಸಾಧನೆಯನ್ನು ಎಷ್ಟು ಬೇಗ ನಿಲ್ಲಿಸಿದರೆ ಅಷ್ಟು ಬೇಗ ಪ್ರಪಂಚಕ್ಕೆ ನೆಮ್ಮದಿಯುಂಟಾಗುವುದು, ಹೀಗಾಗುವವರೆಗೂ ಮಾನವಕುಲಕ್ಕೆ ಉದ್ಧಾರವೇ ಇಲ್ಲ ಎಂದು ನಂಬಿರುವ ಜನ ನಮ್ಮಲ್ಲಿಯೂ ಅನೇಕರು ಇದ್ದಾರೆ. ಜೀವನವನ್ನು ನೂರಾರು ವಿಧಗಳಲ್ಲಿ ಸುಖಮಯವಾಗಿ ಮಾಡಲು ನೆರವಾಗಿ ನಿಂತಿರುವ ವಿಜ್ಞಾನ ಮನುಷ್ಯನು ರೋಗ, ಪೀಡೆ, ನೋವುಗಳನ್ನು ಜಯಿಸಿ ತನ್ನ ಆರೋಗ್ಯವನ್ನು ಪಾಲಿಸಿಕೊಳ್ಳಲು ನಡೆಯಬೇಕಾದ ದಾರಿಯನ್ನು ತೋರಿಸಿಕೊಟ್ಟಿದೆ. ಮಾರಿ ಮಸಣಿ ಪೂಜೆ, ಉಗ್ರದೇವತೆಯರ ಉಗ್ರತರ ಆರಾಧನೆ ಇವುಗಳಿಂದ ಸುಖವನ್ನು ಕಾಣುವೆವು ಎಂದಿದ್ದ ಮನೋಭಾವವನ್ನು ತಿದ್ದಿದ ವಿಜ್ಞಾನ ಕ್ಲೋರಿನ್, ಫಾಸ್ಜೀನ್, T. N. T. ಲೂಯಿಸೈಟ್, ಆಡ್ಯಂಸೈಟ್ ಮುಂತಾದವುಗಳನ್ನು ಕೊಟ್ಟಿದೆ. ನಿಜ. ಆದರೆ ಇವುಗಳನ್ನು ಮನುಷ್ಯ ಕುಲವೇ ನಿರ್ಮೂಲವಾಗುವಂತೆ ಉಪಯೋಗಿಸುತ್ತಿರುವ ದೋಷ ಖಂಡಿತವಾಗಿಯೂ ಕೇವಲ ವೈಜ್ಞಾನಿಕನದೇ ಅಲ್ಲ. ಶಾಸ್ತ್ರಜ್ಞಾನ ಬೆಳೆದಷ್ಟು ವೇಗದಲ್ಲಿಯಾಗಲಿ ಪ್ರಮಾಣದಲ್ಲಿಯಾಗಲಿ ಮನುಷ್ಯನ ಸ್ವಭಾವ ಉತ್ತಮವಾಗದೆ ಇರುವುದೂ ಲೋಕಕಲ್ಯಾಣಬುದ್ಧಿ ಹರಡದೆ ಸ್ವಾರ್ಥವೇ ಜಗತ್ತನ್ನು ಎಂದಿಗೂ ಆಳುತ್ತಿರುವುದೂ ಇದಕ್ಕೆ ಕಾರಣಗಳು.

ವಿಜ್ಞಾನದ ಮೇಲೆ ಹೊತ್ತ ಅಪವಾದಕ್ಕೆ ಸರಿಯಾದ ಉತ್ತರ ಒಂದೇ. ಎಲ್ಲರಿಗೂ ವಿಜ್ಞಾನದ ನಿಜಸ್ವರೂಪವನ್ನು ತಿಳಿಸಿ ಅದರ ಹೃದಯವನ್ನು ಬಿಚ್ಚಿ ತೋರಿಸಿ, ಅದರ ಗುರಿಯೇನೆಂಬುದನ್ನು ಸ್ಪಷ್ಟವಾಗಿ ವಿವರಿಸಬೇಕು. ವಿಜ್ಞಾನವನ್ನು ಚೆನ್ನಾಗಿ ಬಲ್ಲ ಪ್ರತಿಭಾಸಂಪನ್ನರ ನೆರವು ಇದಕ್ಕೆ ವಿಶೇಷವಾಗಿ ಇರಬೇಕು. ಇವರು ತಮ್ಮ ಜ್ಞಾನದ ಮತ್ತು ಅನುಭವದ ಫಲವನ್ನು ಸ್ವಲ್ಪಮಟ್ಟಿಗಾದರೂ ಜನಸಾಮಾನ್ಯರೂ ಸವಿದು ಆನಂದಿಸುವಂತೆ, ರೇಡಿಯೋ, ಉಪನ್ಯಾಸ, ಸುಲಭ ಪುಸ್ತಕಗಳ ಮೂಲಕ ಮಾಡಬಹುದು. ‘ಎಕ್ಸ್-ರೇ’ ವಿಚಾರವನ್ನು ಆರಿಸಿಕೊಂಡು, ಎಲ್ಲರಿಗೂ ಸುಲಭವಾಗಿ ತಿಳಿಸಬೇಕೆಂಬ ಉದ್ದೇಶದಿಂದ ಕನ್ನಡದಲ್ಲಿ ಈಗತಾನೆ ಒಂದು ಪುಸ್ತಕವನ್ನು ಬರೆದು ಪ್ರಕಟಿಸಿ ಶ್ರೀ|| ಯು. ರಾಘವೇಂದ್ರ ಆಚಾರ್ಯರು ಕನ್ನಡಿಗರಿಗೆಲ್ಲ ಉಪಕಾರ ಮಾಡಿರುವರು. ಇವರು ಮದ್ರಾಸ್ ಲಯೋಲಾ ಕಾಲೇಜಿನಲ್ಲಿ ಭೌತಶಾಸ್ತ್ರ ಪಂಡಿತರು. ತಾವು ಕೈಗೊಂಡ ಕೆಲಸವನ್ನು ದಕ್ಷತೆಯಿಂದ ನಿರ್ವಹಿಸಿರುವರೆಂದು ಧಾರಾಳವಾಗಿ ಹೇಳಬಹುದು. ಕನ್ನಡಿಗರಿಗೆ ಸುಪರಿಚಿತರಾದ ಡಾ|| ಯು. ರಾಮರಾಯರು ಇದಕ್ಕೆ ಮುನ್ನುಡಿಯನ್ನು ಬರೆದು ಪುಸ್ತಕವನ್ನು ಆಶೀರ್ವದಿಸಿದ್ದಾರೆ. ಎಲ್ಲಕ್ಕೂ ಹೆಚ್ಚಾಗಿ ಮದ್ರಾಸ್ ವಿಶ್ವವಿದ್ಯಾನಿಲಯದವರು ಈ ಪುಸ್ತಕವನ್ನು ಆದರಿಸಿ ಪ್ರೋತ್ಸಾಹ ಕೊಟ್ಟಿದ್ದಾರೆ.

‘ಎಕ್ಸ್-ರೇ’ ಗಳನ್ನು ಮೊದಲು ಕಂಡುಹಿಡಿದ ಪ್ರೊ|| ರೆಂಟ್ಜನ್ ಅವರ ಭಾವಚಿತ್ರವೂ, ಆಸ್ಪತ್ರೆಗಳಲ್ಲಿ ಈ ಕಿರಣಗಳನ್ನು ಚಿಕಿತ್ಸೆಗಾಗಿ ಉಪಯೋಗಿಸಲು ಏರ್ಪಡಿಸಿರುವ ಸಲಕರಣಗಳೂ, ಎಕ್ಸ್-ರೇ ಗಳಿಂದ ತೆಗೆದ ಕೆಲವು ಫೋಟೋಗಳೂ ಪುಸ್ತಕವನ್ನು ಆಕರ್ಷಕವಾಗಿಮಾಡಿವೆ.

ಎಕ್ಸ್-ರೇ ವಿಚಾರವನ್ನು ಪ್ರಸ್ತಾಪಿಸುವ ಮೊದಲು “ವಿಜ್ಞಾನದ ನೆಲೆಗಟ್ಟು” ಎಂಬ ಮೊದಲನೆಯ ಅಧ್ಯಾಯದಲ್ಲಿ, ಬೆಳಕು ಶಕ್ತಿಯ ಒಂದು ಸ್ವರೂಪವೆಂದೂ, ಆಕಾಶದಲ್ಲಿ—ಈಥರಿನಲ್ಲಿ, ಅಲೆಗಳ ರೂಪದಲ್ಲಿ ಹಬ್ಬುತ್ತದೆ ಎಂದೂ ತಿಳಿಸಿ ಇದರ ವಿಶೇಷ ಗುಣಗಳನ್ನು ವಿವರಿಸಿದ್ದಾರೆ. ಪ್ರಪಂಚದಲ್ಲಿರುವ ಎಲ್ಲ ವಸ್ತುಗಳೂ ೯೨ ವಿವಿಧ ಮೂಲಧಾತುಗಳ ಸಂಯೋಗದಿಂದ ಆಗಿರುವವೆಂದೂ, ಈ ಮೂಲ ಧಾತುಗಳು ಎಲೆಕ್ಟ್ರಾನ್ ಮತ್ತು ಪ್ರೋಟಾನ್ ಎಂಬ ವಿದ್ಯುತ್ಕಣಗಳ ಒಂದು ಕ್ರಮದ ಜೋಡಣೆಯಿಂದ ಆಗಿವೆ ಎಂದೂ ತಿಳಿಸಿರುವರು. ಎರಡನೆಯ ಅಧ್ಯಾಯದಲ್ಲಿ ಪ್ರೊ|| ರೆಂಟ್ಜನ್ ಅವರು ಎಕ್ಸ್ ಕಿರಣಗಳನ್ನು ಕಂಡುಹಿಡಿದ ರೀತಿ, ಅವುಗಳ ಅಸಾಧಾರಣ ಗುಣಗಳು ವೈದ್ಯಶಾಸ್ತ್ರಕ್ಕೆ ಇವುಗಳಿಂದ ದೊರೆತಿರುವ ಪ್ರಯೋಜನ ಮುಂತಾದುವನ್ನು ತಿಳಿಸಿರುವರು. ಬೆಳಕು ದೂರಲು ಸಾಧ್ಯವಿಲ್ಲದ ವಸ್ತುಗಳಲ್ಲಿ ನುಗ್ಗಿ ಒಳಗಿನ ರಹಸ್ಯವನ್ನು ಹೊರಗೆಡಹಲು ತಕ್ಕ ಚೈತನ್ಯ ಉಳ್ಳ ಈ ಕಿರಣಗಳನ್ನು ಉತ್ಪತ್ತಿಮಾಡಲು ಈಗ ಉಪಯೋಗಿಸುತ್ತಿರುವ ಬಲ್ಬುಗಳ ರಚನೆ, ಎಕ್ಸ್‌ರೇ ಚಿಕಿತ್ಸಾಕ್ರಮದ ವಿಸ್ತಾರವಾದ ವಿವರಣೆ, ಮತ್ತು ಇದರ ಸಹಾಯದಿಂದ ಸಾಧಿಸಿರುವ ಸೋಜಿಗದ ಸಂಗತಿಗಳನ್ನು ಮುಂದಿನ ಎರಡು ಅಧ್ಯಾಯಗಳಲ್ಲಿ ಕಾಣಬಹುದು. ಇದಾದಮೇಲೆ ಕೈಗಾರಿಕೆಯಲ್ಲಿ ಉಕ್ಕಿನ ತೊಲೆಗಳನ್ನೂ ಪರೀಕ್ಷಿಸಲು, ಏರೋಪ್ಲೇನ್ ಪ್ರೊಪೆಲ್ಲರ್ ಯೋಗ್ಯತೆಯನ್ನು ಪರೀಕ್ಷಿಸಲು ಇನ್ನೂ ಅನೇಕ ಕೆಲಸಗಳಿಗೆ ನೆರವಾಗಿ ನಿಲ್ಲಲು ಎಕ್ಸ್‌ರೇ ಹೇಗೆ ಉಪಯೋಗವಾಗಿದೆ ಎಂಬುದನ್ನು ತಿಳಿಸಿರುವರು. ಕೊನೆಯ ಎರಡು ಅಧ್ಯಾಯಗಳು ಎಕ್ಸ್-ರೇ ಸ್ವರೂಪವನ್ನು ಕುರಿತ ಚರ್ಚೆ, ಮತ್ತು ಹರಳುಗಳ ರೂಪ, ರಚನೆ ಇತ್ಯಾದಿಗಳನ್ನು ಕುರಿತದ್ದು. ಈ ಭಾಗ ಸ್ವಲ್ಪ ಕ್ಲಿಷ್ಟ. ಭೌತಶಾಸ್ತ್ರದ ಅಭ್ಯಾಸವಿಲ್ಲದವರಿಗೆ ಇದರಿಂದ ಅಷ್ಟೇನೂ ಪ್ರಯೋಜನ ದೊರೆಯುವಂತಿಲ್ಲ. ಶಾಸ್ತ್ರ ಬಲ್ಲವರಿಗೆ, ಇಲ್ಲಿ ನಿರೂಪಿಸಿರುವ ಸಂಗತಿಗಳು ಸರಿ ಎಂದು ಕಾಣುತ್ತದೆ. **ಎಕ್ಸ್-ರೇಗಳನ್ನು ವ್ಯವಸಾಯದಲ್ಲಿ ಉಪಯೋಗಿಸುತ್ತಾರೆ** ಎಂಬ ಸಂಗತಿ ಈ ಪುಸ್ತಕದಲ್ಲಿ ಕಂಡುಬಂದಿಲ್ಲ. ಬೀಜಕ್ಕಾಗಿ ಉಪಯೋಗಿಸುವ ಧಾನ್ಯಗಳನ್ನು ಎಕ್ಸ್‌ರೇ ಉಪಯೋಗದಿಂದ ಹೆಚ್ಚು ಫಲಕಾರಿಯಾಗುವಂತೆ ಮಾಡುವುದೂ, ಕಬ್ಬಿನ ವ್ಯವಸಾಯದಲ್ಲಿ ಹೊಸ ಹೊಸ ಜಾತಿಯನ್ನು ಹುಟ್ಟುವಂತೆ ಎಕ್ಸ್-ರೇಗಳಿಂದ ಪ್ರೇರೇಪಿಸುವುದೂ ಈಚೆಗೆ ಸಾಧಿಸಿದ ಸಂಗತಿಗಳು.

ಶಾಸ್ತ್ರ ವಿಚಾರಗಳನ್ನು ಬರೆಯುವಾಗ ಪ್ರತಿ ಪಾರಿಭಾಷಿಕ ಪದಕ್ಕೂ ಸಮಂಜಸವಾದ ಕನ್ನಡ ಮಾತು ಸಿಕ್ಕುವುದಿಲ್ಲ. ಅನೇಕ ವೇಳೆ ನಾವು ಇವನ್ನು ಹೊಸದಾಗಿ ಮಾಡಿಕೊಳ್ಳಬೇಕು. ಇಂತಹ ಸಂದರ್ಭಗಳಲ್ಲಿ ಕೆಲವರಿಗೆ ಸಂಸ್ಕೃತದ ಶರಣುಹೊಕ್ಕು ಭಾರವಾದ ಪದಗಳನ್ನು ಕಲ್ಪಿಸಿಕೊಳ್ಳುವುದು ಅಭ್ಯಾಸವಾಗಿದೆ. ಹೆತ್ತವರಿಗೆ ಇವು ಮುದ್ದಾಗಿ ಕಂಡರೂ, ಓದುವವರಿಗೆ ಇವು ಮೂಲ ಇಂಗ್ಲಿಷ್ ಪದಕ್ಕಿಂತಲೂ ಕಷ್ಟವಾಗುತ್ತವೆ. ಕೆಲವರು ಅರ್ಧ ಸಂಸ್ಕೃತ, ಅರ್ಧ ಕನ್ನಡ ಬೆರಸಿ ವಿಚಿತ್ರ ರೀತಿಯ—ವಿದ್ಯುದ್ದುಡ್ಡಿ ಎನ್ನುವ ಹಾಗೆ—ಆಭಾಸ ರೂಪಗಳನ್ನು ಪ್ರಯೋಗಿಸುತ್ತಾರೆ. ಇಂಗ್ಲಿಷ್ ಪದ ಇದ್ದುದನ್ನು ಇದ್ದಂತೆ ಉಪಯೋಗಿಸಿದರೆ ಹಲವು ವೇಳೆ ಅನೇಕ ಪ್ರಮಾದ

---

* ಎಕ್ಸ್-ರೇ :— ಬರೆದವರು: ಶ್ರೀ|| ಯು. ರಾಘವೇಂದ್ರ ಆಚಾರ್ಯ, ಬಿ.ಎಸ್.ಸಿ. (ಆನರ್ಸ್), ಭೌತಶಾಸ್ತ್ರದ ಅಧ್ಯಾಪಕರು, ಲಾಯೊಲಾ ಕಾಲೇಜು, ಮದರಾಸು. ಮುನ್ನುಡಿ ಬರೆದವರು: ಡಾ|| ಯು. ರಾಮರಾಯರು, ಮದರಾಸು ಲೆಜಿಸ್ಲೆಟಿವ್ ಕೌನ್ಸಿಲ್‌ನ ಅಧ್ಯಕ್ಷರು. ಕ್ರೌನ್ ಅಷ್ಟಪತ್ರ ೯೩+೧೨ ಪುಟಗಳು.

ಗಳು ತಪ್ಪುವುವು. ರೈಲು, ಬುಕ್ಕು, ಕೋಟು, ಬಲ್ಬು, ಕಾಂಪೋಂಡ್, ಕ್ರಿಕೆಟ್ ಇವೆಲ್ಲಾ ಕನ್ನಡವಾದಮೇಲೆ ಎಲೆಕ್ಟ್ರಾನ್, ಪ್ರೋಟಾನ್ ಮುಂತಾದುವುಗಳೇಕೆ ಕನ್ನಡಕ್ಕೆ ಸೇರಬಾರದು? ಪ್ರಪಂಚಕ್ಕೆಲ್ಲ ಎಲೆಕ್ಟ್ರಾನ್ ಆಗಿರುವುದು ಕನ್ನಡ ಪ್ರಪಂಚಕ್ಕೆ ಮಾತ್ರ — ಋಣ ವಿದ್ಯುತ್ಕಣ ಆಗಬೇಕೇನು? ಶ್ರೀ॥ ರಾಘವೇಂದ್ರ ಆಚಾರ್ಯರು ಬಹು ಮಟ್ಟಿಗೆ ಇಂಗ್ಲಿಷ್ ಪದಗಳನ್ನೇ ಬಳಸಿಕೊಂಡು ಎಲೆಕ್ಟ್ರಾನ್, ಪ್ರೋಟಾನ್, ಗ್ರೇಟಿಂಗ್ ಎಂಬ ಮಾತುಗಳನ್ನು ಧಾರಾಳವಾಗಿ ಉಪಯೋಗಿಸಿರುವರು.

ನಮ್ಮ ಜನರು ಇಂತಹ ಪುಸ್ತಕಗಳನ್ನು ಹೆಚ್ಚು ಹೆಚ್ಚಾಗಿ ಅಪೇಕ್ಷಿಸಿ ಅವುಗಳ ಲಾಭವನ್ನು ಪಡೆಯಬೇಕು. ಈ ಅಪೇಕ್ಷೆ ವ್ಯಕ್ತವಾಗುವುದು ಎಲ್ಲರೂ ಇಂತಹ ಪುಸ್ತಕಗಳನ್ನು ಕೊಂಡು ಆಸಕ್ತಿಯಿಂದ ಓದಲು ಮನಸ್ಸು ಮಾಡಿದಾಗ. ಈ ಮಾದರಿಯ ಹೆಚ್ಚು ವಿಜ್ಞಾನದ ಪುಸ್ತಕಗಳು ಬಳಕೆಗೆ ಬಂದಂತೆಲ್ಲ ಜೂಲ್ಸ್‌ವರ್ನ್ ಮತ್ತು ಹೆಚ್. ಜಿ. ವೆಲ್ಸ್ ಅಂತಹ ಕಾದಂಬರಿಕಾರರು ಹುಟ್ಟಿ ಕನ್ನಡದಲ್ಲಿ ವಿಜ್ಞಾನದ ವಸ್ತುವಿನ ಆಧಾರದಮೇಲೆ ಕಥೆ, ನಾಟಕ, ಕಾದಂಬರಿಗಳು ಹುಟ್ಟಬಹುದು. ಕನ್ನಡ ಸಾಹಿತ್ಯ ವಿಸ್ತರಿಸಲುಹೊಸ ಅವಕಾಶ ಉಂಟಾಗಬಹುದು.

— ಪಿ. ಶ್ರೀನಿವಾಸರಾವ್.

---

## ಸೊಲ್ಲಾಪುರದ ಜಿಲ್ಲಾ ಸಾಹಿತ್ಯ ಸಮ್ಮೇಳನ

ಈ ಕೆಳಗಿನ ಗೊತ್ತುವಳಿಗಳು ಸಮ್ಮೇಳನಾಧ್ಯಕ್ಷರಿಂದ ಸೂಚಿಸಲ್ಪಟ್ಟು ಸರ್ವಾನುಮತದಿಂದ ಅಂಗೀಕೃತವಾದುವು.

೧. ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಾಗಿದ್ದ ಸರ್ ಕಂಠೀರವ ನರಸಿಂಹರಾಜ ಒಡೆಯರವರು ಅಕಾಲದಲ್ಲಿ ನಿಧನಹೊಂದಿದ್ದುದರಿಂದ ಕನ್ನಡ ನಾಡಿಗೂ [illegible] ಅಪಾರವಾದ ಹಾನಿಗಾಗಿ ಈ ಸಮ್ಮೇಳನ ತನಗಾಗಿರುವ ಅಪರಿಮಿತ ದುಃಖವನ್ನು ಈ ಮೂಲಕ ಅಭಿವ್ಯಕ್ತಪಡಿಸುತ್ತದೆ; ಮತ್ತು ಮೈಸೂರಿನ ಅರಸು ಮನೆತನಕ್ಕೂ ಪ್ರಜೆಗಳಿಗೂ ಉಂಟಾಗಿರುವ ದುಃಖದಲ್ಲಿ ತಾನೂ ಸಹಭಾಗಿಯಾಗಿರುವುದಾಗಿ ಅವರೆಲ್ಲರ ಸನ್ನಿಧಿಯಲ್ಲಿ ಬಿನ್ನವಿಸಲು ಅಪ್ಪಣೆ ಬೇಡುತ್ತದೆ.

೨. ಮೈಸೂರಿನ ಶ್ರೀಮನ್ಮಹಾರಾಜರವರು ತಮ್ಮ ಕೀರ್ತಿಶೇಷ ತಮ್ಮಂದಿರ ಮಕ್ಕಳಾದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರವರನ್ನು "ಯುವರಾಜ" ಪದವಿಗೆ ಏರಿಸಿರುವುದನ್ನು ತಿಳಿದು ಈ ಸಮ್ಮೇಳನ ತನಗಾಗಿರುವ ಹೃತ್ಪೂರ್ವಕವಾದ ಆನಂದವನ್ನು ಶ್ರೀಮನ್ಮಹಾರಾಜರವರ ಹಾಗು ಹೊಸ ಯುವರಾಜರವರ ದಿವ್ಯ ಸನ್ನಿಧಿಗಳಲ್ಲಿ ಬಿನ್ನವಿಸಿಕೊಳ್ಳಲು ಅಪ್ಪಣೆ ಬೇಡುತ್ತದೆ.

೩. ಬರುವ ಜೂನ್ ತಿಂಗಳ ಕೊನೆಯಲ್ಲಿ ಬೆಂಗಳೂರಿನಲ್ಲಿ ಜರುಗಲಿರುವ ಕನ್ನಡ ಸಾಹಿತ್ಯ ಪರಿಷತ್ತಿನ "ಬೆಳ್ಳಿಯ ಹಬ್ಬ" ಹಾಗೂ ಡಿಸೆಂಬರಿನ ಕೊನೆಯ ಭಾಗದಲ್ಲಿ ಜರುಗಲಿರುವ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ "ಚಿನ್ನದ ಹಬ್ಬ"—ಇವು ಕನ್ನಡ ನಾಡು ನುಡಿಗಳ ಶ್ರೇಯೋಭಿವೃದ್ಧಿಗೆ ಬಹಳವಾಗಿ ಸಹಾಯಕವಾಗಿರುವುದರಿಂದ ಈ ಎರಡೂ ಮಹಾ ಸಮಾರಂಭಗಳಲ್ಲಿ ಸೊಲ್ಲಾಪುರ ಜಿಲ್ಲೆಯ ಕನ್ನಡಿಗರೆಲ್ಲರೂ ತನುಮನಧನಗಳಿಂದ ಹೆಚ್ಚಾಗಿ ಸಹಕರಿಸಿ ಕನ್ನಡ ಜನಾಂಗದ ಘನತೆಗೆ ತಕ್ಕುದಾದ ರೀತಿಯಲ್ಲಿ ಆ ಮಹೋತ್ಸವಗಳೆರಡೂ ನೆರವೇರುವಂತೆ — ನೆರವಾಗಬೇಕೆಂದು ಈ ಸಮ್ಮೇಳನ ಎಲ್ಲರನ್ನೂ ಬೇಡಿಕೊಳ್ಳುತ್ತದೆ.

---

## ಪರಿಷತ್ತಿನ ಸುದ್ದಿ

### ಕನ್ನಡ ಗ್ರಂಥ ಮತ್ತು ಪತ್ರಿಕೆಗಳ ಪ್ರದರ್ಶನ

ಕನ್ನಡ ಸಾಹಿತ್ಯ ಪರಿಷತ್ತಿನ ರಜತಮಹೋತ್ಸವವನ್ನು ಜೂನ್ ತಿಂಗಳು ೩೦ನೆಯ ತಾರೀಖು ಭಾನುವಾರ ಜರುಗಿಸಲು ನಿಶ್ಚಯಿಸಿರುತ್ತೆಂಬ ಸಂಗತಿ ಈಗಾಗಲೇ ಎಲ್ಲ ಕನ್ನಡಿಗರಿಗೂ ತಿಳಿದ ವಿಷಯವಾಗಿದೆ. ಈ ಸಮಾರಂಭದಲ್ಲಿ ಕರ್ನಾಟಕ ಪ್ರಾಂತದ ನಾನಾ ಭಾಗಗಳಿಂದ ವಿದ್ವಾಂಸರೂ ಭಾಷಾಭಿಮಾನಿಗಳೂ ಪ್ರಕಾಶಕರೂ ಭಾಗವಹಿಸುವವರಾಗಿದ್ದಾರೆ. ಈ ಸಂದರ್ಭದಲ್ಲಿ ಒಂದು ಕನ್ನಡ ಗ್ರಂಥ ಪ್ರದರ್ಶನವನ್ನು ನಡಸಬೇಕೆಂದು ನಿಶ್ಚಯಿಸಿದೆ. ಜತೆಗೆ ಕನ್ನಡ ಪತ್ರಿಕೆಗಳ ಪ್ರದರ್ಶನವೊಂದನ್ನೂ ಏರ್ಪಡಿಸಬೇಕೆಂದಿದೆ.

ಕಳೆದ ೨೫ ವರುಷಗಳಲ್ಲಿ ಕನ್ನಡ ಸಾಹಿತ್ಯ ಎಷ್ಟು ಅಭಿವೃದ್ಧಿ ಹೊಂದಿದೆ ಎಂಬುದನ್ನೂ ಕನ್ನಡದಲ್ಲಿ ಗ್ರಂಥನಿರ್ಮಾಣವೂ ಪತ್ರಿಕಾ ಪ್ರಚಾರವೂ ಎಷ್ಟರಮಟ್ಟಿಗೆ ಮುಂದುವರಿದಿದೆಯೆಂಬುದನ್ನೂ ಮಹಾಜನರ ಅವಗಾಹನೆಗೆ ತಂದುಕೊಟ್ಟು, ಆಮೂಲಕ ಅವರಿಗೆ ಅವುಗಳಲ್ಲಿ ಆಸಕ್ತಿ ಹೆಚ್ಚಿಸುವುದೇ ಈ ಪ್ರದರ್ಶನದ ಉದ್ದೇಶ.

#### ಗ್ರಂಥ ಪ್ರದರ್ಶನ

ಗ್ರಂಥ ಪ್ರದರ್ಶನದಲ್ಲಿ ೧೯೧೫ನೆಯ ಇಸವಿಯಿಂದ ಈಚೆಗೆ ಪ್ರಕಟವಾದ ಎಲ್ಲ ಕನ್ನಡ ಗ್ರಂಥಗಳಿಗೂ ಸ್ಥಳವುಂಟು. ಗ್ರಂಥಗಳು ಪೂರ್ತಿಯಾಗಲ್ಲದಿದ್ದರೆ ಸ್ವಲ್ಪಭಾಗದಲ್ಲಾದರೂ ಕನ್ನಡದಲ್ಲಿರಬೇಕು. ಎಲ್ಲ ಗ್ರಂಥಗಳೂ ಜೂನ್ ೧೫ರೊಳಗಾಗಿ ಪರಿಷತ್ತಿನ ಕಾರ್ಯಾಲಯಕ್ಕೆ ಬಂದಿರಬೇಕು.

ಪ್ರದರ್ಶನ ಜೂನ್ ೩೦ನೆಯ ತಾರೀಖಿನಿಂದ ಒಂದು ವಾರದ ವರೆಗೂ ನಡೆಯುವುದು. ಪ್ರದರ್ಶನ ಮುಗಿಯುವವರೆಗೂ ಗ್ರಂಥಗಳನ್ನು ಪ್ರದರ್ಶನ ಸ್ಥಳದಿಂದ ಹೊರಗೆ ಕೊಡಲಾಗುವುದಿಲ್ಲ. ಗ್ರಂಥಗಳಿಗೆ ಸಂಬಂಧಪಟ್ಟ ಹಸ್ತಪತ್ರಿಕೆಗಳನ್ನು ಪ್ರಕಟನಕರ್ತರು ಕಳಿಸಿದರೆ ಅದನ್ನು ಹಂಚಲು ಏರ್ಪಾಟುಮಾಡಲಾಗುವುದು. ನೋಡಬಂದವರು ಗ್ರಂಥಗಳನ್ನು ಕೊಳ್ಳಲು ಬಯಸಿದಲ್ಲಿ ಅವರ ವಿಳಾಸವನ್ನು ಪ್ರಕಟನಕರ್ತರಿಗೆ ತಿಳಿಸಲಾಗುವುದು.

ಪ್ರದರ್ಶನ ಮುಗಿದ ಬಳಿಕ ಗ್ರಂಥಗಳನ್ನು ಪ್ರಕಟನಕರ್ತರಿಗೆ ಪರಿಷತ್ತಿನ ಖರ್ಚಿನಿಂದ ಹಿಂದಿರುಗಿಸಲಾಗುತ್ತದೆ.

ಒಂದು ಬಿನ್ನಹ: ಪರಿಷತ್ತಿನ ಸರಸ್ವತೀ ಭಂಡಾರ ಇನ್ನೂ ಬಡವಾಗಿದೆ. ಪರಿಷತ್ತಿಗೆ ಹಣದ ಕೊರತೆ ಹೆಚ್ಚಾಗಿರುವುದರಿಂದ, ಗ್ರಂಥಕರ್ತರೂ ಪ್ರಕಟನಕರ್ತರೂ ತಮ್ಮ ಗ್ರಂಥಗಳನ್ನು ಸರಸ್ವತೀ ಭಂಡಾರಕ್ಕೆ ಉಚಿತವಾಗಿ ಕೊಟ್ಟರೆ ಅವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತದೆ.

#### ಪತ್ರಿಕೆಗಳ ಪ್ರದರ್ಶನ

ಈ ಪ್ರದರ್ಶನದಲ್ಲಿ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕ ಪತ್ರಿಕೆ ಮೊದಲಾದ ಎಲ್ಲ [illegible] ಗಳನ್ನೂ ಪ್ರದರ್ಶಿಸಲಾಗುವುದು. ಪತ್ರಿಕೆಯ ಪ್ರತಿಗಳನ್ನು ಜೂನ್ ೧೫ರೊಳಗೆ ಪರಿಷತ್ತಿನ ಕಾರ್ಯಾಲಯಕ್ಕೆ ಕಳಿಸಬೇಕು. ಪ್ರತಿಯೊಂದು ಪತ್ರಿಕೆಯ ಸದ್ಯದ ಸಂಚಿಕೆಯೊಂದನ್ನೂ ಮೊತ್ತಮೊದಲನೆಯ ಅಥವಾ ಆದಷ್ಟು ಹಿಂದಿನ ಸಂಚಿಕೆಯೊಂದನ್ನೂ ಕಳಿಸಬೇಕು. ಮೊತ್ತಮೊದಲನೆಯ ಅಥವಾ ಬಹಳ ಹಿಂದಿನ ಸಂಚಿಕೆಗಳನ್ನು ಎಚ್ಚರಿಕೆಯಿಂದ ನೋಡಿಕೊಂಡು ಪ್ರದರ್ಶನ ಮುಗಿದ ಬಳಿಕ ಅವನ್ನು ಪರಿಷತ್ತಿನ ಖರ್ಚಿನಿಂದ ಪ್ರಕಾಶಕರಿಗೆ ಹಿಂದಿರುಗಿಸಲಾಗುತ್ತದೆ.

ಹೆಚ್ಚಿನ ವಿವರಗಳನ್ನು ಕಾರ್ಯದರ್ಶಿಗಳಿಂದ ತಿಳಿಯಬಹುದು.

ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು, ೧೦–೫–೧೯೪೦

ಬಿ. ವೆಂಕೋಬರಾವ್
ಕಾರ್ಯದರ್ಶಿ

---

## ' ಕನ್ನಡ ಸಾಮ್ರಾಜ್ಯ" ದಿನಾಚರಣೆ

(ವೈಶಾಖ ಶುದ್ಧ ಸಪ್ತಮಿ)

ಸಮ್ಮೇಳನಾಧ್ಯಕ್ಷರೂ ಏಕೀಕರಣ ಸಂಘದ ಕಾರ್ಯದರ್ಶಿಗಳೂ ಆದ ಶ್ರೀ॥ ಮುದವೀಡು ಕೃಷ್ಣರಾಯರು ಹೀಗೆ ಪ್ರಕಟನೆ ಹೊರಡಿಸಿದ್ದಾರೆ:

"ಹುಬ್ಬಳ್ಳಿಯ ಶ್ರೀ॥ ಬೆಂಗೇರೀ ಪ್ರಹ್ಲಾದರಾಯರು ಸಂಯುಕ್ತ ಕರ್ನಾಟಕದ ೩–೫–೪೦ರ ಸಂಚಿಕೆಯಲ್ಲಿ 'ಕನ್ನಡ ಸಾಮ್ರಾಜ್ಯ' ದಿನಾಚರಣೆಯ ವಿಷಯವನ್ನು ಕನ್ನಡಿಗರ ಚಿತ್ತಕ್ಕೆ ತಂದಿದ್ದಾರೆ. ನಾನು ಮಾಡಬೇಕಾಗಿದ್ದ ಕೆಲಸವನ್ನು ಅವರು ಮೊದಲು ಮಾಡಿದ್ದಕ್ಕೆ ಅವರಿಗೆ ಧನ್ಯವಾದಗಳು. ಅವರು ಸೂಚಿಸಿದ ಮೇರೆಗೆ ಆ ದಿನವನ್ನಾಚರಿಸುವುದಲ್ಲದೆ ಕನ್ನಡ ನಾಡಿನ ಏಕೀಕರಣದ ಕೆಲಸ ಹೆಚ್ಚು ಕಸುವಿನಿಂದ ಮುಂದುವರಿಯುವಂತೆ ಅಂದು ಉಪಕ್ರಮ ಕೈಕೊಳ್ಳುವುದು ಅಗತ್ಯವಾಗಿದೆ. ಸೊಲ್ಲಾಪುರದಲ್ಲಾದ ಏಕೀಕರಣ ಪರಿಷತ್ತಿನಲ್ಲಿ ಗೊತ್ತಾದ ಘಟನೆಯ ಮೇರೆಗೆ ಎಲ್ಲ ಕಡೆಗೆ ಏಕೀಕರಣ ಸಂಘದ ಸದಸ್ಯರನ್ನು ಮಾಡುವ ಕೆಲಸವನ್ನು ಎಲ್ಲ ಕಡೆಯ ಕಾರ್ಯಕರ್ತರು ಅಂದು ಕೈಕೊಳ್ಳಬೇಕೆಂದು ಈ ಮೂಲಕ ಬಿನ್ನವಿಸುತ್ತೇನೆ. ಸದಸ್ಯತ್ವ ಚಂದಾ ೧ ರೂಪಾಯಿ ತೆಗೆದುಕೊಂಡು ಕೊಡತಕ್ಕ ರಸೀದಿಯ ಪುಸ್ತಕಗಳನ್ನು ಕೂಡಲೇ ನನಗೆ ಬರೆದು ತರಿಸಿಕೊಳ್ಳಬಹುದು. ಬರುವ ವೈಶಾಖ ಶುದ್ಧ ಸಪ್ತಮಿ ತಾ॥ ೧೪-೫-೪೦ನೆಯ ದಿವಸ ಈ ಕೆಲಸವನ್ನು ಆರಂಭಿಸಿ ಮುಂದೆ ೧೪ ದಿನಗಳ ವರೆಗೆ ಎಲ್ಲ ಕಡೆಗೆ ಸದಸ್ಯರನ್ನು ಕೂಡಿಸುವ ಕೆಲಸ ಮಾಡಿ ಮೇ ೩೧ಕ್ಕೆ ಲೆಕ್ಕದ ವರದಿಯೊಂದಿಗೆ ಸದಸ್ಯರ ಹೆಸರುಗಳನ್ನು ನನ್ನ ಕಡೆಗೆ ಕಳಿಸುವ ಕೃಪೆ ಮಾಡಬೇಕು. ಹೀಗಾದಲ್ಲಿ ಮಾತ್ರ ಜೂನ್ ತಿಂಗಳಿಂದ ಪ್ರತ್ಯಕ್ಷ ಕಾರ್ಯಾರಂಭ ಮಾಡಲು ಅನುಕೂಲವಾಗುವುದು. ಈ ಮಹತ್ವದ ಸಂಗತಿಯನ್ನು ಕನ್ನಡ ನಾಡಿನೊಳಗಿನ ಏಕೀಕರಣದ ಪುರಸ್ಕರ್ತರು ದಯಮಾಡಿ ಮನದಂದು 'ಸಾಮ್ರಾಜ್ಯ ದಿನ'ವನ್ನು—ಏಕೀಕರಣದ ತಳಹದಿಯನ್ನು ಗಟ್ಟಿಮಾಡುವಂತೆ—ಆಚರಿಸುವರೆಂದು ನಂಬಿಕೊಂಡು ಈ ಬಿನ್ನಹವನ್ನು ಪ್ರಕಟಿಸಿದ್ದೇನೆ. ಎಲ್ಲರೂ ಅಗತ್ಯವಾಗಿ [illegible]ಸಬೇಕೆಂದು ಬೇಡಿಕೊಳ್ಳುತ್ತೇನೆ."

(೨೫೯ನೆ ಪುಟದಿಂದ)

ಇದು ನಿದರ್ಶನವೆಂದು ನಾನು ಎಣಿಸುತ್ತೇನೆ. ಈ ವಾಚನಾಲಯ ವೃದ್ಧಿಯಾಗಲಿ. ಪರಿಷತ್ತಿನೊಡನೆ ಈ ಮೂರು ದಿನ ಹುಟ್ಟಿದ ಬಾಂಧವ್ಯವನ್ನು ಬೆಳಸಲಿ. ನೀವು ಓದಿದ ಮಾನಪತ್ರ ತಮ್ಮ ಪ್ರೇಮದ ಆಶೀರ್ವಾದವೆಂದು ಎಣಿಸುತ್ತೇನೆ. ಇದು ನನಗಲ್ಲ; ನಮ್ಮ ಕನ್ನಡ ತಾಯಿಗೆ ಒಪ್ಪಿಸಿದ ಕಾಣಿಕೆ. ತಮ್ಮೊಡನೆ ನನ್ನ ದೇಹವು ತಾಯ ಸೇವೆಯಲ್ಲಿ ಸವೆಯಲಿ" ಎಂದರು.

---

## ಪರಿಷತ್ತಿನಲ್ಲಿ ಭಾಷಣ

ಮೈಸೂರು ಪ್ರಾಂತಸಮಿತಿಯ ಆಶ್ರಯದಲ್ಲಿ ಶ್ರೀ॥ ವಿ. ಎಸ್. ಆರ್ಮುಗ ಮೊದಲಿಯಾರ್ ಅವರು ಪರಿಷನ್ಮಂದಿರದಲ್ಲಿ 'ವಾಲ್ಮೀಕಿ ರಾಮಾಯಣ'ದ ವಿಷಯವಾಗಿ ದೀಪಚಿತ್ರ ಸಹಿತ ೧೧-೫-೪೦ನೆಯ ಶನಿವಾರ ಸಂಜೆ ೬ ಗಂಟೆಗೆ ಭಾಷಣಮಾಡುವರು.

---

## ಕನ್ನಡ ದೇವಿಯ ಪಂಚಾರತಿ

(ರಾಗ ನಾಟಕುರಂಜಿ—ಝಂಪೆತಾಳ)

ಮೂಡಿ ಮೆರೆವುದು ನೋಡು ।
ಚೆಲುವ ಕನ್ನಡ ನಾಡು ।
ಕಡೆದ ಸೊಬಗಿನ ಗೂಡು ।
ಇದಕೆಲ್ಲಿ ಜೋಡು ? ॥ ಪ ॥

ಮಿಡುಕು ವೀರರ ಬೀಡು । ಮಡದಿಯರ ಮೆಲ್ವಾಡು ।
ಪಡೆಯಲಿದರೊಳು ಬೇಡು । ಕುಣಿದು ಕೊಂಡಾಡು ॥
ಕೀರ್ತಿ ಶಿಖರಿಯ ಕೋಡು । ಫಲಪುಷ್ಪಗಳ ಕಾಡು ।
ದಾನ ಧರ್ಮದ ತೋಡು । ನಡೆ ! ಸೇವೆ ಮಾಡು ॥ ೧ ॥

ಕೃಷ್ಣೆ-ಗೋದಾವರಿಯು । ತುಂಗಭದ್ರೆಯ ಸಿರಿಯು ।
ಕಾವೇರಿ ನದಿ ಹರಿಯು । ತಿರುವ ಪರಿಯು ॥
ತುಂಗ ನೀಲಿಮಗಿರಿಯು । ಇಳಿವ ಪಡುವಣ ದರಿಯು ।
ಸತತ ಸುರಿಯುವ ಸರಿಯು । ತಿಳಿಯ ನಿರ್ಝರಿಯು ॥ ೨ ॥

ಹಲವು ಧರ್ಮದ ಸೆಲೆಯು । ಹಲವು ಮರ್ಮದ ಕಲೆಯು ।
ಹಲವು ಕುಲಗಳ ನೆಲೆಯು । ಮಲೆವರಿಗೆ ಬಲೆಯು ॥
ಹಲವು ದೇಶಕೆ ತಲೆಯು । ಸರಸತಿಯ ಅರಳೆಲೆಯು ।
ಗುಣವ ತೂಗುವ ತುಲೆಯು । ಭುವನ ಕೋಮಲೆಯು ॥ ೩ ॥

ಗಂಗ ಯಾದವ ರಟ್ಟ । ಚತ್ರಿನರಪತಿ ಪಟ್ಟ ।
ಸಕಲ ಗುರುಕುಲ ಪೀಠ । ಕೀರ್ತಿಯ ಕಿರೀಟ ॥
ಸಂಸ್ಕೃತಿಯ ಸವಿಯೂಟ । ಸಿರಿವಾಣಿಯರ ಕೂಟ ।
ಭುವಿಗಪೂರ್ವದ ನೋಟ । ಸುಮನಸರ ತೋಟ ॥ ೪ ॥

ಕವಿಕಮಲಕಾಸಾರ । ವಿಬುಧಜನ ಮಂದಾರ ।
ಭಾವಿಕ ಪುರಸ್ಕಾರ । ಸುಕೃತ ಸಾಕಾರ ॥
ಧನಧಾನ್ಯದಾಗಾರ । ದೊರೆ ಕೃಷ್ಣನಧಿಕಾರ ।
ಬಹು ಸುಖದ ಸಂಸಾರ । ರಾಮನಾಧಾರ ॥ ೫ ॥

—ಬೇಸಗಲ್ ರಾಮರಾವ್

---

## ಕನ್ನಡ ಸುದ್ದಿ

**ಬಸವಜಯಂತಿ : ಆಕಾಶವಾಣಿ ಕಾರ್ಯಕ್ರಮಗಳು**

ಮೇಲ್ಕಂಡ ಉತ್ಸವದ ನಿಮಿತ್ತ ಮುಂಬಯಿ ಮತ್ತು ಮದರಾಸು ಆಕಾಶ ವಾಣಿ ಕೇಂದ್ರಗಳಲ್ಲಿ ಭಾಷಣಾದಿ ಕಾರ್ಯಕ್ರಮ ಪ್ರಸಾರಮಾಡಲಾಯಿತು. ಮದರಾಸಿನಿಂದ ೮ನೆಯ ಬುಧವಾರ ತೆಲುಗಿನಲ್ಲಿ ಬಸವೇಶ್ವರ ನಾಟಕ ವಾಚನವೂ ಮುಂಬಯಿಂದ ೯ನೆಯ ಗುರುವಾರ ರಾತ್ರಿ ೯-೩೦ಕ್ಕೆ ಬೆಳಗಾಂವಿಯ ಡಾ॥ ಎಸ್. ಸಿ. ನಂದಿಮಠರವರ ಭಾಷಣವೂ ಮತ್ತು ೯-೪೫ಕ್ಕೆ ಧಾರವಾಡದ ಶ್ರೀ॥ ಗುರುರಾವ್ ದೇಶಪಾಂಡೆಯವರ ವಚನ ಗಾಯನವೂ ನಡೆದುವು.

**ವೀರಶೈವ ಸೇವಾಸಮಾಜ : ಬೆಂಗಳೂರು**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಇದೇ ೭-೮-೯ನೆಯ ತಾರೀಖುಗಳಲ್ಲಿ ಶ್ರೀ ಬಸವೇಶ್ವರ ಜಯಂತಿ ವಿಜೃಂಭಣೆಯಿಂದ ನಡೆಯಿತು. ಶ್ರೀ ಸರ್ಪಭೂಷ ಶಿವಯೋಗೀಶ್ವರ ಮಠದಿಂದ ಪ್ರಭಾತ ಫೇರಿ (ನಗರ ಸಂಗೀರ್ತನೆ) ಉಪನ್ಯಾಸ, ಸಂಗೀತ, ಲಾವಣಿ ಮುಂತಾದ ಕಾರ್ಯಕ್ರಮಗಳು ಏರ್ಪಟ್ಟಿದ್ದುವು.

**ಮಿತ್ರಸಂಘ : ಬೆಂಗಳೂರು**

೨-೫-೪೦ನೆಯ ದಿನ ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀ॥ ಮತಿಘಟ್ಟ ಕೃಷ್ಣಮೂರ್ತಿಯವರು ನಾಡಪದಗಳನ್ನು ಕುರಿತು ಉಪನ್ಯಾಸ ಮಾಡಿದರು. ಕೆಲವು ಪದಗಳನ್ನೂ ಓದಿದರು. ಶ್ರೀ॥ ಎಸ್. ಎಸ್. ಮಾಳವಾಡರು ಅಧ್ಯಕ್ಷತೆ ವಹಿಸಿದ್ದರು. ೫-೫-೪೦ನೆಯ ದಿನ ಸಂಘದವರು ಸಭೆ ಸೇರಿ, ಸುಪ್ರಸಿದ್ಧ ಸಾಹಿತಿಗಳಾದ ಶ್ರೀ॥ ಎಂ. ಎಸ್. ಕಾಮತ್ ಅವರ ಮರಣಕ್ಕಾಗಿ ಸಂತಾಪಸೂಚಕ ನಿರ್ಣಯ ಮಾಡಿದರು. ಶ್ರೀ॥ ಡಿ. ಕೆ. ಭಾರದ್ವಾಜರು ಅಧ್ಯಕ್ಷರಾಗಿದ್ದರು. ಶ್ರೀ॥ ಸುಬೋಧ ರಾಮರಾಯರು ದಿವಂಗತರ ಗುಣಕಥನ ಮಾಡಿದರು.

**ಚನ್ನರಾಯ ಪಟ್ಟಣ : ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ೬ನೆಯ ವಾರ್ಷಿಕೋತ್ಸವ ಹಾಸನದ ಜಿಲ್ಲಾಧಿಕಾರಿಗಳಾದ ಶ್ರೀ॥ ಟಿ. ರಾಮಯ್ಯನವರ ಅಧ್ಯಕ್ಷತೆಯಲ್ಲಿ ೧೨ ಮತ್ತು ೧೩ನೆಯ ತಾರೀಖುಗಳಲ್ಲಿ ನಡೆಯುವುದು. ಶ್ರೀ॥ಗಳಾದ ಎನ್. ಶಿವರಾಮಶಾಸ್ತ್ರಿ, ಡಿ. ಕೃಷ್ಣಯ್ಯಂಗಾರ್, ಎಸ್. ವಿ. ಪರಮೇಶ್ವರ ಭಟ್ಟ ಮುಂತಾದ ವಿದ್ವಾಂಸರು ಉತ್ಸವ ಕಾರ್ಯಕಲಾಪಗಳಲ್ಲಿ ಭಾಗವಹಿಸುವರು.

**ಕರ್ನಾಟಕ ಸಂಘ : ಮಧುಗಿರಿ**

ಮೇಲ್ಕಂಡ ಸಂಘದವರ ಆಶ್ರಯದಲ್ಲಿ ಸಿದ್ದಾಪುರದಲ್ಲಿ 'ನಡೆಯುತ್ತಿರುವ ವಯಸ್ಕರ' ಶಿಕ್ಷಣ ಶಾಲೆಯ ವಿದ್ಯಾರ್ಥಿಗಳು ಕಳೆದ ೨೦ ದಿನಗಳ ಶಿಕ್ಷಣದಿಂದ ತೋರಿಸಿರುವ ಅಭಿವೃದ್ಧಿ ಆಶಾದಾಯಕವಾಗಿದೆ ಎಂದು ತಿಳಿಯಬಂದಿದೆ.

**ಕರ್ನಾಟಕ ಸಂಘ : ಸಿರಿಯಾಳಕೊಪ್ಪ**

ಮೇಲ್ಕಂಡ ಸಂಘದ ನಾಲ್ಕನೆಯ ವಾರ್ಷಿಕೋತ್ಸವ ಇದೇ ೧೦-೧೧ನೆಯ ತಾರೀಖುಗಳಲ್ಲಿ ಶ್ರೀಮಾನ್ ವಿ. ಸೀತಾರಾಮಯ್ಯ, ಎಂ.ಎ., ಅವರ ಅಧ್ಯಕ್ಷತೆಯಲ್ಲಿ ನಡೆಯಲು ಏರ್ಪಾಟಾಗಿರುವುದು. ಶ್ರೀಯುತರು ೧೧ನೆಯ ದಿನ 'ಕನ್ನಡ ಸಾಹಿತ್ಯ'ದ ವಿಚಾರವಾಗಿ ಭಾಷಣಮಾಡುವರು.

**ಕನ್ನಡ ಸಂಘ : ಮುಂಬಯಿ**

ಸರಕಾರಿ ಕೆಲಸದ ನಿಮಿತ್ತ ಮುಂಬಯಿಗೆ ತೆರಳಿದ್ದ ಮೈಸೂರು ಸರಕಾರದ ಫೈನಾನ್ಶಿಯಲ್ ಸೆಕ್ರೆಟರಿಯವರಾದ ಶ್ರೀ॥ ಎ. ಎನ್. ರಾಘವಾಚಾರ್ಯರನ್ನು ಮುಂಬಯಿ ಕನ್ನಡಿಗರ ಪರವಾಗಿ ಕನ್ನಡ ಸಂಘದ ಮತ್ತು ರಾಷ್ಟ್ರೀಯ ಕನ್ನಡ ಶಿಕ್ಷಣಸಂಸ್ಥೆಯ ಚಾಲಕರು ಬರಮಾಡಿಕೊಂಡು ಸತ್ಕರಿಸಿದರು. ಈ ಸತ್ಕಾರ ಸಮಾರಂಭಕ್ಕೆ ಶ್ರೀಗಳಾದ ದಿವಾನ್ ಬಹದ್ದೂರ್ ರಾಮಸ್ವಾಮಿಯವರು, ಎಂ. ಆರ್. ಗೋಪಾಲಾಚಾರ್ಯರು, ಜಿ. ಕೆ. ಚಿಟಗೇರಿಯವರು, ಹೈಕೋರ್ಟ್ ವಕೀಲರಾದ ಬಿ. ನಾರಾಯಣಸ್ವಾಮಿಯವರು, ಎಸ್. ಆರ್. ಎಸ್. ರಾಘವನ್‌ರವರು ಮುಂತಾಗಿ ಅನೇಕ ಮಹನೀಯರು ದಯಮಾಡಿಸಿದ್ದರು. ಶ್ರೀ॥ ರಾಘವಾಚಾರ್ಯರನ್ನು ದಿ॥ ಬ॥ ರಾಮಸ್ವಾಮಿಯವರು ಪರಿಚಯಮಾಡಿಕೊಟ್ಟು, ಅವರು ಮೈಸೂರಿನ ದೊಡ್ಡ ಮನೆತನದವರೆಂದೂ, ದೊಡ್ಡ ಅರ್ಥಶಾಸ್ತ್ರಜ್ಞರೆಂದೂ ಹೇಳಿದರು. ತರುವಾಯ ಶ್ರೀ॥ ರಾಘವಾಚಾರ್ಯರು ಮಾತನಾಡುತ್ತ, ಮುಂಬಯಿ ಕನ್ನಡಿಗರು ನಡೆಸಿಕೊಂಡುಬರುತ್ತಿರುವ ಪ್ರೈಮರಿ ಕನ್ನಡ ಶಾಲೆಯ ಬಗ್ಗೆ ಆನಂದವನ್ನು ವ್ಯಕ್ತಪಡಿಸಿ, ಅದು ಬೇಗ ಕನ್ನಡ ಕಾಲೇಜಾಗಲೆಂದು ಹಾರೈಸಿದರು.

### ದಿವಂಗತ ಎಚ್. ಸುಬಾನ್‌ರಾಯರು

ಕನ್ನಡ ಸಾಹಿತ್ಯ ಪರಿಷತ್ತು ಪ್ರಾರಂಭವಾದ ಕಾಲದಲ್ಲಿ ಇವರು ಅದರಲ್ಲಿ ಅತ್ಯಂತ ಆಸಕ್ತಿಯನ್ನು ತೋರಿಸಿದ, ಈಗ ವಕೀಲ ಕೆಲಸದಿಂದ ನಿವೃತ್ತರಾಗಿ ಬಳ್ಳಾರಿಯಲ್ಲಿರುವ ಶ್ರೀ॥ ಎಚ್. ತಿಮ್ಮಕೃಷ್ಣರಾಯರವರ ಜ್ಯೇಷ್ಠಪುತ್ರರು. ಕನ್ನಡ ವಾಕ್ಪಟಗಳನ್ನು ತಯಾರಿಸಬೇಕೆಂಬ ಕುತೂಹಲದಿಂದ ಬಳ್ಳಾರಿಯಲ್ಲಿ ನವನೀತ ಫಿಲ್ಮ್ಸ್ ಎಂಬ ಲಿಮಿಟೆಡ್ ಕಂಪನಿಯನ್ನು ಸ್ಥಾಪಿಸಿ ಅದಕ್ಕೆ ಜೀವವಾಗಿದ್ದರು. ಸಾಕಾದಷ್ಟು ಹಣ ಸೇರುವುದೆಂಬ ಆಶೆ ತೋರಿ ಬಂದು ಕಂಪೆನಿಯ ಕೆಲಸವನ್ನು ಮೊದಲು ಮಾಡುವ ಸಮಯದಲ್ಲಿ ಹಠಾತ್ತಾಗಿ ನ್ಯೂಮೋನಿಯ ಮತ್ತು ಪ್ಲೂರಸಿ ಇವುಗಳಿಂದ ಮಲಗಿದರು. ಕಳೆದ ೨೯ನೆಯ ಸೋಮವಾರ ಬೆಳಗ್ಗೆ ಆಸ್ಪತ್ರೆಯಲ್ಲೇ ದೈವಾಧೀನವಾದರು.

ಕನ್ನಡ ಪ್ರೇಮಿಗಳು, ಕನ್ನಡಕ್ಕಾಗಿ ತಮ್ಮ ಸರ್ವಸ್ವವನ್ನು ಒಪ್ಪಿಸಲು ಸಿದ್ಧರಾಗಿದ್ದರು. ತಮ್ಮಂದಿರನ್ನು ಮುದಿ ತಂದೆತಾಯಿಗಳನ್ನು ಬಿಟ್ಟು ತೆರಳಿದರು. ಜಗದೀಶ್ವರನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

---

೫೪—೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೩೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮೇ ೧೭, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಬಳ್ಳಿಗಾವೆ ಲಾವಣಿ

ಗಿರಿಸುತಾಸುತನ ಸ್ಮರಿಸುತ
ವಾಣಿಗೆರಗುತ
ಸುಧೆಯ ಸುರಿಸುತ
ಬೇಡುವೆನು ಸತತ
ನನ ನಾಲಿಗೆಯಲ್ಲಿ ಬರಿಸು ತಾಯೆ
ಸುಂದರ ಕವಿತಾ ॥ ೧ ॥

ಬಳ್ಳಿಗಾವೆ ನಮ್ಮ ಗಡಿನಾಡ
ಸೊಬಗು ಮಲೆನಾಡ
ಸಗ್ಗ ಸರಿಜೋಡ
ಕದಳಿವನ ನಿಬಿಡ
ಶಿವಶರಣರು ಸಗ್ಗವ ಹಳಿದುಬಂದು
ನೆಲೆಸುವ ನಾಡ ॥ ೨ ॥

ಶ್ರೀಗಂಧ ಕಾಡು ಮಕರಂದ
ಸರಸಿಯರವಿಂದ
ಸುರಗಿಸುಮವೃಂದ
ದುಂಬಿಗಳ ಬೃಂದ
ಶುಕ ಸಾರಸ ಮೈನಾ ಗಾನರವದ
ಕರ್ಣಾನಂದ ॥ ೩ ॥

ಈನಾಡು ಮೊದಲು ಕುಂತಳ
ಧಾರ್ಮಿಕರ ತಳ
ಕನ್ನಡಿಗ ದಳ
ಶೂರ ಬಲ್ಲಾಳ
ಕಲಿ ಹೊಯ್ಸಳರಾಯರ ಧವಳಕೀರ್ತಿ
ದಶ ದಿಕ್ಕುಗಳ ॥ ೪ ॥

ಗುಡಿಗಾರ ಜಕಣ ಬಲುಜಾಣ
ಕುಶಲ ಕೈಕರಣ
ಕನಡಿಯಾವರಣ
ಮಹಿಮ ಶಿವಶರಣ
ಸುರಲೋಕದ ಬಡಗಿ ಮೆಚ್ಚಿ
ತೂಗಿದನು ಗೋಣ ॥ ೫ ॥

ನವರತ್ನ ಬಿಗಿದ ನೆಲಗಟ್ಟ
ಮೇಲೆ ಗುಡಿಗಟ್ಟ
ಬಸವ ತಿದ್ದಿಟ್ಟ
ಒಳ್ಳೆ ಪಡಿಕಟ್ಟ
ನವಚೇತನ ಕೊಟ್ಟ ಮೇಲೆ
ಎದ್ದು ಬರುವಂತಿಟ್ಟ ॥ ೬ ॥

ಕಗ್ಗಲ್ಲ ಕೊರೆದ ಚಿತ್ತಾರ
ಬಳ್ಳಿಯಾಕಾರ
ನವಿಲ ಶೃಂಗಾರ
ಬಿಗಿದ ಪ್ರಾಕಾರ
ಹದಿನೆಂಟು ಪುರಾಣ ಶಾಸ್ತ್ರ
ಆರು ಶಾಸನ ವಿವರ ॥ ೭ ॥

ಯುಗ ಯುಗದಿ ಮಾಡಿದವತಾರ
ದುಷ್ಟ ಸಂಹಾರ
ನಿತ್ಯ ವ್ಯವಹಾರ
ಜಗದ ವ್ಯಾಪಾರ
ಅವು ಮರ್ತ್ಯರ ಕರೆದು ಹೇಳುತಾವೆ
ಸಾರಾಸಾರ ॥ ೮ ॥

ಕೇದಾರ ಲಿಂಗ ಮಾಲಿಂಗ
ಸದರು ಬಲುರಂಗ
ಗುಡಿಯು ಚದುರಂಗ
ದಡಿಯ ನೇದಂಗ
ಸಾಲ್ಗಂಬದ ಮೇಲ್ನಿಲುಗೊಂಬೆ
ರಂಬೆ ನಾಟ್ಯದ ರಂಗ ॥ ೯ ॥

ಚೌಕಟ್ಟ ಮಣಿಯ ಮೇಲ್ಕಟ್ಟ
ಬೋದ ಬಲಿದಿಟ್ಟ
ಮೇಲೆ ಸಮಕಟ್ಟ
ಏರಿಸಿದ ನಿಟ್ಟ
ಸಮಪಾದದ ಮೇಲ್ಕಡೆದಿಟ್ಟ ಶಿಲ್ಪಿ
ಸೂರಿಳಿಬಿಟ್ಟ ॥ ೧೦ ॥

ಎಲ್ಲಿ ನೋಡಲಲ್ಲಿ ದೇಗುಲ
ಮುಂದೆ ನಿಲುಗಲ್ಲ
ವೀರ ಸತಿಗಲ್ಲ
ಒಂದು ಎರಡಲ್ಲ
ಗಳಿಸಿಟ್ಟರು ಅವರ ಮೈಯ ಬೆವರ,
ನಮ್ಮ ಕಣ್ಣೀರ ॥ ೧೧ ॥

ಕಲಿ ಕಾಲ ನೋಡು ಬಲು ಕೆಟ್ಟ
ಬಕುತಿಯೆಳ್ಳಷ್ಟ
ಇಲ್ಲ ಜನ ದುಷ್ಟ
ನಮ್ಮ ಅದೃಷ್ಟ
ಗುಡಿ ಗುಂಡಾರಗಳ ಮುರಿದು ಹರಿದು
ಮಾಡ್ಯಾರು ನಷ್ಟ ॥ ೧೨ ॥

ಶಿವಶಿವ ನೋಡು ಬೇತಾಳ
ಇದರ ಈ ಗೋಳ
ಯಾವ ಮುಟ್ಠಾಳ
ಮಾಡಿದನು ಹಾಳ
ಭೂ ಮಾತೆಯ ಮೇಲೆ ಬಿದ್ದು ಬಿದ್ದು ಹೊರಳುವ ಬಾಳ ॥ ೧೩ ॥

ಹಲವಾರು ಹಾಳು ದೇಗುಲ
ದೇವ ಸಂಕುಲ
ಮುರಿದ ಕೈ ಕಾಲ
ಬಕ್ಕ ಬೋರಲ
ನೋಡು ತಾಯಿಯ ಒಡಲ ಉರಿಸುತಾವೆ ಕಣ್ಣಿನ ಜಲ ॥ ೧೪ ॥

ಪುಡಿಯಾಗಿದಾವೆ ಗುಡಿಯೆಲ್ಲ
ಒಡೆಯನಲ್ಲಿಲ್ಲ
ಗುಡಿಯ ಅಡಿಗಲ್ಲ
ಕಿತ್ತು ಮೆಟಗಲ್ಲ
ಗಡಿ ಬಾಂದಿನ ಕಲ್ಲ ಬೇಲಿ ಸಾಲು ದೇವರಿಗೆಲ್ಲ ॥ ೧೫ ॥

ತೆತ್ತೀಸ ಕೋಟಿ ದೇವರ
ಸುರಿವ ಕಣ್ಣೀರ
ಬೇಡುತಾವೆ ನೀರ
ಅಯ್ಯೋ ಹರಹರಾ
ನರಲೋಕದ ಮನುಜರಿಗಿಲ್ಲ, ಇಲ್ಲ ಕನಿಕರ ಚೂರ ॥ ೧೬ ॥

ನೋಡಬಾರ್ದು ಪಾಪ ಕಣ್ಣಾಗ
ಶಿವನು ಮಣ್ಣಾಗ
ಬಿಸಿಲು ಮಳೆಯಾಗ
ತುರಚಿ-ಮುಳ್ಳಾಗ
ಭವ ಬವಣೆಯ ಪಟ್ಟರೆ ಭವದ ಮುಕುತಿ ನಮಗಿನ್ನೆಂಗ ॥ ೧೭ ॥

ಭೂಮಾತೆ ಕರಳು ಕಲಕಲ
ಉಡುಗಿ ಕೈಕಾಲ
ನೋಡುತಾವೆ ಮ್ಯಾಲ
ಇಲ್ಲ ಎಡಬಲ
ಮುಖ ಬಾಡಿದ ಕಮಲ ನೆನೆಸಿಕೊಂಡು ತನ್ನ ಆ ಕಾಲ ॥ ೧೮ ॥

ಎಲ್ಲಿ ಹೋದುವೆನ್ನ ಹುಲಿಗಳ
ಸಿಂಹದ ಮರಿಗಳ
ಮತ್ತೆ ನಮ್ಮ ದಳ
ನಡುಗಲಿಳೆಯೇಳ
ಶ್ರೀ ಚಾಮುಂಡೇಶ್ವರಿ ಯದುಕುವರನ ಹರಸಮರನಾಗಿ
ಬಾಳಲಿ ಬಾಳ ॥ ೧೯ ॥

ನಾಲ್ಮಡಿ ಕೃಷ್ಣ ಭೂಕಾಂತ
ನಹುಷ ಮಾಂಧಾತ
ಕೀರ್ತಿ ವಿಖ್ಯಾತ
ಮರುಗಿ ಮನಸೋತ
ಹಳೆ ಗುಡಿಗೋಪುರಗಳ ಮತ್ತೆ ಜೀವಗೊಳಿಸಿದ ಖ್ಯಾತ ॥ ೨೦ ॥

ಕಾವೇರಿಯಿಂದ ಕರ್ನಾಟ
ಗೋದಾವರಿ ತಟ
ಯದುಪ ಸಮ್ರಾಟ
ಇಲ್ಲ ಸರಿಸಾಟ
ಆ ಕಾವೆ ಗೋದೆಯರೆ ಬಿಡಿಸಲೆಮ್ಮ ಮುಂದಿನ ಒಗಟ ॥ ೨೧ ॥

ಪದ ಮಾಡಿದಾನೆ ಒಳ್ಳೆಲಾರಿ
ಶೇನ ಸರಿಸೂರಿ
ಕಳೆಗೆ ಕಳೆಯೇರಿ
ಬಕುತ ಮಲ್ಲಾರಿ
ನೀ ಹಾಡಿದ ಪಾರಿ ಸಿರಿಯ ಬೆಳಕ ತೋರಲಿ ಸಾರಿ ॥ ೨೨ ॥

— ಮೂಗೂರು ಮಲ್ಲಪ್ಪ
ಸಹಾಯೋಪಾಧ್ಯಾಯ
ಮಾಧ್ಯಮಿಕ ಶಾಲೆ, ಸಿರಿಯಾಳಕೊಪ್ಪ.

# ಆ ರಾತ್ರಿ

(ಎಂ. ಎ. ನಾರಾಯಣಮೂರ್ತಿ, ಮೈಸೂರು)

ಅಬ್ಬಬ್ಬ! ಅದೆಂತಹ ರಾತ್ರಿ. ನೆನೆದರೆ ಈಗಲೂ ಮೈ ಜುಮ್ಮೆನ್ನುತ್ತದೆ. ನಾನು ಎಂದೂ ಜಾಗರಣೆ ಮಾಡಿದವನಲ್ಲ ಸ್ವಾಮಿ. ಶಿವರಾತ್ರಿ ದಿನವೇ ಆಗಲಿ, ಏಕಾದಶಿಯೇ ಆಗಲಿ ಜಾಗರಣೆ ಮಾಡಿ ಪುಣ್ಯ ಸಂಪಾದಿಸಿಕೊಳ್ಳುವ ಪಾಪಕ್ಕೆ ನಾನು ಇದುವರೆಗೂ ಹೋಗಿಲ್ಲ. ಆದರೆ, ಮೊನ್ನೆ ರಾತ್ರಿ ತಿಳಿಯಿತು ಜಾಗರಣೆಯ ಅನುಭವ. ಮೊನ್ನೆ ಏನೂ ಹರಿ ಹರದಿನ ಆಗಿರಲಿಲ್ಲ; ಆದರೂ ಜಾಗರಣೆ ಮಾಡಬೇಕಾಗಿ ಬಂತು. ನಿದ್ರೆ ಬರದೆ ಇದ್ದುದೇ ಅದಕ್ಕೆ ಕಾರಣ.

ಸಂಜೆ ಗಾಳಿ ಸೇವನೆಗಾಗಿ ಪಾರ್ಕಿಗೆ ಹೋಗಿದ್ದೆ. ಕೆರೆ ಏರಿಯ ಮೇಲೆ ಸುತ್ತಾಡಿ ರಾತ್ರಿ ಎಂಟು ಘಂಟೆಗೆ ಮನೆ ಸೇರಿದೆ. ಊಟವೂ ಆಯಿತು. ಮೇಷ್ಟರು ಕೊಟ್ಟಿದ್ದ 'ಮನೆಗೆಲಸ' (Home work) ಮಾಡೋಣವೆಂದು ಪುಸ್ತಕವನ್ನು ತೆಗೆದು ಅದರ ಮೇಲೆ ಪದರ ಪದರವಾಗಿ ಕೂತಿದ್ದ ಧೂಳನ್ನು ಊದಿದೆ. ಆದರೆ ಮನೆಗೆಲಸಕ್ಕೆ ಉತ್ತರ ಹೊಳೆಯಲೇ ಇಲ್ಲ. ಮರುದಿನ ಮುಂಜಾನೆಯೇ ಎದ್ದು ಕಿಟ್ಟಿ ಮನೆಗೆ ಹೋಗಿ ಅವನು ಬರೆದಿರುವುದನ್ನು 'ಕಾಪಿ' ಮಾಡಿಕೊಳ್ಳುವುದೆಂದು ತೀರ್ಮಾನಿಸಿ ಪುಸ್ತಕ ಮುಚ್ಚಿದೆ. ಗಂಟೆ ಹತ್ತು ಹೊಡೆದಿತ್ತು. ನಿದ್ರಾದೇವಿ ತಾನು ಪ್ರಸನ್ನಳಾಗುವ ಬಯಕೆಯನ್ನು ಆಕಳಿಕೆಯಿಂದ ಸೂಚಿಸಿದಳು. ಹಾಸಿಗೆ ಹಾಸಿ ಕಾಲು ಚಾಚಿ ಕಣ್ಮುಚ್ಚಿದೆ.

ಅವತ್ತು ಏಳೆಂಟು ಮೈಲಿ ಸುತ್ತಿ ಸುಸ್ತಾಗಿತ್ತು. ಬಹಳ ಆಯಾಸವಾಗಿದ್ದುದರಿಂದ ಹಾಸಿಗೆಯ ಮೇಲೆ ಬಿದ್ದೊಡನೆಯೇ ನಿದ್ದೆ ಹತ್ತುವುದೆಂದು ನಂಬಿದ್ದೆ; ನಿರೀಕ್ಷಿಸಿದ್ದೆ; ಆಶಿಸಿದ್ದೆ. ಆದರೆ ನನ್ನ ಆಸೆಗಳೆಲ್ಲವೂ ಪುಡಿ ಪುಡಿಯಾದುವು; ಗಾಳಿಯಲ್ಲಿ ಗೋಪುರವನ್ನು ಕಟ್ಟಿದಂತಾಯ್ತು; ಬಿಸಿಲ್ಗುದುರೆಯನ್ನೇರಿ ಸವಾರಿ ಮಾಡಿದಂತಾಯ್ತು. ನಿದ್ರಾದೇವಿ ಅದೇಕೋ ಪ್ರಸನ್ನಳಾಗಲಿಲ್ಲ, ಓಡಿ ಹೊರಟುಹೋದಳು. "ದೇವಿ, ಬಾ, ಓಡಬೇಡ........" ಎಂದು ಕರೆದೆ, ಅಂಗಲಾಚಿ ಬೇಡಿದೆ. ಆದರೆ ನೋಡಿ, ನಿದ್ರಾದೇವಿ ನಿಷ್ಕರುಣಿ, ಪಕ್ಷಪಾತಿ, ಹಿಂತಿರುಗದೆ ಹೊರಟುಹೋದಳು.

ಅಂದಿನವರೆಗೆ ನಾನು ಎಂದೂ ರಾತ್ರಿ ನಿದ್ರೆ ಕೆಟ್ಟಿದುದಿಲ್ಲ. ತಾವು ನಂಬದಿರಬಹುದು; ಅದರೆ, ಅದು ನಿಜವಾದ ಮಾತು. ಪುರೋಹಿತರ ಪುತ್ರನಾದ ನಾನು ಸಿನಿಮಾ ಮಂದಿರಕ್ಕೆ ಅಭಿಮುಖವಾಗಿ ಸೀನಿದವನು ಕೂಡ ಅಲ್ಲ. ರೈಲಿನಲ್ಲಿ ಪಶ್ಚಿಮವಾಹಿನಿ ಆಚೆ ಹೋದವನಲ್ಲ. ಪ್ರತಿದಿನವೂ ಹತ್ತು ಗಂಟೆಗೇ ನಿದ್ದೆ ಹತ್ತಿ ಬಿಡುತ್ತಿತ್ತು. ಆದರೆ ಅಂದು, ಜಗವೆಲ್ಲ ದಿನದ ದುಡಿತದಿಂದ ಬೇಸತ್ತು, ತನ್ನ ಕೆಲಸಕಾರ್ಯಗಳನ್ನು ಮರೆತು "ಬದುಕು ಬರಿಯ ದುಡಿತಕ್ಕೆ ಮಾತ್ರವಲ್ಲ" ಎಂದು ನಿದ್ರೆಯ ಸುಖವನ್ನು ಅನುಭವಿಸುತ್ತಿದ್ದಾಗ, ನಾನು ಮಾತ್ರ ಎಚ್ಚರವಾಗಿದ್ದೆ. ಬಡವನಿಂದ ಭಾಗ್ಯವಂತನವರೆಗೂ ಪಕ್ಷಪಾತವಿಲ್ಲದೆ ನೀಡಿ, ಆನಂದವನ್ನು ಕೊಡುತ್ತಿದ್ದ ನಿದ್ರಾದೇವಿ ಕೋಪದಿಂದಲೋ ಏನೋ, ಅಂದು ಆ ದಿವ್ಯಸುಖವನ್ನು ನನಗೆ ಕೊಡಲಿಲ್ಲ. ಎಂದೋ ಮಾಡಿದ ಪಾಪಕರ್ಮದ ಫಲವಿರಬಹುದೆಂದು ಅಂದುಕೊಂಡೆ. ನಿದ್ರೆ ಬರುವುದಕ್ಕೆ ಅದೇನೇನೋ ಪ್ರಯತ್ನಗಳನ್ನು ಮಾಡಿದೆ. ಕೈಯಿಂದ ಕಣ್ಣನ್ನು ಬಲವಾಗಿ ಮುಚ್ಚಿಕೊಂಡೆ. ಉಹುಂ! ನಿದ್ರೆ ಬರಲೇ ಇಲ್ಲ. ರಾತ್ರಿ ಕಾಫಿಯನ್ನು ಕುಡಿದರೆ ದೇವಿಗೆ ಕೋಪ ಬರುವುದೆಂದು ಕೇಳಿದ್ದೆ. "ಇಲ್ಲವೇ ಇಲ್ಲ, ಕುಂಭಕರ್ಣನ ಹಾಗೆ ನಿದ್ರೆಮಾಡುವ ನನಗೆ ಕಾಫಿಯಲ್ಲ, ಟೀಯನ್ನು ಕುಡಿದರೂ ದೇವಿ ಒಲಿಯುತ್ತಾಳೆ" ಎಂದು ಗೆಳೆಯರ ಎದುರು ನನ್ನ ಶಕ್ತಿಯನ್ನು ಹೊಗಳಿ ನಲಿದಿದ್ದೆ. ಮೊನ್ನೆ ನಾನೇನೂ ಕಾಫಿ ಕುಡಿದಿರಲಿಲ್ಲ; ಆದರೂ ನಿದ್ರೆ ಬರಲಿಲ್ಲ. ನನ್ನ ಜಂಬ ಕುಸಿದು ಕೆಳಗೆ ಬಿತ್ತು. ಇಂಗ್ಲಿಷಿನಲ್ಲಿ "Pride goeth before a fall" ಎಂದು ಒಂದು ಗಾದೆ ಇದೆ. ಅಂದು ನಾನು ಗೆಳೆಯರೆದುರಿಗೆ

ಕೊಚ್ಚಿಕೊಂಡ ಜಂಬದ ಫಲವೇ ಈ ಜಾಗರಣೆಯ ರೂಪವನ್ನು ತಾಳಿರಬಹುದೆಂದು ನನಗೆ ಭಾಸವಾಯಿತು. ಹರಕೆಗಳನ್ನು ಹೊತ್ತೆ; ಕಾಣಿಕೆಯನ್ನು ತಿರುವುದಾಗಿ ತೀರ್ಮಾನಿಸಿದೆ; ಆದರೂ ನಿಷ್ಕರುಣಿಯಾದ ದೇವಿ ನನ್ನ ಬೇಡಿಕೆಯನ್ನು ಕರುಣಿಸಲಿಲ್ಲ.

ಅಂದಿನ ಆ ಐದಾರು ಗಂಟೆಗಳ ಅನುಭವದಿಂದ, ನನಗೆ ಗೊರಕೆ ಹೊಡೆಯುವುದು ಅಂದರೆ ಏನೆಂದು ಗೊತ್ತಾಯಿತು. ಅದೂ ಅಲ್ಲದೆ, ನನ್ನ ಕಲ್ಪನಾಪ್ರಪಂಚದಲ್ಲಿ ಒಂದು ಹೊಸ ಅರ್ಥ ವನ್ನು ಅದರಲ್ಲಿ ಕಂಡೆ. ಶ್ರೀ|| ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು, ಗೊರಕೆ ಹೊಡೆಯುವುದನ್ನು 'ಪ್ರಶ್ನೆ-ಉತ್ತರ'ಕ್ಕೆ ಹೋಲಿಸಿದ್ದಾರೆ. ಅಂದು ಅದು ನನಗೆ ಚೆನ್ನಾಗಿ ಗೊತ್ತಾಯಿತು. ಅದಕ್ಕಿಂತ ಹೆಚ್ಚಾದ ಒಂದು ಅರ್ಥ ನನ್ನ ಮನಸ್ಸಿನಲ್ಲಿ ಮೂಡಿತು. 'ಗೊರಕೆ' ನಮ್ಮ ಜೀವನದ ಗೀತ. ನಮ್ಮ ಜೀವನದ ಕಷ್ಟಸುಖ ಗಳನ್ನು, ಏರುತಗ್ಗುಗಳನ್ನು, ಬೇವುಬೆಲ್ಲವನ್ನು ನುಂಗಿದ್ದವರೆಲ್ಲರೂ ಒಟ್ಟಿಗೆ ಹಾಡುತ್ತಿದ್ದಂತೆ ತೋರಿತು. ಆ ಹಾಡಿನಲ್ಲಿ, ಆಗಾಗ ವಿಚಿತ್ರವಾದ ಧ್ವನಿಗಳು ಕೇಳಬರುತ್ತಿದ್ದುವು. ತಮ್ಮ ಜೀವನದ ಮೊಗ್ಗು ಅರಳುವ ಮುನ್ನ ಬಾಡಿದ ಅಬಲೆಯರ, ವಿಧವೆಯರ ಚೀತ್ಕಾರ ಆಗಾಗ ಕರ್ಣಕಠೋರವಾಗಿ ಹೊರಡುತ್ತಿತ್ತು. ಆನಂದ ದಿಂದ ನಲಿಯುತ್ತ, ಗಹಗಹಿಸಿ ನಗುತ್ತಿರುವ ಭೋಗಿಗಳ ಕೋಲಾಹಲದ ಕೂಗು ಆ ಗೊರಕೆಯಲ್ಲಿ ಬೆರಕೆಯಾಗಿತ್ತು. ನರಳುವ ರೋಗಿಯ ರೋದನ, ಮುದ್ದುಮೂರ್ತಿಯಂಥ ಮಗುವಿನ ಅಳು—ಹೀಗೆ ಸೃಷ್ಟಿಯ ಸರ್ವಸ್ವವನ್ನೂ ಆ ಗೀತದಲ್ಲಿ ಯಾವುದೋ ಒಂದು ಶ್ರುತಿಗೆ ಸರಿಯಾಗಿ, ತಾಳಕ್ಕೆ ತಕ್ಕಂತೆ, ಅವರೆಲ್ಲರೂ ಹಾಡು ತ್ತಿದ್ದಂತೆ ನನಗೆ ತೋರಿತು.

ಹೀಗೆ ಆಲೋಚನಾ ತರಂಗಗಳು ನನ್ನ ಮನದಲ್ಲಿ ಮೂಡಿ, ಮಾಸಿಹೋಗುತ್ತಿರುವಾಗ, ನಮ್ಮ ಮನೆಯ ಗಡಿಯಾರ ಗಂಟೆ ಹೊಡೆಯವುದಕ್ಕೆ ಪ್ರಾರಂಭಿಸಿತು. ನಮ್ಮ ಮನೆಯ ಗಡಿಯಾರದ ನಾದ ಇಂಪಾಗಿರುತ್ತದೆ; ಜಲತರಂಗದ ಹಾಗೆ. ಅದನ್ನು ಎಣಿಸಿದೆ. ಒಂದು... .... ಎರಡು.... .... ಹನ್ನೆರಡು! ಹನ್ನೆರಡು ಗಂಟೆ ಆದರೂ ನಿದ್ರೆಯೇ ಬರಲಿಲ್ಲ. ಅಷ್ಟರಲ್ಲಿ ಪಕ್ಕದ ಮನೆ ಗಡಿಯಾರ ಗಂಟೆ ಹೊಡೆಯುದಕ್ಕೆ ಪ್ರಾರಂಭಿಸಿತು, ನಾಯಕನ ತುತ್ತೂರಿಯ ಶಬ್ದವನ್ನು ಕೇಳಿದೊಡನೆಯೇ, ಒಕ್ಕೂಗಿನಲ್ಲಿ ಇತರರು ಜಯಭೇರಿ ಮಾಡುವಂತೆ, ನಮ್ಮ ಹಿಂದಿನ ಮನೆ ಗಡಿಯಾರ, ಆಚೆ ಮನೆಯದು, ಎದುರು ಮನೆಯದು—ಎಲ್ಲವೂ ಒಟ್ಟಿಗೆ 'ಹನ್ನೆರಡು' ಹೊಡೆದುವು.

ಆಗ ನನಗೆ ಅನ್ನಿಸಿತು. ಈ ಪ್ರಪಂಚದಲ್ಲಿ ಆ ಗಡಿಯಾರ ಗಳನ್ನು ಹೊರತು ಇನ್ನಾರೂ ಗೆಳೆಯರೇ ಇಲ್ಲ ಮತ್ತು ಅಲ್ಲ ಎಂದು. "ಸಮಯಕ್ಕೊದಗಿದವನೇ ಸ್ನೇಹಿತ" ಎಂದು ನಾಣ್ಣುಡಿ ಒಂದು ಉಂಟು. ಅಂದಿನ ರಾತ್ರಿ ನನ್ನ ಸ್ನೇಹಕ್ಕೆ, ಸಹಾಯಕ್ಕೆ ಒಬ್ಬರೂ ಒದಗಲಿಲ್ಲ. ನಿದ್ರೆಯಿಲ್ಲದೆ ಒದ್ದಾಡುತ್ತಿದ್ದ ನನ್ನನ್ನು ನೋಡಿ "ಅಯ್ಯೋ! ಪಾಪ!" ಎಂದು ಅನ್ನುವವರು ಯಾರೂ ಇರಲಿಲ್ಲ. ಸಮಾಧಾನದ ನಾಲ್ಕು ಮಾತು—ಹೆಚ್ಚೇನು ಬೇಡ—ಹೇಳಲು ನನ್ನ ಪ್ರಾಣಸ್ನೇಹಿತರೆನಿಸಿಕೊಂಡಿದ್ದ ರಾಮು, ಕಿಟ್ಟು, ಶೀನು—ಒಬ್ಬರೂ ಬರಲಿಲ್ಲ. ಎಲ್ಲರೂ ತಮ್ಮ ಸೌಖ್ಯದ ಸವಿಯನ್ನು ಉಣ್ಣುವುದರಲ್ಲೇ ತಲ್ಲೀನರಾಗಿದ್ದರು. "ನಾವು ಲೋಕಕ್ಕೆ ಬರುವುದು ಒಂಟಿಯಾಗಿ; ಹೋಗುವುದೂ ಹಾಗೆಯೇ" ಎಂಬ ಮಹಾತತ್ತ್ವ ಅರ್ಥವಾಯಿತು. ಆದರೆ ನೋಡಿ—ಆ ಗಡಿಯಾರ ಗಳು ನನ್ನ ಸ್ನೇಹಿತರಿಗಿಂತ ಸಾವಿರ ಪಾಲು ಮೇಲಲ್ಲವೇ? ಒಬ್ಬಂಟಿಗನಾದ ನನಗೆ, "ಹೆದರಬೇಡ, ನಾವು ದಿನವೂ ಜಾಗರಣೆ ಮಾಡುತ್ತೇವೆ"ಎಂದು ಧೈರ್ಯಕೊಟ್ಟು 'ಅಯ್ಯೊ! ಪ್ರಾಣಿ ನಿನ್ನನ್ನು ನೋಡಿದರೆ ನಾಕು ತೊಟ್ಟು ಕಣ್ಣೀರು ಬರುತ್ತೆ ಕಣೋ! ಎಂದು ನಾಲ್ಕು ಹೊಡೆದು—"ಪರವಾಗಿಲ್ಲ ಮಗೂ, ಆಗಲೇ ನಾಲ್ಕು ಗಂಟೆ. ಹಾಗೂ ಹೀಗೂ ಒದ್ದಾಡೋಣ—ಇನ್ನೇನು ಬೆಳಗಾ ಗುತ್ತೆ" ಎಂದು ಬೆನ್ನು ತಟ್ಟುವ ಆ ಗಡಿಯಾರಗಳು ನಿಜವಾದ ಗೆಳೆಯರು ಸ್ವಾಮಿ!

* * * *

ಕಣ್ಣು ಬಿಟ್ಟೆ. ಗಡಿಯಾರ 'ಏಳು' ಅಂತ ನನ್ನನ್ನು ಎಬ್ಬಿಸು ತ್ತಿತ್ತು. ಎದ್ದೆ.

---

## ಹಾಗಲವಾಡಿಯ
## ಶ್ರೀ ಕೃಷ್ಣದಾಸರು (ವೇಣುಗೋಪಾಲದಾಸರು)

(ಕಡೂರು ಶ್ರೀಪಾದ: ಬೆಂಗಳೂರು)

ಇದು ದಾಸಕೂಟದ ಕನ್ನಡ ನುಡಿಯ ಭಕ್ತರೊಬ್ಬರ ಲಘು ಪರಿಚಯ. ಈ ದಾಸಕೂಟದವರ ಕನ್ನಡ ನುಡಿಯ ಸೇವೆ ಮತ್ತು ಸಾಹಿತ್ಯಸೃಷ್ಟಿ ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಶ್ರೀ ಪುರಂದರ ದಾಸರಿಂದ ಆರಂಭವಾಗಿ ಕನಕದಾಸರು, ಜಗನ್ನಾಥದಾಸರು, ಶ್ರೀಪಾದದಾಸರು, ವ್ಯಾಸರಾಯರು ಮೊದಲಾದವರಿಂದ ಪೋಷಿತವಾಗಿ ಇಂದಿಗೂ ಬೆಳೆದುಕೊಂಡು ಬರುತ್ತಿದೆ ಮತ್ತು ಕನ್ನಡ ಸಾಹಿತ್ಯ ಭಂಡಾರದಲ್ಲಿ ವೀರಶೈವರ ವಚನ ಸಾಹಿತ್ಯದಂತೆ ಈ ದಾಸಕೂಟದವರ ಸಾಹಿತ್ಯಕ್ಕೂ ಒಂದು ಪ್ರತ್ಯೇಕ ಸ್ಥಾನವೇ ಕಲ್ಪಿತವಾಗಿದೆ. ಈ ದಾಸ ಕೂಟದವರು ಸಾಹಿತ್ಯಸೇವೆಯ ದೃಷ್ಟಿಯಿಂದ ಸಾಹಿತ್ಯ ಸೃಷ್ಟಿಸಿಲ್ಲ; ಸಾಹಿತ್ಯವನ್ನು ರಚಿಸುತ್ತೇವೆ ಎಂದು ಅವರು ಕೃತಿಗಳನ್ನು ಹಾಡಿಲ್ಲ. ಒಮ್ಮೆ ಶ್ರೀಮಾನ್ ಮಾಸ್ತಿಯವರು ಹೇಳಿದಂತೆ, ಸಾಮಾನ್ಯಜನತೆಗೆ "ಧರ್ಮವನ್ನು ಹೇಳಲು, ನೀತಿಯನ್ನು ತಿಳಿಸಲು, ತಿಳಿವಳಿಕೆಯನ್ನು ಹರಡಲು, ತಮ್ಮ ಜನ್ಮ ಸಫಲವಾಗಲು, ತಮ್ಮ ಮನಸ್ಸನ್ನು ತೃಪ್ತಿ ಪಡಿಸಲು ಬರೆದರು. ಅದು ಸಾಹಿತ್ಯವಾಯಿತು." ಸಂಸ್ಕೃತವನ್ನೂ ಪಂಡಿತರ ಕನ್ನಡವನ್ನೂ ತಿಳಿಯದ ಸಾಮಾನ್ಯ ಜನತೆಯಲ್ಲಿ ಜ್ಞಾನಪ್ರಸಾರ ಮಾಡಲು ತಮ್ಮ ತಾಯ್ನುಡಿಯಾದ ತಿಳಿಗನ್ನಡದಲ್ಲಿ ತಮ್ಮ ಜ್ಞಾನಾನುಭವಗಳನ್ನು ಹಾಡಿ ಅತ್ಯಮೂಲ್ಯವಾದ ಸಾಹಿತ್ಯ ಸೇವೆ ಮಾಡಿದ್ದಾರೆ; ಮತ್ತು ಮೂಢಜನತೆಯನ್ನು ಭಗವಂತನ ಸಾಮಿಪ್ಯಕ್ಕೆ ಒಯ್ಯಲು ಪ್ರಯತ್ನಿಸಿದ್ದಾರೆ. ಈ ಬಗೆಯ ಸಾಹಿತ್ಯವನ್ನು ಸೃಷ್ಟಿಸಿದವರಲ್ಲಿ ನಮ್ಮ ಸಾಹಿತಿಗಳ ಮತ್ತು ಅಚ್ಚುಕೂಟದ ಅವಗಾಹನೆಗೆ ಬಂದವರು ಕೆಲವರಾದರೆ ಬಾರದವರು ಅನೇಕ ಮಂದಿ ಇದ್ದಾರೆ. ಅವರ ಕೃತಿಗಳನ್ನು ಪರಿಶೋಧಿಸಿ ಹೊರಗೆಡವಿ ಕನ್ನಡ ಸಾಹಿತ್ಯ ಭಂಡಾರವನ್ನು ಅಭಿವೃದ್ಧಿಗೊಳಿಸುವುದು ಎಲ್ಲ ಕನ್ನಡ ಸೇವಕರ ಕರ್ತವ್ಯವಾಗಿದೆ. ಹೀಗೆ ಕನ್ನಡ ಸಾಹಿತಿಗಳ ಮತ್ತು ಜನತೆಯ ಅರಿವಿಗೆ ಬಾರದವರಲ್ಲಿ ಹಾಗಲವಾಡಿಯ ಶ್ರೀ ವೇಣುಗೋಪಾಲ ದಾಸರೂ ಒಬ್ಬರು. ಇವರ ಮೂಲನಾಮಧೇಯ ಕೃಷ್ಣರಾಯರೆಂದು. ಆಮೇಲೆ ಇವರನ್ನು ಕೃಷ್ಣದಾಸರೆಂದು ಕರೆಯುತ್ತಿದ್ದರು. ಇವರು ಸ್ವಂತ ಇಚ್ಛೆ ಯಿಂದ ಇಟ್ಟುಕೊಂಡ ಅಂಕಿತನಾಮ ಶ್ರೀ ವೇಣುಗೋಪಾಲ ದಾಸರೆಂದು. ಇವರ ಕೃತಿಗಳೆಲ್ಲ ಶ್ರೀವೇಣುಗೋಪಾಲನ ಅಂಕಿತದವು.

ಇವರು ತುಮಕೂರು ಜಿಲ್ಲೆಯ ಹಾಗಲವಾಡಿ ಸ್ಥಳದವರು. ಹಾಗಲವಾಡಿ ಶ್ರೀ|| ಚಿದಂಬರಯ್ಯನವರ ಹೊಸಕೆರೆಗೆ ಹತ್ತು ಮೈಲು ದೂರದಲ್ಲಿದೆ, ಶ್ರೀ|| ತಿ. ನಂ. ಶ್ರೀಕಂಠಯ್ಯನವರ ತೀರ್ಥಪುರಕ್ಕೆ ಆರು ಮೈಲಿ ದೂರದಲ್ಲಿದೆ; ಮತ್ತು ಸುಪ್ರಸಿದ್ಧ 'ಹಾಗಲವಾಡಿಗೆ ಹೋದರೆ ಗೀದರೆ.......' ಗಾದೆಯ ಪಾಳೆಯಗಾರರ ಕೋಟೆಯುಳ್ಳ ಊರು. ದಿವಂಗತ ಶ್ರೀ|| ಎಂ. ಎಸ್. ಪುಟ್ಟಣ್ಣನವರು ಈ ಹಾಗಲ ವಾಡಿಯ ಪಾಳೆಯಗಾರರ ಚರಿತ್ರೆ ಬರೆದಿದ್ದಾರೆ. ದಾಸರ ಜನ್ಮಸ್ಥಳ ಕೋಲಾರ ಜಿಲ್ಲೆಯ ಶಿಡ್ಲಘಟ್ಟ. ಉಳಿದ ಹೆಚ್ಚುಮಂದಿ ದಾಸಕೂಟ ದವರಂತೆ ಇವರೂ ವೈಷ್ಣವರು; ದೇಶಸ್ಥರು. ಇವರ ತಂದೆ ಶಿಡ್ಲ ಘಟ್ಟದ ಗೋವಿಂದರಾಯರು; ತಾಯಿ ಲಕ್ಷ್ಮೀಬಾಯಿ. ಇವರು ಹಾಗಲ ವಾಡಿಯ ಪ್ರಾಚೀನ ಪಾಳೆಯಗಾರರ ಪ್ರಧಾನರಾದ ವೆಂಕಪ್ಪಯ್ಯನವರ* ವಂಶದ ನಾರಾಯಣರಾಯರಿಗೆ ದತ್ತುಪುತ್ರರಾಗಿ ಬಂದರು. ಅಂದಿನಿಂದ

---

* ಇವರ ವಿಷಯ ದಿವಂಗತ ಎಂ. ಎಸ್. ಪುಟ್ಟಣ್ಣನವರ ಹಾಗಲವಾಡಿ ಪಾಳೆಯಗಾರರ ಚರಿತ್ರೆಯಲ್ಲಿ ಕೊಟ್ಟಿರುವ ಒಂದು ಶಾಸನದಲ್ಲಿ ನಿರೂಪಿಸಲ್ಪಟ್ಟಿದೆ.

(೨೬೮ನೆಯ ಪುಟಕ್ಕೆ)

### ಕನ್ನಡ ಕವಿ ಸೂಕ್ತಿ

ರಸೆಯೊಳ್ ರಸವತ್ಕನಿತೆಯ
ಸುಸಿರಲ್ ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ

—ಷಡಕ್ಷರಿ



. ಶುಕ್ರವಾರ, ಮೇ ೧೭, ೧೯೪೦

## ದಕ್ಷಿಣದ ಭಾಷೆಗಳಿಗೆ ಒಂದು ಪಾರಿಭಾಷಿಕ ಶಬ್ದಕೋಶ

ಇದೇ ತಿಂಗಳು ೧೧ನೆಯ ತಾರೀಕಿನ **ಹಿಂದೂ** ಪತ್ರಿಕೆಯಲ್ಲಿ ಒಂದು ಸುದ್ದಿ ಪ್ರಕಟವಾಗಿದೆ: ದಕ್ಷಿಣ ಭರತಖಂಡದ ಭಾಷೆಗಳಲ್ಲಿ ಶಾಸ್ತ್ರಗಳಿಗೆ ಸಂಬಂಧಿಸಿದ ಪರಿಭಾಷೆಯ ಪದಗಳನ್ನು ಗೊತ್ತುಮಾಡುವುದು ಎಷ್ಟು ಸಾಧ್ಯ ಎಂಬ ವಿಷಯವನ್ನು ಪರಿಶೀಲಿಸಲು ಮದರಾಸ್ ಸರಕಾರ ಒಂದು ಸಮಿತಿಯನ್ನು ಏರ್ಪಡಿಸುವುದಂತೆ. ಬಹುತರ, ಆ ಸಮಿತಿಗೆ, ಮಾನ್ಯರಾದ ರೈಟ್ ಆನರಬಲ್ ಶ್ರೀ॥ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳವರು ಅಧ್ಯಕ್ಷರಾಗಿಯೂ, ಪ್ರೆಸಿಡೆನ್ಸಿ ಕಾಲೇಜಿನ ಪ್ರೊ॥ ಕೆ. ಸ್ವಾಮಿನಾಥನ್ ಅವರು ಕಾರ್ಯದರ್ಶಿಯಾಗಿಯೂ ನೇಮಕವಾಗುವುದು ಸಂಭವ; ಮದರಾಸು, ಆಂಧ್ರ, ಅಣ್ಣಾಮಲೈ ವಿಶ್ವವಿದ್ಯಾನಿಲಯಗಳ ಪ್ರತಿನಿಧಿಗಳನ್ನೂ, ಇತರ ಹೆಸರಾದ ಶಿಕ್ಷಣಶಾಸ್ತ್ರಜ್ಞರನ್ನೂ ಸಮಿತಿಯ ಸದಸ್ಯರಾಗಿರಲು ಕೇಳಿಕೊಳ್ಳಲಾಗುವುದು ಎಂದೂ ತಿಳಿದುಬರುವುದು. ಸದಸ್ಯರು ಯಾರು ಯಾರು, ಸಮಿತಿ ಪರಿಶೀಲಿಸಬೇಕಾದ ಸಂಗತಿಗಳು ಯಾವುವು ಎಂಬುದನ್ನು ಬೇಗನೆ ಪ್ರಕಟಸಲಾಗುವುದೆಂದೂ ಅಲ್ಲಿ ತಿಳಿಸಿದೆ.

ಭರತಖಂಡಕ್ಕೆಲ್ಲ ಶಾಸ್ತ್ರದ ಪರಿಭಾಷೆ ಸಮಾನವಾಗಿರಬೇಕು ಎಂದು ಆ ಸಂಬಂಧದಲ್ಲಿ ಈವರೆಗೆ ಅನೇಕ ಪ್ರಯತ್ನಗಳು ನಡೆದಿವೆ. ಉತ್ತರದ ಭಾಷೆಗಳಿಗೂ ದಕ್ಷಿಣದವಕ್ಕೂ ಅನೇಕ ಮೂಲ ವ್ಯತ್ಯಾಸಗಳೇ ಇರುವುದೂ ಅವುಗಳ ಮಾರ್ಗ ಬೇರೆ ಬೇರೆಯಾಗಿರುವುದೂ ಎಲ್ಲರಿಗೂ ತಿಳಿದಿರುವ ಸಂಗತಿ. ರಾಜಕೀಯರಂಗದಲ್ಲಿ ದ್ರಾವಿಡ ಆರ್ಯ ವರ್ಗಗಳಿಗೆ ಸಂಬಂಧಿಸಿದ ಕೋಟಲೆಗಳನ್ನು ಎಬ್ಬಿಸಿ, ಸಾಮಾಜಿಕ, ಧಾರ್ಮಿಕ ಜೀವನಗಳಲ್ಲಿ ಆ ಬಗೆಗೆ ಭೇದಭಾವ ಉಂಟುಮಾಡಿ, ದೇಶದ ಮುನ್ನಡೆಗೆ ಅಡ್ಡಿ ತಂದು, ಜನವನ್ನು ಬೇರೆ ಮಾಡುವ ಪ್ರವೃತ್ತಿಗಳನ್ನು ತಡೆಯುವುದು ಅತ್ಯಗತ್ಯವೆಂಬುದು ನಿಜ. ಆದರೆ ದೇಶವಲ್ಲಿ ಬೇರೆ ಬೇರೆ ಬುಡಕಟ್ಟುಗಳಿಗೆ ಸೇರಿದ ಭಾಷೆಗಳು ಬಹುಕಾಲದಿಂದ ನಡೆದುಬಂದಿರುವಾಗ—ಅವುಗಳ ವ್ಯಕ್ತಿತ್ವದಲ್ಲಿಯೇ ವಿಶೇಷಗಳಿರುವಾಗ—ಅವುಗಳ ಜೀವಗುಣಕ್ಕೆ ಹೊಂದಿಕೆಯಾಗತಕ್ಕ ರೀತಿಗಳಲ್ಲಿಯೆ ಭಾಷೆಗಳನ್ನು ಬೆಳಸಬೇಕಾಗುವುದು. ಹಾಗಿಲ್ಲದಿದ್ದರೆ ಬರವಣಿಗೆ ವಿಕಾರವಾಗಿ ನುಡಿಯ ಹದ ಕೆಡುವುದು. ಸಂಸ್ಕೃತಜನ್ಯವಾದ ಉತ್ತರ ಹಿಂದುಸ್ಥಾನದ ಭಾಷಾ ಮರ್ಯಾದೆಗಳಿಗೆ ಹೊಂದಬಹುದಾದ ಒಂದು ರೀತಿ ದಕ್ಷಿಣದವರಿಗೆ ಹೊಂದದೆ ಹೋಗಬಹುದು. ಸೃಷ್ಟಿಸಾಹಿತ್ಯದ ವಿಚಾರದಲ್ಲಿ ಇದು ಪೂರ್ತಿನಿಜವೆಂದು ಒಪ್ಪಿಕೊಳ್ಳಬಹುದಾದರೂ ಈ ತತ್ವ ಶಾಸ್ತ್ರಪರಿಭಾಷೆಯ ನಿರ್ಮಾಣಕ್ಕೆ ಎಷ್ಟು ಒಪ್ಪುವುದು, ಬಿಡುವುದು ಎಂಬಂಶವನ್ನು ಪರ್ಯಾಲೋಚಿಸಿ ಎಲ್ಲರಿಗೂ ಸಮಾನವಾದ ಏರ್ಪಾಡೊಂದನ್ನು ಕೈಕೊಳ್ಳಬೇಡವೆ ಎಂದು ಪ್ರಶ್ನೆ ಏಳುತ್ತದೆ—ಇವೆಲ್ಲವನ್ನೂ ಕೂಲಂಕಷವಾಗಿ ವಿಚಾರಮಾಡಿ ತೀರ್ಮಾನಿಸುವ ಕಾಲ ಈಗ ಬಂದಿದೆ. ಇದಲ್ಲದೆ, ವಿಜ್ಞಾನದ ಮಾತುಗಳನ್ನು ಪ್ರಪಂಚಕ್ಕೆಲ್ಲ ಒಂದೇ ರೂಪದಲ್ಲಿ ಇಟ್ಟುಕೊಳ್ಳುವುದು ಮೇಲೆಂದು ಅನೇಕರು ಅಭಿಪ್ರಾಯಪಡುತ್ತಾರೆ. ತತ್ವದಲ್ಲಿ ಅದನ್ನು ಒಪ್ಪಿಕೊಂಡರೂ ಹೊರದೇಶದ ಪದಗಳು ಬರೆವಣಿಗೆಗೆ ಸುಲಭವಾಗಿ ಹೊಂದಿಕೊಳ್ಳುವುದಿಲ್ಲವಾದ್ದರಿಂದ ದೇಶಭಾಷೆಗಳಲ್ಲಿ ಅವಕ್ಕೆ ಪ್ರತಿಪದಗಳನ್ನು ನಿರ್ಮಾಣಮಾಡಿಕೊಳ್ಳಬೇಕು; ದೇಶಭಾಷೆಗಳಲ್ಲಿ ಬಳಸಬಲ್ಲ ಶಬ್ದಸಂಪತ್ತಿಯನ್ನು ಉಂಟುಮಾಡಬೇಕು ಎಂಬ ಪ್ರಯತ್ನವೇನೊ ಈಗ ಎಲ್ಲ ಕಡೆಯೂ ನಡೆಯುತ್ತಿರುವುದು. ಇದಕ್ಕೆ ಸಂಬಂಧಿಸಿದ ಬಗೆಬಗೆ ಸಮಸ್ಯೆಗಳನ್ನೂ ಪರಿಶೀಲಿಸಬೇಕಾಗಿದೆ.

ಸಮಸ್ತ ಭರತಖಂಡಕ್ಕೆ ಒಂದು ಕಟ್ಟು ಬರುವವರೆಗಾದರೂ ದಕ್ಷಿಣ ಭರತಖಂಡಕ್ಕೆಲ್ಲ ಒಪ್ಪಿಗೆಯಾಗಬಲ್ಲ ಒಂದು ಸಂಪ್ರದಾಯವನ್ನೂ ಒಂದು ಪ್ರಯೋಗ ವ್ಯವಸ್ಥೆಯನ್ನೂ ಮಾಡಿಕೊಳ್ಳುವುದು ಅಗತ್ಯವಾಗಿದೆ. ದಕ್ಷಿಣ ಭಾಷೆಗಳಾದ ತೆಲುಗು, ತಮಿಳು, ಕನ್ನಡ, ಮಲೆಯಾಳ ಈ ಭಾಷೆಗಳಲ್ಲಿ ಈಗಾಗಲೇ ಶಾಸ್ತ್ರಸಾಹಿತ್ಯ ಹುಟ್ಟಿದೆ. ಶಿಕ್ಷಣ ಸಂಸ್ಥೆಗಳಲ್ಲಿಯೂ ಗ್ರಂಥಗಳಲ್ಲಿಯೂ ಉಪನ್ಯಾಸ ವೇದಿಕೆಗಳ ಮೇಲೆಯೂ ಒಂದೊಂದು ಕಡೆ ಒಂದೊಂದು ಬಗೆಯ ಪ್ರಯೋಗ ಕಾಣುತ್ತಿರುವುದು. ಇವುಗಳನ್ನೆಲ್ಲ ಪರಿಶೀಲಿಸುವುದು ಪರಿಭಾಷಾ ಸಮಿತಿಯವರ ಮುಖ್ಯ ಕೆಲಸವಾಗುತ್ತದೆ. ದಕ್ಷಿಣ ಭಾಷೆಗಳನ್ನೆಲ್ಲ ಗಮನಕ್ಕೆ ತಂದುಕೊಳ್ಳುವಾಗ ದಕ್ಷಿಣದ ಎರಡು ದೊಡ್ಡ ಬ್ರಿಟಿಷ್ ಪ್ರಾಂತಗಳಲ್ಲಿಯೂ ಇತರ ದೇಶೀಯ ಸಂಸ್ಥಾನಗಳಲ್ಲಿಯೂ ಮುಖ್ಯ ಭಾಷೆಯಾಗಿರುವ, ಒಂದೂವರೆ ಕೋಟಿ ಜನಸಂಖ್ಯೆಯವರು ಆಡುವ, ಎರಡು ಸಾವಿರ ವರುಷದ ಚರಿತ್ರೆ ಉಳ್ಳ ಕನ್ನಡ ಭಾಷೆಗೆ ಸಂಬಂಧಿಸಿದಂತೆಯೂ ಈ ಪರಿಶೀಲನೆ ನಡೆಯಬೇಕಾಗುತ್ತದೆ. ಮದರಾಸು ಆಧಿಪತ್ಯದಲ್ಲಿ ಕನ್ನಡಕ್ಕೂ ತಕ್ಕ ಸ್ಥಾನ ದೊರೆಯಬೇಕು; ಮತ್ತು ದಕ್ಷಿಣದ ಭಾಷೆಗಳಿಗೆಲ್ಲ ಸಂಬಂಧಪಟ್ಟ ಕಾರ್ಯವನ್ನು ಕೈಕೊಳ್ಳುತ್ತಿರುವಾಗ ಮೈಸೂರು ವಿಶ್ವವಿದ್ಯಾನಿಲಯ ಮತ್ತು ಬೊಂಬಾಯಿ ವಿಶ್ವವಿದ್ಯಾನಿಲಯ ಈ ಎರಡರಿಂದಲಾದರೂ ಕನ್ನಡದ ಪರವಾಗಿ ಸಲಹೆ ಕೊಡಬಲ್ಲ ವಿದ್ವಾಂಸರನ್ನು ಸಮಿತಿಯಲ್ಲಿ ಸದಸ್ಯರಾಗಿ ಸೇರಿಸುವುದು ಅತ್ಯಂತ ಆವಶ್ಯಕ. ವಿಶ್ವವಿದ್ಯಾನಿಲಯಗಳವರಿಗೆ ಒಂದು ಬಗೆಯ ಅನುಭವ, ಪಾಂಡಿತ್ಯ ಇದ್ದರೆ ಇತರ ಬಗೆಯ ಶಿಕ್ಷಣ ಶಾಖೆಗಳಲ್ಲಿಯ ವಿದ್ವಾಂಸರಿಗೆ ಇನ್ನೊಂದು ಬಗೆಯ ಅನುಭವವೂ ಪ್ರಜ್ಞೆಯೂ ಇರುತ್ತವೆ. ಆದುದರಿಂದ ಕನ್ನಡಕ್ಕೆ ಸಂಬಂಧಿಸಿದಂತೆ ಈ ಎರಡೂ ಬಗೆಯ ಅನುಭವವಿಟ್ಟುಕೊಂಡು ಅಧಿಕಾರವಾಣಿಯಿಂದ ವಿಷಯ ವಿಮರ್ಶೆಯಲ್ಲಿ ನೆರವಾಗಬಲ್ಲ ವಿದ್ವಾಂಸರನ್ನು ಖಂಡಿತವಾಗಿ ಈ ಸಮಿತಿಯ ಸದಸ್ಯರಾಗಿ ಸೇರಿಸಿಕೊಳ್ಳ

ಬೇಕೆಂದು ನಾವು ಮದರಾಸು ಸರಕಾರವನ್ನು ಪ್ರಾರ್ಥಿಸುತ್ತೇವೆ. ಸಮಿತಿಯ ಸದಸ್ಯರ ಹೆಸರುಗಳನ್ನು ಇನ್ನೂ ಪ್ರಕಟಿಸಿಲ್ಲವಾದುದರಿಂದ ಹೆಸರಿಗಾದರೂ ಕನ್ನಡಕ್ಕೆ ಒಂದು ಸ್ಥಾನ ದೊರೆಯದೆ ಇರಲಾರದು. ಆದರೆ ಅಷ್ಟು ಸಾಲದೆಂದು ನಮ್ಮ ಅಭಿಪ್ರಾಯ. ಮೈಸೂರು ಬೊಂಬಾಯಿ ವಿಶ್ವವಿದ್ಯಾನಿಲಯಗಳ ಕನ್ನಡ ಇಲಾಖೆಗಳಿಗೂ, ಕನ್ನಡ ಸಾಹಿತ್ಯ ಪರಿಷತ್ತಿನ ವಿದ್ವಾಂಸವರ್ಗಕ್ಕೂ ಸ್ಥಾನ ಕೊಡುವುದರ ಜೊತೆಗೆ ಕೊಡಗು ಹೈದರಾಬಾದು ಪ್ರಾಂತಗಳ ವಿಷಯದಲ್ಲಿ ಸಲಹೆ ಕೊಡಬಲ್ಲಂತೆಯೂ ಇರುವ ಭಾಷಾಭಿಜ್ಞರನ್ನೂ ಈ ಸಮಿತಿಗೆ ಸೇರಿಸಿಕೊಂಡರೆ ಬಹಳ ಪ್ರಯೋಜನವಾಗುವುದು. ಈಗಾಗಲೆ ಮದರಾಸಿನಲ್ಲಿ ಒಂದು ಪರಿಭಾಷೆಯ ಕೋಶ ಅಚ್ಚಾಗಿದೆ. ಮೈಸೂರು ದೇಶದಲ್ಲಿಯೂ ಹಿಂದೆ ಸಣ್ಣದಾಗಿ ಒಂದು ಕೋಶ ಆಗಿತ್ತು. ಅಧಿಕಾರಯುತವಾಗಿ ನಿಘಂಟು ಮುಂತಾದ್ದನ್ನು ತಯಾರುಮಾಡುತ್ತಿರುವ ಪಂಡಿತರ ಅನುಭವವೂ ಈ ಕಾರ್ಯಕ್ಕೆ ಸಹಾಯವಾಗುತ್ತದೆಯಾಗಿ ಕನ್ನಡಕ್ಕೆ ಸಂಬಂಧಪಟ್ಟಂತೆ ಈಗ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ತಯಾರಾಗುತ್ತಿರುವ ಇಂಗ್ಲಿಷ್–ಕನ್ನಡ ನಿಘಂಟುವಿನ ವಿದ್ವಾಂಸ ಮಂಡಲದಿಂದಲೂ ಬಹುಮಟ್ಟಿನ ಸಹಾಯ ದೊರಕಬಲ್ಲದಾಗಿದೆ. ಕನ್ನಡಕ್ಕೆ ಸಂಬಂಧಿಸಿದ ತಿಳಿವಳಿಕೆಯನ್ನುಳ್ಳವರೂ, ನಿಶಿತವಾದ ಪಾಂಡಿತ್ಯವುಳ್ಳವರೂ, ವ್ಯಾಕರಣ, ಭಾಷಾ ಚರಿತ್ರೆ, ಭಾಷಾ ಶಾಸ್ತ್ರಗಳನ್ನು ತಿಳಿದವರೂ ಹಲವರಿದ್ದಾರೆ. ಅವರಲ್ಲಿ ಒಬ್ಬಿಬ್ಬರನ್ನಾದರೂ ಪ್ರಾರ್ಥಿಸಿಕೊಂಡು ಸಮಿತಿಯಲ್ಲಿ ಅವರಿಗೆ ಸ್ಥಾನ ಕೊಟ್ಟು ಸಮಿತಿಯ ಕಾರ್ಯ ಸಾಕಲ್ಯದಿಂದಲೂ ಸಮರ್ಪಕವಾಗಿಯೂ ಫಲಕಾರಿಯಾಗಿಯೂ ನೆರವೇರುವಂತೆ ಮದರಾಸು ಸರಕಾರದವರು ವ್ಯವಸ್ಥೆ ಮಾಡುತ್ತಾರೆಂದು ನಂಬಿದ್ದೇವೆ.

---

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶ್ರೀಯವರ ಪ್ರವಾಸ

(ಬರೆದು ಬಂದುದು)

೩–೫–೪೦ನೆಯ ಶುಕ್ರವಾರ ಸಂಜೆ 'ಶ್ರೀ'ಯವರು ಕಾರ್ಕಳದ ಹೈಸ್ಕೂಲಿನಲ್ಲಿ 'ಕರ್ನಾಟಕ ಸಂಸ್ಕೃತಿ' ಎಂಬ ವಿಷಯವಾಗಿ ಸುಮಾರು ಒಂದು ಘಂಟೆಯ ಕಾಲ ಅಮೋಘವಾದ ಭಾಷಣ ಮಾಡಿದರು. ನಮ್ಮ ದೇಶದಲ್ಲಿ ಆಗಿಂದಾಗ್ಗೆ ಹೊಸ ಆಚಾರ್ಯರು ಹುಟ್ಟಿ ಹೊಸ ಮತಗಳನ್ನು ಬೀರಿ ನಾಡಿನ ಜೀವನಕ್ಕೆ ಸರಿಯಾದ ಹುರುಪನ್ನು ಕೊಡುತ್ತಿದ್ದಾರೆಂದೂ; ಮತಗಳು ಅನೇಕವಾಗಿದ್ದರೂ ಜನತೆ ಮತ ಸಂಬಂಧವಾದ ಹೋರಾಟಗಳಿಗೆ ಅವಕಾಶಕೊಡದೆ, ಅನ್ಯಮತಸ್ಥರ ಗುಣಗಳಿಗೆ ಮೆಚ್ಚಿ ಅವರನ್ನು ಪುರಸ್ಕರಿಸುತ್ತಿದ್ದರೆಂದೂ ವಿವರಿಸಿದರು. ಕಲೆಯಲ್ಲಿಯೂ ಇದೇ ರೀತಿ ಬೆಳವಣಿಗೆ ಪ್ರಾಚೀನಕಾಲದಿಂದಲೂ ಕಂಡುಬರುತ್ತದೆಯೆಂದು ಹೇಳಿ ಅದಕ್ಕೆ ನಿದರ್ಶನವಾಗಿ ಅನೇಕ ಮಹಾಕಾವ್ಯಗಳನ್ನೂ, ಬೇಲೂರು ಶ್ರವಣಬೆಳಗುಳ ಮೊದಲಾದ ಶಿಲ್ಪ ಸೌಧಗಳನ್ನೂ ವರ್ಣಿಸಿದರು. ಇತ್ತೀಚಿನ ಪರಿಶೋಧನೆಗಳ ಪರಿಣಾಮವಾಗಿ ಈ ಸಂಸ್ಕೃತಿ ಜೀವನ ಮೂರು ಸಾವಿರ ವರ್ಷಗಳಿಂದಲೂ ಅವಿಚ್ಛಿನ್ನವಾಗಿ ನಡೆದುಕೊಂಡು ಬರುತ್ತಿದೆಯೆಂದು ಹೇಳಲು ಆಧಾರಗಳು ದೊರೆತಿವೆಯೆಂದು ನುಡಿದರು.

ಶ್ರೀ|| ಜಿ. ಆರ್. ರಂಗಸ್ವಾಮಿಯವರು ಪರಿಷತ್ತು ಕೈಗೊಂಡಿರುವ ಕಾರ್ಯವನ್ನು ವಿವರಿಸಿ ಎಲ್ಲರೂ ಅದಕ್ಕೆ ಬೆಂಬಲ ಕೊಡಬೇಕೆಂದು ಪ್ರಾರ್ಥಿಸಿದರು.

೪–೫–೪೦ನೆಯ ಶನಿವಾರ 'ಶ್ರೀ' ಯವರು ಮಂಗಳೂರಿಗೆ ಚಿತ್ತೈಸಿದರು. ಸಾಯಂಕಾಲ ಥಿಯಾಸಫಿಕಲ್ ಲಾಡ್ಜಿನಲ್ಲಿ ಅವರ ಭಾಷಣ ಏರ್ಪಟ್ಟಿದ್ದಿತು. ಅನೇಕ ಸಾಹಿತಿಗಳೂ ಸಭೆಗೆ ಚಿತ್ತೈಸಿದ್ದರು. ಶ್ರೀ|| ಎಸ್. ಮುಕುಂದರಾಯರು 'ಶ್ರೀ' ಯವರಿಗೆ ಸ್ವಾಗತ ಬಯಸಿದರು. ಅನಂತರ ಶ್ರೀ|| ಕೆ. ಬಿ. ಜಿನರಾಜ ಹೆಗ್ಗಡೆ ಯಂ.ಎಲ್.ಎ. (ಕೇಂದ್ರ) ಇವರ ಅಧ್ಯಕ್ಷತೆಯಲ್ಲಿ ಸಭೆ ಜರುಗಿತು. ಶ್ರೀ|| ಹೆಗ್ಗಡೆಯವರು ಮಾನ್ಯ ಅಥಿತಿಗಳ ಪರಿಚಯವನ್ನು ಸಭಿಕರಿಗೆ ಮಾಡಿಕೊಟ್ಟಮೇಲೆ 'ಶ್ರೀ' ಯವರು ಮಂಗಳೂರಿನ ಮಹಾಜನರಿಗೆ ತಮ್ಮ ಕೃತಜ್ಞತೆಗಳನ್ನು ಸೂಚಿಸಿ, ಪ್ರಕೃತ ತಾವು ಕರ್ನಾಟಕದ ಎಲ್ಲೆಡೆಗಳಿಗೂ ಹೋಗಿ ಸದ್ಯದಲ್ಲಿಯೇ ಜರುಗಲಿರತಕ್ಕ ಸಾಹಿತ್ಯ ಪರಿಷತ್ತಿನ ರಜತೋತ್ಸವವನ್ನು ನೆರವೇರಿಸುವ ವಿಷಯದಲ್ಲಿ ಕನ್ನಡ ನಾಡಿನ ಸಕಲರ ಸಹಾಯ ಸಹಾನುಭೂತಿಗಳನ್ನು ಪಡೆಯುವ ಉದ್ದೇಶದಿಂದ ಪ್ರಚಾರಕ್ಕಾಗಿ ಹೊರಟಿರುವುದಾಗಿಯೂ, ಇದೇ ಸಂದರ್ಭದಲ್ಲಿ ಸಕಲರನ್ನೂ ತಾವು ಆಹ್ವಾನಿಸುವುದಾಗಿಯೂ ಹೇಳಿದರು. ಅನಂತರ ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷೇಪ ಇತಿಹಾಸವನ್ನು ತಿಳಿಸಿದರು. ಕರ್ನಾಟಕ ಅನೇಕ ಪ್ರಾಂತ ಸಂಸ್ಥಾನಗಳೊಳಗೆ ತುಂಡು ತುಂಡಾಗಿಸೇರಿ ಹೋಗಿದ್ದು ಹಲವಾರು ಭಾಷೆಗಳವರ ಆಧೀನಕ್ಕೆ ಸೇರಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಗೆ ಬಂದಿತ್ತೆಂದೂ, ಅಂತಹ ಸಮಯದಲ್ಲಿ ಹಿರಿಯರು ಭಾಷೆಯ ಮೂಲಕವಾದರೂ ಕನ್ನಡಿಗರನ್ನು ಒಟ್ಟಿಗೆ ಸೇರಿಸಿ ಐಕ್ಯಗೊಳಿಸುವ ಆಲೋಚನೆ ಮಾಡಿ ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದರೆಂದೂ, ಮೊದ ಮೊದಲು ಪರಿಷತ್ತು ಕನ್ನಡ ನಾಡಿನ ಗಡಿನಾಡುಗಳ ಪ್ರದೇಶದ ಪಟ್ಟಣಗಳಲ್ಲಿ ವರ್ಷಕ್ಕೆ ಒಂದು ಸಾರಿ ಸಮ್ಮೇಳನವನ್ನು ಜರುಗಿಸಿ ಅಲ್ಲಿ ಅನ್ಯರ ಪ್ರಭಾವಕ್ಕೆ ಸಿಕ್ಕಿದ ಕನ್ನಡಿಗರನ್ನು ಜಾಗೃತಗೊಳಿಸಿ ಅವರಲ್ಲಿ ತಾವು ಕನ್ನಡಿಗರು, ದೊಡ್ಡದಾದ ಸಾಹಿತ್ಯವನ್ನು ಪಡೆದವರು, ಒಂದಾನೊಂದು ಕಾಲದಲ್ಲಿ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ಆಳಿದವರು, ಇನ್ನು ಮುಂದಕ್ಕೂ ಹಾಗೆಯೇ ಆಳಲು ಯೋಗ್ಯತೆಯುಳ್ಳವರು ಎಂಬ ಅರಿವನ್ನು ಉಂಟುಮಾಡುತ್ತಿದ್ದಿತೆಂದೂ ಆದರೆ ಈಗ ಪರಿಷತ್ತು ತನ್ನ ಕೆಲಸವನ್ನು ಮತ್ತಷ್ಟು ಹೆಚ್ಚು ಪ್ರಯೋಜನವಾಗುವಂತೆ ಮಾಡಲು ಬೇರೆ ಕಾರ್ಯಕ್ರಮಗಳನ್ನು ಕೈಕೊಂಡಿದೆಯೆಂದೂ ಹೇಳಿದರು.

ಅನಂತರ ಕನ್ನಡ ನುಡಿಯ ವಿಷಯವಾಗಿ ಒಂದು ಗಂಟೆಯವರೆಗೆ ಭಾಷಣ ಮಾಡಿ, ಕನ್ನಡ ಸಾಹಿತ್ಯದಲ್ಲಿ ಆಗಾಗ ಉಂಟಾದ ಕ್ರಾಂತಿಯ ವಿಷಯವನ್ನು ಹೇಳಿದರು. ಕನ್ನಡದಲ್ಲಿ ಸಂಸ್ಕೃತವನ್ನು ಅನುಕರಿಸುವ ಕಾಲವಿದ್ದಿತೆಂದೂ, ಅನಂತರ ಜೈನಕವಿಗಳು ಕನ್ನಡವನ್ನು ತಮ್ಮ ಧರ್ಮಪ್ರಚಾರದ ಭಾಷೆಯನ್ನಾಗಿ ಮಾಡಿದರೆಂದೂ, ವೀರಶೈವ ಕವಿಗಳು ಸುಲಭ ಕನ್ನಡದಲ್ಲಿ ಉದಾತ್ತ ನೀತಿ ವಚನಗಳನ್ನು ಬರೆದು ಕನ್ನಡಕ್ಕೆ ಹೊಸ ಸ್ಥಾನ ಮಾನಗಳನ್ನು ಕಲ್ಪಿಸಿಕೊಟ್ಟರೆಂದೂ, ಕನ್ನಡದಲ್ಲಿ ಈ ತೆರನಾದ ಕ್ರಾಂತಿಯೂ ಈಗಲೂ ನಡೆಯುತ್ತಿದೆಯೆಂದೂ ಈಗಾಗಲೆ ಮೈಸೂರು, ಧಾರವಾಡ, ಮಂಗಳೂರು—ಇಲ್ಲಿನ ಭಾಷೆಗಳಲ್ಲಿ ಹೆಚ್ಚಿನ ಭೇದ ಕಂಡುಬರುತ್ತಿಲ್ಲವೆಂದೂ ಭಾಷೆ ಒಂದಾದರೆ ದೇಶ ಒಂದಾಗುವುದು ಸುಲಭವೆಂದೂ ಹೇಳಿದರು.

ಅಧ್ಯಕ್ಷರು ಪ್ರೊ|| ಶ್ರೀಕಂಠಯ್ಯನವರಿಗೆ ಮಹಾಜನರ ಪರವಾಗಿ ವಂದನೆಗಳನ್ನರ್ಪಿಸಿದರು. ಕಲ್ಚರಲ್ ಅಸೋಸಿಯೇಷನ್ನಿನ ಕಾರ್ಯದರ್ಶಿಗಳಾದ ಶ್ರೀ|| ಎಸ್. ಮುಂಕುಂದರಾಯರು ಪ್ರೊ|| ಶ್ರೀಕಂಠಯ್ಯನವರು ಮಂಗಳೂರಿಗೆ ಸದಾ ಬರುತ್ತಿರುವಂತಾಗಲೆಂದು ಹಾರೈಸಿ ಅಧ್ಯಕ್ಷರಿಗೂ, ಭಾಷಣಕರ್ತರಿಗೂ ಕೃತಜ್ಞತೆಗಳನ್ನರ್ಪಿಸಿದರು.

೫–೫–೪೦ನೆಯ ಭಾನುವಾರ 'ಶ್ರೀ'ಯವರು ಮುಲಕಿಯ ಹೈಸ್ಕೂಲು ಭವನದಲ್ಲಿ ಕನ್ನಡ ಸಾಹಿತ್ಯದ ವಿಷಯವಾಗಿ ಸುಮಾರು ಒಂದೂವರೆ ಗಂಟೆಯ ಕಾಲ ಬಹಳ ಸ್ವಾರಸ್ಯವಾದ ಭಾಷಣ ಮಾಡಿದರು. ನಮ್ಮ ಸಾಹಿತ್ಯ ಆಗಿಂದಾಗ್ಗೆ ಅನೇಕ ಹೊಸ ವಾಹಿನಿಗಳಿಂದ ಪರಿಪುಷ್ಟವಾಗಿದೆಯೆಂದೂ ಈಗ ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದ ಒಂದು ಹೊಸ ವೈಶಿಷ್ಟ್ಯವನ್ನು ಪಡೆಯುತ್ತಿದೆಯೆಂದೂ ಹೇಳಿ ಈ ನವ ದೃಷ್ಟಿಯನ್ನು ಖಂಡಿಸಬಾರದೆಂದೂ, ಸಾಹಿತ್ಯ ಜೀವಂತವಾಗಿರುವುದಕ್ಕೆ ಈ ಹೊಸದೃಷ್ಟಿ ಒಂದು ಚಿಹ್ನೆಯೆಂದೂ ಸ್ಪಷ್ಟಪಡಿಸಿದರು.

(೨೭೦ನೆಯ ಪುಟಕ್ಕೆ)

(೨೬೫ನೆಯ ಪುಟದಿಂದ)

ಇವರು ಹಾಗಲವಾಡಿಯವರಾದರು. ಆದರೂ ತಮ್ಮ ಕೃತಿಗಳನ್ನೆಲ್ಲ ತಮ್ಮ ತವರೂರಿನ ಕುಲದೈವವಾದ ಶ್ರೀ॥ ವೇಣುಗೋಪಾಲನ ಅಂಕಿತದಲ್ಲಿಯೇ ರಚಿಸಿದ್ದಾರೆ. ಇವರ ಧರ್ಮಪತ್ನಿ ರುಕ್ಮಿಣಿಬಾಯಿ. ಇವರು ಜನಿಸಿದ್ದು ಕ್ರಿ. ಶ. ೧೮೫೦ರಲ್ಲಿ: ಸುಮಾರು ಅರುವತ್ತು ವರುಷಗಳ ವರೆಗೆ ಬದುಕಿದ್ದು ಕ್ರಿ. ಶ. ೧೯೧೦ರಲ್ಲಿ ದೈವಾಧೀನರಾದರು.

ಅವರಿಗೆ ಐವರು ಹೆಣ್ಣು ಮಕ್ಕಳು; ಗಂಡು ಸಂತತಿಯಿಲ್ಲ. ಅವರ ಗಾಯನ ಕಲೆಯನ್ನು ಮೈಗೂಡಿಸಿಕೊಂಡಿದ್ದ ಅವರ ಹಿರಿಯ ಮಗಳು ಅವರ ಅನೇಕ ಪದಗಳನ್ನು ಹಾಡುತ್ತಿದ್ದರು. ಅವರು ಈಗ ತೀರಿಕೊಂಡಿದ್ದಾರೆ. ಕೊನೆಯ ಹೆಣ್ಣುಮಗಳೂ ತೀರಿಕೊಂಡು ಈಗ ಮೂವರಿದ್ದಾರೆ. ಅವರ ಎರಡನೆಯ ಮಗಳು ನನ್ನನ್ನು ಹಡೆದ ತಾಯಿ.

ಇವರ ಜೀವನಕ್ಕೂ ದಾಸಕೂಟದ ಮೂಲಪುರುಷರಾದ ಶ್ರೀ ಪುರಂದರ ದಾಸರ ಜೀವನಕ್ಕೂ ತುಂಬ ಸಾಮ್ಯವಿದೆ. ಒಂದು ಉದ್ದಿಶ್ಯ ಸಾಧನೆಗಾಗಿ ಜನ್ಮ ತಾಳಿದ ದಾಸರ ಜೀವನದಲ್ಲಿ ಯಾವುದಾದರೊಂದು ಭಗವಂತನ ಲೀಲೆ ನಡೆದು ಕರ್ತವ್ಯದ ಕಡೆಗೆ ಅವರ ಸ್ಮೃತಿ ಬರುವಂತೆ ಎಚ್ಚರಗೊಳಿಸುತ್ತದೆ. ಸಾಮಾನ್ಯವಾಗಿ ಎಲ್ಲ ಭಗವದ್ಭಕ್ತರ ಜೀವನಗಳಲ್ಲೂ ಇಂತಹ ಪ್ರಸಂಗಗಳು ಬರುತ್ತವೆಂದು ಕಾಣುತ್ತದೆ. ಇವರೂ ಸಹ ಹಾಗಲವಾಡಿ ಪಾಳೆಯಪಟ್ಟಿನ ಪ್ರಧಾನ ವಂಶಕ್ಕೆ ಸೇರಿದ್ದು ಅಷ್ಟೈಶ್ವರ್ಯವನ್ನು ಪಡೆದಿರದಿದ್ದರೂ ಸಾಕಷ್ಟು ಸುಖ ಜೀವನವನ್ನು ನಡಸುತ್ತಾ ಪ್ರಪಂಚದ ಮಾಯೆಗೆ ಸಿಲುಕಿ ತಲ್ಲೀನರಾಗಿದ್ದರು. ತಮ್ಮ ಹಿರಿಯರ ಆಸ್ತಿಯ ಜೊತೆಗೆ ಸರ್ಕಾರಿ ನೌಕರಿ ಸಹ ಮಾಡುತ್ತಾ ಶಿವಮೊಗ್ಗ, ಚಿಕ್ಕಮಗಳೂರು, ಬೇಲೂರು ಮೊದಲಾದ ಸ್ಥಳಗಳಲ್ಲೆಲ್ಲ ಇದ್ದು ತುಂಬ ಸುಖವಾಗಿ ಬದುಕನ್ನು ಸಾಗಿಸುತ್ತಿದ್ದರು. ಕಡೆಗೆ ಸುಮಾರು ಮೂವತ್ತನೆಯ ವಯಸ್ಸಿನಲ್ಲಿ ಅವರನ್ನು ಕರ್ತವ್ಯದ ಕಡೆಗೆ ಎಚ್ಚರಿಸಲು ಒಂದು ಭಗವಂತನ ಲೀಲೆ ನಡೆಯಿತು.

ಅದು ಧಾತು - ಈಶ್ವರ ಸಂವತ್ಸರದ ಕ್ಷಾಮ ಕಾಲ. ಇವರು ಸರಕಾರದ ಡಿಪ್ಪೋ ಮುತ್ಸದ್ದಿಯ ಕೆಲಸದಲ್ಲಿದ್ದು ಬರದ ಬೇಗೆಯಲ್ಲಿ ಹಸಿದು ಕಂಗಾಲಾದ ಜನರಿಗೆ ಆಹಾರವನ್ನು ಹಂಚುವ ಕೆಲಸ ಮಾಡುತ್ತಿದ್ದರು. ಸಹಸ್ರಾರು ಮಂದಿ ಹಸಿದವರಿಗೆ ಹೊಟ್ಟೆಯ ಕೂಳು ಕೊಡುವ ಕೆಲಸವೆಂದರೆ ತುಂಬಾ ಗೌರವದ ಕೆಲಸ; ಹೆಮ್ಮೆ ಪಡುವ ಕೆಲಸ. ಆಗ ಇವರು ಅಹಂಕಾರದ ಮದದಿಂದ ತುಂಬಿ ಮಾನವ ಹೃದಯವನ್ನು ಮರೆತು ಮಾಡಬಾರದ ಕೆಲಸ ಮಾಡಿದರು. ಜನರಿಂದ ಲಂಚ ತಿಂದು ಅವರಿಗೆ ಅನ್ನ ಕೊಟ್ಟರು. ಕೈಗೆ ಸಿಕ್ಕಿದ ಒಡವೆ, ಬೆಳ್ಳಿಬಂಗಾರದ ಪಾತ್ರೆಗಳು, ಇದ್ದಷ್ಟು ಹಣ ಕೊಟ್ಟು, ಹೊಟ್ಟೆಗೆ ಹಿಟ್ಟುಪಡೆದರು ಕಂಗಾಲಾದ ಜನ. ಕೃಷ್ಣರಾಯರ ಬೊಕ್ಕಸ ಲಂಚದಿಂದ ತುಂಬಿತು. ಇವರ ಆಸೆ ಮಿತಿ ಮೀರಿತು.

ಹೀಗೆ ಸಂಪಾದಿಸಿ ಇವರು ಒಮ್ಮೆ ಆಗ ತಾವಿದ್ದ ಹಾಸನ ಜಿಲ್ಲೆಯ ಬೇಲೂರಿನಿಂದ ತಮ್ಮ ಸ್ಥಳವಾದ ತುಮಕೂರು ಜಿಲ್ಲೆಯ ಹಾಗಲವಾಡಿಗೆ ಸಂಸಾರ ಸಮೇತರಾಗಿ ಎತ್ತಿನಗಾಡಿಯಲ್ಲಿ ಪ್ರವಾಸ ಹೊರಟರು. ಆಗ ರೈಲು ಮೋಟಾರುಗಳ ಅನುಕೂಲವಿರಲಿಲ್ಲ. ಎಷ್ಟು ದೂರವಾದರೂ ದಿನಕ್ಕೆ ೨೦–೨೫ ಮೈಲಿಗಳಂತೆ, ಹಾದಿಯಲ್ಲಿ ಊಟ ನಿದ್ರೆಗಳಿಗೆ ತಂಗಿಕೊಂಡು ಪ್ರವಾಸ ಮಾಡಬೇಕಾಗಿತ್ತು. ಹಾಗೆ ಪ್ರಯಾಣ ಮಾಡುತ್ತ ತಮ್ಮ ಸ್ಥಳದ ಹತ್ತಿರದ ವರೆಗೂ ಬಂದು ಹಾಗಲವಾಡಿ ಇನ್ನೂ ೧೦–೧೨ ಮೈಲಿಗಳಿವೆ ಎನ್ನುವ ಕಡೆ ಊಟಕ್ಕೆ ತಂಗಿದರು. ರಾತ್ರಿ ಊಟ ಮುಗಿಸಿ ಗಾಡಿ ಕಟ್ಟುವ ವೇಳೆ ಕಳ್ಳರ ಕೈಗೆ ಸಿಕ್ಕಿದರು. ಅವರು ತಂಗಿದ ಕಡೆ ಸುತ್ತ ಕಾಡು. ಹೆಚ್ಚು ಜನ ಸಹಾಯವಿಲ್ಲ. ಕಳ್ಳರು ಅದೃಷ್ಟವಶಾತ್ ಇವರ ಮತ್ತು ಹೆಂಡತಿ ಮಕ್ಕಳ ಜೀವಗಳನ್ನುಳಿಸಿ ಮಿಕ್ಕೆಲ್ಲ ಐಶ್ವರ್ಯವನ್ನು ದೋಚಿಕೊಂಡು ಹೋದರು. ಇವರ ಕೈ ಬರಿದಾಯಿತು. ನಿರ್ಮಲ ಮನಸ್ಸಿನ ಮೇಲೆ ಮುಸುಕಿನ ಮಾಯೆಯಪೊರೆ ಹರಿಯಿತು. ಭಗವಂತನ ಪ್ರೇರಣೆಯಿಂದ ಜ್ಞಾನಿಗಳಾದರು. ಅಂದಿನಿಂದ ಪ್ರಪಂಚದ ಮೇಲಿನ, ಪ್ರಪಂಚದ ವಸ್ತುಗಳ ಮೇಲಿನ, ಹೆಂಡತಿ ಮಕ್ಕಳ ಮೇಲಿನ ಮೋಹ ಮರೆತರು. ನೌಕರಿಗೆ ಶರಣು ಹೊಡೆದು, ಜೋಳಿಗೆ ಹೆಗಲಿಗೆ ಹಾಕಿ ದಾಸರಾದರು. ಕನಸಿನಲ್ಲಿ ಶ್ರೀವೇಣುಗೋಪಾಲನು ಪ್ರತ್ಯಕ್ಷನಾಗಿ "ನನ್ನ ದಾಸನಾಗಿ ಜನತೆಯಲ್ಲಿ ಜ್ಞಾನ ಪ್ರಸಾರ ಮಾಡು" ಎಂದು ಆಜ್ಞಾಪಿಸಿದನಂತೆ.

ಅಂದಿನಿಂದ ಕನ್ನಡ ನಾಡಿನಲ್ಲಿ, ಹೆಚ್ಚಾಗಿ ಮೈಸೂರುಪ್ರಾಂತ್ಯದಲ್ಲಿ, ಸಂಚಾರ ಮಾಡಿ, ತಮ್ಮ ಕೊನೆಗಾಲದಲ್ಲಿ ಬೀರೂರಿನ ಮಾರುತಿ ದೇವಾಲಯದಲ್ಲಿ ಶ್ರೀರಾಮನ ದಾಸ ಹನುಮನನ್ನು ಸೇವಿಸುತ್ತಾ ನೆಲಸಿದರು. ಅವರ ದೈವಭಕ್ತಿಯನ್ನೂ, ಸಂಸಾರದಲ್ಲಿದ್ದೂ ಇರದಂತಿದ್ದ ವಿರಕ್ತ ಜೀವನವನ್ನೂ, ಜ್ಞಾನಪರವಶರಾಗಿ ರಸಮಯವಾಗಿ ದೇವರ ನಾಮವನ್ನು ಮೈಮರೆಯುತ್ತಿದ್ದುದನ್ನೂ, ಹಾಡುತ್ತ ಹಾಡುತ್ತ ರಚಿಸುತ್ತಿದ್ದ ಸೊಗಸಾದ ಕನ್ನಡಪದಗಳನ್ನೂ ಕುರಿತು ಅವರೊಡನೆ ಬಹುಕಾಲ ಇದ್ದು ಆನಂದಅನುಭವಿಸಿದ, ಈಗ ಈ ಊರಿನಲ್ಲಿರುವ ವೃದ್ಧ ವೈಶ್ಯ ಕುಲದವರೊಬ್ಬರು ನನಗೆ ಹೇಳಿದರು.

ಅವರು ಸುಮಾರು ನೂರೈವತ್ತು ಇನ್ನೂರು ದೇವರ ನಾಮಗಳನ್ನು ರಚಿಸಿರುವರೆಂದು ತಿಳಿದು ಬಂದಿದೆ. ಅವರ ಸಂಚಾರದಲ್ಲಿ ಸಂದರ್ಶಿಸಿದ ಮುಖ್ಯ ಊರುಗಳ ದೇವರನ್ನು ಕುರಿತು ಬಹು ಭಾಗ ಪದಗಳಿವೆ. ಅಲ್ಲದೆ ಅಂದಿನ ಸಮಾಜದ ರೀತಿ ನಡವಳಿಕೆಗಳಲ್ಲಿದ್ದ ದೋಷಗಳನ್ನೆತ್ತಿ ತೋರಿಸಿ ಅವುಗಳ ನಿವಾರಣೆಗೆ ಭಗವಂತನನ್ನು ಮೊರೆಯಿಟ್ಟ ಪದಗಳೂ ವಿಶೇಷವಾಗಿವೆ. ಬೇಲೂರು ಚನ್ನಕೇಶವನನ್ನು ನೋಡಿ ಅವರು ಮೈಮರೆತು ಈ ರೀತಿ ಹಾಡಿದ್ದಾರೆ.

ಕೇಶವಕಲಿಮಲ ನಾಶಕರ, ವಿನುತಮುನಿನಿಕರ ಕೇಶವ ॥ ಪ ॥
ತರಣ ತರುಣಿ ನಿಭ ಸುರಚಿರ ಹಾಟಕ ವಸನಾ ದೇವ ।
ಶರಧರಸನ್ನಿಭ ಮಂಜುಳ ಕೋಮಲ ಕಾಯಾ ।
ಕರಧೃತ ಸೈಂಧವ ಚಕ್ರಗದಾಭಯ
ಸ್ಮೇರ ವಕ್ತ್ರ ಸರಸೀರುಹಲೋಚನ ॥ ಕೇಶವ ॥

* * *

ರತಿಪತಿ ಭಾಗೀರತಿ ಭಾರತಿಪತಿಜನಕಾದೇವ ।
ಕ್ಷಿತಿಪತಿ ತತಿನುತ ಗತಿದಾಯಕಪರಮೇಯಾ ।
ಶತಮುಖರಿಪು ಮದಮಥನಮಹೋತ್ಸುಕ
ವಿದುರವಂದ್ಯ ಸಿರಿ ವೇಣುಗೋಪಾಲ ॥ ಕೇಶವ ॥

ಅವರ ಕೃತಿಗಳನ್ನೆಲ್ಲ ಒಳಗೊಂಡ ಹಸ್ತಪ್ರತಿ ನನಗೆ ಇನ್ನೂ ದೊರೆತಿಲ್ಲ. ಅದರ ಶೋಧನೆಯಲ್ಲಿಯೇ ಇದ್ದೇನೆ. ಕನ್ನಡ ಜನತೆ ಅವರು ರಚಿಸಿರುವ ಶ್ರೀ ವೇಣುಗೋಪಾಲನ ಅಂಕಿತದಲ್ಲಿರುವ ಪದಗಳನ್ನು ಒದಗಿಸಿಕೊಟ್ಟರೆ ನಾನವರಿಗೆ ಚಿರಋಣಿ.

---

ಕಾವ್ಯ ಸಮೀಕ್ಷೆ—೩.

## ಕಾವ್ಯಸಾಮಗ್ರಿ, ಶಕ್ತಿ, ನಿಪುಣತೆ—ಅಭ್ಯಾಸ

(ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು)

ಕಾವ್ಯಕ್ಕೆ ಪ್ರತಿಭೆ ಮೂಲ ಎಂಬುದು ನಿಜ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಈ ವಿಚಾರವನ್ನು ಹಿಂದೆಯೇ ಹೇಳಿ ಆಗಿದೆ. ಪ್ರತಿಭೆ ಎಂಬುದು ಒಂದು ಶಕ್ತಿ ಎಂದು ಕೆಲವರೂ ಬೀಜ ಎಂದು ಕೆಲವರೂ ಹೇಳುತ್ತಾರೆ. ಕಾವ್ಯ ನಿರ್ಮಾಣ ಕಾರ್ಯದಲ್ಲಿ ಈ ಪ್ರತಿಭೆ ಒಂದೇ ಸಾಕೆ, ಮತ್ತೇನಾದರೂ ಬೇಕೆ ಎಂಬ ಪ್ರಶ್ನೆ ಹುಟ್ಟುತ್ತದೆ. ಲಾಕ್ಷಣಿಕರು ಪ್ರತಿಭೆಯನ್ನು ಮಿಡಿಸುವ ಸಾಮಗ್ರಿಗಳು ಬೇಕು ಎನ್ನುವರು. ಸಾಮಗ್ರಿಗಳೆಂದರೆ: ಕಾವ್ಯವನ್ನು ಅರಿತುನುರಿತವರಿಂದ ಪಡೆದ ಶಿಕ್ಷೆ, ಅನವರತವೂ ಮನನಮಾಡಿ ಹಣ್ಣಾದ ಕಾವ್ಯದ ಅನುಭವ; ಶಾಸ್ತ್ರಗಳ, ಕಲೆಗಳ ಅವಲೋಕನ; ಅಭ್ಯಾಸ; ಲೋಕಾನುಭವ ಮತ್ತು ಸದಸದ್ವಿವೇಕ. ಕೆಲವರು ಸಹವಾಸ, ದೇಶ, ಕಾಲ, ವರ್ತಮಾನಗಳೂ ಸಾಮಗ್ರಿಗಳೆನ್ನುವರು. ಇವು ಕವಿಯಲ್ಲಿ ಸಹಜವಾಗಿರುವ ಪ್ರತಿಭೆಯನ್ನು ಉದ್ದೀಪನ ಅಥವಾ ಪುಷ್ಟಿಗೊಳಿಸುವಂಥವು. ಪ್ರತಿಭೆ, ಸಾಮಗ್ರಿ ಎರಡೂ ಸಮರಸವಾಗಿ ಒಂದುಗೂಡಿ ಹೊಮ್ಮುವ ಕಾವ್ಯ ಮೇಲ್ಮಟ್ಟಕ್ಕೇರುತ್ತದೆ.

ಕೆಲವರು ' ಈ ಸಾಮಗ್ರಿಗಳಿಂದ ಶಕ್ತಿ–ಪ್ರತಿಭೆ, ರೂಪುಗೊಳ್ಳುವುದು; ರೂಪುಗೊಂಡ ಶಕ್ತಿ ಉತ್ಕೃಷ್ಟಕಾವ್ಯದ ನಿರ್ಮಾಣ ಕಾರ್ಯದಲ್ಲಿ ಒಡನಡೆದು ಬೆಳಗುತ್ತದೆ: **ಬೆಳಗೆ ಕನ್ನಡಿ, ಸೋದಿಸೆ ಪೊನ್,**

**ವಿರಾಜಿಪಂತೆ** ಎಂದು ಹೇಳುವರು. ಕೆಲವರು '*ಪ್ರತಿಭೆಯೆಂಬ ಬೀಜಕ್ಕೆ ಈ ಸಾಮುಗ್ರಿಗಳೆಲ್ಲ (ಕಾವ್ಯಶಾಸ್ತ್ರಾದಿಗಳ ಅರಿವು ಮುಂತಾದುವು) ಹೊಯ್ನೀರು; ಹೊಯ್ನೀರಿಲ್ಲದೆ ಬೀಜಮೊಳೆಯುವುದೇ?' ಎನ್ನುವರು. ಆದರೆ ಬೀಜವೇ (ಪ್ರತಿಭೆಯೇ) ಇಲ್ಲದಿದ್ದರೆ ಹೊಯ್ನೀರಿದ್ದೂ ಮೊಳೆಯುವುದೇನು?

ಕಾವ್ಯಶಾಸ್ತ್ರಾಭ್ಯಾಸದಿಂದ ಅಚ್ಚುಕಟ್ಟಾದ ಪಾಂಡಿತ್ಯ ಬರಬಹುದು; ಪಾಂಡಿತ್ಯದಿಂದ ಕಾವ್ಯರಸವನ್ನರಿಯುವ ಶಕ್ತಿಯೂ ಉಂಟಾಗಬಹುದು; ವಿವಿಧ ಕಾವ್ಯಗಳ ಸ್ವರೂಪಾನುಭವವೂ ಆಗಬಹುದು; ಏನಾದರೂ ಕವಿತಾಶಕ್ತಿ ಬರುವುದಿಲ್ಲ. ಪಾಂಡಿತ್ಯವಿರುವವರೆಲ್ಲರೂ ಕವಿಗಳಾಗುವುದಿಲ್ಲ. ಒಂದುವೇಳೆ ಆ ಪಾಂಡಿತ್ಯದ ಹೆಮ್ಮೆಯಿಂದ ಅವರು ಕಾವ್ಯ ಮಾಡಿದರೂ ಅದು ಪಂಡಿತರಿಗೆ ಮಾತ್ರ ಅಥವಾ ಪಾಂಡಿತ್ಯಪ್ರಿಯರಿಗೆ ಮಾತ್ರ ಹಿತವಾಗಬಹುದು; ಭಾವುಕನಿಗೆ, ರಸಿಕನಿಗೆ ಹಿತವಾಗಲಾರದು.

ಶಕ್ತಿ–ಪ್ರತಿಭೆ, ಸಾಮುಗ್ರಿ ಎರಡೂ ಸಮರಸವಾಗಿ ಹೊಂದಿಕೊಂಡೇ ಇದ್ದರೆ ಅದು ಉತ್ಕೃಷ್ಟ ಕಾವ್ಯಕ್ಕೆ ಸಂಪತ್ತು ಎನಿಸುವುದು, ಕಳೆಗೊಡುವುದು. ಹಾಗಿಲ್ಲದೆ ಪಾಂಡಿತ್ಯವೊಂದರಿಂದಲೇ ಪ್ರಸಾರವಾಗುವ ಕಾವ್ಯ ಅಳಿಗಬ್ಬ ಆಗಬಹುದು. ಪ್ರತಿಭಾವಂತ ಕವಿಶೇಖರರು ತಮ್ಮ ಹೃದಯದಲ್ಲಿ ಮೂಡಿದ ಭಾವಗಳನ್ನು ಸಹಜವಾದ ತಮ್ಮ ಪ್ರತಿಭೆಯಿಂದಲೇ, ಪಾಂಡಿತ್ಯದ ಗೋಜೇ ಇಲ್ಲದೆ ಕಾವ್ಯವನ್ನಾಗಿ ಹಾಡಿಬಿಡಬಹುದು. ಅದು ಶ್ರೇಷ್ಠತೆಯ ಶಿಖರವನ್ನೇ ಏರುವುದು. ಎಂದ ಮಾತ್ರಕ್ಕೆ ಕವಿಗಳು ಪಾಂಡಿತ್ಯಾದಿ ಸಾಮುಗ್ರಿಗಳನ್ನೂ, ಇತರ ಪ್ರತಿಭಾವಂತ ಕವಿಗಳ ಕಾವ್ಯದ ಅನುಭವವನ್ನೂ ಮನ್ನಿಸುವುದಿಲ್ಲ ಎಂದಲ್ಲ. ಅನೇಕ ಕವಿಗಳು ತಮಗಾಗಿರುವ ಕಾವ್ಯಶಾಸ್ತ್ರಾನುಭವದ ಪ್ರಯೋಜನವನ್ನು ಮತ್ಸರ ಅಹಂಕಾರಗಳನ್ನು ತೊರೆದು ಧಾರಾಳವಾಗಿ ಹೇಳಿಕೊಂಡಿದ್ದಾರೆ. ಒಂದೆರಡು ಉದಾಹರಣೆಗಳನ್ನು ಇಲ್ಲಿ ಸೂಚಿಸಬಹುದಾಗಿದೆ: **ರನ್ನಂ ಪೊನ್ನಂ ಕೂಡಿದೊಡೆನ್ನೀ ವಾಗ್ವಧುಗೆ ಭೂಷಣಂ ಪೆರತುಂಟೆ?**–(ಜನ್ನ), **ಇನಿತುಮವಿರ್ಕೆ ಮತ್ಕೃತಿಯೊಳೀಧರೆ ಬಣ್ಣಿಸೆ ಸಂದ ಶಂಖವರ್ಮನ ಬಗೆ, ಶಾಂತಿವರ್ಮನ ನಯಂ, ಗುಣವರ್ಮನ ಬಂಧಗೌರವಂ, ಮನಸಿಜನೋಜೆ, ಕಣ್ಣಮನ ಜಾಣ್ನುಡಿ, ಪಂಪನ ರೀತಿ, ಚಂದ್ರಭಟ್ಟನ ಜತಿ, ಪೊನ್ನಮಯ್ಯನ ಬೆಡಂಗು, ಗಜಾಂಕುಶನುಳ್ಳ ಬಿನ್ನಣಂ**–(ರುದ್ರಭಟ್ಟ). ಹೆಸರಾದ ಈ ಕವಿಗಳು ತಾವು ಓದಿ ನಲಿದು ಪಾಂಡಿತ್ಯಾನುಭವಗಳನ್ನು ಯಾರ ಯಾರ ಕೃತಿಗಳಿಂದ ಪಡೆದುಕೊಂಡರೊ ಅವರನ್ನು ಈ ಮೂಲಕ ಹೊಗಳಿರುವುದೂ ಅಲ್ಲದೆ ಅವರ ಕಾವ್ಯದಲ್ಲಿ ತಾನೇ ತಾನಾಗಿರುವ ಎಲ್ಲಗುಣಗಳೂ ತಮ್ಮ ಕಾವ್ಯದಲ್ಲಿ ಒಳಮೂಡಲೆಂದು ಬಯಸಿದ್ದಾರೆಯಲ್ಲವೆ!

ಪಾಂಡಿತ್ಯ, ಲೋಕಾನುಭವ ರಸಿಕತೆಗಳನ್ನು ಪಡೆದವನು ಕಾವ್ಯನಿರ್ಮಾಣಕ್ಕೆ ಯತ್ನಿಸಬಹುದು. ಆದರೆ ಅವನಲ್ಲಿ ಪ್ರತಿಭೆ ಇಲ್ಲದೆ ಇದ್ದರೆ ಅವನ ಕಾವ್ಯ ಗುಣಮಿಲ್ಲದ ರೂಪು ಆಗಬಹುದು. ಅಥವಾ ರನ್ನನ ಮಾತಿನಲ್ಲಿ ಕೇವಲ ಪಾಂಡಿತ್ಯ ಪ್ರಕಟನೆಗಾಗಿಯೇ ಕಾವ್ಯ ಬರೆವವನು, **ಸರತಿಯಸಬಲೆಯಂ ಗೋಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವನಕ್ಕರಿಗನೆ, ಪಾತಕನಾತನೆ ಸರಸ್ವತೀದ್ರೋಹನ್.** ಪ್ರತಿಭೆಯುಳ್ಳ ಕವಿಗೆ ಸಾಮುಗ್ರಿಗಳ ಸಂಪತ್ತು ಕೆಲವೊಂದು ವೇಳೆ ಅತ್ಯಾವಶ್ಯಕವೆನಿಸುತ್ತದೆ; ಯಾವಾಗಲೂ ಅಲ್ಲ.

ಕೋಗಿಲೆಗೆ ಕಲಕಂಠವಿರುವುದು ನಿರ್ವಿವಾದ; ಅದು ಹಾಡಿದರೆ ರಸಿಕರೆಲ್ಲರೂ, ಏಕೆ ಲೋಕವೇ, ಮುಗ್ಧವಾಗುವುದು ಎಂಬುದೂ ದಿಟ. ಆದರೆ ಅದು ಹಾಡಿ, ಆ ಹಾಡು ರಸಿಕ–ಲೋಕ–ರಂಜಕವಾಗಬೇಕಾದರೆ ಸನ್ನಿವೇಶ ಸಾಮುಗ್ರಿಗಳು ಬೇಕು. ವಸಂತ ಬರಬೇಕು; ಸೀಮಾವು ಚಿಗುರ ಬೇಕು; ಕೋಗಿಲೆ ಆ ಚಿಗುರುಂಡು ಅವರೆಗೆ ಕುಗ್ಗಿದ್ದ ಗಂಟಲನ್ನು ಕುದುರಿಸಿಕೊಂಡು ಕುಹೂರವವನ್ನು ಮಾಡಬೇಕು. ಆ ಕಲರವ ರಸಿಕಲೋಕರಂಜಕವಾಗುವುದು. ..........................**ರುಚಿರ ರಸಾಲತರುಪಲ್ಲವ ರಸನುಂ ಬಿಡದೀಂಟಿ (ಕಂಠದ) ಬಿಗುಪೊಡೆದು** ಕೋಗಿಲೆ ಗಾನ ಮಾಡುವುದು, ಆ ಗಾನ ಭುವನಮೋಹಕವೆನಿಸುವುದು. ಅಂತೇ ಕವಿಹೃದಯದಲ್ಲಿ ಹುದುಗಿರುವ ಪ್ರತಿಭೆ ಪ್ರಕಟವಾಗಲು ಸನ್ನಿವೇಶ ಸಾಮುಗ್ರಿಗಳು ಬೇಕು. ಆಮೇಲೆ ಅದು ಪ್ರಕಟವಾಗಿ ಕವಿತೆಯಾಗಿ ಹೊರಹೊಮ್ಮಿ ಉತ್ಕೃಷ್ಟತೆಯನ್ನೈದುವುದು. ಆದುದರಿಂದ ಉದ್ದೀಪಕಗಳಾದ ಸಾಮುಗ್ರಿಗಳು—ಶಾಸ್ತ್ರಜ್ಞರ ಶಿಕ್ಷೆ, ಪಾಂಡಿತ್ಯ, ಲೋಕಾನುಭವ ಇತ್ಯಾದಿ — ಒಂದು ದೃಷ್ಟಿಯಿಂದ ಅತ್ಯಾವಶ್ಯಕ.

ಪ್ರತಿಭೆಯಿಲ್ಲದೆ ಇಷ್ಟಿದ್ದೂ ನಿರರ್ಥಕ. ಪ್ರತಿಭೆ ಇಲ್ಲದಾತನ ಕಾವ್ಯ ಕೋಮಲವಲ್ಲವೆಂದು ನುಡಿದಿರುವ ನಯಸೇನನ ಮಾತಿನಿಂದ ಈ ಪ್ರಕರಣವನ್ನು ಮುಗಿಸಬಹುದು.

> **ಮಳೆಯಿಲ್ಲದೆ ಪೊಯ್ನೀರಿಂ**
> **ಬೆಳಗುಮೆ ಧರೆ, ಮರುಗಿ ಕುದಿದು ಶಾಸ್ತ್ರದ ಬಲದಿಂ**
> **ದಳಪಿಂ ಪೇಳ್ದೊಡಮದು ಕೋ**
> **ಮಳಮಕ್ಕುಮೆ?**

---

* ಸತ್ಕಾವ್ಯಶಾಸ್ತ್ರಾವಬೋಧನಾದಿ, ಜಲಾವಸೇಕಾದಿಕಮಿವಾರಯಂತಿ— ಸಾಹಿತ್ಯರತ್ನಾಕರ.

## ಪರಿಷತ್ತಿನ ಸುದ್ದಿ

೧೭—೪—೪೦ನೆಯ ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಕಾಶಿ ವಿಶ್ವವಿದ್ಯಾನಿಲಯದ ಇಂಗ್ಲಿಷ್ ಅಧ್ಯಾಪಕರಾದ ಶ್ರೀ॥ ಎಸ್. ಎಂ. ಕುಲಕರ್ಣಿ, ಎಂ.ಎ. ಅವರು ತಮ್ಮ ಕೆಲವು ಕನ್ನಡ ಕವಿತೆಗಳನ್ನು ಓದಿದರು; ಮತ್ತು ೧೯ನೆಯ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿರುವ "ನಿರಾಶಾವಾದ" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎಂ.ಎ. ಅವರು ಅಧ್ಯಕ್ಷತೆ ವಹಿಸಿದ್ದರು.

## ಕನ್ನಡ ಸುದ್ದಿ

**ಕರ್ನಾಟಕ ವಿದ್ಯಾವರ್ಧಕ ಸಂಘ : ಧಾರವಾಡ**

ಮೇಲ್ಕಂಡ ಸಂಘದ ಕಾರ್ಯದರ್ಶಿಗಳು ೧೯೪೦ನೆಯ ವರುಷದಲ್ಲಿ ಗ್ರಂಥಕರ್ತರಿಗೆ ಸಂಘದಿಂದ ಕೊಡಲಾಗುವ ಪಾರಿತೋಷಕದ ವಿಚಾರವಾಗಿ ಈ ರೀತಿ ತಿಳಿಸುತ್ತಾರೆ:—

೧. ಕೆಳಗೆ ಕಾಣಿಸಿದ ವಿಷಯಗಳಲ್ಲಿ ಯಾವುದೊಂದನ್ನು ಕುರಿತು ಸ್ವತಂತ್ರವಾಗಿ ಬರೆದ ಕನ್ನಡ ಗ್ರಂಥಗಳಿಗೆ ಪಾರಿತೋಷಕವನ್ನು ಕೊಡಲು ೩೦೦ ರೂಪಾಯಿಗಳನ್ನು ಕಾದಿಡಲಾಗಿದೆ

**ವಿಷಯವಿವರಣೆ :—** (೧) ಕನ್ನಡಸಾಹಿತ್ಯದ ಯಾವುದೇ ಒಂದು ಕಾಲದ ಇತಿಹಾಸ. (೨) ಯಾವನೊಬ್ಬ ಕನ್ನಡ ಕವಿಯ ಇಲ್ಲವೆ ಯಾವುದೇ ಒಂದು ಗ್ರಂಥದ ವಿಮರ್ಶಾತ್ಮಕ ಗ್ರಂಥ. (೩) ಆಧುನಿಕ ಭಾರತೀಯ (ಕನ್ನಡವನ್ನು ಬಿಟ್ಟು) ಇಲ್ಲವೆ ಯೂರೋಪಿಯನ್ ಭಾಷೆಯಲ್ಲಿಯ ಸಾಹಿತ್ಯದ ವಿಮರ್ಶಾತ್ಮಕ ಗ್ರಂಥ. (೪) ವಿಜ್ಞಾನದ ಬೆಳವಣಿಗೆ.

ಪುಸ್ತಕಗಳ ಯೋಗ್ಯತೆಗೆ ಅನುಸಾರವಾಗಿ ನೂರರವರೆಗೆ ಪಾರಿತೋಷಕಗಳನ್ನು ಕೊಡಲಾಗುವುದು. ಬಂದ ಪುಸ್ತಕಗಳಲ್ಲಿ ಒಂದೇ ಒಂದು ಉತ್ತಮ ಎಂದು ನಿರ್ಣಯವಾದಲ್ಲಿ ೩೦೦ ರೂಪಾಯಿಗಳ ಒಂದೇ ಪಾರಿತೋಷಕವನ್ನು ಸಹ ಕೊಡಬಹುದು.

ಕೈಬರಹದ ಪುಸ್ತಕಗಳನ್ನು ಕಾರ್ಯದರ್ಶಿಗಳ ಕಡೆಗೆ ೧೯೪೦ನೆಯ ಡಿಸೆಂಬರ್ ೩೧ರೊಳಗಾಗಿ ಮುಟ್ಟುವಂತೆ ಕಳುಹಿಸಬೇಕು. ಪಾರಿತೋಷಕವನ್ನು ಪಡೆದ ಪುಸ್ತಕಗಳನ್ನು ಇಟ್ಟುಕೊಂಡು ಉಳಿದವುಗಳನ್ನು ಗ್ರಂಥಕರ್ತರಿಗೆ ಅವರ ವೆಚ್ಚದಿಂದ ತಿರುಗಿ ಕೊಡಲಾಗುವುದು.

೨. ಉಳಿದ ೩೦೦ ರೂಪಾಯಿಗಳನ್ನು ನಡೆಯುವ ವರ್ಷದಲ್ಲಿ ಅಂದರೆ ೧೯೪೦ರಲ್ಲಿ ಪ್ರಕಟವಾದ ಉತ್ತಮ ಗ್ರಂಥಗಳಿಗೆ ಈಗಿನಂತೆ ಪಾರಿತೋಷಕಗಳನ್ನು ಹಂಚಲು ಉಪಯೋಗಿಸುವುದು.

ಮುದ್ರಿತ ಪುಸ್ತಕಗಳ ೭ (ಏಳು) ಪ್ರತಿಗಳನ್ನು ಇದೇ ಅಕ್ಟೋಬರ್ ೩೧ರೊಳಗಾಗಿ ಸಂಘದ ಕಾರ್ಯದರ್ಶಿಗಳ ಕಡೆಗೆ ಮುಟ್ಟುವಂತೆ ಕಳುಹಿಸಬೇಕು.

ಪಾರಿತೋಷಕ ಕೊಡುವದರ ಸಲುವಾಗಿ ನಿಯಮಗಳನ್ನೂ ಅರ್ಜಿಯ ನಮೂನೆಗಳನ್ನೂ ಕ. ವಿ. ವ. ಸಂಘದ ಕಾರ್ಯದರ್ಶಿಗಳಿಂದ ತರಿಸಿಕೊಳ್ಳಬೇಕು. ಪ್ರತಿಯೊಂದು ನಮೂನೆಗೆ ಎರಡಾಣೆ ಬೆಲೆ ಬೀಳುವುದು.

**ಕರ್ನಾಟಕ ಸಂಘ : ಶಿವಮೊಗ್ಗ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀ॥ ವಿ. ಸೀತಾರಾಮಯ್ಯನವರು ಶಿವಮೊಗ್ಗ ನಗರಭವನದಲ್ಲಿ ೧೪–೪–೪೦ನೆಯ ಭಾನುವಾರ "ರಾಷ್ಟ್ರೀಯ ಆರ್ಥಿಕ ಯೋಜನೆಗೆ ಹಣ ಒದಗಿಸುವಿಕೆ" ಎಂಬ ವಿಷಯವನ್ನು ಕುರಿತು ಭಾಷಣಮಾಡಿದರು.

**ಕರ್ನಾಟಕ ಸಂಘ : ಸಿರಿಯಾಳಕೊಪ್ಪ**

ಮೇಲ್ಕಂಡ ಸಂಘದ ೪ನೆಯ ವಾರ್ಷಿಕೋತ್ಸವ ಶ್ರೀ|| ವಿ. ಸೀತಾರಾಮಯ್ಯ, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ಕಳೆದ ೧೦–೧೧ನೆಯ ದಿನಗಳಲ್ಲಿ ಬಹಳ ಯಶಸ್ವಿಯಾಗಿ ನೆರವೇರಿತು.

**ಕನ್ನಡ ಸಾಹಿತ್ಯ ಸಂಸ್ಕೃತಿಗಳ ಮೇಲಣ ಉಪನ್ಯಾಸ : ದೆಹಲಿಯಲ್ಲಿ**

ಮೈಸೂರು ವಿಶ್ವವಿದ್ಯಾನಿಲಯದ ಶ್ರೀ|| ಎಂ. ವಿ. ಜಂಬುನಾಥನ್‌ರವರು ದೆಹಲಿಯ ಕಮರ್ಷಿಯಲ್ ಕಾಲೇಜಿನಲ್ಲಿ ಕಳೆದ ೫ನೆಯ ತಾರೀಖಿನ ದಿನ ಸಂಜೆ "ಕರ್ನಾಟಕ ಸಂಸ್ಕೃತಿ" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ|| ಸೆನ್‌ರವರು ಅಧ್ಯಕ್ಷತೆ ವಹಿಸಿದ್ದರು. ಉಪನ್ಯಾಸಕರು ಹಿಂದಿಯಲ್ಲಿ ಭಾಷಣಮಾಡುತ್ತ, ಕನ್ನಡ ಸಾಹಿತ್ಯ, ಕನ್ನಡ ನಾಡಿನ ಶಿಲ್ಪಕಲೆ, ಸಂಗೀತ ಇವುಗಳ ಹಿರಿಮೆಯನ್ನು ಕೊಂಡಾಡಿ ಬೇಲೂರು, ಹಳೇಬೀಡು, ಸೋಮನಾಥಪುರಗಳ ಶಿಲ್ಪ ವೈಭವದ ಉದಾಹರಣೆ ಕೊಟ್ಟರು.

**ಕರ್ನಾಟಕ ಸಂಘ : ಚನ್ನರಾಯಪಟ್ಟ**

ಈ ಸಂಘದ ೬ನೆಯ ವಾರ್ಷಿಕೋತ್ಸವ ಕಳೆದ ೧೨–೧೩ನೆಯ ತಾರೀಖು ಗಳಲ್ಲಿ ವೈಭವದಿಂದ ನಡೆಯಿತು. ಉತ್ಸವ ಯಶಸ್ವಿಯಾಗಲೆಂದು ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್ ಅವರು ಮತ್ತು ಶ್ರೀಗಳಾದ ರಾಜಮಂತ್ರಪ್ರವೀಣ ಎನ್. ಮಾಧವರಾಯರು, ಎಂ. ಜಿ. ಮೇಕ್ರಿಯವರು, ಎ. ವಿ. ರಾಮನಾಥನ್ ರವರು, ಇ. ಜಿ. ಮೆಕಾಲ್ಪೈನ್‌ರವರು, ಸಿ. ಕೆ. ವೆಂಕಟರಾಮಯ್ಯನವರು ಮತ್ತು ಎಸ್. ಅಬ್ದುಲ್‌ವಾಜಿದ್ ಅವರು ಸಂದೇಶಗಳನ್ನು ಕಳುಹಿಸಿದ್ದರು.

ಮೊದಲ ದಿನ ಸಂಜೆ ಶ್ರೀ|| ಟಿ. ರಾಮಯ್ಯನವರ ಅಧ್ಯಕ್ಷತೆಯಲ್ಲಿ ಉತ್ಸವ ಆರಂಭವಾಯಿತು. ಶ್ರೀ|| ಕೆ. ಎಲ್. ದೊರೆಸಾಮಿ ಅಯ್ಯಂಗಾರ್ಯರು ಸ್ವಾರಸ್ಯವಾದ ಸ್ವಾಗತ ಭಾಷಣಮಾಡಿದ ಬಳಿಕ ಸಂದೇಶಗಳನ್ನು ಶ್ರೀ|| ಎಸ್. ಎಂ. ಸೀತಾರಾಮಯ್ಯನವರು ಓದಿದರು. ದಿವಾನರವರ ಸಂದೇಶ ಹೀಗಿದೆ.

"ಚೆನ್ನರಾಯಪಟ್ಟದ ಕರ್ನಾಟಕ ಸಂಘದ ೬ನೆಯ ವಾರ್ಷಿಕೋತ್ಸವ ನಡೆಯುವ ಸಂಗತಿ ನನಗೆ ಬಹಳ ಹರ್ಷವನ್ನುಂಟುಮಾಡಿದೆ. ಸಂಘದವರಿಗೆಲ್ಲ ಮುಖ್ಯವಾಗಿ ಉತ್ಸಾಹೀ ಕಾರ್ಯದರ್ಶಿಗಳಾದ ಶ್ರೀ|| ಸಿ. ಆರ್. ಶ್ರೀನಿವಾಸ ಅಯ್ಯಂಗಾರರಿಗೆ ನನ್ನ ಅನೇಕ ಅಭಿನಂದನೆಗಳನ್ನರ್ಪಿಸುತ್ತೇನೆ. ಕಾಲಕ್ರಮದಲ್ಲಿ ಸಂಘ ಇನ್ನೂ ಬೆಳೆದು ದೊಡ್ಡ ಸಂಸ್ಥೆಯಾಗಲೆಂದೂ, ತಾಯ್ನುಡಿಯ ಸೇವೆಯನ್ನು ಅಧಿಕವಾಗಿಮಾಡಲೆಂದೂ ನಾನು ಹಾರೈಸುತ್ತೇನೆ."

ಶ್ರೀ|| ಎನ್. ಶಿವರಾಮಶಾಸ್ತ್ರಿಗಳು, ಕಾಳಿದಾಸನ ವಿಷಯವನ್ನು ಕುರಿತು ಉಪನ್ಯಾಸವಿತ್ತರು. ಶ್ರೀ|| ಕೆ. ಕೃಷ್ಣರಾಯರು ಭಾರತವಾಚನವನ್ನು ಬಹಳ ಸುಶ್ರಾವ್ಯವಾಗಿ ನಡಸಿ, ಎಲ್ಲರನ್ನೂ ಆನಂದಪಡಿಸಿದರು. ಶ್ರೀ|| ರಾಮಯ್ಯನವರು ಎಲ್ಲರನ್ನೂ ವಂದಿಸುತ್ತ ಸಂಘಗಳು ಹಳ್ಳಿಗಳ ಏಳಿಗೆಗಾಗಿ ಕೆಲಸವನ್ನು ಹೆಚ್ಚು ಹೆಚ್ಚಾಗಿ ಮಾಡುವುದು ಅವಶ್ಯಕವೆಂದರು.

ಮರುದಿವಸ ಶ್ರೀ|| ಶಿವರಾಮಶಾಸ್ತ್ರಿಗಳು ಬೇಂದ್ರೆಯವರ ಕೃತಿಗಳನ್ನು ಓದಿದರು. ಶ್ರೀ|| ಪರಮೇಶ್ವರ ಭಟ್ಟರು ಮಹಾದೇವಿಯಕ್ಕನ ಜೀವನವನ್ನು ಕುರಿತು ಉಪನ್ಯಾಸಮಾಡಿದರು. ಶ್ರೀ|| ಎಸ್. ಎಂ. ಸೀತಾರಾಮಯ್ಯನವರು ಅಧ್ಯಕ್ಷಸ್ಥಾನದಿಂದ ಎಲ್ಲರನ್ನೂ ವಂದಿಸಿದರು.

**ಕನ್ನಡಶಾಲೆ ಉಳಿದುಕೊಂಡಿತು : ವಳಸಂಗದಲ್ಲಿ**

ಸೊಲ್ಲಾಪುರ ಜಿಲ್ಲಾ ಸ್ಕೂಲ್ ಬೋರ್ಡಿನ ಬೊಕ್ಕಸದಲ್ಲಿ ಹಣದ ಕೊರತೆಯಾಗಿದೆಯೆಂಬ ನೆಪದಿಂದ ಬೋರ್ಡಿನ ಅಧಿಕಾರಿಗಳು ವಳಸಂಗ ಗ್ರಾಮದ ಕನ್ನಡಶಾಲೆಯ ಶಿಕ್ಷಕ ಶಿಕ್ಷಕಿಯರಿಗೆ "ಮನೆಗೆ ದಯಮಾಡಿಸಿ" ಎಂದು ನೋಟೀಸು ಕೊಟ್ಟಿದ್ದರು. ಇದರಿಂದ ವಳಸಂಘದ ಕನ್ನಡಶಾಲೆ ಮುಚ್ಚುವ ಸ್ಥಿತಿಯಲ್ಲಿತ್ತು. ಆದರೆ ಸ್ಥಳೀಯ ಕನ್ನಡ ಅಭಿಮಾನಿಗಳು ಬಹಳ ಹೋರಾಡಿದ್ದರಿಂದ ಆ ಪರಿಸ್ಥಿತಿ ತಪ್ಪಿತು. ಅಧಿಕಾರಿಗಳು ನೋಟೀಸನ್ನು ಹಿಂದಕ್ಕೆ ತೆಗೆದುಕೊಂಡರು. ಹೀಗೆ ಗಡಿನಾಡಿನಲ್ಲಿ ಒಂದು ಕಡೆ ಕನ್ನಡಕ್ಕೆ ಒದಗಿದ್ದ ಗಂಡಾಂತರ ತಪ್ಪಿದಂತಾಯಿತು.

---

## 'ಶ್ರೀ'ಯವರ ಪ್ರವಾಸ

(೨೬೭ನೆಯ ಪುಟದಿಂದ)

ಶ್ರೀ|| ಜಿ. ಆರ್. ರಂಗಸ್ವಾಮಿಯವರು ಕನ್ನಡ ಸಾಹಿತ್ಯ ಪರಿಷತ್ತಿನ ಧ್ಯೇಯವನ್ನೂ ಚರಿತ್ರೆಯನ್ನೂ ವಿವರಿಸಿದರು. ೧೯೧೫ರಲ್ಲಿ ಕನ್ನಡಿಗರಿಗೆ ಕನ್ನಡದ ಬಗ್ಗೆ ಇದ್ದ ತಾತ್ಸಾರ ಹೋಗಿ ಈಗ ಅದರ ವಿಷಯದಲ್ಲಿ ಉತ್ಸಾಹ ಹುಟ್ಟಿದ್ದರೆ ಅದಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಮುಖ್ಯ ಕಾರಣವೆನ್ನಬಹುದೆಂದು ಹೇಳಿದರು. ಕನ್ನಡ ಪ್ರಚಾರಕ್ಕಾಗಿ ಕೆಲವು ಪರೀಕ್ಷೆಗಳನ್ನು ವಿಧಾಯಕಮಾಡಿರುವರೆಂದು ಹೇಳಿ ಅವುಗಳ ವಿಷಯ ತಿಳಿಸಿದರು. ಕರ್ನಾಟಕ ಏಕೀಕರಣದ ವಿಷಯವಾಗಿ ಪರಿಷತ್ತು ಮಾಡುತ್ತಿರುವ ಪ್ರಯತ್ನವನ್ನೂ ವರ್ಣಿಸಿದರು. ಕನ್ನಡಿಗರೆಲ್ಲರೂ ಈ ಪ್ರಯತ್ನದಲ್ಲಿ ಸಹಾಯ ಮಾಡದಿದ್ದರೆ ಈ ಮಹತ್ಕಾರ್ಯ ಕೈಗೂಡಲಾರದೆಂದು ಹೇಳಿ, ನೆರದಿದ್ದ ಮಹಾಜನರ ಬೆಂಬಲವನ್ನು ಪ್ರಾರ್ಥಿಸಿದರು.

೭–೫–೪೦ನೆಯ ಮಂಗಳವಾರ **ಮಡಿಕೇರಿಯ** ಕೊಡಗು ಕರ್ನಾಟಕ ಸಂಘದ ಆಶ್ರಯದಲ್ಲಿ ಹೈಸ್ಕೂಲು ಭವನದಲ್ಲಿ ಮಹಾಜನರ ಸಭೆಯು ಏರ್ಪಟ್ಟಿತ್ತು.

ಅಕಾಲ ಮೃತ್ಯುವಿಗೆ ತುತ್ತಾದ ಶ್ರೀ|| ಎಂ. ಎನ್. ಕಾಮತ್‌ರವರ ನಿಧನದ ಸಂಬಂಧದಲ್ಲಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಸಂತಾಪಸೂಚನೆಯ ನಿರ್ಣಯ ಮಾಡಲ್ಪಟ್ಟಿತು.

ಮೊದಲು ಅರ್ಧಘಂಟೆಯ ಕಾಲ ಶ್ರೀ|| ಜಿ. ಆರ್. ರಂಗಸ್ವಾಮಿಯವರು ಕನ್ನಡಕ್ಕೆ ಮೊದಲು ಇದ್ದ ಅಗೌರವಕ್ಕೆ ಕಾರಣಗಳೇನೆಂದು ವಿವರಿಸಿದರು. ಪಾಶ್ಚಾತ್ಯ ಸಂಸ್ಕೃತಿ, ಆಚಾರ ವ್ಯವಹಾರಗಳು ಮನ್ನಣೆಯನ್ನು ಪಡೆದಂತೆ, ಇಂಗ್ಲಿಷ್ ಮಾತನಾಡುವುದು ಗೌರವ, ಕನ್ನಡ ಮಾತನಾಡುವುದು ಅನಾಗರಿಕ ಲಕ್ಷಣವೆಂಬ ಭಾವನೆ ಮೂಡಿತ್ತೆಂದರು. ನಮ್ಮ ಉದಾತ್ತ ಭಾವನೆಗಳು ನಮ್ಮ ತಾಯ್ನುಡಿಯಲ್ಲಿ ಹೊರದೋರುವಂತೆ ಇಂಗ್ಲಿಷಿನಲ್ಲಿ ರೂಪುಗೊಳ್ಳಲಾರದೆಂದೂ, ಸಹಜವಲ್ಲದ ಈ ಪ್ರಯತ್ನದಲ್ಲಿ ನಮ್ಮ ಶಕ್ತಿ ಕುಂದಿಹೋಗಿದೆಯೆಂದೂ ತಿಳಿಸಿದರು. ಹೆಚ್ಚು ಶಕ್ತಿಯುಳ್ಳವರು ಇಂಗ್ಲಿಷನ್ನು ಕಲಿತು ಅದರಲ್ಲಿ ತೋರುವ ಜ್ಞಾನ ಭಂಡಾರವನ್ನು ಕನ್ನಡಿಸಿ ಜನತೆಗೆ ಉಪಕಾರ ಮಾಡುವುದು ಆವಶ್ಯಕ; ಯಾವ ಶಾಸ್ತ್ರವನ್ನಾದರೂ ವಿವರಿಸುವಷ್ಟು ಶಕ್ತಿ ಕನ್ನಡಕ್ಕೆ ಬಂದಿದೆ; ಈ ವಿಷಯದಲ್ಲಿ ಸಂದೇಹ ಕೂಡದು ಎಂದರು. ಕನ್ನಡ ಉಳಿದರೆ ಅಭಿಮಾನದ ದೆಸೆಯಿಂದಲ್ಲ, ಅದರ ಉಪಯೋಗ ಮತ್ತು ಅನುಕೂಲದಿಂದ ಎಂದರು. ಪರಿಷತ್ತಿನ ಧ್ಯೇಯಗಳನ್ನೆಲ್ಲಾ ವಿವರಿಸಿ ಅದರ ಕೆಲಸದಲ್ಲಿ ಎಲ್ಲರೂ ನೆರವಾಗಬೇಕೆಂದರು.

ಬೆಂಗಳೂರಿನ ಶ್ರೀ ವೀರದೇವರು ಸೋಮವಾರಪೇಟೆಯಲ್ಲಿ ಮಾತನಾಡುತ್ತಾ "ಕೊಡಗು ಕರ್ನಾಟಕದಲ್ಲಿ ಕನ್ನಡ ಪ್ರಸಾರದ ಸಂಘಗಳೇ ಇರುವಂತೆ ತೋರುವುದಿಲ್ಲ" ಎಂದು ಹೇಳಿದ ನಿಜವಲ್ಲದ ಅಂಶ ತಾ|| ೩–೫–೪೦ರ 'ಕನ್ನಡ ನುಡಿ'ಯಲ್ಲಿ ಪ್ರಕಟವಾದುದಕ್ಕಾಗಿ 'ಶ್ರೀ'ಯವರು 'ಕನ್ನಡ ನುಡಿ'ಯ ಪರವಾಗಿ ವಿಷಾದವನ್ನು ವ್ಯಕ್ತಪಡಿಸಿದರು.

ಅನಂತರ 'ಶ್ರೀ'ಯವರು ಹರಿಶ್ಚಂದ್ರ ಕಾವ್ಯದ ವಿಷಯವಾಗಿ ವಿಷಯಪೂರಿತವಾದ ಉಪನ್ಯಾಸ ಮಾಡಿದರು. ವೀರಶೈವಮತ ಹುಟ್ಟಿದ ಕಾಲದೇಶಗಳನ್ನು ವರ್ಣಿಸಿ, ಬಸವಣ್ಣನವರಿಗೆ ಜನತೆಯಲ್ಲಿದ್ದ ಅಪಾರ ಕರುಣೆಯನ್ನು ವರ್ಣಿಸಿದರು. ಬಸವಣ್ಣನವರು ತಿಳಿಗನ್ನಡದಲ್ಲಿ ಹೇಳುವ ಅಗತ್ಯವಿದ್ದುದು ಕನ್ನಡಕ್ಕೆ ಎಂಥ ಅನುಕೂಲವಾಯಿತೆಂದು ವಿವರಿಸಿದರು. ಹರಿಶ್ಚಂದ್ರನ ಪಾತ್ರದ ಚರಿತ್ರೆಯನ್ನು ಹೇಳಿ ರಾಘವಾಂಕನು ಅದಕ್ಕೆ ಕೊಟ್ಟಿರತಕ್ಕ ವೈಶಿಷ್ಟ್ಯವನ್ನು ಸ್ಪಷ್ಟಪಡಿಸಿದರು. ಹರಿಶ್ಚಂದ್ರ ಹೊಲತಿಯರ ಸಂವಾದವನ್ನು ಓದಿ ಜಾತಿಯ ಕಟ್ಟಿನಲ್ಲಿ ಕಾಣುವ ಅನೌಚಿತ್ಯಗಳನ್ನೆಲ್ಲಾ ಕವಿ ವಿಮರ್ಶಿಸಿ ತನ್ನ ಸಮಾಧಾನಗಳನ್ನು ತಿಳಿಸಿರುವುದಾಗಿ ಹೇಳಿ ಅವನ್ನು ಸ್ಪಷ್ಟಪಡಿಸಿದರು. ರಾಘವಾಂಕನು ಹರಿಶ್ಚಂದ್ರಕಾವ್ಯವನ್ನು ರಚಿಸಿದ್ದು ಸ್ವಾರ್ಥಕ್ಕಲ್ಲ, ಜನರನ್ನು ಉದ್ಧಾರಮಾಡಿ ತನ್ಮೂಲಕ ಪಂಪಾಪತಿಯನ್ನು ಸೇವಿಸುವುದಕ್ಕೆಂದೂ, ಮಹಾಕವಿಗಳ ಸಂಕಲ್ಪವೆಲ್ಲ ಇದೇ ಎಂದೂ ಹೇಳಿದರು. 'ಶ್ರೀ'ಯವರ ಭಾಷಣ ಸಭಿಕರೆಲ್ಲರನ್ನೂ ರೋಮಾಂಚಗೊಳಿಸಿತು.

ತಾ|| ೮–೫–೪೦ನೆಯ ಬುಧವಾರ 'ಶ್ರೀ'ಯವರು ಇಂಗ್ಲಿಷಿನಲ್ಲಿ "Shakespeare's Last Phase" ಎಂಬ ವಿಷಯವಾಗಿ ಭಾಷಣಮಾಡಿದರು. ಭಾಷಣಾನಂತರ ಕ|| ಸಾ|| ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ಕೊಡಗಿನ ಮಹಾಜನರೂ ನೆರವಾಗಬೇಕೆಂದೂ ಬಹುಸಂಖ್ಯೆಯಿಂದ ಮಹಾಜನರು ಸದಸ್ಯರಾಗಿ ಈ ಹಬ್ಬ ಯಶಸ್ವಿಯಾಗಿ ನಡೆಯಲು ಸಹಾಯಮಾಡಬೇಕೆಂದೂ ಬಯಸಿದರು.

---

೩೦–೮೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು




ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

ಸಂಪುಟ ೨
ಸಂಚಿಕೆ ೩೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮೇ ೨೪, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಮುಂದೇನು?

ಮೊದಲ ಮಾತು: ಇಂಗ್ಲಿಷು ನಮ್ಮ ಶಿಕ್ಷಣದಲ್ಲಿ ಪ್ರಥಮ ಭಾಷೆಯಾಗಿದ್ದು ಅಷ್ಟು ಫಲಕಾರಿಯಾಗಿಲ್ಲವೆಂದು ನನ್ನ ಹಿಂದಿನ ಲೇಖನದಿಂದ (ಕನ್ನಡ ನುಡಿ ೫-೪-೪೦) ಮನದಟ್ಟಾದರೆ ಮುಂದೇನು ಮಾಡಬೇಕೆಂದು ಪ್ರಶ್ನೆ ಏಳುವುದು. ದೇಹದಲ್ಲಿ ರೋಗ ಸೇರಿದೆ; ರೋಗ ಇಂಥದು ಎಂದು ತಿಳಿದರೆ ಮುಂದೆ ಅದಕ್ಕೆ ಚಿಕಿತ್ಸೆಯೇನು? ಎಂದು ವಿಚಾರಮಾಡಬಹುದು. ಇಂಗ್ಲಿಷು ಈಗಿರುವಂತೆ ಪ್ರಥಮ ಭಾಷೆಯಾಗಿದ್ದರೆ ನಮ್ಮ ಶಾಲೆ ಕಾಲೇಜುಗಳಲ್ಲಿ ಶಿಕ್ಷಣ ಪಡೆದವರೂ ವಿದ್ಯಾವಂತರೂ ಇಂಗ್ಲಿಷನ್ನು ದೇಶಭಾಷೆಯಂತೆ ಉಪಯೋಗಿಸುವಂತಾಗಬೇಕು. ಇವರುಗಳಲ್ಲಿ ಬಹು ಮಂದಿ ಬರೆಹಗಾರರಾಗಬೇಕು; ಸಾಹಿತ್ಯ ನಿರ್ಮಾಣಕರಾಗಬೇಕು; ತಮ್ಮ ಅಂತರಂಗವನ್ನು ಧಾರಾಳವಾಗಿ ಶುದ್ಧವಾದ ಮತ್ತು ಅಂದವಾದ ಭಾಷೆಯಲ್ಲಿ ಹೊರಗೆಡಹುವವರಾಗಬೇಕು. ಅಲ್ಲದೆ ಇಂಗ್ಲಿಷು ಮನೆ ಮಾತಾಗಬೇಕು; ಹಳ್ಳಿಗಾಡಿನ ಭಾಷೆಯಾಗಬೇಕು. ಒಟ್ಟಿನಲ್ಲಿ ತಮ್ಮ ಬಳಕೆಯ ಭಾಷೆಯಲ್ಲಿ ರಸವಿರುವಂತಾಗಬೇಕು.

ಈಗ ನಮ್ಮ ಸುಶಿಕ್ಷಿತರು ಮಾತನಾಡುವ ಭಾಷೆಯನ್ನು ಸ್ವಲ್ಪ ಸೂಕ್ಷ್ಮವಾಗಿ ಪರೀಕ್ಷಿಸಿ. ಇಂಗ್ಲಿಷು ಹೊರಡದೆ ಇದ್ದಾಗ ಕನ್ನಡ; ಕನ್ನಡದಲ್ಲಿ ದಾರಿ ಕಾಣದೆಯಿದ್ದರೆ ಇಂಗ್ಲಿಷಿನ ತುಂಡು ವಾಕ್ಯಗಳು. ಜೊತೆಗೆ 'ಅದು' 'ಇದು' 'ಹೀಗೆ' ಎನ್ನುವ ಮಾತುಗಳಂತೂ ಧಾರಾಳವಾಗಿ ಬಾಯಿಂದ ಹೊರಬೀಳುವುವು. ಅರೆ ಮೂಕ ಮಾತನಾಡಲು ಯತ್ನಿಸಿದಾಗ ಅವನ ಮಾತನ್ನು ಕೇಳುವವರು ಯಾವ ಕಷ್ಟವನ್ನು ಅನುಭವಿಸುವರೋ ಅದನ್ನು ನಾವು ನಿತ್ಯವೂ, ಎಚ್ಚರದ ಪ್ರತಿ ಘಳಿಗೆಯಲ್ಲೂ ಅನುಭವಿಸುತ್ತಿದ್ದೇವೆ.

ಇಂಗ್ಲಿಷು ಮನೆ ಮಾತಾಗುವುದೆಂದಾಗ ನನ್ನ ಮಿತ್ರರೊಬ್ಬರ ಮನೆಯ ಮಾತು ನೆನಪಾಗುವುದು. ಅವರೊಬ್ಬ ಡಾಕ್ಟರು; ಕ್ರೈಸ್ತಿಯನರು. ಅವರು ಮನೆಯಲ್ಲಿ ಮಾತನಾಡುವುದು ಇಂಗ್ಲಿಷನ್ನೇ. ಒಂದು ದಿನ ನಾನು ಅವರೊಂದಿಗೆ ಹರಟೆ ಹೊಡೆಯುತ್ತಿರಲು ಅವರ ನಾಲ್ಕು ವರ್ಷದ ಮಗು ಚಡ್ಡಿಯನ್ನು ಬಿಚ್ಚಿಕೊಂಡು ಹೊರಗೆ ಬಂದಿತು. ಆಗ ನನ್ನ ಮಿತ್ರರು ಮಗುವನ್ನು ಹೀಗೆ ಕೇಳಿದರು. "What, kokka making? (ಕೊಕ್ಕ ಮೇಕಿಂಗ್) go there." ಈ ಮಿಶ್ರ ಭಾಷೆಯಾದರೂ ಚಿಂತೆಯಿಲ್ಲ.

ಅಮೇರಿಕಾ ದೇಶದ ಜನರ ಭಾಷೆ ಇಂಗ್ಲಿಷಂತೆ ಕಂಡರೂ ಈಚೀಚೆಗೆ ಅದೇ ಬೇರೆ ಭಾಷೆಯಾಗುತ್ತಿದೆ. ಹಾಗೆ ನಮ್ಮ ದೇಶದ ಇಂಗ್ಲಿಷು 'ಇಂಡಿಯನ್ ಇಂಗ್ಲಿಷ್' ಆಗಬಹುದು. ಆದರೆ ಆಗ ಇಂಗ್ಲಿಷು ಪಂಡಿತರು ನಮ್ಮಲ್ಲಿ ಬಳಕೆಯಲ್ಲಿರುವ ಆ ಭಾಷೆಯನ್ನು ಅಲ್ಲಗೆಳೆಯಕೂಡದು. ಈಗ ನಮ್ಮ ದೇಶದ ಇಂಗ್ಲಿಷು ಪಂಡಿತರಲ್ಲಿ ಒಂದು ಗರ್ವವಿದೆ. ತಮ್ಮ ಭಾಷೆ ಶುದ್ಧ; ಇತರರದು ಎಷ್ಟೇ ಚೆನ್ನಾಗಿದ್ದರೂ ಅದು ಶುದ್ಧ ಇಂಗ್ಲಿಷಲ್ಲವೆಂದು. ನಮ್ಮ ಜನರ ಇಂಗ್ಲಿಷಿನಲ್ಲಿ ತಪ್ಪು ಎತ್ತಿ ತೋರಿಸುವುದೇ ಅವರ ಹೆಮ್ಮೆ. ಕೆಲವು ವರ್ಷಗಳ ಹಿಂದೆ ಒಂದೂರಿನಲ್ಲಿ ಬಾನುಲಿಯ (Radio) ಆರಂಭೋತ್ಸವವಾಗಬೇಕಿತ್ತು. ಈ ಕಾರ್ಯಕ್ಕೆ ಇಂಗ್ಲಿಷ್ ಪ್ರೊಫೆಸರೊಬ್ಬರನ್ನು ಆಹ್ವಾನಿಸಿದರು. Fowler's 'Modern English Usage'ನ ಕೆಲವು ಪುಟಗಳನ್ನು ಓದಿದರು! ಈ ದೇಶದಲ್ಲಿನ ಯಾರೂ (ಇಂಗ್ಲಿಷಿನಲ್ಲಿ ದೊಡ್ಡ ಡಿಗ್ರಿಗಳನ್ನು ಪಡೆದು ಕಾಲೇಜಿನಲ್ಲಿ ಉಚ್ಚ ತರಗತಿಗಳಿಗೆ ಇಂಗ್ಲಿಷ್ ಪಾಠ ಹೇಳುವ ಪ್ರೊಫೆಸರಾದ ನಮ್ಮ ಜನರೂ) ಜೀವದ ಮಿಡಿತ ಕಾವುಗಳಿರುವ ತಿರುಳು ಇಂಗ್ಲಿಷನ್ನು ಮಾತನಾಡಲಾರರು, ಬರೆಯಲಾರರು ಎಂದು ಬಾರಿ ಬಾರಿಗೂ ನಮಗೆ ಮನದಟ್ಟಾಗುವಂತಾದರೆ ನಮ್ಮ ಮನಸ್ಸು ಎಷ್ಟು ಕುಗ್ಗುತ್ತದೆಯೆಂದು ಊಹಿಸಿ. ಇಂಗ್ಲಿಷಿನವರು ಏನು ಮಾತನಾಡಿದರೂ ಕೇಳಲು ಹಿತವಾಗಿರುವುದು; ಅವರ ಭಾಷಣದ ಜೊತೆಗೆ ನಮ್ಮವರ ಭಾಷಣವನ್ನು ಹೋಲಿಸಿ ಸಮಾಧಾನವಾಗದಿರುವುದು ಹೀಗಾಗಿ ನಮ್ಮ ಜನ ಇಂಗ್ಲಿಷಿನವರಿಗೆ ಕೀಳು ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಹುಟ್ಟಿ ಬೆಳೆಯುತ್ತದೆ. ಈ ದೇಶದ ಜೀವನಶಕ್ತಿ ಎಲ್ಲ ಮುಖದಲ್ಲಿಯೂ ಪುಷ್ಟಿಗೊಂಡು ಬೆಳೆಯಬೇಕಾಗಿರುವಾಗ ಈ ಬಗೆಯ ಕೀಳ್ಮೆಯ ಫಲಿತಾಂಶವೇನಾಗುವುದೆಂದು ವಿವರಿಸಬೇಕಾದ್ದಿಲ್ಲ.

'ಇಂಡಿಯನ್ ಇಂಗ್ಲಿಷ್' ಎಂಬ ಭಾಷೆ ನಮ್ಮ ದೇಶದಲ್ಲಿ ಹರಡಿ ನಮ್ಮ ದೇಶಭಾಷೆಯಾಗಲು, ನಮ್ಮ ಶಿಕ್ಷಣದಲ್ಲಿ ಇಂಗ್ಲಿಷು ಪ್ರಥಮ ಭಾಷೆಯಾಗಿರುವುದು ಉಚಿತ. ಅಲ್ಲದೆ ಇಂಗ್ಲಿಷು ಪ್ರಪಂಚದ ಭಾಷೆಯಾಗಬಹುದು. ಈಗಾಗಲೆ ಪ್ರಪಂಚದ ೧೮೦ ಕೋಟಿ ಪ್ರಜೆಗಳಲ್ಲಿ ೫೦ ಕೋಟಿ ಪ್ರಜೆಗಳಿಗೆ ಇಂಗ್ಲಿಷು ತಿಳಿದಿದೆ. ಇಂತಹ ಭಾಷೆ ನಮ್ಮ ದೇಶ ಭಾಷೆಯಾದರೆ ಎಷ್ಟು ಸೌಕರ್ಯ! ಕನ್ನಡಮ್ಮ ಕೊರಗಿದರೂ ಚಿಂತೆಯಿಲ್ಲ; ಕನ್ನಡ ದೇವಿಗೆ ಪೂಜೆ ಸಲ್ಲದಿದ್ದರೂ ವ್ಯಸನಪಡಬೇಕಾದ್ದಿಲ್ಲ. ಈ ಸಮ್ಮೋಹನವೂ ಒಂದಿದೆಯಲ್ಲವೆ? ಇದನ್ನು ವಿಚಾರಿಸೋಣ.

(೨೬೬ನೇ ಪುಟಕ್ಕೆ)

# ದರ್ಶನಗಳು

ಡಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ|| ೧೭-೫-೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

## ಪ್ರಮೇಯ

ಪ್ರಮೇಯ ವಿಚಾರದಲ್ಲಿ ಪ್ರಭಾಕರನು ಬಹಳಮಟ್ಟಿಗೆ ನೈಯಾಯಿಕರ ರೀತಿಯನ್ನೇ ಅನುಸರಿಸುತ್ತಾನೆ. ದ್ರವ್ಯದಲ್ಲಿ ಸ್ವಭಾವ ಪರಿಣಾಮವನ್ನು ಭಾಟ್ಟರಂತೆ ಅಂಗೀಕರಿಸುವುದಿಲ್ಲ. ಅಭಾವವೆಂಬ ಪದಾರ್ಥವನ್ನು ಪ್ರಭಾಕರನು ಒಪ್ಪುವುದಿಲ್ಲ. ಉದಾಹರಣೆಗಾಗಿ ಮೇಜಿನ ಮೇಲೆ ಪುಸ್ತಕವಿದ್ದರೆ, ಅದು ಕಣ್ಣಿಗೆ ಗೋಚರವಾಗುತ್ತದೆ. ಪುಸ್ತಕ ಇಲ್ಲದಿದ್ದರೆ ಅದರ ಅಭಾವ, ಅಂದರೆ ಅದು ಇಲ್ಲದಿರುವಿಕೆ ತೋರುತ್ತದೆ, ಎಂದು ನೈಯಾಯಿಕರೂ ಭಾಟ್ಟರೂ ಹೇಳುತ್ತಾರೆ. ಆದರೆ, ಪ್ರಭಾಕರನ ಮತದಲ್ಲಿ, ಪುಸ್ತಕವಿಲ್ಲದಿದ್ದಾಗ ಬರಿಯ ಮೇಜು ಕಾಣುತ್ತದೆ, ಅಷ್ಟೆ. ಅದರ ಮೇಲೆ ಪುಸ್ತಕಕ್ಕೆ ಬದಲಾಗಿ ಅಭಾವ ಎಂಬ ಪದಾರ್ಥ ಮತ್ತೊಂದು ಇರುವುದಿಲ್ಲ ಎಂದು ಏರ್ಪಡುತ್ತದೆ. ಆದ್ದರಿಂದ ಅಭಾವ ಪದಾರ್ಥ ಈ ಮತದಲ್ಲಿ ಸ್ಥಿರಪಡುವುದಿಲ್ಲ. ಹಾಗೆಯೇ **ಭೇದಾಭೇದ**ವೆಂಬ ಸಂಬಂಧಕ್ಕೆ ಬದಲಾಗಿ ನ್ಯಾಯದಲ್ಲಿರುವಂತೆಯೇ **ಸಮವಾಯ**ವೆಂಬ ಸಂಬಂಧವನ್ನು ಪ್ರಭಾಕರನು ಅಂಗೀಕರಿಸಿದ್ದಾನೆ.

ಭಾಟ್ಟ ಮತದ ಪ್ರಕಾರ ಭೇದಾಭೇದವನ್ನೂ ಸ್ವಭಾವ ವಿಕಾರವನ್ನೂ ಒಪ್ಪಿದರೆ ಪ್ರಕೃತಿ ವಿಮರ್ಶೆಯಲ್ಲಿ ಸಾಂಖ್ಯರ ಪ್ರಕ್ರಿಯೆ ತೋರಿಬರುತ್ತದೆ. ಆದರೆ ನೈಯಾಯಿಕರಂತೆ ಅನೇಕ ದ್ರವ್ಯಗಳನ್ನು ಮೀಮಾಂಸಕರು ಒಪ್ಪುವುದರಿಂದ, ಸಾಂಖ್ಯರಂತೆ ಎಲ್ಲವನ್ನೂ ಒಂದೇ ಒಂದು ತತ್ತ್ವಕ್ಕೆ ಅನ್ವಯಿಸುವುದು ಸಾಧ್ಯವಿಲ್ಲ. ಕತ್ತಲೆಯನ್ನು ಒಂದು ದ್ರವ್ಯವೆಂದೂ ಅದನ್ನು ಪ್ರಕಾರದ ಅಭಾವವೆಂದು ಹೇಳುವುದಕ್ಕಾಗುವದಿಲ್ಲವೆಂದೂ ಮೀಮಾಂಸಕರು ವಾದಿಸುವುದು ವಿಚಿತ್ರವಾಗಿ ತೋರುತ್ತದೆ.

## ಧರ್ಮ

ಯಾಗಗಳ ಪರಿಷ್ಕರಣೆಯನ್ನು ಮಾಡುತ್ತ ವೇದಕ್ಕೆ ವ್ಯಾಖ್ಯಾನ ರೂಪವಾಗಿ ಬಂದ ಈ ದರ್ಶನದಲ್ಲಿ ಧರ್ಮದ ಸ್ವರೂಪ ಇತರ ದರ್ಶನಗಳಿಗಿಂತ ಬೇರೆಯಾಗಿ ವರ್ಣಿತವಾಗಿದೆ.

ಸ್ವರ್ಗ ಮುಂತಾದ ಸುಖಗಳನ್ನು ಅನುಭವಿಸುವುದೂ ನರಕದಲ್ಲಿ ಸಂಭವಿಸಬಹುದಾದ ದುಃಖದಿಂದ ನಿವೃತ್ತಿ ಪಡೆಯುವುದೂ ಯಾಗಗಳಲ್ಲಿ ಧ್ಯೇಯವಾಗಿತ್ತು. ಈ ವಿಧವಾದ ಸುಖದುಃಖಗಳು ಪರಲೋಕಕ್ಕೆ ಸಂಬಂಧಪಟ್ಟವಾದ್ದರಿಂದ ಅವುಗಳನ್ನು ವೇದವೇ ತಿಳಿಸಬಲ್ಲುದಾಯಿತು. ಆದ್ದರಿಂದ ವೇದದ ಪ್ರಕಾರ ಯಾವುದು ವಿಹಿತವೋ ಆ ಕೆಲಸವನ್ನು ಮಾಡುವುದು ಧರ್ಮ. ವೇದದಲ್ಲಿ ಯಾವುದು ನಿಷಿದ್ಧವೋ ಆ ಕೆಲಸ ಅಧರ್ಮ. ಧರ್ಮಾಚರಣೆಯನ್ನು ಪಾಲಿಸಿದವನಲ್ಲಿ **ಅಪೂರ್ವ**ವೆಂಬ ಧರ್ಮವೊಂದು ಉತ್ಪನ್ನವಾಗುತ್ತದೆ. ಅದರ ಸಹಾಯದಿಂದ ಆತ್ಮನಿಗೆ ಸುಖಪ್ರಾಪ್ತಿ ಮತ್ತು ದುಃಖನಿವೃತ್ತಿಗಳು ಏರ್ಪಡುತ್ತವೆ.

ವೇದದಲ್ಲಿ ಹೇಳಿರುವ ಕರ್ಮಗಳನ್ನು ಮೂರು ವಿಭಾಗ ಮಾಡಬಹುದು.

(೧) **ಕಾಮ್ಯಕರ್ಮ :** ಜ್ಯೋತಿಷ್ಟೋಮ ಯಾಗವನ್ನು ಸ್ವರ್ಗಾಪೇಕ್ಷೆಯುಳ್ಳವನು ಮಾಡಬೇಕು. ನಾವು ಕೋರುವ ಸುಖಗಳಿಗೆ ಅನೇಕ ಸಾಧನಗಳಿವೆ. ಅವುಗಳನ್ನು ಮಾಡಬೇಕಾದರೆ, ಆ ಸುಖಗಳನ್ನು ಅನುಭವಿಸಬೇಕೆಂಬ ಆಸೆಯಿರಬೇಕು. ಹಾಗೆ ಆಸೆಯಿಲ್ಲದಿದ್ದರೆ ಆ ಕರ್ಮಗಳನ್ನು ನಾವು ಮಾಡಬೇಕಾದ್ದಿಲ್ಲ.

(೨) **ಪ್ರತಿಷಿದ್ಧಕರ್ಮ:** ಈ ಜಾತಿಯ ಕರ್ಮಗಳನ್ನು ಮಾಡಿದರೆ ನಮಗೆ ನರಕವುಂಟಾಗುತ್ತದೆ. ದುಃಖ ಬೇಡವಾಗಿದ್ದರೆ ಈ ರೀತಿಯ ಕರ್ಮಗಳಿಗೆ ಕೈಹಾಕಬಾರದು.

(೩) **ನಿತ್ಯಕರ್ಮ** ಎಂದು ಮತ್ತೊಂದು ಬಗೆಯ ಕರ್ಮಕ್ಕೆ ಹೆಸರು. ಪ್ರತಿದಿನವೂ ಮೂರು ವೇಳೆ ಸಂಧ್ಯಾವಂದನೆ ಮಾಡುವುದು ನಿತ್ಯಕರ್ಮವಾಗುತ್ತದೆ. ಈ ವಿಧವಾದ ಕರ್ಮಗಳಿಗೆ ಯಾವ ಫಲವನ್ನೂ ವೇದಗಳು ಹೇಳಿಲ್ಲ. ಆದರೂ ಇವುಗಳಿಗೆ ಒಂದು ಬಗೆಯಾದ ಫಲವನ್ನು ಮೀಮಾಂಸಕರು ಹೇಳುತ್ತಾರೆ. ನಿತ್ಯಕರ್ಮಗಳನ್ನು ಮಾಡದೆ ಹೋದರೆ **ಪ್ರತ್ಯವಾಯ** ಅಂದರೆ ದೋಷ ಏರ್ಪಡುತ್ತದೆ. ಅದನ್ನು ತಡೆಯುವುದಕ್ಕಾಗಿ ನಿತ್ಯಕರ್ಮಗಳನ್ನು ಮಾಡಬೇಕು. ಹಾಗೆಯೇ ನಿತ್ಯಕರ್ಮಾನುಷ್ಠಾನದಿಂದ ಪಾಪವನ್ನೂ ಪರಿಹರಿಸಬಹುದು.

ಮೀಮಾಂಸೆ ದರ್ಶನದ ಮಾರ್ಗವನ್ನೂ ಧ್ಯೇಯವನ್ನೂ ಅನುಸರಿಸಿದ ಕಾರಣ ನಿತ್ಯಕರ್ಮವನ್ನು ಮಾಡುವುದು ಮಾತ್ರ ಧರ್ಮವೆಂದು ಏರ್ಪಟ್ಟಿತು. ಭಾಟ್ಟ ಮತದಲ್ಲಿ ಧರ್ಮ ಸುಖಸಾಧನೆಗಾಗಿ ಎಂದು ಸಿದ್ಧಾಂತ. ಪ್ರಾಭಾಕರ ಮತದಲ್ಲಿ ಧರ್ಮವೇ ಪುರುಷಾರ್ಥವಾಗುತ್ತದೆ.

ಪ್ರಪಂಚ, ಆತ್ಮ ಮತ್ತು ಅವುಗಳ ಸಂಬಂಧ—ಇವೆಲ್ಲವೂ ನಿಜವಾದದ್ದು. ಆತ್ಮನು ಚೇತನ ಸ್ವರೂಪನಲ್ಲ. ನೈಯಾಯಿಕರು ಹೇಳುವಂತೆ ಮೀಮಾಂಸಕರೂ ದುಃಖನಾಶವನ್ನೇ ಮೋಕ್ಷವೆನ್ನುತ್ತಾರೆ. ಮನಸ್ಸಿನ ಮೂಲಕ ಪ್ರಪಂಚದೊಡನೆ ಸಂಬಂಧ ತಪ್ಪಿದರೆ ಜ್ಞಾನ ಸೂಕ್ಷ್ಮಾವಸ್ಥೆಯಲ್ಲಿ ಆತ್ಮನಲ್ಲಿರುತ್ತದೆ. ಆಗ ಯಾವ ಅನುಭವವೂ ಇರುವುದಿಲ್ಲ. ಅದೇ **ಮೋಕ್ಷ** ಎಂದು ಮೀಮಾಂಸಕರ ಅಭಿಪ್ರಾಯ.

## ವೇದಾಂತ

ಉಪನಿಷತ್ತುಗಳಲ್ಲಿ ಬ್ರಹ್ಮವಿಚಾರ ಮುಖ್ಯವಾದದ್ದಾಗಿದೆ. ಆತ್ಮ ಮತ್ತು ಪ್ರಕೃತಿ ಎಂಬ ಪದಾರ್ಥಗಳಿಗಿಂತಲೂ ಬೇರೆಯಾದ ಬ್ರಹ್ಮನ ಸ್ವರೂಪವನ್ನು ಋಷಿಗಳು ತಮ್ಮ ತಪಸ್ಸಿನಿಂದ ತಿಳಿದುಕೊಂಡರು. ಅವರಲ್ಲಿ ಎರಡು ಮತಗಳಾದುವು. ಒಂದು **ನಿಷ್ಪ್ರಪಂಚ ಬ್ರಹ್ಮವಾದ** ಮತ್ತೊಂದು **ಸಪ್ರಪಂಚ ಬ್ರಹ್ಮವಾದ**. ಈ ಎರಡು ವಾದಗಳನ್ನೂ **ನಿರ್ಗುಣವಾದ** ಮತ್ತು **ಸಗುಣವಾದ** ಎಂದೂ ಹೇಳಬಹುದು. ಒಂದು ಮತವನ್ನು ಅದ್ವೈತಿಗಳು ಪೋಷಿಸಿದರು. ಮತ್ತೊಂದಕ್ಕೆ ವಿಶಿಷ್ಟಾದ್ವೈತಿಗಳೂ ದ್ವೈತಿಗಳೂ ಪೋಷಕರಾದರು.

ವೇದಾಂತವೆಂದರೆ ವೇದದ ಕೊನೆಯ ಭಾಗವೆಂದರ್ಥ. ವೇದಗಳ ಅಂತ್ಯಭಾಗದಲ್ಲಿ ಉಪನಿಷತ್ತುಗಳು ಬ್ರಹ್ಮ ಸ್ವರೂಪವನ್ನು ವಿಶದಪಡಿಸಿ, ಅದನ್ನು ಸಾಕ್ಷಾತ್ಕಾರ ಮಾಡುವುದಕ್ಕೆ ಜ್ಞಾನವೇ ಸಾಧನ ಎಂದು ಸಾರುತ್ತವೆ. ಹಾಗೆಯೇ ಪ್ರಪಂಚ ಮಾಯೆಯಿಂದ ನಿರ್ಮಿತವಾಗಿದೆ ಎಂದೂ ಉಪನಿಷತ್ತುಗಳಲ್ಲಿ ವ್ಯಕ್ತಪಟ್ಟಿದೆ. ಈ ಅಂಶಗಳನ್ನೆಲ್ಲ ವಿವರಿಸುತ್ತ ಬಾದರಾಯಣರು **ಬ್ರಹ್ಮಸೂತ್ರ**ವೆಂಬ ತಮ್ಮ ಗ್ರಂಥದಲ್ಲಿ ಇತರ ಮತಗಳ ಮಾರ್ಗ ತಪ್ಪಾಗಿದೆಯೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಬ್ರಹ್ಮಸೂತ್ರಗ್ರಂಥ ಉಪನಿಷತ್ತಿನಲ್ಲಿ ತೋರುವ ಮುಖ್ಯವಾದ ವಾಕ್ಯಗಳನ್ನು ಸಯುಕ್ತಿಕವಾಗಿ ವಿವರಿಸುತ್ತದೆ. ಆದ್ದರಿಂದ ಅದನ್ನು ಉಪನಿಷದ್ಭಾಷ್ಯವೆಂಬುದಾಗಿ ಒಂದು ರೀತಿಯಲ್ಲಿ ಹೇಳಬಹುದು. ವೇದಾಂತಮತವನ್ನು ಪರಿಷ್ಕರಿಸಿದ ಆಚಾರ್ಯರೆಲ್ಲರೂ ಉಪನಿಷತ್ತುಗಳಿಗೂ ಬ್ರಹ್ಮಸೂತ್ರಕ್ಕೂ ಗೀತೆಗೂ ವ್ಯಾಖ್ಯಾನವನ್ನು ರಚಿಸುವ ಮೂಲಕ ತಮ್ಮ ತಮ್ಮ ಮತವನ್ನು ಸ್ಪಷ್ಟಪಡಿಸಿರುತ್ತಾರೆ. ಹೀಗೆ ಏರ್ಪಟ್ಟ ಮತಗಳಲ್ಲಿ ಈಗ ಮುಖ್ಯವಾಗಿ **ಅದ್ವೈತ**, **ವಿಶಿಷ್ಟಾದ್ವೈತ** ಮತ್ತು **ದ್ವೈತ**ಗಳೆಂಬ ಮೂರು ಮತಗಳು ಪ್ರಚಾರದಲ್ಲಿವೆ. ಅವುಗಳನ್ನು ಇಲ್ಲಿ ಸಾಮಾನ್ಯವಾಗಿ ಪರಿಶೀಲನೆ ಮಾಡಬಹುದು.

---

**ಕುಂಭಕೋಣ : ಅಖಿಲಭಾರತ ವೀರಶೈವ ಸಮ್ಮೇಳನ**

ಕುಂಭಕೋಣದಲ್ಲಿ ಇದೇ ೨೬, ೨೭, ೨೮ ನೆಯ ತಾರೀಖುಗಳಲ್ಲಿ ನಡೆಯಲಿರುವ ಮೇಲ್ಕಂಡ ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಸೊಲ್ಲಾಪುರದ ಬ್ಯಾರಿಸ್ಟರ್ ಎಂ. ಎಸ್. ಸರದಾರರು ಆರಿಸಲ್ಪಟ್ಟಿದ್ದಾರೆ. ಸಾಹಿತ್ಯ ವಿಭಾಗಕ್ಕೆ ಬೆಳಗಾವಿಯ ಡಾ|| ಎಸ್. ಸಿ. ನಂದಿಮಠ ಅವರೂ, ಮಹಿಳಾವಿಭಾಗಕ್ಕೆ ಶ್ರೀ ಪದ್ಮಾವತಿದೇವಿ ಅಂಗಡಿಯವರೂ, ತರುಣರ ಸಮ್ಮೇಳನಕ್ಕೆ ಶ್ರೀ ಬಿ. ಎಸ್. ಪುಟ್ಟಸ್ವಾಮಿಯವರೂ ಅಧ್ಯಕ್ಷರು ಎಂಬುದಾಗಿ ತಿಳಿಯಬಂದಿದೆ. ಸಾಹಿತ್ಯಸಮ್ಮೇಳನದ ಪ್ರಾರಂಭೋತ್ಸವವನ್ನು ಸುಪ್ರಸಿದ್ಧ ಆಂಧ್ರಕನ್ನಡ ವಿದ್ವಾಂಸರೂ, ಸಾಹಿತಿಗಳೂ ಆದ ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರು ನಡಸುವರು.

## ರತ್ನನ ಮಹಾಹರಟೆ*

"ದೋಷಜ್ಞರು ಇದರಲ್ಲಿಯ ದೋಷಗಳನ್ನೆತ್ತಿ 'ಇದು ಇನ್ನೂ ಚೆನ್ನಾಗಬಹುದಾಗಿತ್ತು' ಎನ್ನಲಿ; ನಮಗದು ಬೆಳಕು, ಕಣ್ಣು. ಗುಣಜ್ಞರು ಇದ್ದಷ್ಟು ಗುಣಗಳಿಗಾಗಿ ಅದನ್ನು ಸ್ವೀಕರಿಸಲಿ; ನಮಗದು ಬೆಂಬಲ." (ಪುಟ ೬೬)

ಈ ಹತ್ತುವರ್ಷಗಳಲ್ಲಿ (೧೯೨೮ರಿಂದ ೧೯೩೮ರ ವರೆಗೆ) ಶ್ರೀಮಾನ್ ಜಿ. ಪಿ. ರಾಜರತ್ನಂ ಅವರು ಕನ್ನಡಕ್ಕೆ ಸಲ್ಲಿಸಿರುವ ಸೇವೆ ಅದ್ಭುತವಾದುದು. ಅವರ 'ವಿಜಾತೀಯ' ಕೃತಿಗಳನ್ನು ನೋಡಿದವರು, 'ಗ್ರಂಥಶೈಲಿಯ ಕವನದಿಂದ ಗ್ರಾಮ್ಯಪದಕ್ಕೆ, ಶಿಶುಗೀತೆಯಿಂದ ವಿಡಂಬನ ಕಾವ್ಯಕ್ಕೆ, ಬಾಲಸಾಹಿತ್ಯದಿಂದ ಪಾಳಿಯ ಅನುವಾದಕ್ಕೆ—ಎಲ್ಲಿಂದ ಎಲ್ಲಿಗೆ ಹರಿದಿದೆ ಇವರ ಭಾವ ಪ್ರವಾಹ!' ಎಂದು ಆಶ್ಚರ್ಯಪಟ್ಟಿದ್ದಾರೆ. ಕೆಲವು ವೇಳೆ ಆ ವಿವಿಧ ಕಾವ್ಯಸೃಷ್ಟಿಗೆ ಹಿನ್ನೆಲೆಯನ್ನು ಹುಡುಕ ಹೊರಟು ಏನೇನೋ ಊಹಿಸಿದ್ದಾರೆ ಕೂಡ. ಅಂತೂ, ಇದುವರೆಗೆ— ಅವರೇ ತಮ್ಮ 'ಧೀರೋದ್ಧತವಾದ ತೇಜಸ್ವಿ ತರುಣ ಚಾರಿತ್ರ್ಯ'ವನ್ನು ಬರೆದು ಎಲ್ಲರ ಮುಂದಿಡುವವರೆಗೆ— ಆ ಕವಿಕರ್ಮಶಾಲೆಯ ದರ್ಶನವು ಅನುಮಾನ ಅಸ್ಪಷ್ಟತೆಯಲ್ಲಿಯೇ ಉಳಿದಿತ್ತು. ಈ ಕೊರತೆಯನ್ನು ಹೋಗಲಾಡಿಸಿ ಶ್ರೀ|| ರಾಜರತ್ನಂ ಅವರು ಸಾಹಿತ್ಯ ಪ್ರೇಮಿಗಳ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ. ಹೀಗೆ ಗ್ರಂಥಕರ್ತರೊಬ್ಬರು ತಮ್ಮ ಜೀವನದ ಕಾವುನೋವು, ಕನಸುಮನಸು, ಕೃತಿಗಳ ಹುಟ್ಟುಗುಟ್ಟುಗಳನ್ನು ಹೇಳಿಕೊಂಡಿರುವುದು ಕನ್ನಡದಲ್ಲಿ ಇದೇ ಮೊದಲು. ಆದುದರಿಂದ ಈ 'ಪ್ರಯೋಗಪಟು'ಗಳ ಕೀರ್ತಿಮಾಲೆಗೆ ಮತ್ತೊಂದು ಹೂ ಸೇರಿದಂತಾಗಿದೆ. ಆದರೆ ಕನ್ನಡದ ಅರಕೆಯನ್ನು ತುಂಬುವುದಕ್ಕೆ ಇದೊಂದು ಪುಸ್ತಕ ಸಾಲದು. ಈ ಸಾಹಿತ್ಯ ಶಾಖೆ ಕನ್ನಡದಲ್ಲಿ ಕೊನರಲಿ; ನಮ್ಮ ನಾಡುನುಡಿಗಳ ಏಳಿಗೆಗಾಗಿ ದುಡಿಯುತ್ತಿರುವ ಹಿರಿಯರು, ನುರಿತವರು, ತಮ್ಮ 'ಜೀವನ ಸ್ಮೃತಿ'ಯನ್ನು ಬರೆಯಲಿ, ಎರೆಯಲಿ; ಅವುಗಳಿಂದ ಸ್ಫೂರ್ತಿಗೊಂಡು ಕನ್ನಡಿಗರ ಬಾಳು ಹಿಗ್ಗಲಿ, ಒಗ್ಗಲಿ! ಎಂದು ಹಾರೈಸುತ್ತೇನೆ.

ಇಷ್ಟು ಚಿಕ್ಕವಯಸ್ಸಿಗೆ ತಮ್ಮ ಜೀವನಕಥೆಯನ್ನು ಬರೆಯಲು ಕಾರಣವೇನಿತ್ತೆಂದು ಲೇಖಕರೇ ತಿಳಿಸಿದ್ದಾರೆ. ಅವರು ಕನ್ನಡ ನಾಡನ್ನೆಲ್ಲ ತಿರುಗಿ, ಅಲ್ಲಿಯವರೊಡನೆ ಬೆರತು, ತಮ್ಮ ಕೃತಿಗಳನ್ನು ಓದಿ ತೋರಿಸಿದಾಗ ಉತ್ಸಾಹಿಗಳನೇಕರು ಅವರ ಸಾಹಿತ್ಯ, ಜೀವನ, ಕೃತಿಗಳ ವಿಷಯವಾಗಿ ಕೊನೆಮೊದಲಿಲ್ಲದೆ ಪ್ರಶ್ನೆಮಾಡಿದ್ದಾರೆ. 'ಕೇಳಿದವರ ಕುತೂಹಲವನ್ನು ಶಾಂತಗೊಳಿಸು'ವುದಕ್ಕೆ ಹುಟ್ಟಿದ 'ವಿವರಣೆಯ ಹರಟೆ'ಗಳು ಅನೇಕರ ಸೂಚನೆಯಂತೆ ಈ 'ಮಹಾ ಹರಟೆ'ಯ ರೂಪ ತಳೆಯಿತೆಂದು ಗೊತ್ತಾಗುತ್ತದೆ. ಹೀಗೆ ಕೇವಲ ಆವಶ್ಯಕತೆಯಿಂದ ಹುಟ್ಟಿದುದು ಈ 'ಹತ್ತು ವರುಷ'. ಆದುದರಿಂದ ಇದನ್ನು ಬರೆದುದಕ್ಕಾಗಿ ಯಾರಿಂದಲೂ ಆಕ್ಷೇಪಣೆ ಬರಲಾರದು; ಹಾಗೂ ಇದಕ್ಕೆ ಎಲ್ಲರ ಅನುಮೋದನೆಯೇ ಲಭಿಸೀತೆಂದು ಎಣಿಸಿದ್ದೇನೆ. ಏಕೆಂದರೆ, ನಮ್ಮ ಕಾಲಕ್ಕೆ ಇಂತಹ ಗ್ರಂಥಗಳು ವಿಶೇಷವಾಗಿ ಬೇಕಿವೆ. ಹೊಸ ಭಾವ, ಹೊಸ ನಡೆನುಡಿ, ಹೊಸ ಪ್ರಮಾಣಗಳು ನಮ್ಮ ಸಮಾಜ ಸಾಹಿತ್ಯಗಳನ್ನು ಮಾರ್ಪಡಿಸುತ್ತಿರುವುದು ಎಲ್ಲರೂ ಬಲ್ಲ ಸಂಗತಿಯೇ ಆಗಿದೆ. ಈ ಹೊಸದರ ಸುಳಿವು ಸೆಳವುಗಳಿಗೆ ಸಿಕ್ಕಿ ಮುಂಬರಿಯುತ್ತಿರುವವರು ಕೆಲವರಾದರೂ ಆಗಾಗ ಸ್ವಲ್ಪ ನಿಂತು ಬಂದ ಹಾದಿಯನ್ನು ಹಿಂದಿರುಗಿ ನೋಡಿ, ಆ ಹೊತ್ತಿನ ತಮ್ಮ ಸ್ಥಿತಿ ಸ್ಥಾನಗಳನ್ನು ಗುರುತಿಸಿ, 'ಎಲ್ಲಿಂದ ಹೊರಟುದು, ಎಲ್ಲಿಗೆ ಹೋಗುತ್ತಿರುವುದು, ಇರುವುದೆಲ್ಲಿ, ಮಾಡುತ್ತಿರುವುದೇನು, ಏಕೆ?' ಎಂದು ಮೊದಲಾಗಿ ವಿಚಾರಮಾಡುವುದು ಧರ್ಮಸಮ್ಮತವಾಗಿದೆ. ತಾವು ಮನನಮಾಡಿದುದನ್ನು ಇತರರಿಗೂ ಪರಿಚಯಮಾಡಿಕೊಡುವ ಬುದ್ಧಿಯಲ್ಲಿ 'ಆತ್ಮಕಥೆ'ಯ ಅಂಕುರವಿದೆ. ಇಂತಹ 'ಆತ್ಮಕಥೆ'ಯಿಂದ ಪಡೆಯಬಹುದುದಾದ ಪ್ರಯೋಜನ ಇಬ್ಬಗೆಯಾದುದು: ತಮ್ಮ ಗೊತ್ತುಗುರಿಗಳೇನೆಂದು ಗೋಚರವಾಗಿ ಮುಂದಿನ ಕಾರ್ಯದಲ್ಲಿ ಸ್ಪಷ್ಟಜ್ಞಾನ ಧೈರ್ಯ ಬರುವುದು ಒಂದು; ದೂರಾಳಿಗಳ ದುರಭಿಪ್ರಾಯಗಳನ್ನು ಹೋಗಲಾಡಿಸಿ ಅಭಿಮಾನಿಗಳ ವರ್ಗವನ್ನು ಹೆಚ್ಚಿಸುವುದು. ಇನ್ನೊಂದು 'ಹತ್ತು ವರುಷ'ವು ಶ್ರೀ|| ರಾಜರತ್ನಂ ಅವರಿಗೆ ಈ ಎರಡು ಫಲಗಳನ್ನೂ ದೊರಕಿಸುವುದೆಂದು ನಂಬಿದ್ದೇನೆ.

ಸ್ವವಿಷಯವನ್ನು ಹೇಳಿಕೊಳ್ಳಲು ದೊರೆತ ಅವಕಾಶದಲ್ಲಿ ಲೇಖಕರು ಸಾಧಿಸಿರುವ ಮೂರು ಉದ್ದೇಶಗಳು ಶ್ಲಾಘನೀಯವಾಗಿವೆ. ೧. ಅವರು ಸಾಹಿತ್ಯರಂಗಕ್ಕೆ ಹೋಗುವ ತವಕದಿಂದ ಹಾದಿ ಹುಡುಕುತ್ತಿದ್ದಾಗ,—ಮುಂದೆ ಕತ್ತಲಲ್ಲಿ ತಡಕುತ್ತಿದ್ದಾಗ—ಒಳ್ಳೆಯ ಮಾತನಾಡಿ ಬೆನ್ನುತಟ್ಟಿದವರನ್ನೂ ಕೈಹಿಡಿದು ಮುಂದಕ್ಕೆ ನಡಸಿದವರನ್ನೂ ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಯುವಕರಿಗೆ ಸಕಾಲದಲ್ಲಿ ಬೆಳಕು ಬೆಂಬಲಗಳನ್ನು ಕೊಡುವ ಸಹಾನುಭೂತಿಯ ಹಿರಿಯರು ಎಷ್ಟು ಅವಶ್ಯವೆಂದು ಒತ್ತಿ ಹೇಳಬೇಕಾಗಿಲ್ಲ. ತನಗೆ ಒದಗುವ ಅವಕಾಶ ಪ್ರೋತ್ಸಾಹಗಳಿಂದ, ತನ್ನ ಸಾಮರ್ಥ್ಯ ಸಾಧನೆಗಳಿಂದ ತರುಣ ಲೇಖಕನು ಹೇಗೆ ಬೆಳೆಯಬಹುದು, ಅವನ ಜೀವನ ಎಷ್ಟು ಪರಿಣಾಮಕಾರಿಯಾಗಬಹುದು ಎನ್ನುವದಕ್ಕೆ ಶ್ರೀ|| ರಾಜರತ್ನಂ ಅವರೇ ಶ್ರೇಷ್ಠ ನಿದರ್ಶನವಾಗಿದ್ದಾರೆ. ತಮಗೆ ಲಭಿಸಿದ ಸಹಾಯವನ್ನು ನೆನೆದು ಎಳೆಯ ಮೊಳಕೆಗಳಿಗೆ ನೀರೆರೆಯುವ ಧರ್ಮಸಂಪ್ರದಾಯವನ್ನು ಅವರು ಈಗಾಗಲೇ ಕೈಕೊಂಡಿದ್ದಾರೆ........ ೨. ಸಾಹಿತ್ಯ ಕೃಷಿಯನ್ನೇ ಕಸಬನ್ನಾಗಿ ಸ್ವೀಕರಿಸಿದ ಕನ್ನಡಿಗನ ಕಷ್ಟ ನಿಷ್ಠುರಗಳನ್ನೂ ಸ್ನೇಹ ಸಂತೋಷಗಳನ್ನೂ ಚಿತ್ರಿಸಿದ್ದಾರೆ. ಗ್ರಂಥಪ್ರಕಾಶನ ಕಾರ್ಯವು ಕನ್ನಡನಾಡಿನಲ್ಲಿ ಇನ್ನೂ ದೊಡ್ಡ ಸಾಹಸವಾಗಿಯೇ ಇದೆ. ಲಾಭದ ಆಸೆಯಿಲ್ಲದೆ ಉತ್ತಮ ಗ್ರಂಥಗಳನ್ನು ಬೆಳಕಿಗೆ ತಂದು ಭಾಷಾಸೇವೆಯಲ್ಲಿ ನಿರತರಾದ ಪ್ರಕಾಶಕರು ಎಷ್ಟು ಕೈಕಚ್ಚಿಸಿಕೊಂಡಿರುವರೆಂದು ಬಲ್ಲವರೇ ಬಲ್ಲರು. ಪುಸ್ತಕಗಳನ್ನು ಬರೆಯಿಸಿ, ಪ್ರಕಟಗೊಳಿಸಿ, ತಮಗೆ ನೆರವು ನೀಡಿದ ರಾಮಮೋಹನ ಕಂಪನಿಯನ್ನೂ, ಸತ್ಯಶೋಧನ ಪುಸ್ತಕ ಭಂಡಾರವನ್ನೂ ಸ್ಮರಿಸಿರುವುದು ಉಚಿತವಾಗಿದೆ........ ೩. ಇಂದಿನ ತರುಣ ಲೇಖಕರ ಕೆಚ್ಚು ನೆಚ್ಚು, ದೃಷ್ಟಿಕೋನ ಹೃದಯ ತಾನಗಳೇನೆಂದು ತೋರಿಸಿಕೊಡಲು ಯತ್ನಿಸಿದ್ದಾರೆ.

"ರತ್ನನ ಈ ಪುಸ್ತಕ ಅತ್ಯಲ್ಪಕಾಲದಲ್ಲಿ ಅಚ್ಚಾಗಬೇಕಾಗಿ ಬಂದದ್ದರಿಂದ ಇದರಲ್ಲಿ ಕಾಗುಣಿತಗಳ, ವಿರಾಮಚಿಹ್ನೆಗಳ ಸ್ಖಾಲಿತ್ಯಗಳು ಅಲ್ಲಲ್ಲೆ ಉಳಿದಿವೆ", ಎಂದು ಲೇಖಕರು ತಿಳಿಸುತ್ತಾರೆ. (ಅಪರೂಪ, ಕಡಿಮೆ, ನಂತರ, ಬರದೆ, ಬೆಳಿಗ್ಗೆ, ಬೇಸಿಗೆ, ಮೊಟ್ಟಮೊದಲು, ರಾತ್ರೆ—ಇವುಗಳಲ್ಲಿ ಅಕ್ಷರ ಸ್ಖಾಲಿತ್ಯವೆಷ್ಟು? ಅಸಾಧು ರೂಪವೆಷ್ಟು?) ನಿಜವಾಗಿ, ಈ ಗ್ರಂಥದ ಪ್ರಮಾದಗಳು ಬೇರೆಯವು; ಬಹುಶಃ ಅವಸರದ ದುಷ್ಫಲಗಳು. ೧. ದಿಟ್ಟತನ ಬಿಚ್ಚುಮನಗಳ ನೆಪದಲ್ಲಿ ಚುಚ್ಚುಮಾತಿನ ಅಟ್ಟಹಾಸಕ್ಕೆ ಮಾರುಹೋಗಿರುವುದು ಅಲ್ಲಲ್ಲಿ ಕಂಡುಬರುತ್ತದೆ; ಕಿರುಕುಳ ಕೊಟ್ಟವರಮೇಲೆ, ಕಷ್ಟನಷ್ಟಗಳಿಗೆ ಗುರಿಪಡಿಸಿದವರ ಮೇಲೆ ರಚ್ಚೆಯಿಂದ ಮುಯ್ಯಿ ತೀರಿಸಿಕೊಳ್ಳುವ 'ಹೃದಯ ದೌರ್ಬಲ್ಯ' ತಲೆಯೆತ್ತಿದೆ. ಸಂಸಾರದ ಸಂಕಟಗಳನ್ನು ಆ ಕಾಲದಲ್ಲಿ ನುಂಗಿಕೊಂಡು 'ಸಹನೆ ಸಂಯಮಗಳನ್ನು ಕಲಿತು ಒಡೆದುಹೋಗಿದ್ದ ಮನಸ್ಸನ್ನು ಒಟ್ಟುಗೂಡಿಸಿದ'ವರು ಈಗ — ವರ್ಷಾನಂತರ — ಅವುಗಳನ್ನು ಕುರಿತು ಬರೆಯುವಾಗ ಸಂಯಮ ಔದಾರ್ಯಗಳನ್ನೇಕೆ ಮರೆತರು? ಸಾಹಿತ್ಯಕ್ಕೆ ಹೆಚ್ಚು ಸಂಬಂಧವಿಲ್ಲದ ಕೆಲವು ಸಾಂಸಾರಿಕ ಪ್ರಸಂಗಗಳನ್ನು ಬಿಟ್ಟದ್ದರೆ, ಅಥವಾ ಮಿತವಾಗಿ ಹಿತವಾಗಿ ತೇಲಿಸಿ ಬರೆದಿದ್ದರೆ ಒಳಿತಾಗಿತ್ತು........ ೨. ನಿನ್ನೆಮೊನ್ನೆಯ ಸಾಹಿತ್ಯ ಘಟನೆಗಳ, ವಾದವಿವಾದಗಳ ಮಾತನ್ನೆತ್ತಿಕೊಂಡು ಪಕ್ಷಪಾತದಿಂದ, ಇತರರ ಮುಖಮುರಿಯುವಂತೆ ಆಡಿರುವುದು ನ್ಯಾಯಸಮ್ಮತವಲ್ಲ. ಇವುಗಳಲ್ಲಿ ಯಾರು ತಪ್ಪು ಯಾರು ಸರಿ ಎಂಬ ವಿಷಯ ಮುಖ್ಯವಲ್ಲ: ಕಾಲದ ನೆರೆಯಲ್ಲಿ ಇಂತಹ ಸಣ್ಣ ಹಳ್ಳತಿಟ್ಟುಗಳು ಗುರುತಿಲ್ಲದಂತೆ ಮುಚ್ಚಿಹೋಗುತ್ತವೆ. ತಾರತಮ್ಯವಿಲ್ಲದೆ ಅವುಗಳಿಗೆಲ್ಲ ಇಲ್ಲದ ಸಲ್ಲದ

(೨೬೬ನೆಯ ಪುಟಕ್ಕೆ)

*"ಹತ್ತು ವರುಷ". ಬರೆದವರು: ಶ್ರೀಮಾನ್ ಜಿ. ಪಿ. ರಾಜರತ್ನಂ. ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ. ಕ್ರೌ ಅ. ಪುಟ ೧೫೨; ಶ್ರೀಮಾನ್ ದ. ರಾ. ಬೇಂದ್ರೆಯವರ 'ಪೀಠಿಕೆ', ರಾಜರತ್ನಂ ಅವರ ಹತ್ತು ಭಾವ ಚಿತ್ರಗಳು ಮತ್ತು ಒಂದು ರೇಖಾ ಚಿತ್ರ ಸಹಿತ. ಬೆಲೆ, ಒಂದು ರೂಪಾಯಿ.

### ಕನ್ನಡ ಕವಿ ಸೂಕ್ತಿ

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಮೆಂ
ಬವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗಟ್ತೆ ಮುಕ್ತಿ ಸಂ
ಭವಿಸುವ ಲಾಭಮೆಂಬವೆ ಜಿನೇಂದ್ರಗುಣ ಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱಱ ಮಾಡುವುದೇಂ ಪೆಱಱಿಂದಮಪ್ಪುದೇಂ

—ಪಂಪ : ಆದಿಪುರಾಣ—I–೨೬




ಶುಕ್ರವಾರ, ಮೇ ೨೪, ೧೯೪೦

## ಬರವಣಿಗೆಗೆ ಪ್ರೋತ್ಸಾಹ

ಲೋಕದ ಇತಿಹಾಸದಲ್ಲಿ ವೈಶಾಖ ಶುಕ್ಲ ಪೂರ್ಣಿಮೆ ಒಂದು ಚಿನ್ನದ ದಿನ. ಏಕೆಂದರೆ ಅದು ಭಗವಾನ್ ಬುದ್ಧನು ಸತ್ಯವನ್ನು ಅರಿತು ಪ್ರಪಂಚವನ್ನು ಮೇಲೆತ್ತಲು ನಿಶ್ಚಯಿಸಿದ ದಿನ. ಆ ದಿನದ ನೆನಪನ್ನು ಮಾಡಿಕೊಡಲು ಶ್ರೀ॥ ರಾಜರತ್ನಂ ಅವರು ಬುದ್ಧದೇವನಿಗೂ ಆತನ ತತ್ವಗಳಿಗೂ ಸಂಬಂಧಿಸಿದಂತೆ ಹೊಸಕನ್ನಡ ಸಾಹಿತ್ಯದಲ್ಲಿ ಹುಟ್ಟಬಂದಿರುವ ಬರವಣಿಗೆಗಳಲ್ಲಿ ಕೆಲವನ್ನು ಆಯ್ದು ಆ ಹೆಸರಿನಲ್ಲಿ ತೆರಳೆ ಕಟ್ಟಿ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯರಂಗದಲ್ಲಿ ವಿರಾಮವಿಲ್ಲದೆ ದುಡಿಯುತ್ತ ಸ್ವಂತ ಕೃತಿಗಳಿಂದಲೂ ಇತರ ಭಾಷಾ ಗ್ರಂಥಗಳ ಅನುವಾದಗಳಿಂದಲೂ ಉಪನ್ಯಾಸಗಳಿಂದಲೂ ಇವರು ನಾಡನುಡಿ ಸೇವೆ ಮಾಡುತ್ತಿರುವ ಸಂಗತಿ ಎಲ್ಲರಿಗೂ ತಿಳಿದುದೇ ಆಗಿದೆ.

ಈ ಪುಸ್ತಕವನ್ನು ಅಚ್ಚುಹಾಕಿಸುತ್ತ ಗ್ರಂಥಕರ್ತರಿಗೆ ನಾಡಿನಲ್ಲಿ ದೊರೆಯುತ್ತಿರುವ ಪ್ರೋತ್ಸಾಹವನ್ನು ಕುರಿತು ಎರಡು ಮಾತುಗಳನ್ನಾಡಿದ್ದಾರೆ. ಅವು ನೋವಿನ ನುಡಿಗಳಾದರೂ ಸ್ವಂತ ಅನುಭವದಿಂದ ಬಂದವು ಮತ್ತು ಸತ್ಯಸ್ಥಿತಿಯನ್ನು ವರ್ಣಿಸುವವು. ಇಂತಹ ನುಡಿ ಬರೆಹಗಾರರಿಂದ ಸಂತತವಾಗಿ ಕೇಳಿಬರುತ್ತಿದೆ. ದುಡಿಯುವುದು, ಅಚ್ಚು ಮಾಡಿಸಿ ಪ್ರಕಟಿಸುವುದು, ಸಾಲಹೊತ್ತು ಬಳಲುವುದು ಕನ್ನಡ ಬರಹಗಾರರ ಬಹು ಕಾಲದ ಭಾಗ್ಯವಾಗಿಬಿಟ್ಟಿದೆ. ಒಂದು ಶ್ರದ್ಧೆಗೆ ಕಟ್ಟುಬಿದ್ದು ಕಷ್ಟನಷ್ಟಗಳನ್ನು ಲೆಕ್ಕಿಸದೆ ದುಡಿಯುವ ಜನವೇನೊ ದುಡಿಯುತ್ತಾರೆ; ದೊಡ್ಡ ನೆನಪುಗಳನ್ನು ಜನಕ್ಕೆ ಮಾಡಿಕೊಡುವುದಕ್ಕೂ ದೊಡ್ಡ ಬೆಳಕನ್ನು ಜಗತ್ತಿಗೆ ಹಿಡಿದುತೋರಿಸುವುದಕ್ಕೂ ಸಂತತವಾಗಿ ಪ್ರಯತ್ನಿಸುತ್ತಾರೆ. ಆದರೆ ಅವರ ಶ್ರಮ ಜನರ ಕಣ್ಣಿಗೆ ಬೀಳದೆಯೇ ಹೋದರೆ ಕೆಲಸದಲ್ಲಿ ಉತ್ಸಾಹವಾಗಲಿ ಉಲ್ಲಾಸವಾಗಲಿ ಊರುವುದು ಕಷ್ಟವಾದೀತು. ಈ ಸಂಬಂಧದಲ್ಲಿ ಅವರಂತೆ ಕನ್ನಡಕ್ಕಾಗಿ ದುಡಿಯುವ ಹತ್ತಾರು ಜನ ಇದೇ ರೀತಿಯಲ್ಲಿ ನಿರುತ್ಸಾಹಗೊಂಡಿದ್ದಾರೆಂಬುದನ್ನು ಕನ್ನಡ ಪ್ರಪಂಚದ ಅನುಭವವಿರುವವರೆಲ್ಲರೂ ಬಲ್ಲರು. ಕನ್ನಡದಲ್ಲೇಕೆ ಬರೆಯಬೇಕು? ಯಾರ ಪ್ರಯೋಜನಕ್ಕಾಗಿ? ಬರೆಯುವವರು ಬದುಕಬೇಕು ಹೇಗೆ? ಎಂಬ ಪ್ರಶ್ನೆಗಳು ಹಲವು ಬಾಯಿಗಳಿಂದ ಕೇಳುತ್ತಿವೆ. ಕೆಲಸ ಮಾಡುವವರಿಗೆ ನಮ್ಮ ಕೆಲಸ ಜನಕ್ಕೆ ಬೇಕಿಲ್ಲ ಎಂಬ ಯೋಚನೆ ಬಂದರೆ ಅಂದು ಅವರ ಶಕ್ತಿ ಕುಗ್ಗುವುದು; ಕೆಲಸದ ಸಂತೋಷ ಬತ್ತಿಹೋಗುವುದು. ಬುದ್ಧಿಯ ಪ್ರಪಂಚದಲ್ಲಿ ಮುಂದುವರಿದು ತಿಳಿವಳಿಕೆಯನ್ನು ಹರಡಲೂ ಸಂತೋಷಗಳನ್ನು ಊಡಲೂ ಯಾರು ಪ್ರಯತ್ನಿಸುತ್ತಿರುವರೊ ಅಂಥವರ ಮನಸ್ಸು ಹರ್ಷವಾಗಿರುವಂತೆ ನೋಡಿಕೊಳ್ಳುವುದು ಸಮಾಜದ ಕರ್ತವ್ಯವಾಗಿರುತ್ತದೆ. ಅವರಿಗೆ ಸಹಾಯಕವಾದ ಪರಿಸ್ಥಿತಿಯನ್ನುಂಟುಮಾಡುವುದು ಅದಕ್ಕೆ ಒಂದು ಗೌರವದ ಕೆಲಸವಾಗುತ್ತದೆ. ಅದುಬಿಟ್ಟು, ನಾನೇಕೆ ಬರೆದೆ, ದೇವರೆ? ಇದರ ಸಾಲಸೂಲಗಳ ಹೊಣೆ ಹೇಗೆ ಹೊರಲಿ—ಎಂದು ನರಳುವ ಮಾತೇ ಎಲ್ಲ ಕಡೆಯಿಂದಲೂ ಕೇಳಿಸಿದರೆ ಆಯಾ ಕಾಲದ ಸಮಾಜ ಯಾವ ಕರ್ತವ್ಯಭಾರವನ್ನು ಹೊರಬೇಕೊ ಅದನ್ನು ಹೊರದೆ ಹಿಂಜರಿದಂತಾಗುತ್ತದೆ.

ಯೋಚನೆ ಮಾಡುವವರು ಮಾಡಿ, ಬರೆಯುವವರು ಬರೆದಿಡುತ್ತಿರುವಾಗ ಅದನ್ನು ಅಚ್ಚುಮಾಡಿ ಮಾರುವವರೂ ದೊಡ್ಡ ದಳವಾಗಬೇಕು. ಆ ದಳಕ್ಕೆ ಈ ಕೆಲಸ ಪ್ರಯೋಜನಕಾರಿಯಾಗಬೇಕು. ಹಾಗಾಗಬೇಕಾದರೆ ಬರೆದುದನ್ನು ಓದುವ, ಕೊಳ್ಳುವ, ಜನವರ್ಗ ಹೆಚ್ಚಾಗಬೇಕು. ಈ ವರ್ಗ ಹೆಚ್ಚಾಗಬೇಕಾದರೆ ಜನಕ್ಕೆ ಕನ್ನಡದಲ್ಲಿ ಆದರ, ವಿಶ್ವಾಸ, ಅಭಿಮಾನಗಳು ಮೇಲಾಗಬೇಕು. ಇವೊತ್ತಿನ ದೊಡ್ಡ ಅಗತ್ಯ ಇದು. ಇದರ ಸೂಚನೆಯೇ ಇಂದು ಕಾಣುತ್ತಿಲ್ಲವೆಂಬುದು ವಿಷಾದದ ಸಂಗತಿ. ಹಿಂದಿನ ಕಾಲಗಳಲ್ಲಿ ಶ್ರೀಮಂತರಾದ ಕೆಲವರೊ, ಮಠಗಳಂತಹ ಒಂದೆರಡು ಸಂಸ್ಥೆಗಳವರೊ ವಿದ್ವಜ್ಜನರ ಶ್ರಮಕ್ಕೆ ಪ್ರತಿಫಲ ದೊರಕಿಸಿಕೊಡುತ್ತಿದ್ದರು. ಬರೆಯುವವರ ಜೀವಿಕೆ ಕಷ್ಟವಾಗಿರಲಿಲ್ಲ. ಇಂದು ಜೀವನದ ರೀತಿ ಬದಲಾಗಿರುವುದರಿಂದ ಈಗಿನ ಬರವಣಿಗೆ ಬಹುತರ ಇವೊತ್ತಿನ ಜೀವನಕ್ಕೆ ಹತ್ತಿರದಲ್ಲಿ ನುಡಿಯುತ್ತಿರುವುದು; ಇಂದಿನ–ಇಲ್ಲಿನ ಬದುಕಿನ ಬಣ್ಣ, ಗುಣ, ಗತಿಗಳನ್ನು ಕುರಿತದಾಗುವುದು. ಶ್ರೀಮಂತರ ಮತ್ತು ಮಠ ಮುಂತಾದ ಧರ್ಮಸಂಸ್ಥೆಗಳವರ ಮನಸ್ಸು ಆ ಕಡೆಗೆ ಒಲಿಯುತ್ತಿಲ್ಲ. ಆದ್ದರಿಂದ ಸಾಧಾರಣ ಜನವರ್ಗವೇ ಇದಕ್ಕೆ ಆಶ್ರಯ ಕೊಡಬೇಕು. ಆಶ್ರಯ ಕೊಡುವ ರೀತಿ ಯಾವುದು?–ಬರೆದುದನ್ನು ಕೊಳ್ಳುವುದು, ಓದುವುದು ಈ ರೂಪದಲ್ಲಿ ತೋರಿಸಬಹುದು; ಹೆಚ್ಚು ಪುಣ್ಯವಂತರು ತಮಗೆ ಮೆಚ್ಚಾದ ಗ್ರಂಥಗಳನ್ನೂ ಗ್ರಂಥಕರ್ತರನ್ನೂ ವಿಶೇಷಬಗೆಯ ಸತ್ಕಾರ ಬಹುಮಾನಗಳಿಂದ ಹರ್ಷಗೊಳಿಸಲು ಪ್ರಯತ್ನಪಡಬಹುದು. ನಮಗೆ ಬೇಕಾಗಿರುವುದು ಕನ್ನಡ ಪುಸ್ತಕಗಳನ್ನು ಓದುವ ಜನ; ಅದಕ್ಕಾಗಿ ತಿಂಗಳಿಗೆ ಕೆಲವಾಣೆ ಹಣವನ್ನು ವೆಚ್ಚಮಾಡಲು ಇಷ್ಟವುಳ್ಳ ಜನ. ಈ ಸ್ಥಿತಿ ಉಂಟಾದ ಹೊರತು ನಮ್ಮಲ್ಲಿ ಗ್ರಂಥರಚನೆ ಬೆಳೆಯುವುದಿಲ್ಲ; ಈಗ ಕವಿದಿರುವ ನಿರುಲ್ಲಾಸದ ಮೋಡ ಚೆದರುವುದಿಲ್ಲ.

ಏನೇನನ್ನೊ ಬರೆಯುತ್ತಿರುವರು; ಇದನ್ನು ಕಟ್ಟಿಕೊಂಡು ನಮಗೇನು ಎನ್ನುವವರೊಬ್ಬರು. ಸಂಪ್ರದಾಯಗಳನ್ನು ಮೀರಿ ಬರೆಯುವ ಈ ಪುಸ್ತಕಗಳು ಉತ್ತೇಜನಕ್ಕೆ

ಯೋಗ್ಯವಲ್ಲವೆಂದು ಕೆಲವರು; ಧರ್ಮ, ದೇವರು, ಪರ, ಮುಕ್ತಿ ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನೆತ್ತಿ ಬರೆಯದೆ ಯಾವುದೊ ಲೌಕಿಕಜೀವನವನ್ನೂ ಅನಿತ್ಯವಾದ ಅಮುಖ್ಯವಾದ ವಿಷಯಗಳನ್ನೂ ಕುರಿತು ಬರೆಯುತ್ತಿದ್ದರೆ ಅಂತಹ ಹುಲುಗ್ರಂಥಗಳಿಗೆ ಏನು ಪ್ರೋತ್ಸಾಹಕೊಡುವುದು–ಎಂದು ಕೆಲವರು; ಉತ್ತರದ ಭಾಷೆ ದಕ್ಷಿಣದವರಿಗೆ ತಿಳಿಯದು, ಇವೆರಡೂ ಕರೆನಾಡಿನವರಿಗೆ ತಿಳಿಯದು, ಆದ್ದರಿಂದ ನಮಗರ್ಥವಾಗುವುದಿಲ್ಲ ಎಂದು ಮೊದಲಾಗಿ ಗೊಣಗುತ್ತ ಕೆಲವರು; ಸಾಮಾನ್ಯರಿಗೆ ಈ ಜನ ಬರೆದುದು ಅರ್ಥವಾಗುವುದಿಲ್ಲ, ಓದುಬಲ್ಲವರಿಗೆ ಇಂಗ್ಲಿಷಿನಲ್ಲಿ–ಬೇರೆ ನುಡಿಯಲ್ಲಿ–ಇದಕ್ಕಿಂತ ಮೇಲಾದ ಪುಸ್ತಕಗಳಿವೆ ಎಂಬ ಕಾರಣದಿಂದ ಕೆಲವರು ಅಂತೂ ಹೀಗೆಯೇ ಹಲವಾರು ಕಾರಣಗಳಿಂದ ಹುಟ್ಟಿಬರುವ ಕನ್ನಡ ಪುಸ್ತಕಗಳಿಗೆ ಜನರ ಆಶ್ರಯ ದೊರೆಯದಾಗಿದೆ. ಆದರೆ ಕನ್ನಡ ನಾಡಿನಲ್ಲಿ ಜನಕ್ಕೆ ತಿಳಿವಳಿಕೆ ಹರಡಬೇಕಾದರೆ ಕನ್ನಡದಲ್ಲಿಯೇ ಬರೆದು ತಿಳಿಸಬೇಕು,—ಕನ್ನಡದಲ್ಲಿಯೇ ಹೇಳಿ ಕಲಿಸಬೇಕು. ಕನ್ನಡ ಜನದ ವ್ಯಕ್ತಿಶಕ್ತಿಯೂ ಕೃತಿನಿರ್ಮಾಣಶಕ್ತಿಯೂ ಉಕ್ಕಬೇಕಾದರೆ ಕನ್ನಡದ ಮೂಲಕವೇ ಆಗಬೇಕು ಎಂಬುದನ್ನು ಅರಿತವರೆಲ್ಲರಿಗೂ ಗೊತ್ತು ಓದಿ ಪ್ರೋತ್ಸಾಹಿಸುವ ಜನತೆ ಹೆಚ್ಚಿದಹೊರತು ಇದು ಶಕ್ಯವಿಲ್ಲವೆಂದು. ಇತ್ತ ಓದುವ ಜನವರ್ಗದ ಅಭಿರುಚಿಯನ್ನು ಕೆರಳಿಸಬೇಕು, ನಮ್ಮ ಕಡೆಗೆ ಒಲಿಸಿಕೊಳ್ಳಬೇಕು, ಅವರಿಗೆ ಪ್ರಯೋಜನಕರವಾದ ಸಂಗತಿಗಳನ್ನು ಒದಗಿಸಬೇಕು, ಅವರ ವಿಶ್ವಾಸವನ್ನು ಈ ಕಡೆಗೆ ಸೆಳೆಯಬೇಕು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಕೆಲಸಮಾಡುವುದು ಬರೆಯುವವರನ್ನೆಲ್ಲ ಹೊಂದಿದ ಸಂಗತಿ. ಅವರೆಷ್ಟೇ ಬಗೆಯಲ್ಲಿ ಆರೀತಿ ಪ್ರಯತ್ನಿಸಲಿ, ಸರಸ್ವತಿ ಒಲಿದಿರುವಳಾದ್ದರಿಂದ ಲಕ್ಷ್ಮಿ ನಿಮಗೆ ಶತ್ರುವೇ ಸರಿ; ನೀವು ಆರಿಸಿಕೊಂಡ ದೇವಿಯ ಪ್ರಸಾದ ನೀವು ಅನುಭವಿಸಿ ಎಂದು ಲಕ್ಷ್ಮೀಪ್ರಸಾದವಿರುವ ಜನ ತಟಸ್ಥರಾಗಿ ಕುಳಿತುಬಿಟ್ಟರೆ ನಾಡಿನಲ್ಲಿ ಮುಖ್ಯವಾಗಿ ನಡೆಯಬೇಕಾಗಿರುವ ತಿಳಿವಳಿಕೆ ಹರಡುವ ಕಾರ್ಯವೂ ಗ್ರಂಥನಿರ್ಮಾಣಕಾರ್ಯವೂ ನಿಂತು ನಾಡಿಗೆ ಬಹಳ ನಷ್ಟವುಂಟಾಗುವುದು. ಹಾಗಾಗದಂತೆ ಗ್ರಂಥ ಪ್ರೋತ್ಸಾಹ ಅಭಿವೃದ್ಧಿಯಾಗಬೇಕು.

ಹೊಸದಾಗಿ ಈಚೆಗೆ ಹೆಚ್ಚಿನ ಯಾವ ಹೆಸರುಗಳೂ ಮುಂದೆ ಬರುತ್ತಿಲ್ಲ. ಹಿಂದೆ ಬರೆಯುತ್ತಿದ್ದವರು ಹಲವು ಜನ ಬರೆದು ಪ್ರಕಟಿಸುತ್ತಿಲ್ಲ ಅಥವಾ ಬರವಣಿಗೆಯನ್ನು ಬಿಟ್ಟು ಬೇರೆ ಉದ್ಯೋಗಗಳಿಗೊ ಜೀವನಮಾರ್ಗಗಳಿಗೊ ತಿರುಗುತ್ತಿರುವರು. ಪುಸ್ತಕದ ಅಂಗಡಿಗಳು ಪಠ್ಯಪುಸ್ತಕಗಳಲ್ಲದ ಗ್ರಂಥಗಳಕಡೆ ಮುಖ ತಿರುಗಿಸದೆ ಇರುವುವು. ಪಠ್ಯಪುಸ್ತಕಗಳಲ್ಲದವುಗಳನ್ನು ಪ್ರಕಟಿಸುವ ಮತ್ತು ಮಾರುವ ನಷ್ಟಕರಪ್ರವೃತ್ತಿಗೆ ಮನಸೋಲದೆ ಹಿಮ್ಮೆಟ್ಟುತ್ತಿರುವರು. ಹೀಗಾಗಿ ಜೀವಂತ ಪುಸ್ತಕಗಳ ನಿರ್ಮಾಣ ಕಡಮೆಯಾಗಿರುವುದು. ಈ ವಿಷಮ ಪರಿಸ್ಥಿತಿ ಮುರಿವಹೊರತು ಕನ್ನಡನುಡಿಯ ಏಳಿಗೆಗೆ ಮಾರ್ಗವಿಲ್ಲ. ಬರೆದವನಿಗೆ ತಗಲುವ ಕಾಗದ-ಮಸಿಗಳ ವೆಚ್ಚ ಹುಟ್ಟುವುದೂ ಬರೆಯುವ ಕಾಲದಲ್ಲಿ ಬೇಕಾಗುವ ದಿನಜೀವನದ ಅಗತ್ಯಸೌಕರ್ಯಗಳು ದೊರಕುವುದೂ ಒತ್ತಟ್ಟಿಗಿರಲಿ, ಬರೆದು ಅಚ್ಚುಮಾಡಿಸಿದ ತಪ್ಪಿಗೆ ಪ್ರಕಟನೆಯ ಋಣವನ್ನೂ ಹೊತ್ತು ಪಶ್ಚಾತ್ತಾಪಪಡಬೇಕಾದ ಗತಿ ಮಾನ್ಯರಾದ ಕನ್ನಡ ಲೇಖಕರಿಗಾರಿಗೂ ಬಾರದಿರುವಂತೆ ವಿದ್ಯಾಸಂಸ್ಥೆಗಳವರೂ ಶ್ರೀಮಂತರೂ ಜನದ ಅಭಿವೃದ್ಧಿಯಲ್ಲಿ ಆಸಕ್ತರಾದ ಮಹಾಜನರೂ ಒಂದು ಸಹಕಾರದ ಆವರಣವನ್ನು ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಕಲ್ಪಿಸುವ ಕಾರ್ಯ ಕೈಕೊಳ್ಳಬೇಕೆಂದು ಕೋರುತ್ತೇವೆ.

---

## ಮದರಾಸು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸಂಶೋಧನ ಕಾರ್ಯ

ಒಡೆದ ಕನ್ನಡ ನಾಡು ಒಂದಾದಮೇಲೆ ಒಂದು ಕೇಂದ್ರ ಸರಕಾರದ ಆಶ್ರಯದಲ್ಲಿ ಕನ್ನಡದ ಮುನ್ನಡೆ ನೆಮ್ಮದಿಯಾಗಿ ನಡೆಯುವುದು ಸಾಧ್ಯ. ಅದಕ್ಕೆ ಮುಂಚೆ, ನಮ್ಮ ನಾಡು ವಿವಿಧ ಪ್ರಾಂತ ಸಂಸ್ಥಾನಗಳಲ್ಲಿ ಹರಿದುಹಂಚಿಹೋಗಿರುವುದರಿಂದ, ಅದರ ಒಮ್ಮುಖವಾದ ಪ್ರಗತಿಗೆ ಈ ಪ್ರದೇಶಗಳ ಸರಕಾರಗಳು ತಕ್ಕ ಕನ್ನಡ ಸೇವೆ ನಡಸುತ್ತಿರಬೇಕಾದುದು ಆವಶ್ಯಕವಾಗಿದೆ. ಇದುವರೆಗೆ ನಾವು ಕಂಡಿರುವ ಕನ್ನಡದ ಪ್ರಗತಿಗೆ ಮುಂಬಯಿ ಮದರಾಸು ಪ್ರಾಂತಗಳ ಸರಕಾರಗಳೂ ವಿಶ್ವವಿದ್ಯಾನಿಲಯಗಳೂ ಬಹಳ ನೆರವಾಗಿವೆ. ಅದರಲ್ಲೂ ಮದರಾಸು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸಂಶೋಧನೆಗೆ ಆಶ್ರಯ ದೊರೆತಿದ್ದು ಉಪಕಾರವಾಗುತ್ತಿತ್ತು. ಆದರೆ ಅಲ್ಲಿ ಈಗ ತೆರಪಾದ ಕನ್ನಡ ಸಂಶೋಧಕರ ಸ್ಥಾನವನ್ನು ತುಂಬದೆ ಬಿಟ್ಟಿರುವುದು ವಿಷಾದಕರ. ಮದರಾಸು ವಿಶ್ವವಿದ್ಯಾನಿಲಯದವರು ಈ ವಿಚಾರಕ್ಕೆ ಗಮನ ಕೊಟ್ಟು ಕನ್ನಡ ಸಂಶೋಧನೆ ನಡೆಸಲು ತಕ್ಕ ಕನ್ನಡ ವಿದ್ವಾಂಸರನ್ನು ನೇಮಿಸಬೇಕೆಂದು ಕನ್ನಡ ನಾಡಿನ ಹಲವು ಸಂಸ್ಥೆಗಳು ಪ್ರಾರ್ಥಿಸಿವೆ. ಈ ಪ್ರಾರ್ಥನೆಯನ್ನು ವಿಶ್ವವಿದ್ಯಾನಿಲಯದವರು ಮನ್ನಿಸಿ, ಮದರಾಸಿನಿಂದ ಕನ್ನಡಕ್ಕೆ ನಡೆಯಬೇಕಾದ ಸೇವೆಗೆ ಆದಷ್ಟು ಜಾಗ್ರತೆಯಾಗಿ ವ್ಯವಸ್ಥೆಮಾಡುವರೆಂದು ಪರಿಷತ್ತು ನಂಬಿದೆ.

---

## ಸಾದರ ಸ್ವೀಕಾರ

**೧. ವೈಶಾಖ ಶುಕ್ಲ ಪೂರ್ಣಿಮಾ ಅಥವಾ ಬುದ್ಧನಿಗೆ ಕನ್ನಡದ ಕಾಣಿಕೆ:**

ಸಂಪಾದಕರು: ಶ್ರೀ॥ ಜಿ. ಪಿ. ರಾಜರತ್ನಂ ಎಂ. ಎ. ಪ್ರಕಾಶಕರು: ಶಾಕ್ಯ ಸಾಹಿತ್ಯ ಮಂಟಪ, ಮಲ್ಲೇಶ್ವರ, ಬೆಂಗಳೂರು. ಕ್ರೌನ್ ಅಷ್ಟಪತ್ರ, VII+೭೯ ಬೆಲೆ ಹತ್ತಾಣೆ.

ಭಗವಾನ್ ಬುದ್ಧನು ಅವತರಿಸಿದ ದಿನವಾದ ವೈಶಾಖ ಶುಕ್ಲ ಪೂರ್ಣಿಮೆ ಹೊತ್ತಿಗೆ ಪ್ರಕಟಿಸಿದ ಗ್ರಂಥ. ಅದರಲ್ಲಿ ಸುಮಾರು ೪೫ ವರ್ಷಗಳಿಂದ ಈಚೆಗೆ ಕನ್ನಡದಲ್ಲಿ ಬುದ್ಧನನ್ನು ಮತ್ತು ಬೌದ್ಧಮತವನ್ನು ಕುರಿತು ಪ್ರಕಟವಾದ ಕವಿತೆ, ಲೇಖನ ದೃಶ್ಯಗಳು ಸಂಗ್ರಹಿಸಲ್ಪಟ್ಟವೆ.

**೨. ಶರೀರ ಶಿಕ್ಷಣ:**

ಬರೆದವರು: ಶ್ರೀ॥ ನಾಡಗೀರ ಕೃಷ್ಣರಾಯರು. ಮುನ್ನುಡಿಕಾರರು: ಪ್ರೊ॥ ಕೆ. ವಿ. ಅಯ್ಯರ್, ಬೆಂಗಳೂರು. ಪ್ರಕಾಶಕರು: ಶ್ರೀ ಕೆ. ಜಿ. ನಾಡಗೀರ.

ಮಲ್ಲಸಜ್ಜನ ವ್ಯಾಯಾಮಶಾಲಾ, ಧಾರವಾಡ. ಕ್ರೌ. ಅಷ್ಟಪತ್ರ, ೧೧೨ ಪುಟಗಳು, ಬೆಲೆ: ೮ ಆಣೆ.

**೩. ಕುಮಾರವ್ಯಾಸ ಪ್ರಶಸ್ತಿ:**

ಮುನ್ನುಡಿಕಾರರು: ರಾಜಸೇವಾಸಕ್ತ ಶ್ರೀ॥ ಬಿಂ. ಎಂ. ಶ್ರೀಕಂಠಯ್ಯನವರು ಪ್ರಕಾಶಕರು: ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು, ಮೈಸೂರು. ಡೆಮ್ಮಿ ಅಷ್ಟಪತ್ರ, IIX+೩೪೭ ಬೆಲೆ ಉತ್ತಮ ಪ್ರತಿ ೨ ರೂ. ೮ ಆಣೆ. ಸಾದಾ ಪ್ರತಿ ೧ ರೂ. ೮ ಆಣೆ. ವಿವಿಧ ಕನ್ನಡ ಸಾಹಿತಿಗಳ ಲೇಖನಗಳನ್ನು ಒಳಗೊಂಡ ಈ ಗ್ರಂಥವನ್ನು ದಿವಂಗತ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ನೆನಪಿಗೆ ಮುಡಿಪಾಗಿ ಅರ್ಪಿಸಿದೆ.

**೪. ಕನಸುಗಳು:**

ಮೈಸೂರು ವಿಶ್ವವಿದ್ಯಾಲಯದ ಪ್ರಚಾರ ಪುಸ್ತಕಮಾಲೆಯ ೧೨ ನೆಯ ಪುಸ್ತಕ. ಬರೆದವರು: ಶ್ರೀ॥ ಎನ್. ಎಸ್. ನಾರಾಯಣಶಾಸ್ತ್ರಿ, ಎಂ. ಎ., ಫುಲ್ಸ್‌ಕ್ಯಾಪ್ ಅಷ್ಟಪತ್ರ, ೬೪ ಪುಟಗಳು ಬೆಲೆ: ಉತ್ತಮಪ್ರತಿ, ೩ ಆಣೆ. ಸಾದಾ ಪ್ರತಿ ೨ ಆಣೆ.

(೨೬೩ನೆಯ ಪುಟದಿಂದ)

ಪ್ರಾಮುಖ್ಯತೆ ಕೊಟ್ಟು ಎಲ್ಲರ ಕಣ್ಣನ್ನೂ ಆಕಡೆ ಸೆಳೆದು ಆಡಂಬರ ಮಾಡುವುದು ದೂರದೃಷ್ಟಿಯೆನಿಸಲಾರದು. ಆಗತ್ಯವಾಗಿ ಹೇಳಬೇಕಾದುವನ್ನು ವಿವರಣೆಯಲ್ಲಿಯೇ ನಿಲ್ಲಿಸಬಹುದಿತ್ತು........ ೩. ಮಾತಿನ ಧೋರಣೆ ಕೆಲವೆಡೆ ಹವಣುಮೀರಿದೆ. ಅನಾವಶ್ಯಕವಾಗಿ ಬಿಂಕದ ಕೊಂಕು ಮಾತುಗಳನ್ನಾಡುವುದರಲ್ಲಿಯೇ ಸಾಹಸವಿದೆಯೆಂದು ಭ್ರಮಿಸಿದಂತೆ ಕಾಣುತ್ತದೆ (೧೫೦–೧೫೧). 'ತೋಳಿಗೆ ಹುರಿ ಬಂದಿದೆ' ಯೆಂದು ಕಂಡ ಕಂಡವರ ಕಡೆ ಮುಷ್ಟಿ ತೋರಿಸಿ ಕೆಣಕುವ 'ಚಟ' ವಿದು. ಇತರರ ಬದ್ಧಿ ಬಲಗಳಿಗೂ ಸ್ವಲ್ಪ ಗೌರವ ಕೊಡುವುದರಿಂದ ನಮಗೆ ಬಂದ ಕುಂದೇನು?

ಶ್ರೀ॥ ರಾಜರತ್ನಂ ಅವರು ಈ 'ಹತ್ತು ವರುಷ'ವನ್ನು ಸಾವಧಾನದಿಂದ ಸಮಚಿತ್ತತೆಯಿಂದ ಸಮಗ್ರ ದೃಷ್ಟಿಯಿಂದ ಬರೆದಿದ್ದರೆ ನಿರೂಪಣರೀತಿ ಉತ್ತಮವಾಗುತ್ತಿತ್ತೆನ್ನುವುದರಲ್ಲಿ ಸಂದೇಹವಿಲ್ಲ. ಸದ್ಯದಲ್ಲಿ ಗ್ರಂಥವು ಚಿತ್ರಲೇಖನ (Journalese) ಮಾತ್ರವಾಗಿದೆ. ತಮ್ಮ ಹೊಸ ಪ್ರಯತ್ನವನ್ನು ಒಂದು 'ಮಹಾಹರಟೆ'ಯೆಂದು ಕರೆದು ಕಾವ್ಯದೋಷಗಳಿಂದ ಪಾರಾಗಬಹುದೆಂದು ನಿರೀಕ್ಷಿಸಿದ್ದರೆ ಅವರು ಮೋಸಹೋಗಿದ್ದಾರೆ. ಬಾಯಿಮಾತಿನ ಹರಟೆಯಲ್ಲಿ ತೊಂಡುತನ ಸ್ವೇಚ್ಛಾಸರಣಿ ಧಾಟಿಯ ಏರಿಳಿತ— ಏನಿದ್ದರೂ ತಡೆಯುತ್ತದೆ. ಅದನ್ನೇ ಬರಹಕ್ಕಿಡುವಾಗ ಒಂದು ಪ್ರಮಾಣದಲ್ಲಿ ಗಾಂಭೀರ್ಯ ಕ್ರಮ ಹೊಂದಿಕೆಗಳನ್ನು ಕಾಪಾಡಬೇಕಾಗುತ್ತದೆ. ತಾತ್ಕಾಲಿಕ ರಂಜನೆಯೊಂದೇ ಸಾಹಿತ್ಯಪೀಠವನ್ನು ದೊರಕಿಸಲಾರದು: ಹಲವಾರು ಶಾಶ್ವತ ಲಕ್ಷಣಗಳೂ ಕಾವ್ಯಗುಣಗಳೂ ಇರಬೇಕು. ಶ್ರೀ॥ ರಾಜರತ್ನಂ ಅವರು ಇದನ್ನೆಲ್ಲ ಬಲ್ಲವರೇ ಆಗಿದ್ದಾರೆ. ಮುಂದಿನ ಮುದ್ರಣದಲ್ಲಿ ಗ್ರಂಥವನ್ನು ತಿದ್ದಿ, ಕಳೆಯೇರಿಸಿ, ಸರ್ವಜನಪ್ರಿಯವಾಗುವಂತೆ ಮಾಡಲೆಂದು ಬಯಸುತ್ತೇನೆ. 'ಹತ್ತು ವರುಷ'ವು ರತ್ನನ ಕೃತಿಗಳಿಗೆ ರನ್ನದ ಕೈಪಿಡಿಯಾಗಲಿ, ರತ್ನನ ಹೆಸರು ನಾಡಿನಲ್ಲೆಲ್ಲ ಹಬ್ಬಿ ಹರಡಲಿ!

ಗ್ರಂಥವನ್ನು ಸಂಶೋಧಿಸುವ ಕಾರ್ಯದಲ್ಲಿ ಈ ಒಂದೆರಡು ಸಲಹೆಗಳು ಸಹಾಯವಾದಾವೆಂದು ನನ್ನ ನಂಬಿಕೆ.

**ಮೊದಲನೆಯ ಭಾಗ: ಸ್ವಪ್ರಸಂಗ**

[ಜೀವನ ಚಿತ್ರ—ಕಷ್ಟ ಸುಖಗಳು—ಕಾವ್ಯರಚನೋತ್ಸಾಹ, ಪ್ರೋತ್ಸಾಹ—ಕೃತಜ್ಞತೆ.]

**ಎರಡನೆಯ ಭಾಗ: ಕಾವ್ಯನಿರ್ಮಾಣ**

[ಕೃತಿಗಳ ಕಾಲ—ಪ್ರೇರಕ ಪ್ರಚೋದನೆಗಳು—ಉದ್ದೇಶ ಸಾಧನೆಗಳು.]

**ಮೂರನೆಯ ಭಾಗ: ಟೀಕೆ ಟಿಪ್ಪಣಿ—ಸಮಾಧಾನ ಸಮರ್ಥನೆ**

[ವಿಮರ್ಶೆಗಳನ್ನು 'ಅನಾಮತ್ತಾಗಿ' ಎತ್ತಿಕೊಡುವುದು ಸರಿಯಲ್ಲ. ಅವುಗಳು ಪ್ರಕಟವಾಗಿರುವ ಪತ್ರಿಕೆಗಳನ್ನೂ, ಕಾಲವನ್ನೂ ತಿಳಿಸುವುದು ಮೇಲು. ವಿಮರ್ಶೆಗಳಲ್ಲಿ ಅತಿ ಮುಖ್ಯವಾದ ಭಾಗಗಳನ್ನು ಆವರಣ ಚಿಹ್ನೆಯಲ್ಲಿ ಕೊಡಬಹುದು. ಆದರೆ ಈ ವಾಕ್ಯವೇಷ್ಟನ ಪುಸ್ತಕಕ್ಕೆ ಹೊರೆಯಾಗಬಾರದು. ಈ ವಿಮರ್ಶೆಗಳಿಂದ, ಟೀಕೆಗಳಿಂದ, ರತ್ನನಮೇಲೆ ಆದ ಪರಿಣಾಮ ಪರಿವರ್ತನೆಗಳೇನೆಂದು ತಿಳಿಸುವುದು ಬಹಳ ಆಗತ್ಯ. ಗ್ರಂಥದ ವಿಷಯದಲ್ಲಿ ಯಾರಾದರೂ ತಪ್ಪು ತಿಳಿದಿದ್ದರೆ ಅವರನ್ನು ನಯವಾಗಿ ತಿದ್ದಬಹುದು; ವಕ್ರದೃಷ್ಟಿಯವರಿಗೆ ದೃಷ್ಟಿಮಾಂದ್ಯದವರಿಗೆ ಸ್ವಲ್ಪ ಅಂಜನವೂ ಬೀಳಬಹುದು. ೬೧–೬೩, ೬೫–೬೭, ೯೭–೯೮, ೧೧೬–೧೧೮, ೧೩೦–೧೪೨—ಈ ಪುಟಗಳ ತಿಳಿಯನ್ನು ಇಲ್ಲಿಗೆ ಸುರಿಯಬಹುದು.]

**ನಾಲ್ಕನೆಯ ಭಾಗ: ಹಿನ್ನೋಟ ಮುನ್ನೋಟ**

[ಇದುವರೆಗೆ ಮಾಡಿರುವ ಕೆಲಸವನ್ನು ಸಂಸ್ಕೃತಿಯ ದೃಷ್ಟಿಯಿಂದ ಸ್ಥೂಲವಾಗಿ ಪರಾಮರ್ಶಿಸಿ, ಮುಂದೆ ಮಾಡಬೇಕೆಂದಿರುವುದನ್ನು ಇಂದು ಕಂಡಷ್ಟು ಸೂಚಿಸಬಹುದು. ಕಡೆಯಲ್ಲಿ, ಭಾಷಾಸೇವಕನ ಅಧಿಕಾರವಾಣಿಯಿಂದ ಅನುಭವ ಸೂಕ್ತಿಯನ್ನು ಘೋಷಿಸಿ, ನಾಡಿನ ಕಿರಿಯರ ಹಿರಿಯರ ಕೈಕೂಡಿಸಿ, ನುಡಿತಾಯಿಯ ತೇರನ್ನು ಬಿಜಮಾಡಿಸಬಹುದು.]

ಇನ್ನು, ಈ ಪುಸ್ತಕದ ಪ್ರಕಾಶಕರ ವಿಷಯ ಒಂದು ಮಾತು. ಈಗ ಆರು ವರ್ಷಗಳಿಂದ ನಿರಂತರವಾಗಿ ಆಸರು ಬೇಸರಿಲ್ಲದೆ ಕನ್ನಡದ ಸೇವೆ ಮಾಡುತ್ತಿರುವ ಮನೋಹರ ಗ್ರಂಥಮಾಲೆಯ ಸಂಪಾದಕರನ್ನು ಎಷ್ಟು ಹೊಗಳಿದರೂ ಕೊಂಚವೇ ಆಗಿದೆ. ಈ ವರ್ಷದ ಕಡೆಗೆ ಒಟ್ಟು ಐವತ್ತು ಪುಸ್ತಕಗಳನ್ನು ಅವರು ಪ್ರಕಾಶಗೊಳಿಸಿದಂತೆ ಆಗುತ್ತದೆ. ಹೀಗೆ ಸಾಹಸದಿಂದ, ತನಮನಧನಗಳಿಂದ ಭಾಷಾಸೇವೆ ಮಾಡುತ್ತಿರುವವರಿಗೆ ಉದಾರವಾದ ಬೆಂಬಲ ನೀಡುವುದು ಪ್ರತಿಯೊಬ್ಬ ಕನ್ನಡದ ಅಭಿಮಾನಿಯ ಕರ್ತವ್ಯ. ಕನ್ನಡಿಗರು ಇನ್ನಾದರೂ ಕಣ್ಣು ತೆರೆದು ಕರ್ತವ್ಯನಿಷ್ಠರಾಗುವರೆ?

ಟಿ. ಎಸ್. ಶಾಮರಾವ್.

---

## ಮುಂದೇನು?

(ಮೊದಲನೆಯ ಪುಟದಿಂದ)

ಮುಂದಿನ ಮಾತು: ಆದರೆ ಇಂಗ್ಲಿಷು ನಮ್ಮ ದೇಶ ಭಾಷೆಯಾದೀತೆ? ಮನೆ ಮಾತಾದೀತೆ? ನಮ್ಮ ದೇಶದ ವಿದ್ಯಾವಂತರಿಗೆ ಇಂಗಿಷಿನಲ್ಲಿ ಬರವಣಿಗೆ, ಕಾವ್ಯರಚನೆಮಾಡಲು ಸಾಧ್ಯವೆ? ಜನತೆಯಲ್ಲಿ ತಿಳಿವನ್ನು ಹರಡಲು ಇಂಗ್ಲಿಷು ಸಾಧನವಾದೀತೆ? ಈಗ ಸಾಧ್ಯವಾಗಿದ್ದರೆ, ಇಲ್ಲವೆ ಮುಂದೆ ಕೆಲವು ಕಾಲದೊಳಗಾಗಿ ಸಾಧ್ಯವಾಗುವುದಾದರೆ, ಅದಕ್ಕೆ ಶಿಕ್ಷಣದಲ್ಲಿ ಪ್ರಥಮ ಸ್ಥಾನವನ್ನು ಕೊಡುವುದು ನ್ಯಾಯ; ಅದಕ್ಕೆ ಅಗ್ರಪೂಜೆ ಸಲ್ಲಬೇಕು. ಇಲ್ಲವೆಂದು ಹೇಳುವುದಾದರೆ ಯಾವುದರಿಂದ ಇದು ಸಾಧ್ಯವಾಗಬಹುದೋ ಆ ಭಾಷೆ ಪ್ರಥಮ ಭಾಷೆಯಾಗಬೇಕು. ಕನ್ನಡ ದೇಶದಲ್ಲಿ ಅದು ಕನ್ನಡವೆಂದು ತೋರುತ್ತದೆ. ಈ ಗುರಿಯನ್ನು ಮುಟ್ಟಲು ಕನ್ನಡ ಸಾಧನ ಎನ್ನುವ ದೃಷ್ಟಿಯಿಂದ ಅದಕ್ಕೆ ಮಹತ್ವ, ಪ್ರಾಮುಖ್ಯತೆಯೇ ಹೊರತು, ಅದು ನಮ್ಮ ತಾಯ್ನುಡಿ, ಕನ್ನಡದಲ್ಲಿ ಮಹಾ ಕವಿಗಳಿದ್ದರು, ಕನ್ನಡ ಬಹು ಪ್ರಾಚೀನ, ಕನ್ನಡ ಸಂಸ್ಕೃತಿ ಪುರಾತನ ಸಂಸ್ಕೃತಿ ಎನ್ನುವವು ಮುಖ್ಯ ಕಾರಣಗಳಲ್ಲ. ಕನ್ನಡ ದೇಶದ ಜನಕ್ಕೆ ಮುಕ್ತಿ ಕನ್ನಡದ ಮೂಲಕವೇ.

ಕನ್ನಡ ಪ್ರಥಮ ಭಾಷೆಯಾದರೆ ಇಂಗ್ಲಿಷಿನ ಗತಿಯೇನು? ಸದ್ಯದಲ್ಲಿ ಏಕೆ, ಇನ್ನೂ ಕೆಲವು ಕಾಲ ಅದನ್ನು ಬಿಡುವಹಾಗಿಲ್ಲ. ಅಲ್ಲದೆ, ಅದು ಮುಂದೆ ಪ್ರಪಂಚದ ಭಾಷೆಯಂತೂ ಆದರೆ ಅದಕ್ಕೆ ಶಿಕ್ಷಣದಲ್ಲಿ ಸ್ಥಾನವಿದ್ದೇ ಇರುವುದು. ಈಗ, ಇಂಗ್ಲಿಷು ಎರಡನೆಯ ಭಾಷೆಯಾಗಿರಬೇಕು; ಎರಡನೆಯ ಭಾಷೆಯಾಗಿದ್ದರೂ ಅದರಲ್ಲಿ ಪ್ರೌಢಿಮೆ ಕಡಮೆಯಾಗದಿರುವಂತೆ ನೋಡಿಕೊಳ್ಳುವುದು ಹೇಗೆಂದು ಮುಂದೆ ವಿವರಿಸುತ್ತೇನೆ.

ಶಿಕ್ಷಣದ ಎಲ್ಲ ದರ್ಜೆಗಳಲ್ಲಿಯೂ ಮಾಧ್ಯಮಿಕ, ಹೈಸ್ಕೂಲು ಮತ್ತು ಕಾಲೇಜಿನ ಎಲ್ಲ ತರಗತಿಗಳಲ್ಲಿಯೂ ಕನ್ನಡ ಪ್ರಥಮ ಭಾಷೆ; ಇಂಗ್ಲಿಷು ಎರಡನೆಯ ಭಾಷೆ. ಮಾಧ್ಯಮಿಕ ಶಾಲೆಯಲ್ಲಿ 'ಬೇಸಿಕ್ ಇಂಗ್ಲಿಷ'ನ್ನು (Basic English) ಆರಂಭಿಸುವುದು. ಬೇಸಿಕ್ ಇಂಗ್ಲಿಷಿನ ವಿಚಾರದಲ್ಲಿ ಕೆಲವರಿಗೆ ಅಸಮಾಧಾನವಿದ್ದರೆ 'ಸಾವಿರ ಮಾತಿನ ಇಂಗ್ಲಿಷ'ನ್ನು (Palmer's one Thousand Word English) ಆರಂಭಿಸಬಹುದು. ಬೇಸಿಕ್ ಇಂಗ್ಲಿಷು ಅನೇಕ ವಿಧದಲ್ಲಿ ಸಮರ್ಪಕವಾಗಿದೆಯೆಂದು ನನಗೆ ತೋರುತ್ತದೆ. ಈ ಯೋಜನೆಯಲ್ಲಿ ೮೫೦ ಮಾತುಗಳ ಪರಿಚಯವೂ ಉಪಯೋಗ ಕಲಿಕೆಯೂ ನಾಲ್ಕು ಪುಸ್ತಕಗಳ ವ್ಯಾಸಂಗದಲ್ಲಿ ಮುಗಿಯುವುದು. ಇವುಗಳ ಉಪಯೋಗದಲ್ಲಿ ಹೆಚ್ಚಿನ ಅಭ್ಯಾಸ, ಜೊತೆಯ (Supplementary) ಬೇಸಿಕ್ ಇಂಗ್ಲಿಷಿನಲ್ಲಿಯೇ ಬರೆದಿರುವ ಪುಸ್ತಕಗಳ ವ್ಯಾಸಂಗದಿಂದ ಆಗುವುದು. ಇದಕ್ಕೆ ಮಾಧ್ಯಮಿಕಶಾಲೆಯ ೪ ವರ್ಷಗಳ ಅವಧಿ. ಪರೀಕ್ಷೆಯಲ್ಲಿ ಇಂಗ್ಲಿಷಿನ ಪ್ರಶ್ನಪತ್ರಿಕೆಗೆ ಉತ್ತರಗಳಲ್ಲಿ ಭಾಷೆಗೇ ಗಮನ ಕೊಡತಕ್ಕದ್ದು. ಒಂದು ವಾಕ್ಯ ವ್ಯಾಕರಣ ಶುದ್ಧವಲ್ಲದಿದ್ದರೆ ಅದಕ್ಕೆ ನಂಬರೇ ಇಲ್ಲ. ಈಗಿನ ಆಚರಣೆಯಲ್ಲಿ ಭಾಷೆ ಹೊಲಸಾಗಿದ್ದರೂ ವಿಷಯಕ್ಕೆ ನಂಬರು ಬರುತ್ತದೆ.

ಮುಂದೆ ಹೈಸ್ಕೂಲಿನ ಮತ್ತು ಕಾಲೇಜಿನ ತರಗತಿಗಳಲ್ಲಿ ಬೇಸಿಕ್ ಇಂಗ್ಲಿಷನ್ನು ತಳಹದಿಯಾಗಿಟ್ಟು, ಕ್ರಮೇಣ ಶಬ್ದಸಂಪತ್ತು ಬೆಳೆಯುವಂತೆ ರಚಿಸಿರುವ ಪುಸ್ತಕಗಳನ್ನು ಪಠ್ಯಪುಸ್ತಕಗಳನ್ನಾಗಿಡುವುದು. ಕಾಲೇಜಿನ ಕೊನೆಯ ದರ್ಜೆಗಳಲ್ಲಿ ಸಾಮಾನ್ಯ ಇಂಗ್ಲಿಷಿನ (Standard English) ಪುಸ್ತಕಗಳನ್ನು ಧಾರಾಳ

ವಾಗಿ ಉಪಯೋಗಿಸಬಹುದು. ಅಂದರೆ ಇಂಗ್ಲಿಷಿನ ವ್ಯಾಸಂಗ 'ಬೇಸಿಕ್' ಇಂಗ್ಲಿಷಿನಿಂದ ಮಾಧ್ಯಮಿಕ ಶಾಲೆಯಲ್ಲಿ ಆರಂಭವಾಗ ಬೇಕು ಎಂದು ಹೇಳಿದಂತಾಯಿತು. ಬರಬರುತ್ತ, ಹೈಸ್ಕೂಲಿನ ಮತ್ತು ಕಾಲೇಜಿನ ತರಗತಿಗಳಲ್ಲಿ ಮಾಧ್ಯಮಿಕ ಶಾಲೆಯ ಬೇಸಿಕ್ ಇಂಗ್ಲಿಷು ವಿಕಾಸವನ್ನು ಹೊಂದಿ ಸಾಮಾನ್ಯ ಇಂಗ್ಲಿಷಿನ ಶಬ್ದ ಸಂಪತ್ತನ್ನು ಪಡೆಯಲು ಏರ್ಪಾಡಾಗಬೇಕು. ಇಂಗ್ಲಿಷಿನಲ್ಲಿ ಮಾತು, ವ್ಯವಹಾರ, ಬರವಣಿಗೆ ಸ್ವಲ್ಪವಾದರೂ ಅದು ವ್ಯಾಕರಣ ಶುದ್ಧವಾಗಿರಬೇಕು. ಅದು ಒಂದು ಸಹಾಯ ಭಾಷೆ, (Auxiliary Language); ಪ್ರಥಮ ಭಾಷೆ ಕನ್ನಡ.

ಆದರೆ ಸದ್ಯದಲ್ಲಿ ಕನ್ನಡ ಸಾಹಿತ್ಯ ಸಾಕಾದಷ್ಟು ಬೆಳೆದಿಲ್ಲ. ಇಂಗ್ಲಿಷಿನ ಸಾಹಿತ್ಯದಷ್ಟು ಅದರ ಕ್ಷೇತ್ರ ವಿಸ್ತಾರವಲ್ಲ. ಅಲ್ಲದೆ ಕನ್ನಡ ಸಾಹಿತ್ಯದಲ್ಲಿ ವೈವಿಧ್ಯವಿಲ್ಲ. ಅಷ್ಟೇ ಅಲ್ಲ, ಇಂಗ್ಲಿಷ್ ಸಾಹಿತ್ಯದ ಉತ್ತಮ ಗ್ರಂಥಗಳ ಪರಿಚಯ ನಮ್ಮ ಕಾಲೇಜಿನ ಪ್ರತಿಯೊಬ್ಬ ವಿದ್ಯಾರ್ಥಿಗೂ ಆಗುವುದು ಆವಶ್ಯಕ. ಆದುದರಿಂದ ಇಂಗ್ಲಿಷಿನ ಅನೇಕ ಮಹಾ ಕಾವ್ಯಗಳು ಕಾಲೇಜಿನ ತರಗತಿಗಳಲ್ಲಿ ಪಠ್ಯಪುಸ್ತಕಗಳಾಗಿದ್ದು, ಅವುಗಳ ವಿಮರ್ಶೆ, ಚರ್ಚೆ, ಅವುಗಳ ಮೇಲಿನ ಪ್ರಶ್ನೆಗಳಿಗೆ ಉತ್ತರ ಬರೆಯುವುದು ಎಲ್ಲ ಕನ್ನಡದಲ್ಲಿರ ಬೇಕು. ಈ ಭಾಗದ ವ್ಯಾಸಂಗ ಪ್ರಥಮ ಭಾಷೆಯಾದ ಕನ್ನಡದ ಒಂದು ಅಂಗ.

ಇನ್ನು ನಮ್ಮ ಮುಸಲ್ಮಾನ ಬಾಂಧವರಿಗೆ ಉರ್ದುವನ್ನು ಪ್ರಥಮ ಭಾಷೆಯನ್ನಾಗಿ ಮಾಡಲು ಯಾವ ಆಕ್ಷೇಪಣೆಯೂ ಇರಲಾರದು. ಮೊನ್ನೆ ಪ್ರಜಾಪ್ರತಿನಿಧಿಸಭೆಯಲ್ಲಿ, ಕನ್ನಡವನ್ನು ಕಲಿಯುವ ಅಗತ್ಯವನ್ನು ಅವರೇ ಪ್ರಸ್ತಾಪಿಸಿದ್ದರಿಂದ ಕನ್ನಡ ದೇಶದಲ್ಲಿ ಕನ್ನಡವನ್ನು ಎಲ್ಲರೂ ಕಲಿಯುವುದು ಅಗತ್ಯವೆಂದು ಅವರು ತಿಳಿದಿದ್ದಾರೆ. ಆದ್ದರಿಂದ ಮಾಧ್ಯಮಿಕ ಶಾಲೆಯ ಮೇಲಿನ ತರಗತಿಗಳಲ್ಲಾಗಲಿ, ಹೈಸ್ಕೂಲಿನಲ್ಲಾಗಲಿ ಕನ್ನಡವನ್ನು ಮೂರನೆಯ ಭಾಷೆಯನ್ನಾಗಿ ಅವರಿಗೆ ಕಲಿಸಬೇಕು. ಚರಿತ್ರೆ, ಭೂಗೋಳ ಮೊದಲಾದ ಪಾಠಗಳಲ್ಲಿ ಯಾವುದಾದರೊಂದು ಐಚ್ಛಿಕ ಭಾಗದ ಪಾಠಕ್ಕೆ ಬದಲು ಕನ್ನಡವನ್ನು ಏರ್ಪಡಿಸಬಹುದು. ಇದರಿಂದ ಅನನುಕೂಲವಿಲ್ಲದೇ ಇಲ್ಲ. ಶಿಕ್ಷಣ ಪೂರ್ಣಗೊಳ್ಳಲು ವ್ಯಾಸಂಗದ ಎಲ್ಲ ಪಾಠಗಳೂ ಆವಶ್ಯಕವೇ ಆಗಿದ್ದರೆ ಯಾವುದನ್ನು ಬಿಡುವುದು? ಮೊನ್ನೆ ನಮ್ಮ ಪಕ್ಕದ ಮನೆಯವರು ತಮ್ಮ ಮನೆಗೆ ಹತ್ತಿರದಲ್ಲಿ ಗೊಬ್ಬರವನ್ನು ಶೇಖರಿಸಿದ್ದರು. ಸ್ಯಾನಿಟರಿ ಇನ್‌ಸ್ಪೆಕ್ಟರು ತನಿಖೆಗೆ ಬಂದರು. ಆಗ ಆ ಮನೆಯಲ್ಲಿ ದೊಡ್ಡವರು ಯಾರೂ ಇರಲಿಲ್ಲ. ಮನೆಯಲ್ಲಿದ್ದ ೧೨-೧೩ ವರ್ಷದ ಹುಡುಗನನ್ನು ಇನ್‌ಸ್ಪೆಕ್ಟರು ಪ್ರಶ್ನೆ ಮಾಡಿದರು.

"ಏನಯ್ಯಾ, ನೀನು ಯಾವ ಕ್ಲಾಸಯ್ಯಾ?"

"ಲೋವರ್ ಸೆಕೆಂಡರಿ, ಸಾರ್; ಮಿಡಲ್ ಫೋರ್ತ್ ಯಿಯರ್."

"ಮನೆ ಮುಂದೆ ಗೊಬ್ಬರ ಹಾಕುತ್ತಾರೇನಯ್ಯಾ? ನೀನು ಆರೋಗ್ಯಶಾಸ್ತ್ರ ಓದಿಲ್ಲವೇ?"

"ನಾನು ಸಂಸ್ಕೃತ ತೆಗೆದುಕೊಂಡಿದ್ದೇನೆ, ಸಾರ್, ಆರೋಗ್ಯ ವಲ್ಲ."

ಆದುದರಿಂದ ಈಗ ಸರ್ಕಾರದ ನೌಕರರಿಗೆ ಕನ್ನಡದಲ್ಲಿ ಪ್ರೊಫಿಷಿಯೆನ್ಸಿ (Proficiency Examination) ಪರೀಕ್ಷೆ ಕಡ್ಡಾಯವಾಗಿರುವಂತೆ, ಶಿಕ್ಷಣದಲ್ಲಿ ಮುಸಲ್ಮಾನರಿಗೆ ಕನ್ನಡವನ್ನು ಮೂರನೆಯ ಭಾಷೆಯಾಗಿ ಕಲಿಸಬೇಕು.

ಈ ಸಂಬಂಧದಲ್ಲಿ ಹೇಳುವುದು ಇನ್ನೂ ಬಹಳವಿದೆ. ಉದಾಹರಣೆಗೆ: ಭಾಷೇತರ ಪಾಠಗಳನ್ನು ಹೈಸ್ಕೂಲು ಮತ್ತು ಕಾಲೇಜಿನಲ್ಲಿ ಇಂಗ್ಲಿಷಿನ ಮೂಲಕ ಪಾಠ ಹೇಳುವುದು ರೂಢಿಯಲ್ಲಿದೆ. ಬೇಸಿಕ್ ಇಂಗ್ಲಿಷಿನ ಭಾಷಾ ಜ್ಞಾನ ಇದಕ್ಕೆ ಸಾಕೇ? ಈಗಾಗಲೆ ಲೇಖನ ಪತ್ರಿಕಾಲೇಖನದ ಮಿತಿಯನ್ನು ಮೀರಿದೆಯೆಂದು ನನಗೆ ತೋರುತ್ತದೆ. ಈ ಲೇಖನದ ವಾಚಕರಲ್ಲಿ ಈ ವಿಷಯವಾಗಿ ವಿಚಾರ ಹುಟ್ಟಿಸಿದರೆ ನಾನು ಕೃತಾರ್ಥನಾದೆ. ಆವಶ್ಯ ಬಿದ್ದರೆ ಮಿಕ್ಕ ವಿಷಯಗಳನ್ನು ಮುಂದೆ ಚರ್ಚಿಸಬಹುದು.

—ಎಸ್. ವಿ. ಶ್ರೀ.

---

## ಮೈಸೂರು ಇನ್‌ಷೂರೆನ್ಸ್ ಕಂಪನಿಗಳ ಪ್ರಧಾನ ಕಛೇರಿಗಳ ಆರಂಭೋತ್ಸವ

### 'ಶ್ರೀ' ಯವರ ಆಶೀರ್ವಾದ

ಮೈಸೂರು ಇನ್‌ಷೂರೆನ್ಸ್ ಕಂಪನಿಗಳ ಪ್ರಧಾನ ಕಛೇರಿಗಳನ್ನು ಬೆಂಗಳೂರು ವಿಶ್ವೇಶ್ವರಪುರದಲ್ಲಿರುವ 'ಲಕ್ಷ್ಮೀ ಸ್ಥಾನಂ' ಎಂಬ ಹೊಸ ಕಟ್ಟಡದಲ್ಲಿ ಪ್ರಾರಂಭಿಸಿದ ಸಂದರ್ಭದಲ್ಲಿ ವಿಮಾ ಸಂಸ್ಥೆಯವರು ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರನ್ನು ಬರಮಾಡಿಕೊಂಡು ಸಂಸ್ಥೆಗೆ ಅವರ ಆಶೀರ್ವಾದವನ್ನು ಪಡೆದರು. ಪ್ರಾರ್ಥನೆ, 'ಶ್ರೀ'ಯವರಿಗೆ ಸಂಸ್ಥೆಯಪರವಾಗಿ ಬಿನ್ನವತ್ತಳೆಯ ಸಮರ್ಪಣೆ, ಹೊಸದಾಗಿ "ಆಕ್ಚುಯರಿ" ಗಳಾದ ಮೈಸೂರಿನ ಶ್ರೀ|| ಜಿ. ವೆಂಕಟಸುಬ್ಬಯ್ಯನವರಿಗೆ ಅಭಿನಂದನಾ ಸಮರ್ಪಣೆಗಳಾದಮೇಲೆ, ಶ್ರೀಗಳಾದ ವೆಂಕಟಸುಬ್ಬಯ್ಯ, ಪಿ. ಶಿವಶಂಕರ್, ದೇವುಡು, ಮತ್ತು ಶ್ರೀಮತಿ ಶ್ರೀಯವರನ್ನು ಕಲ್ಯಾಣಮ್ಮನವರು ಅಭಿವಂದಿಸುವ ಭಾಷಣಗಳನ್ನು ಮಾಡಿದರು.

ಶ್ರೀಮತಿ ಕಲ್ಯಾಣಮ್ಮನವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:—

ನಾವು ಯಾವ ಕೆಲಸವನ್ನು ಮಾಡಬೇಕಾದರೂ 'ಶ್ರೀ' ಯಿಂದ ಪ್ರಾರಂಭಿಸುತ್ತೇವೆ. ಶ್ರೀಕಾರದೊಡನೆ ಮೊದಲಾದ ಕೆಲಸ ಸ್ಥಿರವಾಗಿರುತ್ತದೆ ಎಂಬ ನಂಬುಗೆ ನಮ್ಮದು. ಹಾಗೆಯೇ ನಮ್ಮ ಕಂಪೆನಿಯ ಕೆಲಸಕಾರ್ಯಗಳನ್ನು ಹೊರಗಡೆಯಲ್ಲಿ ಪ್ರಾರಂಭಿಸುವ ಮೊದಲು 'ಶ್ರೀ'ಯವರ ಆಶೀರ್ವಾದ ಪಡೆಯಬೇಕೆಂದು ಆಶಿಸಿದೆವು. ಅವರ ಆಶೀರ್ವಾದ ಕಂಪೆನಿಯಮೇಲೆ ಯಾವಾಗಲೂ ಇರಲಿ. ಕನ್ನಡ ಬಾವುಟದ ಕೆಳಗೆ ನಮ್ಮ ಸಂಸ್ಥೆ ಜಾಜ್ವಲ್ಯವಾಗಿ ಬೆಳಗುವಂತಾಗಲಿ.

'ಶ್ರೀ'ಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:—

ಈ ವಿಮಾಕಂಪನಿಯವರು ಒಬ್ಬ ಸಾಹಿತಿಯನ್ನು ಈ ಉತ್ಸವಕ್ಕೆ ಬರಮಾಡಿಕೊಂಡದ್ದು ಸಾಹಿತ್ಯಪರಿಷತ್ತಿನಲ್ಲಿ ಈಗಾಗಲೇ ತೋರಿಸುತ್ತಿರುವ ಅಭಿಮಾನವೇ ಕಾರಣವೆಂದು ತಿಳಿಯುತ್ತೇನೆ.

ವಿಮಾ ಉದ್ಯಮ ಜನರನ್ನು ಮೇಲಕ್ಕೆತ್ತುವ ಮಾರ್ಗ. ಇದರಲ್ಲಿ ಜನರಿಗೆ ಒಂದು ನಂಬಿಕೆ ಹುಟ್ಟಬೇಕು. ನಂಬಿಕೆ ಹುಟ್ಟಬೇಕಾದರೆ ಕಾರ್ಯಕರ್ತರಲ್ಲಿ ಪ್ರಾಮಾಣಿಕತೆ ಬೇಕು. ಸಂಘ ಸಂಸ್ಥೆಗಳನ್ನು ಸ್ಥಾಪಿಸುವುದು ಸುಲಭವಾದುದೇನೂ ಅಲ್ಲ. ಶ್ರೀಮಾನ್ ದೊಡ್ಡವೀರಪ್ಪನವರು ನಂಬುಗೆಯಿಂದ, ದಕ್ಷತೆಯಿಂದ, ಚಾತುರ್ಯದಿಂದ ಕಂಪೆನಿಯನ್ನು ಬೆಳೆಸುತ್ತಿದ್ದಾರೆ. ಕರ್ನಾಟಕದ ಗೌರವವನ್ನು ಹೆಚ್ಚಿಸಲು ದುಡಿಯುತ್ತಿದ್ದಾರೆ. ಅವರು ಕನ್ನಡನಾಡನ್ನು ಕಟ್ಟುತ್ತಿದ್ದಾರೆ. ಅವರು ಲಕ್ಷ್ಮೀಪುತ್ರರಾದರೆ ಸರಸ್ವತೀಪುತ್ರರಾದ ನಮಗೇನು ಭಯ.!

ಮೈಸೂರಿನವರು ದಾಸರ ದಾಸರಲ್ಲ. ಕರ್ನಾಟಕಕ್ಕೆ ದಾರಿಯನ್ನು ಹಾಕಿಕೊಟ್ಟು, ಕರ್ನಾಟಕವನ್ನು ಹೆಗಲಮೇಲೆ ನಿಲ್ಲಿಸಿಕೊಳ್ಳಲು ತಮಗೆ ಶಕ್ತಿಯಿದೆ ಎಂಬುದನ್ನು ಮೈಸೂರಿನವರು ತೋರಿಸಿಕೊಡಬೇಕು. 'ಮೈಸೂರು ಹಣ ಹೊರಕ್ಕೆ ಹೋಗದಹಾಗೆ ಜನರು ಉದ್ಯಮಶೀಲರಾಗಬೇಕು' ಎಂದು ಮಹಾಸ್ವಾಮಿಯವರು ಬಮ್ಮೆ ಅಪ್ಪಣೆಕೊಡಿಸಿದರು. ಅದೇರೀತಿ ಮೈಸೂರು ಇನ್‌ಷೂರೆನ್ಸ್ ಕಂಪನಿ ಅಭಿವೃದ್ಧಿ ಪಡೆಯುತ್ತಿದೆ. ಇನ್ನೂ ಅಭಿವೃದ್ಧಿ ಪಡೆಯುತ್ತ ಕನ್ನಡನಾಡಿಗೆ ಕೀರ್ತಿತರಲಿ. ಒಂದುಕಡೆ ಆರ್ಥಿಕಸ್ಥಿತಿ ವೃದ್ಧಿಯಾಗಲಿ, ಒಂದು ಕಡೆ ಸಾಹಿತ್ಯಕಲೆಗಳು ವೃದ್ಧಿಯಾಗಲಿ. ಆರ್ಥಿಕ ವ್ಯಾಪಾರ ಸಾಹಿತ್ಯ ವ್ಯಾಪಾರಕ್ಕೆ ಹೊರಗೇನೂ ಇಲ್ಲ. ಅಂತೂ ಕನ್ನಡನಾಡಿನ ಯಶಸ್ಸು ಬೆಳೆಯಲಿ.

ಕಡೆಯಲ್ಲಿ ಶ್ರೀಮಾನ್ ದೊಡ್ಡವೀರಪ್ಪನವರು ಎಲ್ಲರನ್ನೂ ಅಭಿವಂದಿಸುತ್ತ, ಕನ್ನಡ ಸಾಹಿತ್ಯಕ್ಕೆ ಕಂಪನಿ ಇಟ್ಟಿರುವ ಅಭಿಮಾನವನ್ನು ತಿಳಿಸಿ, ಕನ್ನಡ ಟೈಪ್‌ರೈಟರ್ ಇಲ್ಲದೆ ಬಹಳ ತೊಂದರೆಯಾಗಿರುವುದೆಂದೂ 'ಶ್ರೀ' ಯವರು ಆ ಕೊರತೆಯನ್ನು ನಿವಾರಿಸಿಕೊಡಬೇಕೆಂದೂ ಕೋರಿದರು. 'ಶ್ರೀ' ಯವರು ಆ ವಿಚಾರದಲ್ಲಿ ನಡೆಯುತ್ತಿರುವ ಪ್ರಯತ್ನವನ್ನು ತಿಳಿಸಿದರು. ಶ್ರೀಮನ್ಮಹಾರಾಜರ ಶ್ರೇಯಃಪ್ರಾರ್ಥನೆಯೊಡನೆ ಸಭೆ ಮುಕ್ತಾಯವಾಯಿತು.

---

## ಕನ್ನಡ ಸುದ್ದಿ

**ಹುಬ್ಬಳ್ಳಿ: ಸಾಮ್ರಾಜ್ಯ ದಿನಾಚರಣೆ**

ಮೇಲ್ಕಂಡ ಉತ್ಸವ ಹುಬ್ಬಳ್ಳಿಯಲ್ಲಿ ಆಚರಿಸಲ್ಪಟ್ಟಿತು. ಬೆಳಗಾವಿ ಜಿಲ್ಲಾ ಬೋರ್ಡಿನ ಚೀಫ್ ಆಫೀಸರಾದ ಶ್ರೀ ಪಾಟೀಲಯವರು ಭಾಷಣಮಾಡಿದರು.

**ಮಂಗಳೂರು : ವಿಜಯನಗರ ಸಾಮ್ರಾಜ್ಯ ದಿನಾಚರಣೆ**

ಮೇಲ್ಕಂಡ ಉತ್ಸವ ಕಳೆದ ೧೪ನೆಯ ಮಂಗಳವಾರ ಶ್ರೀ॥ ಕೆ. ಬಿ. ಜಿನರಾಜ ಹೆಗ್ಗಡೆ, ಎ. ಎಲ್. ಎ. (ಕೇಂದ್ರ) ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀಗಳಾದ ಪಂಡಿತ ನಾರಾಯಣ ಭಟ್ಟರು ಮತ್ತು ಮುಕುಂದರಾಯರು ಕನ್ನಡ ಸಾಮ್ರಾಜ್ಯದ ವೈಭವವನ್ನೂ, ಆ ಕಾಲದಲ್ಲಿ ಹಿಂದೂ ಮುಸಲ್ಮಾನರು ಒಕ್ಕಟ್ಟಿನಿಂದ ಇದ್ದುದನ್ನೂ ವಿವರಿಸಿದರು. ಅಧ್ಯಕ್ಷರು ಮಾತನಾಡುತ್ತಾ ತುಳವರು ಕನ್ನಡಿಗರೊಂದಿಗೆ ತಾದಾತ್ಮ್ಯಭಾವದಿಂದ ಇದ್ದರೆಂದು ಹೇಳಿ ಕನ್ನಡದ ಏಕೀಕರಣಕ್ಕೆ ವಿರೋಧವಾಗಿ ನಡೆಯುತ್ತಿರುವ ತುಳು, ಕೊಂಕಣಿ ಮತ್ತು ಮಲೆಯಾಳಿ ಚಳುವಳಿಗಳನ್ನು ಖಂಡಿಸಿದರು.

**ಕನ್ನಡ ಸಂಸ್ಥಾನಗಳಲ್ಲಿ ಕನ್ನಡ ನುಡಿ**

ಶಿರಹಟ್ಟಿ ಸಂಸ್ಥಾನದಲ್ಲಿ ಸಬ್ ರಿಜಿಸ್ಟ್ರಾರರ ಕಛೇರಿಯಲ್ಲಿ ಪತ್ರಗಳನ್ನು ಕನ್ನಡದಲ್ಲಿ ನೊಂದಣಿ (ರಿಜಿಸ್ಟರ್) ಮಾಡುತ್ತಿರುವರು.

ಸಾಂಗಲಿ ಸರಕಾರದವರ ನಿರ್ಧಾರದಂತೆ ಸಂಸ್ಥಾನದ ಅಧಿಕಾರಿಗಳಿಗೆ ಕನ್ನಡ ಪರೀಕ್ಷೆಗಳನ್ನು ಏರ್ಪಡಿಸಿದ್ದರು. ೪೪ ಅಧಿಕಾರಿಗಳಲ್ಲಿ ೧೯ ಮಂದಿ ತೇರ್ಗಡೆ ಹೊಂದಿದರು.

**ಮೇಲುಕೋಟೆ: ಪಂಡಿತಮಂಡಲದ ೬ನೆಯ ಸಮ್ಮೇಳನ**

ಮೈಸೂರು ದೇಶದ ವಿದ್ಯಾಶಾಲಾ ಪಂಡಿತಮಂಡಲದ ಆಶ್ರಯದಲ್ಲಿ ಮೇಲ್ಕಂಡ ಸಮ್ಮೇಳನ ಮೇಲುಕೋಟೆಯಲ್ಲಿ ಇದೇ ೨೫, ೨೬, ೨೭, ನೆಯ ತಾರೀಖುಗಳಲ್ಲಿ ನಡೆಯುವುದು. ಮೈಸೂರು ಸಂಸ್ಥಾನದ ಪ್ರಥಮ ಸಚಿವರಾದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್ ಮಾಧವರಾಯರು ಸಮ್ಮೇಳನದ ಪ್ರಾರಂಭೋತ್ಸವ ನಡೆಸುವರು. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಸಮ್ಮೇಳನದ ಅಧ್ಯಕ್ಷತೆವಹಿಸುವರು.

---

## ಪರಿಷತ್ತಿನ ಸುದ್ದಿ

### ಕನ್ನಡ ಸಾಹಿತ್ಯ ಪರೀಕ್ಷೆಗಳು—೧೯೪೦

ಪರೀಕ್ಷೆಯ ದಿನಗಳು :—ಜೂನ್ ೧೪, ೧೫, ೧೬.

ಶೆರ: ೨ನೆಯ ಪರೀಕ್ಷೆ ೧ ರೂ.

೩ ,, ,, ೨ ರೂ.

ಅಪೇಕ್ಷೆಪತ್ರಗಳನ್ನು ಕಳಿಸಲು ಕಡೆಯ ದಿನ: ಮೇ ೩೧ಕ್ಕೆ ಹೆಚ್ಚಿಸಿದೆ

ಸೂಚನೆ: ಅಪೇಕ್ಷೆಪತ್ರಗಳನ್ನು ಪರಿಷತ್ತಿನ ಕಾರ್ಯದರ್ಶಿಗಳಿಂದಾಗಲಿ ಆಯಾ ಪ್ರಾಂತ ಸಮಿತಿಯ ಕಾರ್ಯದರ್ಶಿಗಳಿಂದಾಗಲಿ ತರಿಸಿಕೊಳ್ಳಬಹುದು. ವಿವರಗಳಿಗಾಗಿ 'ಕನ್ನಡ ನುಡಿ'ಯ ಏಪ್ರಿಲ್ ೧೨ನೆಯ ತಾರೀಖಿನ ಸಂಚಿಕೆಯನ್ನು ನೋಡಿ.

---

## ಲಿಪಿಸಂಸ್ಕರಣ

ಎಂ. ಎಸ್. ಅನಂತಪದ್ಮನಾಭರಾವ್, ಮಡಿಕೇರಿ

[ ಲೇಖನಗಳಲ್ಲಿ ಬರುವ ಅಭಿಪ್ರಾಯಗಳಿಗೆ ಲೇಖಕರೇ ಜವಾಬ್ದಾರರು —ಸಂ.]

ಹಿಂದೂದೇಶದ ಎಲ್ಲಾ ಭಾಷೆಗಳಿಗೂ ದೇವನಾಗರಿ ಲಿಪಿಯನ್ನೇ ಉಪಯೋಗಿಸುವುದರಿಂದ ಒಂದು ಭಾಷೆಯ ಜನಾಂಗದವರಿಗೆ ಇತರ ಭಾಷೆಗಳನ್ನು ಕಲಿಯಲು ಸುಲಭವಾಗುವುದೆಂದು ಕೆಲವರ ಮತ. ಮಹಾತ್ಮಾ ಗಾಂಧಿಯವರೂ ಇದೇ ಅಭಿಪ್ರಾಯಪಟ್ಟಿರುವರು. ದೊಡ್ಡ ಭಾಷೆಗಳೆನಿಸಿರುವ ಹಿಂದಿ, ಮಹಾರಾಷ್ಟ್ರ ಭಾಷೆಗಳು ಪ್ರತ್ಯೇಕ ಸ್ವತಂತ್ರ ಲಿಪಿಯಿಲ್ಲದೆ ದೇವನಾಗರಿ ಲಿಪಿಗೆ ಶರಣುಹೋಗಿವೆ. ಇದುವರೆಗೆ ಈ ಭಾಷೆಗಳ ವರ್ಚಸ್ಸು ಆ ಲಿಪಿಯ ಸಹಾಯದಿಂದಲೇ ಉಳಿದಿವೆ. ದಕ್ಷಿಣ ಭಾರತದ ದ್ರಾವಿಡ ಭಾಷೆಗಳಿಗೆಲ್ಲಾ ಸ್ವತಂತ್ರವಾದ ಲಿಪಿಗಳಿದ್ದು ಅವುಗಳ ಮೂಲಕ ಆಯಾ ಭಾಷೆಗಳು ತಮ್ಮ ಕೀರ್ತಿಯನ್ನು ಬೆಳಗುತ್ತಿವೆ. ಆದರೆ ಈ ಲಿಪಿ ಸ್ವಾತಂತ್ರ್ಯವನ್ನು ಅಳಿಸಿ, ದೇವನಾಗರಿ ಲಿಪಿಯನ್ನೇ ಪ್ರಯೋಗಕ್ಕೆ ತರುವುದರಿಂದ ನಮಗೆ ಸ್ವರಾಜ್ಯ ದೊರೆಯಬಹುದೆಂದೂ, ದೇಶದಲ್ಲಿ ಜನಾಂಗಗಳೊಳಗೆ ಐಕ್ಯಮತ್ಯ ಅಧಿಕವಾಗುವುದೆಂದೂ ಕೆಲವರ ಮತವಿರಬಹುದು. ಆದರೆ ಈ ಮಾರ್ಪಾಟಿನಿಂದ ಆಗಬಹುದಾದ ಸಾಧಕಗಳಿಗಿಂತ ಬಾಧಕಗಳೇ ಅಧಿಕ.

ಅಕ್ಷರ ಸಂಖ್ಯೆ, ಉಚ್ಚಾರಣೆ, ಸ್ವರ, ವ್ಯಂಜನ ಮುಂತಾದುವುಗಳಲ್ಲಿ ಈ ದ್ರಾವಿಡ ನುಡಿಗಳಿಗೂ ಸಂಸ್ಕೃತ ಭಾಷೆಗೂ ಹೆಚ್ಚು ವ್ಯತ್ಯಾಸವಿಲ್ಲದೆ ಇರುವುದಾದರೂ ಈ ದ್ರಾವಿಡ ಭಾಷೆಗಳೆಲ್ಲವೂ ಸಂಸ್ಕೃತ ಭಾಷೆಗೆ ಋಣಿಯಾಗಿರುವುವಾದರೂ ಲಿಪಿ ಬದಲಾವಣೆಗೆ ಸಾಕಾದಷ್ಟು ಕಾರಣ ತೋರಿಬರುವುದಿಲ್ಲ. ಭರತಖಂಡದ ಸಮಸ್ತ ಭಾಷೆಗಳಿಗೂ ಒಂದೇ ಲಿಪಿಯಾದರೆ ಇತರ ಭಾಷೆಗಳನ್ನು ಪರಿಚಯ ಮಾಡಿಕೊಳ್ಳುವುದು ಸುಲಭವಾಗುವುದು ಮತ್ತು ಅದರ ಕಾರಣದಿಂದ ಒಬ್ಬರಿಗೊಬ್ಬರಿಗೆ ಮೈತ್ರಿವುಂಟಾಗಿ ದೇಶಪ್ರೇಮ ಇನ್ನೂ ಅಧಿಕವಾಗುವುದು ಎಂದು ಒಬ್ಬ ಮಿತ್ರರು ತಿಳಿಸಿದರು. ಪರೀಕ್ಷಿಸುವುದಾದರೆ ಹಿಂದಿ, ಮಹಾರಾಷ್ಟ್ರ ಮತ್ತು ಉತ್ತರದೇಶದ ಇನ್ನೂ ಕೆಲವು ಭಾಷೆಗಳು ದೇವನಾಗರಿ ಲಿಪಿಯಿಂದಲೇ ಬಳಕೆಯಲ್ಲಿವೆ. ಇದರ ಕಾರಣವಾಗಿ ಹಿಂದೀ ಮಹಾರಾಷ್ಟ್ರ ಜನಾಂಗಗಳೊಡನೆ ಎಷ್ಟರಮಟ್ಟಿನ ಐಕ್ಯತೆಯುಂಟಾಗಿದೆಯೋ ಅಥವಾ ಅವರವರೊಳಗೆ ಪರಸ್ಪರ ಭಾಷಾಪ್ರೇಮ ಎಷ್ಟುಮಟ್ಟಿಗೆ ಉಂಟಾಗಿರಬಹುದೋ ಹೇಳಲಾಗುವುದಿಲ್ಲ.

ಆದರೆ ಈಗಿರುವ ಐಕ್ಯಮತ್ಯ, ಮೈತ್ರಿ ಮತ್ತು ಭಾಷಾಪ್ರೇಮ ಇವುಗಳು ಈ ಲಿಪಿಸಾಮ್ಯದಿಂದ ಜನ್ಯವಾದುವಲ್ಲ. ಕಾಂಗ್ರೆಸ್ಸಿನ ವರ್ಚಸ್ಸು, ರಾಜಕೀಯ ವಾತಾವರಣ, ಬಹುಜನ ಭಾಷೆಯಾದ ಹಿಂದೀ ಭಾಷೆಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡಬೇಕೆನ್ನುವ ಹಿಂದೀ ಪ್ರೇಮಿಗಳ ಉತ್ಸಾಹ ಈ ಎಲ್ಲ ಕಾರಣಗಳಿಂದ ಭಾರತೀಯರಿಗೆ ಒಂದು ರೀತಿಯಿಂದ ಹಿಂದೀ ಭಾಷೆಯಮೇಲೆ ಪ್ರೇಮವುಂಟಾಗಿದೆ. ಹಿಂದೀ ಭಾಷೆಯೇ ಮನೆಭಾಷೆಯಾಗುಳ್ಳವರಿಗೆ ಇದೇ ಬಗೆಯಾದ ಪ್ರೇಮ, ಆದರ, ಆಸಕ್ತಿ, ಇತರ ಭಾಷೆಗಳ ಮೇಲೆ ಇರುವುದೆಂದು ಹೇಳಲಾಗುವುದಿಲ್ಲ. ಇದ್ದರೂ ವಿರಳ. ಹಿಂದೀ ಮಾತನಾಡುವ ಬಹು ಸಂಖ್ಯೆಯ ಜನರಿಗೆ ಸಹೋದರ ಭಾಷೆಗಳಲ್ಲಿ ಆದರವಿಲ್ಲದಿರುವುದು ಕಂಡುಬರುವಾಗ ಇತರ ಎಲ್ಲ ಭಾಷೆಗಳಿಗೆ ದೇವನಾಗರಿ ಲಿಪಿಯನ್ನು ಹಚ್ಚಿದ ಮಾತ್ರಕ್ಕೆ ಒಂದು ರೀತಿಯಿಂದ ಐಕ್ಯ, ಆದರ, ಪ್ರೇಮ ಹುಟ್ಟುವುದೆಂದು ಹೇಳುವುದು ಸ್ವಾರ್ಥಸಾಧನೆಗೊಂದು ಉಪಾಯವೆನ್ನಬೇಕು.

ಒಂದೇ ಲಿಪಿಯಾದಲ್ಲಿ ಟೈಪ್ ರೈಟಿಂಗ್, ಅಚ್ಚುಕೂಟ ಮತ್ತು ಸಂಕ್ಷಿಪ್ತಲಿಪಿ ಇವುಗಳ ಕೆಲಸ ಸುಲಭವಾಗುವುದೆಂಬುವುದು ಇನ್ನೊಂದು ವಾದ. ಟೈಪ್ ರೈಟಿಂಗ್ ಮಟ್ಟಿಗೆ ಸುಲಭವಾಗಬಹುದು. ಅಚ್ಚುಕೂಟದ ಅಕ್ಷರಗಳನ್ನು ತಯಾರುಮಾಡುವ ಕಾರ್ಖಾನೆಯವರಿಗೆ ಸುಲಭವಾಗಬಹುದು. ಆದರೆ ಸಂಕ್ಷಿಪ್ತಲಿಪಿಗೆ ಇದು ಸಹಾಯಕವಲ್ಲ. ಏಕೆಂದರೆ ಲಿಪಿಯೊಂದಾದರೂ ಭಾಷೆಯೊಂದಾಗುವುದಿಲ್ಲ. ಅದರದರ ವರ್ಚಸ್ಸು ಅದದಕ್ಕಿದ್ದೇ ಇದೆ. ಉಚ್ಚಾರಣೆ, ಶಬ್ದಗಳು, ಪ್ರಯೋಗಗಳು, ಪ್ರತ್ಯಯಗಳು ಇವೆಲ್ಲಾ ಬೇರೆ ಬೇರೆ. ಒಂದು ಭಾಷೆಯ ಸಂಕ್ಷಿಪ್ತ ಲಿಪಿಗಾರನು ಇನ್ನೊಂದು ಭಾಷೆಯ ಸಂಕ್ಷಿಪ್ತ ಲಿಪಿಯನ್ನೂ ಹೊಸದಾಗಿ ಅಭ್ಯಾಸಮಾಡಿಯೇ ತೀರಬೇಕು. ಈ ಲಿಪಿ ಸಾಮ್ಯಕ್ಕೂ ಸಂಕ್ಷಿಪ್ತಲಿಪಿಗೂ ಯಾವ ಸಂಬಂಧವೂ ಇಲ್ಲ.

ಇನ್ನೊಂದು ಮಾತು. ಈಗಾಗಲೇ ಪ್ರತಿಯೊಂದು ನುಡಿಯಲ್ಲೂ ಸಾವಿರಾರು ಕಾವ್ಯಗಳು, ಕಾದಂಬರಿಗಳು, ಗ್ರಂಥಗಳು ಅದರದರ ಸ್ವತಂತ್ರ ಲಿಪಿಯಲ್ಲಿ ಪ್ರಚಲಿತವಾಗಿವೆ. ಲಿಪಿಯೊಂದಾಗುವಾಗ ಆ ಹೊಸ ಲಿಪಿಯಲ್ಲಿ ಇವೆಲ್ಲವನ್ನೂ ಅಚ್ಚುಹಾಕಿಸುವ ವೆಚ್ಚವೆಷ್ಟು? ಇವುಗಳನ್ನು ದೇವನಾಗರಿ ಲಿಪಿಯಲ್ಲಿ ಆಗಾಗಲೇ ಒದಗಿಸದೆ ಹೋದರೆ ಅವುಗಳ ನಾಶಕ್ಕೂ ಇದೊಂದು ಕಾರಣವಾಗುವುದು. ಇಲ್ಲವಾದರೆ ಈ ಪುಸ್ತಕಗಳ ಉದ್ಧಾರಕ್ಕೋಸ್ಕರ ಮೊದಮೊದಲು ಎರಡು ಲಿಪಿಗಳನ್ನು ಕಲಿಯಬೇಕಾದ ಪ್ರಮೇಯ ಬಂದೊದಗುವುದು. ಇದು ಎಲ್ಲರಿಗೂ ಆಗದ ಮಾತು.

ವಿಚಾರಮಾಡುತ್ತಾ ಹೋದರೆ ಈ ಯೋಜನೆಯು ಸಾಧುವಲ್ಲ. ಲಿಪಿಸಂಸ್ಕರಣಕಾರರು ಇರುವ ಭಾಷೆಗಳನ್ನು ಇರುವಂತೆಯೇ ಬಿಟ್ಟು ಅವುಗಳ ಲಿಪಿಯಲ್ಲಿ ಅವು ಜೀವಿಸುವುದಕ್ಕೆ ಅವಕಾಶ ಕೊಡುವುದಾದರೆ ಅವರಿಂದ ಈ ಎಲ್ಲಾ ಭಾಷೆಗಳಿಗೂ ಮಹೋಪಕಾರವಾಗುವುದು.

---

೬೫-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೨ ಆಣೆ

# ಕನ್ನಡನುಡಿ



ಸಂಪುಟ ೨
ಸಂಚಿಕೆ ೩೨

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಮೇ ೩೧, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಪರಿಷತ್ತಿನ ಬೆಳ್ಳಿಯ ಹಬ್ಬ

**ಜೂನ್ ೩೦, ೧೯೪೦**

---

### ಬಿನ್ನಹ

ಪರಿಷತ್ತಿನ ಬೆಳ್ಳಿಯ ಹಬ್ಬ (ಸಿಲ್ವರ್ ಜ್ಯೂಬಿಲಿ) ಇದೇ **೧೯೪೦ನೆಯ ಇಸವಿ ಜೂನ್ ೩೦ನೆಯ** ತಾರೀಖಿನ ದಿನ ಪ್ರಾರಂಭವಾಗಿ, ಎರಡು ದಿವಸ ನಡೆಯಬೇಕೆಂದು ನಿರ್ಧಾರಮಾಡಿರುತ್ತದೆ. **ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರೂ, ಪರಿಷತ್ತಿನ ಮಹಾ ಪೋಷಕರೂ ಆಗಿರುವ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು** ಉತ್ಸವವನ್ನು ಸಮಾರಂಭಣಗೊಳಿಸುವುದಕ್ಕೆ ಕೃಪೆಯಿಟ್ಟು ಸಮ್ಮತಿಸಿರುವ ಆನಂದದ ಸಮಾಚಾರ ಈಗಾಗಲೆ ಕನ್ನಡ ನಾಡಿನ ಮಹಾಜನರೆಲ್ಲರಿಗೂ ತಿಳಿದ ವಿಷಯವಾಗಿದೆ. ಕನ್ನಡ ನಾಡಿನ ಮತ್ತೆ ಕೆಲವರು ರಾಜರೂ ಶ್ರೀಮಂತರೂ ದಯಮಾಡಿ ಈ ಶುಭ ಸಮಾರಂಭವನ್ನು ಅಲಂಕರಿಸುವರೆಂಬ ನಿರೀಕ್ಷೆ ಇದೆ.

ಈ ಮಹೋತ್ಸವವನ್ನು ಯೋಗ್ಯರೀತಿಯ ವಿಜೃಂಭಣೆಯಿಂದ ನೆರವೇರಿಸತಕ್ಕದ್ದು ಪರಿಷತ್ತಿನ ಕರ್ತವ್ಯವಾಗಿದೆ. ಶ್ರೀಮನ್ ಮಹಾರಾಜರವರಿಗೆ ಒಂದು ಬೆಳ್ಳಿಯ ಕರಂಡದಲ್ಲಿ ಬಿನ್ನವತ್ತಳೆಯನ್ನೊಪ್ಪಿಸಬೇಕೆಂದೂ, ಬಂದ ಅತಿಥಿಗಳನ್ನೆಲ್ಲಾ ಉಚಿತ ಸತ್ಕಾರದಿಂದ ಆದರಿಸಬೇಕೆಂದೂ, ಸಂಗೀತ, ಗಮಕ, ನಾಟಕ, ಯಕ್ಷಗಾನ, ವ್ಯಾಯಾಮ, ಮಕ್ಕಳ ಮತ್ತು ಹೆಣ್ಣುಮಕ್ಕಳ ವಿನೋದಗಳು ಮುಂತಾದ ಕರ್ನಾಟಕ ವೈಶಿಷ್ಟ್ಯಗಳ ಪ್ರದರ್ಶನಕ್ಕಾಗಿ ಕಲಾ ವಿದ್ವಾಂಸರನ್ನೂ ನಿಪುಣರನ್ನೂ ಕೂಡಿಸಬೇಕೆಂದೂ, ಪುಸ್ತಕಪ್ರಕಟನ ಮುಂತಾದ ಪರಿಷತ್ತಿನ ನಾನಾ ಮುಖವಾದ ಚಳವಳಿಗಳ ರೂಪುರೇಖೆಗಳನ್ನು ಪ್ರಕಾಶಗೊಳಿಸಬೇಕೆಂದೂ ಕಾರ್ಯಕ್ರಮ ಏರ್ಪಟ್ಟಿದೆ. ಇದಕ್ಕೆಲ್ಲಾ ಸುಮಾರು ೩,೦೦೦ ರೂ. ವೆಚ್ಚ ಅಂದಾಜಾಗಿದೆ.

ಪರಿಷತ್ತು ಇದುವರೆಗೆ ಸಲ್ಲಿಸಿರುವ ಸೇವೆಯನ್ನೂ ಮುಂದೆ ಸಮರ್ಪಿಸಬೇಕೆಂದಿರುವ ಶ್ರದ್ಧೋತ್ಸಾಹಗಳನ್ನೂ ತಾಯ್ನುಡಿ ಪ್ರೇಮಿಗಳೂ ಪರಮೋದಾರಿಗಳೂ ಆದ ನಾಡಿನ ಮಹಾಜನರೆಲ್ಲರೂ ತಮ್ಮ ಘನವಾದ ಚಿತ್ತಕ್ಕೆ ತಂದುಕೊಂಡು, ಕನ್ನಡ ನಾಡಿನ ನಾನಾ ಪ್ರಾಂತಗಳ ಪ್ರತಿನಿಧಿಗಳೂ ಮಹಾಜನರೂ ಸೇರಿ ನೆರವೇರಿಸುವ ಈ ಉತ್ಸವ ಯಶಸ್ವಿಯಾಗಿ ಜರುಗಲನುಕೂಲಿಸುವಂತೆ ಧಾರಾಳವಾಗಿ ಧನ ಸಹಾಯಮಾಡಿ ನಮ್ಮ ದೊಡ್ಡ ಪ್ರಯತ್ನಕ್ಕೆ ನೆರವಾಗಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇವೆ.

ಸ್ವಾಗತ ಸಮಿತಿಯವರ ಪರವಾಗಿ
**ಬಿ. ಎಂ. ಶ್ರೀಕಂಠಯ್ಯ (ಉಪಾಧ್ಯಕ್ಷ)**
**ಬಿ. ವೆಂಕೋಬರಾವ್ (ಕಾರ್ಯದರ್ಶಿ)**
**ಡಿ. ಸಿ. ಸುಬ್ಬರಾಯಪ್ಪ (ಕೋಶಾಧಿಕಾರಿ)**

# ದರ್ಶನಗಳು

**ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.**

(ತಾ॥ ೨೪-೫-೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

**ಅದ್ವೈತ**: ಅದ್ವೈತವೆಂದರೆ ಒಂದೇ ಇರುವಿಕೆ ಎಂದರ್ಥ. ಅಂದರೆ ಉಪನಿಷತ್ತುಗಳು ಸಾರುವಂತೆ ಬ್ರಹ್ಮವೆಂಬ ವಸ್ತು ಒಂದೇ ಇರುವುದು ಎಂದು ಹೇಳಿದ ಹಾಗಾಗುತ್ತದೆ. ಅದರೆ ಈ ಮಾತು ಸರಿಯಾಗಿ ಅರ್ಥವಾಗುವುದು ಕಷ್ಟ. ಸಾಮಾನ್ಯವಾಗಿ ಯೋಚಿಸುವವರು ಅಭಿಪ್ರಾಯಪಡುವ ರೀತಿ ಹೀಗಿದೆ — ಬ್ರಹ್ಮ ಮತ್ತು ಜಗತ್ತು ಎಂದು ಎರಡು ವಿಷಯಗಳು ನಮಗೆ ಗೊತ್ತು. ಅವುಗಳಲ್ಲಿ ಬ್ರಹ್ಮವೊಂದೇ ಸತ್ಯವಾದರೆ, ಜಗತ್ತು ಸುಳ್ಳಾಗಬೇಕು. ಆ ರೀತಿ ಶಾಸ್ತ್ರ ಹೇಳಿರುವುದರಿಂದಲೂ ಜ್ಞಾನಿಗಳ ಅನುಭವ ಹಾಗೆಯೇ ಇರುವುದರಿಂದಲೂ ನಮಗೆ ತೋರುತ್ತಿರುವ ಪ್ರಪಂಚವನ್ನು ಇಲ್ಲವೆನ್ನಬೇಕು. ಹೀಗಾದರೆ ಬ್ರಹ್ಮವೊಂದೇ ಸತ್ಯವಾದದ್ದಾಗಿ ನಿಂತು ಅದ್ವೈತಮತ ಏರ್ಪಡುತ್ತದೆ. ಇಲ್ಲವಾದರೆ ಬ್ರಹ್ಮ ಮತ್ತು ಪ್ರಪಂಚ ಎಂಬ ಎರಡು ಪದಾರ್ಥಗಳೂ ಇವೆಯೆನ್ನಬೇಕು. ಹಾಗೆ ಹೇಳಿದರೆ ಅದ್ವೈತಕ್ಕೆ ಬದಲಾಗಿ ದ್ವೈತ ಏರ್ಪಡುತ್ತದೆ. ಆದಕಾರಣ ಯಾವ ರೀತಿಯಲ್ಲಿ ಆದರೂ ಪ್ರಪಂಚವನ್ನು ತಳ್ಳಿಹಾಕಬೇಕು. ಪ್ರಪಂಚ ಮಿಥ್ಯೆಯೆಂದು ಹೇಳಿದರೆ ಅದನ್ನು ತಳ್ಳಿದಂತಾಗುತ್ತದೆ. ಹಾಗೆಯೇ ಶಂಕರಾಚಾರ್ಯರೂ ಸಿದ್ಧಾಂತ ಮಾಡಿದ್ದಾರೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ವಿಚಾರ ಮಾಡಿದರೆ ಮೇಲೆ ವಿವರಿಸಿದ ರೀತಿಯಲ್ಲಿ ಅದ್ವೈತಸಿದ್ಧಿಸುವುದಿಲ್ಲ. ನಿಜವಾಗಿಯೂ ಇರುವ ಪ್ರಪಂಚವನ್ನು ಅಂಗೀಕಾರ ಮಾಡದೆ ತಳ್ಳಿಹಾಕಿರುವ ದಾರ್ಶನಿಕರು ಭಾರತಭೂಮಿಯಲ್ಲಿ ವಿರಳ. ಬೌದ್ಧರಲ್ಲಿ ಯೋಗಾಚಾರ ಮತದವರು ವಿಜ್ಞಾನ ಸಂತತಿಯನ್ನು ಮಾತ್ರ ಒಪ್ಪಿ ಪ್ರಪಂಚವನ್ನು ಇಲ್ಲವೆಂದು ಅಪಲಾಪ ಮಾಡಿದ್ದಾರೆ. ಹಾಗೆಯೇ ಮಾಧ್ಯಮಿಕರೂ ಪ್ರಪಂಚವನ್ನು ಇಲ್ಲವೆನ್ನುತ್ತಾರೆ. ಮಾಧ್ಯಮಿಕರ ಮತದಲ್ಲಿ ಜ್ಞಾನಸಂತತಿಯೂ ಇಲ್ಲವಾಗಿ ಬರಿಯ ಶೂನ್ಯವೆಂಬುದೇ ತತ್ತ್ವವೆಂದು ಏರ್ಪಟ್ಟದೆ. ಶಂಕರಾಚಾರ್ಯರೂ ಪ್ರಪಂಚವನ್ನು ಇಲ್ಲವೆಂದು ಸಾರಿ ಬ್ರಹ್ಮವೊಂದೇ ಸತ್ಯ ಎಂದು ಹೇಳಿದ್ದರೆ, ಆಗ ಶೂನ್ಯಕ್ಕೂ ಬ್ರಹ್ಮಕ್ಕೂ ಯಾವ ವ್ಯತ್ಯಾಸವೂ ಇಲ್ಲವಾಗಿ ಹೋಗುತ್ತದೆ. ಶಂಕರಾಚಾರ್ಯರು ಬಹಳ ಜಾಗರೂಕತೆಯಿಂದ ಶೂನ್ಯಮತದ ಸಂಪರ್ಕವನ್ನು ತಡೆದು ತಮ್ಮ ಮತವನ್ನು ಸಿದ್ಧಾಂತಪಡಿಸಿರುವುದರಿಂದ, ಸಾಂಪ್ರದಾಯಿಕವಾದ ಅದ್ವೈತವನ್ನು ನಾವು ಸರಿಯಾಗಿ ತಿಳಿದುಕೊಳ್ಳಬೇಕು.

ಬೌದ್ಧರಲ್ಲಿ ಎರಡು ಪಂಗಡವನ್ನು ಬಿಟ್ಟರೆ, ಉಳಿದ ದಾರ್ಶನಿಕರೆಲ್ಲರೂ ಪ್ರಪಂಚವನ್ನೂ ಚೇತನನನ್ನೂ ಒಂದೇ ಸಮವಾಗಿ ಒಪ್ಪುತ್ತಾರೆ. ವ್ಯವಹಾರದಲ್ಲಿ ಅದ್ವೈತಮತ ಭಾಟ್ಟಮತವನ್ನೂ ಬಹಳವಾಗಿ ಅನುಸರಿಸುತ್ತದೆ. ನಮ್ಮ ಮುಂದೆ ಒಂದು ಮೇಜಿದೆ. ಅದು ನಿಜವಾದದ್ದು. ಅದನ್ನು ತಿಳಿದುಕೊಳ್ಳುವ ಜೀವನೂ ಸತ್ಯ. ಅದನ್ನು ತಿಳಿಯಪಡಿಸುವ ಜ್ಞಾನವೂ ಸತ್ಯ. ಹೀಗೆ ಮೂರು ಪದಾರ್ಥಗಳೂ ಸತ್ಯವೆಂದು ಅದ್ವೈತಿಗಳು ಒಪ್ಪುತ್ತಾರೆ. ಈ ಅನುಭವ ನಾವು ಎಚ್ಚತ್ತಿರುವ ಜಾಗ್ರತ್ ಅವಸ್ಥೆಯಲ್ಲಿ ಉಂಟಾಗುತ್ತದೆ. ಸ್ವಪ್ನದಲ್ಲಿಯೂ ಸಹ ಅದ್ವೈತಿಗಳು ಇದೇ ತತ್ತ್ವವನ್ನು ಒಪ್ಪುತ್ತಾರೆ. ನಾವು ನಿದ್ರಿಸುತ್ತಿರುವಾಗ ಸ್ವಪ್ನದ ಅನುಭವವೊಂದು ಏರ್ಪಡುತ್ತದೆ. ಬರಿಯ ಕೈಯಿಂದ ಸ್ವಪ್ನದಲ್ಲಿ ಸಿಂಹವೊಂದನ್ನು ಅನಾಯಾಸೇನ ಕೊಂದುಬಿಡುತ್ತೇವೆ. ಆಮೇಲೆ ನಿದ್ರೆಯಿಂದೆದ್ದಾಗ ನಾವು ಸಿಂಹವನ್ನು ಕೊಂದದ್ದು ನಿಜವಲ್ಲವೆಂದೂ ಅದು ಬರಿಯ ಕನಸೆಂದೂ ನಮಗೆ ತೋರುತ್ತದೆ. ಈ ಅನುಭವದಲ್ಲಿ ಯಾವುದು ನಿಜ, ಯಾವುದು ಸುಳ್ಳು ಎಂಬುದನ್ನು ನಾವು ವಿಚಾರಮಾಡಬೇಕು. ಸಿಂಹವನ್ನು ಕೊಲ್ಲುವ ನಾವು, ಸಿಂಹ ಮತ್ತು ಅದನ್ನು ಸಂಹರಿಸುವ ವ್ಯಾಪಾರ, ಅದನ್ನು ಸಂಹರಿಸಿದೆವೆಂಬ ಜ್ಞಾನ; ಇವುಗಳಲ್ಲಿ ಅದ್ವೈತದ ಪ್ರಕಾರ ಸ್ವಪ್ನದಲ್ಲಿ ತೋರಿದ ಸಿಂಹ ಸತ್ಯವಾದದು. ಅದು ನಮ್ಮ ಕಲ್ಪನೆಯಲ್ಲ. ಒಂದು ವಸ್ತುವಿಲ್ಲದೆ ಅದರ ಜ್ಞಾನವುಂಟಾಗುವುದಿಲ್ಲ. ಆದ್ದರಿಂದ ಸಿಂಹ ನಿಜವಾಗಿಯೂ ಇದೆ. ಅದನ್ನು ಕಂಡದ್ದೂ ಅದನ್ನು ಸಾಯಿಸಿದ್ದೂ ಸಹ ಅಷ್ಟೇ ನಿಜ. ಹಾಗೆಯೇ ಅದನ್ನು ಸಾಯಿಸಿದವನೂ ನಿಜ. ಆದರೂ ಆ ಅನುಭವವನ್ನು **ಸ್ವಪ್ನಾನುಭಾವ** ಎನ್ನುತ್ತೇವೆ. ಏಕೆಂದರೆ ಅದರಲ್ಲಿ ಸೇರಿರುವ ಅಂಶಗಳಲ್ಲಿ ಚೇತನನು ಸ್ವಪ್ನಾವಸ್ಥೆಯಲ್ಲಿದ್ದಂತೆ ಸ್ವಪ್ನ ಕಳೆದ ಮೇಲೂ ಇದ್ದಾನೆ. ಸಿಂಹ, ಅದನ್ನು ಸಾಯಿಸಿದ್ದು ಮುಂತಾದುವು ಸ್ವಪ್ನದ ಅನಂತರ ಇರುವುದಿಲ್ಲ. ಅಂದಮೇಲೆ ವಸ್ತುಗಳಲ್ಲಿ ಒಂದೇ ದರ್ಜೆಯನ್ನು ಒಪ್ಪುವುದಕ್ಕೆ ಆಗುವುದಿಲ್ಲವೆಂದು ತೋರಿಬರುತ್ತದೆ. ಸಿಂಹ ಒಂದು ದರ್ಜೆಯ ಸತ್ಯ. ಇದನ್ನು **ಪ್ರಾತಿಭಾಸಿಕ ಸತ್ಯ** ಎನ್ನುತ್ತಾರೆ. ಚೇತನನು ಬೇರೆ ದರ್ಜೆಗೆ ಸೇರುತ್ತಾನೆ. ಆದ್ದರಿಂದ ಯಾವುದೋ ಕಾರಣದಿಂದ ದೊಡ್ಡ ದರ್ಜೆಯ ಪದಾರ್ಥದೊಡನೆ ಚಿಕ್ಕದರ್ಜೆಯ ಪದಾರ್ಥ ಸೇರಿಕೊಂಡಂತೆ ಭಾಸವಾಗಿ ನಮಗೆ ಯಥಾರ್ಥವು ತೋರುವುದಿಲ್ಲ. ಚೇತನನದರ್ಜೆಗೆ ಸೇರದಿರುವುದರಿಂದ ಆ ದೃಷ್ಟಿಯಿಂದ ಸಿಂಹವನ್ನು ಮಿಥ್ಯಾ ಎಂದರೆ ಇಲ್ಲ ಎನ್ನುತ್ತೇವೆ.

ಇದೇ ತತ್ತ್ವವನ್ನು ವ್ಯವಹಾರದಲ್ಲಿಯೂ ಕಾಣುತ್ತೇವೆ. ಜೀವನು ತನ್ನ ಸುತ್ತ ಇರುವ ವಿಶ್ವದ ಅನುಭವವನ್ನು ಪಡೆಯುತ್ತಿರುವುದು ನಿಜ. ವಿಶ್ವವು ಎಷ್ಟು ಸತ್ಯವೋ, ಜೀವನೂ ಅಷ್ಟೇ ಸತ್ಯ. ಹಾಗೆಯೇ ವಿಶ್ವವನ್ನು ಪರಿಪಾಲಿಸುತ್ತಿರುವ ಈಶ್ವರನೂ ಅಷ್ಟೇಸತ್ಯ. ಈ ಸತ್ಯವನ್ನು **ವ್ಯಾವಹರಿಕ ಸತ್ಯ** ಎನ್ನುತ್ತಾರೆ. ಹಾಗಾದರೆ ಯಾವ ಅರ್ಥದಲ್ಲಿ ಪ್ರಪಂಚ ಮಿಥ್ಯೆಯಾಗುತ್ತದೆ ಎಂದು ವಿಚಾರಿಸಬೇಕು. ಇದಕ್ಕೆ ಸ್ವಪ್ನಾವಸ್ಥೆಯ ಅನುಭವವೇ ದೃಷ್ಟಾಂತ. ಜೀವನು ವ್ಯಾವಹಾರಿಕ ದೃಷ್ಟಿಯಿಂದ ಸತ್ಯ. ಅವನಿಗೆ ಸ್ವಪ್ನಾವಸ್ಥೆಯ ಪದಾರ್ಥಗಳು ತೋರಿ ಅನಂತರ ಮಾಯವಾದ್ದರಿಂದ, ಅವುಗಳನ್ನು ಪ್ರಾತಿಭಾಸಿಕ ವಸ್ತುಗಳು ಎಂದು ನಿಷ್ಕರ್ಷಿಸುತ್ತಾನೆ. ಹಾಗೆಯೇ ಬ್ರಹ್ಮವೆಂಬುದು ಪರಮಾರ್ಥ ವಸ್ತು. ಅದರಲ್ಲಿ ಜೀವನು, ಈಶ್ವರನು, ಪ್ರಪಂಚ ಮತ್ತು ಇತರ ಎಲ್ಲ ಪದಾರ್ಥಗಳೂ ಮಾಯೆಯಿಂದ ತೋರಿ ಅದೃಶ್ಯವಾಗುತ್ತವೆ. ಬ್ರಹ್ಮದ ದರ್ಜೆಯೇ ಬೇರೆ. ಪ್ರಪಂಚದ ದರ್ಜೆಯೇ ಬೇರೆ. ಹೀಗೆ ಬೇರೆಬೇರೆ ದರ್ಜೆ ವಸ್ತುಗಳನ್ನು ಒಂದಾಗಿ ತಿಳಿದುಕೊಳ್ಳುವುದು ಭ್ರಮೆ. ಅದೇ **ಸಂಸಾರ.** ಪ್ರಪಂಚದ ದೃಷ್ಟಿಯಿಂದ ಸ್ವಪ್ನ ಮಿಥ್ಯೆಯಾಗುವಂತೆ, ಬ್ರಹ್ಮದೃಷ್ಟಿಯಿಂದ ಪ್ರಪಂಚವೂ ಸ್ವಪ್ನವೂ ಸಹ ಮಿಥ್ಯೆಯಾಗುತ್ತವೆ. ಈ ಅರ್ಥದಲ್ಲಿ **ಬ್ರಹ್ಮಸತ್ಯ, ಪ್ರಪಂಚಮಿಥ್ಯೆ** ಎಂದು ಹೇಳಬೇಕಾಗಿದೆ.

ಈ ರೀತಿ ಒಪ್ಪುವುದಕ್ಕೆ ಸರ್ಪದೃಷ್ಟಾಂತವು ಬಹಳ ಸಹಕಾರಿಯಾಗಿರುತ್ತದೆ. ಒಂದು ಹಗ್ಗವನ್ನು ದೂರದಿಂದ ನೋಡುತ್ತೇವೆ. ಅದು ಹಗ್ಗವೆಂದು ನಮಗೆ ತೋರುವುದಿಲ್ಲ. ಇದ್ದಕ್ಕಿದ್ದ ಹಾಗೆಯೇ ಅದು ಹಾವು ಎಂದು ಅಭಿಪ್ರಾಯ ಪಡುತ್ತೇವೆ. ನಮಗೆ ಭಯವಾಗುತ್ತದೆ. ಓಡಿಹೋಗಲು ಯತ್ನಿಸಿ ಕಿರಿಚಿಕೊಳ್ಳುತ್ತೇವೆ. ಆಗ ಪಕ್ಕದಲ್ಲಿರುವವರು ಬಂದು ನೋಡಿ ನಮಗೆ ನಿಜವನ್ನು ಹೇಳುತ್ತಾರೆ. ನಾವು ಸರಿಯಾಗಿ ನೋಡಿದಾಗ ನಮಗೆ ಹಗ್ಗವೇ ಕಾಣುತ್ತದೆ. ಸರ್ಪ ಮಾಯವಾಯಿತು, ನಮ್ಮ ಭ್ರಾಂತಿಯೂ ಹೋಗಿ ನಾವು ಮೊದಲಿನಂತೆ ಇರುತ್ತೇವೆ. ಈ ಅನುಭವದಲ್ಲಿ ಇಷ್ಟು ಗೊತ್ತಾಗುತ್ತದೆ: ಹಗ್ಗದ ಜ್ಞಾನ ಭಾಸವಾಗದ ಹಾಗೆ ಆ ಜ್ಞಾನವನ್ನು ಆವರಿಸುವ **ಅವಿದ್ಯೆ** ಒಂದು ಏರ್ಪಟ್ಟಿತು. ಇದಕ್ಕೆ **ಆಚ್ಛಾದಿಕಾವಿದ್ಯಾ** ಎಂದು ಹೆಸರು. ಇದು ವಸ್ತುವಿನ ಸ್ವರೂಪವನ್ನು ಮರೆಸುತ್ತದೆ. ಅನಂತರ ಹಗ್ಗದಲ್ಲಿ ಸರ್ಪದ ಜ್ಞಾನವೇರ್ಪಡುತ್ತದೆ. ಅಲ್ಲಿ ಸರ್ಪವೊಂದು ತೋರುತ್ತದೆ. ಅದನ್ನು ತೋರಿಸುವ ಅವಿದ್ಯೆಯೊಂದು ತೋರುತ್ತದೆ. ಅದಕ್ಕೆ **ವಿಕ್ಷೇಪಿಕಾವಿದ್ಯಾ** ಎಂದು ಹೆಸರು. ಕೊನೆಗೆ ಇತರರ ಉಪದೇಶದಿಂದ ಅದು ಸರ್ಪವಲ್ಲ, ಬರಿಯ ಹಗ್ಗ ಎಂದು ಗೊತ್ತಾಗುತ್ತದೆ. ಆದರೂ ನಮ್ಮ ಭಯ ಹೋಗುವುದಿಲ್ಲ. ತರುವಾಯ ಅದು ಹಗ್ಗವೆಂಬುದನ್ನು ನಾವೇ ಪ್ರತ್ಯಕ್ಷವಾಗಿ ತಿಳಿಯುತ್ತೇವೆ. ಆಗ ಸರ್ಪಭ್ರಾಂತಿಯೂ ಅದರಿಂದ ಉಂಟಾದ ಭಯಾದಿಕಾರ್ಯಗಳೂ ತಾವಾಗಿ ನಾಶವಾಗುತ್ತವೆ.

ಇದೇ ಪ್ರಕಾರ ಉಪನಿಷತ್ತಿನಲ್ಲಿ ಏರ್ಪಟ್ಟಿರುವ ಬ್ರಹ್ಮವನ್ನು ಆಚ್ಛಾದಿಸುವ ಅವಿದ್ಯೆಯಿಂದಲೂ ಅದರ ಮೇಲೆ ಮತ್ತೆ ಆವರಿಸುವ ವಿಕ್ಷೇಪಿಕಾವಿದ್ಯೆಯಿಂದಲೂ ಬ್ರಹ್ಮದಲ್ಲಿ ಈಶ್ವರ, ಜೀವ, ಪ್ರಕೃತಿ ಮುಂತಾದ್ದು ತೋರುತ್ತದೆ. ಇದಕ್ಕೆ **ವಿವರ್ತ** ಅಂದರೆ ಬೇರೆಯಾಗಿ ತೋರುವುದು ಎಂದು ಹೆಸರು. ಚೇತನನು ಬರಿಯ ಜ್ಞಾನ ಸ್ವರೂಪ. ಸಾಂಖ್ಯ ಮತದಲ್ಲಿರುವಂತೆ ಇಲ್ಲಿಯೂ ಸಹ ಅಂತಃಕರಣವೃತ್ತಿಯೇ ಪದಾರ್ಥಜ್ಞಾನವನ್ನುಂಟುಮಾಡುತ್ತದೆ. ಚೇತನನು ಕೇವಲ ಸಾಕ್ಷೀಭೂತನಾಗಿರುತ್ತಾನೆ. ಎಲ್ಲಕ್ಕೂ ಆಧಾರವಾದ ಚೇತನನೇ ಬ್ರಹ್ಮ. ಹೀಗೆ ಸರ್ವಾಧಾರವಾದ ಬ್ರಹ್ಮದಲ್ಲಿ ಆರೋಪಣೆಯಿಂದ ಭಾಸವಾಗುವ ವಸ್ತುಗಳು ನಿಜವಾದರೂ ಅವುಗಳಿಗೆ ಅಧಾರವಾದ ಬ್ರಹ್ಮದಂತೆಯೇ ಅವು ನಿಜವಲ್ಲ. ಸ್ವಪ್ನಪದಾರ್ಥಗಳು ಬಾಧಿತವಾಗುವಂತೆ ಪ್ರಪಂಚವೂ ಬ್ರಹ್ಮಜ್ಞಾನದಿಂದ ಬಾಧಿತವಾಗುತ್ತದೆ. ಪ್ರಪಂಚವನ್ನು ಈ ಅರ್ಥದಲ್ಲಿ ಮಿಥ್ಯೆಯೆನ್ನುತ್ತಾರೆ.

ಆದ್ದರಿಂದ ಪ್ರಾತಿಭಾಸಿಕ ವಸ್ತುಗಳೂ ವ್ಯಾವಹಾರಿಕ ವಸ್ತುಗಳೂ ಮಿಥ್ಯೆಯಾಗಿ ಪರಮಾರ್ಥವಾದ ಬ್ರಹ್ಮವೊಂದೇ ಸತ್ಯವೆಂದು ಏರ್ಪಡುತ್ತದೆ. ಜೀವನೂ ಈಶ್ವರನೂ ವ್ಯಾವಹಾರಿಕ ಪ್ರಪಂಚದಲ್ಲಿ ತೋರುವುದರಿಂದ ಅವರು ಬೇರೆಬೇರೆಯಾಗುತ್ತಾರೆ. ಜೀವನೂ ಈಶ್ವರನೂ ಸಹ ಅವಿದ್ಯೆಯ ಕಾರ್ಯವಾದ್ದರಿಂದ ಇವರಿಬ್ಬರಲ್ಲಿಯೂ ಆಧಾರವಾದ ಒಂದು ಪರಮಾರ್ಥವಸ್ತು ಇರುತ್ತದೆ. ಅದು ಬೇರೆಬೇರೆ ಅಲ್ಲ. ಅದೇ ಬ್ರಹ್ಮ ಎಂದು ಈ ರೀತಿ **ಅದ್ವೈತಮತ** ಏರ್ಪಡುತ್ತದೆ.

ಈ ಅರ್ಥ ನಮಗೆ ಅಪರೋಕ್ಷವಾಗಿ ತೋರದಿರುವುದರಿಂದ ನಾವು ಸಂಸಾರಿಗಳಾಗಿ ಅನರ್ಥಪಡುತ್ತಿದ್ದೇವೆ. ಈ ತತ್ತ್ವವನ್ನು ತಿಳಿದಿರುವವನು ಜೀವನ್ಮುಕ್ತನು. ಅವನು ನಿಜವಾಗಿಯೂ ಸನ್ಯಾಸಿ. ಬ್ರಹ್ಮವು ಆನಂದಸ್ವರೂಪವಾದದ್ದು. ಆದ್ದರಿಂದ ಮೋಕ್ಷದಲ್ಲಿ ಜೀವನಿಗೆ ತಾನಾಗಿ ಬ್ರಹ್ಮಾನುಭವವೇರ್ಪಡುತ್ತದೆ.

ವೇದಗಳಲ್ಲಿ ಹೇಳಿರುವಂತೆಯೂ ಮೀಮಾಂಸಕರು ಒಪ್ಪಿರುವಂತೆಯೂ ನಿತ್ಯಕರ್ಮಗಳನ್ನು ಮಾಡಿದರೆ ಚಿತ್ತಶುದ್ಧಿಯುಂಟಾಗುತ್ತದೆ. ಅನಂತರ ಜ್ಞಾನವನ್ನು ಪಡೆಯುವುದಕ್ಕೆ ನಮಗೆ ಅರ್ಹತೆಯುಂಟು. ಆಗ ಜೀವ ಬ್ರಹ್ಮರ ಐಕ್ಯೋಪದೇಶವಾದರೆ, ಆ ಜ್ಞಾನದಿಂದ ಅಜ್ಞಾನವೆಲ್ಲ ತಾನಾಗಿ ನಿವೃತ್ತವಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನವೇ ಮೋಕ್ಷಸಾಧನವೆಂಬ ಉಪನಿಷನ್ಮತ ಸ್ಥಾಪಿತವಾಗುತ್ತದೆ—ಎಂದು ಸ್ಥೂಲವಾಗಿ ಅದ್ವೈತಪ್ರಕ್ರಿಯೆಯನ್ನು ವಿವರಿಸಬಹುದು.

(ಮುಂದುವರಿಯುವುದು)

---

## ಚಿಕ್ಕೋಡಿಯಲ್ಲಿ ಕೂಡುವ ೩ನೆಯ ಅಖಿಲ ಕರ್ನಾಟಕ ವ್ಯಾಯಾಮ ಪರಿಷತ್ತು

(ಮುಧವೀಡು ಕೃಷ್ಣರಾಯರು)

"ದುರ್ಬುದ್ಧಿಯಿಂದ ದೂರವಾದ ಬಲವೂ ನಾನೇ ಇರುತ್ತೇನೆ"

—ಭಗವದ್ಗೀತಾ

ನಮ್ಮ ಕರ್ನಾಟಕ ನಾಡು ಮೊದಲಿನಿಂದಲೂ ಶರೀರಬಲ ಸಂವರ್ಧನದಲ್ಲಿ, ಮಲ್ಲವಿದ್ಯಾಪ್ರವೀಣತೆಯಲ್ಲಿ ಬಹಳ ಪ್ರಸಿದ್ಧವಾಗಿದೆ. ರಾಮಾಯಣಕಾಲದಲ್ಲಿ ಸಮುದ್ರವನ್ನು ಹಾರಿದ ಕಲಿ ಹನುಮನು ಕನ್ನಡ ಕಿಷ್ಕಿಂಧೆಯವನೆಂಬುದನ್ನು ತಿಳಿದು ನೋಡಿದರೆ ಆಗಿನಿಂದಲೂ ನಮ್ಮ ನಾಡಿನ ಬಲಶಾಲಿಗಳ ಪ್ರತಾಪವೆಂತಹದಿರಬೇಕೆಂಬುದು ಮನದಟ್ಟಾಗುವುದು. ನಮ್ಮ ಹಳೆಯಕಾಲದ ನಾಡವೀರರ ಶೌರ್ಯೋತ್ಸಾಹ ಸಾಮರ್ಥ್ಯವನ್ನು ತಿಳಿದುಕೊಳ್ಳಬೇಕಾದರೆ ನಮ್ಮ ೨ನೆಯ ಪುಲಿಕೇಶಿ ಹರ್ಷವರ್ಧನನ ಮೇಲೆ ಸಾಗಿಹೋದಾಗ ಅವನೊಡನೆ ಇದ್ದ ೨೦ ಸಾವಿರ ಪಂಡಾಳುಗಳನ್ನು ವರ್ಣಿಸಿದ ಹುಯೆನ್ತ್ಸಾಂಗನ ಬರಹವನ್ನು ಓದಿ ತಿಳಿದುಕೊಳ್ಳಬೇಕು. ವಿಜಯನಗರ ಸಾಮ್ರಾಜ್ಯದ ಕಾಲವಂತೂ ಎಲ್ಲ ವಿಷಯಗಳಂತೆಯೇ ಇದರಲ್ಲಿಯೂ ಕನ್ನಡ ಜನಾಂಗ ಸೂರ್ಯನ ನಡುಹಗಲೆಂದು ಹೇಳಬಹುದು. ತರುವಾಯದಲ್ಲಿಯೂ ಮೈಸೂರಿನ ಕಂಠೀರವ ನರಸರಾಜ ಒಡೆಯರವರ ಆಳಿಕೆ ಈ ವಿಷಯದಲ್ಲಿ ನಮ್ಮ ಹಿರಿಮೆಯ ಹೆಗ್ಗುರುತಾಗಿ ಮುಂದೆ ಬರುವುದು. ಚಿತ್ರಕಲ್ ದುರ್ಗದ ಓಬವ್ವನು, ಬೆಳವಡಿಯ ಮಲ್ಲಮ್ಮನು, ಕಿತ್ತೂರಿನ ಚನ್ನಮ್ಮರಾಣಿಯೂ ನಮ್ಮ ಕನ್ನಡ ನಾಡಿನ ಹೆಣ್ಣುಮಕ್ಕಳ ಗಂಡುಗಲಿತನದ–ಮಾದರಿಯಾಗಿದ್ದಾರೆ. ಇಂತಹ ಹೆಮ್ಮೆಯ ಹುಮ್ಮಸ್ಸಿನ ಹಿರಿದಾದ ನಾಡು ನಮ್ಮದು!

ಆದರೆ ಪರಿಸ್ಥಿತಿ ಪಲ್ಲಟಿಸಿತು! ಕಾಲ ಬದಲಾಯಿತು!! ಮೇಲು ಕೀಳಾಯಿತು!!! ಭಾರತೀಯ ತರುಣ ತರುಣಿಯರು ನಿರ್ಬಲ ನಿಸ್ಸತ್ವ ನಿಸ್ತೇಜ ನಿರ್ವೀರ್ಯ ನಿಷ್ಪ್ರಭ ನಿರ್ಮಾಲ್ಯರಾದರು. ನಮ್ಮ ನಾಡಿನವರ ಗತಿಯೂ ಅದೇ ಆಗಿ ಅವರು ಬರಗಾಲದ ಭವಣೆಗೆ ಸಿಕ್ಕ ಬಡಪಾಯಿ ನರಪೇತಗಳಂತಾದರು. ಆಧಿವ್ಯಾಧಿಗಳಿಗೆ ಆಗರವಾಗಿ ಅಪಮೃತ್ಯುವಿನ ಬಾಯಿಗೆ ಅಖಂಡ ತುತ್ತಾಗುತ್ತ ನಡೆದರು. ರಕ್ತಕ್ಷಯ ರಾಜಕ್ಷಯಗಳಿಗೆ ಬಲಿಬೀಳುವ ಯುವಯುವತಿಯರ ಅಂಕಿ ಸಂಖ್ಯೆಗಳು ಎದೆಯನ್ನು ಝಲ್ಲೆನಿಸುತ್ತವೆ. ಗರ್ಭಸ್ರಾವ, ಶಿಶುಗಳ ಮರಣ, ಬಾಲಕರ ಸಾವು ಇವುಗಳ ಮಿತಿಮೀರಿದ ಪ್ರಮಾಣ ನಮ್ಮ ಜನಾಂಗದ ಶಾರೀರಿಕ ಅಧಃಪಾತದ ದಾರುಣ ದುರವಸ್ಥೆಯನ್ನು ಕಣ್ಣಿಗೆ ಕಟ್ಟುತ್ತದೆ. ಈ ಅನಿಷ್ಟ ಪರಿಣಾಮಕ್ಕೆ ನಾವು ನಮ್ಮ ಶರೀರ ಬಲ ಸಂರಕ್ಷಣ ಸಂವರ್ಧನ ಮಹಾವ್ರತವನ್ನು ಬಿಟ್ಟುಕೊಟ್ಟದ್ದು ಒಂದು ಅತ್ಯಂತ ಮಹತ್ವದ ಕಾರಣವಾಗಿದೆ. ಊರೂರಿಗೆ ಓಣಿಓಣಿಗೆ ಇದ್ದ ನಮ್ಮ ಅಸಂಖ್ಯ ಗರಡೀಮನೆಗಳು ಇಂದು ನೆಲಸಮವಾಗಿರುವುದೇ ಇದಕ್ಕೆ ಪ್ರಬಲ ಆಧಾರವಾಗಿದೆ.

ಈಗ ಮತ್ತೆ ನಮ್ಮ ಜನಾಂಗ ಎಚ್ಚತ್ತಿದೆ. ನಮ್ಮ ನಾಡ ತರುಣತರುಣಿಯರ ದೇಹದಲ್ಲಿ ಸತ್ವವೂ ಬಲವೂ ಹೆಚ್ಚಾಗಿ ಅವರು ಆರೋಗ್ಯವಂತರಾಗಿ ಆಯುಷ್ಮಂತರಾಗಿ ಸುಖಸಂಪನ್ನಜೀವಿಗಳಾಗಿ ಹುರುಪಿನಿಂದ ಹುಮ್ಮಸ್ಸಿನಿಂದ ಹೊಸನಾಡನ್ನು ಕಟ್ಟಲು ಸಮರ್ಥರಾಗುವಂತೆ ಅವರನ್ನು ತಿದ್ದುವ ಕೆಲಸಕ್ಕೆ ಆರಂಭವಾಗಿದೆ. ಕನ್ನಡ ನಾಡಿನಲ್ಲೆಲ್ಲ ಸಾಂಘಿಕ ವ್ಯಾಯಾಮ ಶಾಲೆಗಳು ಹುಟ್ಟಿ ಎಲ್ಲ ಕಡೆಯ ಬಾಲಬಾಲಕಿಯರಲ್ಲಿ ಯುವಯುವತಿಯರಲ್ಲಿ ಬಲಸಂವರ್ಧನದ ಅಭಿರುಚಿಯುಂಟಾಗಿ ಇಂದಿಗೆ ಸಾವಿರ ಗಟ್ಟಲೆ ಹುಡುಗ ಹುಡುಗಿಯರು ನಮ್ಮ ಪ್ರಾಚೀನಕಾಲದ ಮಲ್ಲವಿದ್ಯೆಯನ್ನು ಈ ಕಾಲದ ಬೇರೆ ದೇಶಗಳೊಳಗಿನ ಹೊಸ ಪರಿಗಳ ಅನುಸಂಧಾನದಿಂದ ತಿದ್ದಿ ಬೆಳೆಯಿಸಿಕೊಂಡು ಹನುಮ ಭೀಮರಂತೆ ಬಲ್ಲಿದರಾಗಲು ಮಾಡುವ ಪ್ರಯತ್ನಗಳು ಕೈಕೊಳ್ಳಲಾಗಿವೆ. ಇದರ ಪ್ರತ್ಯಕ್ಷ ದೃಷ್ಟಾಂತವನ್ನು ನಾಳೆ ಜೂನ ತಿಂಗಳ ೪, ೫, ೬ನೆಯ ತಾರೀಖುಗಳಲ್ಲಿ ಚಿಕ್ಕೋಡಿಯಲ್ಲಿ ಜರುಗಲಿರುವ ಅಖಿಲ ಕರ್ನಾಟಕ ವ್ಯಾಯಾಮ ಪರಿಷತ್ತಿನ ೩ನೆಯ ಅಧಿವೇಶನದಲ್ಲಿ ಕನ್ನಡ ನಾಡಿನ ಮಹಾಜನರು ಕಣ್ಣಾರೆ ಕಾಣುವ, ಮನವಾರೆ ತಣಿಯುವ ಸುಯೋಗವೀಗ ಬಂದಿದೆ.

ನಮ್ಮ ವಿಜಯನಗರದ ಪುಣ್ಯಪುರುಷರ ಆದರ್ಶ ಪರಂಪರೆಯನ್ನೇ ಮುಂದಿಟ್ಟುಕೊಂಡು ೧೭ಯ ಶತಮಾನದಲ್ಲಿ ಭವಾನೀಸ್ವರೂಪಿಣಿಯಾದ ಶ್ರೀ ಭುವನೇಶ್ವರಿಯ ಅನುಗ್ರಹವನ್ನು ಸಂಪಾದಿಸಿ ಹಿಂದೂ ಪದ ಸಾಮ್ರಾಜ್ಯವನ್ನು ಪುನಃಪ್ರಸ್ಥಾಪನೆಗೊಳಿಸಿದ ಪುಣ್ಯಶ್ಲೋಕ ಮಹಾರಾಯನಾದ ಶ್ರೀ ಶಿವಾಜಿಯ ಪರಮಪಾವನ ವಂಶದಲ್ಲಿ ಜನಿಸಿರುವ ಭಾಗ್ಯಶಾಲಿಗಳಾದ ಕೊಲ್ಹಾಪುರದ ಛತ್ರಪತಿ ಶ್ರೀ ರಾಜಾರಾಮ ಮಹಾರಾಜರವರು ಈ ನಮ್ಮ ವ್ಯಾಯಾಮ ಪರಿಷತ್ತಿನ ಅಧ್ಯಕ್ಷಸ್ಥಾನವನ್ನು ಅಲಂಕರಿಸಲು

(೩೦೪ನೆಯ ಪುಟಕ್ಕೆ)

### ಕನ್ನಡ ಕವಿ ಸೂಕ್ತಿ

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ

—ನೇಮಿಚಂದ್ರ : ನೇಮಿನಾಥ ಪುರಾಣ



ಶುಕ್ರವಾರ, ಮೇ ೩೧, ೧೯೪೦

## ಕನ್ನಡಿಗರ ಕರ್ತವ್ಯ

ಪರಿಷತ್ತಿನ ಬೆಳ್ಳಿಯ ಹಬ್ಬ ಓಡಿಬರುತ್ತಿದೆ. ಮುಂದಿನ ತಿಂಗಳು ಈ ಹೊತ್ತಿಗೆ ಆ ಹಬ್ಬದ ಸಂತೋಷ ನಾಡಿಗೆ ಊಡಿಯಾಗಿರುತ್ತದೆ. ಈವರಗಾಗಲೆ ನಾಡಿನ ಬೇರೆಬೇರೆ ಕಡೆಗಳಲ್ಲಿ ಉಪಾಧ್ಯಕ್ಷರು ಸಂಚಾರಮಾಡಿ, ನಾಡು ನುಡಿಗಳ ಅಭಿಮಾನಿಗಳಿಗೆಲ್ಲ ಉತ್ಸವಕ್ಕೆ ಬೆಂಗಳೂರಿಗೆ ಆ ಹೊತ್ತಿಗೆ ದಯಮಾಡಿಸಬೇಕೆಂದೂ, ಮುಂದಿನ ಅನೇಕ ವರ್ಷಗಳಿಗೂ ನಿಲ್ಲುವಂತಹ ಒಂದು ಹೊಸ ಹುರುಪನ್ನು ಕೊಟ್ಟು, ಕೊಂಡುಹೋಗಬೇಕೆಂದೂ ಹೇಳಿಬಂದಿದ್ದಾರೆ. ಬೇರೆ ಬೇರೆ ಪ್ರಾಂತ ಮಂಡಲಗಳವರೂ ಇತರ ಎಲ್ಲ ಗೆಳೆಯರೂ ಒಂದೊಂದು ಸಹಾಯವನ್ನು ಮಾಡುತ್ತ ಪರಿಷತ್ತಿನ ಪರವಾಗಿ ಎಲ್ಲರಿಗೂ ಔತಣ ನೀಡುತ್ತ ಇದ್ದಾರೆ. ಈ ಹಬ್ಬದ ಹರ್ಷ ಕೋಡಿಹರಿಯುವಂತೆ ಮಾಡುವ ಸೌಭಾಗ್ಯ ಎಲ್ಲ ಕನ್ನಡಿಗರ ಪಾಲಿಗೂ ಬರುವುದಕ್ಕಾಗಿ ಯಾವ ಯಾವ ಕೆಲಸಗಳನ್ನು ಕೈಕೊಳ್ಳಬೇಕೊ ಅವನ್ನು ಎಲ್ಲರೂ ದಯಮಾಡಿ ಕೈಕೊಳ್ಳಬೇಕೆಂದು ಬೇಡುತ್ತೇವೆ.

ಕನ್ನಡದ ಸತ್ವ ಬಲಿಯುತ್ತಿದೆ. ಅದರ ಶಕ್ತಿ ಇನ್ನೂ ಬಹುಮುಖವಾಗಿ ಹರಡಿ ಕನ್ನಡ ಪ್ರಾಂತಕ್ಕೆ ಒಂದು ವಿಶೇಷ ಕೀರ್ತಿಯನ್ನು ಗಳಿಸಿಕೊಡಬೇಕಾಗಿದೆ. ಆಸರು ಬೇಸರು ಲೆಕ್ಕಿಸದೆ ಇಪ್ಪತ್ತೈದು ವರ್ಷ ಕನ್ನಡ ನಾಡಿನ ಮೇಲ್ಮೆಗಾಗಿ ದುಡಿದ ಪರಿಷತ್ತು ಹಿರಿಯ ಕೀರ್ತಿಯನ್ನು ಸಾಧಿಸುವ ಮಹಾ ಸಾಧನವಾಗುವಂತೆ ಮಾಡಬೇಕಾದ ಭಾರ ಎಲ್ಲ ಕನ್ನಡಿಗರ ಮೇಲೂ ಹೊತ್ತಿದೆ. ಪರಿಷತ್ತೆಂದರೆ ಒಂದು ಕಟ್ಟಡವಲ್ಲ; ಅಲ್ಲಿನ ಕಾರ್ಯಾಲಯದ ಕೆಲಸಗಾರರಲ್ಲ; ವರ್ಷಕ್ಕೊಮ್ಮೆ ಆರಿಸಿಬರುವ ಅಧಿಕಾರಿಗಳಲ್ಲ; ಪ್ರಾಂತ ಮಂಡಲಗಳಲ್ಲ; ಬರಿಯ ಸಮ್ಮೇಳನಗಳಲ್ಲ; ಪರಿಷತ್ತು ಪ್ರಕಟಿಸುವ ಪತ್ರಿಕೆಗಳಲ್ಲ—ಇವೆಲ್ಲವೂ! ಒಂದು ಗುರಿಯಲ್ಲಿ ನಡೆಯುವ ಪಯಣದ ಸಲಕರಣೆಗಳು; ಒಂದು ಜೀವದ ಉಸಿರು; ಚೇತನವಾದ ಒಂದು ಪದಾರ್ಥದ ಕೆಲವು ಕುರುಹುಗಳು ಮಾತ್ರ. ಪರಿಷತ್ತಿರುವುದು ನಾಡಿನ ಹೃದಯದಲ್ಲಿ; ಅದರ ನುಡಿಯಲ್ಲಿ; ಜನ ಅದಕ್ಕೆ ತೆರುವ ಭಕ್ತಿ ಶ್ರದ್ಧೆ ಆದರ ಸಹಾಯಗಳಲ್ಲಿ. ಈ ಸಂಸ್ಥೆ ಅಲ್ಲಿ ನೆಲಸದೆ ಇರುವವರೆಗೂ ಕನ್ನಡ ಪರಿಷತ್ತಿನ ಕೈದುಡಿತ ಎದೆಬಡಿತ ಸಫಲವಾಗವು. ಎಂದು ಎಲ್ಲ ಕನ್ನಡಿಗರ ಉಸಿರಾಗಿ, ನುಡಿಯಾಗಿ, ನಡೆಯಾಗಿ, ಸಾಹಸವಾಗಿ, ಅವರ ಎಲ್ಲ ಬದುಕಿಗೂ ಪ್ರತಿನಿಧಿಯಾಗಿ ಮುಂದೆ ಹೆಜ್ಜೆ ಹಾಕುವುದೋ ಅಂದು ಅದು ಹುಟ್ಟಿದುದು ಸಾರ್ಥಕವಾಗುವುದು; ಹಾಗೆ ಮಾಡಿಕೊಡುವುದು ಎಲ್ಲರಿಗೂ ಸೇರಿದ ಕೆಲಸವಾಗಬೇಕು. ಕನ್ನಡ ಅಣ್ಣತಮ್ಮಂದಿರೇ, ಅಕ್ಕತಂಗಿಯರೇ, ಆ ಎಲ್ಲರೂ ನೀವು; ನಿಮ್ಮ ನೆರವು, ಒಲವು ಪರಿಷತ್ತಿಗೆ ತನಿಯಾಗಿ ಊಡಬೇಕೆಂದು ಬೇಡುತ್ತೇವೆ.

ಪರಿಷತ್ತು ಕೈಕೊಂಡಿರುವ ಹಲವು ಬಗೆಯ ಕೆಲಸಗಳಲ್ಲಿ ಒಂದು—ವ್ಯವಹಾರ ಜೀವನದಲ್ಲಿ ಕನ್ನಡಕ್ಕೆ ಸಂಬಂಧಿಸಿದ ವ್ಯವಸ್ಥೆಗಳನ್ನು ಉಂಟುಮಾಡಿ, ಜನತೆಯಲ್ಲಿ ಅಭಿಮಾನವನ್ನು ಹೊಮ್ಮಿಸಿ, ಜನವರ್ಗದಲ್ಲಿ ಒಂದು ಪ್ರಭಾವವಾಗುವುದು; ಇನ್ನೊಂದು—ಸಾಹಿತ್ಯ ಮತ್ತು ನುಡಿಗಳಿಗೆ ಸಂಬಂಧಿಸಿದ ಬೆಳೆ ಬೆಳಸುವುದು, ಇರುವುದನ್ನು ಕಾಯುವುದು, ನಾಳಿನದನ್ನು ಕಾಣುವುದು, ಕಾಣುವುದನ್ನು ರೂಪುಗೊಳಿಸುವುದು, ಎಲ್ಲಕ್ಕೂ ಸಹಾಯಕವಾದ ಆವರಣವನ್ನೂ ಉತ್ಸಾಹ ಪ್ರೋತ್ಸಾಹಗಳನ್ನೂ ಉಂಟುಮಾಡುವುದು. ಈ ಎರಡು ಬಗೆಯ ಕೆಲಸ ಒಂದು ಮತ್ತೊಂದಕ್ಕೆ ಸಹಾಯಕವಾಗುವಂತೆಯೂ ವಿರೋಧವಾಗದಂತೆಯೂ ಪರಿಷತ್ತಿನ ಎಲ್ಲ ಶಾಖೆಗಳ ಕೆಲಸ ನಡೆಯಬೇಕಾಗಿದೆ. ಯಾವ ಕೆಲಸಕ್ಕೇ ಆಗಲಿ ಜನ ಬೇಕು, ಧನ ಬೇಕು. ಅದನ್ನು ಕೂಡಿಸುವವರು ಅದನ್ನೂ, ಇದನ್ನು ಕೂಡಿಸುವವರು ಇದನ್ನೂ ಕೂಡಿಸಿಕೊಟ್ಟು ಪುಣ್ಯ ಗಳಿಸಬೇಕು. ಈ ಎಲ್ಲರ ಎಲ್ಲ ಬಗೆಯ ನೆರವೂ ಬೇಕಾಗಿರುವ ಈ ಸಂಸ್ಥೆಗೆ ಕನ್ನಡ ನಾಡಿನ ಎಲ್ಲ ಬಗೆಯ ಬೆಂಬಲವನ್ನೂ ದೊರಕಿಸಿಕೊಡಬೇಕೆಂದು ಬೇಡುತ್ತೇವೆ.

ಈ ಸಂಸ್ಥೆಯ ಬಾಳಿನಲ್ಲಿ ಬೆಳ್ಳಿಯ ಹಬ್ಬ ಒಂದು ಮಜಲು; ಆಮೇಲೆ ಚಿನ್ನದ ಹಬ್ಬ; ಆಮೇಲೆ ರನ್ನದ ಹಬ್ಬ. ಹೀಗೆಯೇ ಮುಂದಕ್ಕೂ ಅನಂತವಾಗಿ ಕನ್ನಡದ ಹಬ್ಬ ಹಬ್ಬಬೇಕು. ಇಲ್ಲಿನ ಉತ್ಸಾಹ, ಕಾರ್ಯ, ಸಾಧನೆ ದಾಂಗುಡಿಯಿಟ್ಟು ಪ್ರಪಂಚದ ಮಹಾ ಸತ್ವಗಳೊಂದಿಗೆ ಬೆರೆದಾಡಿ ಕೈಹಿಡಿದು ಸಮವಾಗಿ ನಡೆಯುವ ಕಾಲ ಬೇಗ ಬರುವಂತಾಗಬೇಕು. ಹೀಗೆ ಕನ್ನಡದ ಕನಸು ದೊಡ್ಡದು; ನನಸು ಅದಕ್ಕೂ ದೊಡ್ಡದಾಗಿರುವಂತಾದರೆಯೇ ಇವೊತ್ತಿನ ಎಲ್ಲ ಪ್ರಯತ್ನಕ್ಕೂ ಬೆಲೆ ಬರುವುದು. ಈವರೆಗೆ ನಡೆದಿರುವುದು ನಾಳಿನದಕ್ಕೆ ಕೇವಲ ತಳಪಾಯ; ಕನ್ನಡದ ಕಟ್ಟಡ ಭವ್ಯವಾಗಿ ಮೇಲೆದ್ದು ಹದಿನಾಲ್ಕು ಲೋಕಗಳ ಸೌಂದರ್ಯವಾದಾಗ—ಹಾಗಾಗಲು ಈ ಜನ ಸಂತತವಾದ ಶ್ರದ್ಧೆ ಹೊತ್ತು ಸಂತೋಷದಿಂದ ದುಡಿವಾಗ—ಮಾತ್ರ ಕನ್ನಡದವರ ಬಾಳು ಚೆನ್ನಾದೀತು. ಬೆಳ್ಳಿಯ ಹಬ್ಬದ ಹರಕೆ ಈ ಹಬ್ಬಯಕೆಯಾಗಿ, ಈ ನಾಡಿನ ರಕ್ಷೆಯಾಗಿ, ತಾರಕವಾಗಿ ಆಗಮಾಡುವುದು ತಮ್ಮ ಮಡಿಲಲ್ಲಿ ಬಿದ್ದ ಕಾರ್ಯ ಎಂದು, ಗೆಳೆಯರೇ, ಮತ್ತೊಮ್ಮೆ ಹೇಳುತ್ತಿದ್ದೇವೆ.

## ಕೊಟ್ಟೂರಿನಲ್ಲಿ ಕನ್ನಡ

೧೯೪೦ನೆಯ ಇಸವಿ ಮದರಾಸು ಎಸ್.ಎಸ್.ಎಲ್.ಸಿ., ಪರೀಕ್ಷೆಗೆ ಕೊಟ್ಟೂರು ವಿದ್ಯಾರ್ಥಿಗಳು ಎಲ್ಲಾ ವಿಷಯಗಳನ್ನೂ ಕನ್ನಡದಲ್ಲೇ ಬರೆದಿರುತ್ತಾರೆ. ಇದಕ್ಕೆ ಬೆಂಬಲವಿತ್ತ ಕೊಟ್ಟೂರು ಹೈಸ್ಕೂಲ್ ಹೆಡ್ಮಾಸ್ಟರವರಿಗೂ, ಆಗ ಡಿ.ಇ.ಒ. ಪದವಿಯಲ್ಲಿದ್ದ ಶ್ರೀಯುತ ಕಣ್ಣಪ್ಪ, ಎಂ.ಎ., ಎಲ್.ಟಿ. ಯವರಿಗೂ, ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟರವರಿಗೂ ಧನ್ಯವಾದಗಳು ಸಲ್ಲಬೇಕಾಗಿವೆ. ಇದರಂತೆಯೇ ಬಳ್ಳಾರಿ ಪ್ರಾಂತದಲ್ಲಿ ಕನ್ನಡಕ್ಕೆ ಇರಬೇಕಾದ ಸ್ಥಾನವನ್ನು ಅದಕ್ಕೆ ಕೊಡಲು ಡಿಸ್ಟ್ರಿಕ್ಟ್‌ಬೋರ್ಡ್ ಮತ್ತು ಮುನಿಸಿಪಲ್ ಅಧಿಕಾರಿಗಳು ಸಹಾಯ ಮಾಡುವರೆಂದು ನಂಬುತ್ತೇವೆ.

---

## ಕಿರುತಾರೆ

ಬಗೆಯನು ಬಾನಿಗೆ
  ಬಿಗಿಯುವ ಕೊಂಡಿ;
ಬಾನಿಂದಾಚೆಯ
  ಬೆಳಕಿನ ಕಂಡಿ.

ಬಾನಿನ ಆಳದ
  ಅರ್ಥದ ಸ್ಫೂರ್ತಿ;
ಜ್ಯೋತಿರ್ಮಯನಾ
  ಮಂಗಳಕೀರ್ತಿ.

ಬುದ್ಧಿಗೆ ನಿಲುಕದ
  ಅರ್ಥದ ವ್ಯಾಪ್ತಿ;
ವಿಶ್ವಾತ್ಮನ ಪರಿ–
  ಚಾಯಕ ದೀಪ್ತಿ.

ಓ, ಕಿರುತಾರೆಯೆ! ಬಾನೊಳಗೆ
ಬೆಳಗುವಂತೆ ಬೆಳಗೆನ್ನೊಳಗೆ.

—ಎಂ. ವಿ. ಸೀ.

---

## ಪರಿಷತ್ತಿನ ಸುದ್ದಿ

ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಬೆಳ್ಳಿಯ ಹಬ್ಬದ ಸಮಾರಂಭಕ್ಕೆ ಕಾಣಿಕೆಯಾಗಿ ಒಂದು ನೂರು ರೂಪಾಯಿಗಳನ್ನು ಪರಿಷತ್ತಿಗೆ ದಾನಮಾಡಿರುತ್ತಾರೆಂಬ ಸಂಗತಿಯನ್ನು ತಿಳಿಸಲು ಸಂತೋಷಿಸುತ್ತೇವೆ.

ಬೆಳ್ಳಿಯ ಹಬ್ಬದ ಉತ್ಸವವನ್ನು ವಿಜೃಂಭಣೆಯಿಂದ ನಡಸಲು ತಕ್ಕ ಏರ್ಪಾಡುಗಳು ನಡೆಯುತ್ತಿವೆ. ಈ ಕೆಳಗೆ ಕಂಡಂತೆ ಸುಮಾರು ೬೦ ಜನರನ್ನೊಳಗೊಂಡ ಸ್ವಾಗತಸಮಿತಿಯೊಂದನ್ನು ರಚಿಸಲಾಗಿದೆ.

(೧) ಕಾರ್ಯಸಮಿತಿಯ ಸದಸ್ಯರು.
(೨) ಪ್ರಾಂತಸಮಿತಿಗಳ ಅಧಿಕಾರಿಗಳು.
(೩) ಹಿಂದಿನ ಸಮ್ಮೇಳನಗಳ ಅಧ್ಯಕ್ಷರುಗಳು.
(೪) ಬೆಂಗಳೂರು ನಗರದ ಮತ್ತು ಇತರ ಪ್ರಾಂತಗಳಲ್ಲಿನ ಕೆಲವು ಮಾನ್ಯ ಮಹನೀಯರು ಮತ್ತು ಮಹಿಳೆಯರು.

ಈ ಸ್ವಾಗತಸಮಿತಿಯ ಸಹಾಯಕ್ಕಾಗಿ ಅನೇಕ ಉಪಸಮಿತಿಗಳು ಏರ್ಪಟ್ಟಿವೆ.

## ವಸಂತ ಸಾಹಿತ್ಯೋತ್ಸವ

### ಚನ್ನರಾಯಪಟ್ಟಣದ ಕರ್ನಾಟಕ ಸಂಘ

ಮೇಲ್ಕಂಡ ಸಂಘದ ಆಶ್ರಯದಲ್ಲಿ, ಪರಿಷತ್ತಿನ ಮೈಸೂರು ಪ್ರಾಂತ ಸಮಿತಿಯ ಸಹಕಾರದಿಂದ ವಸಂತ ಸಾಹಿತ್ಯೋತ್ಸವವನ್ನು ಜೂನ್ ತಿಂಗಳು ೮–೯ನೆಯ ತಾರೀಖುಗಳಲ್ಲಿ ನಡಸಲು ಏರ್ಪಾಟುಮಾಡಲಾಗಿದೆ. ಉತ್ಸವವನ್ನು ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಪ್ರಾರಂಭಗೊಳಿಸುವರು. ಶ್ರೀ॥ ಬೇಲೂರು ಶ್ರೀನಿವಾಸಯ್ಯಂಗಾರ್, ಬಿ.ಎ., ಬಿ.ಎಲ್. ಅವರು ಅಧ್ಯಕ್ಷತೆ ವಹಿಸುವರು. ಶ್ರೀಗಳಾದ ಗಮಕ ವಿದ್ವಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರು, ಸಾಹಿತ್ಯ ವಿದ್ವಾನ್ ಕೆ. ಸೀತಾರಾಮಶಾಸ್ತ್ರಿಗಳು, ದೇವುಡು ನರಸಿಂಹಶಾಸ್ತ್ರಿಗಳು, ಮುಂತಾಗಿ ಹಲವು ವಿದ್ವಾಂಸರು ಕಾರ್ಯಕ್ರಮಗಳಲ್ಲಿ ಭಾಗವಹಿಸುವರು. ಕಾವ್ಯವಾಚನ, ಭಾಷಣ, ನಾಟಕ ಪ್ರದರ್ಶನಗಳು ಉತ್ಸವದ ಅಂಗವಾಗಿ ನಡೆಯುವುವು.

---

## ಸಾದರ ಸ್ವೀಕಾರ

೧. **ನಮ್ಮ ಆರ್ಥಿಕದೃಷ್ಟಿ**: ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯ ೧೪ ನೆಯ ಪುಸ್ತಕ. ಬರೆದವರು: ಶ್ರೀ ಎಸ್. ಗೋಪಾಲ ಸ್ವಾಮಿ ಎಂ.ಎ., ಫುಲ್ಸ್‌ಕ್ಯಾಪ್ ಅಷ್ಟಪತ್ರ, ೬೪ ಪುಟಗಳು. ಬೆಲೆ ಉತ್ತಮಪ್ರತಿ, ೩ ಆಣೆ. ಸಾದಾಪ್ರತಿ, ೨ ಆಣೆ.

೨. **ಸತ್ಯದೇವಚರಿತ್ರೆ**: ಸ್ಕಾಂದ ಪುರಾಣೋಕ್ತವಾದ ಸತ್ಯನಾರಾಯಣ ವ್ರತ ಕಥೆ—ವಾರ್ಧಿಕ ಷಟ್ಪದಿಯಲ್ಲಿ ರಚಿತವಾಗಿರುವ ಕಾವ್ಯ. ಬರೆದವರು: ಗಮಕಿ ಎಂ. ರಾಘವೇಂದ್ರರಾಯರು, ಬೆಂಗಳೂರು. ಮುನ್ನುಡಿಕಾರರು: ಶ್ರೀ॥ ಬೆಳ್ಳಾವೆ ನರಹರಿಶಾಸ್ತ್ರಿಗಳು. ಪ್ರಕಾಶಕರು: ಎಂ. ಎಸ್. ರಂಗಪ್ಪ, ಆರ್ಕಾಟು ಶ್ರೀನಿವಾಸಾಚಾರ್ಯರ ಬೀದಿ, ಬೆಂಗಳೂರು ಸಿಟಿ. ಕ್ರೌನ್ ಅಷ್ಟಪತ್ರ, ೬೬ ಪುಟಗಳು. ಬೆಲೆ ಆರಾಣೆ.

೩. **ಭಾರತಮಾರ್ಗ**: ಮನೋಹರ ಗ್ರಂಥಮಾಲೆಯ ೩೮–೪೦ನೆಯ ಕುಸುಮ. The Passage to India ಎಂಬ ಇ. ಎಂ. ಫಾಸ್ಟರ್ ಅವರ ಕಾದಂಬರಿಯ ಅನುವಾದ. ಕನ್ನಡಿಸಿದವರು: ಶ್ರೀ॥ ಗುರುರಾಜ ಬಿ. ಜೋಶಿ, ಎಂ.ಎ., ಬಿ.ಟಿ. ಮುನ್ನುಡಿಕಾರರು: ಶ್ರೀ॥ ವಿ. ಕೃ. ಗೋಕಾಕ, ಬಿ.ಎ. (ಆಕ್ಸ್‌ಫರ್ಡ್) ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ. ಕ್ರೌನ್ ಅಷ್ಟಪತ್ರ ೭+೪೧೩ ಪುಟಗಳು. ಬೆಲೆ ೨ ರೂ. ೮ ಆಣೆ.

೪. **ಗ್ರಾಮಪಂಚಾನನ**: (ಸಾಮಾಜಿಕ ಸ್ವತಂತ್ರ ಕಾದಂಬರಿ) ಮನೋಹರ ಗ್ರಂಥಮಾಲೆಯ ೪೧ನೆಯ ಕುಸುಮ. ಬರೆದವರು: ಶ್ರೀ॥ ಬಾ. ಕೃ. ಲಕ್ಷ್ಮೇಶ್ವರ. ಮುನ್ನುಡಿಕಾರರು: ಶ್ರೀ॥ ವಿ. ಕೃ. ಗೋಕಾಕ. ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ. ಕ್ರೌನ್ ಅಷ್ಟಪತ್ರ ೩+೧೧೨ ಪುಟಗಳು. ಬೆಲೆ ೧೨ ಆಣೆ.

೫. **ಮಾರ್ಗದರ್ಶಕ**: ೧೩ ಸಣ್ಣ ಕತೆಗಳ ಸಂಗ್ರಹ. ಮನೋಹರ ಗ್ರಂಥಮಾಲೆಯ ೪೨ನೆಯ ಕುಸುಮ. ಬರೆದವರು: ಶ್ರೀ॥ ಎಂ.ವಿ.ಸೀತಾರಾಮಯ್ಯ, ಎಂ.ಎ. ಮುನ್ನುಡಿಕಾರರು: ದ. ರಾ. ಬೇಂದ್ರೆ ಎಂ.ಎ. ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ. ಕ್ರೌನ್ ಅಷ್ಟಪತ್ರ ೮+೧೪೨ ಪುಟಗಳು. ಬೆಲೆ ೧೪ ಆಣೆ.

೬. **ಭಾರತದ ರಾಜಕೀಯ ಸಮಸ್ಯೆ**: ಮಿಂಚಿನಬಳ್ಳಿ ಗ್ರಂಥಮಾಲೆಯ ೩ನೆಯ ವರುಷದ ಮೊದಲನೆಯ ಕುಡಿ. ಮೂಲಲೇಖಕರು: ಡಾ॥ ವಿಲ್ ಡ್ಯೂರಾಂಟ್. ಅನುವಾದಕರು: ಸ್ವಾತಂತ್ರಪ್ರಿಯ. ಪ್ರಕಾಶಕರು: ಶ್ರೀ॥ ಬುರ್ಲಿ ಬಿಂದುಮಾಧವ, ದೇಸಾಯಿ ಗಲ್ಲಿ, ಧಾರವಾಡ. ಕ್ರೌನ್ ಅಷ್ಟಪತ್ರ ೪+೨೦೩+೨೨ ಪುಟಗಳು. ಬೆಲೆ ೧ ರೂ. ಮೈಸೂರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ॥ ಟಿ. ಸಿದ್ದಲಿಂಗಯ್ಯನವರು ಮುನ್ನುಡಿ ಬರೆದಿದ್ದಾರೆ.

೭. **ಕಲಾವ್ಯಾಸಂಗ** (ಸಾಮಾಜಿಕ ನಾಟಕ): ಬರೆದವರು: 'ಸಾಹಸಿ.' ಎಂ. ವಿ. ಶೇಷಾದ್ರಿ ಮತ್ತು ಕಂಪನಿ, ಬಳೇಪೇಟೆ, ಬೆಂಗಳೂರು ಸಿಟಿ. ಕ್ರೌನ್ ಅಷ್ಟಪತ್ರ ೭+೧೦೦. ಬೆಲೆ ೧೨ ಆಣೆ.

ಸುಪ್ರಸಿದ್ಧ ಫ್ರೆಂಚ್ ಸಾಹಿತಿಯಾದ ಹಾನೋರ್‌ಡಿ ಬಾಲ್ಜಾಕರ 'ಓಲ್ಡ್ ಫಾದರ್ ಗೋರಿಯೋ' ಎಂಬ ಕಾದಂಬರಿಯನ್ನು ಅನುಸರಿಸಿ ಬರೆದ ನಾಟಕ.

೮. **ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರು**: ಬರೆದವರು: ಶ್ರೀ॥ ಓ. ಎನ್. ಲಿಂಗಯ್ಯ, ಬಿ.ಎ., (ಆನರ್ಸ್). ಮುನ್ನುಡಿಕಾರರು: ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. ಪ್ರಕಾಶಕರು: ವ್ಯವಸ್ಥಾಪಕ ಶ್ರೀಶೈಲ ಕುಮಾರೀ ಗ್ರಂಥಮಾಲೆ, ಶ್ರೀ ಗೌರಿವಿಹಾರ, ಮಲ್ಲೇಶ್ವರ, ಬೆಂಗಳೂರು. ಬೆಲೆ ೧೪ ಆಣೆ.

೯. **ಪಾರ್ವತಿಬಾಯಿ ಅಠವ್ಳೆ**: ಬರೆದವರು ಶ್ರೀಮತಿ ಎಚ್. ವೈ. ಸರಸ್ವತಮ್ಮನವರು. ಮುನ್ನುಡಿಕಾರರು: ಶ್ರೀಮತಿ ಲೋಕಸುಂದರೀರಾಮನ್. ಪ್ರಕಾಶಕರು: ಸತ್ಯಶೋಧನ ಪ್ರಕಟನ ಮಂದಿರ, ಕೋಟೆ, ಬೆಂಗಳೂರು ಸಿಟಿ. ಕ್ರೌನ್ ಅಷ್ಟಪತ್ರ ೧೧೬ ಪುಟಗಳು ಬೆಲೆ ಹತ್ತಾಣೆ.

ವಿಧವೆಯರ ಏಳ್ಗೆಗಾಗಿ ಹಿಂದೂ ವಿಧವಾಶರಣಾಲಯವನ್ನು, ಸ್ತ್ರೀ ವಿದ್ಯಾ ಪ್ರಚಾರಕ್ಕಾಗಿ ಮಹಿಳಾ ವಿಶ್ವವಿದ್ಯಾನಿಲಯವನ್ನೂ ಸ್ಥಾಪಿಸಿ ಬೆಳಸುತ್ತಿರುವ ಪ್ರೊ॥ ಕರ್ವೆಯವರಿಗೆ ನೆರವಾಗಿರುತ್ತ "ಕರ್ಮಯೋಗಿನಿ' ಎಂಬ ಹೆಸರನ್ನು ಪಡೆದಿರುವ ಶ್ರೀ॥ ಪಾರ್ವತಿಬಾಯಿ ಅಠವ್ಳೆಯವರ ಜೀವನ ಚರಿತ್ರೆಯಿದು.

೧೦. **ಗಾಂಧೀಜಿಯ ಹಾಸ್ಯಪ್ರವೃತ್ತಿ**: ಬರೆದವರು: ಶ್ರೀ॥ ಕಂದಾಡೆ ಕೃಷ್ಣಯ್ಯಂಗಾರ್, ಬಿ.ಎ. ಮಾರಾಟಗಾರರು: ಸ್ಟ್ಯಾಂಡರ್ಡ್ ಬುಕ್ ಡಿಪೊ ಅವೆನ್ಯೂ ರೋಡ್, ಬೆಂಗಳೂರು ಸಿಟಿ. ಕ್ರೌನ್ ಅಷ್ಟಪತ್ರ, ೬೪ ಪುಟಗಳು.

(೨೦೧ನೆಯ ಪುಟದಿಂದ)

ಅನುಗ್ರಹಿಸಿರುವುದು ನಮ್ಮ ನಾಡಿನ ಭಾವೀ ಭಾಗ್ಯೋದಯದ ಮುಂಬೆಳಕೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಚಿಕ್ಕೋಡಿ ಕರ್ನಾಟಕ ಮಹಾರಾಷ್ಟ್ರಗಳ ಗಡಿಯ ಹತ್ತರ ಇರುವುದರಿಂದ ನೆರೆನಾಡಿನ ಮಹಾರಾಷ್ಟ್ರೀಯ ತರುಣರು ಶರೀಲ ಬಲ ಸಂವರ್ಧನದಲ್ಲಿ ಸಾಧಿಸಿರುವ ಪ್ರಗತಿಯನ್ನು ನೋಡಿ ತಮ್ಮ ವ್ಯಾಯಾಮ ಪದ್ಧತಿಯಲ್ಲಿ ತಕ್ಕ ತಿದ್ದುಪಾಟುಗಳನ್ನು ಮಾಡಿಕೊಳ್ಳುವ ಸಂದರ್ಭವೂ ನಮ್ಮ ವ್ಯಾಯಾಮ ಶಾಲೆಗಳ ಸಂಚಾಲಕರಿಗೆ ದೊರೆಯುವ ಸುಯೋಗವೀಗ ಅನಾಯಾಸವಾಗಿ ಬಂದಿದೆ. ಇಂಥ ಸುಸಂಧಿಯನ್ನು ವ್ಯರ್ಥವಾಗಿ ಕಳೆಯದೆ ನಮ್ಮ ಅಖಂಡ ಕನ್ನಡ ನಾಡಿನ ಎಲ್ಲ ವ್ಯಾಯಾಮಪಟುಗಳು, ಅಭ್ಯಾಸಿಗಳು, ಪ್ರೇಮಿಗಳು ಹಾಗೆಯೆ ಕನ್ನಡ ನಾಡಿನ ಎಲ್ಲ ಬಗೆಯ ಉನ್ನತಿಯನ್ನು ಬಯಸುವ ಹಿರಿಕಿರಿಯರೆಲ್ಲರೂ ಈ ಪರಿಷತ್ತಿನ ಸಮಯದಲ್ಲಿ ನಡೆಯುವ ವ್ಯಾಯಾಮ ಪ್ರದರ್ಶನದಲ್ಲಿ ಭಾಗವಹಿಸಲು ಹಾಗೂ ಆ ಪ್ರದರ್ಶನವನ್ನು ಕಂಡು ಆನಂದಪಟ್ಟು ನಮ್ಮ ನಾಡಿನ ಹೊಸ ಪೀಳಿಗೆಗೆ 'ಶತಂಜೀವಶರದೋ ವರ್ಧಮಾನ'ವೆಂಬ ಹರಕೆಗಳನ್ನು ಕೊಡಲು ಚಿಕ್ಕೋಡಿಗೆ ತಂಡವಾಗಿ ಗುಂಪು ಕಟ್ಟಿಕೊಂಡು ಬಂದೇ ತೀರಬೇಕೆಂಧು ನಾನು ಈ ಮೂಲಕ ಎಲ್ಲರನ್ನೂ ಬೇಡಿಕೊಳ್ಳುತ್ತೇನೆ.

---

## ದೂರಹೋದಳು*

(ನೀಳ್ಗತೆ)

ಬ್ರಾಹ್ಮಣ ತರುಣನಾದ ಬಾಲ ಎಂಬುವನು ಲಿಲ್ಲಿ ಎಂಬ ಕ್ರೈಸ್ತ ಹೆಣ್ಣನ್ನು ಒಲಿಯುತ್ತಾನೆ. ಬಾಲ – ಲಿಲ್ಲಿಯರ ಪ್ರೇಮದ ವಿಷಯದಲ್ಲಿ ಲಿಲ್ಲಿಯ ಅಣ್ಣ ಪೀಟರನಿಗೆ ಸಹಾನುಭೂತಿಯಿದೆ. ಆದರೆ ಬಾಲ ಲಿಲ್ಲಿಯನ್ನು ಮದುವೆಯಾಗಲು ಮತಾಚಾರಗಳನ್ನು ಬಿಟ್ಟು ಧೈರ್ಯವಾಗಿ ಮುಂದೆ ಬರಬಲ್ಲನೆ? ಅವನ ತಾಯಿ ಇದಕ್ಕೆ ಒಪ್ಪುವರೆ? ಎಂಬ ವಿಚಾರದಲ್ಲಿ ಪೀಟರ್ ಶಂಕೆಗೊಂಡಿರುತ್ತಾನೆ. ಬಾಲನು ಲಿಲ್ಲಿಗಾಗಿ ಎಲ್ಲವನ್ನೂ ತೊರೆಯಲು ಸಿದ್ಧನಾಗಿದ್ದಾನೆಂದು ಅವನಿಂದ ತಿಳಿದು ಪೀಟರ್ ಸಮಾಧಾನಗೊಳ್ಳುತ್ತಾನೆ. ಬಾಲ–ಲಲ್ಲಿಯರ ಪ್ರಣಯ ವಿಚಾರ ಬಾಲನ ತಾಯಿಗೆ ತಿಳಿದಾಗ, ಆಕೆ ಲಿಲ್ಲಿಯ ಸಹವಾಸ ಬಿಟ್ಟುಬಿಡಬೇಕೆಂದೂ, ಇಲ್ಲದಿದ್ದರೆ ಮನೆತನದ ಹೆಸರು ಹಾಳಾಗಿ ತಾನು ಕೊರಗಿಗೆ ಈಡಾಗಬೇಕಾಗುತ್ತದೆಂದೂ ಮಗನಿಗೆ ಬೋಧಿಸುತ್ತಾಳೆ. ಚರ್ಚೆಮಾಡಿ ತಾಯ ಮನಸ್ಸು ನೋಯಿಸಲು ಇಷ್ಟವಿಲ್ಲದೆ, ಏನು ಮಾಡುವುದಕ್ಕೂ ತೋಚದೆ ಬಾಲ ಸುಮ್ಮನಿರುತ್ತಾನೆ. ಈ ಮಧ್ಯೆ ಬಾಲನ ತಾಯಿ ಲಿಲ್ಲಿಯ ಬಳಿಗೆ ಹೋಗಿ ತನ್ನ ಮಗ ತನ್ನಿಂದ ದೂರ ಹೋಗುತ್ತಿದ್ದಾನೆಂದೂ ಅವನು ದೂರ ಹೋದರೆ ತಾನು ಜೀವಿಸಲಾಗುವುದಿಲ್ಲವೆಂದೂ ತನ್ನ ಮಗನನ್ನು ತನಗೆ ಉಳುಹಿಕೊಡಬೇಕೆಂದೂ ಅವಳನ್ನು ಬೇಡಿಕೊಳ್ಳುತ್ತಾಳೆ. ಲಿಲ್ಲಿ ಮಾತೃಪ್ರೇಮಕ್ಕೆ ಮನಕರಗಿ ಬಾಲನನ್ನು ಮದುವೆಯಾಗುವ ಆಶೆ ಬಿಟ್ಟು, ತನ್ನ ಈ ನಿಶ್ಚಯವನ್ನು ಕಾಗದದ ಮೂಲಕ ಬರೆದು ಬಾಲನಿಗೆ ತಿಳಿಸಿ, ಊರು ಬಿಟ್ಟು ದೂರಹೋಗುತ್ತಾಳೆ.

ಈ ಕತೆಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ್ದು ಈಗಿನ ನಮ್ಮ ಸಮಾಜವನ್ನು ಎದುರಿಸಿರುವ ಹಲವು ಸಮಸ್ಯೆಗಳಲ್ಲಿ ಒಂದಾದ ಅಂತರ್ಜಾತೀಯ ವಿವಾಹ ಸಮಸ್ಯೆ. ಹಿಂದೂ ಸಮಾಜದಲ್ಲಿ ನಾಲ್ಕು ವರ್ಣಗಳಿವೆಯಷ್ಟೆ. ಪ್ರತಿಯೊಂದು ವರ್ಣದಲ್ಲಿಯೂ ಒಳಪಂಗಡಗಳಿವೆ. ಒಂದು ವರ್ಣದವರು ಮತ್ತೊಂದು ವರ್ಣದವರೊಡನೆ ಸಂಬಂಧ ಬೆಳಸುವುದಂತಿರಲಿ, ಒಂದು ವರ್ಣಕ್ಕೇ ಸೇರಿದ ಒಳಪಂಗಡಗಳು ಒಂದರೊಡನೊಂದು ಸಂಬಂಧ ಬೆಳೆಸಲು ಇನ್ನೂ ಹಿಂದೆಗೆಯುತ್ತಿವೆ. ಹೀಗಿರುವಾಗ, ಹಿಂದೂಮತದವನು ಅದರಲ್ಲೂ ಬ್ರಾಹ್ಮಣ, ಕ್ರೈಸ್ತ ಹೆಣ್ಣನ್ನು ಮದುವೆಯಾಗುವ ಕಲ್ಪನೆಕೂಡ ನಮ್ಮವರಿಗೆ ಹಿಡಿಸುವುದಿಲ್ಲ. ಮನುಷ್ಯ ಎಷ್ಟೆಂದರೂ ಸಮಾಜ ಜೀವಿ; ಸಮಾಜದ ಕಟ್ಟಳೆಗಳಿಗೆ ಒಳಗಾಗಿ ಅವನು ಬಾಳಲಿಚ್ಛಿಸುತ್ತಾನೆ, ಅವನ್ನು ಮೀರಲು ಹೆದರುತ್ತಾನೆ. ಅವನ್ನು ಮೀರುವವರನ್ನು ಕಂಡರೆ ಅವನಿಗೆ ಆಗದು. ಒಂದು ಜಾತಿಯವರು ಮತ್ತೊಂಧು ಜಾತಿಯವರೊಡನೆ ವಿವಾಹ ಸಂಬಂಧಮಾಡದೆ ಇರುವ ಪದ್ಧತಿ ಹೇಗೊ ಕಾಲಕಾಲಾಂತರದಿಂದ ನಮ್ಮ ಸಮಾಜದಲ್ಲಿ ರೂಢಮೂಲವಾಗಿಬಿಟ್ಟಿದೆ. ಹೀಗಿರುವುದೇ ಒಳ್ಳೆಯದೆ? ಅಂತರ್ಜಾತೀಯ ವಿವಾಹಕ್ಕೆ ಅವಕಾಶ ಕೊಡುವುದರಿಂದ ಸಮಾಜಕ್ಕೆ ಹಾನಿಯೇನು? ಅದನ್ನು ಸಾರ್ವತ್ರಿಕವಾಗಿ ಶಾಸನಸಮ್ಮತವಾಗಿ ಮಾಡಲು ಇಷ್ಟವಿಲ್ಲದಿದ್ದರೂ, ಸಾಧ್ಯವಿಲ್ಲದಿದ್ದರೂ, ಪರಸ್ಪರ ಪ್ರೇಮಗೊಂಡ ಬೇರೆಬೇರೆ ಜಾತಿಯ ಗಂಡು ಹೆಣ್ಣು ಮದುವೆಯಾಗಲು ಅವಕಾಶ ಕೊಟ್ಟು, ಅವರ ಸಂತಾನಕ್ಕೆ ಸಮಾಜದಲ್ಲಿ ವಿಹಿತಸ್ಥಾನ ದೊರೆಯುವಂತೆ ಮಾಡುವುದು ಸಮಾಜದ ಕರ್ತವ್ಯವಲ್ಲವೆ? ಹಾಗೆ ಅವಕಾಶ ಕೊಟ್ಟಾಗ ಸಂತಾನ ಯಾವ ಮತಕ್ಕೆ ಸೇರಬೇಕು? ಇವೇ ಮೊದಲಾದ ಹಲವು ಪ್ರಶ್ನೆಗಳು ಈ ಸಮಸ್ಯೆಯಲ್ಲಿ ಅಡಗಿವೆ. ಯಾರೂ ಬಿಡಿಸಲಾಗದಂತೆ ತೋರುವ ಮಟ್ಟಿನ ಕಗ್ಗಂಟಾಗಿದೆ ಈ ಸಮಸ್ಯೆ. ಬುದ್ಧಿಪೂರ್ವಕವಾಗಿ ಅಂತರ್ಜಾತೀಯ ವಿವಾಹ ಮಾಡಿಸಲಿಚ್ಛಿಸುವವರು ಸಮಸ್ಯೆ ಪರಿಹಾರವಾಗುವವರೆಗೂ ಕಾಯಬಹುದು; ಆದರೆ ಒಲಿದ ಹೃದಯ ಕಾಯದು; ಏಕೆಂದರೆ ಪ್ರೇಮ ಕುರುಡು. ಹೃದಯ ಒಲಿಯುವಾಗ ಜಾತಿ, ಮತ, ತಂದೆ ತಾಯಿಗಳ ಆಕ್ಷೇಪಣೆ, ಅಂತರ್ಜಾತೀಯ ವಿವಾಹದ ಸಾಧ್ಯ ಅಸಾಧ್ಯತೆ ಇವು ಒಂದನ್ನೂ ಲಕ್ಷಿಸುವುದಿಲ್ಲ. ಆದರೆ ಒಲಿದಮೇಲೆ ಈ ಎಡರುತೊಡರುಗಳೆಲ್ಲ ಭೂತಾಕಾರವನ್ನು ತಾಳಿ ಎದುರುನಿಂತು ಅಡ್ಡ ಕಟ್ಟುತ್ತವೆ. ಆಂದು ಒಲಿದ ಹೃದಯ ಒಲವಿಗಾಗಿ ತಂದೆತಾಯಿಯ ಪ್ರೇಮ, ಸಮಾಜದ ಸಂರಕ್ಷಣೆ, ಮತಧರ್ಮದ ಆಶ್ರಯ ಇವೆಲ್ಲವನ್ನೂ ಕಳೆದುಕೊಂಡು ಪ್ರೇಮಸಾಮ್ರಾಜ್ಯದಲ್ಲಿ ತನ್ನ ಸುಖ ಕಾಣಬೇಕಾಗುತ್ತದೆ; ಇದನ್ನು ಸ್ವಾರ್ಥವೆಂದು ಕೆಲವರು ಕರೆಯಬಹುದು. ಸಮಾಜ, ಮತ, ಬಂಧುಪ್ರೇಮ ಇವಕ್ಕೆ ಬೆಲೆಕೊಡುವವರು ಮುಂದುಗಾಣದೆ ಬಂದ ತಪ್ಪಿಗಾಗಿ ತಮ್ಮ ಪ್ರೇಮವನ್ನು ಬಲಿಕೊಡಬೇಕಾಗುತ್ತದೆ; ತಮ್ಮ ಜೀವಮಾನವನ್ನು ದುಃಖಮಯವನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ.

ಪ್ರಕೃತ, ಕತೆಯಲ್ಲಿ ಕತೆಗಾರರು ದುಃಖದಲ್ಲಿ ಕೊನೆಗಾಣುವಂಥ ಸಂದರ್ಭವನ್ನು ಚಿತ್ರಿಸಿ, ಸಮಸ್ಯೆಯ ಸ್ವರೂಪವನ್ನು ಒಂದು ದೃಷ್ಟಿಯಿಂದ–ಎಂದರೆ ತಾಯಿ ತಂದೆಗಳಿಂದ ಬರಬಹುದಾದ ಅಡಚಣೆಯ ದೃಷ್ಟಿಯಿಂದ–ಯಥಾವತ್ತಾಗಿ ಮನದಟ್ಟಾಗುವಂತೆ ಮುಂದಿಟ್ಟಿದ್ದಾರೆ. ಬಾಲನೇನೋ ತನ್ನ ಜಾತಿ, ಮತ, ತಾಯಿಯ ನಂಟು–ಎಲ್ಲವನ್ನೂ ತೊರೆಯಲು ಸಿದ್ಧನಾಗಿದ್ದಾನೆ. ಅವನ ದೃಷ್ಟಿಯಿಂದ ಅವನುಮಾಡುತ್ತಿರುವುದು ಅವನಿಗೆ ಸರಿಯಾಗಿಯೇ ತೋರವುದು. ತಾನು ಬದುಕಿನಲ್ಲಿ ಸುಖವಾಗಿ ಇರಬೇಕೆಂದು ಬಯಸುವುದು ಅಪರಾಧವೇನೂ ಅಲ್ಲ, ಪಾಪಕಾರ್ಯವೂ ಅಲ್ಲ; ಲಿಲ್ಲಿ ಇಲ್ಲದೆ ಬಾಲನಿಗೆ ಸುಖವಿಲ್ಲ. ಸಮಾಜ ಸಂಪ್ರದಾಯಗಳಿಗೆ ಕಟ್ಟುಬಿದ್ದ ತಾಯಿ ಬಾಲ–ಲಿಲ್ಲಿಯರ ಸಂಬಂಧಕ್ಕೆ ಅಡ್ಡಿಮಾಡಿದರೆ ತಪ್ಪು ಅವಳದಲ್ಲ, ಸಮಾಜದ್ದು. ಲಿಲ್ಲಿ ಬಾಲನನ್ನು ವರಿಸಿಬಿಟ್ಟಿದ್ದರೆ ಅವಳದ್ದೂ ಯಾವ ತಪ್ಪೂ ಇರುತ್ತಿರಲಿಲ್ಲ. ಆದರೆ ಲಿಲ್ಲಿ, ತನ್ನ ಪ್ರೇಮಕ್ಕಿಂತ ಬಾಲನ ತಾಯಿಯ ಮಾತೃವಾತ್ಸಲ್ಯವನ್ನೆ ಹೆಚ್ಚೆಂದು ಭಾವಿಸಿ, ತನ್ನ ಪ್ರೇಮವನ್ನು ಬಲಿಕೊಟ್ಟು ತ್ಯಾಗಮೂರ್ತಿ ಆಗಿ ಮೆರೆದಿದ್ದಾಳೆ. ಇದರ ಪರಿಣಾಮವಾಗಿ ಬಾಲನ ತಾಯಿಗೆ ನಲಿವು ಆಗುವುದಾದರೂ, ಬಾಲ–ಲಿಲ್ಲಿಯರ ಜೀವನ ದುಃಖಮಯವಾಗುತ್ತದೆ.

ಕತೆಗಾರರು ಕತೆಯನ್ನು ಸರಳವಾಗಿ ಸರಸವಾಗಿ ಹೇಳಿಕೊಂಡು ಹೋಗಿದ್ದಾರೆ. ಆದರೆ ಕತೆಯಲ್ಲಿ ಅಲ್ಲಲ್ಲಿ ಶೈಥಿಲ್ಯ ಕಂಡುಬರುತ್ತದೆ. ಪೂರ್ವಭಾಗ ಅತಿ ವಿಸ್ತಾರವಾಗಿದೆ. ಈ ಭಾಗದಲ್ಲಿ ಬರುವ, ಬಾಲ ಲಿಲ್ಲಿ ಪೀಟರ್ ಇವರ ಬೆಟ್ಟದ ಯಾತ್ರೆಯ ಪ್ರಕರಣ ಕಥೆಗೆ ಅಷ್ಟು ನೇರವಾಗಿ ಪೋಷಕವಾಗಿಲ್ಲ; ಅಲ್ಲದೆ, ಅದು ಕಾದಂಬರಿಯ ಅಧ್ಯಾಯವಾಗಲು ತಕ್ಕಷ್ಟು ವಿಸ್ತಾರ ಹೊಂದಿದೆ. ಬಾಲನ ತಾಯಿ ಲಿಲ್ಲಿಯನ್ನು ಕಾಣುವ ಪ್ರಕರಣ ಲಿಲ್ಲಿ ಬಾಲನಿಗೆ ಕೊನೆಯಲ್ಲಿ ಬರೆಯುವ ಕಾಗದದಲ್ಲಿ ಸೂಚಿತವಾಗಿದೆ ಮಾತ್ರ. ಇದನ್ನು ಒಂದು ಮಾರ್ಮಿಕ ಸನ್ನಿವೇಶವಾಗಿ ಚಿತ್ರಿಸಬಹುದಾಗಿತ್ತು. ಆಗ, ಲಿಲ್ಲಿಯ ಮನಸ್ಸಿನಲ್ಲಿ ಆಗುವ ಹೋರಾಟವನ್ನು ಬಣ್ಣಿಸಲು ಅವಕಾಶವಾಗುತಿತ್ತು; ಬಾಲನ ತಾಯಿಯ ತಾಯ್ತನದ ಚಿತ್ರ ಹೆಚ್ಚು ಸ್ಫುಟವಾಗಿ ಕಾಣುತ್ತಿತ್ತು.

---

* ಕತೆಗಾರರು: "ಭಾರತೀ ಸುತ"; ಮಾರಾಟಗಾರರು: ಮನೋಹರ ಗ್ರಂಥ ಭಂಡಾರ, ಧಾರವಾಡ; ಕ್ರೌನ್ ಅಷ್ಟಪತ್ರ ಪು. ೪+೬೮; ಬೆಲೆ ೬ಆಣೆ.

ಲಿಲ್ಲಿಯನ್ನು ವರಿಸಕೂಡದೆಂದು ಬಾಲನ ತಾಯಿ ಅವನಿಗೆ ಹೇಳಿದಾಗ, ಲಿಲ್ಲಿಯ ಕಾಗದ ಬಂದಾಗ, ಬಾಲನ ಮನಸ್ಸಿನಲ್ಲಿ ಎಂಥ ಹೋರಾಟ ನಡೆದಿರಬೇಕು! ಕತೆಗಾರರು ಅದನ್ನು ಚಿತ್ರಿಸುವ ಪ್ರಯತ್ನಮಾಡಿಲ್ಲ. ಒಟ್ಟಿನಲ್ಲಿ, ಕಥಾವಸ್ತು ವಿನ್ಯಾಸದಲ್ಲಿ ಹಲವೆಡೆ ಕಲಾದೃಷ್ಟಿ ಕಂಡುಬರುವುದಿಲ್ಲ.

ಈ ಕತೆ ಓದಿ, ಮುಂದಿರಿಸಿರುವ ಸಮಸ್ಯೆಯನ್ನು ವಾಚಕರು ಸಹಾನುಭೂತಿಯಿಂದ ವಿವೇಚಿಸುವಂತಾದರೆ ಲೇಖಕರ ಶ್ರಮ ಸಾರ್ಥಕವಾಗುವುದು.

"ಭಾರತಿಸುತ"ರು ಇದೇರೀತಿ ಇತರ ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು, ಅವನ್ನು ಹೆಚ್ಚು ಕಲಾಪೂರ್ಣವಾಗಿ ಚಿತ್ರಿಸುವ ಕೃತಿಗಳನ್ನು ರಚಿಸಿ, ನಾಡು ನುಡಿ ಸೇವೆ ಮಾಡಲೆಂದು ಹಾರೈಕೆ.

—ಎಂ. ವಿ. ಸೀ.

---

## ಕುಂಭಕೋಣದಲ್ಲಿ ಅಖಿಲ ಭಾರತ ವೀರಶೈವ ಸಮ್ಮೇಳನ

ಕಳೆದ ೨೬, ೨೭, ೨೮ನೆಯ ತಾರೀಖುಗಳಲ್ಲಿ ಅಖಿಲಭಾರತ ವೀರಶೈವ ಸಮ್ಮೇಳನದ ೧೪ನೆಯ ಅಧಿವೇಶನ ಕುಂಭಕೋಣದಲ್ಲಿ ಅತ್ಯಂತ ಯಶಸ್ವಿಯಾಗಿ ನೆರವೇರಿತು. ಸೊಲ್ಲಾಪುರದ ಪ್ರಮುಖ ನ್ಯಾಯವಾದಿಗಳಾಗಿದ್ದು, ಈಗ ಅಕ್ಕಲಕೋಟೆ ಸಂಸ್ಥಾನದಲ್ಲಿ ನ್ಯಾಯಾಧೀಶರಾಗಿರುವ ಶ್ರೀ॥ ಎಂ. ಎಸ್. ಸರ್‌ದಾರ್ ಅವರು ಅಗ್ರಾಸನ ವಹಿಸಿದ್ದರು. ಕುಂಭಕೋಣದ ಬೊಮ್ಮಯ್ಯ ಪೊಲಿಯಂ ಪೆರಿಯ ಮಠದ ಶ್ರೀ ಶ್ರೀ ಶಿವಜ್ಞಾನ ಬಾಲಯ್ಯಸ್ವಾಮಿಗಳು ನಂದಿ ಬಾವುಟವನ್ನು ಏರಿಸಿ ಹಾರಿಸಿದರು.

ಸ್ವಾಗತಾಧ್ಯಕ್ಷರಾದ ಶ್ರೀ॥ ಡಿ. ವಿ. ನಂಜುಂಡಚೆಟ್ಟಿಯಾರರು ಭಾರತದ ನಾನಾಭಾಗಗಳಿಂದ ಸಮ್ಮೇಳನಕ್ಕೆ ಬಂದಿದ್ದ ಪ್ರತಿನಿಧಿಗಳನ್ನು ಸ್ವಾಗತಿಸಿದಮೇಲೆ ಅಧ್ಯಕ್ಷರು ವಿಚಾರಪರಿಪ್ಲುತವಾದ ಭಾಷಣದನ್ನು ಮಾಡಿದರು. ವೀರಶೈವ ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ವಿವೇಚನೆಮಾಡಿ, ವೀರಶೈವರು ಈಚೀಚೆಗೆ ಜಾಗ್ರತರಾಗಿ ಮುಂದಕ್ಕೆ ಬರುತ್ತಿದ್ದಾರೆಂದೂ ಅವರು ನಾಡಿನ ಮುಂದಿರುವ ಎಲ್ಲಸಮಸ್ಯೆಗಳನ್ನೂ ಚೆನ್ನಾಗಿ ಅಧ್ಯಯನಮಾಡಿ ತಮ್ಮ ಸಮಾಜದ ಮೇಲ್ಮೆಗೂ ನಾಡಿನ ಮೇಲ್ಮೆಗೂ ಶ್ರದ್ಧೆಯಿಂದ ದುಡಿಯಬೇಕೆಂದೂ ನುಡಿದರು.

ಸಮ್ಮೇಳನದ ಮಹಿಳಾಶಾಖೆಯ ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಪದ್ಮಾವತಿದೇವಿ ಅಂಗಡಿಯವರು ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಬೇಕಾದ ಆವಶ್ಯಕತೆಯನ್ನು ಒತ್ತಿಹೇಳಿ ವೀರಶೈವ ಸ್ತ್ರೀಯರು ಒಳ್ಳೆಯ ಗೃಹಿಣಿಯರಾಗಬೇಕೆಂದು ಕೋರಿದರು.

### ಸಮ್ಮೇಳನದ ಕೆಲವು ಮುಖ್ಯ ಗೊತ್ತುವಳಿಗಳು

೧. ಭಾರತದ ರಾಜ್ಯಾಂಗರಚನೆಯನ್ನು ನಿಷ್ಕರ್ಷಿಸುವ ಮಂಡಲಿಯಲ್ಲಿ ವೀರಶೈವರಿಗೆ ಯೋಗ್ಯ ಪ್ರಾತಿನಿಧ್ಯವಿರಬೇಕು.

೨. ವೀರಶೈವ ಸಮಾಜದವರಿಗೆ ಪ್ರತ್ಯೇಕವಾದ ಸಿವಿಲ್ ನ್ಯಾಯಾಸ್ಥಾನಗಳನ್ನು ಏರ್ಪಡಿಸಿ ಅವರಿಗೆ ಸಂಬಂಧಿಸಿದ ನ್ಯಾಯದ ಆಡಳಿತದಲ್ಲಿ ಈಗಿನಂತೆ ಹಿಂದೂ ನ್ಯಾಯಶಾಸ್ತ್ರ ಅನ್ವಯಿಸುವುದನ್ನು ತಪ್ಪಿಸಿ ವೀರಶೈವ ಧರ್ಮಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ನ್ಯಾಯಸೂತ್ರಗಳೇ ಆಡಳಿತಕ್ಕೆ ಅನ್ವಯಿಸುವಂತೆ ವ್ಯವಸ್ಥೆಯಾಗಬೇಕು.

೩. ವೀರಶೈವರೆಲ್ಲರೂ ಕನ್ನಡವನ್ನು ಚೆನ್ನಾಗಿ ಅಧ್ಯಯನಮಾಡಬೇಕು.

೪. ಪರಿಸ್ಥಿತಿ ವಿದ್ಯಮಾನಗಳ ಒತ್ತಾಯದಿಂದ ಮತಾಂತರ ಹೊಂದಿದ ವೀರಶೈವರನ್ನು ಮತ್ತೆ ಸಮಾಜಕ್ಕೆ ಸೇರಿಸಿಕೊಳ್ಳುವ ವ್ಯವಸ್ಥೆಮಾಡಲು ಒಂದು ಸಮಿತಿಯು ನೇಮಕವಾಗತಕ್ಕದ್ದು.

## ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ಬೆಳ್ಳಿ ಹಬ್ಬ

ಮೇಲ್ಕಂಡ ಹಬ್ಬ ಇದೇ ೨೯ನೆಯ ತಾರೀಖು ಬುಧವಾರ ಸಂಜೆ ೫-೩೦ ಗಂಟೆಗೆ ಧಾರವಾಡ ಪೌರಸಭಾ ಮಂದಿರದಲ್ಲಿ, ಇಂಡಿಯಾ ಸರಕಾರದ ಪ್ರಾಚ್ಯ ಶಾಖಾಧಿಕಾರಿಗಳಾದ ರಾವ್‌ಬಹದ್ದೂರ್ ಕೆ. ಎನ್. ದೀಕ್ಷಿತ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಇತಿಹಾಸ ಸಂಶೋಧನ ಸಂಘದ ಚಟುವಟಿಕೆಗಳಿಗೆ ತಮ್ಮ ಮೆಚ್ಚಿಕೆಯನ್ನು ವ್ಯಕ್ತಪಡಿಸಿ, ಸಂಘ ತನ್ನ ಬಹುಮುಖವಾದ ಕಾರ್ಯಕಲಾಪಗಳ ಜೊತೆಗೆ ಕರ್ನಾಟಕದ ಹಲವು ಹಿರಿಯ ಸ್ಥಳಗಳನ್ನು ಕುರಿತ ವಿವರಗಳನ್ನು ಕೊಡುವ ಒಂದು ಸಮಗ್ರ 'ಗೆಜಿಟೀಯರ್' ಅನ್ನು ಸಂಗ್ರಹಿಸಿ ಪ್ರಕಟಸಬೇಕೆಂದು ಸಲಹೆಯಿತ್ತರು. ಈಚೆಗೆ ದಕ್ಷಿಣ ಭಾರತದಲ್ಲಿ ಪ್ರಾಚ್ಯ ಸ್ಮಾರಕ ವಸ್ತುಗಳನ್ನು ಸರಿಯಾಗಿ ನೋಡಿಕೊಳ್ಳದೆ ಹಾಳುಮಾಡುತ್ತಿರುವ ಪ್ರವೃತ್ತಿ ವ್ಯಕ್ತವಾಗುತ್ತಿದೆಯೆಂದು ವ್ಯಸನಪಟ್ಟರು.

ಮಂಡಲದ ಬೆಳ್ಳಿ ಹಬ್ಬದ ಗ್ರಂಥಪ್ರಕಟನಮಾಲೆಯ ಮೊದಲನೆಯ ಎರಡು ಪುಸ್ತಕಗಳನ್ನು— ೧. ಜೈನ ಧರ್ಮ ಮತ್ತು ಕರ್ನಾಟಕ ಸಂಸ್ಕೃತಿ. ೨. ಕರ್ನಾಟಕ ಇತಿಹಾಸದಿಂದ ಆಯ್ದ ಕತೆಗಳು—ಉತ್ಸವದ ದಿನ ಪ್ರಕಟಿಸುವ ಸಮಾರಂಭ ನಡೆಯಿತು. ಮಂಡಲದ ಸಂಸ್ಥಾಪಕರಾದ ಶ್ರೀ॥ ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ. ಅವರ ಭಾವಚಿತ್ರದ ಅನಾವರಣ ಮಹೋತ್ಸವವೂ ನಡೆಯಿತು. ಹಬ್ಬದ ನೆನಪಾಗಿ ಇನ್ನೂ ಎಂಟು ಪುಸ್ತಕಗಳು ಪ್ರಕಟಿಸಲ್ಪಡುವುವು.

ಶ್ರೀಯುತರು ಕರ್ನಾಟಕ ಕಾಲೇಜಿನ ಸಂಶೋಧನ ಕೇಂದ್ರಕ್ಕೆ ಭೇಟಿಯಿತ್ತು ಮೊಹೆಂಜೊದಾರೋ ಅಗೆತದ ವಿಷಯವಾಗಿ ಭಾಷಣಮಾಡಿದರು.

---

## ಕನ್ನಡ ಸುದ್ದಿ

**ಹೊಳೆ ನರಸೀಪುರ: ಕರ್ನಾಟಕ ಸಂಘ**

ಇದೇ ೨೫, ೨೬, ೨೭ನೆಯ ತಾರೀಖುಗಳಲ್ಲಿ ಸಂಘದವರು ವಸಂತ ಸಾಹಿತ್ಯೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಿದರು. ಉತ್ಸವ ಯಶಸ್ವಿಯಾಗಿ ನಡೆಯಲೆಂದು ಹಾರೈಸಿ, ದಿವಾನ್‌ಬಹದ್ದೂರ್ ಕೆ. ರಾಮಸ್ವಾಮಿ ಶ್ರೀ॥ ಡಿ. ಕೃಷ್ಣಯ್ಯಂಗಾರ್ ಮತ್ತು ಶ್ರೀ॥ ಎಸ್. ಎಸ್. ಶ್ರೀನಿವಾಸ ಅಯ್ಯಂಗಾರ್ಯರು ಸಂದೇಶಗಳನ್ನು ಕಳಿಸಿದ್ದರು.

ಮೊದಲನೆಯದಿನದ ಕಾರ್ಯಕಲಾಪಗಳನ್ನು ಪ್ರಾರಂಭಮಾಡಿಕೊಡುತ್ತಾ ಶ್ರೀ॥ ವೈ. ಸುಬ್ಬರಾಯರು ವಸಂತ ಸಾಹಿತೋತ್ಸವದ ಉದ್ದೇಶಗಳನ್ನು ವಿವರಿಸಿ "ವಸಂತಕಾಲದಲ್ಲಿ ಮೊಗ್ಗುಗಳು ಅರಳಿ ಎಲ್ಲಾ ಕಡೆಯಲ್ಲಿಯೂ ಕಣ್ಣಿಗೆ ಆಕರ್ಷಣೀಯವಾಗಿರುವುದರಿಂದ ಚೈತನ್ಯವುಂಟಾಗಿ ವರ್ಷದಲ್ಲಿ ಕೆಲಸಮಾಡಲು ಹುರುಪು ಉತ್ಪತ್ತಿಯಾಗುತ್ತದೆ" ಎಂದು ತಿಳಿಸಿದರು. ಶ್ರೀ॥ ಜಿ. ಪಿ. ರಾಜರತ್ನಂ ಅವರು ತಾವು ರಚಿಸಿರುವ 'ರತ್ನನ ಪದಗಳು' ಮತ್ತು 'ಪುರುಷ ಸರಸ್ವತಿ' ಯಿಂದ ಹಲವು ಪದ್ಯಗಳನ್ನು ಓದಿ ಸಭಿಕರನ್ನು ಆನಂದಪಡಿಸಿದರು. ಶ್ರೀ॥ ಕೆ. ಆರ್. ಸೂರ್ಯನಾರಾಯಣರಾಯರು 'ಕರ್ನಾಟಕ ಸಂಘ ಮತ್ತು ಅದರ ಕರ್ತವ್ಯ' ಎಂಬ ವಿಷಯವಾಗಿ ಭಾಷಣಮಾಡಿದರು. ರಾತ್ರಿ ೯ ಘಂಟೆಗೆ ಶ್ರೀ॥ ಕೃಷ್ಣಗಿರಿ ಕೃಷ್ಣರಾಯರಿಂದ ಉತ್ತರಾದಿ ಮಠದಲ್ಲಿ ಭಾರತ ಪಠನವಾಯಿತು.

ಎರಡನೆಯ ದಿನದ ಕಾರ್ಯಕಲಾಪ: ಶ್ರೀ॥ ಎ. ಸಿ. ದೇವೆಗೌಡ, ಎಂ.ಎ., ಎಂ.ಇ.ಡಿ. ಅವರ ಅಧ್ಯಕ್ಷತೆಯಲ್ಲಿ ಬೆಳಗ್ಗೆ ೯ ಘಂಟೆಗೆ ಪ್ರಾರಂಭವಾಯಿತು. ಸಂಘದ ಅಧ್ಯಕ್ಷರಾದ ಶ್ರೀ॥ ಜಿ. ಸುಬ್ಬರಾವ್, ಬಿ.ಎ., ಬಿ.ಇ. ಅವರು ಈಗ ಯೂರೋಪಿನಲ್ಲಿ ನಡೆಯುತ್ತಿರುವ ಭಯಂಕರವಾದ ಯುದ್ಧದಿಂದ ಪ್ರಪಂಚದ ಸಂಸ್ಕೃತಿ, ನಾಗರಿಕತೆ ಮತ್ತು ಶಾಂತಿ ನಾಶವಾಗುತ್ತಿರುವುದನ್ನು ತಿಳಿಸಿ ಶಾಂತಿಯನ್ನು ನೆಲಗೊಳಿಸಲು ಯತ್ನಿಸುತ್ತಿರುವ ಮಿತ್ರರಾಷ್ಟ್ರದವರಿಗೆ ಜಯವಾಗಲೆಂದು ನಾವುಗಳು ಪ್ರಾರ್ಥಿಸಬೇಕು ಎಂದು ಸೂಚಿಸಿದರು. ಬಳಿಕ ಶ್ರೀ॥ ಜಿ. ಪಿ. ರಾಜರತ್ನಂ ಅವರು 'ಬುದ್ಧನ ಕತೆಗಳು' ಎಂಬ ವಿಷಯದ ಮೇಲೆ ಭಾಷಣ ಮಾಡಿದರು. ಶ್ರೀ॥ ಎನ್. ಶಿವರಾಮಶಾಸ್ತ್ರಿ ಎಂ.ಎ. ಅವರು ಕವನಗಳನ್ನು ಹೃದಯಂಗಮವಾಗಿ ವಾಚನ ಮಾಡಿದರು. ಅಧ್ಯಕ್ಷರು ಸೂಕ್ತವಾದ ಭಾಷಣಮಾಡುತ್ತಾ "ಈ ರೀತಿಯಲ್ಲಿ ಉಪನ್ಯಾಸಗಳನ್ನು ಏರ್ಪಡಿಸುವುದರಿಂದ ಕರ್ನಾಟಕ ಸಂಘಗಳು ವಯಸ್ಕರ ವಿದ್ಯಾಭ್ಯಾಸವನ್ನು ಹರಡುತ್ತಿವೆ" ಎಂದು ತಿಳಿಸಿದರು. ಸಂಜೆ ೬ ಘಂಟೆಗೆ ಶ್ರೀ॥ ವೈ. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಶ್ರೀ॥ ಎನ್. ಶಿವರಾಮಶಾಸ್ತ್ರಿ ಎಂ.ಎ. ಅವರು 'ಸಂಸ್ಕೃತ ನಾಟಕಗಳಲ್ಲಿ ಸೌಂದರ್ಯ' ಎಂಬ ವಿಷಯದ ಮೇಲೆ ಭಾಷಣ ಮಾಡುತಾ "ಶಾಕುಂತಲಾ ನಾಟಕ"ವನ್ನು ಓದಿ ವಿವರಿಸಿ, ಅದರಲ್ಲಿ ಅಡಕವಾದ ಸೌಂದರ್ಯವನ್ನು ವರ್ಣಿಸಿದರು. ಶ್ರೀ॥ ಈಶ್ವರನ್‌ರವರು ಯೋಗಾಸನಗಳನ್ನು ಪ್ರದರ್ಶಿಸಿದರು. ರಾತ್ರಿ ಶ್ರೀ॥ ಕೃಷ್ಣಗಿರಿ ಕೃಷ್ಣರಾಯರು 'ಕರ್ಣನನ್ನು ಕಾಣಲು ಕುಂತಿಯು ಬಂದ' ಭಾಗವನ್ನು ಪಠನ ಮಾಡಿ ಎಲ್ಲರನ್ನೂ ಆನಂದಪಡಿಸಿದರು.

ಮೂರನೆಯ ದಿನ ರಾತ್ರಿ ೯ ಘಂಟೆಗೆ ಉತ್ತರಾದಿ ಮಠದಲ್ಲಿ ಶ್ರೀ॥ ಕೃಷ್ಣರಾಯರ ಭಾರತಪಠನವಾಯಿತು. ಇಲ್ಲಿಗೆ ಉತ್ಸವ ಮುಗಿಯಿತು.

**ಮೇಲುಕೋಟೆ: ಪಂಡಿತಮಂಡಲದ ಸಮ್ಮೇಳನ**

ಮೈಸೂರು ದೇಶದ ಪಂಡಿತರ ಆರನೆಯ ಮಹಾಸಮ್ಮೇಳನ ಮೇಲುಕೋಟೆಯಲ್ಲಿ ಕಳೆದ ೨೫, ೨೬ ಮತ್ತು ೨೭ನೆಯ ತಾರೀಖುಗಳಲ್ಲಿ ಅತ್ಯಂತ ಯಶಸ್ವಿಯಾಗಿ ನಡೆಯಿತು. ಉತ್ಸವವನ್ನು ಮೈಸೂರು ಸಂಸ್ಥಾನದ ಪ್ರಥಮ ಸಚಿವರಾದ ರಾಜಮಂತ್ರಪ್ರವೀಣ ಶ್ರೀ॥ ಎನ್. ಮಾಧವರಾಯರು ಪ್ರಾರಂಭ ಮಾಡಿಕೊಟ್ಟರು. ಶ್ರೀ॥ ಡಿ. ವಿ. ಗುಂಡಪ್ಪನವರು ಅಧ್ಯಕ್ಷಸ್ಥಾನದಿಂದ ವಿಚಾರ ಪರಿಪ್ಲುತವಾದ ಭಾಷಣ ಮಾಡಿ, ಪ್ರಾಚೀನಕಾಲದಿಂದ ಬಂದ ಪಾಂಡಿತ್ಯಪ್ರಭೆಯನ್ನು ವಿವರಿಸಿ ಪಂಡಿತ ವರ್ಗದ ಏಳಿಗೆಗೆ ಅಮೂಲ್ಯವಾದ ಸಲಹೆಗಳನ್ನು ಕೊಟ್ಟರು. ಸಮ್ಮೇಳನ ನಡೆದುದು ಮೇಲುಕೋಟೆಯ ಪ್ರಸಿದ್ಧ ಪುಣ್ಯತೀರ್ಥವಾದ ಕಲ್ಯಾಣೀ ತೀರದಲ್ಲಿ ಇರುವ "ಧಾರಾ ಮಂಟಪ"ದಲ್ಲಿ. ಈ ಮಂಟಪದಲ್ಲಿಯೇ ಆಳಿದ ಮಹಾಸ್ವಾಮಿಯವರಾದ ಶ್ರೀ॥ ಮುಮ್ಮಡಿ ಕೃಷ್ಣರಾಜ ಒಡೆಯರವರು ದರ್ಬಾರು ನಡಸಿದ್ದು. ಸಮ್ಮೇಳನ ಯಶಸ್ವಿಯಾಗಿ ನಡೆಯಲು ಸ್ವಾಗತ ಸಮಿತಿಗೆ ನೆರವಾದ ಮಂಡ್ಯದ ಜಿಲ್ಲಾಧಿಕಾರಿಗಳಾದ ಶ್ರೀ॥ ಬಿ. ಎಸ್. ರಾಘವೇಂದ್ರರಾಯರೂ, ಮೇಲುಕೋಟೆ ಪೌರಸಭೆಯವರೂ ಅಭಿನಂದನಾರ್ಹರು.

**ಅರಕಲಗೂಡು: ಕರ್ನಾಟಕ ಸಂಘದ ಧ್ಯೇಯ**

ಸ್ಥಳೀಯ ಮಿಡ್ಲ್‌ಸ್ಕೂಲು ಸಭಾಮಂಟಪದಲ್ಲಿ ನೊನ್ನೆ, ಮೈಸೂರು ಓರಿಯಂಟಲ್ ಲೈಬ್ರರಿಯ ಪ್ರಾಚೀನ ಗ್ರಂಥಗಳ ಪರಿಶೋಧಕರಾದ ಶ್ರೀ॥ ಸ್ವಾಮಿ ಘನಪಾಟಿಗಳು "ಕರ್ನಾಟಕ ಸಂಘದ ಉನ್ನತ ಧ್ಯೇಯಗಳು" ಎಂಬ ವಿಷಯವನ್ನು ಕುರಿತು ಭಾಷಣಮಾಡಿದರು. ಪಂಡಿತ ಸುಬ್ರಹ್ಮಣ್ಯಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದ್ದರು.

**ಹಾಸನ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀ॥ ಕೆ. ಎಸ್. ಧರಣೇಂದ್ರಯ್ಯನವರು ಕಳೆದ ೨೭ನೆಯ ದಿನ "ಜೈನ ಪುರಾಣಗಳು" ಎಂಬ ವಿಷಯವನ್ನು ಕುರಿತು ಭಾಷಣಮಾಡಿದರು

**ಚಿಕ್ಕೋಡಿ: ಅಖಿಲಕರ್ನಾಟಕ ವ್ಯಾಯಾಮ ಪರಿಷತ್ತು**

ಮೇಲ್ಕಂಡ ಪರಿಷತ್ತಿನ ೩ನೆಯ ಅಧಿವೇಶನ ಚಿಕ್ಕೋಡಿಯಲ್ಲಿ ಜೂನ್ ೪, ೫, ೬ನೆಯ ತಾರೀಖುಗಳಲ್ಲಿ ನಡೆಯುವುವು. ಕೊಲ್ಲಾಪುರದ ಶ್ರೀಮನ್ಮಹಾರಾಜರವರು ಘನ ಅಧ್ಯಕ್ಷತೆ ವಹಿಸುವರು. ಉತ್ಸವಕ್ಕೆ ಶ್ರೀ॥ಗಳಾದ ಬಿ. ಜಿ. ಖೇರರು, ಎ.ಬಿ. ಲಠ್ಠೆ, ನಾರಾಯಣರಾವ್ ಜೋಷಿಯವರು, ಮುದವೀಡು ಕೃಷ್ಣರಾಯರು, ದಿವಾಕರ ರಂಗರಾಯರು, ಡಾ॥ ಹರ್ಡೀಕರರು, ಪ್ರೊ॥ ಕೆ. ವಿ. ಅಯ್ಯರ್ ಅವರು, ಪಂ॥ ತಾರಾನಾಥರು ಮುಂತಾದ ಸುಪ್ರಸಿದ್ಧ ಮುಂದಾಳುಗಳೂ ವ್ಯಾಯಾಮ ತಜ್ಞರೂ ದಯಮಾಡಿಸಿ ತಮ್ಮ ಜ್ಞಾನಾನುಭವಗಳ ಲಾಭವನ್ನು ಮಾಡಿಕೊಡುವವರಾಗಿದ್ದಾರೆಂದೂ ತಿಳಿಯಬಂದಿದೆ.

**ಹೈದರಾಬಾದು: ಕನ್ನಡ ಸಾಹಿತ್ಯ ಮಂಡಲ**

ಮೇಲ್ಕಂಡ ಮಂಡಲದ ಆಶ್ರಯದಲ್ಲಿ ಇದೇ ೨೩-೫-೧೦ನೆಯ ಗುರುವಾರದಿಂದ ೨೯-೫-೪೦ ಬುಧವಾರದ ವರೆಗೆ ಕನ್ನಡ ಹಬ್ಬ (ವಸಂತೋತ್ಸವ) ವಿಜೃಂಭಣೆಯಿಂದ ನಡೆಯಿತು. ಮೊದಲನೆಯ ದಿನ ಶ್ರೀ॥ ಶೇಷಗಿರಿರಾಯರಿಂದ ಕಾವ್ಯಗಾಯನವೂ ಶ್ರೀ॥ ಪದ್ಮನಾಭ, ಬಿ.ಎಸ್‌ಸಿ. ಅವರಿಂದ "ವಿಜ್ಞಾನ ಮತ್ತು ಜೀವನ" ಎಂಬ ವಿಷಯವನ್ನು ಕುರಿತ ಭಾಷಣವೂ ಆಯಿತು. ೨ನೆಯ ದಿನ ಪ್ರೊ॥ ಡಿ. ಕೆ. ಭೀಮಸೇನರಾವ್, ಎಂ.ಎ. ಅವರು ರನ್ನ ಕವಿಯ ವಿಷಯವಾಗಿ ಭಾಷಣಮಾಡಿದರು. ೩ನೆಯ ದಿನ ಶ್ರೀ॥ ಕೃಷ್ಣರಾವ್ ಶರ್ಮ, ಬಿ.ಎ. ಅವರು "ಕನ್ನಡಿಗನ ಇತಿಹಾಸ" ವಿಂಬ ವಿಷಯವಾಗಿಯೂ ೪ನೆಯ ದಿನ ಶ್ರೀ॥ ಮಾನ್ವಿ ನರಸಿಂಗರಾವ್, ಎಂ.ಎ. ಅವರು "ಕನ್ನಡ ನುಡಿ"ಯ ವಿಷಯವಾಗಿಯೂ ೫ನೆಯ ದಿನ ಶ್ರೀ॥ ವಾಳವೇಕರ್, ಬಿ.ಎಸ್‌ಸಿ. ಅವರು "ದುಃಖದ ಮೂಲ" ಎಂಬ ವಿಷಯವಾಗಿಯೂ ೬ನೆಯ ದಿನ ಶ್ರೀ॥ ಅ. ಚ. ನರಸಿಂಹಮೂರ್ತಿ, ಬಿ.ಎ. ಅವರು "ಹಾಸ್ಯರಸ"ದ ವಿಷಯವಾಗಿಯೂ ೭ನೆಯ ದಿನ ಶ್ರೀ॥ ಎಂ. ಎಸ್. ನಾಯಕರು "ವಿಕಾಸ ವಾದ" ಎಂಬ ವಿಷಯವಾಗಿಯೂ ಉಪನ್ಯಾಸಮಾಡಿದರು.

**ಶಿರಾಳಿ: ಚಿತ್ರಾಪುರ ಮಠದಲ್ಲಿ ಬೆಳ್ಳಿಯ ಹಬ್ಬ**

ಇದೇ ತಿಂಗಳು ೨೯ನೆಯ ತಾರೀಖಿಗೆ ಶಿರಾಳಿಯ ಚಿತ್ರಾಪುರ ಮಠದ ಶ್ರೀ ಶ್ರೀ ಆನಂದಾಶ್ರಮ ಸ್ವಾಮಿಗಳವರು ಮಠಾಧಿಕಾರ ವಹಿಸಿ ೨೫ ವರ್ಷಗಳಾದುವು. ಶ್ರೀಯವರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳ ಮೇಲಿನ ಪ್ರೇಮ ಅತ್ಯಮೋಘವಾದುದು. ಸಾಹಿತ್ಯ ಪರಿಷತ್ತಿನ ವಿಷಯದಲ್ಲಿ ಅವರು ಅತ್ಯಂತ ಸಹಾನುಭೂತಿಯನ್ನು ತೋರುತ್ತಿರುತ್ತಾರೆ. ಈ ಶುಭ ಮಹೋತ್ಸವದಲ್ಲಿ ಪರಿಷತ್ತಿನ ಉಪಾಧ್ಯಕ್ಷರು ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಶ್ರೀ ಶ್ರೀ ಸ್ವಾಮಿಗಳವರಿಗೆ ಪರಿಷತ್ತಿನ ಪರವಾಗಿ ಭಕ್ತಿವಿಶ್ವಾಸಪೂರ್ವಕವಾದ ಅಭಿನಂದನೆಗಳನ್ನು ಸಮರ್ಪಿಸಿದರು.

**ಧಾರವಾಡ: ಕನ್ನಡ ಪಠ್ಯಪುಸ್ತಕ ವಿಚಾರಣಾಸಮಿತಿ**

ಮುಂಬಯಿ ಪ್ರಾಂತದ ಶಾಲೆಗಳಲ್ಲಿ ಉಪಯೋಗದಲ್ಲಿರುವ ಕನ್ನಡ ಪಠ್ಯಪುಸ್ತಕಗಳು ಹೇಗಿರಬೇಕು, ಈಗಿರುವಂತೆಯೇ ಸಮರ್ಪಕವಾಗಿವೆಯೆ ಎಂಬ ಬಗ್ಗೆ ವಿಚಾರಣೆ ಮಾಡಿ ಸರ್ಕಾರಕ್ಕೆ ಸಲಹೆಗಳನ್ನು ಕೊಡಲು ನೇಮಕವಾಗಿರುವ ಸಮಿತಿಯು ಧಾರವಾಡದಲ್ಲಿ ಕಳೆದ ೨೪-೨೫ನೆಯ ತಾರೀಖುಗಳಲ್ಲಿ ಶ್ರೀ॥ ಪಾವಟೆ ಅವರ ಅಧ್ಯಕ್ಷತೆಯಲ್ಲಿ ಕೂಡಿತ್ತು. ೧೦-೫-೪೦ರ ವರೆಗೆ ತಮ್ಮ ಕಡೆಗೆ ಕಳಿಸಲ್ಪಟ್ಟ ಪಠ್ಯಪುಸ್ತಕಗಳ ಅರ್ಹತೆಯನ್ನು ವಿಚಾರಿಸುವುದೆಂದೂ ೨ ತಿಂಗಳಾದ ಬಳಿಕ ಮತ್ತೆ ಸೇರಿ ವಿಚಾರಮಾಡಿ ಇನ್ನು ಮೂರು ತಿಂಗಳಲ್ಲಿ ತಮ್ಮ ವರದಿಯನ್ನು ಸರಕಾರಕ್ಕೆ ಕಳಿಸುವುದೆಂದೂ ತಿಳಿಯಬಂದಿದೆ.

---

## ನುಡಿದೇವಿ

---

ನುಡಿದೇವಿ ನುಡಿಯಮ್ಮ ಇನ್ನೊಂದುಬಾರಿ
ನುಡಿಯೊಳಗೆ ಹರಿಯುವುದು ಅಮೃತದ ಝರಿ
ನುಡಿಯ ನಾಡಿನ ಉಸಿರ
ನುಡಿಯಮ್ಮ ಮತ್ತೊಂದುಸಾರಿ

೨

ವೀಣೆಯನು ನುಡಿಸಮ್ಮ ಹೃದಯ ತಂತಿಯ ಮೀಟು
ರಾಗರಸಿಕತೆ ಕೂಡಿ ರಂಜಿಪಂತೆ
ಕನ್ನಡದ ನಾಡು ಒಂದಾಗಲೆಂದು
ಮುನ್ನಿನಾ ವೈಭವವು ತಿರುಗಲೆಂದು

೩

ಜಿನಧರ್ಮಕಾಲದೊಳು ಒಲಿಸಿದರು ನಲವಿಂದ
ನಿನ್ನ ಶೃಂಗರಿಸಿದರು ಚಂಪುಮಾಲೆಗಳಿಂದ
ನನ್ನಿಯಿಂದವರ ತಪಕೊಲಿದೆ ನೀಯಂದು
ಮುನ್ನಿನವರಾ ಶಕ್ತಿಬಾರದೆಮಗಿಂದು

೪

ಸಾಹಿತ್ಯಸೆಲೆಯೊಡೆದು ವಚನದೂಟೆಯು ಹರಿದು
ಸಾಹಿತ್ಯದೇವಿಯನು ಪಟ್ಟಳದ ಸುಮದಿಂದ
ವೀರಶೈವರು ಪೂಜೆಗೈದರಂದು
ಅವರ ಪ್ರೇಮದ ಪೂಜೆಬಾರದಿಂದು

೫

ವಿಪ್ರಕವಿವರರಾಗ ವಿವಿಧ ಪುಷ್ಪಾರ್ಚನೆಯ
ಕೀರ್ತನೆಯ ಸೇವೆಯನು ಸಲ್ಲಿಸಿದರು
ಅವರ ತೇಜಸ್ಸಿಮಗೆ ಬಾರದಮ್ಮ
ಸರಳಸೇವೆಯ ಸೊಬಗ ತೋರಿಸಮ್ಮ

೬

ಕಂಪಿನಿಂದಿಂಪಾದ ಭಾವನೆಯ ಕುಸುಮಗಳ
ಸೊಂಪಿನಿಂ ಸರಳಗೀತೆಗಳ ನಿನಗರ್ಪಿಸಲು
ಪೊಸತೊಂದು ಮಾರ್ಗವನು ತೋರಿಸಮ್ಮ
ಇತರರನುಕರಿಸಲ್ಕೆ ನುಡಿಯಾಡಿಸಮ್ಮ

೭

ನುಡಿದೇವಿಯನುರಾಗ ನನೆಯಾಗಿ ಮೊನೆಯಾಗಿ
ನುಡಿಮೊಗ್ಗು ಅರಳಿಸಿಗಿ ಕಸ್ತೂರಿಯ ಕಂಪೊಡೆದು
ನಾಡು ಒಂದಾಗುವಾ ಫಲವೀಯಲಿ
ನಾಡಿನಾ ಜಯಗುಡಿಯು ಹಾರಾಡಲಿ

**ಕೆ. ಚನ್ನಬಸವನಗೌಡ, ಬಿ.ಎ.**
ಬಾಚಿಗೊಂಡನಹಳ್ಳಿ

---

೫೧-೯೦೦—೧೯೪೦
ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೩೪

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜೂನ್ ೧೪, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ಪರಿಷತ್ತಿನ ಬೆಳ್ಳಿಯ ಹಬ್ಬ

**ಜೂನ್ ೩೦, ೧೯೪೦**

---

ಪರಿಷತ್ತಿನ **ಬೆಳ್ಳಿಯ ಹಬ್ಬ**ದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡಸಲು ರಚಿತವಾದ ಸ್ವಾಗತಸಮಿತಿಯ ರಚನೆಯನ್ನು ಪ್ರಶಂಸಿಸಿ, ಹಬ್ಬಕ್ಕೆ ಕನ್ನಡಿಗರೆಲ್ಲ ಉದಾರವಾಗಿ ಸಹಾಯಮಾಡಿ ಸಹಕರಿಸಬೇಕೆಂದು ಪ್ರಾರ್ಥಿಸಿ, ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ (೧೨-೬-೧೯೪೦ರಲ್ಲಿ) ಬರೆದಿರುವ ಪ್ರಧಾನಲೇಖನದಿಂದ ಒಂದೆರಡು ಮಾತುಗಳನ್ನಿಲ್ಲಿ ಸಂಗ್ರಹಿಸಿಕೊಡಬಯಸುತ್ತೇವೆ:

"ಸಾಂಸ್ಕೃತಿಕ ಏಕೀಕರಣವನ್ನು ಗುರಿಯನ್ನಾಗಿಟ್ಟುಕೊಂಡು ಕನ್ನಡ ನಾಡನ್ನು ಒಂದುಗೂಡಿಸಲು ೨೫ ವರುಷಗಳಿಗೆ ಹಿಂದೆ ಜನ್ಮವೆತ್ತಿದ ಸಾಹಿತ್ಯ ಪರಿಷತ್ತು ಇಂದು ಶೈಶವ ಹಾಗು ಬಾಲ್ಯವನ್ನು ಕಳೆದು ಯೌವನದ ಹೊಸ್ತಿಲಲ್ಲಿ ಕಾಲಿಟ್ಟಿದೆ. ಎಂಟು ಮೂಲೆಯ ಕನ್ನಡಿಗರಲ್ಲಿ ತಾವೆಲ್ಲರೂ ಒಂದು-ತಮ್ಮಲ್ಲಿ ತುಂಡಿಲ್ಲ-ಎಂಬ ಭಾವನೆ ದಿನೇ ದಿನೇ ಪ್ರಬಲವಾಗ ಹತ್ತಿದೆ. ಆ ಭಾವನೆಯ ದ್ಯೋತಕದ ಫಲವೇ ಪ್ರಾಂತಿಕ ಹಬ್ಬವಾಗಿ-ಬೆಳ್ಳಿಯ ಹಬ್ಬವಾಗಿ ರೂಪುದೋರಿದೆ. ಅದರ ಪ್ರಾರಂಭ ಮಹೋತ್ಸವವನ್ನು ರಾಜರ್ಷಿ ಎನಿಸಿದ ಮೈಸೂರು ಸಂಸ್ಥಾನಾಧಿಪರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರರು ಜರುಗಿಸಲಿರುವರು. ರಾಜನೇ ಸರಸ್ವತಿಯ ಪಾದಪೂಜೆಗೆ ಕಂಕಣಬದ್ಧನಾಗಿ ನಿಲ್ಲುವದು ಭಾರತೀಯ ಪರಂಪರೆಗೆ ಹೊಸದಲ್ಲವಾದರೂ ಅನೇಕ ನರೇಂದ್ರರು ತಂತಮ್ಮ ಪ್ರಾಂತಗಳ ಭಾಷೆಯನ್ನು ಕಡೆಗಣಿಸಿಲ್ಲವೆಂದಲ್ಲ. ಮೈಸೂರು ನರಪತಿಗಳು ಮಾತ್ರ ಕನ್ನಡ ವಾಗ್ದೇವಿಯ ಸೇವೆಯನ್ನು ವಿಜಯನಗರದ ಸಾಮ್ರಾಜ್ಯ ನಾಶವಾದ ಬಳಿಕ ಪುನರುಜ್ಜೀವನಗೊಳಿಸಿದವರೆಂದರೆ ಅತ್ಯುಕ್ತಿಯಾಗದೆ ಕನ್ನಡಿಗರ ಹೆಮ್ಮೆಗೆ ತಕ್ಕಂತಿದೆ ಎಂದು ಹೇಳಬಹುದು."

"ಬೆಳ್ಳಿಯ ಹಬ್ಬದ ಉದ್ದೇಶ ಕೇವಲ ಮನೋರಂಜನೆಗಾಗಿಯಲ್ಲ. ಪರಿಷತ್ತು ಮಾಡಿದ ೨೫ ವರ್ಷಗಳ ಸಾಹಸದಿಂದ ನಾವೆಲ್ಲರೂ ಈ ಸಂಭ್ರಮವಾದ ಕಾಲದಲ್ಲಿ ಒಂದೇ ತಾಯಿಯ ಮಕ್ಕಳೆಂದು ಒಟ್ಟಾಗುವೆವು. ಮುಂದಾದರೂ ನಾವು ಒಂದಾಗಿರಬೇಕು. ನಮ್ಮ ನಾಡು ಸಾಂಸ್ಕೃತಿಕ ದೃಷ್ಟಿಯಿಂದ ಆದರ್ಶವೆನಿಸಬೇಕು. ಉಳಿದ ಭಾಷಾನ್ವಯ ಪ್ರಾಂತಗಳಂತೆ ನಮಗೂ ಪ್ರಾಂತ ದೊರೆಯಬೇಕು.........ಪ್ರತ್ಯೇಕ ಪ್ರಾಂತ ನಮಗೆ ದೊರಕಲು ತುಂಬಾ ಅಡಚಣೆಗಳಿವೆ. ಆ ಅಡಚಣೆಗಳನ್ನು ದೂರಮಾಡಿ ಮುಂದಾದರೂ ಒಂದು ಪ್ರಾಂತ ದೊರೆತಾಗ ನಮ್ಮ ಪ್ರಗತಿಯಾಗಬೇಕಾದರೆ ನಮ್ಮ ಸಂಸ್ಕೃತಿ ಉಚ್ಚತರದ್ದಿರಬೇಕು. ಹಾಗೆ ಉಚ್ಚತರದ ಸಂಸ್ಕೃತಿಯನ್ನು ಕಾದಿಟ್ಟುಕೊಳ್ಳಬೇಕಾದರೆ ಸಾಹಿತ್ಯವಲ್ಲದೆ—ಕನ್ನಡ ಸಾಹಿತ್ಯವಲ್ಲದೆ ನಮಗೆ ಅನ್ಯಗತಿಯಿಲ್ಲ. ಭಾಷೆಯಿಂದ ಏನಾಗಬೇಕು? ಎಂದು ನಮ್ಮವರು ಈ ಸಂದರ್ಭದಲ್ಲಿ ಸುಮ್ಮನೆ ಕುಳಿತುಕೊಳ್ಳುವವಲ್ಲ. ಭಾಷೆಯ ಮೂಲಕವೇ ನಾವು ಇಹಪರವನ್ನು ಸಾಧಿಸಬೇಕು—ಮುಂದಿನ ಏಳ್ಗೆಯನ್ನು ಸಾಧಿಸಬೇಕು. ಇದು ಸಿದ್ಧಾಂತವಿದೆ—ಆದಕಾರಣ ಉಜ್ವಲ ಪರಂಪರೆಯ ವೀರಧೀರೋದಾತ್ತ ಕನ್ನಡಿಗರು ಒಮ್ಮನ ಒಮ್ಮತದಿಂದ ಮುಂದಿನ ಕಲ್ಯಾಣವನ್ನು ಬಯಸಿ ಮುಂದಿನ ಏಳ್ಗೆಗೆ ತಕ್ಕುದಾದ ವಿಧಾಯಕ ಕಾರ್ಯಗಳನ್ನು ಸಾಧಿಸುವ ಬಗ್ಗೆ ರಜತ ಮಹೋತ್ಸವದ ಕಾಲದಲ್ಲಿ ನಿರ್ಣಯಿಸಿ ಅದರಂತೆ ನಡೆಯುವರೆಂದು ನಂಬಿ ಬೆಳ್ಳಿಯ ಹಬ್ಬ ನಾಡ-ಇತಿಹಾಸದಲ್ಲಿ ಚಿರಸ್ಮರಣೀಯವಾಗಲಿ ಎಂದು ಹಾರೈಸುವೆವು."

# ದರ್ಶನಗಳು

ವಿ. ಟಿ. ತಿರುನಾರಾಯಣ ಅಯ್ಯಂಗಾರ್, ಎಂ.ಎ.

(ತಾ|| ೭-೬-೧೯೪೦ನೆಯ ಸಂಚಿಕೆಯಿಂದ ಮುಂದುವರಿದುದು)

## ವಿಶಿಷ್ಟಾದ್ವೈತ

ಸಪ್ರಪಂಚವಾದದ ಸರಣಿಯನ್ನು ಅನುಸರಿಸಿ ವಿಶಿಷ್ಟಾದ್ವೈತ ಮತವೇರ್ಪಟ್ಟಿದೆ. ಈ ಮತಕ್ಕೆ ಅನೇಕ ಪ್ರವರ್ತಕರಿದ್ದು ಕೊನೆಗೆ ಇದು ರಾಮಾನುಜಾಚಾರ್ಯರಿಂದ ಪೂರ್ಣವಾಗಿ ಪರಿಷ್ಕೃತವಾಯಿತು. ವೇದಾಂತಸೂತ್ರ, ಮುಂತಾದ ಗ್ರಂಥಗಳಿಗೆ ಶಂಕರಾಚಾರ್ಯರಂತೆ, ರಾಮಾನುಜಾಚಾರ್ಯರೂ ಭಾಷ್ಯ ಬರೆದು ತಮ್ಮ ಮತವನ್ನು ವ್ಯಕ್ತಪಡಿಸಿದ್ದಾರೆ. ಇತರ ದಾರ್ಶನಿಕರು ಒಪ್ಪಿಕೊಂಡಿರುವಂತೆ ಸಂಸ್ಕೃತದ ವೇದಗಳನ್ನು ಪ್ರಮಾಣವನ್ನಾಗಿ ಅಂಗೀಕರಿಸುವ ಹಾಗೆಯೇ ಆಳ್ವಾರ್‌ಗಳಿಂದ ಪ್ರಚಾರಕ್ಕೆ ಬಂದ ದ್ರಾವಿಡವೇದವೆಂಬ ತಮಿಳು ಗ್ರಂಥಗಳನ್ನೂ ಈ ಮತದಲ್ಲಿ ಪ್ರಮಾಣವನ್ನಾಗಿ ಒಪ್ಪಿರುವುದರಿಂದ ವಿಶಿಷ್ಟಾದ್ವೈತದ ಪ್ರಕ್ರಿಯೆಯನ್ನು ಬೋಧಿಸುವ ಗ್ರಂಥಗಳಿಗೆ **ಉಭಯವೇದಾಂತ**ವೆಂಬ ಹೆಸರಾಯಿತು.

ನಮಗೆ ಗೋಚರವಾಗುವ ಪ್ರಕೃತಿ ಮತ್ತು ಜೀವ ಎಂಬ ಎರಡು ಜಾತಿಯ ವಸ್ತುಗಳೂ ಈಶ್ವರನಲ್ಲಿ ಅಡಗಿವೆ. ಎರಡೂ ಅವನ ಶರೀರ. ಅವನು ಇವರಿಗೆ ಆತ್ಮ. ಎಂದಮೇಲೆ, ಶರೀರರೂಪವಾದ ಜೀವ ಪ್ರಕೃತಿಗಳೊಡನೆ ಇರುವ ಈಶ್ವರನು ಬ್ರಹ್ಮ. ಅದು ಒಂದೇ ಆದ್ದರಿಂದ **ವಿಶಿಷ್ಟವಾದ ಅದ್ವೈತ**ವೆಂದು ಈ ಮತಕ್ಕೆ ಹೆಸರಾಯಿತು.

ಸಾಂಖ್ಯಮತದಂತೆ ಇಲ್ಲಿಯೂ ಪ್ರಕೃತಿಯನ್ನೂ ಅದರ ಪರಿಣಾಮ ಸ್ವಭಾವವನ್ನೂ ಅಂಗೀಕರಿಸಲಾಗಿದೆ. ಆದರೆ ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳಿಗೆ ಆಶ್ರಯವಾದ ಧರ್ಮಿಗೆ ಪ್ರಕೃತಿಯೆಂದು ಈ ದರ್ಶನದಲ್ಲಿ ಹೆಸರಿಡಲಾಗಿದೆ. ಜೀವಾತ್ಮನು ಅಣುಸ್ವರೂಪಿ. ಅವನಿಗೆ ಜ್ಞಾನ ಸ್ವರೂಪ. ಹಾಗೆಯೇ ಅವನು ಆನಂದಮಯನಾಗಿಯೂ ಇರುತ್ತಾನೆ. ಅವನಲ್ಲಿ **ಧರ್ಮಭೂತಜ್ಞಾನ**ವೆಂಬ ಮತ್ತೊಂದು ಧರ್ಮವಿದೆ. ಇದು ವಿಭುವಾಗಿದೆ. ಇದು ಪೂರ್ಣವಾಗಿ ವಿಕಾಸವಾಗಿದ್ದರೆ ಜೀವನಿಗೆ ಪೂರ್ಣಜ್ಞಾನ. ಇದು ಸಂಕುಚಿತಾಕಾರದಲ್ಲಿದ್ದರೆ ಜೀವನಿಗೆ ಅಲ್ಪಜ್ಞಾನವುಂಟಾಗುತ್ತದೆ. ಜೀವರ ಸಂಖ್ಯೆ ಅನಂತ. ಅವರಲ್ಲಿ ಕೆಲವರು ನಿತ್ಯರು. ಇವರು ಯಾವಾಗಲೂ ಸಂಸಾರಕ್ಕೆ ಸಿಕ್ಕಿಲ್ಲ. ಕೆಲವರು ಮುಕ್ತರು. ಸಂಸಾರದಲ್ಲಿ ನರಳಿ ಭಗವಂತನ ಕೃಪೆಯಿಂದ ಮುಕ್ತಿ ಹೊಂದಿದವರಿವರು. ಮತ್ತೆ ಕೆಲವರು ಬದ್ಧರು. ಇವರು ಸಂಸಾರದಲ್ಲಿ ನರಳುತ್ತಿರುತ್ತಾರೆ.

ಈಶ್ವರನು ಜ್ಞಾನಸ್ವರೂಪಿಯೂ ಆನಂದಮಯನೂ ಆಗಿ ವಿಭುವಾಗಿದ್ದಾನೆ. ಅವನಿಗೆ ಪ್ರಕೃತಿಯೂ ಚೇತನನೂ ಶರೀರದಂತೆ ಧರ್ಮವಾಗಿವೆ. ಇವುಗಳಿಲ್ಲದೆ ಈಶ್ವರನು ಇರುವುದಿಲ್ಲ. ಇವುಗಳ ಸಂಬಂಧಕ್ಕೆ **ಅಪೃಥಕ್ ಸಿದ್ಧಿ,** ಎಂದರೆ ಸ್ವತಂತ್ರವಾಗಿರುವುದಿಲ್ಲ ಎಂದು ಹೆಸರು. ಜೀವನಿಗೆ **ಚಿತ್** ಎಂದೂ ಪ್ರಕೃತಿಗೆ **ಅಚಿತ್** ಎಂದೂ ಹೆಸರು. ಚಿದಚಿತ್ತುಗಳು ಸೂಕ್ಷ್ಮಾವಸ್ಥೆಯಲ್ಲಿರುವುದೇ **ಲಯ**; ಅವುಗಳು ಸ್ಥೂಲಾವಸ್ಥೆಯನ್ನು ಹೊಂದುವುದೇ **ಸೃಷ್ಟಿ**. ಬ್ರಹ್ಮವೆಂಬ ವಿಶಿಷ್ಟ ವಸ್ತು ಒಂದೇ ಆದ್ದರಿಂದ ಬ್ರಹ್ಮವೇ ಸೂಕ್ಷ್ಮಾವಸ್ಥೆಯಲ್ಲಿ **ಕಾರಣವೂ**, ಸ್ಥೂಲಾವಸ್ಥೆಯಲ್ಲಿ **ಕಾರ್ಯವೂ** ಆಗುತ್ತದೆ. ಬ್ರಹ್ಮವಲ್ಲದ ಮತ್ತೊಂದು ಸ್ವತಂತ್ರವಸ್ತು ಇಲ್ಲದ ಕಾರಣ ಬ್ರಹ್ಮವೇ ಉಪಾದಾನ ಕಾರಣವೂ ನಿಮಿತ್ತಕಾರಣವೂ ಆಗಿ ಪ್ರಪಂಚದ ಸೃಷ್ಟಿಯಾಗುತ್ತದೆ. ಲೋಕದಲ್ಲಿ ಮಣ್ಣು ಮಡಕೆಯಾಗಲು ಅರ್ಹವಾದ್ದರಿಂದ ಮಡಕೆಗೆ ಮಣ್ಣು **ಉಪಾದಾನಕಾರಣ**ವಾಗುತ್ತದೆ. ಕುಂಬಾರನಿಲ್ಲದೆ ಮಡಕೆ ಆಗಲಾರದ್ದರಿಂದ ಕುಂಬಾರನು **ನಿಮಿತ್ತಕಾರಣ**ನಾಗುತ್ತಾನೆ. ಕುಂಬಾರನಾಗಲಿ ಮಣ್ಣಾಗಲಿ ಇಲ್ಲದೆಹೋದರೆ ಮಡಕೆಯಾಗುವುದಿಲ್ಲ. ಆದರೆ ಬ್ರಹ್ಮ ಎಲ್ಲವೂ ತಾನೇಯಾದ್ದರಿಂದ ಜಗತ್ತಿಗೆ ಉಪಾದಾನವೂ ನಿಮಿತ್ತವೂ ಸಹ ಬ್ರಹ್ಮವೊಂದೇ ಎಂದು ಏರ್ಪಡುತ್ತದೆ. ಹೀಗೆ ಬ್ರಹ್ಮ ಪ್ರಪಂಚರೂಪವಾಗಿ ಪರಿಣಮಿಸುತ್ತಾನೆ. ಅವನಿಗೆ ಅನಂತವಾದ ಕಲ್ಯಾಣಗುಣಗಳಿವೆ. ಯಾವ ಕೆಟ್ಟ ಗುಣವೂ ಇಲ್ಲ. ಪರಿಪೂರ್ಣ ಮನೋರಥನಾದರೂ ಅವನು ಪ್ರಪಂಚವನ್ನು ಸೃಷ್ಟಿಸುವುದು ಲೀಲೆಗಾಗಿ.

ಜೀವನು ಪರಮಾತ್ಮನನ್ನು ಸೇರಿ ಬ್ರಹ್ಮಾನಂದವನ್ನು ಹೊಂದುವುದೇ **ಮುಕ್ತಿ**. ಬ್ರಹ್ಮಜ್ಞಾನವುಂಟಾದರೆ ಜೀವನಿಗೆ ಮುಕ್ತಿ. ಈ ಜ್ಞಾನವು ಧ್ಯಾನರೂಪವಾದದ್ದು. ಭಕ್ತಿಯೂ ಒಂದು ವಿಧವಾದ ಜ್ಞಾನ. ಜ್ಞಾನವೂ ಭಕ್ತಿಯೂ ಜೀವನು ಕೈಗೊಳ್ಳಬೇಕಾದ ಕಾರ್ಯ. ಪ್ರಪತ್ತಿಯೂ ಸಹ ಒಂದು ವಿಧವಾದ ಜ್ಞಾನ. ಈಶ್ವರನೇ ನನ್ನನ್ನು ಉದ್ಧಾರಮಾಡಲು ಸಮರ್ಥನು ಎಂಬ ಜ್ಞಾನಕ್ಕೆ ಪ್ರಪತ್ತಿಯೆಂದು ಹೆಸರು. ಅದ್ವೈತದಲ್ಲಿ ಒಪ್ಪಿದಂತೆ ಕರ್ಮ ಚಿತ್ತಶುದ್ಧಿಗಾಗಿ ಎಂದು ಈ ದರ್ಶನದಲ್ಲಿ ಒಪ್ಪುವುದಿಲ್ಲ. ಪ್ರಾಭಾಕರರು ತಿಳಿದಿರುವಂತೆ ಕರ್ಮ ನಮ್ಮ ಕರ್ತವ್ಯ, ಅದು ಭಗವಂತನ ಪೂಜೆ. ಆದ್ದರಿಂದ ಜ್ಞಾನಿಯಾದವನೂ ಸಹ ನಿತ್ಯಕರ್ಮವನ್ನು ಮಾಡಿಯೇ ತೀರಬೇಕು. ಹೀಗೆ ಭಕ್ತಿಯನ್ನಾಗಲಿ, ಪ್ರಪತ್ತಿಯನ್ನಾಗಲಿ ಅವಲಂಬಿಸಿದ ಜೀವನಿಗೆ ಪರಮಾತ್ಮನ ಅನುಗ್ರಹದಿಂದ ಮೋಕ್ಷವುಂಟಾಗುತ್ತದೆ.

ಇಹಲೋಕದಲ್ಲಿ ಭಗವದನುಗ್ರಹಕ್ಕೆ ಪಾತ್ರನಾದವನಿಗೆ ಭಾಗವತ ಅಥವಾ **ಪ್ರಪನ್ನ** ಎಂದು ಹೆಸರು. ಅವನಲ್ಲಿ ಅಹಂಕಾರವೂ ಮಮಕಾರವೂ ಇರುವುದಿಲ್ಲ. ತಾನು ಪರಮಾತ್ಮನ ಶರೀರವೆಂದು ಭಾವಿಸುತ್ತಾನೆ. ಮತ್ತು ಇತರ ಜೀವರಲ್ಲಿಯೂ ಪ್ರಕೃತಿಯಲ್ಲಿಯೂ ಅವನಿಗೆ ಪರಮಾತ್ಮನ ಸಂಬಂಧ ತೋರಿ, ಪ್ರಕೃತಿಯನ್ನು ಲೀಲಾ ವಿಭೂತಿಯೆಂದೂ, ಇತರ ಜೀವರನ್ನು ಭಾಗವತರೆಂದೂ ಬಗೆದು, ಭಗವಂತನ ಪ್ರೇರಣೆಯಿಂದ ಸಮಾಜ ಸೇವೆಯಲ್ಲಿ ಸ್ವಾರ್ಥತೆಯನ್ನು ತೊರೆದು ತನ್ನ ತನುಮನಧನಗಳನ್ನರ್ಪಿಸುತ್ತಾನೆ.

## ದ್ವೈತಮತ

ಶ್ರೀ ಮಧ್ವಾಚಾರ್ಯರು ಸ್ಥಾಪಿಸಿದ ದ್ವೈತಮತವೂ ಹೆಚ್ಚು ಕಡಿಮೆ ವಿಶಿಷ್ಟಾದ್ವೈತದ ಮಾರ್ಗವನ್ನೇ ಅನುಸರಿಸುತ್ತದೆ. ಒಂದೆರಡು ವಿಶೇಷಗಳನ್ನು ಮಾತ್ರ ಇಲ್ಲಿ ಗಮನಿಸಬಹುದು. **ಶರೀರಾತ್ಮಭಾವ** ಸಂಬಂಧಕ್ಕೆ ಬದಲಾಗಿ **ಕಾರ್ಯಕಾರಣಭಾವ**ವನ್ನು ಅಂಗೀಕರಿಸಲಾಗಿದೆ. ಈಶ್ವರನು ಜಗತ್ತಿಗೆ ನಿಮಿತ್ತಕಾರಣ ಮಾತ್ರ. ನ್ಯಾಯ ವೈಶೇಷಿಕ ರೀತಿಯಾಗಿ, ಪ್ರಕೃತಿಯೇ ಉಪಾದಾನ ಕಾರಣ ಎಂದು, ಮಾಧ್ವರು ವಾದಿಸುತ್ತಾರೆ. ಭಗವಂತನಲ್ಲಿ ಭಕ್ತಿಯಿಟ್ಟು ವ್ರತ ನಿಯಮಗಳನ್ನು ಆಚರಿಸಿದರೆ ಭಗವತ್ಪ್ರಸಾದದಿಂದ ಮುಕ್ತಿ ದೊರೆಯುತ್ತದೆ. ಪ್ರಕೃತಿಯಲ್ಲಿ ಮೂರು ಗುಣಗಳಿಗೆ ಅನುಸಾರವಾಗಿ ಚೇತನರಲ್ಲಿಯೂ ಸಾತ್ವಿಕ ಜೀವಿಗಳು, ರಾಜಸರು ಮತ್ತು ತಾಮಸರು ಎಂದು ಮೂರು ಗುಂಪನ್ನು ಏರ್ಪಡಿಸಿದ್ದಾರೆ. ಅದರಲ್ಲಿ ಒಂದು ಗುಂಪಿಗೆ **ನಿತ್ಯನಾರಕಿ**ಗಳೆಂದು ಹೆಸರು. ಅವರು ಯಾವಾಗಲೂ ಸಂಸಾರದಲ್ಲಿಯೇ ಅಲೆದಾಡುತ್ತಿರಬೇಕು. ಅವರಿಗೆ ಎಂದೂ ಮುಕ್ತಿಯಿಲ್ಲ. ಇದು ಒಂದು ಅದ್ಭುತ ವಿಶೇಷ.

## ದರ್ಶನದ ಮಹತ್ವ ಮತ್ತು ಆವಶ್ಯಕತೆ

ಇದುವರೆಗೆ ವಿಚಾರಮಾಡಿದ ದರ್ಶನಗಳಿಗೆ ಸಹಜವಾದ ಕೆಲವು ಲಕ್ಷಣಗಳು ತೋರಿಬರುತ್ತವೆ. ಅವುಗಳನ್ನು ಪರಿಶೀಲನೆಮಾಡಿ ದರ್ಶನದಿಂದ ಮನುಷ್ಯನಿಗೆ ಆಗುವ ಉಪಕಾರವನ್ನು ನಾವು ತಿಳಿದುಕೊಳ್ಳಬೇಕು. ದರ್ಶನವೆಂಬ ಪದ ನೋಟ ಅಥವಾ ಮತ ಎಂಬ ಅರ್ಥದಲ್ಲಿ ಬಂದಿದೆಯೆಂದು ಮೊದಲೇ ವ್ಯಕ್ತವಾಗಿದೆ. ಈ ನೋಟ ಸಾಮಾನ್ಯವಾದ ನೋಟವಲ್ಲ. ಸರಿಯಾದ ಪ್ರಮಾಣಗಳನ್ನೆಲ್ಲ ಉಪಯೋಗಿಸಿಕೊಂಡು, ನಮಗೆ ಗೋಚರವಾಗುವ ವಿಷಯಗಳನ್ನು ಪರಿಶೀಲಿಸಿ, ಪದಾರ್ಥಗಳ ಸ್ವರೂಪ ಹೀಗೆಯೇ ಎಂದು ನಿಶ್ಚಯ ಮಾಡುವುದು ದರ್ಶನದ ಕರ್ತವ್ಯವಾಗಿದೆ. ಪಾಶ್ಚಾತ್ಯರು ಅಭಿಪ್ರಾಯಪಡುವಂತೆ, ಯುಕ್ತಿಯಿಂದ ಮಾಡುವ ಅನುಭವ ವಿಮರ್ಶೆಯೇ ದರ್ಶನ. ಆದರೂ ಅಷ್ಟರಲ್ಲೇ ತೃಪ್ತಿಪಡುವ ಸ್ವಭಾವ ಭಾರತೀಯ ದಾರ್ಶನಿಕರಲ್ಲಿ ಇಲ್ಲ. ಯುಕ್ತಿಯಿಂದ ನಿರ್ಣಯವು ಏರ್ಪಟ್ಟರೂ,

ಅದು ಪರೋಕ್ಷರೂಪವಾಗಿ, ಮನುಷ್ಯನಿಗೆ ಅಷ್ಟಾಗಿ ತೃಪ್ತಿಕರವಾಗಿರುವುದಿಲ್ಲ. ಪರೋಕ್ಷವಾಗಿ ಲಭಿಸಿದ ತತ್ವನಿರ್ಣಯವನ್ನು ತನ್ನ ಅನುಭವದಲ್ಲಿ ಕಲಸಿ ಪ್ರತ್ಯಕ್ಷಾನುಭವವನ್ನಾಗಿ ಮಾಡಿದಂದು ದಾರ್ಶನಿಕನಲ್ಲಿ ಶಾಶ್ವತವಾದ ಶಾಂತಿ ನೆಲಸುತ್ತದೆ. ಹೀಗೆ ಪ್ರತ್ಯಕ್ಷವಾಗಿ ಪರಿಣಮಿಸಿ ಶಾಂತಿಗೆ ಸೋಪಾನವಾದ ಅನುಭವಕ್ಕೆ **ಸಾಕ್ಷಾತ್ಕಾರ** ಎಂದು ಹೆಸರಾಗಿದೆ. ಈ ವಿಧವಾದ ಸಾಕ್ಷಾತ್ಕಾರವೂ ಸಹ ಒಂದು ಪ್ರಯೋಜನಕ್ಕಾಗಿಯೇ. ಆತ್ಮನು ತನ್ನ ನಿಜಸ್ವರೂಪವನ್ನು ಸಾಕ್ಷಾತ್ಕಾರ ಮಾಡಿದನಾದರೆ, ಸರ್ವ ದುಃಖಗಳಿಂದ ವಿಮುಕ್ತನಾಗುತ್ತಾನೆ, ಅಥವಾ ತನ್ನ ಸಹಜವಾದ ಆನಂದಾನುಭವದಲ್ಲಿ ಮುಳುಗಿ ಸುಖಿಸುತ್ತಾನೆ. ಈ ವಿಧವಾದ ಅಪರಿಮಿತ ಆನಂದ ಸಿದ್ಧಿಗಾಗಿ ದರ್ಶನವು ಆವಶ್ಯಕವಾದ್ದರಿಂದ ದರ್ಶನದ ವ್ಯಾಸಂಗ ಬಹಳ ಉದಾತ್ತವೂ ಅಮೋಘವೂ ಆದ ವ್ಯಾಪಾರವೆಂಬುದು ವ್ಯಕ್ತವಾಗುತ್ತದೆ. ದರ್ಶನಾಸಕ್ತಿ ಕೇವಲ ಲಘುವಾದ ವಿನೋದ ವ್ಯಾಪಾರವಲ್ಲ.

ದರ್ಶನವನ್ನು ಸ್ಥಾಪಿಸುವುದಕ್ಕೆ ನಾವು ಮುಖ್ಯವಾಗಿ ಯುಕ್ತಿಯನ್ನು ಉಪಯೋಗಿಸುತ್ತೇವೆ. ಯುಕ್ತಿ ಅನುಮಾನದ ರೂಪವನ್ನು ತಾಳಿ ಪ್ರತ್ಯಕ್ಷವಾಗದ ವಿಷಯವನ್ನೂ ಸಹ ನಮಗೆ ಪರೋಕ್ಷರೂಪದಲ್ಲಿ ತೋರಿಸಿಕೊಡುತ್ತದೆ. ಯಾವ ಅಭಿಪ್ರಾಯವೇ ಆಗಲಿ ನಿರ್ವಿವಾದವಾದದ್ದಾಗಿ ಆಗಬೇಕಾದರೆ ಅದು ಯುಕ್ತಿಯ ಮೇಲೆ ನಿಂತಿರಬೇಕು. ಯುಕ್ತಿಗೆ ಸಂಶಯವನ್ನು ನಾಶಗೊಳಿಸುವ ಶಕ್ತಿಯಿದೆ. ಪ್ರತ್ಯಕ್ಷಕ್ಕೂ ಈ ಸಾಮರ್ಥ್ಯವಿದೆ. ಆದರೆ ಪ್ರತ್ಯಕ್ಷಕ್ಕೆ ಒಳಗಾಗದ ವಿಷಯವಾಗಿ ನಿರ್ಧಾರವೇರ್ಪಡಬೇಕಾದರೆ ಯುಕ್ತಿಯೇ ಗತಿ. ವಿಜ್ಞಾನಿಗಳೂ ಯುಕ್ತಿಯನ್ನು ಉಪಯೋಗಿಸಿ ತಮ್ಮ ತಮ್ಮ ವಿಜ್ಞಾನ ಶಾಸ್ತ್ರಗಳನ್ನು ಬೆಳಸಿದ್ದಾರೆ. ಸಾಧನದ ಉಪಯೋಗದಲ್ಲಿ ದಾರ್ಶನಿಕರಿಗೂ ವಿಜ್ಞಾನಿಗಳಿಗೂ ಯಾವ ಭೇದವೂ ಇಲ್ಲ. ಆದರೆ ಪ್ರಮೇಯ ಭಾಗದಲ್ಲಿ ಹೆಚ್ಚು ಅಂತರವಿದೆ. ದಾರ್ಶನಿಕರಿಗೆ ಸಮಗ್ರ ಅನುಭವವೂ ಶೋಧನೆಗೆ ವಿಷಯವಾಗುತ್ತದೆ. ವಿಜ್ಞಾನಿಗಳು ಅನುಭವದಲ್ಲಿ ತಮಗೆ ಪ್ರಕೃತವಾದ ಅಂಶಗಳನ್ನು ಮಾತ್ರ ಗಮನಿಸುತ್ತಾರೆ. ಕಾವ್ಯವೂ ದರ್ಶನದಂತೆ ಪೂರ್ವಾನುಭವವನ್ನು ವಿಷಯೀಕರಿಸಬಹುದು. ಆದರೆ ಅನುಮಾನ ಕಾವ್ಯದ ಸಾಧನವಾಗುವುದಿಲ್ಲ.

ಭಾರತೀಯರ ದರ್ಶನದಲ್ಲಿ ಪ್ರತ್ಯಕ್ಷವನ್ನೂ ಅನುಮಾನವನ್ನೂ ಅಂಗೀಕರಿಸಿರುವಂತೆ ಶಬ್ದ ಪ್ರಮಾಣವನ್ನೂ ಅಂಗೀಕರಿಸಲಾಗಿದೆ. ಶಬ್ದವು ಅನುಮಾನದ ಒಂದು ಭೇದ ಎಂದು ಮತವಾದಲ್ಲಿ ಯಾವ ತೊಂದರೆಯೂ ಇರುವುದಿಲ್ಲ. ಆದರೆ ವೇದಗಳನ್ನು ಪ್ರಮಾಣವನ್ನಾಗಿ ನಂಬುವವರು ಹೇಗೆ ದಾರ್ಶನಿಕರೆನಿಸಿಕೊಳ್ಳಬಹುದು ಎಂದು ಜಿಜ್ಞಾಸೆ ಯುಂಟಾಗುತ್ತದೆ. ಈ ಜಿಜ್ಞಾಸೆ ವೇದಗಳನ್ನು ಪ್ರಮಾಣವನ್ನಾಗಿ ಒಪ್ಪಿದವರಲ್ಲಿಯೂ ಮೂಡಿತು. ಅದರ ಪರಿಣಾಮವಾಗಿ ಅವರು ವೇದ ಪ್ರಾಮಾಣ್ಯಕ್ಕೆ ಅನೇಕ ನಿಯಮಗಳನ್ನು ಮಾಡಿದರು. ಆ ನಿಯಮಗಳಿಗೆ ವೇದ ವಿರುದ್ಧವಾಗದೆ ಇದ್ದದ್ದರಿಂದ ವೈದಿಕರು ವೇದವನ್ನು ಪ್ರಮಾಣವನ್ನಾಗಿ ಒಪ್ಪಿದರು. ಆ ನಿಯಮಗಳು ಈ ರೀತಿ ಇವೆ:

ಮೊದಲನೆಯದಾಗಿ, ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಗೋಚರವಾಗುವ ವಿಷಯವನ್ನು ವೇದ ಬೋಧಿಸಕೂಡದು. **ಅಗ್ನಿಃ ಹಿಮಸ್ಯ ಭೇಷಜಂ** — ಬೆಂಕಿಯಿಂದ ಚಳಿ ಹೋಗುತ್ತದೆ — ಎಂಬ ವಾಕ್ಯ ವೇದವಾಕ್ಯವೇ. ಆದರೆ ಅದು ಪ್ರಮಾಣವಲ್ಲ. ಬೆಂಕಿಯ ಹತ್ತಿರ ನಾವು ಕುಳಿತರೆ ಚಳಿ ಹೋಗುತ್ತದೆ ಎಂಬುದು ನಮಗೆ ಪ್ರತ್ಯಕ್ಷದಿಂದ ಗೊತ್ತಾಗಿರುತ್ತದೆ. ಅದೇ ಅರ್ಥವನ್ನು ಬೋಧಿಸುವ ವಾಕ್ಯ ಬರೀ ಅನುವಾದವಾಗುತ್ತದೆಯೇ ವಿನಾ ಪ್ರಮಾಣವಾಗುವುದಿಲ್ಲ. ಆದಕ್ಕಾಗಿ ಪ್ರಮಾಣ ವಾಕ್ಯ ಅಲೌಕಿಕಾರ್ಥ ಬೋಧಕವಾಗಿರಬೇಕು ಎಂದು ಹೇಳುವುದುಂಟು.

ಎರಡನೆಯದಾಗಿ, ಯುಕ್ತಿಗೆ ಸಿಲುಕದ ವಿಷಯವನ್ನೇ ವೇದ ಬೋಧಿಸಿದರೂ, ವೇದದ ಅರ್ಥ ಯುಕ್ತಿಗೆ ವಿರುದ್ಧವಾಗಿರಕೂಡದು. ಶ್ರುತ್ಯರ್ಥಕ್ಕೆ ವಿರೋಧವಾಗಿದೆಯೆಂದು ಅನುಮಾನವನ್ನು ತಿರಸ್ಕಾರ ಮಾಡುವುದಿಲ್ಲ. ಅನುಮಾನಕ್ಕೆ ವಿರುದ್ಧವಾಗಿದೆಯೆಂದು ಶ್ರುತಿಯನ್ನು ತಿರಸ್ಕರಿಸುವುದು ಸಹಜವಾಗಿ ಕಂಡುಬರುತ್ತದೆ. ಅಷ್ಟೇ ಅಲ್ಲದೆ ಶ್ರುತಿ ವಾಕ್ಯಗಳು ಪರಸ್ಪರ ಸಂಗತವಾಗಿರಬೇಕು. ಒಂದು ಕಡೆ ಕಂಡ ಅರ್ಥಕ್ಕೂ ಮತ್ತೊಂದು ಕಡೆ ಬರುವ ಅರ್ಥಕ್ಕೂ ವಿರೋಧವಿರಬಾರದು. ಎಂದರೆ ವೇದಾರ್ಥ ಯುಕ್ತ್ಯತೀತವಾದರೂ, ಯುಕ್ತಿವಿರುದ್ಧವಾಗಿರಬಾರದು.

ಮೂರನೆಯದಾಗಿ, ಅನುಮಾನದಿಂದ ಸಂಭಾವಿತವಾದ ಅರ್ಥವನ್ನೇ ವೇದವು ಬೋಧಿಸಬೇಕು. ಮರಣದ ಅನಂತರ ಆತ್ಮಸಂಬವಸ್ತು ಇದೆಯೇ ಇಲ್ಲವೇ ಎಂಬುವ ವಿಚಾರ ಇದಕ್ಕೆ ಒಳ್ಳೆಯ ಉದಾಹರಣೆಯಾಗುತ್ತದೆ. ಯುಕ್ತಿಯಿಂದ ಆತ್ಮನು ಇದ್ದಾನೆ ಎಂದೂ ಸಾಧಿಸಬಹುದು. ಯುಕ್ತಿಯಿಂದಲೇ ಆತ್ಮನು ಇಲ್ಲ ಎಂದೂ ಸಾಧಿಸಬಹುದು. ಹೀಗೆ ಪರಸ್ಪರ ವಿರುದ್ಧವಾದ ಮತಗಳು ಅನುಮಾನದಿಂದ ಏರ್ಪಟ್ಟರೆ, ಶ್ರುತಿ ಯಾವ ಅರ್ಥವನ್ನು ಒಪ್ಪಿ ಬೋಧೆ ಮಾಡುತ್ತದೆಯೋ, ಆ ಅರ್ಥಕ್ಕೆ ಪ್ರಮಾಣತೆಯೇರ್ಪಡುತ್ತದೆ. ಆತ್ಮನು ದೇಹಪಾತದ ಅನಂತರವೂ ಇದ್ದಾನೆ ಎಂದು ಶ್ರುತಿಯೂ ಹೇಳುವುದರಿಂದ, ಆ ಅರ್ಥವನ್ನು ನಾವು ಅಂಗೀಕಾರ ಮಾಡಬಹುದು ಎಂದಾಗುತ್ತದೆ.

ವೇದವನ್ನು ಇನ್ನೂ ಒಂದು ನಿಯಮಕ್ಕೆ ಒಳಪಡಿಸುವ ಪದ್ಧತಿ ಇದೆ. ಅದಕ್ಕೆ **ಮಹಾಜನ ಪರಿಗ್ರಹ**ವೆಂದು ಹೆಸರು. ವೇದವನ್ನು ಉಪಯೋಗಿಸಿದ ಕೂಡಲೇ, ಸತ್ಯ ಪಕ್ಷಪಾತಿಗಳಾದ ಜನರೆಲ್ಲರೂ ತಾವಾಗಿಯೇ ಅದರ ಪ್ರಾಮಾಣ್ಯವನ್ನು ಅಂಗೀಕರಿಸಬೇಕು. ಹಾಗೆ ಅಂಗೀಕೃತವಾದ ವೇದ ಪ್ರಮಾಣವಾಗುತ್ತದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಈ ನಿಯಮವನ್ನು ಏಕಾಂತವಾಗಿ ಉಪಯೋಗಿಸುವಹಾಗಿಲ್ಲ. ವೇದದಲ್ಲಿ ಮಹಾಜನ ಪರಿಗ್ರಹವಿದೆಯೆಂದು ವೈದಿಕರೂ, ಜೈನಾಗಮ ಮುಂತಾದ ಶಬ್ದ ಪ್ರಮಾಣದಲ್ಲಿ ಮಹಾಜನ ಪರಿಗ್ರಹವಿದೆಯೆಂದು ಇತರರೂ ವಾದಿಸಬಹುದು. ವಸ್ತುತಃ ಈ ರೀತಿ ವಿವಾದವಿದ್ದುದರಿಂದಲೇ **ಆಸ್ತಿಕ** ಮತ್ತು **ನಾಸ್ತಿಕ** ಎಂದು ಎರಡು ಪಂಗಡಗಳೇರ್ಪಟ್ಟುವು. ಇಷ್ಟು ನಿರ್ಬಂಧಗಳನ್ನು ಹಾಕಿದಮೇಲೆ ವೇದದಲ್ಲಿ ವಿಶ್ವಾಸವಂಕುರಿಸಿ, ಅದರ ಪ್ರಾಮಾಣ್ಯವನ್ನು ವೈದಿಕರು ಸಾರುತ್ತಾರೆ.

ಎಲ್ಲ ದರ್ಶನಗಳಲ್ಲಿಯೂ ಜ್ಞಾನಕ್ಕೆ ಪ್ರಾಧಾನ್ಯ ಲಭಿಸಿದೆ. ಜ್ಞಾನದಿಂದ ಅಜ್ಞಾನ ನಿವೃತ್ತವಾಗುತ್ತದೆ. ಅಜ್ಞಾನದಿಂದ ಉಂಟಾದ ದುಃಖವನ್ನು ನಮ್ಮ ಕರ್ಮದಿಂದ ಎಂದರೆ ಪ್ರಯತ್ನದಿಂದ ಹೋಗಲಾಡಿಸಬೇಕು. ಅಜ್ಞಾನದಲ್ಲಿ ಮಾಡಿದ ಕರ್ಮದ ಫಲವಾಗಿ ಬಂದ ದುಃಖವನ್ನು ಜ್ಞಾನದಲ್ಲಿ ಮಾಡಿದ ಕರ್ಮದಿಂದ ನಾಶಮಾಡಬೇಕು. ಜ್ಞಾನಿ ಸಂತತವಾಗಿ ಸತ್ಕರ್ಮ ಪ್ರವೃತ್ತನಾಗಿರಬೇಕು. ತನ್ನ ಕರ್ಮದಿಂದ ಮೋಕ್ಷವನ್ನು ಸಂಪಾದಿಸಬಲ್ಲವನಿಗೆ ದೇವರೂ ಅವನ ಅನುಗ್ರಹವೂ ಬೇಕಾಗಿಲ್ಲವೆಂದು ನಿರೀಶ್ವರವಾದಿಗಳು ಸಾರುತ್ತ, ಪುರುಷ ಪ್ರಯತ್ನಕ್ಕೆ ಬಹಳ ಬೆಲೆಯನ್ನು ಕಟ್ಟುತ್ತವೆ. ವೇದಾಂತ ದರ್ಶನಗಳ ಪ್ರಕಾರ, ಕರ್ಮದಿಂದ ಮನಸ್ಸಿನಲ್ಲಿರುವ ಕಶ್ಮಲ ನಾಶವಾಗಬಹುದು; ಅಥವಾ ಭಗವಂತನು ಪ್ರೀತನಾಗಬಹುದು. ಚಿತ್ತಶುದ್ಧಿಗಾಗಿ ಕರ್ಮಾಚರಣೆಯನ್ನು ಅದ್ವೈತಿಗಳು ವಿಧಾನಮಾಡುತ್ತಾರೆ. ಇತರರು ಕರ್ಮವನ್ನು ಭಗವಂತನ ಪೂಜಾಪ್ರಕಾರವೆಂದು ಭಾವಿಸುತ್ತಾರೆ. ಭಗವಂತನನ್ನು ಅಂಗೀಕರಿಸುವವರಿಗೆ ಆವನ ಪ್ರಸಾದವೇ ಮುಕ್ತಿಸಾಧನವಾಗುತ್ತದೆ. ನಮ್ಮ ಪ್ರಯತ್ನವೇ ನಮಗೆ ಸರ್ವಸಾಧಕವೆಂದು ನಂಬುವವರು ಒಂಮೊಂದು ವೇಳೆ ಹೆಮ್ಮೆಯಿಂದ ಕೆಡಬಹುದು. ಆದರೆ ನಿಜವಾದ ಜ್ಞಾನವಿದ್ದರೆ ಹೆಮ್ಮೆಯಿರುವುದಿಲ್ಲ. ಭಗವತ್ಪ್ರಸಾದವೇ ಮುಕ್ತಿಸೋಪಾನವೆಂದು ವಾದಿಸುವವರಿಗೆ ಅಹಂಕಾರ ಪಡುವುದು ಅವದ್ಯಕರವೆಂದು ಸುಲಭವಾಗಿ ಭಾಸವಾಗುತ್ತದೆ. ಈ ಮಾರ್ಗವನ್ನು ಅವಲಂಬಿಸುವವರಿಗೆ ಸೋಮಾರಿಗಳಾಗಬಹುದಾದ ಸಂದರ್ಭಗಳು ಒದಗಕೂಡದೆಂದೇ ಅವರೂ ಕರ್ಮವನ್ನು ಕೈಂಕರ್ಯವೆಂಬ ಭಾವನೆಯಿಂದ ಮಾಡಬೇಕೆಂಬ ವಿಧಾನವೇರ್ಪಟ್ಟಿದೆ.

(೩೨೦ನೆಯ ಪುಟಕ್ಕೆ)

### ಕನ್ನಡ ಕವಿ ಸೂಕ್ತಿ

ರಸಮುಂ ನಾಲಗೆ, ಕವಿತಾ
ರಸಮುಂ ಕವಿ, ಕುಸುಮರಸಮಿನಳಿಮಾಳೆ, ಸುಧಾ
ರಸಮುಂ ಸುರರ್, ಅಕ್ಷಯ ಸುಖ
ರಸಮುಂ ಪರಮಾತ್ಮನಜೀವನ್, ಉಜ್ಜದವರಜೀಯರ್

ನಾಗಚಂದ್ರ : ಮಲ್ಲಿನಾಥಪುರಾಣ—I–೨೮



ಶುಕ್ರವಾರ, ಜೂನ್ ೧೪, ೧೯೪೦

## ದೇಶಭಾಷೆ

ಸುಪ್ರಸಿದ್ಧ ರಾಜಕೀಯ ಮುಂದಾಳುಗಳೂ ಹೆಸ್ರರಾದ ವಾಗ್ಮಿಗಳೂ ಮದರಾಸು ಪೌರಸಭೆಯ ಅಧ್ಯಕ್ಷರೂ ಆದ ಶ್ರೀಮಾನ್ ಎಸ್. ಸತ್ಯಮೂರ್ತಿಯವರು ನೆನ್ನೆ ಸಂಜೆ ಬೆಂಗಳೂರಿನ ತಮಿಳು ಸಂಘದ ಆಶ್ರಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಂದಿರದಲ್ಲಿ ತಮಿಳು ಭಾಷೆಯನ್ನು ಕುರಿತು ಉಪನ್ಯಾಸ ಮಾಡಿದಾಗ ಹಲವು ಅಮೋಘ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ಅವರ ಹೇಳಿಕೆಗಳು ಕನ್ನಡಕ್ಕೂ ಅನ್ವಯಿಸುವುದರಿಂದ ಕನ್ನಡಿಗರ ಗಮನಾರ್ಹವಾಗಿವೆ. ಉಪನ್ಯಾಸದ ಮೊದಲಲ್ಲೆ, ತಮಿಳು ಸಂಘದವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ತಮಿಳು ಉಪನ್ಯಾಸವನ್ನು ಏರ್ಪಡಿಸಿದ್ದು ಉಚಿತವಾಗಿದೆಯೆಂದೂ ತಮಿಳಿಗೂ ಕನ್ನಡಕ್ಕೂ, ತಮಿಳರಿಗೂ ಕನ್ನಡಿಗರಿಗೂ ಇರುವ ಬಾಂಧವ್ಯ ಸೌಹಾರ್ದಗಳನ್ನು ಅದು ಸೂಚಿಸುತ್ತದೆಂದೂ ಹೇಳಿ, ಕನ್ನಡ ಸಾಹಿತ್ಯ ಪರಿಷತ್ತು ನಾಡು ನುಡಿಗಳಿಗೆ ಮಾಡುತ್ತಿರುವ ಸೇವೆಯನ್ನು ತಾವು ಅರಿತಿರುವುದಾಗಿಯೂ ಅದಕ್ಕಾಗಿ ತಮ್ಮ ಮೆಚ್ಚುಗೆಯನ್ನು ಈ ಸಂದರ್ಭದಲ್ಲಿ ವ್ಯಕ್ತಪಡಿಸುವುದಾಗಿಯೂ ಹೇಳಿ ಪರಿಷತ್ತಿನ ಕೆಲಸವನ್ನು ಕೊಂಡಾಡಿದರು. ಮೈಸೂರಲ್ಲಿ ನೆಲಸಿರುವ ತಮಿಳರೆಲ್ಲರೂ ಮೈಸೂರರಸರ ಮಕ್ಕಳೆಂದೂ, ಅವರು ಮಹಾರಾಜರಿಗೆ ಭಕ್ತಿಯಿಂದ ನಡೆದುಕೊಳ್ಳಬೇಕೆಂದೂ, ಇಲ್ಲಿಯ ಜನರೊಡನೆ ಪ್ರೀತಿ ಸೌಹಾರ್ದಗಳಿಂದ ಒಂದಾಗಿ ಬೆರೆತು ಯಾವ ಬಗೆಯಲ್ಲಿಯೂ ತಮ್ಮ ನಡತೆಯಿಂದ ಮೈಸೂರಿಗೆ ಕಳಂಕ ತಟ್ಟದಂತೆ ನೋಡಿಕೊಳ್ಳುವುದು ತಮ್ಮ ಕರ್ತವ್ಯವೆಂದೂ ಮನಸಟ್ಟುವಂತೆ ಸಾರಿ ಹೇಳಿದರು. ಒಂದು ದೇಶದ ಜನರನ್ನು ಒಲಿಸಿಕೊಳ್ಳುವುದಕ್ಕೆ ಆ ಜನರ ಭಾಷೆಗಿಂತ ಬೇರೆ ಸಾಧನ ಮತ್ತೊಂದಿಲ್ಲವೆಂದೂ, ತಮಿಳಿಗೂ ಕನ್ನಡಕ್ಕೂ — ಅದರಲ್ಲಿಯೂ ಹಳದಮಿಳಿಗೂ ಹಳಗನ್ನಡಕ್ಕೂ — ಬಲುಹತ್ತಿರ ಸಂಬಂಧವಿದೆಯೆಂದೂ ತಿಳಿಸಿ ಪ್ರತಿಯೊಬ್ಬ ತಮಿಳನೂ ಕನ್ನಡವನ್ನು ಕಲಿಯುವ ಆವಶ್ಯಕತೆಯನ್ನು ಒತ್ತಿಹೇಳಿದರು. ತಮಿಳರು ಕನ್ನಡವನ್ನೂ ಕನ್ನಡಿಗರು ತಮಿಳನ್ನೂ ಕಲಿಯುವುದರಿಂದ ಜನರಲ್ಲಿ ಪರಸ್ಪರ ಪ್ರೀತಿ ವಿಶ್ವಾಸಗಳು ಬೆಳೆಯುವುದು ಮಾತ್ರವಲ್ಲದೆ, ಭಾಷಾಭ್ಯಾಸದ ದೃಷ್ಟಿಯಿಂದ ವಿದ್ವಾಂಸರಿಗೂ ಬಹಳ ಉಪಯೋಗ. ಶ್ರೀ॥ ಸತ್ಯಮೂರ್ತಿಯವರ ಈ ಬುದ್ಧಿವಾದಕ್ಕೆ ತಮಿಳರೂ ಕನ್ನಡಿಗರೂ ಕಿವಿಗೊಡುತ್ತಾರೆಂದು ನಂಬುತ್ತೇವೆ.

ತಮಿಳು ಅತಿ ಪ್ರಾಚೀನವಾದ್ದೆಂದೂ ಅದರ ಸಮಾನ ಪ್ರಪಂಚದಲ್ಲೇ ಮತ್ತೊಂದು ಭಾಷೆಯಿಲ್ಲವೆಂದೂ ಹೇಳುವ ವೀರ ತಮಿಳುಪಂಥದವನು ತಾನಲ್ಲವೆಂದೂ, ಆದರೆ ತನ್ನ ತಾಯಿನುಡಿಯಾದ್ದರಿಂದ ತಮಿಳನ್ನು ತಾನು ಪ್ರೀತಿಸುವುದಾಗಿಯೂ ತಮಿಳು ಸಾಹಿತ್ಯದಲ್ಲಿ ಸಂತೋಷಿಸುವುದಾಗಿಯೂ, ಆ ದೃಷ್ಟಿಯಿಂದ ತಮಿಳಿಗೆ ತನ್ನೆದೆಯಲ್ಲಿ ಮೊದಲ ಸ್ಥಾನವಿದೆಯೆಂದೂ ಹೇಳಿ ತಮ್ಮ ಮಾತನ್ನು ಆರಂಭಿಸಿದರು. ಆರ್ಯ ದ್ರಾವಿಡ ಭೇದವೊಡ್ಡಿ ತಮಿಳು ದ್ರಾವಿಡರದೆಂದೂ ಸಂಸ್ಕೃತ ಆರ್ಯರದೆಂದೂ ಆರ್ಯರು ತಮಿಳರ ವೈರಿಗಳೆಂದೂ ಇಲ್ಲದ ಸಲ್ಲದ ಮಾತುಗಳಿಂದ ಅಪಪ್ರಚಾರಮಾಡಿ ಜಾತಿ ಮತ ಭಾಷೆಗಳ ಗೊಂದಲವೆಬ್ಬಿಸಿ ಜನರಲ್ಲಿ ಒಳಹೋರಾಟ ಹೂಡುತ್ತಿರುವ ಕೆಲವು ಮುಂದರಿಯದ ಮುಂದಾಳುಗಳ ಅವಿವೇಕಕ್ಕೆ ಅವರು ಮರುಗಿದರು. ಸಂಸ್ಕೃತಕ್ಕೆ ದ್ರಾವಿಡರೂ ತಮಿಳಿಗೆ ಆರ್ಯರೂ ಏಕಪ್ರಕಾರವಾಗಿ ದುಡಿದು ಎರಡೂ ಭಾಷೆಗಳನ್ನು ಇಬ್ಬರೂ ಒಟ್ಟಿಗೇ ಬೆಳಸಿರುವುದರಿಂದ ಆ ಆರ್ಯ – ದ್ರಾವಿಡ – ತಮಿಳು ಸಂಸ್ಕೃತ ಕಲಹ ತಗದು ಎಂದರು. ಸಾವಿರಾರು ವರ್ಷಗಳಿಂದ ತಮಿಳಿಗೂ ಸಂಸ್ಕೃತಕ್ಕೂ ಬಾಂಧವ್ಯ ಬೆಳೆದು ಬಂದು ಕಾಲಕ್ರಮದಲ್ಲಿ ಹಲವು ಸಂಸ್ಕೃತ ಮಾತುಗಳು ತಮಿಳಿಗೆ ಇಳಿದು ಪಳಗಿರುವುದಾಗಿಯೂ ಈಗ ಅವನ್ನೆಲ್ಲ ಬಲವಂತದಿಂದ ಕಿತ್ತೊಗೆದು ಪ್ರವಾಹವನ್ನು ಹಿಮ್ಮರಳಿಸಿ ಭಾಷೆಯನ್ನು ಅಚ್ಚತಮಿಳಾಗಿಸುವ ಹುಚ್ಚುಸಾಹಸ ವಿಫಲವಾಗುತ್ತದೆಯೆಂದೂ ವೀರತಮಿಳರನ್ನು ಎಚ್ಚರಿಸಿದರು. ಸಂದರ್ಭೋಚಿತವಾಗಿ ಹದವರಿತು ಇತರ ಭಾಷೆಗಳಿಂದ ಮಾತುಗಳನ್ನು ಬಳಸಿಕೊಂಡರೆ ಒಂದು ಭಾಷೆ ಕಳೆಗೊಂಡು ಪುಷ್ಟವಾಗಿ ಬೆಳೆಯುತ್ತದೆಯೇ ಹೊರತು ಕೆಡುವುದಿಲ್ಲವೆನ್ನುವುದಕ್ಕೆ ಗ್ರೀಕ್, ಲ್ಯಾಟಿನ್, ಫ್ರೆಂಚ್ ಮೊದಲಾದ ಪ್ರಾಚೀನ ಮತ್ತು ಆಧುನಿಕ ಭಾಷೆಗಳಿಂದ ಪುಷ್ಟಿಗೊಂಡು ಶೋಭಿಸುತ್ತಿರುವ ಇಂಗ್ಲಿಷ್ ಭಾಷೆಯನ್ನು ಉದಾಹರಿಸಿದರು. ಹೀಗೆ ಹೇಳುವಲ್ಲಿ ಶ್ರೀ॥ ಸತ್ಯಮೂರ್ತಿಯವರ ಅಭಿಪ್ರಾಯ ದೇಶಭಾಷೆಗಳಿಗೆ ಸಂಸ್ಕೃತ ಮೊದಲಾದುವುಗಳಿಂದ ಬಂದು ಜನರ ಬಾಯಲ್ಲಿ ಪಳಗಿರುವ ಸುಲಭ ಪದಗಳನ್ನು ಕಿತ್ತೊಗೆಯುವ ಸಾಹಸ ಅನುಚಿತವೂ ಅಪ್ರಯೋಜಕವೂ ಎಂದು ಮಾತ್ರ; ಅನಾವಶ್ಯಕವಾದ ಪಾಂಡಿತ್ಯ ಪ್ರದರ್ಶನದ ಪದಗಳನ್ನು ಎರವಲು ತಂದು ಬೆರಸಿ ನಮ್ಮ ನುಡಿಯನ್ನು ಹದಗೆಡಿಸಬೇಕೆಂದಲ್ಲ.

ನಮ್ಮ ಶಿಕ್ಷಣ ಪದ್ಧತಿಯಲ್ಲಿ—ವಿದ್ಯಾಶಾಲೆಗಳಲ್ಲೂ ವಿಶ್ವವಿದ್ಯಾನಿಲಯದಲ್ಲೂ—ತಮಿಳಿಗಿರುವ ಸ್ಥಾನಮಾನಗಳ ವಿಷಯವಾಗಿ ಶ್ರೀ॥ ಸತ್ಯಮೂರ್ತಿಯವರು ಹೇಳಿದ್ದೆಲ್ಲವೂ ಕನ್ನಡಕ್ಕೂ ಅನ್ವಯಿಸುವುದರಿಂದ ಅದನ್ನೂ ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಮೆಟ್ರಿಕ್ಯುಲೇಷನ್ ಪರೀಕ್ಷೆ ಪೂರ್ತ ಎಲ್ಲ ಶಾಸ್ತ್ರ ವಿಷಯಗಳ ಬೋಧಭಾಷೆ ಕಡ್ಡಾಯವಾಗಿ ದೇಶಭಾಷೆಯೇ ಆಗಿರಬೇಕೆಂದೂ ವಿಶ್ವವಿದ್ಯಾನಿಲಯದ ಪ್ರೌಢ ತರಗತಿಗಳಲ್ಲಿ ಕೂಡ ಇದೇ ಕ್ರಮ ಬೇಗನೆ ಬರಬೇಕೆಂದು ಬಯಸುವವರಲ್ಲಿ ತಾವೊಬ್ಬರೆಂದೂ, ಹೇಳಿ ದೇಶಭಾಷೆಗೆ ತಾವು ಕೊಡುವ ಮೊದಲ ಮನ್ನಣೆಯನ್ನು

ಸ್ಪಷ್ಟಪಡಿಸಿದರು. ಹೀಗೆ ಹೇಳಿದ್ದರಿಂದ ಇಂಗ್ಲಿಷನ್ನು ತಾವು ಕಡೆಗಣಿಸಿದಂತೆ ಭಾವಿಸಬಾರದೆಂದೂ ಅದು ಚಿರಸ್ಥಾಯಿಯಾಗಿ ನಿಲ್ಲುವ ದೊಡ್ಡ ಭಾಷೆಯೆಂದೂ ಅದರ ಸಾಹಿತ್ಯ ಸಂಸ್ಕೃತಿಗಳಿಗಾಗಿ ಅದನ್ನು ಅಭ್ಯಾಸಮಾಡುವುದು ನಮ್ಮ ಕರ್ತವ್ಯವೆಂದೂ, ಆದರೆ ನಮ್ಮ ಮೊದಲ ಮರ್ಯಾದೆ, ಮೊದಲೊಲವು ತಾಯನುಡಿಗೆಂದೂ, ತಮ್ಮ ಅಭಿಪ್ರಾಯವನ್ನು ಸಮರ್ಥಿಸಿದರು. ಇತರ ಭಾಷೆಗಳಿಗೂ ಶಾಸ್ತ್ರ ವಿಷಯಗಳಿಗೂ ಇರುವುದಕ್ಕಿಂತ ಕಡಮೆಯ ಸ್ಥಾನಮಾನಗಳು ದೇಶಭಾಷೆಗೆ ಶುದ್ಧ ಅನ್ಯಾಯವೆಂದೂ, ಸ್ವಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕಾದರೂ ಅದಕ್ಕೆ ಉಳಿದುವುಗಳಿಗಿಂತ ಕಡಮೆಯಲ್ಲದ ಸ್ಥಾನವನ್ನಾದರೂ ಕೊಡುವುದು ನಮ್ಮ ಕರ್ತವ್ಯ ಮರ್ಯಾದೆಯೆಂದೂ ಶ್ರೀ|| ಸತ್ಯಮೂರ್ತಿಯವರು ನುಡಿದದ್ದು ಕೇವಲ ಸತ್ಯವೆಂದು ಎಲ್ಲರೂ ಒಪ್ಪತಕ್ಕದ್ದೇ.

ದೇಶಭಾಷೆಯ ಅಧ್ಯಾಪಕರ ವಿಷಯದಲ್ಲಿ ಈಗ ತೋರಿಸುತ್ತಿರುವ ಅಸಡ್ಡೆ ಅಗೌರವಗಳ ವಿಷಯವಾಗಿ ಅವರು ಹೇಳಿದ ಮಾತಂತೂ ಪ್ರತಿಯೊಬ್ಬರೂ ಗಮನಿಸಬೇಕಾದ್ದು. ದೇಶಭಾಷೆಯ ಅಧ್ಯಾಪಕರಿಗೆ ಕೊಡುತ್ತಿರುವ ಸಂಬಳ ಬಹು ಅವಮಾನಕರವಾದ್ದೆಂದೂ ಉಳಿದವರಿಗಿಂತ ಕಡಮೆಯಿಲ್ಲದಷ್ಟನ್ನಾದರೂ ಕೊಟ್ಟು ಅವರನ್ನು ಗೌರವಿಸುವುದು ಆತ್ಮಗೌರವದ ವಿಷಯವೆಂದೂ ಅವರು ಹೇಳಿರುವುದನ್ನು ಅಧಿಕಾರಿಗಳ ಗಮನಕ್ಕೆ ತರಬಯಸುತ್ತೇವೆ. ಒಂದು ಪ್ರಾಂತದಲ್ಲಿ ಆ ಪ್ರಾಂತ ಭಾಷೆಗೆ ಮನ್ನಣೆ ದೊರೆಯದಿದ್ದರೆ ಮತ್ತೆಲ್ಲಿ ದೊರೆಯಬೇಕು? ಅಧಿಕಾರಿಗಳು ಕನ್ನಡ ಅಧ್ಯಾಪಕರ ಸ್ಥಾನಮಾನಗಳ ಮತ್ತು ಸಂಬಳ ಸಾರಿಗೆಯ ವಿಷಯದಲ್ಲಿ ತಕ್ಕ ಗಮನಕೊಟ್ಟು ಈಗ ಅವರಿಗೆ ಆಗುತ್ತಿರುವ ಅನ್ಯಾಯವನ್ನು ಕೂಡಲೆ ತಪ್ಪಿಸಿ, ಅವರಿಗೆ ಸಲ್ಲಬೇಕಾದ ಗೌರವ ಮರ್ಯಾದೆಗಳನ್ನು ಸಲ್ಲಿಸುತ್ತಾರೆಂದು ನಂಬುತ್ತೇವೆ.

---

## ಕೊಲ್ಲಾಪುರ ಮಹಾರಾಜರವರ ಉದಾರದಾನ

ಕೊಲ್ಲಾಪುರದ ಮಹಾರಾಜರವರ ಘನ ಅಧ್ಯಕ್ಷತೆಯಲ್ಲಿ ಕೆಲವು ದಿನಗಳ ಹಿಂದೆ ಚಿಕ್ಕೋಡಿಯಲ್ಲಿ ಅಖಿಲ ಕರ್ನಾಟಕ ವ್ಯಾಯಾಮ ಪರಿಷತ್ತಿನ ಮೂರನೆಯ ಅಧಿವೇಶನ ಬಹಳ ವಿಜೃಂಭಣೆಯಿಂದ ನಡೆಯಿತಷ್ಟೆ. ಮಹಾರಾಜರವರು ಮಹಾರಾಷ್ಟ್ರದ ಕಣ್ಣಮಣಿಯಾದ, ಹಿಂದೂ ಸಂಸ್ಕೃತಿ ರಕ್ಷಕರಲ್ಲೊಬ್ಬನಾಗಿ ಹಿರಿಯ ಹೆಸರಾದ ಛತ್ರಪತಿ ಶಿವಾಜಿಯ ವಂಶದಲ್ಲಿ ಹುಟ್ಟಿದವರು. ಮರಾಠರಾದರೂ ತಮ್ಮ ಸಂಸ್ಥಾನದಲ್ಲಿರುವ ಸಾವಿರಾರು ಕನ್ನಡ ಪ್ರಜೆಗಳ ಶ್ರೇಯಸ್ಸಿನ ಧರ್ಮದರ್ಶಿಗಳು. ಇಂಥವರು ಕನ್ನಡ ಸಂಸ್ಥೆಯೊಂದರ ಆಹ್ವಾನವನ್ನು ಮನ್ನಿಸಿ ಅದರ ಕಾರ್ಯಕಲಾಪಗಳನ್ನು ನಡಸಿಕೊಡಲು ಕೃಪೆಮಾಡಿ ಒಪ್ಪಿಕೊಂಡುದು ಸಹಜವೇ. ಅವರ ಈ ಔದಾರ್ಯಕ್ಕಾಗಿ ಕನ್ನಡಿಗರು ಅವರಿಗೆ ಕೃತಜ್ಞರು. ಕನ್ನಡ ನಾಡಿನವರು ತಮ್ಮ ಶಾರೀರಕ ಸಂಪತ್ತು ಮತ್ತು ಆರೋಗ್ಯವನ್ನು ಹೆಚ್ಚಿಸಿಕೊಳ್ಳಲು ಮಹಾರಾಜರವರು ಅಮೂಲ್ಯವಾದ ಸಲಹೆಗಳನ್ನು ನೀಡಿರುವುದಲ್ಲದೆ ಒಂದು ಸಾವಿರ ರೂಪಾಯಿ ದಾನಮಾಡಿ, ವ್ಯಾಯಾಮ ಪರಿಷತ್ತಿನ ಕಾರ್ಯ ಸುಸೂತ್ರವಾಗಿ ನಡೆಯಲು ಅನುಗ್ರಹ ಮಾಡಿದ್ದಾರೆ. ಹೀಗೆಯೇ ಕನ್ನಡ ನಾಡಿನ ಇತರ ರಾಜ ಮನೆತನದವರ ಕೃಪಾಶ್ರಯ ದೊರೆತು ವ್ಯಾಯಾಮ ಪರಿಷತ್ತು ಕೈಕೊಂಡಿರುವ ಹಿರಿಯ ಕಾರ್ಯ ಕೈಗೂಡಲೆಂದು ಹಾರೈಸುತ್ತೇವೆ.

**"ನಾಯಮಾತ್ಮಾ ಬಲಹೀನೇನ ಲಭ್ಯಃ"**

## ಪರಿಷತ್ತಿನ ಸುದ್ದಿ

**ಬೆಳ್ಳಿಯ ಹಬ್ಬದ ಸಲುವಾಗಿ ಮೈಸೂರು ಶ್ರೀಮನ್ಮಹಾರಾಜರವರು ೨೫೦ ರೂಪಾಯಿಗಳ ಉದಾರ ದಾನವನ್ನು ಕೃಪೆಮಾಡಿರುತ್ತಾರೆ.**

### ಶ್ರೀಮನ್ಮಹಾರಾಜರವರ ವರ್ಧಂತಿ

ಪರಿಷತ್ತಿನ ಮಹಾಪೋಷಕರೂ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರೂ ಆದ **ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ., ಜಿ. ಬಿ. ಇ. ಮಹಾಸ್ವಾಮಿಯವರ ವರ್ಧಂತ್ಯುತ್ಸವವನ್ನು** ಆಚರಿಸಲು ಪರಿಷತ್ತಿನಲ್ಲಿ ಇದೇ ತಿಂಗಳು ೧೬ನೆಯ ತಾರೀಖು ಭಾನುವಾರ ಸಂಜೆ ೬ ಘಂಟೆಗೆ ಸಾರ್ವಜನಿಕ ಸಭೆ ಸೇರುತ್ತದೆ. ಮೈಸೂರು ವಿದ್ಯಾಭ್ಯಾಸ ಇಲಾಖೆಯ ಡೆಪ್ಯುಟಿ ಡೈರೆಕ್ಟರವರಾದ ಶ್ರೀ|| ಸುಲ್ತಾನ್ ಮೊಹಿಯುದ್ದೀನ್ ಎಂ.ಎ., ಎಂ.ಇಡಿ. ಅವರು ಅಧ್ಯಕ್ಷತೆ ವಹಿಸುವರು.

### ಬೆಳ್ಳಿಯ ಹಬ್ಬಕ್ಕೆ ದ್ರವ್ಯ ಸಹಾಯಮಾಡಿದವರ ಪಟ್ಟಿ—೧

ಈ ಕೆಳಗೆ ಕಂಡ ಮಹನೀಯರು ಕೃಪೆಮಾಡಿ ನೀಡಿರುವ ದ್ರವ್ಯ ಸಹಾಯವನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

| | |
|---|---|
| ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು, ಬೆಂಗಳೂರು | ೧೦೦ ರೂ. |
| ಶ್ರೀ|| ಎಂ. ವೆಂಕಟೇಶ ಅಯ್ಯಂಗಾರ್ಯರು, ಬೆಂಗಳೂರು .... | ೨೦ |
| ,, ಪಂಡಿತ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯರು .... | ೨೦ |
| ಡಾ|| ಎ. ಎನ್. ನರಸಿಂಹಯ್ಯನವರು, ಮೈಸೂರು .... | ೧೦ |
| ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳು, ಮೈಸೂರು .... | ೧೦ |
| ಶ್ರೀ|| ಬಿ. ವೆಂಕೋಬರಾಯರು, ಬೆಂಗಳೂರು .... | ೧೦ |
| ,, ಆರ್. ಆರ್. ದಿವಾಕರ್ ಅವರು, ಹುಬ್ಬಳ್ಳಿ .... | ೫ |
| ,, ಎಂ. ಆರ್. ಶ್ರೀನಿವಾಸಮೂರ್ತಿಗಳು, ಬೆಂಗಳೂರು .... | ೫ |
| ,, ಚ. ಚ. ಅಬಕಾರ ಅವರು, ಬನಹಟ್ಟಿ (ಜಮಖಂಡಿ) .... | ೫ |
| ,, ಕೆ. ವಿ. ರಾಘವಾಚಾರ್ಯರು, ಬೆಂಗಳೂರು .... | ೩ |
| ,, ಎಲ್. ಗುಂಡಪ್ಪನವರು, ಬೆಂಗಳೂರು .... | ೩ |
| ,, ಎಂ. ವಿ. ಸೀತಾರಾಮಯ್ಯನವರು, ಬೆಂಗಳೂರು .... | ೩ |
| ,, ಕೆ. ಹನುಮಂತರಾಯರು, ಕೋಲಾರ .... | ೩ |

### ಬೆಳ್ಳಿಯ ಹಬ್ಬಕ್ಕೆ ಬರುವ ಅತಿಥಿಗಳಲ್ಲಿ ಪ್ರಾರ್ಥನೆ

ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ಹೊರಗಿನಿಂದ ಬರುವ ಅತಿಥಿಗಳು ಬೆಂಗಳೂರಿನಲ್ಲಿ ಬಿಡಾರಮಾಡುವಾಗ್ಗೆ ಪರಿಷತ್ತಿನ ಸಹಾಯ ಬೇಕಾದಲ್ಲಿ ಅಂಥವರು ೨೫-೬-೩೦ರ ಹೊತ್ತಿಗೆ ಪರಿಷತ್ತಿನ ಕಾರ್ಯದರ್ಶಿಗಳಿಗೆ ಬರೆದು ತಿಳಿಸಬೇಕೆಂದು ಪ್ರಾರ್ಥನೆ. ಪರಿಷತ್ತಿನ ನೇತೃತ್ವದಲ್ಲಿ ಭೋಜನಾದಿ ಸೌಕರ್ಯಗಳನ್ನು ಪಡೆಯುವ ಅತಿಥಿಗಳು ಮೂರು ದಿನಗಳಿಗೆ ಸುಮಾರು ಒಂದು ರೂಪಾಯಿ ಕೊಡಬೇಕಾದೀತು.

### ಗ್ರಂಥಪ್ರದರ್ಶನ

ಬೆಳ್ಳಿಯ ಹಬ್ಬದ ಸಂಬಂಧದಲ್ಲಿ ಏರ್ಪಡಿಸಿರುವ ಗ್ರಂಥಪ್ರದರ್ಶನಕ್ಕೆ ಗ್ರಂಥಗಳನ್ನು ಕಳಿಸಲು ಅವಧಿಯನ್ನು ಹೆಚ್ಚಿಸಬೇಕೆಂದು ಹಲವು ಪ್ರಕಾಶಕರು ಕೋರಿದ್ದರಿಂದ, ೨೫ನೆಯ ತಾರೀಖಿನವರೆಗೆ ಅವಧಿಯನ್ನು ಹೆಚ್ಚಿಸಿದೆ.

---

### ಸರ್ ಬೇವೂರರ ಕನ್ನಡ ಪ್ರೇಮ

ಇಂಡಿಯಾ ಸರಕಾರದ ಅಂಚೆ ಮತ್ತು ತಂತಿ ಇಲಾಖೆಯ ಡೈರೆಕ್ಟರ್ ಜನರಲ್‌ರಾದ ಸರ್ ಗುರುರಾವ್ ಬೇವೂರ್ ಅವರು ಬಿಜಾಪುರಕ್ಕೆ ಭೇಟಿಯಿತ್ತಾಗ, ಸ್ಥಳೀಯ ಯೂನಿಯನ್ ಕ್ಲಬ್ಬಿನಲ್ಲಿ ಅವರಿಗೆ ಸತ್ಕಾರ ಭೋಜನ ಕೂಟ ಏರ್ಪಡಿಸಲಾಗಿತ್ತು. ಆಗ ಆತಿಥೇಯರ ಪರವಾಗಿ ಶ್ರೀಗಳಾದ ಅಲಗಾಳ ವೆಂಕಟರಾಯರೂ ನಾಯಕರೂ ಭಾಷಣಮಾಡುತ್ತ ಅವರ ಗುಣಕಥನಮಾಡಿ ಅವರು ಕರ್ನಾಟಕವನ್ನು ಮರೆಯದೆ ಯಾವಾಗಲೂ ನೆನಪಿನಲ್ಲಿ ಇಟ್ಟುಕೊಳ್ಳಲು ವಿಜ್ಞಾಪಿಸಿಕೊಂಡರು. ಸರ್ ಬೇವೂರರು ತಮ್ಮ ಉತ್ತರದಲ್ಲಿ—

ಕರ್ನಾಟಕದ ಭಾಷೆ, ಸಂಸ್ಕೃತಿ ಇವುಗಳನ್ನು ಬೆಳೆಸುವದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿದೆಯೆಂಬುದು ಒತ್ತಿ ಹೇಳಿ ತಾವು ಎಲ್ಲಿಯೆ ಇದ್ದರೂ ಕನ್ನಡಿಗನೇ ಆಗಿರುವದಾಗಿ ತಿಳಿಸಿದರು. ಮತ್ತು ಪುಣೆಯಲ್ಲಿ ಮನೆಯನ್ನು ಕಟ್ಟಿಸಿದರೂ ತಾವೇನೂ ಕಳೆದುಹೋಗಿಲ್ಲವೆಂದೂ ಪುಣೆಯನ್ನು ತಾವು ಉತ್ತರ ಕರ್ನಾಟಕವೆಂದು ಸಂಬೋಧಿಸುವವಾಗಿಯೂ ಹೇಳಿದರು. ತಾವು ಸರಕಾರಿ ಅಧಿಕಾರಿಗಳಾಗಿರುವದರಿಂದ ಸ್ವಪ್ರಾಂತದಲ್ಲಿ ನಿಂತು ಅದರ ಸೇವೆ ಮಾಡುವುದು ಶಕ್ಯವಿಲ್ಲವೆಂದೂ ಕರ್ನಾಟಕವು ಸ್ವತಂತ್ರ ಪ್ರಾಂತವಾಗಿ ಘಟಿಸಲ್ಪಟ್ಟರೆ ಅದರ ಸೇವೆ ಮಾಡಲು ಸಿದ್ಧರಿರುವದಾಗಿಯೂ ತಿಳಿಸಿದರು.

(೩೧೭ನೆಯ ಪುಟದಿಂದ)

ಹೀಗೆ ಯುಕ್ತಿಯಿಂದ ಸ್ಥಿರಪಟ್ಟ ಜ್ಞಾನದಿಂದ ಪದಾರ್ಥಗಳ ನಿಜಸ್ವರೂಪವನ್ನರಿತವನೇ ದಾರ್ಶನಿಕನು. ಜ್ಞಾನವುಂಟಾದರೆ ಕಾಮ ಕ್ರೋಧಾದಿ ದೋಷಗಳಿಗೆ ಅವನು ಅವಕಾಶಕೊಡುವುದಿಲ್ಲ. ಹಾಗೆಯೇ ತನ್ನ ನಿಜವಾದ ಸ್ವರೂಪಕ್ಕೆ ವಿರುದ್ಧವಾಗಿ ಆಗಂತುಕವಾಗಿ ಬಂದು, ತನ್ನನ್ನು ಪರವಶಪಡಿಸಿಕೊಂಡಿರುವ ದುರ್ಗುಣವನ್ನು ನಾಶಮಾಡಲು ಸ್ವಲ್ಪವೂ ಬೇಸರಪಡದೆ ಪ್ರಯತ್ನಮಾಡುತ್ತಾನೆ. ತನ್ನ ಉನ್ನತಿಯನ್ನು ನೋಡಿಕೊಳ್ಳುವಂತೆ ಸಮಾಜದ ಸೇವೆಗೂ ವಾಸ್ತವವಾಗಿ ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ತಾನು ಬದ್ಧಕಂಕಣನಾಗಿರುತ್ತಾನೆ. ಮುಖ್ಯವಾಗಿ ಜ್ಞಾನಿಯಲ್ಲಿ ತ್ಯಾಗ, ಸಮಾಜಸೇವೆ, ಪರಸಮೃದ್ಧಿ, ಪರರ ದೋಷಗಳಲ್ಲಿಯೂ ಗುಣಗ್ರಹಣ ಮುಂತಾದ ಸದ್ಗುಣಗಳು ಪ್ರಕಾಶಿಸುತ್ತವೆ. ಒಟ್ಟಿನಲ್ಲಿ ಜ್ಞಾನಿ ತನ್ನ ಜೀವನವನ್ನು ಸದುಪಯೋಗ ಪಡಿಸುತ್ತಾನೆ. ಉದಾತ್ತವಾದ ದೃಷ್ಟಿ ಸುವ್ಯವಸ್ಥಿತವಾದ ಮಾರ್ಗ ಮತ್ತು ಶಾಶ್ವತವೂ ಅಮೋಘವೂ ಆದ ಫಲ—ಇವುಗಳೇ ದಾರ್ಶನಿಕನನ್ನು ಆಕರ್ಷಿಸುವ ಅಂಶಗಳು. ಆದ್ದರಿಂದಲೇ ಪಾಶ್ಚಾತ್ಯ ದಾರ್ಶನಿಕರೂ **ದಾರ್ಶನಿಕರೇ ನಾಯಕರಾಗಿ ಜನರನ್ನು ಕಾಪಾಡುವುದು ಮೇಲು** ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇಂಥ ನಾಯಕರನ್ನೇ ನಮ್ಮ ಪೂರ್ವಿಕರು **ರಾಜರ್ಷಿ**ಗಳೆಂದು ಭಾವಿಸಿದ್ದಿರಬಹುದು.

ಮುಗಿದುದು.

---

## ಕರ್ನಾಟಕ ಏಕೀಕರಣ

[ಕಳೆದ ಏಪ್ರಿಲ್ ತಿಂಗಳಲ್ಲಿ ಸೊಲ್ಲಾಪುರದಲ್ಲಿ ನೆರೆದಿದ್ದ ಮಹಿಳಾ ಪರಿಷತ್ತಿನಲ್ಲಿ ಶ್ರೀಮತಿ ಶಾಂತಾದೇವಿ ಮಳಿಮಠ ಅವರು ಮಾಡಿದ ಭಾಷಣದ ಸಾರಾಂಶ]

ಕರ್ನಾಟಕ ಇನ್ನೂ ಅಖಂಡವಾದ ಪ್ರಾಂತವಾಗದಿರುವುದರಿಂದ ಎಲ್ಲಾ ವಿಧದಿಂದಲೂ ನಮಗೆ ತೊಂದರೆಗಳಿದ್ದು ಕರ್ನಾಟಕ ಅವನತಿ ಹೊಂದಿರುತ್ತದೆ. ಪ್ರಾಂತೀಯ ಸರಕಾರದ ಪ್ರಭುತ್ವವಿದ್ದ ನೆರೆ ಪ್ರದೇಶಗಳಿಗೆ ಸಿಗತಕ್ಕ ಸೌಕಾರ್ಯಗಳಾವವೂ ನಮಗೆ ಇಲ್ಲಿ ಸಿಗುತ್ತಿಲ್ಲ. ಮುಂಬಯಿ ಮತ್ತು ಮದ್ರಾಸ ಇಲಾಖೆಗಳಲ್ಲಿನ ಕರ್ನಾಟಕದ ಭಾಗ ಆಯಾ ರಾಜಧಾನಿಯಿಂದ ಬಹಳ ದೂರವಿರುತ್ತದೆ. ಆದ್ದರಿಂದ ಕನ್ನಡಿಗರ ಕಷ್ಟ ನಷ್ಟಗಳೂ, ಅನವು ಆಪತ್ತುಗಳೂ ರಾಜ್ಯಸೂತ್ರ ವಹಿಸಿದವರಿಗೆ ಕಣ್ಣಿಗೆ ಬೀಳುತ್ತಿಲ್ಲ. ನಾವಾಗಿಯೇ ಕೂಗಿಕೊಂಡರೂ ನಮ್ಮ ಗೋಳಿನ ಕೂಗು ಅವರ ಕಿವಿಗೆ ಬೀಳುತ್ತಿಲ್ಲ. ಮುಂಬಯಿ ಮತ್ತು ಮದ್ರಾಸು ಇವೆರಡೂ ಪ್ರಾಂತಗಳಲ್ಲಿ ಕನ್ನಡಿಗರು ಅಲ್ಪ ಸಂಖ್ಯಾಕರಾಗಿರುತ್ತಾರೆ. ಆದ್ದರಿಂದ ಅವರ ಹೇಳಿಕೆಗೆ ಎಲ್ಲಿಯೂ ಮನ್ನಣೆ ಇಲ್ಲ. ಅವರ ಬೇಡಿಕೆಗಳು ಮೂಲೆಗೊತ್ತಲ್ಪಡುತ್ತಿವೆ.

ಮುಂಬಯಿ ಸರಕಾರದವರು ೭೦–೮೦ ವರ್ಷಗಳ ಹಿಂದೆಯೇ ಮುಂಬಯಿಯಲ್ಲಿ ಹಾಗೂ ಪುಣೆಯಲ್ಲಿ ಕಾಲೇಜುಗಳನ್ನು ಸ್ಥಾಪಿಸಿದರು. ಅನಂತರ ಕೆಲವು ದಿನಗಳಲ್ಲಿ ಗುಜರಾಥಕ್ಕೂ ಸಿಂಧಕ್ಕೂ ಕಾಲೇಜುಗಳು ಕೊಡಲ್ಪಟ್ಟವು. ಆದರೆ ಕರ್ನಾಟಕಕ್ಕೆ ಮಾತ್ರ ಕಾಲೇಜು ಮುಂದೆ ಎಷ್ಟೋ ದಿನಗಳವರೆಗೆ ದೊರೆಯಲಿಲ್ಲ. ಕನ್ನಡಿಗರು ೫೦ ವರ್ಷಗಳ ವರೆಗೆ ಕೂಗಿಕೊಂಡರೂ ಸರಕಾರ ಗಮನಿಸಲಿಲ್ಲ. ಕೊನೆಗೆ ಕರ್ನಾಟಕಕ್ಕೆ ಕಾಲೇಜು ಕೊಡಬೇಕಾದರೆ ಕನ್ನಡಿಗರು ಎರಡು ಲಕ್ಷ ರೂಪಾಯಿಗಳನ್ನು ಕೊಡಬೇಕೆಂದು ಸರಕಾರದವರು ಕರಾರು ಹಾಕಿದರು. ಬೇರೆ ಯಾರಿಗೂ ಎಂದೂ ಇಂಥಾ ಕರಾರು ಹಾಕಲ್ಪಟ್ಟಿಲ್ಲ. ಇದೊಂದೇ ಮಾತಿನಿಂದ ಕರ್ನಾಟಕದ ಬಗ್ಗೆ ಸರಕಾರದಲ್ಲಿ ಇದ್ದ ದುರ್ಲಕ್ಷ್ಯವೂ ಅನಾದರವೂ ಸ್ಪಷ್ಟವಾಗಿ ಕಾಣುವವು.

ಹೀಗೆ ೨೦ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಮೊದಲನೆ ಆರ್ಟ್ಸ್ ಕಾಲೇಜು ಪ್ರಾರಂಭವಾಯಿತು. ಆದರೆ ಬೇರೆ ವಿದ್ಯೆಯ ಕಾಲೇಜುಗಳು ಕರ್ನಾಟಕದಲ್ಲಿ ಒಂದೂ ಇರುವುದಿಲ್ಲ. ವ್ಯಾಪಾರಿ ಕಾಲೇಜು, ವೈದ್ಯಕೀಯ ಕಾಲೇಜು, ಶಾಸ್ತ್ರೀಯ ಕಾಲೇಜು, ಚಿತ್ರಕಲಾ ವಿದ್ಯಾಲಯ ಮೊದಲಾದವುಗಳೆಲ್ಲ ಮುಂಬಯಿಯಲ್ಲಿ ಉಂಟು. ಒಕ್ಕಲತನದ ಕಾಲೇಜು, ವೈದ್ಯಕೀಯ ಶಾಲೆ ಎಂಜಿನಿಯರಿಂಗ್ ಕಾಲೇಜು ಮೊದಲಾದವುಗಳು ಪುಣೆಯಲ್ಲಿ ಇವೆ. ಆದ್ದರಿಂದ ಈ ಯಾವುದೇ ವಿದ್ಯೆಯನ್ನು ಕಲಿಯಬೇಕಾದಲ್ಲಿ ಕನ್ನಡಿಗರು ಪುಣೆಗೆ ಇಲ್ಲವೆ ಮುಂಬಯಿಗೆ ಹೋಗಬೇಕಾಗುತ್ತದೆ. ಹಾಗೆ ಮಾಡಲು ಹೆಚ್ಚು ಹಣವೂ ಶ್ರಮವೂ ಬೇಕು. ಹೀಗಾಗಿ ತಕ್ಕ ಸೌಕರ್ಯಗಳು ಇಲ್ಲದ್ದರಿಂದ ನಮ್ಮಲ್ಲಿ ಸಾಕಷ್ಟು ಮಂದಿ ವಿದ್ಯಾವಂತರಾಗುತ್ತಿಲ್ಲ.

ಇದೇ ಮೇರೆಗೆ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೂ ತಕ್ಕ ಪ್ರೋತ್ಸಾಹನೆಯಿಲ್ಲ. ಗುಜರಾಥ, ಮಹಾರಾಷ್ಟ್ರ ಭಾಗಗಳಲ್ಲಿ ಯಾವ ಪ್ರಮಾಣದಿಂದ ಹೆಣ್ಣುಮಕ್ಕಳ ಶಾಲೆಗಳು ಇರುವುವೋ ಅದರ ಒಂದೆರಡಾಂಶ ಭಾಗದ ಪ್ರಮಾಣದ ಶಾಲೆಗಳು ಕೂಡಾ ಕರ್ನಾಟಕದಲ್ಲಿಲ್ಲ. ಹೀಗಾಗಿ ಅದರ ಶಿಕ್ಷಣಕ್ಕೆ ತಕ್ಕ ಪ್ರೋತ್ಸಾಹನೆಯಿಲ್ಲ. ಇದೇ ಮೇರೆಗೆ ಮದ್ರಾಸು ಕನ್ನಡಿಗರ ದುರವಸ್ಥೆಯೂ ಉಂಟು. ಹಾಗೆಯೇ ಈ ಸೊಲ್ಲಾಪುರದಲ್ಲಿ ಅರ್ಧಕ್ಕರ್ಧ ಅಂದರೆ ಸುಮಾರು ೬೦೦೦೦ ಸಾವಿರ ಜನ ಕನ್ನಡ ಮಾತಾಡುವವರು ಇದ್ದಾರಾದರೂ ಈ ಊರಲ್ಲಿ ಒಂದೂ ಕನ್ನಡ ಶಾಲೆಯಿಲ್ಲ. ಈ ತಾಲೂಕಿನಲ್ಲಿ ೮೦ ಅಚ್ಚಗನ್ನಡ ಹಳ್ಳಿಗಳಿದ್ದಾಗ್ಯೂ ಒಂದರಲ್ಲಿಯೂ ಕನ್ನಡ ಶಾಲೆಯಿಲ್ಲ.

ಪೂರ್ವಕಾಲದಿಂದಲೂ ಕರ್ನಾಟಕ ಬಹು ಸಿರಿವಂತ ನಾಡೆಂದು ಹೆಸರು ಪಡೆದಿದೆ. ಇಲ್ಲಿಯ ಭೂಮಿ ಬಹು ಬೆಳೆಯುಳ್ಳದ್ದು; ಇದನ್ನು "ನಂದನವನ"ವೆಂದು ಹಿಂದಿನ ಕವಿಗಳು ಬಣ್ಣಿಸಿದ್ದಾರೆ. ಮೊನ್ನೆ ಈ ನಾಡಿಗೆ ಬಂದಾಗ ನಾಮದಾರ ಖೇರ ಮಂತ್ರಿಗಳು ಇಟಲಿ ದೇಶ ಯೂರೋಪಿನ ತೋಟವೆಂದು ಹೆಸರುಪಡೆದಂತೆ **ಕರ್ನಾಟಕ ಹಿಂದೂಸ್ಥಾನದ ತೋಟ**ವೆಂದು ಹೇಳಿದರು. ಕರ್ನಾಟಕದ ಹತ್ತಿ ಹೆಸರಾದದ್ದು. ಇದಕ್ಕೆ ಕುಮಟಾ ಹತ್ತಿಯೆಂದು ಕರೆಯುವರು ಏಕೆಂದರೆ ರೈಲ್ವೆ ಗಾಡಿಗಳು ಇಲ್ಲದ ಕಾಲಕ್ಕೆ ಇಲ್ಲಿಯ ಹತ್ತಿ ಕುಮಟಾ ಬಂದರದ ಮುಖಾಂತರವಾಗಿ ವಿಲಾಯತಿಗೆ ಹೋಗುತ್ತಿತ್ತು. ಈಗ ಆ ಬಂದರವೇ ಮುಗ್ಗಿ ಹೋಗಿದೆ; ಅಲ್ಲಿಯ ವ್ಯಾಪಾರ ಕುಗ್ಗಿ ಹೋಗಿದೆ. ಅಲ್ಲಿಗೆ ಹತ್ತಿ ಮಾತ್ರವಲ್ಲದೆ ಬೇರೆ ಯಾವ ಸರಕೂ ಹೋಗುವದಿಲ್ಲ. ಅದನ್ನೆಲ್ಲ ರೇಲ್ವೆ ಮುಂಬಯಿಗೆ ಎಳದೊಯ್ಯುತ್ತಿದೆ. ಹೀಗೆ ರೇಲ್ವೆಯ ಸಹಾಯದಿಂದಲೂ ಬಂದರವಾಗಿ ಕಟ್ಟಲ್ಪಟ್ಟದ್ದರಿಂದಲೂ, ರಾಜಧಾನಿಯಾಗಿದ್ದರಿಂದಲೂ ಮೊದಲೊಂದು ಕೊಂಪೆಯಾಗಿದ್ದ ಮುಂಬಯಿ ಎಂಬ ಹಳ್ಳಿ ಸಂಪತ್ತಿನಲ್ಲಿ ಇಂದ್ರಪುರವನ್ನು ತಗ್ಗಿಸುವ ಪಟ್ಟಣವಾಗಿದೆ. ಸಿರಿವಂತಿಕೆ ಅಲ್ಲಿಯೇ ನೆಲಸಿದೆ.

ಇದಕ್ಕೆ ಪ್ರತಿಯಾಗಿ ಕರ್ನಾಟಕ ಅವರ ನಗರಗಳೂ ಬಡವಾಗ ಹತ್ತಿವೆ. ವಿಜಯನಗರದ ಅರಸರ ಕಾಲದ ಸಿರಿವಂತಿಕೆಯೂ ವೈಭವವೂ ವ್ಯಾಪಾರವೂ ಪುಸ್ತಕಗಳ ವರ್ಣನೆಯಲ್ಲಿ ಮಾತ್ರ ಉಳಿದಿವೆ. ವಿಜಯಪುರ ವಿಜಯನಗರಗಳು ಹಾಳು ಪಟ್ಟಣಗಳಾಗಿವೆ. **ವಿಜಯನಗರದ ಅರಸರ ಕಾಲದಲ್ಲಿ ಕರ್ನಾಟಕಕ್ಕೆ ೨೦೦ ಬಂದರುಗಳಿದ್ದವಂತೆ.** ಈಗ ಒಂದಾದರೂ ಇರಬಾರದೇ? ಕಾರವಾರ, ಭಟಕಲ್, ಮಂಗಳೂರು ಮೊದಲಾದವುಗಳು ಬಂದರವಾಗಲಿಕ್ಕೆ ಮುಂಬಯಿಗಿಂತ ಎಷ್ಟೋ ಪಾಲು ಮೇಲಾದವಿರುವವೆಂದು ಬಲ್ಲವರು ಹೇಳುತ್ತಾರೆ. ಹೀಗಿದ್ದೂ ನಮಗೆ ಒಂದೂ ಬಂದರು ಇಲ್ಲ. ಅಲ್ಲಿಯವರೆಗೆ ರೇಲ್ವೆಯೂ ಇಲ್ಲ. ಹೀಗೆ ಆದ್ದರಿಂದ ಉತ್ತರ ಕರ್ನಾಟಕದ ವ್ಯಾಪಾರವೆಲ್ಲ ಮಂಬಯಿಯ ಕಡೆಗೆ ತಿರುಗಿಸಲ್ಪಟ್ಟದೆ. ವ್ಯಾಪಾರದ ಕೇಂದ್ರವು ಮುಂಬಯಿ; ವ್ಯಾಪಾರವೂ ಸಿರಿಯೂ ಮುಂಬಯಿಗೆ; ಸಿರಿವಂತರೆಲ್ಲ ಮುಂಬಯಿಯವರು. ಹೀಗಾಗುತ್ತ ಬಂದಿರುವದು ರೇಲ್ವೆ, ಬಂದರ, ರಾಜಧಾನಿ ಮೊದಲಾದ ಕೃತ್ರಿಮ ಉಪಾಯಗಳಿಂದ. ಕರ್ನಾಟಕದವರು ಹೀಗೆ ವ್ಯಾಪಾರದ ಸೂತ್ರವನ್ನು ಕಳೆದುಕೊಂಡದ್ದು ದೊಡ್ಡ ತಪ್ಪು. ಇದೆಲ್ಲ ಆದುದಕ್ಕೆ ಈಗಿನ ಕೃತ್ರಿಮ ಪ್ರಾಂತ ರಚನೆಯೇ ಕಾರಣವೆಂದು ಎಲ್ಲರಿಗೂ ಚೆನ್ನಾಗಿ ಅರಿವಾಗಿದೆ. ಇದನ್ನೆಲ್ಲ ಪರಿಹರಿಸಲು ಕರ್ನಾಟಕ ಏಕೀಕರಣವೇ ಬಹು ದೊಡ್ಡ ಉಪಾಯ.

ಕರ್ನಾಟಕ ಮಹಿಳೆಯರು ಏಕೀಕರಣ ಕಾರ್ಯದಲ್ಲಿ ಇನ್ನೂ ಮೌನರಾಗಿಯೇ ಇದ್ದಾರೆ. ಅವರೆಲ್ಲ ಎಚ್ಚೆತ್ತು ಈ ಕಾರ್ಯಕ್ಕೆ ಕೈಗೊಟ್ಟು ಯಶಸ್ವಿಯಾಗಿ ಮಾಡಬೇಕೆಂದು ನನ್ನ ಪ್ರಾರ್ಥನೆ. ನಾಡಿನ

ನುಡಿಯನ್ನು, ಸಂಸ್ಕೃತಿಯನ್ನು ಬೆಳೆಸುವವರೂ ಉಳಿಸುವವರೂ ಅವುಗಳನ್ನು ತಿಳಿಸುವವರೂ, ಕಾಪಾಡುವವರೂ ಆ ನಾಡಿನ ಹೆಂಗಸರೇ. ಪರನಾಡಿನವರೊಡನೆ ಬಳಕೆಯಿಂದ ಗಂಡಸರು ತಮ್ಮ ನುಡಿಯಲ್ಲಿ ಪರಭಾಷೆಯನ್ನು ಬೆಳಸಲು ಮೊದಲುಮಾಡುವರು. ಹೊಸ ಸಂಸ್ಕೃತಿಯ ಮಿಂಚಿಗೆ ಬೆರಗಾಗಿ, ಅದರ ಬೆನ್ನುಹತ್ತಲೆಳಿಸುವುದು ಗಂಡಸರ ಸ್ವಭಾವ. ಅಂತೆಯೇ ಗಂಡಸರು ಇಂಗ್ಲಿಷ್ ಕಲಿತ ಕೂಡಲೇ ಕನ್ನಡ ಮಾತನಾಡುವಾಗ ಸಹ ಸುಮ್ಮಸುಮ್ಮನೆ ಇಂಗ್ಲಿಷ್ ಬೆರಿಸುವರು. ಮತ್ತೂ ಬೂಟು, ಪಾಟಲೋನ, ನೆಕ್‌ಟೈ, ಹ್ಯಾಟ್ ಮೊದಲಾದವುಗಳನ್ನು ಧರಿಸಿ, ಪಾಶ್ಚಾತ್ಯರಾಗಲೆಳಸುವರು. ಹೆಂಗಸರು ಹೀಗೆ ಎಂದೂ ಮಾಡರು. ವಿದುಷಿಯರಾಗಿ ವಿಲಾಯತಿಯಿಂದ ಬಂದಾಗ ಸಹ ಯಾವ ಹೆಂಗಸರೂ ತಮ್ಮ ಸೀರೆಯನ್ನು ಬಿಟ್ಟು, ಝುಗಾ ತೊಟ್ಟಿಲ್ಲ. ಅಥವಾ ಹ್ಯಾಟ್ ಹಾಕಿಲ್ಲ. ಹೀಗೆ ಶೀಲವನ್ನೂ, ಸಂಸ್ಕೃತಿಯನ್ನೂ ಕಾಪಾಡುವದರಲ್ಲಿ ಗಂಡಸರಿಗಿಂತ ಹೆಂಗಸರೇ ಮೇಲು. ಅದರಂತೆಯೇ ನುಡಿಗೂ ಅವರೇ ರಕ್ಷಕರು. ಆದುದರಿಂದ ಕರ್ನಾಟಕ ಏಕೀಕರಣ ಚಳವಳಿಯನ್ನು ಮುಂದುವರಿಸಲು ಗಂಡಸರಿಗಿಂತ ಹೆಂಗಸರು ಹೆಚ್ಚು ಸಮರ್ಥರು. ಇದೇ ಸೊಲ್ಲಾಪುರದ ಪರಿಸ್ಥಿತಿಯನ್ನು ನೋಡಿರಿ. ಶ್ರೀ ಬಸವೇಶ್ವರನ ಕಾಲದಲ್ಲಿ ಇದು ಅಚ್ಚಗನ್ನಡ ನಾಡು. ಸೊನ್ನಲಗಿ, ಸೊನ್ನಲಾಪುರ ಎಂಬ ಹೆಸರುಗಳಿಂದ ಪ್ರಸಿದ್ಧಿ ಹೊಂದಿತ್ತು. ಅನೇಕ ಕನ್ನಡ ಪಂಡಿತರೂ ಸಿದ್ಧರಾಮೇಶ್ವರ ಮೊದಲಾದ ಕನ್ನಡ ಮಹಿಮರೂ ಇಲ್ಲಿ ನೆಲಸಿದರು. ಈಗ ಅದೇ ಊರು ಮುಂಬಯಿ ಅಧೀನಕ್ಕೆ ಒಳಪಟ್ಟದ್ದರಿಂದ ಕರ್ನಾಟಕವನ್ನೂ ಕನ್ನಡವನ್ನೂ ಮರೆಯಿತು. ವ್ಯಾಪಾರಕ್ಕಾಗಿ, ವಿದ್ಯೆಗಾಗಿ, ಕೋರ್ಟುಗಳಿಗಾಗಿ ಮುಂಬೈ, ಪುಣೆಗಳ ಬಳಕೆ ಹೆಚ್ಚಾಯಿತು. ಮರಾಟಿ ಬಳಕೆಯಲ್ಲಿ ಬರಹತ್ತಿತು. ಕಲಿತವರಾದ ಮರಾಟಿಗರು ಮೊದಲು ಸರಕಾರಿ ಅಮಲದಾರರಾಗಿ ಬಂದು, ತಮ್ಮ ಭಾಷೆಯನ್ನು ಒತ್ತಾಯದಿಂದ ನಮ್ಮಮೇಲೆ ಹೇರಿದರು. ಊರಲ್ಲೆಲ್ಲ ಮರಾಟಿ ಶಾಲೆಗಳನ್ನು ಇಟ್ಟು, ಕನ್ನಡದ ಬಳ್ಳಿಯ ಕುಡಿಯನ್ನೇ ಚಿವಟಿದರು. ಶಾಲೆಗಳಲ್ಲಿಯೂ ಕೋರ್ಟು ಕಚೇರಿಗಳಲ್ಲಿಯೂ ನಮ್ಮಮೇಲೆ ಒತ್ತಾಯದಿಂದ ಮರಾಟಿಯನ್ನು ಹೇರಿದರು. ಹೀಗಾಗಿ ನಮ್ಮ ಗಂಡಸರೆಲ್ಲ ಮರಾಟಿಯನ್ನು ಕಲಿಯಬೇಕಾಯಿತು. ಹೀಗೆ ದಿನದಿನಕ್ಕೆ ಕನ್ನಡಿಗರಿದ್ದವರೆಲ್ಲ ಅನಿವಾರ್ಯವಾಗಿ ಮರಾಟಿ ದೀಕ್ಷೆಯನ್ನು ಹೊಂದುತ್ತಾ ಬಂದಿದ್ದಾರೆ. ಒಂದು ಕಾಲಕ್ಕೆ ಪೂರ್ಣ ಕನ್ನಡವಾಗಿದ್ದ ಸೊಲ್ಲಾಪುರ ಈಗ ಅರೆಗನ್ನಡವೋ ಕೊರೆಗನ್ನಡವೋ ಆಗಿ ಉಳಿದಿದೆ. ಇದೇ ಸ್ಥಿತಿ ಸಾಗಿದರೆ ಈ ಊರು ಕನ್ನಡವಿತ್ತೆಂದು ಇತಿಹಾಸ ಬಲ್ಲವರು ಮಾತ್ರ ಹೇಳುವ ಮಾತಾಗುವುದು. ಈ ದುಃಸ್ಥಿತಿಯನ್ನು ಹೋಗಲಾಡಿಸಲು ಇಲ್ಲಿಯ ಹೆಂಗಸರು ಯತ್ನಮಾಡಬೇಕು. ಇದು ಅವರಿಂದಲೇ ಸಾಧ್ಯ. ಮೇಲೆ ಹೇಳಿದಂತೆ ಗಂಡಸರೆಲ್ಲ ಮರಾಟಿಯನ್ನು ಕಲಿತು ಅದನ್ನೇ ಬಳಕೆಯ ಮಾತನ್ನಾಗಿ ಮಾಡಿಕೊಂಡವರಾದರೂ ಅವರ ಮನೆಯ ಮಾತು ಕನ್ನಡವೇ, ಹೆಂಗಸರ ಬಳಕೆಯ ಮಾತೂ ಕನ್ನಡವೇ ಎಂದು ಕೇಳಬಲ್ಲೆ. ಹೀಗೆ ಕನ್ನಡದ ಅಭಿಮಾನಿಗಳೂ ಕನ್ನಡವನ್ನು ಕಾಪಾಡಿ, ಅದರ ಜೀವ ಉಳಿಸಿದವರೂ ಆದ ಹೆಂಗಸರು ಅದನ್ನು ಬೆಳಸುವ ನಿರ್ಧಾರವನ್ನು ಮತ್ತೆ ಮಾಡಬೇಕು. ಕನ್ನಡದ ಅಭಿಮಾನವನ್ನು ಗಂಡಸರಲ್ಲಿಯೂ ತುಂಬಬೇಕು. ತಮ್ಮ ಮಕ್ಕಳಲ್ಲಿ ಚಿಕ್ಕಂದಿನಿಂದ ಕನ್ನಡದ ಪ್ರೇಮವನ್ನು ಬಿತ್ತಿ, ಕರ್ನಾಟಕದ ಅಭಿಮಾನಿಗಳನ್ನಾಗಿ ಮಾಡಬೇಕು. ಅವರಿಗೆ ಕನ್ನಡದಲ್ಲಿಯೇ ಶಿಕ್ಷಣ ಕೊಡಬೇಕು. ಈ ಬಗ್ಗೆ ಶಾಲೆಗಳು ಬೇಕೆಂದು ಹಟಹಿಡಿದು ಸತ್ಯಾಗ್ರಹ ಮಾಡಬೇಕು. ನಮ್ಮ ಜನರಿಗೆ ಆವರಿಸಿದ ಮರಾಟಿ ಮೋಹವನ್ನು ಬಿಡಿಸಬೇಕು. ಇದಕ್ಕೆ ಕನ್ನಡ ಪ್ರೇಮವೇ ಸರಿಯಾದ ಅಂಜನ. ಕರ್ನಾಟಕ ಏಕೀಕರಣದ ಮಹತ್ವವನ್ನೂ ಅದರಿಂದಾಗುವ ಲಾಭಗಳನ್ನೂ ನಮ್ಮ ಜನರು ಅರಿಯುವಂತೆ ಮಾಡಬೇಕು. ಇಂದಿಲ್ಲ ನಾಳೆ ಕರ್ನಾಟಕ ಮಹಾರಾಷ್ಟ್ರಗಳು ಬೇರೆ ಬೇರೆ ಪ್ರಾಂತಗಳಾಗುವದು ಖಂಡಿತ. ಆಗ ಗಡಿನಾಡಿನಲ್ಲಿದ್ದ ಸೊಲ್ಲಾಪುರವನ್ನು ಇತರರೂ ಬೇಡಬಹುದು. ಅದಕ್ಕೆ ಸೊಲ್ಲಾಪುರದವರ ಉತ್ತರವೇನು? ಮಹಾರಾಷ್ಟ್ರದ ಮೂಲೆಯಚುಂಗಾಗಿ ಹೋಗಬಯಸುವುದೋ? ಅಥವಾ ಕರ್ನಾಟಕದ ಒಳಿಯೂರಾಗಿ ಮೆರೆಯಬಯಸುವುದೋ? ನೀವೇ ಅರಿಸಿರಿ. ಏಕೀಕರಣ ಕಾರ್ಯದಲ್ಲಿ ತೊಡಗಿದ ಗಂಡಸರಿಗೆ ಮಹಿಳೆಯರು ಸಹ ನೆರವಾದರೆ ಈ ಕಾರ್ಯ ಬೇಗನೆ ಕೈಗೂಡುವುದರಲ್ಲಿ ಸಂದೇಹವಿಲ್ಲ. ಹೆಂಗಸರೂ ಗಂಡಸರೂ ಒಂದೇ ಮನಸ್ಸಿನಿಂದ ಈ ಆಂದೋಲನವನ್ನು ಮುಂದೂಡಲು ಮಾಡಿದರೆ ತೀವ್ರದಲ್ಲಿಯೇ ಹರಿದು ತುಣುಕಾದ ಕರ್ನಾಟಕ ಮರಳಿ ಒಂದು ನಾಡಾಗಿ, ಕನ್ನಡ ತಾಯಿ ಮತ್ತೆ ತನ್ನ ವೈಭವವನ್ನು ಪಡೆಯುವಳೆಂದೂ ಕನ್ನಡ ನಾಡು ಹಿಂದೂ ದೇಶದಲ್ಲಿ ಶ್ರೇಷ್ಠತೆಯನ್ನು ಪಡೆಯುವುದೆಂದೂ ನಾನು ನಂಬುತ್ತೇನೆ.

## ದಿವಾಕರರು ದಿಲ್ಲಿಯಲ್ಲಿ ಕಂಡ ದೃಶ್ಯಗಳು

### ಮರಾಠಿಗರಿಂದ ಕನ್ನಡಿಗರು ಕಲಿಯಬೇಕಾದ ಪಾಠ

ಶ್ರೀಮಾನ್ ರಂ. ರಾ. ದಿವಾಕರರು 'ಕರ್ಮವೀರ' ಪತ್ರಿಕೆಯಲ್ಲಿ ತಮ್ಮ 'ಉತ್ತರ ಭಾರತ ಪ್ರವಾಸ'ದ ಅನುಭವವನ್ನು ಲೇಖನಮಾಲೆಯಾಗಿ ಪ್ರಕಟಿಸುತ್ತಿದ್ದಾರೆ. ೧೦-೬-೫೦ರ ಸಂಚಿಕೆಯಲ್ಲಿ ಅವರು ದಿಲ್ಲಿಯಲ್ಲಿ ನೆಲಸಿರುವ ಕನ್ನಡಿಗರ ವಿಚಾರವಾಗಿ ಕೆಲವು ಮಾತುಗಳನ್ನು ಬರೆದಿದ್ದಾರೆ. ಅವನ್ನು 'ಕನ್ನಡ ನುಡಿ'ಯ ವಾಚಕರ ಅವಗಾಹನೆಗಾಗಿ ಇಲ್ಲಿ ಕೊಟ್ಟಿದೆ:—

ದಿಲ್ಲಿಯಲ್ಲಿ ದೊಡ್ಡ ಕನ್ನಡಿಗರೆಂದರೆ ಸರ್ ಗುರುನಾಥ ಬೇವೂರರು. ಅವರನ್ನು ಭೆಟ್ಟಿಯಾಗಿದ್ದೆ. ಹಾಗೆ ಹುಡುಕಾಡಿದರೆ ಅಲ್ಲಿ ಕರ್ನಾಟಕದವರು, ವಿಶೇಷವಾಗಿ ಮೈಸೂರವರು ನೂರಾರುಜನರು ಸಿಗುವರು. ಆದರೆ ನಮ್ಮ ದುರ್ದೈವದಿಂದ ಅವರಲ್ಲಿ ಬಹುಜನರು ಕರ್ನಾಟಕದ ಅರಿವನ್ನು ಕಳಕೊಂಡು ನಮಗೆ ಎರವಾದವರು. "**ಸೌಥ್ ಇಂಡಿಯನ್ಸ್**"ರಲ್ಲಿ ಅವರು ಕೂಡುವರು. **ಕರ್ನಾಟಕ ಸಂಘ**ವೊಂದನ್ನು ಮಾಡಲು ಪ್ರಯತ್ನಗಳು ಮಾಡಲ್ಪಟ್ಟವೆಂದೂ ಅವು ಯಶಸ್ವಿಯಾಗಲಿಲ್ಲವೆಂದೂ ನನಗೆ ಹೇಳಿದರು. ಈ ವಿಷಯದಲ್ಲಿ ಮರಾಠಿಗರು ಗಟ್ಟಿಗರು. ಹಿಂದುಸ್ತಾನದ ಯಾವುದೇ ದೊಡ್ಡ ಪಟ್ಟಣಕ್ಕೆ ನೀವು ಹೋದರೂ ಅಲ್ಲಿ ಒಂದು **ಮಹಾರಾಷ್ಟ್ರ ಮಂಡಳ** ಇದ್ದೇ ಇರುವುದು. ಕೇವಲ ಅಭಿಮಾನದ ದೃಷ್ಟಿಯಿಂದ ಸಹ ಅದಕ್ಕೆ ಮಹತ್ವವಿದೆ. ಅಷ್ಟೇಅಲ್ಲ. ಮಹಾರಾಷ್ಟ್ರದಿಂದ ಅಲ್ಲಿ ಹೋಗುವ ಮರಾಠಿಗರಿಗೆ ಅದೊಂದು ಉಪಯುಕ್ತ ಸಂಸ್ಥೆಯಾಗುತ್ತಿದೆ. ಅಲ್ಲಿ ಅವರು ಹೋದಕೂಡಲೆ ಅವರಿಗೆ ಅವಶ್ಯವಿದ್ದ ಎಲ್ಲ ಸೌಕರ್ಯಗಳು ದೊರೆಯುವುವು. ಪರಸ್ಥಳದಲ್ಲಿ ಅಷ್ಟೊಂದು ಅನುಕೂಲತೆಯೆಂದರೆ ಬಹಳ ಉಪಕಾರ. ದಿಲ್ಲಿಯಲ್ಲಿ ಈಗ ಅವರು ಸುಮಾರು ೫೦—೬೦ ಸಾವಿರ ರೂಪಾಯಿ ವೆಚ್ಚಮಾಡಿ ಒಂದು ಸ್ವಂತ ಕಟ್ಟಡವನ್ನು ಕಟ್ಟಸಬೇಕೆನ್ನುವರು. ಇದು ಅವರ ಸಾಹಸ, ಜಿಗಟು, ಅಭಿಮಾನ, ಉಪಯೋಗ ದೃಷ್ಟಿ ಇವುಗಳ ದ್ಯೋತಕ.

## ಕನ್ನಡ ಸುದ್ದಿ

**ಬೆಂಗಳೂರು : ಆರ್ಯ ವಿದ್ಯಾಶಾಲೆಯ ಕನ್ನಡ ಸಂಘ**

ಮೇಲ್ಕಂಡ ಸಂಘದ ಈ ವರ್ಷದ ಆರಂಭಭಾಷಣವನ್ನು ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳು ಮಾಡಿದರು. ಅದೇ ಸಂದರ್ಭದಲ್ಲಿ ಬಸವಣ್ಣನವರ ಭಾವಚಿತ್ರ ಅನಾವರಣೋತ್ಸವವೂ ಅವರ ಹಸ್ತದಿಂದಲೇ ನಡೆಯಿತು.

**ರುದ್ರಪಟ್ಟಣ : ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ವಸಂತ ಸಾಹಿತ್ಯೋತ್ಸವ ಬಹಳ ವಿಜೃಂಭಣೆಯಿಂದ ನಡೆಯಿತು. ಹಾಸನದ ಜಿಲ್ಲಾ ವಿದ್ಯಾಧಿಕಾರಿಗಳಾದ ಶ್ರೀ॥ ಎಸ್. ರಾಮಚಂದ್ರಾಚಾರ್ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ॥ ಮರೂರು ಕೇಶವಯ್ಯನವರು ಮಂಗಳಾಚರಣೆ ನಡಸಿ ಭಾರತ ವಾಚನ ಮಾಡಿದರು. ಸಂಘದ ಉಪಾಧ್ಯಕ್ಷರಾದ ಶ್ಯಾ॥ ರಾಮಸ್ವಾಮಯ್ಯನವರು ನೆರೆದಿದ್ದ ಮಹಾಜನರಿಗೆ ಸ್ವಾಗತ ಕೋರಿದರು. ತರುವಾಯ ಇತರರ ಭಾಷಣಗಳಾದವು. ಶ್ರೀ॥ ಆರ್. ಎಸ್. ಸುಬ್ಬಣ್ಣನವರು ಆಧುನಿಕ ಕವಿತಾ ವಾಚನವನ್ನು ಶ್ರೀ॥ ಆರ್. ಎನ್. ವೆಂಕಟರಮಣಯ್ಯನವರು ಆಧುನಿಕ ನಾಟಕ ವಾಚನವನ್ನೂ ಮಾಡಿದರು. ಅಧ್ಯಕ್ಷರು ವಸಂತ ಸಾಹಿತ್ಯೋತ್ಸವದ ಉದ್ದೇಶವನ್ನೂ ತತ್ವವನ್ನೂ ವಿವರಿಸಿ ಸಂಘಕ್ಕೆ ಶ್ರೇಯಸ್ಸನ್ನು ಕೋರಿದ್ದರು.

**ಭರಮಸಾಗರ : ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಹೊಸದಾಗಿ ಸ್ಥಾಪಿತವಾದ ವಾಚನಾಲಯಕ್ಕೆ ಸ್ಥಳೀಯ ಪ್ರಮುಖರೊಬ್ಬರು ತಮ್ಮ ಮನೆಯಲ್ಲಿ ಒಂದು ಕೊಠಡಿಯನ್ನು ಉಚಿತವಾಗಿ ಕೊಟ್ಟು ಉಪಕಾರ ಮಾಡಿದ್ದಾರೆ. ವಾಚನಾಲಯದ ಸಮಾರಂಭೋತ್ಸವ ಕಳೆದ ಶನಿವಾರ ನಡೆಯಿತು. ಸಂಘದವರು "ಸಾಗರ" ಎಂಬ ಕೈಬರಹದ ಮಾಸ ಪತ್ರಿಕೆಯನ್ನು ನಡಸಿಕೊಂಡು ಬರುತ್ತಿದ್ದಾರೆ.



ಕನ್ನಡ ನಾಡಿನ ಪ್ರಸಿದ್ಧ ಗಮಕಿಗಳಾದ ಗಮಕ ವಿದ್ವಾನ್ ಶ್ಲೋಕ ಸಂಗೀತ ಶ್ರೀ|| ಕಳಲೆ ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ., ಅವರು ಈ ತಿಂಗಳು ೧೬ನೆಯ ತಾರೀಖು ಭಾನುವಾರ ಮಧ್ಯಾಹ್ನ ೧ ಗಂಟೆಗೆ ಮದರಾಸ್ ರೇಡಿಯೋ ಸ್ಟೇಷನ್ ದ್ವಿತೀಯ ವಾರ್ಷಿಕೋತ್ಸವ ಸಮಾರಂಭದಲ್ಲಿ ಕನ್ನಡ ದಾಸರ ಪದಗಳನ್ನು ಹಾಡಲು ಆಹ್ವಾನಿತರಾಗಿರುವರು.

## ಚನ್ನರಾಯಪಟ್ಟಣದಲ್ಲಿ ವಸಂತ ಸಾಹಿತ್ಯೋತ್ಸವ

(ವರದಿ: ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರಿಂದ)

ಕಳೆದ ೮ ಮತ್ತು ೯ನೆಯ ದಿವಸಗಳು ನಮಗೆ ಮಹದುತ್ಸವ: ನಮ್ಮ ಕರ್ನಾಟಕ ಸಂಘದವರು 'ವಸಂತ ಸಾಹಿತ್ಯೋತ್ಸವ'ವನ್ನು ವಿಜೃಂಭಣೆಯಿಂದ ನೆರವೇರಿಸಿದರು. ಬೆಂಗಳೂರಿನ ಸಾರ್ವಜನಿಕ ಮುಖಂಡರೂ ನ್ಯಾಯವಾದಿಗಳೂ ಆದ ಶ್ರೀಯುತ ಬೇಲೂರು ಶ್ರೀನಿವಾಸ ಅಯ್ಯಂಗಾರ್ಯರು ಅಧ್ಯಕ್ಷತೆ ವಹಿಸಿದ್ದರು. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಉತ್ಸವವನ್ನಾರಂಭಿಸಿದರು. ಗಮಕ ವಿದ್ವಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರ ಹೊಸ ಕಾವ್ಯ ವಾಚನ ಭಾರತ ವಾಚನಗಳನ್ನು ಸಹ ಏರ್ಪಡಿಸಲಾಗಿದ್ದಿತು. ಸ್ವಾಗತ ಸಮಿತಿಯವರು ಎಲ್ಲ ಏರ್ಪಾಡುಗಳನ್ನು ಮಾಡಿದ್ದರು. ಬೆಂಗಳೂರಿಂದ ಹಲವು ಮಂದಿ ವಿದ್ವಾಂಸರೂ ಸುತ್ತುಮುತ್ತಣ ಕಡೆಗಳಿಂದ ಅನೇಕ ಜನರೂ ದಯಮಾಡಿ ಉತ್ಸವದಲ್ಲಿ ಭಾಗವಹಿಸಿದ್ದರು.

'ಶ್ರೀ'ಯವರು ಉತ್ಸವಾರಂಭಮಾಡುತ್ತ ತಮ್ಮೊಂದಿಗೆ ವಿಶೇಷವಾಗಿ ಸಹಕರಿಸುತ್ತಿರುವ ಚೆನ್ನರಾಯಪಟ್ಟಣದ ಕರ್ನಾಟಕ ಸಂಘದವರಿಗೆ ತಮ್ಮ ಅಭಿನಂದನೆಗಳನ್ನರ್ಪಿಸಿ, ಪರಿಷತ್ತಿನ 'ಬೆಳ್ಳಿಯ ಹಬ್ಬ'ಕ್ಕೆ ಪೂರ್ಣವಾದ ಬೆಂಬಲ ನೀಡಬೇಕೆಂದು ಬಿನ್ನವಿಸಿ, ಉತ್ಸವ ಯಶಸ್ವಿಯಾಗಲೆಂದು ಹರಸಿದರು. ನಮ್ಮ ಜನ ಸುಸಂಘಟಿತರಾಗಿ ತಮ್ಮ ಬಾಳನ್ನು ಹಸನಾಗಿ ಮಾಡಿಕೊಳ್ಳುವುದು ಇಂದಿನ ನಮ್ಮ ರಾಷ್ಟ್ರದ ಆವಶ್ಯಕತೆಯೆಂದೂ, ಹೀಗೆ ಜನ ಸುಸಂಘಟಿತರಾಗುವಂತೆ ಸಾಹಿತ್ಯ ಮತ್ತು ಧರ್ಮಗಳನ್ನು ಸಾಧನವಾಗಿ ಇಟ್ಟುಕೊಂಡು ದುಡಿಯುವುದು ಪರಿಷತ್ತಿನ ಧ್ಯೇಯವಾಗಿದೆಯೆಂದೂ ಹೇಳಿದರು.

### ಅಧ್ಯಕ್ಷರ ಭಾಷಣ

ಶ್ರೀ|| ಬೇಲೂರ್‌ರವರು ಸ್ಫೂರ್ತಿದಾಯಕವಾಗಿ ಮಾತನಾಡುತ್ತ ಹೀಗೆ ಹೇಳಿದರು:—

"ಪರಿಷತ್ತಿನ ಸೇವಾಕಾರ್ಯವನ್ನು ನಾನು ಮನಸಾರೆ ಹೊಗಳುತ್ತೇನೆ. ದೇಶ ಸೇವಕರಲ್ಲಿ ರಾಜಸೇವಾಸಕ್ತ ಶ್ರೀ|| ಶ್ರೀಕಂಠಯ್ಯನವರು ಅಗ್ರಗಣ್ಯರಾಗಿದ್ದಾರೆಂದು ನಂಬಿದ್ದೇನೆ. ನಮ್ಮ ಸರಕಾರದವರು ಕನ್ನಡ ಭಾಷೆಗೆ ಸಾಕಾದಷ್ಟು ಪ್ರೋತ್ಸಾಹಕೊಡುತ್ತಿಲ್ಲ. ಕನ್ನಡ ನಮ್ಮ ನಾಡಿನ ರಾಜಭಾಷೆ, ರಾಷ್ಟ್ರಭಾಷೆ, ನಮ್ಮ ಮಾತೃಭಾಷೆ. ೧೮೪೩ರಲ್ಲಿ ಭರತಖಂಡದ ವೈಸ್‌ರಾಯರು, ಮೈಸೂರಿನ ಪ್ರಭುಗಳಿಗೆ ತಾವು ಬರೆಯಿಸುವ ಆಜ್ಞಾಪತ್ರಗಳನ್ನು ಮಾತೃಭಾಷೆಯಾದ ಕನ್ನಡದಲ್ಲಿಯೇ ಬರೆಯಿಸಬೇಕೆಂದು ಮಾಡಿದ ಆಜ್ಞೆಯನ್ನು ಮಹಾಜನರ ಗಮನಕ್ಕೆ ತರುತ್ತೇನೆ. ಸರಕಾರದವರು ಕನ್ನಡ ಉಪಾಧ್ಯಾಯರುಗಳಿಗೂ, ಕನ್ನಡಭಾಷೆಯ ಶಾಲೆಗಳಿಗೂ ಸಾಕಾದಷ್ಟು ನೆರವು ಕೊಡುತ್ತಿಲ್ಲ. ಈಗಿನ ನಮ್ಮ ನಾಡಿನಲ್ಲಿ ವಿದ್ಯಾವಂತರ ಸಂಖ್ಯೆಯೇನೂ ಹೆಚ್ಚಾಗಿಲ್ಲ. ಸರಕಾರಿ ಜವಾಬ್ದಾರಿ ಸ್ಥಾನಗಳಲ್ಲಿ ನಮ್ಮ ನಾಡ ನುಡಿಗಳಿಗೋಸ್ಕರ ಹೆಚ್ಚು ಹಣ ವಿನಿಯೋಗವಾಗಬೇಕೆಂದು ಹೇಳತಕ್ಕ ಅಭಿಮಾನಿಗಳಿಲ್ಲದಿರುವುದು ನಮ್ಮ ದುರ್ದೈವ. ಪರಿಷತ್ತು ಸರಕಾರ ಮಾಡದೇ ಇರುವ ಕೆಲಸಗಳನ್ನು ನಡಸುತ್ತಿರುವುದು ಮಹಾಜನರ ಪುಣ್ಯವೆಂದು ಸಾರಿ ಹೇಳುತ್ತೇನೆ. ಸರಕಾರವೂ ಮಹಾಜನರೂ ಪರಿಷತ್ತಿಗೆ ಬೆಂಬಲಕೊಡಬೇಕೆಂದು ಹೇಳುತ್ತೇನೆ. ಸಾರ್ವಜನಿಕ ನಾಯಕರೂ ಕೂಡ ಕನ್ನಡಕ್ಕೆ ಬೆಂಬಲ ಕೊಡುತ್ತಿಲ್ಲ. ಕಾಂಗ್ರೆಸ್ಸಿನವರು ತಮ್ಮ ಚುನಾವಣೆಯ ಘೋಷಣೆಗಳಲ್ಲಿ ಕನ್ನಡದ ಏಳಿಗೆಗೂ ದುಡಿಯುತ್ತೇವೆಂಬ ಆಶಯವನ್ನೇಕೆ ಸೇರಿಸಲ್ಲಿಲ್ಲವೋ ನನಗೆ ಅರ್ಥವಾಗುತ್ತಿಲ್ಲ. ೧೯೩೫ರಷ್ಟು ಹಿಂದೆಯೇ ನಾನೂ ಶ್ರೀಮಾನ್ ಬಿ. ವೆಂಕಟನಾರಣಪ್ಪನವರೂ ಕನ್ನಡದ ವಿಶ್ವಕೋಶ ಮತ್ತು ನಿಘಂಟು ರಚಿಸಲು ಹಣ ನೀಡಬೇಕೆಂದು ಸರಕಾರವನ್ನು ಒತ್ತಾಯಮಾಡಿದೆವು. ನಿಘಂಟಿನ ಕೆಲಸ ನಡೆಯುತ್ತಿರುವುದೆಂದು ಕೇಳುತ್ತೇನೆ. ವಿಶ್ವಕೋಶದ ಗತಿಯೇನಾಯಿತೋ ತಿಳಿಯದು.

ಚೆನ್ನರಾಯಪಟ್ಟಣ ಮಾಡುತ್ತಿರುವ ಕನ್ನಡ ಸೇವೆ ನಿಜವಾದ ದೇಶಸೇವೆ. ಕನ್ನಡ ಸೇವೆ ಯಾವ ಸೇವೆಗೂ ಕಡಮೆಯಲ್ಲ. ನಮ್ಮ ಸಂಸ್ಥಾನದ ಎಲ್ಲ ತಾಲ್ಲೋಕುಗಳಲ್ಲಿಯೂ ಈ ಕಾರ್ಯ ನಡೆದರೆ ನಾವು ನಿಜವಾದ ದೇಶ ಸೇವೆಯನ್ನೆ ಸಗಿದಂತಾಗುತ್ತದೆ.

ನನ್ನ ಮಾನ್ಯಮಿತ್ರರಾದ ಸರ್ ಮಿರ್ಜಾರವರು ದಕ್ಷತೆಯಿಂದ ಸಂಸ್ಥಾನದ ಸರ್ವತೋಮುಖವಾದ ಪ್ರಗತಿಗೆ ದುಡಿಯುತ್ತಿರುವಂತೆ ಕನ್ನಡಕ್ಕೂ ಬೇಕಾದಷ್ಟು ಪ್ರೋತ್ಸಾಹ ಸಹಕಾರಗಳನ್ನು ನೀಡುತ್ತಿದ್ದಾರೆ. ಮುಂದಿನ ರಾಜ್ಯಾಂಗ ರಚನೆಯಲ್ಲಿ ಕನ್ನಡಕ್ಕೆ ಇನ್ನೂ ಹೆಚ್ಚಿನ ಎಲ್ಲ ಬಗೆಯ ಬೆಂಬಲ ಅವರಿಂದ ದೊರಕುವುದೆಂದು ನಂಬಿರುತ್ತೇನೆ."

ರಾತ್ರಿ ೯–೩೦ಕ್ಕೆ ಸಂಘದವರಿಂದ ಮಂಡೋದರೀ ನಾಟಕದ ಅಭಿನಯವಾಯಿತು.

ಮರುದಿನ ಶ್ರೀ|| ದೇವುಡು ಅವರು 'ಕರ್ನಾಟಕ ಸಂಸ್ಕೃತಿ'ಯ ಮೇಲೂ ಶ್ರೀ||ಸಿ.ಆರ್. ಶ್ರೀನಿವಾಸಯ್ಯಂಗಾರ್ಯರು 'ಮೈಸೂರಿನ ಚಕ್ರವರ್ತಿ ಚಿಕ್ಕದೇವರಾಜ ಒಡೆಯರ' ಮೇಲೂ ವಿಚಾರಪರಿಪ್ಲುತವಾದ ಭಾಷಣಮಾಡಿದರು. ಶ್ರೀಮಾನ್ ಸಿ. ಕೃಷ್ಣರವರು ಸ್ವಾಗತಸಮಿತಿಯ ಪರವಾಗಿ ಎಲ್ಲರನ್ನೂ ವಂದಿಸಿದರು. ಸಭೆ ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯೊಡನೆ ಮುಕ್ತಾಯವಾಯಿತು.

ಸಂಘದ ಮತ್ತು ಉತ್ಸವದ ಕಾರ್ಯಕಲಾಪಗಳನ್ನು ಪರಾಮರ್ಶಿಸಿ ಹರ್ಷಿಸಿದ ಶ್ರೀ|| ಬೇಲೂರ್‌ರವರು ೨೫ ರೂ. ಗಳ ಉದಾರದಾನ ನೀಡಿದರು.

---

## ಕನ್ನಡ ಸುದ್ದಿ

**ಬೆಂಗಳೂರು: ಸಾಕ್ಷರತಾ ಪ್ರಚಾರ ಸಭೆ**

ವಿಶ್ವವಿದ್ಯಾನಿಲಯದ ಸೆಟ್ಲ್‌ಮೆಂಟಿನ ಆಶ್ರಯದಲ್ಲಿ ಬೆಂಗಳೂರು ಇಂಟರ್‌ಮೀಡಿಯಟ್ ಕಾಲೇಜಿನ ಸಭಾ ಮಂದಿರದಲ್ಲಿ ಇದೇ ತಿಂಗಳು ೧೯ನೆಯ ತಾರೀಖು ಬುಧವಾರ, ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾದ ರಾಜಕಾರ್ಯ ಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರವರ ಅಧ್ಯಕ್ಷತೆಯಲ್ಲಿ ಸಾಕ್ಷರತಾ ಪ್ರಚಾರ ಸಭೆ ನಡೆಯುವುದಾಗಿದೆ.

**ವಿಜ್ಞಾನ ವಿಷಯ ಭಾಷಣಗಳು:**

ನಂಜನಗೂಡಿನ ಪ್ಲೀಡರಾದ ಶ್ರೀ|| ಬಿ. ಎಂ. ಶಿವರಾಮಯ್ಯನವರು ಈ ತಿಂಗಳ ಉತ್ತರಾರ್ಧದಲ್ಲಿ ಮೂಡಿಗೆರೆ, ಕುಣಿಗಲು, ಬೇಲೂರು, ನಾಗಮಂಗಲ, ಮೇಲುಕೋಟೆ, ನಂಜನಗೂಡು ಮತ್ತು ಮದ್ದೂರು — ಈ ಕಡೆಗಳಲ್ಲಿ ಮೈಸೂರು ವಿದ್ಯಾಭ್ಯಾಸ ಶಾಖೆಯ ಆಶ್ರಯದಲ್ಲಿ ವಿಜ್ಞಾನವಿಷಯ ಭಾಷಣಗಳನ್ನು ಮಾಡುವವರಾಗಿದ್ದಾರೆ.

**ಬಿಜಾಪುರ: ಬಾನುಲಿಯ ಸಮಾರಂಭೋತ್ಸವ**

ಇಂಡಿಯಾ ಸರಕಾರದ ಅಂಚೆ ಮತ್ತು ತಂತಿ ಇಲಾಖೆಗಳ ಡೈರೆಕ್ಟರ್ ಜನರಲ್‌ರಾದ ಸರ್ ಗುರುರಾವ್ ಬೇವೂರ್ ಅವರು ಬಿಜಾಪುರದ 'ನಗರವನ'ದಲ್ಲಿ ೧೧ನೆಯ ತಾರೀಖಿನ ದಿನ ಬಾನುಲಿಯ (ಆಕಾಶವಾಣಿ) ಸಮಾರಂಭೋತ್ಸವವನ್ನು ಜರುಗಿಸಿದರು.

**ಬೆಂಗಳೂರು: ರಾಮಕೃಷ್ಣಾಶ್ರಮದಲ್ಲಿ ಉಪನ್ಯಾಸ**

ಬಸವನಗುಡಿಯಲ್ಲಿರುವ ಶ್ರೀರಾಮಕೃಷ್ಣಾಶ್ರಮದಲ್ಲಿ ಕಳೆದ ೯ನೆಯ ಭಾನುವಾರ ಸಂಜೆ ಶ್ರೀಮಾನ್ ಜಿ. ಪಿ. ರಾಜರತ್ನಂರವರು "ಬುದ್ಧದೇವ ಮತ್ತು ಅವನ ತತ್ತ್ವ" ಎಂಬ ವಿಷಯವನ್ನು ಕುರಿತು ಭಾಷಣಮಾಡಿದರು.

**ಸೊರಬ: ಸೋದರ ಸಂಘ**

ಮೇಲ್ಕಂಡ ಸಂಘದ ಸಭೆ ತಾಲ್ಲೂಕು ಅಮಲ್ದಾರರಾದ ಶ್ರೀ|| ವೆಂಕಟ ಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಶ್ರೀ|| ಭೂಪಾಳಂ ಪುಟ್ಟನಂಜಪ್ಪನವರು ಭಾಷಣಮಾಡುತ್ತ ಕನ್ನಡ ನಾಡಿನ ದುಸ್ಥಿತಿಯನ್ನು ವರ್ಣಿಸಿ, ಇತರ ಪ್ರಾಂತಗಳವರು ಕನ್ನಡಿಗರನ್ನು ಹೀನಾಯವಾಗಿ ಕಾಣುತ್ತಿರುವರೆಂದು ಹೇಳಿ, ಇದಕ್ಕೆ ನಿದರ್ಶನ ತಾವು ಪುಣೆಯಲ್ಲಿ ಪಡೆದ ಅನುಭವವನ್ನು ತಿಳಿಸಿ, ಸಂಘದ ಕಾರ್ಯವನ್ನು ಪ್ರಶಂಸಿಸಿದರು. ಇಂಥ ಸಂಘಗಳು ನಾಡಿನ ಎಲ್ಲ ಮೂಲೆಗಳಲ್ಲೂ ಹುಟ್ಟಿ ದುಡಿಯುವುದು ನಾಡಿನ ಏಳ್ಗೆಗೆ ಆವಶ್ಯಕವೆಂದು ತಿಳಿಸಿದರು. ಸಂಘದ ಪುಸ್ತಕ ಭಂಡಾರಕ್ಕೆ ಶ್ರೀಯುತರು ೧೦ ರೂ. ಕಾಣಿಕೆಯನ್ನು ನೀಡಿದರು.

೮೫-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೩೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜೂನ್ ೨೧, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ನವಿಲುಗುಂದದ ಶ್ರೀ ಶ್ರೀ ಬಸವಲಿಂಗಸ್ವಾಮಿಗಳು

(ಶ್ರೀ ಸಿದ್ಧವೀರದೇವರು, ಹುಬ್ಬಳ್ಳಿ)

ಸಾಹಿತ್ಯದ ಆಗಸದಲ್ಲಿ ಇದೀಗ ಶ್ರೀ ಶ್ರೀ ಬಸವಲಿಂಗಸ್ವಾಮಿಗಳು ತಾರೆಗಳಂತೆ ಮಿನುಗಲು ಉಪಕ್ರಮಿಸಿದ್ದಾರೆ. ಇದು ನಮ್ಮ ಕನ್ನಡ ಸಾಹಿತ್ಯದ ಸೌಭಾಗ್ಯವೆಂದೇ ಹೇಳಬೇಕು. ಸ್ವಾಮಿಗಳಾದವರು ಮನಸ್ಸುಮಾಡಿದರೆ ಸಾಹಿತ್ಯ ಬೇಗ ಪರಿಪುಷ್ಟಿಗೊಳ್ಳುತ್ತದೆ ಎಂದು ನನ್ನ ಭಾವನೆ. ಹರಿಹರ ಷಡಕ್ಷರ ಮುಂತಾದವರು ಯಾರೆಂಬುದನ್ನು ನೆನಪಿಗೆ ತಂದರೆ ತನ್ನ ಭಾವನೆ ಅಷ್ಟೊಂದು ಅಸಮಂಜಸವಾಗಿ ತೋರಲಿಕ್ಕಿಲ್ಲ. ಇಂದು ಸಾಹಿತ್ಯವನ್ನು ಪರಿಪುಷ್ಟಿಗೊಳಿಸಲು ಹೆಣಗುತ್ತಲಿರುವ ಹಲಕೆಲವು ಸ್ವಾಮಿಗಳಲ್ಲಿ ಶ್ರೀ ಬಸವಲಿಂಗಸ್ವಾಮಿಗಳೊಬ್ಬರು.



ಬಸವಲಿಂಗ ಸ್ವಾಮಿಗಳವರು ಜನಾಂಗದ, ನಾಡಿನ ಉನ್ನತಿಯೇ ತಮ್ಮ ಉನ್ನತಿಯೆಂಬ ಭಾವನೆಯುಳ್ಳವರು. ಸಮಾಜದಲ್ಲಿ ಸಾಹಿತ್ಯ ಮತ್ತು ಧರ್ಮಪ್ರಚಾರ [illegible] ಬದುಕಬೇಕು, ಬೆಳಕಿಗೆ ಬರಬೇಕು, ಎಂಬುದೇ ಅವರ ಹೆಬ್ಬಯಕೆ.

ಶ್ರೀ ಬಸವಲಿಂಗಸ್ವಾಮಿಗಳು ಬಾಲ್ಯದಲ್ಲಿಯೇ ಮನೆಯನ್ನು ಬಿಟ್ಟು ಮಠವನ್ನು ಸೇರಿದರು. ಲೋಕೋತ್ತರ ಸುಖಕ್ಕಾಗಿ ಲೌಕಿಕ ಸುಖಕ್ಕೆ ತಿಲಾಂಜಲಿ ಬಿಟ್ಟರು. ನವಿಲುಗುಂದದಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಣವನ್ನು ಪಡೆದು, ಆಮೇಲೆ ಶಿವಯೋಗಮಂದಿರದಲ್ಲಿದ್ದು ಸಂಸ್ಕೃತ ಅಧ್ಯಯನವನ್ನು ಪೂರೈಸಿದರು. ಇವರು ಕುಶಲಮತಿಗಳಾದುದರಿಂದ ಕ್ಷಿಪ್ರದಲ್ಲಿಯೇ ಸಾಹಿತ್ಯ, ವೇದಾಂತ ಮತ್ತು ಪಾತಂಜಲಿ ಯೋಗ ಸೂತ್ರಗಳಲ್ಲಿ ತಕ್ಕಮಟ್ಟಿಗೆ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಪಡೆದರು. ಆಗಲೇ ಕನ್ನಡ ಸಾಹಿತ್ಯದಕಡೆ ಇವರ ಒಲವು ಹೆಚ್ಚಿದ್ದಿತು. ನಿಜಗುಣರ **ಕೈವಲ್ಯ**ವೆಂದರೆ ಇವರಿಗೆ ಬಹು ಮೆಚ್ಚು. ನಮ್ಮ ಬಾಲ್ಯದ ಪಾಠಪ್ರವಚನಗಳು ಶಿವಯೋಗಮಂದಿರದಲ್ಲಿ ನಡೆಯುತ್ತಿದ್ದಾಗ ಸ್ವಾಮಿಗಳು, ಕನ್ನಡ ಕೆಚ್ಚು ಕವಿಯಾದ ಮಹಾಲಿಂಗ ರಂಗನ "ಸುಲಿದ ಬಾಳೆಯ ಹಣ್ಣಿನಂದದಿ..........." ಎಂಬ ಪದ್ಯವನ್ನು ಆನಂದದಿಂದ ಅಂದು ಅದರ ಅರ್ಥವನ್ನು ಅಕ್ಕರತೆಯಿಂದ ಹೇಳಿ ಕನ್ನಡವನ್ನು ಆಸಕ್ತಿಯಿಂದ ಕಲಿಯಲು ನಮಗೆ ಪ್ರೋತ್ಸಾಹವನ್ನು ಕೊಟ್ಟು ಅಭಿಮಾನವನ್ನು ಹುಟ್ಟಿಸುತ್ತಿದ್ದ ಸಂಗತಿ ಇನ್ನೂ ನನ್ನ ಜ್ಞಾಪಕದಲ್ಲಿ ಇದೆ. ಇವರ ಪ್ರೇರಣೆಯಿಂದಲೇ **ಸುಕುಮಾರ** ಎಂಬ ಕೈಬರಹದ ಮಾಸಿಕ ಶಿವಯೋಗ ಮಂದಿರದಲ್ಲಿ ಪ್ರಕಟವಾಗುತ್ತಿತ್ತು. ಇವರ ಪೋಷಣೆಯಿಂದಲೇ ರೇವಣ ಸಿದ್ಧೇಶ್ವರ ವಾಚನಾಲಯ ಸ್ಥಾಪಿತವಾಗಿ ಮುಂದುವರಿದಿದೆ. ನಿಜವಾಗಿಯೂ ನಾವು ಕನ್ನಡದ ಕಡೆ ಕಣ್ಣು ಹೊರಳಿಸಿದ್ದು ಬಸವಲಿಂಗ ಸ್ವಾಮಿಗಳವರಿಂದ. ಇವರು ಹಾನಗಲ್ಲು ಶ್ರೀಗಳ ಸಮ್ಮುಖದಲ್ಲಿ ಕುಳಿತು ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರ ವಚನ ವಾಙ್ಮಯಗಳನ್ನು ಅಧ್ಯಯನ ಮಾಡುತ್ತ ಗದ್ಯಪದ್ಯಗಳನ್ನು ಓದುತ್ತಿರುವಾಗ ಅವರ ಮನೋಭಾವ ಅದರಲ್ಲಿ ಬೆರೆತು ತಲ್ಲೀನವಾಗುತ್ತಿದ್ದರು. ಕನ್ನಡದ ಅಭಿಮಾನ ಆಗಲೇ ಇವರಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಗುಂಫಿತವಾಗಿತ್ತು. ಪ್ರೋತ್ಸಾಹಕರಿಲ್ಲದಿದ್ದರೂ ಉತ್ಸಾಹ ಉಕ್ಕುತ್ತಿದ್ದಿತು. ಜೊತೆಗೆ ವಿನಯ, ಔದಾರ್ಯ, ಇಂದ್ರಿಯನಿಗ್ರಹ, ಸರಳತನ, ಸ್ನೇಹಭಾವ ಮುಂತಾದ ಗುಣಗಳನ್ನು ಮೈಗೂಡಿಸಿಕೊಂಡಿದ್ದಾರೆ. ಇದರಿಂದ ಇವರ ಜೀವನ ಹೆಚ್ಚು ಸವಿಯಾಗಿದೆ, ಸೊಂಪಾಗಿದೆ.

ಸಂಸ್ಕೃತಿಯನ್ನು ಪೋಷಿಸುತ್ತಿರುವ ಶಿವಯೋಗ ಮಂದಿರದ ಅಭಿವೃದ್ಧಿಗಾಗಿ ತಮ್ಮ ನಿರಪೇಕ್ಷಿತವಾದ ಭಿಕ್ಷಾವೃತ್ತಿಯಿಂದ ೧೦–೧೨ ಸಾವಿರದಷ್ಟು ಕಡಮೆಯಿಲ್ಲದ ಹಣವನ್ನು ಕೆಲವು ಆಸ್ತಿಗಳನ್ನು ಸಲ್ಲಿಸಿದ ಇವರ ತ್ಯಾಗಗುಣ ಪ್ರಶಂಸನೀಯವಾಗಿದೆ. ಮತ್ತು ಶಿವಯೋಗ ಮಂದಿರದಲ್ಲಿಯೇ ಕಲೆತು ೧೯೨೭ರಲ್ಲಿ ಅದೇ ಸಂಸ್ಥೆಯ ಉಪಾಧ್ಯಕ್ಷರಾಗಿ ನೇಮಕರಾದುದು ಅವರ ಬುದ್ಧಿಕೌಶಲ್ಯವನ್ನೂ ವ್ಯಕ್ತಿಗೌರವವನ್ನೂ ವ್ಯಕ್ತಮಾಡುತ್ತದೆ. ಅಂದಿನಿಂದ ಇಂದಿನವರೆಗೂ ಆ ಮಹಾ ಸಂಸ್ಥೆಯ ಅನೇಕ ಮಹಾ ಕಾರ್ಯಗಳನ್ನು ನಿರ್ವಹಿಸಿ ನೆರವೇರಿಸುತ್ತಲಿದ್ದಾರೆ. ಆ ಸಂಸ್ಥೆಯ ಸೇವೆಯೊಡನೆ ಸಾಹಿತ್ಯ ಸೇವೆಯನ್ನೂ ಸಾಕಷ್ಟು ಸಲ್ಲಿಸಿದ್ದಾರೆ. ಅಲ್ಲಲ್ಲಿ ಉಪನ್ಯಾಸ ಪ್ರವಚನಗಳಿಂದ ಕನ್ನಡ ಜನಾಂಗವನ್ನು ಬಹುಮಟ್ಟಿಗೆ ಜಾಗ್ರತಿಗೊಳಿಸಿದ್ದಾರೆ. ಪುಣೆಯಲ್ಲಿರುವ "ಫರ್ಗ್ಯೂಸನ್" ಕಾಲೇಜಿನಲ್ಲಿ "ಕನ್ನಡ ವಾಙ್ಮಯ" ಎಂಬ ವಿಷಯವಾಗಿ ೧೯೩೩ರಲ್ಲಿ ಅಮೋಘವಾದ ಉಪನ್ಯಾಸವಿತ್ತು ಕನ್ನಡಿಗರಿಗೆ ಕನ್ನಡ ಸಾಹಿತ್ಯದ ಘನತೆ ಗೌರವಗಳ ಅರಿವನ್ನುಂಟುಮಾಡಿದ್ದಲ್ಲದೆ ತಮ್ಮಲ್ಲಿರುವ ಕನ್ನಡದ ಉಜ್ಜ್ವಲಾಭಿಮಾನವನ್ನು ತೋರಿಸಿದ್ದಾರೆ. ಆಮೇಲೆ ಈಚೆಗೆ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ "ವೀರಶೈವಯೋಗ" "ಬಸವಣ್ಣನವರ ವಚನಗಳು" ಎಂಬ ವಿಷಯವಾಗಿ ಮಾತನಾಡಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿದ್ದಾರೆ. ಇವರು ಕೇವಲ ವಾಗ್ಮಿಗಳೇ ಅಲ್ಲ; ಬರಹಗಾರರೂ ಅಹುದು. "ಗುರು" "ಲಿಂಗ" ಎಂಬ ಪುಸ್ತಕಗಳನ್ನು ಬರೆದು ತತ್ವಸೇವೆಯ ಋಣವನ್ನು ತೀರಿಸಿದ್ದಾರೆ. "ಹಂತಿಯ ಹಾಡು"ಗಳನ್ನು ಕಟ್ಟಿ ಜನಪದ ಸಾಹಿತ್ಯದ ಸೇವೆಯನ್ನು ಮಾಡಿದ್ದಾರೆ. ೧೯೩೭ರಲ್ಲಿ ಹಲವು ಲೇಖನಗಳನ್ನು ಬರೆದು ಕೆಲವು ಕನ್ನಡ ಪತ್ರಿಕೆಗಳನ್ನು ಪೋಷಿಸಿದ್ದಾರೆ. ಕರ್ನಾಟಕದ ಸ್ವಾಮಿಗಳಲ್ಲಿ ಮೊದಲು ಪತ್ರಿಕಾಪ್ರಪಂಚದಲ್ಲಿ ಲೇಖನಗಳನ್ನು ಬರೆದ ಕೀರ್ತಿ ಬಹುಮಟ್ಟಿಗೆ ಇವರದೆ ಎನ್ನಬಹುದು. ಆಧುನಿಕ ಶೈಲಿಯಲ್ಲಿ ಬರೆದ ಇವರ **ಮಕ್ಕಳ ಕುಮಾರ**ವೆಂಬ ಗ್ರಂಥ ಇಂದಿಗೂ ಕೈಬರಹದಲ್ಲಿ ಉಳಿದುದು ಕನ್ನಡ ಕುವರರ ದುರ್ದೈವ. ಅಲ್ಲದೆ ಇವರು ತಮ್ಮ ಮಠದಲ್ಲಿ ನಾಲ್ಕು ವರ್ಷಗಳಿಂದ ತಪ್ಪದೆ ನಾಡ ಹಬ್ಬವನ್ನು ಏರ್ಪಡಿಸಿ ತನ್ಮೂಲಕ ಸಾಹಿತ್ಯ ಸಂಸ್ಕೃತಿ ಧರ್ಮಗಳ ಪ್ರಚಾರಮಾಡುತ್ತಲೂ ಇದ್ದಾರೆ. ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರಾಗಿದ್ದಾರಲ್ಲದೆ ನಿರಭಿಮಾನ ನಿಸ್ವಾರ್ಥ ಸೇವೆಯಿಂದ ಪರಿಷತ್ತಿನ ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಅಧ್ಯಕ್ಷ ಪೀಠವನ್ನೇರಿದ್ದಾರೆ. ಈಗ ಪರಿಷತ್ತಿನ ಕಾರ್ಯಸಮಿತಿಯಲ್ಲಿ ಸೇರಿ ಎಲ್ಲರೊಡನೆ ಬೆರೆತು ತಮ್ಮ ಪಾಂಡಿತ್ಯದಿಂದ ಸೌಜನ್ಯದಿಂದ ಎಲ್ಲರಿಗೂ ಅಚ್ಚುಮೆಚ್ಚಿನವರಾಗಿ ದಕ್ಷತೆಯಿಂದ ಕಾರ್ಯಮಾಡುತ್ತಲಿದ್ದಾರೆ.

ಇವರು ಕನ್ನಡ ಸಾಹಿತ್ಯಕ್ಕೆ ದುಡಿಯುತ್ತಿದ್ದಂತೆ ಕರ್ನಾಟಕ ಒಕ್ಕೂಟಕ್ಕೂ ದುಡಿಯುತ್ತಿದ್ದಾರೆ. ೧೯೩೪ರಲ್ಲಿ ಸರ್ ಮಿರ್ಜಾರವರ ಸಮಾಗಮದ ಸಮಯದಲ್ಲಿ ಕರ್ನಾಟಕ ಏಕೀಕರಣದ ವಿಚಾರವಾಗಿ ಮಾತನಾಡಿರುವ ಸಂಗತಿ ಎಲ್ಲ ಕನ್ನಡಿಗರ ಅಭಿಮಾನಕ್ಕಾಸ್ಪದವಾಗಿದೆ. ಬಳ್ಳಾರಿಯ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಏಕೀಕರಣದ ವಿಚಾರವಾಗಿ ವಿಚಾರಪೂರಿತವಾಗಿ ಮಾತನಾಡಿ ಎಲ್ಲರನ್ನೂ ಮೆಚ್ಚಿಸಿದ ವಿಷಯವನ್ನು ಯಾರೂ ಮರೆತಿರಲಿಕ್ಕಿಲ್ಲ. ಆದ್ದರಿಂದ ಕರ್ನಾಟಕ ಏಕೀಕರಣಕ್ಕಾಗಿ ದುಡಿಯುವವರಲ್ಲಿ ಇವರಿಗೂ ಒಂದು ಸ್ಥಾನವಿದೆ. ಮಾನವಿದೆ.

ಶ್ರೀ ಬಸವಲಿಂಗಸ್ವಾಮಿಗಳು ಸಾಹಿತ್ಯವನ್ನು ನಿರ್ಮಿಸಿದ ಸೇವೆಗಿಂತ ಸಾಹಿತಿಗಳನ್ನು ಪ್ರೋತ್ಸಾಹಿಸಿ ಸಲ್ಲಿಸಿದ ಸೇವೆ ಮಿಗಿಲಾದುದು. ಉಳಿದ ಸ್ವಾಮಿಗಳಂತೆ ಸುಮ್ಮನೆ ನೆಮ್ಮದಿಯಾಗಿ ಮಠದಲ್ಲಿ ಕೂಡದೆ ಧಾರವಾಡ ಜಿಲ್ಲಾ ಸಾಹಿತ್ಯ ಪರಿಷತ್ತನ್ನು ನವಿಲುಗುಂದದಲ್ಲಿ ಕರೆದು ಸಾಂಗವಾಗಿ ನೆರವೇರಿಸಿದುದೆ ಇದಕ್ಕೆ ಸಾಕ್ಷಿಯಾಗಿದೆ. ಕವಿಗಳು ಕಲಾವಿದರು ಎಂದರೆ ಇವರಿಗೆ ಪ್ರಾಣ. ಅಂಥವರಿಗೆ ತಮ್ಮಿಂದ ಸಾಧ್ಯವಿದ್ದಮಟ್ಟಿಗೂ ಸಹಾಯವನ್ನು ನೀಡುತ್ತಾರೆ.

ಒಟ್ಟಿನಲ್ಲಿ ಸ್ವಾಮಿಗಳು ತಮ್ಮಿಂದ ಸಾಧ್ಯವಿದ್ದಮಟ್ಟಿಗೂ ಕನ್ನಡ ಸಾಹಿತ್ಯ ಪ್ರಚಾರಕ್ಕಾಗಿ ಕಂಕಣಬದ್ಧರಾಗಿದ್ದಾರೆ. ಕನ್ನಡ ಒಕ್ಕೂಟಕ್ಕಾಗಿ ಶ್ರಮಿಸುತ್ತಿದ್ದಾರೆ. ಕನ್ನಡ ನಾಡು ನುಡಿಗಳ ಅಭಿಮಾನ ಇವರಲ್ಲಿ ತುಂಬಿ ತುಳುಕುತ್ತಿದೆ. ಶ್ರೀ ಬಸವಲಿಂಗ ಸ್ವಾಮಿಗಳು ಕನ್ನಡ ಸಾಹಿತ್ಯ ಕುಸುಮವಾಟಿಕೆಯಲ್ಲಿ ಕಂಪು ಹೊತ್ತು ಬೀರಲಿರುವ ನನೆಯಂತಿದ್ದಾರೆ. ಆ ನನೆ ಬೇಗನೆ ಅರಳಿ ಇನ್ನೂ ಹೆಚ್ಚು ಹೆಚ್ಚಿನ ಕಂಪನ್ನು ಕನ್ನಡಿಗರಿಗೂ ಕನ್ನಡ ನುಡಿಗೂ ಬೀರಲೆಂದು ಹಾರೈಸುತ್ತೇನೆ.

---

## ಕನ್ನಡದೇವಿಯ ಬೆಳ್ಳಿಯ ಹಬ್ಬ

ಶ್ರೀ ಬಸವಲಿಂಗ ಸ್ವಾಮಿಗಳವರು, ನವಲಗುಂದ
ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ಅಧ್ಯಕ್ಷರು

ಏಳಿರಿ! ಎಚ್ಚರಾಗಿರಿ!! ಕನ್ನಡದೇವಿಯ ವರಪ್ರಸಾದಕ್ಕೆ ಕೈನೀಡಿರಿ!!! ಅಖಂಡವಾಗಿ ೨೫ ವರ್ಷಗಳಿಂದಲೂ ಆರಾಧಿಸಲ್ಪಟ್ಟ ಕನ್ನಡಮ್ಮನು ಸುಪ್ರಸನ್ನಳಾಗಿ ತನ್ನ ವರದಹಸ್ತವನ್ನು ಮುಂದೆ ಮಾಡಿದ್ದಾಳೆ. ಕನ್ನಡತಾಯಿಯ ಹಿರಿಯಣುಗನಾದ ಶ್ರೀಕೃಷ್ಣ ದೊರೆ ಈ ತಿಂಗಳು ಕೊನೆಯ ದಿನ ತಾ|| ೩೦–೬–೪೦ರಲ್ಲಿ ಮುಂಜಾನೆ ತನ್ನ ಎದೆಯುಬ್ಬಿನಿಂದ ಮಂಗಲಗೀತೆಯೊಡನೆ ಮಂಗಳಾರತಿಯನ್ನು ಮಾಡುತ್ತಿದ್ದಾನೆ. ಇದಕ್ಕಿಂತ ಹೆಚ್ಚಿನ ಸುಸಮಯ, ಸೌಭಾಗ್ಯದ ದಿನ ಕನ್ನಡಿಗರಿಗೆ ಎಂದಾದರೂ ಎಂತಾದರೂ ದೊರೆಯಬಹುದೆ?

ಈ ಮೊದಲು ಕನ್ನಡದೇವಿಯ ಒಲವಿನ ಪೂಜಕರಲ್ಲಿ ಮೊದಲಿಗರು ಎನಿಸಿದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಹಬ್ಬದ ಹಿರಿಮೆಯನ್ನು ಮಹಿಮೆಯನ್ನು ತಿಳಿಸಿ, ಬೆಳ್ಳಿಯಹಬ್ಬಕ್ಕೆ ಬರಲು ಅಕ್ಕರದಿಂದ, ಆದರದಿಂದ ಕರೆದು ಹೋಗಿದ್ದಾರೆ. ಕನ್ನಡ ಪರಿಷತ್ತಿನ ಮುಖಪತ್ರವಾದ 'ಕನ್ನಡನುಡಿ' ಪತ್ರಿಕೆಯಿಂದಲೂ ಸಾರ್ವಜನಿಕವಾದ ಆಹ್ವಾನವನ್ನು ಕೊಟ್ಟಿದ್ದಾರೆ. ಈ ಹಬ್ಬದಲ್ಲಿ ಜಾತಿ, ಮತ, ಪಂಥ, ಹಿರಿದು, ಕಿರಿದು, ಮೇಲುಕೀಳೆಂಬ ಭೇದಭಾವಕ್ಕೆಂಬುಗೊಡದೆ, ನಾವೆಲ್ಲರೂ ಒಮ್ಮನಸ್ಸಿನಿಂದ ದುಡಿಯಬೇಕಾಗಿದೆ. ಇಂದಿನ ನಮ್ಮ ದುಡಿಮೆ ನಾಳೆ ನಮ್ಮ ಭಾಗ್ಯವಾಗಿ ಪರಿಣಮಿಸುವುದು. ಇದುವರೆಗೆ ಎಷ್ಟೋ ಕೊಡುಗೈ ಕನ್ನಡಿಗರು ಈ ಹಬ್ಬದೂಟಕ್ಕೆ ದುಡ್ಡಿನ ಸಹಾಯವನ್ನು ಮಾಡಿದ್ದಾರೆ, ಮಾಡಲಿದ್ದಾರೆ. ಅದರಂತೆ ನಾಡು ನುಡಿ ಸೇವೆಗಾಗಿ ಸದಾ ದುಡಿಯುತ್ತಿದ್ದ ಕನ್ನಡ ಪರಿಷತ್ತಿನ ಬಿನ್ನಹವನ್ನು ಮನ್ನಿಸಿ ಕನ್ನಡಿಗರು ಸಹಾಯ ಮಾಡುವರೆಂದು ಎಲ್ಲರಂತೆ ನಾನೂ ಸಹ ನಂಬಿರುತ್ತೇನೆ.

ಕನ್ನಡ ನಾಡಿನ ಹಿರಿಯ ಕಿರಿಯರೆ! ನಿಮ್ಮ ನಿಮ್ಮ ಸಾಂಸಾರಿಕ ಅನೇಕ ತೊಂದರೆ ತಾಕಲಾಟಗಳನ್ನು (ಇದ್ದರೆ) ಎರಡು ಮೂರುದಿನದ ಮಟ್ಟಿಗೆ ಬದಿಗೊತ್ತಿ ಬೆಂಗಳೂರಿನಲ್ಲಿ ಜರುಗಲಿರುವ ಹಬ್ಬಕ್ಕೆ ಬಂದು ಧನ್ಯರಾಗಿರಿ. ನಮ್ಮ ಕನ್ನಡನಾಡಿನ ಭವ್ಯಭವಿತವ್ಯತೆಯ ವಿಚಾರ ಪ್ರಚೋದನ ಕಾರ್ಯದಲ್ಲಿ ನೆರವಾಗಿರಿ.

---

## ಬೆಳ್ಳಿಯ ಹಬ್ಬಕ್ಕೆ ಬೆಂಗಳೂರಿಗೆ ಬನ್ನಿರಿ

ಶ್ರೀ|| ಮುದವೀಡು ಕೃಷ್ಣರಾಯರು, ಸಮ್ಮೇಳನಾಧ್ಯಕ್ಷರು

ಇನ್ನು ಹತ್ತು ದಿವಸಗಳಿಗೆ ಬೆಂಗಳೂರು ನಗರದಲ್ಲಿ ಕನ್ನಡ ನಾಡಿನ 'ಏಕಮೇವಾದ್ವಿತೀಯ' ಪ್ರಾತಿನಿಧಿಕ ಸಂಸ್ಥೆಯಾದ 'ಕನ್ನಡ ಸಾಹಿತ್ಯ ಪರಿಷತ್ತಿ'ನ ಬೆಳ್ಳಿಯ ಹಬ್ಬ ಸಾಂಗವಾಗಲಿದೆ. ಪರಿಷತ್ತಿನ ಹೊಣೆಗಾರ ಅಧಿಕಾರಿಗಳು ತಮಗೆ ಶಕ್ಯವಾದ ಕಡೆಗೆಲ್ಲ ಹೋಗಿ ಈ ಮಹೋತ್ಸವಕ್ಕೆ ಕನ್ನಡನಾಡ ಮಹಾ ಜನರು ಅಗತ್ಯವಾಗಿ ಬಂದು ಉತ್ಸವವನ್ನು ಸರ್ವಾಂಗವಾಗಿ ಸಾಂಗಗೊಳಿಸಬೇಕೆಂದು ಪ್ರತ್ಯಕ್ಷವಾಗಿಯೇ ಬಿನ್ನವಿಸಿಕೊಂಡಿದ್ದಾರೆ. ಹಾಗೆಯೇ ಈಗ ಮತ್ತೆ ಪರಿಷತ್ತಿನ ಮುಖಪತ್ರವಾಗಿರುವ 'ಕನ್ನಡನುಡಿ'ಯ ಮುಖಾಂತರವಾಗಿ ಎರಡು ವಾರಗಳಿಂದ ಎಲ್ಲ ನಾಡಬಾಂಧವರಿಗೆ ಬಿನ್ನವಿಸುತ್ತಲೂ ಇದ್ದಾರೆ. ಇಷ್ಟು ಮಾತ್ರವಲ್ಲದೆ ತಮಗೆ ಪರಿಚಿತರಾಗಿದ್ದ ಕನ್ನಡನಾಡ ಮಹನೀಯರೆಲ್ಲರಿಗೂ ಬಿನ್ನಹ ಪತ್ರಗಳನ್ನು ಬೇರೆಯಾಗಿ ಕಳಿಸುವ ವ್ಯವಸ್ಥೆಯನ್ನು

ಮಾಡಿರಬೇಕೆಂದೂ ನಾನು ನಂಬಿದ್ದೇನೆ. ಈ ಬಗೆಯಾಗಿ ಮೂರು ಮಾರ್ಗಗಳಿಂದ ಪರಿಷತ್ತಿನ ಸಂಚಾಲಕರು ಬಿನ್ನವಿಸಿಕೊಂಡಿರುವ ಮನ್ನಣೆಯ ಮಾತಿಗೆ ಕನ್ನಡನಾಡಿನ ಮಾನ್ಯ ಮಹನೀಯರೆಲ್ಲರೂ ಮಾನ್ಯತೆಯನ್ನು ಕೊಟ್ಟು ಬೆಂಗಳೂರಿಗೆ ದಯಮಾಡಿಸಿ ನಮ್ಮ ನಾಡಿನಲ್ಲೆಲ್ಲ ಅಪೂರ್ವವಾಗಿ ನಡೆಯಬೇಕಾಗಿರುವ ಈ ಮಹೋತ್ಸವ ವನ್ನು ಬಹು ವಿಜೃಂಭಣೆಯಿಂದ ನೆರವೇರಿಸಿಕೊಟ್ಟು ಕೀರ್ತಿಭಾಜನರಾಗ ಬೇಕೆಂದು ನಾನೂ ಒಬ್ಬನು ನನ್ನ ನಾಡಣ್ಣಗಳಿಗೆ ಬೇಡಿಕೊಳ್ಳುತ್ತೇನೆ.

ಈ ಬಗೆಯಾಗಿ ಸಾರ್ವಜನಿಕ ಹಾಗು ವೈಯಕ್ತಿಕ ಬಿನ್ನಹಗಳನ್ನು ಶಕ್ಯವಾದ ಕಡೆಗೆಲ್ಲ ಹರಡುವ ಪ್ರಯತ್ನವನ್ನು ಪರಿಷತ್ತಿನ ಕಾರ್ಯ ವಾಹಕರು ಮಾಡಿರುವರಾದರೂ ಈ ನಮ್ಮ ವಿಶಾಲವಾದ ಕನ್ನಡ ನಾಡಿನಲ್ಲಿ ಅಥವಾ ಅದರ ಹೊರ ಪ್ರದೇಶದಲ್ಲಿ ಕನ್ನಡ ಜನಾಂಗದ ಒಕ್ಕೂಟವನ್ನೂ ಅದರ ಎಲ್ಲ ಬಗೆಯ ಉತ್ಕರ್ಷವನ್ನೂ ಗುರಿಯನ್ನಾಗಿ ಇರಿಸಿಕೊಂಡು ತಮ ತಮಗೆ ಸರಿದೋರಿದ ರೀತಿಯಲ್ಲಿ ಕೈಲಾದಮಟ್ಟಿಗೆ ಕೆಲಸಮಾಡುತ್ತಿರುವ ಅನೇಕ ಸಂಘಗಳೂ ಸಂಸ್ಥೆಗಳೂ ಕೂಟಗಳೂ ಗುಂಪುಗಳೂ ವ್ಯಕ್ತಿಗಳೂ ನಾಲ್ಕೂ ಕಡೆಗೆ ಹಬ್ಬಿಕೊಂಡಿರುವುದನ್ನು ನೆನಪಿಗೆ ತಂದು ನೋಡಿದರೆ ಇಂತಹ ಎಲ್ಲ ಸಂಸ್ಥೆಗಳಿಗೂ ವ್ಯಕ್ತಿಗಳಿಗೂ ಪ್ರತ್ಯೇಕವಾದ ಬಿನ್ನಹಗಳನ್ನು ಕಳಿಸುವುದು ಪರಿಷತ್ತಿನ ವಿನಮ್ರ ಸೇವಕರು ಎಷ್ಟೇ ದಕ್ಷತೆ ವಹಿಸಿದರೂ ಅಶಕ್ಯವೂ ಅಸಾಧ್ಯವೂ ಆದ ಮಾತೆಂಬುದನ್ನು ಯಾರಾದರೂ ಸುಲಭವಾಗಿಯೇ ಗ್ರಹಿಸಬಹುದು. ಆದುದರಿಂದ ಅಖಂಡ ಕನ್ನಡನಾಡಿನ ಪರವಾಗಿ ನನಗೆ ಹೋದ ಡಿಸೆಂಬರು ತಿಂಗಳಿನಲ್ಲಿ ದೊರೆತಿರುವ ಪ್ರಾತಿನಿಧಿಕ ಅಧಿಕಾರದ ಒಲುಮೆ ಯಿಂದ, ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯ ಸಮಿತಿಯಲ್ಲಿ ಒಂದು ಸ್ಥಾನವನ್ನು ಹೊಂದಿರುವ ಮೂಲಕ ಆ ಸ್ಥಾನ ಮಹಾತ್ಮ್ಯದ ಆಧಾರದಿಂದ, ಕನ್ನಡನಾಡಿನ ಎಲ್ಲ ಬಗೆಯ ಏಳಿಗೆ ಅದರ ಒಕ್ಕೂಟ ದಲ್ಲಿಯೇ ಅಡಗಿರುವುದೆಂಬ ಸರ್ವಮಾನ್ಯ ತತ್ವವನ್ನು ಮನದಂದು ಅದಕ್ಕಾಗಿ ಹಂಬಲಿಸುವ ಕನ್ನಡಿಗರೆಲ್ಲರೂ ಪರಿಷತ್ತಿನ ವಿಶಿಷ್ಟ ಕರೆಯನ್ನಪೇಕ್ಷಿಸದೆ ಬೆಂಗಳೂರಿನಲ್ಲಿ ನಡೆಯಲಿರುವ ಈ ಸಮಾರಂಭ ತಮ್ಮದೇ ಎಂಬ ಭಾವನೆಯಿಂದ ಅಗತ್ಯವಾಗಿ ಬೆಂಗಳೂರಿಗೆ ಬಂದು ಪರಿಷತ್ತಿಗೆ ಶ್ರೇಯಸ್ಸನ್ನು ತಂದುಕೊಟ್ಟು ತಾವೂ ಶ್ರೇಯೋಭಾಗಿ ಗಳಾಗಬೇಕೆಂದು ಅನನ್ಯಭಾವದಿಂದ ಬೇಡಿಕೊಳ್ಳುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಈ ಬೆಳ್ಳಿಯ ಹಬ್ಬ ಕನ್ನಡನಾಡಿಗೆ ಸಂಬಂಧಪಟ್ಟ ಮೊದಲನೆಯ ಮಹೋತ್ಸವವಾಗಿರುವುದರಿಂದ ಇದಕ್ಕೆ ಪ್ರತ್ಯಕ್ಷ ಹೋಗಿ, ಕನ್ನಡಿಗರ ಭವಿಷ್ಯತ್ಕಾಲದ ಏಕಮುಖವಾದ ಉತ್ಕರ್ಷದ ಮೂಲವನ್ನು ಕಣ್ಣಾರೆಕಂಡು ಸಂತಸಪಡಬೇಕೆಂಬ ಕುತೂಹಲ ಎಲ್ಲ ಕಡೆಗೆ ಉಂಟಾಗಿರುವುದೆಂಬುದಕ್ಕೆ ನನಗೆ ಬಂದಿರುವ ಅನೇಕ ಪತ್ರಗಳೂ ಸೂಚನೆಗಳೂ ಬಲವಾದ ದೃಷ್ಟಾಂತವಾಗಿವೆ. ಕನ್ನಡ ಶಾಲೆಗಳ ಶಿಕ್ಷಕರು, ಶಾಲೆ ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿ ಯರು, ಬೇರೆ [illegible]ಪಾನ್ಯ [illegible]ನೇಕರು ಬೆಂಗಳೂರಿನವರೆಗಿನ ರೇಲ್ವೆ ಪ್ರವಾಸ ವೆಚ್ಚ ತಮಗೆ ನೀಗಲಾರದೆಂಬ ವಿಚಾರದಿಂದ ಅಲ್ಲಿಗೆ ಸುಲಭ [illegible] ಮಾಡ ಬೇಕೆಂದು ನನಗೆ ಸೂಚಿಸಿ ಬರೆದುಕೊಂಡಿದ್ದಾರೆ. ಈ ವಿಷಯದಲ್ಲಿ ನಾನು ಕೆಲವು ದಿನಗಳಿಂದ ಆಲೋಚನೆ ನಡಸಿ [illegible] ವನ್ನೂ ಮಾಡಿದ್ದೇನೆ. ಎಂ. ಎಸ್. ಎಂ. ರೇಲ್ವೆಯವರು ಹರಿಹರದ ವರೆಗೆ ಸೊಲ್ಲಾಪುರ ಗದಗು ಹುಬ್ಬಳ್ಳಿ ಧಾರವಾಡಗಳಿಂದ ರಿಯಾ ಯತಿಯ ಟಿಕೀಟುಗಳನ್ನು ಈಗಾಗಲೇ ಇಟ್ಟಿದ್ದಾರೆ. ಧಾರವಾಡ ಬೆಳಗಾಂವಿಯ ನಡುವೆ ಹಾಗೆಯೇ ಬೆಳಗಾಂವಿಯಿಂದ ಮಿರಜಿ ಕೊಲ್ಹಾಪುರಗಳವರೆಗೆ ನಡುನಡುವಿನ ಸ್ಟೇಶನ್ನುಗಳಿಗೆ ಅಗ್ಗದರದ ಟಿಕೀಟುಗಳನ್ನು ಗೊತ್ತುಪಡಿಸಿದಾರೆ. ಆದುದರಿಂದ ಎಂ. ಎಸ್. ಎಂ. ರೇಲ್ವೆಯವರಿಂದ ಹೆಚ್ಚಿನ ರಿಯಾಯಿತಿ ಯಾವುದೂ ದೊರೆಯುವದು ಸಾಧ್ಯವಿಲ್ಲ. ಮೈಸೂರು ರೇಲ್ವೆ ಇಲಾಖೆಯವರಲ್ಲಿ ಈ ವಿಷಯದಲ್ಲಿ ಪತ್ರ ವ್ಯವಹಾರ ನಡಸಲಾಯಿತು. ತಮ್ಮ ಟಿಕೇಟಿನ ದರಗಳನ್ನು ಈಗಾಗಲೇ ಬಹಳವಾಗಿ ಕಡಮೆ ಮಾಡಿರುವುದರಿಂದ ಹೆಚ್ಚಿನ ರಿಯಾಯತಿ ಶಕ್ಯವಿಲ್ಲವೆಂದು ಜನರಲ್ ಮ್ಯಾನೇಜರವರಿಂದ ಉತ್ತರ ಬಂದಿರುತ್ತದೆ. ಹುಬ್ಬಳ್ಳಿಯಿಂದ ಪುಣೆ ಇತ್ತ ಕಡೆಗೆ, ಅತ್ತ ಕಡೆಗೆ ಬೆಂಗಳೂರು ಸುಮಸುಮಾರು ಅಷ್ಟೇ ಅಂತರದ ಮೇಲಿದ್ದರೂ ಪುಣೆಗೆ ಮೇಲ ಬಂಡಿಯಿಂದ ಸುಮಾರು ಆರುವರೆ ರೂಪಾಯಿಗಳೂ ಪ್ಯಾಸೆಂಜರ ಗಾಡಿಯಿಂದ ಐದುವರೆ ರೂಪಾಯಿಗಳೂ ಬೀಳುತ್ತವೆ. ಅದೇ ಬೆಂಗ ಳೂರಿಗೆ ಸುಮಾರು ನಾಲ್ಕುವರೆ ರೂಪಾಯಿಗಳು ಬೀಳುತ್ತವೆ. ಈ ಸಂಗತಿಯನ್ನು ತಿಳಿದು ನೋಡಿದರೆ ಈಗ ಹೆಚ್ಚಿನ ರಿಯಾಯತಿಗೆ ಅಪೇಕ್ಷೆ ಮಾಡುವುದರಲ್ಲಿ ಅರ್ಥವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಮೇಲಾಗಿ ಹೆಚ್ಚಿನ ಪತ್ರವ್ಯವಹಾರಕ್ಕೆ ಅವಕಾಶವೂ ಇಲ್ಲವಾಗಿದೆ. ಆದುದರಿಂದ ರಿಯಾಯತಿಯ ಯಾವ ಹೆಚ್ಚಿನ ಆಶೆಯನ್ನೂ ಮಾಡದೆ ಕನ್ನಡನಾಡ ಸೇವೆಯೊಂದನ್ನೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಎಲ್ಲರೂ ಬೆಂಗಳೂರಿಗೆ ಹೊರಡುವ ಸಿದ್ಧತೆಯನ್ನು ಮಾಡಬೇಕೆಂದು ಬಿನ್ನವಿಸುತ್ತೇನೆ.

---

## ಬೆಳ್ಳಿಯ ಹಬ್ಬಕ್ಕೆ ಬರುವ ಅತಿಥಿಗಳ ಕಣ್ಣಿಗೆ ಹಬ್ಬ ಮಾಡುವ ಸುಂದರ ಸ್ಥಳಗಳು

### ಬೆಂಗಳೂರಿನಲ್ಲಿ

ಬೆಳ್ಳಿಯ ಹಬ್ಬ ನಡೆಯುವ ಭವ್ಯವಾದ ಸರ್ ಪುಟ್ಟಣ್ಣಚೆಟ್ಟಿ ಪುರ ಭವನವನ್ನು ನೋಡವ ಅತಿಥಿಗಳಿಗೆ ಬೆಂಗಳೂರು ಇನ್ನೂ ಹಲವು ಸುಂದರವಾದ ಸ್ಥಳಗಳ ಸಂದರ್ಶನಲಾಭವನ್ನು ದೊರಕಿಸಿಕೊಡುವು ದಾಗಿದೆ.

ಮೈಸೂರು ಸರಕಾರದ ವಿವಿಧ ಇಲಾಖೆಗಳ ಕಛೇರಿಗಳನ್ನು ಒಳ ಗೊಂಡ ಅಠಾರಾ ಕಛೇರಿ, ಮೈಸೂರು ಮಹಾರಾಜರವರ ರಜತ ಮಹೋತ್ಸವದ ನೆನಪಿಗಾಗಿ ಕಟ್ಟಿರುವ ವೃತ್ತಿ ಶಿಕ್ಷಣಶಾಲೆ (ಟೆಕ್ನಲಾಜಿ ಕಲ್ ಇನ್‌ಸ್ಟಿಟ್ಯೂಟ್), ತಾತಾ ಸಂಶೋಧನ ಸಂಸ್ಥೆ, ಕಬ್ಬನ್ ಪಾರ್ಕ್ ಮತ್ತು ದಕ್ಷಿಣ ಭಾರತದಲ್ಲಿನ ಪ್ರಮುಖ ಸರಸ್ವತೀ ಭಂಡಾರ ಗಳಲ್ಲಿ ಒಂದಾಗಿ ಹೆಸರುಗಳಿಸಿರುವ ಗ್ರಂಥ ಭಂಡಾರವನ್ನೊಳಗೊಂಡ ಸರ್ ಶೇಷಾದ್ರಿ ಮೆಮೋರಿಯಲ್ ಹಾಲ್, ಮೈಸೂರು ಸರಕಾರದವರು ನಡಸುತ್ತಿರುವ ಸಾಬೂನು, ಪಿಂಗಾಣಿ, ಗಾಜಿನ ಸಾಮಾನು ಮತ್ತು ಬಲ್ಬು ತಯಾರಿಕೆಯ ಕಾರ್ಖಾನೆಗಳು, ಲಾಲ್‌ಬಾಗ್ ಮುಂತಾದುವು.

### ಬೆಂಗಳೂರಿನ ಸುತ್ತಮುತ್ತ

**ಚಾಮರಾಜ ಸಾಗರ:** ಬೆಂಗಳೂರಿಗೆ ೨೨ ಮೈಲಿ ದೂರದಲ್ಲಿ ಮಾಗಡಿ ರಸ್ತೆಯಲ್ಲಿ ಇದ್ದು ಬೆಂಗಳೂರಿಗೆ 'ಜೀವ' (ನೀರು) ನೀಡುತ್ತಿರುವ ಜಲಾಶಯ. ಅರ್ಕಾವತಿ ನದಿಗೆ ಅಣೆಕಟ್ಟು ಕಟ್ಟಿ, ಒಮ್ಮೆ ಕೆಟ್ಟೆ ತುಂಬಿದರೆ ನಾಲ್ಕು ವರ್ಷವಾದರೂ ಬೆಂಗಳೂರಿಗೆ ತಾಪತ್ರಯ ವಿಲ್ಲದೆ ನೀರಿನ ಸರಬರಾಯಿ ಆಗುವಂತೆ ಯೋಜಿಸಲಾಗಿದೆ.

**ನಂದಿ:** ಮಹಾತ್ಮ ಗಾಂಧಿಯವರಿಗೆ ಆರೋಗ್ಯವನ್ನು ತಂದು ಕೊಟ್ಟ ನಂದಿಯನ್ನು ಮರೆಯುವವರಾರು? ಬೆಂಗಳೂರಿಗೆ ೩೫ ಮೈಲಿ [illegible],೦೦೦ ಅಡಿ ಮೇಲೆ ಇದೆ. ಬೆಟ್ಟದ ಮೇಲೆ [illegible]ಕೂಲವಾದ ಬಂಗಲೆಗಳೂ, ಒಳ್ಳೆಯ ಹೋಟಲೂ ಇವೆ. ಅಲ್ಲಿರುವ ಕಲ್ಯಾಣಿಯ ನೀರು ಬಹು ರುಚಿ. ಬೆಟ್ಟ ಹತ್ತುವ ಮೊದಲಾಗಲಿ, ಇಳಿದಮೇಲಾಗಲಿ ಭೋಗನಂದೀಶ್ವರ ದೇವಾ ಲಯವನ್ನು ನೋಡಬೇಕು.

**ಶಿವಗಂಗೆ:** ಬೆಂಗಳೂರಿಗೆ ಸುಮಾರು ೪೦ ಮೈಲಿ ದೂರ ದಲ್ಲಿರುವ ಯಾತ್ರಾ ಸ್ಥಳ. ಅಲ್ಲಿನ ಶಿವಗಂಗಾ ಮಠ ಸುಪ್ರಸಿದ್ಧ ವಾದುದು.

### ಮೈಸೂರಿನಲ್ಲಿ

ಮಹಾರಾಜರವರ ಅರಮನೆ, ಜಗನ್ಮೋಹನ ಅರಮನೆ ಮತ್ತು ಅದರಲ್ಲಿ ರಸಿಕವೃಂದವನ್ನು ತಲೆದೂಗುವಂತೆ ಮಾಡುವ ಚಿತ್ರಶಾಲೆ,

(೩೨೮ನೆಯ ಪುಟಕ್ಕೆ)

## ತಿಳಿವಳಿಕೆ

ಪರಿಷತ್ತಿನ ಬೆಳ್ಳಿಯ ಹಬ್ಬದ ಪ್ರಯುಕ್ತ ೨೮ನೆಯ ತಾರೀಖು ಶುಕ್ರವಾರ 'ಕನ್ನಡ ನುಡಿ'ಯ ಕಾರ್ಯಾಲಯಕ್ಕೆ ಬಿಡುವು ಕೊಡಲಾಗಿದೆ. ಅಂದು ಸಂಚಿಕೆ ಹೊರಡುವುದಿಲ್ಲ.



ಶುಕ್ರವಾರ, ಜೂನ್ ೨೧, ೧೯೪೦

## ಬೆಳ್ಳಿಯ ಹಬ್ಬದ ಪುಸ್ತಕ ಪ್ರದರ್ಶನ

ಬೆಳ್ಳಿಯ ಹಬ್ಬದಲ್ಲಿ ತೆರೆಯುವ ಪುಸ್ತಕ ಪ್ರದರ್ಶನಕ್ಕೆ ಬರಬೇಕಾದ ಪುಸ್ತಕಗಳೆಲ್ಲ ಬರುವುವೊ ಇಲ್ಲವೊ ತಿಳಿಯದು. ಹೊರಗಿನ ಗ್ರಂಥಕರ್ತರಿಂದಲೂ ಪ್ರಕಟನಕಾರರಿಂದಲೂ ಬಂದವುಗಳ ಜೊತೆಗೆ ಪರಿಷತ್ತಿನಲ್ಲಿರುವುವನ್ನೂ ಊರೊಳಗಿನ ಪುಸ್ತಕ ಮಂದಿರಗಳವರ ಸಹಕಾರ ಪಡೆದು ದೊರಕುವವುಗಳನ್ನೂ ಜನದ ಮುಂದಿಟ್ಟು ಈ ಕಾಲು ಶತಮಾನದಲ್ಲಿ ಯಾವ ಬಗೆಯ ಬೆಳಸು ಕೈಗೆ ಬಂದಿದೆಯೆಂದು ತೋರಿಸುವ ಪ್ರಯತ್ನ ಮಾಡಲಾಗುವುದು. ಎಷ್ಟೋ ಸಲ ಪರಿಷತ್ತು ಬೇಡಿಕೊಂಡಿದೆ, ಸಮ್ಮೇಳನಗಳು ಮೊರೆಯಿಟ್ಟವೆ,–ಕನ್ನಡದಲ್ಲಿ ಅಚ್ಚಾದ ಪುಸ್ತಕಗಳ ಒಂದೊಂದು ಪ್ರತಿಯನ್ನಾದರೂ ಪರಿಷತ್ತಿನ ಸರಸ್ವತೀ ಭಂಡಾರಕ್ಕಾಗಿ ಕೃಪೆಮಾಡಿ ಕಳಿಸಬೇಕೆಂದು. ಗೆಳೆತನದಲ್ಲಿ ಕಳಿಸುವವರು ಕಳಿಸುತ್ತಲೂ ಇದ್ದಾರೆ. ಅವರ ಉಪಕಾರಕ್ಕೆ ತಲೆಬಾಗಿದ್ದೇವೆ. ಉಳಿದ ಸಮಸ್ತರೂ ಆ ಕಡೆ ಮನಸ್ಸು ಕೊಟ್ಟರೆ ಯಾವುದಾದರೂ ಇಂಥ ಒಂದು ಅಖಿಲ ಕರ್ನಾಟಕ ಕೇಂದ್ರದಲ್ಲಿ ಕನ್ನಡದ ಎಲ್ಲ ಪುಸ್ತಕಗಳೂ ಸಿಕ್ಕುವ ಅವಕಾಶವಾಗುವುದು. ಹುಟ್ಟಿದ ಸಾಹಿತ್ಯದ ಸ್ವರೂಪವನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳುವುದಕ್ಕೂ ಅದರ ಬೆಲೆಗಳನ್ನು ವಿವೇಚಿಸುವುದಕ್ಕೂ ಮುಂದಿನ ಬೆಳಸಿನ ವ್ಯವಸಾಯಕ್ಕೆ ಸ್ಫೂರ್ತಿ ಪಡೆಯುವುದಕ್ಕೂ ಅನುಕೂಲವಾದೀತು. ಅಂತಹ ಸುಕಾಲ ಯಾವಾಗ ಬಂದೀತು? ಹಣದ ಪುಷ್ಟಿಯಾದರೂ ಇದ್ದಿದ್ದರೆ ಯಾರ ಕೈಗೂ ಕಾಯದೆ ಪರಿಷತ್ತೇ ಎಲ್ಲವನ್ನೂ ಕೊಂಡಿಟ್ಟುಕೊಳ್ಳಬಹುದಾಗಿತ್ತು. ಪುನಃ ಪುನಃ ಸಂತತವಾಗಿ ಹೀಗೆ ಮನವಿಮಾಡಿಕೊಳ್ಳುತ್ತಲೇ ಹೋಗಬೇಕಾದ ಅದೃಷ್ಟಕ್ಕೆ ಬಾಗಿ ಪರಿಷತ್ತು ಕಾಲವನ್ನು ಸಾಧಿಸುವುದು; ತನ್ನ ಕಡೆಗೆ ಒಲಿಸಿಕೊಳ್ಳಲು ಪ್ರಯತ್ನಿಸುವುದು.

ಈ ಇಪ್ಪತ್ತಯ್ದು ವರ್ಷಗಳಲ್ಲಿ ಒಂದು ಹೊಸ ಯುಗ ಹುಟ್ಟಿ ನಿಂತಿದೆಯೆಂಬುದನ್ನು ಯಾರಾದರೂ ಕಾಣಬಹುದಾಗಿದೆ. ಒಪ್ಪುವವರು ಒಪ್ಪಲಿ, ಮೆಚ್ಚಲಿ; ಇಲ್ಲವಾದವರು ಬಿಡಲಿ; ಆ ಹಿಂದೆ ಕಾಣದಿದ್ದ ಒಂದು ವಿಶೇಷ ಜೀವಶಕ್ತಿ ಕನ್ನಡ ಸಾಹಿತ್ಯದಲ್ಲಿ ಹುಟ್ಟಿಕೊಂಡಿರುವ ವಿಚಾರ ಕುರುಡರ ಕಣ್ಬೆಳಗಿದೆ; ಕಿವುಡರ ಕಿವಿ ತೆರಸಿದೆ. ಮೂರು ನಾಲ್ಕು ಮುಖ್ಯ ಬಗೆಯ ಸಾಹಿತ್ಯಕೃತಿ ನಿರ್ಮಾಣವಾಗುತ್ತಿದ್ದ ಪ್ರಪಂಚಕ್ಕೆ ಹೊಸಬಗೆಯ ರೂಪರೇಖೆ ಜೀವಸಂಪತ್ತಿಯುಳ್ಳ ಹಲವು ಹೊಸ ಜಾತಿಯ ಕೃತಿಗಳು ಮೂಡಿಬಂದಿವೆ; ಜೊತೆ ನಿಂತು ಚಿತ್ತಾಕರ್ಷಣಮಾಡುತ್ತಿವೆ. ವರ್ಷ ವರ್ಷವೂ ಹುಟ್ಟಿದ ಪುಸ್ತಕಗಳ ಒಟ್ಟು ಸಮಾಲೋಚನೆ ಮಾಡಿ ಯಾವ ಯಾವ ಬಗೆಯ ಗ್ರಂಥ ಸ್ವರೂಪ ಏನು? ಅದರ ಬೆಲೆಯೇನು? ಎಂದು ಗೊತ್ತುಮಾಡುವ ಪುಣ್ಯ ಈವರೆಗೂ ಕನ್ನಡಕ್ಕೆ ಬರಲಿಲ್ಲ. ಪ್ರಚಂಡ ಮೇಧಾವಿಗಳೂ ನಾಡ ಭಕ್ತರೂ ಆಗಿದ್ದ ಕೈ॥ ಮ. ಗೋ. ರಾನಡೆಯವರು ನ್ಯಾಯಾಧೀಶರಾಗಿ ಕಾಲವಿರಾಮವಿಲ್ಲದವರಾಗಿದ್ದರೂ ಮಹಾರಾಷ್ಟ್ರ ಸಾಹಿತ್ಯಕ್ಕೆ ಈ ಸೇವೆ ಸಲ್ಲಿಸುತ್ತಿದ್ದರೆಂದು ಕೇಳಿರುವ ನಮಗೆ ಪುಲಕವುಂಟಾಗುತ್ತದೆ;– ಅಂತಹ ಪ್ರಭಾವ ನಮ್ಮಲ್ಲಿ ಎಂದಿಗೆ ಬೆಳೆದೀತು ಎನ್ನಿಸುತ್ತದೆ. ಈ ಕಾಲು ಶತಮಾನದ ಒಟ್ಟು ಸ್ವರೂಪವನ್ನಾದರೂ ವಿವರಿಸಿ, ಅಳೆದು ತೋರಿಸುವ ಪ್ರಯತ್ನ ನಾಲ್ಕಾರು ಜನ ವಿದ್ವಾಂಸರು ನೆರವುಕೊಟ್ಟರೆ ಮಾತ್ರ ಸಫಲವಾದೀತು.

ಹೊಸಕನ್ನಡದ ಹುಟ್ಟು ಖಚಿತವಾಗಿ ಎಂದಾಯಿತು ಎಂಬುದನ್ನು ಚರಿತ್ರೆಯ ಸಂಶೋಧಕರಿಗೂ ಪ್ರಾಕ್ ಪರಿಶೋಧನಪಟುಗಳಾದ ವಿದ್ವಾಂಸರಿಗೂ ಬಿಡಬಹುದು. ಅದರ ತೊಡಕು, ಸಂದೇಹ, ಕೋಟಲೆಗಳಿಗೂ ಅಲ್ಲಿ ಏಳುವ ಸಮಸ್ಯೆಗಳಿಗೂ ಕೈಹಾಕುವ ಸಮಯವೂ ಇದಲ್ಲ. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಎಚ್ಚರವಾಗಿ, ಶ್ರೀ ಚಾಮರಾಜಒಡೆಯರವರ ಕಾಲದಲ್ಲಿ ತೆರೆದ ಒಂದು ಹೊಸ ನೋಟ– ಕಂಡ ಒಂದು ಹೊಸ ಅಗತ್ಯ– ನಮ್ಮ ಸಾಹಿತ್ಯಕ್ಕೆ ಸಂಜೀವನವನ್ನೂಡಿತು. ಮತ, ಧರ್ಮ, ಅಲೌಕಿಕೈಕದೃಷ್ಟಿಗಳು ತಿರುಗಿ ಸುತ್ತಣ ಪ್ರಪಂಚದ ಆವಶ್ಯಕತೆ, ಸುಖಸಂತೋಷಗಳ ಕಡೆಗೆ ಸಾಹಿತಿಗಳನ್ನೂ ಎಳೆಯಿತು. ಈ ಶತಮಾನದ ಮೊದಲ ಹತ್ತು ಹದಿನೈದು ವರ್ಷಗಳಲ್ಲಿ ಮೂಡ ಪಡುವಲ ಪ್ರಭಾವಗಳೂ ಇನ್ನೂ ಹೆಚ್ಚು ನೇರವಾಗಿಯೂ ಭಾಷಾಂತರಗಳ ಮೂಲಕವೂ ಕನ್ನಡ ಪ್ರಪಂಚಕ್ಕೆ ಇಳಿದು ಹೊಸ ರಸವೊಂದನ್ನು ನೆತ್ತರೊಳಕ್ಕೆ ಹರಿಸಿದುವು. ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾನಿಲಯಗಳು, ಕರ್ನಾಟಕ ಸಂಘಗಳು, ಗೆಳೆಯರ ಗುಂಪುಗಳು, ಮುಂತಾದ ಸಂಸ್ಥೆಗಳಲ್ಲಿ ನಡೆಯಲು ಆರಂಭವಾದ ಸಾಹಿತ್ಯಕರ್ಮ ಆ ಸತ್ತ್ವದ ಒಟ್ಟು ಪರಿಣಾಮವನ್ನು ಹೆಚ್ಚಿಸಿತು; ಅದಕ್ಕೆ ವೇಗ ಕೊಟ್ಟಿತು; ಕಚ್ಚೂಡಿತು. ಕಾರ್ಯಕ್ಕೆ ಪ್ರೇರೇಪಿಸಿತು. ಎಲ್ಲೆಲ್ಲಿಯೂ ಎದೆ, ಬಗೆ, ಕೊರಲುಗಳನ್ನು ತೆರಸಿತು. ಕಾಲವುರುಳಿ ಕಾಲಮರಳಲು ಹೊಸ ಚಿಗುರ ಚೈತ್ರ ಕಣ್ಣಿಗೆ ಕಟ್ಟಿ, ಬತ್ತಲಾಗಿ ಕಣ್ಣಿರಿಯುತ್ತಿದ್ದ ಮರ ಗಿಡ ಬೆಟ್ಟ ಕಣಿವೆ ಬಯಲುಗಳಲ್ಲಿ ಹೂ, ಹಸರು, ಹಣ್ಣು, ಚೆಲುವು, ಬೆಳಸುಗಳ ಶೃಂಗಾರವೂ ಪಶುಪಕ್ಷಿ ಪ್ರಾಣಿಗಳ ಸುಳಿದಾಟ ಕೆಲೆಯಾಟಗಳೂ ಕಾಣುವಂತಾಯಿತು. ಮುಗ್ಧವಾಗಿ ಪ್ರೌಢವಾಗಿ, ಲೌಕಿಕವಾಗಿ ಅಲೌಕಿಕವಾಗಿ, ವಸ್ತುಮುಖವಾಗಿ ಆದರ್ಶಮುಖವಾಗಿ, ವಿಚಾರಮುಖವಾಗಿ ಕಾರ್ಯೋತ್ಸಾಹಮುಖವಾಗಿ ಸಾಹಿತ್ಯ ಪ್ರಪಂಚದ ನಡೆನುಡಿ ರೂಪುಗೊಂಡವು. ೧೯೧೫ಕ್ಕೆ ಮುಂಚೆ ತೀರಿಕೊಂಡವರು ಈ ೧೯೪೦ಕ್ಕೆ ಎದ್ದುಬಂದು ನೋಡುವುದು

ಶಕ್ಯವಾಗಿದ್ದ ಪಕ್ಷದಲ್ಲಿ ಈಗ ಸಿದ್ಧಿಸಿರುವ ಸೊಗಸು ಅವರಿಗೆ ಬೆರಗನ್ನುಂಟುಮಾಡುವಂತಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಇದು ಇನ್ನೂ ಮುಂದೆ ಬರಲಿರುವ ಸೊಬಗಿಗೆ ಸಂಚಕಾರ, ಮುನ್ಸೂಚನೆ, ಪೂರ್ವರಂಗ ಮಾತ್ರ.

ಇತರ ಸೋದರ ಭಾಷೆಗಳೊಂದಿಗೆ ತೂಗಿನೋಡಿದರೆ ಕೂಡ ಯಾವ ಅಂಶದಲ್ಲಿಯೂ ಕಡಮೆಯಿಲ್ಲವ ತೇಜಸ್ಸು, ಸೌಂದರ್ಯ ಕನ್ನಡದಲ್ಲಿ ಹುಟ್ಟಿಕಟ್ಟಿದೆ. ಇನ್ನೂ ನೂರರಷ್ಟಾಗಿ ಎಲ್ಲವನ್ನೂ ಮೀರಿಸುವ ಶಕ್ತಿ ಉಂಟಾಗಲಿಲ್ಲವಲ್ಲ ಎನ್ನುವ ಮಹಾಕಾಂಕ್ಷೆಯವರಿಗೆ ಇದು ಸಾಲದೆನ್ನಿಸುತ್ತ ಅತೃಪ್ತಿ ತರುತ್ತಿದ್ದರೂ ಈಗ ನಡೆದಿರುವ ಸಾಧನೆ ಅಂತಹವರನ್ನೂ ಸಮಾಧಾನಗೊಳಿಸುವಂತಹುದಾಗಿದೆ. ಅವರ ವಿಮರ್ಶೆಯನ್ನೂ ತಡೆದುಕೊಂಡು ಮೆಚ್ಚಿಸಬಲ್ಲ ಪದ್ಯ, ಗದ್ಯ, ನಾಟಕ, ವಿಮರ್ಶೆ, ಶಾಸ್ತ್ರಚರ್ಚೆ ಹುಟ್ಟಿಕೊಂಡಿವೆ. ಇವುಗಳ ಪರಿಮಾಣ ಸಾಲದು, ಈ ಜನದ ಯೋಗ್ಯತೆ ಶಕ್ತಿಗಳಿಗೆ ತಕ್ಕಷ್ಟು ಆಗಿಲ್ಲ, ನಿಜ. ಇದಕ್ಕೆ ಒದಗಬೇಕಾದಷ್ಟು ಸಹಾಯ, ಪ್ರೋತ್ಸಾಹ, ಆಳ್‍ದುಡಿಮೆ ದೊರಕಿಲ್ಲ ; ಸೌಹಾರ್ದದ ಆವರಣ ಬಲಿದಿಲ್ಲ. ಆದರೇನು ? ಆಗಿರುವಷ್ಟನ್ನೆ ನೋಡಿದರೂ ಜನ ಕೃತಜ್ಞರಾಗಬಲ್ಲಷ್ಟು ಕೈಗೆ ಸಂಪತ್ತು ಸಿಕ್ಕಿದೆ.

ಈ ಕೆಲಸ ಎಷ್ಟು ಸುಖವಾಗಿದೆ ಎಂಬುದು ಕಾದಂಬರಿ ಲೌಕಿಕಶಾಸ್ತ್ರ, ಗದ್ಯ ಮುಂತಾದ ಒಂದೆರಡನ್ನು ಬಿಟ್ಟರೆ, ನಮ್ಮ ಭಾವಗೀತೆ, ನಾಟಕ, ಸಣ್ಣಕತೆ, ವಿಮರ್ಶೆ, ಲಘುಪ್ರಬಂಧ, ರಂಗಭೂಮಿಯ ವಿಲಾಸ ಇವೆಲ್ಲವುಗಳ ವಿಹಾರ ವೈಭವಗಳು ಇವುಗಳಲ್ಲಿ ಕಾಣುವುದು. ಪರೀಕ್ಷಾ ಪ್ರಯೋಗ ದೃಷ್ಟಿಯಿಂದಾಗಲಿ, ಸ್ವರಸವಾದ ಯೋಗ್ಯತೆಯಲ್ಲಾಗಲಿ ಯಾರ ಯಾವ ಸಾಧನೆಗೂ ಇದು ಎರಡನೆಯದಲ್ಲವೆಂಬುದು ತಿಳಿಯುವುದು. ಅದನ್ನು ತಿಳಿಯದವರೂ ಒಪ್ಪದವರೂ ಬಂದು ನಾಳೆ ಹಬ್ಬದಲ್ಲಿ ತೆರೆಯುವ ಪುಸ್ತಕ ಪ್ರದರ್ಶನವನ್ನು ದಯವಿಟ್ಟು ನೋಡಬೇಕು. ಅಲ್ಲಿ ಹರಡಿರುವ ಮುಖ್ಯ ಪುಸ್ತಕಗಳನ್ನಾದರೂ ಕೊಂಡೊ ಯಾರಿಂದಲಾದರೂ ಎರವಲು ತೆಗೆದೊ ಸೌಹಾರ್ದದಿಂದ ಓದಿ ಮೇಲಿನ ಮಾತು ಸರಿಯೋ ತಪ್ಪೋ ಆಲೋಚಿಸಿ ಹೇಳಬೇಕು.

ಎಲ್ಲಕ್ಕೂ ಮೇಲಾಗಿ ಈ ಕೆಲಸ ತಮ್ಮ ಸತ್ವ ಪ್ರಕಾಶದ ಕೆಲಸವೇ ಎಂದು ಅರಿತುಕೊಂಡು ಆ ಸತ್ವ ಪುಷ್ಟವಾಗಿ ಕಾಂತಿಗೊಂಡು ಭವ್ಯವಾಗುವುದಕ್ಕೆ ಬೇಕಾಗುವ ಎಲ್ಲ ಸಹಾಯವನ್ನೂ ನೀಡಲು ಶ್ರದ್ಧೆ ವಹಿಸಬೇಕು. ಬರೆವವರ, ನುಡಿವವರ, ದುಡಿವವರ ದೇಹಪೋಷಣೆಗೆ ಅನುಕೂಲಗಳನ್ನು ಒದಗಿಸಬೇಕು ; ಅವರ ಮನಸ್ಸಿಗೆ ಹರ್ಷ ತುಂಬಿ, ನಾಡನ್ನು ತನ್ನ ರೀತಿಯಲ್ಲಿ ಕಟ್ಟುತ್ತಿರುವ ಅವರ ಕೆಲಸವನ್ನು ಆತ್ಮೀಯತೆಯಿಂದ ಕಂಡು ಅವರ ಎದೆಗೆ ತಂಪನ್ನೂ ಬಗೆಗೆ ಹರ್ಷ ಉತ್ತೇಜನಗಳನ್ನೂ ತುಂಬಿಹೋಗಬೇಕು. ಗೆಳೆಯರೇ, ಉತ್ಸವಕ್ಕೆ ತಂಡತಂಡವಾಗಿ ಬಂದು ಈ ಸಂತೋಷದ ಭರವಸೆಗಳನ್ನು ನೀಡಿ ಹೋಗಿರಿ.

---

## ಬೆಳ್ಳಿಯ ಹಬ್ಬ - ಕನ್ನಡ ಕುಲದ ಕರ್ತವ್ಯ

ವ್ಯಾಕರಣತೀರ್ಥ ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳು

ಅಖಿಲ ಕರ್ನಾಟಕದ ನೆನಸನ್ನು ಮಾಡಿಕೊಡತಕ್ಕ ಹಲವು ಸಂಸ್ಥೆಗಳು ಕನ್ನಡ ನಾಡಿನಲ್ಲಿ ಇರುತ್ತವೆ. ಇವುಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತೂ ಒಂದಾಗಿರುತ್ತದಲ್ಲದೆ ಕಳೆದ ೨೫ ವರ್ಷಗಳಿಂದ ಅದು ತನ್ನ ಕೈಲಾದಮಟ್ಟಿಗೆ ಕನ್ನಡ ವಾಙ್ಮಯದ ಸೇವೆಯನ್ನು ಮಾಡಿ ಕನ್ನಡಿಗರಲ್ಲಿ ಒಳ್ಳೆ ಜಾಗ್ರತೆಯನ್ನುಂಟುಮಾಡುತ್ತಿರುವುದು ಸರ್ವರಿಗೂ ಗೊತ್ತಿದ್ದ ಸಂಗತಿಯಾಗಿರುತ್ತದೆ. ಹರಿದು ಹಂಚಿ ಹೋಗಿರತಕ್ಕ ಕನ್ನಡ ನಾಡಿನ ಭಾಷೆಯ ಏಕೀಕರಣವಾಗುವದು ಅತ್ಯಂತ ಮಹತ್ವದ ಕಾರ್ಯವಾಗಿ ಇರುತ್ತದೆ. ಕನ್ನಡಿಗರನ್ನು ಒಂದು ಕಟ್ಟಿನಲ್ಲಿ ತರುವ ಕೆಲಸವನ್ನು ಮಾಡತಕ್ಕ ಸಂಸ್ಥೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಅಗ್ರಸ್ಥಾನವಿದೆ ಎಂಬುದಕ್ಕೆ ಕನ್ನಡಿಗರು ಬೆಳಗಾಂವಿಯಲ್ಲಿ ಮಾಡಿದ ಕಾರ್ಯವೇ ಸಾಕಾಗಿರುತ್ತದೆ. ಇಂದಿನ ನಮ್ಮ ವಾಙ್ಮಯವೇ ಮುಂದಿನ ಜನಾಂಗದ ಏಳಿಗೆಯ ಹೆಗ್ಗುರುತೆಂಬ ಭಾವನೆಯನ್ನಿಟ್ಟುಕೊಂಡು ಇಂತಹ ಸಂಸ್ಥೆ ಪ್ರಬಲವಾಗುವಂತೆ ಮಾಡುವುದು ಎಲ್ಲ ಪ್ರಾಂತದ ಕನ್ನಡಿಗರ ಮುಖ್ಯ ಕರ್ತವ್ಯವಾಗಿರುತ್ತದೆ.

ಯಾವುದಾದರೊಂದು ಸಂಸ್ಥೆಯ ಮಹತ್ವ ಬೆಳೆಯಬೇಕಾದರೆ ಆ ಸಂಸ್ಥೆಯ ಸದಸ್ಯರ ಮೇಲೆಯೇ ಅವಲಂಬಿಸಿರತಕ್ಕದ್ದಾಗಿದೆ. ಸೊಂಡೂರಿನ ಮಹಾರಾಜರವರೂ, ಒಂಟಮುರಿಯ ದಾನಶೂರರಾದ ದೇಸಾಯರೂ ೫೦೦ ರೂ. ಕೊಟ್ಟು ಪೋಷಕರಾದದ್ದು ಉಳಿದ ಶ್ರೀಮಂತರಿಗೆ ಮಾರ್ಗದರ್ಶಕವಾಗಿರುತ್ತದೆ. ಇವರ ಅನುಕರಣವನ್ನು ಕನ್ನಡನಾಡಿನ ಕೊಡುಗೈ ದೊರೆಗಳಾದ ಮಹಾಜನಗಳು ಅನುಸರಿಸಿದ್ದೇ ಆದರೆ ಕನ್ನಡ ಸಾಹಿತ್ಯ ಪರಿಷತ್ತು ಉಳಿದ ಯಾವ ಪ್ರಾಂತಿಕ ಪರಿಷತ್ತುಗಳಿಗಿಂತಲೂ ಕಡಮೆಯಾಗಲಾರದು.

ಜೂನ್ ೩೦ನೆಯ ತಾರೀಖಿನ ದಿವಸ ಬೆಂಗಳೂರಿನಲ್ಲಿ ಪರಿಷತ್ತಿನ ರಜತ ಮಹೋತ್ಸವ ಶ್ರೀಮನ್ಮಹಾರಾಜರವರ ಅಮೃತ ಹಸ್ತದಿಂದ ಪ್ರಾರಂಭವಾಗತಕ್ಕದ್ದಿರುತ್ತದೆ.

ಈ ರಜತ ಮಹೋತ್ಸವ ಕನ್ನಡ ನಾಡಿನಲ್ಲಿ ಆಗಿಹೋದ ಮತ್ತು ಆಗುತ್ತಿರುವ ಉತ್ಸವಗಳಲ್ಲಿ ಅಭೂತಪೂರ್ವದ್ದಾಗಬೇಕಾಗಿರುತ್ತದೆ. ಇದಕ್ಕೆಲ್ಲ ಒಂದೇ ಒಂದು ಉಪಾಯವೆಂದರೆ ಈ ರಜತ ಮಹೋತ್ಸವ ಕನ್ನಡಿಗರ ಪವಿತ್ರಯಾತ್ರೆಯೆಂದು ಪ್ರತಿಯೊಬ್ಬರೂ ತಿಳಿದುಕೊಂಡು ಕರ್ನಾಟಕದ ನಾನಾ ಭಾಗಗಳಿಂದ ಗಣ್ಯರಾದ ಮಹನೀಯರು ಉತ್ಸವಕ್ಕೆ ಹೋದರೆ ಅಖಿಲ ಕನ್ನಡನಾಡಿನ ಪ್ರಾತಿನಿಧ್ಯವುಳ್ಳ ಸಂಸ್ಥೆಯೆಂದು ತಿಳಿದು ಶ್ರೀಮನ್ಮಹಾರಾಜರವರಾದರೂ ಸಂತುಷ್ಟರಾಗುವರಲ್ಲದೆ ಕನ್ನಡ ನಾಡಿನ ಕಾರ್ಯೋತ್ಸಾಹದ ಪ್ರಭಾವ ಉಳಿದ ಪ್ರಾಂತಗಳ ಮೇಲೆಯೂ ಆಗುವದು. ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಈ ರಜತ ಮಹೋತ್ಸವದ ಇತಿಹಾಸ ಕನ್ನಡದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲು ಯೋಗ್ಯವಾಗುವುದು.

ಮೈಸೂರು ಸಂಸ್ಥಾನ ಕನ್ನಡಿಗರಿಗೆ ಶಿರಸ್ಸಿನಂತಿರುತ್ತದೆ. ಸ್ವಲ್ಪ ಹೆಚ್ಚು ಕಡಮೆ ಅರ್ಧ ಜನ ಕನ್ನಡಿಗರು ಈ ಸಂಸ್ಥಾನದಲ್ಲಿಯೇ ವಾಸವಾಗಿರುತ್ತಾರೆ. ಅಂದಮೇಲೆ ಕರ್ನಾಟಕ ಸರ್ವಾಂಗಸುಂದರವಾಗಬೇಕಾದರೆ ಮೈಸೂರಿನ ಸಹಾಯ ಉಳಿದ ಕನ್ನಡಿಗರಿಗೆ ಬೇಕೇ ಬೇಕಾಗುವುದು. ಕನ್ನಡ ನಾಡಿನ, ನುಡಿಯ ಇತಿಹಾಸವನ್ನು ನೋಡಿದರೆ ಮೈಸೂರು ಅರಮನೆಯಿಂದಲೂ ಸರಕಾರದಿಂದಲೂ ಅನಂತ ಸಹಾಯವಾಗುತ್ತಲಿದೆ. ಮುಂದೆ ಇದಕ್ಕಿಂತಲೂ ಹೆಚ್ಚಿಗೆ ಸಹಾಯ ಅಲ್ಲಿ ಸಿಗಬೇಕಾಗಿದೆ. ಇಂತಹ ಮಹೋತ್ಸವಕ್ಕೆ ಕರ್ನಾಟಕದ ಮೂಲೆ ಮೂಲೆಗಳಿಂದಲೂ ಕನ್ನ[illegible]ದವರಾದ ಸರ್ವರೂ ಅಭಿಮಾನಶಾಲಿಗಳಾಗಿ, ಜಾತಿ ಮತಪಂಥಗಳ ತೊಡಕಿಗೆ ಬೀಳದೆ ಬೆಂಗಳೂರಿಗೆ ಹೋಗಿ ಈ ಮಹೋತ್ಸವವನ್ನು ಸರ್ವ ರೀತಿಯಿಂದಲೂ ಯಶಸ್ವಿಯನ್ನಾಗಿ ಮಾಡಿ ಕನ್ನಡ ಸಾಹಿತ್ಯ ಪರಿಷತ್ತು ಸುವರ್ಣ ಮಹೋತ್ಸವದ ದಾರಿಯನ್ನು ಎದುರು ನೋಡುವಂತಾಗಬೇಕೆಂದು ಹಾರೈಸುತ್ತೇನೆ.

---

ಬೆಳ್ಳಿಯ ಹಬ್ಬದ ಉತ್ಸವದಲ್ಲಿ ಬೆರೆತು ಸಂತೋಷಿಸಲು, ಅನಿವಾರ್ಯ ಕಾರಣಗಳಿಂದ ಬೆಂಗಳೂರಿಗೆ ಬರಲು ಸಾಧ್ಯವಿಲ್ಲದವರು ತಮ್ಮ ತಮ್ಮ ಊರಿನಲ್ಲಿಯೇ ಸಭೆಗಳನ್ನು ನಡಸಿ ಪರಿಷತ್ತಿನ ಧ್ಯೇಯಗಳನ್ನು ಜನತೆಯಲ್ಲಿ ಪ್ರಚಾರಮಾಡಿ ಎಚ್ಚತ್ತ ಕನ್ನಡ ನಾಡಿನ ಉತ್ಸವವಾದ ಬೆಳ್ಳಿಯ ಹಬ್ಬದ ಸಂದೇಶವನ್ನು ನಾಡಿನ ಮೂಲೆ ಮೂಲೆಗೂ ಹಬ್ಬುವಂತೆ ಮಾಡಬೇಕೆಂದು ಮತ್ತೊಮ್ಮೆ ಒತ್ತಿ ಬಿನ್ನವಿಸುತ್ತೇವೆ.

(೩೨೫ನೆಯ ಪುಟದಿಂದ)

ಪ್ರಾಣಿ ಪ್ರದರ್ಶನಾಲಯ, ಲಲಿತ ಮಹಲ್, ಚಾಮುಂಡಿಬೆಟ್ಟ. ಹೊತ್ತು ಇಳಿಯುತ್ತಲೆ ಬೆಟ್ಟದಿಂದ ಗೋಚರಿಸುವದೃಶ್ಯ ನಯನಮನೋಹರವಾಗಿದ್ದು, ಪ್ರೇಕ್ಷಕರ ಎದೆಯಲ್ಲಿ ಅಚ್ಚಳಿಯದೆ ನಿಲ್ಲುವುದು.

## ಮೈಸೂರಿನ ಸುತ್ತಮುತ್ತ

**ಶ್ರೀರಂಗಪಟ್ಟಣ :** ಮೈಸೂರಿನಿಂದ ಹತ್ತುಮೈಲಿ ದೂರದಲ್ಲಿದೆ. ಜುಮ್ಮಾಮಸೀದಿ, ದರಿಯಾದೌಲತ್ ಮತ್ತು ಹೈದರ್ ಟೀಪು ಸುಲ್ತಾನರ ಸಮಾಧಿಗಳನ್ನೊಳಗೊಂಡ ಗುಂಬಜ್.

ಫ್ರೆಂಚ್ ವಾಸ್ತುಶಿಲ್ಪಿಯೊಬ್ಬನು ಕಟ್ಟಿದ 'ಸ್ವಿಂಗಿಂಗ್ ಬ್ರಿಡ್ಜ್' (ತೂಗು ಸೇತುವೆ)ಯನ್ನು ನೋಡುವ ಭಾಗ್ಯ ಅತಿಥಿಗಳಿಗಿಲ್ಲ. ಅದು ಕೆಲವು ವರ್ಷಗಳ ಹಿಂದೆ ಕಾಲನ ಪೆಟ್ಟಿಗೆ ಈಡಾಗಿ ಕುಸಿದುಬಿತ್ತು. ಆದರೂ ತೂಗುಸೇತುವೆಯ ಉಳಿಕೆಗಳನ್ನು ಅಲ್ಲಿ ಕಾಣಬಹುದಾಗಿದೆ.

**ಕೃಷ್ಣರಾಜಸಾಗರ ಮತ್ತು ಬೃಂದಾವನ:** ಮೈಸೂರಿಗೆ ಸುಮಾರು ೧೨ ಮೈಲಿ ದೂರದಲ್ಲಿ ಇವೆ.

ಸರ್ ಎಂ. ವಿಶ್ವೇಶ್ವರಯ್ಯನವರ ವಾಸ್ತುಶಿಲ್ಪಜ್ಞತೆಗೆ ಸಾಕ್ಷಿಯಾಗಿ ಕೃಷ್ಣರಾಜಸಾಗರ (ಕನ್ನಂಬಾಡಿಕಟ್ಟೆ), ಹಾಗೂ ದಿವಾನ್ ಸಾಹೇಬರಾದ ಸರ್ ಮಿರ್ಜಾರವರ ಸೌಂದರ್ಯೋಪಾಸನೆಗೆ ಸಾಕ್ಷಿಯಾಗಿ ಬೃಂದಾವನ, ಅತಿಥಿಗಳನ್ನು ಆನಂದ ಪಡಿಸತಕ್ಕುವಾಗಿವೆ.

ಕನ್ನಂಬಾಡಿಕಟ್ಟೆ ಸುಮಾರು ಎರಡು ಮೈಲಿ ಉದ್ದವಾಗಿದೆ. ೫೦ ಚದರಮೈಲಿ ವಿಸ್ತೀರ್ಣದಷ್ಟು ನೀರನ್ನು ಅಡ್ಡಗಟ್ಟಿ ನಿಲ್ಲಿಸಿದೆ. ಕಟ್ಟೆಯ ಎತ್ತರ ೧೪೦ ಅಡಿ.

ಕಟ್ಟೆಯ ಹಿನ್ನೆಲೆಯಾಗಿ ನದಿಯ ಎರಡೂ ಪಕ್ಕದಲ್ಲಿ ಮೈಸೂರಿಗೆ ಬರುವ ಪ್ರವಾಸಿಗಳನ್ನು ಆಕರ್ಷಿಸುವ ಸುಪ್ರಸಿದ್ಧ ಬೃಂದಾವನವಿದೆ. ಈ ಚೆಲುವಾದ ತೋಟದಲ್ಲಿ ವಿವಿಧ ವರ್ಣಗಳ ವಿದ್ಯುದ್ದೀಪ ಸಹಿತವಾದ ಬುಗ್ಗೆಗಳು ಪಕ್ಕದಲ್ಲೇ ಕಾಲುದಾರಿಯಲ್ಲಿ ನಡೆಯುವ ಪ್ರವಾಸಿಯ ಹೃದಯವನ್ನು ಸೂರೆಗೊಳ್ಳದಿರಲಾರವು. ಈ ಬುಗ್ಗೆಗಳು ಪ್ರತಿ ಶನಿವಾರ ಭಾನುವಾರ ರಾತ್ರಿ ೭ ರಿಂದ ೯ ಗಂಟೆಯ ವರೆಗೆ ವಿದ್ಯುದ್ದೀಪಾಲಂಕಾರಗಳಿಂದ ಚಿಮ್ಮುತ್ತಿರುತ್ತವೆ. ಈ ದಿವಸಗಳಲ್ಲಿ ಮೈಸೂರಿನಿಂದ ಕೃಷ್ಣರಾಜಸಾಗರಕ್ಕೆ ಸ್ಪೆಷಲ್ ರೈಲುಗಾಡಿಗಳಿವೆ. ಕಾವೇರಿ ನದಿ ತನ್ನಲ್ಲಿ ಅಡಗಿಸಿ ಇಟ್ಟುಕೊಂಡಿರುವ ಜಗತ್ತನ್ನೇ ಬೆರಗುಪಡಿಸಿರುವ ವಿದ್ಯುತ್ ಸೌಂದರ್ಯವನ್ನು ನೋಡಿ ಜನರು ಆನಂದಿಸಲೆಂದು ಈ ಸೌಕರ್ಯವನ್ನು ಏರ್ಪಡಿಸಿದೆ.

**ಸೋಮನಾಥಪುರ:** ಮೈಸೂರಿನಿಂದ ಶ್ರೀರಂಗಪಟ್ಟಣ ಮತ್ತು ಬನ್ನೂರು ಮಾರ್ಗವಾಗಿ ಹೊರಟರೆ ೩೩ ಮೈಲಿ ದೂರದಲ್ಲಿ ಈ ಊರು ಸಿಕ್ಕುತ್ತದೆ. ಕ್ರಿ. ಶ. ೧೨೬೮ರಲ್ಲಿ ಹೊಯ್ಸಳ ಶಿಲ್ಪಿಗಳು ಕಟ್ಟಿದ ದೇವಾಲಯ ಈ ಊರಿನಲ್ಲಿದೆ. ಇಷ್ಟು ಪರಿಪೂರ್ಣವಾಗಿ ಹೊಯ್ಸಳ ಸಂಪ್ರದಾಯದಲ್ಲಿ ಕಟ್ಟಲ್ಪಟ್ಟಿರುವ ಇನ್ನೊಂದು ದೇವಾಲಯ ಮೈಸೂರಿನಲ್ಲಿ ಇನ್ನೆಲ್ಲೂ ಇಲ್ಲ. ದೇವಾಲಯದಲ್ಲಿ ಅಡಿಯಿಂದ ಮುಡಿಯ ವರೆಗೆ ಕುಸುರಿಯ ಕೆಲಸವಿದ್ದು, ದೇವಾಲಯವು ಶಿಲ್ಪಕಲೆಯ ಸುಪ್ರದರ್ಶನಶಾಲೆಯಂತಿರುವುದನ್ನು ಅತಿಥಿಗಳು ಮನಗಾಣದಿರಲಾರರು.

## ಬಿಡುವಿದ್ದು ವೆಚ್ಚಮಾಡಬಲ್ಲವರಿಗೆ

**ಬೇಲೂರು—ಹಳೆಯಬೀಡು:** ಹಾಸನಕ್ಕೆ ಸುಮಾರು ೩೦ ಮೈಲಿ ದೂರದಲ್ಲಿ ಈ ಎರಡು ಸ್ಥಳಗಳಿವೆ. ಅಲ್ಲಿ ಹೊಯ್ಸಳ ಸಂಪ್ರದಾಯದಲ್ಲಿ ಕಟ್ಟಿರುವ ಸುಂದರ ದೇವಸ್ಥಾನಗಳಿವೆ. ಮೈಸೂರು ಸರಕಾರದವರು ಈಚೆಗೆ ೭೦ ಸಾವಿರ ರೂಪಾಯಿಗಳನ್ನು ವೆಚ್ಚಮಾಡಿ, ದೇವಸ್ಥಾನಗಳ ಶಿಲ್ಪವೈಭವವನ್ನು ಕಾಪಾಡಿಕೊಂಡು ಬರಲು ಏರ್ಪಾಟು ಮಾಡಿದ್ದಾರೆ.

ಶ್ರೀ॥ ಡಿ. ವಿ. ಗುಂಡಪ್ಪನವರ 'ಬೇಲೂರು ಶಿಲಾಬಾಲಿಕೆಯರು' ನಮ್ಮ ಅತಿಥಿಗಳಿಗೆ ಸ್ವಾಗತ ಬಯಸಲು ಸಿದ್ಧವಾಗಿರುವರು. ಬೇಲೂರಿನಲ್ಲಿ ವೈಷ್ಣವ ದೇವಾಲಯವೂ ಹಳೆಯಬೀಡಿನಲ್ಲಿ ಶೈವದೇವಾಲಯವೂ ಇವೆ. ಒಂದೊಂದರ ಶಿಲ್ಪ ರಚನೆಯ ರೀತಿಯೂ ಬೇರೆ ಬೇರೆ. ಎರಡೂ ಮಾದರಿಯವು.

**ಜೋಗ ಜಲಪಾತ:** ಶರಾವತಿ ೧೦೦೦ ಅಡಿಗಳಿಂದ ದುಮುಕುವ ಈ ಸ್ಥಳಕ್ಕೆ ಬೀರೂರು ಸಾಗರ ರಸ್ತೆಯಲ್ಲಿ ತಾಳುಗುಪ್ಪದ ವರೆಗೆ ರೈಲಿನ ಸೌಕರ್ಯವಿದೆ. ಅಲ್ಲಿಂದ ೯ ಮೈಲಿ, ಸದಾ ಸಿದ್ಧವಾಗಿರುವ ಬಸ್ಸಿನಲ್ಲಿ ಕೂತು ಪಯಣ ಮಾಡಿದರೆ ಜೋಗ ಮುಟ್ಟುವಿರಿ. ಅಲ್ಲಿ ಪ್ರಥಮ ತರಗತಿಯ ಬಂಗಲೆಯೂ, ದ್ವಿತೀಯ ತರಗತಿಯ ವಿಶ್ರಾಂತಿಗೃಹವೂ ಇರುವುವು.

ಶರಾವತಿ ನದಿ ಅರ್ಧಮೈಲಿ ಅಗಲವಾಗಿ ಸಾವಿರ ಅಡಿಗಳ ಎತ್ತರದಿಂದ ಪಾತಾಳವನ್ನು ಭೇದಿಸುವ ರಭಸದಿಂದ ಮಡುವಿಗೆ ಬೀಳುತ್ತಿದೆ. ಜಲಪಾತ, ದೇವತೆಗಳ ಕಣ್ಣಿಗೆ ಹಬ್ಬ ಮಾಡಬಲ್ಲಂಥ ಪ್ರಕೃತಿಯ ಲೀಲಾವಿನೋದವೆನ್ನಬಹುದಾಗಿದೆ.

**ಭದ್ರಾವತಿ :** ಅದೇ ಸಾಗರ ಬೀರೂರು ರೈಲ್ವೆ ದಾರಿಯಲ್ಲಿ ಶಿವಮೊಗ್ಗದ ಬಳಿ ಈ ಸ್ಥಳವಿದೆ. ಮೊದಲು ಸಣ್ಣ ಹಳ್ಳಿಯಾಗಿದ್ದು ಈಗ ದೊಡ್ಡ ಕೈಗಾರಿಕೆ ಕೇಂದ್ರವಾಗಿದೆ. ಅಲ್ಲಿ ಕಬ್ಬಿಣ ಮತ್ತು ಉಕ್ಕು, ಕಾಗದದ ಮತ್ತು ಸಿಮೆಂಟಿನ ಕಾರ್ಖಾನೆಗಳಿವೆ. ಈ ಕಾರ್ಖಾನೆಗಳು ಸುಮಾರು ೧೦,೦೦೦ ಜನರಿಗೆ ಉದ್ಯೋಗ ಕೊಟ್ಟಿವೆ.

**ಶ್ರವಣಬೆಳ್ಗೊಳ :** ಮೈಸೂರಿನಿಂದ ೫೦ ಮೈಲಿ ದೂರದಲ್ಲಿರುವ ಜೈನ ಯಾತ್ರಸ್ಥಳ. ಅಲ್ಲಿರುವ ಗೊಮ್ಮಟೇಶ್ವರನ ಸುಂದರ ವಿಗ್ರಹ ಪ್ರಾಯಶಃ ಕ್ರಿ. ಶ. ೧೦ನೆಯ ಶತಮಾನದ್ದು. ಅದು ೫೮ ಅಡಿ ಎತ್ತರವಿದ್ದು, ಸುತ್ತ ಅನೇಕ ಮೈಲಿಗಳವರೆಗೂ ಕಾಣಿಸುವುದು. ಖಂಡಿತ ನೋಡಬೇಕಾದ ಚೆಲುವಿನ ಬೀಡು.

**ಮಂಡ್ಯ :** ಬೆಂಗಳೂರು-ಮೈಸೂರು ರೈಲು ದಾರಿಯಲ್ಲಿ ಮೈಸೂರಿನಿಂದ ೩೦ ಮೈಲಿ ದೂರದಲ್ಲಿದೆ. ಅಲ್ಲಿ ಸಕ್ಕರೆ ಕಾರ್ಖಾನೆ ಇದೆ.

**ಶಿವಸಮುದ್ರ:** ಮೈಸೂರಿಗೆ ೫೫ ಮೈಲಿ ದೂರದಲ್ಲಿದೆ. ಇಲ್ಲಿ ಕಾವೇರಿನದಿ ಎರಡುಕಡೆ ದುಮುಕುವುದು. ಈ ಜಲಪಾತಗಳ ಪಕ್ಕದಲ್ಲಿನ ವಿಶಾಲ ಪ್ರದೇಶದಲ್ಲಿ ಹಸುರು ತಾನೇ ತಾನಾಗಿ ಹಬ್ಬಿ ಭೂಮಿ ಸಮೃದ್ಧಿಯಾಗಿ ಸುಂದರವಾಗಿದೆ. ಇಲ್ಲೇ ಕಾವೇರಿ ನೀರು ವಿದ್ಯುತ್ತಾಗಿ ಮಾರ್ಪಟ್ಟು ಮೈಸೂರು ಸಂಸ್ಥಾನದ ಸಾವಿರಾರು ಮನೆಗಳನ್ನು ಬೆಳಗುತ್ತಿರುವುದು, ಕಾರ್ಖಾನೆಗಳನ್ನು ಶ್ರೇಯಸ್ಕರವಾಗಿ ಹೆಚ್ಚಿಸುತ್ತಿರುವುದು.

**ಹುಲಿಕೆರೆ :** ಬ್ಯಾಡರಹಳ್ಳಿ ರೈಲ್ವೆ ಸ್ಟೇಷನ್ನಿಗೆ ೫ ಮೈಲಿ ದೂರದಲ್ಲಿದೆ. ಹುಲಿಕೆರೆ ದುರ್ಗದ ಒಂದು ಪಕ್ಕದಿಂದ ಇನ್ನೊಂದು ಪಕ್ಕಕ್ಕೆ ೯೨೦೦ ಅಡಿಗಳಷ್ಟು ದೂರ ಸುರಂಗವನ್ನು ಕೊರೆದು ಇರ್ವಿನ್ ನಾಲೆಯ ನೀರನ್ನು ಕೊಂಡೊಯ್ದಿರುವ ವಾಸ್ತುಶಿಲ್ಪ ಚಾತುರ್ಯವನ್ನು ಇಲ್ಲಿ ಕಾಣಬಹುದು. ಸುರಂಗ ಕುದುರೆ ಲಾಳದ ಆಕಾರದಲ್ಲಿದೆ. ೧೫ ಅಡಿ ವ್ಯಾಸವುಳ್ಳದ್ದು.

---

## ಕನ್ನಡ ಸುದ್ದಿ

**ವಯಸ್ಕರ ಶಿಕ್ಷಣ :**

ಬೆಂಗಳೂರು ಬಸವನಗುಡಿ ರಾಮಕೃಷ್ಣಾಶ್ರಮದ ವಿವೇಕ ಸಾಧನ ಸಂಘದವರು ತುಮಕೂರು ಜಿಲ್ಲೆಯ ಒಂದು ಗ್ರಾಮದಲ್ಲಿ ನಡಸುತ್ತಿದ್ದ ವಯಸ್ಕರ ಶಿಕ್ಷಣ ಕಾರ್ಯವನ್ನು ಮುಗಿಸಿ ಈ ತಿಂಗಳು ೧ನೆಯ ತಾರೀಖಿನಿಂದ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ ಕೊಪ್ಪ ಗ್ರಾಮದಲ್ಲಿ ಶಿಕ್ಷಣ ನಡಸಿಕೊಂಡು ಬರುತ್ತಿದ್ದಾರೆ. ಕಳೆದ ೧೮ನೆಯ ತಾರೀಖು ಮಠದ ಗುರುಗಳೂ, ಶ್ರೀ॥ ದೇವರಾವ್ ಶಿವರಾಮರವರೂ ಶಿಕ್ಷಣ ಶಿಬಿರಕ್ಕೆ ಭೇಟಿಯಿತ್ತು, ಅಲ್ಲಿ ಕಲಿಯುತ್ತಿರುವ ೩೦ ಮಂದಿ ವಯಸ್ಕರ ಅಭಿವೃದ್ಧಿಯನ್ನು ನಿರೀಕ್ಷಿಸಿದರೆಂದು ತಿಳಿಯಬರುತ್ತದೆ.

**ಶಿಕಾರಿಪುರ : ಜ್ಞಾನಪ್ರಕಾಶ ಮಂದಿರ**

ಮೇಲ್ಕಂಡ ಸಂಸ್ಥೆಯವರು ನಡಸಿಕೊಂಡು ಬರುತ್ತಿರುವ ವಾಚನಾಲಯದ ವಾರ್ಷಿಕೋತ್ಸವ ಗದುಗಿನ "ಕರ್ನಾಟಕ ಬಂಧು" ಪತ್ರಿಕೆಯ ಸಂಪಾದಕರಾದ ಶ್ರೀ॥ ಸಿ. ವಿ. ಹಿರೇಮಠರವರ ಅಧ್ಯಕ್ಷತೆಯಲ್ಲಿ ಇದೇ ತಿಂಗಳು ೨೩ನೆಯ ಭಾನುವಾರ ನಡೆಯುವುದು.

೨೪ನೆಯ ತಾರೀಖು ಸಂಜೆ ಸ್ಥಳೀಯ ಕರ್ನಾಟಕ ಸಂಘದ ಆಶ್ರಯದಲ್ಲಿ ಅಧ್ಯಕ್ಷರು ಭಾಷಣ ಮಾಡುವರು.

## ಪರಿಷತ್ತಿನ ಸುದ್ದಿ

### ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವ

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾದ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ., ಮಹಾಸ್ವಾಮಿಯವರ ವರ್ಷ ವರ್ಧಂತ್ಯುತ್ಸವವನ್ನು ಆಚರಿಸಲು ಪರಿಷತ್ತಿನ ಆಶ್ರಯದಲ್ಲಿ ಬೆಂಗಳೂರಿನ ಸದಸ್ಯರು ಮತ್ತು ಇತರ ಪುರ ಜನರ ಸಭೆ ೧೬-೬-೪೦ನೆಯ ಭಾನುವಾರ ಸಂಜೆ ೬ ಘಂಟೆಯಲ್ಲಿ ಸೇರಿತ್ತು. ಸಭೆಗೆ ಮೈಸೂರು ವಿದ್ಯಾಭ್ಯಾಸ ಇಲಾಖೆಯ ಡೆಪ್ಯುಟಿ ಡೈರೆಕ್ಟರರಾದ ಶ್ರೀ|| ಸುಲ್ತಾನ್ ಮೊಹಿಯುದ್ದೀನ್ ಅವರೂ, ಪ್ರೊ|| ಎಲ್. ರಾಮರಾಯರೂ, ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರೂ ಮುಂತಾದ ಅನೇಕ ಮಾನ್ಯರುಗಳು ದಯಮಾಡಿಸಿದ್ದರು.

ಮದರಾಸು ಸರ್ಕಾರದ ನಿವೃತ್ತ ಸೀನಿಯರ್ ಟ್ರಾನ್ಸ್‌ಲೇಟರ್ ರವರಾದ ಶ್ರೀ|| ಬೆನಗಲ್ ರಾಮರಾಯರವರು ಸಭಾಧ್ಯಕ್ಷತೆ ವಹಿಸಿದ್ದರು.

ಶ್ರೀ|| ಕೆ. ಎಸ್. ಧರಣೇಂದ್ರಯ್ಯನವರ ಶ್ರೀಮನ್ಮಹಾರಾಜರವರ ಗುಣಗಾನದ ಕವಿತೆಯ ವಾಚನವೂ ಪ್ರಾರ್ಥನೆಯೂ ಶ್ರೀ|| ಟಿ. ಆರ್. ಜಯರಾಯ ಅವರ ಸಂಗೀತವೂ ಆದ ಬಳಿಕ ಕಾರ್ಯಕ್ರಮ ಮೊದಲಾಯಿತು.

ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ಮೊದಲು ಭಾಷಣ ಮಾಡುತ್ತಾ, ಮಹಾಸ್ವಾಮಿಯವರ ಪೂಜ್ಯವ್ಯಕ್ತಿತ್ವವನ್ನೂ ಆದರ್ಶಗುಣಗಳನ್ನೂ ವರ್ಣಿಸಿ, ಪ್ರಜೆಗಳಲ್ಲಿ ಮಹಾಸ್ವಾಮಿಯವರಿಗೆ ಇರುವ ಪ್ರೇಮ ಅಪಾರವಾದುದೆಂದೂ, ಇಂತಹ ಆದರ್ಶಪ್ರಭುವನ್ನು ಪಡೆದ ಪ್ರಜೆಗಳು ಅವ್ಯಾಜವಾದ ರಾಜಭಕ್ತಿಗಳಿಂದ ಕೂಡಿ ನಡೆದುಕೊಳ್ಳಬೇಕಾದುದು ಅವರ ಕರ್ತವ್ಯವೆಂದೂ ಹೇಳಿದರು.

ಪರಿಷತ್ತಿಗೆ ಮೈಸೂರು ರಾಜಮನೆತನದವರ ಕೃಪಾಶ್ರಯವೂ ಪೋಷಣೆಯೂ ಸಹಾಯವೂ ಬಹಳ ಹಿಂದಿನಿಂದಲೂ ಒದಗಿ ಬರುತ್ತಿರುವುದಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಿದರು.

ಮೈಸೂರು ಪ್ರಭುಗಳ ನೇತೃತ್ವದಲ್ಲಿ, ರಾಜಕೀಯವಾಗಿ ಎಷ್ಟು ಮುಂದುವರಿದಿದೆಯೆಂಬುದನ್ನೂ, ಮಾದರಿ ರಾಜ್ಯವಾಗಿ ಎಲ್ಲರ ಮೆಚ್ಚುಗೆ ಪಡೆದಿದೆಯೆಂದೂ ಹೇಳಿದರು. "ಮೈಸೂರಿನ ರಾಜಕೀಯ ಭವಿಷ್ಯತ್ತು ಮಂಗಳಕರವಾಗಿದೆಯೆಂದೂ, ಅಖಿಲ ಕರ್ನಾಟಕವೂ ಒಂದಾಗಿ ಶ್ರೀಮನ್ಮಹಾರಾಜರವರ ನೇತೃತ್ವದಲ್ಲಿ ಮುಂದುವರಿಯಲೆಂದು ಕನ್ನಡ ನಾಡಿನ ಮುಂದಾಳುಗಳು ಹಲವರು ಭಗವಂತನಲ್ಲಿ ಪ್ರಾರ್ಥಿಸುತ್ತಿರುವರೆಂದೂ" ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಬಳಿಕ ಶ್ರೀ|| ಬೆನಗಲ್ ರಾಮರಾಯರು "ಶ್ರೀ"ಯವರ ಭಾವನೆಗಳನ್ನು ಪುಷ್ಟಿಗೊಳಿಸಿ ಮಾತಾಡಿ, ತಾವು ಬಹು ವರ್ಷಗಳ ಕಾಲ ಹೊರಗಿದ್ದರೂ ಈಗ ಬೆಂಗಳೂರಿನಲ್ಲಿ ನೆಲಸಿ ಶ್ರೀಮನ್ಮಹಾರಾಜರವರ [illegible] ಎಂದು [illegible] ಭಕ್ತಿ ಸಂದೇಶವನ್ನೊಳಗೊಂಡ ಈ ಮುಂದಿನ ನಿರ್ಣಯವನ್ನು ಸಭೆಯ ಮುಂದೆ ಅಂಗೀಕಾರಕ್ಕಾಗಿ ಇಟ್ಟರು.

> ಕರ್ನಾಟಕ ಸಿಂಹಾಸನಾಧೀಶ್ವರರೂ, ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ ಆಗಿ ನಮ್ಮನ್ನಾಳುತ್ತಿರುವ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ., ಮಹಾಸ್ವಾಮಿಯವರ ವರ್ಷವರ್ಧಂತ್ಯುತ್ಸವದ ಪ್ರಯುಕ್ತ ಸೇರಿರುವ ಈ ಮಹಾಸಭೆಯು ಮಹಾಪ್ರಭುಗಳವರಿಗೆ ಜಗದೀಶ್ವರನು ಆಯುರ್‍ಆರೋಗ್ಯ, ವಿಜಯ, ಐಶ್ವರ್ಯಾದಿ ಸಮಸ್ತ ಸನ್ಮಂಗಳವನ್ನೂ ಕರುಣಿಸಬೇಕೆಂದು ಪ್ರಾರ್ಥಿಸುತ್ತದೆ ಮತ್ತು ತನ್ನ ರಾಜಭಕ್ತಿ ವಿಶ್ವಾಸಗಳನ್ನು ಮಹಾಸ್ವಾಮಿಯವರಲ್ಲಿ ಸಮರ್ಪಿಸಲು ಅಪ್ಪಣೆ ಬೇಡುತ್ತದೆ.

ನಿರ್ಣಯ ಜಯಜಯಕಾರಗಳೊಡನೆ ಅಂಗೀಕೃತವಾಯಿತು.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ|| ಬಿ. ವೆಂಕೋಬರಾವ್ ಅವರು ಸಭಾಧ್ಯಕ್ಷರಿಗೆ ಧನ್ಯವಾದಗಳನ್ನರ್ಪಿಸಿದ ಮೇಲೆ "ಕಾಯೌ ಶ್ರೀಗೌರಿ" ಹಾಡಿನೊಂದಿಗೆ ಸಭೆ ಮುಗಿಯಿತು.

### ಶ್ರೀಮನ್ಮಹಾರಾಜರವರಿಗೆ ಅರ್ಪಿಸುವ ರಜತಕರಂಡ

ಪರಿಷತ್ತು ಶ್ರೀಮನ್ಮಹಾರಾಜರವರಿಗೆ ಅರ್ಪಿಸಬೇಕೆಂದಿರುವ ಬೆಳ್ಳಿ ಕರಂಡವನ್ನು ನಗರ್ತಪೇಟೆಯ ಪ್ರಸಿದ್ಧ ರತ್ನಪಡಿವ್ಯಾಪಾರಿಗಳಾದ ಶ್ರೀ|| ಎಸ್. ನರಸಿಂಹ ಐಯ್ಯರ್ ಅವರು ಬಹಳ ನಿಪುಣತೆಯಿಂದ ರಚಿಸಿದ್ದಾರೆ. ಅದು ೧೨" ಉದ್ದವಾಗಿಯೂ, ೬" ಅಗಲವಾಗಿಯೂ, ೮" ಎತ್ತರವಾಗಿಯೂ ಇರುವುದು.

ಮುಡಿಯಲ್ಲಿ ಸರಸ್ವತಿ ವಿಗ್ರಹ.

ಕಿರು ಅಳತೆಯ ಒಂದು ಮಗ್ಗುಲಲ್ಲಿ ಕನ್ನಡ ನಾಡಿನ ನಕ್ಷೆಯೂ ಇನ್ನೊಂದು ಮಗ್ಗುಲಲ್ಲಿ ಚಾಮುಂಡೇಶ್ವರಿಯ ಮೂರ್ತಿಯೂ ಇವೆ.

ನೀಳಳತೆಯ ಒಂದು ಮಗ್ಗುಲಲ್ಲಿ ಗೊಮ್ಮಟ, ಸಂಗಮಲಿಂಗ ಮತ್ತು ಹರಿಹರ ಮೂರ್ತಿಗಳೂ ಈ ಮೂರ್ತಿಗಳ ಅಕ್ಕಪಕ್ಕದಲ್ಲಿ ಚರ್ಚು ಮಸೀದಿಗಳೂ ಕೆತ್ತಲ್ಪಟ್ಟಿವೆ. ಇನ್ನೊಂದು ಮಗ್ಗುಲಲ್ಲಿ ಪರಿಷತ್ತಿನ ಕಟ್ಟಡ ಕಂಗೊಳಿಸುತ್ತಿದೆ.

ಮಹಾಸ್ವಾಮಿಯವರಿಗೆ ಬಿನ್ನವತ್ತಳೆಯನ್ನು ಈ ಕರಂಡದಲ್ಲಿ ಇಟ್ಟು ಅರ್ಪಿಸಬೇಕೆಂದು ಏರ್ಪಾಟು ಮಾಡಲಾಗಿದೆ.

### ಬೆಳ್ಳಿಯಹಬ್ಬಕ್ಕೆ ಶ್ರೀಮದ್ಯುವರಾಜರ ಉದಾರದಾನ

ಬೆಳ್ಳಿಯ ಹಬ್ಬದ ಸಲುವಾಗಿ ಪರಿಷತ್ತಿನ ಪೋಷಕರೂ ಅಧ್ಯಕ್ಷರೂ ಆದ **ಶ್ರೀಮದ್ಯುವರಾಜರು ಶ್ರೀ ಜಯಚಾಮರಾಜೇಂದ್ರ ಒಡೆಯರವರು** ೨೦೦ ರೂಪಾಯಿಗಳ ಉದಾರದಾನವನ್ನು ಕೃಪೆ ಮಾಡಿರುತ್ತಾರೆ.

### ಕಾರ್ಯಸಮಿತಿಯ ಅಧಿವೇಶನ

ಪರಿಷತ್ತಿನ ಕಾರ್ಯಸಮಿತಿಯ ಅಧಿವೇಶನ ಇದೇ ತಿಂಗಳು ೨೯ನೆಯ ತಾರೀಖು ಮಧ್ಯಾಹ್ನ ೧೨ ಗಂಟೆಗೆ ಪರಿಷತ್ತಿನ ಸಭಾಮಂದಿರದಲ್ಲಿ ಸೇರುತ್ತದೆ.

### ಗ್ರಂಥ ಪ್ರದರ್ಶನ

ಬೆಳ್ಳಿಯ ಹಬ್ಬದ ಸಂಬಂಧದಲ್ಲಿ ಏರ್ಪಡಿಸಿರುವ ಗ್ರಂಥ ಪ್ರದರ್ಶನಕ್ಕೆ ಗ್ರಂಥಗಳನ್ನು ಕಳಿಸಲು ಅವಧಿಯನ್ನು ಹೆಚ್ಚಿಸಬೇಕೆಂದು ಹಲವು ಪ್ರಕಾಶಕರು ಕೋರಿದ್ದರಿಂದ, ೨೫ನೆಯ ತಾರೀಖಿನ ವರೆಗೆ ಅವಧಿಯನ್ನು ಹೆಚ್ಚಿಸಿದೆ.

### ಕರ್ನಾಟಕ ಸಂಘಗಳಲ್ಲಿ ಬಿನ್ನಹ

ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಸೇರಿರುವ ಕನ್ನಡ ನಾಡಿನ ಎಲ್ಲಾ ಕರ್ನಾಟಕ ಸಂಘಗಳೂ ಸಂಸ್ಥೆಗಳೂ ಆದಷ್ಟುಬೇಗ ತಮ್ಮ ತಮ್ಮ ಸಂಸ್ಥೆಗಳ ಪರಿಷತ್ಸದಸ್ಯರ ಸಭೆಯನ್ನು ಕರೆದು, ಪ್ರತಿನಿಧಿಗಳನ್ನು ಆರಿಸಿ, ಬೆಳ್ಳಿಯಹಬ್ಬಕ್ಕೆ ಅವರನ್ನು ಕಳಿಸಬೇಕೆಂದು ಪ್ರಾರ್ಥನೆ. ಹಾಗೆ ಹಬ್ಬಕ್ಕೆ ಬರುವ ಪ್ರತಿನಿಧಿಗಳ ಹೆಸರು, ಬರುವ ತಾರೀಖುಗಳನ್ನು ಕಾರ್ಯದರ್ಶಿಗಳಿಗೆ ಬೇಗ ತಿಳಿಸಬೇಕೆಂದು ಕೋರಿಕೆ.

### ಬೆಳ್ಳಿಯ ಹಬ್ಬಕ್ಕೆ ಬರುವ ಅತಿಥಿಗಳಲ್ಲಿ ಪ್ರಾರ್ಥನೆ

ಪರಿಷತ್ತಿನ [illegible]ಕ್ಕೆ ಹೊರಗಿನಿಂದ ಬರುವ ಅತಿಥಿಗಳು [illegible]ಗೆ ಪರಿಷತ್ತಿನ ಸಹಾಯಬೇಕಾದಲ್ಲಿ ಅಂಥವರು ೨೫-೬-೪೦ರ ಹೊತ್ತಿಗೆ ಪರಿಷತ್ತಿನ ಕಾರ್ಯದರ್ಶಿಗಳಿಗೆ ಬರೆದು ತಿಳಿಸಬೇಕೆಂದು ಪ್ರಾರ್ಥನೆ. ಪರಿಷತ್ತಿನ ನೇತೃತ್ವದಲ್ಲಿ ಭೋಜನಾದಿ ಸೌಕರ್ಯಗಳನ್ನು ಪಡೆಯುವ ಅತಿಥಿಗಳು ಮೂರು ದಿನಗಳಿಗೆ ಒಂದು ರೂಪಾಯಿ ಕೊಡಬೇಕಾಗುವುದು.

ಹೊರಗಿನಿಂದ ಬರುವ ಅತಿಥಿಗಳು ಬೆಂಗಳೂರಿಗೆ ಬಂದ ಒಡನೆ, ತಮ್ಮ ಆಗಮನವನ್ನೂ ತಾವು ಇಳಿದುಕೊಂಡಿರುವ ಸ್ಥಳವನ್ನೂ ಪರಿಷತ್ತಿನ ಕಚೇರಿಗೆ ತಿಳಿಸಬೇಕೆಂದು ಪ್ರಾರ್ಥನೆ.

### ಆಹ್ವಾನಿತರಲ್ಲಿ ಬಿನ್ನಹ

ಬೆಳ್ಳಿಯ ಹಬ್ಬಕ್ಕೆ ಆಹ್ವಾನಿತರಾಗಿರುವ ಮೈಸೂರು ಸಂಸ್ಥಾನದ ಮಹನೀಯರಿಗೆ ಉಡುಪು: ನಿಲುವಂಗಿ, ಪರಾಯಿ, ಜರತಾರಿ ರುಮಾಲು ಮತ್ತು ಜರತಾರಿ ಅಂಗವಸ್ತ್ರ ಅಥವಾ ಕಮ್ಮರ್‌ಬಂದ್.

## ಸ್ವಯಂ ಸೇವಕರ ವ್ಯವಸ್ಥೆ

ಸ್ಕೌಟು ಪೋಷಾಕು ಧರಿಸಿದ ಸ್ವಯಂ ಸೇವಕರು ಬೆಂಗಳೂರು ರೈಲ್ವೆ ಸ್ಟೇಷನ್ನಿನಲ್ಲಿ ಬೆಳ್ಳಿಯ ಹಬ್ಬಕ್ಕೆ ಬರುವ ಅತಿಥಿಗಳ ಸೇವೆಗಾಗಿ ಕಾದಿರುವರು. ಅತಿಥಿಗಳು ತಮ್ಮ ಸೌಕರ್ಯಗಳ ಬಗ್ಗೆ ಅವರ ಸಹಾಯವನ್ನು ಪಡೆಯಬೇಕೆಂದು ಕೋರಿಕೆ.

## ಪರಸ್ಥಳದವರಿಗೆ ರೈಲಿನ ಸೌಕರ್ಯ

ಬೆಂಗಳೂರಿಗೆ ನಾನಾ ದಿಕ್ಕುಗಳಿಂದ ಬರುವ ರೈಲು ಗಾಡಿಗಳ ಕಾಲದ ಪಟ್ಟಿ

| | ಬೆಳಗ್ಗೆ | ಸಂಜೆ |
|---|---|---|
| ಮೈಸೂರಿನಿಂದ | ೫-೪೫ ; ೧೧-೪೦ | ೪-೨೫; ೬-೪೫; ೭-೩೦ |
| ಹಿಂದೂಪುರದಿಂದ | ೬-೧೫ ; ೧೦-೧೨ | ೫-೧೦ |
| ಹರಿಹರದಿಂದ | ೬-೪೫ | ೬-೫೦ |
| ಮದರಾಸಿನಿಂದ | ೭-೦ ; ೧೦-೧೫ | ೫-೩೫ ; ೯-೦ |

## ಬೆಂಗಳೂರಲ್ಲಿ ಸಾಕ್ಷರತಾ ಪ್ರಚಾರ

ಬೆಂಗಳೂರು ನಗರದಲ್ಲಿ ಸಾಕ್ಷರತಾ ಪ್ರಚಾರದ ಸಲುವಾಗಿ ಒಂದು ಪ್ರಚಂಡ ಚಳವಳಿಯನ್ನು ನಡಸುವ ಉದ್ದೇಶದಿಂದ ತಾ॥ ೧೯-೬-೪೦ರಲ್ಲಿ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಒಂದು ಸಭೆ ಸೇರಿತ್ತು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾದ ರಾಜಕಾರ್ಯಪ್ರವೀಣ ಎನ್. ಎಸ್. ಸುಬ್ಬರಾಯರವರು ಅಗ್ರಾಸನವನ್ನಲಂಕರಿಸಿದ್ದರು. ಈ ಕೆಳಗೆ ಕಂಡ ಮಹನೀಯರನ್ನುಳ್ಳ ಕಾರ್ಯಕಾರಿ ಮಂಡಲವೇರ್ಪಟ್ಟಿತು. ಮಂಡಲವು ಶೀಘ್ರದಲ್ಲಿಯೇ ಅಕ್ಷರ ಪ್ರಚಾರ ಕಾರ್ಯವನ್ನು ಕೈಕೊಳ್ಳುವುದೆಂದು ತಿಳಿಯಬರುತ್ತದೆ.

### ಮಂಡಲದ ಸದಸ್ಯರು :

೧. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಅಧ್ಯಕ್ಷರು (ಪರಿಷತ್ತಿನ ಪರವಾಗಿ). ೨. ಬೆಂಗಳೂರು ಪೌರಸಭೆಯ ಅಧ್ಯಕ್ಷರು – ಉಪಾಧ್ಯಕ್ಷರು. ೩. ಶ್ರೀ॥ ಟಿ. ಎಲ್. ಎ. ಆಚಾರ್ಯ – ಕಾರ್ಯದರ್ಶಿ. ೪. ಶ್ರೀ॥ ಎನ್. ಬಾಲಕೃಷ್ಣಯ್ಯನವರು, (ಪೌರಸಭೆ ಪರವಾಗಿ). ೫. ಶ್ರೀ॥ ರಾಮಶರ್ಮರವರು, (ಕೂಲಿಕಾರರ ಪರವಾಗಿ). ೬. ಶ್ರೀ॥ ಈಲಿಂಗ್‌ರವರು (ಬಿನ್ನಿ ಮಿಲ್ಸ್ ಪರವಾಗಿ). ೭. ಶ್ರೀಮತಿ ಆರ್. ಕಲ್ಯಾಣಮ್ಮನವರು. ೮. ಶ್ರೀ॥ ಟಿ. ರಾಮಚಂದ್ರ (ಸಮಾಜ ಸೇವಾ ಸಂಘಗಳ ಪರವಾಗಿ). ೯-೧೩ ವಿಶ್ವವಿದ್ಯಾನಿಲಯ ಸಂಘ, ಇಂಟರ್ ಮಿಡಿಯೇಟ್ ಕಾಲೇಜು ಸಂಘ, ಯೂನಿವರ್ಸಿಟಿ ಸೆಟ್ಲ್‌ಮೆಂಟ್, ಮಹಾರಾಣಿಯವರ ಕಾಲೇಜು, ಸೆಕೆಂಡರಿ ಸ್ಕೂಲುಗಳ ಅಧ್ಯಾಪಕ ಸಂಘ ಈ ಸಂಘಗಳ ಪರವಾಗಿ ಒಬ್ಬೊಬ್ಬ ಸದಸ್ಯರು. ೧೪. ವಿಶ್ವವಿದ್ಯಾನಿಲಯದ ಅಧ್ಯಾಪಕರ ಪರವಾಗಿ ಒಬ್ಬರು-ಸ್ಥಾನಪತಿಗಳಿಂದ ನಾಮಕರಣ. ೧೫. ಸರ್ಕಾರದ ಪರವಾಗಿ ಒಬ್ಬರು - ಶಿಕ್ಷಣ ಸಚಿವರಿಂದ ನಾಮಕರಣ. ಇವರುಗಳ ಜೊತೆಗೆ ಒಬ್ಬರು ಪತ್ರಿಕಾ ಪ್ರತಿನಿಧಿಗಳೂ ಇನ್ನೊಬ್ಬರು ಮೈಸೂರು ಅಕ್ಷರ ಪ್ರಚಾರ ಚಳವಳಿಯ ಪ್ರತಿನಿಧಿಗಳೂ 'ನಿರೀಕ್ಷಕ'ರಾಗಿ ಸಹಕರಿಸಬೇಕೆಂದು ಗೊತ್ತಾಗಿದೆ.

## ಬೆಳ್ಳಿಯ ಹಬ್ಬಕ್ಕೆ ದ್ರವ್ಯ ಸಹಾಯಮಾಡಿದವರ ಪಟ್ಟಿ—೨

ಈ ಕೆಳಗೆ ಕಂಡ ಮಹನೀಯರು ಕೃಪೆಮಾಡಿ ನೀಡಿರುವ ದ್ರವ್ಯ ಸಹಾಯವನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

| | ರೂ. |
|---|---|
| ಕನ್ನಡ ನುಡಿಯಲ್ಲಿ ೧೪—೬—೪೦ರಲ್ಲಿ ಪ್ರಕಟವಾಗಿರುವ ಮೊತ್ತ .... | [illegible] |
| ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿ, ಮುಂಬಯಿ .... | ೫೦ |
| ಯೂನಿವರ್ಸಿಟಿ ಯೂನಿಯನ್, ಬೆಂಗಳೂರು .... | ೨೫ |
| ಗ್ರೇಡಿಂಸ್ ಮರ್ಚೆಂಟ್ಸ್ ಕೋ-ಆಪರೇಟಿವ್ ಬ್ಯಾಂಕ್, ಬೆಂಗಳೂರು ... | ೨೫ |
| ಶ್ರೀ॥ ಜವಳಿ ಗಣೇಶರಾಯರು, ಬೆಂಗಳೂರು .... | ೨೫ |
| ಎಸ್. ಜಿ. ಶಾಸ್ತ್ರಿಗಳು, ಮೈಸೂರು .... | ೧೫ |
| ಡಿ. ಸಿ. ಸುಬ್ಬರಾಯಪ್ಪನವರು, ಬೆಂಗಳೂರು .... | ೧೫ |
| ಮೂಡಬಿದ್ರಿಯ ಧನಶಾಲಾಮಠದ ಶ್ರೀ ಶ್ರೀಸ್ವಾಮಿಗಳು .... | ೧೦ |
| ಪ್ರೊ॥ ಎಲ್. ರಾಮರಾಯರು, ಬೆಂಗಳೂರು .... | ೧೦ |
| ಶ್ರೀ॥ ವಿ. ಆರ್. ತ್ಯಾಗರಾಜ ಅಯ್ಯರ್‌ರವರು ಬೆಂಗಳೂರು .... | ೧೦ |
| ಮೈಸೂರು ಇನ್ಸೂರೆನ್ಸ್ ಕಂಪನಿ, ಬೆಂಗಳೂರು .... | ೧೦ |
| ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು, ಬೆಂಗಳೂರು .... | ೧೦ |
| ಶ್ರೀ॥ ಟಿ. ರಾಮಯ್ಯನವರು, ಹಾಸನ .... | ೧೦ |
| ,, ಸುಲ್ತಾನ್ ಮೊಹಿಯುದ್ದೀನ್‌ರವರು .... | ೧೦ |
| ,, ಬೆನಗಲ್ ರಾಮರಾಯರು ಬೆಂಗಳೂರು .... | ೧೦ |
| ದಿವಾನ್ ಬಹದ್ದೂರ್ ಕೆ. ಆರ್. ಶೇಷಾಚಾರ್ಯರು, ಬೆಂಗಳೂರು .... | ೭ |
| ಶ್ರೀ॥ ಬಿ. ವೆಂಕಟಸ್ವಾಮಯ್ಯನವರು, ಬೆಂಗಳೂರು .... | ೫ |
| ,, ಜೆ. ವಿ. ದೊಡ್ಡವೀರಪ್ಪನವರು, ಬೆಂಗಳೂರು .... | ೫ |
| ,, ಜೆ. ರುದ್ರಪ್ಪನವರು, ಬೆಂಗಳೂರು .... | ೫ |
| ,, ಷಾಂಪೂರ್ ಪಾಪಣ್ಣನವರು, ಬೆಂಗಳೂರು .... | ೫ |
| ಪ್ರೊ॥ ಎಸ್. ಎಸ್. ಮಾಳವಾಡರವರು, ಧಾರವಾಡ .... | ೫ |
| ಬೆಂಗಳೂರು ಸಿಟಿ ಕೋ-ಆಪರೇಟಿವ್ ಸೊಸೈಟಿ .... | ೫ |
| ಶ್ರೀ॥ ಜೆ. ಬಿ. ಮಲ್ಲಾರಾಧ್ಯರವರು, ಕೋಲಾರ .... | ೫ |
| ,, ಎಂ. ಬಿ. ತಿವಾರಿಯವರು .... | ೫ |
| ,, ಡಿ. ಪಿ. ಕರಮರಕರ್ ಅವರು .... | ೫ |
| ಕರ್ನಾಟಕ ಸಂಘ, ಮಡಿಕೇರಿ .... | ೫ |
| ಬಿ. ವೆಂಕಟಕೃಷ್ಣಪ್ಪನವರು, ಬೆಂಗಳೂರು .... | ೩ |
| ದಿವಾನ್ ಬಹದ್ದೂರ್ ಟಿ. ಭುಜಂಗರಾಯರು .... | ೩ |
| ಶ್ರೀ॥ ಸೀತಾರಾಮಯ್ಯನವರು, ಬೆಂಗಳೂರು .... | ೩ |
| ,, ಎನ್. ಲಕ್ಷ್ಮೀನರಸಿಂಹಯ್ಯನವರು, ಬೆಂಗಳೂರು .... | ೩ |
| ,, ಎಚ್. ಸುಬ್ಬಜೋಯಿಸರು .... | ೩ |
| ರಾವ್‌ಬಹದ್ದೂರ್ ಡಾ॥ ಸಿ.ಬಿ. ರಾಮರಾಯರು, ,, .... | ೨ |
| ರಾವ್ ಸಾಹೇಬ್ ಶ್ರೀ॥ ಆರ್. ರಾಮರಾಯರು, ,, .... | ೨ |
| ಶ್ರೀ॥ ಕೆ. ಅನಂತರಾಮಯ್ಯನವರು, ,, .... | ೨ |
| ,, ಎ. ಎನ್. ಸುಬ್ಬರಾಯರು, ,, .... | ೨ |
| ,, ಬಿ. ಎಸ್. ಪಾಂಡುರಂಗರಾಯರು, ,, .... | ೨ |
| ,, ಹೆಚ್. ತಿರುಮಲಾಚಾರ್ ಅವರು, ಮಡಿಕೇರಿ .... | ೨ |
| ,, ಎನ್. ಮುದಪ್ಪನವರು, ,, .... | ೨ |
| ,, ಎಂ. ಎಸ್. ಅನಂತಪದ್ಮನಾಭರಾಯರು, ಮಡಿಕೇರಿ .... | ೨ |
| ,, ಎಂ. ವಾಸುದೇವಮೂರ್ತಿ ಅವರು, ಬೆಂಗಳೂರು .... | ೨ |
| ,, ಎನ್. ಜಿ. ಲಕ್ಷ್ಮೀನರಸಿಂಹ ಐಯಂಗಾರ್ .... | ೨ |
| ,, ಟಿ. ರಾಮಚಂದ್ರರಾಯರು .... | ೨ |
| ಮಿಸೆಸ್ ಎಸ್. ಗೋಪಾಲಸ್ವಾಮಿಯವರು .... | ೧ |
| ಶ್ರೀ॥ ಬಿ. ಕೃಷ್ಣಮೂರ್ತಿಯವರು, ,, .... | ೧ |
| ,, ಜೆ. ನರಸಿಂಹನ್‌ರವರು, ,, .... | ೧ |
| ,, ಡಾ॥ ಎಲ್. ಎಸ್. ದೊರೆಸ್ವಾಮಿಯವರು ಬೆಂಗಳೂರು .... | ೧ |
| ,, ಚಂದ್ರಶೇಖರ ಅವರು, ,, .... | ೧ |
| ,, ಎಸ್. ಅಶ್ವತ್ಥನಾರಾಯಣರಾಯರು, ,, .... | ೧ |
| ,, ಬಿ. ಗೋಪಾಲ ಅಯ್ಯಂಗಾರ್ಯರವರು, ,, .... | ೧ |
| ,, ಟಿ. ಶ್ರೀನಿವಾಸ ಮೂರ್ತಿಯವರು, ,, ... | ೧ |
| ,, ಎ. ಎನ್. ಶ್ರೀನಿವಾಸ ಅಯ್ಯಂಗಾರ್ಯರವರು, ಮೇಲುಕೋಟೆ .... | ೧ |
| ,, ಡಿ. ಹನುಮಂತಯ್ಯನವರು, ಬೆಂಗಳೂರು .... | ೧ |
| ,, ಕೆ. ಎನ್. ಕೃಷ್ಣಪ್ರಸಾದ್‌ರವರು, ಬೆಂಗಳೂರು .... | ೧ |
| ,, ಹೆಚ್. ಶ್ರೀನಿವಾಸಯ್ಯನವರು, ,, .... | ೧ |
| ,, ಡಿ. ಡೇನಿಯಲ್ ಅವರು, ,, .... | ೧ |
| ,, ಎನ್. ವಿ. ಶಿದ್ದಲಿಂಗಪ್ಪನವರು, ,, .... | ೧ |
| ,, ಎಸ್. ರಂಗಸ್ವಾಮಿ ಅಯ್ಯಂಗಾರ್ಯರವರು, ಕೋಲಾರ .... | ೧ |
| ,, ಎಲ್. [illegible], ಬೆಂಗಳೂರು .. | ೧ |
| ,, ಎಲ್. [illegible] | [illegible] |
| ,, ಕೆ. [illegible] ,, ... | ೧ |
| ,, ಡಿ. ಆರ್. [illegible]ಯ್ಯನವರು, ಬೆಂಗಳೂರು .... | ೧ |
| ,, ಎಂ. ಎಸ್. ಗೋಪಾಲರಾಯರು .... | ೧ |
| ,, ವಿಜಯಪಾಲಯ್ಯನವರು .... | ೧ |
| ,, ಎಂ. ಎ. ಶ್ರೀರಾಂರವರು, ಬೆಂಗಳೂರು .... | ೧ |
| ,, ಕೆ. ದೊರಸ್ವಾಮಿ, ಬೆಂಗಳೂರು .... | ೧ |
| ,, ಡಿ. ಎಸ್. ಶ್ರೀನಿವಾಸರಾಯರು .... | ೧ |
| ,, ಕೆ. ಭೀಮರಾಯರು .... | ೧ |
| ಡಾ॥ ಬಿ. ನಾರಾಯಣರಾಯರು ,, .... | ೧ |
| ,, ಬಿ. ದಾಸಪ್ಪ .... | ೧ |
| ,, ಬಿ. ಲಕ್ಷ್ಮೀಪತಿನಾಯ್ಡು .... | ೮ ಆಣೆ |

೮೫-೯೦೦—೧೯೪೦ ಮುದ್ರಣಕಾರರು : ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು.
ಪ್ರಕಟನಕಾರರು : ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

ಬೆಳ್ಳಿಯ ಹಬ್ಬದ ವಿಶೇಷ ಸಂಚಿಕೆ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಈ ಪತ್ರಿಕೆ: ೧ ಆಣೆ

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೩೬-೩೭

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜುಲೈ ೫, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.



ಪರಿಷತ್ತಿನ ಮಹಾಪೋಷಕರೂ
ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೂ ಆದ
ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್
ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು
೩೦-೬-೧೯೪೦ನೆಯ ದಿನ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು
ಮೊದಲು ಮಾಡಿಕೊಟ್ಟು ಹರಸಿದ್ದಾರೆ

# ದೇವತಾ ಪ್ರಾರ್ಥನೆ

ಪುರುಷೋತ್ತಮನೆನೆ ನರರೊಳ್ ।
ಸುರರೊಳ್ ತಾನ್ ದೇವದೇವನೆನೆ ಬೆಳಗುವನಾ ॥
ಪರಮಾತ್ಮನ್ ಪ್ರೇಮಾತ್ಮನ್ ।
ಕರುಣಿಕೆ ಶ್ರೀಕೃಷ್ಣ ನೃಪತಿಗೆಲ್ಲಾ ಒಳ್ಪಂ ॥೧॥

ಜಲನಿಧಿಗಳೊಳ್ ಕಳಶಜಲಧಿ ರಾಜಿಸುವಂತೆ ।
ಕುಲದ ಶೈಲಂಗಳೊಳ್ ಕನಕಗಿರಿ ಮೆರೆವಂತೆ ।
ಲಲಿತ ಸರಸಿಗಳೊಳಗೆ ಮಾನಸ ಸರೋವರಂ ಪೊಳೆವಂತೆ ಮೇದಿನಿಯೊಳು ॥
ಫಲಿತ ದ್ರುಮಂಗಳಿಂ ಬೆಳೆಗಳಿಂ ಕೊಳಗಳಿಂ ।
ಸಲೆ ವಿರಾಜಿಸುತಿರ್ಪ ಕರ್ನಾಟ ಜನಪದಂ ।
ಜ್ವಲಿಸುವೈವತ್ತಾರು ದೇಶಂಗಳೊಳ್ ಸಕಲ ಸಂಪತ್ತಿನಿಂ ಮೆರೆವುದು ॥೨॥

ಆ ದೇಶದರಸುಗಳ ಸಂತತಿಗೆ ಶೇಖರಂ ।
ಶ್ರೀ ದೇವಕೀತನಯ ಭಕ್ತಿರತ್ನಾಕರಂ ।
ಭೂದೇವಿಯೊಲ್ಮೆಯಿಂ ಸಕಲ ಸಂಪತ್ಕರಂ ಶ್ರೀಕರಂ ಕೀರ್ತಿಕರನು ॥
ಆದರದಿ ನಿಜಕುಲದ ಜನಕೆ ಬೋಧಾಕರಂ ।
ಯಾದವಾನ್ವಯವೆಂಬ ಜಲಧಿಗೆ ಸುಧಾಕರಂ ।
ಶ್ರೀದ ಸದೃಶನು ಕೃಷ್ಣರಾಜ ರಾಜರ್ಷಿ ತಾನ್ ಸೊಗಸಿಂದ ರಾಜಿಸುವನು ॥೩॥

ಚದುರಂ ಚಾಗಿಯೆಲಂಪುಗಾರನೆರೆಯಂ ಸಂಗೀತ ಸಾಹಿತ್ಯ ಕೋ ।
ವಿದನುತ್ಸಾಹಿ ವಿವೇಕಶಾಲಿ ನಯಶೀಲಂ ನೇಮುಗಾರಂ ಕಲಾ ।
ವಿದನೊಳ್ಮಾತುಗನೋಜೆಗಾರನುಚಿತಜ್ಞಂ ಭಾವುಕಂ ಧಾರಿಣೀ ।
ಹೃದಯಗ್ರಾಹಿ ದಯಾಪಯೋಧಿ ಸಿರಿಕೃಷ್ಣೇಂದ್ರಂ ಮಹೀಚಂದ್ರಮಂ ॥೪॥

ಶ್ರೀಪತಿಯ ಸೇವೆಯೆಂದೇ ।
ಈ ಪರಿಯೊಳ್ ಕ್ಷಾತ್ರಧರ್ಮಮೆಸಗುತೆ ಶಾಸ್ತ್ರಾ ॥
ಲಾಪಂಗಳ ತತ್ವಾರ್ಥ ನಿ ।
ರೂಪಣದಿಂ ಪೊಳ್ತುಗಳೆವನಾತ್ಮವಿಹಾರನ್ ॥೫॥

ಏಳಿಗೆಯ ಪಡೆಗೆ ತಾಯ್ನುಡಿ ।
ಬಾಳುಗೆ ಕನ್ನಡದ ನಾಡು ಹಿರಿತನದಿಂದಂ ॥
ತಾಳುಗೆ ಜನರಾನಂದಮ ।
ನಾಳುಗೆ ಚಿರಕಾಲಮೆಸೆದು ನಮ್ಮೀ ಕೃಷ್ಣಂ ॥೬॥




ಶುಕ್ರವಾರ, ಜುಲೈ ೫, ೧೯೪೦

## ವಂದನೆಗಳು

ಕಳೆದ ಭಾನುವಾರ ಬೆಳಗ್ಗೆಯಿಂದ ಹಿಡಿದು ಸೋಮವಾರ ಪೂರ್ತಿ ಒಂದೇ ಸಮನಾದ ವಿಜೃಂಭಣೆಯಿಂದ ಪರಿಷತ್ತಿನ ಬೆಳ್ಳಿಯ ಹಬ್ಬ ನಡೆದು ಕೊನೆಗೊಂಡುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಏರ್ಪಾಟು ಪ್ರತಿ ಅಂಶದಲ್ಲಿಯೂ ಎಲ್ಲರಿಗೂ ಸಮರ್ಪಕವಾಗಿ ಇರುವಂತೆ ಕಾರ್ಯವ್ಯವಸ್ಥೆ ನಡಸಲು ಪ್ರಯತ್ನಮಾಡಿದ್ದರೂ ಸ್ಥಳದ ಅನನುಕೂಲದಿಂದ ಇನ್ನೂ ಹೆಚ್ಚಿನ ಜನ ಸಂಗೀತ ವಿನೋದಗೋಷ್ಠಿಗಳಿಗೆ ಸೇರುವುದು ಶಕ್ಯವಾಗದೆ ಕೆಲವರಿಗೆ ಬೇಸರವೆನಿಸಿರಬಹುದು. ಉಳಿದ ಯಾವುದಾದರೂ ಒಂದೆರಡು ಸಣ್ಣ ವಿಷಯಗಳಲ್ಲಿಯೂ ಕೆಲವರ ಮನಸ್ಸುಗಳಿಗೆ ಅಸಂತುಷ್ಟಿಯಾಗಿರಬಹುದು. ಆದರೆ ತನ್ನ ಶಕ್ತಿ ಇರುವಷ್ಟರಮಟ್ಟಿಗೆ ಪರಿಷತ್ತು ಎಲ್ಲವನ್ನೂ ಹೊಂದಿಸಿ ಅನುಕೂಲ ಕಲ್ಪಿಸಬೇಕೆಂದೇ ದುಡಿಯಿತು. ಯಾವ ಕಾರಣದಿಂದಲೇ ಆಗಲಿ ಅನನುಕೂಲಪಟ್ಟವರಲ್ಲಿ ಹೃತ್ಪೂರ್ವಕವಾಗಿ ನಾವು ಕ್ಷಮಾಪಣೆ ಬೇಡುತ್ತೇವೆ. ಉದಾರಿಗಳಾದ ಮಿತ್ರರು ಎಂದಿನಂತೆಯೇ ಪರಿಷತ್ತಿಗೆ ಪ್ರೀತಿ ವಿಶ್ವಾಸಗಳನ್ನು ನಡಸಿಕೊಡಬೇಕೆಂದು ಬೇಡುತ್ತೇವೆ. ಇಂಥ ಸಮಯಗಳಲ್ಲಿ ಎಣಿಸದಿದ್ದ ಇಕ್ಕಟ್ಟುಗಳು ಒದಗುವುದೂ ಯಾರ ಕೈಯೂ ನಡೆಯದಾಗುವುದೂ ಸಮಾರಂಭಗಳನ್ನು ನಡಸಿದವರೆಲ್ಲರ ಅನುಭವಕ್ಕೆ ಬಂದಿರುವ ಸಂಗತಿ. ಆದುದರಿಂದ ಯಾರೇ ಆಗಲಿ ಲೋಪದೋಷಗಳನ್ನು ಎಣಿಸದೆ ಗುಣವನ್ನು ಮಾತ್ರ ದಯವಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇವೆ.

ಉತ್ಸವಕ್ಕೆ ಕನ್ನಡ ನಾಡಿನ ಎಲ್ಲ ಭಾಗಗಳಿಂದಲೂ ಮಾನ್ಯ ಮಹನೀಯರು ದಯಮಾಡಿಸಿದ್ದುದು ಚಿನ್ನಕ್ಕೆ ಮೆರುಗು ಕೊಟ್ಟಂತಾಗಿತ್ತು. ಬೊಂಬಾಯಿ, ಕಲ್ಕತ್ತ ಮುಂತಾದ ದೂರ ಪ್ರದೇಶಗಳಿಂದ ಕೂಡ ಗೆಳೆಯರು ದಯಮಾಡಿಸಿ ಕಾರ್ಯಕ್ರಮದಲ್ಲಿ ಬೆರೆದುದು ವಿಶೇಷವಾಗಿ ಕಳೆಗಟ್ಟಿತು ; ಅಲ್ಲದೆ ಅಖಿಲ ಕರ್ನಾಟಕತೆಯ ಲಕ್ಷಣವನ್ನು ಸಾರುತ್ತಿತ್ತು. ಆ ಬಂದ ಹಲವರು ಮಹನೀಯರು ಕಾಣಿಕೆಗಳನ್ನು ತಂದು ಉತ್ಸವಕ್ಕೆ ಸಲ್ಲಿಸಿದುದು ಎಷ್ಟು ದೊಡ್ಡ ಉತ್ತೇಜನ, ಸಹಾಯ ಆಯಿತೆಂಬುದನ್ನು ವ್ಯವಸ್ಥಾಪಕರು ಬಲ್ಲರು. ಊರಿನ ಮತ್ತು ಹೊರಗಿನ ಎಲ್ಲ ಸದಸ್ಯರಿಗೂ ಸ್ವಾಗತಸಮಿತಿಯವರಿಗೂ ಈ ಸಮಯದಲ್ಲಿ ಧನದಾನಮಾಡಿದ ಎಲ್ಲ ಮಹನೀಯರಿಗೂ ನಾವು ಬಹಳ ಕೃತಜ್ಞರಾಗಿದ್ದೇವೆ. ಅವರ ಅಭಿಮಾನ ಔದಾರ್ಯಗಳಲ್ಲಿ ಭರವಸೆಯಿಟ್ಟು ಅವಸರವಲ್ಲಿ ಅವರ ಹೆಸರಿನಲ್ಲಿ ಒಂದೆರಡು ಕೆಲಸಗಳನ್ನು ನಡಸಬೇಕಾಗಿ ಬಂದರೂ ಅದಕ್ಕೆ ಬೇಸರಪಡದೆ ಉತ್ಸವಕ್ಕೆ ಎಲ್ಲ ಬಗೆಯ ಸೌಹಾರ್ದ ಸಹಕಾರಗಳನ್ನು ಕೊಟ್ಟುದು ಅವರ ಹಿರಿಯತನ. ಅದನ್ನು ಪರಿಷತ್ತು ಕೃತಜ್ಞತೆಯಿಂದ ನೆನೆಯುತ್ತಿರುತ್ತದೆ.

ಈ ಸಮಯದಲ್ಲಿ ಅನೇಕ ಜನ ಅನೇಕ ಬಗೆಯಲ್ಲಿ ಹಗಲು ರಾತ್ರಿ ಶ್ರಮಿಸಬೇಕಾದುದು ಅಗತ್ಯವಾಯಿತು. ದೊಡ್ಡವರು ಚಿಕ್ಕವರು ಎನ್ನದೆ ಈ ದುಡಿಮೆ ನಿರಂತರವಾಗಿ ನಡೆಯಿತು. ಊಟ ಉಪಚಾರಗಳ ಏರ್ಪಾಟನ್ನು ಹೊತ್ತ ದೇಶೀಯ ವಿದ್ಯಾಶಾಲೆಯ ಮತ್ತು ಶ್ರೀ ರಾಮಕೃಷ್ಣಾಶ್ರಮದ ಗೆಳೆಯ ವರ್ಗದ ಉಪಕಾರ ಅಷ್ಟಿಷ್ಟಲ್ಲ. ಅವರು ಮಾಡಬೇಕಾಗಿದ್ದ ಕೆಲಸವನ್ನು ಬಂದ ಅತಿಥಿಗಳ ಸೌಕರ್ಯವನ್ನರಿತು ಚಾಚೂ ತಪ್ಪದೆ ಸದ್ದಿಲ್ಲದೆ ಸಾಧಿಸಿದ ಅವರ ಕಾರ್ಯಪಟುತ್ವವೂ ವಿತರಣೆಯೂ ಪರಿಷತ್ತಿಗೆ ಮೇಲ್ತರವ ಹೆಸರನ್ನು ತಂದಿತು ; ಬೆಂಗಳೂರಿನ ಜನಕ್ಕೇ ಒಂದು ಮರ್ಯಾದೆಯನ್ನು ತಂದಿತು.

ಇತ್ತ ಪರಿಷನ್ಮಂದಿರದಲ್ಲಿ ಎಲ್ಲ ಕೆಲಸದ ಕಟ್ಟುಪಾಡುಗಳನ್ನು ನೋಡಿಕೊಂಡ ಸ್ಕೌಟು ದಳದವರ ಸಹಾಯವೂ ಅತಿಶಯವಾದದ್ದು. ಇತರ ಸ್ವಯಂಸೇವಕರೂ ಅಮೋಘವಾದ ನೆರವನ್ನಿತ್ತು ಸ್ವಂತ ಸೌಖ್ಯವನ್ನು ಲೆಕ್ಕಿಸದೆ ಉತ್ಸವದ ಕೆಲಸಗಳನ್ನು ಆಗಮಾಡಿಕೊಟ್ಟುದರಿಂದ. ಕಾರ್ಯಕ್ರಮಗಳು ಸಾಂಗವಾಗಿ, ನಿರ್ವಿಘ್ನವಾಗಿ, ಯಶಸ್ವಿಯಾಗಿ ನಡೆಯಲು ಸಾಧ್ಯವಾಯಿತು.

ಶ್ರೀಮನ್ಮಹಾರಾಜರವರು ಉತ್ಸವವನ್ನು ಆರಂಭಮಾಡಿಕೊಡುವ ಸಂಬಂಧದಲ್ಲಿ ಅರಮನೆಯ ಅಧಿಕಾರಿಗಳು ನಮ್ಮೊಂದಿಗೆ ಸಹಕರಿಸಿ ಉಪಕಾರಮಾಡಿದ್ದಾರೆ. ಮಿಲಿಟರಿ ಇಲಾಖೆಯವರು ಬ್ಯಾಂಡು ದಳವನ್ನು ಕಳಿಸಿ ಉಪಕಾರಮಾಡಿದ್ದಾರೆ. ಸಮಾರಂಭಕ್ಕೆ ಸರ್ ಪುಟ್ಟಣ್ಣಚೆಟ್ಟರ ಪುರಭವನವನ್ನು ಬಿಟ್ಟುಕೊಟ್ಟ ಪುರಭವನದ ಸಮಿತಿಯವರು ನೆರವಾಗಿದ್ದಾರೆ. ಇವರೆಲ್ಲರ ಉಪಕಾರಕ್ಕಾಗಿ ಕೃತಜ್ಞರಾಗಿದ್ದೇವೆ.

ಉತ್ಸವದ ಅಂಗಗಳಾದ ಪುಸ್ತಕ ಪ್ರದರ್ಶನ, ಘಟಿಕೋತ್ಸವ, ಮಹಿಳಾಗೋಷ್ಠಿ, ಯಕ್ಷಗಾನ, ನೃತ್ಯ, ನಾಟಕ, ಗಮಕ, ಗಾಯನ ಮುಂತಾದ ಮನೋರಂಜನೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಸಂತೋಷ ಸಲ್ಲಿಸಿದ ಮಹನೀಯರ ಮತ್ತು ಸಂಸ್ಥೆಗಳ ಉಪಕಾರ ಹಿರಿದು. ಅದರಲ್ಲಿಯೂ ಮಂಗಳೂರು, ಧಾರವಾಡ, ಬೆಳಗಾಂವಿ, ಮದರಾಸುಗಳಿಂದ ಕೃಪೆಮಾಡಿ ಬಂದು ಉತ್ಸವದ ಅಂಗಗಳಾಗಿ ತಾಳ ಮದ್ದಲೆ, ನಾಟಕ, ನೃತ್ಯ ಮೊದಲಾದ ಪ್ರದರ್ಶನಗಳನ್ನು ನಡಸಿಕೊಟ್ಟ ಕನ್ನಡ ಬಾಂಧವರ ಸಹಾಯ ಅತಿಶಯವಾದುದು. ಅದಕ್ಕಾಗಿ ಪರಿಷತ್ತು ಅವರಿಗೆ ಬಹುವಾಗಿ ಋಣಿಯಾಗಿದೆ. ಅವುಗಳನ್ನು ಏರ್ಪಡಿಸಿಕೊಟ್ಟ ಕಾರ್ಯ ಚಾಲಕರಿಗೂ, ಉತ್ಸವದ ಆಯಾ ಉಪಸಮಿತಿಗಳ ಸ್ನೇಹಿತರಿಗೂ ಪರಿಷತ್ತು ಧನ್ಯವಾದಗಳನ್ನು ಅರ್ಪಿಸುತ್ತದೆ. ತಮ್ಮ ಕೆಲಸಗಳನ್ನು ಬಿಟ್ಟು ನಾವು ಕೇಳಿದ ಕೂಡಲೆ ನಮಗೆ ಅತ್ಯುತ್ತಮವಾದ ರಂಗಸ್ಥಳ ಒದಗುವಂತೆ ಅದನ್ನು ಕಟ್ಟಿಕೊಟ್ಟು ನಾಟ್ಯ ನಾಟಕಗಳಿಗೆ ಚೆಲುವಾದ ಆವರಣವನ್ನು ಕಲ್ಪಿಸಿದ ಗೆಳೆಯರ ಸಹಾಯವು ನಮ್ಮನ್ನು ಬಹು ಋಣಿಗಳನ್ನಾಗಿ ಮಾಡಿದೆ. ಪರಿಷತ್ತು ಬಹು ಕಾಲದಿಂದ ಬಯಸುತ್ತಿದ್ದ ಒಂದು ಆಸ್ತಿಯನ್ನು ಮಾಡಿಕೊಟ್ಟಿದೆ. ಪರಿಷತ್ತಿನ

ಕಚೇರಿಯಲ್ಲಿಯೂ ಅಚ್ಚುಕೂಟದಲ್ಲಿಯೂ ಕೆಲಸಮಾಡುವ ಸಿಬ್ಬಂದಿಯವರೂ ಇಂಗ್ಲಿಷು-ಕನ್ನಡ ನಿಘಂಟುವಿನ ಕಚೇರಿಯ ಮಿತ್ರರೂ ಅನ್ನ ನಿದ್ದೆ ವಿಶ್ರಾಂತಿ ಸೌಕರ್ಯಗಳನ್ನು ತೊರೆದು ಸಂತತವಾಗಿ ದುಡಿದಿದ್ದಾರೆ. ಹೀಗೆಯೇ ಇನ್ನೂ ಎಷ್ಟೋ ಜನ ಎಷ್ಟೋ ಬಗೆಯ ಕೆಲಸದಲ್ಲಿ ನಮಗೆ ಬೇಕಾದ ನೆರವನ್ನೆಲ್ಲಾ ನಿರ್ವಂಚನೆಯಿಂದ ಕೊಟ್ಟದ್ದರಿಂದ ಮಾತ್ರವೇ ಉತ್ಸವದ ವಿಜೃಂಭಣೆ ಸಾಧ್ಯವಾಯಿತು. ನೂರಾರು ಜನ ವಿರಾಮವಿಲ್ಲದೆ ಹೀಗೆ ಸಹಕರಿಸದೆ ಹೋದರೆ ನಮ್ಮಂಥ ಸಂಸ್ಥೆಗಳವರು ಏನನ್ನು ಮಾಡುವುದಕ್ಕೂ ಆಗುವುದಿಲ್ಲ. ಸರ್ಕಾರದ ವಿದ್ಯಾ ಇಲಾಖೆಯವರೂ ನೆರೆಹೊರೆಯ ಸಂಸ್ಥೆಗಳವರೂ ಲಾಲಬಾಗಿನವರೂ ಪೌರಸಭೆಯವರೂ ದೀಪದ ಇಲಾಖೆಯವರೂ ನಮಗೆ ಬೇಕಾದ ಅನೇಕ ಬಗೆಯ ಸಹಾಯಗಳನ್ನು ಉಂಟುಮಾಡಿ ಕೊಟ್ಟಿರುತ್ತಾರೆ.

ಹೊರಗಿಂದ ಬಂದ ಅತಿಥಿಗಳಿಗೆ ಬಿಡಾರ ಉಪಚಾರಗಳಿಗಾಗಿ ನಮಗೆ ಸ್ಥಳಾವಕಾಶವನ್ನು ಕಲ್ಪಿಸಿಕೊಟ್ಟ ಧರ್ಮಪ್ರಕಾಶ ಧರ್ಮಾತ್ಮ ಶ್ರೀ॥ ಸಜ್ಜನರಾಯರವರ ಉಪಕಾರ ಮಹತ್ತರವಾದುದು. ಬಂದ ಎಲ್ಲ ಮಹನೀಯರ ಊಟೋಪಚಾರ ವಸತಿಗಳ ಸೌಕರ್ಯ ಆ ಮಹನೀಯರ ಉದಾರವಾದ ದಾನ. ಸಿಟಿ ಕೋ-ಆಪರೇಟಿವ್ ಬ್ಯಾಂಕಿನ ಅಧಿಕಾರಿಗಳೂ ಸಂಸ್ಕೃತ ಕಾಲೇಜಿನ ಅಧಿಕಾರಿಗಳೂ ಇದೇ ಸಂಬಂಧದಲ್ಲಿ ತಮ್ಮ ಕಟ್ಟಡಗಳನ್ನು ಉತ್ಸವ ಸಮಿತಿಯ ಉಪಯೋಗಕ್ಕೆ ಬಿಟ್ಟುಕೊಟ್ಟದ್ದರು. ಸಂಸ್ಕೃತ ಕಾಲೇಜಿನ ಉಪಯೋಗವನ್ನು ಕೊಟ್ಟದ್ದರ ಜೊತೆಗೆ ಒಂದು ದಿನ ಕಾಲೇಜಿಗೆ ಬಿಡುವು ಕೊಟ್ಟು ನಮ್ಮ ಉತ್ಸವಕ್ಕೆ ಬೇಕಾದ ಅನುಕೂಲ ಸನ್ನಿವೇಶವನ್ನು ಉಂಟುಮಾಡಿದ ವಿದ್ಯಾಖಾತೆಯ ಮೇಲಧಿಕಾರಿಗಳಿಗೆ ನಮ್ಮ ಅನೇಕ ವಂದನೆಗಳು. ಬಂದ ಅತಿಥಿಗಳನ್ನೆಲ್ಲ ಒಂದು ದಿನ ತಮ್ಮಲ್ಲಿಗೆ ವಿಶ್ವಾಸದಿಂದ ಕರೆದುಕೊಂಡುಹೋಗಿ ತಮ್ಮ ಕಾರ್ಯಪ್ರಪಂಚವನ್ನು ತೋರಿಸಿ, ವಿವರಿಸಿ, ಅವರಿಗೆ ಔತಣ ಊಡಿ ಉಪಚಾರಮಾಡಿದ ಮೈಸೂರು ಲ್ಯಾಂಪ್ ವರ್ಕ್ಸಿನ ಚಾಲಕರಿಗೂ ಈ ಎಲ್ಲ ಸಂಬಂಧದಲ್ಲಿ ಸಂಚಾರ ಸೌಕರ್ಯವನ್ನು ಒದಗಿಸಿದ ಸಿಟಿ ಬಸ್ ಸರ್ವಿಸ್ಸಿನ ಒಡೆಯರಿಗೂ ನಮ್ಮ ವಂದನೆಗಳು.

ಉಪಕಾರಿಗಳ ಮತ್ತು ಆಶ್ರಯದಾತರ ಎಲ್ಲರ ಹೆಸರನ್ನು ಹೇಳುವುದಾಗಲಿ ಅವರಿಗೆಲ್ಲ ಬೇರೆ ಬೇರೆಯಾಗಿ ನೆನಕೆಗಳನ್ನು ಸಮರ್ಪಿಸಲು ಇಲ್ಲಿ ಪ್ರಯತ್ನಿಸುವುದಾಗಲಿ ಮುಗಿಯಲಾರದ ಕೆಲಸ. ಉಪಕಾರ ಅನಂತವಾಗಿರುವಾಗ ಯಾವುದನ್ನೂ ಎತ್ತಿ ವಿಶೇಷವಾಗಿ ನುಡಿಯುವುದು ಕಷ್ಟ. ಆಪ್ತರಾಗಿ ಸಹಾಯ ಸಹಕಾರಗಳನ್ನು ಕೊಟ್ಟ ಮತ್ತು ಎಲ್ಲ ವಿಚಾರದಲ್ಲಿಯೂ ತಮ್ಮ ಮನೆಯ ಕೆಲಸವೆಂಬಂತೆ ಹಬ್ಬವನ್ನು ನಡಸಿಕೊಟ್ಟ ನಮ್ಮ ಸಹಾಯಕರಿಗೆಲ್ಲ ನಮ್ಮ ಕೃತಜ್ಞತೆಯನ್ನು ಈ ಮೂಲಕ ಸಲ್ಲಿಸುತ್ತಿದ್ದೇವೆ.

ಅವರ ಅಭಿಮಾನವೇ ನಮ್ಮ ಭಾಗ್ಯ; ಅವರ ವಿಶ್ವಾಸವೇ ನಮ್ಮ ಉತ್ತೇಜನ; ಅವರು ಕೊಡುತ್ತಿರುವ ನೆರವು ಸಹಕಾರಗಳೇ ನಮ್ಮ ಬೆಂಬಲ. ಇವುಗಳಮೇಲೆ ನೆಚ್ಚಿ ನಿಂತು ತನ್ನ ಕೈಯಲ್ಲಾಗುವ ಸೇವೆಯನ್ನು ಪರಿಷತ್ತು ಎಂದೆಂದಿಗೂ ನಡಸುತ್ತ ಹೋಗುವುದು. ಅವರ ಈ ದಾನ ಹೀಗೆಯೇ ಫಲಿಸಲಿ. ಪರಿಷತ್ತಿನ ಈ ಸೇವೆ ದಿನ ದಿನಕ್ಕೆ ಹೆಚ್ಚಾಗಿ ನಡೆದು ಕೃತಾರ್ಥವಾಗಲಿ.

ಸಿರಿಗನ್ನಡಂಗೆಲ್ಗೆ

---

## ಆದರ್ಶ ಶಿಕ್ಷಣ

ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಬೆಂಗಳೂರು ದೇಶೀಯ ವಿದ್ಯಾಶಾಲೆಯ ಕಟ್ಟಡದ ಹೊಸ ಬಡಾವಣೆಯ ಪ್ರವೇಶ ಮಹೋತ್ಸವವನ್ನು ಕಳೆದ ೧ನೆಯ ತಾರೀಖು ಸೋಮವಾರ ನೆರವೇರಿಸಿದರು.

ದೇಶೀಯ ವಿದ್ಯಾಶಾಲೆಗೆ ಸೇವೆಯೇ ತಳಹದಿ. ಸೌಹಾರ್ದ ಸಾಮರಸ್ಯಗಳ ಮನೋವೃತ್ತಿಯೇ ಅದರ ಉಸಿರು. 'ಶ್ರದ್ಧಾಹಿ ಪರಮಾಗತಿಃ' ಎಂಬುದು ಅದರ ಮಹಾ ಮಂತ್ರ. ಪುಣೆಯ ಫರ್ಗೂಸನ್ ಕಾಲೇಜನ್ನು ಮಾದರಿಯಾಗಿ ಇಟ್ಟುಕೊಂಡು ಈ ವಿದ್ಯಾಸಂಸ್ಥೆ ಕಳೆದ ೨೩ ವರ್ಷಗಳಿಂದ ತನ್ನದೇ ಆದ ಒಂದು ವಿಶಿಷ್ಟ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಅನುಸರಿಸುತ್ತ ವರ್ಷ ವರ್ಷವೂ ಹೆಚ್ಚು ಹೆಚ್ಚಾಗಿ ಜನಪ್ರಿಯತೆಯನ್ನು ಗಳಿಸುತ್ತ ಮೈಸೂರಿನ ಹೆಮ್ಮೆಯಾಗಿ ಪರಿಣಮಿಸಿದೆ.

ಇಂಥ ಸಂಸ್ಥೆಯ ಏಳಿಗೆಯನ್ನು ಅತ್ಯಂತ ಆಸಕ್ತಿಯಿಂದ ನಿರೀಕ್ಷಿಸುತ್ತಿರುವವರಲ್ಲಿ ದಿವಾನಸಾಹೇಬರವರೂ ಒಬ್ಬರು. ಅವರು ಶಾಲೆಯ ಬಡಾವಣೆಯ ಪ್ರವೇಶ ಮಹೋತ್ಸವದ ಸಂದರ್ಭದಲ್ಲಿ, ಇಂದು ನಾಡಿನ ಮುಂದಿರುವ ಶಿಕ್ಷಣ ಹಾಗೂ ರಾಜಕೀಯ ಸಮಸ್ಯೆಗಳಿಗೆ ಪರಿಹಾರರೂಪವಾಗಿ, ಅಮೂಲ್ಯವಾದ ತತ್ತ್ವಗಳನ್ನೊಳಗೊಂಡ ಮಾತುಗಳನ್ನು ಆಡಿ, ನಾಡಿಗೆ ಅಮೋಘವಾದ ಸೇವೆ ಸಲ್ಲಿಸಿದ್ದಾರೆಂದು ಧಾರಾಳವಾಗಿ ಹೇಳಬಹುದು. ಅವರ ಕೆಲವು ಮಾತುಗಳನ್ನು 'ಕನ್ನಡ ನುಡಿ'ಯ ವಾಚಕರ ಅವಗಾಹನೆಗಾಗಿ ಇಲ್ಲಿ ಎತ್ತಿಕೊಡಬಯಸುವೆವು:

"ನೀವುಗಳು ಈ ವಿದ್ಯಾಶಾಲೆಗೆ 'ದೇಶೀಯ ವಿದ್ಯಾಶಾಲೆ' ಎಂದು ಹೆಸರಿಟ್ಟಿರುವುದರಲ್ಲಿ ನಮ್ಮ ದೇಶದವರೆಲ್ಲ ಒಬ್ಬಳೇ ಭಾರತಮಾತೆಯ ಮಕ್ಕಳೆಂಬ ಮನೋಭಾವವು ಬಲಿತು ಐಕಮತ್ಯವು ವೃದ್ಧಿಯಾಗಬೇಕೆಂಬುದು ನಿಮ್ಮ ಉದ್ದೇಶವೆಂಬುದನ್ನು ನಾನು ಬಲ್ಲೆ. ಈ ವಿದ್ಯಾಶಾಲೆಯಲ್ಲಿ ವ್ಯಾಸಂಗಮಾಡುವವರೆಲ್ಲರೂ ತಾವು ಎಲ್ಲಕ್ಕೂ ಮಿಗಿಲಾಗಿ ಭಾರತೀಯರೆಂಬುದನ್ನು ಮೊಟ್ಟಮೊದಲು ಮನಗಂಡು ವರ್ತಿಸುವಂತೆ ಮಾಡಬೇಕೆಂಬುದೂ ನಿಮ್ಮ ಉದ್ದೇಶವೆಂದು ನಾನು ನಂಬಿರುವೆನು. ಹೀಗೆ ಮಾಡುವ ಮೂಲಕ, ವಿದ್ಯಾರ್ಥಿಗಳು ತಾವು ಇಂಥಿಂಥ ಪ್ರಾಂತದವರೆಂಬುದನ್ನೋ ಅಥವಾ ಇಂಥಿಂಥ ಕೋಮಿನವರೆಂಬುದನ್ನೋ ಮುಖ್ಯವಾಗೆಣಿಸದಂತೆ ಆ ಬಗೆಯ ಭಾವನೆಯನ್ನು ಮುರಿದು, ಅವರ ಮನಸ್ಸಿನಲ್ಲಿ ತಾವೆಲ್ಲರೂ ಮುಖ್ಯವಾಗಿ ಭಾರತಮಾತೆಯ ಮಕ್ಕಳೆಂಬ ಭಾವನೆಯೇ ಖಚಿತವಾಗಿ ನೆಲೆಗೊಳ್ಳುವಂತೆ ಶಿಕ್ಷಣ ಕೊಡುವುದು ನಿಮ್ಮ ಆಶಯವೆಂಬುದೂ ನನಗಿರುವ ನಂಬಿಕೆ. ಈ ವಿದ್ಯಾಶಾಲೆಯಲ್ಲಿ ಶಿಕ್ಷಣ ಹೊಂದುವ ವಿದ್ಯಾರ್ಥಿಗಳಲ್ಲಿ ಪರಸ್ಪರ ಸ್ನೇಹಸೌಹಾರ್ದಗಳೂ ಐಕಮತ್ಯವೂ ವೃದ್ಧಿಹೊಂದುವಂತೆ ಮಾಡುವುದಕ್ಕಾಗಿ ಸಾಧ್ಯವಿರುವಷ್ಟನ್ನೂ ನೆರವೇರಿಸುವುದೊಂದು; ಅಲ್ಲದೆ, ಪೌರಶಿಷ್ಟಿ ಸಂಬಂಧವಾಗಿ ತಮ್ಮ ಪವಿತ್ರ ಕರ್ತವ್ಯಗಳೂ ಹಕ್ಕು ಬಾಧ್ಯತೆಗಳೂ ಅವರಿಗೆ

ಮನದಟ್ಟಾಗುವಂತೆ ಮಾಡಲು ಸಹ ಸಾಧ್ಯವಿರುವಷ್ಟನ್ನೂ ನೆರವೇರಿಸುವುದೊಂದು; ಇವೆರಡೂ ಈ ವಿದ್ಯಾಶಾಲೆಯ ಅಧ್ಯಾಪಕ ವರ್ಗದವರಿಂದ ನಡೆಯುತ್ತಿರುವುದರಲ್ಲಿ ಸಂದೇಹವಿಲ್ಲ.

* * *

"ಪ್ರಬಲವಾದ ಎರಡು ಪ್ರವೃತ್ತಿಗಳಿಗೆ ಪರಸ್ಪರವಾಗಿ ಅವಿಚ್ಛಿನ್ನವಾದ ಹೋರಾಟವು ಮಸಗುತ್ತಿರುವುದೇ ಜನಜೀವನದ ಲಕ್ಷಣ. ಇದ್ದುದು ಇದ್ದಂತೆಯೇ ಹೆಚ್ಚು ಮಾರ್ಪಾಟುಗಳಿಲ್ಲದೆ ಸ್ಥಿಮಿತವಾಗಿದ್ದು, ಶಿಸ್ತೂ ಕ್ರಮವೂ ಯಥಾವತ್ತಾಗಿರಬೇಕೆಂಬ ಪ್ರವೃತ್ತಿಯು ಅವುಗಳಲ್ಲೊಂದು; ಪ್ರಗತಿಯು ಮುಂದುವರಿಯುತ್ತಲೂ ಮಾರ್ಪಾಟುಗಳು ಹೇರಳವಾಗಿ ನಡೆಯುತ್ತಲೂ ಬರಬೇಕೆಂಬ ಪ್ರವೃತ್ತಿಯು ಅವುಗಳಲ್ಲಿ ಮತ್ತೊಂದು; ಇವೆರಡು ಪ್ರವೃತ್ತಿಗಳಿಂದಲೂ ಉದ್ಭವಿಸಿದ ಅಗಾಧ ಶಕ್ತಿಗಳ ಅವಿಚ್ಛಿನ್ನವಾದ ಹೋರಾಟವು ತಪ್ಪುವಂತೆಯೇ ಇಲ್ಲ. ಆದರೆ, ಅವೆರಡಕ್ಕೂ ಸಮತೆಯಿದ್ದಲ್ಲಿ ಮಾತ್ರವೇ ಸಮಾಜದ ಯೋಗಕ್ಷೇಮವು ಸುರಕ್ಷಿತವಾಗಿರುತ್ತದೆ...........ಈ ವಿದ್ಯಾಶಾಲೆಯ ಉಪಾಧ್ಯಾಯರುಗಳು ತಮ್ಮ ಶಿಷ್ಯರೊಡನೆ ವ್ಯವಹರಿಸಿ ಶಿಕ್ಷಣ ಕೊಡುವುದರಲ್ಲಿ—ಮುಖ್ಯವಾಗಿ ಪೌರಶಿಷ್ಟಿ ಧರ್ಮವನ್ನು ಬೋಧಿಸುವ ತರಗತಿಯಲ್ಲಿ ಮತ್ತು ಸಾಮಾನ್ಯವಾಗಿ ತರಗತಿಗಳ ಕೆಲಸ ಮುಗಿದ ಮೇಲೆ ಗುರು ಶಿಷ್ಯರು ಮಾತನಾಡುವ ಸಮಯಗಳಲ್ಲಿ—ಎಳೆಯ ವಯಸ್ಸಿನ ವಿದ್ಯಾರ್ಥಿಗಳೆಲ್ಲರಿಗೂ ಸಹ, ಕಾನೂನು ಪಾಲನೆಯ ಮತ್ತು ಕ್ರಮಬದ್ಧವಾದ ಶಿಸ್ತಿನ ರಕ್ಷಣೆಯ ಸಂಬಂಧವಾಗಿ ಅದರ ಗೌರವಗಳನ್ನು ತೋರಿಸುವುದರ ಪ್ರಾಮುಖ್ಯತೆಯು ಹೃದಯಂಗಮವಾಗಿ ಮನದಟ್ಟಾಗುವಂತೆ ಬೋಧಿಸುತ್ತಿರುವರೆಂದು ನಾನು ಹಾರೈಸುತ್ತೇನೆ. ಹೀಗೆ ಅದರ ಗೌರವಗಳನ್ನು ತೋರಿಸಿಯೂ ಸಹ, ವ್ಯಕ್ತಿ ವೈಶಿಷ್ಟ್ಯದ ವಿಕಾಸಕ್ಕೂ, ಜನಜೀವನದ ಸಾಮಾಜಿಕ ರಾಜಕೀಯ ಪುರೋಭಿವೃದ್ಧಿ ಸಾಧನೆಯ ಪ್ರಬಲ ಪ್ರಯತ್ನಕ್ಕೂ ಯಥೇಷ್ಟವಾಗಿ ಅವಕಾಶವಿರುವುದರಲ್ಲಿ ಅಭ್ಯಂತರವೇ ಇಲ್ಲ.

* * *

"ತಮ್ಮ ಶಿಷ್ಯರು ಮುಂದೆ ಪ್ರವರ್ಧಮಾನರಾಗಿ ಸಮಾಜ ಹಿತ ಸಾಧಕರಾಗಿಯೂ ರಾಜಭಕ್ತಿಯುಳ್ಳವರಾದ ಸತ್ಪ್ರಜೆಗಳಾಗಿಯೂ ಪರಿಣಮಿಸುವಂತೆ ಅವರಿಗೆ ಶಿಕ್ಷಣ ಕೊಡುವುದೇ ಈ ವಿದ್ಯಾಶಾಲೆಯ ಮತ್ತು ಸಂಸ್ಥಾನದ ಇತರ ಸಮಸ್ತ ವಿದ್ಯಾಸಂಸ್ಥೆಗಳ ಪ್ರತಿಯೊಬ್ಬರು ಉಪಾಧ್ಯಾಯರ ಧ್ಯೇಯವೂ ಪ್ರಯತ್ನವೂ ಆಗಿರಲೆಂದು ಕೋರುವೆನು. ಪ್ರತಿಯೊಬ್ಬ ವಿದ್ಯಾರ್ಥಿಯೂ ತಾನೇ ಸಂಸ್ಥಾನ, ತಾನೇ ಜನಾಂಗ, ಎಂದು ಭಾವಿಸಿಕೊಂಡು ತಾನು ಮೈಸೂರಿನ ಪ್ರಜೆಯೂ ಭಾರತೀಯ ಜನಾಂಗದವನೂ ಆಗಿರುವುದಕ್ಕಾಗಿ ಹೆಮ್ಮೆ ಪಡಬೇಕು. ವಿದ್ಯಾಭ್ಯಾಸದ ಅಂತಿಮ ಗುರಿಯು ಜೀವನದ ಮತ್ತು ಸುವ್ಯವಸ್ಥಿತವಾದ ಸಮಾಜದ ಧ್ಯೇಯ ಸಾಧನೆಯೆಂಬುದನ್ನು ಉಪಾಧ್ಯಾಯರಾರೂ ಮರೆಯದೆ ಸರ್ವದಾ ನೆನಪಿನಲ್ಲಿ ಇಡಬೇಕು. ಜೀವನದ ಮತ್ತು ಸುವ್ಯವಸ್ಥಿತ ಸಮಾಜದ ಧ್ಯೇಯವಾದರೂ ಏನು? ಪ್ರತಿಯೊಬ್ಬ ವ್ಯಕ್ತಿಯ ಸುಖಸಾಧನೆ ಮತ್ತು ಪ್ರಜೆಗಳಲ್ಲಿ ಪ್ರತಿಯೊಬ್ಬರ ಶ್ರೇಯಸ್ಸಾಧನೆ. ಇವು ನೆರವೇರಬೇಕಾದರೆ ಪ್ರಜೆಗಳಲ್ಲಿ ಸಮಸ್ತರೂ ಸಚ್ಚಾರಿತ್ರವನ್ನು ವೃದ್ಧಿಪಡಿಸಿಕೊಂಡು ಬುದ್ಧಿಬಲವನ್ನು ಹೆಚ್ಚಿಸಿಕೊಳ್ಳುವುದೇ ರಾಜಮಾರ್ಗ. ವಿದ್ಯಾಭ್ಯಾಸ ಕ್ರಮದಲ್ಲಿ ಈ ಅಂಶಗಳಿಗೇ ಮೊಟ್ಟಮೊದಲು ಗಮನ ಕೊಡಬೇಕು. ಈ ಧ್ಯೇಯಗಳು ನೆರವೇರುವಂತೆ ಶಿಕ್ಷಣ ಕೊಡುವುದೇ ಪ್ರತಿಯೊಬ್ಬ ಉಪಾಧ್ಯಾಯನಿಗೂ ಪ್ರಥಮ ಕರ್ತವ್ಯವಾಗಬೇಕು."

## ಇಬ್ಬರು ಕನ್ನಡ ಹಿರಿಯರಿಗೆ ಅಭಿನಂದನೆ

ಕಳೆದ ಮೂವತ್ತೈದು ವರ್ಷಗಳಿಂದ ಕನ್ನಡ ನಾಡು ನುಡಿಗಳ ಸೇವೆಯನ್ನು ಮಾಡುತ್ತ, ಕನ್ನಡ ನಾಡಿನಲ್ಲಿ ನವಚೈತನ್ಯವನ್ನೂ ಸ್ಫೂರ್ತಿಯನ್ನೂ ತುಂಬಿದವರಲ್ಲಿ ಒಬ್ಬರಾಗಿ ಹಿರಿಯರೆನಿಸಿದ ಶ್ರೀಮಾನ್ ಆಲೂರು ವೆಂಕಟರಾಯರ ೬೧ನೆಯ ಹುಟ್ಟುಹಬ್ಬ ೧೨-೭-೪೦ನೆಯ ತಾರೀಖು ನಡೆಯುವುದಾಗಿದೆ.

ಈಗ ಶ್ರೀ|| ಆಲೂರರ ಹಿರಿಮೆಯನ್ನು ಕೊಂಡಾಡುವ ಅಗತ್ಯವಿಲ್ಲ. ಅವರು ತಮ್ಮ ಆಯುಷ್ಯದಲ್ಲಿ ದೀರ್ಘಕಾಲ ಮಾಡಿರುವ ಸೇವೆಯೇ ಸಾವಿರ ಬಾಯಿಂದ ಅವರ ಕೀರ್ತಿಯನ್ನು ಗಾನಮಾಡುತ್ತಿದೆ. ಅವರು ಕನ್ನಡದಲ್ಲಿ ಭಗವದ್ಗೀತೆ ಪ್ರಚಾರವಾಗಲು ಮಾಡಿರುವ ಸೇವೆ ಸ್ವಲ್ಪವಲ್ಲ. ಕನ್ನಡಿಗರಲ್ಲಿ ಜಾಗೃತಿ ಕೆರಳಿಸಿ, ಅದು ಒಮ್ಮುಖವಾಗಿ ಮೊನೆಯಾಗಿ ಸಂಘಟಿತವಾಗಿ ಕನ್ನಡಿಗರ ಒಕ್ಕೂಟಕ್ಕಾಗಿ ಕಾರ್ಯಕಾರಿಯಾಗುವಂತೆ. ಅವರು ದುಡಿದಿರುವುದು ಕೊಂಚವಲ್ಲ. ಇಂಥವರ ಬಾಳು ಕಿರಿಯರಿಗೆ ಮಾದರಿಯಾಗಿರುವುದೆಂದರೆ ಹೆಚ್ಚಲ್ಲ.

ಹೀಗೆಯೇ ಸಮಾಜದ ಸೇವೆಯಲ್ಲಿ ಹಣ್ಣಾದವರು ಹಿರಿಯರಾದ ಡಾ|| ಸವಣೂರು ಹನುಮಂತರಾಯರು. ಅವರ ೬೧ನೆಯ ಹುಟ್ಟುಹಬ್ಬ ತಾ|| ೧೩-೭-೪೦ನೆಯ ದಿನ ನಡೆಯುತ್ತದೆ. ಶ್ರೀ|| ಹನುಮಂತರಾಯರು ಅಪ್ರತಿಮ ಕನ್ನಡ ಪ್ರೇಮಿಗಳು. ವನಸುಮದಂತೆ ಹಿನ್ನೆಲೆಯಲ್ಲಿದ್ದು ಹೊತ್ತು ಕಳೆದವರು. ಕನ್ನಡದಲ್ಲಿ ಆಯುರ್ವೇದ ಗ್ರಂಥಗಳೂ ಮಾಸಪತ್ರಿಕೆಗಳೂ ಹೊರಡಲು ಅತ್ಯಂತ ಉಪಕಾರಮಾಡಿ ಸಮಾಜಕ್ಕೆ ಚಿರಸ್ಮರಣೀಯರಾಗಿದ್ದಾರೆ.

ಇವರಿಬ್ಬರ ಹುಟ್ಟುಹಬ್ಬದ ದಿನ ಅವರಿಗೆ ಎಲ್ಲ ಮಂಗಳಗಳನ್ನೂ ಕೋರಿ, ಅವರು ಇನ್ನೂ ನೂರು ವರ್ಷ ಬಾಳಿ ಕನ್ನಡಮ್ಮನ ಸೇವೆಯನ್ನು ಇತೋಪ್ಯತಿಶಯವಾಗಿ ಮಾಡಲು ಅವರಿಗೆ ಇನ್ನೂ ಹೆಚ್ಚಿನ ಚೈತನ್ಯವನ್ನು ಕೊಡಲೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.

---

## ಡಾ|| ಸವಣೂರ ಹನುಮಂತರಾಯರ ೬೧ನೆಯ ಹುಟ್ಟುಹಬ್ಬ

ಬೆಳಗಾವಿಯಲ್ಲಿ ೫೫ ವರುಷಗಳಿಂದ ಕನ್ನಡ ಚಳುವಳಿಯನ್ನು ಅವ್ಯಾಹತವಾಗಿ ನಡಸಿ ಅದಕ್ಕಾಗಿ ತನು ಮನ ಧನಗಳನ್ನರ್ಪಿಸಿದ ಕೆಚ್ಚೆದೆಯ ಕನ್ನಡಿಗರಿವರು. ಇವರ ಕನ್ನಡ ಸೇವೆ ಅಪಾರವಾದುದು. ಇವರು ಬೆಳಗಾವಿಯಲ್ಲಿ ೧೯೧೩ರಲ್ಲಿ 'ಕರ್ನಾಟಕ ಸಂಘ'ವನ್ನು ಸ್ಥಾಪಿಸಿ ಅದನ್ನು ಇದುವರೆಗೆ ನಡಸುತ್ತಲಿದ್ದಾರೆ. 'ಕರ್ನಾಟಕ ಮಿತ್ರ' ಎಂಬ ವಾರ ಪತ್ರಿಕೆಯನ್ನು ಹೊರಡಿಸಿ ೨ ವರುಷಗಳವರೆಗೆ ಚೆನ್ನಾಗಿ ನಡಸಿದರು. ಅದಕ್ಕಾಗಿ, ಸಾವಿರಾರು ರೂಪಾಯಿಗಳನ್ನು ಕಳೆದುಕೊಂಡಿದ್ದಾರೆ. ಕೆಲವು ಗ್ರಂಥಗಳನ್ನು ಪ್ರಕಾಶಗೊಳಿಸಿದ್ದಾರೆ. ಇವರು ಪ್ರಸಿದ್ಧ ಡಾಕ್ಟರರು ಅಲ್ಲದೆ ಸುಪ್ರಸಿದ್ಧ ವೈದ್ಯರೂ ಇದ್ದಾರೆ. ಇವರಲ್ಲಿ ಜನರಿಗೆ ತುಂಬಾ ಪ್ರೇಮ. ಇವರು ಹುಟ್ಟಿ ಜುಲೈ ೧೩ನೆಯ ತಾರೀಖಿಗೆ ೬೦ ವರುಷಗಳು ಪೂರ್ತಿಯಾಗುವುವು. ಆದುದರಿಂದ ನಮ್ಮ 'ಕರ್ನಾಟಕ ಸಂಘ'ದವರು ಅಂದು ಬೆಳಗಾವಿಯಲ್ಲಿ ಸಾರ್ವಜನಿಕವಾಗಿ ಅವರ ಹುಟ್ಟು ಹಬ್ಬವನ್ನು ಆಚರಿಸಬೇಕೆಂದು ನಿರ್ಧರಿಸಿದ್ದೇವೆ. ಕನ್ನಡ ನಾಡಿನವರೂ ತಮ್ಮ ತಮ್ಮ ಊರುಗಳಲ್ಲಿಯೂ ಜುಲೈ ೧೩ನೆಯ ದಿನವನ್ನು ಕನ್ನಡ ವೀರನಾದ ಹನುಮಂತನ (ಡಾಕ್ಟರವರ) ಹುಟ್ಟು ಹಬ್ಬವನ್ನು ಬಲು ವಿಜೃಂಭಣೆಯಿಂದ ಜರುಗಿಸಬೇಕಾಗಿ ಬೇಡಿಕೊಳ್ಳುತ್ತೇನೆ.

ಪ್ಯಾಟಿ ಶಾಮರಾಯರು.

# ಕರ್ನಾಟಕ ಕುಲ ಪುರೋಹಿತ
# ಶ್ರೀಮಾನ್ ಆಲೂರ ವೆಂಕಟರಾಯರ ಷಷ್ಟ್ಯಬ್ದಿ ಪೂರ್ತಿಯ ಶಾಂತಿ ಸಮಾರಂಭ

ಶ್ರೀ|| ಆಲೂರ ವೆಂಕಟರಾಯರೆಂದೊಡನೆ, ಸಾಹಿತ್ಯ–ಸಂಸ್ಕೃತಿ–ಕರ್ನಾಟಕ ಏಕೀಕರಣ–ಇತಿಹಾಸ–ಧರ್ಮ ಇತ್ಯಾದಿ ಎಲ್ಲ ಕ್ಷೇತ್ರಗಳಲ್ಲಿ ಸರ್ವತೋಮುಖವಾಗಿ ಕಾರ್ಯಮಾಡಿದ ಒಂದು ವ್ಯಕ್ತಿ ಕಣ್ಣಮುಂದೆ ನಿಲ್ಲುವುದು. ಕರ್ನಾಟಕದ ಎಲ್ಲ ಬಗೆಯ ಉನ್ನತಿಯೆಂಬುದು ಇವರ ಸಾರ್ವಜನಿಕ ಜೀವನದ ಬೀಜಮಂತ್ರವಾಗಿರುವುದು. ಈ ದೃಷ್ಟಿಯಿಂದ ಇವರು ಕನ್ನಡಿಗರಲ್ಲಿ ತನ್ನತನದ ಅರಿವನ್ನು ಹುಟ್ಟಿಸಿ, ಅವರನ್ನು ಕಾರ್ಯಪ್ರವೃತ್ತರನ್ನಾಗಿ ಮಾಡಿದುದೊಂದು ಹಿರಿದಾದ ಕೆಲಸ. ಅದು ನಾಡಿನ ಮುಂದಿನೇಳಿಗೆಯ ತಳಹದಿ.

ವಿದ್ಯಾಪೀಠದ ಪದವೀಧರರಾಗಿ ಕನ್ನಡದಲ್ಲಿ ಗ್ರಂಥಗಳನ್ನು ಬರೆಯಲು ಉತ್ತರ ಕರ್ನಾಟಕದಲ್ಲಿ ಮುಂದಾದವರಲ್ಲಿ ಶ್ರೀ|| ವೆಂಕಟರಾಯರೇ ಮೊದಲಿಗರು. ೧೯೧೦ರ ಸುಮಾರಿಗೆ 'ಕನ್ನಡ ಗ್ರಂಥ ಪ್ರಸಾರಕ ಮಂಡಲ'ವೆಂಬ ಸಂಸ್ಥೆಯನ್ನು ಸ್ಥಾಪಿಸಿ 'ಶಿಕ್ಷಣ ಮೀಮಾಂಸೆ', 'ಸಂಸಾರಸುಖ' ಮೊದಲಾದ ಕೆಲವು ಗ್ರಂಥಗಳನ್ನು ಬರೆದು, ಬರೆಯಿಸಿ ಪ್ರಕಟಿಸಿದರು.

ಧಾರವಾಡದಲ್ಲಿ ಇವರು ಗ್ರಂಥಕರ್ತರ ಸಮ್ಮೇಲನವನ್ನು ೧೯೦೭ರಲ್ಲಿಯೇ ಕೂಡಿಸುವ ಉಪಕ್ರಮ ಮಾಡಿ, ಕನ್ನಡ ಸಾಹಿತ್ಯ ಪರಿಷತ್ತಿನ ಬೀಜಾರೋಪಣೆ ಮಾಡಿದರು; ಮತ್ತದನ್ನು ಬೆಳೆಸಲು ಅದರ ಕಾರ್ಯಕಾರೀ ಮಂಡಲದಲ್ಲಿ ಹಲವು ವರುಷ ದುಡಿದರು. ಮೈಸೂರಲ್ಲಿ ಸೇರಿದ ೧೬ನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಪದದ ಬಹುಮಾನವನ್ನೂ ಪಡೆದರು; ಕನ್ನಡ ಭಾಷಾಭ್ಯುದಯದ ಬಗೆಗೆ ಆಗಿವರು ಕೊಟ್ಟ ಸಲಹೆಗಳು ವಿಚಾರಾರ್ಹವಾಗಿವೆ.

೧೯೨೨ರಲ್ಲಿ ಇವರು 'ಜಯಕರ್ನಾಟಕ'ವನ್ನು ಹೊರಡಿಸಿದರು. ಕನ್ನಡ ನುಡಿಯ ಬೆಳವಳಿಗೆಯ ಹಾಗೂ ಜನತೆಯ ತಿಳಿವಳಿಕೆಯ ಹೆಚ್ಚುಗೆಯ ದೃಷ್ಟಿಯಿಂದ ಕರ್ನಾಟಕಕ್ಕೆ ಸಲ್ಲಿಸಿದ ಚಿನ್ನದ ಮುದಿಪದು. ಏಳು ವರ್ಷ ಕಾಲ 'ಜಯಕರ್ನಾಟಕ'ದ ಸಂಪಾದಕತ್ವವನ್ನು ವಹಿಸಿ, ತನ್ಮೂಲಕ ತಮ್ಮ ವಿಶಿಷ್ಟವಾದ ಸ್ವತಂತ್ರ ವಿಚಾರಸರಣಿಯನ್ನು ಮಂಡಿಸಿದುದರ ಫಲವಾಗಿ, ಕರ್ನಾಟಕವು ಏಳಡಿಯಾದರೂ ಮುಂದರಿಯಿತೆಂದು ಹೇಳಲಡ್ಡಿಯಿಲ್ಲ.

ವೀರಶ್ರೀ–ವಿದ್ಯಾಶ್ರೀ–ಸಾಮ್ರಾಜ್ಯಶ್ರೀಗಳಿಂದ ಕೀರ್ತಿಪಡೆದ 'ಕರ್ನಾಟಕ ಗತವೈಭವ'ದ ಬೆಳಕನ್ನು ಮೊದಲು ಶ್ರೀಮದ್ವಿದ್ಯಾರಣ್ಯರ ಚರಿತ್ರದ ದೀವಟಿಗೆ ಹಿಡಿದು ಶ್ರೀ|| ವೆಂಕಟರಾಯರು ಬೀರಿದರು. 'ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ'ದ ಸಂಸ್ಥಾಪಕರಲ್ಲಿ ಇವರೂ ಒಬ್ಬರು. ಆ ಸಂಸ್ಥೆಯಿಂದ 'ಪ್ರಾಚೀನ ಕರ್ನಾಟಕ'ವೆಂಬ ಪತ್ರಿಕೆಯನ್ನು ಹೊರಡಿಸಿದರು. ಅವರ 'ಕರ್ನಾಟಕ ವೀರರತ್ನಗಳು' ಹಿಂದಣ ಶಾಸನಭಾಷೆಯ ಓಜಸ್ವಿತೆಯನ್ನು ಮೈಗೂಡಿಸಿಕೊಂಡ ವೀರವಾಣಿಯಿಂದ ಓದುಗರ ಮೈಯುಬ್ಬಿಸುವುವು.

'ಜಯಕರ್ನಾಟಕ'ದಿಂದ ನಿವೃತ್ತರಾದಮೇಲೆ ಇವರು ವಿರಮಿಸದೆ 'ನವಜೀವನ ಗ್ರಂಥಮಾಲೆ'ಯನ್ನಾರಂಭಿಸಿದರು. ಅದರಿಂದ ಕನ್ನಡ ಸಾಹಿತ್ಯಕ್ಕೆ ಅನೇಕ ಅಮೌಲ್ಯವಾದ ಉದ್ಗ್ರಂಥಗಳು ಒದಗಿದವು.

ಇವರು ಧಾರ್ಮಿಕ ಜೀವನದಲ್ಲಿ ಶ್ರೀಮದ್ಭಗವದ್ಗೀತೆಗೆ ಶ್ರೇಷ್ಠ ಸ್ಥಾನವಿದೆ. ಲೋಕಮಾನ್ಯ ತಿಲಕರ 'ಗೀತಾ ರಹಸ್ಯ'ವನ್ನು ಕನ್ನಡಿಸಿದುದಲ್ಲದೆ, ಗೀತೆಯನ್ನು ಕುರಿತು 'ಗೀತಾ ಕುಸುಮಮಂಜರಿ'ಯ ೩–೪ ಸ್ವತಂತ್ರ ಗ್ರಂಥಗಳನ್ನು ಈಚೆಗೆ ಬರೆದಿದ್ದಾರೆ. ಇವರ ಕರ್ನಾಟಕತ್ವದ ಕಲ್ಪನೆ ಕೂಡ ಗೀತೆಯಿಂದಲೇ ಬೆಳಗಿದುದು.

ಕರ್ನಾಟಕ ಒಂದಾಗದೆ ಮುಂದಾಗದು, ಸ್ವತಂತ್ರ ವಿಶ್ವವಿದ್ಯಾನಿಲಯವಿಲ್ಲದೆ ಅದು ಹಿರಿದಾಗದು—ಎಂಬುದು ಇವರ ದೃಢವಿಶ್ವಾಸ. ಕೀರ್ತಿಶೇಷ ರಾಘವೇಂದ್ರರಾಯರಂತಹ ಹುರುಪಿನ ಗಡಿಯ ಜೋಡು ಇವರಿಗೆ ಸಿಕ್ಕಿತು. ಆಗ ಇಬ್ಬರೂ ಮಾಡಿದ ಕಾರ್ಯ ಚಿರಸ್ಮರಣೀಯವಾದುದು.

ಇವರ ಜೀವನಸ್ಮೃತಿಗಳನ್ನು ನೋಡಿದರೆ, ವಂಗಭಂಗವೂ ಲೋಕಮಾನ್ಯ ತಿಲಕರ ನೇತೃತ್ವವೂ ಇವರು ವಿದ್ಯಾರ್ಥಿದಸೆಯಿಂದ ಪ್ರಪಂಚದಲ್ಲಿ ಕಾಲಿಡುತ್ತಲೇ ಇವರ ಜೀವನವನ್ನೇ ರಾಷ್ಟ್ರಸೇವೆಗೆ ಅರ್ಪಿಸುವಂತೆ ಮಾಡಿದವೆಂಬುದು ಮನವರಿಕೆಯಾಗದಿರದು. ರಾಷ್ಟ್ರೀಯತೆಯೂ ಪ್ರಾಂತೀಯತೆಯೂ ಇವರ ಜೀವನದಲ್ಲಿ ಸಮರಸವಾಗಿವೆ.

ಹೀಗೆ ವಿಶಾಲ ಕಾರ್ಯಕ್ಷೇತ್ರದಲ್ಲಿ ಬಹುಮುಖವಾಗಿ ದುಡಿದು, ನಾಡನ್ನು ಸ್ವತಂತ್ರವಿಚಾರದ ಮೇಲುಮಟ್ಟಕ್ಕೆ ಮುಟ್ಟಿಸಿ, ಭಾರತೀಯ ಪ್ರಪಂಚದಲ್ಲಿ ಅದಕ್ಕೊಂದು ಗಣ್ಯಸ್ಥಾನವನ್ನು ದೊರಕಿಸಿಕೊಟ್ಟ ಶ್ರೇಯಸ್ಸಿನ ಬಹುಭಾಗ ಶ್ರೀ|| ವೆಂಕಟರಾಯರಿಗೆ ಸಲ್ಲುವುದಾಗಿದೆ. ಹೊಸಗನ್ನಡ ನಾಡನ್ನು ಕಟ್ಟುವುದಕ್ಕಾಗಿ ಇವರು ೩೬ ವರುಷಗಳಿಂದ ಸರ್ವಸ್ವವನ್ನು ಸೂರೆಗೈದಿದ್ದಾರೆ; ದೇಹವನ್ನು ಚಂದನದ ಕೊರಡಿನಂತೆ ಸವೆಸಿದ್ದಾರೆ. ಇವರಿಗೆ ಕರ್ನಾಟಕವು ಕೃತಜ್ಞತೆಗಳನ್ನು ಸಲ್ಲಿಸಿದಷ್ಟೂ ಕಡಮೆಯೇ ಆದೀತು.

ಶ್ರೀ|| ವೆಂಕಟರಾಯರ ಈ ಕಾರ್ಯವನ್ನು ಗೌರವಿಸುವ, ಅವರಿಗೆ ಕೃತಜ್ಞತೆಯನ್ನು ಸಲ್ಲಿಸುವ ಸುಯೋಗ ಇದೀಗ ಕನ್ನಡಿಗರಿಗೆ ಪ್ರಾಪ್ತವಾಗಿದೆ. ಅದೇ—ಜುಲೈ ೧೨ನೆಯ ತಾರೀಖು. ಅಂದವರಿಗೆ ೬೦ ವರುಷಗಳು ತುಂಬುವವು. ಅಂದು ಅವರ ಷಷ್ಟ್ಯಬ್ದಿಪೂರ್ತಿಯ ಶಾಂತಿಸಮಾರಂಭವನ್ನು ಜರುಗಿಸಲು ಧಾರವಾಡದಲ್ಲಿ ಸಮಿತಿಯ ಏರ್ಪಾಡಾಗಿದೆ. ಈ ಹಬ್ಬವನ್ನು ಅಖಿಲ ಕರ್ನಾಟಕವೂ ಆಚರಿಸಬೇಕೆಂದು ಈ ಸಮಿತಿಯವರು ಕನ್ನಡಿಗರನ್ನು ಬಿನ್ನವಿಸಿಕೊಂಡಿದ್ದಾರೆ.

ಈ ಶಾಂತಿಸಮಾರಂಭ ಸಮಿತಿಯವರು, ಶ್ರೀ|| ವೆಂಕಟರಾಯರಿಗೆ ಕೈಲಾದಮಟ್ಟಿಗಿನ ನಿಧಿಯೊಂದನ್ನು ಸಮರ್ಪಿಸಬೇಕೆಂದೂ ಇವರ ಸ್ಫೂರ್ತಿದಾಯಕವಾದ ಜೀವನ ಚರಿತ್ರೆಯೊಂದನ್ನು ಚಿಕ್ಕದಾಗಿ ಪ್ರಕಟಿಸಬೇಕೆಂದೂ ಯೋಜಿಸಲಾಗಿದೆ. ಅಖಿಲ ಕರ್ನಾಟಕದ ಕನ್ನಡಿಗರು ಈ ನಿಧಿಗೆ ಶಕ್ತ್ಯನುಸಾರ ಧಾರಾಳವಾಗಿ ಧನಸಹಾಯವನ್ನು ನೀಡಿ, ಸಮಾರಂಭವನ್ನು ಯಶಸ್ವಿಗೊಳಿಸುವುದರಲ್ಲಿ ತಮ್ಮ ಕರ್ತವ್ಯಕ್ರಮವನ್ನು ಪೂರೈಸುವರೆಂದು ನಂಬುತ್ತೇನೆ.

**ಆದಿನ (ತಾ|| ೧೨ ಜುಲೈ) ಕನ್ನಡಿಗರು ಊರೂರಿಗೆ ಸಭೆ ಕೂಡಿಸಿ, ಶ್ರೀ|| ವೆಂಕಟರಾಯರಿಗೆ ಕೃತಜ್ಞತೆಗಳನ್ನರ್ಪಿಸುವುದಲ್ಲದೆ, ಇವರಿಗೆ ದೀರ್ಘಾಯುರಾರೋಗ್ಯಗಳು ಲಭಿಸಲೆಂದೂ ಇವರಿಂದ ಕರ್ನಾಟಕಕ್ಕೆ ಇತೋಪ್ಯಧಿಕವಾದ ಸೇವೆ ದೊರೆಯಲೆಂದೂ ದೇವರನ್ನು ಪ್ರಾರ್ಥಿಸುವುದು. ಎಲ್ಲ ಕಡೆಯ ಕರ್ನಾಟಕ ಸಂಘಗಳೂ ಕನ್ನಡ ಸಂಸ್ಥೆಗಳೂ ಕನ್ನಡದ ಅಭಿಮಾನಿಗಳೂ ಈ ಸಂಗತಿಯನ್ನು ಅಗತ್ಯ ಗಮನಿಸಬೇಕಾಗಿ ಬಿನ್ನಹ.**

ಶ್ರೀ|| ವೆಂಕಟರಾಯರ ನಿಧಿಗಾಗಿ ಹಣವನ್ನು ಕಳಿಸುವವರು, ಶಾಂತಿಸಮಾರಂಭ ಸಮಿತಿಯ ಗೌರವ ಕಾರ್ಯದರ್ಶಿಗಳಾದ ಶ್ರೀ|| ಬೆಳಗಾವಿ ರಾಮಚಂದ್ರರಾಯರು, ಜಯಕರ್ನಾಟಕದ ಸಂಪಾದಕರು, ಧಾರವಾಡ—ಈ ವಿಳಾಸಕ್ಕೆ ಕಳಿಸುವುದು. ಕೂಡಿದ ಹಣದ ವಿವರವಾದ ಒಪ್ಪಿಗೆಯನ್ನು 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಬೆಂಗಳೂರು
೧–೭–೧೯೪೦

**ಮುದವೀಡು ಕೃಷ್ಣರಾಯ**
೨೪ನೆಯ ಸಮ್ಮೇಳನಾಧ್ಯಕ್ಷ

# ಒಂಟಿಮುರಿಯ ದೇಸಾಯಿಯವರು

ಒಂಟಿಮುರಿಯ ದೇಸಾಯ್ತನ ಬೆಳಗಾಂವಿಯ ಜಿಲ್ಲೆಗೆ ಸೇರಿರುವ ದೇಸಗತ್ತಿಗಳಲ್ಲಿ ಬಲು ದೊಡ್ಡದು. ಈ ದೇಸಗತ್ತಿಯ ಆದಾಯ ವರುಷಕ್ಕೆ ೭೫ ಸಾವಿರ ರೂಪಾಯಿಗಳು; ಒಂಟಿಮುರಿ ಈ ದೇಸಾಯಿಯವರ ಹಿರಿಯೂರು. ಇಲ್ಲಿಯೆ ಇವರ ಅರಮನೆ ಯುಂಟು. ಈ ಊರಿಗೆ ಹೋಗುವ ದಾರಿ ಕಣಿವೆಗಳ ಗುಂಟಹಾವಿನ ಹರಿದಾಟದ ಮಾಟವಾಗಿ ಸಾಗಿದೆ. ಬಳಿಯಲ್ಲಿಯೆ ಘಟಪ್ರಭಾ ನದಿ ಹರಿದಿದೆ. ಅರಮನೆಯ ಉಪ್ಪರಿಗೆಯ ಮೇಲೆ ನಿಂತು ನೋಡಿದರೆ ಸುತ್ತಲಿರುವ ದಾರಿಯ ಮತ್ತು ಈ ಹೊಳೆಯ ಹರಿಯ ನೋಟ ಬಲು ಸೊಗಸಾಗಿ ಕಾಣು ವುದು.

ಈಗ ಈ ದೇಸಾಯ್ತನದ ಆಡಳಿತವನ್ನು ನೋಡುವವರು ಶ್ರೀಮಂತ ಬಸವಪ್ರಭು, ರಾಜಾ ಲಖಮನಗೌಡಾ ಸರ ದೇಸಾಯಿಯವರು. ಇವರಿಗೆ ಈಗ ೫೭ ವರುಷಗಳ ಪ್ರಾಯ. ಇವರ ಹಿರಿಯರಾದ ರಾಜಾ ಲಖಮನಗೌಡಾ ದೇಸಾಯಿಯವರಿಗೆ ಈಗ ೭೭ನೆಯ ವರುಷ ನಡೆಯುತ್ತಿದೆ. ಮಗನಿಗೆ ಆಡಳಿತವನ್ನು ಒಪ್ಪಿಸಿ, ಕೆಲವು ವರುಷಗಳಿಂದ ರಾಜಾ ಲಖಮನಗೌಡರವರು ವಿಶ್ರಾಂತಿಯನ್ನು ಪಡೆಯುತ್ತಿದ್ದಾರೆ. ಶ್ರೀಮಂತ ಬಸವಪ್ರಭು ದೇಸಾಯಿಯವರ ಪ್ರಾಥಮಿಕ ಶಿಕ್ಷಣ ಒಂಟಿಮುರಿಯಲ್ಲಿಯೂ ಮಾಧ್ಯಮಿಕ ಶಿಕ್ಷಣ ವಿಜಾಪುರದ ಮತ್ತು ಬೆಳಗಾಂವಿಯ ಮಾಧ್ಯಮಿಕ ಶಾಲೆಗಳಲ್ಲಿಯೂ ಸಾಗಿತು. ೧೯೦೩ರಲ್ಲಿ ಇವರು ಮುಂಬಯಿ ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾದರು. ತಂದೆಯವರ ಮೇಲ್ವಿಚಾರಣೆಯಲ್ಲಿ ಒಳ್ಳೆಯ ಸಂಸ್ಕೃತಿಯನ್ನು ಪಡೆದವರಾಗಿ, ಶ್ರೀಮಂತ ಬಸವಪ್ರಭುಗಳವರು ವಿನಯಶೀಲರೂ ಗುಣಗ್ರಾಹಿಗಳೂ ಜನತಾಜನಾರ್ದನನ ಸೇವೆಗಾಗಿ ಕೊಡುಗೈತನದಿಂದ ಹಣವನ್ನು ನೀಡುವವರೂ ಆಗಿದ್ದಾರೆ.

ಇವರ ಹಿರಿಯರಾದ ರಾಜಾ ಲಖಮನಗೌಡಾ ದೇಸಾಯಿಯವರು ೧೮೮೩ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾಗಿ, ಮೂರು ವರ್ಷಗಳ ವರೆಗೆ ಕೀರ್ತಿಶೇಷರಾದ ಹುಗ್ವರ್ಥ್ ಸಾಹೇಬರಿಂದ ಉಚ್ಚ ಶಿಕ್ಷಣವನ್ನು ಪಡೆದು ೧೮೮೬ರಲ್ಲಿ ಇಂಗ್ಲೆಂಡಿಗೆ ಹೋದರು. ಅಲ್ಲಿ ನ್ಯಾಯಶಾಸ್ತ್ರದ (ಕಾಯ್ದೆ ಕಾನೂನುಗಳ) ವ್ಯಾಸಂಗವನ್ನು ಚೆನ್ನಾಗಿ ಮಾಡಿ ನ್ಯಾಯಪಂಡಿತ (ಬ್ಯಾರಿಸ್ಟರ್) ಪದವಿಯನ್ನು ದೊರಕಿಸಿಕೊಂಡರು. ವೀರಶೈವರಲ್ಲಿ ಮೊದಲು ಧೈರ್ಯದಿಂದ ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕಾಗಿ ಹೋದವರೆಂದರೆ ಇವರೇ. ೬೦ ವರುಷಗಳ ಹಿಂದೆ ನಮ್ಮ ದೇಶದಲ್ಲಿಯ ತರುಣರೆಲ್ಲರು ಆಂಗ್ಲ ಶಿಕ್ಷಣವನ್ನು ಪಡೆದೊಡನೆಯೆ ತಾವೂ ಆಂಗ್ಲರೇ ಎಂದು ತಿಳಿದುಕೊಂಡು ಆಂಗ್ಲರ ಬಾಹ್ಯಾಡಂಬರವನ್ನು ಅನುಕರಿಸುವುದರಲ್ಲಿ ಹೆಮ್ಮೆಯನ್ನು ಪಡುತ್ತಿದ್ದರು. ಈಗಲೂ ಇಂತಹವರು ಹಲವರಿದ್ದಾರೆ. ಆದರೆ, ಆಗಿನ ಮೋಹದ ಕಾಲದಲ್ಲಿಯೇ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಹೋಗಿ, ಹಲವು ವರುಷಗಳವರೆಗೆ ಅಲ್ಲಿಯೆ ನಿಂತುಕೊಂಡು, ಉಚ್ಚ ಶಿಕ್ಷಣವನ್ನು ಪಡೆದು, ಆಂಗ್ಲರ ಸದ್ಗುಣಗಳನ್ನು ಸ್ವೀಕರಿಸಿ, ಸ್ವದೇಶಕ್ಕೆ ಮರಳಿದವರೂ ಆಗರ್ಭ ಶ್ರೀಮಂತರೂ ಆಗಿರುವವರಾದರೂ ರಾಜಾ ಲಖಮನಗೌಡರು ಆಂಗ್ಲರ ಬಾಹ್ಯ ಸಂಸ್ಕೃತಿಗೆ ಸೋತುಹೋಗದೆ ಭಾರತೀಯ ಸಂಸ್ಕೃತಿಯಲ್ಲಿಯೇ—ಹೆಚ್ಚಾಗಿ ಕನ್ನಡಿಗರ ಸಂಸ್ಕೃತಿಯಲ್ಲಿಯೆ—ಹೆಚ್ಚಿನ ಹೆಮ್ಮೆಯುಳ್ಳವರಾಗಿದ್ದಾರೆ. ಶ್ರೀಮಂತ ಬಸವಪ್ರಭು ಸರದೇಸಾಯಿಯವರಾದರೂ ಹಿರಿಯರ ದಾರಿಯಲ್ಲಿಯೆ ನಡೆಯುತ್ತಿದ್ದಾರೆ. ಇದು ಈ ಬದಿಯ ಕನ್ನಡಿಗರಿಗೆ ಮೇಲುಪಂಕ್ತಿಯಾಗಿರುವಂತಹ ಸಂಗತಿ. ಕನ್ನಡಿಗರ ಮಾಸಲಿನ ಕುರುಹಾದ ಪಾವುಡವನ್ನು ತಂದೆ ಮಕ್ಕಳಿಬ್ಬರೂ ಹೆಮ್ಮೆಯಿಂದ ತೊಡುವರು.



ಕನ್ನಡ ಸಾಹಿತ್ಯ ಪರಿಷತ್ತಿಗೆ ೫೦೦ ರೂಪಾಯಿಗಳ ಕಾಣಿಕೆಯನ್ನೂ ಪ್ರತಿವರ್ಷವೂ ೨೦ ರೂಪಾಯಿಗಳ 'ಕೊಡುಗೆ'ಯನ್ನೂ, ದಯೆಪಾಲಿಸಿದವರಾದ ಒಂಟಿಮುರಿಯ ಶ್ರೀಮಂತ ಬಸವಪ್ರಭು ರಾಜಾ ಲಖಮನಗೌಡಾ ಸರದೇಸಾಯಿಯವರು

ಸ್ವಾಭಿಮಾನದಲ್ಲಿಯೂ ರಾಜಾ ಲಖಮನಗೌಡರು ಹೆಸರಾಗಿದ್ದಾರೆ. ಬಲು ಬಿಂಕದಿಂದ ಭಾರತೀಯರೊಡನೆ ನಡೆಯುವುದೆಂದರೆ, ಹಿರಿಮೆಯೆಂದು ತಿಳಿದುಕೊಂಡ ಮೂವರು ಆಂಗ್ಲಾಧಿಕಾರಿಗಳ ನಡವಳಿಕೆಯಿಂದ ತಮ್ಮ ಗೌರವಕ್ಕೆ ಕುಂದನ್ನು ತರುವಂತಹ ಪ್ರಸಂಗಗಳು ಬರಲು, ರಾಜಾ ಲಖಮನಗೌಡರವರು ಸ್ವಾಭಿಮಾನವನ್ನು ಸ್ವಲ್ಪವೂ ಬಿಡದೆಯೆ ನಡೆದುಕೊಂಡರೆಂದು ಕೇಳಿ, ಪ್ರಾಂತಾಧಿಕಾರಿಗಳೂ ಅವರ ವಿಷಯದಲ್ಲಿ ಗೌರವವನ್ನು

ತೋರಿಸತೊಡಗಿದರು. ಕೊಡುಗೈತನದಲ್ಲಿ ರಾಜಾ ಲಖಮನ ಗೌಡರನ್ನು ಸರಿಗಟ್ಟುವವರು ಬಹುಜನ ದೊರಕಲಾರರು. ರಾಷ್ಟ್ರ ಕೂಟ ವಂಶದ ರಾಜನೊಬ್ಬನಾದ 'ಇಂದ್ರ'ನನ್ನು ಕುರಿತು ಬರೆದಿರುವ ಶಾಸನ ಪದ್ಯಗಳಲ್ಲಿಯ ಈ ಕೆಳಗಿನ ಪದ್ಯದಲ್ಲಿ ಹೇಳಿರುವ ಮಾತುಗಳೆಲ್ಲವೂ ರಾಜಾ ಲಖಮನಗೌಡರಿಗೆ ಸರಿಯಾಗಿ ಒಪ್ಪುವುವು:—

ಇರಿಯಲ್ಕಣ್ಮುವರೀಯಲಾರರರಿಬರ್ ಪೂಣ್ದೀವರಾರಾಸುವಮಾಂ
ತಿರಿಯಲ್ಕಣ್ಮರದಾವ ಗಂಡಗುಣಮಾವೌದಾರ್ಯಮೆಂದಳ್ಕದಾಂ
ತಿರಿವಣ್ಮುಂ ಪಿರಿದೀವ ಪೆಂಪುಮೆಸೆದೊಪ್ಪಿರ್ದಪ್ಪುವಾರ್ ಬಣ್ಣಿಸಲ್
ನೆರೆವರ್ ಬೀರದ ಚಾಗದುನ್ನತಿಕೆಯಂ ಶ್ರೀ ರಾಜಮಾರ್ತಾಂಡನಾ ।

ವಿವಿಧ ಸಂಸ್ಥೆಗಳಿಗೆ ರಾಜಾ ಲಖಮನಗೌಡರವರು ಮಾಡಿರುವ ದಾನಗಳ ಹಣ ೩ ಲಕ್ಷ ರೂ. ಗಳನ್ನು ಮೀರುವುದು. ಬೆಳಗಾಂವಿಯ ಲಿಂಗರಾಜ ವಿದ್ಯಾಲಯದಲ್ಲಿ ವಿಜ್ಞಾನಶಾಖೆಯನ್ನು ಏರ್ಪಡಿಸಲೆಂದು ೧ ಲಕ್ಷ ರೂಪಾಯಿ; ಲಿಂಗಾಯತರ ಶಿಕ್ಷಣ ನಿಧಿಗೆ ೫೫ ಸಾವಿರ ರೂಪಾಯಿ; ಒಂಟಿಮುರಿಯಿಂದ ಪಾಚ್ಛಾಪುರದ ನಿಲ್ದಾಣದವರೆಗೆ ದಾರಿಯನ್ನು ಮಾಡಲೆಂದು ೭೦ ಸಾವಿರ ರೂ.; ಲಿಂಗಾಯತ ವಿದ್ಯಾವರ್ಧಕ ಮಂಡಲಕ್ಕೆ ೨೦ ಸಾವಿರ ರೂಪಾಯಿ; ಬೆಳಗಾಂವಿಯ ಕ್ರೀಡಾಭವನಕ್ಕೆ ೧೦ ಸಾವಿರ ರೂಪಾಯಿ ಮತ್ತು ಸಾರ್ವಜನಿಕ ವಾಚನಾಲಯಕ್ಕೆ ೧೦ ಸಾವಿರ ರೂಪಾಯಿ— ಈ ದಾನಗಳು ಇವರು ಈವರೆಗೆ ಮಾಡಿದ ದಾನಗಳಲ್ಲಿ ಹೆಚ್ಚಿನವು. ಶ್ರೀಮಂತ ಲಖಮನಗೌಡರು ಮಾಡಿರುವ ಜನಸೇವೆಗೂ ಅವರು ತೋರಿಸಿದ ರಾಜಭಕ್ತಿಗೂ ಮೆಚ್ಚಿ ಘನ ಸರಕಾರದವರು ೧೯೩೦ರಲ್ಲಿ 'ರಾಜಾ' ಎಂಬ ಬಿರುದನ್ನು ಅವರಿಗೆ ದಯೆಪಾಲಿಸಿದರು. ತಮ್ಮ ಹಿರಿಯೂರಾದ ಒಂಟಿಮುರಿಯಲ್ಲಿಯೆ ಇರುವುದರಲ್ಲಿ ರಾಜಾ ಲಖಮನಗೌಡರಿಗೂ ಶ್ರೀಮಂತ ಬಸವಪ್ರಭು ಸರದೇಸಾಯಿಯವರಿಗೂ ಹೆಚ್ಚಿನ ಒಲುಮೆ. ಆದರೆ ರಾಜಾ ಲಖಮನಗೌಡರ ಮುಪ್ಪಿನಲ್ಲಿ ಆಗಾಗ ಉಂಟಾಗುತ್ತಿರುವ ಅನಾರೋಗ್ಯಕ್ಕೆ ತಕ್ಕ ಔಷಧೋಪಚಾರಗಳನ್ನು ಪಡೆಯಲು ಅನುಕೂಲವಾಗಬೇಕೆಂದು ತಂದೆ ಮಕ್ಕಳಿಬ್ಬರೂ ಏಳೆಂಟು ವರುಷಗಳಿಂದ ಬೆಳಗಾಂವಿಯಲ್ಲಿಯೇ ವಾಸವಾಗಿದ್ದಾರೆ. ದಿನದಿನದ ಆಡಳಿತ ನೋಡಿಕೊಳ್ಳಲೆಂದು ಶ್ರೀಮಂತ ಬಸವಪ್ರಭು ದೇಸಾಯಿಯವರು ದಿನಾಗಲೂ ಒಂಟಿಮುರಿಗೆ ಹೋಗಿಬರುವರು. ರಾಜಾ ಲಖಮನಗೌಡರವರಿಗೆ ಸಂಸ್ಕೃತ ಸಾಹಿತ್ಯದಲ್ಲಿಯೂ ಚಿತ್ರಕಲೆಯಲ್ಲಿಯೂ ಸಂಗೀತದಲ್ಲಿಯೂ ಅಭಿರುಚಿಯುಂಟು. ಆಂಗ್ಲ ಭಾಷೆಯಲ್ಲಿ ಬಲು ಚೆನ್ನಾಗಿ ಇವರು ಮಾತನಾಡಬಲ್ಲರು. ಕನ್ನಡವೆಂದರೆ ತಂದೆ ಮಕ್ಕಳಿಬ್ಬರಿಗೂ ಬಲು ನಲುಮೆ. ರಾಜಾ ಲಖಮನಗೌಡರ ಹಿರಿಯರು ಆಗಿನ ಕಾಲದ ಪರಂಪರೆಗೆ ಅನುಸಾರವಾಗಿ ತಮ್ಮ ಮನೆತನದ ಮಕ್ಕಳಿಗೆ ಮರಾಠಿಯನ್ನು ಕಲಿಸುತ್ತಿದ್ದರು. ರಾಜಾ ಲಖಮನಗೌಡರೇ ತಮ್ಮ ಮಕ್ಕಳಿಗೆ ಕನ್ನಡವನ್ನು ಕಲಿಸಲು ಮೊದಲುಮಾಡಿದವರು.

ಈ ದೇಸಗತ್ತಿಯನ್ನು ಮೊಗಲ ವಂಶದ ರಾಜರಿಂದ ೧೭ನೆಯ ಶತಮಾನದ ಕೊನೆಯಲ್ಲಿ ಪಡೆದವರು ಬಸವಪ್ರಭುಗಳವರು. ಇವರಿಗೆ ಮೊಗಲ ಚಕ್ರವರ್ತಿಗಳಿಂದ ಸರದೇಸಾಯಿ–ನಾಡಗೌಡ–ಹುಗ್ಗೇರಿ ಪರಗಣೆ ಮತ್ತು ಮೂರ್ತಿಜಾಬಾದಿನ (ಮಿರಜ) ಮಾಮಲೆ ಎಂಬ ಅಧಿಕಾರಗಳು ದೊರಕಿದುವು. ದಕ್ಷಿಣ ಭಾರತದಲ್ಲಿ ವಿಜಾಪುರದ ಸುಲ್ತಾನರೂ ಮೊಗಲರೂ ಪೇಶ್ವೆಯವರೂ ರಾಜ್ಯದ ಭಾಗಗಳಿಗಾಗಿ ಕಾದಾಡುತ್ತಿರುವಾಗ, ಕೆಲಕಾಲ ಈ ಮನೆತನದ ದೇಸಾಯಿಗಳು ಸ್ವತಂತ್ರರಾಗಿಯೇ ಆಳಿದರು. ಕೆಲವು ಕಾಲ ಸ್ವಂತ ಟಂಕಸಾಲೆಗಳಲ್ಲಿ ತಮ್ಮ ನಾಣ್ಯಗಳನ್ನು ಅಚ್ಚುಮಾಡುತ್ತಿದ್ದರು. ಇವರ ಆಸ್ತಿಯಿದ್ದ ಭಾಗ ವಿಜಾಪುರದ ಸುಲ್ತಾನರಿಗಾಗಲಿ ಪೇಶ್ವೆಯವರಿಗಾಗಲಿ ಸೇರಿದಾಗಲೂ, ಆಯಾ ರಾಜರು ದೇಸಗತ್ತಿಯನ್ನು ಈ ಮನೆತನದವರಿಗೇ ಕೊಟ್ಟು ನಡಸಿದರು.

ಮೊದಮೊದಲು ಚಿಕ್ಕೋಡಿಯಲ್ಲಿಯೇ ಇವರ ಪೂರ್ವಜರು ವಾಸವಾಗಿದ್ದರು. ಈಗಲೂ ಚಿಕ್ಕೋಡಿಯಲ್ಲಿ ಒಂಟಿಮುರಿಯ ದೇಸಾಯಿಯವರ ವಾಡೆಯ ಮತ್ತು ಪ್ರಭುದೇವರ ಗುಡಿಯ ಕುರುಹುಗಳು ಉಂಟು. ಕೊಲ್ಹಾಪುರದ ರಾಜರ ಮತ್ತು ಪೇಶ್ವೆಯವರ ದಾಳಿಗಳಿಂದ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಲೆಂದು ಬಸವಪ್ರಭು ದೇಸಾಯಿಯೆಂಬವರು ಚಿಕ್ಕೋಡಿಯನ್ನು ಬಿಟ್ಟು ಒಂಟಿಮುರಿಯಲ್ಲಿ ನೆಲಸಿದರು. ಪೇಶ್ವೆಯವರ ದಳವಾಯಿಗಳಲ್ಲಿ ಹೆಸರುಗೊಂಡಿರುವ ಪರಶುರಾಮಭಾವು ಪಟವರ್ಧನರೆಂಬವರು ಈ ದೇಸಾಯಿಯವರ ಮನೆತನಕ್ಕೆ ಪರಮಮಿತ್ರರಾಗಿದ್ದರು. ಆ ಮೊದಲು ಪೇಶ್ವೆಗಳಲ್ಲೊಬ್ಬರು ಒಂಟಿಮುರಿಯ ಕೋಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನ ಮಾಡಿದ್ದರಂತೆ.

ದಿಲ್ಲಿಯಲ್ಲಿಯ ಮೊಗಲ ಚಕ್ರವರ್ತಿಯ ಸೇವೆಗೆಂದು ಈ ಮನೆತನದ ಪೂರ್ವಜರೊಬ್ಬರು ಹೋಗಿರುವಾಗ ಅಲ್ಲಿಯ ಅಧಿಕಾರಿಗಳಲ್ಲೊಬ್ಬರು ಇವರನ್ನು ಇಸ್ಲಾಮ ಧರ್ಮಕ್ಕೆ ಸೇರಿಸಲೆಂದು ಬಹು ಪ್ರಯತ್ನ ಮಾಡಿದರಂತೆ. ಇದಕ್ಕೆ ಅವರು ಒಪ್ಪದಿರಲು ಇವರನ್ನು ಸೆರೆಮನೆಯಲ್ಲಿಯೂ ಇರಿಸಿದರಂತೆ. ಈ ಮನೆತನದ ಕುಲದೇವರಾದ 'ಖಂಡೋಬ'ನ ಅನುಗ್ರಹದಿಂದ ಇವರು ಸೆರೆಮನೆಯಿಂದ ಬಿಡುಗಡೆಯಾಗಿ ಮಂಗಸೂಳಿಗೆ ಬಂದರು. ಖಂಡೋಬನು ಇವರ ಕನಸಿನಲ್ಲಿ ಬಂದು "ನೀನು ಒಬ್ಬ ಗುರುವನ್ನು ಕಾಣುವೆ. ಅವನಿಂದ ನಿನ್ನ ಮನೆತನದ ಏಳಿಗೆಯಾಗುವುದು" ಎಂದು ಹೇಳಿದನಂತೆ. ಮರುದಿವಸ ಈ ಗುರುವೇ ಸೆರೆಮನೆಯಿಂದ ದೇಸಾಯಿಯವರ ಬಿಡುಗಡೆಯನ್ನು ಮಾಡಿ, ಅವರನ್ನು ಸುರಕ್ಷಿತವಾಗಿ ಮಂಗಸೂಳಿಗೆ ತಲುಪಿಸಿದನಂತೆ. ಅಂದಿನಿಂದ ಪ್ರಭುದೇವರೆಂಬ ಈ ಗುರುಗಳೇ ಖಂಡೋಬನು ಕನಸಿನಲ್ಲಿ ಬಂದು ಹೇಳಿದ ಗುರುವೆಂದು ಈ ಮನೆತನದವರು ತಿಳಿಯತೊಡಗಿದರು. ಅಂದಿನಿಂದಲೇ 'ಪ್ರಭು' ಶಬ್ದವು ಆಳುವ ದೇಸಾಯಿಗಳ ಹೆಸರುಗಳ ಕೊನೆಗೆ ಗುರುವೆಂದು ಈ ಮನೆತನದಲ್ಲಿ ವಾಡಿಕೆಯಾಗಿ ಬಂದಿದೆ.

ಈ ದೇಸಗತ್ತಿಗೆ ಸೇರಿದ ಹಳ್ಳಿಗಳಿಂದ ಬಹು ದೂರದಲ್ಲಿರುವ ಸಾತಾರೆ ಜಿಲ್ಲೆಗೆ ಸೇರಿದ ಹಲವು ಹಳ್ಳಿಗಳಲ್ಲಿಯೂ ನೆಲಸಿರುವ ಜನರು ಈಗಲಾದರೂ ಈ ದೇಸಾಯಿಯವರಿಗೆ ಹಣದ ರೂಪದಿಂದಾಗಲಿ, ಕಾಳುಕಡಿಗಳ ರೂಪದಿಂದಾಗಲಿ, ಕಾಣಿಕೆಯನ್ನು ಸಲ್ಲಿಸುತ್ತಿರುವರು. ಇದರಿಂದ ಈ ಮನೆತನದ ದೇಸಾಯಿಯವರ ಅಧಿಕಾರ ಅಲ್ಲಿಯವರೆಗೂ ಹಬ್ಬಿದ್ದಿತೆಂದು ಕಂಡುಬರುವುದು.

ಒಂಟಿಮುರಿಯ ದೇಸಾಯಿಯವರಂತೆಯೆ ಇನ್ನೂ ಹಲವರು ದೇಸಾಯಿಯರೂ ಜಹಾಗೀರದಾರರೂ ಕನ್ನಡ ನಾಡಿನಲ್ಲಿ ಆಗರ್ಭ ಶ್ರೀಮಂತರೂ ಆಗಿ ಬಾಳುತ್ತಿದ್ದಾರೆ. ಇವರೆಲ್ಲರೂ ಒಂಟಿಮುರಿಯ ದೇಸಾಯಿಯವರೂ ಸೊಂಡೂರಿನ ರಾಜರೂ ಹಾಕಿಕೊಟ್ಟಿರುವ ಮೇಲುಪಂಕ್ತಿಯನ್ನು ಅನುಸರಿಸಿ ತಾಯ್ನುಡಿಯ ಏಳಿಗೆಗಾಗಿ ಕೊಡುಗೆಗಳನ್ನು ದಯಪಾಲಿಸುವರೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಹಾರೈಕೆಯಾಗಿದೆ.

ರಂಗಪ್ಪ. ಭೀ. ಪೋತ್ದಾರ.

## ಬೆಳ್ಳಿಯ ಹಬ್ಬ

### ಶ್ರೀಮನ್ಮಹಾರಾಜರವರಿಂದ ಸಮಾರಂಭೋತ್ಸವ

ಜೂನ್ ೩೦, ೧೯೪೦ನೆಯ ಭಾನುವಾರ ಬೆಳಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಕಾರ್ಯಕ್ರಮಗಳಲ್ಲಿ ಮೊತ್ತ ಮೊದಲನೆಯವಾಗಿ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಮಂಗಳ ವಾದ್ಯಗಳೊಡನೆ 'ಕನ್ನಡ ಬಾವುಟ'ದ ವಂದನೆಯಾಯಿತು. ಧ್ವಜ ವಂದನೆಗೆ ಪರಿಷತ್ತಿನ ಹಲವು ಸದಸ್ಯರು ದಯಮಾಡಿಸಿದ್ದರು. 'ಉದಯವಾಗಲಿ ಚೆಲುವ ಕನ್ನಡ ನಾಡು' ಗೀತಾ ಪ್ರಾರ್ಥನೆಯಾದ ಮೇಲೆ ಸಮ್ಮೇಳನಾಧ್ಯಕ್ಷರಾದ ಶ್ರೀ|| ಮುದವೀಡು ಕೃಷ್ಣರಾಯರು 'ಶ್ರೀ'ಯವರ 'ಕನ್ನಡದ ಬಾವುಟ' ಎಂಬ ಗೀತೆಯನ್ನು ಹಾಡಿದರು.

ಧ್ವಜವಂದನೆಯಾದ ಬಳಿಕ ಎಲ್ಲರೂ ಸರ್ ಪುಟ್ಟಣ್ಣ ಚೆಟ್ಟರ ಪುರ ಭವನಕ್ಕೆ ತೆರಳಿದರು.

ಬೆಳ್ಳಿಯ ಹಬ್ಬದ ಸಮಾರಂಭೋತ್ಸವಕ್ಕಾಗಿ ಪುರ ಭವನವು ಬಹಳ ಅಂದವಾಗಿ ಅಲಂಕೃತವಾಗಿತ್ತು. ಕನ್ನಡ ನಾಡಿನ ನಾನಾ ಭಾಗಗಳಿಂದಲೂ ಪ್ರತಿನಿಧಿಗಳೂ ಅಹ್ವಾನಿತರೂ ತಂಡ ತಂಡವಾಗಿ ಉತ್ಸವದ ಕಳೆಯನ್ನು ನೂರ್ಮಡಿಯಾಗಿ ಹೆಚ್ಚಿಸಿದ್ದರು. ಅಲ್ಲಿನ ವಾತಾವರಣ ಇದು ಎಲ್ಲ ಕನ್ನಡ ನಾಡಿನ ರಾಷ್ಟ್ರೀಯ ಹಬ್ಬ ಎಂಬುದನ್ನು ಸಾರಿ ಹೇಳುತ್ತಿತ್ತು.

ಮೈಸೂರಿನ ರಾಜಮನೆತನದವರು, ಅರಸು ಕುಟುಂಬದವರು, ಬ್ರಿಟಿಷ್ ರೆಸಿಡೆಂಟರಾದ ಲೆ|| ಕ|| ಜೆ. ಎಚ್. ಗೋರ್ಡನ್ ಅವರು, ದಿವಾನ್ ಸಾಹೇಬರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು, ರಾಜಸಭಾಭೂಷಣ ಟಿ. ತುಂಬುಚೆಟ್ಟರವರು, ರಾಜಸೇವಾಸಕ್ತ ಎಂ. ರಾಮರಾಯರು, ರಾಜಮಂತ್ರಪ್ರವೀಣ ಶ್ರೀ|| ಎನ್. ಮಾಧವ ರಾಯರು, ರಾಜಮಂತ್ರಪ್ರವೀಣ ಶ್ರೀ|| ಕೆ. ವಿ. ಅನಂತರಾಮನ್ ಅವರು, ಸರ್ ಚಾರ್ಲ್ಸ್ ಮತ್ತು ಲೇಡಿ ಟಾಡ್‌ಹಂಟರ್ ಅವರು, ಮೈಸೂರು ಹೈ ಕೋರ್ಟಿನ ಶ್ರೇಷ್ಠ ನ್ಯಾಯಾಧೀಶರು, ಇತರ ನ್ಯಾಯಾಧೀಶರುಗಳು, ಸರಕಾರದ ಎಲ್ಲ ಅಧಿಕಾರಿಗಳು ದಯಮಾಡಿಸಿದ್ದರು.



ದಿವಾನ್ ಸಾಹೇಬರವರನ್ನೂ ಐರೋಪ್ಯ ಅಹ್ವಾನಿತರನ್ನೂ ಉಪಾಧ್ಯಕ್ಷರು ಸ್ವಾಗತಿಸುತ್ತಿರುವುದು

ಸ್ಥಳೀಯ ದೊಡ್ಡ ಮನುಷ್ಯರೂ ಮಹಿಳೆಯರೂ ನೂರಾರುಮಂದಿ ಆಗಮಿಸಿದ್ದರು.



ಉಪಾಧ್ಯಕ್ಷರೂ ಗೌರವ ಕಾರ್ಯದರ್ಶಿಗಳೂ ಸ್ವಾಗತಸಮಿತಿಯ ಸದಸ್ಯರೂ ಮಹಾಸ್ವಾಮಿಯವರ ಆಗಮನವನ್ನು ನಿರೀಕ್ಷಿಸುತ್ತಿರುವುದು

ಈ ಕೆಳಗೆ ಕಂಡ ಸಂಸ್ಥೆಗಳ ಪ್ರತಿನಿಧಿಗಳು ಹಬ್ಬದಲ್ಲಿ ಭಾಗವಹಿಸಲು ದಯಮಾಡಿಸಿದ್ದರು—

೧. ಸಾಂಗಲಿ ಸರಕಾರ: ಶ್ರೀ|| ಅಶ್ವತ್ಥರಾವ್ ಮಹಿಷಿಯವರು. ೨. ಮೈಸೂರು ಸಂಘ, ಕಲ್ಕತ್ತ: ಶ್ರೀ|| ಎ. ನಾರಾಯಣಸ್ವಾಮಿ ಅಯ್ಯರ್ ಅವರು. ೩. ಕರ್ನಾಟಕ ಸಂಘ, ಬೊಂಬಾಯಿ: ಶ್ರೀ|| ಜಿ. ಕೆ. ಬೆಟಗೇರಿಯವರು. ೪. ಕರ್ನಾಟಕ ಸಂಘ, ಕೊಡಗು: ಶ್ರೀ|| ಎಂ. ಎಸ್. ಅನಂತಪದ್ಮನಾಭರಾಯರು. ೫. ಕರ್ನಾಟಕ ಕಾಲೇಜು, ಧಾರವಾಡ: ಶ್ರೀ|| ಎಸ್. ಎಸ್. ಮಾಳವಾಡರವರು. ೬. ಜನರಲ್ ಲೈಬ್ರೆರಿ, ಬೆಳಗಾಂವಿ: ಶ್ರೀ|| ವಿ. ಪಿ. ಕಿತ್ತೂರ ಅವರು. ೭. ಕರ್ನಾಟಕ ಸಂಘ, ಬೆಳಗಾಂವಿ: ಶ್ರೀ||ಗಳಾದ ಪ್ಯಾಟಿ ಶಾಮರಾಯರು ಮತ್ತು ದೇಶಪಾಂಡೆ ಗೋಪಾಲರಾಯರು. ೮. ಜಿಲ್ಲಾ ಸಾಹಿತ್ಯ ಸಮಿತಿ, ಬೆಳಗಾಂವಿ: ಶ್ರೀ||ಗಳಾದ ಬಿ. ಎಸ್. ಬೆಟಗೇರಿ ಅವರು, ಎಸ್. ಎಂ. ದೇಸಾಯಿಯವರು, ಎಚ್. ಆರ್. ತೆರಗುಂಡಿ ಮತ್ತು ವಿ. ಜಿ. ಕುಲಕರ್ಣಿಯವರು. ೯. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ: ಶ್ರೀ||ಗಳಾದ ಮುದವೀಡು ಕೃಷ್ಣರಾಯರು ಮತ್ತು ಪ್ರೊ|| ಜಾಗಿರದಾರ್ ಅವರು. ೧೦. ಕರ್ನಾಟಕ ಸಂಘ, ಶಿವಮೊಗ್ಗ: ಶ್ರೀ||ಗಳಾದ ಬಿ. ಆರ್. ಪುಟ್ಟಸಂಜಪ್ಪನವರು, ಎಚ್. ಲಿಂಗಪ್ಪನವರು, ಯು. ಮಂಜನಾಥಯ್ಯನವರು, ಬಿ. ಎನ್. ರಾಘವಯ್ಯ ಮತ್ತು ಎಸ್. ವಿ. ಕೃಷ್ಣಮೂರ್ತಿರಾಯರು. ೧೧. ಕರ್ನಾಟಕ ಸಂಘ, ಚೆನ್ನರಾಯಪಟ್ಟಣ: ಶ್ರೀ|| ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರು. ೧೨. ಕರ್ನಾಟಕ ಸಂಘ, ತಿಪಟೂರು: ಶ್ರೀ|| ವಿ. ಶ್ರೀರಂಗಾಚಾರ್ಯರು. ೧೩. ಕರ್ನಾಟಕ ಸಂಘ, ರುದ್ರಪಟ್ಟಣ: ಶ್ರೀ|| ಆರ್. ಎಸ್. ಸುಬ್ಬಣ್ಣನವರು. ೧೪. ಕರ್ನಾಟಕ ಸಂಘ, ಕೃಷ್ಣರಾಜನಗರ: ಶ್ರೀ|| ಕೃಷ್ಣಯ್ಯಂಗಾರ್.

ಹೊರಗಿನಿಂದ ಕೆಳಗೆ ಕಂಡ ಮಾನ್ಯ ಮಹನೀಯರೂ ಮಹಿಳೆಯರೂ ದಯಮಾಡಿಸಿದ್ದರು—

೧. ಬೊಂಬಾಯಿ: ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು, ಶ್ರೀ||ಗಳಾದ ಎನ್. ಎಸ್. ಗುಬ್ಬಿಯವರು



ಶ್ರೀಮದ್ಯುವರಾಜರವರೊಂದಿಗೆ ಮಹಾಸ್ವಾಮಿಯವರ ಆಗಮನ

ಮತ್ತು ವೆಂಕಟೇಶ ಮೂರ್ತಿಯವರು. ೨. ಮಂಗಳೂರು : ಶ್ರೀ||ಗಳಾದ ಕೆ. ಬಿ. ಜಿನರಾಜಹೆಗ್ಗಡೆಯವರು ಮತ್ತು ಕೆ. ಬಾಲಕೃಷ್ಣರಾಯರು. ೩. ಕೊಡಗು : ಶ್ರೀ|| ಎಚ್. ತಿರುಮಲಾಚಾರ್ಯರು. ೪. ಗದಗು : ಶ್ರೀ||ಗಳಾದ ಅನಂತರಾವ್ ಅಸುಂಡಿಯವರು, ಹುಯಿಲಗೋಳ ನಾರಾಯಣರಾಯರು, ಶ್ರೀಮತಿ ಗೌರಿದೇವಿ ಇಂಚಲಮಠ ಅವರು. ೫. ಧಾರವಾಡ : ಶ್ರೀ||ಗಳಾದ ಶಕುಂತಲಾಬಾಯಿ ನಂದಾವರ್ ಅವರು, ಕಮಲಾಬಾಯಿ ಜಮಖಂಡಿ ಅವರು. ೬. ನವಿಲುಗುಂದ: ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು. ೭. ಹುಬ್ಬಳ್ಳಿ : ಶ್ರೀ|| ಮಹಾದುದ್ರಪ್ಪ ಮಹಾಲಿಂಗಪ್ಪ ಮಿರ್ಜಿ ಅವರು, ಶ್ರೀ|| ಆರ್. ಆರ್. ದಿವಾಕರರು. ೮. ಹಾವೇರಿ: ಡಾ|| ಗೋಕರ್ಣ ಅವರು. ೯. ಹಾಸನ: ರಾವ್ ಬಹದ್ದೂರ್ ಎನ್. ಎಸ್. ನಂಜುಂಡಯ್ಯನವರು. ೧೦. ಮೈಸೂರು: ಡಾ|| ಎಂ. ಎಚ್. ಕೃಷ್ಣ ಅವರು.

ಬೆಳಗ್ಗೆ ೮|| ಗಂಟೆಯ ಹೊತ್ತಿಗೆ ಪುರ ಭವನವು ಕಿಕ್ಕಿರಿದು ತುಂಬಿದ್ದಿತು. ಪೋಲೀಸು ಸಿಬ್ಬಂದಿಯೂ ಸ್ಕೌಟು ದಳದವರೂ ಪರಿಷತ್ತಿನೊಡನೆ ಸಹಕರಿಸಿ ಎಲ್ಲ ವ್ಯವಸ್ಥೆಗಳನ್ನೂ ದಕ್ಷತೆಯಿಂದ ನೋಡಿಕೊಂಡರು. ಮಿಲಿಟರಿ ಇಲಾಖೆಯವರು ತಮ್ಮ ಬ್ಯಾಂಡು ದಳದವರನ್ನು ಕಳಿಸಿ ಸಮಾರಂಭದ ಕಳೆಯನ್ನು ಹೆಚ್ಚಿಸಿದರು. ಪುರ ಭವನದ ಒಳಗಡೆ ನಡೆಯುವ ಕಾರ್ಯ ಕಲಾಪಗಳು ಎಲ್ಲರಿಗೂ ಚೆನ್ನಾಗಿ ಕೇಳುವಂತೆ ಧ್ವನಿವರ್ಧಕ ಯಂತ್ರದ ಏರ್ಪಾಟು ಮಾಡಲಾಗಿತ್ತು.

೯ ಗಂಟೆಗೆ ಸರಿಯಾಗಿ ಶ್ರೀಮನ್ಮಹಾರಾಜರವರು ಪರಿಷತ್ತಿನ ಅಧ್ಯಕ್ಷರಾದ ಶ್ರೀಮದ್ಯುವರಾಜರೊಂದಿಗೆ ರೋಲ್ಸ್ ರಾಯ್ಸ್ ಮೋಟಾರಿನಲ್ಲಿ ಚಿತ್ತೈಸಿದರು. ಅಷ್ಟು ಹೊತ್ತಿಗೆ ಸರಿಯಾಗಿ ಬ್ಯಾಂಡಿನವರು 'ಕಾಯೌಶ್ರೀಗೌರಿ' ಯನ್ನು ನುಡಿಸಿದರು. ಮಹಾಸ್ವಾಮಿಯವರುಗಳು ಮೋಟಾರಿನಿಂದ ಇಳಿದೊಡನೆಯೇ ಪರಿಷತ್ತಿನ ಉಪಾಧ್ಯಕ್ಷರೂ ಸ್ವಾಗತಸಮಿತಿಯ ಅಧ್ಯಕ್ಷರೂ ಆದ ರಾಜ ಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರೂ ಸ್ವಾಗತ ಸಮಿತಿಯ ಸದಸ್ಯರುಗಳೂ ಪುಷ್ಪಹಾರಗಳನ್ನು ಅರ್ಪಿಸಿ ಮಹಾಸ್ವಾಮಿಯವರುಗಳನ್ನು ಬರಮಾಡಿಕೊಂಡರು.

ಪ್ರಭುಗಳೂ ಶ್ರೀಮದ್ಯುವರಾಜರವರೂ ಪುರ ಭವನವನ್ನು ಪ್ರವೇಶಿಸಿ, ಸುಂದರವಾಗಿ ಅಲಂಕೃತವಾಗಿದ್ದ ವೇದಿಕೆಯನ್ನೇರಿ ಪೀಠವನ್ನು ಅಲಂಕರಿಸಿದರು.

ಮೊತ್ತಮೊದಲು ಶ್ರೀ|| ಸಂಪತ್ಕುಮಾರಾಚಾರ್ಯರು ದೇವತಾ ಪ್ರಾರ್ಥನೆ ಮಾಡಿದ ಮೇಲೆ, ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ಸ್ವಾಗತ ಸಮಿತಿಯ ಸದಸ್ಯರ ಪರವಾಗಿ ಬಿನ್ನವತ್ತಳೆಯನ್ನು ಓದಿ, ಅದನ್ನು ಸುಂದರವಾದ ರಜತ ಕಂಡದಲ್ಲಿಟ್ಟು, ಅದರೊಡನೆ ಬೆಳ್ಳಿಯ ಹಬ್ಬದ ಪ್ರಕಟನೆಗಳಾದ 'ನವಿನೆನಪು, 'ಕನ್ನಡ ನಾಡಿನ ಚರಿತ್ರೆ', 'ಸುಬೋಧ ಸಾರ' ಮತ್ತು 'ಗರುಡಗಂಬದ ದಾಸಯ್ಯ' ಎಂಬ ಗ್ರಂಥಗಳನ್ನು ಮಹಾಸ್ವಾಮಿಯವರಿಗೆ ಅರ್ಪಿಸಿದರು.

## ಬಿನ್ನವತ್ತಳೆ

ಮಹಾಸ್ವಾಮಿ,

ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಸ್ವಾಗತ ಸಮಿತಿಯ ಸದಸ್ಯರಾದ ನಾವು, ಇಡಿಯ ಕನ್ನಡ ನಾಡಿನ ನಮ್ಮ ಸಂಸ್ಥೆಯ ಸದಸ್ಯರೆಲ್ಲರ ಪರವಾಗಿ, ಮಹಾಸ್ವಾಮಿಯವರಿಗೆ ಭಕ್ತಿವಿಶ್ವಾಸ ಪೂರ್ವಕವಾಗಿ ಈ ಶುಭ ಸಮಾರಂಭಕ್ಕೆ ಸ್ವಾಗತವನ್ನು ಬಯಸಲು ಅಪ್ಪಣೆ ಬೇಡುತ್ತೇವೆ. ಮಹಾಸ್ವಾಮಿಯವರು ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಅನೇಕ ರಾಜಕಾರ್ಯಗಳ ನಡುವೆ ಅವಕಾಶವನ್ನು ಕಲ್ಪಿಸಿಕೊಂಡು ಆರಂಭೋತ್ಸವವನ್ನು ನೆರವೇರಿಸಲು ಚಿತ್ತೈಸಿರುವುದಕ್ಕಾಗಿ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದೆಂದು ಭಾವಿಸಿರುವೆವಲ್ಲದೆ, ಕನ್ನಡ ನಾಡಿನ ಮುಖ್ಯ ಭಾಷೆಯಾದ ಕನ್ನಡದಲ್ಲಿ ಮಹಾಪ್ರಭುಗಳಿಗಿರತಕ್ಕ ಪರಮಾದರಕ್ಕೆ ಇದೂ ಒಂದು ನಿದರ್ಶನವೆಂಬ ಅಂಶವನ್ನು ಮನಗಂಡು, ಈ ಅನುಗ್ರಹವನ್ನು ನೆನೆನೆನೆದು ಹರ್ಷಿಸುತ್ತಲೂ ಇದ್ದೇವೆ, ಮಹಾಸ್ವಾಮಿ.

ಕನ್ನಡ ನುಡಿಯ ಮತ್ತು ಸಾಹಿತ್ಯದ ಅಭಿವೃದ್ಧಿಗೆ ಮೈಸೂರು ಸಂಸ್ಥಾನದ ಅರಮನೆಯಿಂದ ಅಮೋಘವಾದ ಸಹಾಯ ಪ್ರೋತ್ಸಾಹಗಳು ದೊರೆತಿವೆ. ಕನ್ನಡ ಭಾಷೆ ಹಿಂದೆ ಬೆಳೆದು ಬಂದದ್ದು ಅರಮನೆ ಗುರುಮನೆಗಳ ಕೃಪಾಶ್ರಯದಲ್ಲಿ. ಕನ್ನಡ



ಮಹಾಸ್ವಾಮಿಯವರಿಗೆ ಸ್ವಾಗತ



ಬೆಳ್ಳಿಯ ಕರಂಡ—ಮುಂಭಾಗ

ಸಾಹಿತ್ಯವನ್ನು ವೃದ್ಧಿಗೊಳಿಸುವ ಹೆಮ್ಮೆಯ ಕಾರ್ಯದಲ್ಲಿ, ನೃಪತುಂಗ, ತೈಲಪ, ವೀರಬಲ್ಲಾಳ, ಕೃಷ್ಣದೇವರಾಯ ಮುಂತಾದ ಅನೇಕ ರಾಜವಂಶಗಳ ಪ್ರಸಿದ್ಧ ಮಹಾರಾಜರುಗಳೂ, ಅನೇಕ ಮಠಾಧಿಪತಿಗಳೂ ಉತ್ತೇಜನ ಕೊಡುತ್ತ ಬಂದಿದ್ದಾರೆ. ಕನ್ನಡಕ್ಕೆ ವಿಜಯನಗರ ಸಾಮ್ರಾಜ್ಯದ ಆಶ್ರಯ ತಪ್ಪಿದಮೇಲೆ ಮೈಸೂರು ಸಂಸ್ಥಾನದ ರಾಜಮನೆತನದ ನೆರಳಿನಲ್ಲಿ ಕನ್ನಡ ಸರಸ್ವತಿ ನಿಶ್ಚಿಂತಳಾಗಿ ನೆಲಸಿದ್ದಾಳೆ. ೭ನೆಯ ಶ್ರೀ ಚಾಮರಾಜ ಒಡೆಯರವರೂ, ಶ್ರೀ ಚಿಕ್ಕದೇವರಾಜ ಒಡೆಯರವರೂ, ಶ್ರೀ ಚೆಲುವಾಂಬಾ ಮಹಾರಾಣಿಯವರೂ, ಸ್ವಂತವಾಗಿ ಗ್ರಂಥರಚನೆ ಮಾಡಿ, ಸಾಹಿತಿಗಳಿಗೆ ಪ್ರೋತ್ಸಾಹಕೊಟ್ಟು, ಕರ್ನಾಟಕ ಸರಸ್ವತೀ ಭಂಡಾರವನ್ನು ಅಲಂಕರಿಸಿದ್ದಾರೆ. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಅನೇಕ ಗ್ರಂಥಗಳನ್ನು ಬರೆದು, ಮಹಾಭಾರತ ಮುಂತಾದ ಪವಿತ್ರ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿ ಪರಮೋಪಕಾರ ಮಾಡಿರುವರು. ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲ ಕನ್ನಡದಲ್ಲಿ ಒಂದು ಹೊಸ ಯುಗದ ಅರುಣೋದಯವೆನ್ನಬಹುದು. ಇಂಗ್ಲಿಷ್ ವಿದ್ಯಾಪ್ರಚಾರದಿಂದ, ಇಂಗ್ಲಿಷ್ ಸಾಹಿತ್ಯ ಶಾಸ್ತ್ರ ಸಂಸ್ಕೃತಿಗಳ ಪ್ರಭಾವದಿಂದ, ಸ್ತ್ರೀಯರೂ ಪುರುಷರೂ ದೇಶಾಭಿಮಾನಿಗಳೂ ಭಾಷಾಭಿಮಾನಿಗಳೂ ಆಗಿ, ಕನ್ನಡದ ಪುನರುಜ್ಜೀವನದ ದೀಕ್ಷೆಯನ್ನು ಕೈಕೊಂಡಾಗ, ಶ್ರೀಮನ್ಮಹಾರಾಜರವರೇ ಮಾರ್ಗದರ್ಶಿಗಳಾಗಿ, ಮೈಸೂರಿನಲ್ಲೇ ಅಲ್ಲದೆ ಉತ್ತರ ಕರ್ನಾಟಕದ ಕೇಂದ್ರವಾದ ಧಾರವಾಡದ ವಿದ್ಯಾವರ್ಧಕ ಸಂಘಕ್ಕೆ ಉದಾರಾಶ್ರಯವನ್ನಿತ್ತು, ಎಲ್ಲಾ ಕನ್ನಡಿಗರ ಬಾಂಧವ್ಯವನ್ನು ಬೆಳಸಿದವರಲ್ಲಿ ಅಗ್ರಗಣ್ಯರಾಗಿದ್ದಾರೆ.

ಪೂಜ್ಯರಾದ ಪೂರ್ವಿಕರ ಪುಣ್ಯಪ್ರಭಾವಗಳೆಲ್ಲಾ ಮೂರ್ತೀಭವಿಸಿದಂತಿರುವ ಮಹಾಸ್ವಾಮಿಯವರು ಸಾಹಿತ್ಯ, ಸಂಗೀತ, ಶಾಸ್ತ್ರ, ಕಲೆ, ಸಂಸ್ಕೃತಿ. ಸುಧಾರಣೆಗಳನ್ನು ಪೋಷಿಸುತ್ತಿರುವ ಕೃಪಾಕಟಾಕ್ಷವೂ ಸತ್ಪ್ರೇರಣೆಯೂ ಭರತಖಂಡಕ್ಕೆಲ್ಲ ಮಾದರಿಯಾಗಿವೆ. ಪ್ರಜಾವತ್ಸಲರಾದ, ಸಂಯಮಶೀಲರಾದ, ಆದರ್ಶ ಪ್ರಭುಗಳಾದ, ರಾಜರ್ಷಿಗಳಾದ ತಮ್ಮ ಧವಳಕೀರ್ತಿ ಕನ್ನಡಿಗರೆಲ್ಲರ ಹೆಮ್ಮೆಗೂ ಸುಪ್ರಮಾನಕ್ಕೂ ಆಧಾರವಾಗಿದೆ. ತಮ್ಮ ಪ್ರಜಾಪಾಲನೆಯ ವೈಭವವನ್ನೂ ಸರ್ವಸಮ ದೃಷ್ಟಿಯನ್ನೂ ನೋಡಿ, ಮಹಾತ್ಮಾ ಗಾಂಧಿ, ಲಾರ್ಡ್ ಸ್ಯಾಂಕಿ ಮುಂತಾದ ಮಹನೀಯರು ತಮ್ಮ ರಾಜ್ಯವನ್ನು ರಾಮರಾಜ್ಯವೆಂದೂ ಆದರ್ಶ ಸಂಸ್ಥಾನವೆಂದೂ ಶ್ಲಾಘಿಸಿದ್ದಾರೆ. ಎಚ್ಚೆತ್ತ ಹೊಸ ಮೈಸೂರಿನ ಸರ್ವಮುಖವಾದ ಮುನ್ನಡೆಯ ಚಿಹ್ನೆಗಳಲ್ಲಿ, ನಮ್ಮ ಸಾಹಿತ್ಯ ಪರಿಷತ್ತಿನ ಸ್ಥಾಪನೆಯೂ ಒಂದು. ಪರಿಷತ್ತಿಗೆ ಮಹಾಸ್ವಾಮಿಯವರು ಮೊದಲಿಂದಲೂ ಮಹಾಪೋಷಕರಾಗಿದ್ದುಕೊಂಡು ಎಲ್ಲಾ ಬಗೆಯ ಉತ್ತೇಜನಗಳನ್ನೂ ದಯಪಾಲಿಸುತ್ತಿರುತ್ತೀರಿ. ತಮ್ಮ ಕೃಪಾವಲಂಬನದಿಂದಲೂ, ತಮ್ಮ ಸರ್ಕಾರದ ಆಶ್ರಯ ಸಹಾಯಗಳಿಂದಲೂ ಪರಿಷತ್ತು ಬಹಳ ಉಪಕಾರ ಹೊಂದಿರುತ್ತದೆ. ಪರಿಷತ್ತಿಗಾಗಿ ಕಟ್ಟಡವೊಂದು ಬೇಕೆಂಬ ವಿಚಾರ ಸನ್ನಿಧಿಯಲ್ಲಿ ಅರಿಕೆಯಾದೊಡನೆಯೇ ಮಹಾ ಪ್ರಭುಗಳವರಿಂದಲೂ, ಪರಿಷತ್ತಿನ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ್ದ ಕೀರ್ತಿಶೇಷರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಅವರಿಂದಲೂ, ರಾಜಸೇವಾಧುರೀಣ ಸರ್ದಾರ್ ಸರ್ ಎಂ. ಕಾಂತರಾಜ ಅರಸಿನವರಿಂದಲೂ ೧೩.೦೦೦ ರೂಪಾಯಿಗಳ ಧನಸಹಾಯವಾಯಿತು. ಮೈಸೂರು ಸಂಸ್ಥಾನದ ದಿವಾನರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರು ಮೈಸೂರಿನ ಎಲ್ಲಾ ಬಗೆಯ ಏಳಿಗೆಯಲ್ಲಿ ಹೇಗೆ ಬದ್ಧಕಂಕಣರಾಗಿರುವರೋ ಹಾಗೆ ಕನ್ನಡ ನುಡಿಯ ಮತ್ತು ಸಾಹಿತ್ಯದ ಮೂಲಕ ಕನ್ನಡಿಗರ ಆತ್ಮವಿಕಾಸವಾಗಬೇಕೆಂಬ ಉದಾರ ದೃಷ್ಟಿಯಿಂದ ಪರಿಷತ್ತಿನ ವಿಷಯದಲ್ಲಿಯೂ ತುಂಬಾ ಆಸಕ್ತಿಯನ್ನು ವಹಿಸಿ ಮೈಸೂರು ಸರ್ಕಾರದಿಂದ ೧೬,೦೦೦ ರೂಪಾಯಿಗಳನ್ನು ದಯಪಾಲಿಸಿದ್ದಲ್ಲದೆ ಕಟ್ಟಡಕ್ಕೆ ಈಗಿನ ನಿವೇಶನವನ್ನು ಉಚಿತವಾಗಿ ಕೊಡಿಸಿಕೊಟ್ಟರು. ಈಚೆಗೆ ಪರಿಷತ್ತಿನ ಸಹಾಯದ್ರವ್ಯದ ಮೊತ್ತವನ್ನು ವರ್ಷಕ್ಕೆ ಎರಡು ಸಾವಿರದ ನಾನೂರು ರೂಪಾಯಿಗಳಿಂದ ಮೂರು ಸಾವಿರ ರೂಪಾಯಿಗಳಿಗೆ ಹೆಚ್ಚಿಸಿಕೊಟ್ಟಿದ್ದಾರೆ: ಇದಕ್ಕೆ ನಾವು ಅವರಿಗೂ, ಮಹಾಸ್ವಾಮಿಯವರ ಸರ್ಕಾರದವರಿಗೂ, ವಿದ್ಯಾಭ್ಯಾಸದ ಇಲಾಖೆಯ ಅಧ್ಯಕ್ಷರಿಗೂ ಕೃತಜ್ಞರಾಗಿದ್ದೇವೆ. ಈ ಎಲ್ಲ ಪಾಲನೆಗಳಿಂದ ಪರಿಷತ್ತು ಬೆಳೆದು ಚೈತನ್ಯಪೂರಿ ನಾಡು ನುಡಿಗಳ ಸೇವೆಯನ್ನು ಹೆಚ್ಚುಹೆಚ್ಚಾಗಿ ಮಾಡಲು ತವಕಿಸುತ್ತ ಮಹಾಜನರ ಅಭಿಮಾನಾದರಗಳನ್ನೂ, ಪೋಷಣೆಯನ್ನೂ ಆಕರ್ಷಿಸುತ್ತಿದೆಯೆಂದು ಅರಿಕೆಮಾಡಲು ಸಂತೋಷಿಸುತ್ತೇವೆ, ಮಹಾಸ್ವಾಮಿ.

ಈ ಇಪ್ಪತ್ತೈದು ವರ್ಷಗಳಲ್ಲಿ ಪರಿಷತ್ತು ಸಾಧಿಸಿರುವ ಕಾರ್ಯಕಲಾಪಗಳನ್ನು ಸಂಕ್ಷೇಪವಾಗಿ ಬಿನ್ನೈಸಿಕೊಳ್ಳುತ್ತೇವೆ, ಮಹಾಸ್ವಾಮಿ.

ಕನ್ನಡಿಗರೆಲ್ಲರೂ ಒಂದೇ ಕನ್ನಡ ಕುಲ. ಒಬ್ಬ ತಾಯ ಮಕ್ಕಳು, ಎಂದು ತಿಳಿದು ಕನ್ನಡದ ಸೇವೆ ಮಾಡುವುದಕ್ಕಾಗಿ ಎಲ್ಲ ಕನ್ನಡ ನಾಡಿಗೆ ಸೇರಿದ ಒಂದು ಸಂಸ್ಥೆಯನ್ನು ಏರ್ಪಡಿಸಬೇಕೆಂಬ ಹೆಬ್ಬಯಕೆಯಿಂದ ೧೯೧೫ನೆಯ ಮೇ ತಿಂಗಳ ಐದನೆಯ ದಿನ ನಾಡಿನ ಹಿರಿಯರು ಸೇರಿ ಈ ಪರಿಷತ್ತನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಅವರ ಗುರಿಯನ್ನು ಮುಂದುವರಿಸಿ ಅನೇಕ ವಿದ್ವಾಂಸರೂ, ಸಾಹಿತಿಗಳೂ, ಹಿರಿಯರೂ, ಕಿರಿಯರೂ ತ್ಯಾಗಬುದ್ಧಿಯಿಂದ ಪರಿಷತ್ತನ್ನು ಬಲಪಡಿಸುತ್ತ ಬಂದಿದ್ದಾರೆ. ವರ್ಷವರ್ಷವೂ ಕನ್ನಡ ನಾಡಿನ ಬೇರೆ ಬೇರೆ ಪ್ರಾಂತಗಳಲ್ಲಿ ಕೂಡುವ



ಬೆಳ್ಳಿಯ ಕರಂಡ— ಹಿಂಭಾಗ

ಸಾಹಿತ್ಯ ಸಮ್ಮೇಳನಗಳಿಂದ ಕನ್ನಡಿಗರ ನುಡಿಯೊಲುಮೆಯೂ ಒಕ್ಕಟ್ಟೂ ಹೆಚ್ಚುತ್ತಿವೆ. ಇಂದು ಕನ್ನಡ ನಾಡಿನ ನಾನಾ ಪ್ರಾಂತಗಳ ಬಾಂಧವರು ವೇದ ಕ್ರಮವನ್ನೂ ಪ್ರಯಾಣದ ಕಷ್ಟವನ್ನೂ ಲೆಕ್ಕಿಸದೆ ಈ ಹಬ್ಬಕ್ಕೆ ಇಲ್ಲಿಗೆ ದಯಮಾಡಿರುವುದೇ ಇದಕ್ಕೊಂದು ಸಾಕ್ಷಿ. ಪರಿಷತ್ತಿನ ಕೇಂದ್ರಾಡಳಿತದಲ್ಲಿ ನೂರಾರು ಕನ್ನಡ ಸಂಘಗಳು ಸೇರಿ ಮೂಲೆ ಮೂಲೆಗೂ ಕನ್ನಡದ ಕೆಲಸವನ್ನು ಹರಡುತ್ತಿವೆ. ಬೆಂಗಳೂರು ನಗರದಲ್ಲಿಯೂ ಹೆಚ್ಚಾಗಿ ಹಳ್ಳಿಗಳಲ್ಲಿಯೂ ವರ್ಷ ವರ್ಷವೂ ವಸಂತ ಸಾಹಿತ್ಯೋತ್ಸವಗಳು ನಡೆದು, ಸಾಹಿತ್ಯ, ಧರ್ಮ, ಸಂಸ್ಕೃತಿ, ಚರಿತ್ರೆ, ವಿಜ್ಞಾನ ಮುಂತಾದ ವಿಚಾರಗಳು ಹೊಸ ಬದುಕನ್ನು ಚಿಮ್ಮಿಸುತ್ತಿವೆ. ಗಮಕ ಶಿಕ್ಷಣ, ಕಂಠಪಾಠ ಸ್ಪರ್ಧೆ, ಅಭಿನಯ ಸ್ಪರ್ಧೆ, ಮಹಿಳೆಯರ ಮತ್ತು ಮಕ್ಕಳ ಗೋಷ್ಠಿಗಳು, ಮಹಿಳೆಯರ ರಾಷೆ ಮುಂತಾದ ಚಟುವಟಿಕೆಗಳು ಹೆಣ್ಣುಮಕ್ಕಳನ್ನೂ ಪುಟ್ಟಮಕ್ಕಳನ್ನೂ ಪರಿಷತ್ತಿನ ಕಾರ್ಯರಂಗಕ್ಕೆ ಸೆಳೆಯುತ್ತಿವೆ. ಪರಿಷತ್ತಿನ ಪ್ರಕಟನಾಂಗಗಳಾಗಿ ಒಂದು ತ್ರೈಮಾಸಿಕ ಪತ್ರಿಕೆಯೂ ಒಂದು ವಾರ ಪತ್ರಿಕೆಯೂ ಹೊರಡುತ್ತಿವೆ. ಇವುಗಳ ಕೆಲಸ ಸುಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಒಂದು ಅಚ್ಚುಕೂಟ ಏರ್ಪಟ್ಟಿದೆ. ಪರಿಷತ್ತಿನ ಪುಸ್ತಕ ಭಂಡಾರದಿಂದಲೂ, ಧರ್ಮ ವಾಚನಾಲಯದಿಂದಲೂ, ಮಹಾಜನರು ಪ್ರಯೋಜನ ಹೊಂದುತ್ತಿದ್ದಾರೆ. ವಸಂತ ಸಾಹಿತ್ಯೋತ್ಸವದ ವೇಳೆಯಲ್ಲಿ ಪರಿಷತ್ತು ಗ್ರಂಥಪ್ರದರ್ಶನವನ್ನೇರ್ಪಡಿಸುವುದರ ಜೊತೆಗೆ ಸಂಘಗಳ ಕೂಟವನ್ನೂ ಸಾಹಿತಿಗಳ ಕೂಟವನ್ನೂ ನಡಸುತ್ತ ಬಂದು, ಹೊಸಗನ್ನಡ ಸಾಹಿತ್ಯದ ಬೆಳವಣಿಗೆಯ ರೂಪರೇಖೆಗಳನ್ನು ತಕ್ಕಮಟ್ಟಿಗೆ ಜನಕ್ಕೆ ತಿಳಿಸಿಕೊಡುತ್ತಿದೆ. ಒಂದು ಸಾಹಿತಿಗಳ ಸಂಘವೂ, ನಾಟಕ ಸಂಘವೂ ಪರಿಷತ್ತಿನ ನೇತೃತ್ವದಲ್ಲಿ ಕೆಲಸಮಾಡುತ್ತಿವೆ. ಈ ಕಾಲಕ್ಕೆ ತಕ್ಕ ಕನ್ನಡ ಶಬ್ದಕೋಶದ ಹೆಚ್ಚಿಕೆ, ಕನ್ನಡದ ಶೈಲಿ, ಗದ್ಯ ಗ್ರಂಥಗಳ ಆವಶ್ಯಕತೆ, ನವೀನ ಪ್ರಪಂಚದ ವಿಜ್ಞಾನ, ಚರಿತ್ರೆ, ರಾಜಕೀಯ ಆರ್ಥಿಕ ಸಾಮಾಜಿಕ ವ್ಯವಸ್ಥೆಗಳ ವ್ಯಾಸಂಗ, ಕನ್ನಡದಲ್ಲಿ ವಿದ್ಯಾಭ್ಯಾಸ, ಮತ್ತು ವ್ಯವಹಾರಗಳು ಮುಂತಾದ ಅತ್ಯಗತ್ಯ ವಿಚಾರಗಳನ್ನು ಪರಿಷತ್ತು ಗಮನಿಸುತ್ತಿದೆ. ಸಾರ್ವಜನಿಕರು ಕೈಕೊಳ್ಳಬಹುದಾದ ಜನತೆಯ ಏಳಿಗೆಯ ಎಲ್ಲಾ ಪ್ರಯತ್ನಗಳಿಗೂ ವಿದ್ಯಾಬಲ ಮುಖ್ಯವೆಂಬುದನ್ನು ಅರಿತು ಅಕ್ಷರತೆಯನ್ನೂ ಸಾಹಿತ್ಯ



ಬೆಳ್ಳಿಯ ಕರಂಡ—ಇನ್ನೊಂದು ಮಗ್ಗುಲು

ಸಂಸ್ಕೃತಿ ಜ್ಞಾನವನ್ನೂ ಜನರಲ್ಲಿ ಹೆಚ್ಚಿಸುವ ಸಂಕಲ್ಪದಿಂದ, ಬೆಂಗಳೂರಿನಲ್ಲಿ ಮತ್ತು ಇತರ ಸ್ಥಳಗಳಲ್ಲಿ ತರಗತಿಗಳನ್ನು ನಡಸಿ, ಪರೀಕ್ಷೆಗಳನ್ನು ಏರ್ಪಡಿಸಿ, ಪ್ರಶಸ್ತಿ ಪತ್ರಿಕೆಗಳನ್ನು ಕೊಡುವ ಕಾರ್ಯಾರಂಭ ಮಾಡಿದೆ. ಎಲ್ಲಕ್ಕೂ ಮೇಲಾಗಿ ನಾನಾ ಪ್ರಾಂತಗಳ ಕನ್ನಡಿಗರಲ್ಲಿ ತಾವೆಲ್ಲ ಒಂದೇ ಜನವೆಂಬ ಭಾವನೆ ಬಲಿತು ಒಕ್ಕಟ್ಟೂ ಬಲವೂ ಹೆಚ್ಚುವಂತೆ ಮಾಡುವ ದೊಡ್ಡ ಕಾರ್ಯದಲ್ಲಿ ತನ್ನಿಂದ ಸಾಧ್ಯವಿರುವ ಸಮಸ್ತ ಸೇವೆಗಳನ್ನೂ ಪರಿಷತ್ತು ಸಮರ್ಪಿಸುತ್ತ ಬಂದಿದೆ. ಇನ್ನೂ ಹಲವು ರೀತಿಗಳಲ್ಲಿ ಸೇವೆ ಅರ್ಪಿಸುವ ಉತ್ಸಾಹವೂ ಪರಿಷತ್ತಿಗಿದೆ.

ಇವೆಲ್ಲಕ್ಕೂ ಮಹಾಸ್ವಾಮಿಯವರ ತಪಃಪ್ರಭಾವವೇ ಮೂಲಶಕ್ತಿ. ಮಹಾಪ್ರಭುಗಳವರು ಕೃಪೆಮಾಡಿ ಪರಿಷತ್ತಿನ ಮಹಾಪೋಷಕರಾಗಿರಲು ಸಮ್ಮತಿಸಿ ವಿವಿಧ ರೀತಿಗಳಲ್ಲಿ ಪ್ರೋತ್ಸಾಹ ಕೊಡುತ್ತಿರುವುದೇ ನಮಗೊಂದು ದೊಡ್ಡ ಹೆಮ್ಮೆ, ಒಂದು ದೊಡ್ಡ ಹಿಗ್ಗು, ಬಲ. ಪರಿಷತ್ತನ್ನು ಆಶೀರ್ವದಿಸುವುದಕ್ಕೆ ಈ ಶುಭದಿನ ಮಹಾಸ್ವಾಮಿಯವರ ಸವಾರಿ ಚಿತ್ತೈಸಿರುವುದು ಪರಿಷತ್ತಿನ ಚರಿತ್ರೆಯಲ್ಲಿ ಚಿನ್ನದಲ್ಲಿ ಬರೆದಿಡುವ ಸುದಿನ. ನಮ್ಮ ಪ್ರಾರ್ಥನೆಯನ್ನು ವಿಶ್ವಾಸದಿಂದ ಲಾಲಿಸಿ, ಪರಿಷತ್ತಿನ ಅಧ್ಯಕ್ಷಸ್ಥಾನವನ್ನಲಂಕರಿಸಲು ಸಮ್ಮತಿಸಿ ಕೃಪೆಮಾಡಿರುವ ಪರಮೋಪಕಾರಕ್ಕಾಗಿ ಮೈಸೂರು ಸಂಸ್ಥಾನದ ಈಗಿನ ಶ್ರೀಮದ್ಯುವರಾಜರವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರವರ ಸನ್ನಿಧಿಯಲ್ಲಿ ನಮ್ಮ ಕೃತಜ್ಞತೆಯನ್ನೂ, ಅವರು ಇಲ್ಲಿಗೆ ದಯಮಾಡಿರುವುದಕ್ಕಾಗಿ ನಮ್ಮ ಹರ್ಷಾತಿಶಯವನ್ನೂ, ಪರಿಷತ್ತಿನ ಪರವಾಗಿ ಪ್ರಕಟಪಡಿಸಲು, ಅಪ್ಪಣೆ ಬೇಡುವೆವು, ಮಹಾಸ್ವಾಮಿ.



ಬೆಳ್ಳಿಯ ಕರಂಡ—ಒಂದು ಮಗ್ಗುಲು

ಇನ್ನು, ಮಹಾಪ್ರಭುಗಳವರು ಪರಿಷತ್ತಿನ ಈ ರಜತ ಮಹೋತ್ಸವವನ್ನು ಸಮಾರಂಭಗೊಳಿಸಿ ಅನುಗ್ರಹಿಸಬೇಕೆಂದು ಭಕ್ತಿ ಪೂರ್ವಕವಾಗಿ ಬೇಡುವೆವಲ್ಲದೆ, ನಮ್ಮ ವಿನಯಪೂರ್ವಕವಾದ ಈ ಬಿನ್ನವತ್ತಳೆಯನ್ನೂ, ಬಡ ಕಾಣಿಕೆಯಾದ ಈ ಬೆಳ್ಳಿಯ ಕರಂಡವನ್ನೂ, ನಮ್ಮ ಈ ಹಬ್ಬದ ಪ್ರಕಟನೆಗಳಾದ "ನವಿನೆನಪು" ಮತ್ತು "ಕನ್ನಡ ನಾಡಿನ ಚರಿತ್ರೆ" ಎಂಬ ಪುಸ್ತಕಗಳನ್ನೂ ಒಪ್ಪಿಸಿ



ಮಹಾಸ್ವಾಮಿಯವರಿಗೆ ಬೆಳ್ಳಿಯ ಕರಂಡವನ್ನೂ ಹಬ್ಬದ ಪ್ರಕಟನೆಗಳನ್ನೂ ಅರ್ಪಿಸುತ್ತಿರುವುದು

ಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಮತ್ತು ದಯಾಮಯನಾದ ಭಗವಂತನು ಮಹಾಸ್ವಾಮಿಯವರಿಗೂ, ಶ್ರೀಮದ್ಯುವರಾಜರವರೇ ಮುಂತಾಗಿ ರಾಜಕುಟುಂಬದವರೆಲ್ಲರಿಗೂ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಿ ಕೃಪೆಮಾಡಲೆಂದು ಪ್ರಾರ್ಥಿಸುತ್ತಿರುತ್ತೇವೆ, ಮಹಾಸ್ವಾಮಿ.

ಇಂತು,

ಮಹಾಸ್ವಾಮಿಯವರ ಶ್ರೇಯಃಪ್ರಾರ್ಥಕರಾದ

ಬೆಂಗಳೂರು
ತಾ॥ ೩೦-೬-೧೯೪೦

**ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಸ್ವಾಗತಸಮಿತಿಯ ಸದಸ್ಯರು**

ಅನಂತರ ಶ್ರೀಮನ್ಮಹಾರಾಜರವರು ಅತ್ಯಂತ ಗಂಭೀರವೂ ಮಧುರವೂ ಆದ ವಾಣಿಯಿಂದ ಕೆಳಗೆ ಕಂಡ ಉತ್ತರವನ್ನು ದಯಪಾಲಿಸಿದರು :

## ಮಹಾಸ್ವಾಮಿಯವರ ಪ್ರತ್ಯುತ್ತರ

ಉಪಾಧ್ಯಕ್ಷರವರೇ, ಮಹಿಳೆಯರೇ ಮತ್ತು ಮಹಾಶಯರೇ,

ಈ ಪರಿಷತ್ತಿನ ರಜತ ಮಹೋತ್ಸವವನ್ನು ಸಮಾರಂಭಣಗೊಳಿಸಬೇಕೆಂಬ ಆಹ್ವಾನವನ್ನು ವಿಶೇಷ ಸಂತೋಷದಿಂದ ಅಂಗೀಕರಿಸಿ, ನಾವು ಇಲ್ಲಿಗೈತಂದಿರುವೆವು. ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ, ವಿಸ್ತೀರ್ಣದಲ್ಲಿ ಅದಕ್ಕೆ ಸಮಾನವೆನಿಸಿ, ಅಧಿಕಭಾಗವು ಅದರ ಉತ್ತರ ದಿಕ್ಕಿನಲ್ಲಿ ಪಸರಿಸಿರುವ ಅಖಿಲ ಕನ್ನಡ ನಾಡಿನಲ್ಲಿ ಕನ್ನಡ ಭಾಷಾ ಸಂಸ್ಕೃತಿಗಳ ಪ್ರಚಾರ ಮಾಡುವುದು ಪರಿಷತ್ತಿನ ಉದ್ದೇಶವಾಗಿದೆ. ಆ ಪ್ರದೇಶವೂ, ಮೈಸೂರು ಸಂಸ್ಥಾನವೂ, ಕನ್ನಡ ಭಾಷೆಯನ್ನುಪಯೋಗಿಸುವ ೧ ಕೋಟಿ ೩೧ ಲಕ್ಷ ಜನರಿಗೆ ಆಶ್ರಯ ಕೊಟ್ಟಿವೆ. ಕರ್ನಲ್ ಮೆಡೋಸ್ ಟೇಲರ್ ಎಂಬ ಮಹಾಶಯರು **ಮಾಧುರ್ಯ ಮಯವಾದ ಮಂಜುಳ ನಿನಾದದ ಭಾಷೆ**ಯೆಂದು ವರ್ಣಿಸಿರುವ ನಮ್ಮ ಕನ್ನಡ ಭಾಷೆಯ ಅಭಿವೃದ್ಧಿ ಸಾಧನೆಯಲ್ಲಿ ನಾವೂ, ನಮ್ಮ ಕುಟುಂಬಕ್ಕೆ ಸೇರಿದವರುಗಳೂ ಬಹುಕಾಲದಿಂದ ತೀವ್ರಾಸಕ್ತಿಯನ್ನು ವಹಿಸುತ್ತ ಬಂದಿರುವೆವು. ಪೂಜ್ಯರಾದ ನಮ್ಮ ಪೂರ್ವಿಕರಲ್ಲಿ ಕನಿಷ್ಠಪಕ್ಷ ನಾಲ್ವರಾದರೂ ಗ್ರಂಥರಚನೆ ಮಾಡಿದವರು: ಆರನೆಯ ಶ್ರೀ ಚಾಮರಾಜ ಒಡೆಯರವರು, ಶ್ರೀ ಚಿಕ್ಕದೇವರಾಜ ಒಡೆಯರವರು, ಶ್ರೀ ದೊಡ್ಡ ಕೃಷ್ಣರಾಜ ಒಡೆಯರವರ ಧರ್ಮಪತ್ನಿಯವರಾದ ಶ್ರೀ ಚೆಲುವಾಂಬೆಯವರು ಮತ್ತು ನಮ್ಮ ಪೂಜ್ಯ ಪಿತಾಮಹರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು— ಈ ನಾಲ್ವರಾದರೂ ಗ್ರಂಥರಚನೆ ಮಾಡಿ ಖ್ಯಾತಿ ಹೊಂದಿದ್ದಾರೆ. ನಮ್ಮ ಪೂಜ್ಯಪಿತಾಮಹರು ರಚಿಸಿರುವ **ಶ್ರೀ ತತ್ತ್ವನಿಧಿ** ಎಂಬ ಉದ್ಗ್ರಂಥದ ವ್ಯಾಸಂಗವು ಇಂದಿಗೂ ನಡೆಯುತ್ತಿದೆ. ಈಗ ನಮಗೆ ಸಮರ್ಪಿತವಾದ ವಿಜ್ಞಾಪನಾಪತ್ರಿಕೆಯಲ್ಲಿ ಸೂಚಿತವಾಗಿರುವಂತೆ, ರಾಜಸೇವಾಧುರೀಣ ಸರ್ ಎಂ. ಕಾಂತರಾಜ ಅರಸಿನವರು ದೀರ್ಘಕಾಲ ನಿಮ್ಮ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಅವರ ಕಾಲಾನಂತರ ನಮ್ಮ ಸಹೋದರರು, ಅವರು ಈಚೆಗೆ ದಿವಂಗತರಾಗುವವರೆಗೂ, ಅನೇಕ ವರ್ಷಗಳು ನಿಮ್ಮ ಪರಿಷತ್ತಿನ ಅಧ್ಯಕ್ಷರಾಗಿದ್ದರು. ನಮ್ಮ ಸಹೋದರರ ಕುಮಾರರು, ಮೈಸೂರು ವಿಶ್ವವಿದ್ಯಾನಿಲಯದಲ್ಲಿ 'ಡಿಗ್ರಿ' ಪ್ರಶಸ್ತಿಯನ್ನು ಪಡೆದಬಳಿಕ, ಕಳೆದ ವರ್ಷ ನಿಮ್ಮ ಪರಿಷತ್ತಿನಲ್ಲಿ ನಡೆದ ವಿಶೇಷ ಸಾಹಿತ್ಯೋತ್ಸವಕಾಲದಲ್ಲಿ, ಪ್ರೌಢಿಮೆಯಿಂದ ಕೂಡಿದ ಭಾಷಣವನ್ನು ಮಾಡಿದರು. ಈಚೆಗೆ ದಿವಂಗತರಾದ ತಮ್ಮ ತೀರ್ಥರೂಪರವರ ಸ್ಥಾನದಲ್ಲಿ, ಅವರು ನಿಮ್ಮ ಪರಿಷತ್ತಿನ ಅಧ್ಯಕ್ಷರಾಗಿರುವ ಅಂಶವನ್ನೂ ನಾವು ಈ ಸಂಬಂಧದಲ್ಲಿ ಸೂಚಿಸಲಿಚ್ಛಿಸುವೆವು.

ನೀವುಗಳು ಸಾಧಿಸಲುದ್ದೇಶಿಸಿ ಶ್ರಮಿಸುತ್ತಿರುವ ಮಹತ್ತರ ಕಾರ್ಯವು ಬಹು ಕಷ್ಟಸಾಧ್ಯವಾದುದು. ಪ್ರಪಂಚದ ನಾನಾ ಭಾಷೆಗಳೂ ಅವುಗಳ ಅಭಿವೃದ್ಧಿ ದಶೆಗಳಿಗನುಸಾರವಾಗಿ ಪ್ರತ್ಯೇಕ ಪ್ರತ್ಯೇಕವಾದ ಗುಂಪುಗಳಾಗಿ ವಿಭಾಗವಾಗುತ್ತವೆ. ಕಾಡುಜನರ ಭಾಷೆಗಳಲ್ಲಿ ಪದಗಳ ಸಂಖ್ಯೆಯು ತೀರ ಕಡಮೆ. ಕೇವಲ ಆಜ್ಞಾಪನಾ ಕಾರ್ಯಗಳಿಗೂ ವಾಂಛಿತಾರ್ಥ ಸೂಚನೆಗಳಿಗೂ ಮಾತ್ರವೇ ಬೇಕಾಗುವ ಪರಿಮಿತವಾದ ಉದ್ದೇಶಕ್ಕೆ ಅವಶ್ಯವಾದಷ್ಟು ಅಲ್ಪ ಸಂಖ್ಯೆಯ ಪದಗಳು ಅವುಗಳಲ್ಲಿರುತ್ತವೆ. ಭಾಷಾಭಿವೃದ್ಧಿಯು ಮುಂದುವರಿದಂತೆಲ್ಲ, ಮತ್ತಷ್ಟು ಅಧಿಕತರವಾದ ಗಹನ ವಿಚಾರಗಳನ್ನು ಸೂಚಿಸುವ ಸಾಧನಗಳಾಗಿ ಭಾಷೆಗಳು ಪರಿಣಾಮಹೊಂದಿ ಪುಷ್ಟಿಗೊಳ್ಳುತ್ತವೆ. ಭಾಷಾಭಿವೃದ್ಧಿಯು ಮತ್ತಷ್ಟು ಅಧಿಕವಾಗಿ ಮುಂದುವರಿದರೆ, ಅನ್ಯದೇಶಗಳಿಂದ ಲಭಿಸಿದ ಜ್ಞಾನ ಭಂಡಾರವನ್ನು ಸ್ವಭಾಷೆಯಲ್ಲೇ ದೊರೆಯಿಸುವ ಸಾಮರ್ಥ್ಯವುಂಟಾಗುತ್ತದೆ. ಭಾಷಾಭಿವೃದ್ಧಿಯ ಮುಂದಿನ ಮಜಲಿನ ಲಕ್ಷಣವೆಂದರೆ, ಸ್ವಂತ ಸಾಹಿತ್ಯವೇ ಏರ್ಪಟ್ಟು ಬಳೆವಣಿಗೆ ಹೊಂದುವುದೇ. ಕೆಲವು ಭಾಷೆಗಳು ಮಾತ್ರ ಇನ್ನೂ ಮುಂದುವರಿದು, ಅಖಿಲ ಪ್ರಪಂಚದಲ್ಲೇ ಶ್ರೇಷ್ಠವೆನಿಸಿದ ಭಾಷೆಗಳ ಪಜ್ತಿಗೆ ಸೇರುವಮಟ್ಟಿನ ಪರಾಕಾಷ್ಠೆಯನ್ನು ಪಡೆದು ಶೋಭಿಸುತ್ತವೆ. ಅವುಗಳ ಸಾಹಿತ್ಯ

ನಿಧಿಯ ಪೂರ್ಣ ಸ್ವಾರಸ್ಯವನ್ನು ಗ್ರಹಿಸುವುದು ಅವುಗಳ ಪರಿಚಯ ಲಾಭವನ್ನು ಪಡೆದಿರತಕ್ಕವರಿಗೆ ಮಾತ್ರವೇ ಸಾಧ್ಯವಾಗುವಷ್ಟು ಶ್ರೇಷ್ಠತಮವಾಗಿರುವ ಕೃತಿರತ್ನಗಳು ಬೆಳಗುವ ಸ್ಥಿತಿಯನ್ನು ಅವುಗಳು ಆಗ್ಗೆ ಪಡೆದಿರುವುವು.

### ಕನ್ನಡದ ಶಬ್ದಸಂಪತ್ತು ಬೆಳೆಯಬೇಕು

ಜೀವಕಳೆಯಿಂದ ತುಂಬಿ ಪರಿಶೋಭಿಸುತ್ತಿರುವುದೇ ಭಾಷೆಗಳ ಲಕ್ಷಣ. ನೂತನ ಶಬ್ದಗಳೂ ನೂತನ ಪದಗುಂಫನ ವಿನ್ಯಾಸ ಸಂಪತ್ತಿಯೂ ಬಂದು ಸೇರಿದಂತೆಲ್ಲ, ಭಾಷೆಗಳು ಬಳೆವಣಿಗೆ ಹೊಂದುವುವು. ಪ್ರಪಂಚದ ಜ್ಞಾನಭಂಡಾರವು ವೃದ್ಧಿಯಾದ ಹಾಗೆಲ್ಲ— ಮತ್ತು ವೈಜ್ಞಾನಿಕ ಸಂಶೋಧನಗಳಿಂದ ನೂತನ ವಿಚಾರಗಳು ಹೊರಬಿದ್ದಂತೆಲ್ಲ— ಭಾಷೆಗಳು ತಮ್ಮ ಪ್ರಾಚೀನ ರೂಪಕ್ಕೆ ಸರ್ವಥಾ ವ್ಯತಿರಿಕ್ತವಾದ ನವೀನ ರೂಪಗಳನ್ನು ಪಡೆಯಬಹುದು. ಮೃತಭಾಷೆಗಳೆಂದು ನಾವು ಕರೆಯುವ ಭಾಷೆಗಳಲ್ಲಿ ಕೆಲವು ಭಾಷೆಗಳೂ ಸಹ, ವಿಶೇಷವಾಗಿ ಮತಧರ್ಮಗಳ ಅನುಷ್ಠಾನ ಸಂಬಂಧವಾದ ಪ್ರಯೋಗ ರೂಪದಲ್ಲಿ, ಎಂದಿನಂತೆ ಯಥಾರೀತಿ ಬಳಕೆಯಲ್ಲಿರಲೂಬಹುದು. ಇಂಗ್ಲಿಷ್ ಭಾಷೆಯಲ್ಲಿಯ ಬೇರೆ ಬೇರೆ ಕಾಲದ ನಿಘಂಟುಗಳನ್ನು ಪರಸ್ಪರವಾಗಿ ಹೋಲಿಸಿ ನೋಡಿದರೆ, ಒಂದು ಶತಮಾನಕ್ಕಿಂತ ಅಲ್ಪಸ್ವಲ್ಪ ಹೆಚ್ಚಿನ ಅವಧಿಯಲ್ಲಿ ಆ ಭಾಷೆಯ ಶಬ್ದ ಸಂಖ್ಯೆಯು ೭೦ ಸಾವಿರಗಳಿಂದ ೫ ಲಕ್ಷ ೫೦ ಸಾವಿರಗಳಿಗೆ ಅಧಿಕವಾಗಿರುವ ಅಂಶವು ವ್ಯಕ್ತವಾಗುವುದು. ದ್ರಾವಿಡ ಭಾಷೆಗಳ ವಿಚಾರದಲ್ಲಿ ಈ ಬಗೆಯ ತುಲನಾತ್ಮಕ ನಿರೂಪಣೆಯು ಸಾಧ್ಯವಿಲ್ಲವಾದರೂ, ಈ ಸಂಬಂಧದಲ್ಲಿ ಕೆಲವು ಸಂಗತಿಗಳನ್ನು ತಿಳಿಸಿದರೆ ಸ್ವಾರಸ್ಯವಾಗಿರಬಹುದು. ೧೮೦೩ನೆಯ ಇಸವಿಯಲ್ಲಿ ರಚಿತವಾದ ತೆಲುಗು ಭಾಷೆಯ ಒಂದು ನಿಘಂಟಿನಲ್ಲಿ ೩೩,೦೦೦ ಶಬ್ದಗಳಿವೆ. ೧೮೯೪ನೆಯ ಇಸವಿಯಲ್ಲಿ ಡಾಕ್ಟರ್ ಕಿಟ್ಟೆಲ್‌ರವರಿಂದ ರಚಿತವಾದ ಕನ್ನಡ ನಿಘಂಟಿನಲ್ಲಿ ೬೫,೦೦೦ ಶಬ್ದಗಳಿವೆ. ತಮಿಳುಭಾಷೆಯಲ್ಲಿ ರಚಿತವಾಗಿರುವ ನೂತನ ನಿಘಂಟಿನಲ್ಲಿರುವ ಶಬ್ದಗಳ ಸಂಖ್ಯೆಯು ೧ ಲಕ್ಷ ೪ ಸಾವಿರಗಳು. ಆದರೆ, ಸಂಸ್ಕೃತ ಭಾಷೆಯಲ್ಲಿ ೩ ಲಕ್ಷ ೬೩ ಸಾವಿರ ಶಬ್ದಗಳಿರುವ ಕಾರಣ, ಸಂಸ್ಕೃತ ಭಾಷೆಗಿಂತ ಈ ಭಾಷೆಗಳೆಲ್ಲ ವಿಶೇಷವಾಗಿ ಹಿಂದುಳಿದಿವೆ.

ಕನ್ನಡ ಭಾಷಾಭಿವೃದ್ಧಿಯು ಏಕಪ್ರಕಾರವಾಗಿ ಮುಂದುವರಿಯದೆ ಸ್ವಲ್ಪಮಟ್ಟಿಗೆ ಅದಕ್ಕೆ ಅಭ್ಯಂತರ ಒದಗಿದ್ದಿತೆಂದು ಹೇಳಬಹುದಾಗಿದೆ. ಕರ್ಣಾಟಕವು ಕಾವೇರಿಯಿಂದ ಗೋದಾವರಿವರೆಗೆ ವಿಸ್ತೃತವಾಗಿದ್ದ ಅವಧಿಯಲ್ಲಿ, ಹಳಗನ್ನಡದ ರೂಪಗಳೂ ಹಳಗನ್ನಡದ ಸಾಹಿತ್ಯವೂ ವೃದ್ಧಿಹೊಂದಿದುವು. ಆಗಿನ ಕಾಲದ ಸಾಹಿತ್ಯದಲ್ಲಿ ಕಾಣಬಹುದಾದ ಶಬ್ದಜಾಲವನ್ನು ನೋಡಿದರೆ, ಕನ್ನಡಿಗರ ಪ್ರಾಚೀನ ಸಂಸ್ಕೃತಿ ಚಿತ್ರವು ಹೃದಯಂಗಮವಾಗಿ ವ್ಯಕ್ತವಾಗುತ್ತದೆ. ಆದರೆ, ಅಲ್ಲಿಂದ ಮುಂದಿನ ಅಭಿವೃದ್ಧಿ ದಶೆಯು ಪ್ರಾರಂಭವಾಗಿ, ಆಧುನಿಕ ಪ್ರಪಂಚದ ಜ್ಞಾನಭಂಡಾರ ಪರಿಚಯ ಮಾಡಿಕೊಡುವ ನೂತನ ಶಬ್ದಗಳೂ, ನೂತನ ಪದಗುಂಫನ ವಿನ್ಯಾಸಗಳೂ ಸೇರಬೇಕಾಗಿದ್ದ ಕಾಲವು ಒದಗಿದಾಗ್ಗೆ, ಇಂಗ್ಲಿಷ್ ಭಾಷಾ ವ್ಯಾಸಂಗವು ಉಪಕ್ರಮವಾಗುವ ವ್ಯವಸ್ಥೆಯು ನಡೆಯಿತು. ಯಥೇಷ್ಟವಾಗಿ ಶಬ್ದಸಂಪತ್ತಿಯುಳ್ಳ ಇಂಗ್ಲಿಷ್ ಭಾಷೆಯ ಪರಿಚಯಹೊಂದಿ ಆಧುನಿಕ ಕಲಾವಿಜ್ಞಾನಗಳನ್ನು ಸ್ವಾಧೀನಪಡಿಸಿಕೊಂಡ ಭಾಗ್ಯಶಾಲಿಗಳು, ತಾವು ಕರಗತಮಾಡಿಕೊಂಡಿದ್ದ ಜ್ಞಾನಸಂಪತ್ತನ್ನು ಇಂಗ್ಲಿಷ್ ಭಾಷಾ ಪರಿಚಯವಿಲ್ಲದವರಿಗೆ ದೊರೆಯಿಸುವಂತಾಗುವುದೆಂಬುದು, ಆ ರೀತಿ ಇಂಗ್ಲಿಷ್ ಭಾಷೆಯ ವ್ಯಾಸಂಗ ವ್ಯವಸ್ಥೆಯು ನಡೆದುದರ ಉದ್ದೇಶ. ಆದರೆ, ಅದಕ್ಕೆ ಅವಶ್ಯವಾದ ನೂತನ ಶಬ್ದಜಾಲವನ್ನೇ ಅವರು ಕನ್ನಡ ಭಾಷೆಯಲ್ಲಿ ನಿರ್ಮಿಸಿಕೊಂಡು, ಇಂಗ್ಲಿಷ್ ಭಾಷಾ ವ್ಯಾಸಂಗದಿಂದ ತಾವು ಪಡೆದ ಜ್ಞಾನದ ಫಲವನ್ನು ಇಂಗ್ಲಿಷ್ ಭಾಷಾ ಪರಿಚಯವಿಲ್ಲದ ತಮ್ಮ ದೇಶಬಾಂಧವರಿಗೆ ಸ್ವಭಾಷೆಯಲ್ಲಿ ದೊರೆಯಿಸುವರೆಂದು ನಿರೀಕ್ಷಿಸಿದುದರಲ್ಲಿ, ಅವರು ನಿರ್ವಹಿಸಬೇಕಾದ ಕಾರ್ಯವೆಷ್ಟು ಕಷ್ಟಸಾಧ್ಯವೆಂಬುದು ಬಹುಶಃ ಮನವರಿಕೆಯಾಗಲಿಲ್ಲವೆಂದು ತೋರುತ್ತದೆ. ಪರಿಣಾಮದಲ್ಲಿ, ಅವರು ಆ ಮಹತ್ತರ ಕಾರ್ಯವನ್ನು ನಿರ್ವಹಿಸಲಾರದೆ ಹೋದರು. ಅವರು ಅದನ್ನು ನಿರ್ವಹಿಸಲು ಅವಶ್ಯವಾಗಿದ್ದ ಶಬ್ದಗಳ ಅಭಾವವೇ ಬಹುಶಃ ಅದಕ್ಕೊಂದು ಕಾರಣವಾಗಿರಬಹುದು. ಅದೆಲ್ಲದರ ಪರಿಣಾಮವಾಗಿ, ಪರಸ್ಪರ ಸ್ಪರ್ಧಿಗಳೋ—ಎಂದು ಭಾಸವಾಗುವಂತೆ, ಕನ್ನಡದ ಎರಡು ರೂಪಗಳು ಇಂದು ನಮ್ಮೆದುರಿಗೆ ನಿಂತಿವೆ: ಕರ್ಣಾಟಕದ ಪ್ರಾಚೀನ ಸಾಹಿತ್ಯವನ್ನೊಳಗೊಂಡಿರುವ ಹಳಗನ್ನಡದ ಪ್ರಾಚೀನ ರೂಪವು ಅವುಗಳಲ್ಲಿ ಮೊದಲನೆಯದು. ಆಧುನಿಕ ಸನ್ನಿವೇಶಗಳಲ್ಲಿ ಪ್ರತ್ಯಹದ ಜೀವನ ವ್ಯವಹಾರ ಸಂಬಂಧವಾಗಿ ಅತ್ಯವಶ್ಯವಾಗಿರುವ ಹೊಸಗನ್ನಡ ಸಾಹಿತ್ಯದ ನೂತನ ರೂಪವು ಅವುಗಳಲ್ಲಿ ರಡನೆಯದು. ನಿಮ್ಮ ಪರಿಷತ್ತು ಕಾರ್ಯರಂಗಕ್ಕಿಳಿದು ಹೊಸಗನ್ನಡದ ಪುರೋಭಿವೃದ್ಧಿ ಸಾಧನೆಯಲ್ಲಿ ಭಾಗವಹಿಸಲಾರಂಭಿಸಿದ ಕಾಲದವರೆಗೂ, ಹೊಸಗನ್ನಡದ ಪ್ರಗತಿಯು ಸ್ವಲ್ಪಮಟ್ಟಿಗೆ ಅನಿಶ್ಚಿತ ರೀತಿಯಲ್ಲಿ ಮುಂದುವರಿಯುತ್ತಿದ್ದಿತೆಂದೇ ಹೇಳಿದರೂ ಹೇಳಬಹುದು.

### ಕನ್ನಡ ನುಡಿಯ ಏಳ್ಗೆಗಾಗಿ ಕೆಲವು ಸೂಚನೆಗಳು

ನೀವುಗಳು ಉದ್ಯುಕ್ತರಾಗಿರುವ ಭಾಷಾಭಿವೃದ್ಧಿ ಪ್ರಯತ್ನವು ಬಹುಮುಖವಾಗಿದೆ. ಹೊಸಗನ್ನಡವು ಆಧುನಿಕ ಪರಿಸ್ಥಿತಿಯಲ್ಲಿ ಉಪಯೋಗಕ್ಕೆ ಅವಶ್ಯವೆನಿಸುವಮಟ್ಟಿಗೂ ಒದಗುವಂತೆ ಅದನ್ನು ನವೀನ ರೀತಿಯಲ್ಲಿ ಪರಿಪುಷ್ಟಗೊಳಿಸುವುದೊಂದು; ಆಧುನಿಕ ಕಲಾವಿಜ್ಞಾನಗಳ ಸಂಬಂಧದ ನವೀನ ವಿಚಾರ ಧೋರಣೆಗಳನ್ನೆಲ್ಲ ಸ್ಪಷ್ಟವಾಗಿ ನಿರೂಪಿಸಿ ಬೋಧಿಸುವುದು ಸಾಧ್ಯವಾಗುವಮಟ್ಟಿಗೂ ಅದನ್ನು ವಿಕಾಸಗೊಳಿಸುವುದೊಂದು; ಆ ರೀತಿ ಯಾವ ಸಂದರ್ಭಕ್ಕೆಂದರೆ ಆ ಸಂದರ್ಭಕ್ಕೆ ಸಮೃದ್ಧವಾಗಿ ಒದಗಿ ಅಳವಡುವಂತೆಯೂ ಉಪಯುಕ್ತವಾಗಿರುವಂತೆಯೂ ವ್ಯವಸ್ಥೆಗೊಳಿಸಿದ ಹೊಸಗನ್ನಡದಲ್ಲಿ ನೂತನ ಸಾಹಿತ್ಯ ಭಂಡಾರವೊಂದನ್ನೇ ನಿರ್ಮಿಸಿ ಒದಗಿಸಿಕೊಳ್ಳುವುದೊಂದು; ಇವೇ ಮುಂತಾದ ಮಾರ್ಗಗಳಲ್ಲಿ ನೀವುಗಳು ಭಾಷಾಭಿವೃದ್ಧಿ ಸಾಧನೆಗಾಗಿ ಶ್ರಮಿಸುತ್ತಿದ್ದೀರಿ. ಹೀಗೆ ನೀವುಗಳು ಉದ್ಯುಕ್ತರಾಗಿ ಶ್ರಮಿಸುತ್ತಿರುವ ಈ ಮಹತ್ತರ ಕಾರ್ಯವೇನೂ ಸುಲಭಸಾಧ್ಯವಾದುದಲ್ಲ. ಭಿನ್ನ ಭಿನ್ನ ಭಾವನೆಗಳಿರುವ ಬೇರೆ ಬೇರೆ ಪಂಗಡಗಳವರ ನಾನಾ ಅಭಿಪ್ರಾಯಗಳಿಗೂ ಪರಸ್ಪರ ಸಾಮರಸ್ಯವನ್ನು ಕಲ್ಪಿಸಿ ಅಂಗೀಕಾರ ದೊರೆಯುವಂತೆ ಮಾಡುವುದೆಷ್ಟು ಕಷ್ಟಸಾಧ್ಯವೆಂಬುದು, ಕನ್ನಡ ನಿಘಂಟನ್ನು ರಚಿಸುವ ಪ್ರಯತ್ನದಲ್ಲಿ ಶ್ರಮಿಸುತ್ತಿರುವವರ ಕೆಲಸದಿಂದಲೇ ವ್ಯಕ್ತವಾಗಿದೆ. ಹೀಗಿದ್ದೂ, ನಿಮ್ಮ ಪ್ರಯತ್ನಗಳಲ್ಲಿ ಕೆಲವಕ್ಕೆ ಅಸಾಧಾರಣವಾದ ರೀತಿಯಲ್ಲಿ ಫಲವಾಗಿದೆ. ಚರಿತ್ರೆ, ಭೂಗೋಳ, ಗಣಿತ ಮತ್ತು ವಿಜ್ಞಾನ ಶಾಸ್ತ್ರಗಳ ಬೋಧನೆಯು ನಡೆಯುವ ಸಾಧನವಾಗಿ ಕನ್ನಡ ಭಾಷೆಯು ಈಗ ಅಂಗೀಕೃತವಾಗಿದೆ. ಆಧುನಿಕ ವೈಜ್ಞಾನಿಕ ವಿಚಾರಗಳಿಗೆ ಸಂಬಂಧಪಟ್ಟ ಅತ್ಯಂತ ಗಹನವಾದ ವಿಷಯಗಳಲ್ಲಿ ಕೂಡ, ನೀವುಗಳು ಕನ್ನಡ ಭಾಷೆಯಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿದ್ದೀರಿ. ಅಲ್ಲದೆ, ಸುಮಾರು ೩,೫೦೦ ಕನ್ನಡ ಗ್ರಂಥಗಳು ಪ್ರಕಟವಾಗಿರುವಮಟ್ಟಿನ ಕಾರ್ಯಸಿದ್ಧಿಯೂ, ಕಳೆದ ಕಾಲು ಶತಮಾನದ ಅವಧಿಯಲ್ಲಿ ಲಭಿಸಿದೆ.

ಆ ಗ್ರಂಥಗಳಲ್ಲಿ, ಯಾವ ಯಾವ ವಿಷಯಗಳಲ್ಲಿ ಎಷ್ಟೆಷ್ಟು ಗ್ರಂಥಗಳು ರಚಿತವಾಗಿವೆಯೆಂಬುದನ್ನು ಪರಿಶೀಲಿಸಿ ನೋಡಿದರೆ, ಭಾಷಾಭಿವೃದ್ಧಿಗತಿಯು ಯಾವ ರೀತಿಯಲ್ಲಿ ರೂಪಿತವಾಗಿದೆಯೆಂಬ ಸ್ವಾರಸ್ಯವಾದ ಸಂಗತಿಯು ವ್ಯಕ್ತವಾಗುತ್ತದೆ: ಸ್ಥೂಲವಾಗಿ ನೋಡಿದರೆ, ಅವುಗಳಲ್ಲಿ ೧,೦೦೦ ಗ್ರಂಥಗಳು, ಕಥೆ ಕಾದಂಬರಿಗಳೇ ಮುಂತಾದ ಕಲ್ಪಿತವಸ್ತು ಸಂಬಂಧವಾಗಿವೆ; ಪದ್ಯಕಾವ್ಯಗಳ ಮತ್ತು ನಾಟಕಗಳ ಸಂಖ್ಯೆಯು ೭೦೦; ೪೦೦ ಗ್ರಂಥಗಳು

ಧಾರ್ಮಿಕ ವಿಚಾರಗಳನ್ನು ಕುರಿತು ರಚಿತವಾಗಿವೆ; ೫೦೦ ಗ್ರಂಥಗಳು ವಿಜ್ಞಾನ, ಚರಿತ್ರೆ ಮುಂತಾದ ಶಿಕ್ಷಣ ಸಂಬಂಧದ ವಿಚಾರಗಳನ್ನು ಕುರಿತು ರಚಿತವಾಗಿವೆ; ೩೫೦ ಗ್ರಂಥಗಳು ಜೀವನ ಚರಿತ್ರೆಗಳು.

### ಗೀತಗಳ ಮೂಲಕ ಬಾಳಿನ ಮೇಲ್ಮೆ

ಮುಂದೆ ನೀವುಗಳು ಅವಲಂಬಿಸಬೇಕಾದ ಕಾರ್ಯಕ್ರಮವನ್ನು ಕುರಿತು, ಇತರರಾರೂ ಈ ಮೊದಲೇ ನಿಮ್ಮ ಅವಗಾಹನೆಗೆ ತಂದಿಲ್ಲದಿರುವಂತಹ ಹೆಚ್ಚಿನ ಸಲಹೆಗಳಾವುವೂ, ನಮ್ಮಿಂದ ಇಂದು ಸೂಚಿತವಾಗಲು ಉಳಿದಿಲ್ಲ. ಎಲ್ಲಕ್ಕೂ ಮಿಗಿಲಾಗಿ, ಅಪಶಬ್ದಗಳಿಗವಕಾಶವಿಲ್ಲದೆ ಭಾಷೆಯ ಪರಿಶುದ್ಧತೆಯೂ ಭಾಷೆಯ ಸರಳತೆಯೂ ಸುರಕ್ಷಿತವಾಗಿರುವಂತೆ ಪ್ರಯತ್ನಪೂರ್ವಕವಾಗಿ ನೋಡಿಕೊಳ್ಳಬೇಕೆಂದು ಸೂಚಿಸಲಿಚ್ಛಿಸುವೆವು. ಅಲ್ಲದೆ, ನಿರೂಪಣೆಗೆ ವಿಷಯಗಳಾಗಿರುವ ಆಶಯಗಳು ಸ್ಪಷ್ಟವಾಗಿ ವ್ಯಕ್ತವಾಗಲು ಅಗತ್ಯವಾಗಿಲ್ಲದಿರುವುದೇನನ್ನೂ ಸೇರಿಸದೆ ಜಾಗರೂಕತೆಯಿಂದ ವರ್ತಿಸುವುದು ಅಪೇಕ್ಷಣೀಯವೆಂಬುದೂ ಸಹ, ನಮ್ಮ ಸಲಹೆಯಾಗಿದೆ. ಭಾಷಾಭಿವೃದ್ಧಿ ಸಾಧನೆಯ ಸಂಬಂಧವಾಗಿ ಮತ್ತೊಂದು ಪ್ರಯತ್ನವು ನೆರವೇರಬೇಕೆಂಬುದೂ ನಮಗಿರುವ ತೀವ್ರಾಭಿಲಾಷೆ: ಸಾಲ್ಟೂನಿನ ಫ್ಲೆಚರ್ ಎಂಬಾತನು, "ಒಂದು ಜನಾಂಗದ ಜನಪದ ಗೀತಗಳನ್ನು ರಚಿಸುವ ಅವಕಾಶವೊಂದು ನನಗೆ ಲಭಿಸಿದರೆ ಸಾಕು. ಅದರ ನ್ಯಾಯಶಾಸನ ನಿಬಂಧನೆಗಳನ್ನು ಮತ್ತಾರೇ ರಚಿಸಿಕೊಂಡರೂ ನಮಗೆ ಕೊರತೆಯಿಲ್ಲ" ಎಂದು ಹೇಳಿದ್ದಾನೆ. **ಕನ್ನಡ ನಾಡೆಲ್ಲ ಗೀತಗಳಿಂದ ತುಂಬಿದೆ. ಅವುಗಳಲ್ಲಿ ಬಹುಭಾಗದವುಗಳು, ಶ್ರೀ ಬಸವಣ್ಣನವರ ಮತ್ತು** ಹರಿದಾಸರುಗಳ ಕಾಲದಷ್ಟು ಹಿಂದಿನವು. ದಾಸರ ಪದಗಳು **ಮುಂತಾದುವುಗಳನ್ನು ಸಂಗ್ರಹಿಸಿ ಬರೆದಿಡುವ ಕಾರ್ಯವು ಇನ್ನೂ ಪೂರ್ತಿಯಾಗಿ ನೆರವೇರಿಲ್ಲವೆಂದು ನಾವು ಭಾವಿಸಿರುವೆವು. ಅವುಗಳನ್ನು ಸಂಗ್ರಹಿಸಿ, ಮೂಲರೂಪದಲ್ಲಿ ಅವುಗಳನ್ನುಳಿಸಿ ಭದ್ರವಾಗಿಡುವುದು ಬಹಳ ಶ್ರೇಷ್ಠವಾದ ಕಾರ್ಯ; ಆದಕಾರಣ, ಅದು ನೆರವೇರುವುದು ತೀರ ಉಚಿತವಾಗಿದೆ.** ಹೃದಯವೇಧಕಗಳಾದ ಘಟನಾವಳಿಗಳಿಂದ ತುಂಬಿರುವ ಈಗಿನ ಸಮಯದಲ್ಲಿ ಸಹ, ಕೆಲವು ನೂತನ ಗೀತೆಗಳೂ ಪದಗಳೂ ರಚಿತವಾದಾವೆಂಬುದಾಗಿ ನಿರೀಕ್ಷಿಸಬಹುದಾಗಿದೆಯೆಂದು ತೋರುವುದು. ನಮ್ಮ ನಾಡಿನಲ್ಲಿ ಕವಿಗಳೂ, ಕವಿಗಳಾಗತಕ್ಕವರೂ ಬಹುಮಂದಿಗಳಿದ್ದಾರೆ. ಅವರುಗಳಿಂದ ರಚಿತವಾದ ಅನೇಕ ಕವನಗಳು ಪ್ರತಿವರ್ಷವೂ ನಮ್ಮಲ್ಲಿಗೆ ಬರುತ್ತವೆ; ಪದ್ಯರೂಪದಲ್ಲಿ ರಚಿತವಾಗಿರುವ ದೇವತಾ ಪ್ರಾರ್ಥನೆಯ ವಾಚನವಿಲ್ಲದೆ ಹೋದ ಯಾವ ಉತ್ಸವಾದಿಗಳೂ ಪೂರ್ಣವಾದಂತೆ ಭಾವಿಸಲ್ಪಡುವುದಿಲ್ಲ. **ನಾವು ಈ ಮೊದಲೇ ಉದಾಹರಿಸಿದ ವಾಣಿಗಳ ಆಶಯಕ್ಕನುಗುಣವಾಗಿ, ಗೀತಗಳ ಮೂಲಕ ಶ್ರೇಷ್ಠ ಜೀವನಮಾರ್ಗವನ್ನು ಜನರಿಗೆ ಹೃದಯಂಗಮವಾಗಿ ಬೋಧಿಸಿ ಮನದಟ್ಟು ಮಾಡಿಕೊಡುವ ಪ್ರಯತ್ನವು ಮುಂದುವರಿಯಬೇಕಾಗಿದೆ. ಅದು ಮುಂದುವರಿಯುವಂತೆ ಮಾಡುವ ಉದ್ದೇಶದಿಂದ ಕೂಡಿ ನೀವುಗಳೂ ಮತ್ತು ಅವರುಗಳೂ ಸಹ ಶ್ರಮಿಸುತ್ತ ಬರಬೇಕೆಂದು, ನಾವು ಆದರದಿಂದ ಸೂಚಿಸಲಿಚ್ಛಿಸುವೆವು.**

ಮಹಿಳೆಯರೇ, ಮತ್ತು ಮಹಾಶಯರೇ, ಈ ಪರಿಷತ್ತು ಉದ್ಯುಕ್ತವಾಗಿ ನೆರವೇರಿಸಿಯೂ ನೆರವೇರಿಸುತ್ತಲೂ ಇರುವ ಸಾಹಿತ್ಯಾಭಿವೃದ್ಧಿ ಪ್ರಯತ್ನಗಳು, ಕನ್ನಡವೇ ಮಾತೃಭಾಷೆಯಾಗಿರುವ ನಮ್ಮ ನಾಡಿನ ಸಮಸ್ತ ಭಾಗಗಳಿಗೂ ವ್ಯಾಪಿಸಿರುವ ಅಂಶವನ್ನು ಮನಗಂಡು, ನಮಗೆ ಮಹತ್ತರವಾದ ಹರ್ಷವುಂಟಾಗಿದೆ. ಕನ್ನಡಿಗರ ಸಂಸ್ಕೃತಿಯ ಮೇಲ್ಮೆಯನ್ನು ಸಾಧಿಸುವ ಮಹತ್ತರವಾದ ಕಾರ್ಯವನ್ನು ಕೈಕೊಂಡಿರುವ ಈ ಪರಿಷತ್ತು ಅನುದಿನವೂ ಪುರೋಭಿವೃದ್ಧಿ ಹೊಂದುತ್ತ ಬರಲೆಂದೂ, ಅದರ ಪ್ರಯತ್ನಗಳು ಮುಂದಿನ ವರ್ಷಗಳಲ್ಲಿ ಇತೋಪ್ಯಧಿಕವಾಗಿ ವೃದ್ಧಿ ಹೊಂದಿ ಮತ್ತಷ್ಟು ಅಧಿಕತರವಾಗಿ ಸಫಲವಾಗಲೆಂದೂ, ಮನಃಪೂರ್ವಕವಾಗಿ ನಾವು ಹಾರೈಸುವೆವು.

ಸಿರಿಗನ್ನಡಂ ಗೆಲ್ಗೆ

ಉಪಾಧ್ಯಕ್ಷರು ಮಹಾಸ್ವಾಮಿಯವರಿಗೆ ನಮಿಸಿ ಬೆಳಗಿನ ಕಾರ್ಯಕ್ರಮ ಮುಗಿಯಿತೆಂದು ಬಿನ್ನವಿಸಿದರು. "ಕಾಯೌ ಶ್ರೀಗೌರಿ" ಗೀತೆ ಮೊಳಗುತ್ತಿರಲು ಮಹಾಸ್ವಾಮಿಯವರೂ ಶ್ರೀಮದ್ಯುವರಾಜರವರೂ ಸಭಾಮಂದಿರವನ್ನು ಬಿಟ್ಟು ಅರಮನೆಗೆ ತೆರಳಿದರು.

## ಭೋಜನ ಕೂಟ

ಮಧ್ಯಾಹ್ನ ೧೨ ಗಂಟೆಗೆ ಶ್ರೀ॥ ಸಜ್ಜನರಾಯರ ಛತ್ರದಲ್ಲಿ ಬಂದ ಅತಿಥಿಗಳಿಗೆಲ್ಲಾ ಒಂದು ಔತಣಕೂಟವನ್ನು ಏರ್ಪಡಿಸಲಾಗಿತ್ತು.



ಬೆಳ್ಳಿಯ ಹಬ್ಬಕ್ಕೆ ಬಂದಿದ್ದ ಮಹಿಳೆಯರು ಊಟ ಮಾಡುತ್ತಿರುವ ನೋಟ

ಸ್ಥಳೀಯ ದೊಡ್ಡಮನುಷ್ಯರೂ ಮಹಿಳೆಯರೂ ಅನೇಕರು ಆಹ್ವಾನಿತರಾಗಿದ್ದರು. ಕನ್ನಡ ನಾಡಿನ ಹಿರಿಯರೂ ಸಾಹಿತಿಗಳೂ ದಯಮಾಡಿಸಿದ್ದರು. ಎಲ್ಲರನ್ನೂ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರೂ, ಗೌರವ ಕಾರ್ಯದರ್ಶಿಗಳಾದ ಶ್ರೀ॥ ಬಿ. ವೆಂಕೋಬರಾಯರೂ ಆದರದಿಂದ ಸ್ವಾಗತಿಸಿದರು. ಭೋಜನವಾದ ಬಳಿಕ ಗಂಧಪುಷ್ಪ ತಾಂಬೂಲ ವಿನಿಯೋಗವಾಯಿತು.

## ಗ್ರಂಥ ಪ್ರದರ್ಶನ

ಮಧ್ಯಾಹ್ನ ೩॥ ಗಂಟೆಗೆ ಶ್ರೀಮಾನ್ ಡಿ. ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಪರಿಷನ್ಮಂದಿರವು ಎಂದೂ ಕಾಣದಿದ್ದ ಜನಸಂದಣಿಯನ್ನು ಕಂಡಿತು. ಮಹಿಳೆಯರು ಎಂದಿಗಿಂತ ಹೆಚ್ಚಾಗಿ ದಯಮಾಡಿಸಿ ಹಬ್ಬದ ಮಂಗಳವನ್ನು ಹೆಚ್ಚಿಸಿದ್ದರು. ಹೀಗೆ ಸ್ತ್ರೀಪುರುಷರು ಕನ್ನಡ ಪ್ರೇಮದಿಂದ ನಾನು ತಾನೆಂದು ಉತ್ಸಾಹದಿಂದ ಸಭೆಗೆ ದಯಮಾಡಿಸಿ ಪರಿಷತ್ತಿಗೆ ಆನಂದವನ್ನುಂಟುಮಾಡಿದರಾದರೂ ಇವರೆಲ್ಲರಿಗೂ ಸ್ಥಳಾವಕಾಶವನ್ನು ಒದಗಿಸಿಕೊಡಲು ಸಾಧ್ಯವಾಗದೆ ಹೋದುದಕ್ಕಾಗಿ ಉತ್ಸವ ಸಮಿತಿಗೆ ವಿಷಾದವಾಗಿದೆ.



ಶ್ರೀ ಕೃಷ್ಣರಾಜಪರಿಷನ್ಮಂದಿರ
ಉತ್ಸವಕಾಲವಲ್ಲಿ ಸಂಜೆಯಹೊತ್ತು ವಿದ್ಯುದ್ದೀಪಗಳಿಂದ ಅಲಂಕೃತವಾಗಿತ್ತು

"ಉದಯವಾಗಲಿ ಚೆಲುವ ಕನ್ನಡನಾಡು" ಎಂಬ ಗೀತೆಯನ್ನು ಕೆಲವು ಬಾಲಕಿಯರು ಸುಶ್ರಾವ್ಯವಾಗಿ ಹಾಡಿದರು. ಅತಿಥಿಗಳಿಗೆ ಸ್ವಾಗತವನ್ನು ಬಯಸುವ ಶ್ರೀ॥ ತೀ. ನಂ. ಶ್ರೀಕಂಠಯ್ಯನವರ ಗೀತೆಯನ್ನು ಶ್ರೀ॥ ಸಂಪತ್ಕುಮಾರಾಚಾರ್ಯರು ಹಾಡಿದರು.

ಅಧ್ಯಕ್ಷರು ಗ್ರಂಥ ಪ್ರದರ್ಶನದ ಸಮಾರಂಭೋತ್ಸವವನ್ನು ನೆರವೇರಿಸುವ ಮೊದಲು ಭಗವಂತನು ಮಿತ್ರರಾಷ್ಟ್ರಗಳವರಿಗೆ ಜಯವನ್ನುಂಟುಮಾಡಲೆಂದು ಹಾರೈಸಿದರು.

ಬಳಿಕ ಶ್ರೀಮಾನ್ ಡಿ. ವಿ. ಗುಂಡಪ್ಪನವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು — "ಕನ್ನಡ ನಾಡಿನ ಭಕ್ತರು ಹೆಚ್ಚುಹೆಚ್ಚಾಗಿ ಕನ್ನಡತಾಯ ಸೇವೆಯನ್ನು ಮಾಡಬೇಕು, ಈ ಸೇವೆ ಸಲ್ಲಿಸುವುದಕ್ಕೆ ಜ್ಞಾನವನ್ನು ಬೆಳಸಿಕೊಳ್ಳಬೇಕು. ಜ್ಞಾನಾಭಿವೃದ್ಧಿಯಾಗುವುದಕ್ಕೆ ಪುಸ್ತಕಗಳು ಬೇಕು. ಈಗ ನಮ್ಮಲ್ಲಿ ಗ್ರಂಥಗಳಿಗೆ ಸಾಕಷ್ಟು ಪ್ರೋತ್ಸಾಹ ದೊರೆಯುತ್ತಿಲ್ಲ. ಇಂಥ ಪರಿಸ್ಥಿತಿಯನ್ನು ನಿವಾರಿಸುವ ಕರ್ತವ್ಯ ನಮ್ಮೆಲ್ಲರ ಮೇಲೆ ಇದೆ. ಮಹಿಳೆಯರು ದಿನವಹಿ ಸ್ವಲ್ಪಕಾಲವನ್ನಾದರೂ ಉತ್ತಮವಾದ ಗ್ರಂಥಗಳನ್ನು ಓದಿ ಜ್ಞಾನಾರ್ಜನೆಯನ್ನು ಮಾಡುವುದರಲ್ಲಿ ಕಳೆಯಬೇಕು. ಎಲ್ಲರೂ ಉತ್ತಮವಾದ ಗ್ರಂಥಗಳನ್ನು ಕೊಳ್ಳಬೇಕು. ಹಾಗೆ ಮಾಡಿದರೆ ನಮ್ಮ ನಾಡಿನ ಗ್ರಂಥಕರ್ತರಿಗೆ ಪ್ರೋತ್ಸಾಹ ದೊರೆತು, ನಮ್ಮ ಭಾಷೆ ಏಳಿಗೆಯನ್ನು ಪಡೆಯುವುದು."

ಅನಂತರ ಶ್ರೀ॥ ಕೃಷ್ಣಗಿರಿ ಕೃಷ್ಣರಾಯರು ಅರ್ಧ ಗಂಟೆಯ ಕಾಲ ಗಮಕವಾಚನ ಮಾಡಿ ನೆರೆದಿದ್ದ ಜನಸ್ತೋಮವನ್ನು ಆನಂದಪಡಿಸಿದರು.

ಮಂಗಳೂರಿನಿಂದ ಹಬ್ಬಕ್ಕಾಗಿ ದಯಮಾಡಿಸಿದ್ದ ಶ್ರೀಗಳಾದ ಬಾಲಕೃಷ್ಣರಾವ್, ಎನ್. ಎಸ್. ಕಿಲ್ಲೆಯವರು, ಶಂಕರನಾರಾಯಣ ಶಾಸ್ತ್ರಿಗಳು, ಅರ್ಕುಳ ಸುಬ್ರಾಯಾಚಾರಿಯವರು ಇವರುಗಳು ತಮ್ಮ ಕಡೆಯ ವಿಶಿಷ್ಟ ಕಲೆಯಾದ ಯಕ್ಷಗಾನ — ತಾಳಮದ್ದಳೆಯನ್ನು ಒಂದೂವರೆ ಗಂಟೆಗಳ ಕಾಲ ಪ್ರದರ್ಶಿಸಿ ಸಭಾಸದರನ್ನು ಆನಂದಗೊಳಿಸಿದರು.

ಅನಂತರ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರು ಆಧುನಿಕ ಕವಿತೆಗಳನ್ನು ಸುಶ್ರಾವ್ಯವಾಗಿ ಹಾಡಿದರು.

ಸಂಜೆ ೬॥ ಯಿಂದ ೭॥ ವರೆಗೆ ಸೆಂಟ್ರಲ್ ಕಾಲೇಜಿನ ರಸಾಯನ ಶಾಸ್ತ್ರ ಅಧ್ಯಾಪಕರಾದ ಶ್ರೀ॥ ಯು. ಎಸ್. ಕೃಷ್ಣರಾವ್, ಎಂ.ಎಸ್‌ಸಿ. ಅವರು ತಮ್ಮ ಮನೋಹರವಾದ ನರ್ತನದಿಂದ ಸಭಾಸದರನ್ನು ಮುಗ್ಧರನ್ನಾಗಿ ಮಾಡಿದರು. ಅವರ ಅಲಾರಿ ನರ್ತನ, ಜತಿಸ್ವರ (ಹೆಜ್ಜೆಯ ವಿನ್ಯಾಸ), ಸ್ವರಜತಿ (ಭಕ್ತಿನಾಟ್ಯ), ಮೋಡಿ (ಹಾವಾಡಿಗನ ನೃತ್ಯ), ಕಾಮುದಹನ ನೃತ್ಯಗಳು ಪ್ರೇಕ್ಷಕರನ್ನು ಅತ್ಯಂತ ಆನಂದಗೊಳಿಸಿದುವು.

ರಾತ್ರಿ ೯-೩೦ ಗಂಟೆಗೆ ಮೂರು ನಾಟಕಗಳ ಪ್ರದರ್ಶನವಾಯಿತು. ಶ್ರೀ॥ ಟಿ. ಪಿ. ಕೈಲಾಸಂ ಅವರ "ವೈದ್ಯನ ಜಾಡ್ಯ" ಮತ್ತು "ನಮ್ಮ ಕಂಪೆನಿ" ಎಂಬ ನಾಟಕಗಳನ್ನು ಮೈಸೂರು ವಿಶ್ವವಿದ್ಯಾನಿಲಯದ ಕಲಾ ಸಂಘದವರೂ "ಸಂಧ್ಯಾಕಾಲ" ಎಂಬ ನಾಟಕವನ್ನು ಗ್ರಂಥಕರ್ತರಾದ ಪ್ರೊ॥ ಆರ್. ವಿ. ಜಾಗಿರದಾರರು ಮತ್ತು ಅವರ ಗೆಳೆಯರು ಆಡಿತೋರಿಸಿದರು. ಪ್ರದರ್ಶನ ಅತ್ಯಂತ ಯಶಸ್ವಿಯಾಗಿ ನಡೆಯಿತು. ಪ್ರದರ್ಶನ ಮುಗಿಯುವುದು ಬೆಳಗಿನ ಜಾವ ಒಂದು ಗಂಟೆಯಾದರೂ ನೆರೆದಿದ್ದ ಜನ ಬಹು ಆಸಕ್ತಿಯಿಂದ ಕುಳಿತಿದ್ದು, ನಟರ ಅಭಿನಯಕ್ಕೆ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಅದೇ ರಾತ್ರಿ ಶ್ರೀ ಸಜ್ಜನರಾಯರ ಚತ್ರದಲ್ಲಿ ಸೇರಿದ್ದ ವಿಶೇಷ ಸಭೆಯಲ್ಲಿ ದಕ್ಷಿಣ ಕನ್ನಡ ಮಿತ್ರರು ಯಕ್ಷಗಾನವನ್ನು ನಡಸಿದರು.

## ಎರಡನೆಯ ದಿನದ ಕಾರ್ಯಕಲಾಪಗಳು

### ವಿದ್ವತ್ಸಭೆ — ಘಟಿಕೋತ್ಸವ

ಜುಲೈ ೧ನೆಯ ತಾರೀಖು ಬೆಳಿಗ್ಗೆ ಸಮ್ಮೇಳನಾಧ್ಯಕ್ಷರಾದ ಶ್ರೀ॥ ಮುವವೀಡು ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ವಿದ್ವತ್ಸಭೆ ನಡೆಯಿತು. ಶ್ರೀಮತಿ ಶಕುಂತಳಾಬಾಯಿನಂದಾಪುರ ಅವರು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು', 'ಕನ್ನಡವನುಳಿದೆನಗೆ ಅನ್ಯಜೀವನವಿಲ್ಲ' ಎಂಬ ಕವಿತೆಗಳನ್ನು ಸುಶ್ರಾವ್ಯವಾಗಿ ಹಾಡಿದರು. 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ಲೋಕಪ್ರಿಯ ಕೃತಿಯ ಕರ್ತೃಗಳಾದ ಗದುಗಿನ ಶ್ರೀ॥ ಹುಯಿಲಗೋಳ ನಾರಾಯಣರಾಯರನ್ನು 'ಶ್ರೀ'ಯವರು ಸಭೆಗೆ ಪರಿಚಯ ಮಾಡಿಕೊಟ್ಟರು.

ಶ್ರೀಮಾನ್ ಎಲ್. ರಾಜಾರಾಯರಿಂದ ಸುಶ್ರಾವ್ಯವಾಗಿ ವೀಣಾವಾದನ ನಡೆಯಿತು. ವೈಣಿಕರಿಗೆ ಸಹಾಯವಾಗಿ ಶ್ರೀ॥ ಎಂ. ವಿ. ಸೀತಾರಾಮಯ್ಯನವರು ಮೃದಂಗ ನುಡಿಸಿದ್ದರು.

ಬಳಿಕ ಪರಿಷತ್ತಿನ ಗಮಕ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದ ವಿದ್ಯಾರ್ಥಿಗಳಲ್ಲಿ ಇಬ್ಬರಿಂದ ಗಮಕವಾಚನವಾಯಿತು.

ಆಮೇಲೆ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಬೆಳ್ಳಿಯ ಹಬ್ಬ ಯಶಸ್ವಿಯಾಗಲೆಂದು ಹಾರೈಸಿ ಬಂದಿದ್ದ ಸಂದೇಶಗಳನ್ನು ಓದಿದರು.

### ಸಂದೇಶಗಳು

೧. **ಸೊಂಡೂರು ಸಂಸ್ಥಾನದ ರಾಜಾ ಸಾಹೇಬರವರಿಂದ.—**

ಬೆಳ್ಳಿಯ ಹಬ್ಬಕ್ಕೆ ಬಂದು ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸಲೂ ಮತ್ತು ವಿದ್ವತ್ ಸಭೆಯನ್ನು ಸಮಾರಂಭಗೊಳಿಸಲೂ ಸಾಧ್ಯವಾಗದಿರುವುದಕ್ಕಾಗಿ ವಿಷಾದಿಸುತ್ತೇನೆ. ಹಬ್ಬವು ಅತ್ಯಂತ ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನೆ.



ಶ್ರೀ॥ ಡಿ. ವಿ. ಗುಂಡಪ್ಪನವರು ಗ್ರಂಥಪ್ರದರ್ಶನವನ್ನು ಅವಲೋಕಿಸುತ್ತಿರುವುದು

**೨. ಜಮಖಂಡಿ ಸಂಸ್ಥಾನದ ರಾಜಾ ಸಾಹೇಬರವರಿಂದ.—**

ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ಬಂದು ಅದರ ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಸಾಧ್ಯವಾಗದಿರುವುದಕ್ಕಾಗಿ ವಿಷಾದಿಸುತ್ತೇನೆ. ಹಬ್ಬವು ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನಲ್ಲದೆ ಪರಿಷತ್ತು ಇಲ್ಲಿನವರೆಗೆ ನಡಸಿಕೊಂಡು ಬಂದ ದೊಡ್ಡ ಸೇವೆಯನ್ನು ಇನ್ನೂ ಹೆಚ್ಚು ಪ್ರಮಾಣದಲ್ಲಿ ಮುಂದುವರಿಸಿ ಹೊನ್ನಿನ ಹಬ್ಬದ ಮಂಗಳ ದಿನಗಳನ್ನು ಆನಂದದಿಂದ ಕಾಣುವಂತೆ ಪ್ರಗತಿಯನ್ನು ಸಾಧಿಸಲೆಂದು ಹಾರೈಸುತ್ತೇನೆ.

**೩. ಚಿತ್ರದುರ್ಗದ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಸ್ವಾಮಿಗಳವರಿಂದ.—**

ಕನ್ನಡ ನಾಡು ನುಡಿಗಳ ಸೇವೆಗಾಗಿ ಜನ್ಮವೆತ್ತಿ ಈಗ ಇಪ್ಪತ್ತೈದು ವರ್ಷಗಳಿಂದಲೂ ಬಹುವಾಗಿ ಪರಿಶ್ರಮಿಸಿ, ಜನತೆಯಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗಳ ಜಾಗೃತಿಯನ್ನು ಉಂಟುಮಾಡಿದ ಕನ್ನಡ ಸಾಹಿತ್ಯ ಪರಿಷತ್ತಿಗೆ ಈಗ ಇಂತಹ ಶುಭ ಪ್ರಸಂಗವು ಒದಗಿದುದು ಅದರ ಚಾಲಕರಿಗೆ ಭೂಷಣಪ್ರದವಾದ ಸಂಗತಿಯಾಗಿದೆ. ಇದೇ ಪ್ರಕಾರ ಜಾತಿ ಮತ ಪಂಥ ಪಕ್ಷ ಪ್ರಾಂತಗಳ ಭಿನ್ನಭೇದಗಳಿಲ್ಲದೆ ಕನ್ನಡ ಕುಲದವರೆಲ್ಲರೂ ಒಟ್ಟುಕೂಡಿ ಕನ್ನಡ ದೇವಿಯ ಸೇವೆಯನ್ನು ಹೆಚ್ಚು ಹೆಚ್ಚಾಗಿ ನಡೆಯಿಸಿ, ಈ ಸಂಸ್ಥೆಯ ಚಿನ್ನದ ಹಬ್ಬವು ಇತೋಪ್ಯತಿಶಯವಾಗಿ ಜರುಗುವಂತೆ ಆಗಲೆಂದು ಹಾರೈಸೋಣವಾಗಿದೆ.

**೪. ಅಂತರ್ರಾಷ್ಟ್ರೀಯ ಪಿ. ಇ. ಎನ್. ಸಂಸ್ಥೆಯ ಭಾರತ ಶಾಖೆಯ ಕಾರ್ಯದರ್ಶಿಗಳಾದ ಶ್ರೀಮತಿ ಸೋಫಿಯ ವಾಡಿಯಾ ಅವರಿಂದ.—**

........ಪರಿಷತ್ತು ಸಾಧಿಸಿರುವ ಕಾರ್ಯಗಳಿಗಾಗಿ ನಿಮ್ಮನ್ನೂ ನಿಮ್ಮ ಸಹೋದ್ಯೋಗಿಗಳನ್ನೂ ಅಭಿನಂದಿಸಬಯಸುತ್ತೇನೆ....... ಈಗ ಪ್ರಪಂಚ ರಾಜಕೀಯ ಸಂಬಂಧವಾದ ದುರಾಶೆಗಳಿಂದಲೂ ಕುಲ ಗೋತ್ರಗಳ ದುರಭಿಮಾನಗಳಿಂದಲೂ ಛಿನ್ನಭಿನ್ನವಾಗಿ ರಕ್ತಪಾತಕ್ಕೆ ಎಡೆಯಾಗಿದೆ; ಮನಸ್ಸನ್ನು ಹದಗೊಳಿಸುವ ಸಾಹಿತ್ಯದ ಪ್ರಭಾವ ಸೇನಾನಾಯಕರ ಮತ್ತು ರಾಷ್ಟ್ರನಾಯಕರ ಮನಸ್ಸಿನ ಮೇಲೆ ಪರಿಣಾಮವುಂಟುಮಾಡುವುದು ನಿಂತುಹೋದಂತಾಗಿದೆ; ಈ ಸಮಯದಲ್ಲಿ ನಮ್ಮ ಇಂಡಿಯದಲ್ಲಿ ಸಾಹಿತ್ಯ ಪುನರುಜ್ಜೀವನ ಕಾರ್ಯವೊಂದು ಬೆಳೆಯುತ್ತಿದೆಯೆಂಬುದು ಉತ್ತೇಜಕವಾಗಿದೆ. ರಾಜಕೀಯ ಹೋರಾಟಗಳಿಂದಲೂ ವರ್ಗಜಾತಿ ಕಲಹಗಳಿಂದಲೂ ಸಂಪೂರ್ಣವಾಗಿ ಅಬಾಧಿತವಾಗಿ ಇಲ್ಲದಿದ್ದರೂ ಸಾಹಿತ್ಯದ ಬೆಳವಣಿಗೆ ತಾಯ್ನಾಡಿನ ಪ್ರತಿಯೊಂದು ಪ್ರಾಂತದಲ್ಲೂ ನಡೆಯುತ್ತಿದೆ. ಉತ್ತರದಲ್ಲಿ ಪಂಜಾಬಿ ಬಂಗಾಳಿ ಭಾಷೆಗಳಿಂದ ಹಿಡಿದು ದಕ್ಷಿಣದಲ್ಲಿ ಮಲೆಯಾಳಿ ಭಾಷೆಯವರೆಗೆ ಪ್ರತಿಯೊಂದು ಭಾರತೀಯ ಭಾಷೆಯೂ, ಹಿರಿಯರೂ ಅನುಭವಶಾಲಿಗಳೂ ಹಾಗೂ ಕಿರಿಯರೂ ಉತ್ಸಾಹಶಾಲಿಗಳೂ ಆದ ಬರಹಗಾರರ ಬರಹಗಳಿಂದ ನವಚೇತನವನ್ನು ಪಡೆಯುತ್ತಿದೆ. ಈ ಪುನರುಜ್ಜೀವನದಲ್ಲಿ ಕನ್ನಡ ಭಾಷೆ ಬಹಳ ದೊಡ್ಡದಾದ ಮತ್ತು ಮುಖ್ಯವಾದ ಭಾಗವಹಿಸುತ್ತಿದೆ; ಇದಕ್ಕೆ ನಿಮ್ಮ ಕನ್ನಡ ಸಾಹಿತ್ಯ ಪರಿಷತ್ತು ಬಹುಮಟ್ಟಿಗೆ ಕಾರಣ. ಅದು ದಕ್ಷತೆಯಿಂದ ಕೆಲಸಮಾಡುತ್ತಿರುವ ಸಂಸ್ಥೆ; ಸಾಂಸ್ಕೃತಿಕ ಸ್ಫೂರ್ತಿ ತುಂಬುತ್ತಿರುವ ಪ್ರಭಾವಶಾಲಿಯಾದ ಸಂಸ್ಥೆ; ಬರಹಗಾರರಿಗೆ ಸುಸಂಘಟಿತವಾದ ಸಂಸ್ಥೆಯೊಂದರ ನೆರವಿನ ಆವಶ್ಯಕತೆ ಇರುವಂಥ ಭಾಷಾ ಪ್ರದೇಶಗಳಿಗೆ ಶ್ರೇಷ್ಠವಾದ ಮಾದರಿಯಾಗಿರುವ ಸಂಸ್ಥೆ. ಪರಿಷತ್ತು ದಿನ ದಿನಕ್ಕೂ ಅಭಿವೃದ್ಧಿಹೊಂದಲೆಂದು ನನ್ನ ಮನಃಪೂರ್ವಕವಾದ ಹರಕೆ.

**೫. ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಿಂದ.—**

ನಮ್ಮ ಪರಿಷತ್ತಿನ ಅಧ್ಯಕ್ಷರಿಗೆ ಕಳಿಸಿದ ಆಹ್ವಾನಪತ್ರಿಕೆಗಾಗಿ ವಂದನೆಗಳು. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬ ಯಶಸ್ವಿಯಾಗಿ ಜರುಗಲೆಂದೂ, ಕನ್ನಡ ಭಾಷಾಸೇವೆಯನ್ನು ವರ್ಷ ವರ್ಷವೂ ಹೆಚ್ಚು ಹೆಚ್ಚಾಗಿ ಮಾಡಿ ಪ್ರಭಾವಶಾಲಿಯಾಗಲೆಂದೂ ಮಹಾರಾಷ್ಟ್ರ ಸಾಹಿತ್ಯ ಪರಿಷತ್ತು ಹಾರೈಸುತ್ತದೆ. ಕನ್ನಡ ಮತ್ತು ಮಹಾರಾಷ್ಟ್ರ ಪರಿಷತ್ತುಗಳು ಸೌಹಾರ್ದಮಯ ಸಂಬಂಧವನ್ನು ಬೆಳಸಿಕೊಂಡು, ಉಭಯ ಭಾಷೆಗಳ ಉನ್ನತಿಗೆ ಪರಸ್ಪರ ನೆರವಾಗುತ್ತ ದುಡಿಯಬೇಕೆಂಬುದು ನಮ್ಮ ಆಗ್ರಹಪೂರ್ವಕವಾದ ವಿನಂತಿ.

ಕನ್ನಡಪ್ರೇಮಿಗಳಾದ ಈ ಕೆಳಗೆ ಕಂಡ ರಾಜರುಗಳೂ, ಮಠಾಧಿಪತಿಗಳೂ, ಮಹಾಜನರೂ ಸಂದೇಶಗಳನ್ನು ಕಳಿಸಿದ್ದಾರೆ:

**ಉತ್ತರ ಕರ್ನಾಟಕ:** ೧. ಶ್ರೀಮಂತ ಪಂತಸಾಹೇಬ ಪ್ರತಿನಿಧಿ ರಾಜಾ ಸಾಹೇಬರವರು, ಔಂಧ್ ಸಂಸ್ಥಾನ. ೨. ರಾಜಾ ಸಾಹೇಬರವರು, ಜತ್ತ್ ಸಂಸ್ಥಾನ. ೩. ರೀಜೆಂಟ್ ರಾಣೀ ಸಾಹೇಬಾರವರು, ಮುಧೋಳ ಸಂಸ್ಥಾನ. ೪. ಪ್ರಿನ್ಸಿಪಾಲರು, ಲಾ ಕಾಲೇಜು, ಕೊಲ್ಹಾಪುರ. ೫. ಮೈಸೂರು ಸಂಘ, ಕೊಲ್ಹಾಪುರ, ೬. ಅಧ್ಯಕ್ಷರು, ಪೌರಸಭೆ, ಧಾರವಾಡ. ೭. ಶ್ರೀ|| ದತ್ತಾತ್ರೇಯ ಕರಮರಕರ ಅವರು, ಧಾರವಾಡ. ೮. ರಾವ್ ಬಹದ್ದೂರ್ ಶಾಮಣ್ಣನಾಯಕರು, ರಾಣಿಬೆನ್ನೂರು. ೯. ಅಧ್ಯಕ್ಷರು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. ೧೦. ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿ ಅವರು, ಬಿಜಾಪುರ. ೧೧. ಶ್ರೀ|| ಮುರಗಯ್ಯ ಸೋಮಯ್ಯ ಜಂಗಿನ ಅವರು, ಬಾಗಲಕೋಟೆ. ೧೨. ಗೆಳೆಯರ ಗುಂಪು, ಗದಗು - ಬೆಟಗೇರಿ. ೧೩. ಅಧ್ಯಕ್ಷರು, ಅಭ್ಯಾಸ ಮಂಡಲ, ಅಥಣಿ. ೧೪. ಬ್ಯಾರಿಸ್ಟರ್ ಎಂ. ಎಸ್. ಸರದಾರರು, ಸೊಲ್ಲಾಪುರ. ೧೫. ಕರ್ನಾಟಕ ಸಂಗೀತ ಮಂಡಲ, ಬೆಳಗಾಂವಿ. ೧೬. ಶ್ರೀಮಾನ್ ವಿ. ಕೃ. ಗೋಕಾಕರು, ಸಾಂಗಲಿ. ೧೭. ಶ್ರೀ|| ಎಸ್. ಆರ್. ತಾವಡೆ ಅವರು ಧಾರವಾಡ.

**ಹೈದರಾಬಾದು ಕರ್ನಾಟಕ:** ೧. ಸರ್ ಅಕ್ಬರ್ ಹೈದರಿಯವರು, ಹೈದರಾಬಾದು ಸಂಸ್ಥಾನದ ಮಂತ್ರಿಮಂಡಲದ ಅಧ್ಯಕ್ಷರು. ೨. ಶ್ರೀ|| ಯಾಜ್ದಾನಿಯವರು, ಹೈದರಾಬಾದಿನ ಪ್ರಾಚ್ಯ ಸಂಶೋಧನೆ ಇಲಾಖೆಯ ಡೈರೆಕ್ಟರವರು. ೩. ಪ್ರಿನ್ಸಿಪಾಲರು, ಉಸ್ಮಾನಿಯ ಕಾಲೇಜು, ಗುಲ್ಬರ್ಗ. ೪. ಶ್ರೀ|| ನರಸಿಂಗರಾಯರು, ಗುಲ್ಬರ್ಗ. ೫. ಶ್ರೀ|| ಕಪಟ್ರಾಳ್‌ರವರು, ಗುಲ್ಬರ್ಗ. ೬. ಶ್ರೀ|| ಭೀಮಸೇನರಾಯರು, ಗುಲ್ಬರ್ಗ. ೭. ಶ್ರೀ|| ಅಶ್ವತ್ಥರಾಯರು, ಗುಲ್ಬರ್ಗ. ೮. ಪ್ರೊಫೆಸರ್ ವೀರಭದ್ರುಡು, ಸಿಕಂದರಾಬಾದ್. ೯. ಶ್ರೀ|| ಜಿ. ಬಿ. ಶಾಸ್ತ್ರಿ, ಕೊಪ್ಪಳ. ೧೦. ವಾರ್ತಾವಾಹಿನಿ, ರಾಯಚೂರು.

**ಮಂಗಳೂರು ಮತ್ತು ಕೊಡಗು ಕರ್ನಾಟಕ:** ಶ್ರೀ|| ಎಂ. ಗೋವಿಂದ ಪೈ ಅವರು, ಮಂಜೇಶ್ವರ.

**ಮೈಸೂರು ಕರ್ನಾಟಕ:** ಶ್ರೀ||ಗಳಾದ: ೧. ಸರ್ ಎಂ. ವಿಶ್ವೇಶ್ವರಯ್ಯನವರು, ಬೆಂಗಳೂರು. ೨. ಸರ್ ಸಿ. ವಿ. ರಾಮನ್ ಅವರು, ಬೆಂಗಳೂರು. ೩. ಚ. ವಾಸುದೇವಯ್ಯನವರು. ೪. ನಂಗಪುರಂ ವೆಂಕಟೇಶ ಅಯ್ಯಂಗಾರ್ಯರವರು, ಬೆಂಗಳೂರು. ೫. ಆಸ್ಥಾನವಿದ್ವಾನ್ ಬ್ರಂ|| ಶ್ರೀ|| ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳವರು, ಶಿವಮೊಗ್ಗ. ೬. ಧರ್ಮಪ್ರವರ್ತಕ ಎಂ. ಎಲ್. ನಾಗಪ್ಪಶೆಟ್ಟರು, ಚಿಕ್ಕಮಗಳೂರು. ೭. ಕರ್ನಾಟಕ ಸಂಘ, ಹೊಳೇನರಸೀಪುರ. ೮. ಕರ್ನಾಟಕ ಸಂಘ, ರುದ್ರಪಟ್ಟಣ. ೯. ದೇಶೀಯ ಕ್ರೈಸ್ತ ಸಂಘ, ಬೆಂಗಳೂರು.

**ಇತರ:** ೧. ಶ್ರೀ|| ಚಕ್ರವರ್ತಿ ರಾಜಗೋಪಾಲಾಚಾರ್ಯರು, ಮದರಾಸಿನ ಮಾಜಿ ಮುಖ್ಯಮಂತ್ರಿಗಳು. ೨. ಶ್ರೀ|| ಬಾಲಗಂಗಾಧರ ಖೇರರು, ಬೊಂಬಾಯಿನ ಮಾಜಿ ಮುಖ್ಯಮಂತ್ರಿಗಳು. ೩. ಸ್ಥಾನಪತಿಗಳು, ಮದರಾಸು ವಿಶ್ವವಿದ್ಯಾನಿಲಯ, ಮದರಾಸು. ೪. ಸ್ಥಾನಪತಿಗಳು, ಆಂಧ್ರ ವಿಶ್ವವಿದ್ಯಾನಿಲಯ, ವಾಲ್ಟೇರ್. ೫. ಸ್ಥಾನಪತಿಗಳು, ಉಸ್ಮಾನಿಯಾ ವಿಶ್ವವಿದ್ಯಾನಿಲಯ, ಸಿಕಂದರಾಬಾದು. ೬. ಸ್ಥಾನಪತಿಗಳು, ತಿರುವಾಂಕೂರು ವಿಶ್ವವಿದ್ಯಾನಿಲಯ, ತಿರುವನಂದಪುರ. ೭. ಶ್ರೀ|| ಕೆ.ವಿ. ರಂಗಸ್ವಾಮಿ ಅಯ್ಯಂಗಾರ್ಯರು, ತಿರುಪತಿಯ ಪ್ರಾಚ್ಯ ಸಂಶೋಧನೆಯ ಡೈರೆಕ್ಟರು. ೮. ಕಾರ್ಯದರ್ಶಿಗಳು, ಭಂಡಾರ್‌ಕರ್



ವಿದ್ವತ್ಸಭೆ: ಸಭಾಧ್ಯಕ್ಷರು ಪ್ರಶಸ್ತಿಪತ್ರಿಕೆಗಳನ್ನು ಹಂಚುತ್ತಿರುವುದು

ರಿಸರ್ಚ್ ಇನ್‌ಸ್ಟಿಟ್ಯೂಟ್, ಪುಣೆ. ೯. ಡೈರೆಕ್ಟರು, ಡಕ್ಕನ್ ಕಾಲೇಜು ಇನ್‌ಸ್ಟಿಟ್ಯೂಟು, ಪುಣೆ. ೧೦. ಶ್ರೀಮಾನ್ ಆರ್. ಎ. ಜಾಗೀರ್‌ದಾರರು, ಸರ್ಕಾರಿ ವಕೀಲರು, ಮುಂಬಯಿ. ೧೧. ಶ್ರೀ॥ ಸ್ವಾಮಿ ಆನಂದಾಶ್ರಮ ಅವರು, ಶಿರಾಳಿ.

ಅನಂತರ ಪರಿಷತ್ತು ಈ ವರ್ಷ ಏರ್ಪಡಿಸಿದ್ದ ಮೂರು ಸಾಹಿತ್ಯ ಪರೀಕ್ಷೆಗಳು ಮತ್ತು ಗಮಕ ಪರೀಕ್ಷೆಗಳಲ್ಲಿ ಜಯಶೀಲರಾದವರಿಗೆ ಶ್ರೀ॥ ಮುದವೀಡು ಕೃಷ್ಣರಾಯರು ಬಹುಮಾನ ವಿನಿಯೋಗಮಾಡಿದರು.

ಈ ಸಂದರ್ಭದಲ್ಲಿ 'ಶ್ರೀ'ಯವರು ಮಾತನಾಡುತ್ತ, "ಆರು ತಿಂಗಳಿಗೊಮ್ಮೆ ಈ ಪರೀಕ್ಷೆಗಳನ್ನು ಏರ್ಪಡಿಸಬೇಕೆಂಬ ಅಭಿಲಾಷೆ ಪರಿಷತ್ತಿಗಿದೆ. ಕೇವಲ ಕನ್ನಡದಲ್ಲಿ ಅಭಿರುಚಿ ಅಭಿಮಾನ ಇದ್ದರೆ ಮಾತ್ರ ಸಾಲದು. ಅದರ ಸತ್ವ ಸವಿಗಳ ಪರಿಚಯವನ್ನು ಮಾಡಿಕೊಳ್ಳಬೇಕು. ಈ ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಹೆಚ್ಚು ಹೆಚ್ಚಾಗಿ ಸೇರಿ ಪರಿಷತ್ತಿನ ಧ್ಯೇಯವನ್ನು ಸಫಲಗೊಳಿಸಬೇಕು. ಈ ಸಲದ ಪರೀಕ್ಷೆಗಳಿಗೆ ಹೆಣ್ಣುಮಕ್ಕಳೂ ಸೇರಿ ತೇರ್ಗಡೆಯಾಗಿರುವುದು ಸಂತೋಷದ ಸಂಗತಿ" ಎಂದು ಹೇಳಿದರು.

ಭಾಸ್ಕರರಾಯರ ಜ್ಞಾಪಕ ಸ್ಪರ್ಧೆಗೆ ಈ ಬಾರಿ ೪೮ ಸಣ್ಣ ಕತೆಗಳು ಬಂದಿದ್ದವು. ಅವುಗಳಲ್ಲಿ ಮೈಸೂರಿನ ಶ್ರೀಮತಿ ಬಿ. ಎನ್ ಸುಬ್ಬಮ್ಮ ('ವಾಣಿ') ಅವರ 'ಮಿಂಚು' ಎಂಬ ಕತೆಗೆ ೨೦ ರೂಪಾಯಿ ಬೆಲೆ ಬಾಳುವ ಬೆಳ್ಳಿಯ ಬಟ್ಟಲನ್ನು ಬಹುಮಾನವಾಗಿ ಕೊಡಲಾಯಿತು.

ಶ್ರೀ॥ ಚ. ಚ. ಅಬಕಾರ ಅವರು ಶ್ರೀ॥ ಚಿಕ್ಕೋಡಿ ತಮ್ಮಣ್ಣಪ್ಪನವರ ಭಾವಚಿತ್ರವನ್ನು ಪರಿಷತ್ತಿಗೆ ದಾನಮಾಡಿದರು. ಆ ಚಿತ್ರವನ್ನು ಪರಿಷತ್ತಿನ ಉಪಾಧ್ಯಕ್ಷರು ಸ್ವೀಕರಿಸಿ, ಶ್ರೀ॥ ತಮ್ಮಣ್ಣಪ್ಪನವರು ಜಮುಖಂಡಿ ಸಂಸ್ಥಾನದಲ್ಲಿ ಕನ್ನಡಕ್ಕಾಗಿ ಮಾಡಿದ ಸೇವೆಯನ್ನು ಕುರಿತು ಪ್ರಶಂಸಿಸಿದರು.

### ಪರಿಷತ್ತಿನ ಶಾಶ್ವತ ನಿಧಿಗೆ ಸಹಾಯಗಳು

ಈ ಕೆಳಗೆ ಕಂಡ ಮಹನೀಯರು ಪರಿಷತ್ತಿನ ಶಾಶ್ವತನಿಧಿಗೆ ಸಹಾಯ ಮಾಡಿರುವುದಕ್ಕಾಗಿ ಪರಿಷತ್ತು ಅವರಿಗೆ ತುಂಬ ಕೃತಜ್ಞವಾಗಿದೆ ಎಂದು ಸಭೆಗೆ ಅತ್ಯಂತ ಹರ್ಷದಿಂದ ತಿಳಿಸಲಾಯಿತು.

ಶ್ರೀ॥ಗಳಾದ

೧ ಅನಂತರಾವ್ ಕೃಷ್ಣರಾವ್ ಅಸುಂಡಿಯವರು, ಗದಗು
ಪ್ರದಾತೃವರ್ಗದ ಸದಸ್ಯತ್ವಕ್ಕೆ ಮತ್ತು ಗಮಕ ಕಲೆಯ ಮತ್ತು ಹರಿದಾಸ ಸಾಹಿತ್ಯದ ಅಭಿವೃದ್ಧಿಗಾಗಿ ರೂ. ೩,೦೦೦

೨ ಬಿ. ಎಂ. ಶ್ರೀಕಂಠಯ್ಯನವರು,
ಅಚ್ಚುಕೂಟಕ್ಕಾಗಿ (ಹಿಂದಿನ ೫ ಸಾವಿರ ರೂ. ದಾನದ ಜೊತೆಗೆ) ರೂ. ೧,೦೦೦

೩ ಶ್ರೀ ಶ್ರೀ ಜಗದ್ಗುರು ಮುರುಘರಾಜೇಂದ್ರಸ್ವಾಮಿಗಳು,
ಚಿತ್ರದುರ್ಗ. ಪ್ರದಾತೃವರ್ಗದ ಸದಸ್ಯತ್ವಕ್ಕೆ ರೂ. ೫೦೧

೪ ಶ್ರೀಮತಿ ಡಿ. ಚಂಪಾಬಾಯಿಯವರು
ಬೆಂಗಳೂರಿನಲ್ಲಿ ಗಮಕ ಕಲಾಭಿವೃದ್ಧಿಗೆ ರೂ. ೩೦೦

೫ ವಿದ್ವಾನ್ ಎಚ್. ಹನುಮಂತರಾಯರು,
ಕೋಲಾರ
ಬೆಂಗಳೂರಿನಲ್ಲಿ ಗಮಕ ಕಲಾಭಿವೃದ್ಧಿಗೆ ರೂ. ೧೦೦

ಅನಂತರ ನಾಡಿನ ನಾನಾ ಭಾಗಗಳ ಪ್ರತಿನಿಧಿಗಳಾದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು (ನವಿಲುಗುಂದ), ಶ್ರೀ॥ ಹರ್ಡೇಕರ ಮಂಜಪ್ಪನವರು (ಆಲನಟ್ಟಿ) ಶ್ರೀಮತಿ ಗೌರಿದೇವಿ ಇಂಚಲಮಠ ಅವರು (ಗದಗು), ಶ್ರೀಮತಿ ಕಮಲಾಬಾಯಿ ಜಮುಖಂಡಿ ಅವರು (ಧಾರವಾಡ) ಶ್ರೀ॥ ಜಿನರಾಜ ಹೆಗ್ಗಡೆಯವರು (ಮಂಗಳೂರು), ಶ್ರೀ॥ ಅನಂತಪದ್ಮನಾಭರಾಯರು (ಕೊಡಗು), ವ್ಯಾಕರಣತೀರ್ಥ ಶ್ರೀ॥ ಚಂದ್ರಶೇಖರ ಶಾಸ್ತ್ರಿಗಳು (ಯಾದಗಿರಿ) ಶ್ರೀ॥ ಜಿ. ಕೆ. ಬೆಟಗೇರಿಯವರು (ಮುಂಬಯಿ), ಶ್ರೀ॥ ಎ. ನಾರಾಯಣಸ್ವಾಮಿ ಅಯ್ಯರ್ ಅವರು (ಕಲ್ಕತ್ತ), ಎಚ್. ಜೆ. ಶಿವಶಂಕರಪ್ಪನವರು (ಕೊಳ್ಳೇಗಾಲ), ಶ್ರೀ॥ ದಿವಾಕರ್‌ರಂಗರಾಯರು (ಹುಬ್ಬಳ್ಳಿ), ಶ್ರೀ॥ ಡಿ. ಸಾಕಮ್ಮನವರು (ಬೆಂಗಳೂರು), ಶ್ರೀ॥ ತೀ. ನಂ. ಶ್ರೀಕಂಠಯ್ಯನವರು (ಮೈಸೂರು), ಶ್ರೀ॥ ಆರ್. ಎಸ್. ಸುಬ್ಬಣ್ಣನವರು (ರುದ್ರಪಟ್ಟಣ)— ಇವರುಗಳು ಭಾಷಣಮಾಡಿ ಪರಿಷತ್ತಿನ ಧ್ಯೇಯಗಳನ್ನು ಜನತೆಯಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ಪ್ರಚಾರ ಮಾಡಿ, ಕನ್ನಡದ ಚಳವಳಿಯನ್ನು ಮುಂದುವರಿಸಲು ಪ್ರಯತ್ನಪಡುವುದು ಆವಶ್ಯಕವೆಂದು ಹೇಳಿದರು.

ಶ್ರೀ॥ ಮುದವೀಡು ಕೃಷ್ಣರಾಯರು ಮುಕ್ತಾಯ ಭಾಷಣವನ್ನು ಮಾಡುತ್ತ—

ಇನ್ನು ಮುಂದೆ ಪರಿಷತ್ತು ಅಖಿಲ ಕರ್ನಾಟಕದ ವಿಶ್ವವಿದ್ಯಾನಿಲಯವಾಗಿ ಪರಿಣಮಿಸಿ, ಕನ್ನಡ ನಾಡನ್ನು ಸರ್ವಾಂಗ ಸುಂದರವಾಗುವಂತೆ ಮಾಡುವಂತಾಗಲೆಂದು ಹಾರೈಸಿದರು. ಪಾಶ್ಚಾತ್ಯ ತರುಣರು ತಮ್ಮ ನಾಡ ಸೇವೆಗೆ ಹೇಗೆ ಸೊಂಟಕಟ್ಟಿ ದುಡಿಯುವರೋ ಹಾಗೆಯೇ ನಮ್ಮ ನಾಡಿನ ತರುಣರು ಮುಂದೆ ಬಂದು ಕನ್ನಡ ತಾಯಿಗಾಗಿ ದುಡಿಯಬೇಕೆಂದರು. ಕರ್ನಾಟಕದಲ್ಲಿ ಉದ್ಯೋಗಶೀಲತೆ ಬೆಳೆಯಬೇಕು, ಕರ್ನಾಟಕದಲ್ಲಿ ಇರುವ ಎಲ್ಲ ಕೊಡುಗೈ ದೊರೆಗಳೂ ಶ್ರೀ॥ ಅಸುಂಡಿಯವರ ಮೇಲ್ಪಂಕ್ತಿಯನ್ನನುಸರಿಸಿ ಕನ್ನಡದ ಮುನ್ನಡೆಗೆ ಸಹಾಯ ಮಾಡಬೇಕು ಎಂದು ಪ್ರಾರ್ಥಿಸಿದರು. ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸುವರ್ಣ ಮಹೋತ್ಸವವು ಬರುವ ಡಿಸೆಂಬರು ತಿಂಗಳಿನಲ್ಲಿ ನಡೆಯಲಿದೆ. ಅದೇ ಸಮಯದಲ್ಲಿಯೇ ಸಾಹಿತ್ಯ ಸಮ್ಮೇಳನವನ್ನು ಧಾರವಾಡದಲ್ಲಿಯೇ ನಡಸಬೇಕೆಂದು ಪರಿಷತ್ತಿನ ಕಾರ್ಯಸಮಿತಿಯವರು ತೀರ್ಮಾನಿಸಿದ್ದಾರೆ. ಈ ಎರಡು ಉತ್ಸವಗಳಿಗೂ ಕನ್ನಡಿಗರು ತಂಡತಂಡವಾಗಿ ಬಂದು, ನೆರವಾಗಿ ಉತ್ಸವಗಳನ್ನು ಯಶಸ್ವಿಯಾಗಿ ನಡಸಿಕೊಡಬೇಕೆಂದೂ ಕೋರಿದರು.

ಧನ್ಯವಾದ ಸಮರ್ಪಣೆಯೊಂದಿಗೆ ಬೆಳಗಿನ ಕಾರ್ಯಕ್ರಮ ಮುಗಿಯಿತು.

### ಮಹಿಳೆಯರ ಗೋಷ್ಠಿ

ಮಧ್ಯಾಹ್ನ ೩-೩೦ಕ್ಕೆ ಸರಿಯಾಗಿ ಪರಿಷತ್ತಿನ ಸಭಾಮಂದಿರದಲ್ಲಿ ಮಹಿಳೆಯರ ಸಭೆ ಆರಂಭವಾಯಿತು.

ಬೊಂಬಾಯಿ ಆಧಿಪತ್ಯದ ದಕ್ಷಿಣ ಜಿಲ್ಲೆಯ ಶಾಲಾ ಇನ್ಸ್‌ಪೆಕ್ಟ್ರೆಸ್ ಆದ ಶ್ರೀಮತಿ ಕಮಲಾಬಾಯಿ ಜಮುಖಂಡಿ, ಬಿ.ಎ., ಬಿ.ಟಿ., ಟಿ.ಡಿ. ಅವರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀಮತಿ ಆರ್. ಕಲ್ಯಾಣಮ್ಮನವರು ಅಧ್ಯಕ್ಷರ ಪರಿಚಯ ಮಾಡಿಕೊಟ್ಟು ಎಲ್ಲರಿಗೂ ಸ್ವಾಗತವನ್ನು ಬಯಸಿದರು.



ಮಹಿಳಾಗೋಷ್ಠಿ

ಮಹಾರಾಣೀ ಕಾಲೇಜ್ಜಿನ ವಿದ್ಯಾರ್ಥಿನಿಯರಿಂದ ಪ್ರಾರ್ಥನೆಯಾದ ನಂತರ ಮಹಿಳಾ ಸಮಾಜದ ಮಹಿಳೆಯರಿಂದ 'ಆರ್ಕೆಸ್ಟ್ರಾ' ನಡೆಯಿತು. ಒಬ್ಬ ಬಾಲಕಿ ಒಂದು ಕನ್ನಡ ಪದ್ಯವನ್ನೂ, ಮತ್ತೊಬ್ಬ ಬಾಲಕಿ 'ಟೀಪು ಸುಲ್ತಾನ್' ಲಾವಣಿಯನ್ನೂ ಹಾಡಿದರು. ತರುವಾಯ 'ನಮ್ಮ ಸಮಾಜ'ದ ಒಂದು ದೃಶ್ಯವನ್ನು ಕಾಲೇಜಿನ ವಿದ್ಯಾರ್ಥಿನಿಯರು ಆಡಿತೋರಿಸಿದರು. ಗೌರಮ್ಮನ ಪಾತ್ರ ಎಲ್ಲರ ಮೆಚ್ಚುಗೆಯನ್ನೂ ಪಡೆಯಿತು. ಕುಮಾರಿ ಕಾತ್ಯಾಯಿನಿ ತಾನೇ ಬರೆದ 'ಕನ್ನಡಮ್ಮನ ಕಾಣಿಕೆ' ಎಂಬ ಪದ್ಯವನ್ನು ಹಾಡಿದಳು. ಸೇವಾಸದನದ ಬಾಲಿಕೆಯರು ಅತ್ಯಂತ ಮನೋಹರವಾದ ರೀತಿಯಲ್ಲಿ ನಾಟ್ಯವನ್ನು ಪ್ರದರ್ಶಿಸಿದರು.

ಅನಂತರ ಶ್ರೀಮತಿ ಕಮಲಾಬಾಯಿಯವರು ತಮ್ಮನ್ನು ಅಧ್ಯಕ್ಷರನ್ನಾಗಿ ಮಾಡಿದುದಕ್ಕೆ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿ ಒಂದು ಉತ್ತಮವಾದ ಮತ್ತು ಸ್ವಾರಸ್ಯವಾದ ಭಾಷಣವನ್ನು ಮಾಡಿದರು. ಶ್ರೀಮತಿಯವರು ತಮ್ಮ ಕಾಲಕ್ಕಿಂತಲೂ ಈಗಿನ ಹೆಣ್ಣುಮಕ್ಕಳಲ್ಲಿ ಬಹಳ ಜಾಗೃತಿಯುಂಟಾಗಿದೆಯೆಂದು ತಿಳಿಸಿ, ಇದಕ್ಕೆ ಈಗಿನ ವಾತಾವರಣವೇ ಕಾರಣವೆಂದರು. "ಜನ ಜಾಗೃತಿಗೆ ಸಂಘ ಶಕ್ತಿ ಅತ್ಯಂತ ಆವಶ್ಯಕ. ಸಂಘ ಶಕ್ತಿಯೊಂದಿದ್ದರೆ ಮನುಷ್ಯನು ಅನೇಕ ಕಾರ್ಯಗಳನ್ನು ಸಾಧಿಸಬಹುದು. ಆದುದರಿಂದ ಮಹಿಳೆಯರು ಅನೇಕ ವೇಳೆ ಒಂದು ಕಡೆ ಸೇರಿ ತಮಗಿರುವ ಕುಂದುಕೊರತೆಗಳನ್ನು ಚರ್ಚಿಸಿ ತಮಗೆ ಬೇಕಾದ್ದದನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಬೇಕು.

"ಹೆಣ್ಣುಮಕ್ಕಳು ತಮ್ಮ ಮೈಚಳಿಯನ್ನು ಬಿಟ್ಟು ಧೈರ್ಯವಾಗಿ ಯಾವ ಕೆಲಸಕ್ಕಾದರೂ ಮುಂದೆ ಬರಬೇಕು. ಹೀಗೆಂದ ಮಾತ್ರಕ್ಕೆ ಸ್ತ್ರೀಯರು ತಮ್ಮ ಸ್ವಭಾವಸಿದ್ಧವಾದ ಗೌರವ, ಗಾಂಭೀರ್ಯ ಸೌಜನ್ಯಗಳನ್ನು ಬಿಟ್ಟು ಪುರುಷರೊಡನೆ ಸ್ಪರ್ಧೆ ನಡಸಬೇಕೆಂದಲ್ಲ. ತಮಗೆ ಬೇಕಾದ ಅನೇಕ ಸೌಕರ್ಯಗಳನ್ನು ತಾವೇ ಕಷ್ಟಪಟ್ಟು ಸಾಧಿಸಲು ಮತ್ತು ಅವುಗಳನ್ನು ಪಡೆಯಲು ಸರ್ವಶಕ್ತಿಯಿಂದಲೂ ತಾವು ಪ್ರಯತ್ನಪಡಬೇಕು ಅಷ್ಟೆ. ನಮ್ಮ ಸಮಾಜದಲ್ಲಿ ಸ್ತ್ರೀಯರು ಮಾಡಬೇಕಾದ ಅನೇಕ ಕೆಲಸಗಳಿವೆ. ಸ್ತ್ರೀಯರಿಗೆ ತನ್ನ ತಂದೆಯ ಅಥವಾ ಪತಿಯ ಆಸ್ತಿಯಲ್ಲಿ ಸ್ವಲ್ಪಭಾಗವನ್ನು ಪಡೆಯಲು ಹಕ್ಕಿರಬೇಕು: ಹಿಂದೂ ಸಮಾಜದಲ್ಲಿ ಅನೇಕ ವರ್ಷಗಳಿಂದಲೂ ಹೆಣ್ಣುಮಕ್ಕಳನ್ನು ನಿಕೃಷ್ಟವಾಗಿ ಕಾಣುವುದು ರೂಢಿಯಾಗಿದೆ. ಸಮಾಜದಲ್ಲಿರುವ ವರದಕ್ಷಿಣೆಯ ಅವಾಂತರ; ಸ್ತ್ರೀಯರಲ್ಲಿ ಅಡಗಿರುವ ಅನೇಕ ಮೂಢನಂಬಿಕೆಗಳು, ಅಜ್ಞಾನ, ಅವರಲ್ಲಿ ನೆಲಸಿರುವ ಅವಿದ್ಯೆ ಮುಂತಾದುವೆಲ್ಲವನ್ನೂ ಹೋಗಲಾಡಿಸಿ ಸ್ತ್ರೀಯರ ಸ್ಥಿತಿಯನ್ನು ಮೇಲ್ಮಟ್ಟಕ್ಕೇರಿಸ ಬೇಕಾದರೆ ನಮ್ಮ ಭಗಿನಿಯರು ಧೈರ್ಯಮಾಡಿ ಮುಂದೆ ಬರಬೇಕು.

"ಒಬ್ಬ ಮಹಿಳೆಯು ಸಮಾಜದಲ್ಲಿ ತಾನೂ ಒಬ್ಬ ವ್ಯಕ್ತಿಯೆಂದು ತಿಳಿದು ಧೈರ್ಯವಾಗಿ ತನ್ನ ಧರ್ಮಕಾರ್ಯದಲ್ಲಿ ತಾನು ತೊಡಗಬೇಕಾದರೆ ಅವಳು ಸ್ವಾವಲಂಬಿಯಾಗಿರಬೇಕು. ನಮ್ಮ ಉನ್ನತಿಗಾಗಿ ಅನೇಕ ಪುರುಷರು ದುಡಿಯುತ್ತಿರುವರು. ಅವರೆಲ್ಲರಿಗೂ ನಾವು ಕೃತಜ್ಞರು. ಆದರೂ ಎಲ್ಲ ಭಾರವನ್ನೂ ಅವರ ಮೇಲೆ ಹಾಕಿ ನಾವು ಸುಮ್ಮನೆ ಕೂಡಬಾರದು. ನಮ್ಮ ಹಿತಕ್ಕಾಗಿ ನಾವೂ ಕಷ್ಟಪಡಬೇಕು. ಸಮಾಜಕ್ಕೆ ನಮ್ಮ ಅಲ್ಪ ಸೇವೆಯನ್ನು ಸಲ್ಲಿಸಿ, ಅದರಲ್ಲಿ ನಾವು ಒಂದು ಗೌರವ ಸ್ಥಾನವನ್ನು ಪಡೆಯಬೇಕಾದರೆ ನಮಗೆ ವಿದ್ಯೆ ಆವಶ್ಯಕ. ಈಗ ನಮಗೆ ದೊರೆಯುತ್ತಿರುವ ವಿದ್ಯೆ ನಮಗೆ ಸಮರ್ಪಕವಾಗಿಲ್ಲ. ಪ್ರಾಥಮಿಕ ಶಾಲೆಗಳಿಂದ ವಿಶ್ವವಿದ್ಯಾನಿಲಯದವರೆವಿಗೂ ಸಿಕ್ಕುವ ವಿದ್ಯೆ ನಮ್ಮ ಜೀವನಕ್ಕೆ ಅನ್ವಯಿಸಿಕೊಂಡಿಲ್ಲ. ಹೆಣ್ಣುಮಕ್ಕಳಲ್ಲಿ ಶಾಲೆಯಲ್ಲಿ ಓದಿದವರೆಲ್ಲರೂ ದ್ರವ್ಯಾರ್ಜನೆಗಾಗಿ ದುಡಿಯುವವರು ಕಡಮೆ. ಆದ್ದರಿಂದ ಪುರುಷರಿಗೆ ಕೊಡುವ ವಿದ್ಯೆಯನ್ನೇ ನಮಗೂ ಕೊಡುವುದರಿಂದ ಹೆಚ್ಚಾದ ಪ್ರಯೋಜನ ಕಂಡುಬರುವುದಿಲ್ಲ. ಸ್ತ್ರೀಗೇ ಆವಶ್ಯಕವಾದ ಗೃಹಕೃತ್ಯ, ಮಾತೃಕರ್ತವ್ಯ ಮುಂತಾದ ಕರ್ತವ್ಯಗಳನ್ನು ಬೋಧಿಸಬೇಕು. ಅವಳಿಗೆ ನೈಸರ್ಗಿಕವಾಗಿರ ತಕ್ಕ ಕಲೆಗಳಲ್ಲಿ ಅಭಿರುಚಿಯನ್ನು ಹೆಚ್ಚಿಸಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಡಬೇಕು. ಈಗಿನ ವಿದ್ಯೆಯ ಪರಿಣಾಮವಾಗಿ ನವಯುವಕ ಯುವತಿಯರಲ್ಲಿ ಪಾಶ್ಚಾತ್ಯರ ನಡವಳಿಕೆಗಳೆಲ್ಲವೂ ಅನುಕರಣೀಯವಾದುವೆಂದೂ ಮತ್ತು ನಮ್ಮ ಹಿಂದಿನ ಪದ್ಧತಿಗಳೆಲ್ಲವೂ ನಿಕೃಷ್ಟವಾದುವೆಂದೂ ಭಾವನೆಗಳು ಮೂಡುತ್ತಿವೆ. ಇದು ಶೋಚನೀಯವಾದ ಸಂಗತಿ. ನಾಗರಿಕರಾದ, ಸುಸಂಸ್ಕೃತರಾದ ನಾವು ಅಂಧಾನುಕರಣವನ್ನು ಬಿಟ್ಟು, ಪಾಶ್ಚಾತ್ಯರಲ್ಲೂ ಪೌರ್ವಾತ್ಯರಲ್ಲೂ ಇರುವ ಉತ್ತಮವಾದ ಪದ್ಧತಿಗಳನ್ನು ಅನುಸರಿಸಬೇಕು.

ಕೊನೆಯದಾಗಿ ಮಹಿಳೆಯರು ತಮ್ಮ ಗೃಹರಾಜ್ಯದ ಮಂತ್ರಿಗಳಂತಿರಬೇಕು. ತಮ್ಮ ಕರ್ತವ್ಯವನ್ನು ತಾವರಿತು ಸಂಸಾರ ರಥವನ್ನು ಮುಂದೆ ಸಾಗಿಸಲು ತಮ್ಮ ಅಂತಃಕರಣಪೂರ್ವಕವಾಗಿ ಪುರುಷರಿಗೆ ಸಹಾಯವನ್ನು ನೀಡಬೇಕು" ಎಂದು ಹೇಳಿ ಶ್ರೀಮತಿಯವರು ಎಲ್ಲರನ್ನೂ ಪುನಃ ವಂದಿಸಿ ತಮ್ಮ ಭಾಷಣವನ್ನು ಮುಗಿಸಿದರು.

ಶ್ರೀಮತಿ ಎಚ್. ರತ್ನಮ್ಮನವರಿಂದ ವಂದನಾಸಮರ್ಪಣೆಯಾದ ನಂತರ ಸಭೆ ಮುಕ್ತಾಯವಾಯಿತು.



ಮಹಿಳೆಯರ ಗೋಷ್ಠಿಯಲ್ಲಿ 'ನಮ್ಮ ಸಮಾಜ' ಎಂಬ ನಾಟಕದ ಒಂದು ದೃಶ್ಯದಲ್ಲಿ ಅಭಿನಯಿಸಿದ ಬಾಲಕಿಯರು

ಸಾಯಂಕಾಲ ೫–೩೦ರಿಂದ ೭ರ ವರೆಗೆ ಆಸ್ಥಾನ ವಿದ್ವಾನ್ ದೇವೇಂದ್ರಪ್ಪನವರ ಅಮೋಘವಾದ ಸಂಗೀತ ನಡೆಯಿತು. ಅನಂತರ ನಡೆದ ಶ್ರೀಮಾನ್ ಶ್ರೀನಿವಾಸ ಕುಲಕರ್ಣಿ ಮತ್ತು ಶ್ರೀಮತಿ ರೋಹಿಣಿ ದೇವಿಯರ 'ಕಾಮದೇವ' 'ರಾಧಾಕೃಷ್ಣ' 'ಭಸ್ಮಾಸುರ ಮೋಹಿನಿ' ಮುಂತಾದ ನರ್ತನಗಳೂ, ಶ್ರೀಮತಿ ಚಂದ್ರಭಾಗಾ ದೇವಿಯವರ "ಅರುಣೋದಯ" ಎಂಬ ನೃತ್ಯವೂ ಸಭಿಕರನ್ನು ಅತ್ಯಂತ ಆನಂದ ಪಡಿಸಿದುವು.

ರಾತ್ರಿ ೧೦ ಗಂಟೆಗೆ ಬೆಂಗಳೂರು ಯುನೈಟೆಡ್ ಆರ್ಟ್ಸ್ ಕ್ಲಬ್ಬಿನವರಿಂದ 'ಶಾಮಣ್ಣನ ಸಾಹಸ' ಮತ್ತು 'ಸಂಶಯ' ಎಂಬ ನಾಟಕಗಳೂ, ಪ್ರೊ|| ವಿ. ಜಿ. ಕುಲಕರ್ಣಿ ಮತ್ತು ಅವರ ಮಿತ್ರರಿಂದ 'ಗದಾಯುದ್ಧ' ನಾಟಕದ ದೃಶ್ಯ ಭಾಗಗಳೂ ಪ್ರದರ್ಶಿಸಲ್ಪಟ್ಟವು. ನಾಟಕ ಪ್ರದರ್ಶನ ಮುಗಿಯುವ ಹೊತ್ತಿಗೆ ಬೆಳಗಿನ ಜಾವ ೧ ಗಂಟೆಯಾಯಿತು.

ಕಡೆಯಲ್ಲಿ 'ಶ್ರೀ'ಯವರು 'ಬೆಳ್ಳಿಯ ಹಬ್ಬ' ಮುಗಿಯಿತು ಎಂದು ಸಂತೋಷದಿಂದ ಸಾರಿ, ಹಬ್ಬವನ್ನು ಸುಸೂತ್ರವಾಗಿ ಆಗ ಮಾಡಿಕೊಟ್ಟ ಎಲ್ಲರನ್ನೂ ಕೃತಜ್ಞತೆಯಿಂದ ಸ್ಮರಿಸಿ, ಎರಡು ದಿನಗಳಿಂದ ಬಿಡುವಿಲ್ಲದ ಕಾರ್ಯಕ್ರಮಗಳಿಗೆ ದಯಮಾಡಿಸಿ ಪ್ರೋತ್ಸಾಹವಿತ್ತುದಕ್ಕಾಗಿ ಸಭಾಸದರನ್ನು ಅಭಿನಂದಿಸಿದರು.

---

## ಸವಿನೆನಪು — ಸಾರಾಂಶ

### ೧. ಸ್ಥಾಪನೆ

ಕನ್ನಡ ನಾಡಿನ ಕೇಂದ್ರವೆನಿಸಿರುವ ಮೈಸೂರು ಸಂಸ್ಥಾನದಲ್ಲಿ ಹತ್ತನೆಯ ಶ್ರೀಮಚ್ಚಾಮರಾಜೇಂದ್ರ ಒಡೆಯರವರು ಸಿಂಹಾಸನಾರೂಢರಾದ ಕಾಲದಿಂದ ಕನ್ನಡದ ಪ್ರಪಂಚದಲ್ಲಿ ಒಂದು ಹೊಸ ಯುಗ ಆರಂಭವಾಯಿತೆಂದು ಹೇಳಬಹುದು. ಕಿಟ್ಟೆಲ್ ಮತ್ತು ರೈಸ್ ಸಾಹೇಬರುಗಳು **ಶಬ್ದಮಣಿದರ್ಪಣ, ನಾಗವರ್ಮ ಛಂದಸ್ಸು, ಪಂಪರಾಮಾಯಣ, ಪಂಪಭಾರತ** ಮುಂತಾದ ಗ್ರಂಥಗಳನ್ನು ಬೆಳಕಿಗೆ ತಂದರು. ಎಸ್. ಜಿ. ನರಸಿಂಹಾಚಾರ್ಯರೂ, ಎಂ. ಎ. ರಾಮಾನುಜಯ್ಯಂಗಾರ್ಯರೂ **ಕಾವ್ಯಮಂಜರಿ** ಮತ್ತು **ಕಾವ್ಯಕಲಾನಿಧಿ** ಮಾಸಪತ್ರಿಕೆಗಳ ಮೂಲಕ ಕನ್ನಡ ಸಾಹಿತ್ಯದ ಉದ್ಗ್ರಂಥಗಳನ್ನು ಪ್ರಸಿದ್ಧಪಡಿಸಿದರು. ಆಸ್ಥಾನಕವಿಗಳು ಸಂಸ್ಕೃತದ ಉತ್ಕೃಷ್ಟ ಗ್ರಂಥಗಳನ್ನು ಕನ್ನಡ ಭಾಷೆಗೆ ಪರಿವರ್ತಿಸಿದರು. ಇದೇ ಕಾಲದಲ್ಲಿ ರೈಸ್ ಸಾಹೇಬರವರ **ಮೈಸೂರು ಗೆಜಟಿಯರ್** ಮತ್ತು ಶಾಸನ ಸಂಪುಟಗಳು, ಡಾ|| ಫ್ಲೀಟ್ ಅವರ **ಕನ್ನಡ ರಾಜವಂಶಗಳ ಚರಿತ್ರೆ** ಮತ್ತು ಅವರು ಪ್ರಕಟಿಸಿದ ಶಾಸನಗಳು, ಪ್ರಾಕ್ತನವಿಮರ್ಶವಿಚಕ್ಷಣ ಮಹಾಮಹೋಪಾಧ್ಯಾಯ ರಾವ್ ಬಹದ್ದೂರ್ ರಾ. ನರಸಿಂಹಾಚಾರ್ಯರ **ಕವಿಚರಿತೆ** ಮೊದಲಾದುವು ಕನ್ನಡ ನಾಡಿನ ಪ್ರಾಚೀನ ವೈಭವವನ್ನೂ ಸಾರಸ್ವತ ಸಂಪತ್ತನ್ನೂ ಕನ್ನಡಿಗರಿಗೆ ತೋರಿಸಿಕೊಟ್ಟವು. ಉತ್ತರ ಕರ್ನಾಟಕದಲ್ಲಿ ಶಾಂತಕವಿಗಳು, ಚುರುಮುರಿ ಮೊದಲಾದ ಮಹನೀಯರೂ ಮಂಗಳೂರು ಪ್ರಾಂತದಲ್ಲಿ ಪಂಜೆ ಮಂಗೇಶ ರಾಯರೂ ತಮ್ಮ ಕೃತಿಗಳಿಂದ ಜಾಗೃತಿಯನ್ನುಂಟುಮಾಡಿದರು. ಹೀಗೆ ಕನ್ನಡ ನಾಡಿನಲ್ಲೆಲ್ಲ ಒಂದು ಚೈತನ್ಯವೂ, ಸ್ಫೂರ್ತಿಯೂ ಉಂಟಾದವು. ಮೊದಲು ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಹುಟ್ಟಿತು. ಶ್ರೀ ಚಾಮರಾಜೇಂದ್ರ ಒಡೆಯರವರು ಸಂಘದ ಕಟ್ಟಡಕ್ಕೆ ಉದಾರವಾಗಿ ಧನಸಹಾಯ ಮಾಡಿ, ಅದರ ಅಸ್ತಿಭಾರವನ್ನು ಹಾಕಿ ನಾಡುನುಡಿಗಳ ಏಕೀಕರಣಕ್ಕೆ ಕನ್ನಡಿಗರ ಹೃದಯ ಹೇಗೆ ಮಿಡಿಯುತ್ತಿರುವುದೆಂಬುದನ್ನು ಪ್ರತ್ಯಕ್ಷವಾಗಿ ತೋರಿದರು.

೧೯೧೫ನೆಯ ಮೇ ತಿಂಗಳು ೩ನೆಯ ತಾರೀಖಿನ ದಿನ ಮೊದಲನೆಯ ಸಮ್ಮೇಳನ ನಡೆದು, ಪರಿಷತ್ತು ಸ್ಥಾಪಿತವಾಯಿತು. ಕರ್ನಾಟಕದ ಎಲ್ಲಾ ಪ್ರಾಂತಗಳಿಂದ ಹಲವರು ಪ್ರಮುಖರೂ ವಿದ್ವಾಂಸರೂ ಸಮ್ಮೇಳನಕ್ಕೆ ದಯಮಾಡಿಸಿದ್ದರು. ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯ, ಎಂ.ಎ., ಎಂ.ಎಲ್. ಅವರು ಅಗ್ರಾಸನಾಧಿಪತಿಗಳಾಗಿದ್ದರು.

ಮೈಸೂರು ರಾಜಮನೆತನದವರ ಪ್ರೋತ್ಸಾಹದಿಂದಲೂ, ಕನ್ನಡ ನಾಡಿನ ಪ್ರಮುಖರ ಸಹಾಯ ಸಹಕಾರಗಳಿಂದಲೂ ಸ್ಥಾಪಿತವಾದ ಪರಿಷತ್ತು ಈ ಇಪ್ಪತ್ತೈದು ವರ್ಷಗಳ ಕಾಲದಲ್ಲಿ ಯಥಾಶಕ್ತಿ ನಾನಾಮುಖವಾದ ಭಾಷಾಸೇವೆಯನ್ನು ಮಾಡುತ್ತಿರುವುದು. ಮೇಲ್ಕಂಡ ಅವಧಿಯಲ್ಲಿ ಪರಿಷತ್ತಿನ ನಾನಾ ಶಾಖೆಗಳಲ್ಲಿ ನಡೆದಿರುವ ಅಭಿವೃದ್ಧಿಯ ಸಾರಾಂಶ:—

### ೨. ಪರಿಷತ್ತಿನ ಕಟ್ಟಡ ಮತ್ತು ಅಚ್ಚುಕೂಟ

ಪರಿಷತ್ತು ಸ್ಥಾಪಿತವಾದಮೇಲೆ ಹತ್ತಾರು ವರ್ಷಗಳವರೆಗೆ ಬಾಡಿಗೆಯ ಕಟ್ಟಡಗಳಲ್ಲಿಯೇ ಕಾಲಕ್ಷೇಪಮಾಡಬೇಕಾಗಿತ್ತು. ಹಿಂದೆ ಉಪಾಧ್ಯಕ್ಷರಾಗಿದ್ದ ಕರ್ಪೂರ ಶ್ರೀನಿವಾಸರಾಯರ ಪ್ರಯತ್ನಗಳ ಫಲವಾಗಿ ಶ್ರೀಮನ್ಮಹಾರಾಜರವರು ಐದು ಸಾವಿರ ರೂಪಾಯಿಗಳನ್ನೂ, ಶ್ರೀಮದ್ಯುವರಾಜರವರು ಮೂರು ಸಾವಿರ ರೂಪಾಯಿಗಳನ್ನೂ, ಆಗ ಅಧ್ಯಕ್ಷರಾಗಿದ್ದ ಸರ್ ಎಂ. ಕಾಂತರಾಜ ಅರಸಿನವರು ಐದು ಸಾವಿರ ರೂಪಾಯಿಗಳನ್ನೂ ದಯಪಾಲಿಸಿದರು. ಪರಿಷತ್ತು ಸ್ವಂತ ಹಣದಿಂದ ೩ ಸಾವಿರ ರೂಪಾಯಿಗಳನ್ನು ಒದಗಿಸಿತು. ಮೈಸೂರು ಸರ್ಕಾರದವರು ೧೬ ಸಾವಿರ ರೂಪಾಯಿಗಳನ್ನು ದಯಪಾಲಿಸಿದರು. ಕಟ್ಟಡದ ಶಿಲಾಸ್ಥಾಪನೆಯನ್ನು ಕರ್ಪೂರ ಶ್ರೀನಿವಾಸರಾಯರು ನೆರವೇರಿಸಿದರು. ಈ ಕಟ್ಟಡಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರವೆಂದು ಹೆಸರಿಡಲು ಶ್ರೀಮನ್ಮಹಾರಾಜರವರು ಕೃಪೆಮಾಡಿ ಅನುಮತಿ ಕೊಟ್ಟರು.

ಈಚೆಗೆ ಪರಿಷತ್ತಿನ ಅಚ್ಚುಕೂಟಕ್ಕಾಗಿ ಸುಮಾರು ೧,೨೦೦ ರೂಪಾಯಿ ಖರ್ಚಿನಿಂದ ಬಡಾವಣೆಯನ್ನು ಮಾಡಲಾಗಿದೆ. ಅಚ್ಚುಕೂಟದ ಸಲಕರಣೆಗಳಿಗಾಗಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ೫೦೦೦ ರೂಪಾಯಿಗಳನ್ನು ದಾನವಾಗಿ ಕೊಟ್ಟರು. ಶ್ರೀ|| ಬಿ. ಪುಟ್ಟಯ್ಯನವರು ದಯವಿಟ್ಟು ಅಚ್ಚುಕೂಟದ ಮೇಲ್ವಿಚಾರಣೆಯನ್ನು ನಡಸಿಕೊಂಡುಬರುತ್ತಿರುವರು. ಕಳೆದ ಆರು ತಿಂಗಳಿಂದ ಪರಿಷತ್ತಿನ ಪ್ರಕಟನೆಗಳೆಲ್ಲವೂ ನಮ್ಮ ಅಚ್ಚುಕೂಟದಲ್ಲಿಯೇ ಅಚ್ಚಾಗುತ್ತಿವೆ. ಇದಕ್ಕೆ ಮುಂಚೆ ಬೆಂಗಳೂರು ಪ್ರೆಸ್ಸಿನವರು ನಮ್ಮ ಮುದ್ರಣಕಾರ್ಯಗಳನ್ನು ಸಮರ್ಪಕವಾಗಿ ನಡಸಿಕೊಟ್ಟದ್ದಕ್ಕೆ ಅವರಿಗೆ ನಮ್ಮ ಕೃತಜ್ಞತೆಗಳು. ಪರಿಷತ್ತಿನ ಕಾರ್ಯಕಲಾಪಗಳಿಗೆ ಇನ್ನೂ ಹೆಚ್ಚು ಸ್ಥಳಾವಕಾಶ ಅಗತ್ಯವಾಗಿ ಬೇಕಾಗಿದೆ. ಇದಕ್ಕಾಗಿ ಜ್ಞಾನದಾನಿಗಳಾದ ಮಹಾಜನರಿಂದ ಧನಸಹಾಯವಾಗಬೇಕಾಗಿದೆ.

### ೩. ಪರಿಷತ್ತಿನ ಅಂಗರಚನೆ

ಪರಿಷತ್ತು ಕೇವಲ ವಿದ್ವಾಂಸರ ಸಂಸ್ಥೆಯಾಗಿರದೆ ಸಾಮಾನ್ಯ ಜನರೂ ಆಸಕ್ತಿ ವಹಿಸಬಹುದಾದ ಸಾರ್ವಜನಿಕ ಸಂಸ್ಥೆಯಾಗಿರಬೇಕೆಂಬ ಉದ್ದೇಶದಿಂದ ಅದರ ನಿಯಮಗಳಲ್ಲಿ ಕಾಲಾನುಗುಣವಾಗಿ ಬದಲಾವಣೆಗಳಾಗಿವೆ. ಈ ಸಂಸ್ಥೆಗಿದ್ದ ಹೆಸರನ್ನು **ಕನ್ನಡ ಸಾಹಿತ್ಯ ಪರಿಷತ್ತು** ಎಂದು ಬದಲಾಯಿಸಲಾಯಿತು. ಪರಿಷತ್ತಿನ **ಅಧ್ಯಕ್ಷರನ್ನು** ಆಜೀವಾಧ್ಯಕ್ಷರನ್ನಾಗಿ ಚುನಾಯಿಸುವಂತಾಗಿದೆ. ಪರಿಷತ್ತಿನ **ಉಪಾಧ್ಯಕ್ಷರನ್ನು** ವರ್ಷಕ್ಕೊಮ್ಮೆ ಚುನಾಯಿಸಲಾಗುತ್ತಿದೆ. **ಕಾರ್ಯದರ್ಶಿಗಳ** ಸ್ಥಾನಕ್ಕೂ **ಕೋಶಾಧಿಕಾರಿಗಳ** ಸ್ಥಾನಕ್ಕೂ ವಾರ್ಷಿಕಾಧಿವೇಶನದ ಸದಸ್ಯರು ಮೊದಲು ಇಬ್ಬರನ್ನು ಆಯ್ಕೆ ಮಾಡುತ್ತಾರೆ. ಆಮೇಲೆ ಉಪಾಧ್ಯಕ್ಷರೇ ಆಯಾ ಸ್ಥಾನಗಳಿಗೆ ನೇಮಕಮಾಡಿಕೊಳ್ಳುತ್ತಾರೆ. ಈಗ ಕಾರ್ಯಸಮಿತಿಯಲ್ಲಿ ೧೬ ಮಂದಿ ಸದಸ್ಯರಿದ್ದಾರೆ. ಮೂರು ತಿಂಗಳಿಗೊಮ್ಮೆ ಕಾರ್ಯಸಮಿತಿ ಸಭೆ ಸೇರುತ್ತದೆ. ಮೈಸೂರು ಕರ್ನಾಟಕ, ಉತ್ತರ

ಕರ್ನಾಟಕ, ಹೈದರಾಬಾದು ಕರ್ನಾಟಕ, ಮಂಗಳೂರು–ಕೊಡಗು ಕರ್ನಾಟಕ ಎಂದುನಾಲ್ಕು ಪ್ರಾಂತಗಳಾಗಿ ವಿಂಗಡಿಸಲಾಗಿದೆ.

ವಾರ್ಷಿಕಾಧಿವೇಶನದಲ್ಲಿ ಆಯಾ **ಪ್ರಾಂತಸಮಿತಿ**ಯ ಸದಸ್ಯರನ್ನು ಆಯಾ ಪ್ರಾಂತದವರು ಚುನಾಯಿಸುತ್ತಾರೆ. ಬಳಿಕ ಪ್ರಾಂತ ಸಮಿತಿಯ ಅಧಿಕಾರಿಗಳನ್ನು ಸಮಿತಿಯ ಸದಸ್ಯರು ತಮ್ಮ ಮುಖ್ಯ ಕಾರ್ಯಸ್ಥಾನದಲ್ಲಿ ಸಭೆ ಸೇರಿ ಚುನಾಯಿಸಿಕೊಳ್ಳುವರು.

ಕನ್ನಡ ನಾಡಿನಲ್ಲಿ ನೂರಾರು ಕಡೆ 'ಕರ್ನಾಟಕ ಸಂಘ', 'ಕನ್ನಡಿಗರ ಕೂಟ', 'ಕನ್ನಡಿಗರ ಬಳಗ' ಮುಂತಾದ ಸಂಸ್ಥೆಗಳು ಸ್ಥಾಪಿತವಾಗಿ ನಾಡು ನುಡಿಗಳ ಸೇವೆಮಾಡುತ್ತಿವೆ. ಈ ಸಂಘಗಳನ್ನೆಲ್ಲ ಪರಿಷತ್ತಿಗೆ **ಅಂಗಸಂಸ್ಥೆಗಳ**ನ್ನಾಗಿ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿ ತಕ್ಕ ನಿಯಮಾವಳಿಯನ್ನು ರಚನೆಮಾಡಿತು. ೧೯೩೪ರಲ್ಲಿ ಈ 'ಅಂಗಸಂಸ್ಥೆಗಳ ಸಮ್ಮೇಳನ ಮೊದಲನೆಯ ಬಾರಿ ನಡೆಯಿತು. ಅಲ್ಲಿಂದೀಚೆಗೆ ಪ್ರತಿವರ್ಷವೂ ಈ ಸಮ್ಮೇಳನ ನಡೆದುಕೊಂಡು ಬರುತ್ತಿದೆ. ಪರಿಷತ್ತಿಗೆ ಸೇರಿರುವ ಅಂಗಸಂಸ್ಥೆಗಳ ಸಂಖ್ಯೆ ಈಗ ೪೯.

### ೪. ಸದಸ್ಯಸಂಪತ್ತು

ಈಗ ಪರಿಷತ್ತಿನ ಸದಸ್ಯರ ಸಂಖ್ಯೆ ೬೩೬ ಆಗಿದೆ. ಇದರ ಸದಸ್ಯರ ತರಗತಿಗಳು ಆರು: **ಉದ್ಧಾರಕರು, ಪ್ರದಾತೃಗಳು, ಆಶ್ರಯದಾತರು, ಸಹಾಯಕರು, ಆಜೀವ ಸದಸ್ಯರು, ಸಾಧಾರಣ ಸದಸ್ಯರು:** ಸಾಧಾರಣ ಸದಸ್ಯರು ವರುಷವೊಂದಕ್ಕೆ ಮೂರು ರೂಪಾಯಿ ಚಂದಾ ಕೊಡಬೇಕು. ಪರಿಷತ್ಪತ್ರಿಕೆ ಬೇಕಾದವರು ಇನ್ನು ಮೂರು ರೂಪಾಯಿಗಳನ್ನು ಕೊಡಬೇಕು.

**ಅಭಿಮಾನಿಗಳು:** ಈಚೆಗೆ ಅಭಿಮಾನಿಗಳ ವರ್ಗವೊಂದನ್ನು ಏರ್ಪಡಿಸಲಾಗಿದೆ. ಇವರಿಗೆ ವಾರ್ಷಿಕ ಚಂದಾ ೮ ಆಣೆಗಳು.

### ೫. ಕಾರ್ಯಕಲಾಪಗಳು

**ಸಮ್ಮೇಳನಗಳನ್ನು ನಡಸುವುದು.—** ಪ್ರತಿವರ್ಷವೂ ಹಿಂದೆ ಮೇ ತಿಂಗಳಲ್ಲಿ ನಡೆಯುತ್ತಿತ್ತು. ೧೯೩೨ರಿಂದ ಡಿಸೆಂಬರ್ ತಿಂಗಳಿನಲ್ಲಿ ನಡೆಯುತ್ತಿದೆ. ಸಮ್ಮೇಳನದ ಜೊತೆಗೆ ಕನ್ನಡ ಲೇಖಕರ ಸಮ್ಮೇಳನವೂ, ನಾಟ್ಯ ನಾಟಕ ಸಮ್ಮೇಳನವೂ, ಇತಿಹಾಸ ಸಮ್ಮೇಳನವೂ ನಡೆಯುತ್ತಿವೆ. ಈಚೆಗೆ ಸಮ್ಮೇಳನಾಧ್ಯಕ್ಷರು ಕಾರ್ಯಸಮಿತಿಯ ಸದಸ್ಯರಾಗಿರುವರು. ಇವರು ನಾಡಿನಲ್ಲಿ ಪ್ರವಾಸಮಾಡಿ ಪರಿಷತ್ತಿನ ಧ್ಯೇಯಗಳನ್ನು ಜನಸಾಮಾನ್ಯರಲ್ಲಿ ಹರಡಿ ನಾಡು ನುಡಿಗಳ ಏಕೀಕರಣಕ್ಕೆ ನೆರವಾಗುತ್ತಿದ್ದಾರೆ.

**ಭಾಷೆಯ ಮತ್ತು ಸಾಹಿತ್ಯದ ಸೇವೆ.—** ಈ ಕ್ಷೇತ್ರದಲ್ಲಿ ಪರಿಷತ್ತು ಮಾಡಿರುವ ಸೇವೆಯನ್ನು ಕೆಳಗೆ ವಿವರಿಸಿದೆ—

(ಅ) ಪರಿಷತ್ಪತ್ರಿಕೆ: ಈ ತ್ರೈಮಾಸಿಕ ಪತ್ರಿಕೆ ಪರಿಷತ್ತಿನ ಪ್ರಕಟನಾಂಗವಾಗಿ ಮೊದಲಿಂದಲೂ ಇದೆ. ಈ ಪತ್ರಿಕೆಯ ವಾರ್ಷಿಕ ಚಂದಾ ೪ ರೂಪಾಯಿಗಳು. ಪರಿಷತ್ಪತ್ರಿಕೆಯನ್ನು ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ ಭರತಖಂಡದಲ್ಲಿ ಹಲವು ಕಡೆಗಳಿಗೂ ಭರತಖಂಡದ ಹೊರಗೆ ಲಂಡನ್, ಬೋಸ್ಟನ್, ಬರ್ಲಿನ್, ರೋಮ್ ಪಟ್ಟಣಗಳಿಗೂ ವಿನಿಮಯವಾಗಿ ಕಳಿಸಿಕೊಡಲಾಗುತ್ತಿದೆ.

(ಆ) ಕನ್ನಡ ನುಡಿ: ೧೯೩೮ರಲ್ಲಿ ವಿಜಯದಶಮಿಯ ದಿನದಿಂದ ಈ ವಾರ ಪತ್ರಿಕೆಯನ್ನು ಹೊರಡಿಸಲಾಯಿತು. ಇದರ ವಾರ್ಷಿಕ ಚಂದಾ ರೂ. ೧–೮–೦. ಪರಿಷತ್ತಿನ ಸದಸ್ಯರಿಗೆ ಇದನ್ನು ಉಚಿತವಾಗಿ ಕೊಡಲಾಗುತ್ತಿದೆ.

(ಇ) ಪರಿಷತ್ತು ಪ್ರಕಟಿಸಿರುವ ಗ್ರಂಥಗಳು: ಜ್ಯೋತಿರ್ವಿನೋದಿನೀ, ಕನ್ನಡ ನಾಡಿನ ಚರಿತ್ರೆ, ಚಾವುಂಡರಾಯಪುರಾಣದ ಮೊದಲನೆಯ ಭಾಗ, ವೊಡ್ಡಾರಾಧಣಂ (ಈಗ ಪ್ರಕಟವಾಗುತ್ತಿದೆ), ಪಂಪರಾಮಾಯಣ, ಪಂಪಭಾರತ, ಕುಸುಮಾವಳಿ ಕಾವ್ಯಭಾಗ, ಶಬ್ದಮಣಿದರ್ಪಣ, ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ ಅರ್ಧಭಾಗ, ಸೋಮೇಶ್ವರ ಶತಕ, ಜೇಮ್ಸ್ ಏಬ್ರಾಮ್ ಗಾರ್‌ಫೀಲ್ಡನ ಚರಿತ್ರೆ, ೧೯೧೯ರಿಂದ ೧೯೩೭ರವರೆಗೆ ಮೈಸೂರು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಪದ್ಯಪಠ್ಯ ಪುಸ್ತಕಗಳು, ಕನ್ನಡದ ಬಾವುಟ.

ಕನ್ನಡ ಭಾಷಾ ಏಕೀಕರಣಕ್ಕಾಗಿ ಕನ್ನಡ ಪಠ್ಯಪುಸ್ತಕಗಳು ಒಂದೇ ಆಗಿರುವಂತೆ ಏರ್ಪಾಡು ಮಾಡಬೇಕೆಂಬ ಉದ್ದೇಶದಿಂದ ನಾನಾ ಪ್ರಾಂತಗಳ ಕನ್ನಡದ ಪ್ರತಿನಿಧಿಗಳ ಒಂದು ಸಮಿತಿಯನ್ನು ಏರ್ಪಡಿಸಿದೆ.

(ಉ) ಪರಿಷತ್ತು ಕೊಟ್ಟಿರುವ ಪ್ರೋತ್ಸಾಹ: ಪರಿಷತ್ತು ಕೆಲವು ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನ ಕೊಟ್ಟಿದೆ. ಕೆಲವು ಗ್ರಂಥಕರ್ತರುಗಳಿಗೆ ದ್ರವ್ಯಸಹಾಯಮಾಡಿದೆ.

(ಊ) ವಸಂತ ಸಾಹಿತ್ಯೋತ್ಸವ: ೧೯೩೪ರಲ್ಲಿ ವಸಂತ ಸಾಹಿತ್ಯೋತ್ಸವವನ್ನು ಮೊದಲು ಏರ್ಪಾಟುಮಾಡಿತು. ಇದನ್ನು ಬೆಂಗಳೂರಿನಲ್ಲಿ ಮಾತ್ರ ಪ್ರಯೋಗರೀತಿಯಲ್ಲಿ ಆರಂಭಿಸಲಾಯಿತು. ಈ ಏರ್ಪಾಟನ್ನು ಕರ್ನಾಟಕದ ಬೇರೆ ಬೇರೆ ಊರುಗಳಲ್ಲಿಯೂ ನಡಸಿಕೊಡಬೇಕೆಂದು ಕನ್ನಡಿಗರಿಂದ ಒತ್ತಾಯ ಬರಲಾರಂಭಿಸಿದುದರಿಂದ ಈಗ ಬೆಂಗಳೂರಿನಲ್ಲಿ ಎರಡು ದಿನಗಳು ಮಾತ್ರ ವಸಂತ ಸಾಹಿತ್ಯೋತ್ಸವ ನಡೆಯುತ್ತಿದೆ. ಆನವಟ್ಟಿ, ಗದಗು, ಕೊಳ್ಳೇಗಾಲ, ಹುಬ್ಬಳ್ಳಿ, ಹಾನಗಲ್ಲು, ಚೆನ್ನರಾಯಪಟ್ಟಣ, ಶಿರಾಳಕೊಪ್ಪ ಮೊದಲಾದ ಸ್ಥಳಗಳಲ್ಲಿ ಈ ಉತ್ಸವ ನಡೆದಿದೆ.

(ಋ) ಗಮಕ ಶಿಕ್ಷಣ: ಕಾವ್ಯವಾಚನವನ್ನು ಜನರಲ್ಲಿ ಪ್ರಚಾರ ಮಾಡುವುದಕ್ಕೋಸ್ಕರ ಪ್ರತಿವರ್ಷವೂ ಗಮಕ ತರಗತಿಗಳನ್ನು ಏರ್ಪಾಡು ಮಾಡಲಾಗಿದೆ. ಶ್ರೀಗಳಾದ ಎಸ್. ಬಿಂದೂರಾಯರು, ಕೃಷ್ಣಗಿರಿ ಕೃಷ್ಣರಾಯರು, ಕೆ. ಜಿ. ಸಂಪತ್ಕುಮಾರಾಚಾರ್ಯ, ಬಿ.ಎ., ಬಿ.ಟಿ. ಅವರು ಶಿಕ್ಷಕರಾಗಿ ಈ ಕಾರ್ಯದಲ್ಲಿ ಸಹಾಯಮಾಡುತ್ತಿದ್ದಾರೆ.

(ೠ) ಸಣ್ಣಕತೆಗಳ ಸ್ಪರ್ಧೆ: ಭಾಸ್ಕರರಾವ್ ಎಂಬ ಕ್ರೈಸ್ತ ತರುಣ ಕನ್ನಡಿಗರು ಜರ್ಮನಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು ಅಲ್ಲಿ ಅಕಾಲಮರಣಕ್ಕೆ ತುತ್ತಾದರು. ಅವರ ತಾಯಿಯವರಾದ ಶ್ರೀಮತಿ ಎ. ಶೇಷಮ್ಮನವರು ಒಂದು ಸಾವಿರ ರೂಪಾಯಿಗಳ ಮೂಲಧನವನ್ನು ಪರಿಷತ್ತಿಗೆ ದಾನಮಾಡಿದ್ದಾರೆ. ಅದರ ಬಡ್ಡಿಯಿಂದ ಅವರ ಮಗನ ಹೆಸರಿನಲ್ಲಿ ಸ್ಪರ್ಧೆಯನ್ನು ಏರ್ಪಡಿಸಿದೆ.

(ಎ) ವ್ಯಾಸಂಗಗೋಷ್ಠಿ: ಕನ್ನಡ ಸಾಹಿತ್ಯದ ಮತ್ತು ಇತರ ಸಾಹಿತ್ಯಗಳ ಉದ್ಗ್ರಂಥಗಳನ್ನು ಜನಸಾಮಾನ್ಯರಲ್ಲಿ ಪ್ರಚಾರಕ್ಕೆ ತರಬೇಕೆಂದು ವ್ಯಾಸಂಗ ಗೋಷ್ಠಿಯೊಂದನ್ನು ಏರ್ಪಡಿಸಲಾಗಿದೆ.

(ಏ) ಸಾಹಿತ್ಯ ಪರೀಕ್ಷೆಗಳು: ಪರಿಷತ್ತನ್ನು ಜನಸಾಮಾನ್ಯದ ವಿದ್ಯಾಪೀಠವನ್ನಾಗಿ ಮಾಡಬೇಕೆಂದು ಈಚೆಗೆ ಮೂರು ತರಗತಿಗಳ ಸಾಹಿತ್ಯ ಪರೀಕ್ಷೆಗಳನ್ನು ಏರ್ಪಡಿಸಿದೆ.

ಮೊದಲನೆಯ ಪರೀಕ್ಷೆ.— ತೇರ್ಗಡೆಯಾದವರಿಗೆ "ಕನ್ನಡ ಅಣುಗ (ಅಣುಗಿ)" ಎಂಬ ಪ್ರಶಸ್ತಿಯನ್ನು ಕೊಡಲಾಗುವುದು.

ಎರಡನೆಯ ಪರೀಕ್ಷೆ.— ತೇರ್ಗಡೆಯಾದವರಿಗೆ "ಕನ್ನಡ ಕಾವ (ಕಾವೆ)" ಎಂಬ ಪ್ರಶಸ್ತಿಯನ್ನು ಕೊಡಲಾಗುವುದು.

ಮೂರನೆಯ (ಪ್ರೌಢ) ಪರೀಕ್ಷೆ.— ತೇರ್ಗಡೆಯಾದವರಿಗೆ "ಕನ್ನಡ ಜಾಣ (ಜಾಣೆ)" ಎಂಬ ಪ್ರಶಸ್ತಿಯನ್ನು ಕೊಡಲಾಗುವುದು.

(ಐ) ಕಂಠಪಾಠ ಸ್ಪರ್ಧೆ ಮತ್ತು ಅಭಿನಯ ಸ್ಪರ್ಧೆ: ಕಂಠಪಾಠವನ್ನೂ ಅಭಿನಯ ಸಾಮರ್ಥ್ಯವನ್ನೂ ಪ್ರೋತ್ಸಾಹಿಸಬೇಕೆಂದು ಈ ಸ್ಪರ್ಧೆಗಳನ್ನು ಏರ್ಪಡಿಸಿದೆ.

(ಒ) ಮಹಿಳೆಯರ ಶಾಖೆ: ಈ ಶಾಖೆಯವರು ಸ್ತ್ರೀಗೋಷ್ಠಿಗಳನ್ನು ಸೇರಿಸಿ ಉಪನ್ಯಾಸಾದಿಗಳನ್ನು ಏರ್ಪಡಿಸುವರು;

(ಓ) ಕನ್ನಡ ಗ್ರಂಥ ಪ್ರದರ್ಶನ: ಇದನ್ನು ೧೯೩೪ರಲ್ಲಿ ಮೊದಲನೆಯ ಬಾರಿ ಏರ್ಪಾಡು ಮಾಡಲಾಯಿತು. ಅಲ್ಲಿಂದೀಚೆಗೆ ಪ್ರತಿ ವರ್ಷವೂ ವಸಂತ ಸಾಹಿತ್ಯೋತ್ಸವದ ಸಮಯದಲ್ಲಿ

ಚಿಕ್ಕದಾಗಿ ಆಯಾ ವರ್ಷದಲ್ಲಿ ಪ್ರಕಟವಾಗಿರುವ ಗ್ರಂಥಗಳ ಪ್ರದರ್ಶನವನ್ನು ಏರ್ಪಡಿಸಲಾಗುತ್ತಿದೆ.

**ಪುಸ್ತಕ ಭಂಡಾರ ಮತ್ತು ಧರ್ಮವಾಚನಾಲಯ.—** ಪರಿಷತ್ತಿನಲ್ಲಿ ಒಂದು ಪುಸ್ತಕಭಂಡಾರವಿದೆ. ಅದರಲ್ಲಿ ಸುಮಾರು ೮,೦೦೦ ಪುಸ್ತಕಗಳಿವೆ. ಧರ್ಮವಾಚನಾಲಯವನ್ನು ನಡಸಿಕೊಂಡು ಬರುತ್ತಿದೆ.

**ಕನ್ನಡ ನಾಡುನುಡಿಗಳಿಗೆ ಧಕ್ಕೆ ಬರದಂತೆ ಕಾಯುವುದು.—** ಕನ್ನಡ ಭಾಷಾ ಪ್ರಾಶಸ್ತ್ಯಕ್ಕೂ, ಕನ್ನಡ ನಾಡಿನ ಎಲ್ಲೆಗೂ ಎಲ್ಲೆಲ್ಲಿ ಧಕ್ಕೆ ಬರುವ ಸೂಚನೆಗಳು ಕಂಡುಬಂದವೋ ಅಲ್ಲೆಲ್ಲ ತಕ್ಕ ಮುಂಜಾಗ್ರತೆಯ ಕ್ರಮಗಳನ್ನು ಕೈಕೊಂಡು ಆ ಹೊರಗಿನ ಆಘಾತಗಳನ್ನು ಪರಿಷತ್ತು ತಡೆಗಟ್ಟಿದೆ.

**೬. ಹಣಕಾಸಿನ ಸ್ಥಿತಿ**

ಪರಿಷತ್ತು ಮಾಡಿರುವ ಮಾಡಬೇಕಾಗಿರುವ ಎಲ್ಲ ಪ್ರಯತ್ನಗಳಿಗೂ ದ್ರವ್ಯಾನುಕೂಲತೆ ಇರಬೇಕು. ಮೈಸೂರು ಸರ್ಕಾರದವರು ಪರಿಷತ್ತು ಸ್ಥಾಪಿತವಾದಂದಿನಿಂದ ಉದಾರಮನಸ್ಸಿನಿಂದ ಸಹಾಯಮಾಡುತ್ತಾ ಬಂದಿದ್ದಾರೆ. ಸೊಂಡೂರಿನ ಪ್ರಭುಗಳಾದ ಶ್ರೀಮಂತ ಯಶವಂತರಾವ ಘೋರ್ಪಡೆಯವರೂ, ಮೊಂಟಮುರಿಯ ಶ್ರೀಮಂತ ಬಸವಪ್ರಭು ಲಖಮನಗೌಡಾ ಸರದೇಸಾಯಿ ಅವರೂ ದಯವಿಟ್ಟು ಈಚೆಗೆ ಪರಿಷತ್ತಿನ ಪೋಷಕರಾಗಿರುವರು.

**೭. ಕಡೆ ಮಾತು**

ಈ ಇಪ್ಪತ್ತೈದು ವರ್ಷಗಳಲ್ಲಿ ಪರಿಷತ್ತು ಹಲವು ಕಷ್ಟಗಳನ್ನನುಭವಿಸಿದರೂ ನಾಡಿನಲ್ಲಿ ನವಚೈತನ್ಯವನ್ನುಂಟುಮಾಡಿದೆ. ಇನ್ನೂ ದುಡಿಯಲು ಸಿದ್ಧವಾಗಿದೆ. ಇದಕ್ಕೆಲ್ಲಾ ಧನಸಹಾಯ ಬೇಕು, ಜನಸಹಾಯ ಬೇಕು. ತಮ್ಮ ತನು ಮನ ಧನಗಳನ್ನೂ ಕನ್ನಡ ಪ್ರೇಮವನ್ನೂ ಪರಿಷತ್ತಿಗೆ ಧಾರೆಯೆರೆದು ಇಷ್ಟು ಚೈತನ್ಯವನ್ನು ಅದಕ್ಕೆ ತುಂಬಿರುವ ಎಲ್ಲಾ ಹಿರಿಯ ಕಿರಿಯರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು.

---

## ಬೇರೆ ಕಡೆಗಳಲ್ಲಿ ಬೆಳ್ಳಿಯ ಹಬ್ಬ

ಈ ಕೆಳಗೆ ಕಂಡ ಸ್ಥಳಗಳಲ್ಲಿ ಪರಿಷತ್ತಿನ ಪ್ರಾರ್ಥನೆಯಂತೆ ಜೂನ್ ೩೦ನೆಯ ತಾರೀಖು ಭಾನುವಾರ "ಬೆಳ್ಳಿಯ ಹಬ್ಬ"ದ ಸಂಬಂಧವಾಗಿ ಸಭೆಗಳು ನಡೆದುವು.

**ಧಾರವಾಡ:** ಕರ್ನಾಟಕ ವಿದ್ಯಾವರ್ಧಕ ಸಂಘದ ನೇತೃತ್ವದಲ್ಲಿ ಶ್ರೀಮಾನ್ ರಾ. ಶಿ. ನರಗುಂದಕರ ಅವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ನಡೆದು ಕೆಳಗೆ ಕಂಡಂತೆ ಒಂದು ಗೊತ್ತುವಳಿ ಅಂಗೀಕಾರವಾಯಿತು—

"ಕನ್ನಡ ಸಾಹಿತ್ಯ ಸಂಸ್ಕೃತಿಗಳ ಉನ್ನತಿಗಾಗಿಯೂ ಕನ್ನಡ ಸಾಂಸ್ಕೃತಿಕ ಏಕೀಕರಣಕ್ಕಾಗಿಯೂ ಅಖಂಡ ೨೫ ವರ್ಷಗಳಿಂದ ಕಾರ್ಯ ಮಾಡುತ್ತಲಿರುವ ಕನ್ನಡ ಸಾಹಿತ್ಯ ಪರಿಷತ್ತು ಅಖಿಲ ಕರ್ನಾಟಕದಿಂದ ಬೆಳ್ಳಿಯ ಹಬ್ಬಮಾಡಿಸಿಕೊಳ್ಳುತ್ತಿರುವದು ಅತ್ಯಾನಂದದ ಸಂಗತಿಯಾಗಿದೆ. ಪರಿಷತ್ತು ಬಹುಕಾಲ ಬದುಕಿ ಬಾಳಿ ಕನ್ನಡ ಸಂಸ್ಕೃತಿಯ ಬಾವುಟವನ್ನು ಎಲ್ಲೆಲ್ಲಿಯೂ ಮೆರೆಯಿಸುವಂತಾಗಲೆಂದು ಈ ಸಭೆಯ ಹಾರೈಕೆಯಾಗಿದೆ.

**ಹುಬ್ಬಳ್ಳಿ:** ಶ್ರೀ|| ಗಾನವಿನೋದಿ ಕಸ್ತೂರಿ ಮಹಾವೀರರ ಅಧ್ಯಕ್ಷತೆಯಲ್ಲಿ ಶ್ರೀ|| ಮಹಾವೀರ ಜೈನ ತರುಣ ಸೇವಾ ಸಂಘದ ಆಶ್ರಯದಲ್ಲಿ ಒಂದು ಸಾರ್ವಜನಿಕ ಸಭೆ ಸೇರಿದ್ದಿತು. ಅಧ್ಯಕ್ಷರು ಕನ್ನಡ ಸಾಹಿತ್ಯ, ಕನ್ನಡ ಕಲೆ, ಕನ್ನಡ ವೀರತರುಣರ ಕರ್ತವ್ಯ ಎಂಬ ವಿಷಯವನ್ನು ಕುರಿತು ಭಾಷಣ ಮಾಡಿ ಪರಿಷತ್ತಿನ ಬೆಳ್ಳಿಯ ಹಬ್ಬ ಯಶಸ್ವಿಯಾಗಿ ನಡೆಯಲೆಂದು ಹಾರೈಸಿದರು.

ಅದೇ ದಿನ ಸಾಯಂಕಾಲ ಹುಬ್ಬಳ್ಳಿಯ ನಗರಭವನದಲ್ಲಿ ನೆರೆದ ಸಾರ್ವಜನಿಕ ಸಭೆಯಲ್ಲಿ ಶ್ರೀ|| ಬೆಂಗೇರಿ ಪ್ರಹ್ಲಾದರಾಯರು ಧ್ವನಿವರ್ಧಕ ಯಂತ್ರದ (ಮೈಕ್ರೊಫೋನ್) ಮೂಲಕ ಅಂದು ಬೆಳಗ್ಗೆ ಬೆಂಗಳೂರಿನಲ್ಲಿ ಶ್ರೀಮನ್ಮಹಾರಾಜರವರು ಹಬ್ಬದ ಸಮಾರಂಭೋತ್ಸವದಲ್ಲಿ ಅಪ್ಪಣೆ ಕೊಡಿಸಿದ ಭಾಷಣವನ್ನು ಓದಿ ಹೇಳಿ ಬೆಳ್ಳಿಯ ಹಬ್ಬದ ವಿಷಯವಾಗಿ ಮಾತನಾಡಿದರು.

**ಚಿತ್ರದುರ್ಗ:** ಚಿತ್ರದುರ್ಗ ಕರ್ನಾಟಕ ಸಂಘದ ನೇತೃತ್ವದಲ್ಲಿ ನಡೆದ ಬೆಳ್ಳಿಯ ಹಬ್ಬದ ಸಭೆಯ ವರದಿಯನ್ನು ಸಂಘದ ಕಾರ್ಯದರ್ಶಿಗಳು ಶ್ರೀಗಳಾದ ಟಿ. ಎಸ್. ರಾಮಸ್ವಾಮಯ್ಯ ಮತ್ತು ಹೊಯ್ಸಳರು ಕಳಿಸಿರುವರು.

ಪರಿಷತ್ತಿನ ಬೆಳ್ಳಿಯ ಹಬ್ಬದ ನಿಮಿತ್ತವಾಗಿ ೧-೭-೪೦ರಲ್ಲಿ ಚಿತ್ರದುರ್ಗದಲ್ಲಿ ಕನ್ನಡಿಗರ ಸಭೆ ಸೇರಿತ್ತು. ಶ್ರೀ|| ವೆಂಕಟಶಾಮಣ್ಣನವರು ಅಧ್ಯಕ್ಷರಾಗಿದ್ದರು. ಸ್ಥಳೀಯ ಹೈಸ್ಕೂಲು ಹಾಲಿನಲ್ಲಿ ಸಭೆ ಸೇರಿತ್ತು. ಹೊಸದಾಗಿ ಪ್ರಾರಂಭವಾಗಿರುವ ರೇಡಿಯೋ ಪಾರ್ಕಿನ ಆಕರ್ಷಣೆ ಇದ್ದರೂ ಬಿಟ್ಟು ಸಂಘದ ಅಭಿಮಾನಿಗಳೂ, ವಿದ್ಯಾರ್ಥಿಗಳೂ ನೆರೆದಿದ್ದರು.

'ಸಂಯುಕ್ತ ಕರ್ನಾಟಕ'ದಲ್ಲಿ ಪ್ರಕಟವಾಗಿದ್ದ ಶ್ರೀ ಪ್ರಭುಗಳವರ 'ಕನ್ನಡ ಕುಸುಮವು ಅರಳಲಿ' ಎಂಬ ಭಾವಗರ್ಭಿತ ಭಾಷಣವನ್ನು ಹೊಯ್ಸಳರಿಂದ ಓದಿಸಿ ಕೇಳಿದರು. "ಉದಯವಾಗಲಿ ಚಲುವ ಕನ್ನಡ ನಾಡು" ಎಂಬ ಗೀತೆಯ ಪ್ರಾರ್ಥನೆಯ ನಂತರ ಪ್ರಭುಗಳ ವಾಣಿಯನ್ನು ಕೇಳಿ ಚಿತ್ರದುರ್ಗದವರು ಮೈದುಂಬಿ ಆನಂದಪಟ್ಟರು. ಊರ್ವಶೀ ಶಾಪವನ್ನು ಹೂವಿನಂತೆ ಧರಿಸಿದ ಅರ್ಜುನನ ಕಥೆಯನ್ನೊಳಗೊಂಡ ಭಾಗವನ್ನು ಶ್ರೀ|| ಗಮಕ ಕಲಾಚಾರ್ಯ ಬಿಂದೂರಾಯರು ಓದಿದರು. ಶ್ರೀ|| ಕಾಶೀನಾಥಶಾಸ್ತ್ರಿಗಳು ಸಂಸ್ಕೃತಕ್ಕೂ ಕನ್ನಡಕ್ಕೂ ಇರುವ ಸಂಬಂಧದ ವಿಚಾರವಾಗಿಯೂ, ಶ್ರೀ|| ಪರಿಮಿ ಸುಬ್ಬಯ್ಯನವರು ಕನ್ನಡ ಪರಿಷತ್ತಿನ ಕಾರ್ಯಕಲಾಪಗಳ ವಿಚಾರವಾಗಿಯೂ, ಶ್ರೀ|| ಹುಲ್ಲೂರು ಶ್ರೀನಿವಾಸ ಜೋಯಿಸರು ಕನ್ನಡ ಪರಾಕ್ರಮಿಗಳಾದ ಹೈದರ ಮತ್ತು ಮದಕರಿನಾಯ್ಕರ ವಿಚಾರವಾಗಿಯೂ ಮತ್ತು ಶ್ರೀ|| ಬಿ. ಕೆ. ರಾಮಚಂದ್ರರಾಯರು ಪರಿಷತ್ತಿಗೆ ಅಭಿನಂದನೆಗಳನ್ನು ಚಿತ್ರದುರ್ಗದ ಪರವಾಗಿ ಕಳಿಸಬೇಕೆಂಬ ವಿಚಾರದಲ್ಲಿಯೂ ಭಾಷಣ ಮಾಡಿದ ಬಳಿಕ ಶ್ರೀ|| ವೆಂಕಟಶಾಮಣ್ಣನವರು ಕನ್ನಡಕ್ಕೆ ಪ್ರಭು ವಾಣಿಯ ಮಾರ್ಗದಲ್ಲಿ ಆಗಬೇಕಾದ ಸೇವೆಯ ವಿಚಾರವಾಗಿ ಭಾಷಣ ಮಾಡಿದಮೇಲೆ ಕನ್ನಡ ನಾಡಿನ ಭೂಪಟಕ್ಕೆ ಆರತಿ ಮಾಡಲಾಯಿತು. ಪುಷ್ಪವಿನಿಯೋಗವಾದ ನಂತರ 'ಕಾಯೌ ಶ್ರೀಗೌರಿ' ಗೀತೆಯಿಂದ ಸಭೆಯ ಕಾರ್ಯಕಲಾಪಗಳು ಮುಕ್ತಾಯವಾದವು.

"ಮೇಲ್ಕಂಡ ಸಂಘ ಕನ್ನಡ ಸಾಹಿತ್ಯ ಪರಿಷತ್ತು ಮಾದರಿಯಾಗಿ ಏರ್ಪಡಿಸಿದ ಬೆಳ್ಳಿಯ ಹಬ್ಬಕ್ಕೂ ಮತ್ತು ಇದುವರಿವಿಗೂ ಮೇಲ್ಪಂಕ್ತಿಯಾಗಿ ಮಾಡಿರುವ ಸೇವೆಗೂ ಚಿತ್ರದುರ್ಗದ ಪರವಾಗಿ ಅಭಿನಂದಿಸುವುದಲ್ಲದೆ ಉತ್ತರೋತ್ತರವಾಗಿ ಮುಂದೆ ಮುಂದೆಲ್ಲ ಸೇವೆಗಳು ಸಂದು, ಪರಿಷತ್ತು ಸ್ವರ್ಣ ಮತ್ತು ರತ್ನ ಮಹೋತ್ಸವಗಳನ್ನು ನೆರವೇರಿಸುವಂತಾಗಲೆಂದು ಈ ಚಿತ್ರದುರ್ಗದ ಕರ್ನಾಟಕ ಸಂಘ ಕೋರುತ್ತದೆ."

---

## ಸಣ್ಣಕತೆಗಳ ಸ್ಪರ್ಧೆಯ ಫಲಿತಾಂಶ

ಭಾಸ್ಕರರಾಯರ ಸ್ಪರ್ಧೆಯಲ್ಲಿ ಶ್ರೀಮತಿ ಸುಬ್ಬಮ್ಮನವರ 'ಮಿಂಚು' ಎಂಬ ಕತೆಗೆ ೨೦ ರೂ. ಬೆಲೆಯುಳ್ಳ ಬೆಳ್ಳಿಯ ಬಟ್ಟಲನ್ನು ಬಹುಮಾನ ಕೊಡಲಾಗಿದೆ.

---

## ಗಮಕ ಪರೀಕ್ಷೆಯ ಫಲಿತಾಂಶ

ಜೂನ್ ೨೫ ಮತ್ತು ೨೭ನೆಯ ತಾರೀಖುಗಳಲ್ಲಿ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆದ ಗಮಕ ಪರೀಕ್ಷೆಯಲ್ಲಿ ಕೆಳಗೆ ಕಂಡ ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ.

### ಮೊದಲನೆಯ ತರಗತಿ

ಶ್ರೀಗಳಾದ—

(೧) ಎಚ್. ಎಸ್. ವಿಶ್ವನಾಥ
(೨) ಟಿ. ಆರ್. ಜಯರಾವ್
(೩) ಟಿ. ವಿ. ಜಯಸಿಂಹ
(೪) ಡಿ. ಎನ್. ರಾಮು
(೫) ಎಚ್. ಎಸ್. ಸೂರ್ಯನಾರಾಯಣ

ಶ್ರೀಮತಿಗಳಾದ—

(೧) ರಂಗಲಕ್ಷ್ಮಮ್ಮ
(೨) ಲಲಿತಾಂಬ
(೩) ಪದ್ಮಕುಮಾರಿ

### ಎರಡನೆಯ ತರಗತಿ

ಶ್ರೀಗಳಾದ—

(೧) ಕೆ. ಎಸ್. ಲಕ್ಷ್ಮೀನಾರಾಯಣರಾವ್
(೨) ಎಂ. ರಾಮಕೃಷ್ಣರಾವ್
(೩) ಬಿ. ಎಲ್. ಶ್ರೀಕಂಠಶಾಸ್ತ್ರಿ
(೪) ಡಿ. ಆರ್. ರಾಮಯ್ಯ
(೫) ಡಿ. ಎಂ. ಲಕ್ಷ್ಮೀನಾರಣಯ್ಯ

ಶ್ರೀಮತಿಗಳಾದ—

(೧) ರಾಜಮಣಿಬಾಯಿ
(೨) ಎ. ಎಸ್. ಗೋದಾವರಿ
(೩) ಟಿ. ಮಣಿಯಮ್ಮ
(೪) ಎ. ಆರ್. ಸುಶೀಲ

---

## ಸಾಹಿತ್ಯ ಪರೀಕ್ಷೆಗಳ ಫಲಿತಾಂಶ *

ಕಳೆದ ಜೂನ್ ತಿಂಗಳು ೧೪, ೧೫ ಮತ್ತು ೧೬ನೆಯ ತಾರೀಖುಗಳಲ್ಲಿ ಬೆಂಗಳೂರು, ಮೈಸೂರು, ಧಾರವಾಡ, ಬಿಜಾಪುರ ಮತ್ತು ಕೊಟ್ಟೂರು ಕೇಂದ್ರಗಳಲ್ಲಿ ನಡೆದ ಸಾಹಿತ್ಯ ಪರೀಕ್ಷೆಗಳಲ್ಲಿ ಈ ಕೆಳಗಿನ ವಿದ್ಯಾರ್ಥಿಗಳು ತೇರ್ಗಡೆ ಹೊಂದಿರುತ್ತಾರೆ.

### ಮೂರನೆಯ ಪರೀಕ್ಷೆ

| ಕ್ರಮ ಸಂಖ್ಯೆ | ಹೆಸರು | ಕೇಂದ್ರ | ತರಗತಿ |
|---|---|---|---|
| | ಶ್ರೀಗಳಾದ— | | |
| ೩೩ | ಆರ್. ಎಸ್. ರಾಮರಾವ್ | ಮೈಸೂರು | ೧ |
| ೭ | ಎಂ. ಎ. ನಾರಾಯಣಾಚಾರ್ಯ | ಬೆಂಗಳೂರು | ೧ |
| ೧ | ಯಲ್ಲಪ್ಪ ಶಿವಪ್ಪ ಗುಬ್ಬಣ್ಣನವರ | ಧಾರವಾಡ | ೨ |
| ೩ | ಜಿ. ಶ್ರೀನಿವಾಸಭಟ್ಟ | ,, | ,, |
| ೪ | ಅಲಬೂರು ನಂಜಪ್ಪ | ಕೊಟ್ಟೂರು | ,, |
| ೫ | ಎಂ. ಎಸ್. ಗಂಗಾಧರನ್ | ಬೆಂಗಳೂರು | ,, |
| ೬ | ಎಚ್. ಎಸ್. ದೊರೆಸ್ವಾಮಿ ಅಯ್ಯರ್ | ,, | ,, |
| ೮ | ಎನ್. ನಾಗರಾಜರಾವ್ | ,, | ,, |
| ೯ | ಜಿ. ನರಸಪ್ಪ | ,, | ,, |
| ೧೦ | ಶ್ರೀಮತಿ ಎಸ್. ರುಕ್ಮಿಣಿಯಮ್ಮ | ,, | ,, |
| ೧೧ | ,, ಟಿ. ಮಣಿಯಮ್ಮ | ,, | ,, |
| ೧೩ | ಬಿ. ವೆಂಕಟರಾವ್ | ,, | ,, |
| ೧೪ | ಎನ್. ವಿಜಯೀಂದ್ರರಾವ್ | ,, | ,, |
| ೧೫ | ಕೆ. ಆರ್. ವೇದವ್ಯಾಸರಾವ್ | ,, | ,, |
| ೧೬ | ಬಿ. ಶ್ರೀ. ಪಾಂಡುರಂಗರಾವ್ | ,, | ,, |
| ೧೭ | ಬಿ. ಕಮಲನಾಭ ಮೊದಲಿಯಾರ್ | ,, | ,, |
| ೧೮ | ಯಂ. ಆದಿನಾರಾಯಣಶರ್ಮ | ,, | ,, |
| ೧೯ | ಕೆ. ಎನ್. ದೊರೆಸ್ವಾಮಿ | ,, | ,, |
| ೨೦ | ಟಿ. ಕೃಷ್ಣಯ್ಯಂಗಾರ್ | ,, | ,, |
| ೨೧ | ಬಿ. ಆರ್. ನೀಲಕಂಠಪ್ಪ | ,, | ,, |
| ೨೨ | ಕೆ. ಶ್ರೀನಿವಾಸರಾವ್ | ,, | ,, |
| ೨೩ | ಕೃಷ್ಣ ಕಾಶೀನಾಥ ಕುಲಕರ್ಣಿ | ಬಿಜಾಪುರ | ,, |
| ೨೪ | ಗುರುಭೀಮ ಗುಮಾಸ್ತೆ | ,, | ,, |
| ೨೫ | ಗುರುನಾಥ ಬಾಪೂರಾವ್ ನಾಡಗೌಡ | ,, | ,, |
| ೨೭ | ಎಂ. ಜಿ. ಕುಲಕರ್ಣಿ | ,, | ,, |
| ೩೧ | ಜಿ. ಕೆ. ಬಿಳಿಗಿರಿ ರಂಗಾಚಾರ್ | ಮೈಸೂರು | ,, |
| ೩೪ | ಜಿ. ಎ. ಗರುಡಾಚಾರ್ಯ | ,, | ,, |
| ೩೫ | ಜಿ. ಎಸ್. ಸಂಪತ್ತೈಂಗಾರ್ | ,, | ,, |
| ೩೬ | ವೈ. ಕೆ. ಶ್ರೀನಿವಾಸಯ್ಯಂಗಾರ್ | ,, | ,, |

### ಎರಡನೆಯ ಪರೀಕ್ಷೆ

| ಕ್ರಮ ಸಂಖ್ಯೆ | ಹೆಸರು | ಕೇಂದ್ರ | ತರಗತಿ |
|---|---|---|---|
| | ಶ್ರೀಗಳಾದ— | | |
| ೮ | ಕೆ. ವಿ. ಕುಂದಣಗಾರ | ಧಾರವಾಡ | ೧ |
| ೪ | ಶ್ರೀಮತಿ ಕಾವೇರಿತಟ್ಟಿ | ,, | ೧ |
| ೬ | ಸಂ. ಶ್ರೀ. ಹರಪನಹಳ್ಳಿ | ,, | ೧ |
| ೧೩ | ಕೃಷ್ಣಾಜಿ ಜೀವಾಜಿ ಕುಲಕರ್ಣಿ | ,, | ೧ |
| ೧೫ | ಮಧ್ವ ಶ್ರೀನಿವಾಸ ಕುಲಕರ್ಣಿ | ,, | ೧ |
| ೩೩ | ಶಂಕರನಗೌಡ ಮಲ್ಕನಗೌಡ ಪಾಟೀಲ | ಬಿಜಾಪುರ | ೧ |
| ೪೩ | ಶ್ರೀಮತಿ ರಾ. ರುಕ್ಮಿಣಿಯಮ್ಮ | ಮೈಸೂರು | ೧ |
| ೨೯ | ,, ಇಂದಿರಾ ಜಹಗೀರದಾರ | ಬಿಜಾಪುರ | ೧ |
| ೧ | ,, ಶಾಂತಾದೇವಿ ಮಾಳವಾಡ | ಧಾರವಾಡ | ೧ |
| ೧೦ | ಬಾಬು ಮಲ್ಹಾರುಜೋಷಿ | ,, | ೧ |
| ೧೨ | ಹನುಮಂತ ನಾರಾಯಣಶೆಟ್ಟಿ | ,, | ೧ |
| ೩೪ | ರಾಘವೇಂದ್ರ ಶಾಮರಾವ್ ಗಜೇಂದ್ರಗಡ | ಬಿಜಾಪುರ | ೧ |
| ೧೧ | ವೆಂಕಟೇಶ ಕಾರಡಗಿ | ಧಾರವಾಡ | ೧ |
| ೪೯ | ಶ್ರೀಮತಿ ರಾಜಲಕ್ಷ್ಮಮ್ಮ | ಮೈಸೂರು | ೧ |
| ೨ | ,, ಸುಂದರಾ ಭೀಮರಾವ್ ಕುರ್ತಕೋಟಿ | ಧಾರವಾಡ | ೨ |
| ೩ | ,, ಗೌರಾ ಸಿದ್ದರಾಮಯ್ಯ ಪಾಟೀಲ | ,, | ,, |
| ೫ | ದೇವವ್ರತ ಆಲ್ಫ್ರೆಡ್ ಸಾಲೋಮನ್ | ,, | ,, |
| ೭ | ಅ. ನ. ರಾಯಚೂರ | ,, | ,, |
| ೧೮ | ಅಜಿತ ಭೂಪಾಲರಾವ್ ಬಾಗಿ | ,, | ,, |
| ೨೦ | ಎಚ್. ಎ. ಬಸಪ್ಪ | ಕೊಟ್ಟೂರು | ,, |
| ೨೩ | ಎಚ್. ಎಂ. ಮುಪ್ಪಿನಯ್ಯ | ,, | ,, |
| ೨೪ | ಜಿ. ಎಂ. ಸಿದ್ಧರಾಮಯ್ಯ | ,, | ,, |
| ೨೫ | ಕೊಟ್ರಸಿದ್ದಿ ಕೊಟ್ರಬಸವಯ್ಯ | ,, | ,, |
| ೨೬ | ತೆಂಗಿನಮಠದ ಗುರುಬಸವಯ್ಯ | ,, | ,, |
| ೨೮ | ರಂಗನಾಥರಾವ್ ಕುಲಕರ್ಣಿ | ಬಿಜಾಪುರ | ,, |
| ೩೦ | ಶೇಷಗಿರಿ ಹಣಮಂತ ನರಗುಂದ | ,, | ,, |
| ೩೧ | ಹಣಮಂತ ಕೃಷ್ಣಾಜಿ ಹುದ್ದಾರ | ,, | ,, |
| ೩೨ | ಮಲ್ಲಯ್ಯ ಪರೂತಯ್ಯ ಹಿರೇಮಠ | ,, | ,, |
| ೩೫ | ಬಿಂದಾಚಾರ್ಯ ನಾರಾಯಣಾಚಾರ್ಯ | ,, | ,, |
| ೩೬ | ಬಂಡು ಕೃಷ್ಣಾಚಾರ್ಯ ಮಠ | ,, | ,, |
| ೩೭ | ಪ್ರಹ್ಲಾದ ಹಣಮಂತರಾವ್ ಬೇವೂರ | ,, | ,, |
| ೩೮ | ರಾಮಚಂದ್ರ ಶ್ರೀನಿವಾಸ ದೇಸಾಯಿ | ,, | ,, |
| ೩೯ | ವ್ಹಿ. ಬಿ. ಕೋಡಿ ಕೊಪ್ಪಮಠ | ,, | ,, |
| ೪೨ | ಶ್ರೀಮತಿ ಎಂ. ಎನ್. ಲಕ್ಷ್ಮೀನರಸಮ್ಮ | ಮೈಸೂರು | ,, |
| ೪೫ | ,, ಎಂ. ಎಸ್. ಪಾರ್ವತಮ್ಮ | ,, | ,, |
| ೪೬ | ,, ಜಿ. ಎಸ್. ನಾಗರತ್ನಮ್ಮ | ,, | ,, |
| ೪೭ | ,, ಪದ್ಮಮ್ಮ | ,, | ,, |
| ೪೮ | ,, ವಿ. ಆರ್. ಮಂಜುಳಾಬಾಯಿ | ,, | ,, |
| ೫೦ | ವೆಂಕಟೇಶ ಭೀಮರಾವ್ ದೇಶಪಾಂಡೆ | ಧಾರವಾಡ | ,, |

---

* ಮೊದಲನೆಯ ಪರೀಕ್ಷೆಯ ಫಲಿತಾಂಶ ಮುಂದಿನ ವಾರ ಪ್ರಕಟವಾಗುವುದು

# ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ಕುರಿತು ಪತ್ರಿಕಾಭಿಪ್ರಾಯ

## ಚೆಲುವ ಕನ್ನಡ ನಾಡು ಉದಯಿಸಿತು!

ಪರಿಷತ್ತಿನ ರಜತ ಮಹೋತ್ಸವ ವೈಭವದಿಂದ ನೆರವೇರಿತು. ಕನ್ನಡ ನಾಡಿನ ಮೂಲೆ ಮೂಲೆಗಳಿಂದಲೂ ಭಕ್ತರು ಬೆಂಗಳೂರಿಗೆ ಬಂದಿದ್ದಾರೆ. ಇಷ್ಟ ಮಿತ್ರರೊಡನೆ ಸೇರಿ ಸಂತೋಷದಲ್ಲಿ ತಲ್ಲೀನರಾಗಿದ್ದಾರೆ. ಎಲ್ಲರೂ ಕನ್ನಡಮ್ಮನ ಶ್ರೇಯೋಭಿಲಾಷಿಗಳಾಗಿ ಆಕೆಯ ಪಾದವಡಿಯಲ್ಲಿ ಸೇವಾ ಧುರೀಣರಾಗಿದ್ದಾರೆ. ಕೊಡಗು, ದಕ್ಷಿಣ ಕನ್ನಡ, ನಿಜಾಂ ಕರ್ನಾಟಕ, ಉತ್ತರ ಕರ್ನಾಟಕ ಮುಂತಾದ ಕನ್ನಡ ನಾಡಿನ ನಾನಾ ಭಾಗಗಳಿಂದ ಪ್ರತಿನಿಧಿಗಳು ಬಂದಿದ್ದಾರೆ. ಇವರೆಲ್ಲರ ಹರ್ಷಾತಿಶಯಗಳನ್ನು ಬರೆದು ವರ್ಣಿಸುವುದಕ್ಕಿಂತ, ಕಣ್ಣಾರ ನೋಡುವುದೇ ಲೇಸು. ನಿನ್ನೆ ಮಧ್ಯಾಹ್ನ ಶ್ರೀ|| ಸಜ್ಜನರಾಯರ ಛತ್ರದಲ್ಲಿ ಕನ್ನಡಮ್ಮನ ಮಕ್ಕಳೆಲ್ಲರೂ ಭೋಜನಕ್ಕೆ ಕುಳಿತಿರುವಾಗ, 'ಚೆಲುವ ಕನ್ನಡ ನಾಡು ಉದಯಿಸಿತು' ಎಂಬ ಭಾವನೆಯುಂಟಾಗುತ್ತಿತ್ತು. ಕನ್ನಡ ಪರಿಷತ್ತಿಗೆ ೨೫ ವರ್ಷವಾದ್ದರಿಂದಲೇ ಅಲ್ಲವೇ ಎಲ್ಲರಿಗೂ ಈ ಪಂಕ್ತಿ ಗೌರವ ಸಿಕ್ಕಿತು. ಇದೇ ರೀತಿ ಸ್ವರ್ಣೋತ್ಸವವನ್ನೂ ನಿರೀಕ್ಷಿಸೋಣ.

—ತಾಯಿನಾಡು.

## ಮುಂದಿನ ರಾಷ್ಟ್ರ ಮಹೋತ್ಸವದ ನಾಂದಿ ಈ ಹಬ್ಬ

ಕರ್ಣಾಟಕ ಸಾಹಿತ್ಯ ಪರಿಷತ್ತು ನಮ್ಮ ರಾಷ್ಟ್ರದ ಹೊಸ ಜೀವನ ಭಾಗ್ಯದ ಸಂಕೇತ. ಅದು ಹುಟ್ಟಿದ ಮೇಲೆ ಮೈಸೂರು ವಿಶ್ವವಿದ್ಯಾನಿಲಯ ನಿರ್ಮಾಣವಾಯಿತು. ಕವಿಗಳು, ನಾಟಕ ಕರ್ತೃಗಳು, ಕತೆಗಾರರು, ವಿಮರ್ಶಕರು, ಗಮಕಿಗಳು, ವಾದಿಗಳು, ವಾಗ್ಮಿಗಳು, ವೈಜ್ಞಾನಿಕರು, ಕಲಾವಿದರು ಅವತಾರ ಮಾಡಲಾರಂಭಿಸಿದರು. ಕಾಲು ಶತಮಾನದೊಳಗೆ ಪ್ರತಿಭಾ ಸಮನ್ವಿತವಾದ, ನೆರೆ ನಾಡುಗಳ ತಲೆದೂಗಿಸುವಂತಹ ಸಾಹಿತ್ಯ ನಿರ್ಮಾಣವಾಗಿಹೋಯಿತು. ರಸ ಋಷಿಗಳು ಹೊಸ ರಾಷ್ಟ್ರವನ್ನು ನಿರ್ಮಿಸಿಬಿಟ್ಟರು. ಹೊಸ ರಾಷ್ಟ್ರವು ರಸ ಋಷಿಗಳ ಪಡೆಗಳನ್ನು ಸೃಷ್ಟಿಸುತ್ತಿದೆ. ನಮ್ಮ ನಾಡು ಮತ್ತೆ ಚೆಲುವನ್ನಾಳುತ್ತಿವೆ; ಶಕ್ತಿಯನ್ನಾರಾಧಿಸುತ್ತಿದೆ; ಸತ್ಯ ದೇವತೆಯನ್ನು ತನ್ನ ಹೃದಯ ಸಿಂಹಾಸನದಲ್ಲಿ ಸ್ಥಾಪಿಸಿದೆ.

ಕನ್ನಡಿಗರ ಮಹದಾಶಯ ಮತ್ತೊಂದಿದೆ. ಮೈಸೂರೊಡೆಯರ ಮನೆತನ ಕನ್ನಡ ರಾಜ್ಯ ರಮಾರಮಣರ ಮನೆತನ. "ಕರ್ಣಾಟಕ ರತ್ನ ಸಿಂಹಾಸನಾಧಿಷ್ಠಿತ"ರೆಂಬುದು ಮೈಸೂರೊಡೆಯರ ಪಿತ್ರಾರ್ಜಿತ ಬಿರುದು. ಕನ್ನಡ ನಾಡೆಲ್ಲ ಒಂದಾಗಬೇಕು. ಆ ನಾಡಿಗೆಲ್ಲ ಮೈಸೂರೊಡೆಯರು ಅರಸರಾಗಬೇಕು. ಈ ಆಶಯ ಸಾಧನೆಗಾಗಿ ನಮ್ಮ ನಾಡಿನಲ್ಲಿ ನಾನಾ ಪ್ರಯತ್ನಗಳು ಸದ್ದಿಲ್ಲದೆ ನಡೆಯುತ್ತಿವೆ. ಭಾನುವಾರದ ಮಹೋತ್ಸವ ಮುಂದಿನ ರಾಷ್ಟ್ರ ಮಹೋತ್ಸವ ದಿನದ ಮುಂಬೆಳಕೆಂದು ನಾವು ಭಾವಿಸುತ್ತೇವೆ. ಆ ಮಹೋತ್ಸವಕ್ಕೆ ಇದು ನಾಂದಿ ಎಂದು ನಾವು ಹೇಳಬಯಸುತ್ತೇವೆ.

—ವಿಶ್ವಕರ್ಣಾಟಕ.

## ಬೆಳ್ಳಿ ಹಬ್ಬದ ಫಲಶ್ರುತಿ

ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿ ಹಬ್ಬ ಕಳೆದ ರವಿವಾರ ಸೋಮವಾರ ಬೆಂಗಳೂರಿನಲ್ಲಿ ಅತ್ಯಂತ ವಿಜೃಂಭಣೆಯಿಂದ ಸಾಂಗವಾಯಿತು. ಮೈಸೂರಿನ ಶ್ರೀಮನ್ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರವರು ಈ ಉತ್ಸವದ ಉದ್ಘಾಟನ ಸಮಾರಂಭವನ್ನು ಜರುಗಿಸಿ ಕನ್ನಡ ಸಾಹಿತ್ಯ ಪರಿಷತ್ತು ಚಿರಾಯುವಾಗಿ ಕನ್ನಡ ಸಾಹಿತ್ಯ ಸಂಸ್ಕೃತಿ ಸಂವರ್ಧನೆ ಮಾಡಲೆಂದು ಹರಸಿದರು. ಈ ಮಹೋತ್ಸವಕ್ಕೆ ಕನ್ನಡ ನಾಡಿನ ಎಲ್ಲ ಭಾಗಗಳಿಂದ ಜನರು ಬಂದಿದ್ದರು. ಕನ್ನಡ ತಾಯಿಗೆ ತಮ್ಮ ಮುಡಿಪನ್ನು ಸಲ್ಲಿಸಿ ಕೃತಕೃತ್ಯರಾದೆವೆಂದು ಭಾವಿಸಿದರು.

ಕನ್ನಡ ನಾಡು ಈ ರೀತಿಯಾಗಿ ಹರಿದು ಹುರುಪುಡಿಯಾಗಿದ್ದರೂ ತಮ್ಮೀ ದುಸ್ಥಿತಿಯನ್ನು ದೂರಗೊಳಿಸಿ ಮೊದಲಿನ ಸುಸ್ಥಿತಿಗೆ ಕನ್ನಡ ನಾಡನ್ನು ಒಯ್ಯಬೇಕೆಂಬ ಹಂಬಲವು ಕನ್ನಡ ಮಕ್ಕಳಲ್ಲೀಗ ಹುಟ್ಟಿದೆ. ಕನ್ನಡ ಪ್ರಾಂತವನ್ನು ಕಟ್ಟಬೇಕೆಂಬ ಹುಮ್ಮಸ ಉಂಟಾಗಿದೆ. ಪ್ರಾಂತ ಬೇರೆ ಬೇರೆ ಆಡಳಿತಗಳಲ್ಲಿ ಹಂಚಿಹೋದದ್ದರಿಂದ ಬೇರೆ ಬೇರೆ ಆಡಳಿತಗಳಲ್ಲಿರುವ ಕನ್ನಡಿಗರ ಭಾಷೆಯಲ್ಲಿಯೂ ಬಹಳಮಟ್ಟಿಗೆ ಭೇದಭಾವ ಕಾಣುತ್ತದೆ. ಇದನ್ನೆಲ್ಲ ಒಗ್ಗೂಡಿಸಿ ನಾವೆಲ್ಲ ಆ ಕನ್ನಡ ತಾಯಿಯ ಮಕ್ಕಳು, ನಮ್ಮ ಭಾಷೆ ಒಂದೇ, ಸಾಹಿತ್ಯ ಸಂಸ್ಕೃತಿಗಳು ಒಂದೇ, ಇಡಿಯ ಕನ್ನಡ ನಾಡಿನ ಇತಿಹಾಸ ಉಜ್ವಲವಾಗಿದೆ; ಕಳೆದುಕೊಂಡ ಪ್ರಾಂತವನ್ನು ಮತ್ತೆ ಮರಳಿ ಪಡೆಯುವಾ ಎಂಬುದಾಗಿ ವೀರ ಸಂದೇಶವನ್ನು ಮನೆಮನೆ ಮುಟ್ಟಿಸುವದಕ್ಕಾಗಿಯೇ ಕನ್ನಡ ಸಾಹಿತ್ಯ ಪರಿಷತ್ತು ಕಳೆದ ೨೫ ವರ್ಷಗಳಿಂದ ಕಾರ್ಯಮಾಡುತ್ತಿದೆ. ಸಾಹಿತ್ಯ ಪರಿಷತ್ತು ಈ ೨೫ ವರ್ಷಗಳಲ್ಲಿ ಮಾಡಿದ ಕಾರ್ಯ ಅಷ್ಟಿಷ್ಟೆಂದು ಹೇಳಲು ಬರುವುದಿಲ್ಲ. ಅಂತೆಯೇ ಆ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬಕ್ಕಾಗಿ ಕನ್ನಡ ನಾಡಿನಲ್ಲಿಯ ಎಲ್ಲ ಭಾಗಗಳಿಂದ ಕಾರ್ಯಕರ್ತರು ನೆರೆದಿದ್ದರು. ಆ ಬೆಳ್ಳಿಯ ಹಬ್ಬದ ಸಂಭ್ರಮವನ್ನು ನೋಡಿದವರಿಗೆ ಕನ್ನಡ ನಾಡಿನ ಪುನರುದ್ಧಾರದ ದಿನಗಳು ಸಮೀಪಿಸಿವೆ ಎಂಬುದು ನಿಚ್ಚಳವಾಗಿ ತೋರಹತ್ತಿದೆ.

—ಸಂಯುಕ್ತ ಕರ್ನಾಟಕ.

---

# ಪರಿಷತ್ತಿನ ಸುದ್ದಿ

## ಮುಂದಿನ ಸಮ್ಮೇಳನ

೨೫ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬರುವ ಡಿಸೆಂಬರ್ ತಿಂಗಳಿನಲ್ಲಿ ಧಾರವಾಡದಲ್ಲಿ ನಡಸಬೇಕೆಂದು ಮೊನ್ನೆಯ ಕಾರ್ಯಸಮಿತಿಯ ಅಧಿವೇಶನದಲ್ಲಿ ತೀರ್ಮಾನವಾಗಿದೆ.

## ಅಭಿನಂದನ ಸಭೆ

ಶ್ರೀಮಾನ್ ಆಲೂರು ವೆಂಕಟರಾಯರ ಷಷ್ಟ್ಯಬ್ದಿಪೂರ್ತಿಯ ಮತ್ತು ಡಾ|| ಹನುಮಂತರಾವ್ ಸವಣೂರ್ ಅವರ ೬೧ನೆಯ ಹುಟ್ಟು ಹಬ್ಬದ ಸಂಬಂಧವಾಗಿ ಅವರಿಬ್ಬರನ್ನೂ ಅಭಿನಂದಿಸಲು ಜುಲೈ ೧೨ನೆಯ ತಾರೀಖು ಶುಕ್ರವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಭೆ ಸೇರುವುದು. ಮಹಾಜನರು ದಯಮಾಡಬೇಕಾಗಿ ಪ್ರಾರ್ಥನೆ.

## ಪಡಿಯಚ್ಚುಗಳ ಎರವಲು

'ಸವಿನೆನಪಿ'ಗೂ ಈ ಸಂಚಿಕೆಗೂ ಕೆಲವು ಪಡಿಯಚ್ಚುಗಳನ್ನು ಒದಗಿಸಿಕೊಟ್ಟ ಇಂಟರ್‌ಮಿಡಿಯಟ್ ಕಾಲೇಜು ಅಧಿಕಾರಿಗಳು, ತಾಯಿನಾಡು ಸಂಪಾದಕರು, ದೇಶಬಂಧು ಸಂಪಾದಕರು, ಪ್ರೊ|| ಕೆ. ವಿ. ಅಯ್ಯರ್ ಅವರು, ಮಿಥಿಕ್ ಸೊಸೈಟಿ ಕಾರ್ಯದರ್ಶಿಗಳು— ಇವರುಗಳಿಗೆ ಪರಿಷತ್ತು ಕೃತಜ್ಞವಾಗಿದೆ.

---

## ಶ್ರೀಮಾನ್ ಪುಟ್ಟಪ್ಪನವರ ಭಾಷಣ

೬-೭-೧೯೪೦ನೆಯ ಶನಿವಾರ ಸಂಜೆ ಸೆಂಟ್ರಲ್ ಕಾಲೇಜಿನ ಆಸಿಸ್ಟೆಂಟ್ ಪ್ರೊಫೆಸರ್ ಕೆ. ವಿ. ಪುಟ್ಟಪ್ಪ, ಎಂ.ಎ. ಅವರು ಮಲ್ಲೇಶ್ವರ ಕರ್ನಾಟಕ ಸಂಘದ ಪ್ರಾರಂಭ ಭಾಷಣವನ್ನು ಮಾಡಿದರು.

---

## ಬೆಳ್ಳಿಯ ಹಬ್ಬಕ್ಕೆ ದ್ರವ್ಯ ಸಹಾಯ ಮಾಡಿದವರು

### ಪಟ್ಟಿ—೩

ಈ ಕೆಳಗೆ ಕಂಡ ಮಹನೀಯರು ಕೃಪೆಮಾಡಿ ನೀಡಿರುವ ದ್ರವ್ಯ ಸಹಾಯವನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ.

೧೪-೬-೪೦ ಮತ್ತು ೨೧-೬-೪೦ರ 'ಕನ್ನಡ ನುಡಿ'ಯಲ್ಲಿ ಪ್ರಕಟವಾಗಿರುವ ಒಟ್ಟು ಮೊತ್ತ .... ರೂ. ೧,೦೦೨-೮-೦

### ೩೦೦ ರೂಪಾಯಿ

ಮೈಸೂರು ಶ್ರೀಮನ್ಮಹಾರಾಜರವರ ಸರಕಾರದವರು

೩೦೦-೦-೦

### ೧೦೦ ರೂಪಾಯಿ

ಮುಂಬಯಿ

ಶ್ರೀ॥ ಆರ್. ಎ. ಜಹಗೀರದಾರರು

೧೦೦-೦-೦

### ೫೧ ರೂಪಾಯಿ

ಮುಂಬಯಿ

ಶ್ರೀ॥ ಕೆ. ಎಚ್. ಕಬ್ಬೂರ ಅವರು

೫೧-೦-೦

### ೫೦ ರೂಪಾಯಿ

ಬೆಂಗಳೂರು

ಲಕ್ಕೂರ್ ಅಂಡ್ ಕೋ

ಶಿರಾಳಿ

ಶ್ರೀ ಶ್ರೀ ಆನಂದಾಶ್ರಮ ಸ್ವಾಮಿಗಳವರು

ಬೆಳಗಾಂವಿ

೨೮ನೆಯ ಸಮ್ಮೇಳನದ ಸ್ವಾಗತಸಮಿತಿಯವರು

೧೫೦-೦-೦

### ೨೫ ರೂಪಾಯಿ

ಬೆಂಗಳೂರು

ಧರ್ಮಪ್ರಕಾಶ ಧರ್ಮಾತ್ಮ ಶ್ರೀ॥ ಎಸ್. ಸಜ್ಜನರಾಯರು

ಶಿವಮೊಗ್ಗ

ಕರ್ನಾಟಕ ಸಂಘ

೫೦-೦-೦

### ೧೫ ರೂಪಾಯಿ

ಬೆಂಗಳೂರು

ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ

ಚಿತ್ರದುರ್ಗ

ಶ್ರೀ ಶ್ರೀ ಜಗದ್ಗುರು ಮುರುಘರಾಜೇಂದ್ರ ಸ್ವಾಮಿಗಳವರು

೩೦-೦-೦

### ೧೦ ರೂಪಾಯಿ

ಬೆಂಗಳೂರು

ಶ್ರೀಗಳಾದ—ಎಸ್. ವೆಂಕಟೇಶ ಅಯ್ಯಂಗಾರ್ಯರವರು. ಬಿ. ವೆಂಕಟ ನಾರಾಯಣಪ್ಪನವರು. ರಾಜಸೇವಾಸಕ್ತ ಎಸ್. ಹಿರಿಯಣ್ಣಯ್ಯನವರು. ಬಿ. ಪುಟ್ಟಯ್ಯನವರು. ಸಿ. ಕೆ. ವೆಂಕಟರಾಮಯ್ಯನವರು (ಎರಡನೆಯ ಸಲ). ಬೇಲೂರು ಶ್ರೀನಿವಾಸ ಅಯ್ಯಂಗಾರ್ಯರವರು. ರಾವ್‌ಬಹದ್ದೂರ್ ಬಿ. ವೆಂಕಟೇಶಾಚಾರ್ಯರವರು. ಕ್ರೈಸ್ತ ಗೆಳೆಯರು (ಶ್ರೀ॥ ಕೆ. ಎ. ಆನಂದ ನವರ ಮೂಲಕ). ಎಂ. ರಾಮರಾಯರು. ಜಿ. ಪರಮಶಿವಯ್ಯನವರು.

ಶ್ರೀಮತಿ ಡಿ. ಚಂಪಾಬಾಯಿಯವರು

ಮೈಸೂರು

ಶ್ರೀ॥ಗಳಾದ — ಅಂಬಳೆ ಸುಬ್ರಹ್ಮಣ್ಯ ಐಯ್ಯರ್ ಅವರು. ವೈ. ಕೆ. ರಾಮಚಂದ್ರರಾಯರು

ಶಿವಮೊಗ್ಗ

ಶ್ರೀ॥ ಬಿ. ಚಂದ್ರಶೇಖರಯ್ಯನವರು

ಶ್ರವಣಬೆಳಗೊಳ

ಶ್ರೀ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಗಳವರು

ಬೆಳಗಾಂವಿ

ಶ್ರೀ॥ ಎಂ. ಪಿ. ವಾಲಿ ಅವರು

ಧಾರವಾಡ

ಶ್ರೀ॥ ಎನ್. ಕೆ. ದೀಕ್ಷಿತ್ ಅವರು

ಸೊಲ್ಲಾಪುರ

ಶ್ರೀ॥ ಎಂ. ಎಸ್. ಸರದಾರರವರು, ಕರ್ನಾಟಕ ಸಂಘ

ಹುಬ್ಬಳ್ಳಿ

ಶ್ರೀ॥ ಸಾಹುಕಾರ ದೀಕಪ್ಪನವರು

ಬೊಂಬಾಯಿ

ಶ್ರೀ॥ಗಳಾದ — ಎಸ್. ಎಸ್. ಉಗ್ರಾಂಕರ್ ಅವರು. ಜಿ. ಕೆ. ಬೆಟಗೇರಿ ಅವರು. ಎನ್. ವಿ. ಎಸ್. ಮೂರ್ತಿಗಳು.

೨೨೦-೦-೦

### ೭ ರೂಪಾಯಿ

ಮಂಗಳೂರು

ಕಲ್ಚರಲ್ ಅಸೋಸಿಯೇಷನ್

೭-೦-೦

### ೬ ರೂಪಾಯಿ

ಸದಲಗಿ-ಚಿಕ್ಕೋಡಿ

ಕಾರ್ಯದರ್ಶಿಗಳು, ಕರ್ನಾಟಕ ಸಂಘ

೬-೦-೦

### ೫ ರೂಪಾಯಿ

ಬೆಂಗಳೂರು

ಶ್ರೀಗಳಾದ.—ಇಂಡಸ್ಟ್ರಿಯಲ್ ಮತ್ತು ಕಮರ್ಷಿಯಲ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ಬೆಂಗಳೂರು. ಡಾ॥ ಜಿ. ಕೆ. ನಾರಾಯಣರಾಯರು. ಎನ್. ಬಾಲಕೃಷ್ಣಯ್ಯನವರು. ದಿ ಸಿಟಿ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿಮಿಟೆಡ್. ಶ್ರೀ ಶ್ರೀ ಮಹದೇವಸ್ವಾಮಿಗಳು. ಎ. ತಾಂದೋಣೆರಾಯರು. ಕೆ. ಅಂಬ್ರೋಸ್ ಆನಂದರನರು. ಜಿ. ಪಿ. ರಾಜರತ್ನಂ ಅವರು. ವಿ. ಟಿ. ಶ್ರೀನಿವಾಸನ್ ರವರು. ಪ್ರೊ॥ ಕೆ. ವಿ. ಐಯ್ಯರ್ ಅವರು. ಶ್ರೀ॥ ಮತ್ತು ಶ್ರೀಮತಿ ದೇಶಮುಖ್ ಗೋವಿಂದರಾಯರು. ಎಚ್. ರಂಗಾಚಾರ್ ಅವರು. ಜಿ. ಶಾಂತವೀರಪ್ಪನವರು.

ಶ್ರೀಮತಿಗಳಾದ.—ಲಕ್ಷ್ಮೀಬಾಯಿ ಕಡಂಬಿ ಮತ್ತು ದ್ವಾರಕಬಾಯಿ ಕಡಂಬಿ (ಜೊತೆಯಾಗಿ). ಸತಿ ಬಿ. ಕೆ. ಮೂರ್ತಿಯವರು.

ಮೈಸೂರು

ಶ್ರೀ॥ಗಳಾದ—ಎಚ್. ಎಸ್. ನಂಜುಂಡಯ್ಯನವರು. ಎಂ. ಜಿ. ಮೇಸ್ತ್ರಿಯವರು. ಎಚ್. ಎಂ. ಕೃಷ್ಣಸ್ವಾಮಿಯವರು.

ಹಾಸನ

ರಾವ್‌ಬಹದ್ದೂರ್ ಶ್ರೀ॥ ಎನ್. ಎಸ್. ನಂಜುಂಡಯ್ಯನವರು

ಶಿವಮೊಗ್ಗ

ಶ್ರೀ॥ಗಳಾದ— ಎಚ್. ವಿ. ಎಸ್. ರವರು. ಆರ್. ನಾರಾಯಣಶೆಟ್ಟಿ ಅಂಡ್ ಬ್ರದರ್ಸ್.

ಬಾಗಲಕೋಟೆ

ಶ್ರೀ ಮುರಿಗೆಯ್ಯ ಸೋಮಯ್ಯ ಜಂಗಿನ ಅವರು, ವಾಣಿಜ್ಯ ಸಂಘ.

ಮಡಿಕೇರಿ

ಶ್ರೀ॥ ಪಿ. ಸಿ. ಉತ್ತಯ್ಯನವರು

ಅನಂತಪುರ

ಶ್ರೀ॥ ಪಾಣ್ಯಂ ಸುಂದರಶಾಸ್ತ್ರಿಗಳು

ಹೊನ್ನೂರು-ಜಮಖಂಡಿ

ಶ್ರೀ॥ ಮಾಧವ ತಿರುಮಲ ದೇಶಪಾಂಡೆಯವರು

ಪಾಲಘಾಟು

ಶ್ರೀ॥ ಪಿ. ರಮಾನಂದರಾಯರು

ಕಾಸರಗೋಡು

ಶ್ರೀ॥ ಜಿ. ಶ್ರೀನಿವಾಸಪೈ ರವರು

ಹುಬ್ಬಳ್ಳಿ

ಶ್ರೀಗಳಾದ — ರಾವ್‌ಬಹದ್ದೂರ್ ಕೃಷ್ಣರಾವ್ ಪಾಳವೇಕರ ಅವರು. ಪಿ. ಎಲ್. ಚಿಣ್ಣಯ್ಯನವರು

ಮಂಗಳೂರು

ಶ್ರೀ|| ಜಿ. ವಾಮನಭಟ್ಟರು

ಸಾಂಗ್ಲಿ

ಶ್ರೀ|| ಎ. ಆರ್. ಮಹಿಷಿಯವರು

ಯಾದಗಿರಿ

ಶ್ರೀ|| ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು

ನವಿಲಗುಂದ

ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು

ಪುತ್ತೂರು

ಶ್ರೀ||ಗಳಾದ—ಶಿವರಾಯರು. ಸಿ. ಎಸ್. ಶಾಸ್ತ್ರಿಗಳು

ಧಾರವಾಡ

ಶ್ರೀ||ಗಳಾದ ಎನ್. ವಿ. ಕುರುಡಿಯವರು. ಜಿ. ಆರ್. ನಲವಡಿಯವರು.

೧೮೫-೦-೦

## ೪ ರೂಪಾಯಿ

ಬೆಂಗಳೂರು

ಶ್ರೀ|| ಬಿ. ಎಸ್. ಮಾಧವರಾಯರು

ಚಿಕ್ಕೋಡಿ

ಶ್ರೀ|| ಬಾಲಕೃಷ್ಣ ಬಾಬುರಾವ ಮನೋಳಿಯವರು

೮-೦-೦

## ೩ ರೂಪಾಯಿ

ಬೆಂಗಳೂರು

ಶ್ರೀ||ಗಳಾದ—ಡಿ. ಕೆ. ಪಿಳ್ಳಣ್ಣನವರು. ಭಿ. ರಾಮರಾಯರು, ಜಿ. ಮಲ್ಲಿಕಾರ್ಜುನಯ್ಯನವರು. ಎನ್. ಆರ್. ನಗರ್‌ಕರ್ ಅವರು. ಎಲ್. ಸ್ವಾಮಿರಾಯರವರು. ಎನ್. ಸುಬ್ರಾಯರು. ಎಸ್. ಸಿನ್ಹ ಅವರು. ಮೇಜರ್ ಪಿ. ಬಸವರಾಜ ಅರಸ್ ಅವರು.

ಶ್ರೀಮತಿಗಳಾದ.—ಆರ್. ಕಲ್ಯಾಣಮ್ಮನವರು. ಬಿ. ಎಲ್. ಸುಶೀಲಮ್ಮನವರು. ಸತಿ ಕೆ. ಪಿ. ಪಾರ್ವತಮ್ಮನವರು. ಸತಿ ಘನಿಯವರು. ಸತಿ ಸಿ. ಎ. ಜಬ್ಬಾರ್‌ರವರು. ಸತಿ ಎಚ್. ವ್ಯಾಸರಾಯರು.

ಮೈಸೂರು

ಶ್ರೀಮತಿ ಧರ್ಮಪರಾಯಣೆ ಆಲಮ್ಮನವರು

ಶಿವಮೊಗ್ಗ

ಶ್ರೀ|| ಪಂಡಿತ ಯು. ಮಂಜನಾಥಯ್ಯನವರು

ಕೊಲ್ಹಾಪುರ

ಶ್ರೀ|| ಪ್ರೊ|| ಕೆ. ಜಿ. ಕುಂದಣಗಾರರು

ಚಿಕ್ಕೋಡಿ

ಶ್ರೀ|| ಕೋಟ ಶ್ರೀನಿವಾಸರಾಯರವರು

ಮೂಡಬಿದರೆ

ಶ್ರೀ|| ಜಿ. ಗೋಪಾಲಪೈರವರು

ಪುತ್ತೂರು

ಶ್ರೀ|| ಕೆ. ಎಸ್. ಕಾರಂತರವರು

ಹಾವೇರಿ

ಶ್ರೀ|| ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥರವರು

೬೩-೦-೦

## ೨ ರೂಪಾಯಿ

ಬೆಂಗಳೂರು

ಶ್ರೀ||ಗಳಾದ—ಟಿ. ಎಸ್. ನಾರಾಯಣರಾಯರು. ಕೆ. ಕೃಷ್ಣಯ್ಯಂಗಾರ್ಯರವರು. ಎಸ್. ಭೀಮಾಚಾರ್ರು. ಕೆ. ಎಸ್. ಧರಣೇಂದ್ರಯ್ಯನವರು. ಡಾ|| ಜಿ. ವಿ. ಕರ್ವೆಯವರು. ಎಸ್. ನಾರಾಯಣರಾಯರು. ಎಂ. ಮುನಿಸ್ವಾಮಯ್ಯನವರು. ಆರ್. ತಮ್ಮಾಜಿರಾಯರು. ಕೆ. ಹನುಮಂತರಾಯರು. ಕೆ. ವಿ. ಪುಟ್ಟಪ್ಪನವರು. ಟಿ. ವೆಂಕಟರಮಣಯ್ಯನವರು. ಜಿ. ಬಿ ರಾಘವೇಂದ್ರಾಚಾರ್ಯರವರು. ಕೆ. ಎಸ್. ನಾರಾಯಣರಾಯರು. ಎಂ. ಎಸ್. ಕೃಷ್ಣರಾಯರು. ಪಿ. ಎಸ್. ರೈಟ್ ಅವರು. ಲೆ|| ರಘುನಾಥರಾಯರು. ರಿಸಾಲ್ದಾರ್ ಎಂ. ಜಿ. ಕೃಷ್ಣೇ ಅರಸ್ ಅವರು.

ಶ್ರೀಮತಿಗಳಾದ—ಎಸ್. ಕೆ. ಹೊನ್ನಮ್ಮನವರು. ಸುಂದರಮ್ಮನವರು. ಸತಿ ಬಿ. ಎಸ್. ಮಾಧವರಾಯರು. ಪಿ. ಎಸ್. ಮೀನಾಕ್ಷಿಯವರು. ಸತಿ ಮಹಮದ್ ಹುಸೇನ್‌ರವರು. ಆರ್. ಶಾಂತರವರು. ಬಿ. ರಾಜಮ್ಮನವರು. ಬಿ. ಸೀತಾಬಾಯಿಯವರು. ಸತಿ ಎಂ. ಎ. ಶ್ರೀನಿವಾಸಾಚಾರ್ಲು ಅವರು. ಸತಿ ವೆಂಕಟೇಶ ಅಯ್ಯಂಗಾರ್ಯರವರು. ಸತಿ ಕೆ. ವಿ. ಅನಂತರಾಮನ್‌ರವರು. ಇಂದಿರಾಬಾಯಿಯವರು. ರಾಜಮ್ಮಾಳ್ ಅವರು. ಟಿ. ತುಳಸಮ್ಮನವರು.

ಮೈಸೂರು

ಶ್ರೀ||ಗಳಾದ—ಎಸ್. ವಿ. ಪರಮೇಶ್ವರಭಟ್ಟರು. ಟಿ. ಎನ್. ಶ್ರೀಕಂಠಯ್ಯನವರು. ಡಿ. ಎಲ್. ನರಸಿಂಹಾಚಾರ್ಯರವರು. ಪಂ|| ಕಾಶೀನಾಥಶಾಸ್ತ್ರಿಗಳು.

ಶ್ರೀಮತಿ ವೈ. ಕೆ. ಅಮೃತಾಬಾಯಿಯವರು.

ದೊಡ್ಡಬಳ್ಳಾಪುರ

ಶ್ರೀ|| ಲೋಕಸೇವಾನಿರತ ಬಿ. ಕೊಂಗಾಡಿಯಪ್ಪನವರು

ತಿಪಟೂರು

ಶ್ರೀ|| ಸಿ. ಗುಂಡೂರಾಯರು

ಶಿವಮೊಗ್ಗ

ಶ್ರೀ||ಗಳಾದ—ಎಚ್. ಆರ್. ಸಿ. ಅವರು. ಎಲ್. ಸಿದ್ದಪ್ಪನವರು, ಜಿ. ಚೆನ್ನಪ್ಪನವರು, ಎಸ್. ವಿ. ಕೃಷ್ಣಮೂರ್ತಿರಾಯರು. ಕೆ. ಟಿ. ಶಾಮಣ್ಣಗೌಡರವರು.

ದಾವಣಗೆರೆ

ಶ್ರೀ|| ಟಿ. ತಾರೇಗೌಡರು

ಕುದೇರು

ಶ್ರೀ||ಗಳಾದ—ಕೆ. ವಿ. ಕುಮಾರಸ್ವಾಮಿಯವರು. ಸಾಹುಕಾರ್ ನಾಗಸುಂದರಮೂರ್ತಿಯವರು

ಶ್ರೀಮತಿ ಕೆ. ಸಿ. ಲಲಿತಾಂಬಾ ಅವರು

ಅನವಟ್ಟಿ

ಶ್ರೀ|| ಸೇತುರಾವ್, ಕರ್ನಾಟಕ ಸಂಘ. ಶ್ರೀ|| ಗುರುನಾಥ ಕೃಷ್ಣ ನಾಡಿಗರ್

ಕೊಲ್ಹಾಪುರ

ಶ್ರೀಗಳಾದ.—ಕಾರ್ಯದರ್ಶಿಗಳು, ರಾಜಾರಾಮ ಕಾಲೇಜಿನ ಕರ್ನಾಟಕ ಸಂಘ. ಬಿ. ಆರ್. ರಘುನಾಥರಾವ್.

ಚಿಕ್ಕೋಡಿ

ಶ್ರೀಗಳಾದ.—ವಿ. ಎಚ್. ಸದರ್‌ಜೋಷಿಯವರು. ದಾದಾಜಿ ಗಂಗಾಧರ್ ರಷಿವಡೆಕರ್ ಅವರು.

ರಬಕವಿ

ಶ್ರೀ|| ಬಿ. ಪಿ. ಅಲತಗಿಯವರು

ನವಿಲುಗುಂದ

ಶ್ರೀ|| ಜಿ. ಆರ್. ಆನೆಗೊಂದಿ

ಜಮಖಂಡಿ

ಶ್ರೀ|| ಬಿಂದುರಾವ್ ನರಗುಂದಕರ್

ಧಾರವಾಡ

ಶ್ರೀ||ಗಳಾದ—ಬೆಳಗಾಂವಿ ರಾಮಚಂದ್ರರಾಯರು. ಬಿ. ಬಿ. ಬಾಗಿಯವರು. ಸ್ಟೂಡೆಂಟ್ಸ್ ಓನ್ ಬುಕ್ ಡಿಪೊ ಮಾಲೀಕರು. ಎ. ಎಂ. ಷೇಕ್ ಅವರು.

ಮಂಗಳೂರು

ಶ್ರೀ||ಗಳಾದ — ಕೆ. ಬಿ. ಜಿನರಾಜ ಹೆಗ್ಗಡೆಯವರು. ಮಿತ್ರಮಂಡಲಿ. ಕೆ. ಆರ್. ಆಚಾರ್ಯರವರು. ಎಂ. ವೆಂಕಟೇಶ ಪೈ ರವರು.

ಪುತ್ತೂರು

ಶ್ರೀ|| ಬೆಳ್ಳೆ ರಾಮಚಂದ್ರರಾಯರು

ಬೆಳಗಾಂವಿ

ಶ್ರೀ||ಗಳಾದ—ಬಿ. ಎಸ್. ಜಿಟಗೇರಿಯವರು. ನರಸಿಂಹ ಜೋಷಿಯವರು. ವಿ. ಜಿ. ಕುಲಕರ್ಣಿಯವರು. ಎಚ್. ಎಲ್. ಸವಣೂರ ಅವರು.

ಯಾದಗಿರಿ

ಶ್ರೀಮಂತ ರುದ್ರಪ್ಪನವರು

ಸಾಂಗ್ಲಿ

ಶ್ರೀ|| ಎನ್. ಎಚ್. ಫಡ್ನಿಸ್ ಅವರು

೧೪೨-೦-೦

## ೧ ರೂ. ೮ ಆಣೆ

ಬೆಂಗಳೂರು

ಶ್ರೀ|| ಡಿ. ಆರ್. ಚನ್ನೇಗೌಡರವರು

ಧಾರವಾಡ

ಶ್ರೀ|| ಆರ್. ಬಿ. ಪೋತ್ದಾರರು

೩-೦-೦

## ೧ ರೂಪಾಯಿ

ಬೆಂಗಳೂರು

ಶ್ರೀ॥ಗಳಾದ—ಡಾ॥ ಹೆಚ್. ವಿ. ಸೂರ್ಯನಾರಾಯಣರಾಯರು. ಡಿ. ವೆಂಕಟರಮಣಪ್ಪನವರು. ಎಂ. ಕೃಷ್ಣಸ್ವಾಮಿಪಿಳ್ಳೆಯವರು. ಕೆ. ಜಿ. ಸಂಪತ್ಕುಮಾರಾಚಾರ್ಯರು. ಸಿ. ರಾಜಗೋಪಾಲಾಚಾರ್. ಜಿ. ಆರ್. ಅಣ್ಣಾಸ್ವಾಮಿರಾವ್. ಎನ್. ವರದರಾಜನ್ ಅವರು. ಎಂ. ವಿ. ಶ್ರೀನಿವಾಸಯ್ಯಂಗಾರ್ಯರು. ಕೆ. ಗೋಪಾಲಕೃಷ್ಣರಾಯರು. ಶ್ರೀಕಂಠ ಅವರು. ಎ. ಕೆ. ಶಂಕರಯ್ಯನವರು. ಎಂ. ಸಿ. ಕೃಷ್ಣಸ್ವಾಮಿ ಅಯ್ಯಂಗಾರ್ಯರು. ಎ. ಪಿ. ಶ್ರೀನಿವಾಸಮೂರ್ತಿಗಳು. ಡಿ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರು. ಪಿ. ಸ್ವಾಮಿದಾಸರು. ಜಿ. ಎನ್. ಕೃಷ್ಣಮೂರ್ತಿಗಳು. ಎಸ್. ತಿರುಮಲೆ ಅವರು. ಸಿ. ಎನ್. ನರಸಿಂಗರಾಯರು. ಬಿ. ನರಹರಿಶಾಸ್ತ್ರಿಗಳು. ಎಂ. ಆರ್. ರಾಜಾರಾಯರು. ಮುತ್ತೂರು ಸೀತಾರಾಮಶಾಸ್ತ್ರಿಗಳು. ಎಚ್.ಸಿ. ನಾಗಪ್ಪನವರು. ಬಿ. ಆರ್. ನೀಲಕಂಠರವರು. ಬಿ. ಕೃಷ್ಣಸ್ವಾಮಿ ಅಯ್ಯಂಗಾರ್ಯರು. ಎನ್. ದೇವರಾಯರು. ಬಿ. ಲಿಂಗಯ್ಯನವರು. ಲೆ॥ ಕೋನೇರಿಗೌಡರು. ವಿಠಲರಾವ್ ಅವರು. ಕೆ. ಎನ್. ದೊರೆಸ್ವಾಮಿ ಅವರು. ವಿದ್ವಾನ್ ಎಂ. ಚನ್ನಕೃಷ್ಣಯ್ಯನವರು. ಉಡುಪಿ ಕೃಷ್ಣಭವನ. ಟಿ. ಕೇಶವರಾವ್ ಅವರು. ನರಸಿಂಹಯ್ಯನವರು. ಕೆ. ಕೃಷ್ಣ ಅಯ್ಯಂಗಾರ್ಯರು. ಎಂ. ರಾಮಚಂದ್ರರಾಯರು. ಬಿ. ವಿ. ನಂಜುಂಡಯ್ಯನವರು. ಡಿ. ರೇಣುಕಾಚಾರ್ಯರವರು. ರಾಜಶೇಖರಯ್ಯನವರು. ಎಚ್. ವೆಂಕಟರಾಮಯ್ಯನವರು. ಎ. ವಿ. ಲಕ್ಷ್ಮೀನರಸಿಂಹಯ್ಯನವರು. ಎಸ್. ಕಡಾಂಬಿಯವರು. ಎ. ದಾಸಪ್ಪನವರು. ಟಿ. ಎಸ್. ರಂಗರಾಯರು. ಬಿ. ಚಂದ್ರಶೇಖರ್ ಅವರು. ಎಸ್. ಎಸ್. ಸೂರ್ಯನಾರಾಯಣರಾಯರು. ದ. ಕೃ. ಭಾರದ್ವಾಜರು. ವಿ. ಡಿ. ನಂಜಯ್ಯನವರು. ಜಿ. ವಿ. ಕೆ. ಅಯ್ಯ ಅವರು. ಎನ್. ಬಿ. ಬಸಪ್ಪನವರು. ಡಿ. ವಿ. ಗುರುರಾಜಾರಾಯರು. ಡಿ. ಚಂದ್ರಶೇಖರರಾಯರು. ಡಿ. ಎಸ್. ವೆಂಕಟಸುಬ್ಬರಾಯರು. ಕೆ. ಆರ್. ಅಯ್ಯಂಗಾರ್ಯರು. ಬಿ. ಭೀಮರಾಯರು. ಎಚ್. ಎನ್. ರಾಮಚಂದ್ರರಾಯರು. ಕ್ಯಾಪ್ಟನ್ ಎ. ಸಿ. ಸುಬ್ಬರಾಜ ಅರಸ್ ಅವರು. ಲೆ॥ ಟಿ. ಬಿ. ಕೃಷ್ಣೆ ಅರಸ್ ಅವರು. ರಿಸಾಲ್ದಾರ್ ವಿಠಲರಾಯರು. ಜಮಾದಾರ್ ಸಿ. ರುದ್ರಪ್ಪನವರು. ಜಮಾದಾರ್ ಎಸ್. ಗಣೇಶರಾಯರು. ಲೆ॥ ಎಂ. ಆರ್. ನಾರಾಯಣಸಿಂಗ್ ಅವರು. ಲೆ॥ ಜಿ. ಜಿ. ಗೋವಿಂದರಾಯರು. ಜಮಾದಾರ್ ವಿಠಲರಾಯರು. ಜಿ. ರುದ್ರಪ್ಪನವರು. ಎಸ್. ಗೋಪಾಲಸ್ವಾಮಿಯವರು. ವಿ. ಜಿ. ನಾರಾಯಣರಾಯರು.

ಶ್ರೀಮತಿಗಳಾದ — ಸತಿ ಹೆಚ್. ವಿ. ಸೂರ್ಯನಾರಾಯಣರಾಯರು. ಸತಿ ಎಸ್. ಆರ್. ಗೊರೂರು. ಡಾ॥ ಬಿ. ಎಸ್. ನಾಗಮ್ಮನವರು. ರಮಾಬಾಯಿ ಉಚಗಾಂಕರ್ ಅವರು. ಟಿ. ಮಣಿಯಮ್ಮನವರು. ಎಸ್. ರುಕ್ಮಿಣಿಯಮ್ಮನವರು. ಶಿವರುದ್ರಾಂಬರವರು. ಪುಟ್ಟತಾಯಮ್ಮನವರು. ಕಮಲಮ್ಮನವರು. ಸೀತಮ್ಮನವರು. ಕಮಲಮ್ಮನವರು C/o ಶ್ರೀ॥ ಸುಂದರರಾಜಾರಾಯರು. ಎಲ್. ಸೀತಾಬಾಯಿಯವರು C/o ಪ್ರೊ॥ ಎಲ್. ರಾಮರಾಯರು. ಸೀತಮ್ಮನವರು. ಬಿ. ಎಸ್. ಕಮಲಾಬಾಯಿಯವರು. ತುಳಸಮ್ಮನವರು. ಸಿ. ಅಂಬಾಬಾಯಿಯವರು. ಸಿ. ಸೇತೂಬಾಯಿಯವರು. ತುಳಸಾಬಾಯಿಯವರು. ಸುಂದರಮ್ಮನವರು. ಸತಿ ಸಿ. ವಿ. ಶ್ರೀನಿವಾಸಮೂರ್ತಿಯವರು. ಬಿ. ಎಲ್. ಗಿರಿಯಮ್ಮನವರು. ಬಿ. ಗೆಂಗಾಬಾಯಿಯವರು. ಎಸ್. ವೇಂಗಡಮ್ಮನವರು. ಸಿ. ಆರ್. ಚಿನ್ನಮ್ಮನವರು. ಎಂ. ಶಾರದಮ್ಮನವರು. ಎಂ. ವಿ. ಇಂದಿರಾ ಅವರು. ಎಸ್. ಜಯಮ್ಮನವರು. ಸೀತಾಲಕ್ಷ್ಮಮ್ಮನವರು. ಸೀತಮ್ಮನವರು. ಎಸ್. ಆರ್. ಮಂಡ್ಯಂ ಅವರು. ಎಂ. ಡಿ. ಲೀಲಾವತಿಯವರು. ಸರೋಜ ಅವರು. ಸತಿ ಎಸ್. ಬಿ. ನಾಗಪ್ಪನವರು. ಶ್ರೀಯವರು. ಸತಿ ಆರ್. ಎ. ಶ್ರೀನಿವಾಸ ಅಯ್ಯಂಗಾರ್ಯರವರು. ಸತಿ ಟಿ. ಎಸ್. ನಾರಾಯಣರಾಯರು. ಸತಿ ಎಂ. ರಾಮರಾಯರು. ಬಿ. ಶಾರದಮ್ಮನವರು. ಗದಿಗಮ್ಮನವರು. ಕುಮಾರಿ ಸಾವಿತ್ರಮ್ಮನವರು. ಎಚ್. ಶಾರದಮ್ಮನವರು. ಕೆ. ಎನ್. ಕಮಲಮ್ಮನವರು. ಜಿ. ಚಿನ್ನಮ್ಮನವರು. ಸತಿ ಎಂ. ಎಸ್. ರಾಮಚಂದ್ರರಾಯರು. ಬೆನಗಲ್ ರತ್ನಾಬಾಯಿಯವರು. ಎಂ. ಸುಮಿತ್ರಾಬಾಯಿಯವರು. ಎಂ. ಲಲಿತಾಬಾಯಿಯವರು. ಶಾರದಮ್ಮನವರು. ಸತಿ ಮರ್ಸಿ ಇಸಾಕ್ ಅವರು. ವೈ. ಆರ್. ರಂಗಮ್ಮನವರು. ಸಿ. ಪದ್ಮಾವತಮ್ಮನವರು. ಮಹಾಲಕ್ಷಮ್ಮನವರು. ಇಂದಿರಾಬಾಯಿಯವರು. ಶಾರದಮ್ಮನವರು. ಲಲಿತಮ್ಮನವರು. ಎಸ್. ಆರ್. ಡ್ಯಾನಿಯಿಲ್. ಸಿ. ಆನಂದಮ್ಮನವರು. ಆರ್. ರಾಧಾಬಾಯಿಯವರು. ಬಿ. ಎನ್. ಭಾಗ್ಯಮ್ಮನವರು. ಡಿ. ಗೋಪೀಬಾಯಿಯವರು. ಲಕ್ಷಮ್ಮನವರು. ಆರ್. ಬಾರಾಟಂಕಿಯವರು. ರಾಜಮ್ಮನವರು. ತಂಗಮ್ಮನವರು. ಎ. ಟಿ. ಸೋನಾಬಾಯಿಯವರು. ಸತಿ ದೊರೆಸ್ವಾಮಿಯವರು. ಸತಿ ಸಿ. ಟಿ. ನರಸಿಂಹಯ್ಯಂಗಾರ್ಯರವರು. ಸತಿ ನಾರಾಯಣರಾಯರು. ಎಸ್. ಗೋದಾವರಿಬಾಯಿಯವರು. ಸಿ. ಆರ್. ಜಯಮ್ಮನವರು. ಕೆ. ವಿ. ಸುಂದರಾಬಾಯಿಯವರು. ಸಿ. ಎನ್. ಲಲಿತಾಬಾಯಿಯವರು. ಶಾಂತಾಬಾಯಿಯವರು. ಜಿ. ಲಕ್ಷ್ಮಿಬಾಯಿಯವರು. ಕೆ. ಸೀತಮ್ಮನವರು. ಕೆ. ಆರ್. ತುಂಗಮ್ಮನವರು. ಸರಸ್ವತಿಬಾಯಿಯವರು. ಸತಿ ಎಸ್. ಆರ್. ನಾರಾಯಣರಾಯರು. ಡಾ॥ ಮಧುರಾಬಾಯಿಯವರು. ಸತಿ ರಾಮಯ್ಯನವರು. ಕಮಲಮ್ಮ ದಾಸಪ್ಪನವರು. ಸೀತಮ್ಮನವರು. ಅರಸಮ್ಮನವರು. ಜಿ. ಆರ್. ಹೊನ್ನಮ್ಮನವರು. ಬಿ. ಸಿ. ಶಶಿಮುಖಿಯವರು. ಜಿ. ಆರ್. ಗಿರಿಜ ಅವರು. ಸತಿ ಎ. ವಿ. ರಾಮನಾಥನ್ ಅವರು.

ಮೈಸೂರು

ಶ್ರೀ॥ಗಳಾದ.— ಜಿ. ಹನುಮಂತರಾಯರು. ಎನ್. ಎಸ್. ವೆಂಕಟಸುಬ್ಬಯ್ಯನವರು. ವೆಂಕಟಾದ್ರಿ ಪಂಡಿತರು. ಜಿ. ಆರ್. ರಂಗಸ್ವಾಮಿಯವರು. ಎಸ್. ವಿ. ಶ್ರೀನಿವಾಸರಾಯರು. ಎನ್. ಅನಂತರಂಗಾಚಾರ್ಯರು.

ಶ್ರೀಮತಿಗಳಾದ.— ಸುರಮಾಬಾಯಿಯವರು. ನರಸಮ್ಮನವರು.

ಶಿವಮೊಗ್ಗ

ಶ್ರೀ॥ಗಳಾದ.—ಶ್ರೀರಾಮ್ ಅವರು. ಜಿ. ಎನ್. ಅಣ್ಣಯ್ಯನವರು. ಇ. ಅನಂತಯ್ಯನವರು. ಎಂ. ವಿ. ಮರುಳಸಿದ್ದಯ್ಯನವರು. ಬಿ. ಸುಬ್ಬಣ್ಣಚಾರ್ಯರು. ಕೆ. ಕೃಷ್ಣಮೂರ್ತಿ.

ಶ್ರೀಮತಿಗಳಾದ.— ಸತಿ ಎಸ್. ವಿ. ಕೃಷ್ಣಮೂರ್ತಿರಾಯರು. ಮಹಿಳಾ ಸೇವಾ ಸಮಾಜ.

ತಿಪಟೂರು

ಶ್ರೀ॥ಗಳಾದ—ಜಿ. ಕೆ. ಮಲ್ಲಪ್ಪನವರು. ಬಿ. ಮರುಳ ಸಿದ್ದಪ್ಪನವರು. ಡಿ. ಎಸ್. ಮಲ್ಲಪ್ಪನವರು. ಬಿ. ನಂಜಪ್ಪನವರು.

ಮಿತ್ರರೊಬ್ಬರು.

ಕೊಳ್ಳೇಗಾಲ

ಶ್ರೀ॥ಗಳಾದ.— ಕೆ. ವಿ. ಎಸ್. ಶರ್ಮ. ಬಿ. ಎನ್. ಆರಸಶೆಟ್ಟಿ.

ಕೊಲ್ಲಾಪುರ

ಶ್ರೀ॥ಗಳಾದ — ಪ್ರೊ॥ ಎ. ಎನ್. ಉಪಾಧ್ಯೆ ಅವರು. ಎನ್. ಜಿ. ಗಜೇಂದ್ರಗಡ ಅವರು. ಜಿ. ಆರ್. ಕೋಕಿಲ್ ಅವರು.

ಧಾರವಾಡ

ಶ್ರೀ॥ಗಳಾದ—ಶಾಮರಾವ್ ತಟ್ಟಿಯವರು. ಟಿ. ಎನ್. ಅಮೀನಭಾವಿಯವರು. ಬಿ. ಕೆ. ಮನೋಳಿಯವರು. ಬಿ. ಆರ್. ಗೋಕರ್ಣ ಅವರು.

ಚಿಕ್ಕೋಡಿ

ಶ್ರೀ॥ಗಳಾದ — ಸಹರೆ ರಾಮರಾಯರು. ಕೆ. ಎ. ಮಹಾಜನ್ ಅವರು. ಜಿ.ಎಸ್. ತಿಲಗೂಳ ಅವರು.

ರಬಕವಿ

ಶ್ರೀ॥ಗಳಾದ.— ಆರ್. ಎಲ್. ಚಿಕ್ಕೋಡಿ ಅವರು. ವಿ. ಸಿ. ಸಾಲೀಮಠ ಅವರು. ಬಿ. ಬಿ. ಮುಳೀಬನ್ನಟ್ಟಿಯವರು.

ಯಾದಗಿರಿ

ವೇ॥ ಬಸವರಾಜ ಶಾಸ್ತ್ರಿಗಳು. ವೇ॥ ವೀರೇಶ್ವರ ಶಾಸ್ತ್ರಿಗಳು.

ಮೂಲ್ಕಿ

ಶ್ರೀ॥ಗಳಾದ—ಎ. ಟಿ. ಪುಂಜ ಅವರು. ಎಂ. ಆರ್. ಪುಂಜ ಅವರು. ಎಂ. ಆರ್. ಕಾಮತ್ ಅವರು.

ಗದಗು

ಶ್ರೀ॥ ಸದಾಶಿವರಾವ್ ಗರುಡ ಅವರು

ಮಂಗಳೂರು

ಶ್ರೀ॥ಗಳಾದ — ಟಿ. ನಾರಾಯಣಭಟ್ಟರು. ಎಂ. ತಿಮ್ಮಪ್ಪಯ್ಯನವರು. ಎಚ್. ರಾಮರಾಯರು. ಎಚ್. ಭೀಮರಾಯರು. ಬಿ. ವಿಠಲರಾಯರು. ಭುಜಂಗರಾಯರು. ಕೆ. ಗೋಪಾಲರಾಯರು. ಎಂ. ವಿ. ಶಾಸ್ತ್ರಿಗಳು. ಡಿ. ಪುಟ್ಟಸ್ವಾಮಿಯವರು. ಕೆ. ಶಂಕರಭಟ್ಟರು. ಕೆ. ಆರ್. ಕಾರಂತರವರು. ಕೆ. ಬಾಲಕೃಷ್ಣರಾಯರು. ಎಂ. ನರಸಿಂಗರಾಯರು. ಎಸ್. ಪಿ. ಭಟ್ಟರು. ವಾಸುದೇವ ಅವರು.

ಪುತ್ತೂರು

ಶ್ರೀ॥ಗಳಾದ—ಬಿ. ಕೃಷ್ಣಭಟ್ಟರು. ಶಂಭುಶರ್ಮ ಅವರು

ಬಳ್ಳಾರಿ

ಎಂ. ಜಿ. ವೆಂಕಟೇಶಯ್ಯನವರು

ಗೊರೂರು

ಶ್ರೀ॥ ರಾಮಸ್ವಾಮಿ ಅಯ್ಯಂಗಾರ್ಯರು

ಬೆಳಗಾಂವಿ

ಶ್ರೀ॥ಗಳಾದ—ಅರವಿಂದ ಜೋಶಿ ಅವರು. ಜಿ. ಬಿ. ಸಾತ್ವಿಕ್ ಅವರು ಕೆ. ಜಿ. ಜೋಶಿಯವರು. ಡಿ. ಎಸ್. ಕಾರ್ಕಿಯವರು. ಜಿ. ಎ. ಜಂಬಗಿಯವರು. ವಿ. ಎಚ್. ಮತಾಲಿಕ್‌ರವರು.

ಮಡಿಕೇರಿ

ಶ್ರೀ॥ ಎಂ. ಎಂ. ಸುಬ್ಬಯ್ಯನವರು

ಸಾಂಗ್ಲಿ

ಶ್ರೀ॥ಗಳಾದ—ಎಸ್. ಬಿ. ಬುರ್ಲಿಯವರು. ಟಿ. ಎಸ್. ಶೆಟ್ಟಿಯವರು. ಜಿ. ಟಿ. ಅರಪಾಡೆಯವರು. ಎಸ್. ಎಸ್. ಮುಂಡೇಶ್ವರ ಅವರು. ಬಿ. ಎ. ಹಪ್ತರದಾರ್ ಅವರು. ಬಿ. ಬಿ. ಪಾಟೀಲ್ ಅವರು.

ಬಿಜಾಪುರ

ಶ್ರೀ॥ಗಳಾದ—ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿಯವರು. ಹ. ಬ. ಕೊಣ್ಣೂರ ಅವರು.

ಕುದೇರು

ಶ್ರೀ॥ಗಳಾದ—ಕೆ. ಎಂ. ಚಂದ್ರಶೇಖರ್ ಅವರು. ಕೆ. ಎ. ಗುರುಮಲ್ಲಪ್ಪನವರು.

ಶ್ರೀಮತಿ ನಾಗಸುಂದರಾಂಬಾ ಅವರು

೨೩೨-೦-೦

## ೮ ಆಣೆ

ಬೆಂಗಳೂರು

ಶ್ರೀ॥ಗಳಾದ — ಎಂ. ನಂಜುಂಡರಾಜೇ ಅರಸ್ ಅವರು. ಬಿ. ವೆಂಕಟರಾಯರು. ಜಮಾದಾರ್ ಜನಾರ್ಧನರಾಯರು. ಜಮಾದಾರ್ ಉತ್ತಯ್ಯನವರು, ಜಮಾದಾರ್ ಹನುಮಪ್ಪಾಜಿ ಗೌಡರವರು. ಎಸ್. ವಿ. ಶರ್ಮ. ಜಿ. ಸಿ. ಚಂದ್ರಶೇಖರ ಅವರು. ರಘುವೀರ ಅವರು. ಬಳೆ ಮಹದೇವಯ್ಯನವರು.

ಶ್ರೀಮತಿಗಳಾದ — ಕ್ಷಮಾದೇವಿಯವರು. ಸಾವಿತ್ರಮ್ಮನವರು. ಎಚ್. ಪ್ರಫುಲ್ಲ ಅವರು. ಸತ್ಯವತಿ ಅವರು. ಸತಿ ಗ್ಯಾಬ್ರಿಯಲ್ ಅವರು. ನಾಗರತ್ನಮ್ಮನವರು. ಅನುಸೂಯ ಅವರು. ಕೆ. ಸೀತಾಬಾಯಿಯವರು. ಜಿ. ಕೃಷ್ಣಾಬಾಯಿಯವರು. ಆರ್. ಶಾಂತಾ ಅವರು. ಆರ್. ಕೃಷ್ಣ ಅವರು. ಟಿ. ಎಸ್. ಚಂದ್ರ ಅವರು. ಸಿ. ಬಿ. ಲಲಿತ ಅವರು. ರಹಮತುನ್ನೀಸಾ ಅವರು. ಕೃಷ್ಣವೇಣಿ ಅವರು. ಟಿ. ಎಸ್. ಪದ್ಮಾ ಅವರು. ಬಿ. ಎನ್. ಪಾರ್ವತಿ ಅವರು. ನಾಗಲಕ್ಷ್ಮಿ ಅವರು. ಲಕ್ಷ್ಮಿ ಅವರು. ಸರಸ್ವತಿಯವರು. ಬಂಗಾರಮ್ಮನವರು. ವಿ. ಕಮಲಮ್ಮನವರು. ತಾರಾಬಾಯಿಯವರು. ಪದ್ಮಿನಿಯವರು. ಎಸ್. ಎಚ್. ಲೀಲಾ ಅವರು. ಎಲ್. ರತ್ನಾ ಅವರು. ಕೆ. ಪಿ. ಸರೋಜ ಅವರು. ಕಾತ್ಯಾಯಿನಿ ಅವರು. ಸರೋಜಿನಿ ಅವರು.

ಮೈಸೂರು

ಶ್ರೀ॥ ಎಚ್. ಎಂ. ಶಂಕರನಾರಾಯಣರಾಯರು.

ತಿಪಟೂರು

ಶ್ರೀ॥ಗಳಾದ—ಟಿ. ಬಸಪ್ಪನವರು. ಎಂ. ಚನ್ನೇಗೌಡರು. ಎಂ. ಬಿ. ಜಯದೇವಪ್ಪನವರು. ಜಿ. ವೆಂಕಟೇಶಯ್ಯನವರು. ಜಿ. ತಮ್ಮಯ್ಯನವರು. ಎಂ. ಶಿವಬಸವಪ್ಪನವರು. ಸಿ. ಭಾಸ್ಕರಯ್ಯ ಅಂಡ್ ಸನ್ಸ್.

ಮಂಗಳೂರು

ಶ್ರೀ॥ಗಳಾದ ಎಸ್. ಆರ್. ಅಚಾರ್ ಅವರು. ಜಿ. ಆರ್. ಷೆಣೈ ಅವರು. ಗೋಪಾಲಕೃಷ್ಣ ಶಾಸ್ತ್ರಿಗಳು.

ರಬಕವಿ

ಶ್ರೀ॥ ಮಹಾಲಿಂಗಪ್ಪ ಹನಗುಂದಿ

ಮೂಲ್ಕಿ

ಶ್ರೀ॥ಗಳಾದ—ಬಿ. ಭೋಜರಾಯರು. ಕೆ. ಎಸ್. ಕಿನಿ ಅವರು. ಯು. ಎಸ್. ನಾಯಕ್ ಅವರು.

ಧಾರವಾಡ

ಶ್ರೀ॥ಗಳಾದ—ಆರ್. ವಿ. ದೇಸಾಯಿಯವರು. ತೆರಗಾಂಕರ್ ಅವರು. ಬಿ. ಎಂ. ಪುರಾಣಿಕ್ ಅವರು. ಐ. ಸಿ. ತಂಬದ ಅವರು. ಎಸ್. ಎಲ್. ದಿವಾನ್ ಅವರು. ಟಿ. ಡಿ. ಕಳಸೂರ ಅವರು. ಜಿ. ಎನ್. ಅಸುಂಡಿಯವರು.

ಮಡಿಕೇರಿ

ಶ್ರೀ॥ಗಳಾದ—ಎಂ. ಎನ್. ಆಚಾರ್ಯ ಅವರು. ಕೆ. ಕೃಷ್ಣ ರಾಯರು. ಬಿ. ಎಸ್. ಮೂರ್ತಿಯವರು.

ಬಿಜಾಪುರ

ಶ್ರೀ॥ಗಳಾದ—ಆರ್. ಎಸ್. ದೇಶಪಾಂಡೆಯವರು. ವು. ಬ. ನರೇಗಲ್ಲ ಅವರು. ಗು. ಜ. ಮಳಗೆಲಗಿ ಅವರು. ರಾ. ಗ. ಕುಲಕರ್ಣಿಯವರು. ಎಸ್. ಬಿ. ಗಜೇಂದ್ರಗಡ ಅವರು. ಕೆ. ಕೆ. ಕುಲಕರ್ಣಿ ಅವರು.

೩೪-೮-೦

## ಪ್ರೊ॥ ಡಿ. ಕೆ. ಭೀಮಸೇನರಾಯರು, ಹೈದರಾಬಾದ್ ಅವರ ಮೂಲಕ

| | | | | |
|---|---|---|---|---|
| | | ಉಸ್ಮಾನಿಯಾ ರೂಪಾಯಿಗಳು | | |
| ಶ್ರೀ॥ ಗುಡುಗುಂಟಿ ಕೃಷ್ಣರಾಯರು | ಹೈದರಾಬಾದ್ | ೫ | ೦ | ೦ |
| ,, ಡಾ॥ ಎಸ್. ಟಿ. ಕಂಬಳಿ | ,, | ೫ | ೦ | ೦ |
| ,, ಎಂ. ಎಸ್. ನಾರಾಯಣರಾವ್ | ,, | ೫ | ೦ | ೦ |
| ,, ಡಿ. ಕೆ. ಭೀಮಸೇನರಾಯರು | ,, | ೪ | ೦ | ೦ |
| ,, ಜನಾರ್ಧನರಾವ್ ದೇಸಾಯಿ | ,, | ೩ | ೦ | ೦ |
| ,, ವೈ. ಅಚ್ಯುತರಾಯರು | ,, | ೨ | ೦ | ೦ |
| ,, ಅರೂರ್ ಸೀತಾರಾಮರಾಯರು | ,, | ೨ | ೦ | ೦ |
| ,, ಜಿ. ಎಸ್. ಮೇಲ್ಕೋಟೆ | ,, | ೨ | ೦ | ೦ |
| ,, ಬಸವಂತರಾವ್ ದೇಸಾಯಿ | ,, | ೨ | ೦ | ೦ |
| ,, ಭೀಮಾಚಾರ್ಯ ಚಿಮ್ಮಲಗಿ | ,, | ೨ | ೦ | ೦ |
| ,, ಕಂದಿ ಶ್ರೀನಿವಾಸರಾಯರು | ,, | ೧ | ೦ | ೦ |
| | | ೩೩ | ೦ | ೦ |
| | | ಬ್ರಿಟಿಷ್ ರೂಪಾಯಿಗಳು | | |
| ,, ಗುಡುಗುಂಟಿ ರಾಮಾಚಾರ್ಯ | ,, | ೫ | ೦ | ೦ |
| ,, ಕೃಷ್ಣಸ್ವಾಮಿಯವರು | ,, | ೩ | ೦ | ೦ |

(ಒಟ್ಟು ಬ್ರಿಟಿಷ್ ರೂಪಾಯಿಗಳು: ರೂ. ೩೬-೩-೭)

| | | | |
|---|---|---|---|
| ಶ್ರೀ॥ ಎಸ್. ಜಿ. ಶಿವಶಂಕರಪ್ಪನವರು ಕೊಳ್ಳೇಗಾಲ ಅವರ ಮೂಲಕ | ೨ | ೬ | ೦ |
| ಬೆಂಗಳೂರು ದೇಶೀಯ ವಿದ್ಯಾಶಾಲೆಯ ಅಧ್ಯಾಪಕರುಗಳು | ೬ | ೦ | ೦ |
| ಶ್ರೀ॥ ನಾಡಿಗ ರಾಮರಾಯರು ಶಿರಾಳಕೊಪ್ಪ ಅವರ ಮೂಲಕ | ೩ | ೨ | ೦ |
| ಮೈಸೂರು ಶಾರದಾ ವಿಲಾಸ ಹೈಸ್ಕೂಲಿನ ಅಧ್ಯಾಪಕರು | ೬ | ೪ | ೦ |
| ಪಿ. ಕೆ. ಆಚಾರ್ಯ ಅವರು, ಕುಂದಾಪುರದ ಕರ್ನಾಟಕ ಸಂಘ | ೪ | ೬ | ೦ |
| ಮಂಗಳೂರಿನ ಕೆಲವು ಮಿತ್ರರು | ೨ | ೦ | ೦ |
| ಒಟ್ಟು ರೂ. | ೨,೬೪೪ | ೫ | ೭ |

ಈ ಕೆಳಗೆ ಕಂಡ ಮಹನೀಯರೂ ಮಹಿಳೆಯರೂ ಬೆಳ್ಳಿಯ ಹಬ್ಬಕ್ಕೆ ದ್ರವ್ಯಸಂಗ್ರಹ ಮಾಡಿಕೊಡುವುದರಲ್ಲಿ ನೆರವಾಗಿದ್ದಾರೆ.

ಶ್ರೀ॥ಗಳಾದ ಎಂ. ವಾಸುದೇವಮೂರ್ತಿಯವರು, ಡಿ. ಸಿ. ಸುಬ್ಬರಾಯಪ್ಪನವರು, ಎನ್. ಎಸ್. ರಾಮಚಂದ್ರಯ್ಯನವರು, ಕೆ. ಗೋಪಾಲಕೃಷ್ಣರಾಯರು, ಎಂ. ಎಸ್. ಅನಂತಪದ್ಮನಾಭರಾಯರು, ಜಿ. ಬಿ. ರಾಘವೇಂದ್ರಾಚಾರ್ಯರು, ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು, ಡಾ॥ ಪಿ. ಕೃಷ್ಣರಾಯರು, ಬೆನಗಲ್ ರಾಮರಾಯರು, ಎಸ್. ವಿ. ಶ್ರೀನಿವಾಸರಾಯರು, ಎಂ. ಎನ್. ಗೋಪಾಲರಾಯರು, ಕೆ. ಎಸ್. ಕೃಷ್ಣಯ್ಯರ್ ಅವರು, ಪ್ರೊ. ಕೆ. ಜಿ. ಕುಂದಣಗಾರರು, ಎಚ್. ಜಿ. ಶಿವಶಂಕರಪ್ಪನವರು, ಬಿ. ಪುಟ್ಟಯ್ಯನವರು, ಶ್ರೀಮತಿ ಡಿ. ಚಂಪಾಬಾಯಿಯವರು, ಜಿ. ಶಾಂತವೀರಪ್ಪನವರು, ಎಸ್. ರಾಮಚಂದ್ರರಾಯರು, ಜಿ. ಎನ್. ಕೃಷ್ಣಮೂರ್ತಿಯವರು, ಎಸ್. ಗೋಪಾಲಸ್ವಾಮಿಯವರು, ಕೋಟೆ ಶ್ರೀನಿವಾಸರಾಯರು, ಶ್ರೀಮತಿ ಸಿ. ಪದ್ಮಾವತಮ್ಮನವರು, ಶ್ರೀಮತಿ ಬಿ. ಎಲ್. ಸುಶೀಲಮ್ಮನವರು, ಪಿ. ಟಿ. ನರಸಿಂಹಾಚಾರ್ಯರು, ಚ. ಚ. ಆಬಕಾರ ಅವರು, ಶ್ರೀಮತಿ ಎಚ್. ರತ್ನಮ್ಮನವರು, ಎಸ್. ವಿ. ಕೃಷ್ಣಮೂರ್ತಿರಾಯರು, ನಾಡಿಗ ರಾಮರಾಯರು, ಕೆ. ಅಂಬ್ರೋಸ್ ಆನಂದ, ವಿ. ಶ್ರೀರಂಗಾಚಾರ್ಯರು, ಎಂ. ಪಿ. ವಾಲಿಯವರು, ಕೆ. ಎಸ್. ಕಾರಂತರು, ಎಸ್. ಪಿ. ಗಾಂವ್‌ಕರ್ ಅವರು, ರಾಮಕೃಷ್ಣಪುಂಜ, ಆರ್. ಎಸ್. ಮುಗಳಿಯವರು, ಜಿ. ಜೆ. ಮಂಗಲಗಿಯವರು, ಜೆ. ವಾಮನಭಟ್ಟರು, ನಾಡಿಗ ಕೃಷ್ಣರಾಯರು, ಕೆ. ವಿ. ಕುಮಾರಸ್ವಾಮಿಯವರು, ಶ್ರೀಮತಿ ಇಂದಿರಾಬಾಯಿ ವಾಸುದೇವಮೂರ್ತಿಯವರು, ಬಿ. ಎಂ. ಶ್ರೀಕಂಠಯ್ಯನವರು, ಆರ್. ಬಿ. ಪೋತ್ದಾರರು, ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು, ಪ್ರೊ॥ ಡಿ. ಕೆ. ಭೀಮಸೇನಾಚಾರ್ಯರು, ಶ್ರೀಮತಿ ಜಿ. ಎನ್. ಇಂದಿರಮ್ಮನವರು, ಶ್ರೀಮತಿ ರುಕ್ಮಾಬಾಯಿಯವರು, ಪಿ. ಕೆ. ಆಚಾರ್ಯರು.

---

## ಜಮಖಂಡಿಯಲ್ಲಿ ಬೆಳ್ಳಿಯ ಹಬ್ಬ

ಜಮಖಂಡಿಯ ಕೆಲವು ಉತ್ಸಾಹಿ ತರುಣರು ಈಚೆಗೆ ಸ್ಥಾಪಿಸಿರುವ **ಕನ್ನಡ ಸೇವಾಸಂಘ** ಎಂಬ ಹೊಸ ಸಂಸ್ಥೆಯ ಆಶ್ರಯದಲ್ಲಿ ೩೦-೬-೪೦ ನೆಯ ದಿನ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ಜರುಗಿಸಿದರು. ಅಂದೇ ಅವರು "ಉದಯ" ಎಂಬ ಕೈಬರಹದ ಮಾಸಪತ್ರಿಕೆಯನ್ನು ಪ್ರಸಿದ್ಧಪಡಿಸಿದರು.

೯೧—೧೧೫೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ




ಸಂಪುಟ ೨
ಸಂಚಿಕೆ ೩೮

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜುಲೈ ೧೯, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.



**ಜಮುಖಂಡಿ ಸಂಸ್ಥಾನದ**
**ಬನಹಟ್ಟಿಯ ಕೈ॥ ತಮ್ಮಣಪ್ಪ ಚಿಕ್ಕೋಡಿಯವರು**

ಜಮುಖಂಡಿಯಲ್ಲಿ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಪ್ರಚಾರಕ್ಕಾಗಿ ಅತ್ಯಂತ ಶ್ರಮಿಸಿದ ಈ ಕನ್ನಡ ಮುಂದಾಳುಗಳ ಭಾವಚಿತ್ರವನ್ನು ಶ್ರೀ॥ ಜೆ. ಜೆ. ಅಬಕಾರ ಅವರು ಪರಿಷತ್ತಿಗೆ ಬೆಳ್ಳಿಯ ಹಬ್ಬದ ಸಮಯದಲ್ಲಿ ದಾನಮಾಡಿರುವರು.

## ಶಿಡ್ಲಘಟ್ಟದಲ್ಲಿ ಕನ್ನಡ ಉತ್ಸವ

### ಕರ್ನಾಟಕ ಸಂಘಗಳ ಮತ್ತು ಬರಹಗಾರರ ಸಮ್ಮೇಳನ

ಕೋಲಾರ ಜಿಲ್ಲೆಯಲ್ಲಿ ಈಚಿನ ಒಂದೆರಡು ವರ್ಷಗಳಲ್ಲಿ ಕರ್ನಾಟಕ ಸಂಘಗಳು ಅಧಿಕಾರಿಗಳ ಬೆಂಬಲ ಪ್ರೋತ್ಸಾಹಗಳಿಂದ ಉತ್ಸಾಹದಿಂದ ಕೆಲಸಮಾಡಿ ಜನರಲ್ಲಿ ಕನ್ನಡ ಪ್ರೇಮವನ್ನೂ ಕನ್ನಡ ತಾಯ ಸೇವೆಯಲ್ಲಿ ಆದರವನ್ನೂ ಹುಟ್ಟಿಸಿರುತ್ತವೆ. ಹೋದ ವಾರ ಕರ್ನಾಟಕ ಸಂಘಗಳ ಸಮ್ಮೇಳನವೂ ಮತ್ತು ಬರಹಗಾರರ ಸಮೇಳನವೂ ಶಿಡ್ಲಘಟ್ಟದಲ್ಲಿ ವೈಭವದಿಂದ ನಡೆದವು. ಈ ಉತ್ಸವವು ಶಿಡ್ಲಘಟ್ಟ ರೈಲ್ವೆ ಸ್ಟೇಷನ್ ಬಳಿಯಿರುವ ಶ್ರೀಪತಿ ಟಾಕೀಸ್‌ನಲ್ಲಿ ನಡೆಯಲು ಏರ್ಪಡಿಸಿತ್ತು. ಈ ಉತ್ಸವಕ್ಕಾಗಿ ಬೆಂಗಳೂರಿನಿಂದ ಶ್ರೀಗಳಾದ ಬೆನಗಲ್ ರಾಮರಾಯರು, ಶ್ರೀ ಜಿ. ಪಿ. ರಾಜರತ್ನಂ, ಶ್ರೀ ದೇವುಡುಶಾಸ್ತ್ರಿಗಳು, ಶ್ರೀ॥ ಎ. ಎನ್. ಸುಬ್ಬರಾಯರು, ಶ್ರೀಮತಿ ಆರ್. ಕಲ್ಯಾಣಮ್ಮನವರು, ಶ್ರೀ॥ ಎಂ. ಎನ್. ಗೋಪಾಲರಾಯರು ಮುಂತಾದವರು ದಯಮಾಡಿಸಿದ್ದರು, ಮತ್ತು ಕೋಲಾರ ಜಿಲ್ಲೆಯ ಕರ್ನಾಟಕ ಸಂಘಗಳ ಪ್ರತಿನಿಧಿಗಳನೇಕರೂ, ಬರಹಗಾರರೂ, ಬಂದಿದ್ದರು.

ಕಳೆದ ಶನಿವಾರ ಮಧ್ಯಾಹ್ನ ಮೂರು ಘಂಟೆಗೆ ಸರಿಯಾಗಿ ಕೋಲಾರದಿಂದ ,ಜಿಲ್ಲಾಧಿಕಾರಿಗಳಾದ ಶ್ರೀ॥ ಜಿ. ಸುಂದರರಾಯರು ದಯಮಾಡಿಸಿದರು. ಇವರಿಗೆ ಇಲ್ಲಿನ ಮಹನೀಯರೆಲ್ಲರೂ, ಟಿ. ಬಿ. ಬಳಿ ಸ್ವಾಗತವನ್ನಿತ್ತರು. ಅಧ್ಯಕ್ಷರನ್ನು ಮಂಗಳವಾದ್ಯಗಳೊಂದಿಗೆ ಉತ್ಸವ ಮಂಟಪಕ್ಕೆ ಕರತರಲಾಯಿತು. ಜನಸಂದಣಿ ವಿಪರೀತವಾಗಿತ್ತು. ಹೆಂಗಸರು, ಮಕ್ಕಳು, ಹಳ್ಳಿಯವರು, ಹಿರಿಯರು, ಕಿರಿಯರು ಸಭಾ ಮಂಟಪದಲ್ಲಿ ಕಿಕ್ಕಿರಿದು ತುಂಬಿದ್ದರು. ಹೆಣ್ಣುಮಕ್ಕಳು 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂಬ ಗೀತವನ್ನು ಸುಶ್ರಾವ್ಯವಾಗಿ ಹಾಡಿದನಂತರ ಶಿಡ್ಲಘಟ್ಟದ ಅಮಲ್ದಾರರೂ, ಅಲ್ಲಿನ ಕರ್ನಾಟಕ ಸಂಘದ ಅಧ್ಯಕ್ಷರೂ ಆದ ಶ್ರೀ॥ ಜಿ. ಚನ್ನಬಸವಯ್ಯನವರು ಸ್ವಾಗತ ಭಾಷಣ ಮಾಡುತ್ತಾ 'ನಮ್ಮ ಮಾತೃ ಭಾಷೆಯಾದ ಕನ್ನಡವನ್ನು ನಾನಾ ಮುಖಗಳಲ್ಲಿ ಅಭಿವೃದ್ಧಿಮಾಡಬೇಕಾಗಿರುತ್ತೆ. ನಮ್ಮ ಕನ್ನಡ ಭಾಷೆಂ ಒಂದುಕೋಟಿ ಹನ್ನೆರಡು ಲಕ್ಷ ಪ್ರಜೆಗಳಿಂದ ಮಾತೃಭಾಷೆಯಾಗಿ ಮಾತನಾಡಲ್ಪಡುವುದಾದರೂ, ಅದು ನಾನಾ ದೇಶಗಳಲ್ಲಿ ಭಿನ್ನ ಭಿನ್ನ ರೀತಿಯಲ್ಲಿ ಮಾರ್ಪಟ್ಟಿರುವುದರಿಂದಲೂ, ಮತ್ತು ಕನ್ನಡಿಗರು ಚದುರಿರುವುದರಿಂದಲೂ ನಮ್ಮ ಮಾತೃ ಭಾಷೆಗೆ ಪ್ರಾಶಸ್ತ್ಯವಿಲ್ಲದೆ ದಿನೇ ದಿನೇ ಈ ಭಾಷೆಯು ಅಳಿದುಹೋಗುತ್ತಲಿದೆ. ಈ ದುಸ್ಥಿತಿಯನ್ನು ಹೇಗೆ ಹೋಗಲಾಡಿಸಬೇಕು ಮತ್ತು ಇದನ್ನು ಹೇಗೆ ಏಕೀಕರಣ ಮಾಡಬೇಕು ಎಂಬುದನ್ನು ಕೂಲಂಕಷವಾಗಿ ಚರ್ಚಿಸಿ ಒಂದು ಸರಿಯಾದ ಕಾರ್ಯಕ್ರಮವನ್ನು ಕೈಗೊಂಡು ಮಾತೃ ಭಾಷೆ ಅಭಿವೃದ್ಧಿ ಮಾಡುವ ಉದ್ದಿಶ್ಯವೇ ಈ ಸಮ್ಮೇಳನಗಳನ್ನು ಸೇರಿಸುವುದಾಗಿರುತ್ತೆ. ಅಭಿಮಾನವಿಟ್ಟು ನಮ್ಮ ಕರ್ನಾಟಕದ ಎಲ್ಲ ಕಡೆಗಳಲ್ಲಿಯೂ ಇಂಥಹ ಸಮ್ಮೇಳನಗಳನ್ನು ನಡಸುವದರ ಮೂಲಕವೂ ಭಾಷೆಯ ಬೆಳವಣಿಗೆಗೆ ನಾನಾ ವಿಷಯಗಳಮೇಲೆ ಸ್ಪರ್ಧೆಗಳನ್ನು ಇಡುವುದರ ಮೂಲಕವೂ, ಚರ್ಚೆಗಳ ಮೂಲಕವೂ, ಉತ್ತೇಜನ ಕೊಡುವುದರಿಂದ ನಮ್ಮ ಭಾಷೆಗೆ ಇರಬೇಕಾದ ಮರ್ಯಾದೆಯು ಕ್ಷಿಪ್ರದಲ್ಲಿಯೇ ಲಭಿಸುವುದೆಂದು ನಮ್ಮ ಅಭಿಮಾನದ ಮಾತಾಗಿದೆ. ಈ ಕಾರ್ಯದಲ್ಲಿ ಸಹಕಾರವನ್ನಿತ್ತು ಇಲ್ಲಿಗೆ ದಯಮಾಡಿಸಿರುವ ಎಲ್ಲ ಮಹನೀಯರನ್ನೂ ಮಹಿಳೆಯರನ್ನೂ, ಬರಹಗಾರರನ್ನೂ, ಸಾಹಿತಿಗಳನ್ನೂ ಮತ್ತು ಕನ್ನಡ ಉಜ್ವಲ ಭಾಷಾಭಿಮಾನಿಗಳಾದ ಉತ್ಸವ ಅಧ್ಯಕ್ಷರಾದ ಶ್ರೀ॥ ಸುಂದರರಾಯರನ್ನೂ ಮತ್ತೊಮ್ಮೆ ಸ್ವಾಗತಿಸುತ್ತೇನೆ." ಎಂತ ತಿಳಿಸಿ ಮುಗಿಸಿದರು.

ಅನಂತರ ಶ್ರೀಮರ್ಾ ಎಂ. ವೆಂಕಟಕೃಷ್ಣಪ್ಪನವರು ಈ ಉತ್ಸವವು, ಯಶಸ್ವಿಯಾಗಿ ನಡೆಯಲೆಂದು ಆಶೀರ್ವದಿಸಿ ಅನೇಕ ಮಹನೀಯರಿಂದ ಬಂದಿದ್ದ ಶುಭ ಸಂದೇಶಗಳನ್ನು ಓದಿದರು. ಅನಂತರ ಅಧ್ಯಕ್ಷರು ಕನ್ನಡ ಉತ್ಸವದ ಮತ್ತು ಸಮ್ಮೇಳನಗಳ ಉದ್ಘಾಟನೆ ಮಾಡುತ್ತಾ, "ಕನ್ನಡ ಉತ್ಸವದ ಅಧ್ಯಕ್ಷತೆಯನ್ನು ವಹಿಸುವ ಅರ್ಹತೆ ಇಲ್ಲವಾದರೂ, ಕನ್ನಡ ಅಭಿಮಾನದಿಂದ ಈ ಉತ್ಸವವನ್ನು ನಡೆಸಲು ಒಪ್ಪಿದೆನು. ಅಲ್ಲದೆ ಮತ್ತೊಂದು ಬಲವಾದ ಆಶೆಯೂ ನನ್ನನ್ನು ಈ ಪವಿತ್ರ ಕಾರ್ಯ ನಡೆಸಲು ಪ್ರೇರೇಪಿಸಿತು. ಅದೇನೆಂದರೆ ಕನ್ನಡ ಮಹಾ ಕವಿಗಳೂ, ಕನ್ನಡ ರತ್ನಗಳೂ ಸೇರುವ ಈ ಸಮಯದಲ್ಲಿ ನಾನೂ ಭಾಗವಹಿಸಿ, ಸಾಹಿತ್ಯ ಸವಿಯನ್ನು ಅನುಭವಿಸಬೇಕೆಂಬ ಒಂದು ಗಾಢವಾದ ಆಸೆಯಿಂದ ಬಂಧಿತನಾಗಿ ಒಪ್ಪಿದೆನು.

"ಕರ್ಣಾಟಕ ರಾಜ್ಯಲಕ್ಷ್ಮಿಯು ಒಂದೆಡೆಯಲ್ಲಿ ನಿಲ್ಲದೆ ಆಂಧ್ರ, ಮಹಾರಾಷ್ಟ್ರ ಮುಂತಾದ ಕಡೆಗಳಲ್ಲಿಯೂ ಹೋಗಿ ಸೇರಿದಳು. ಕೋಲಾರ ಜಿಲ್ಲೆಯೂ ತೆಲುಗು ಜಿಲ್ಲೆಯೆಂದೇ ಕರೆಯಬಹುದಾದರೂ, ಕನ್ನಡ ಭಾಷೆಗೆ ಇರುವ ಪ್ರಾಶಸ್ತ್ಯವನ್ನು ನೋಡಿದರೆ ಜನರು ಎಷ್ಟೊಂದು ಉದಾರತೆಯುಳ್ಳವರಾಗಿರುವರು, ಕನ್ನಡ ಭಾಷೆಯ ಮೇಲೆ ಎಷ್ಟೊಂದು ಅಭಿಮಾನವಿರುವುದು, ಎಂಬುದು ಮನವರಿಕೆಯಾಗುತ್ತೆ. ಈಚೆಗೆ ಭಾಷಾಭಿವೃದ್ಧಿಯ ಪ್ರಯತ್ನಗಳು ನಡೆಯುತ್ತಿರುವುದು ಕನ್ನಡ ಮಾತೆ ಸೌಂದರ್ಯದಿಂದ ಶೋಭಿಸಲು ಸಾಧಕವಾಗಿರುತ್ತೆ. ಜನಾಂಗದ ಏಳಿಗೆಗೆ ನಮ್ಮ ಪ್ರಾಚೀನ ಸಂಸ್ಕೃತಿಯು ಮೂಲವಾಗಿರುತ್ತೆ. ಸಜೀವವಾದ ಸಂಸ್ಕೃತಿ ನಮ್ಮದು. ಅದನ್ನು ಪೋಷಿಸುವುದರ ಮೂಲಕ ಆ ಕಲ್ಪವೃಕ್ಷವು ಹೆಚ್ಚಿನ ಫಲಗಳನ್ನು ಕೊಟ್ಟು ನಮ್ಮ ನಾಡನ್ನು ಸೌಭಾಗ್ಯದಿಂದಿಡುವುದರಲ್ಲಿ ಸಂದೇಹವಿಲ್ಲ. ನಮ್ಮ ಕನ್ನಡ ಮಾತೆಯು ಇಂದು ಮಲಿನವಾಗಿರಬಹುದು. ಆಕೆಯ ಸೌಂದರ್ಯ ಮಾಸಿರಬಹುದು. ಆದರೆ ಆಕೆಯ ಚೈತನ್ಯ ಆಕೆಯ ರತ್ನಭಂಡಾರ, ಮಕ್ಕಳ ಮೇಲೆ ಆಕೆಗಿರುವ ಪ್ರೀತಿ ಇವಕ್ಕೆ ಲೋಪ ಬಂದಿಲ್ಲ. ಆದ್ದರಿಂದ ನಿರ್ಜೀವವಾದ ಕಟ್ಟಡಗಳನ್ನು ಕಟ್ಟುವ ಪ್ರಯತ್ನವನ್ನು ಬಿಟ್ಟು ಅಮರವಾದ ನಮ್ಮ ಸಾಹಿತ್ಯವನ್ನು ಶೋಭಿಸುವಂತೆ ಮಾಡೋಣ. ಅಧಿಭೌತಿಕವಾದ ಶೃಂಗಾರ ದೃಷ್ಟಿಯಿಂದ ಕಟ್ಟಡಗಳನ್ನು ಕಟ್ಟುವುದನ್ನು ಮನ್ನಿಸಿ, ಅಧ್ಯಾತ್ಮ ಸ್ವರೂಪವಾದ ನಮ್ಮ ಸರ್ವ ಸಂಪತ್ತಾದ, ನಮ್ಮ ವಿಶಿಷ್ಟ ವೈಶಿಷ್ಟ್ಯವಾದ ಸಾಹಿತ್ಯ ವೃಕ್ಷವನ್ನು ಬೆಳೆಸಲು ಪ್ರಯತ್ನಿಸೋಣ. ಹಾಗೆ ಮಾಡಲು ಎಲ್ಲ ಕನ್ನಡ ಅಭಿಮಾನಿಗಳೂ ಪ್ರಯತ್ನ ಪಡುವರೆಂದು ಪ್ರಾರ್ಥಿಸುತ್ತೇನೆ." ಎಂದು ಹೇಳಿದರು. ಅನಂತರ ಲಾವಣಿಕಾರರಾದ ಶ್ರೀ ರಾಮಸ್ವಾಮಿ, ನೀಲಕಂಠಯ್ಯನವರಿಂದ ಲಾವಣಿಗಳು ಹಾಡಲಾಯಿತು. ಶ್ರೀ ಬಿ. ಎನ್. ರಂಗಸ್ವಾಮಿಗಳಿಂದ ಹಳ್ಳಿಯ ಪದಗಳು ಹಾಡಲಾಯಿತು. ಹೆಣ್ಣುಮಕ್ಕಳ ಕೋಲಾಟವೂ, ನಡೆದು ಮಂಗಳಾಚರಣೆಯೊಂದಿಗೆ ಮೊದಲನೆಯ ದಿನದ ಉತ್ಸವವು ಮುಗಿಯಿತು.

ರಾತ್ರಿ ೭-೩೦ ಇಂದ ೧೧ ಘಂಟೆವರೆಗೆ ಟಿ. ಬಿ. ಯಲ್ಲಿ ಶ್ರೀ ಸುಂದರರಾಯರು ಮತ್ತು ಇತರ ಸಾಹಿತಿಗಳ ಸಮ್ಮುಖದಲ್ಲಿ ಶ್ರೀ ರಾಜರತ್ನಂರವರು ತಮ್ಮ ಕವಿತೆಗಳನ್ನು ಓದಿ ಪಂಡಿತ ಪಾಮರರ ಮನಸ್ಸನ್ನು ಆನಂದಗೊಳಿಸಿದರು. ಊಟವಾದ ನಂತರ ಲಾವಣಿಕಾರರಿಂದ ಮತ್ತೆ ಲಾವಣಿ ಹಾಡಲಾಯಿತು.

### ಎರಡನೆಯ ದಿನದ ಕಾರ್ಯಕಲಾಪಗಳು

ಭಾನುವಾರ ಬೆಳಿಗ್ಗೆ ೮-೩೦ಕ್ಕೆ ಸಮ್ಮೇಳನ ಶ್ರೀ॥ ಬೆನಗಲ್ ರಾಮರಾಯರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಲಾವಣಿಗಳು ಹಾಡಿದ ನಂತರ ಶ್ರೀಮತಿ ಆರ್. ಕಲ್ಯಾಣಮ್ಮನವರು 'ಮಕ್ಕಳ ಕೂಟದ' ಆವಶ್ಯಕತೆಯನ್ನು ಕುರಿತು ಒಂದು ಸ್ವಾರಸ್ಯವಾದ ಭಾಷಣವನ್ನು ಮಾಡಿ, ಸಭೆಯಲ್ಲಿ ನೆರದಿದ್ದ ತಾಯಿತಂದೆಯರನ್ನು ಕುರಿತು ಮಕ್ಕಳ ಪುರೋಭಿವೃದ್ಧಿಯಲ್ಲಿ ಅವರು ಕೈಗೊಳ್ಳಬೇಕಾದ ಕರ್ತವ್ಯದ ಕಡೆಗೆ ಅವರ ಮನಸ್ಸನ್ನೆಳೆದರು. ಮಕ್ಕಳಕೂಟಗಳನ್ನೇರ್ಪಡಿಸಿ ಮಕ್ಕಳಲ್ಲಡಗಿರುವ ಅದ್ಭುತ ಶಕ್ತಿಗಳನ್ನು ಹೊರಗೆಳೆದು ಪ್ರಜ್ವಲಿಸುವಂತೆ ಮಾಡಿ ಮುದ್ದುರತ್ನಗಳನ್ನಾಗಿ ಮಾಡಬೇಕು. ಈ ಭಾಗದಲ್ಲಿ ನಮ್ಮ ಉದಾಶೀನವೂ ಅನಾದರಣೆಯೂ ಇಂದಿನ ಮತ್ತು ಮುಂದಿನ ಜನಾಂಗದ ಪುರೋಭಿವೃದ್ಧಿಗೆ ದೊಡ್ಡ ಕುಂದಕವಾಗಿ ಪರಿಣಮಿಸುವುದೆಂದು ತಿಳಿಸಿದರು.

ಅನಂತರ ಸಮ್ಮೇಳನಕ್ಕೆ ಬಂದಿದ್ದ ಬರಹಗಾರರು ತಮ್ಮ ತಮ್ಮ ಕವಿತೆಗಳನ್ನೂ ಪ್ರಬಂಧಗಳನ್ನೂ ಓದಿದರು. ಶ್ರೀ॥ ಬೆನಗಲ್

ರಾಮರಾಯರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಕನ್ನಡ ವಾಕ್‌ಚಲನ ಚಿತ್ರಗಳ ವಿಷಯದಲ್ಲಿ ಅಂದಿನ ಸಭೆಯಲ್ಲಿ ಓದಿದ ಪ್ರಬಂಧದಲ್ಲಿ ಕಾಣಿಸಿರುವ ಅಂಶಗಳು ನಿಜವಾಗಿಯೂ ನಮ್ಮಗಳ ಅವಗಾಹನೆಗೆ ಯೋಗ್ಯವಾದುವು. ಕನ್ನಡ ಭಾಷೆಯಲ್ಲಿ ಉತ್ತಮ ಚಿತ್ರಗಳ ತಯಾರಿಕೆಯಾಗುವುದರಿಂದ ದೇಶೋನ್ನತಿ ಭಾಷೋನ್ನತಿಯಾಗುವುದರಲ್ಲಿ ಸಂದೇಹವಿಲ್ಲವೆಂದು ತಿಳಿಸಿದರು.

ಪುನಃ ಸಭೆ ೪ಘಂಟೆಗೆ ಶ್ರೀ|| ಜೆ. ಬಿ. ಮಲ್ಲಾರಾಧ್ಯರ ಅಧ್ಯಕ್ಷತೆಯಲ್ಲಿ ಸೇರಿ ಲಾವಣಿಗಳಿಂದ ಪ್ರಾರಂಭವಾಗಿ ಮಕ್ಕಳಿಗೆ ವಿವಿಧ ಆಟಪಾಟಗಳು ಸ್ಪರ್ಧೆಗಳು ನಡೆದುವು. ಬೌರಿಂಗ್‌ಪೇಟೆಯ ಶ್ರೀ|| ಲಕ್ಷ್ಮೀನಾರಾಯಣರಾಯರು 'ಸಾಹಿತ್ಯ ಜೀವನದ ಪ್ರತಿಬಿಂಬ' ಎಂಬ ಗಹನವಾದ ವಿಚಾರವಾಗಿ ಭಾಷಣಮಾಡುತ್ತಾ "ಧರ್ಮದಿಂದ ಸುಂದರವಾಗಿರುವುದು ನಮ್ಮ ಸಾಹಿತ್ಯ, ಹೊರಗಡೆಯ ಸಂಸ್ಕೃತಿ ನಮ್ಮ ಮೇಲೆ ತನ್ನ ವರ್ಚಸ್ಸನ್ನು ಬೀರುತ್ತಿದೆ. ಇದರ ಪ್ರಭಾವದಿಂದ ನಮ್ಮ ಸಂಸ್ಕೃತಿ ಹಾಳಾಗುತ್ತಿದೆ. ಯಾವ ದೇಶದ ಸಾಹಿತ್ಯವೇ ಆಗಲಿ ಆ ದೇಶದ ಜನಜೀವನದ ಮೇಲೆ ನಿಂತಿರುತ್ತದೆ. ಜೀವನ ತುಚ್ಛವಾಗಿದ್ದರೆ ಸಾಹಿತ್ಯ ತುಚ್ಛವಾಗುವುದು. ಜೀವನ ಸಾಹಿತ್ಯದ ಉಸಿರು. ಬಲಹೀನವಾದ ಸಾಹಿತ್ಯ ಸಾಹಿತ್ಯವೆನಿಸಿಕೊಳ್ಳಲಾರದು. ಆದ್ದರಿಂದ ನಮ್ಮ ತಾಯಂದಿರು ಕನ್ನಡ ಪ್ರೇಮಿಗಳು, ಲಕ್ಷ್ಮೀಶ, ಬಸವ, ರನ್ನ, ಷಡಕ್ಷರಿ ಮುಂತಾದ ರತ್ನದಂತಹ ಮಕ್ಕಳು ಹುಟ್ಟಬೇಕೆಂದು ಹರಕೆ ಹೊರಬೇಕು. ನಮ್ಮ ಜೀವನವೆಲ್ಲಾ ಸಾಹಿತ್ಯಕ್ಕಾಗಿ ಸವೆಯಬೇಕು" ಎಂಬುದಾಗಿ ಹೇಳಿದರು.

ಅನಂತರ ಶ್ರೀ|| ಬಿ. ಎನ್. ರಂಗಸ್ವಾಮಿಯವರು 'ಜನಪದ ಸಾಹಿತ್ಯ'ದ ವಿಷಯವಾಗಿ ಮಾತಾಡಿ, ಗ್ರಾಮಪುನರುದ್ಧಾರವಾಗಬೇಕಾದರೆ ಗ್ರಾಮವಾಸಿಗಳ ಸಾಹಿತ್ಯವನ್ನುದ್ಧರಿಸಬೇಕು. ಆದ್ದರಿಂದ ಕನ್ನಡ ಭಾಷೆಯ ಪ್ರೀತಿಯ ಜೀವಕಳೆಯನ್ನು ತುಂಬಲು ವಿದ್ಯಾವಂತನ ಬೆಂಬಲ ಬೇಕು ಎಂದು ತಿಳಿಸಿದರು. ಇದಾದನಂತರ ಕೋಲಾರದ ಬಾಲಕರ್ನಾಟಕ ಸಂಘದ ಪ್ರತಿನಿಧಿಯಾಗಿ ಬಂದಿದ್ದ ಶ್ರೀರಂಗನ್ ಎಂಬ ವಿದ್ಯಾರ್ಥಿ 'ಕನ್ನಡ ಸಾಹಿತ್ಯ' ಎಂಬ ವಿಚಾರವಾಗಿ ಅಂಕಿ ಅಂಶಗಳಿಂದ ಕೂಡಿದ ಸ್ವಾರಸ್ಯವಾದ ಭಾಷಣವನ್ನು ಮಾಡಿದನು. ಶ್ರೀ|| ಬಿ. ಎಲ್. ರಮಾನಂದರವರು (ಕೋಲಾರ ಪೌರಸಭೆಯ ಉಪಾಧ್ಯಕ್ಷರು) ಕೋಲಾರ ಪೌರಸಭೆಯಲ್ಲಿ ಕೆಲವು ತಿಂಗಳ ಹಿಂದೆ ನಡಸಿದ ಬೇವುಡು ಶಾಸ್ತ್ರಿಗಳ ಅಕ್ಷರಪ್ರಚಾರ ಕ್ರಮವನ್ನೂ ಅದರಿಂದ ಆಗಿರುವ ಸತ್ಪ್ರಯೋಜನವನ್ನೂ ತಿಳಿಸಿ ಇಲ್ಲಿಯೂ ಸಾಕ್ಷರತಾಪ್ರಚಾರ ಕಾರ್ಯವನ್ನು ಕೈಗೊಳ್ಳಬೇಕೆಂದು ಪ್ರಾರ್ಥಿಸಿದರು.

ಇವರ ಅನಂತರ ಶ್ರೀಮಾನ್ ದೇವುಡೂರವರು, ಕಾಳಿದಾಸನ ಕವಿತೆಗಳನ್ನು ಆಧಾರವಾಗಿಟ್ಟುಕೊಂಡು ಕರ್ನಾಟಕ ಸಂಸ್ಕೃತಿಯ ವೈಭವವನ್ನು ತಿಳಿಸಿದರು ಹಾಗೆಯೇ ನಿರಕ್ಷರತೆಯನ್ನು ನೀಗಿ ಜನರ ಜ್ಞಾನಮಟ್ಟವನ್ನು ಏರಿಸಲು ತಾವು ತಯಾರಿಸಿರುವ ಅಕ್ಷರ ಪ್ರಚಾರ ಪದ್ಧತಿಯನ್ನು ವಿವರಿಸಿದರು.

ಅಧ್ಯಕ್ಷರು ಬಹುಮಾನ ವಿನಿಯೋಗ ಮಾಡಿ ಸಮಾಪ್ತಿ ಭಾಷಣ ಮಾಡುತ್ತಾ 'ನಾನು ಸಾಹಿತಿಯಲ್ಲ. ಹಾಗೆ ಆಗುವೆನು ಎಂಬ ನಂಜಿಕೆಯೂ ನನಗಿಲ್ಲ. ಆದರೂ ಕನ್ನಡದಲ್ಲಿ ಗಾಢವಾದ ಪ್ರೇಮ ನನ್ನಲ್ಲಿ ಉಂಟು. ಅಪ್ರಾರ್ಥಿತವಾಗಿ ಇಂತಹ ಸಮ್ಮೇಳನಗಳಿಗೆ ಹೋಗಬೇಕು ಅನಿಸುತ್ತದೆ. ನನ್ನ ಮಾನ್ಯ ಮಿತ್ರರಾದ ಶ್ರೀ|| ಬಿ. ಎನ್. ರಂಗಸ್ವಾಮಿ ಮತ್ತು ಶ್ರೀ|| ಎಂ. ವೆಂಕಟಕೃಷ್ಣಪ್ಪನವರು ಕನ್ನಡ ಮಾತೆಯ ಸೇವೆಯಲ್ಲಿ ತೊಡಗಿರುವುದನ್ನು ಕಂಡು ಅವರು ನನ್ನನ್ನು ಅಧ್ಯಕ್ಷತೆಯನ್ನು ವಹಿಸಬೇಕೆಂದು ಕೋರಿದಾಗ ನನಗೆ ನಿರಾಕರಿಸಲು ಆಗಲಿಲ್ಲ. ಇನ್ನು ಭಾಷಾ ವಿಚಾರವಾಗಿ ಹೇಳುವುದಾದರೆ ಮಾನವನು ಉದ್ಧಾರವಾಗಬೇಕಾದರೆ ಅವನ ಭಾಷೆ, ಅವನ ಜೀವನ, ಅವನ ಸಾಹಿತ್ಯ ಇವು ಉತ್ತಮವಾಗಬೇಕು. ಎಂದಿನವರೆಗೆ ದೇಶದಲ್ಲಿ ಅನಕ್ಷರಸ್ಥರು ಇರುವರೋ ಅಂದಿನವರೆವಿಗೂ ದೇಶದಲ್ಲಿ ಅಜ್ಞಾನವು ಆವರಿಸಿರುತ್ತದೆ. ನಮ್ಮ ಜನರನ್ನು ಮೊಟ್ಟಮೊದಲು ಅಕ್ಷರಸ್ಥರನ್ನಾಗಿ ಅಜ್ಞಾನ ಮಂದಿರದಿಂದ ಹೊರಗೆಳೆಯಲು ಪ್ರಯತ್ನ ಮಾಡಬೇಕಾದ್ದು ಬಹು ಮುಖ್ಯ ಕರ್ತವ್ಯವಾಗಿರುತ್ತದೆ. ಆದ್ದರಿಂದ ಎಲ್ಲರೂ ಈ ಪವಿತ್ರ ಕಾರ್ಯಕ್ಕೆ ಪ್ರಯತ್ನಿಸಬೇಕಲ್ಲದೆ ಸಹಕಾರ ಹಸ್ತವನ್ನೂ ನೀಡಬೇಕು. ಹೀಗೆಂದು ಹೇಳಿ ಶ್ರೀಮನ್ಮಹಾರಾಜರವರು ಕೆಲವು ದಿನಗಳ ಹಿಂದೆ ಸಾಹಿತ್ಯ ಪರಿಷತ್ತಿನ ರಜತೋತ್ಸವದಲ್ಲಿ ಅಪ್ಪಣೆಕೊಡಿಸಿದ ದಿವ್ಯ ಸಲಹೆಗಳನ್ನು ಸಭೆಯಲ್ಲಿ ತಿಳಿಸಿ ಕರ್ನಾಟಕ ಸಿಂಹಾಸನಾಧೀಶ್ವರರಾಗಲು, ರತ್ನ ಮಕುಟವನ್ನು ಧರಿಸಲು ಶ್ರೀ ನಾಲ್ವಡಿ ಕೃಷ್ಣನಲ್ಲದೆ ಮತ್ತಾರು ಆ ಗದ್ದುಗೆಗೆ ಅರ್ಹರು? ಸಾಹಿತ್ಯ ನಂದಾದೀವಿಗೆಯನ್ನು ಪ್ರಜ್ವಲಿಸಲು ಜನರ ಅಜ್ಞಾನಾಂಧಕಾರವನ್ನು ತೊಲಗಿಸಲು ಎಲ್ಲರೂ ನಿರತಿಶಯವಾದ ಪ್ರೇಮದಿಂದ ಸವೆಯೋಣ. 'ಸಿರಿಗನ್ನಡಂ ಗೆಲ್ಗೆ'' ಎಂದು ಪ್ರಾರ್ಥಿಸಿ ಭಾಷಣವನ್ನು ಮುಗಿಸಿದರು. ಶ್ರೀ|| ಚನ್ನಬಸಪ್ಪನವರು ಎಲ್ಲರನ್ನೂ ಹೃತ್ಪೂರ್ವಕವಾಗಿ ವಂದಿಸಿದರು. ಶ್ರೀ|| ಬೆನಗಲ್ ರಾಮರಾಯರು ಅತಿಥಿಗಳ ಮತ್ತು ಪ್ರತಿನಿಧಿಗಳಪರವಾಗಿ ಈ ಉತ್ಸವಕ್ಕೆ ಕಾರಣಕರ್ತರಾದ ಶಿಡ್ಲಘಟ್ಟ ಕರ್ನಾಟಕ ಸಂಘದ ಮಹನೀಯರನ್ನು ವಂದಿಸಿದರು. ಮೈಸೂರು ರಾಷ್ಟ್ರಗೀತೆಯೊಂದಿಗೆ ಈ ಎರಡು ದಿನದ ಸಾಹಿತ್ಯೋತ್ಸವ ಬಹು ಯಶಸ್ವಿಯಾಗಿ ಕೊನೆಗೊಂಡಿತು.

---

## ಕನ್ನಡ ನಾಡಿನ ಜನರಲ್ಲಿ ಬಿನ್ನಹ

### ಕರ್ನಾಟಕ ಸಂಘದ ಬೆಳ್ಳಿ ಹಬ್ಬ ಮತ್ತು ಡಾ|| ಸವಣೂರ ಹನುಮಂತರಾಯರ ಷಷ್ಟ್ಯಬ್ದಪೂರ್ತಿ

ಬೆಳಗಾಂವಿಯ ಆದ್ಯ ಸಂಘವಾದ **ಕರ್ನಾಟಕ ಸಂಘವು** ಹುಟ್ಟಿ ೨೫ ವರುಷಗಳಾದುವು. ಅದರ ಸ್ಥಾಪಕರಾದ ಡಾ|| ಸವಣೂರ ಹನುಮಂತರಾಯರಿಗೂ ೬೦ ವರುಷಗಳು ಪೂರ್ತಿಯಾದುವು. ಆದುದರಿಂದ ಈ ಎರಡೂ ಶಾಂತಿ ಸಮಾರಂಭಗಳನ್ನು ಕರ್ನಾಟಕ ಸಂಘದ ಪರವಾಗಿ ಇದೇ ತಿಂಗಳ **೨೨ನೆಯ ತಾರೀಖಿನ ಸೋಮವಾರ ದಿನ** ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳೂ ಮೈಸೂರು ಸಂಸ್ಥಾನದ ಎಕ್ಸಾಯಿಜ ಕಮೀಷನರರೂ ಆದ **ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್,** ಎಂ.ಎ. ಅವರ ಅಧ್ಯಕ್ಷತೆಯಲ್ಲಿ ನೆರವೇರಿಸುವದು ಗೊತ್ತುಮಾಡಿದೆ. ಈ ಸಮಾರಂಭಕ್ಕೆ ಕನ್ನಡ ನಾಡಿನ ಪ್ರಮುಖರಾದ ಶ್ರೀ||ಗಳಾದ ಮುದವೀಡು ಕೃಷ್ಣರಾಯರೂ, ದಿವಾಕರ ರಂಗರಾಯರೂ, ಬೇಂದ್ರೆ ದತ್ತರಾಯರೂ, ಕರಮರಕರ ದತ್ತರಾಯರೂ, ಆಲೂರ ವೆಂಕಟರಾಯರೂ, ಶ್ರೀಮತಿ ಪಂಜೆ ಕೃಷ್ಣಾಬಾಯಿಯವರೇ ಮೊದಲಾದವರೂ ಬರಲೊಪ್ಪಿದ್ದಾರೆ. ಅಂದು ಬೆಳಗಾಂವಿಯಲ್ಲಿ ಜರುಗುವ ಈ ಸಮಾರಂಭಗಳಿಗೆ ಕನ್ನಡ ನಾಡಿನ–ನುಡಿಯ ಅಭಿಮಾನಿಗಳೆಲ್ಲರೂ ಬಂದು ಭಾಗವಹಿಸಿ ಯಶಸ್ವಿಯಾಗಿ ನಡಸಿಕೊಡಬೇಕಾಗಿ ಬಿನ್ನವಿಸುತ್ತೇವೆ.

ಈ ಎರಡೂ ಸಮಾರಂಭಗಳು ಸಾಂಗವಾಗಿ ಜರುಗಬೇಕಾದರೆ ಧನ ಸಹಾಯದ ಆವಶ್ಯಕತೆ ಇದೆ. ಆದುದರಿಂದ ಕನ್ನಡ ನಾಡಿನ ಎಲ್ಲ ಸಂಘ ಸಂಸ್ಥೆಯವರೂ ಅಭಿಮಾನಿಗಳೂ ಶ್ರೀಮಂತರೂ ತಮ್ಮ ಶಕ್ತ್ಯಾನುಸಾರ ಧನ ಸಹಾಯ ಮಾಡಬೇಕಾಗಿ ಬೇಡಿಕೊಳ್ಳುತ್ತೇವೆ.

**ಸ್ಪಾಟಿ ಶಾಮರಾಯ**
ಗೌ|| ಕಾರ್ಯದರ್ಶಿ
ಕರ್ನಾಟಕ ಸಂಘ, ಬೆಳಗಾಂವಿ

---

### ಕನ್ನಡ ವಾಙ್ಮಯ ಸಂಘ : ಬೆಂಗಳೂರು

ಯುನೈಟೆಡ್ ಮಿಷನ್ ಹೈಸ್ಕೂಲಿನ ಮೇಲ್ಕಂಡ ಸಂಘದ ಆರಂಭ ಭಾಷಣವನ್ನೂ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರ ಭಾವಚಿತ್ರದ ಅನಾವರಣೋತ್ಸವವನ್ನೂ ಕಳೆದ ೮–೭–೪೦ನೆಯ ಸೋಮವಾರ ಸಂಜೆ ಶ್ರೀ|| ಜಿ. ಪಿ. ರಾಜರತ್ನಂ ಎಂ.ಎ. ಅವರು ನೆರವೇರಿಸಿದರು. "ಶ್ರೀ" ಯವರ ಭಾವಚಿತ್ರವನ್ನು ಕನ್ನಡ ಸಾಹಿತ್ಯಾಭಿಮಾನಿಗಳಾದ ಶ್ರೀ|| ಎಂ. ಕೆ. ತಿಪ್ಪಯ್ಯ, ಬಿ. ಎ. ಅವರು ಸಂಘಕ್ಕೆ ಅರ್ಪಿಸಿರುವರು.





ಶುಕ್ರವಾರ, ಜುಲೈ ೧೯, ೧೯೪೦

## ಸಾಹಿತ್ಯ ಪೋಷಣೆ

ಆಯಾ ವರ್ಷದಲ್ಲಿ ಹುಟ್ಟಬಂದ ಪುಸ್ತಕಗಳ ಪರಿಚಯವನ್ನೂ ಸಮಾಲೋಚನೆಯನ್ನೂ ಮಾಡುವ ಕೆಲಸ ಎಷ್ಟು ಅಗತ್ಯವೆಂಬುದನ್ನು ಹಿಂದಿನ ಸಂಚಿಕೆಯೊಂದರಲ್ಲಿ ತಿಳಿಸಿದ್ದೆವು. ಒಟ್ಟು ಕನ್ನಡ ನಾಡಿನಲ್ಲಿ ನಡೆಯುತ್ತಿರುವ ಗ್ರಂಥರಚನೆಯ ಸ್ವರೂಪ, ಗುಣ, ದೋಷ ಯಾವುವೆಂಬುದು ತಿಳಿದ ಹೊರತು ಮುಂದೆ ಮಾಡಬೇಕಾದುದು ಯಾವ ಬಗೆಯದು ಎಂಬುದು ಸ್ಪಷ್ಟವಾಗಲಾರದು. ಈ ಕೆಲಸಕ್ಕೆ ಕನ್ನಡ ದೇಶದ ಎಲ್ಲ ಪ್ರಾಂತದ ಬರವಣಿಗೆಗಾರರ ಆಪ್ತಸಹಕಾರ ಬೇಕು. ಅದನ್ನು ದಯಮಾಡಿ ನೀಡಬೇಕೆಂದು **ಕನ್ನಡ ನುಡಿ**ಯ ಬೇಡಿಕೆ.

ನಮ್ಮ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಮಾತ್ರ ಈ ಕೆಲಸ ನಡೆದರೆ ಸಾಲದು. ಇಂದು ಭರತಖಂಡದ ಎಲ್ಲ ಪ್ರಾಂತ ಭಾಷೆಗಳಲ್ಲಿಯೂ ಹೊಸ ಬದುಕಿನ ಮಿಡುಕನ್ನೂ, ಕಾಂತಿ ಶ್ರದ್ಧೆಗಳನ್ನೂ ತೋರಿಸುವ ಸಾಹಿತ್ಯ ಹುಟ್ಟುತ್ತಿದೆ. ಹಲವು ಸಾಹಿತ್ಯಗಳು ಈಗಾಗಲೇ ಹಿಂದಿನ ಕಾಲದ ತಮ್ಮ ಚರಿತ್ರೆಯನ್ನು ಮಿಾರಿಸುವ ಹಿರಿಮೆಯನ್ನು ಗಳಿಸಿವೆ. ಇಂದಿನ ಇತರ ಯಾವ ದೇಶದ ಸಾಹಿತ್ಯಕ್ಕೂ ಕಡಮೆಯಿಲ್ಲದ ಗರಿಮೆಯನ್ನೂ ಸಾಧಿಸಲು ಪ್ರಯತ್ನಿಸುತ್ತಿವೆ. ಇದು ಈ ಕಾಲದ ವಿಶೇಷ ಲಕ್ಷಣವೆನ್ನಬಹುದು. ಇಂದು ಪ್ರಪಂಚವೆಲ್ಲ ಒಂದು ಮನೆ. ಯಾವ ಮೂಲೆಯಲ್ಲಿ ಏನು ನಡೆದರೂ ಅದು ಮನೆಯ ಎಲ್ಲಕ್ಕೂ ಸಂಬಂಧಿಸುವುದು; ಮನೆಯ ಒಟ್ಟು ಯೋಗಕ್ಷೇಮಗಳನ್ನು ಮಾರ್ಪುಗೊಳಿಸಲು ವೃತ್ತಪತ್ರಿಕೆ, ಮಾಸಪತ್ರಿಕೆ, ಗ್ರಂಥ ಪ್ರಚಾರ, ಬಾನುಲಿ ಮುಂತಾದ್ದರ ಮೂಲಕ ಈ ಪ್ರಪಂಚದ ಬೇರೆ ಬೇರೆ ಭಾಗಗಳು ಒಂದು ಅವಯವಿಯ ಅಂಗ ಉಪಾಂಗಗಳಂತೆ ಮೈತ್ರಿಯಲ್ಲಿ ನಡೆಯಬೇಕಾಗಿದೆ. ಯಾವ ಬಗೆಯ ಸಾಹಿತ್ಯ ಅಥವಾ ಕಲಾನಿರ್ಮಾಣವಾಗಲಿ ಯಾವ ಹೊಸ ಚೇತನದ ಹೊಮ್ಮುಗೆಯಾಗಲಿ ತಕ್ಷಣ ಬಾನಲ್ಲಿ ಉಲಿಯುತ್ತದೆ; ಬಗೆಯ ಬಾನಲ್ಲಿ ರೂಪುಗೊಳ್ಳುತ್ತದೆ; ಎದೆಯ ಕಡಲನ್ನು ಕೆರಳಿಸಿ ಅಲೆಯೆಬ್ಬಿಸುತ್ತದೆ. ಅದರ ಕಾವು ನೋವೂ ನಾಡಿಯ ಗತಿರೀತಿಯೂ ನೆತ್ತರನ್ನು ಕುದಿಸುತ್ತವೆ. ಎಲ್ಲೆಲ್ಲಿಯೂ ವಿಧವಿಧವಾದ ಮಾರ್ದನಿ ಕೊಡಿಸುತ್ತವೆ. ಎಲ್ಲಿಯೋ ಕೂಗಿದ ಕೂಗು ಮತ್ತೆಲ್ಲಿಯೋ ದೂರದಲ್ಲಿ ಹೊಸ ಭಾವಗಳನ್ನು ಪ್ರಚೋದಿಸುತ್ತದೆ. ಹೊಸ ಬಗೆಯ ಸೊಬಗನ್ನು ನಿರ್ಮಾಣಮಾಡಲು ನೆರೆಯುತ್ತದೆ. ಆದ್ದರಿಂದ ನಮ್ಮ ನೆರೆಯ ಮತ್ತು ಇತರ ಪ್ರಾಂತ ಭಾಷೆಗಳಲ್ಲಿ ಏನು ಕೆಲಸ ನಡೆಯುತ್ತಿದೆ ಎಂಬುದನ್ನು ಆದರದಿಂದಲೂ ಆಸಕ್ತಿಯಿಂದಲೂ ತಿಳಿಯಬೇಕಾದ್ದು ಅಗತ್ಯ. ಮೇಲ್ತರದ ಸಾಹಿತ್ಯ ಹುಟ್ಟಿರುವವುಗಳಲ್ಲಿನ ಕೆಲಸವಾದರೂ ಈವರೆಗೆ ಹೇಗೆ ನಡೆದುಬಂದಿದೆ, ಈವೊತ್ತು ಯಾವ ರೀತಿ ನಡೆಯುತ್ತಿದೆ ಎಂಬುದನ್ನು ಆಯಾ ಭಾಷಾ ಸಾಹಿತ್ಯಗಳನ್ನು ಅರಿತ ಗೆಳೆಯರು ದಯಮಾಡಿ **ಕನ್ನಡ ನುಡಿ**ಯ ಮೂಲಕ ಮಾಡಿಕೊಡಬೇಕು. ಆಗಾಗ ಬೇರೆ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ವಿಶೇಷ ಸಂಚಿಕೆ ಹೊರಡಿಸುವ ಏರ್ಪಾಡನ್ನು **ನುಡಿ** ಕೈಕೊಳ್ಳಬೇಕೆಂದಿದೆ.

ಪಡುವಲ ಗ್ರಂಥಪ್ರಪಂಚವನ್ನು ಕುರಿತ ಬರವಣಿಗೆಯೂ ಹೀಗೆಯೇ ನಮ್ಮ ಜನದ ತಿಳಿವಳಿಕೆಗೆ ಹರಿಯಬೇಕು. ಆಗ ನಮ್ಮ ಸಂಪತ್ತಿನ ಜೊತೆಗೆ ಹೊರ ಲೋಕದ ಬೇರೆ ಬಗೆಯ ಸಂಪತ್ತು ಕೂಡಿ ನಮಗೆ ಪುಷ್ಟಿ ದೊರೆತಂತಾಗುತ್ತದೆ. ನಮ್ಮ ದೇಶದ ಸಂಪ್ರದಾಯ, ನಯದ ನಡೆ, ಗುರಿಯ ವಿಲಾಸ, ಸಾಧನಾ ವೈಭವ ಒಂದು ತೆರನಾಗಿದ್ದರೆ, ಅದಕ್ಕೆ ಪ್ರತಿಯಾದ ಬೇರೆ ಬಗೆಯ ಮತ್ತು ಜೀವನದ, ಬೇರೆ ಸಂಸ್ಕಾರ ಆದರ್ಶಗಳುಳ್ಳ ಜನ ಯಾವಂತೆ ಬೆಳೆದಿದೆ, ನುಡಿಯುತ್ತಿದೆ ಎಂಬುದೂ ತಿಳಿದರೆಯೇ ಇಂದಿನ ಬಾಳು ತುಂಬಬಲ್ಲದು. ಸತ್ಯಕ್ಕೆ ಎಷ್ಟು ಮುಖಗಳಿವೆಯೋ ಅಷ್ಟು ಮುಖಗಳ ದರ್ಶನವೂ ಜನಕ್ಕೆ ಆಗಬೇಕು. ಸ್ವತಂತ್ರವಾಗಿ ಯೋಚಿಸಬಲ್ಲ ಜನ ಹೆಚ್ಚಿದಷ್ಟೂ ಆ ಸತ್ಯದ ಮುಖ ಹೆಚ್ಚು ಸ್ಪಷ್ಟವಾಗಿ, ವಿವರವಾಗಿ, ಹೆಚ್ಚು ಸೂಕ್ಷ್ಮವಾಗಿ ಕಾಣುವುದು ಸಾಧ್ಯವಾಗುವುದು. ಹಾಗೆ ಸ್ವತಂತ್ರವಾಗಿ ಯೋಚಿಸಬಲ್ಲವರ ಸಂಖ್ಯೆಯನ್ನು ಹೆಚ್ಚಿಸುವ ಕೆಲಸ ಪ್ರತಿ ದೇಶದಲ್ಲಿಯೂ ಪ್ರತಿ ಮನೆಯಲ್ಲಿಯೂ ನಡೆಯಬೇಕಾಗಿರುವ ಇಂದು ನಮ್ಮಲ್ಲಿಯೂ ಈಗ ಅಗತ್ಯವಾಗಿ ನಡೆಯಬೇಕಾಗಿದೆ.

ಆ ಬಗೆಗೆ, ಮೊದಲ ಹೆಜ್ಜೆಯಾಗಿ, ಪ್ರಪಂಚದ ಮಹಾಕಾವ್ಯ ಮತ್ತು ಪ್ರಖ್ಯಾತ ಕಲಾಕೃತಿ, ಕಲಾವೃತ್ತಿಗಳ ಸ್ಥೂಲ ಪರಿಚಯವನ್ನಾದರೂ ಮಾಡಿಕೊಡುವ ಕೆಲಸವನ್ನು ಜನ ಸಾಧಿಸಬೇಕು. ಹತ್ತು ಮಂದಿ ಶ್ರದ್ಧಾಳುಗಳು ಐದು–ಹತ್ತು ವರ್ಷ ನಿಶ್ಚಲವಾಗಿ ದುಡಿದರೆ ಎರಡು ಸಾವಿರ ವರ್ಷಗಳಲ್ಲಿ ಜಗತ್ತು ಕಾಣಿಸಿರುವ ಈ ತೆರದ ಭಾಗ್ಯದ ಹೊರ ಕಾಣ್ಕೆಯಾದರೂ ನಮ್ಮ ಜನಕ್ಕೆ ದೊರೆತಂತಾಗುವುದು. ಆಯಾ ಕೃತಿಯ ಮೂಲ ಶಕ್ತಿ, ಚೈತನ್ಯಗಳು ತೆರಂಬೊಳೆಯುವಂತೆ ಅದರ ಪರಿಚಯವನ್ನು ವಾರವಾರ **ನುಡಿ**ಯ ಪುಟಗಳಲ್ಲಿ ಮಾಡಿಕೊಡುವ ಪುಣ್ಯ ಲಭಿಸುವಂತೆ ನಾಡಿನ ಗೆಳೆಯರು ಅದಕ್ಕೆ ಸಹಾಯ ನೀಡಬೇಕೆಂದು ಪ್ರಾರ್ಥಿಸುತ್ತೇವೆ. ಜೊತೆಗೆ, ತಿಂಗಳಿಗೊಂದಾವರ್ತಿಯಾದರೂ ಆಯಾ ತಿಂಗಳ ಅತ್ಯುತ್ತಮ ಪುಸ್ತಕ ಮತ್ತು ವಿಚಾರದ ಸ್ವರೂಪವನ್ನು ಅದಕ್ಕೆ ಒಪ್ಪುವ ಸಹಾಯಕವಾದ ಅಥವಾ ವಿಮರ್ಶೆಮಾಡುವ ಟೀಕೆ ವ್ಯಾಖ್ಯಾನಗಳೊಡನೆ ಸುಲಭವಾಗಿ ಸಂಗ್ರಹವಾಗಿ ಮಾಡಿಕೊಟ್ಟರೆ ಉಪಕಾರ ಇನ್ನೂ ದೊಡ್ಡದಾಗುವುದು.

ಇವೆಲ್ಲ ಒಂದು ದೇಹಕ್ಕೆ ಆಹಾರ ಪುಷ್ಟಿ ಉಂಟುಮಾಡಿಕೊಡುವಂತಹ ವಿಧಾನಗಳು. ಕನ್ನಡ ಸಾಹಿತ್ಯಕ್ಕೆ ಬಗೆ ಬಗೆಯ ಪುಷ್ಟಿಯನ್ನು ಉಂಟುಮಾಡುವ ಎಲ್ಲ ವ್ಯವಸಾಯಗಳನ್ನೂ ಕೈಕೊಂಡು ನಮಗೆ ಈ ಉಪಕಾರ ನೀಡಬೇಕೆಂದು ನಾಡಿನ ಗೆಳೆಯರನ್ನೆಲ್ಲ ಈ ಮೂಲಕ ಪ್ರಾರ್ಥಿಸುತ್ತೇವೆ.

## ಅಭಿನಂದನೆಗಳು

ಸಾರ್ವಭೌಮ ಸರ್ಕಾರದವರು ಬೆಂಗಳೂರಿನ ಸುಪ್ರಸಿದ್ಧ ವರ್ತಕರೂ ದಾನಶೂರರೂ ಆದ ಶ್ರೀ. ಧರ್ಮಪ್ರಕಾಶ ಧರ್ಮಾತ್ಮ ಎಸ್. ಸಜ್ಜನರಾಯರವರಿಗೂ, ಸರ್ಕಾರಿ ಉದ್ಯಾನವನಗಳ ಮುಖ್ಯಾಧಿಕಾರಿಗಳಾದ ಶ್ರೀಮಾನ್ ಎಚ್. ಸಿ. ಜವರಯ್ಯನವರಿಗೂ 'ರಾವ್ ಬಹದ್ದೂರ್' ಬಿರುದನ್ನು ದಯಪಾಲಿಸಿರುವುದು ಈಗಾಗಲೇ ಮಹಾಜನಗಳಿಗೆ ತಿಳಿದ ಸಂಗತಿಯಾಗಿದೆ.



ಶ್ರೀ ಸಜ್ಜನರಾಯರು ಪರಿಷತ್ತಿನ 'ಸಹಾಯಕ' ರಾಗಿದ್ದುಕೊಂಡು ಅವರ ವಿಷಯದಲ್ಲಿ ಆದರವನ್ನೂ, ಉತ್ಸಾಹವನ್ನೂ ತೋರಿಸುತ್ತಿದ್ದಾರೆ. ಬೆಳ್ಳಿಯ ಹಬ್ಬದ ಕಾಲದಲ್ಲಿ ಉದಾರವಾಗಿ ಧನಸಹಾಯ ಮಾಡಿದ್ದಲ್ಲದೆ ತಮ್ಮ ಭವ್ಯವಾದ ಛತ್ರವನ್ನು ಅತಿಥಿಗಳಿಗಾಗಿ ಬಿಟ್ಟುಕೊಟ್ಟು ಬಹಳ ಉಪಕಾರ ಮಾಡಿದ್ದಾರೆ.

ಶ್ರೀ ಜವರಯ್ಯನವರು ಪರಿಷತ್ತಿನ ವಿಷಯದಲ್ಲಿ ಅಭಿಮಾನವುಳ್ಳವರು. ಉತ್ಸವ ಕಾಲಗಳಲ್ಲಿ ಉದಾರವಾಗಿ ತಮ್ಮ ಸಹಾಯ ಸಹಕಾರಗಳನ್ನು ನೀಡುತ್ತಿರುತ್ತಾರೆ.



ಪ್ರಪಂಚದ ಚೀಫ್ ಸ್ಕೌಟರವರಾದ, ಲಾರ್ಡ್ ಬೇಡನ್ ಪೊವೆಲ್‌ರವರಿಂದ ಪರಿಷತ್ತಿನ ಆಜೀವ ಸದಸ್ಯರಾದ, ರಾಜಧರ್ಮಪ್ರಸಕ್ತ ಶ್ರೀ|| ಕೆ. ಶಂಕರನಾರಾಯಣರಾವ್, ಎಂ.ಎ., ಬಿ.ಎಲ್. ಅವರಿಗೆ "ಸಿಲ್ವರ್ ವುಲ್ಫ್" ಎಂಬ ಲಾಂಛನ ದೊರೆತಿರುವುದಾಗಿ ವರ್ತಮಾನ ಬಂದಿದೆ. ಶ್ರೀಯುತರು ಕನ್ನಡ ಪ್ರೇಮಿಗಳು, ಪರಿಷತ್ತಿನ ಶ್ರೇಯೋಕಾಂಕ್ಷಿಗಳು, ರಾಷ್ಟ್ರಸೇವೆಯಲ್ಲಿ ಸದಾ ಬದ್ಧಕಂಕಣರು.

ಈ ಮಹನೀಯರುಗಳನ್ನು ಪರಿಷತ್ತು ಈ ಮೂಲಕ ಅಭಿನಂದಿಸಲಿಚ್ಛಿಸುತ್ತದೆ.

---

**ಬೆಂಗಳೂರು**

**ಗೌರ್ನಮೆಂಟ್ ಹೈಸ್ಕೂಲ್ ಮಲ್ಲೇಶ್ವರಂ**

ಕರ್ನಾಟಕ ಸಂಘದ ೧೯೪೦-೪೧ನೆಯ ಸಾಲಿನ ಮೊದಲನೆಯ ಸಭೆ ಮಲ್ಲೇಶ್ವರದ ಶ್ರೀರಾಮಭಜನ ಮಂದಿರದ ಸಭಾಂಗಣದಲ್ಲಿ ತಾರೀಖು ೬-೭-೪೦ನೇ ಶನಿವಾರ ಸಾಯಂಕಾಲ ಸೇರಿತ್ತು. ಪಾಠಶಾಲಾ ಉಪಾಧ್ಯಾಯರೂ ಇತರ ಮಾನ್ಯ ಮಹಿಳೆಯರೂ, ಮಹನೀಯರೂ ವಿದ್ಯಾರ್ಥಿಗಳೂ ದಯಮಾಡಿಸಿದ್ದರು.

ಶ್ರೀಮಾನ್ ಬೆನಗಲ್ ರಾಮರಾಯರು ಅಧ್ಯಕ್ಷಪೀಠವನ್ನು ಅಲಂಕರಿಸಿದ್ದರು. ದೇವತಾಪ್ರಾರ್ಥನೆಯಾದ ನಂತರ ಒಬ್ಬ ವಿದ್ಯಾರ್ಥಿನಿಯಿಂದ ಸುಶ್ರಾವ್ಯವಾದ ವೀಣಾವಾದನವಾಯಿತು. ಅಧ್ಯಕ್ಷರು ಶ್ರೀಯುತ ಕೆ. ವಿ. ಪುಟ್ಟಪ್ಪನವರ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಅನಂತರ ಶ್ರೀ|| ಪುಟ್ಟಪ್ಪನವರು ಸುಮಾರು ಮುಕ್ಕಾಲು ಘಂಟೆಯ ಕಾಲ ತಮ್ಮ ಸಹಜವೂ ಲಲಿತವೂ ಸುಂದರವೂ ಆದ ಕವಿವಾಣಿಯಿಂದ ಈ ಕೆಳಗೆ ಕಂಡಂತೆ ಉಪನ್ಯಾಸಮಾಡಿ, ಕೊನೆಯಲ್ಲಿ 'ಕನ್ನಡದ ಬಾವಟೆ'ದಿಂದ ಶ್ರೀ|| ಬೇಂದ್ರೆಯವರ 'ಕನಸು' ತಮ್ಮ 'ಅರುಣೋದಯ' ಎಂಬ ಎರಡು ಕವನಗಳನ್ನು ಸ್ವಾರಸ್ಯವಾಗಿ ಓದಿದರು.

ಭಾಷಣದ ಸಾರಾಂಶ: "ಕನ್ನಡ ಭಾಷೆ ಅತ್ಯುನ್ನತ ಸ್ಥಿತಿಯಲ್ಲಿದ್ದು ಕೆಲಕಾಲ ಮರೆಯಾಗಿದ್ದು ಅನಂತರ ಅದರ ನವೋದಯ ಈಚೆಗೆ ಸುಮಾರು ಐವತ್ತು ವರ್ಷಗಳಿಂದುಂಟಾಗಿ ಈಗ ಒಂದು ಘಟ್ಟಕ್ಕೆ ಬಂದಿದೆಯೆನ್ನಬಹುದು. ನಮ್ಮೆಲ್ಲಾ ಈ ನೂತನ ದೃಷ್ಟಿಯನ್ನು ಉಂಟುಮಾಡಿದವರು ರಾಜಸೇವಾಸಕ್ತ ಪ್ರೊ|| ಬಿ. ಎಂ. ಶ್ರೀಕಂಠಯ್ಯನವರು. ಅವರಿಗೆ ನಾವೆಲ್ಲರೂ ಚಿರಋಣಿಗಳು.

ಸಾಹಿತ್ಯವೆಂಬುದು ಸಕಲ ಶಾಸ್ತ್ರಗಳ ಸಾರ. ಈಗ ವಿದ್ಯಾರ್ಥಿಗಳಿಗೆ ಶಿಕ್ಷಣ ಬಹುಮಟ್ಟಿಗೆ ದೇಶಭಾಷೆಗಳ ಮೂಲಕ ದೊರೆಯುತ್ತಿದೆ. ಇದು ಶುಭೋದಯ. ವಿದ್ಯಾರ್ಥಿಗಳು ಯಾವ ಶಾಸ್ತ್ರವನ್ನೇ ಕಲಿಯಲಿ, ಯಾವ ಜೀವನ ಮಾರ್ಗವನ್ನೇ ಅವಲಂಬಿಸಲಿ, ಅವರು ಕೇವಲ ಐಹಿಕ ಪ್ರಯೋಜನಗಳ ಕಡೆಗೆ ಮನಗೊಡದೆ ತಮ್ಮ ಆತ್ಮ ವಿಕಾಸಕ್ಕೆ ಕಾರಣವಾದ, ಅಲೌಕಿಕ ಆನಂದಕ್ಕೆ ಸಾಧನವಾದ ಕಲೆಯ ಕಡೆಗೆ ದೃಷ್ಟಿಯನ್ನು ಕೊಡಬೇಕು. ಎಲ್ಲರೂ ತಾಯ್ನುಡಿಯಲ್ಲಿ ಅಭಿಮಾನ ತೋರಿ ನಮ್ಮ ಸಂಸ್ಕೃತಿ ಮತ್ತು ಸಾಹಿತ್ಯ ಇವುಗಳನ್ನು ಅಭಿವೃದ್ಧಿಗೆ ತರುವುದರ ಮೂಲಕ ನಮ್ಮ ನಾಡಿನ ಮೇಲ್ಮೆಗೆ ಸಾಧಕರಾಗಬೇಕು. ನಾವೂ ವಿದೇಶೀಯರೊಡನೆ ಸ್ಪರ್ಧಿಸಿ ಅವರೆಷ್ಟು ಮಟ್ಟಿಗೆ ಸಾಹಿತ್ಯ ಮತ್ತು ವಿಜ್ಞಾನ ಇವುಗಳಿಂದ ಮೇಲೆನಿಸಿಕೊಂಡಿದ್ದಾರೆಯೋ ಹಾಗೆಯೇ ನಾವೂ ಏಳಿಗೆಯನ್ನು ಪಡೆಯಲು ಯತ್ನಿಸಬೇಕು."

ಬಳಿಕ ಅಧ್ಯಕ್ಷರು ತಮ್ಮ ವ್ಯಾಸಂಗದ ಕಾಲದಲ್ಲಿದ್ದ ಕನ್ನಡ, ಕನ್ನಡ ಕಲಿವವರು, ಕನ್ನಡ ಕಲಿತವರು ಇವರ ಚರಿತ್ರೆಯನ್ನು ಮೊದಲುಮಾಡಿ ಈಗಿನ ಕನ್ನಡ, ಕನ್ನಡ ಕಲಿವವರು, ಕಲಿತವರ ಸ್ಥಿತಿಯ ವರೆಗಿನ ಇತಿಹಾಸವನ್ನೂ ತಮ್ಮ ಅನುಭವವನ್ನೂ ಬಹಳ ಚೆನ್ನಾಗಿ ತಿಳಿಸಿದರು.

ಕೊನೆಯಲ್ಲಿ ಕಾರ್ಯದರ್ಶಿಗಳಾದ ಶ್ರೀ|| ಎನ್. ವಿ. ಪದ್ಮನಾಭಾಚಾರ್ಯರು ಉಪನ್ಯಾಸಕರಿಗೂ ಅಧ್ಯಕ್ಷರಿಗೂ ಅಂದಿನ ಉಪನ್ಯಾಸವನ್ನು ಶೀಘ್ರಲಿಪಿಯಲ್ಲಿ ತೆಗೆದುಕೊಳ್ಳಲು ಸೌಕರ್ಯವನ್ನು ಕಲ್ಪಿಸಿದ್ದ ಷಾರ್ಟ್‌ಹ್ಯಾಂಡ್ ಅಸೋಸಿಯೇಷನ್ನಿನ ಅಧ್ಯಕ್ಷರು ಶ್ರೀ|| ಎಸ್. ಜಿ. ನರಸಿಂಹಯ್ಯನವರಿಗೂ ಉಚಿತವಾಗಿ ಸಭಾಂಗಣವನ್ನು ದಯಪಾಲಿಸಿದ ಶ್ರೀರಾಮಭಜನ ಸಭಾಸದಸ್ಯರಿಗೂ ಅನಂತ ಧನ್ಯವಾದಗಳನ್ನು ಅರ್ಪಿಸಿದರು.

ರಾಷ್ಟ್ರಗೀತೆಯನ್ನು ಹಾಡಿದ ಮೇಲೆ ಸಭೆ ಮುಕ್ತಾಯವಾಯಿತು.

**ಚಿಕ್ಕಮಗಳೂರು: ಕರ್ನಾಟಕ ಸಂಘ**

ಚಿಕ್ಕಮಗಳೂರಿನ ಕರ್ನಾಟಕ ಸಂಘದ ಆಶ್ರಯದಲ್ಲಿ ೧೨ನೆಯ ತಾರೀಖು ಸಾಯಂಕಾಲ ಅಲ್ಲಿನ ಪುರಭವನದಲ್ಲಿ ಶ್ರೀ|| ಆಲೂರು ವೆಂಕಟರಾಯರ ಷಷ್ಟ್ಯಬ್ದಿಪೂರ್ತಿ ಉತ್ಸವ ಪ್ರಯುಕ್ತ ಸಾರ್ವಜನಿಕ ಸಭೆ ಸೇರಿದ್ದಿತು.

**ಧಾರವಾಡ: ತುಂಬಿಗಳ ಬಳಗ**

ಇಲ್ಲಿನ ವಿಕ್ಟೋರಿಯಾ ಹೈಸ್ಕೂಲಿನ ತುಂಬಿಗಳ ಬಳಗದವರು ನಾಳೆ ತಮ್ಮ ಬಳಗದ ನಾಲ್ಕನೆಯ ಹುಟ್ಟುಹಬ್ಬವನ್ನು ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರ ಅಧ್ಯಕ್ಷತೆಯಲ್ಲಿ ಆಚರಿಸುವರು. ಆ ಸಂದರ್ಭದಲ್ಲಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಭಾವಚಿತ್ರದ ಅನಾವರಣೋತ್ಸವವನ್ನು ನೆರವೇರಿಸುವರು.

# ಕನ್ನಡ ಸಾಹಿತ್ಯ ಪರೀಕ್ಷೆಗಳು

ಮುಂದಿನ ಡಿಸೆಂಬರ್ ತಿಂಗಳ ಮೊದಲನೆಯ ವಾರದಲ್ಲಿ ನಡೆಯಲಿರುವ ಸಾಹಿತ್ಯ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವವರಿಗೆ, ಕಳೆದ ಜೂನ್ ತಿಂಗಳಲ್ಲಿ ನಡೆದ ಪರೀಕ್ಷೆಗಳಲ್ಲಿ ತೇರ್ಗಡೆಯಾದವರಿಗೆ 'ಬೆಳ್ಳಿಯ ಹಬ್ಬ'ದ ಕಾಲದಲ್ಲಿ ಪ್ರಶಸ್ತಿಗಳನ್ನು ಕೊಟ್ಟಂತೆಯೇ, ಮುಂಬರುವ ಕನ್ನಡ ಸಾಹಿತ್ಯ ಸಮ್ಮೇಳನದ ಸಮಯದಲ್ಲಿ ಪ್ರಶಸ್ತಿಗಳನ್ನು ಕೊಡಲಾಗುವುದು. ಮೊದಲನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರಿಗೆ "ಕನ್ನಡ ಅಣುಗ (ಅಣುಗಿ)" ಎಂಬ ಬಿರುವನ್ನೂ, ಎರಡನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರಿಗೆ "ಕನ್ನಡ ಕಾವ (ಕಾವೆ)" ಎಂಬ ಬಿರುದನ್ನೂ, ಮೂರನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರಿಗೆ "ಕನ್ನಡ ಜಾಣ (ಜಾಣೆ)" ಎಂಬ ಬಿರುದನ್ನೂ **ಕೊಡಬೇಕೆಂದು ಗೊತ್ತಾಗಿದೆ.**

ಈ ಪರೀಕ್ಷೆಗಳಿಗಾಗಿ ಈ ಮೊದಲೇ ಗೊತ್ತುಪಡಿಸಿರುವ ಪಾಠದ ಪುಸ್ತಕಗಳಲ್ಲಿ ಕೆಲವನ್ನು ತೆಗೆದುಹಾಕಿ, ಪರೀಕ್ಷೆಗಳಿಗೆ ಕಟ್ಟಲು ಬಯಸುವವರು ವೆಚ್ಚ ಮಾಡಬೇಕಾಗಿರುವ ಹಣದ ಮತ್ತು ಓದಬೇಕಾಗಿರುವ ಪುಸ್ತಕಗಳ ಹೊರೆಯನ್ನು ಕೆಲಮಟ್ಟಿಗೆ ಇಳಿಸಲಾಗಿದೆ.

ಈ ಮೂರು ಪರೀಕ್ಷೆಗಳಲ್ಲಿ ಯಾವುದಾದರೊಂದು ಪರೀಕ್ಷೆಗೆ ಯಾವ ಊರಲ್ಲಿಯಾದರೂ **ಹತ್ತು ಮಂದಿ** ಸೇರುವಂತಿದ್ದರೆ, ಅಲ್ಲಿಯ ಮಹಾಜನರು ಆ ಪರೀಕ್ಷೆಯ ಪಾಠಗಳನ್ನು ಹೇಳಿಕೊಡುವ ಏರ್ಪಾಡನ್ನು ಮಾಡಬೇಕಾಗಿ ಬಿನ್ನಹ. ಮುಖ್ಯವಾಗಿ ಕನ್ನಡ ಕೂಟಗಳು (ಸಂಘಗಳು) ಇರುವ ಊರುಗಳಲ್ಲಿ ಈ ಪರೀಕ್ಷೆಗಳಿಗಾಗಿ ಪಾಠಗಳನ್ನು ಹೇಳಿಕೊಡುವ ತರಗತಿಗಳನ್ನು ಬಲ್ಲಿದರಾದ ಕನ್ನಡಿಗರು ಆಯಾ ಊರುಗಳಲ್ಲಿಯ ಮಹಾಜನರ ಸಹಾಯದಿಂದ ನಡಸಬೇಕು. ಇಂತಹ ಪಾಠಗಳನ್ನು ಹೇಳಿಕೊಡುವ ತರಗತಿಗಳನ್ನು ನಡಸುವವರಿಗೆ ಕೈಲಾದಮಟ್ಟಿಗೆ ನೆರವಾಗಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಹಾತೊರೆಯುತ್ತಿದ್ದರೂ, ಪರಿಷತ್ತಿನ ಆರ್ಥಿಕಸ್ಥಿತಿ ಹಾಗೆ ಮಾಡಲು ಇನ್ನೂ ಅನುಕೂಲವಾಗಿಲ್ಲ. ಕನ್ನಡ ನಾಡಿನ ಮಹಾಜನರು ಹೆಚ್ಚು ಹೆಚ್ಚಾಗಿ ಪರಿಷತ್ತಿಗೆ **ಸದಸ್ಯರಾಗಿಯೂ, ಅಭಿಮಾನಿಗಳಾಗಿಯೂ** ಸೇರಿದರೆ ಇಂತಹ ಅನುಕೂಲತೆ ಬೇಗನೆ ಉಂಟಾಗುವುದು. ಪಾಠಗಳನ್ನು ಹೇಳಿಕೊಡುವ ತರಗತಿಗಳನ್ನು ನಡಸಬಯಸುವವರು ಬೇಗನೆ ಪ್ರಾರಂಭಿಸಿ ಪರಿಷತ್ತಿನ ಗೌರವ ಕಾರ್ಯದರ್ಶಿಯವರಿಗೆ ಬರೆದು ತಿಳಿಸಬೇಕು. ಪಾಠಗಳನ್ನು ಓದಲು ಬರುವವರು **ಅಭಿಮಾನಿಗಳಾಗಬೇಕು.**

## ಪಾಠಕ್ರಮಗಳು

**ಮೊದಲನೆಯ ಪರೀಕ್ಷೆ:** (೧) ಕನ್ನಡ ನಾಡಿನ ಪ್ರಾಥಮಿಕ ಶಾಲೆಗಳಲ್ಲಿಯ ನಾಲ್ಕನೆಯ ತರಗತಿಗಾಗಿ ಗೊತ್ತುಪಡಿಸಿದ ಕ್ರಮಿಕ ಪುಸ್ತಕ.

(೨) ಒಂದು ಸಾವಿರದ ವರೆಗೆ ಎಣಿಕೆ. ೧ ರಿಂದ ೨೦ರ ವರೆಗೆ ಮಗ್ಗಿ. ಸುಲಭ ಗಣಿತ: ಕೂಡುವುದು, ಕಳೆಯುವುದು, ಗುಣಾಕಾರ, ಭಾಗಾಕಾರ. ರೂಪಾಯಿ, ಆಣೆ, ಕಾಸುಗಳ ಬಾಯಿಲೆಕ್ಕ.

ಸೂಚನೆ: ಈ ಪರೀಕ್ಷೆಗೆ ಒಂದು ಪ್ರಶ್ನಪತ್ರಿಕೆ; ಬಾಯಪ್ರಶ್ನೆಗಳೂ ಉಂಟು. ತೆರ ೮ ಆಣೆ ಕಟ್ಟಬೇಕು.

**ಎರಡನೆಯ ಪರೀಕ್ಷೆ:** (೧) ವ್ಯಾಕರಣ: ಶ್ರೀ॥ ತೀ. ನಂ. ಶ್ರೀಕಂಠಯ್ಯನವರ 'ಕನ್ನಡ ಮಧ್ಯಮ ವ್ಯಾಕರಣ' ಬೆಲೆ ರೂ. ೦–೪–೩.

(೨) ಸಾಹಿತ್ಯ: (ಅ) ನಾಟಕ: ಶ್ರೀನಿವಾಸರ 'ಶಾಂತಾ' ಬೆಲೆ ೬ ಆಣೆ. ಶ್ರೀ॥ ವಿ. ಸೀತಾರಾಮಯ್ಯನವರ 'ಆಗ್ರಹ' ಬೆಲೆ ೧೨ ಆಣೆ. (ಆ) ಕಾವ್ಯ: ಕುಮಾರವ್ಯಾಸನ ಭಾರತ, ಭೀಷ್ಮಪರ್ವ, ಸಂಧಿಗಳು ೧ ರಿಂದ ೩. ಶ್ರೀನಿವಾಸರ 'ಬಿನ್ನಹ' ಬೆಲೆ ೫ ಆಣೆ. ಶ್ರೀ॥ ದೇಶಪಾಂಡೆ ಮನೋಹರರಾಯರ 'ಸರ್ವಜ್ಞನ ಸಂದೇಶ' ಬೆಲೆ ೮ ಆಣೆ. (ಇ) ಗದ್ಯ: ಶ್ರೀ॥ ಕೃಷ್ಣಶರ್ಮ ಬೆಟಗೇರಿಯವರ 'ರಾಜಯೋಗಿ' ಬೆಲೆ ೧೨ ಆಣೆ. ಶ್ರೀ॥ ಅ. ನ. ಕೃಷ್ಣರಾಯರ 'ಸಂಧ್ಯಾರಾಗ' ಬೆಲೆ ರೂ. ೧–೦–೦. ಶ್ರೀ॥ ಎ. ಎನ್. ಮೂರ್ತಿರಾವ್ ಅವರ 'ಹಗಲುಗನಸುಗಳು' ಬೆಲೆ ೧೨ ಆಣೆ. ಶ್ರೀ॥ ದಿವಾಕರ ರಂಗರಾಯರ 'ಅಂತರಾತ್ಮನಿಗೆ' ಬೆಲೆ ೪ ಆಣೆ. ಶ್ರೀ॥ ವಿಲಾಸಿ (ಶ್ರೀರಂಗ) ಇವರ 'ಕೆಮಾಲಪಾಶಾ' ಬೆಲೆ ೧–೦–೦.

(೩) ಸಂಸ್ಕೃತಿ: ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರ 'ಕರ್ನಾಟಕ ಜನತೆಯ ಸಂಸ್ಕೃತಿ' ಬೆಲೆ ೬ ಆಣೆ.

ಸೂಚನೆ: ಈ ಪರೀಕ್ಷೆಗೆ ಎರಡು ಪ್ರಶ್ನಪತ್ರಿಕೆಗಳು. ತೆರ ೧ ರೂ. ಕಟ್ಟಬೇಕು.

**ಮೂರನೆಯ ಪರೀಕ್ಷೆ:** (೧) ಸಾಹಿತ್ಯ: (ಅ) ನಾಟಕ: ಶ್ರೀ॥ ಬಸಪ್ಪ ಶಾಸ್ತ್ರಿಗಳ 'ಶಾಕುಂತಲ' ಬೆಲೆ ೧ ರೂ. ಶ್ರೀ॥ ಎಂ. ಆರ್. ಶ್ರೀನಿವಾಸ ಮೂರ್ತಿಗಳ 'ನಾಗರಿಕ' ಬೆಲೆ ೧೨ ಆಣೆ. ಶ್ರೀ॥ ಕಾರಂತರ 'ಮುಕ್ತದ್ವಾರ' ಬೆಲೆ ೧೨ ಆಣೆ. (ಆ) ಕಾವ್ಯ: 'ಕನ್ನಡದ ಬಾವುಟ' ಬೆಲೆ ೧ ರೂ. 'ಹರಿಶ್ಚಂದ್ರಕಾವ್ಯ ಸಂಗ್ರಹ' ಬೆಲೆ ೧೨ ಆಣೆ. 'ಪಂಪರಾಮಾಯಣ ಸಂಗ್ರಹ' ಬೆಲೆ ೧೨ ಆಣೆ. (ಇ) ಗದ್ಯ: ಶ್ರೀ॥ ಹಳಕಟ್ಟಿಯವರ 'ನೈತಿಕ ಮತ್ತು ಭಕ್ತಿಯ ವಚನಗಳು' ಬೆಲೆ ೮ ಆಣೆ. ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರ 'ಬುದ್ಧ' ಬೆಲೆ ರೂ. ೧–೮–೦. ಶ್ರೀ॥ ಶ್ರೀನಿವಾಸರ 'ನಾಲ್ಕು ಸಣ್ಣ ಕತೆಗಳು' ಬೆಲೆ ೬ ಆಣೆ. ಶ್ರೀ॥ ಮುಳಿಯ ತಿಮ್ಮಪ್ಪಯ್ಯನವರ 'ಆದಿಪುರಾಣ ಸಂಗ್ರಹ' ಬೆಲೆ ೧ ರೂ.

(೨) ವ್ಯಾಕರಣ: 'ಕನ್ನಡ ಕೈಪಿಡಿ' ೧ನೆಯ ಸಂಪುಟ ಬೆಲೆ ರೂ. ೧–೪–೦. 'ಕವಿಚರಿತೆ' ಭಾಗ ೧, ೨, ೩. ಶ್ರೀ॥ ಡಿ. ವಿ. ಗುಂಡಪ್ಪನವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಬೆಲೆ ರೂ. ೧–೧೦–೦.

(೩) ಸಂಸ್ಕೃತಿ ಮತ್ತು ಚರಿತ್ರೆ: ಶ್ರೀ॥ ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ' ಬೆಲೆ ೧ ರೂ. ಪರಿಷತ್ತಿನ ಪ್ರಕಟನೆ – 'ಕನ್ನಡ ನಾಡಿನ ಚರಿತ್ರೆ'

ಸೂಚನೆ: ಈ ಪರೀಕ್ಷೆಗೆ ೩ ಪ್ರಶ್ನಪತ್ರಿಕೆಗಳು. ತೆರ ೨ ರೂ. ಕಟ್ಟಬೇಕು.

ಬೆಂಗಳೂರು
ತಾ॥ ೧೯–೭–೪೦

**ಬಿ. ವೆಂಕೋಬರಾವ್**
ಕಾರ್ಯದರ್ಶಿ

## ಶ್ರೀ ಆಲೂರರು ಮತ್ತು ಡಾ॥ ಸವಣೂರ ಅವರುಗಳ ಷಷ್ಠ್ಯಬ್ದಪೂರ್ತಿ ವರ್ಧಂತಿ ಆಚರಣೆ

ಕನ್ನಡ ನಾಡಿನ ಹಿರಿಯರಾದ ಶ್ರೀ॥ ಆಲೂರು ವೆಂಕಟರಾಯರು ಮತ್ತು ಡಾ॥ ಸವಣೂರ ಹನುಮಂತರಾಯರು ಇವರ ೬೧ನೇ ಹುಟ್ಟಿದ ಹಬ್ಬವನ್ನು ಆಚರಿಸಿ ಅಭಿನಂದಿಸಲು ೧೨ನೆಯ ತಾರೀಖು ಸಾಯಂಕಾಲ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ರಾಜಧರ್ಮ ಪ್ರಸಕ್ತ ಕೆ. ಶಂಕರನಾರಾಯಣರಾಯರು ಅಧ್ಯಕ್ಷತೆ ವಹಿಸಿದ್ದರು.

ಶ್ರೀ॥ ಸುಬ್ರಹ್ಮಣ್ಯ ಶಾಸ್ತ್ರಿಗಳವರಿಂದ ಪ್ರಾರ್ಥನೆಯಾದ ಬಳಿಕ, ಅಧ್ಯಕ್ಷರು ಸಭಿಕರಿಗೆ ಸಭೆ ಸೇರಿರುವ ಉದ್ದೇಶವನ್ನು ತಿಳಿಯಪಡಿಸಿ, ಶ್ರೀ॥ ಆಲೂರು ವೆಂಕಟರಾಯರ ಮತ್ತು ಡಾ॥ ಸವಣೂರ ಹನುಂತರಾಯರ ಸೇವಾಪ್ರಶಂಸೆ ಮಾಡಿದರು. ಈ ಇಬ್ಬರು ಹಿರಿಯರು ದೇಶಸೇವೆಯೇ ಪವಿತ್ರವಾದುದೆಂಬ ಧ್ಯೇಯದಿಂದ, ಕರ್ನಾಟಕದಲ್ಲಿ ಸಾಹಿತ್ಯ ಸೇವೆ ಸಮಾಜಸೇವೆಗಳನ್ನು ಸಲ್ಲಿಸಿ ತೇಜಸ್ಸಿನಿಂದ ಬೆಳಗುತ್ತಿರುವ ತಾರೆಗಳಂತಿದ್ದಾರೆ ಎಂದರು. ಶ್ರೀ॥ ಆಲೂರರು ಗೀತೆಯಲ್ಲಿ ವಿಶೇಷವಾದ ಪಾಂಡಿತ್ಯವನ್ನುಗಳಿಸಿ ಅನೇಕ ಗ್ರಂಥಗಳನ್ನು ರಚಿಸಿರುವರೆಂದೂ ಉತ್ತರ ಕರ್ನಾಟಕದಲ್ಲಿ ಹೆಸರುಗಳಿಸಿದ ಆಗ್ರಗಣ್ಯರಲ್ಲಿ ಇವರು ಒಬ್ಬರೆಂದೂ ಕನ್ನಡ ನಾಡಿನ ಅಭಿವೃದ್ಧಿಗಾಗಿ ಅನೇಕ ವಿಧದಲ್ಲಿ ಸೇವೆ ಸಲ್ಲಿಸಿರುವರೆಂದೂ ಸಲ್ಲಿಸುತ್ತಿರುವರೆಂದೂ, 'ಕರ್ನಾಟಕವು ಒಂದಾಗದೆ ಮುಂದಾಗದು' ಎಂಬುದು ಅವರ ಮೂಲ ಮಂತ್ರವೆಂದೂ, ರಾಷ್ಟ್ರ ಸೇವೆ, ಜನಸೇವೆ, ದರಿದ್ರ ನಾರಾಯಣನ ಸೇವೆಯಲ್ಲಿ ಇವರಿಬ್ಬರೂ ಅಗ್ರಗಣ್ಯರಾದವರೆಂದೂ ಹೇಳಿ ಅವರ ಆದರ್ಶವನ್ನು ಕಿರಿಯರಾದವರು ಅನುಸರಿಸಬೇಕೆಂದೂ, ಅವರಿಗೆ ಭಗವಂತನು ದೀರ್ಘಾಯುರಾರೋಗ್ಯಾಭಿವೃದ್ಧಿಯನ್ನು ದಯಪಾಲಿಸಲೆಂದೂ ಹಾರೈಸಿದರು.

ಅನಂತರ ಹಿರಿಯರಿಬ್ಬರ ಸೇವೆಯನ್ನು ಪ್ರಶಂಸಿಸಿ ಅನೇಕರು ಭಾಷಣ ಮಾಡಿದರು. ಶ್ರೀ॥ ಆಲೂರರು 'ಕನ್ನಡ ಕುಲಪುರೋಹಿತ'ರೆಂಬ ಅನ್ವರ್ಥನಾಮಕ್ಕೆ ಸರಿಯಾಗಿರುವರೆಂದು ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು ಹೇಳಿದರು. ರಾಷ್ಟ್ರೀಯ ಪ್ರೇಮ, ತತ್ವಜ್ಞಾನ ಪ್ರಸಾರಣೆ, ಕನ್ನಡ ನಾಡು ಒಂದಾಗಬೇಕೆಂಬ ಆಶೆ ಇವು ಶ್ರೀ॥ ಆಲೂರರ ಮುಖ್ಯವಾದ ಧ್ಯೇಯಗಳೆಂದೂ, ವೈದ್ಯ ಶಾಸ್ತ್ರದಲ್ಲಿ ಪಾಂಡಿತ್ಯ ಹೊಂದಿದವರಾದರೂ ಕನ್ನಡ ಸಾಹಿತ್ಯ ಸೇವೆಯಲ್ಲಿ ಡಾ॥ ಸವಣೂರರು ಆಸಕ್ತಿ ಹೊಂದಿದವರೆಂದೂ ಶ್ರೀ ಆಲೂರರು ಜನರ ಮಾನಸಿಕ ರೋಗವನ್ನು ಹೋಗಲಾಡಿಸಲು ಪ್ರಯತ್ನಿಸಿದಂತೆ ಡಾ॥ ಸವಣೂರರು ಶಾರೀರಕ ರೋಗವನ್ನು ಪರಿಹರಿಸಲು ಯತ್ನಿಸಿದವರೆಂದೂ ಶ್ರೀ ಶಿವಮೂರ್ತಿಶಾಸ್ತ್ರಿಗಳು ತಮ್ಮ ಭಾಷಣದಲ್ಲಿ ಹೇಳಿದರು. ಶ್ರೀ॥ ಅ. ನ. ಕೃಷ್ಣರಾಯರು ಭಾಷಣಮಾಡಿ 'ಕರ್ಣಾಟಕ ಗತವೈಭವ' 'ವೀರರತ್ನ' ಮುಂತಾದ ಅಮೋಘವಾದ ಗ್ರಂಥಗಳನ್ನು ಬರೆದು ಶ್ರೀ॥ ಆಲೂರರು ಕನ್ನಡಿಗರನ್ನು ಹುರಿದುಂಬಿಸಿದ್ದಾರೆಂದೂ, ಅವರು ಗೀತಾಭ್ಯಾಸವನ್ನು ೩೦ ವರ್ಷದಿಂದ ನಡಸುತ್ತಾ ಬಂದಿರುವರೆಂದೂ, ಅಂತಹವರ ವಿಷಯದಲ್ಲಿ ಕನ್ನಡಿಗರಾದ ನಾವು ಒಳ್ಳೆಯ ಮಾತನ್ನು ಧೈರ್ಯವಾಗಿ ನುಡಿಯುವುದೇ ಒಂದು ಮಹೋಪಕಾರವಾಗುವುದೆಂದೂ ಬೆಳಗಾಮಿನಲ್ಲಿ ಒಂದು ಕನ್ನಡ ಮನೆಯೆಂದರೆ ಡಾ॥ ಸವಣೂರರ ಮನೆ ಎಂದು ಹೇಳುವುದನ್ನು ತಾವು ಕೇಳಿರುವುದಾಗಿಯೂ ತಿಳಿಸಿದರು.

ಇಬ್ಬರೂ ಕನ್ನಡದ ಕುಲಕ್ಕಾಗಿ ಬಹಳ ತ್ಯಾಗಮಾಡುತ್ತಿದ್ದಾರೆಂದು ಶ್ರೀ॥ ರಂಗಪ್ಪ ಪೋತ್ದಾರರು ಹೇಳಿದರು.

ಶ್ರೀ॥ ಶಿವಮೂರ್ತಿಶಾಸ್ತ್ರಿಗಳು ಶ್ರೀ॥ ಆಲೂರು ವೆಂಕಟರಾಯರ ಭಾವಚಿತ್ರವೊಂದನ್ನು ಪರಿಷತ್ತಿಗೆ ಕೊಡುವುದಾಗಿ ವಾಗ್ದಾನಮಾಡಿದರು.

ಅಧ್ಯಕ್ಷರು ಈ ಹಿರಿಯರಿಬ್ಬರೂ ದೊಡ್ಡ ವ್ಯಕ್ತಿಗಳೆಂಬ ವಿಷಯದಲ್ಲಿ ಅವರ ಮನಸ್ಸಿಗೆ ಸಮಾಧಾನವೂ ಪ್ರೀತಿಯೂ ಉಂಟಾಗಿದೆಯೆಂದೂ ಇವರಿಗೆ ಭಗವಂತನು ದೀರ್ಘಾಯುರಾರೋಗ್ಯ ಸಂಪತ್ತನ್ನು ಕರುಣಿಸಲೆಂದೂ ಹೃತ್ಪೂರ್ವಕವಾಗಿ ಪ್ರಾರ್ಥನೆಮಾಡಿ ಅವರುಗಳ ವಿಷಯದಲ್ಲಿ ನಮಗಿರುವ ಪ್ರೀತಿ ಸಂತೋಷಗಳನ್ನು ನಿರ್ಣಯದ ಮೂಲಕ ಅವರುಗಳಿಗೆ ಕೃತಪಡಿಸಬೇಕೆಂದರು.

ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಆ ಹಿರಿಯರಿಬ್ಬರ ಗುಣಗಾನಮಾಡಿ, ಅಧ್ಯಕ್ಷರಿಗೂ ಭಾಷಣಕಾರರಿಗೂ ವಂದನೆಯನ್ನರ್ಪಿಸಿದರು. ಲಾರ್ಡ್ ಬೇರ್ಡ ಪೋವೆಲ್‌ರವರು ಸಭೆಯ ಅಧ್ಯಕ್ಷರಿಗೆ 'ಸಿಲ್ವರ್ ಉಲ್ಫ್' ಎಂಬ ಗೌರವವನ್ನು ದಯಪಾಲಿಸಿರುವ ಸಂತೋಷದ ಸುದ್ದಿ ಇಂದು ತಿಳಿದು ಬಂದಿದೆಯೆಂದೂ ಅದಕ್ಕಾಗಿ ಅವರನ್ನು ಅಭಿನಂದಿಸುವುದಾಗಿಯೂ (ಸಭಿಕರು ಕರತಾಡನದ ಮೂಲಕ ಸಂತೋಷ ಸೂಚಿಸಿದರು) ತಿಳಿಸಿದರು. ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಶ್ರೀ ಆಲೂರರ ಭಾವಚಿತ್ರವನ್ನು ಕರುಣಿಸುವುದಾಗಿ ವಾಗ್ದಾನ ಮಾಡಿರುವುದನ್ನು ತಾವು ಪರಿಷತ್ತಿನ ಪರವಾಗಿ ಸಂತೋಷದಿಂದ ವಂದನಾ ಪೂರ್ವಕವಾಗಿ ಸ್ವೀಕರಿಸುವುದಾಗಿ ತಿಳಿಸಿದರು. ಅನಂತರ ಸಭೆ ಮುಕ್ತಾಯಗೊಂಡಿತು.

---

## ಸಾಹಿತ್ಯ ಪರೀಕ್ಷೆಗಳ ಫಲಿತಾಂಶ

ಕಳೆದ ಜೂನ್ ತಿಂಗಳಲ್ಲಿ ನಡೆದ ಮೊದಲನೆಯ ಪರೀಕ್ಷೆಯಲ್ಲಿ ಈ ಕೆಳಗಿನ ವಿದ್ಯಾರ್ಥಿಗಳು ತೇರ್ಗಡೆ ಹೊಂದಿರುತ್ತಾರೆ:

| ಕ್ರಮಸಂಖ್ಯೆ | ಹೆಸರು | ಕೇಂದ್ರ | ತರಗತಿ |
|---|---|---|---|
| ೧. | ಶ್ರೀ॥ ಚಂದ್ರಶೇಖರ ವಿರೂಪಾಕ್ಷಪ್ಪ ವಂಗಿ | ಧಾರವಾಡ | ೧ |
| ೨. | ಶ್ರೀಮತಿ ಖಟಾವಕರ ವಿಮಲಾ | ,, | ೧ |
| ೪. | ,, ವಾಜಪೇಯ ತುಂಗಾ | ,, | ೧ |
| ೬. | ಶ್ರೀ॥ ಬಸಪ್ಪ ಗುರುಶಿದ್ದಪ್ಪ ಕೋತುಂಬ್ರಿ | ,, | ೧ |
| ೭. | ಶ್ರೀಮತಿ ಸುಲೋಚನಾ ಚಂದಾವರ | ,, | ೧ |
| ೮. | ,, ಲೀಲಾವತಿ | ಮೈಸೂರು | ೧ |
| ೯. | ,, ಸರೋಜ | ,, | ೧ |
| ೧೦. | ,, ನಾಗಲಕ್ಷ್ಮಮ್ಮ | ,, | ೧ |
| ೧೨. | ,, ಜಯಮ್ಮ | ,, | ೧ |
| ೧೪. | ಶ್ರೀ॥ ಸಿದ್ದಯ್ಯನ ಮಗ ಸಿದ್ದಯ್ಯ | ,, | ೧ |
| ೧೭. | ,, ಮಂಚಯ್ಯನ ಮಗ ಮಂಚಯ್ಯ | ,, | ೧ |
| ೨೧. | ,, ದೇಶಯ್ಯನ ಮಗ ತಿಬ್ಬಯ್ಯ | ,, | ೧ |
| ೨೨. | ,, ಬಂಗ್ಲೆ ಮಂಚಯ್ಯ | ,, | ೧ |
| ೩. | ಶ್ರೀಮತಿ ಕೂಸಕ್ಕ ರಂಗಪ್ಪ ಪೋತ್ದಾರ್ | ಧಾರವಾಡ | ೨ |
| ೫. | ,, ಕರಂದೀಕರ ಶಾಂತಾ | ,, | ೨ |
| ೧೧. | ,, ಹನುಮಮ್ಮ | ಮೈಸೂರು | ೨ |
| ೧೩. | ಶ್ರೀ॥ ದೊಡ್ಡಮಂಚಯ್ಯ | ,, | ೨ |
| ೧೫. | ,, ಕಾಳಯ್ಯನ ಮಗ ಸಿದ್ದಯ್ಯ | ,, | ೨ |
| ೧೬. | ,, ಜವರಯ್ಯನ ಮಗ ಮಂಚಯ್ಯ | ,, | ೨ |
| ೧೮. | ,, ಚಿಕ್ಕೀರಯ್ಯನ ಮಗ ಮಂಚಯ್ಯ | ,, | ೨ |
| ೧೯. | ,, ದ್ಯಾವಯ್ಯನ ಮಗ ಸಿದ್ದಯ್ಯ | ,, | ೨ |
| ೨೦. | ,, ಕೆ. ಮಲ್ಲಿಂಗಯ್ಯ | ,, | ೨ |

---

### ಕರ್ನಾಟಕ ಸಂಘ: ತಿಪಟೂರು

ಕಳೆದ ನಾಲ್ಕು ವರ್ಷಗಳಿಂದಲೂ ಜಪಾನಿನಲ್ಲಿ ವಾಣಿಜ್ಯ ಶಿಕ್ಷಣವನ್ನು ಪಡೆದು ಈಗತಾನೆ ತಾಯ್ನಾಡಿಗೆ ಮರಳಿ ಬಂದಿರುವ ಶ್ರೀಯುತ ಕೆ. ಎಲ್. ನಂಜಪ್ಪ ಎಂ. ಕಾಂ. (ಟೋಕಿಯೋ) ಅವರು ತಾರೀಖು ೫-೭-೪೦ನೆಯ ಶುಕ್ರವಾರ ಸಾಯಂಕಾಲ "ಜಪಾನಿನ ಅನುಭವ" ಎಂಬ ವಿಚಾರವಾಗಿ ಭಾಷಣ ಮಾಡಿದರು. ಶ್ರೀ॥ ಡಿ. ಎಸ್. ಮಲ್ಲಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಪ್ರಾರ್ಥನೆಯೂ, ಸ್ವಾಗತವೂ ಆದ ಬಳಿಕ ಉಪನ್ಯಾಸಕರು ಕಳೆದ ೬೦ ವರ್ಷಗಳಿಂದ ಜಪಾನು ಸಾಧಿಸಿರುವ ಅತ್ಯದ್ಭುತ ಪ್ರಗತಿಯನ್ನು ತಿಳಿಸಿ ಆ ಪ್ರಗತಿಗೆ ಅಲ್ಲಿನ ಪ್ರಾಥಮಿಕ ಶಿಕ್ಷಣ ಕ್ರಮವೇ ತಳಹದಿಯೆಂದು ವಿವರಿಸಿದರು. ಬಳಿಕ ವಿದ್ಯಾಭ್ಯಾಸದ ಇತರ ದರ್ಜೆಗಳ ಕ್ರಮ, ಸ್ತ್ರೀ ವಿದ್ಯಾಭ್ಯಾಸದ ವೈಶಿಷ್ಟ್ಯ, ಬಲಾತ್ಕಾರ ಸೈನ್ಯ ಶಿಕ್ಷಣ, ವಾಣಿಜ್ಯ ಮತ್ತು ಕೈಗಾರಿಕೆಗಳಿಗೆ ಜಪಾನ್ ಸರ್ಕಾರ ಕೊಡುವ ಉತ್ತೇಜನ, ಅಲ್ಲಿನ ಜನರ ದೇಶಾಭಿಮಾನ ಮತ್ತು ಉದ್ಯೋಗಶೀಲತೆ ಇವುಗಳನ್ನು ಮನದೂಗುವಂತೆ ಬಣ್ಣಿಸಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಉಪನ್ಯಾಸಕರ ಅಭಿಪ್ರಾಯವನ್ನು ಪುಷ್ಟೀಕರಿಸಿ ಪರದೇಶದವರ ಸಾಧನೆಗಳನ್ನು ಮಾದರಿಯಾಗಿಟ್ಟುಕೊಂಡು ನಾವು ಮುಂದುವರಿಯುವುದು ಲೇಸೆಂಬುದಾಗಿ ಹೇಳಿದರು.

## ಪರಿಷತ್ತಿನ ಸದಸ್ಯರಲ್ಲಿ ವಿಜ್ಞಾಪನೆ

ಬೆಳಗಾಂವಿಯಲ್ಲಿ ನಡೆದ ಸಕಲ ಸದಸ್ಯ ಅಧಿವೇಶನದಲ್ಲಿ 'ಕನ್ನಡ ನುಡಿ'ಯನ್ನು ಪರಿಷತ್ತಿನ ಎಲ್ಲ ಸದಸ್ಯರಿಗೂ ಉಚಿತವಾಗಿ ಕೊಡಬೇಕೆಂದು ಆದ ನಿರ್ಣಯವನ್ನೂ ಮತ್ತು ಇದರ ವಿಷಯವಲ್ಲಿ ಕಾರ್ಯ ಸಮಿತಿಯ ತೀರ್ಮಾನವನ್ನೂ ತಿಳಿಸಿ ಸದಸ್ಯರು ಪರಿಷತ್ತಿಗೆ ಸಲ್ಲಬೇಕಾದ ಚಂದಾ ಹಣವನ್ನು ಜಾಗ್ರತೆ ಕಳುಹಿಸಿಕೊಟ್ಟು ಉಪಕಾರ ಮಾಡಬೇಕೆಂದು ಹಿಂದೆಯೇ ವಿಜ್ಞಾಪನಾಪತ್ರಿಕೆಯ ಮೂಲಕ ಪ್ರಾರ್ಥಿಸಿಕೊಂಡಿದ್ದಾಗ್ಗೂ ಇನ್ನೂ ಪರಿಷತ್ತಿಗೆ ಸುಮಾರು ೪,೫೦೦ ರೂಗಳವರೆಗೆ ಚಂದಾ ಬರಬೇಕಾಗಿರುವುದು ಬಾಕಿ ಇರುತ್ತದೆ. ಈ ಸ್ಥಿತಿಯಲ್ಲಿ ಪರಿಷತ್ತು ದಿನೇದಿನೇ ಹೆಚ್ಚುತ್ತಿರುವ ಕಾರ್ಯಕಲಾಪಗಳನ್ನು ಸುಗಮವಾಗಿ ನಡಸಿಕೊಂಡುಹೋಗಲು ಕಷ್ಟವಾಗಿರುವುದೆಂಬ ವಿಷಯವನ್ನು ವಿಷಾದದಿಂದ ತಿಳಿಸಬೇಕಾಗಿದೆ.

ಚಂದಾ ಬಾಕಿ ಉಳಿಸಿಕೊಂಡಿದ್ದ ಸದಸ್ಯರೆಲ್ಲರೂ ಆಗಸ್ಟು ೨ನೆಯ ತಾರೀಖಿನೊಳಗಾಗಿ ದಯವಿಟ್ಟು ತಮ್ಮ ಚಂದಾ ಹಣವನ್ನು ಸಲ್ಲಿಸಬೇಕಾಗಿ ಪ್ರಾರ್ಥನೆ. ಹಾಗೆ ಮುಂದೆಯೂ ಬಾಕಿ ನಿಲ್ಲಿಸಿಕೊಳ್ಳುವ ಸದಸ್ಯರಿಗೆ 'ನುಡಿ'ಯನ್ನು ಕಳಿಸಲಾಗುವುದಿಲ್ಲ.

ಬೆಂಗಳೂರು
೧೯–೭–೪೦

ಬಿ. ವೆಂಕೋಬರಾವ್
ಗೌರವ ಕಾರ್ಯದರ್ಶಿ
ಮತ್ತು ಸಂಪಾದಕರು 'ಕನ್ನಡ ನುಡಿ'

---

## ಪರಿಷತ್ತಿನ ಸುದ್ದಿ

ಕಳೆದ ಸಂಚಿಕೆಯಲ್ಲಿ ಪ್ರಕಟಿಸಿದ ಬೆಳ್ಳಿಯ ಹಬ್ಬಕ್ಕೆ ಧನ ಸಹಾಯ ಮಾಡಿದವರ ಪಟ್ಟಿಯಲ್ಲಿ ಮಂಗಳೂರಿನ ೧ರೂ. ಸಹಾಯಕರಲ್ಲಿ ಶ್ರೀ|| ವಾಸುದೇವ ಅವರು ಎಂದು ತಪ್ಪುಬಿದ್ದಿದೆ. ದಯವಿಟ್ಟು ಅದನ್ನು ಶ್ರೀ|| ವಿ. ಎಸ್. ಕುಡ್ವ ಅವರು ಎಂದು ಓದಿಕೊಳ್ಳಬೇಕು.

ಬೆಂಗಳೂರಿನ ೧ರೂ. ಸಹಾಯಕರಲ್ಲಿ ಶ್ರೀ|| ಕೆ. ಎಸ್. ದೊರೆಸ್ವಾಮಿ ಅವರು ಎಂಬುದನ್ನು ಶ್ರೀ|| ಜಿ. ಜಿ. ಎಲ್. ಸ್ವಾಮಿ ಅವರು ಎಂದು ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆ.

ಬೆಳ್ಳಿಯ ಹಬ್ಬದ ವಿಶೇಷ ಸಂಚಿಕೆಗೆ ಬೇಕಾದ ಭಾವಚಿತ್ರಗಳನ್ನು ಈ ಕೆಳಗಿನ ಮಹಾಶಯರು ಒದಗಿಸಿಕೊಟ್ಟು ಉಪಕಾರ ಮಾಡಿರುತ್ತಾರೆ:

ಶ್ರೀ|| ಎಂ. ನರಸಿಂಹಮೂರ್ತಿ, ಮೈಸೂರು.
" ಕೆ. ಚಕ್ರಪಾಣಿ, ಮೆಡಿಕಲ್ ಸ್ಕೂಲ್, ಬೆಂಗಳೂರು.
" ಆರ್. ಎಸ್. ಜೋಶಿ, ಈಸ್ಟ್ ಎಂಡ್ ಸ್ಟೂಡಿಯೊ, ಬಸವನಗುಡಿ, ಬೆಂಗಳೂರು.

ಇವರುಗಳಿಗೆ ಪರಿಷತ್ತು ಋಣಿಯಾಗಿದೆ.

---

## ಕನ್ನಡ ಸುದ್ದಿ

**ಕನ್ನಡ ಬರಹಗಾರರಿಗೆ ಶ್ರೀಮನ್ಮಹಾರಾಜರವರ ಅನುಗ್ರಹ**

ಶ್ರೀ|| ಓ. ಎನ್. ಲಿಂಗಯ್ಯ, ಬಿ. ಎ. ಅವರು "ಮುಮ್ಮಡಿ ಶ್ರೀಕೃಷ್ಣರಾಜೇಂದ್ರ ಒಡೆಯರು" ಎಂಬ ಜೀವನ ಚರಿತ್ರೆಯನ್ನು ಬರೆದು ಮಹಾಸ್ವಾಮಿಯವರ ಸನ್ನಿಧಿಯಲ್ಲಿ ಒಪ್ಪಿಸಿದ್ದರು. ಪ್ರಭುವರ್ಯರು ಈ ಗ್ರಂಥವನ್ನು ಮೆಚ್ಚಿ ಗ್ರಂಥಕರ್ತರಿಗೆ ಒಂದು ನೂರು ರೂಪಾಯಿಗಳನ್ನು ಅನುಗ್ರಹಿಸಿ ದಯೆಪಾಲಿಸಿರುತ್ತಾರೆಂಬ ಸಂಗತಿಯನ್ನು ತಿಳಿಸಲು ಸಂತೋಷಿಸುತ್ತೇವೆ. ಈ ಪುಸ್ತಕಕ್ಕೆ ರಾಜಸೇವಾಸಕ್ತ ಪ್ರೊ|| ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಮುನ್ನುಡಿಯನ್ನು ಬರೆದಿರುತ್ತಾರೆ. ಈ ಪುಸ್ತಕವು ಸರ್ ಮಿರ್ಜಾರವರಿಗೆ ಅರ್ಪಿತವಾಗಿದೆ.

**ಮೈಸೂರಿನಲ್ಲಿ ಸಾಕ್ಷರತಾ ಪ್ರಚಾರ**

ಮೈಸೂರು ಪಟ್ಟಣದಲ್ಲಿ ನಿರಕ್ಷರತೆಯನ್ನು ಹೋಗಲಾಡಿಸುವ ಪವಿತ್ರ ಕಾರ್ಯವನ್ನು ಮೈಸೂರು ಯೂನಿವರ್ಸಿಟಿ ಯೂನಿಯನ್ನಿನವರು ಕೈಕೊಂಡು ಆಗಸ್ಟ್ ೧ನೆಯ ತಾರೀಖಿನಿಂದ ನಗರದ ನಾನಾ ಭಾಗಗಳಲ್ಲಿ ಶಾಲೆಗಳನ್ನು ಪ್ರಾರಂಭ ಮಾಡುವವರಿದ್ದಾರೆಂದೂ ಒಂದು ವರ್ಷದಲ್ಲಿ ಕನಿಷ್ಟಪಕ್ಷ ಒಂದು ಸಾವಿರ ಜನವನ್ನಾದರೂ ಅಕ್ಷರಸ್ಥರನ್ನಾಗಿ ಮಾಡುವ ಉದ್ದೇಶವಿದೆಯೆಂದೂ ತಿಳಿಯಬರುತ್ತದೆ. ಈಗಾಗಲೇ ಸುಮಾರು ಅರವತ್ತು ಕಾಲೇಜು ವಿದ್ಯಾರ್ಥಿಗಳು ಈ ಕಾರ್ಯಕ್ಕೆ ನೆರವಾಗಲು ಸಿದ್ಧರಾಗಿರುವೆಂದು ಕೇಳುತ್ತೇವೆ.

## ಮುಂಬಯಿ ಆಕಾಶವಾಣಿಯಲ್ಲಿ ಕನ್ನಡದ ಕಾರ್ಯಕ್ರಮಗಳು

### ಕನ್ನಡ ಜೀವನ ಮತ್ತು ಸಾಹಿತ್ಯಗಳ ವಿಚಾರವಾಗಿ

**ಮಂಗಳವಾರ ೨೩ನೆಯ ಜುಲೈ ೧೯೪೦** (ಸಂಜೆ ೪.೩೦-೫)

೧. ಕನ್ನಡ ಹಾಡುಗಳು.
೨. ಕರ್ನಾಟಕದ ಮಹಿಳೆಯರು—ಭಾಷಣ
ಧಾರವಾಡದ ಶ್ರೀಮತಿ ಶಕುಂತಳಾಬಾಯಿ ನಂದಾವರ, ಎಂ.ಎ. ಅವರಿಂದ.

**ಮಂಗಳವಾರ ೬ನೆಯ ಆಗಸ್ಟ್ ೧೯೪೦** (ಸಂಜೆ ೪.೩೦-೫)

೧. ಕನ್ನಡ ಹಾಡುಗಳು.
೨. ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು—ಭಾಷಣ
ಧಾರವಾಡದ ಶ್ರೀ|| ಮುದವೀಡು ಕೃಷ್ಣರಾಯರಿಂದ.

**ಮಂಗಳವಾರ ೨೦ನೆಯ ಆಗಸ್ಟ್ ೧೯೪೦** (ಸಂಜೆ ೪.೩೦-೫)

೧. ಕನ್ನಡ ಹಾಡುಗಳು.
೨. ಸರ್ವಜ್ಞಕವಿ—ಭಾಷಣ
ಬೆಂಗಳೂರಿನ ಶ್ರೀ|| ಅ. ನ. ಕೃಷ್ಣರಾಯರಿಂದ.

**ಮಂಗಳವಾರ ೩ನೆಯ ಸೆಪ್ಟೆಂಬರ್ ೧೯೪೦** (ಸಂಜೆ ೪.೩೦-೫)

ಕರ್ನಾಟಕದಲ್ಲಿ ಸಣ್ಣಕತೆಗಳು—ಭಾಷಣ.
ಶ್ರೀ|| ಅ. ನ. ಕೃಷ್ಣರಾಯರಿಂದ.

**ಮಂಗಳವಾರ ೧೭ನೆಯ ಸೆಪ್ಟೆಂಬರ್ ೧೯೪೦** (ಸಂಜೆ ೪.೩೦-೫)

ಕರ್ನಾಟಕದಲ್ಲಿ ಪತ್ರಿಕೋದ್ಯಮ—ಭಾಷಣ.
ಹುಬ್ಬಳ್ಳಿಯ ಶ್ರೀ|| ಹನುಮಂತರಾವ್ ಮೊಹರೆ ಅವರಿಂದ.

---

## ಸಾಹಿತ್ಯ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿರುವ ೨ನೆಯ ಮತ್ತು ೩ನೆಯ ಪರೀಕ್ಷೆಗಳಿಗೋಸ್ಕರ ಅಭ್ಯಾಸದ ತರಗತಿಗಳು ಬೆಳಗಾಂವಿ ಜಿಲ್ಲಾ ಸಾಹಿತ್ಯ ಸಮಿತಿಯ ಪರವಾಗಿ ಇದೇ ಜುಲೈ ೨೦ನೆಯ ತಾರೀಖಿನಿಂದ ಪ್ರಾರಂಭವಾಗುವವು. ಎಲ್ಲ ಹುಡಗರೂ, ಹುಡುಗಿಯರೂ, ಹಿರಿಯರೂ, ಕಿರಿಯರೂ, ಶಾಲೆ ಕಾಲೇಜುಗಳಲ್ಲಿ ಓದುತ್ತಿರುವವರೂ ಎಲ್ಲರೂ ಈ ತರಗತಿಗಳನ್ನು ಸೇರಬಹುದು. ಈ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಪರಿಷತ್ತು ಬಿರುದನ್ನು ಕೊಡುವದು ಎಲ್ಲರೂ ಈ ತರಗತಿಗಳ ಲಾಭವನ್ನು ಪಡೆಯಬೇಕಾಗಿ ಆಶಿಸಲಾಗಿದೆ.

**ಪ್ರಾಧ್ಯಾಪಕರು**

| | |
|---|---|
| ಪ್ರೊ|| ವ್ಹಿ. ಜಿ. ಕುಲಕರ್ಣಿ | ಶ್ರೀ|| ಎಂ. ಪಿ. ವಾಲಿ |
| ಶ್ರೀ|| ಪ್ರ. ಗೊ. ಕುಲಕರ್ಣಿ | ಶ್ರೀ|| ಎಸ್. ಡಿ. ಇಂಚಲ |
| ಶ್ರೀ|| ಆರ್. ಬಿ. ಪಾಟೀಲ | ಶ್ರೀ|| ಅರವಿಂದ ಜೋಶಿ |
| ಶ್ರೀ|| ಶಂಕರರಾವ ಕೇಪು | ಶ್ರೀ|| ಎಸ್. ಜಿ. ಕಟ್ಟಿ |
| ಶ್ರೀ|| ವ್ಹಿ. ಜಿ. ತೊರಗಲ್ಲ | ಶ್ರೀ|| ಡಿ. ಎಸ್. ಕರ್ಕಿ |

ಶ್ರೀ|| ವೆಂ. ಬಿ. ಲೋಕಾಪೂರ

ತೆರ: **ತಿಂಗಳೊಂದಕ್ಕೆ ನಾಲ್ಕಾಣೆ**
ಸ್ಥಳ: **ರಾಮದೇವರ ಓಣಿಯಲ್ಲಿಯ ಕನ್ನಡ ಪ್ರಾಥಮಿಕ ಶಾಲೆ**
ವೇಳೆ: **ಸಂಜೆಯ ೬ರಿಂದ ೮**

**ವೆಂ. ಬಿ. ಲೋಕಾಪುರ**
**ಡಿ. ಎಸ್. ಕರ್ಕಿ**
ಗೌ|| ಕಾರ್ಯದರ್ಶಿಗಳು

**ಸೂಚನೆ :**—ತರಗತಿಗಳನ್ನು ಸೇರಲಿಚ್ಛಿಸುವವರು ಕಾರ್ಯದರ್ಶಿಗಳ ಕಡೆಗಾಗಲಿ ಜಿಲ್ಹಾ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಪ್ಯಾಟಿ ಶಾಮರಾಯರ ಕಡೆಗಾಗಲಿ ಹೆಸರುಗಳನ್ನು ಕೊಡಬೇಕು.

೬೩-೬೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು



ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

ಸಂಪುಟ ೨
ಸಂಚಿಕೆ ೩೯

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಜುಲೈ ೨೬, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

ಸುಬುದ್ಧಿಪ್ರಕಾಶ

೧೮೫೫ರಲ್ಲಿ ಬೆಳಗಾವಿಯಿಂದ ಪ್ರಕಟವಾಗುತ್ತಿದ್ದ ಕನ್ನಡ ವಾರ ಪತ್ರಿಕೆಯ ಮುಖಪತ್ರ—(ಸಂಪುಟ ೬, ಸಂಚಿಕೆ ೨೩). ಮೊದಲನೆಯ ಸಂಚಿಕೆ ೧೮೪೯ರಲ್ಲಿ ಹೊರಬಿದ್ದಿತು.

# ಮಿಂಚು*

ಬರೆದವರು: ಶ್ರೀಮತಿ 'ವಾಣಿ', ಮೈಸೂರು

ಗಾಡಿ ನಿಂತಿತು. ರಾಮು ಬಟ್ಟೆ ಹಾಕಿಕೊಳ್ಳುತ್ತಿದ್ದವನು ಕಿಟಕಿಯಿಂದ ಇಣಿಕಿ ನೋಡಿದನು. ಇದೇನು? ಅವನ ಮಾವನವರು? ಮೇಜಿನ ಮೇಲೆ ಕಾಫಿ ಹಾಗೇ ಇದೆ! ಇಷ್ಟು ಹೊತ್ತಿಗೇ ಬೆಳಗಿನ ರೈಲಿನಲ್ಲಿ ಅನಿರೀಕ್ಷಿತವಾಗಿ ಮಗಳೊಡನೆ ಬಂದಿಳಿದ ರಾಯರನ್ನು ನೋಡಿ ರಾಮು ಬೆಪ್ಪಾದನು. ಟೈಯನ್ನು ಗಂಟುಹಾಕುತ್ತಿದ್ದ ಕೈ ಒಂದು ಕ್ಷಣ ಮಾತ್ರ ಹಾಗೇ ನಿಂತಿತು. ಮರುಕ್ಷಣದಲ್ಲಿ ಸನ್ನಿವೇಶವನ್ನು ಮನಗಂಡವನಾಗಿ ಹುಬ್ಬುಗಂಟಿಕ್ಕಿದನು. ಇದೆಲ್ಲ ತಂದೆ ತಾಯಿಗಳ ತಂತ್ರ. ಒಂದು ವಾರದ ಕೆಳಗೆ ತಂದೆಯವರು ಸಿಟ್ಟಿನಿಂದ, 'ನಮ್ಮ ಮೇಲಿನ ಕೋಪಕ್ಕೆ ಹೆಂಡತಿಯನ್ನು ಕರಸಿಕೊಳ್ಳದೆ ಎಷ್ಟು ದಿನ ವೈರಾಗಿಯ ಹಾಗೆ ಇರುತ್ತೀ?' ಎಂದು ಕೂಗಾಡಿದ್ದೂ, ತಾನೂ ಸಿಟ್ಟಿಗೆದ್ದು ಒರಟಾಗಿ ಜವಾಬು ಹೇಳಿದ್ದೂ ಅವನು ಮರೆತಿರಲಿಲ್ಲ. ಬೇಗರಿಗೆ ಗುಟ್ಟಾಗಿ ಬರೆದು ಹುಡುಗಿಯನ್ನು ಕರೆಸಿದಾರೆ! ಅಬ್ಬ-ಎಷ್ಟು ಹಟ! ಹಟವಲ್ಲೇ ಮದುವೆಯಾಯಿತು! ಈಗ ಹುಡುಗಿಯನ್ನು ಕರೆಸಿದ್ದಾಯಿತು! ತನ್ನನ್ನು ಪರೀಕ್ಷೆ ಮಾಡುವುದಕ್ಕೆ! ನೋಡೋಣ ಇನ್ನೂ ಎಲ್ಲಿಯವರಿಗೆ ಸಾಧಿಸಿಯಾರು? ನಾನೂ ಅವರ ಮಗ ತಾನೇ-ನನಗೆ ಹಟ ಮಾಡಲು ಬರುವುದಿಲ್ಲವೆ?

ಹೃದಯದಲ್ಲಿ ದುಃಖ, ನಿರಾಶೆ, ಕೋಪ, ತಿರಸ್ಕಾರ ಮೊದಲಾದ ಭಾವಾವೇಶಗಳು ಒಂದರ ಹಿಂದೊಂದು ನುಗ್ಗಿ ಬರುತ್ತಿದ್ದುವು. ಹೊರಗಡೆ ಬೀಗರಿಗೆ ಯೋಗಕ್ಷೇಮವು ನಡೆಯುತ್ತಿತ್ತು. ಒಳಗಡೆ ರೂಮಿನಲ್ಲಿ ರಾಮುವಿಗೆ ಮನಸ್ಸಿನೊಂದಿಗೆ ಹೊಡೆದಾಟವಾಗುತ್ತಿತ್ತು.

ಬಾಗಿಲನ್ನು ಮೆಲ್ಲಗೆ ತೆಗೆದು ರಾಮು ಹೊರಗೆ ಕಾಲಿಟ್ಟನು. ಹಾಲಿನಲ್ಲಿ ರಾಯರು ಮಾತಾಡುತ್ತ ಕುಳಿತಿದ್ದವರು ಆಕಡೆ ತಿರುಗಿ,

'ಏನಪ್ಪಾ ಸೌಖ್ಯವೇ?' ಎಂದು ವಿಚಾರಿಸಿದರು.

'ಓಹೋ ಸೌಖ್ಯವಿಲ್ಲದೇ ಏನು?'

'ಇದೇನು ರಾಮು ಇಷ್ಟು ಬೇಗ ಹೊರಟೆ?' ಎಂದರು ಯಜಮಾನರು.

'ಸ್ವಲ್ಪ ಕೆಲಸವಿದೆ. ಹೊರಗಿನವರು ಯಾರೋ ಬಂದಿದಾರೆ. ಅವರೊಡನೆ ನಮ್ಮ ಕೈಗಾರಿಕೆಯನ್ನು ತೋರಿಸಿ, ಅದರ ವಿಷಯಗಳನ್ನೆಲ್ಲ ತಿಳಿಸಲು ನಾನು ಇರಬೇಕಾಗಿದೆ. ಬರುವುದು ಹೊತ್ತಾಗಬಹುದು. ತಾವು ಯಾರೂ ದಯವಿಟ್ಟು ನನಗಾಗಿ ಕಾಯಬೇಡಿ.' ಎಂದು ಹೇಳಿ ರಾಮು ಹೊರಟುಹೋದನು.

ಮಧ್ಯಾಹ್ನವಾಯಿತು. ರಾಮು ಬರಲಿಲ್ಲ. ಬೀಗರಿಗೆ ಆದರದ ಊಟ ಉಪಚಾರಗಳು ನಡೆದವು. ರಾಯರು ಮಧ್ಯಾಹ್ನದ ರೈಲಿನಲ್ಲೆ ವಾಪ್ಸು ಹೊರಟುಹೋದರು.

ರಾಮು ಮನೆಗೆ ಬಂದಾಗ ರಾತ್ರಿ ಎಂಟು ಹೊಡೆದಿತ್ತು. ಬಾಗಿಲಿನಲ್ಲೆ ಕುಳಿತಿದ್ದ ಅವನ ತಂದೆ ಅವನನ್ನೆ ದುರುದುರು ನೋಡಿದರು. ಅದನ್ನು ಗಮನಿಸದೆ ಸೀದಾ ತನ್ನ ಕೊಠಡಿಗೆ ಹೋಗಿ ಬಟ್ಟೆ ಬದಲಾಯಿಸಿಕೊಂಡು ಒಳಗೆ ಊಟಕ್ಕೆ ಹೋದನು. ಅವನ ಒಣಗಿದ ಮುಖವನ್ನು ನೋಡಿ ತಾಯಿ ಅವನು ಹೇಳಿ ಹೋಗಿದ್ದಂತೆ ಯಾರೊಡನೆಯೂ ಹೋಗಿರಲಿಲ್ಲವೆಂದೂ ಅದೊಂದು ನೆಪಮಾತ್ರವೆಂದೂ ಸರಿಯಾಗಿಯೇ ಊಹಿಸಿದರು. ಮಗನು ಬೆಳಗಿನಿಂದಲೂ ಹಸಿದಿರುವುದನ್ನು ನೋಡಿ ತಾಯಿಯ ಕರುಳು ಮಿಡುಕಿತು.

ವಾಸ್ತವವಾಗಿ ರಾಮು ಬೆಳಗ್ಗೆ ಕಾಫಿ ಕುಡಿದು ಹೋದವನು ಬಾಯಿಗೆ ನೀರನ್ನು ಸಹ ಹಾಕಿರಲಿಲ್ಲ. ಆಫೀಸಿನ ಕೆಲಸವಾದ ಮೇಲೆ ಹೊರಟವನು ಅಲ್ಲಿ ಅಲೆದು ಇಲ್ಲಿ ತಿರುಗ ಹೊರಗೆ ಸುತ್ತಿ ಪಾರ್ಕಿನಲ್ಲಿ ಕುಳಿತು-ಎಷ್ಟು ಯೋಚನೆ ಮಾಡಿದರೂ ತನ್ನಮೇಲೆ ಅನಿರೀಕ್ಷಿತವಾಗಿ ಬಂದೊದಗಿರುವ ಈ ಪ್ರಸಂಗದಲ್ಲಿ ಹೇಗೆ ನಡೆಯಬೇಕೆಂದು ನಿರ್ಧರಿಸಲಾರದವನಾಗಿದ್ದನು. ಯೋಚಿಸಿದಷ್ಟೂ ಹಳೆಯ ನೆನಪು ಇಮ್ಮಡಿಯಾಗಿ ಬೇರೆ ಯಾವ ದಾರಿಯೂ ತೋರಲಿಲ್ಲ. ಹೊತ್ತಾದುದನ್ನು ನೋಡಿ ಯತ್ನವಿಲ್ಲದೆ ಮನೆಯ ಹಾದಿಯನ್ನು ಹಿಡಿದಿದ್ದನು.

ತಂದೆ ಹೊರಟುಹೋದಮೇಲೆ ಗೌರಿಯು ಖಿನ್ನಳಾಗಿ ಗೋಡೆಯನ್ನು ಒರಗಿಕೊಂಡು ನಿಂತಿದ್ದಳು. ಯಜಮಾನಿ ಆದರದಿಂದ ಸೊಸೆಯ ಕೈ ಹಿಡಿದು ಹತ್ತಿರ ಕುಳ್ಳಿರಿಸಿಕೊಂಡು ಅವರ ಮನೆಯವರ ಯೋಗಕ್ಷೇಮವನ್ನೆಲ್ಲಾ ಕೇಳಿದರು. ತಲೆಬಾಚಿ ಹೂಮುಡಿಸಿ, ಗೆಲವಿನ ನಗುವಿನಿಂದ ಹುಡುಗಿಯ ಮುಖವನ್ನೊಮ್ಮೆ ನೋಡಿದರು. ಮುಂದೇನಾಗುವುದೋ ಎಂಬ ಶಂಕೆಯು ಮನದಲ್ಲಿ ಕುದಿಯುತ್ತಿದ್ದರೂ ಗೌರೀದೇವಿಯಂತಿದ್ದ ಹುಡುಗಿಯನ್ನು ನೋಡಿ ಸಮಾಧಾನಪಟ್ಟರು.

ಒಂದು ಕಡೆ ಬೇರು ಬಿಟ್ಟಿದ್ದ ಸಸಿಯನ್ನು ಕಿತ್ತು ತಂದು ಬೇರೊಂದು ಕಡೆ ಇಟ್ಟಂತಾಗಿತ್ತು ಗೌರಿಯ ಸ್ಥಿತಿ. ಅತ್ತೆ ಒಂದೇ ಸಮನಾಗಿ ಉಪಚಾರ ಮಾಡುತ್ತಿದ್ದರೂ ಮುಖ ಬಾಡಿದ್ದಿತು. ಹೃದಯ ಯಾವುದೋ ಅರಿಯದ ಕಾರಣದಿಂದ ತಳಮಳಗೊಳ್ಳುತ್ತಿತ್ತು. ಅದಕ್ಕೆ ಪ್ರೇಮ ಜಲದಿಂದ ಆರ್ದ್ರತೆ ಮಾಡಿ ಹೊಸ ಭೂಮಿಗೆ ಒಗ್ಗುವಂತೆ ಮಾಡುವವರ ದರ್ಶನ ಲಾಭ ಅವಳಿಗೆ ಇನ್ನೂ ದೊರೆಯಲಿಲ್ಲ. ಸಾಮಾನ್ಯವಾಗಿ ಮೊದಲ ಸಲ ಅತ್ತೆ ಮನೆಗೆ ಹೋದಾಗ ಹೆಣ್ಣುಮಕ್ಕಳೆಲ್ಲರಿಗೂ ಹಾಗೇ ಆಗಬಹುದು. ಆದರೆ ಗೌರಿಯ ರೀತಿಯು ಬೇರೆಯಾಗಿತ್ತು. ಒಂದು ರೀತಿ ನೋಡಿದರೆ ಅವಳಿಗೆ ಗಂಡನ ಪರಿಚಯವೇ ಇರಲಿಲ್ಲವೆನ್ನಬಹುದು. ಮದುವೆಯಲ್ಲಿ ಎಲ್ಲೋ ಒಂದು ಸಲ ಗುಂಪಿನಲ್ಲಿ ಕಂಡೂ ಕಾಣದ ಹಾಗೆ ಓರೆಗಣ್ಣಿನಿಂದ ನೋಡಿದ್ದಳು. ಅದೂ ಐದು ವರ್ಷದ ಹಿಂದಿನ ಮಾತು. ಇದುವರೆಗೆ ಅವರಿಬ್ಬರ ನಡುವೆ ಬೇರೆ ಯಾವ ನಡವಳಿಕೆಯೂ ಇರಲಿಲ್ಲ. ಅಷ್ಟು ದೀರ್ಘ ಕಾಲದಲ್ಲಿ ಒಂದು ಸಲವಾದರೂ ಅವನನ್ನು ನೋಡುವ ಭಾಗ್ಯವು ಅವಳ ಪಾಲಿಗೆ ಬಂದಿರಲಿಲ್ಲ.

ಗೌರಿಯ ಕಾಲೇಜಿನ ಗೆಳತಿಯರಲ್ಲಿ ಅನೇಕರಿಗೆ ಮದುವೆಯಾಗಿದ್ದಿತು. ಅವರೆಲ್ಲರೂ ಗುಂಪಾಗಿ ಕುಳಿತು ತಮ್ಮ ಗಂಡಂದಿರಿಂದ ವಾರಕ್ಕೊಮ್ಮೆ (ಕೆಲವರಿಗೆ ಎರಡು ಸಲವೂ, ಮೂರು ಸಲವೂ) ಬರುವ ಹಲವಾರು ಪುಟಗಳ ಪ್ರೇಮಪತ್ರಗಳನ್ನು ಕುರಿತು ಒಬ್ಬರಿಗೊಬ್ಬರು ಗೇಲಿ ಮಾಡುತ್ತಿರುವಾಗ ದೂರದಲ್ಲಿ ತೆಪ್ಪಗೆ ನೋಡುತ್ತ ಕುಳಿತ ಗೌರಿಗೆ ತಾನು ಯಾವುದೋ ಸುಖದಿಂದ ವಂಚಿತಳಾದಂತೆ ಭಾಸವಾಗುತ್ತಿತ್ತು.

ದೀವಳಿಗೆಯ ದಿನ ಎಲ್ಲರ ಮನೆಯಲ್ಲೂ ಸಂಭ್ರಮದಿಂದ ಅಳಿಯನ ಸ್ವಾಗತ ನಡೆಯುತ್ತಿದ್ದಾಗ ಗೌರಿಯು ಮಹಡಿಯ ಮೇಲೆ ಒಂಟಿಯಾಗಿ ಕುಳಿತು ತಮ್ಮ ಮನೆಯ ಆಹ್ವಾನಕ್ಕೆ ಏಕೆ ಮನ್ನಣೆ ದೊರೆಯಲಿಲ್ಲವೆಂದು ಯೋಚಿಸುವಳು.

ರಜ ಬಂದ ಕೂಡಲೆ ತಮ್ಮ ನಲ್ಲೆಯರ ಬಳಿಗೆ ಹಾರಿಬರುತ್ತಿದ್ದ ಯುವಕರ ತಂಡವನ್ನು ನೋಡಿ ಅವಳ ಮನವು ಬೇರೆಯ ಊರಿನಲ್ಲಿ ತನ್ನ ನೆನಪೇ ಇಲ್ಲದಂತೆ ಇರುತ್ತಿದ್ದ ಪತಿಯನ್ನು ನೆನೆಯುವುದು. ಮದುವೆ ಮಾಡಿಕೊಂಡು ಹೋದಮೇಲೆ ತನಗಲ್ಲದಿದ್ದರೆ ತನ್ನ ತಂದೆಗಾದರೂ ತನ್ನ ಸಲ್ಲನಿಂದ ಒಂದು ಕಾಗದವೂ ಬಂದಿರಲಿಲ್ಲ. ಅವಳ ಮಾವನವರು ಮೂರು ತಿಂಗಳಿಗೋ ನಾಲ್ಕು ತಿಂಗಳಿಗೋ ಒಂದು ಸಲ ಯೋಗಕ್ಷೇಮಕ್ಕೆ ಬರೆಯುವ ವಾಡಿಕೆಯಿತ್ತು ಅಷ್ಟೆ. ಗೌರಿ ಆ ಬಗೆಗೇ ಹೊಂದಿಕೊಂಡು ತನ್ನ ವ್ಯಾಸಂಗವನ್ನು ನಡಸುತ್ತಿದ್ದಳು. ಈಗ ಏಕಾಏಕಿ ಪರೀಕ್ಷೆಯ ಸಮಯದಲ್ಲಿ ತನ್ನನ್ನು ಇಲ್ಲಿಗೆ ಕರತಂದದ್ದು ಅವಳಿಗೆ ಅಚ್ಚರಿಯನ್ನು ಉಂಟುಮಾಡಿತ್ತು. ತಂದೆತಾಯಿಗಳು ಯಾವ ವಿಚಾರವನ್ನೂ ಬಾಯಿಬಿಟ್ಟು ಹೇಳದಿದ್ದರೂ ಅವರಾಡಿದ ಮಾತುಗಳ ಹಿಂದೆ ಏನೋ ವಿಶೇಷ ಇರುವಂತೆ ತೋರುತ್ತಿತ್ತು.

ರಾಮು ನಡುಮನೆಯಲ್ಲಿ ಊಟಮಾಡುತ್ತಿದ್ದ. ಗೌರಿ ದೇವರ ಮನೆಯಲ್ಲಿ ಇದ್ದಳು. ಈಗ—ಹೇಗೆ ಕಾಣಬಹುದು? ಐದು ವರ್ಷಗಳಲ್ಲಿ ಬಹಳ ಬದಲಾಯಿಸಿರಬಹುದಲ್ಲವೆ? ಗೌರಿ ಗಂಡ ಈಗ ಹೇಗಿರಬಹುದೆಂದು ಮನದಲ್ಲಿ ಕಲ್ಪಿಸಿಕೊಳ್ಳುತ್ತಿದ್ದಳೇ ಹೊರತು

* ಶ್ರೀ ಭಾಸ್ಕರರಾಯರ ಜ್ಞಾಪಕ ಸ್ಪರ್ಧೆಯಲ್ಲಿ ಬಹುಮಾನವನ್ನು ಪಡೆದ ಸಣ್ಣ ಕತೆ.

ನೋಡಬೇಕೆಂದು ಮನವು ಹಾತೊರೆಯುತ್ತಿದ್ದರೂ ಒಂದುಸಲವಾದರೂ ಬಗ್ಗಿನೋಡುವ ಧೈರ್ಯ ಅವಳಿಗೆ ಬರಲಿಲ್ಲ.

ಯಜಮಾನಿ ಸೊಸೆಗೆ ಹಲವಾರು ನಯವಾದ ಮಾತುಗಳನ್ನು ಹೇಳಿ, ತಾಂಬೂಲವನ್ನು ಕೊಟ್ಟು ಮಹಡಿಯ ಮೇಲೆ ಮಲಗಲು ಕಳುಹಿಸಿದರು.

ಅವರ ಮನಸ್ಸಿನಲ್ಲಿಯೂ ಕಳವಳವೇ. ಸೊಸೆಯ ವಿಚಾರದಲ್ಲಿ ಅಭಿಮಾನ! ಇವಳು ಲಲಿತನಿಗಿಂತ ಯಾವ ಭಾಗದಲ್ಲಿ ತಾನೆ ಕಡಮೆಯಾಗಿದಾಳೆ? ಎಂಬ ಪ್ರಶ್ನೆ. ಲಲಿತನೇ ಬಂದಿದ್ದರೆ ಹೇಗಿರುತ್ತಿತ್ತು? ಎಂಬ ಉಪಪ್ರಶ್ನೆ. ಕೇವಲ ಅವಳ ನೆನಪಿನಿಂದಲೇ ಅವರ ಕಣ್ಣಿನಲ್ಲಿ ನೀರು!

ಗೌರಿ ನಡುಗುವ ಹೆಜ್ಜೆಗಳಿಂದ ಮಹಡಿಯ ಮೆಟ್ಟಲುಗಳನ್ನು ಒಂದೊಂದಾಗಿ ಹತ್ತುತ್ತಿದ್ದಾಳೆ. ಎದೆ ಬಡಿಯುತ್ತಿದೆ. ಕಾರಣವಿಲ್ಲದೆ ಕಣ್ಣಿನಲ್ಲಿ ನೀರು ತುಂಬುತ್ತಿದೆ. ನಡುಗುವ ಕೈಗಳಿಂದ ಅದನ್ನು ಒರಸಿಕೊಂಡು ಮುಂದೆ ಹೆಜ್ಜೆಹಾಕುತ್ತಿದಾಳೆ.

ಮಹಡಿಯು ದೊಡ್ಡದಾಗಿದ್ದಿತು. ಮುಂದುಗಡೆ ದೊಡ್ಡ ಹಾಲ್; ಅದಕ್ಕೆ ಸೇರಿದ ಹಾಗೆ ಕೊಠಡಿ; ಗೋಡೆಯ ಮೇಲೆ ಸುಂದರವಾದ ಚಿತ್ರಪಠಗಳು; ಕಿಟಕಿಗಳಿಗೆ ಸ್ವಚ್ಛವಾದ ತೆರೆಗಳು. ಅಂದವಾದ ಮೇಜು ಕುರ್ಚಿಗಳು ಅದರದರ ಜಾಗದಲ್ಲಿ ಒಪ್ಪುತ್ತಿದ್ದವು. ನೆಲದ ಮೇಲೆ ಸೊಗಸಾದ ರತ್ನಗಂಬಳಿ ಹಾಸಿತ್ತು. ಗೌರಿ ಸದ್ದಾಗದಂತೆ ಅದರ ಮೇಲೆ ನಡೆಯುತ್ತ ಬಂದವಳು, ಬಾಗಿಲಿನ ಬಳಿ ಅನುಮಾನಿಸುತ್ತ ನಿಂತಳು. ಅದೇನು ಭಂಗಿ? ಮುಖದಲ್ಲಿ ಎಷ್ಟು ಮನೋಹರವಾದ ಮಂದಹಾಸ! ಪ್ರೇಮಮತ್ತವಾದ ಕಣ್ಣುಗಳು ಏನನ್ನು ಹುಡುಕುತ್ತಿವೆ?

ರಾಮು ತಲೆಯನ್ನು ಬಗ್ಗಿಸಿಕೊಂಡು ಏನೋ ಬರೆಯುತ್ತಾ ಕುಳಿತಿದ್ದನು. ಗೌರಿ ಬಂದುದು ಅವನಿಗೆ ಗೊತ್ತಾಗದಿರಲಿಲ್ಲ. ಕೊಠಡಿಯಲ್ಲಿ ಮಿಂಚು ಹೊಳೆದಂತಾಗಿ ಅವನ ಎದೆ ನಡುಗಿತು. ಆದರೂ ಅವನು ತಲೆ ಎತ್ತಲಿಲ್ಲ. ಗೌರಿ ಹತ್ತಿರ ಬಂದಳು. ಒಂದು ಕೈಯಲ್ಲಿ ತಾಂಬೂಲವನ್ನು ಹಿಡಿದುಕೊಂಡು ಮತ್ತೊಂದು ಕೈಯನ್ನು ಮೃದುವಾಗಿ ಅವನ ಭುಜದಮೇಲಿಡಲು ಸಾಹಸ ಮಾಡಿದಳು.

ರಾಮು ಸರಕ್ಕನೆ ಕತ್ತೆತ್ತಿ ನೋಡಿದ. ಏನು ನೋಟ ಅದು? ಅದರಲ್ಲಿ ಎಂತಹ ಶಕ್ತಿ! ಮಾತುಗಳು ಹೇಳಲಾರದ, ಆನೇಕ ಪುಟಗಳ ತುಂಬ ತುಂಬಿದರೂ ವರ್ಣಿಸಲಸದಳವಾದ ಭಾವಗಳನ್ನು ಒಂದೇ ಒಂದು ನೋಟ ಹೊರಗೆಡವಬಲ್ಲದ್ದು. ಆದಕ್ಕೇ ತಿಳಿದವರು ಕಣ್ಣಿಗೆ ಅಷ್ಟೊಂದು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ.

ಗೌರಿ ನೋಡಿದಳು—ನೋಡಿ ನಡುಗಿದಳು. ಯಾವ ಭಯವು ಅಜ್ಞಾತವಾಗಿ ಮನದಲ್ಲಿ ಮೂಡಿತ್ತೋ ಅದು ಕಣ್ಣೆದುರಿಗೇ ಬಂದಾಗ ಅದನ್ನು ಎದುರಿಸುವ ಧೈರ್ಯ ಅವಳಲ್ಲಿ ಉಳಿಯಲಿಲ್ಲ. ದುಃಖವೂ ಅಭಿಮಾನವೂ ಒತ್ತಿಬಂದು ಕಣ್ಣು ಕಾಣಿಸದಂತಾಯಿತು. ತಾಂಬೂಲದ ತಟ್ಟೆ ಕೈಯಿಂದ ಜಾರಿತು. ಮುಂದೇನಾಯಿತೆಂಬುದು ಅವಳಿಗೆ ತಿಳಿಯಲೇ ಇಲ್ಲ.

* * *

'ಅಮ್ಮಾ ನೀರು', ರಾಮು ಕೂಗಿದುದು ಯಜಮಾನಿಗೆ ಕೇಳಿಸಿತು. ಆದರೂ ಅವರು ಕೇಳದವರಂತೆ ಸುಮ್ಮನಿದ್ದರು. ಮಗ ಪುನಃ ಕೂಗಿದ. ತಾಯಿ ಬೇಸರದ ದನಿಯಲ್ಲಿ 'ನಿನ್ನ ಹೆಂಡತಿಯನ್ನು ಕೇಳಬಾರದೇನಪ್ಪ? ಎಲ್ಲಾದಕ್ಕೂ ನಾನೇ ಬರಬೇಕೆ? ನನಗೂ ವಯಸ್ಸಾಯಿತು' ಎಂದರು.

'ಹೋಗಲಿ ಬಿಡಮ್ಮ, ನಿನಗೆ ಕಷ್ಟವಾದರೆ ನಾನೇ ತೆಗೆದುಕೊಳ್ಳುತ್ತೇನೆ' ಎಂದು ಹೇಳಿ ಲೋಟವನ್ನು ತೆಗೆದುಕೊಂಡು ನಲ್ಲಿಯ ಬಳಿಗೆ ಹೋದ.

ಯಜಮಾನಿ ಯಾವ ಉದ್ದೇಶದಿಂದ ಆ ಜವಾಬು ಹೇಳಿದರೋ ಅದು ನೆನಪೇರಲಿಲ್ಲ. ಅವರು ಅಷ್ಟಕ್ಕೇ ಬಿಡಲಿಲ್ಲ. ಸೊಸೆಯ ಕೈಲಿ ತಿಂಡಿ ಕಳುಹಿಸಿದರು. ಮನ ಒಂದಕ್ಕೆ ಬಂದಿತು. ತಾವೇ ತೆಗೆದುಕೊಂಡು ಹೋಗಿ, 'ತಿನ್ನು ನನ್ನಪ್ಪ, ನೀನು ಹೀಗೆ ಮಾಡಿದರೆ ನನ್ನ ಮನಸ್ಸಿಗೆ ಬಹಳ ನೋವಾಗುತ್ತೆ' ಎಂದು ಹೇಳಿ ತಾವೇ ಕೊಟ್ಟು ಬಂದರು.

ಗೌರಿಗೆ ಕೆನ್ನೆಗೆ ಕೊಟ್ಟಂತಾಯಿತು. ಗಂಡಹೆಂಡಿರ ನಡುವೆ ಇರುವ ಅಸಮಾಧಾನ ಎಷ್ಟೇ ಇರಲಿ ಅದು ಮೂರನೆಯವರಿಗೆ ತಿಳಿದರೆ ತುಂಬಾ ಅವಮಾನವೆಂದು ಭಾವಿಸುವವರು ಅನೇಕರಿದ್ದಾರೆ. ಗೌರಿ ಆ ಗುಂಪಿಗೆ ಸೇರಿದವಳು. ವಿಶ್ವಪ್ರಯತ್ನದಿಂದ ಇದುವರೆಗೆ ಗುಟ್ಟನ್ನು ಕಾಪಾಡಿಕೊಂಡು ಬರಬೇಕಾದರೆ ಅವಳಿಗೆ ಸಾಕು ಸಾಕಾಯಿತು. ಹೊಟ್ಟೆಯ ತುಂಬ ಅಳುವನ್ನು ತುಂಬಿಕೊಂಡು ಅತ್ತೆಯ ಎದುರಿಗೆ ನಗುನಗುತ್ತ ಓಡಾಡುತ್ತಿದ್ದರೂ ಅದೆಲ್ಲ ಈದಿನ ವ್ಯರ್ಥವಾದಂತೆ ತೋರಿತು.

ಮಗನ ಸ್ವಭಾವವನ್ನರಿತ ಯಜಮಾನಿಗೆ ಮೊದಲಿನಿಂದಲೂ ಅನುಮಾನ. ಅವರು ತೆರೆದ ಕಣ್ಣಿನಿಂದ ಹುಡುಗನ ನಡೆನುಡಿಯನ್ನು ಪರೀಕ್ಷೆ ಮಾಡುತ್ತಿದ್ದರು. ಒಂದೇ ಮನೆಯಲ್ಲಿರುವಾಗ ಎಷ್ಟು ದಿನ ಗುಟ್ಟಾಗಿರುತ್ತೆ? ಇರುವ ವಿಚಾರವನ್ನು ತಿಳಿದು ಯಜಮಾನಿ ಕಡು ಯೋಚನೆಗೀಡಾದರು. ತಾವು ಮಾಡಿದ ಕೆಲಸ ಹೀಗಾಗಬಹುದೆಂದು ಅವರು ಎಣಿಸಿರಲಿಲ್ಲ. ಅವರು ಆ ಮದುವೆಯನ್ನು ಉದ್ದೇಶಪೂರ್ವಕವಾಗಿ ಮಾಡಲಿಲ್ಲ. ತಮ್ಮ ಅಣ್ಣನ ಮಗಳನ್ನು ತಂದುಕೊಳ್ಳಬೇಕೆಂದು ಮೊದಲಿಂದಲೂ ಅವರ ಹಂಬಲು. ರಾಮು ಆ ಹುಡುಗಿ ಒಟ್ಟಿಗೆ ಆಡಿ ಬೆಳೆದವರು. ಅವರಿಬ್ಬರಿಗೆ ಇದ್ದ ಅನ್ಯೋನ್ಯವನ್ನು ನೋಡಿ ಆಕೆ ಸಂತೋಷದಿಂದ ಒಪ್ಪಿದ್ದರು. ಮದುವೆಯೂ ಗೊತ್ತಾಗಿತ್ತು. ಆದರೆ ಯಾವುದೋ ವ್ಯವಹಾರದ ವಿಷಯವಾಗಿ ಅವರ ಅಣ್ಣನಿಗೂ ಯಜಮಾನರಿಗೂ ಮಾತು ಬಂದು ಜಗಳವಾಯಿತು. ಅದರಿಂದ ಮದುವೆ ತಪ್ಪಿತು. ಅಷ್ಟೇ ಅಲ್ಲ, ಅದೇ ಲಗ್ನದಲ್ಲಿ ರಾಮುವಿಗೆ ಗೌರಿಯೊಡನೆ ಮದುವೆಯೂ ಆಯಿತು. ಹಟದ ಸ್ವಭಾವದ ತಂದೆಯ ಮಾತಿನ ಮುಂದೆ ತಾಯಿ ಮಗನ ಬೇಳೆ ಏನೂ ಬೇಯಲಿಲ್ಲ.

ಯಜಮಾನಿ ಗೌರಿಯನ್ನು ಹತ್ತಿರ ಕರೆದು ಅನೇಕ ವಿಚಾರಗಳನ್ನು ಕೇಳಿದರು. ಪ್ರಶ್ನೆಗಳ ಮಳೆಯನ್ನೇ ಸುರಿಸಿದರು. ಕಟ್ಟೆಯೊಡೆದ ಪ್ರವಾಹದಂತೆ ಹರಿಯುತ್ತಿದ್ದ ಅವಳ ಕಣ್ಣೀರೊಂದೇ ಅವರಿಗೆ ಬಂದ ಜವಾಬು.

ಅತ್ತೆ ಸೊಸೆಗಾಗಿ ಮರುಗಿ ಕಣ್ಣೀರಿಟ್ಟರು. ಯಾವಾಗಲೂ ಅವಳೊಡನೆ ಇದ್ದು ಮಾತಾಡುವರು. ಒಂದು ಕ್ಷಣ ಕಣ್ಣುಮರೆಯಾದರೆ ಎಲ್ಲಿ ಹುಡುಗಿ ಮರೆಯಲ್ಲಿ ಅಳುವಳೋ ಎಂದು ಭಾರತವನ್ನೋ ಭಾಗವತವನ್ನೋ ಓದಿಸುವರು. ಧೂಳು ಹಿಡಿದು ಕೂತಿದ್ದ ಪಿಟೀಲು ಅವರ ಬಲವಂತದಿಂದ ಆಗಾಗ್ಗೆ ಈಚೆಗೆ ಬರುತ್ತಿತ್ತು. ತನಗೆ ಇಷ್ಟವಿಲ್ಲದಿದ್ದರೂ ಅವರ ಮಾತಿಗೆ ಪ್ರತಿಯಾಡಲಾರದೆ ಗೌರಿ ಅವರು ಹೇಳಿದಂತೆ ನಡೆಯುವಳು. ತಾಯಿಗಿಂತಲೂ ಹೆಚ್ಚಾಗಿ ತನ್ನಲ್ಲಿ ಅತ್ತೆಯು ತೋರುತ್ತಿದ್ದ ಮಮತೆಯನ್ನು ನೆನೆದು ಕಣ್ಣೀರು ತುಂಬುವಳು. ಗಂಡನ ಪ್ರೇಮ ಆದರಕ್ಕೆ ಪಾತ್ರರಾದ ಸೊಸೆಯರಿಗೆ ಅತ್ತೆಯ ಸ್ನೇಹ ಸಿಗುತ್ತೋ ಇಲ್ಲವೋ ಹೇಳುವುದು ಕಷ್ಟ. ಆದರೆ ಗೌರಿಯ ಪಾಲಿಗೆ ಅದೇ ಆಧಾರವಾಗಿತ್ತು.

ಸ್ವಭಾವವಾಗಿ ಸಿಡುಕರಾದ ಮಾವನವರೂ ಗೌರಿಯನ್ನು ಕಂಡರೆ ಅಭಿಮಾನಪಡುವರು. ಹುಡುಗಿಯ ಸಹನೆಯನ್ನೂ ವಿದ್ಯಾ ವಿನಯಗಳನ್ನೂ ಕೆಲಸದಲ್ಲಿ ತೋರುತ್ತಿದ್ದ ಅಚ್ಚುಕಟ್ಟನ್ನೂ ನೋಡಿ ಮುಗ್ಧರಾಗಿ ಇಂತಹ ಹುಡುಗಿಯನ್ನು ಕಡೆಗಣ್ಣಿನಿಂದ ನೋಡುವುದಕ್ಕೆ ಮಗನು ಎಂಥಾ ಹುಚ್ಚ? ಎಷ್ಟು ದಿವಸ ಹೀಗಿದ್ದಾನು? ಎಲ್ಲಾ ಸರಿ ಹೋಗುತ್ತೆ. ಎಂದುಕೊಳ್ಳುವರು.

ದಿನಗಳು ಉರುಳಿ ತಿಂಗಳುಗಳೂ ಕಳೆದುವು. ಗೌರಿ ಆಗಾಗ್ಗೆ ತಾನು ಬಹಳ ಸುಖವಾಗಿರುವುದಾಗಿಯೂ ತನ್ನ ವಿಚಾರವಾಗಿ ಯೋಚನೆ ಬೇಡವೆಂದೂ ತಾಯಿಗೆ ಕಾಗದ ಬರೆಯುತ್ತಿದ್ದಳು. ಅದನ್ನು ಮಡಿಸಿ ಕವರಿನಲ್ಲಿ ಹಾಕುವಾಗ ಮಾತ್ರ ವಿಷಾದದ ನಗುವೊಂದು ಮೂಡಿ ಮರೆಯಾಗುತ್ತಿತ್ತು.

(೩೭೨ನೇ ಪುಟಕ್ಕೆ)




ಶುಕ್ರವಾರ, ಜುಲೈ ೨೬, ೧೯೪೦

## ನಾಟಕಗಳ ಉಳಿವು

ಈಚಿನ ಕನ್ನಡ ವಾರಪತ್ರಿಕೆ ಒಂದರಲ್ಲಿ ವಿನೋದರತ್ನಾಕರ ಮುಂತಾದ ಅನೇಕ ಬಿರುದುಗಳುಳ್ಳ ಶ್ರೀಯುತ ಗುಬ್ಬಿ ವೀರಣ್ಣನವರು ತಮ್ಮ ನಾಟಕ ಮಂಡಲಿಯ ಕಾರ್ಯ ಕಲಾಪಗಳನ್ನು ನಿಲ್ಲಿಸಿಬಿಡುವರೆಂದೂ ವಾಕ್ಚಿತ್ರಗಳನ್ನು ತಯಾರಿಸಲು ಬಹುಶಃ ಪ್ರಯತ್ನಿಸಬಹುದೆಂದೂ ಬರೆದಿತ್ತು. ಅದನ್ನು ಕೇಳಿದವರಿಗೆ ಬಹುವಾಗಿ ವ್ಯಥೆ ಉಂಟಾಯಿತು. ಆ ಮಾತು ನಿಜವಾಗದೆ ಇರಲಿ, ಇನ್ನೂ ಹತ್ತಾರು ವರ್ಷಗಳಕಾಲ ನಾಟಕರಂಗದಲ್ಲಿಯೇ ಅವರು ತಮ್ಮ ಕಲಾ ನೈಪುಣ್ಯವನ್ನು ಬೆಳಗುತ್ತಿರಲಿ, ಅವರ ವ್ಯವಸ್ಥಾಶಕ್ತಿಯೂ ಉದಾರಹೃದಯವೂ ಕನ್ನಡ ರಂಗಸ್ಥಳದ ಚಾಲನೆಯಲ್ಲಿಯೇ ತೊಡಗಿ ಕನ್ನಡ ನಾಟಕವನ್ನು ರಂಗಭೂಮಿಯಮೇಲೆ ಉಳಿಸಿ ನಿಲ್ಲಿಸಲಿ ಎಂಬುದು ಕನ್ನಡಿಗರೆಲ್ಲರ ಆಸೆ. ಈವರೆಗೆ ಆಗಲೆ ನಾಟಕಮಂಡಲಿಗಳ ಕಷ್ಟನಿಷ್ಠುರಗಳು ಏನೆಂಬುದನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದಾರೆ. ತಮ್ಮ ಸಂಸ್ಥೆಗೆ ಎರಗಿದ ಆಪತ್ತುಗಳಿಗೆ ಅಂಜದೆ ಕೆಡದೆ ತಮ್ಮ ಸ್ಥೈರ್ಯವನ್ನೂ ಶ್ರದ್ಧೆ ಉತ್ಸಾಹಗಳನ್ನೂ ನಡಸಿಕೊಂಡು ಬಂದಿದ್ದಾರೆ. ಆಯಾ ಸನ್ನಿವೇಶಕ್ಕೆ ತಕ್ಕ ಸುಧಾರಣೆಗಳನ್ನು ಮಾಡಿಕೊಂಡು ನಾಟಕಕ್ಕೆ ಕಳೆ ಹೆಚ್ಚಿಸಿ ಜನಾದರಣೆ ಹೆಚ್ಚುಹೆಚ್ಚಾಗಿ ಅದಕ್ಕೆ ದೊರಕುವಂತೆ ಮಾಡಿಕೊಂಡು ಕೃತಕಾರ್ಯರಾಗಿದ್ದಾರೆ. ಇತ್ತ ಕಡೆ ಅವರದೊಂದು ಹೆಸರು, ಉತ್ತರ ಕರ್ನಾಟಕದಲ್ಲಿ ನಾಟಕಾಲಂಕಾರ ಗರುಡ ಸದಾಶಿವರಾಯರ ಹೆಸರು, ನಾಟಕ ಪ್ರಪಂಚದಲ್ಲಿ ಎಲ್ಲರ ಬಳಕೆಯ ಮಾತಾಗಿ ನಿಂತಿದೆ. ಈ ಹೆಸರುಗಳು ರಂಗಸ್ಥಳದಿಂದ ಮರೆಯಾಗುವುದಾದರೆ ಕನ್ನಡಕ್ಕೆ ಸಹಿಸಲಾಗದ ಮತ್ತು ತುಂಬಲಾಗದ ನಷ್ಟ ಉಂಟಾಗುವುದು.

ನಾಟಕ ಪ್ರದರ್ಶನ ನಿಲ್ಲಿಸುತ್ತಾರೆ ವಾಕ್ಚಿತ್ರವನ್ನು ಉತ್ಪತ್ತಿ ಮಾಡುತ್ತಾರೆ ಎಂದು ಹೇಳಿದಮಾತ್ರದಿಂದಲೇ ನಾವು ಒಂದು ಸಂಗತಿಯನ್ನು ಊಹಿಸುವುದು ಸಹಜವಾಗುವುದು. ನಾಟಕದಲ್ಲಿ ಜನಕ್ಕೆ ವಿಶ್ವಾಸ ಕಡಮೆಯಾಯಿತು; ಅದರ ಪ್ರಯೋಜನ ತಪ್ಪಿತು; ಮೂಕಚಿತ್ರ ವಾಕ್ಚಿತ್ರಗಳು ಜನದ ಹೆಚ್ಚು ಒಲವನ್ನು ಪಡೆದಾವು ಹೆಚ್ಚು ಪ್ರಯೋಜನವನ್ನು ದೊರಕಿಸಿಯಾವು ಎಂಬ ನಂಬಿಕೆಯ ಅನುಮಾನ ಅದರಲ್ಲಿ ಅಡಗಿದೆ. ಈ ನಂಬಿಕೆ ಈಗ ಹಲವು ವರ್ಷಗಳಿಂದ ಅನೇಕರಿಗೆ ಉಂಟಾಗಿರುವುದು ಒಂದು ಬಗೆಯಲ್ಲಿ ಹೊಸ ಬಗೆಯ ಕಲಾಕೃತಿಯನ್ನು ಜನಕ್ಕೆ ಕೊಟ್ಟು ಹೇಗೆ ಉಪಕಾರ ಮಾಡಿದೆಯೊ ಹಾಗೆಯೇ ಇನ್ನೊಂದರಲ್ಲಿ ಮನೋರಂಜನೆಯ ಪ್ರಪಂಚದಿಂದ ನಾಟಕ ಕಲೆಯನ್ನು ಓಡಿಸಿ ಆ ಮಟ್ಟಿಗೆ ಅಪಕಾರವನ್ನೂ ಮಾಡಿದೆ. ಎರಡೂ ಕಡೆಯ ಲಾಭ ದೊರಕುವಂತೆ ಚಾಲಕವ್ಯವಸ್ಥೆ ಹುಟ್ಟಿಕೊಂಡರೆ ಎರಡುಬಗೆಯ ಸೊಬಗುಗಳೂ ಕನ್ನಡ ನಾಡಿಗೆ ಉಳಿದಾವು. ಆದರೆ ಒಂದಕ್ಕೆ ಮೀಸಲಾದವರು ಇನ್ನೊಂದಕ್ಕೆ ಹೊರಟುಹೋಗುವ ಪ್ರಸಂಗವೂ ಅಗತ್ಯವೂ ಒದಗಿಬಿಟ್ಟರೆ ಮಾತ್ರ ಸ್ಥಿತಿ ವಿಷಮಿಸುವುದು. ಇದು ಎಲ್ಲೆಲ್ಲಿಯೂ ಕಂಡದ್ದೇ. ನಾಟಕ ಹೇಗೆಯೇ ಇರಲಿ, ಅದು ಚಲನಚಿತ್ರಗಳಿಗಿಂತ ಮೇಲು ಎಂದಾಗಲಿ ಚಲನ ಚಿತ್ರ ಎಷ್ಟೇ ಉತ್ತಮವಾಗಿರಲಿ ನಾಟಕಕ್ಕಿಂತ ಕೀಳು ಎಂದಾಗಲಿ ಯಾರೂ ಹೇಳಲಾರರು. ಆದರೂ ಅದಲ್ಲ ಇಲ್ಲಿನ ವಿಷಯ: ಕಾಲಧರ್ಮಕ್ಕೆ ತಕ್ಕಂತೆ ಹುಟ್ಟಿಕೊಂಡ ಚಲನಚಿತ್ರಕಲೆ ನಾಟಕದಮೇಲೆ ಹುರುಡುಹೂಡಿ ಅದನ್ನು ಮುರಿದುಬಿಡಬೇಕೇಕೆ ಎಂಬುದು ಇಂದಿನ ಪ್ರಶ್ನೆ. ಇದು ಕನ್ನಡನಾಡಿಗೆ ಮಾತ್ರ ಒಡ್ಡಿದ ಸಮಸ್ಯೆಯಲ್ಲ. ಪ್ರಪಂಚದಲ್ಲಿ ಎಲ್ಲೆಲ್ಲಿಯೂ ನಾಟಕವನ್ನು ಎದುರಿಸಿರುವ ಸಮಸ್ಯೆ. ಹೊರಗೆ ಕೆಲವು ಕಾಲದಿಂದ ಪ್ರಬಲಿಸಿದ್ದ ಅದು ಇಂದು ನಮ್ಮ ತಲೆಯಮೇಲೂ ಕವಿದುನಿಂತಿದೆ.

ಈ ಸಂದರ್ಭದಲ್ಲಿ ನಾಟಕ ಕಲೆ ಚಲನಚಿತ್ರ ಕಲೆಗಳಿಗೆ ಹೋರಾಟವಿಕ್ಕಿಸಿ ಅನೇಕ ಬಗೆಯ ಆಕ್ರೋಶದ ಮಾತುಗಳನ್ನು ನುಡಿವುದೂ ವಾಡಿಕೆಯಾಗಿದೆ. ನಾಟಕ ಕಲೆಯೇ ಕಲೆ, ಚಲನಚಿತ್ರ ನಿರ್ಮಾಣ ಒಂದು ಕೈಗಾರಿಕೆ ಮಾತ್ರ, ಎಂದಿಗೂ ಅದು ನಾಟಕದ ಸಮಕ್ಕೆ ನಿಲ್ಲಲಾರದು ಎಂಬ ವಾದ ಹಲವು ಜನ ತಿಳಿದ ಮಾನ್ಯರ ಬಾಯಿಂದ ಕೂಡ ಹೊರಡುತ್ತಿದೆ. ಈ ಕಡೆ ಆ ಕಡೆ ವಾದಗಳನ್ನು ಹೂಡಿ ಮುಖಗಳನ್ನು ಕಪ್ಪಗೆ ಮಾಡಿಕೊಳ್ಳುವುದೇನೋ ಸುಲಭ. ಆದರೆ ವಾದದ ಪ್ರಯೋಜನ ಅಷ್ಟಾಗಿ ಕಾಣುವುದಿಲ್ಲ. ಯಾರಿಗೆ ಎಷ್ಟು ಬೇಡವೆನ್ನಿಸಿದರೂ ಚಲನಚಿತ್ರ ಇಂದು ಪ್ರಭಾವಗೊಂಡು ದೇಶವಿದೇಶಗಳಲ್ಲಿ ಬೇರೂರಿ ನಿಂತುಬಿಟ್ಟಿದೆ. ಜನದ ಕಣ್ಣು ಮನಸ್ಸುಗಳನ್ನು ಸೆಳೆದು ಹಿಡಿದುಕೊಂಡಿದೆ. ನೂರಾರು ಸಾವಿರಾರು ಜನರಿಗೆ ಉದ್ಯೋಗಗಳನ್ನೂ ಜೀವಿಕೆಯನ್ನೂ ಕಲ್ಪಿಸಿದೆ. ಲಕ್ಷಗಟ್ಟಳೆ ಕೋಟಿಗಟ್ಟಳೆ ಹಣವನ್ನು ತನ್ನ ಕಾರ್ಯವಿಸ್ತರಣಕ್ಕೆ ಆಕರ್ಷಿಸಿದೆ. ನಾಲ್ಕಾರು ಬಗೆಯ ಶಾಸ್ತ್ರವಿದ್ಯೆ, ಕಲಾನಿಪುಣತೆ, ವ್ಯಾಪಾರವ್ಯವಸ್ಥೆ ಮುಂತಾದುವನ್ನು ಜನತೆಗೆ ಕೊಟ್ಟಿದೆ. ಈ ಕೆಲಸದಲ್ಲಿ ತೊಡಗಿರುವಾಗ ತೊಡಗಿರುವ ಜನಕ್ಕೆ ಒಂದು ಕಟ್ಟುನಿಟ್ಟು ಏರ್ಪಟ್ಟು ಎಲ್ಲ ಕಲೆಗಾರರ ಸಮ್ಮಿಳಿತಕಾರ್ಯ ಸುವ್ಯವಸ್ಥೆಯಲ್ಲಿ ನೆರವೇರುವಂತೆ ಮಾಡಿದೆ. ಅದರ ಲಾಭ ಮತ್ತು ಮೋಹಕತೆಗಳ ಕಾರಣದಿಂದ ದೇಶದ ಉತ್ಕೃಷ್ಟ ಕಲೆಗಾರರು ಆ ಕಡೆಗೆ ಮನಸ್ಸು ಕೊಡುವಂತಾಗಿ ಎಷ್ಟು ಉತ್ತಮವಾದ ಪ್ರದರ್ಶನಚಾತುರ್ಯ ದೊರಕಬಹುದೊ ಅಷ್ಟೂ ದೊರಕುವ ಸೌಕರ್ಯ ಉಂಟಾಗಿದೆ. ಪ್ರಪಂಚದ ಹೆಸರಾದ ನಟನಟಿಯರ, ಪ್ರದರ್ಶನಕಾರರ, ಚಾಲಕವರ್ಯರ ಕಲಾಕುಶಲತೆ ಯಾವ ಮೂಲೆಯ ಜನರಿಗೆ ಬೇಕಾದರೂ ಸಿಕ್ಕಿ ಅದರ ಸಂತೋಷ ದೊರೆಯುವಂತೆಯೂ ಆ ಮೂಲಕ ಎಲ್ಲ ಕಡೆಯ ಜನರಿಗೂ ಕಲಾಭಿಜ್ಞಾನ ಹೆಚ್ಚುವಂತೆಯೂ ಆಗಿದೆ. ಅದು ಚೆನ್ನಾಗಿ ಆದಕಡೆ ಉತ್ಪತ್ತಿಮಾಡಿದ ಒಡೆಯರಿಗೆ ಬೇಕಾದಷ್ಟು ಹಣದ ಗಳಿಕೆ ಆಗಿದೆ. ಸಂಬಂಧಪಟ್ಟ ಅನೇಕ ಕುಶಲವಿದ್ಯೆಗಳೂ ಶಾಸ್ತ್ರಸಲಕರಣೆಗಳೂ ಬೆಳೆಯುವುದೂ ಸಾಧ್ಯವಾಗಿದೆ. ಹುಟ್ಟುತ್ತಿರುವ ಚಿತ್ರಗಳೆಲ್ಲ ಚೆನ್ನಾದುವೆಂದಾಗಲಿ ಉತ್ತಮ ಕಲಾಭಿರುಚಿಯನ್ನು ಹುಟ್ಟಿಸುವುವೆಂದಾಗಲಿ ಇತರ ಬಗೆಯಲ್ಲಿ ಆ ಕೆಲಸ ನಡೆಯಲಾರದೆಂದಾಗಲಿ ಇಲ್ಲಿ ಹೇಳುತ್ತಿಲ್ಲ. ಇಲ್ಲಿ ಹೇಳುವುದು ಇಷ್ಟೇ: ಚಲನಚಿತ್ರಗಳಲ್ಲಿ ಅತ್ಯುತ್ತಮವೆಂದು ಎನಿಸಿಕೊಂಡ ಹಲವು ಶ್ರೇಷ್ಠ ಕಲಾಕೃತಿಗಳು.

ಅವುಗಳಲ್ಲಿನ ಚೆಲುವು, ರಸಪುಷ್ಟಿ ಇತರ ಯಾವ ಕಲಾಕೃತಿಗಳಿಗೂ ಕಡಮೆಯಾಮುವಲ್ಲವೆನ್ನುವಂತಿದೆ. ಹೀಗಿರುವಾಗ– ಇವರ ಪೈಪೋಟಿ ಜನರ ಮನಸ್ಸನ್ನು ನಾಟಕದಿಂದ ತನ್ನತ್ತ ಸೆಳೆಮುಕೊಳ್ಳುತ್ತಿರುವಾಗ ನಾಟಕ ಕಣ್ಣು ತೆರೆದರೆ ಸಾಲದು, ಎಚ್ಚತ್ತು ಕಣ್ಣುಹೊಸಕಿಕೊಂಡರೂ ಸಾಲದು, ಎದ್ದು ಉದ್ರೇಕಗೊಂಡು ಚಡಪಡಿಸಿದರೂ ಸಾಲದು. ಹೊಸ ಸನ್ನಿವೇಶಕ್ಕೆ ತಕ್ಕಂತೆ ಅರಿವನ್ನು ತಿದ್ದಿಕೊಳ್ಳಬೇಕಾಗುವುದು: ತನ್ನ ಸ್ವರೂಪ ತಿಳಿದುಕೊಂಡು ಪ್ರತಿಸ್ಪರ್ಧಿಯ ಬಲಾಬಲಗಳನ್ನು ಪರೀಕ್ಷಿಸಿ ಮಂದಟ್ಟುಮಾಡಿಕೊಂಡು ಕಲಾ ಪೋಷಣೆ ಮನೋರಂಜನೆ ರುಚಿನಿಷ್ಠೆ ಬೆಳಸಿಕೊಂಡ ಹೊರತು ರಂಗಸ್ಥಳದಲ್ಲಿ ಎಲ್ಲಿಯೇ ಆಗಲಿ ನಾಟಕ ಉಳಿಯದು, ಕೀರ್ತಿ ಪಡೆಯದು. ತಾನು ಮಾಡುವ ಅಥವಾ ಮಾಡುತ್ತಿದ್ದ ಕೆಲಸವನ್ನು ತನಗಿಂತ ಪ್ರಬಲವಾದ ಸೋದರಕಲೆ ಹತ್ತರಷ್ಟು ಚೆನ್ನಾಗಿ ಮಾಡಿ, ಸ್ವಲ್ಪವೇ ಕಾಲದಲ್ಲಿ ಅಲ್ಪವೆಚ್ಚಕ್ಕೆ ಅತಿಶಯ ಸುಖವನ್ನೂ ಉಲ್ಲಾಸವನ್ನೂ ಜನವರ್ಗಕ್ಕೆ ಕೊಡುತ್ತಾ, ಒಡೆಯರಿಗೂ ಚಾಲಕರಿಗೂ ಲಾಭವನ್ನು ಸೂರೆತರುತ್ತಿದ್ದರೆ ನಾಟಕದ ಹೆಚ್ಚೇನು ಬಂತು? ನಾಟಕ ನಶಿಸುತ್ತಿದೆ ಎಂದು ಕೊರಗಿದರೆ ಪ್ರಯೋಜನವೇನು? ಅಂತಹ ನಾಟಕ ಉಳಿಯಬೇಕಾದ ಅಗತ್ಯ ತಾನೇ ಏನು ಎನ್ನುತ್ತ ಜನ ಕೇಳಿಯಾರು. ಆದುದರಿಂದ ನಾಟಕದ ಮಾರ್ಗವೇನು, ಗುರಿಯೇನು, ಶ್ರದ್ಧೆ ಏನು, ಪಕ್ಷಪಾತವೇನು, ಸಾಮಗ್ರಿ ಏನು ಎಂಬುದನ್ನು ಹೊಸದೃಷ್ಟಿಯಿಂದ ಪರಿಶೀಲಿಸಿ ಅದರಕಡೆಗೆ ಪುನಃ ಸುಶಿಕ್ಷಿತರೂ ಸಾಧಾರಣರೂ ಒಲಿಯುವಂತೆ ಮಾಡಿಕೊಳ್ಳಬೇಕು. ಎಲ್ಲರ ದುಡಿಮೆ, ಶ್ರದ್ಧೆಗಳೂ ವ್ಯವಸ್ಥಾಪನೆಯ ಬಿಗುಪೂ ಫಲಿಸಬೇಕು. ಚಲನಚಿತ್ರಪ್ರಪಂಚಕ್ಕೆ ಹೆಚ್ಚು ಸುಲಭವಾಗಿ ಒದಗುವ ವಿಶೇಷ ದೃಶ್ಯವಿಲಾಸಗಳಿಗೇ, ರೂಪಣವ್ಯವಸ್ಥೆಗಳಿಗೇ ಕೈಯಿಕ್ಕದೆ ಮಾನವಜೀವನಕ್ಕೆ ಹೆಚ್ಚು ಹತ್ತಿರವಾದ ಆಪ್ತಭಾವಗಳನ್ನೂ ಸಂವಿಧಾನಗಳನ್ನೂ ತೋರಿಸಿ ನಾಟಕಕಲೆಗೆ ಅತ್ಯಗತ್ಯವಾದ ಒಂದು ನೇರವಾದ ಮಾನವೀ ಸಂಬಂಧವನ್ನು ನಟವರ್ಗಕ್ಕೂ ನಾಟಕಕ್ಕೂ ಪ್ರದರ್ಶನಕ್ಕೂ ಪ್ರೇಕ್ಷಕರಿಗೂ ಉಂಟುಮಾಡಿಕೊಡುತ್ತ ಬಂದರೆ ನಾಟಕ ಕಲೆ ತನ್ನದೇ ಆದ ಒಂದು ವ್ಯಕ್ತಿತ್ವವನ್ನು ಉಳಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಹಾಗಲ್ಲದೆ ಚಲನಚಿತ್ರದ ಕೆಲಸವನ್ನೆಲ್ಲ ತಾನು ಮಾಡಿ ಜನರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರೆ ತ್ರಿಶಂಕುಸ್ಥಿತಿ ಉಂಟಾಗಿ ಇದರ ಕಲೆ ಅಳಿದು ಅದರ ಲಾಭ ಬಾರದೆ ಮನಸ್ಸಿನ ವಿಷಾದಗಳು ಮಾತ್ರ ಹೆಚ್ಚುವಂತಾಗುವುದು.

ಇಂದಿನಂತಹ ಸಂಧಿಸಮಯದಲ್ಲಿ ಈವರೆಗೂ ನಮಗೆ ಬಂದಿರುವ ನಾಟಕಗಳ ಸ್ವರೂಪ, ಈಗ ಬರುತ್ತಿರುವವು, ಬರಬೇಕಾದವು ಇವುಗಳ ಯೋಚನೆಯನ್ನು ಮಾಡಬೇಕಾಗಿದೆ. ಪ್ರದರ್ಶನ ಪದ್ಧತಿಯಲ್ಲಿಯೂ ಅಭಿನಯದಲ್ಲಿಯೂ ಯಾವ ಮಾರ್ಪಾಟು ಬೇಕೆನ್ನುವುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಹಣದ ಗಳಿಕೆಗಾಗಿ ಕಟ್ಟಬೇಕಾದ ಆಟಗಳಾವುವು? ಕಲಾಪೋಷಣೆಗಾಗಿ ಕೈಕೊಳ್ಳಬೇಕಾದ ಕಾರ್ಯಗಳಾವುವು? ಎರಡನ್ನೂ ಸಮತಾನದಲ್ಲಿ ಮಾಡುವುದು ಸಾಧ್ಯವೇ? ತಿಳಿದವರ ಮತ್ತು ತಿಳಿಯದವರ ಎಲ್ಲರ ಮನಸ್ಸಿಗೂ ಸಂತೋಷವನ್ನೂ ಸ್ಫೂರ್ತಿಯನ್ನೂ ತರಬಲ್ಲ ವಿಧಾನಗಳು ಎಂಥವಾಗಬೇಕು? ನಾಟಕವೇ ತನ್ನ ಕಾಲಕ್ಕೂ ಸಮಾಜಕ್ಕೂ ಯಾವ ಬಗೆಯ ಸೇವೆ ಮತ್ತು ದರ್ಶನ ಕಾಣಿಕೆ ಸಲ್ಲಿಸಬೇಕು ಎಂಬ ಮುಂತಾದ ಹಲವು ಪ್ರಶ್ನೆಗಳು ಏಳುತ್ತವೆ. ಇಂತಹ ಸಮಯದಲ್ಲಿ ನುರಿತ ನಟರಾಗಿಯೂ ಎಲ್ಲ ಜನರ ಪ್ರೀತಿ ಆದರ ಗೌರವಗಳಿಗೆ ಪಾತ್ರರಾಗಿಯೂ ಇರುವ ಶ್ರೀ ವೀರಣ್ಣನವರು ಮತ್ತು ಶ್ರೀ ಗರುಡರಂತಹ ಹಿರಿಯರು ಇದೇ ರಂಗದಲ್ಲಿ ವ್ಯವಸಾಯ ಮಾಡಬೇಕೆನ್ನುವ ಎಲ್ಲರ ಬೆಂಬಲಕ್ಕೂ ನಿಂತು ಈ ಕಲೆಯ ಪರಮಪ್ರಯೋಜನವನ್ನು ನಾಡಿಗೆ ದೊರಕಿಸಿಕೊಡುತ್ತಿರಬೇಕೆಂದೂ ತಮ್ಮ ಸಹಜವಾದ ಸ್ಥೈರ್ಯದಿಂದ ಕನ್ನಡ ನಾಟಕಪ್ರಪಂಚವನ್ನು ಮುಂದಕ್ಕೂ ಪೋಷಿಸುತ್ತ ಹೋಗಬೇಕೆಂದೂ ಹಾರೈಸುತ್ತೇವೆ.

---

## ಸುಬುದ್ಧಿಪ್ರಕಾಶ

### ೯೦ ವರ್ಷಗಳ ಹಿಂದಿನ ಕನ್ನಡ ಪತ್ರಿಕೆ

ಇಂದು ಬೆಳಗಾಂವಿ ಕನ್ನಡ ನಾಡಿನ ಗಡಿಯೆಂದು ನಾವೆಲ್ಲ ತಿಳಿದಿದ್ದೇವೆ. ಆದರೆ ಅದು ಹಿಂದೆ ಕನ್ನಡ ನಾಡಿನ ಕೇಂದ್ರಗಳಲ್ಲಿ ಒಂದಾಗಿತ್ತೆಂಬುದು ಇತಿಹಾಸಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಇತಿಹಾಸ ಕಾಲದ ವರೆಗೂ ನಾವು ಹೋಗಬೇಕಾಗಿಲ್ಲ. ೧೮೫೦ ರಷ್ಟು ಹಿಂದೆಯೇ ಬೆಳಗಾಂವಿಯ ಮುಂದಾಳುಗಳು ಕನ್ನಡ ಪತ್ರಿಕೋದ್ಯಮವನ್ನು ಆರಂಭಿಸಿ ಮೇಲ್ಪಂಕ್ತಿ ಹಾಕಿದರು.

ಬೆಳಗಾಂವಿಯಲ್ಲಿರುವ ಶ್ರೀಯುತ ಭರಮಪ್ಪ ಪದ್ಮಪ್ಪ ಪಾಟೀಲ್ ಅವರ ಬಳಿ ಈ ಪತ್ರಿಕೆಯ ಒಂದು ಸಂಚಿಕೆ ದೊರೆಯಿತು. ಮಾದರಿಗಾಗಿ ಈ ಸಂಚಿಕೆಯ ಮೊದಲನೆಯ ಪುಟದ ಚಿತ್ರವನ್ನು ಪ್ರಕಟಿಸಲಾಗಿದೆ.

---

## ಪರಿಷತ್ತಿನ ಸುದ್ದಿ

### ವ್ಯಾಸಂಗ ಗೋಷ್ಠಿ

೨೯ನೆಯ ಸೋಮವಾರ ಸಂಜೆ ೬ ಗಂಟೆಗೆ

**ಶ್ರೀ॥ ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರಿಂದ**

ವಿಷಯ: **ಪ್ರಭುಲಿಂಗಲೀಲೆ**

ಸ್ಥಳ: **ಶ್ರೀಕೃಷ್ಣರಾಜ ಪರಿಷನ್ಮಂದಿರ**

---

## ಕನ್ನಡ ಸಾಹಿತ್ಯ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಏರ್ಪಟ್ಟಿರುವ ಸಾಹಿತ್ಯ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ತರಪೇತುಮಾಡಲು ಈ ವರ್ಷ ಬೆಂಗಳೂರಿನಲ್ಲಿ ಪರಿಷನ್ಮಂದಿರದಲ್ಲಿಯೂ ಮತ್ತು ಮಲ್ಲೇಶ್ವರದಲ್ಲಿಯೂ ತರಗತಿಗಳನ್ನು ತೆರೆದು ಪಾಠ ಹೇಳುವ ವ್ಯವಸ್ಥೆಯನ್ನು ಮಾಡಿದೆ. ವಿದ್ಯಾರ್ಥಿಗಳನ್ನು ಡಿಸೆಂಬರು ತಿಂಗಳಿನಲ್ಲಿ ನಡೆಯಲಿರುವ ೨ ಮತ್ತು ೩ನೆಯ ಪರೀಕ್ಷೆಗಳಿಗೆ ತರಪೇತು ಮಾಡಲಾಗುವುದು. ಸಾಕಷ್ಟು ಮಂದಿ ವಿದ್ಯಾರ್ಥಿಗಳು ಸೇರುವುದಾದರೆ ೧ನೆಯ ಪರೀಕ್ಷೆಯ ತರಗತಿಗಳನ್ನೂ ನಡಸುವ ಏರ್ಪಾಟನ್ನು ಮಾಡಲಾಗುವುದು. ವಿದ್ಯಾರ್ಥಿಗಳು ಹೆಚ್ಚು ಸಂಖ್ಯೆಯಲ್ಲಿ ಈ ತರಗತಿಗಳಿಗೆ ಸೇರಿ ಈ ತರಗತಿಗಳ ಪೂರ್ಣ ಪ್ರಯೋಜನವನ್ನು ಪಡೆಯುವರಾಗಿ ಪರಿಷತ್ತು ನಂಬಿದೆ.

೨ನೆಯ ಪರೀಕ್ಷೆಯ ತರಗತಿಗಳಿಗೆ ಮಂಗಳವಾರ, ಗುರುವಾರ, ಶನಿವಾರಗಳೂ, ೩ನೆಯ ಪರೀಕ್ಷೆಯ ತರಗತಿಗಳಿಗೆ ಸೋಮವಾರ, ಬುಧವಾರ, ಶುಕ್ರವಾರಗಳೂ, ಹೀಗೆ ವಾರದಲ್ಲಿ ಮೂರು ಮೂರು ದಿನಗಳು ಪಾಠಕ್ರಮ ನಡೆಯುವಂತೆ ಏರ್ಪಾಟಾಗಿದೆ. ಪಾಠಗಳು ಆಯಾ ದಿನಗಳಲ್ಲಿ ಸಂಜೆ ೬ರಿಂದ ೭ರ ವರೆಗೆ ನಡೆಯುವುವು.

ಈ ತರಗತಿಗಳಿಗೆ ಸೇರಲಿಚ್ಛಿಸುವವರು ಅಪೇಕ್ಷಾ ಪತ್ರಗಳನ್ನು ಆಗಸ್ಟ್ ೨ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ತಲುಪುವಂತೆ ಕಳಿಸಬೇಕು. ಪತ್ರದೊಡನೆ ಅಭಿಮಾನಿಗಳ ತೆರ ೮ ಆಣೆಯನ್ನು ಕಟ್ಟಬೇಕು.

ಅಪೇಕ್ಷಾ ಪತ್ರಗಳನ್ನೂ ಹೆಚ್ಚಿನ ವಿವರಗಳನ್ನೂ ಪರಿಷತ್ತಿನ ಕಚೇರಿಯಿಂದ ಪಡೆಯಬಹುದು.

**ಬಿ. ವೆಂಕೋಬರಾವ್,**
ಕಾರ್ಯದರ್ಶಿ

(೩೬೯ನೇ ಪುಟದಿಂದ)

ಮೇಲೆ ನಗುತ್ತಿದ್ದರೂ ಹುಡುಗಿ ಕೊರಗಿ ಕೊರಗಿ ಸೊರಗುತ್ತಿರುವುದನ್ನು ನೋಡಿ ಮುದುಕರು ಸಿಟ್ಟಿನಿಂದ ಮಗನೊಡನೆ, 'ನನ್ನ ಮೇಲಿನ ಸಿಟ್ಟಿಗೆ ಆ ಹುಡುಗಿಯನ್ನು ಯಾಕೆ ಗೋಳುಗುಟ್ಟಿಸುತ್ತಿ? ನೀನು ಹೀಗೆಲ್ಲಾ ಮಾಡಿದರೆ ನಾನು ಇನ್ನು ಒಂದು ಘಳಿಗೆಯೂ ನಿನ್ನ ಮನೆಯಲ್ಲಿರುವುದಿಲ್ಲ. ಈಗಲೇ ಊರಿಗೆ ಹೊರಟುಹೋಗುತ್ತೇನೆ' ಎಂದರು.

ಮಗನಿಗೂ ಸಿಟ್ಟಿದ್ದಿತು. ಉದಾಸೀನದಿಂದ—

'ನಿಮ್ಮ ಇಷ್ಟವಿದ್ದಂತೆ ಮಾಡಬಹುದು' ಎಂದನು.

ಮುದುಕರಿಗೆ ತಾಳ್ಮೆ ತಪ್ಪಿತು. ಹೆಂಡತಿಯನ್ನು ಕೂಗಿ, 'ನಡಿ, ನಾವು ಈಗಲೇ ಊರಿಗೆ ಹೊರಟುಹೋಗೋಣ. ಇವನಿಗೆ ಇಷ್ಟು ಉದಾಸೀನವಾದರೆ ನಾವೇಕೆ ಇಲ್ಲಿ ಇರಬೇಕು? ದೇವರು ಕೊಟ್ಟ ಗುಡಿಸಲು ಅಂಬಲಿ ಹಳ್ಳಿಯಲ್ಲಿ ನಮಗೆ ಇದ್ದೇ ಇದೆ' ಎಂದರು.

ಯಜಮಾನಿಗೆ ಸೊಸೆಯನ್ನು ಬಿಟ್ಟು ಹೊರಡಲು ಮನಸ್ಸು ಇರಲಿಲ್ಲ. ಆದರೆ ಅವರ ಜೀವಮಾನದಲ್ಲಿ ಎಂದೂ ಗಂಡನಿಗೆ ಎದುರು ಮಾತಾಡಿದವರಲ್ಲ. ಅದರ ಫಲವಾಗಿಯೇ ಇಂದು ಮನೆಯಲ್ಲಿ ಇಷ್ಟು ಅವ್ಯವಸ್ಥೆಯಿದ್ದರೂ, ಅವರ ಮಾತಿಗೆ ಪ್ರತಿ ಹೇಳಲು ಆಗಲಿಲ್ಲ. ಅದಲ್ಲದೆ ತಾವು ಹೊರಟುಹೋದರೆ ಸಂಸಾರ ಸರಿಯಾಗಬಹುದೆಂದೂ ತಾವು ಇರುವವರೆಗೆ ಮಗನು ಹೆಂಡತಿಯನ್ನು ಯಾವುದಕ್ಕೂ ಕರೆಯುವುದಿಲ್ಲವೆಂದೂ ಆಮೇಲೆ ಯತ್ನವಿಲ್ಲದೆ ಮಾತುಕತೆಯಾಡಬೇಕಾಗಿ ಬಂದು ಅವರವರು ಸರಿಯಾಗಿರಬಹುದೆಂದೂ ಊಹಿಸಿದರು.

ಒಂದು ಘಂಟೆಯೊಳಗಾಗಿ ಹೊರಡಲು ಎಲ್ಲವೂ ಸಿದ್ಧವಾಯಿತು. ರಾಮು ಆ ಜವಾಬು ಹೇಳಿದ್ದರೂ ಅವರು ಕೂಡಲೆ ಹಾಗೆ ಹೊರಟುಬಿಡುವರೆಂದು ಎಣಿಸಿರಲಿಲ್ಲ. ತಾಯಿ ಹೊರಟದ್ದು ಅವನಿಗೆ ಹೇಗೋ ಆದರೂ ಬೇಡವೆಂದು ಹೇಳಲು ಅವನ ಅಭಿಮಾನವು ಅವಕಾಶ ಕೊಡಲಿಲ್ಲ.

ತಾಯಿ ಮಗನು ಇದ್ದಲ್ಲಿಗೆ ಹೋದರು. ರಾಮು ಎದ್ದು ನಮಸ್ಕಾರ ಮಾಡಿದ. ಮಗನ ದುಗುಡವನ್ನು ನೋಡಿ ತಾಯಿಗೂ ಕಣ್ಣು ತುಂಬಿತು. ತಲೆಯನ್ನು ಸವರುತ್ತ, 'ರಾಮು, ನಾನು ನಿನ್ನ ಹೊತ್ತು ಹೆತ್ತವಳು, ನಿನ್ನಲ್ಲಿ ಒಂದು ಮಾತು ಕೇಳಿಕೊಳ್ಳುತ್ತೇನೆ. ಇಲ್ಲವೆನ್ನಬೇಡ' ಎಂದರು.

'ಏನಮ್ಮ ಅದು.'

'ನಾವು ಮಾಡಿದ್ದು ತಪ್ಪು. ನಿನ್ನ ಮಹತ್ತರವಾದ ಆಸೆಯನ್ನು ಮುರಿದೆವು. ನಾನು ನಿನ್ನ ಪರವಾಗಿ ಎಷ್ಟೋ ಹೇಳಿ ನಿಮ್ಮ ತಂದೆಯವರಿಂದ ಎಷ್ಟು ಅನ್ನಿಸಿಕೊಂಡಿದೇನೆ ಅದನ್ನು ನೀನು ಬಲ್ಲೆ. ನನಗಾಗಿ ನಿಮ್ಮ ತಂದೆಯಲ್ಲಿ ಕ್ಷಮೆ ಇರಲಿ. ನಮ್ಮ ತಪ್ಪಿಗಾಗಿ ಆ ಹುಡುಗಿಯನ್ನು ಮಾತ್ರ ಎಳ್ಳಷ್ಟೂ ನೋಯಿಸಬೇಡ ಕಂಡ್ಯಾ.'

'ನಾನೇನು ಮಾಡಿದೆನಮ್ಮ ಅವಳನ್ನ? ನಾನು ಯಾವ ತಂಟೆಗೂ ಹೋಗುವುದೇ ಇಲ್ಲವಲ್ಲ.'

'ರಾಮು, ನೀನು ಹೀಗೆ ಹೇಳಿದರೆ ನಾನೇನು ಹೇಳಲಿ? ಒಂದು ಸಲ ಕಣ್ಣೆತ್ತಿ ಆ ಹುಡುಗಿಯನ್ನು ನೋಡು, ಹೇಗೆ ಸೊರಗಿದಾಳೆ. ಕೈಹಿಡಿದ ನೀನೇ ಹೀಗೆ ಮಾಡಿದರೆ ಕಾಪಾಡುವವರು ಯಾರು? ನಾನು ನಿಮ್ಮ ತಂದೆಯ ಕೋಪದ ಕಿಚ್ಚಿನಲ್ಲಿ ಬೆಂದು ಹಣ್ಣಾಗಿ ಅವರ ಸ್ವಾರ್ಥಕ್ಕಾಗಿ ಬಗ್ಗಿ ನಿರ್ಜೀವಿಯಾಗಿದ್ದಾಗ ಹುಡುಗನಾಗಿದ್ದ ನೀನು ನನ್ನ ಬಳಿ ಕುಳಿತು ಸಹಾನುಭೂತಿಯಿಂದ ಕಣ್ಣೀರು ಸುರಿಸುತ್ತಿದ್ದೆ. ಆ ಕಷ್ಟ ನನ್ನ ತಲೆಗೇ ಕೊನೆಯಾಗಲಿ ಎಂದಿದ್ದೆ. ದೇವರ ಇಚ್ಛೆಗೆ ಅದು ಬರಲಿಲ್ಲ. ಗೌರಿಯ ಪಾಡು ನನಗಿಂತಲೂ ಕೇ....ಡಾ....ಯಿ....ತು' ಎಂದು ಹೇಳುತ್ತ ಹೇಳುತ್ತ ಅವರ ಕಂಠ ಬಿಗಿದುಬಂದು ಮಾತು ಹೊರಡದಾಯಿತು. ಹೊರಗಡೆ ತನ್ನನ್ನೆ ಕೂಗುತ್ತಿದ್ದ ಗಂಡನ ಸಿಂಹ ಘರ್ಜನೆ ಕೇಳಿಸಿತು.

ರಾಮು ತಾಯಿಯನ್ನು ಸಮಾಧಾನ ಪಡಿಸುತ್ತ 'ನೀನು ಏನೂ ಯೋಚನೆ ಮಾಡಬೇಡಮ್ಮ' ಎಂದನು.

ಯಜಮಾನಿ ಕಣ್ಣೊರಸಿಕೊಳ್ಳುತ್ತ ಹೊರಟರು.

* * *

(ಮುಂದಿನ ಸಂಚಿಕೆಯಲ್ಲಿ ಮುಗಿಯುವುದು)

# ಸೇಲಂ ಜಿಲ್ಲೆಯಲ್ಲಿ ಕನ್ನಡ ಪ್ರಚಾರ

(ಕೊಪ್ಪದ ರಾಮಸ್ವಾಮಿ ಅಯ್ಯಂಗಾರ್)

ನಮ್ಮ ಮೈಸೂರು ಸೀಮೆಗೆ ಪೂರ್ವದಿಕ್ಕಿನ ಮೇರೆಯಾಗಿ ಸೇಲಂ ಜಿಲ್ಲೆ ಇರುವುದು. ಇದೊಂದು ದೊಡ್ಡ ಜಿಲ್ಲಾ ಪ್ರದೇಶವಾಗಿ ಬೆಂಗಳೂರು ಡಿಸ್ಟ್ರಿಕ್ಟು ಮತ್ತು ಕೋಲಾರ ಡಿಸ್ಟ್ರಿಕ್ಟುಗಳೆರಡಕ್ಕೂ ಮಗ್ಗುಲಲ್ಲಿರುವುದು. ಇಂದಿನ ಭಾಷಾವಾರು ರಾಷ್ಟ್ರ ಪರಿಗಣನೆಯಲ್ಲಿ ಇದು ಆ ಕಡೆ ಆಂಧ್ರ ದೇಶಕ್ಕೂ ಇಲ್ಲವೇ ತಮಿಳು ರಾಷ್ಟ್ರಕ್ಕೂ, ಈ ಕಡೆ ಕರ್ನಾಟಕ ಪ್ರಾಂತಕ್ಕೂ ಸೇರದೆ ಇಬ್ಬಂದಿಯಾದ ಪ್ರದೇಶವಾಗಿದೆ. ಈಗ್ಗೆ ೨-೩ ವರ್ಷಗಳ ಹಿಂದೆ, ಮದರಾಸು ಆಧಿಪತ್ಯದಲ್ಲಿ ಕಾಂಗ್ರೆಸ್ ಮಂತ್ರಿಗಳು ಪದವಿ ಸ್ವೀಕರಿಸಿದ್ದಾಗ ಈ ಸೇಲಂ ಜಿಲ್ಲೆಯ ಮಹಾಜನರು ತಮ್ಮನ್ನು ಆಂಧ್ರ ರಾಷ್ಟ್ರಕ್ಕೆ ಸೇರಿಸಬೇಕೆಂದು ಬಿನ್ನಹ ಮಾಡಿಕೊಂಡಿದ್ದರು. ಮದ್ರಾಸ್ ಮಂತ್ರಿಗಳಾಗಿದ್ದ ಸಿ. ರಾಜಗೋಪಾಲಾಚಾರ್ಯರಿಗೆ ಹೊಸೂರು ತಾಲ್ಲೂಕು ಮಹಾಜನರು ಅರ್ಪಿಸಿದ ಬಿನ್ನವತ್ತಳೆಯಲ್ಲಿ ಈ ತಾಲ್ಲೂಕಿನಲ್ಲಿ ರಾಜಕೀಯ ಭಾಷೆ ತಮಿಳಾದರೂ ಈ ತಾಲ್ಲೂಕಿನ ಜನರು ಆಡುವ ಭಾಷೆಗಳಲ್ಲಿ ಕನ್ನಡ ಮೊದಲನೆಯದೆಂದೂ ಎರಡನೆಯದು ಆಂಧ್ರಭಾಷೆಯೆಂದೂ ತಿಳಿಯಪಡಿಸಿರುತ್ತಾರೆ. ಹೊಸೂರು ತಾಲ್ಲೂಕಿನ ಕನ್ನಡಿಗರು ಎಚ್ಚತ್ತು ಈ ತಾಲ್ಲೂಕಿನ ಕೆಲವು ಸ್ಕೂಲುಗಳಲ್ಲಿ ಕನ್ನಡ ಕಲಿಸುವ ಯೋಜನೆ ಆಗಿ ಕೆಲವು ಕಾಲ ಆಯಿತು. ಇದಕ್ಕೆ ಬೆಂಬಲವಾಗಿ ಈ ತಾಲ್ಲೂಕಿನಲ್ಲಿದ್ದ ವಿದ್ಯಾಭ್ಯಾಸದ ಜಿಲ್ಲಾಧಿಕಾರಿಗಳೂ ಮತ್ತು ಡಿಸ್ಟ್ರಿಕ್ಟು ಫಾರೆಸ್ಟು ಆಫೀಸರವರಾದ ಶ್ರೀ॥ ರಾವ್‌ಬಹದ್ದೂರ್ ಬೆಳ್ಳಿಯಪ್ಪನವರೂ ಪ್ರಯತ್ನಿಸಿದರು. ಈಚೆಗೆ ಕನ್ನಡದ ಶಿಕ್ಷಣವೇ ಇಲ್ಲವೆನ್ನಬೇಕು. ಸೇಲಂ ಜಿಲ್ಲೆಯಲ್ಲಿ ೮ ತಾಲ್ಲೂಕುಗಳಿರುತ್ತವೆ. ಈ ಜಿಲ್ಲೆಯಲ್ಲಿ ಜಹಗೀರಿಗಳೂ, ಪಾಳೆಪಟ್ಟುಗಳೂ ಹೆಚ್ಚು. ಬೇರಿಕೆ, ಸೂಳಗಿರಿ, ಬಾಗಲೂರು ಮುಂತಾದ ಪಾಳೆಪಟ್ಟುಗಳ ಪಾಳ್ಯಗಾರರು ಶದ್ಧ ಕನ್ನಡಿಗರು. ಈ ಐದಾರು ಪಾಳೆಪಟ್ಟುಗಳಿಗೆ ಸೇರಿದ ಪ್ರದೇಶ ಒಂದು ತಾಲ್ಲೂಕಿಗಿಂತ ಹೆಚ್ಚಾಗುತ್ತದೆ. ಕೋಲಾರ ಡಿಸ್ಟ್ರಿಕ್ಟು ಸರಹದ್ದಿನಿಂದ ಸೇಲಂ ಜಿಲ್ಲೆಯ ಮಧ್ಯಭಾಗದವರಿಗೂ ಇರುವ ಪ್ರದೇಶವೆಲ್ಲಾ ಇಂದಿಗೂ ಕನ್ನಡ ಸೀಮೆಯಾಗಿದೆ. ಹೈದರ್ ಟಿಪ್ಪು ನವಾಬರ ಕಾಲದಲ್ಲಿ ಈಗಿನ ಸೇಲಂಜಿಲ್ಲೆ ಪೂರ್ತ ಕೊಳ್ಳೇಗಾಲವೂ ಸೇರಿಕೊಂಡು ಮೈಸೂರಿಗೆ ಸೇರಿದ್ದಿತು. ಆರೋಗ್ಯ ಸ್ಥಳವಾದ ಹೊಸೂರು ಪಟ್ಟಣದಲ್ಲಿ ಈಗಲೂ ಟೀಪು ನವಾಬರ ಬೇಸಿಗೆ ಕಾಲದ ಅರಮನೆ ಅಚ್ಚಳಿಯದೆ ಇರುತ್ತದೆ. ಕೆನಿಲ್‌ವರ್ತ್ ಎಂಬ ಕಲೆಕ್ಟರು ಇದನ್ನು ಜೀರ್ಣೋದ್ಧಾರ ಮಾಡಿ ತನ್ನ ಬಂಗಲೆಯಾಗಿ ಮಾಡಿಕೊಂಡಿದ್ದರು. ಈಚೆಗೆ ಬಂದ ಐ. ಸಿ. ಎಸ್. ಅಧಿಕಾರಿಗಳು ಇದನ್ನು ಸರಿಮಾಡದೆ ಕೈಬಿಟ್ಟದ್ದರಿಂದ ಈ ಅರಮನೆ ನಾಮಾವಶೇಷವಾಗುತ್ತಿದೆ. ಸೇಲಂ ಜಿಲ್ಲೆಯಲ್ಲಿ ಕನ್ನಡಿಗರು ಹೆಚ್ಚು ಸಂಖ್ಯಾತರಾಗಿದ್ದಾರೆ. ಇವರ ವಿಕಾಸಕ್ಕೆ ರಾಜಕೀಯ ಕಡತದಲ್ಲಿ ತಮಿಳು ಮತ್ತು ಇಂಗ್ಲಿಷ್ ವ್ಯಾಪನೆ ಇರುವುದರಿಂದಲೂ ಮಾತೃಭಾಷಾ ವಿಕಾಸಕ್ಕೆ ಕನ್ನಡದ ಸ್ಕೂಲುಗಳನ್ನು ಸ್ಥಾಪಿಸದೆ ಇರುವುದರಿಂದಲೂ, ಕನ್ನಡ ಸಾಹಿತ್ಯ ಪ್ರಚಾರ ಕಾರ್ಯ ನಡೆಯುತ್ತಿಲ್ಲವಾದುದರಿಂದಲೂ ಈ ಜಿಲ್ಲೆಯ ಕನ್ನಡಿಗರ ಸ್ಥಿತಿ ಅತ್ಯಂತ ದಾರುಣವಾಗಿದೆ. ಕನ್ನಡ ಸಾಹಿತ್ಯ ಸಂಸ್ಕೃತಿಗಳ ಅಭಿಮಾನಿಶಾಲಿಗಳಾದ ಸಂಗೀತಗಾರರೂ, ಕೀರ್ತನಕಾರರೂ, ಭಾಷಣಕಾರರೂ, ಲಾವಣಿಗರೂ ಈ ಜಿಲ್ಲೆಯಲ್ಲಿ ಸಂಚರಿಸಿ ಕನ್ನಡ ಸಂಸ್ಕೃತಿಯನ್ನು ಬೆಳಗಿಸಬೇಕಾಗಿದೆ. ಕನ್ನಡದ ಗಡಿಯನ್ನು ಕಾಪಾಡಿಕೊಳ್ಳಬೇಕಾಗಿದೆ. ಕರ್ನಾಟಕ ಏಕೀಕರಣ ಸಂಘದವರೂ, ಕನ್ನಡ ಸಾಹಿತ್ಯ ಪರಿಷತ್ತಿನವರೂ ಈ ಬಗ್ಗೆ ತಕ್ಕ ಪ್ರಚಾರ ಕಾರ್ಯಾಚರಣೆಯನ್ನು ಕೈಕೊಳ್ಳುವುದು ಅತ್ಯಾವಶ್ಯಕವೆಂದು ಬಿನ್ನವಿಸುತ್ತೇನೆ. ಈ ಉದ್ಯಮಕ್ಕೆ ಈಗಲೂ ಸೇಲಂ ಜಿಲ್ಲೆಯ ಅಧಿಕಾರವರ್ಗದವರ, ಪ್ರಜಾವರ್ಗದವರ ಬೆಂಬಲ ದೊರೆಯುವುದಾಗಿದೆ. ಈ ವಿಚಾರವಾಗಿ ದಾಕ್ಷಿಣ್ಯ ತೋರಿದ ಜಿಲ್ಲಾ ಫಾರೆಸ್ಟ್ ಆಫೀಸರಾದ ರಾವ್‌ಸಾಹೇಬ್ ಶ್ರೀ॥ ಬೆಳ್ಳಿಯಪ್ಪನವರು ಈ ಲೇಖಕರೊಂದಿಗೆ ಸಮಾಲೋಚನೆ ಮಾಡಿದ್ದಾರೆ. ಕನ್ನಡದ ಅಭಿಮಾನಿಶಾಲಿಗಳು ಸೇಲಂ ಜಿಲ್ಲೆಯಲ್ಲಿ ಪ್ರಚಾರ ನಡಸಲು ತಕ್ಕ ಏರ್ಪಾಡನ್ನು ಕೈಕೊಳ್ಳುವವರಾಗಲಿ!

# ಕರ್ನಾಟಕದ ಹಳ್ಳಿಯ ಜೀವನ

ಮುಂಬಯಿ ಆಕಾಶವಾಣಿಯಲ್ಲಿ ಪ್ರೊ|| ವಿ. ಬಿ. ನಾಯಕರು
ಮಾಡಿದ ಭಾಷಣದ ಸಾರಾಂಶ

ಭರತಖಂಡವು ಹಳ್ಳಿಗಳ ನಾಡೆಂದು ಹೆಸರಾಗಿದೆ. ಅದರಲ್ಲಿಯೂ ನಮ್ಮ ಕನ್ನಡ ನಾಡು ಹಳ್ಳಿಗಳ ಬೀಡೆಂದು ಖಂಡಿತವಾಗಿ ಹೇಳಬಹುದು. ಪ್ರಾಚೀನ ಕಾಲದ ಹಳ್ಳಿಗಳ ಜೀವನದ ರೀತಿಗೂ, ಇಂದಿನ ಹಳ್ಳಿಗಳ ಬಾಳಿನ ರೀತಿಗೂ ತುಂಬ ವ್ಯತ್ಯಾಸವಾಗಿದೆ. ಹಿಂದಿನ ಹಳ್ಳಿಯ ಜೀವನ ಸ್ವಾವಲಂಬಿಯಾದ ಜೀವನವಾಗಿತ್ತು. ಹಳ್ಳಿಯ ಜನರು ತಮ್ಮ ಬೇಕುಸಾಕುಗಳನ್ನೆಲ್ಲ ತಮ್ಮ ಹಳ್ಳಿಗಳಲ್ಲಿಯೇ ಪೂರೈಸಿ ಕೊಳ್ಳುತ್ತಿದ್ದರು. ಇದಲ್ಲದೆ ಹಳ್ಳಿಗಳ ಜೀವನದಲ್ಲಿ ಒಂದು ಬಗೆಯ ಸಹಕಾರ, ಪ್ರೇಮ, ಸೌಹಾರ್ದಗಳು ನೆಲೆಗೊಂಡಿದ್ದುವು. ಹಳ್ಳಿಗಳ ಹಿಂದಿನ ಬಾಳಿನ ಬಗೆಯನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ "ಸರಲ ಜೀವನ, ಉದಾತ್ತ ವಿಚಾರ" ಎಂಬುದೇ ಜೀವನದ ರಹಸ್ಯ ವಾಗಿತ್ತೆಂದು ಹೇಳಬಹುದು.

ಸಮತೆ, ತ್ಯಾಗ, ಪರೋಪಕಾರ, ಔದಾರ್ಯ ಮೊದಲಾದ ಸದ್ಗುಣಗಳ ಎಳೆಗಳು ಹಳ್ಳಿಗರ ಜೀವನದಲ್ಲಿ ಹಾಸುಹೊಕ್ಕಾಗಿ ಸಹಜ ವಾಗಿ ಹೆಣೆದುಕೊಂಡಿದ್ದವೆಂಬುದನ್ನು ಹೇಳಬಹುದು. ಜನಸೇವೆ, ಸ್ವಾರ್ಥತ್ಯಾಗ, ಪಾಪಭೀರುತ್ವ ಮೊದಲಾದ ಗುಣಗಳು ಹಳ್ಳಿಗರ ಜೀವನವನ್ನು ಪರಿಪೂರ್ಣವನ್ನಾಗಿಯೂ ಸುಂದರವನ್ನಾಗಿಯೂ ಮಾಡಿದ್ದುವು. ಕರ್ನಾಟಕದ ಹಳ್ಳಿಯ ಜೀವನದ ಸರಸವಾದ ಚಿತ್ರ ವನ್ನು ಸರ್ವಜ್ಞ ಕವಿಯು ಹೀಗೆ ಬಣ್ಣಿಸಿದ್ದಾನೆ:

ಅಲ್ಲವರಿಶಿಣವುಂಟು; ಬೆಲ್ಲ ಬಿಳಿಯಲೆಯುಂಟು।
ಮೆಲ್ಲಲ್ಕೆ ಮಲೆನಾಡ ಸೊಬಗ ನೋಡೆಂದ ಸರ್ವಜ್ಞ ||
ಜೋಳದಾ ಬೋನಕ್ಕೆ ಬೇಳೆಯ ತೊಗೆಯಾಗೆ।
ಕಾಳೆಮ್ಮೆ ಕರೆದ ಹೈನಾಗೆ ಬೆಳವಲದ
ಮೇಳ ನೋಡೆಂದ ಸರ್ವಜ್ಞ ||

ಕನ್ನಡ ನಾಡಿನ ಹಳ್ಳಿಗಳ ಬಾಳನ್ನು ಅಂದಗೊಳಿಸುವುದಕ್ಕೆ ಶಿವಶರಣರೂ ಹರಿದಾಸರೂ ಮಾಡಿದ ಸೇವೆಯು ಅಪಾರವಾಗಿದೆ. ಸುಂದರವಾದ ಆಧ್ಯಾತ್ಮಿಕ ತತ್ತ್ವಗಳನ್ನು ನಾಡನುಡಿಯಲ್ಲಿ ಮನೆ ಮನೆಗೆ ಬೀರಿ ಹಳ್ಳಿಯ ಜನರ ಬಾಳಿನ ಹದವು ಕೆಡದಂತೆ, ಗಳಿಗೆಯ ಮುರಿಯದಂತೆ ಎಚ್ಚರಕೊಟ್ಟು ಜನರ ಸೇವೆಯನ್ನು ಅವರು ಮಾಡಿರು ವರು. 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ತನುವ ನೀವು ಸಂತೈಸಿಕೊಳ್ಳಿ. ನಿಮ್ಮ ಮನವ ನೀವು ಸಂತೈಸಿಕೊಳ್ಳಿ'; 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ ಕೂಡಲಸಂಗಮದೇವ'; 'ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ'ವೆಂಬುದಾಗಿ ಶ್ರೀ ಬಸವೇಶ್ವರರೂ ಅವರ ಅನುಯಾಯಿಗಳೂ ಹೇಳಿ ಹಳ್ಳಿಗರ ನೈತಿಕ ಜೀವನದ ಮೇಲೆ ತಮ್ಮ ವರ್ಚಸ್ಸನ್ನು ಬೀರಿದ್ದರು. ಅದೇ ಪ್ರಕಾರ ಹರಿದಾಸರಾದರೂ 'ಸತ್ಯವೆಂಬುದೇ ಸ್ನಾನ' 'ಕಲಿಯುಗದ ಮಹಿಮೆಯು ಕಾಣಬಂತೀಗ' 'ಕೊಂಡಾಡಿ ಬೇಡಿದರೆ ಕೊಡರೊಂದು ರುಪ್ಪಿಯನು ದಂಡಿಸಿ ಹೊಡೆವರಿಗೆ ಧನವ ಕೊಡುತಿಹರು' ಇವೇ ಮೊದಲಾದ ನುಡಿಗಳಿಂದ ಸಮಾಜದ ಕುಂದುಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದು ಹಳ್ಳಿಯ ಬಾಳನ್ನು ಹಸನಗೊಳಿಸಲು ಹೆಣಗಿರುವರು. ನೀತಿಯು ಬಾಳಿನ ನೆಲಗಟ್ಟೆಂಬುದನ್ನು ಹಿಂದಿನ ಹಿರಿಯರು ಚೆನ್ನಾಗಿ ಅರಿತುದರಿಂದಲೇ ಅದನ್ನು ಗಟ್ಟಿಯಾಗಿ ಕಾಪಾಡಲು ಸಾಹಸಪಟ್ಟಿರುವರು. 'ಕಚ್ಚೆ ಕೈಬಾಯಿಗಳು ಇಚ್ಚೆಯಲ್ಲಿ ಇದ್ದರೆ ಅಚ್ಯುತನಕ್ಕು ಅಜನಕ್ಕು ಹರನಕ್ಕು' ಎಂದು ಸರ್ವಜ್ಞನು ಗಂಡುನುಡಿಯಲ್ಲಿ ಡಂಗುರ ಹೊಡೆದಿದ್ದಾನೆ. ಪರಧರ್ಮ ಸಹಿಷ್ಣುತೆ ಅಂದಿನ ಜೀವನದ ಒಂದು ವೈಶಿಷ್ಟ್ಯವಾಗಿತ್ತು. ನಗರಗಳಿಗೂ ಹಳ್ಳಿ ಗಳಿಗೂ ನಿಕಟ ಸಂಬಂಧವಿದ್ದಿಲ್ಲ.

ಹಿಂದಿನ ಕಾಲದಲ್ಲಿ ಕೀರ್ತನ, ಪುರಾಣ ಪ್ರವಚನ, ಗಮಕ ಗೋಷ್ಠಿ ಇವೇ ಮುಂತಾದುವುಗಳು ಹಳ್ಳಿಗರಲ್ಲಿ ಒಳ್ಳೆಯ ತಿಳಿವಳಿಕೆ ಯನ್ನು ಹರಡುವ ಉತ್ತಮ ಸಾಧನಗಳಾಗಿದ್ದುವು. ಉಪದೇಶಕನ ವ್ಯಕ್ತಿತ್ವದ ಪ್ರತ್ಯಕ್ಷ ವರ್ಚಸ್ಸು ಕೇಳುವವರ ಮೇಲೆ ಬಿದ್ದು ಅವರ ಜೀವನ ಸುಧಾರಿಸಲು ಅನುಕೂಲವಾಗುತ್ತಿತ್ತು. ಅಂತಹ ಸಂಸ್ಥೆಗಳೆಲ್ಲ ಇಂದು ಮಣ್ಣುಪಾಲಾಗಿಹೋಗಿವೆ. ಈ ಕಾರಣದಿಂದಲೇ ಮಹಾತ್ಮಾ ಜೀಯವರು ಹಳ್ಳಿಗಳ ಸುಧಾರಣೆಯಾದ ಹೊರತು ದೇಶದ ಏಳಿಗೆಯಾಗ ಲಾರದೆಂದು ಸಾರುತ್ತಿರುವರು. ಮಹಾತ್ಮರ ತತ್ತ್ವೋಪದೇಶದ ಪರಿಣಾಮ ದಿಂದ ಕೆಲಮಟ್ಟಿಗೆ ಹಳ್ಳಿಗರ ಮನಸ್ಸಿನಲ್ಲಿ ಬದಲಾವಣೆಯಾಗಲಾರಂಭಿ ಸಿದೆ. "ಒಳ್ಳೆಯವನಾಗಿ ಹಳ್ಳಿಯಲ್ಲಿರು, ಕೆಟ್ಟು ಪಟ್ಟಣ ಸೇರು" ಎಂಬ ಗಾದೆಯ ಮಾತಿನಗುಟ್ಟು ಈಗ ಚೆನ್ನಾಗಿ ತಿಳಿಯಲಾರಂಭಿಸಿದೆ.

ಪ್ರತಿಯೊಂದು ದೇಶದಲ್ಲಿ ಪ್ರತಿಯೊಂದು ಭಾಷೆಯಲ್ಲಿ ಆಯಾಯ ದೇಶದ ಜನರು ತಮ್ಮ ತಮ್ಮ ಅನುಭವಗಳನ್ನು ಅತ್ಯಂತ ಸುಂದರ, ಸರಲ, ಸುಲಲಿತ ಶೈಲಿಯಲ್ಲಿ ಹೇಳಿದ ಒಂದು ಸಾಹಿತ್ಯ ರೀತಿಯು ಕಂಡುಬರುತ್ತದೆ. ಈ ಸಾಹಿತ್ಯ ರೀತಿಗೆ ಆಂಗ್ಲ ಭಾಷೆಯಲ್ಲಿ folk-lore; folk songs—ಅಂದರೆ ಜನಪದ ವಿದ್ಯೆ, ಜನಪದ ಸಂಗೀತ ವೆಂದು ಹೆಸರಿರುವದು. ಈ ತರದ ಸಾಹಿತ್ಯದಲ್ಲಿ ನಮ್ಮ ಬಾಳು ಬದುಕುಗಳ ಸಂಪತ್ತು ಹುದುಕೊಂಡಿರುತ್ತದೆ. ಕನ್ನಡ ನಾಡಿಗಾದರೂ ಇಂತಹ ಸಂಸ್ಕೃತಿಯ ಹಾಗೂ ಸಾಹಿತ್ಯದ ಸಂಪತ್ತುಂಟು. ಲಾವಣಿ, ಸಾಂಗತ್ಯ, ದಂತಕಥೆ, ಬೀಸುಕಲ್ಲಿನ ಹಾಡುಗಳು, ಹಂತಿಯ ಹಾಡು ಗಳು, ಅನುಭವ ಪದ್ಯಗಳು, ನಾಣ್ಣುಡಿಗಳು, ಬಯಲಾಟಗಳು ಇವೇ ಮೊದಲಾದವುಗಳ ಬೆಲೆಯು ಕನ್ನಡ ನಾಡಿನಲ್ಲಿ ಒಳ್ಳೇ ಹುಲು ಸಾಗಿತ್ತೆಂದು ಹೇಳಬಹುದು. ನೃಪತುಂಗನು ಹೇಳಿದಂತೆ ಕನ್ನಡಿಗರೂ ಹುಟ್ಟುಕವಿಗಳೂ, ರಸಜ್ಞರೂ, ಆಗಿದ್ದರೆಂಬುದಕ್ಕೆ ಓದುಬರೆ ಬಾರದ ಹೆಂಗಳೆಯರೂ ಒಕ್ಕಲಿಗರೂ ಕಾಲ ಕಾಲಕ್ಕೆ ಕಟ್ಟಿದ ಪದಪದ್ಯಗಳೇ ಸಾಕ್ಷಿಯಾಗಿವೆ. ಇಬ್ಬರು ಹೆಂಡರನ್ನು ಮಾಡಿಕೊಳ್ಳುವುದು ಯೋಗ್ಯವಲ್ಲ ವೆಂಬ ಮಾತನ್ನು 'ಅಂಗಿಯಮ್ಯಾಲಂಗಿ ಚಂದೇನೋ ನನರಾಯ! ರಂಬಿಯಮ್ಯಾಲ ಪ್ರತಿರಂಬಿ' ಎಂಬ ಬೀಸುವಕಲ್ಲಿನ ಹಾಡಿನಲ್ಲಿ ಎಷು ಸುಂದರವಾಗಿ ಚಿತ್ರಿಸಿರುವುದು ನೋಡಿರಿ. 'ಬಂಜೆಯ ಬದುಕು ಬಾಡಿಗೆ ಎತ್ತು ದುಡಿದಂತೆ, ಬಾಳೆಲೆ ಹಾಸ್ಯುಂಡು ಬೀಸಿ ಒಗೆದಂತೆ' ಎಂಬ ಅಂದಚೆಂದದ ದಿನದ ಅನುಭವದ ಉಪಮೆಗಳಿಂದ ಬಾಳುಬದುಕುಗಳ ಕಹಿಸಿಹಿಗಳನ್ನು ಎತ್ತಿ ತೋರಿಸುವರು.

ಹಳ್ಳಿಗಳ ಬಾಳು ಅಂದವಾಗಬೇಕಾದರೆ ಹಳ್ಳಿಗಳು ಸ್ವಾವಲಂಬಿ ಯಾಗಬೇಕು; ಉದ್ಯೋಗ ವ್ಯವಸಾಯಗಳು ಬೆಳೆಯಬೇಕು; ಹಳ್ಳಿ ಗರಿಗೆಲ್ಲ ಓದುಬರಹ ಬರಬೇಕು. ನಮ್ಮ ಮೊದಲಿನ ಸಂಸ್ಕೃತಿಯ ಗುರುತುಗಳಾದ ಜನಪದ ಸಾಹಿತ್ಯ, ಜೀವನ ಸಂಗೀತಗಳ ಸಂಗ್ರಹ ವನ್ನು ನಾವು ಚೆನ್ನಾಗಿ ಮಾಡಬೇಕು. ಕಲಿತವರೆಲ್ಲರೂ ಕಲಿಯ ದಿದ್ದವರಿಗೆ ಅಕ್ಷರ ಜ್ಞಾನವನ್ನು ಮಾಡಿಕೊಡಬೇಕು. ಜಾತಿ ಜಾತಿಗಳ ವೈರವು ನಂದಿಹೋಗಬೇಕು. ಪಟ್ಟಣಗಳಲ್ಲಿಯ ದುಶ್ಚಟಗಳು ಹಳ್ಳಿ ಗಳಲ್ಲಿ ಸೇರದಂತೆಯತ್ನ ಮಾಡಬೇಕು. ಒಟ್ಟಿನಲ್ಲಿ ಹಳ್ಳಿಗರ ಜೀವನವು ಸುಖಮಯವಾಗುವಂತೆ ಎಲ್ಲರೂ ದುಡಿಯಬೇಕು.

---

## ಅಮೆರಿಕಾ ಅಧ್ಯಕ್ಷರ ಭವನದಲ್ಲಿ
## ಮೈಸೂರು ಕಲಾಕೋವಿದರ ಚಿತ್ರ

ಮೈಸೂರಿನ ಸುಪ್ರಸಿದ್ಧ ಚಿತ್ರಗಾರರಾದ ಎಸ್. ನರಸಿಂಹಸ್ವಾಮಿ ಯವರು ಪ್ರಪಂಚದ ಅನೇಕ ಮಹಾವ್ಯಕ್ತಿಗಳ ಭಾವಚಿತ್ರಗಳನ್ನು ಬರೆದು ಅವುಗಳಿಗೆ ಅವರವರಿಂದ ಸ್ವಹಸ್ತಾಕ್ಷರಗಳನ್ನು ಪಡೆದಿರುತ್ತಾರೆ. ಅವರು ರಚಿಸಿದ, ಅಮೆರಿಕ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷರಾದ ರೂಸ್‌ವೆಲ್ಟರವರ ಚಿತ್ರವನ್ನು, ಶ್ರೀ|| ರೂಸ್‌ವೆಲ್ಟರವರು ಬಹಳ ಮೆಚ್ಚಿ ಅದನ್ನು ತಮ್ಮ ರಾಷ್ಟ್ರಭವನವಾದ 'ವೈಟ್‌ಹೌಸ್'ನಲ್ಲಿಡಲು ಅಪ್ಪಣೆ ಮಾಡಿರುವರೆಂದು ಗೊತ್ತಾಗಿದೆ.



ಚಿತ್ರದುರ್ಗದ ಶ್ರೀಮುನ್ನಿರಂಜನ ಜಗದ್ಗುರು
**ಮುರುಘರಾಜೇಂದ್ರ ಸ್ವಾಮಿಗಳವರು**
ಪರಿಷತ್ತಿನಮೇಲೆ ಅನುಗ್ರಹವಿಟ್ಟು
೫೦೧ ರೂಪಾಯಿಗಳ ಉದಾರ ದ್ರವ್ಯದಾನ ಮಾಡಿದ್ದಾರೆ
[ಪಡಿಯಚ್ಚು –'ಸ್ವತಂತ್ರ ಕರ್ನಾಟಕ']

## ಕನ್ನಡ ಸುದ್ದಿ

**ಧಾರವಾಡ: ಕರ್ನಾಟಕ ವಿದ್ಯಾವರ್ಧಕ ಸಂಘ**

ಕಳೆದ ೨೧ನೆಯ ಭಾನುವಾರ ಮೇಲ್ಕಂಡ ಸಂಘದ ಸಂಸ್ಥಾಪನೆಯ ದಿನವು ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. 'ಶಬ್ದಾನುಶಾಸನ' ಗ್ರಂಥಪ್ರಕಟನೆಯ ಸಮಾರಂಭವೂ ಆ ದಿನ ನಡೆಯಿತು.

**ಕಲ್ಕತ್ತೆಯಲ್ಲಿ ಶ್ರೀ|| ನಾರಾಯಣಸ್ವಾಮಿ ಅಯ್ಯರ್ ಅವರ ಭಾಷಣ**

ಸ್ವಾಮಿ ಶಿವಾನಂದ ಸರಸ್ವತಿಯವರು ಹಿಮಾಲಯದ ಹೃಷೀಕೇಶದಲ್ಲಿ ಸ್ಥಾಪಿಸಿರುವ 'ಡಿವೈನ್ ಲೈಫ್ ಸೊಸೈಟಿ'ಯ ಉತ್ತರ ಕಲ್ಕತ್ತೆಯ ಶಾಖೆಯಲ್ಲಿ ಮೈಸೂರು ಸಂಘದ ಶ್ರೀ|| ಎ. ನಾರಾಯಣಸ್ವಾಮಿ ಅಯ್ಯರ್ ಅವರು 'ಬಸವೇಶ್ವರನ ಜೀವನ ಮತ್ತು ಉಪದೇಶ' ಎಂಬ ವಿಷಯವನ್ನು ಕುರಿತು ಹಿಂದಿಯಲ್ಲಿ ಭಾಷಣಮಾಡಿದರು. ಸಭೆಗೆ ಬಂದಿದ್ದ ಮಹನೀಯರೆಲ್ಲರೂ ಭಾಷಣವನ್ನು ಮೆಚ್ಚಿದರು. ಭಾಷಣಕಾರರು ಕನ್ನಡ ವಚನಗಳ ಸಾರವನ್ನು ಹಿಂದಿಯಲ್ಲಿ ವಿವರಿಸಿದ್ದಲ್ಲದೆ, ಸಭಾಸದರಿಗೆ ಬಸವೇಶ್ವರನ ದಿವ್ಯತತ್ತ್ವಗಳು ಚೆನ್ನಾಗಿ ಮನದಟ್ಟಾಗುವಂತೆ ವಚನಗಳ ಹಿಂದಿ ಅನುವಾದವನ್ನೂ ಓದಿದರು.



ಗದುಗಿನ ನಿವೃತ್ತ ಡಿಸ್ಟ್ರಿಕ್ ಜಡ್ಜರಾದ
**ಶ್ರೀ|| ಅಸುಂಡಿ ಅನಂತರಾಯರವರು**
ಪರಿಷತ್ತಿನ ಪ್ರದಾತೃಗಳಾಗಿ ಹರಿದಾಸ ವಾಙ್ಮಯದ
ಮತ್ತು ಗಮಕ ಕಲೆಯ ಅಭಿವೃದ್ಧಿಗಾಗಿ
೩,೦೦೦ ರೂಪಾಯಿಗಳ ಉದಾರ ದ್ರವ್ಯದಾನ ಮಾಡಿದ್ದಾರೆ

## ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ

ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಸಾಹಿತ್ಯ ಪ್ರೋತ್ಸಾಹದ ಒಂದು ಏರ್ಪಾಟನ್ನು ನಡಸಬೇಕೆಂಬ ಉದ್ದೇಶದಿಂದ ಶ್ರೀ|| ಭಾಸ್ಕರರಾಯರ ತಾಯಿಯವರಾದ ಶ್ರೀಮತಿ ಎ. ಶೇಷಮ್ಮನವರು ಒಂದು ಜ್ಞಾಪಕನಿಧಿಯನ್ನು ಪರಿಷತ್ತಿಗೆ ಕೊಟ್ಟಿರುವುದು ಸರಿಯಷ್ಟೆ. ಈ ಜ್ಞಾಪಕನಿಧಿಯ ಸಂಬಂಧದಲ್ಲಿ ಈ ವರ್ಷ (೧೯೪೦) ಒಂದು ಪ್ರಬಂಧ ಸ್ಪರ್ಧೆಯನ್ನು ನಡಸಬೇಕೆಂದು ನಿಶ್ಚಯಿಸಿದೆ.

ಪ್ರಬಂಧದ ವಿಷಯ: **"ಕನ್ನಡ ಸಾಹಿತ್ಯದಲ್ಲಿ ಸಣ್ಣ ಕತೆಯ ಸ್ಥಾನ."**

### ಸ್ಪರ್ಧೆಯ ನಿಯಮಗಳು

೧. ಪ್ರಬಂಧ ಸ್ವತಂತ್ರವಾಗಿರಬೇಕು. ಮತ್ತು ಇದುವರೆಗೆ ಅಚ್ಚಾಗಿರಬಾರದು.

೨. ಪ್ರಬಂಧ ಫೂಲ್ಸ್‌ಕ್ಯಾಪ್ ಆಕಾರದ ೨೦ ಪುಟಗಳ ಪರಿಮಿತಿಯಲ್ಲಿ ಇರಬೇಕು; ಮತ್ತು ಅದನ್ನು ಕಾಗದದ ಒಂದೇ ಪಕ್ಕದಲ್ಲಿ ಶಾಯಿಯಲ್ಲಿ ಸ್ಪಷ್ಟಾಕ್ಷರಗಳಲ್ಲಿ ಬರೆದಿರಬೇಕು.

೩. ೧೯೪೦ನೆಯ ಇಸವಿ ಸೆಪ್ಟೆಂಬರ್ ತಿಂಗಳು ೩೦ನೆಯ ತಾರೀಖಿನೊಳಗಾಗಿ ಪ್ರಬಂಧ ಪರಿಷತ್ತಿನ ಕಚೇರಿಗೆ ತಲಪಬೇಕು.

೪. ಅತ್ಯುತ್ತಮವೆಂದು ಪರೀಕ್ಷಾಸಮಿತಿ ತೀರ್ಮಾನಿಸಿದ ಪ್ರಬಂಧಕ್ಕೆ ೨೦ ರೂಪಾಯಿಗಳ ಬೆಲೆಯುಳ್ಳ ಬಹುಮಾನವನ್ನು ಕೊಡಲಾಗುವುದು.

೫. ಬಹುಮಾನ ಪಡೆದ ಪ್ರಬಂಧವನ್ನು ಪ್ರಕಟಿಸಲು ಪರಿಷತ್ತಿಗೆ ಹಕ್ಕು ಇರುತ್ತದೆ.

೬. ಸ್ಪರ್ಧೆಗೆ ಬಂದ ಪ್ರಬಂಧಗಳು ಬಹುಮಾನಕ್ಕೆ ಅರ್ಹವಾದುವುಗಳಲ್ಲವೆಂದು ಕಂಡುಬಂದರೂ ಮತ್ತು ಸಾಕಷ್ಟು ಸಂಖ್ಯೆಯಲ್ಲಿ ಪ್ರಬಂಧಗಳು ಬರದಿದ್ದರೂ ಸ್ಪರ್ಧೆಯನ್ನು ನಿಲ್ಲಿಸಬಹುದು.

೭. ಹಿಂದಿನ ವರ್ಷಗಳ ಸ್ಪರ್ಧೆಯಲ್ಲಿ ಬಹುಮಾನ ಪಡೆದವರು ಈ ಸ್ಪರ್ಧೆಗೆ ನಿಲ್ಲಬಾರದು.

[ವಿ. ಸೂ.— ಸ್ಪರ್ಧೆಗೆ ಬಂದ ಪ್ರಬಂಧವನ್ನು ಹಿಂದಿರುಗಿಸುವುದಿಲ್ಲವಾದ್ದರಿಂದ ಸ್ಪರ್ಧಿಗಳು ತಮ್ಮ ಪ್ರಬಂಧದ ಒಂದು ಪ್ರತಿಯನ್ನು ತಮ್ಮಲ್ಲಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥನೆ.]

ಸ್ಪರ್ಧೆಗೆ ಸಂಬಂಧಿಸಿದ ಪತ್ರವ್ಯವಹಾರವನ್ನು ಪರಿಷತ್ತಿನ ಕಾರ್ಯದರ್ಶಿಯವರೊಂದಿಗೆ ನಡಸತಕ್ಕದ್ದು.

ಬಿ. ವೆಂಕೋಬರಾವ್
ಕಾರ್ಯದರ್ಶಿ

---

## ಗಮಕ ಕಲಾ ಸಂಘ

### ಬಿನ್ನಹ

ಬೆಂಗಳೂರಿನ ನಾಗರಿಕರಲ್ಲಿ ಗಮಕಕಲಾ ಪ್ರಚಾರ ಮಾಡುವುದಕ್ಕೂ, ಬೆಂಗಳೂರಿನ ಗಮಕ ಕಲಾವಿದರಿಗೆ ಪ್ರೋತ್ಸಾಹವನ್ನು ನೀಡುವುದಕ್ಕೂ ಕನ್ನಡ ಸಾಹಿತ್ಯ ಪರಿಷತ್ತಿನ ಉದಾರಾಶ್ರಯದಲ್ಲಿ ಬೆಂಗಳೂರು ನಗರದಲ್ಲಿ 'ಗಮಕ ಕಲಾ ಸಂಘ'ವನ್ನು ಸ್ಥಾಪಿಸಬೇಕೆಂಬ ಹಿರಿಯಾಸೆ ಕಲಾವಿದರಿಗೂ, ಕಲಾಭಿಮಾನಿಗಳಿಗೂ ಬಹಳ ಕಾಲದಿಂದಲೂ ಇದೆ. ಆದಕಾರಣ ಮೇಲೆ ಕಂಡ ಸಂಘದ ಸ್ಥಾಪನಾಕಾರ್ಯದಲ್ಲಿ ಆಸಕ್ತರಾಗಿರುವ ಕಲಾಭಿಮಾನಿಗಳು ಇದೇ ಆಗಸ್ಟು ತಿಂಗಳು ೪ನೆಯ ತಾರೀಖು ಭಾನುವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸೇರತಕ್ಕ ಸಭೆಗೆ ದಯಮಾಡಿಸಿ, ತಮ್ಮ ಅಮೋಘವಾದ ಸಲಹೆಗಳನ್ನೂ ಬೆಂಬಲವನ್ನೂ ಕೊಟ್ಟು ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಡಿ. ಆರ್. ರಾಮಯ್ಯ, ಬಿ.ಎ.
ಎಂ. ರಾಮಕೃಷ್ಣರಾವ್, ಬಿ.ಎ.

೯೬-೯೦೦—೧೯೪೦
ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ


# ಕನ್ನಡ ನುಡಿ




ಸಂಪುಟ ೨
ಸಂಚಿಕೆ ೪೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಆಗಸ್ಟ್ ೨, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.




ಡಾ|| ಸವಣೂರ ಹನುಮಂತರಾಯರು

ಇವರ ೬೦ನೆಯ ಹುಟ್ಟುಹಬ್ಬ ಕರ್ನಾಟಕದ
ಅನೇಕ ಸ್ಥಳಗಳಲ್ಲಿ ಆಚರಿಸಲ್ಪಟ್ಟಿತು

## ಮಿಂಚು

ಬರೆದವರು: ಶ್ರೀಮತಿ 'ವಾಣಿ', ಮೈಸೂರು

ಅತ್ತೆ ಹಠಾತ್ತಾಗಿ ಹೀಗೆ ಹೊರಟುಹೋದುದು ಗೌರಿಗೆ ಸಿಡಿಲು ಬಡಿದಂತಾಯಿತು. ಅವಳು ಕುಳಿತ ಜಾಗವನ್ನು ಬಿಟ್ಟು ಇನ್ನೂ ಎದ್ದಿರಲಿಲ್ಲ. ಬಹಳಹೊತ್ತು ಅತ್ತಳು. ಈಗ ಅವಳನ್ನು ಅಡ್ಡಿಮಾಡುವವರು ಯಾರೂ ಇರಲಿಲ್ಲ. ಬಹಳ ದಿನಗಳಿಂದ ತಡೆದಿದ್ದ ದುಃಖ ಉಕ್ಕಿ ಹರಿಯಿತು. ಸಾಯಂಕಾಲದ ಹೊತ್ತಿಗೆ ಕಣ್ಣು ಊದಿದ್ದರೂ ಹೃದಯ ಹಗುರವಾದಂತಿತ್ತು. ಎಷ್ಟುಹೊತ್ತು ಹಾಗೆ ಅಳುವುದು? ರಾತ್ರಿ ಅಡಿಗೆ ಆಗಬೇಡವೆ? ಹೌದು! ನಾನು ಮಾಡಿದರೆ ಊಟಮಾಡುತ್ತಾರೆಯೇ? ಹೇಗೋ! ತಾನು ಕೊಟ್ಟ ಅಡಿಕೆಲೆಯನ್ನು ತನಗೆ ನಿದ್ರೆ ಬಂದಿದೆ ಎಂದು ತಿಳಿದು ಕಿಟಕಿಯಿಂದ ಹೊರಗೆ ಎಸೆದಿದ್ದನ್ನು ನೋಡಿದ್ದಳು. ಹೊರಗಿನಿಂದ ಬರುವಾಗಲೇ ಊಟಮಾಡಿಕೊಂಡು ಬಂದರೋ? ಹೇಗಾದರೂ ಆಗಲಿ, ತಾನು ಮಾಡಬೇಕಾದ ಕೆಲಸವನ್ನು ಮಾಡುವುದು ಲೇಸು ಎಂದು ನಿರ್ಧರಿಸಿ ಕೆಲಸಕ್ಕೆ ಅನುವಾದಳು.

ಗೌರಿ ಎದ್ದು ತಣ್ಣೀರಿನಲ್ಲಿ ಕಣ್ಣು ಮುಖ ತೊಳೆದು ತಲೆ ಬಾಚಿಕೊಂಡು ಅಡಿಗೆ ಮಾಡಿದಳು. ಮಣೆ ಹಾಕಿ, ಪಾತ್ರೆ ಇಟ್ಟು, ದೇವರ ಮುಂದೆ ದೀಪ ಹಚ್ಚಿ ಅಲ್ಲಿಯೇ ಕುಳಿತಿದ್ದಳು. ರಾಮು ಮನೆಗೆ ಬಂದವನು ಕಾಲು ತೊಳೆದುಕೊಂಡು ಬಂದು ಮಣೆಯ ಮೇಲೆ ಕುಳಿತನು. ಗೌರಿ ಎದ್ದು ಬಂದು ಬಡಿಸಿದಳು. ಮಾತಿಲ್ಲದೆ ಮೌನದಲ್ಲೇ ಊಟವೂ ಆಯಿತು.

ಯಾವ ಸನ್ನಿವೇಶಕ್ಕೂ ಹೊಂದಿಕೊಳ್ಳುವ ಸ್ವಭಾವದ ಗೌರಿಗೆ ಆ ಜೀವನವೂ ಸುಲಭವಾಗಿ ಒಗ್ಗಿಹೋಯಿತು. ಈಗ ಮನೆಯೇ ಅವಳ ಕರ್ಮ ಭೂಮಿ. ಬೇಸರವಿಲ್ಲದೆ ಬೆಳಗಿನಿಂದ ರಾತ್ರಿಯವರಿಗೂ ಮನೆಯ ಕೆಲಸದಲ್ಲಿ ತೊಡಗಿರುವಳು. ಪಾತ್ರೆಗಳನ್ನು ಸ್ವಚ್ಛವಾಗಿ ತೊಳೆದು ಅದರದರ ಜಾಗದಲ್ಲಿಡುವಳು. ಕಿಟಕಿ ಬಾಗಿಲುಗಳನ್ನೆಲ್ಲಾ ತಾನೇ ಒರಸುವಳು. ಚಿಕ್ಕದಾದರೂ ಅಚ್ಚುಕಟ್ಟಾಗಿದ್ದ ಮನೆ ಈಗ ಅವಳ ಕೈಲಿ ಹೊಸ ಸೊಬಗಿನಿಂದ ಕಂಗೊಳಿಸುತ್ತಿದೆ. ಮೇಜಿನ ಮೇಲೆಲ್ಲಾ ಅವಳ ಕುಶಲ ಕೆಲಸದ ವಸ್ತ್ರಗಳು; ಅಲ್ಲಲ್ಲಿ ಹೂಪಾತ್ರೆಗಳು; ಅದರೊಳಗೆ ತಾನೇ ಸ್ವಂತವಾಗಿ ಬೆಳಸಿದ ಗಿಡಗಳ ಹೂಗೊಂಚಲುಗಳು. ಮನೆಯೊಳಗೆಲ್ಲ ಒಂದು ಬಗೆಯ ಶಾಂತವಾದ ವಾತಾವರಣ. ಅದರೊಳಗೆ ಶಾಂತಿಯ ಅಧಿದೇವತೆಯಂತೆ ಗೌರಿ. ಆದರೂ ರಾಮುವಿನ ಮನಸ್ಸಿನಲ್ಲಿ ಶಾಂತಿಯ ಸುಳಿವೇ ಇಲ್ಲ. ಇದು ಯಾರ ತಪ್ಪು!

ಆಫೀಸಿನಲ್ಲಿ ಆರು ಮಂದಿ ಆಳುಗಳಿದ್ದರೂ ರಾಮು ಅವರಲ್ಲಿ ಯಾರನ್ನೂ ಮನೆಯ ಕೆಲಸಕ್ಕೆ ಹಾಕಿರಲಿಲ್ಲ. ಕೈಸಂಬಳಕ್ಕೆ ಒಬ್ಬ ಚಿಕ್ಕಹುಡುಗನನ್ನು ಗೊತ್ತುಮಾಡಿದ್ದನು. ಅವನು ಎರಡು ಹೊತ್ತು ಮನೆಯಲ್ಲಿ ಊಟಮಾಡಿಕೊಂಡು ಯಾವಾಗಲೂ ಇರುವನು. ರಾತ್ರಿ ವರಾಂಡದಲ್ಲಿ ಮಲಗುವನು. ರಾಮು ಊಟಮಾಡಿಕೊಂಡು ಹೊರಟುಹೋದರೆ ರಾತ್ರಿಯೇ ಮನೆಗೆ ಬರುವುದು. ಗೌರಿ ಮನೆಯಲ್ಲಿ ಒಬ್ಬಳೇ. ಕೆಲಸವಾದ ಮೇಲೆ ಕುಳಿತು ಓದುವಳು. ಕಸೂತಿ ಹಾಕುವಳು. ರಾಮುವಿನ ಬಟ್ಟೆಗಳನ್ನು ಮಡಿಸಿಡುವಳು. ಅವನ ಮೇಜನ್ನು ಪರಿಷ್ಕರಿಸುವಳು. ಪುಸ್ತಕಗಳನ್ನು ಜೋಡಿಸುವಳು. ಅವನು ಹೊರಗೆ ಹೊರಡುವುದಕ್ಕೆ ಮುಂಚೆ ಬೇಕಾಗುವ ಸಾಮಾನುಗಳನ್ನು ಅವನ ಕೈಗೆ ಸಿಕ್ಕುವಂತೆ ಇಡುವಳು. ಅವನು ಮನೆಗೆ ಬರುವ ಸಮಯವನ್ನು ಕಾದು ಪಿಟೀಲು ಬಾರಿಸುತ್ತಾ ಅದರೊಡನೆ ತನ್ನ ಹೃದಯದ ವ್ಯಥೆಯನ್ನು ತೋಡಿಕೊಳ್ಳುವಳು. ಪಿಟೀಲಿನ ಕರುಣಾಜನಕ ಸ್ವರಗಳಿಗೆ ಬೀದಿಯಲ್ಲಿ ಹೋಗುವವರನೇಕರು ತಲೆತೂಗುತ್ತಿದ್ದರು. ಆದರೆ ಅದು ಯಾವುದೂ ರಾಮುವಿನ ಮನಸ್ಸನ್ನು ಮಾತ್ರ ಕರಗಿಸಲಿಲ್ಲ.

'ನಾನೇನು ತಪ್ಪು ಮಾಡಿದೆ? ಯಾತಕ್ಕಾಗಿ ಯಜಮಾನರು ನನ್ನೊಡನೆ ಹೀಗೆ ನಡೆದುಕೊಳ್ಳುತ್ತಾರೆ?' ಈ ಪ್ರಶ್ನೆ ಒಂದು ದಿನದಲ್ಲಿ ನೂರು ಸಲ ಅವಳ ಮುಂದೆ ಬರುವುದು. ಗೌರಿ ಅದಕ್ಕೆ ಉತ್ತರವನ್ನು ಯೋಚಿಸಲು ಅಸಮರ್ಥಳಾಗುತ್ತಿದ್ದಳು.

'ಅವರು ಮಾತಾಡಿಸದಿದ್ದರೆ ಕುಂದೇನು? ಈ ದಿನ ನಾನೇ ಮೊದಲು ಮಾತಾಡಿಸಿ ನನ್ನ ತಪ್ಪೇನೆಂದು ಕೇಳುತ್ತೇನೆ' ಎಂದು ಗೌರಿ ದಿನವೂ ಮನಸ್ಸಿನಲ್ಲಿ ನಿರ್ಧಾರ ಮಾಡಿಕೊಳ್ಳುವಳು. ಆದರೆ ಅದು ಮಹಡಿಯನ್ನು ಹತ್ತುವವರಿಗೇ! ಅಲ್ಲಿ ಹೋಗಿ ಅವನನ್ನು ನೋಡಿದ ಕೂಡಲೇ ಎಲ್ಲವೂ ಮರೆತುಹೋಗುವುದು. ಒಂದು ಸಲ—ಒಂದೇಸಲ ನನ್ನನ್ನು ಪ್ರೇಮದೃಷ್ಟಿಯಿಂದ ನೋಡಬಲ್ಲವರಾದರೆ? ತನ್ನ ಸರ್ವಸ್ವವನ್ನು–ಅಷ್ಟೇ ಏಕೆ?–ತನ್ನ ಪ್ರಾಣವನ್ನು ಸಹ ಕೂಡಲೆ ಕೊಡಲು ಸಿದ್ಧಳಾಗಿದ್ದಳು. ಅವನು ಹೆಚ್ಚುಹೆಚ್ಚು ವಿರಕ್ತನಾದಂತೆ, ಅವಳು ಅವನಿಗಾಗಿ ಹೆಚ್ಚುಹೆಚ್ಚು ಹುಚ್ಚಳಾಗುವಳು. 'ಎಷ್ಟು ಜಾಣತನವಿದ್ದರೇನು? ಪತಿಯೊಲವನ್ನು ಸಂಪಾದಿಸಿಕೊಳ್ಳಲಾರದ ನನ್ನ ಬುದ್ಧಿ ವ್ಯರ್ಥ' ಎಂದುಕೊಳ್ಳುವಳು.

ತುಂಬಿದ ಪಟ್ಟಣದಲ್ಲಿದ್ದರೂ ಗೌರಿ ಒಂಟಿಯೇ. ಅವಳು ಎಲ್ಲಿಗೂ ಹೋಗುತ್ತಿರಲಿಲ್ಲ. ಯಾರೊಡನೆಯೂ ಸೇರುತ್ತಿರಲಿಲ್ಲ. ಆಳಿಗೆ ಕೆಲಸ ಹೇಳುವಾಗ ಆಡುತ್ತಿದ್ದ ಒಂದೆರಡು ಮಾತುಗಳನ್ನು ಬಿಟ್ಟರೆ ಅವಳು ಬಾಯಿ ತೆರೆದುದೇ ಇಲ್ಲ.

ಗೌರಿ ಒಳಗೆ ಬಂದಳು. ರಾಮು ಕುರ್ಚಿಯ ಮೇಲೆ ಕುಳಿತು ಕೈಯಲ್ಲಿ ಏನೋ ಹಿಡಿದುಕೊಂಡು ತದೇಕಧ್ಯಾನದಿಂದ ನೋಡುತ್ತಿದ್ದ. ಅದು ಒಂದು ಚಿತ್ರಪಟ. ಅದರಲ್ಲಿ ಒಂದು ಮನೆ. ಸುತ್ತ ಕೈತೋಟ. ಒಂದು ಗಿಡದ ಬಳಿ ಹುಡುಗಿಯೊಬ್ಬಳು ಕತ್ತು ಕೊಂಕಿಸಿ ನಿಂತಿದಾಳೆ. ರಾಮುವಿನ ದೃಷ್ಟಿ ಬರಬರುತ್ತ ಚಿತ್ರವನ್ನು ಬಿಟ್ಟು ಅಧೋಮುಖವಾಗಿ ಅವನ ಹೃದಯದ ಮುಂದಿದ್ದ ಮತ್ತೊಂದು ಚಿತ್ರದ ಕಡೆಗೆ ತಿರುಗಿ, ಒಳಗೆ ಬೆಳಗುತ್ತಿದ್ದ ನೆನಪನ್ನು ಹೆಚ್ಚು ಪ್ರಕಾಶ ಮಾಡಿತು.–ಆಗ ತಾನು ಮೆಲ್ಲಗೆ ಹೋಗಿ ಹಿಂದಿನಿಂದ ಕಣ್ಣುಮುಚ್ಚಿದನು. ಲಲಿತ ಕೈಬಿಡಿಸಿಕೊಂಡು ಹುಸಿಮುನಿಸಿನಿಂದ, 'ರಾಮು, ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ನೋಡಿದವರು ಏನಂದುಕೊಂಡಾರು?'

'ಏನನ್ನುವರು?'

'ಏನೋ–ನೀನೇ ಹೇಳು.'

'ಹೋಗಲಿ ಎಷ್ಟು ದಿವಸ ತಾನೇ ಅನ್ನುವರು?'

'ಎಂಟು ದಿವಸ'

'ಆಮೇಲೆ?'

'ಆಮೇಲೆ?'

ರಾಮು ಏನನ್ನೋ ಹೇಳುವುದಕ್ಕೆ ಹೋದ. ಲಲಿತ ಬೇಗ ಅವನ ಬಾಯಿ ಮುಚ್ಚಿದಳು. ರಾಮು ನಕ್ಕ. ಲಲಿತಳು ಸಹ ನಕ್ಕಳು.–ಎಷ್ಟು ಮಧುರವಾದ ನೆನಪು!

ರಾಮುವಿನ ಮುಖದಲ್ಲಿ ನಗು ಕಾಣಿಸಿತು. ಗೌರಿ ಬೆರಗಾಗಿ ಬಾಗಿಲಿನ ಬಳಿ ನಿಂತು ನೋಡುತ್ತಿದ್ದಳು. ಅವನ ನಗುಮುಖವನ್ನು ನೋಡಿದುದು ಅದೇ ಮೊದಲು. ಮೇಜಿನ ಮೇಲಿದ್ದ ದೀಪದ ಬೆಳಕು ಅರ್ಧ ಮುಖದ ಮೇಲೂ, ತಲೆಯ ಮೇಲೂ ಬಿದ್ದಿದೆ. ಆ ಮಂದವಾದ ಬೆಳಕಿನಲ್ಲಿ ರಾಮು ಎಷ್ಟು ಸುಂದರವಾಗಿ ಕಾಣಿಸುತ್ತಾನೆ!

ಗೌರಿ ಅಲುಗಾಡಲಿಲ್ಲ. ಗಟ್ಟಿಯಾಗಿ ಉಸಿರನ್ನು ಬಿಟ್ಟರೆ ತಾನು ಬಂದಿರುವುದು ಗೊತ್ತಾಗಿ ಎಲ್ಲಿ ಅವನ ನಗು ಮರೆಯಾಗುವುದೋ ಎಂದು ಶಿಲಾಪ್ರತಿಮೆಯಂತೆ ಉಸಿರು ಹಿಡಿದು ನಿಂತಿದ್ದಳು. ಆದರೂ ಆ ಭಾವ ಅವನ ಮುಖದಮೇಲೆ ಹೆಚ್ಚು ಹೊತ್ತು ನಿಲ್ಲಲಿಲ್ಲ. ನಗು ಮರೆಯಾಗಿ ಹೃದಯವನ್ನು ಭೇದಿಸಿಕೊಂಡು ನಿಟ್ಟುಸಿರೊಂದು ಹೊರಬಂದಿತು. ರಾಮು ತಲೆ ಎತ್ತಿ ಗೌರಿಯನ್ನು ನೋಡಿ, ಚಿತ್ರವನ್ನು ಮೇಜಿನ ಅರೆಯಲ್ಲಿಟ್ಟು ಬೀಗ ಹಾಕಿದನು.

ಗೌರಿ ಎಲ್ಲವನ್ನೂ ನೋಡುತ್ತ ನಿಂತಿದಾಳೆ. ಅವ್ಯಕ್ತಮೂಕ ಸಂಕಟವೊಂದು ಅವಳನ್ನು ಆವರಿಸಿದೆ. ಅವಳರಿಯದಂತೆ ಕಣ್ಣಿನಲ್ಲಿ ನೀರು ತುಂಬುತ್ತಿದೆ! ಅವಳು ಗಂಡನೆದುರಿಗೆ ಎಂದೂ ಈ ರೀತಿ ಧೈರ್ಯಗೆಟ್ಟು ಮನದಳಲನ್ನು ಹೊರಗೆಡವಿದವಳಲ್ಲ. ಈ ದಿನ ಮನಸ್ಸು ಅವಳ ಅಂಕೆಯನ್ನು ಮೀರಿ ನಿಂತಿದೆ. ಓಡಿ ಹೋಗೋಣವೆಂದರೆ ಕಾಲು ಏಳಲೊಲ್ಲದು. ಮುಂದಕ್ಕೂ ಅಡಿಯಿಡಲಾರಳು.

ಅವಳ ಅವಸ್ಥೆಯನ್ನು ನೋಡಿ ರಾಮು, 'ನಿನಗೆ ಬಹಳ ಕಷ್ಟವಾಗಿರಬಹುದು, ಮೈಸರಿಯಾಗಿರುವಂತಿಲ್ಲ. ಕೆಲವು ದಿವಸ ಮೈಸೂರಿಗೆ ಹೋಗು' ಎಂದನು.

ಇದೇ ಗಂಡನು ತನ್ನೊಡನೆ ಆಡಿದ ಮೊದಲ ಮಾತು!

ಗೌರಿಗೆ ತಲೆ ತಿರುಗಿದಂತಾಗಿ ಅಲ್ಲಿಯೇ ಕುಳಿತುಬಿಟ್ಟಳು. ಸ್ವಲ್ಪಹೊತ್ತು ಹಾಗೆಯೇ ಕಳೆಯಿತು. ರಾಮು ಬಂದು ಹತ್ತಿರ ನಿಂತುಕೊಂಡನು. ಯೋಚನೆಗಳನ್ನೆಲ್ಲಾ ಒಂದೇ ಹಿಡಿಯಲ್ಲಿ ಹಿಡಿದುಕೊಳ್ಳುವಂತೆ ಎರಡು ಕೈಗಳಿಂದಲೂ ತಲೆಯನ್ನು ಬಿಗಿಯಾಗಿ ಹಿಡಿದುಕೊಂಡಿದ್ದಳು. ತಟಕ್ಕನೆ ಅವನ ಎರಡು ಕಾಲುಗಳನ್ನು ಹಿಡಿದುಕೊಂಡು 'ನಾನು ಏನು ಅಪರಾಧ ಮಾಡಿದೇನೆ? ನನ್ನೊಡನೆ ಏಕೆ ಮಾತಾಡುವುದಿಲ್ಲ' ಎಂದು ಕೇಳಿದಳು.

'ಏನು ಮಾತಾಡಲಿ?'

'ಏನು ಮಾತಾಡಲಿ? ಒಳ್ಳೆಯ ಪ್ರಶ್ನೆ! ನಾಯಿಯ ಸಂಗಡ ಆಟವಾಡುತ್ತ ದಿನಕ್ಕೆ ಎರಡು ಘಂಟೆಯನ್ನು ಕಳೆಯುತ್ತೀರಿ. ನಾನು ಅದಕ್ಕಿಂತಲೂ ಕಡೆಯೆ?'

ರಾಮು ಆ ಮಾತಿಗೆ ಏನು ಉತ್ತರ ಕೊಡಬಲ್ಲನು? ಮೆಲ್ಲಗೆ ಅವಳನ್ನು ಕೈಹಿಡಿದೆಬ್ಬಿಸಿ ಹಾಸಿಗೆಯಮೇಲೆ ಕೂರಿಸಿ, 'ಛೆ, ಹಾಗೆಲ್ಲಾ ಹೇಳಬಾರದು. ನಿನಗೆ ಈದಿನ ಮೈಯಲ್ಲಿ ಹುಷಾರಿಲ್ಲವೆಂದು ಕಾಣುತ್ತೆ ಮಲಗಿ ಸುದಾರಿಸಿಕೊ' ಎಂದು ಹೇಳಿ ಹೊರಡಲನುವಾದನು.

ಗೌರಿ ಅಷ್ಟಕ್ಕೆಬಿಡದೆ ಅವನನ್ನು ತಡೆದು 'ಹೀಗೆಲ್ಲಾ ಮಾತು ಹಾರಿಸಿದರೆ ಆಗುವುದಿಲ್ಲ. ನಾನು ಎಷ್ಟು ದಿನಗಳನ್ನು ಹೀಗೇ ಕಳೆಯಲಿ?' ಎಂದು ಕೇಳಿದಳು.

ಪುನಃ ಮೌನ. ರಾಮು ಸ್ವಲ್ಪಹೊತ್ತು ಸುಮ್ಮನಿದ್ದ ಬಳಿಕ 'ನಾನು ಈಗಿರುವಂತೆಯೇ ಸುಖವಾಗಿದೇನೆ. ಇನ್ನು ಹೇಗೆ ಇರಲೂ ನನ್ನಿಂದ ಸಾಧ್ಯವಿಲ್ಲ. ನಿನಗೆ ಇದು ಸರಿಹೋಗದಿದ್ದರೆ ನೀನು ಮೈಸೂರಿಗೆ ನಿಮ್ಮ ತಾಯಿತಂದೆಯವರಲ್ಲಿಗೆ ಹೋಗು. ನಿನಗೆ ಬೇಕಾದ ಎಲ್ಲಾ ಅನುಕೂಲಗಳನ್ನು ಅಲ್ಲಿಯೂ ಒದಗಿಸಿಕೊಡಲು ಸಿದ್ಧನಾಗಿ ಇದ್ದೇನೆ.'

ಗೌರಿ ಏನೂ ಹೇಳಲಿಲ್ಲ. ಹಿಡಿದಿದ್ದ ಕೈಯನ್ನು ಬಿಟ್ಟಳು. ರಾಮು ಮೇಜಿನ ಬಳಿ ಹೋಗಿ ಬರೆಯುತ್ತಾ ಕುಳಿತನು. ಆ ರಾತ್ರಿಯನ್ನು ನಿದ್ರೆಯಿಲ್ಲದೆ ಹಾಸಿಗೆಮೇಲೆ ಉರುಳಾಡುತ್ತಾ ಕಳೆದುದಾಯಿತು. ಆದರೆ ಗೌರಿ ಅಷ್ಟಕ್ಕೆ ನಿರಾಶಳಾಗಲಿಲ್ಲ, ದಿನಕ್ಕೊಂದು ಬಗೆಯ ರೀತಿಯಿಂದ ಅವನನ್ನು ಮಾತಾಡಿಸಿ ಮನಸ್ಸು ತಿರುಗಿಸುವ ಪ್ರಯತ್ನ ಮಾಡಿದಳು.

ರಾಮು ತನ್ನ ತಪ್ಪನ್ನು ಚೆನ್ನಾಗಿಯೇ ಅರಿತಿದ್ದನು. ಮದುವೆಗೆ ಮುಂಚೆ ಹಟ ಹಿಡಿದು ತನ್ನ ಇಷ್ಟವನ್ನು ಸಾಧಿಸಿಕೊಳ್ಳದೆ ಈಗ ಹೀಗೆ ಮಾಡುತ್ತಿರುವುದು ಶುದ್ಧ ಹೇಡಿಯ ಕೆಲಸವೆಂದು ಅನೇಕ ಸಲ ಯೋಚಿಸಿಕೊಂಡು ಅದಕ್ಕಾಗಿ ನೊಂದುಕೊಳ್ಳುವನು. ಆದರೆ ಆ ತಪ್ಪನ್ನು ತಿದ್ದಿಕೊಳ್ಳಲು ಮನಸ್ಸು ಮಾತ್ರ ಮಾಡಲಿಲ್ಲ.

ಗೌರಿ ಮೊದಲಿನಂತೆ ರೂಮಿಗೆ ಬಂದ ಕೂಡಲೆ ಪುಸ್ತಕವನ್ನು ಹಿಡಿದು ಕುಳಿತುಕೊಳ್ಳುವುದು, ಅವನೊಂದು ಕಡೆ ಬರೆಯುತ್ತ ಕುಳಿತಿರುವುದು, ಯಾರಿಗೆ ಮೊದಲು ನಿದ್ರೆ ಬರುತ್ತದೆಯೋ ಅವರು ಹೋಗಿ ಮಲಗಿಕೊಳ್ಳುವುದು. ಇನ್ನೊಬ್ಬರು ಆಮೇಲೆ ತಮ್ಮ ಮನಸ್ಸು ಬಂದಾಗ ದೀಪವನ್ನು ಆರಿಸಿ ಹೋಗಿ ತಮ್ಮ ಹಾಸಿಗೆಯ ಮೇಲೆ ಮಲಗುವುದು. ಇದು ಮೊದಲಿಗೆ ನಡೆಯುತ್ತಿದ್ದ ಕಾರ್ಯಕ್ರಮ.

ಗೌರಿ ಅದನ್ನು ಬದಲಾಯಿಸಿದಳು. ಒಳಗೆ ಬಂದ ಕೂಡಲೆ ರಾಮುವಿನ ಮೇಜಿನ ಬಳಿ ತನ್ನ ಕುರ್ಚಿಯನ್ನು ಎಳೆದುಕೊಂಡು ಕುಳಿತುಕೊಳ್ಳುವಳು. ಕೈಯಲ್ಲಿ ಈಗ ಪುಸ್ತಕವಿಲ್ಲ. ಸುಮ್ಮನೆ ಅವನನ್ನು ನೋಡುತ್ತ ಮಧ್ಯೆ ಮಧ್ಯೆ ಮಾತಾಡಿಸಲು ಪ್ರಯತ್ನಪಡುವಳು. ಊಟ ಮಾಡುವಾಗಲೂ ಏನಾದರೂ ನೆವ ತೆಗೆದು ಮಾತಾಡುವಳು. ಆದರೆ ಅವನಿಂದ ಜವಾಬು ಬರುತ್ತಿರಲಿಲ್ಲ ಅಷ್ಟೆ. ದಿನಕ್ಕೊಂದು ಬಗೆಯ ಸೀರೆಯನ್ನುಟ್ಟು ಹೆರಳು ಹಾಕಿ ಹೂ ಮುಡಿದು, ಮುಗುಳ್ನಗೆಯನ್ನು ಸೂಸುತ್ತ ಶೃಂಗಾರವಲ್ಲರಿಯಂತೆ ಒಳಗೆ ಬಂದು ರಾಮುವಿನ ಬಳಿ ನಿಲ್ಲುವಳು. ಅವನು ತಲೆ ಎತ್ತದೆ ತನ್ನ ಬರವಣಿಗೆಯಲ್ಲಿ ಮಗ್ನನಾಗಿದ್ದರೆ, 'ಒಂದು ಸಲ ಈ ಕಡೆ ತಿರುಗಬಾರದೆ? ಆ ಮೇಲೆ ಬರೆದರಾಗುತ್ತೆ!' ಎನ್ನುವಳು.

ರಾಮು ಮೊದಲೆರಡು ದಿನ ಏನೂ ಹೇಳದೆ ಸುಮ್ಮನಿದ್ದ. ಮೂರನೆಯ ದಿನ ಬೇಸರದಿಂದ, 'ದಯವಿಟ್ಟು ನನ್ನನ್ನು ತೊಂದರೆ ಮಾಡಬೇಡ. ನನಗೆ ಕೆಲಸವಿದೆ' ಎಂದನು.

'ಸಂಸಾರದಲ್ಲಿ ಇಷ್ಟು ಬೇಸರವುಳ್ಳವರು—ಮದುವೆಯನ್ನೇಕೆ ಮಾಡಿಕೊಂಡಿರಿ? ನಿಮ್ಮ ಸ್ವಂತ ವಿಚಾರದಲ್ಲಿ ನೀವು ಹೇಗಾದರೂ ಮಾಡಬಹುದು. ನನ್ನ ಸುಖವನ್ನು ಹಾಳುಮಾಡುವುದು ಯಾವ ನ್ಯಾಯ?'

'ನ್ಯಾಯವಲ್ಲ—ಶುದ್ಧ ತಪ್ಪು. ಅದನ್ನು ನಾನು ಬಲ್ಲೆ. ಅದನ್ನು ನೆನೆನೆನೆದು ನಾಚಿಕೆಯಿಂದ ಸತ್ತಂತವನಾಗಿದೇನೆ. ಅಪರಾಧಿ ನೀನಲ್ಲ, ನಾನು. ಅದಕ್ಕಾಗಿ ದಿನವೂ ದೇವರ ಬಳಿ ಕ್ಷಮೆಯನ್ನು ಬೇಡುತ್ತೇನೆ. ಇಗೋ, ನಿನ್ನ ಬಳಿಯೂ ಬೇಡುತ್ತೇನೆ ದಯವಿಟ್ಟು ಕ್ಷಮಿಸು. ನನ್ನ ತಂಟೆಗೆ ಬರಬೇಡ. ನಾನು ಮೊದಲೇ ಅರೆ ಹುಚ್ಚನಾಗಿದೇನೆ. ನನ್ನನ್ನು ಪೂರ್ತಿ ಮರುಳನನ್ನಾಗಿ ಮಾಡಬೇಡ. ನಿನ್ನ ಸುಖಕ್ಕೆ ನಾನು ಅಡ್ಡ ಬರುವುದಿಲ್ಲ. ನಾನು ಸಂಪಾದಿಸುವ ಪ್ರತಿಯೊಂದು ಕಾಸೂ ನಿನ್ನದು. ಅದನ್ನು ನೀನು ಮನಬಂದಂತೆ ಉಪಯೋಗಿಸು. ಕ್ಲಬ್ಬುಗಳಿವೆ, ಸಮಾಜಗಳಿವೆ. ಸ್ವತಂತ್ರ ಜೀವನವನ್ನು ನಡಿಸು. ಇದುವರೆಗೆ ಕಾಪಾಡಿಕೊಂಡು ಬಂದಂತೆ ಮುಂದೆಯೂ ನಮ್ಮಿಬ್ಬರ ಮಾನವನ್ನೂ, ಶೀಲವನ್ನೂ ಕಾಪಾಡು. ಅದಕ್ಕಾಗಿ ನಾನು ನಿನಗೆ ಚಿರಋಣಿ. ಆದರೆ ನಮ್ಮಿಬ್ಬರ ನಡುವೆ ಇನ್ನು ಹೆಚ್ಚಿನ ಸಂಬಂಧ ಬೇಡ. ಪುನಃ ನನ್ನನ್ನು ಮಾತಾಡಿಸಿ ಮರುಳುಮಾಡುವ ಪ್ರಯತ್ನವನ್ನು ಬಿಡು. ಅದಕ್ಕೆ ಇದೇ ಕೊನೆ. ಮತ್ತೊಮ್ಮೆ ನೀನು ಹಾಗೆ ಮಾಡುವುದಾದರೆ ನಾನು ಮನೆಗೆ ಬರುವುದನ್ನೂ ಬಿಟ್ಟುಬಿಡುತ್ತೇನೆ.'

ಹೃದಯದಲ್ಲಿ ಕಂಪನವಿಲ್ಲ! ಕಣ್ಣಿನಲ್ಲಿ ನೀರಿಲ್ಲ! ಗೌರಿ ನಿಶ್ಚಲಳಾಗಿ ನಿಂತಿದ್ದಳು. ಬಹಳ ಹೊತ್ತು ಹಾಗೆಯೇ ಕಳೆಯಿತು. ಅವನಾಡಿದ ಮಾತುಗಳು ಪುನಃ ಪುನಃ ಅವಳ ಕಿವಿಯಲ್ಲಿ ಪ್ರತಿಧ್ವನಿಗೈಯ್ಯುತ್ತಿದ್ದುವು. ಎಷ್ಟು ಹೊತ್ತು ಹಾಗೆ ನಿಂತಿರಲಾದೀತು. ದೇಹ ಚಲಿಸಿತು. ಗೌರಿ ಹಿಂದಿರುಗಿ ನೋಡದೆ ಕೊಠಡಿಯಿಂದ ಹೊರಗೆ ಹೊರಟುಹೋದಳು.

* * *

ಕಾಲ ಪ್ರವಾಹದಲ್ಲಿ ದಿನಗಳು, ತಿಂಗಳುಗಳು, ವರ್ಷಗಳೂ ಕೊಚ್ಚಿಹೋಗುತ್ತಿವೆ. ಗೌರಿ ಅದರೊಡನೆ ತಾನೂ ತೇಲುತ್ತ ಮುಳುಗುತ್ತ ಜೀವನವನ್ನು ಸಾಗಿಸಿದಾಳೆ. ಈಗ ಅವಳಲ್ಲಿ ಎಂತಹ ಬದಲಾವಣೆ! ಮೊದಲು ಮೊದಲು, 'ದಿನಗಳನ್ನು ಹೇಗೆ ಕಳೆಯುವುದು? ನನ್ನ ಜೀವನದ ಮುಂದಿನ ಗುರಿ ಏನು? ಎಂಬ ಪ್ರಶ್ನೆಗಳು ಅವಳ ಹೃದಯವನ್ನು ಅಲ್ಲಾಡಿಸಿಬಿಡುತ್ತಿದ್ದವು. ಆದರೆ ಕಾಲವು ನೋವಿಗೆ ಎಂತಹ ದಿವ್ಯಾಂಜನ! ಅದರ ಉರುಳುವಿಕೆಯಲ್ಲಿ ಜೀವನದ ಎಷ್ಟು ಹಳ್ಳತಿಟ್ಟುಗಳು ಸಮವಾಗಿಬಿಡುತ್ತವೆ? ಎಂತೆಂತಹ ಮಾಯದ ಘಾಯಗಳ ಮೇಲ್ಭಾಗವು ಅದರ ಝರಿಯಿಂದ ಒಣಗಿಹೋಗುತ್ತದೆ. ಗೌರಿಯೂ ಅದಕ್ಕೆ ಹೊರಗಾಗಿರಲಿಲ್ಲ. ಈಗ ಅವಳಲ್ಲಿ ಮೊದಲಿನ ಕಳವಳವಿಲ್ಲ, ಉದ್ವೇಗವಿಲ್ಲ. ಮೇಲೆ ನೋಡುವವರಿಗೆ ಅವಳ ಜೀವನ ಬಹಳ ಸುಗಮವಾಗಿ ನಡೆಯುವಂತೆ ಕಾಣುವುದು. ಮನೆಯಾಯಿತು ಅವಳಾಯಿತು; ಮನೆಗೆಲಸ ಮುಗಿದರೆ, ಪುಸ್ತಕ! ದಿನ ದಿನಕ್ಕೆ ಅವಳ ಪುಸ್ತಕ ಭಂಡಾರ ದೊಡ್ಡದಾಗುತ್ತಿದೆ. ಒಂದು ಬೀರು ಇದ್ದದ್ದು ಹತ್ತಾಗಿದೆ. ಹೃದಯ ಭಂಡಾರ ಜ್ಞಾನದಿಂದ ತುಂಬಿದಂತೆಲ್ಲ ಇತರ ವಿಚಾರಗಳು ಕಡಮೆಯಾಗಿ, ಗಂಭೀರ ಸಾಮ್ರಾಜ್ಯ ತಾನೇ ತಾನಾಗಿ ತುಂಬಿದ ಕೊಡದ ನೆನಪು ಮಾಡಿಕೊಡುತ್ತದೆ ಅವಳ ಜೀವನ!

(ಮುಂದಿನ ಸಂಚಿಕೆಯಲ್ಲಿ ಮುಗಿಯುವುದು)



ಶುಕ್ರವಾರ, ಆಗಸ್ಟ್ ೨, ೧೯೪೦

## ಸಂತೋಷದ ವಿಷಯ

ಪರಿಷತ್ತಿನ ಮಹಾಪೋಷಕರಾದ ಶ್ರೀಮನ್ಮಹಾರಾಜರವರಿಗೆ ಕೆಲವು ದಿನಗಳಿಂದ ದೇಹಾಲಸ್ಯವಾಗಿದ್ದಿತು. ಈಗ ಅವರು ದೈವಾನುಗ್ರಹದಿಂದ ಗುಣಮುಖರಾಗುತ್ತಿರುವರೆಂಬ ಶುಭ ವಾರ್ತೆಯನ್ನು ಕೇಳಿ ಎಲ್ಲರಿಗೂ ಆನಂದವುಂಟಾಗಿದೆ. ಶ್ರೀಮನ್ಮಹಾರಾಜರವರಿಗೆ ಶೀಘ್ರದಲ್ಲಿಯೇ ಸಂಪೂರ್ಣಾರೋಗ್ಯವನ್ನೂ ಶಕ್ತಿಯನ್ನೂ ದಯಪಾಲಿಸಲೆಂದು ಭಗವಂತನನ್ನು ನಾವು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

---

## ಅಭಿನಂದನೆ

ಶ್ರೀಮದ್ಯುವರಾಜರವರಾದ ಶ್ರೀ ಜಯ ಚಾಮರಾಜ ಒಡೆಯರವರ ೨೧ನೆಯ ವರ್ಷ ವರ್ಧಂತಿ ಉತ್ಸವವು ಹೋದ ತಿಂಗಳು ೨೪ನೆಯ ತಾರೀಖು ರಾಜಧಾನಿಯ ಅರಮನೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ಈ ಉತ್ಸವದ ಗೌರವಾರ್ಥವಾಗಿ ಮೈಸೂರು ನಗರದ ಕಚೇರಿಗಳಿಗೂ ವಿದ್ಯಾಸಂಸ್ಥೆಗಳಿಗೂ ರಜಾ ಕೊಡಲಾಗಿತ್ತು.

ಅಂದು ಪ್ರಾತಃಕಾಲ ಪರಿಷತ್ತಿನ ಉಪಾಧ್ಯಕ್ಷರು ಎಲ್ಲ ಕನ್ನಡಿಗರ ಪರವಾಗಿ ರಾಜಭಕ್ತಿಪೂರ್ವಕವಾದ ಶುಭಾಶಯಗಳನ್ನು ಶ್ರೀಮದ್ಯುವರಾಜರವರಲ್ಲಿ ತಂತಿಯ ಮೂಲಕ ಸಮರ್ಪಿಸಿದರು.

ಶ್ರೀಮದ್ಯುವರಾಜರವರು ಈಗಾಗಲೇ ಕನ್ನಡದ ವಿಷಯದಲ್ಲಿ ಅವರಿಗಿರುವ ಪ್ರೇಮವನ್ನೂ ಪರಿಷತ್ತಿನ ಧ್ಯೇಯದಲ್ಲಿ ಅವರಿಗಿರುವ ಆಸಕ್ತಿಯನ್ನೂ ಅನೇಕ ವಿಧದಲ್ಲಿ ವ್ಯಕ್ತಗೊಳಿಸಿದ್ದಾರೆ. ಮತ್ತು ಪರಿಷತ್ತಿನ ಪೋಷಕರೂ ಸ್ಥಿರ ಅಧ್ಯಕ್ಷರೂ ಆಗಿರಲು ಕೃಪೆಯಿಟ್ಟು ಸಮ್ಮತಿಸಿರುತ್ತಾರೆ. ಭಗವಂತನು ಅವರಿಗೆ ಆಯುರಾರೋಗ್ಯ ಸುಖಸಂಪತ್ತುಗಳನ್ನು ದಯಪಾಲಿಸಲೆಂದೂ ಯಮಸಂತಾನ ಶ್ರೀ ಚಿರಕಾಲ ಬಾಳಲೆಂದೂ ಪರಿಷತ್ತು ಹಾರೈಸುತ್ತದೆ.

---

## ಸಾಂಗಲಿ ಪ್ರಭುಗಳ ಕನ್ನಡ ಪ್ರೇಮ

ಸಾಂಗಲಿ ಸಂಸ್ಥಾನದ ರಾಜಾ ಸಾಹೇಬರವರಾದ ಸರ್ ಚಿಂತಾಮಣರಾವ ಪಟವರ್ಧನರವರು ಯುದ್ಧ ಸಮಿತಿಯ ಕಾರ್ಯನಿಮಿತ್ತವಾಗಿ ಶಿರಹಟ್ಟಿಗೆ ಚಿತ್ತೈಸಿದ್ದಾಗ ಅಲ್ಲಿನ ಒಂದು ಸಭೆಯಲ್ಲಿ ಕನ್ನಡದಲ್ಲಿಯೇ ಭಾಷಣ ಮಾಡಿದರೆಂಬ ಸಂಗತಿ ಆ ಸಂಸ್ಥಾನದ ಕನ್ನಡ ಪ್ರಜೆಗಳಿಗೆ ಹೇಗೆಯೋ ಹಾಗೆಯೇ ಕರ್ನಾಟಕದ ಎಲ್ಲ ಕನ್ನಡಿಗರಿಗೂ ಸಂತೋಷವನ್ನು ಉಂಟುಮಾಡುವುದೆಂದು ಧಾರಾಳವಾಗಿ ಹೇಳಬಹುದು.

ಕರ್ನಾಟಕ ರತ್ನಸಿಂಹಾಸನಾಧೀಶ್ವರರಾದ ಮೈಸೂರಿನ ಶ್ರೀಮನ್ಮಹಾರಾಜರವರು ಮೊದಲಿಂದಲೂ ಪ್ರಜೆಗಳ ಭಾಷೆಯಲ್ಲಿಯೇ ತಮ್ಮ ಹಿರಿಯ ಮಾತುಗಳನ್ನು ಅಪ್ಪಣೆ ಕೊಡಿಸುತ್ತಿರುವರೆಂಬುದು ಎಲ್ಲರಿಗೂ ತಿಳಿದ ಅಂಶ.

ಬಳ್ಳಾರಿಯಲ್ಲಿ ನಡೆದ ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಆರಂಭಗೊಳಿಸಿದ ಸೊಂಡೂರಿನ ಶ್ರೀಮಂತ ರಾಜಾಸಾಹೇಬರವರು ಕನ್ನಡದಲ್ಲಿಯೇ ಮಾತನಾಡಿ ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದಾರೆ.

ಸೊಂಡೂರಿನ ರಾಜಾಸಾಹೇಬರವರಂತೆ ಸಾಂಗಲಿಯ ರಾಜಾಸಾಹೇಬರೂ ಮಹಾರಾಷ್ಟ್ರರು. ಅವರ ಮನೆ ಮಾತೂ ಮರಾಠಿಯೇ. ಈ ಇಬ್ಬರು ಅರಸರು ಕನ್ನಡದಲ್ಲಿ ಮಾತನಾಡಲು ನಿಶ್ಚಯಿಸಿದುದು ಇತರ ಕನ್ನಡ ಸಂಸ್ಥಾನಗಳ ಅಧಿಪತಿಗಳಿಗೆ ಆದರ್ಶವಾಗಿದೆಯೆನ್ನಲು ಅಡ್ಡಿಯಿಲ್ಲ. ಕರ್ನಾಟಕದ ವಿವಿಧ ಸಂಸ್ಥಾನಗಳ ಅರಸರು ತಮ್ಮ ಕೃಪಾಶ್ರಯದಲ್ಲಿರುವ ಪ್ರಜೆಗಳ ಹೃದಯವನ್ನು ಗೆಲ್ಲಲು, ತಮ್ಮ ಭಾವನೆಗಳು ಪ್ರಜೆಗಳ ಎದೆ ಮುಟ್ಟುವಂತೆ ಮಾಡಲು ಪ್ರಜೆಗಳ ಭಾಷೆಯನ್ನು ಬಳಸುವುದಕ್ಕಿಂತ ಬೇರೆ ಮಾರ್ಗವಿದೆಯೆ ?

---

## ಮುಂಬೈ ಪ್ರಾಂತದಲ್ಲಿ ಕನ್ನಡ ಪಠ್ಯಪುಸ್ತಕಗಳು

ಮುಂಬೈ ಪ್ರಾಂತದ ಪ್ರಾಥಮಿಕ ಪಾಠಶಾಲೆಗಳಿಗೆ ಮೈಸೂರು ಪ್ರಾಂತದ ಪ್ರಾಥಮಿಕ ಪಾಠಶಾಲೆಗಳಲ್ಲಿ ಉಪಯೋಗಿಸುತ್ತಿರುವ ಕನ್ನಡ ಪಠ್ಯಪುಸ್ತಕಗಳನ್ನೇ ನಿಯಮಿಸಿರುವುದು ಕರ್ನಾಟಕದ ಏಕೀಕರಣ ಕಾರ್ಯದಲ್ಲಿ ಒಂದು ಹೆಜ್ಜೆ ಮುಂದಿಟ್ಟಂತಾಗಿದೆ. ಹೀಗೆ ನಿಯಮಿಸಿದ್ದಕ್ಕಾಗಿ ಮುಂಬೈ ಪ್ರಾಂತದ ಅಧಿಕಾರಿಗಳನ್ನು ಅಭಿನಂದಿಸುತ್ತೇವೆ. ಈಗಾಗಲೆ ಹೈದರಾಬಾದು ಸೀಮೆಯಲ್ಲಿ ಮೈಸೂರಿನ ಪುಸ್ತಕಗಳು ಕೆಲವು ವರ್ಷಗಳಿಂದ ಬಳಕೆಯಲ್ಲಿವೆ. ಆದುದರಿಂದ ಮುಂಬೈ ಪ್ರಾಂತದವರು ಕಾಲೋಚಿತವಾಗಿ ಈ ಪಠ್ಯಪುಸ್ತಕಗಳನ್ನು ತಮ್ಮ ಪಾಠಶಾಲೆಗಳಿಗೂ ನಿಯಮಿಸಿ ಈ ಉದ್ಯಮದಲ್ಲಿ ಬಹಳ ಸಹಾಯ ಮಾಡಿದ್ದಾರೆ. ಈ ಪುಸ್ತಕಗಳು ಮೊದಲಿದ್ದವುಗಳಿಗಿಂತ ಮೇಲಾಗಿವೆಯೆಂದು 'ಯುನೈಟೆಡ್ ಕರ್ನಾಟಕ' ಮೊದಲಾದ ಪತ್ರಿಕೆಗಳು ಹೇಳಿ, ಪ್ರಾಂತೀಯ ಹಿತದಿಂದ ಕೆಲವು ಬದಲಾವಣೆಗಳು ಆವಶ್ಯಕವೆಂದು ಸೂಚನೆಗಳನ್ನು ಕೊಟ್ಟಿವೆ. ಇವುಗಳನ್ನು ಮುಂದೆ ಸಂಕ್ಷೇಪಿಸಿದ್ದೇವೆ :

೧. ಭಾಷೆ ಮೈಸೂರು ಪ್ರಾಂತದ್ದೇ ಆಗಿರುವುದರಿಂದ ಮುಂಬೈ ಕಡೆಯ ಬಾಲಕರಿಗೂ ಉಪಾಧ್ಯಾಯರಿಗೂ, ಮೈಸೂರು ಭಾಷಾಮರ್ಯಾದೆಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಿದೆ. ಆದುದರಿಂದ ಮುಂಬೈ ಪ್ರಾಂತದ ಪಂಡಿತರ ಸಹಾಯದಿಂದ ಭಾಷೆಯನ್ನು ಸರಿಪಡಿಸಿ ಪುಸ್ತಕಗಳನ್ನು ಪರಿಷ್ಕರಿಸಬೇಕು.

೨. ಪುಸ್ತಕಗಳಲ್ಲಿರುವ ಪಾಠಗಳಲ್ಲಿ ಆ ಕಡೆಯ ಮಕ್ಕಳಿಗೆ ಆಸಕ್ತಿ ಹುಟ್ಟುವಂಥವನ್ನು ಆಯ್ಕೆ ಮಾಡಿ, ಕೆಲವು ಹೊಸ ಪಾಠಗಳನ್ನೂ ಸೇರಿಸಬೇಕು.

೩. ಹೊಸ ಛಂದಸ್ಸಿನ ನೂತನ ಕವಿತೆಗಳನ್ನು ಆ ಪುಸ್ತಕಗಳಲ್ಲಿ ಸೇರಿಸಿರುವುದರಿಂದ, ಆ ಪದ್ಯಗಳನ್ನು ಹೇಗೆ ಓದಬೇಕೆಂಬುದು ತಿಳಿಯದೆ ತೊಂದರೆಯುಂಟಾಗಿದೆ. ಆದುದರಿಂದ ಅವುಗಳನ್ನು ಬರೆದ ಕವಿಗಳ ಮತ್ತು ಅವುಗಳನ್ನು ಓದಬಲ್ಲ ಗಮಕಿಗಳ ಸಹಾಯ ಪಡೆದು ಓದುವ ಧಾಟಿಯನ್ನು ಬಳಕೆಗೆ ತಂದುಕೊಳ್ಳಬೇಕಾಗಿದೆ.

೪. ಮೈಸೂರು ಪ್ರಾಂತದಲ್ಲಿ ಬಳಕೆಯಾಗಿರುವ, ಮುಂಬೈ ಪ್ರಾಂತದವರಿಗೆ ಅಪರಿಚಿತವಾಗಿರುವುದರಿಂದ ಕಠಿಣವೆನಿಸುವ ಪದಗಳ ಮತ್ತು ಪದಪ್ರಯೋಗಗಳ ಪಟ್ಟಿಮಾಡಿ, ಅವುಗಳ ಅರ್ಥವನ್ನೊಳಗೊಂಡ ಲಘು ನಿಘಂಟುವೊಂದನ್ನು ಪ್ರತಿ ಪುಸ್ತಕಕ್ಕೂ ಒದಗಿಸಬೇಕು.

೫. ಮೇಲಿನ ಸೂಚನೆಗಳನ್ನು ಕಾರ್ಯಗತವನ್ನಾಗಿ ಮಾಡಲು ಒಂದು ಉಪಸಮಿತಿಯನ್ನು ನೇಮಕಮಾಡುವುದು ಒಳ್ಳೆಯದು.

ಇವುಗಳೆಲ್ಲ ನ್ಯಾಯುವಾಗಿವೆ, ಮತ್ತು ಅಧಿಕಾರಿಗಳು ಇವುಗಳನ್ನು ಅಗತ್ಯವಾಗಿ ನೆರವೇರಿಸಿಕೊಡಬೇಕಾಗಿದೆ. ಮೈಸೂರು ಪ್ರಾಂತದಲ್ಲಿ ಕೂಡ ಈ ಹೊಸ ಪುಸ್ತಕಗಳು ಬಳಕೆಗೆ ಬಂದಾಗ, ಬಾಲಕರಿಗೂ ಉಪಾಧ್ಯಾಯರಿಗೂ ಹೊಸ ಕವಿತೆಗಳಿಂದಲೂ ಕೆಲವು ಹೊಸ ಪಾಠಗಳಿಂದಲೂ ಕಷ್ಟವಾಯಿತೆಂದು ನಾವು ಬಲ್ಲೆವು.

ಮುಂಬೈ ಪ್ರಾಂತದವರಿಗೆ ತಕ್ಕಂತೆ ಬದಲಾವಣೆಗಳನ್ನು ಸುಲಭದಲ್ಲಿ ತರಬಹುದಾಗಿದೆ. ಪಠ್ಯಪುಸ್ತಕಗಳ ಏಕೀಕರಣ ಉಂಟಾಗಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಹಲವು ವರ್ಷಗಳಿಂದ ಶ್ರಮಿಸುತ್ತಿದೆ. ಪರಿಷತ್ತಿನ ಸಮ್ಮೇಳನಗಳಲ್ಲಿ ಹಲವು ಪ್ರಾಂತಗಳ ಕನ್ನಡಿಗರು ಒಟ್ಟುಗೂಡಿ ಈ ವಿಷಯದಲ್ಲಿ ನಿರ್ಣಯಗಳನ್ನು ಮಾಡಿದ್ದಾರೆ. ಇದಕ್ಕಾಗಿ ಪರಿಷತ್ತು ಹಲವು ಪ್ರಾಂತಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ಉಪಸಮಿತಿಯನ್ನು ನೇಮಕ ಮಾಡಿಕೊಂಡಿದೆ. ಆದುದರಿಂದ ಮೈಸೂರಿನ ವಿದ್ಯಾಭ್ಯಾಸದ ಇಲಾಖೆಯವರು ಈ ಪುಸ್ತಕಗಳ ಪರಿಷ್ಕರಣ ಕಾರ್ಯವನ್ನು ಪರಿಷತ್ತಿಗೆ ವಹಿಸುವುದು ಸೂಕ್ತವೆಂದು ನಾವು ತಿಳಿಯುತ್ತೇವೆ. ಗ್ರಾಮಾಂತರಗಳಲ್ಲಿ ಪುಸ್ತಕಭಂಡಾರಗಳನ್ನು ಏರ್ಪಡಿಸಬೇಕೆಂದು ಸರ್ಕಾರದವರು ನಿಶ್ಚೈಸಿದ್ದರಿಂದ ತಕ್ಕ ಪುಸ್ತಕಗಳ ಪಟ್ಟಿಯನ್ನು ತಯಾರುಮಾಡಲು ಪರಿಷತ್ತಿನ ಗೌರವ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ಉಪಸಮಿತಿಯನ್ನು ಕೆಲವು ದಿನಗಳ ಹಿಂದೆ ಇಲಾಖೆಯವರು ನಿಯಮಿಸಿದ್ದಾರೆ. ಬೆಂಗಳೂರು ಪಟ್ಟಣದಲ್ಲಿ ನಿರಕ್ಷರತಾ ನಿವಾರಣೆಯ ಸಮಿತಿಗೆ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರನ್ನು ಅಧ್ಯಕ್ಷರನ್ನಾಗಿ ಮಾಡಿದ್ದಾರೆ. ಹೀಗೆ ಪರಿಷತ್ತಿನ ಸ್ಥಾನಮಾನಗಳನ್ನು ಅಂಗೀಕರಿಸಿ ಅದರ ಸಹಾಯ ಸಹಕಾರಗಳನ್ನು ಸರ್ಕಾರದವರು ಈಗಾಗಲೇ ಪಡೆಯುತ್ತಿರುವುದರಿಂದ, ಈ ಪಠ್ಯಪುಸ್ತಕಗಳ ಪರಿಷ್ಕರಣ ಕಾರ್ಯವನ್ನೂ ಸಹ, ಅದಕ್ಕಾಗಿಯೆ ಉಪಸಮಿತಿಯನ್ನು ಏರ್ಪಡಿಸಿಕೊಂಡಿರುವ, ಅಖಿಲ ಕರ್ನಾಟಕ ಸಂಸ್ಥೆಯಾದ ಪರಿಷತ್ತಿಗೆ ವಹಿಸುವುದು ವಿಹಿತವಾಗಿದೆ. ಈ ವಿಷಯದಲ್ಲಿ ಇಲಾಖೆಯೊಡನೆ ಪತ್ರವ್ಯವಹಾರ ನಡಸಿ, ತನ್ನ ಕೈಲಾದ ಸಹಾಯವನ್ನೆಲ್ಲ ಮಾಡಲು ಪರಿಷತ್ತು ಸಿದ್ಧವಾಗಿದೆಯೆಂದು ಕನ್ನಡಿಗರಿಗೆಲ್ಲ ನಾವು ಭರವಸೆಯನ್ನು ನೀಡುತ್ತೇವೆ.

## ಮುಂಬಯಿಯಲ್ಲಿ
## ಶ್ರೀ ನಂದಾವರ ಶಕುಂತಲಾಬಾಯಿಯವರು

ಮುಂಬಯಿಯ ಆಕಾಶವಾಣಿಯಲ್ಲಿ ಭಾಷಣ ಮಾಡಲು ಶ್ರೀ॥ ಶಕುಂತಲಾಬಾಯಿ ನಂದಾವರ ಇವರು ೨೧ನೆಯ ತಾರೀಖು ಬೆಳಿಗ್ಗೆ ಮುಂಬಯಿಗೆ ಆಗಮಿಸಿದರು. ಕರ್ನಾಟಕ ಸಂಘದವರು ಅವರನ್ನು ಸ್ವಾಗತಿಸಿದರು. ಅದೇ ದಿವಸ ಸಾಯಂಕಾಲ ಗಿರಿಗಾಂವ ಬ್ರಾಹ್ಮಣ ಸಭಾಮಂದಿರದಲ್ಲಿ ಕರ್ನಾಟಕ ಸಂಘದ ಪರವಾಗಿ ಕೆಲವು ದಾಸರ ಪದಗಳನ್ನೂ ಶಿವಶರಣರ ವಚನಗಳನ್ನೂ ೨ ಗಂಟೆಯ ಕಾಲ ಹಾಡಿ ಸಭಿಕರನ್ನು ಆನಂದಗೊಳಿಸಿದರು. ಮರುದಿನ ಸಾಯಂಕಾಲ ಇವರ ಸನ್ಮಾನಾರ್ಥವಾಗಿ ಶ್ರೀಮತಿ ಮದಭಾವಿಯವರು ಏರ್ಪಡಿಸಿದ್ದ ಒಂದು ಸಂತೋಷಕೂಟದಲ್ಲಿ ಭಾಗವಹಿಸಿ ಮೊಗವೀರ ಕನ್ನಡ ಹೈಸ್ಕೂಲಿಗೆ ತೆರಳಿದರು.

ಮಂಗಳವಾರ ಸಾಯಂಕಾಲ ೪-೪೫ರಿಂದ ೫ ಗಂಟೆಯ ವರೆಗೆ ಆಕಾಶವಾಣಿಯಲ್ಲಿ 'ಕರ್ನಾಟಕದ ಸ್ತ್ರೀಯರು' ಎಂಬ ವಿಷಯದ ಮೇಲೆ ಭಾಷಣವನ್ನು ಮಾಡಿದರು. ಈ ಭಾಷಣದ ಸಾರಾಂಶವನ್ನು ಬೇರೆಕಡೆ ಪ್ರಕಟಿಸಿದೆ. ಬಳಿಕ ಕರ್ನಾಟಕ ಸಂಘಕ್ಕೆ ಭೆಟ್ಟಿ ಕೊಟ್ಟು ಅವರ ಸತ್ಕಾರವನ್ನು ಸ್ವೀಕರಿಸಿ ಮಾತುಂಗಾದಲ್ಲಿ ಕನ್ನಡ ಸಂಘ, `ಮೈಸೂರ ಅಸೋಷಿಯೇಷನ್' ಈ ಸಂಸ್ಥೆಗಳ ಪರವಾಗಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಕಾರ್ಯಕ್ರಮ ೮-೩೦ ರಿಂದ ೧೦ ಗಂಟೆ ವರೆಗೂ ಬಹು ಯಶಸ್ವಿಯಾಗಿ ನೆರವೇರಿತು. ಶ್ರೀಮತಿ ಕೃಷ್ಣವೇಣಮ್ಮ ಗಂಭಿಯವರು ಅಧ್ಯಕ್ಷಸ್ಥಾನವನ್ನು ವಹಿಸಿದ್ದರು.

---

## ಕನ್ನಡ ಸುದ್ದಿ

[ **ವಿನಂತಿ :—** ಕರ್ನಾಟಕದಲ್ಲೆಲ್ಲ ಈಗ ನವಚೈತನ್ಯ ಹುಟ್ಟಿ, ಕನ್ನಡದ ಮೇಲೆ ಅಭಿಮಾನವೂ ಆದರವೂ ಹೆಚ್ಚಿ, ಇದರ ಪರಿಣಾಮವಾಗಿ ಎಲ್ಲೆಲ್ಲಿಯೂ ಕರ್ನಾಟಕ ಸಂಘಗಳು ಸ್ಥಾಪನೆಯಾಗಿ ಕೆಲಸಮಾಡುತ್ತಿವೆ. ಇವುಗಳ ಅಭಿವೃದ್ಧಿಯನ್ನು ಪರಿಷತ್ತು ಬಯಸುತ್ತದೆ. ಮತ್ತು ಅವುಗಳು ಮಾಡುತ್ತಿರುವ ಕೆಲಸವನ್ನು ಹೊರಗಿನ ಜನಗಳಿಗೆ ತಿಳಿಯಪಡಿಸುವುದು ಆವಶ್ಯಕವೆಂಬ ಅಂಶವನ್ನು ಒತ್ತಿಹೇಳುತ್ತದೆ. ಆದಕಾರಣ ಎಲ್ಲ ಸಂಘಗಳೂ ತಮ್ಮ ಕಾರ್ಯಕಲಾಪಗಳ ವರದಿಯನ್ನು ಆದಷ್ಟು ಸಂಕ್ಷೇಪವಾಗಿ ಬರೆದು ಕೂಡಲೆ 'ಕನ್ನಡ ನುಡಿ'ಯ ಕಚೇರಿಗೆ ತಪ್ಪದೆ ಕಳಿಸುವ ಕೃಪೆಮಾಡಬೇಕಾಗಿ ಬಿನ್ನಹ. — ಸಂ.]

**ಬೆಂಗಳೂರು : ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ**

ನೆನ್ನೆಯ ದಿನ ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಮೇಲ್ಕಂಡ ಸಂಘದ ಆರಂಭಭಾಷಣ ಮಾಡಿದರು.

**ಮಿತ್ರ ಸಂಘ : ಬೆಂಗಳೂರು**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಹೋದ ತಿಂಗಳು ೨೮ನೆಯ ತಾರೀಖು ಭಾನುವಾರ ಅಂತರ ಸಂಘಗಳ ಚರ್ಚಾಸ್ಪರ್ಧೆಯೊಂದು ನೆರೆದಿದ್ದಿತು. ಬೆಂಗಳೂರಿನ ಎಂಟು ಸಂಘಗಳವರು ಭಾಗವಹಿಸಿದ್ದರು. ಶ್ರೀ॥ ಕೆ. ಗೋಪಾಲಕೃಷ್ಣರಾವ್, ಬಿ.ಎ. ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಗಳಾದ ಅ. ನ. ಕೃಷ್ಣರಾಯರು, ಪು. ತಿ. ನರಸಿಂಹಾಚಾರ್, ಬಿ.ಎ. ಅವರು ಮತ್ತು ಶ್ರೀಮತಿ ಸಿ. ಪದ್ಮಾವತಮ್ಮನವರು ಪರೀಕ್ಷಕರಾಗಿದ್ದರು. ಪ್ರಥಮ ಮತ್ತು ನಾಲ್ಕನೆಯ ಬಹುಮಾನಗಳು ಸೆಂಟ್ರಲ್ ಕಾಲೇಜು 'ಕರ್ನಾಟಕ ಸಂಘ'ದ ಪ್ರತಿನಿಧಿಗಳಾದ ಶ್ರೀ॥ ಎಂ. ಶಂಕರ್ ಮತ್ತು ಶ್ರೀ॥ ಎನ್. ಎಸ್. ರಂಗನಾಥರಾವ್ ಇವರಿಗೂ, ದ್ವಿತೀಯ ಬಹುಮಾನ 'ವಿವೇಕಸಾಧನ ಸಂಘ'ದ ಶ್ರೀ॥ ಆರ್. ಎ. ಗುಂಡಪ್ಪನವರಿಗೂ, ಮತ್ತು ಮೂರನೆಯ ಬಹುಮಾನ 'ಕಿರಿಯ ತರುಣರ ಸಂಘ'ದ ಶ್ರೀ॥ ಎಚ್. ಎಸ್. ದೊರೆಸ್ವಾಮಿಯವರಿಗೂ ದೊರೆತುವು. ಬಹುಮಾನಗಳನ್ನು ಮುಂದಿನ ತಿಂಗಳು ಮಿತ್ರ ಸಂಘದ ಏಳನೆಯ ವಾರ್ಷಿಕೋತ್ಸವದ ಸಂದರ್ಭದಲ್ಲಿ ಹಂಚಲಾಗುವುದು.

**ಬೆಂಗಳೂರು : ಮಲ್ಲೇಶ್ವರದ ಹೈಸ್ಕೂಲಿನ ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ಆಗಸ್ಟ್ ೫ನೆಯ ತಾರೀಖು ಸೋಮವಾರ ಮಲ್ಲೇಶ್ವರದ ಶ್ರೀರಾಮಮಂದಿರದ ಸಭಾಮಂದಿರದಲ್ಲಿ ಶ್ರೀ॥ ಅ. ನ. ಕೃಷ್ಣರಾಯರು 'ಸಾಹಿತ್ಯ ಮತ್ತು ಸಮಾಜ' ಎಂಬ ವಿಷಯವನ್ನು ಕುರಿತು ಭಾಷಣ ಮಾಡುವರು.

**ಸಂಸ್ಥಾನದಲ್ಲಿ ವಿದ್ಯಾಭ್ಯಾಸ ಸಪ್ತಾಹ ಮತ್ತು ಪ್ರದರ್ಶನಗಳು**

ಮೈಸೂರು ಸಂಸ್ಥಾನದಲ್ಲಿ ಪ್ರತಿಯೊಂದು ಜಿಲ್ಲೆಯಲ್ಲಿಯೂ ಅನೇಕ ಕಡೆಗಳಲ್ಲಿ ಕಳೆದವಾರ ಶಿಕ್ಷಣ ಸಪ್ತಾಹ ನಡೆದುವು. ಕಾರ್ಯಕ್ರಮದ ಅಂಶಗಳಾಗಿ ಸಾರ್ವಜನಿಕ ಭಾಷಣಗಳು, ಆಟಪಾಟಗಳು, ಸಂಗೀತ, ಸ್ಪರ್ಧೆಗಳು, ವಸ್ತು ಪ್ರದರ್ಶನ ಮುಂತಾದುವು ನಡೆದುವು.

## ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಮೈಸೂರು ಪ್ರಾಂತಸಮಿತಿ

### ಅಭಿನಯ ಆಶುಭಾಷಣ ಮತ್ತು ಪ್ರಬಂಧರಚನಾಸ್ಪರ್ಧೆಗಳು

ಕನ್ನಡ ಸಂಸ್ಕೃತಿಯ ಪೋಷಣೆಗೂ, ಕಲಾಭ್ಯಾಸಿಗಳ ಪ್ರೋತ್ಸಾಹಕ್ಕೂ ನೆರವಾಗುವ ಉದ್ದೇಶದಿಂದ ಹೋದ ವರ್ಷದಂತೆ ಈ ವರ್ಷವೂ ಮೇಲ್ಕಂಡ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ

**೧. ಅಭಿನಯ ಸ್ಪರ್ಧೆ :** ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಮಾತ್ರ.

ಸ್ಪರ್ಧೆಯ ವಿಷಯಗಳನ್ನು ಸ್ಪರ್ಧೆ ನಡೆಯುವದಕ್ಕಿಂತ ಸುಮಾರು ಒಂದು ತಿಂಗಳ ಮುಂಚಿತವಾಗಿ, ಪರಿಷತ್ತಿನ ಮತ್ತು ಶಾಲೆ ಕಾಲೇಜುಗಳ ನೋಟೀಸ್ ಬೋರ್ಡ್‌ಗಳ ಮೂಲಕವೂ, "ಕನ್ನಡ ನುಡಿ" ಮತ್ತು ಇತರ ಪತ್ರಿಕೆಗಳಲ್ಲಿಯೂ ಪ್ರಕಟಿಸುವ ಏರ್ಪಾಟು ಮಾಡಲಾಗುವುದು.

**೨. ಆಶುಭಾಷಣ ಸ್ಪರ್ಧೆ :** ಮೈಸೂರು ಮಾಧ್ಯಮಿಕ ಶಾಲಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇಪ್ಪತ್ತೈದು ವರ್ಷಕ್ಕೆ ಮೀರದವರಿಗೆ ಮಾತ್ರ. ಸ್ಪರ್ಧೆಯ ವಿಷಯವನ್ನು ಸ್ಪರ್ಧೆ ನಡೆಯುವ ದಿನ ಪ್ರಾತಃಕಾಲ ಪರಿಷನ್ಮಂದಿರದಲ್ಲಿ ಪ್ರಕಟಿಸಲಾಗುವುದು.

**ಈ ಎರಡು ಸ್ಪರ್ಧೆಗಳು ಪರಿಷನ್ಮಂದಿರದಲ್ಲಿ ನಡೆಯುವುವು.**

**೩. ಪ್ರಬಂಧ ರಚನಾಸ್ಪರ್ಧೆ :** ಈ ಸ್ಪರ್ಧೆ ಬೆಂಗಳೂರಿನಲ್ಲಿ ಪರಿಷನ್ಮಂದಿರದಲ್ಲಿ ನಡೆಯುವುದು. ಇತರ ಸ್ಥಳಗಳಲ್ಲಿ ಹೈಸ್ಕೂಲು ಕಾಲೇಜುಗಳಿರುವ ಸಂಸ್ಥಾನದ ಎಲ್ಲಾ ಊರುಗಳಲ್ಲಿಯೂ ಶಾಲೆಯ ಮುಖ್ಯೋಪಾಧ್ಯಾಯರ ಸಹಕಾರದೊಡನೆ ನಡಸುವ ಏರ್ಪಾಟು ಮಾಡಲಾಗುವುದು. ಆಶುಭಾಷಣ ಸ್ಪರ್ಧೆಗೆ ಇಟ್ಟಿರುವ ನಿರ್ಬಂಧ ಈ ಸ್ಪರ್ಧೆಗೂ ಅನ್ವಯಿಸುವುದು. ಸ್ಪರ್ಧೆಯ ವಿಷಯವನ್ನು ಆಯಾ ಸ್ಥಳಗಳಲ್ಲಿ ಸ್ಪರ್ಧೆ ನಡೆಯುವ ದಿನ ಪ್ರಾತಃಕಾಲ ಪ್ರಕಟಿಸಲಾಗುವುದು.

ಈ ಸ್ಪರ್ಧೆಗಳನ್ನು ಸೆಪ್ಟೆಂಬರ್ ತಿಂಗಳ ಎರಡನೆಯ ವಾರದಲ್ಲಿ ನಡಸಲಾಗುವುದು.

### ನಿಯಮಗಳು

ಸ್ಪರ್ಧೆಗಳಿಗೆ ಸೇರಲಿಚ್ಛಿಸುವವರು **ಪ್ರತಿಯೊಂದು ಸ್ಪರ್ಧೆಗೂ** ನಾಲ್ಕು ಆಣೆ ಪ್ರವೇಶಧನ ಸಹಿತ ತಮ್ಮ ಪ್ರವೇಶ ಪತ್ರಿಕೆಗಳನ್ನು **೧೯೪೦ನೆಯ ಆಗಸ್ಟ್ ೩೧ನೆಯ** ತಾರೀಖಿನೊಳಗಾಗಿ ಕೆಳಗಿನ ವಿಳಾಸಕ್ಕೆ ಕಳಿಸತಕ್ಕದ್ದು. ಕಾಲಮೀರಿ ಬಂದ ಪತ್ರಿಕೆಗಳನ್ನು ಗಮನಕ್ಕೆ ತಂದುಕೊಳ್ಳಲಾಗುವುದಿಲ್ಲ.

ಪ್ರವೇಶ ಪತ್ರಿಕೆಯಲ್ಲಿ (i) ಸ್ಪರ್ಧಿಯ ಹೆಸರು ; (ii) ತಂದೆಯ ಹೆಸರು ; (iii) ವಯಸ್ಸು ; (iv) ಶಾಲೆ ಅಥವಾ ಕಾಲೇಜಿನ ಹೆಸರು (v) ತರಗತಿ : (iv) ವಿಳಾಸ—ಈ ವಿವರಗಳಿರಬೇಕು.

**ಸೂಚನೆ :** ೧. ಒಂದಕ್ಕಿಂತ ಹೆಚ್ಚು ಸ್ಪರ್ಧೆಗೆ ಸೇರಲಿಚ್ಛಿಸುವವರು ಪ್ರತಿಯೊಂದಕ್ಕೂ ಪ್ರತ್ಯೇಕವಾಗಿ ಪ್ರವೇಶ ಪತ್ರಿಕೆಯನ್ನೂ ಪ್ರವೇಶಧನವನ್ನೂ ಸಲ್ಲಿಸಬೇಕು. ೨. ಆಶುಭಾಷಣ ಮತ್ತು ಪ್ರಬಂಧರಚನಾಸ್ಪರ್ಧೆಗಳಲ್ಲಿ ಭಾಗವಹಿಸುವವರಲ್ಲಿ ೧೪ರಿಂದ ೧೮ ವಯಸ್ಸಿನವರನ್ನು **ಕಿರಿಯರೆಂದೂ** ೧೮ಕ್ಕೆ ಮೇಲ್ಪಟ್ಟವರನ್ನು **ಹಿರಿಯರೆಂದೂ** ಪರಿಗಣಿಸಲಾಗುವುದು.

ಯಾವ ಕಾರಣದಿಂದಾಗಲಿ ಸ್ಪರ್ಧೆಯನ್ನು ನಿಲ್ಲಿಸುವ ಅಥವಾ ಈ ನಿಯಮಗಳನ್ನು ಸಂದರ್ಭಾನುಸಾರ ಹೆಚ್ಚು ಕಡಮೆ ಮಾಡುವ ಹಕ್ಕು ಸಮಿತಿಯ ಅಧಿಕಾರಿಗಳಿಗೆ ಇರುತ್ತದೆ.

ಸ್ಪರ್ಧೆ ನಿಂತುಹೋಗುವ ಸಂದರ್ಭದಲ್ಲಿ ಮಾತ್ರ ಪ್ರವೇಶಧನವನ್ನು ಹಿಂದಿರುಗಿಸಲಾಗುವುದು.

ಪ್ರತಿಯೊಂದು ಸ್ಪರ್ಧೆಯಲ್ಲೂ ಒಂದು ಅಥವಾ ಹೆಚ್ಚಿನ ಬಹುಮಾನವನ್ನು ಕೊಡಲಾಗುವುದು.

### ಶ್ರೀ|| ಶಾಮಯ್ಯನವರ ಪರ್ಯಾಯ ಪಾರಿತೋಷಕ

ಅಭಿನಯ ಸ್ಪರ್ಧೆ ಹೆಚ್ಚು ಆಕರ್ಷಣೀಯವಾಗುವಂತೆ ಮಾರುತಿ ಜ್ಯೂಯಲರಿ ಹಾಲಿನ ಮಾಲೀಕರಾದ ಶ್ರೀ|| ಶಾಮಯ್ಯನವರ ಕೃಪೆಯಿಂದ ಒಂದು ಪರ್ಯಾಯ ಪಾರಿತೋಷಕ ಏರ್ಪಟ್ಟಿರುವುದು. ಈ ಪಾರಿತೋಷಕ (Rolling Cup)ವನ್ನು ಪಡೆಯಲು ಸಂಸ್ಥೆಗಳಿಗೆ ಮಾತ್ರ ಅಧಿಕಾರವುಂಟು. ಪ್ರತಿಯೊಂದು ಸಂಸ್ಥೆಯಿಂದಲೂ ಕನಿಷ್ಠ ಪಕ್ಷ ನಾಲ್ಕು ಸ್ಪರ್ಧಿಗಳು ಬಂದಿರಬೇಕು. ಪರೀಕ್ಷಕರ ಅಭಿಪ್ರಾಯದಲ್ಲಿ ಪ್ರಥಮ ಸ್ಥಾನವನ್ನು ಪಡೆದ ಸಂಸ್ಥೆಗೆ ಈ ಪಾರಿತೋಷಕವನ್ನು ಒಂದು ವರ್ಷ ಪರ್ಯಂತ ಕೊಡಲಾಗುವುದು.

ಬೆಂಗಳೂರು **ಎನ್. ಎಸ್. ರಾಮಚಂದ್ರಯ್ಯ, ಎಂ.ಎ.**
ತಾ|| ೧-೮-೪೦ ವ್ಯವಸ್ಥಾಪಕ
ಸ್ಪರ್ಧೆಗಳ ಸಮಿತಿ.

---

### ಬೆಳಗಾಂವಿ ಕರ್ನಾಟಕ ಸಂಘದ ಬೆಳ್ಳಿಹಬ್ಬ ಮತ್ತು ಡಾ|| ಸವಣೂರರ ೬೧ನೆಯ ಹುಟ್ಟುಹಬ್ಬ

ತಾ|| ೨೭-೭-೪೦ನೆಯ ಸಾಯಂಕಾಲ ಕರ್ನಾಟಕ ಸಂಘದ ಬೆಳ್ಳಿಯ ಹಬ್ಬ ಮತ್ತು ಅದರ ಸಂಸ್ಥಾಪಕರಾದ ಡಾ|| ಸವಣೂರ ಹಣಮಂತರಾಯರ ೬೧ನೆಯ ಹುಟ್ಟುಹಬ್ಬವು ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಬಹಳ ವೈಭವದಿಂದ ನಡೆಯಿತು.

ಸುಮಾರು ೩-೪ ಸಾವಿರ ಜನರು ಸಭೆಯಲ್ಲಿ ನೆರೆದಿದ್ದರು. ಬಾಲಕಿಯರು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ಗೀತವನ್ನು ಸರಸವಾಗಿ ಹಾಡಿದರು. ಸಂಘದ ಅಧ್ಯಕ್ಷರಾದ ಶ್ರೀ|| ವಾಲಿಯವರು ಸಭೆಯ ಉದ್ದೇಶವನ್ನು ಹೇಳಿ ಅಧ್ಯಕ್ಷರಾದ ಮಾಸ್ತಿಯವರ ಪರಿಚಯ ಮಾಡಿಕೊಟ್ಟರು.

ಸಂದೇಶ ವಾಚನವಾದ ಬಳಿಕ ಶ್ರೀ|| ಚಿಕ್ಕೋಡಿ ಅನಂತರಾಯರು ಸಂಘದ ವರದಿಯನ್ನೋದಿದರು. ಬಳಿಕ ಶ್ರೀ|| ವಾಲಿಯವರು ಮಾನಪತ್ರವನ್ನೋದಿ ಖಾದಿ ಚೀಲದಲ್ಲಿ ಡಾ|| ಸವಣೂರ ಅವರಿಗೆ ಸಮರ್ಪಿಸಿದರು.

ಅನಂತರ ಜಿಲ್ಲಾ ಕಾಂಗ್ರೆಸ್ ಕಮಿಟಿ, ಕನ್ನಡ ಸಂಘ, ಕನ್ನಡ ಪ್ರಾಥಮಿಕ ಶಾಲೆ, ಬಿ. ಟಿ. ಕಾಲೇಜ ಕರ್ನಾಟಕ ಸಂಘ, ಶ್ರೀ|| ಗೊಂಬಿ ರಾಮರಾಯರು, ಲಿಂಗರಾಜ ಕಾಲೇಜು ಕರ್ನಾಟಕ ಸಂಘ, ಖಾದೀ ಭಂಡಾರ, ಲಾ ಕಾಲೇಜು ಕರ್ನಾಟಕ ಸಂಘ, ಜನರಲ್ ಲೈಬ್ರರಿ, ಮ್ಯುಜಿಕಲ್ ಸರ್ಕಲ್, ಅಕ್ಕನ ಬಳಗ ಶಹಾಪುರ, ಆಯುರ್ವೇದ ಶಾಲೆ, ವ್ಯಾಯಾಮ ಶಾಲೆ, ಭುವನೇಶ್ವರಿ ಮುದ್ರಣಾಲಯ, ಕಥಾಕುಂಜ ಗ್ರಂಥಭಂಡಾರ, ಶ್ರೀ|| ಇಟಗಿ ಶಿವಶಂಕರಪ್ಪನವರು ಮೊದಲಾದವರಿಂದ ಪೂಮಾಲೆಗಳು ಸಮರ್ಪಿಸಲ್ಪಟ್ಟವು. ಶ್ರೀ|| ಜಯವಂತ ಕಾಕತೀಕರರು ಬೆಳ್ಳಿಯ ಕೃಷ್ಣಮೂರ್ತಿಯನ್ನರ್ಪಿಸಿದರು. ಧಾರವಾಡದಲ್ಲಿಯ ಎಲ್ಲ ಸಂಘಗಳ ಪರವಾಗಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಶ್ರೀ|| ಮುದವೀಡು ಕೃಷ್ಣರಾಯರು ಪೂಮಾಲೆಗಳನ್ನು ಸಮರ್ಪಿಸಿದರು.

ಶ್ರೀ||ಗಳಾದ ಆದ್ಯ ಅನಂತಾಚಾರ್ಯರು, ಆಲೂರ ವೆಂಕಟರಾಯರು, ಎನ್. ವಿ. ಗದಗರವರು, ಬೇಂದ್ರೆಯವರು ಡಾಕ್ಟರರ ಗುಣಗಾಯನ ಮಾಡಿದರು.

ಆ ಬಳಿಕ ಶ್ರೀ|| ಜೋಶಿ ನಾರಾಯಣರಾಯರು ಡಾಕ್ಟರವರ ಭಾವಚಿತ್ರದ ಅನಾವರಣ ಮಾಡುತ್ತ, "ಈ ಚಿತ್ರವನ್ನು ಶ್ರೀ|| ಮೋಹನರಾವ್ ಕರೀಕಟ್ಟಿಯವರು ಮಾಡಿಸಿಗುವರು. ಇಲ್ಲಿಯ ಆರ್ಟಿಸ್ಟ ಶ್ರೀ|| ಕಟ್ಟಿಯವರು ಇದನ್ನು ತಯಾರು ಮಾಡಿದ್ದಾರೆ" ಎಂದು ಹೇಳಿದರು.

ಅನಂತರ ಡಾ|| ಸವಣೂರರು ಉತ್ತರ ಕೊಡುತ್ತ, 'ನಾನೇನೂ ಸಾಹಿತಿಯಲ್ಲ. ಸಾಹಿತ್ಯದ ಸೇವೆ ಮಾಡಿದವನಲ್ಲ. ಆದರೆ ಭಕ್ತನಾಗಿ ಕೆಲಸ ಮಾಡಿದವನು ಮಾತ್ರ. ಈ ಕಾರ್ಯ ಮಾಡುವಾಗ ನನಗೆ ಧಾರವಾಡದವರ ಬೆಂಬಲ ಸಿಕ್ಕಿತು. ವಿದ್ಯಾವರ್ಧಕ ಸಂಘ ನೋಡಿ ಬೆಳಗಾಂವಿಯಲ್ಲಿ ಕನ್ನಡ ಸಂಘ ಸ್ಥಾಪಿಸಬೇಕೆಂದೆನಿಸಿತು. ಕನ್ನಡಿಗರು ಎಚ್ಚರಾದ ಹೊರತು ಗತ್ಯಂತರವಿಲ್ಲೆಂದು ಭಾವಿಸಿ ಕಾರ್ಯ ಪ್ರಾರಂಭ ಮಾಡಿದೆವು. ನನ್ನನ್ನು ಗೊಂಬಿಯಂತೆ ಮುಂದೆ ಮಾಡಿದರು. ಹಿಂದೆ ಅನೇಕ ಜನರು ಸಹಾಯಮಾಡಿದರು. ಅದರ ಪರಿಣಾಮವಾಗಿ ಇಂದು ಬೆಳಗಾಂವಿಯಲ್ಲಿ ಕನ್ನಡದ ಕೂಗು ಕೇಳುತ್ತದೆ. ಹೀಗೆಯೇ ಇದು ನೆಲೆಯಲೆಂದು ಮುಂತಾಗಿ ಹೇಳಿ ಈ ಆದರ ಸತ್ಕಾರಕ್ಕಾಗಿ ಎಲ್ಲರ ಆಭಾರ ಮನ್ನಿಸಿದರು.

ಅಧ್ಯಕ್ಷರು ಈ ಕಲ್ಯಾಣೋತ್ಸವದಲ್ಲಿ ಭಾಗವಹಿಸುವ ಸುಯೋಗ ಒದಗಿಸಿಕೊಟ್ಟದ್ದಕ್ಕಾಗಿ ಸಂಘಕ್ಕೆ ಧನ್ಯವಾದ ಅರ್ಪಿಸಿದರು. "ನಾವೆಲ್ಲ ಒಂದೇ ತಾಯಿಯ ಮಕ್ಕಳು, ಉತ್ತರ ಕರ್ನಾಟಕ ಮೈಸೂರು ಎಂದು ಬೇರೆ ಬೇರೆ ಇಲ್ಲ. ಈ ಹೊತ್ತಿನ ಸಮಾರಂಭದ ಅಧ್ಯಕ್ಷನಾಗಿ ನಾನು ಇಲ್ಲಿಗೆ ಬಂದಿದ್ದರೂ ಹಿಂದಿನ ಋಣಾನುಬಂಧ ನನಗೆ ಇವೆ. ೧೧ ವರ್ಷದ ಹಿಂದೆ ಇದೇ ಬೆಳಗಾಂವಿಯು ನನ್ನನ್ನು ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೇರಿಸಿತ್ತು. ಆಗ ಒಂದೇ ತರದ ಇಬ್ಬರು ಬಂದು ನನಗೆ ಅಧ್ಯಕ್ಷರಾಗಬೇಕೆಂದು ವಿನಂತಿ ಮಾಡಿಕೊಂಡರು. ಅವರಾರೆಂದರೆ ಶ್ರೀ|| ವೆಂಕಟರಾಯರು ಮತ್ತು ಡಾ|| ಸವಣೂರ ಅವರು. ಒಂದೇ ಬಗೆಯ ಮೋರೆಯವರು; ಒಂದೇತರಹ ರುಮಾಲು ಸುತ್ತುವವರು; ಇಬ್ಬರೂ ಅವಳಿಜವಳಿ ಅಣ್ಣತಮ್ಮಂದಿರು; ಬಂದು ನನಗೆ ಮರ್ಯಾದೆ ಮಾಡಿದರು. ಅಖಂಡ ಕರ್ನಾಟಕದ ಪರವಾಗಿ ಈ ಮಾಲೆಯನ್ನು ಸಮರ್ಪಿಸುತ್ತೇನೆ" ಎಂದು ಹೇಳಿ ಡಾಕ್ಟರರು ಇನ್ನೂ ಅನೇಕ ವರ್ಷ ಬಾಳಲೆಂದು ಹರಸಿದರು. ಶ್ರೀ|| ವಾಲಿಯವರು ಅಧ್ಯಕ್ಷರಿಗೆ ಪೂಮಾಲೆಯರ್ಪಿಸಿದ ಬಳಿಕ ಚಿಕ್ಕೋಡಿಯವರು ಎಲ್ಲರ ಆಭಾರ ಮನ್ನಿಸಿದರು. ಸಭೆ ಮುಗಿಯಿತು.

## ಸಾಹಿತ್ಯ ತರಗತಿಗಳು

### ಕೋಲಾರ

ಕೋಲಾರದ ಕರ್ನಾಟಕ ಸಂಘದ ಆಶ್ರಯದಲ್ಲಿ ಪರಿಷತ್ತಿನ ಸಾಹಿತ್ಯ ತರಗತಿಯನ್ನು ತೆರೆಯಲು ಏರ್ಪಾಟಾಗಿದೆ. ೨ನೆಯ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತರಪೇತು ಮಾಡಲಾಗುವುದು. ಈಗಾಗಲೇ ೧೫ ಮಂದಿ ವಿದ್ಯಾರ್ಥಿಗಳು ತರಗತಿಗೆ ಸೇರಲು ಅಪೇಕ್ಷಿಸಿದ್ದಾರೆಂದು ತಿಳಿಯಬಂದಿದೆ.

### ಹುಬ್ಬಳ್ಳಿ

ಶ್ರೀ ಸತ್ಯಬೋಧ ವಾಚನಾಲಯದವರು ೩ನೆಯ ಪರೀಕ್ಷೆಗೆ ತರಗತಿಯನ್ನು ತೆರೆಯುವ ವ್ಯವಸ್ಥೆ ಮಾಡಿದ್ದಾರೆ. ತರಗತಿಗೆ ಸೇರುವವರು ಆಗಸ್ಟ್ ೩೧ನೆಯ ತಾರೀಖಿನೊಳಗಾಗಿ ವಾಚನಾಲಯದ ಕಾರ್ಯದರ್ಶಿಗಳಿಗೆ ತಿಳಿಸಬೇಕು. ತರಗತಿಗಳು ಮೊದಲಾಗುವ ತಾರೀಖು ಸ್ಥಳಗಳನ್ನು ಮುಂದೆ ತಿಳಿಸಲಾಗುವುದು.

### ಧಾರವಾಡ

ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಉತ್ತರ ಕರ್ನಾಟಕ ಪ್ರಾಂತ ಸಮಿತಿಯ ನೇತೃತ್ವದಲ್ಲಿ ನಡೆಯುವ ಸಾಹಿತ್ಯ ತರಗತಿಗಳನ್ನು ೨೧ನೆಯ ತಾರೀಖಿನ ದಿವಸ ಪ್ರಾರಂಭಗೊಳಿಸಿದರು.

### ಶಿವಮೊಗ್ಗ

ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲಿ ಸದ್ಯದಲ್ಲಿಯೇ ಸಾಹಿತ್ಯ ತರಗತಿಗಳು ಆರಂಭವಾಗಲಿವೆಯೆಂದು ತಿಳಿಯಬಂದಿದೆ.

---

## ಮೈಸೂರು ನಾಟಕ ಸಂಘ

ಕಳೆದ ವಾರ ಕನ್ನಡ ನುಡಿಯಲ್ಲಿ ಕನ್ನಡ ನಾಟಕ ಕಲೆ ಮತ್ತು ರಂಗಭೂಮಿಗಳ ಏಳಿಗೆಯನ್ನು ಕುರಿತು ಒಂದು ಪ್ರಧಾನ ಲೇಖನ ಬರೆಯಲಾಗಿತ್ತಷ್ಟೆ. ಅದೇ ಹೊತ್ತಿಗೆ ಮೈಸೂರು ರಾಜಧಾನಿಯಲ್ಲಿ ಆಸ್ಥಾನ ವಿದ್ವಾನ್ ಶ್ರೀ|| ನಂಜನಗೂಡು ಶ್ರೀಕಂಠಶಾಸ್ತ್ರಿಗಳ ನೇತೃತ್ವದಲ್ಲಿ ಕನ್ನಡ ನಾಟಕ ಕಲೆಯ ಮೇಲ್ಮೆಯನ್ನು ಸಾಧಿಸಲು ಒಂದು ಸಂಘ ಸ್ಥಾಪಿತವಾಗಿರುವ ಸುದ್ದಿ ಹೊರಬಿದ್ದಿರುವ ಅಂಶವನ್ನು ನಾವು ಸಂತೋಷದಿಂದ ನಮ್ಮ ಓದುಗರ ಗಮನಕ್ಕೆ ತರಬಯಸುತ್ತೇವೆ.

ಈ ಸಂಘದ ಹೆಸರು 'ಮೈಸೂರು ನಾಟಕ ಸಂಘ.' ಶ್ರೀ|| ಶ್ರೀಕಂಠಶಾಸ್ತ್ರಿಗಳವರು ನಾಟಕವನ್ನು ಜೀವನ ವೃತ್ತಿಯನ್ನಾಗಿ ಅವಲಂಬಿಸಿರುವ ಅನೇಕ ನಟರನ್ನು ಕಳೆದ ತಿಂಗಳು ೨೫ನೆಯ ಗುರುವಾರ ಆಹ್ವಾನಿಸಿ, ಹೊಸ ಸಂಘದ ಆವಶ್ಯಕತೆ, ನಟರಲ್ಲಿ ಒಕ್ಕಟ್ಟು ಇರಬೇಕಾದ ಅಗತ್ಯ ಇವುಗಳನ್ನು ವಿವರಿಸಿ, ಕನ್ನಡಿಗರಲ್ಲಿ ಬಹಳ ನಯನಾಜೂಕು ನಾಗರಿಕತೆಗಳಿರುವುದರಿಂದ ಅವನ್ನು ಕಲೆಯ ಮೂಲಕ ಪ್ರತಿಬಿಂಬಿಸಲು ಒಂದಕ್ಕಿಂತ ಹೆಚ್ಚು ಸಂಘಗಳು ಹುಟ್ಟಿ ಕಲೆಯನ್ನು ಅಭಿವೃದ್ಧಿಗೆ ತರಬೇಕೆಂದು ಮುಂತಾಗಿ ಹೇಳಿದರು. ಸಭೆಗೆ ದಯಮಾಡಿಸಿದ ಶ್ರೀ|| ಕೊಟ್ಟೂರಪ್ಪ ಮುಂತಾದ ಹಲವು ನಟರು ಶ್ರೀ|| ಶಾಸ್ತ್ರಿಗಳ ಉದ್ದೇಶಗಳನ್ನು ಶ್ಲಾಘಿಸಿ ಸಂಘ ಸ್ಥಾಪನೆಗೆ ಬೆಂಬಲವಿತ್ತರು.

ಸಂಘಕ್ಕೆ ಅರಮನೆ ದರ್ಬಾರ್ ಬಕ್ಷಿ ಶ್ರೀ|| ಎಚ್. ಎಲ್. ದೇವರಾಜೇ ಅರಸಿನವರು ಅಧ್ಯಕ್ಷರು. ಶ್ರೀಗಳಾದ ಡಾ|| ಎಂ. ಎಚ್. ಕೃಷ್ಣ, ರಾವ್‌ಸಾಹೇಬ್ ಎಂ. ರಾಮಸ್ವಾಮಿಯವರು ಮತ್ತು ಶ್ರೀ|| ಡಿ. ರಾಮಯ್ಯ ಇವರುಗಳು ಸಲಹೆಕಾರರು. 'ಮೈಸೂರು ನಾಟಕ ಸಂಘದ ಉದ್ದೇಶಗಳು ಈಡೇರಲೆಂದು ನಾವು ಹಾರೈಸುತ್ತೇವೆ.

---

## ಕನ್ನಡ ಗ್ರಂಥಕರ್ತರಿಗೆ ಪ್ರೋತ್ಸಾಹ

ದೇವರಾಜ ಬಹದ್ದೂರ್ ನಿಧಿಯ ಸಮಿತಿಯವರು ಈ ವರ್ಷ ಕೆಳಗೆ ಕಂಡಂತೆ ಬಹುಮಾನವನ್ನು ವಿನಿಯೋಗಿಸಿರುವರು.

**೧. ಜೀವದ ಉತ್ಪತ್ತಿ ಮತ್ತು ಪರಿವರ್ತನೆ :**

ಬರೆದವರು : ಶ್ರೀಗಳಾದ ಎಚ್. ನಾರಾಯಣರಾಯರು ಮತ್ತು ಕೆ. ಪಿ. ರಾಮನಾಥಯ್ಯನವರು, ಬೆಂಗಳೂರು. **೨೫೦ ರೂ. ಬಹುಮಾನ.**

**೨. ಕನ್ನಡದ ನೆಲೆ :**

ಬರೆದವರು : ಶ್ರೀ|| ಶಂ. ಬಾ. ಜೋಶಿಯವರು, ಧಾರವಾಡ. **೨೦೦ ರೂ. ಬಹುಮಾನ.**

**೩. ರೈತನ ಪ್ರಪಂಚ :**

ಬರೆದವರು : ಶ್ರೀ|| ಡಿ. ಕೃಷ್ಣಯ್ಯಂಗಾರ್ಯರು, ಮಂಡ್ಯ **೧೫೦ ರೂ. ಬಹುಮಾನ.**

ಈ ಮಹನೀಯರುಗಳನ್ನು ಪರಿಷತ್ತು ಅಭಿನಂದಿಸುತ್ತದೆ.

---

## ಅಕ್ಷರಪ್ರಚಾರ

ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಅಕ್ಷರ ಪ್ರಚಾರ ಕಾರ್ಯ ನಡೆಯುತ್ತಿರುವ ಸಂಗತಿಯನ್ನು ನಮ್ಮ ವಾಚಕರಿಗೆ ಹಿಂದೆಯೇ ತಿಳಿಸಿದೆ.

### ಮೈಸೂರಿನಲ್ಲಿ

ಮೈಸೂರು ನಗರದಲ್ಲಿ ಅಕ್ಷರ ಪ್ರಚಾರ ಕಾರ್ಯಕ್ರಮದ ವಿವರಗಳನ್ನು ಪರಿಶೀಲಿಸಲು ಕೆಲವು ದಿನಗಳ ಹಿಂದೆ ವಿಶ್ವವಿದ್ಯಾನಿಲಯ ಸಂಘದ ಅಧ್ಯಕ್ಷರಾದ ಮಿ|| ಈಗಲ್‌ಟನ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಭೆ ನಡೆಯಿತು. ಸಭೆಗೆ ನುರಿತ ಶಿಕ್ಷಕರನೇಕರು ಬಂದಿದ್ದರು. ಶ್ರೀಗಳಾದ ಎಸ್. ವಿ. ಶ್ರೀನಿವಾಸರಾಯರು, ಜಿ. ಆರ್. ರಂಗಸ್ವಾಮಿಯವರು, ಎ. ಶೇಷಯ್ಯಂಗಾರ್ಯರು, ಮತ್ತು ನಗರದ ಶಿಕ್ಷಣ ಸಂಸ್ಥೆಯ ಅಧಿಕಾರಿಗಳಾದ ಶ್ರೀ|| ರಾಮಕೃಷ್ಣರಾಯರು ಸಭೆಯ ಮುಂದೆ ತಮ್ಮ ಅಮೂಲ್ಯವಾದ ಸಲಹೆಗಳನ್ನು ಇಟ್ಟರು.

ಅಕ್ಷರ ಪ್ರಚಾರ ನಡಸಲು ಸುಮಾರು ೨೦೦ ಮಂದಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಸ್ವಯಂಸೇವಕರಾಗಿ ಮುಂದೆ ಬಂದಿರುವರು. ನಗರದ ಹಲವು ಭಾಗಗಳಲ್ಲಿ ಸಂಜೆ ತರಗತಿಗಳನ್ನು ಸ್ಥಾಪಿಸಿ ಅವಿದ್ಯಾವಂತರಾದ ಪ್ರಾಪ್ತವಯಸ್ಕರಿಗೆ ಓದುಬರಹ ಕಲಿಸಬೇಕೆಂದು ತೀರ್ಮಾನವಾಯಿತು. ಕನ್ನಡ ಮತ್ತು ಉರ್ದು ಭಾಷೆಗಳಲ್ಲಿ ಶಿಕ್ಷಣ ಕೊಡಲು ಎರಡು ಉಪಸಮಿತಿಗಳು ನೇಮಕವಾದವು. ಪಠ್ಯ ಪುಸ್ತಕಗಳನ್ನೂ, ಶಿಕ್ಷಣ ವಿಧಾನಗಳನ್ನೂ ಈ ಸಮಿತಿಯವರು ಬೇಗ ನಿರ್ಧರಿಸಿ ಈ ತಿಂಗಳಿನಿಂದ ಅಕ್ಷರಪ್ರಚಾರ ಕಾರ್ಯವನ್ನು ಮೊದಲು ಮಾಡುವರೆಂದು ಹೇಳಲಾಗಿದೆ.

### ಬೆಂಗಳೂರಿನಲ್ಲಿ

ಬೆಂಗಳೂರಿನಲ್ಲಿ ಕನ್ನಡ, ಉರ್ದು ಭಾಷೆಗಳಲ್ಲಿ ಅಕ್ಷರಪ್ರಚಾರ ಮಾಡಲು ಏರ್ಪಾಡಾಗಿದೆ. ನಗರದ ಬೇರೆ ಬೇರೆ ಪ್ರದೇಶಗಳಲ್ಲಿ ೧೫ ಕೇಂದ್ರಗಳನ್ನು–ಹನ್ನೆರಡು ಕನ್ನಡಕ್ಕೂ ಮೂರು ಉರ್ದುವಿಗೂ–ತೆರೆದು ಶಿಕ್ಷಣ ಕೊಡಬೇಕೆಂದೂ, ಕನ್ನಡ ಶಿಕ್ಷಣಕ್ಕೆ ಸಾಧನವಾಗಿ ಶಿಕ್ಷಣ ಇಲಾಖೆಯ ಬಾಲಬೋಧೆ, ಶ್ರೀ|| ದೇವುಡುರವರ 'ಮೈಸೂರು ಅಕ್ಷರ ಪ್ರಚಾರಪದ್ಧತಿ'ಯ ಬಾಲಬೋಧೆ, ಶ್ರೀ|| ಆಚಾರ್ಲು ಅವರ ನಕ್ಷೆಗಳು, ಶ್ರೀ|| ಎಂ. ಆರ್. ಶ್ರೀನಿವಾಸಮೂರ್ತಿಗಳ ಬಾಲಬೋಧೆ ಇವುಗಳಲ್ಲಿ ಯಾವುದನ್ನಾದರೂ ಪ್ರಯೋಗಾರ್ಥವಾಗಿ ಶಿಕ್ಷಕರ ಇಷ್ಟದಂತೆ ಬಳಸಬಹುದು ಎಂದು ನಿರ್ಧರಿಸಲಾಗಿದೆ.

ವಿದ್ಯಾರ್ಥಿಗಳು ಆರು ತಿಂಗಳಲ್ಲಿ ಅಕ್ಷರಸ್ಥರಾಗುವಂತೆ ಶಿಕ್ಷಣ ಕೊಡಲಾಗುವುದು. ೩ ತಿಂಗಳು ಅಕ್ಷರಗಳನ್ನು ಕಲಿಸುವುದಕ್ಕೂ ೩ ತಿಂಗಳು ಓದುಬರಹ ಕಲಿಸುವುದಕ್ಕೂ ಮತ್ತು ಕಲಿತುದನ್ನು ಮರೆಯದಿರುವಂತೆ ಮಾಡುವುದಕ್ಕೂ ಕಾಲ ಮಿತಿಯನ್ನು ಇಟ್ಟುಕೊಳ್ಳಲಾಗಿದೆ.

ಮುಂದಿನ ವಿವರಗಳು ಪರ್ಯಾಲೋಚನೆಯಲ್ಲಿವೆ.

---

### ಮೈಸೂರು ಸಂಘ : ಕೊಲ್ಲಾಪುರ

ಮೇಲ್ಕಂಡ ಸಂಘದ ವಾರ್ಷಿಕ ಸಭೆ ಜುಲೈ ೨೨ನೆಯ ಸೋಮವಾರ ಶ್ರೀ|| ಡಿ. ಪರಮೇಶ್ವರಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ೧೯೪೦–೪೧ನೆಯ ಸಾಲಿನ ಕಾರ್ಯನಿರ್ವಾಹಕ ಮಂಡಲಿಯ ಆಯ್ಕೆಯಾಯಿತು.

ಶ್ರೀ|| ರಂಗನಾಥರಾವ್, ಎಂ.ಎ., ಎಲ್‌ಎಲ್.ಬಿ. ಅವರು ಅಧ್ಯಕ್ಷರು. ಎಚ್. ಕೆ. ಶ್ರೀನಿವಾಸಮೂರ್ತಿಯವರು ಕಾರ್ಯದರ್ಶಿಗಳು.

# ಪರಿಷತ್ತಿನ ಸುದ್ದಿ

## ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಭಾಷಣ

ಸ್ಥಳ: ಶ್ರೀ ಕೃಷ್ಣರಾಜ ಪರಿಷನ್ಮಂದಿರ

**೩ನೆಯ ಆಗಸ್ಟ್ ೧೯೪೦ ಶನಿವಾರ ಸಂಜೆ ೬ ಗಂಟೆಗೆ**

ಭಾಷಣಕಾರರು: ಫ್ರಾನ್ಸಿನಲ್ಲಿ ಕೆಲವು ವರ್ಷಗಳಿದ್ದು ಈಗ ಹಿಂದಿರುಗಿರುವ ಶ್ರೀ॥ ಹಾಸನದ ರಾಜಾರಾಯರು

ವಿಷಯ: ಪಾಶ್ಚಾತ್ಯ ಸಂಸ್ಕೃತಿ

ಅಧ್ಯಕ್ಷರು: ಶ್ರೀ॥ ಬಿ. ಎಸ್. ಪುಟ್ಟಸ್ವಾಮಿಯವರು, ಬಿ.ಎ., ಬಿ.ಎಲ್., ಎಂ.ಎಲ್.ಸಿ.

---

# ಕನ್ನಡ ಸುದ್ದಿ

**ಕೋಲಾರ: ಅಧ್ಯಾಪಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ತಾ॥ ೨೬ರಿಂದ ೨೯ ಪರ್ಯಂತ ಶಿಕ್ಷಣ ಮಹೋತ್ಸವ ನಡೆಯಿತು. ಮುಖ್ಯಾಂಶಗಳು: ಆರಂಭಭಾಷಣ — ಶ್ರೀ॥ ಎಲ್. ವೇಮಾರೆಡ್ಡಿ (ಡಿ॥ ಬೋ॥ ಅಧ್ಯಕ್ಷರು). (೧) "ಹೈಸ್ಕೂಲ್ ವಿದ್ಯಾಭ್ಯಾಸ", "ಮಕ್ಕಳ ಶಿಕ್ಷಣದಲ್ಲಿ ಸರ್ಕಾರದ ಕರ್ತವ್ಯ"— ಶ್ರೀ॥ ಡಿ. ಎಸ್. ವೆಂಕಟೇಶಯ್ಯ, ಬಿ.ಎ., (೨) "ಸ್ತ್ರೀ ವಿದ್ಯಾಭ್ಯಾಸ"— ಶ್ರೀಮತಿ ಮಾಡಮ್ಮ ದೇವದಾಸ್, (೩) "ಪ್ರಾಥಮಿಕ ವಿದ್ಯಾಭ್ಯಾಸ"— ಶ್ರೀಮತಿ ಕೆ. ರಂಗಮ್ಮ, ಬಿ.ಎ. (೪) "ಶಿಶು ಸಾಹಿತ್ಯ"— ಶ್ರೀ॥ ಬಿ. ಎನ್. ರಂಗಸ್ವಾಮಿ, (೫) "ಮೈಸೂರು ವಿದ್ಯಾಸಂಸ್ಥೆಯ ಬೆಳವಣಿಗೆ"— ಶ್ರೀ॥ ಎಸ್. ಕಾಳಪ್ಪ, ಎಂ.ಎ., ಬಿ.ಟಿ., (೬) "ಶಿಕ್ಷಣ ಪದ್ಧತಿಯಲ್ಲಿ ದೋಷಗಳು"— ಶ್ರೀ॥ ಬಿ. ರಾಮರಾವ್, ಎಂ.ಎ., (೭) "ಇಂಗ್ಲೆಂಡ್ ಸ್ಕೂಲುಗಳಲ್ಲಿ ನನ್ನ ಅನುಭವ"— ಶ್ರೀಮತಿ ಪೊನ್ನಯ್ಯ, ಬಿ.ಎ., (೮) "ಭಾರತ ವಾಚನ", "ದಾಸರ ಕೀರ್ತನೆಗಳು"—ಶ್ರೀ॥ ಸಂಪತ್ಕುಮಾರಾಚಾರ್ಯರು, ಬಿ.ಎ., ಬಿ.ಟಿ, ಸ್ಪರ್ಧೆಗಳು, ವಸ್ತುಪ್ರದರ್ಶನ, ಬಾಲಭಟ ಕಲಾಪಗಳು. ಅಧ್ಯಕ್ಷರುಗಳು: ಎರಡನೆಯ ದಿನ ಶ್ರೀ॥ ಜಿ. ಗಿರಿಮಾಜಿರಾವ್, ಎಂ.ಎಲ್.ಸಿ., ಮೂರನೆಯ ದಿನ ಶ್ರೀ॥ ಸಿ. ಆರ್. ಐಯಂಗಾರ್, ಬಿ. ಇ. (ಎಕ್ಸಿಕ್ಯೂಟಿವ್ ಎಂಜಿನಿಯರ್), ನಾಲ್ಕನೆಯ ದಿನ ಶ್ರೀಮತಿ ಎ. ಐ. ಗ್ರಿಫ್ಸನ್, ಬಹುಮಾನ ಹಂಚಿದವರು — ನಜಮ್ಮತ್‌ಉಜ್ಜಾಲ್ ಹಾಜಿ ಮುಸ್ತಫಾಸಾಹೇಬ್. ಉತ್ಸವ ಸಮಿತಿ — ಶ್ರೀ॥ ಜೆ. ಬಿ. ಮಲ್ಲಾರಾಧ್ಯ, ಎಂ. ಎ., ಮುಸ್ಲಿಂ ವಿದ್ವತ್ಸಭೆಯೊಂದು ನಡೆದುದು ಈ ಉತ್ಸವದ ವಿಶೇಷ.

**ವ್ಯಾಸಂಗಗೋಷ್ಠಿ :** ಕೋಲಾರ ಕರ್ನಾಟಕ ಸಂಘದ ಆಶ್ರಯದಲ್ಲಿ ತಾ॥ ೩೧ನೆಯ ಸಂಜೆ ಶ್ರೀ॥ ಟಿ. ಎನ್. ಮಲ್ಲಪ್ಪ, ಬಿ.ಎ., ಎಲ್‌ಎಲ್.ಬಿ. ಯವರ ಅಧ್ಯಕ್ಷತೆಯಲ್ಲಿ. ವಿಷಯ: ವಿದ್ವಾನ್ ಚಂದ್ರಶೇಖರಭಟ್ಟ ಪಾಟಂಕರ್ ಕೃತ ರಾಜಾಶೀರ್ವಾದ ಮಾಲಿಕೆ. ವ್ಯಾಖ್ಯಾತೃಗಳು: ಶ್ರೀ॥ ಜಿ. ಕೆ. ತಿಮ್ಮಣ್ಣಾಚಾರ್ಯ, ಎಂ.ಎ., ಬಿ.ಟಿ.

**ತುರುವೇಕೆರೆ: ಕರ್ನಾಟಕ ಸಂಘ**

ಈ ಸಂಘದ ಆಶ್ರಯದಲ್ಲಿ ಕಳೆದ ಗುರುವಾರ ಸಂಜೆ ತುರುವೇಕೆರೆ ಮಾಧ್ಯಮಿಕ ಪಾಠಶಾಲೆಯಲ್ಲಿ ಬಾಲಕರಿಗೋಸ್ಕರ ಕಂಠಪಾಠಸ್ಪರ್ಧೆಯು ಇಲ್ಲಿನ ಜನಾನುರಾಗಿಗಳೂ, ಕನ್ನಡ ಭಾಷಾಪ್ರೇಮಿಗಳೂ ಆದ ಶ್ರೀಮಾನ್ ಪಿ. ಎಸ್. ವೆಂಕಟರಾಯರ ಅಧ್ಯಕ್ಷತೆಯಲ್ಲಿ ಶಾಲೆಯ ಉಪಾಧ್ಯಾಯರ ಸಮ್ಮುಖದಲ್ಲಿ ಜರುಗಿತು. ಶ್ರೀ॥ ಕೆ. ವಿ. ಪುಟ್ಟಪ್ಪನವರ 'ಕುಮಾರವ್ಯಾಸ' 'ಪರಮಾತ್ಮನೆಲ್ಲಿಹನು?' 'ಶ್ರೀನಿವಾಸ'ರ 'ಕನ್ನಡ ನಾಡಿನ ಸ್ಥಿತಿ' ಶ್ರೀ॥ ಬೇಂದ್ರೆಯವರ 'ಕುಣಿಯೋಣು ಬಾ' ಇವುಗಳನ್ನು ಬಾಲಕರು ಹೃದಯಂಗಮವಾಗಿ ಪಠಿಸಿದರು. ಅಧ್ಯಕ್ಷರು ಬಾಲಕರ ಚತುರತೆಯನ್ನು ಕೊಂಡಾಡಿ ತಮ್ಮನ್ನು ಅಧ್ಯಕ್ಷರನ್ನಾಗಿ ಕರೆತಂದುದಕ್ಕೆ ಕೃತಜ್ಞತೆಯನ್ನು ವ್ಯಕ್ತಪಡಿಸಿ ಕನ್ನಡ ಮಾತೆಯ ಸೇವೆಯನ್ನು ಪ್ರತಿಯೊಬ್ಬರೂ ಮಾಡಬೇಕಾದ ಅವಶ್ಯಕತೆಯನ್ನು ಸ್ವಚ್ಛವಾದ ತಿಳಿಗನ್ನಡದಲ್ಲಿ ತಿಳಿಸಿ ಇಲ್ಲಿನ ಸಂಘ ಅಭಿವೃದ್ಧಿಹೊಂದಲೆಂದು ಹಾರೈಸಿದರು. ಕಾರ್ಯದರ್ಶಿಗಳ ವಂದನಾಸಮರ್ಪಣೆ ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯೊಂದಿಗೆ ಸಭೆ ಮುಗಿಯಿತು.

ಈ ಸಂಘದ ವಾರ್ಷಿಕೋತ್ಸವವನ್ನು ಮುಂದಿನ ತಿಂಗಳಿನಲ್ಲಿ ನಡಸಬೇಕೆಂದೂ ಅಗ್ಗೆ ಬೆಂಗಳೂರಿನಿಂದ ಹಿರಿಯ ಸಾಹಿತಿಗಳನ್ನು ಬರಮಾಡಿಕೊಳ್ಳಬೇಕೆಂದೂ ಏರ್ಪಾಡು ನಡೆಯುತ್ತಿದೆ.

**ಕೇರಳಾಪುರ: ಕರ್ನಾಟಕ ಸಂಘ ಸ್ಥಾಪನೆ**

ಅರಕಲಗೂಡು ತಾಲ್ಲೂಕು ಅಮಲ್ದಾರರಾದ ಶ್ರೀ॥ ಎಂ. ಪುಟ್ಟಯ್ಯನವರ ಅಧ್ಯಕ್ಷತೆಯಲ್ಲಿ ಕೇರಳಾಪುರದ ಮಹಾಜನಗಳು ಕಳೆದ ೧೪ನೆಯ ಭಾನುವಾರ ಸಭೆ ಸೇರಿ ಕರ್ನಾಟಕ ಸಂಘವನ್ನು ಸ್ಥಾಪಿಸಿದರು.

**ಅರಕಲಗೂಡು: ಕರ್ನಾಟಕ ಸಂಘ**

ಮೇಲ್ಕಂಡ ಸಂಘಕ್ಕೆ ಶ್ರೀ॥ ಪಾಳ್ಯಂ ಸೂರ್ಯನಾರಾಯಣಶೆಟ್ಟರು ಸಂಘದ ಪುಸ್ತಕಭಂಡಾರಕ್ಕಾಗಿ ೨೦೦ ರೂಪಾಯಿಗಳ ಉದಾರದಾನ ಮಾಡಿದ್ದಾರೆ.

**ಶಿವಮೊಗ್ಗ : ಹೈಸ್ಕೂಲು ಕರ್ನಾಟಕ ಸಂಘ**

ಸ್ಥಳೀಯ ಇಂಟರ್‌ಮೀಡಿಯೆಟ್ ಕಾಲೇಜಿನ ಅಧ್ಯಾಪಕರಾದ ಶ್ರೀ॥ ಎ. ಎನ್. ಮೂರ್ತಿರಾಯರು ಮೇಲ್ಕಂಡ ಸಂಘದ ನಾಲ್ಕನೆಯ ವರ್ಷದ ಪ್ರಾರಂಭಭಾಷಣವನ್ನು ಮಾಡಿದರು. 'ಸಮಾಜ–ನಾಟಕ' ಎಂಬ ವಿಷಯವನ್ನು ಕುರಿತು ಮಾತನಾಡುತ್ತ ಕಳೆದ ೨೦ ವರ್ಷಗಳಿಂದ ಕರ್ನಾಟಕದಲ್ಲಿ ನಾಟಕಗಳು ಯಾವ ರೂಪದಲ್ಲಿದ್ದವೆಂಬುದನ್ನೂ ಅವು ಏತಕ್ಕೆ ಜನಾದರಣೀಯವಾಗಲಿಲ್ಲವೆಂಬುದನ್ನೂ ತಿಳಿಸಿ, ನಾಟಕದ ಸ್ವರೂಪ ವಿವಿಧಕಲೆಗಳಿಂದ ಸಮ್ಮಿಳಿತವಾಗಿ ಬೆಳೆಯಬೇಕಾದರೆ ವಿಶೇಷವಾಗಿ ಗ್ರಂಥಕರ್ತನ ಪ್ರತಿಭೆಯೇ ಮೂಲಕಾರಣವೆಂದೂ, ಅದಕ್ಕೆ ಹಿನ್ನೆಲೆಯಾಗಿ ಲೋಕಾನುಭವ ಆವಶ್ಯಕವೆಂದೂ ತಿಳಿಸಿದರು.

**ಮಳವಳ್ಳಿ : ವಿಶ್ವವಿದ್ಯಾನಿಲಯದ ವಿಶೇಷೋಪನ್ಯಾಸ**

ಜುಲೈ ೨೭ನೆಯ ಶನಿವಾರ ಶ್ರೀ॥ ತೀ. ನಂ. ಶ್ರೀಕಂಠಯ್ಯನವರು ಮಳವಳ್ಳಿ ಹೈಸ್ಕೂಲಿನ ಸಭಾಮಂದಿರದಲ್ಲಿ 'ಜನ್ನನ ಯಶೋಧರ ಚರಿತೆ' ಎಂಬ ವಿಷಯವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡಿದರು.

**ಮುಂಬಯಿ : ಕನ್ನಡ ಸಂಘ**

ಕಳೆದ ೧೬ನೆಯ ಮಂಗಳವಾರ ಮೇಲ್ಕಂಡ ಸಂಘದ ಆಶ್ರಯದಲ್ಲಿ ಮೈಸೂರು ಸಂಘದ ಸಭಾಭವನದಲ್ಲಿ ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು 'ವಾಲ್ಮೀಕಿ ರಾಮಾಯಣ'ವನ್ನು ಕುರಿತು ಉಪನ್ಯಾಸ ಮಾಡಿದರು. ಶ್ರೀ॥ ಮಹಾಘುಲಿ ಆರ್. ಗೋಪಾಲಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು. ದಿವಾನ್‌ಬಹದ್ದೂರ್ ಕೆ. ರಾಮಸ್ವಾಮಿ ಮುಂತಾದ ಅನೇಕ ಗಣ್ಯ ಕನ್ನಡಿಗರು ಸಭೆಗೆ ಬಂದಿದ್ದರು.

**ಧಾರವಾಡದಲ್ಲಿ ಮಾಸ್ತಿಯವರು**

೨೧–೭–೧೯೪೦ನೆಯ ಭಾನುವಾರ ಬೆಳಗ್ಗೆ ೯॥ ಗಂಟೆಗೆ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಕರ್ನಾಟಕ ವಿದ್ಯಾವರ್ಧಕ ಸಂಘದ ಸಭಾಮಂದಿರದಲ್ಲಿ ಡಿಸೆಂಬರ್ ತಿಂಗಳಲ್ಲಿ ನಡೆಯಲಿರುವ ಕನ್ನಡ ಸಾಹಿತ್ಯ ಪರೀಕ್ಷೆಗಳ ಪಾಠಗಳನ್ನು ಪ್ರಾರಂಭಗೊಳಿಸಿದರು. ಸಂಘದ ಸಂಸ್ಥಾಪನೆಯ ೫೧ನೆಯ ವರ್ಷದ ದಿವಸದ ಸಮಾರಂಭದಲ್ಲೂ ಬೆಳಗಾಂವಿಯ ಕರ್ನಾಟಕ ಸಂಘದ ಬೆಳ್ಳಿಯ ಹಬ್ಬದ ಉತ್ಸವದಲ್ಲಿಯೂ ಮಾಸ್ತಿಯವರು ಮಾಡಿದ ಭಾಷಣಗಳಿಂದ ಧಾರವಾಡದ ಕನ್ನಡಿಗರು ಹುರುಪುಗೊಂಡಿದ್ದಾರೆ. ಮಾಸ್ತಿಯವರ ಭಾವನೆಗಳಿಂದ ಮೈಸೂರು, ಧಾರವಾಡ, ಮಂಗಳೂರು ಮುಂತಾದ ಪ್ರದೇಶಗಳ ಕನ್ನಡಿಗರೆಲ್ಲರೂ ಒಬ್ಬ ಕನ್ನಡ ತಾಯ ಮಕ್ಕಳೇ ಎಂಬ ಭಾವನೆ ಮೂಡಿ, ಆ ತಾಯ ಮುನ್ನಡೆಗಾಗಿ ತಾವೆಲ್ಲರೂ ಹೆಚ್ಚಿನ ಹುರುಪಿನಿಂದ ದುಡಿಯಬೇಕೆಂದು ಪ್ರೇರಿತರಾಗಿದ್ದಾರೆ.

**ಬಳ್ಳಾರಿ : ಕನ್ನಡ ನಾಟಕ**

ಬಳ್ಳಾರಿಯ ಶ್ರೀ॥ ಟಿ. ರಾಘವಾಚಾರಿಯವರೂ ಶ್ರೀ॥ ಜೋಳದ ರಾಶಿ ದೊಡ್ಡಣಗೌಡರೂ 'ಕನಕದಾಸ' ಎಂಬ ಕನ್ನಡ ನಾಟಕವನ್ನು ಬರೆದು ಸ್ಥಳೀಯ ರಂಗಭೂಮಿಯಲ್ಲಿ ಪ್ರದರ್ಶಿಸಿದರು. ಶ್ರೀ॥ ಟಿ. ರಾಘವಾಚಾರಿಯವರು ತಮ್ಮ ಮಿತ್ರರೊಂದಿಗೆ ಕನ್ನಡ ರಂಗಭೂಮಿಗೆ ಈ ಹೊಸ ಬಗೆಯ ಸೇವೆ ಸಲ್ಲಿಸಿದ್ದಕ್ಕಾಗಿ ಅಭಿನಂದನೀಯರು.




೧೦೨-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

# ಕರ್ನಾಟಕದ ಸ್ತ್ರೀಯರು

### ಮುಂಬಯಿ ಆಕಾಶವಾಣಿಯಲ್ಲಿ ೨೪-೭-೪೦ನೆಯ ದಿನ ಶ್ರೀಮತಿ ಶಕುಂತಲಾಬಾಯಿ ನಂದಾವರ ಅವರು ಮಾಡಿದ ಭಾಷಣ

ನನ್ನ ಅಕ್ಕರದ ಕನ್ನಡ ಸೋದರ ಸೋದರಿಯರೆ,

ಯಾವುದೇ ಒಂದು ಜನಾಂಗದ ಹಿರಿಮೆಯನ್ನು ತಿಳಿಯ ಬೇಕಾದರೆ ಅವರ ಸಮಾಜದಲ್ಲಿ ಸ್ತ್ರೀಯರಿಗಿರುವ ಸ್ಥಾನದಿಂದ ತಿಳಿಯ ಬಹುದು. ಯಾವ ಜನರಲ್ಲಿ ಸ್ತ್ರೀಯರು ಹಿಂದುಳಿದಿರುವರೊ ಆ ಜನಾಂಗವು ಇನ್ನೂ ಹಿಂದೆಯೇ ಉಳಿದಿರುವುದು. ಯಾವ ಸಮಾಜ ದಲ್ಲಿ ಸ್ತ್ರೀಯರು ಮುಂದುವರಿದಿರುವರೋ ಅವರ ರಾಷ್ಟ್ರವೂ ಮುಂದುವರಿ ದಿರುವುದು. ಆದುದರಿಂದ ಸ್ತ್ರೀಯರೇ ರಾಷ್ಟ್ರನಿರ್ಮಾಣಕರು; ರಾಷ್ಟ್ರ ಪೋಷಕರು.

ನಮ್ಮ ಕರ್ನಾಟಕವೆಂದರೆ ಸಾಧಾರಣ ದೇಶವಲ್ಲ. ಇಲ್ಲಿ ಅನೇಕ ವರ್ಷಗಳಿಂದಲೂ ಖಡ್ಗವನ್ನು ಹಿಡಿದು ಪರಾಕ್ರಮದಿಂದ ಕಾದಾಡಿದ ವೀರಾಂಗನೆಯರೂ, ಜನರ ಹಿತಾಹಿತಗಳನ್ನರಿತು ಅರಸುತನವನ್ನು ಹೊತ್ತ ನಾರೀಮಣಿಯರೂ, ಸಂಗೀತ ನೃತ್ಯಾದಿ ಕಲೆಗಳಲ್ಲಿ ಅತಿ ಉಚ್ಚವಾದ ಸ್ಥಾನವನ್ನು ಪಡೆದಿದ್ದ ಮಹಿಳೆಯರೂ ಹುಟ್ಟಿರುವರು. ಅದ್ವಿತೀಯವಾದ ಪಾಂಡಿತ್ಯವನ್ನು ಪಡೆದ ಕರ್ನಾಟಕದ ಹೆಂಗಳೆಯರು ತಮ್ಮ ವಿದ್ಯೆಯಿಂದ ಮಹಾಪಂಡಿತರನ್ನು ಸಹ ಬೆರಗುಗೊಳಿಸಿರುವರು. ಕೆಲವರು ಪಾತಿವ್ರತ್ಯದ ಮೂರ್ತಿಗಳಾಗಿ ತಮ್ಮ ಏಕಾಗ್ರತೆಯಿಂದಲೂ ಅಚಲವಾದ ಶ್ರದ್ಧೆಯಿಂದಲೂ ತಮ್ಮ ಹೆಚ್ಚಳವನ್ನು ಬೀರಿರುವರು.

ಬೆಳಗಾಂವಿ ಜಿಲ್ಲೆಯಲ್ಲಿರುವ ಕಿತ್ತೂರಿನ ದೇಸಾಯಿತಿಯಾಗಿದ್ದ ಚನ್ನಮ್ಮನು ತನಗೆ ಮಕ್ಕಳಿಲ್ಲದುದರಿಂದ ತಾನೇ ಆಡಳಿತದ ಸೂತ್ರ ಗಳನ್ನು ಕೈಯಲ್ಲಿ ಹಿಡಿದು ತನ್ನ ದೇಶಕ್ಕೋಸ್ಕರ ಅಗಾಧವಾದ ಧೈರ್ಯದಿಂದ ಹೋರಾಡಿದಳು. ಈಕೆಯಂತೆಯೇ ಬೆಳವಡಿಯ ದೇಸಾಯಿತಿಯಾಗಿದ್ದ ಮಲ್ಲಮ್ಮನು ಶಿವಾಜಿಯಂತಹ ವೀರನನ್ನು ಪರಾಜಯಗೊಳಿಸಿದ್ದಳು. ಮೈಸೂರಿನ ಸದ್ಯದ ಅರಸರಾಗಿರುವ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರ ಮಾತೃಶ್ರೀಯವರು ಮೈಸೂರು ಸಂಸ್ಥಾನವನ್ನು ಅತಿ ದಕ್ಷತೆಯಿಂದ ಆಳಿದರು. ಇವರ ರಾಜಕುಶಲತೆ ಯನ್ನು ಮೆಚ್ಚಿ ಚಕ್ರವರ್ತಿ ಸಾರ್ವಭೌಮರು ಇವರಿಗೆ ಜಿ.ಸಿ.ಎಸ್.ಐ. ಎಂಬ ಪದವಿಯನ್ನು ದಯಪಾಲಿಸಿದ್ದರು.

ನಮ್ಮಲ್ಲಿ ಮೊದಲಿನಿಂದಲೂ ವಿದ್ಯಾಪೀಠದಲ್ಲಿ ಪ್ರಥಮ ಸ್ಥಾನ ವನ್ನು ಸ್ತ್ರೀಯರಿಗೆ ಕೊಟ್ಟಿರುವರು. ಬ್ರಹ್ಮನ ರಾಣಿಯಾದ ಸರಸ್ವತಿ ಯನ್ನು ವಿದ್ಯಾಧಿದೇವತೆಯೆಂದು ಪೂಜಿಸುತ್ತ ಬಂದಿರುವರು. ಶಂಕರಾ ಚಾರ್ಯರಂತಹ ಪ್ರಚಂಡ ಪ್ರಜ್ಞಾಶಾಲಿಗಳು ಒಮ್ಮೆ ಮಂಡನಮಿಶ್ರ ರೆಂಬ ಪಂಡಿತಾಗ್ರೇಸರರೊಡನೆ ವಾದ ಮಾಡಿದರು. ಆಗ ಮಂಡನ ಮಿಶ್ರರ ಪತ್ನಿಯಾದ ಉಭಯಭಾರತಿ ಅಧ್ಯಕ್ಷ ಪದವಿಯನ್ನಲಂಕರಿಸಿ ದ್ದಳು. ಆಕೆ ಶಂಕರರ ಮತ ಪ್ರಸಾರವನ್ನೂ ಮಾಡಿದಳು. ಆದುದ ರಿಂದಲೇ ಶಂಕರಾಚಾರ್ಯರು ಸ್ಥಾಪಿಸಿದ ಮಠಗಳಲ್ಲಿ ಈಕೆಯ ದೈವೀ ಸ್ವರೂಪವನ್ನು ಪೂಜಿಸುತ್ತ ಬಂದಿರುವರು.

ಹೊಯ್ಸಳ ಅರಸರಲ್ಲಿ ಅತಿ ಖ್ಯಾತಿವಂತನಾಗಿದ್ದ ವಿಷ್ಣುವರ್ಧನನ ಆಸ್ಥಾನದಲ್ಲಿ ಅಭಿನವ ಪಂಪನೆಂಬ ಕವಿಯಿದ್ದನು. ಅದೇ ಕಾಲದಲ್ಲಿ ಕಂತಿಯೆಂಬ ಕವಿಯಿತ್ರಿಯೂ ಇದ್ದಳು. ಕಂತಿಯ ಕವಿತಾಸಾಮರ್ಥ್ಯ ವನ್ನು ನೋಡಿ ಪಂಪನು ಸಹ ಅಚ್ಚರಿಗೊಳ್ಳುತ್ತಿದ್ದನು. ಜಗದ್ವಿಖ್ಯಾತ ರಾದ ಭಾಸ್ಕರಾಚಾರ್ಯರ ಮಗಳಾದ ಲೀಲಾವತಿಯು ಅಂಕಗಣಿತ, ರೇಖಾಗಣಿತ, ಬೀಜಗಣಿತ ಮುಂತಾದ ಗ್ರಂಥಗಳನ್ನು ರಚಿಸಿರುವಳು.

ಮೈಸೂರು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಸಂಚಿಯ ಹೊನ್ನಮ್ಮನೆಂಬಾಕೆಯು 'ಹದಿಬದೆಯ ಧರ್ಮ' ಎಂಬ ಕಾವ್ಯವನ್ನು ರಚಿಸಿರುವಳು. ನಮ್ಮ ದೇಶದಲ್ಲಿ ಮಹಾದೇವಿಯಕ್ಕನು ಕರ್ನಾಟಕದ ಸ್ತ್ರೀಯರ ಆತ್ಮಾರ್ಪಣೆಯ ಘನತೆಯನ್ನು ಬೀರಿದ ರತ್ನ.

ಈಕೆಯಂತೆಯೇ ಗಿರಿಯಮ್ಮನೆಂಬಾಕೆಯು ತನ್ನ ಭಕ್ತಿಯ ತಪಶ್ಚರ್ಯೆಯಿಂದ ಅನೇಕ ಕಾವ್ಯಗಳನ್ನು ರಚಿಸಿ ಅತಿ ಮಧುರವಾಗಿ ಹಾಡುತ್ತಿದ್ದಳು. ಕರ್ನಾಟಕವು ಸಂಗೀತ ಸಾಹಿತ್ಯಾದಿ ಕಲೆಗಳಿಗೆ ತವರೂರಾಗಿತ್ತು. ಔರಂಗಜೇಬನ ದರ್ಬಾರಿನಲ್ಲಿ ಕರ್ನಾಟಕದ ಇಬ್ಬರು ಗಾಯಕಿಯರಿದ್ದರಂತೆ. ನಮ್ಮ ಅರಸರೂ ಅರಸಿಯರೂ ಸ್ವತಃ ಕಲೋಪಾಸಕರಾಗಿರುತ್ತಿದ್ದರು. ವಿದ್ಯಾಪಕ್ಷಪಾತಿನಿಯರಾದ ಕೆಲವರು ಕನ್ನಡ ಅರಸಿಯರು ವಿದ್ಯಾಪೀಠಗಳನ್ನು ಸ್ಥಾಪಿಸಿ ವಿದ್ಯೆಗೆ ಉತ್ತೇಜನ ಕೊಟ್ಟಿರುವರು.

ಹಿಂದಿನ ಕಾಲದಲ್ಲಿ ಸ್ತ್ರೀಯರಿಗೆ ಸಾಂಸ್ಕೃತಿಕ ಶಿಕ್ಷಣವು ಪುರಾಣ, ಹರಿಕಥೆ, ಬಯಲಾಟ, ಭಾರತ ಪಠನ, ಭಾಗವತದ ಆಟ, ದಾಸರ ಪದಗಳು, ಶರಣರ ವಚನಗಳು ಮುಂತಾದುವುಗಳ ಮೂಲಕ ಸಿಗುತ್ತಿತ್ತು. ಗೌರೀ ಹೂವಿನ್ಯ, ದಸರೆಯ ಹಬ್ಬ ಮೊದಲಾದುವು ಇವರ ಕಲಾಪ್ರದರ್ಶನಕ್ಕೆ ಅವಕಾಶವನ್ನು ಕಲ್ಪಿಸುತ್ತಿದ್ದವು. ಇಂದಿಗೂ ನೋಡಲು ಸಿಗುವ ಇಂಪಾದ ಗಾಯನದಿಂದ ಕೂಡಿದ ಉಯ್ಯಾಲೆ ಆಟ, ಕೋಲಾಟ ಇತ್ಯಾದಿಗಳಿಂದ ನಮ್ಮ ಸ್ತ್ರೀಯರ ಪೂರ್ವಕಾಲದ ಜೀವನ ಎಷ್ಟು ಕಲಾಮಯವಾಗಿತ್ತೆಂದು ತಿಳಿದುಬರುವದು. ಪೂರ್ವದಲ್ಲಿ ಧಾರ್ಮಿಕ ರೂಪದಿಂದ ಸಾಮಾಜಿಕ ಕಟ್ಟು ಕಟ್ಟಳೆಗಳ ಹಿಡಿತವು ಹೆಂಗಸರ ಮೇಲೆ ಬಹಳ ಬಿಗಿಯಾಗಿತ್ತು. ಸೀತಾ, ದಮಯಂತಿ, ದ್ರೌಪದಿ, ಸಾವಿತ್ರಿ ಮೊದಲಾದವರು ಅವರ ಆದರ್ಶರಾಗಿದ್ದರು. ಆ ಕಾಲದ ಸಂಪ್ರದಾಯಗಳಿಗೆ ಪೋಷಕವಾದಂಥ ಸಾಂಸ್ಕೃತಿಕ ಶಿಕ್ಷಣವು ಸಿಗುತ್ತಿದ್ದದರಿಂದ ಆಗಿನ ಸ್ತ್ರೀ ಜೀವನವು ಅಷ್ಟು ತೊಡಕಿನದಾಗಿರಲಿಲ್ಲ.

ಆದರೆ ಸದ್ಯದಲ್ಲಿ ಪ್ರಪಂಚದ ಘಟನೆಗಳು ವಿದ್ಯುದ್ವೇಗದಿಂದ ಬದಲಾಗುತ್ತಿರುವುವು. ನಮ್ಮ ಹೆಣ್ಣು ಮಕ್ಕಳಲ್ಲಿದ್ದ ಹಿಂದಿನ ಸಂಸ್ಕೃತಿಯು ಹೋಗುತ್ತಿದೆ. ಹೊಸ ಸಂಸ್ಕೃತಿಯು ಇನ್ನೂ ಪೂರ್ಣ ವಾಗಿ ಬಂದಿಲ್ಲ. ಹೀಗಾಗಿ ಸ್ತ್ರೀ ಜೀವನದಲ್ಲಿರಬೇಕಾದ ತೇಜಸ್ಸು ಇಲ್ಲವಾಗಿದೆ.

ಇದಲ್ಲದೆ ಬಾಲ್ಯ ವಿವಾಹ, ಬಾಲ್ಯ ಮಾತೃತ್ವ ಈ ಪದ್ಧತಿಗಳು ಇನ್ನೂ ಪ್ರಚಲಿತವಿರುವುದರಿಂದಲೂ ತಮ್ಮ ಆರೋಗ್ಯವನ್ನು ಹೇಗೆ ಕಾಯ್ದುಕೊಳ್ಳಬೇಕೆಂಬ ಬಗ್ಗೆ ಸಾಕಷ್ಟು ತಿಳಿವಳಿಕೆ ಇಲ್ಲದಿರುವು ದರಿಂದಲೂ, ಯಾವ ದೇಶದಲ್ಲಿ ಮಹಿಳೆಯರು ಖಡ್ಗ ಹಿಡಿದು ಯುದ್ಧ ಮಾಡಿರುವರೋ ಅಂಥ ವೀರ ಕರ್ನಾಟಕದಲ್ಲಿ ಇಂದು ಬಲಹೀನರೂ ಆರೋಗ್ಯವಿಲ್ಲದವರೂ ನಿರುತ್ಸಾಹಿಗಳೂ ಆದ ಹೆಂಗಸರೇ ಹೆಚ್ಚಾಗಿ ಕಾಣಿಸುವರು.

ನನ್ನ ಸೋದರಿಯರಲ್ಲಿ ನಾನು ಬಿನ್ನವಿಸಿಕೊಳ್ಳುವದಿಷ್ಟೆ. ನಮ್ಮ ದೇಶದ ಭವಿತವ್ಯವು ನಿಮ್ಮ ಕೈಯಲ್ಲಿಯೇ ಇದೆ. ನೀವು ಪಡೆಯುವ ಶಿಕ್ಷಣವು ನಿಮ್ಮ ಸಂಸ್ಕೃತಿಗೂ ನಿಮ್ಮ ನಾಡನ್ನು ಪುನರುಜ್ಜೀವನ ಗೊಳಿಸುವ ಕರ್ತವ್ಯ ಪರಿಪಾಲನೆಗೂ ಮೆರುಗು ಕೊಟ್ಟಂತಿರಬೇಕೇ ಹೊರತು ನಮ್ಮ ಕರ್ತವ್ಯಕ್ಕೆ ಹಾನಿ ತರುವಂತಿರಬಾರದು. ಆದುದರಿಂದ ನಮ್ಮ ಕನ್ನಡ ಸಾಹಿತ್ಯವನ್ನು ಓದಿರಿ. ನಮ್ಮ ದೇಶದಲ್ಲಿ ಹೆಸರಾಗಿ ಹೋಗಿರುವಂಥ ಸ್ತ್ರೀ ರತ್ನಗಳ ಚರಿತ್ರೆಗಳನ್ನು ಓದಿರಿ. ಅವರ ಆದರ್ಶಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಿರಿ.

ಈ ಸ್ವಾತಂತ್ರ್ಯದ ಯುಗದಲ್ಲಿ ಹೆಂಗಸರು ತಮ್ಮ ಮೇಲೆ ಇರುವ ಹೆಚ್ಚಿನ ಹೊಣೆಗಾರಿಕೆಯನ್ನು ಯೋಗ್ಯ ರೀತಿಯಿಂದ ನೀಗಬೇಕಾದಲ್ಲಿ ಹೆಂಗಸರಲ್ಲಿರುವ ನಿರಕ್ಷರತೆಯು ಹೋಗಬೇಕು.

ರಾಜಕೀಯ ರಂಗದಲ್ಲಿಯಾಗಲಿ ಸಾಮಾಜಿಕ ರಂಗದಲ್ಲಿಯಾಗಲಿ ಗಂಡಸರಷ್ಟೇ ಹೆಂಗಸರೂ ದುಡಿಯಲು ಯೋಗ್ಯರಿರುವರು. ನಾಡಿನ ಸಾಮಾಜಿಕ ವ್ಯವಸ್ಥೆಯಲ್ಲಿಯೂ ರಾಜಕೀಯ ಶಾಸನ ಸಭೆಗಳಲ್ಲಿಯೂ ಸ್ತ್ರೀಯರ ಸಲಹೆಗಳು ಅತ್ಯವಶ್ಯಕವಾದದ್ದಿರುತ್ತವೆ. ಕನ್ನಡ ನಾಡಿನ ಬಾಳು ಅರಳಬೇಕಾದರೆ ಕನ್ನಡಿತಿಯರ ಬಾಳು ಅರಳಬೇಕು. ಜಪಾನ ದೇಶದ ಜನರು ತಮ್ಮ ಮಹಿಳೆಯರನ್ನು ಯೋಗ್ಯ ರೀತಿಯಿಂದ ತರಬೇತು ಮಾಡಿದುದರಿಂದಲೇ ಅವರ ದೇಶವು ಇಷ್ಟುಬೇಗನೆ ಮುಂದೆ ಬಂದಿತು. ಪ್ರತಿಯೊಬ್ಬ ಮಗಳಿಗೂ ಅವಶ್ಯವಾಗಿ ವಿದ್ಯೆ ಕಲಿಸಬೇಕು. ನಾಡ ಸೇವೆಯಲ್ಲಿ ತಮ್ಮ ಪಾಲಿನ ಕೆಲಸವೇನು, ಅದರ ಮಹತ್ವವೇನೆಂಬುದನ್ನು ಅವರಿಗೆ ತಿಳಿಸಬೇಕು. ನಮ್ಮ ದೇಶದಲ್ಲಿಯೂ ಜಗತ್ತಿನಲ್ಲಿಯೂ ಆಗುತ್ತಿರುವ ಘಟನೆಗಳನ್ನು ತಿಳಿಸಬೇಕು. ಸಾರ್ವಜನಿಕ

# ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

## ಸುವರ್ಣ ಮಹೋತ್ಸವ

**ಸ್ಥಾಪನೆ:** ಅನೇಕ ರಾಜ್ಯ–ಸಾಮ್ರಾಜ್ಯಗಳನ್ನು ಕಟ್ಟಿ ವೈಭವಶಾಲಿಯಾದ, ಪ್ರಾಚೀನ ಇತಿಹಾಸ, ಸಾಹಿತ್ಯ ಸಂಪತ್ತಿನಿಂದ ಬೆಳೆದು ಬಾಳಿದ ಕನ್ನಡನುಡಿಗೆ, ತನ್ನ ನಾಡಿನಲ್ಲಿಯೆ ದೆಸೆಗೇಡಿಯಾಗುವ ಕಾಲ ಬಂದೊದಗಿದ್ದಿತು. ಇಂತಹ ಸಮಯದಲ್ಲಿ ಕರ್ನಾಟಕದ ಶುಭಭವಿಷ್ಯವನ್ನು ಚಿಂತಿಸುವ ಕನ್ನಡದ ಅಭಿಮಾನಿಗಳು ಕೆಲವರು ಸೇರಿ ಕ್ರಿ. ಶ. ೧೮೯೦ರಲ್ಲಿ ಧಾರವಾಡದಲ್ಲಿ ಈ ಸಂಸ್ಥೆಯನ್ನು ಪ್ರಾರಂಭಿಸಿದರು. ಅಂದಿನಿಂದ ಇಂದಿನ ವರೆಗೆ ಕನ್ನಡ ಸಂಸ್ಕೃತಿಯ ಕಾರ್ಯವನ್ನು ಈ ಸಂಘವು ಅಖಂಡವಾಗಿ ಮಾಡುತ್ತ ಬಂದಿದೆ.

**ಇದುವರೆಗಿನ ಕಾರ್ಯ :** ಕೇವಲ ಉತ್ತರಕರ್ನಾಟಕದ ಕೆಲವು ಜನ ಸೇರಿ ಸಂಘವನ್ನು ಪ್ರಾರಂಭಿಸಿದ್ದರೂ ಮೈಸೂರು ಕನ್ನಡದ ಸಂಬಂಧವನ್ನು ತಂದುಕೊಳ್ಳಬೇಕೆಂಬ ಉದ್ದೇಶದಿಂದ, ಪರೀಕ್ಷೆ–ಸ್ಪರ್ಧೆಗಳಿಗಾಗಿ ಮೈಸೂರಿನಿಂದ ಕನ್ನಡ ಪಂಡಿತರನ್ನು ಕರೆಯಿಸಿಕೊಳ್ಳುವ ಏರ್ಪಾಡನ್ನು ಮಾಡಿತು. ೧೮೯೬ರಲ್ಲಿ '**ವಾಗ್ಭೂಷಣ**' ಮಾಸಪತ್ರಿಕೆಯನ್ನು ಹೊರಡಿಸಿ, ತನ್ನ ಕಾರ್ಯದ ವ್ಯಾಪ್ತಿಯನ್ನು ಇನ್ನೂ ಹೆಚ್ಚಿಸಿತು. ಅಂದಿನಿಂದ ೧೯೩೧ನೆಯ ಇಸ್ವಿಯ ವರೆಗೆ 'ವಾಗ್ಭೂಷಣ' ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿತು. ಈ ಪತ್ರಿಕಾಪ್ರಕಟನೆಯ ಜೊತೆಗೆ ಗ್ರಂಥಪ್ರಕಟನೆಯ ಕಾರ್ಯವನ್ನೂ ಕೈಕೊಂಡು, ಅಖಿಲಕರ್ನಾಟಕದ ಬೇರೆ ಬೇರೆ ಲೇಖಕರು ಬರೆದ ಸುಮಾರು ೯೭ ಗ್ರಂಥಗಳನ್ನು ಸಂಘವು ಬೆಳಕಿಗೆ ತಂದಿತು.

ಕನ್ನಡಿಗರಿಗೆ ಅವರ ಭಾಷೆಯ ಮತ್ತು ಸಾಹಿತ್ಯದ ನಿಕಟಪರಿಚಯವುಂಟಾಗುವಂತೆಯೂ, ಅದರ ಮೂಲಕ ಅವರಲ್ಲಿ ತಾಯ್ನುಡಿಯ ಪ್ರೀತಿ ಬೆಳೆಯುವಂತೆಯೂ, ಪ್ರತಿವರುಷವೂ ಸಂಘವು ಕನ್ನಡ ಪರೀಕ್ಷೆ, ಲೇಖನ–ಭಾಷಣ ಸ್ಪರ್ಧೆ, ಕನ್ನಡ ಸಾಹಿತ್ಯ–ಸಂಸ್ಕೃತಿಗಳ ವಿಷಯಕವಾದ ವಿದ್ವಜ್ಜನರ ಉಪನ್ಯಾಸಗಳನ್ನು ಏರ್ಪಡಿಸುವದು, ಕನ್ನಡ ಗ್ರಂಥಕರ್ತರಿಗೆ ಬಹುಮಾನ–ಪ್ರೋತ್ಸಾಹನಗಳನ್ನು ಸಲ್ಲಿಸುವುದು ಇವೇ ಮೊದಲಾದ ಕಾರ್ಯಗಳನ್ನು ಕೈಕೊಂಡಿತು.

ಗ್ರಂಥಕರ್ತರಿಗೆ ಬಹುಮಾನ–ಪ್ರೋತ್ಸಾಹನಧನವೆಂದು ಇದುವರೆಗೆ ೧೪,೭೯೦ ರೂಪಾಯಿಗಳನ್ನು ಸಂಘವು ಹಂಚಿರುವುದು. ಬಹುಮಾನ ಪಡೆದ ಗ್ರಂಥಕರ್ತರ ಸಂಖ್ಯೆ ೨೦೦ನ್ನು ಮೀರಬಹುದು; ಗ್ರಂಥಗಳ ಸಂಖ್ಯೆ ೪೦೦ಕ್ಕಿಂತ ಹೆಚ್ಚಾಗಬಹುದು. ಸಂಘವು ವಾಚನಾಲಯ ಪುಸ್ತಕಭಂಡಾರಗಳನ್ನೂ ಸುವ್ಯವಸ್ಥಿತವಾಗಿ ನಡೆಯಿಸಿಕೊಂಡು ಬಂದಿದೆ. ಉತ್ತರ ಕರ್ನಾಟಕದಲ್ಲಿಯ ಸುಪ್ರಸಿದ್ಧ ಸಾಹಿತಿಗಳನೇಕರು ಈ ಪುಸ್ತಕ ಭಂಡಾರದ ಸಹಾಯವನ್ನು ಪಡೆದಿದ್ದಾರೆ; ಪಡೆಯುತ್ತಲೂ ಇದ್ದಾರೆ.

ಕಳೆದ ೨೦ ವರ್ಷಗಳಿಂದಲೂ ಧಾರವಾಡದಲ್ಲಿ ನಡೆದುಕೊಂಡು ಬಂದಿರುವ ಶ್ರೀಶಾಂತೇಶ ವಾಚನಾಲಯವು ಕಾರ್ಯೌಚಿತ್ಯವನ್ನರಿತು ಸಂಘದೊಂದಿಗೆ ಸಮರಸವಾಗಿ ಸಂಘದ ಬಲವನ್ನು ಬೆಳೆಯಿಸಿರುವುದು. ತಜ್ಞರ ಉಪನ್ಯಾಸ–ಪ್ರವಚನಗಳು ಎಂದಿನಂತೆ ಕಾಲಕಾಲಕ್ಕೆ ನಡೆಯುತ್ತಲಿವೆ. ಸಂಘದ ಕಾರ್ಯಕಲಾಪಗಳು ಕಾಲಕಾಲಕ್ಕೆ ಕನ್ನಡಿಗರಿಗೆ ಗೊತ್ತಾಗುವಂತೆ-ಕೆಲವು ದಿನಗಳಿಂದ ನಿಂತಹೋಗಿದ್ದ-'**ವಾಗ್ಭೂಷಣ**' ಮಾಸಪತ್ರಿಕೆಯನ್ನು ಮರಳಿ ಪ್ರಾರಂಭಿಸಲಾಗಿದೆ. ಸಾಹಿತ್ಯಪರಿಷತ್ತಿನ ಉತ್ತರ ಕರ್ನಾಟಕ ಪ್ರಾಂತಸಮಿತಿಯ ಕಾರ್ಯದಲ್ಲಿಯೂ ಇದು ಸಂಪೂರ್ಣ ಸಹಕಾರಿಯಾಗಿರುವುದಲ್ಲದೆ, ಸಂಘದ ಹಲವು ಜನ ಹಿತಚಿಂತಕರಿಂದಲೆ ಸಾಹಿತ್ಯಪರೀಕ್ಷೆಯ ಪಾಠಗಳು ಸಂಘದ ಅಟ್ಟದ ಮೇಲೆ ನಡೆಯುತ್ತಲಿವೆ. ಒಂದು ಮಾತಿನಲ್ಲಿ ಹೇಳಬೇಕೆಂದರೆ, ಕನ್ನಡ ನುಡಿಯ ಮತ್ತು ನಾಡಿನ ಏಳಿಗೆಗಾಗಿ ಹೆಣಗುವ ಯಾವ ವ್ಯಕ್ತಿಯೆ ಇರಲಿ, ಸಂಸ್ಥೆಯೆ ಇರಲಿ, ಸಂಘವು ಅವರೊಂದಿಗೆ ಸಹಕಾರಬುದ್ಧಿಯಿಂದಲೂ ವಿಶ್ವಾಸದಿಂದಲೂ ಇದುವರೆಗೂ ನಡೆದುಕ್ಕೊಂಡು ಬ್ಬಂದಿದೆ ಮುಂದೆಯೂ ನಡೆದುಕೊಂಡುಬರುವುದು.

**ಸಂಘದ ಸುವರ್ಣಮಹೋತ್ಸವ:** ಸಂಘವು ಸಂಸ್ಥಾಪಿತವಾಗಿ ಈ ವರ್ಷಕ್ಕೆ ೫೦ ವರ್ಷಗಳು ಮುಗಿಯುವುದರಿಂದ, ಬರಲಿರುವ ಡಿಸೆಂಬರ್ (೧೯೪೦) ತಿಂಗಳ ಕೊನೆಯ ವಾರದಲ್ಲಿ ಸಂಘದ ಸುವರ್ಣ ಮಹೋತ್ಸವವನ್ನು ಜರುಗಿಸಬೇಕೆಂದು ನಿರ್ಣಯಿಸಲಾಗಿದೆ. ಸಂಘಕ್ಕೆ ಹೊಸ ಜೀವಕಳೆಯನ್ನೂ ಹೆಚ್ಚಿನ ಕರ್ತೃತ್ವಶಕ್ತಿಯನ್ನೂ ತಂದು ಕೊಟ್ಟು, ಅದರ ಕಾರ್ಯದ ವ್ಯಾಪ್ತಿಯನ್ನು ಹೆಚ್ಚಿಸಬೇಕೆಂಬುದೆ ಸುವರ್ಣಮಹೋತ್ಸವದ ಪ್ರಧಾನೋದ್ದೇಶ. ಇದಾಗಬೇಕಾದರೆ ಕನ್ನಡ ಜನತೆ ಸಂಘದ ಮೇಲೆ ಸುವರ್ಣ ವೃಷ್ಟಿಯನ್ನು ಕರೆಯಬೇಕು.

ಸುವರ್ಣ ಮಹೋತ್ಸವದ ಪ್ರಕಟನೆಗಳೆಂದು ವಿದ್ವಜ್ಜನರಿಂದ ಬರೆಯಲ್ಪಟ್ಟ ಆರು ಗ್ರಂಥಗಳು ಈಗಾಗಲೆ ಪ್ರಕಟವಾಗಿವೆ. 'ಕ. ವಿ. ವ. ಸಂಘದ ಚರಿತ್ರೆ' 'ಉತ್ತರ ಕರ್ನಾಟಕದ ಜನಜೀವನ ಚರಿತ್ರೆ' ಎಂಬೆರಡು ಗ್ರಂಥಗಳನ್ನು ಬರೆಯಿಸಿ, ಸುವರ್ಣಮಹೋತ್ಸವದ ಸಮಯದಲ್ಲಿ ಪ್ರಸಿದ್ಧಪಡಿಸಬೇಕೆಂಬ ಯೋಜನೆಯೂ ಇದೆ.

೧೯೪೦ನೆಯ ಇಸ್ವಿಯ ಡಿಸೆಂಬರ್ ತಾ. ೨೫, ೨೬, ೨೭ ಈ ಮೂರು ದಿನ ಸುವರ್ಣ ಮಹೋತ್ಸವದ ಕಾರ್ಯಕಲಾಪಗಳು ನಡೆಯಲಿರುವುವು. ಆ ಸಮಯದಲ್ಲಿಯೇ ೨೫ನೆಯ ಕನ್ನಡ ಸಾಹಿತ್ಯಸಮ್ಮೇಳನವೂ ನಡೆಯುವುದು. ಇಷ್ಟಲ್ಲದೆ ಗ್ರಂಥಪ್ರದರ್ಶನ, ಪತ್ರಿಕಾ ಪ್ರದರ್ಶನ, ಐತಿಹಾಸಿಕ ವಸ್ತುಪ್ರದರ್ಶನ, ಜಾನಪದ ಸಾಹಿತ್ಯದ ವಿವಿಧಾಂಗಗಳ ಪ್ರದರ್ಶನ ಮೊದಲಾದುವುಗಳನ್ನೂ ಏರ್ಪಡಿಸಲಾಗುವುದು.

### ಸಂಘಕ್ಕೆ ಸಹಾಯಮಾಡುವ ವಿಧಾನಗಳು

ಸ್ವಾಗತ ಸದಸ್ಯರು : ೧ನೆಯ ವರ್ಗದವರು ೧೦–೦–೦ ; ೨ನೆಯ ವರ್ಗದವರು ೫–೦–೦ ;

ಇವರಿಗೆ ಸಂಘದ ಸುವರ್ಣಮಹೋತ್ಸವದ ಕಾರ್ಯಕ್ರಮಕ್ಕೂ ಸಾಹಿತ್ಯ ಸಮ್ಮೇಳನಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಕ್ರಮಗಳಿಗೂ ಉಚಿತ ಪ್ರವೇಶದ ಅಧಿಕಾರವುಂಟು.

ಆಜೀವ ಸದಸ್ಯರು : ೧ನೆಯ ವರ್ಗದವರು ೫೦–೦–೦ ೨ನೆಯ ವರ್ಗದವರು ೨೫–೦–೦ ;

ಸಂಘದ ಈ ಮೊದಲಿನ ಆಜೀವ ಸದಸ್ಯರಿಗಿರುವ ಎಲ್ಲ ಅಧಿಕಾರಗಳೂ ಇವರಿಗಿರುವುವು. ಸುವರ್ಣಮಹೋತ್ಸವದ ಪ್ರತಿಯೊಂದು ಕಾರ್ಯಕಲಾಪಕ್ಕೂ ಇವರಿಗೆ ಉಚಿತ ಪ್ರವೇಶವಿರುವುದು.

ಪ್ರದಾತೃಗಳು : ೧೦೦ಕ್ಕಿಂತ ಹೆಚ್ಚು ರೂಪಾಯಿ ಕೊಡುವವರು.

ಇವರನ್ನು ಸುವರ್ಣ ಮಹೋತ್ಸವ ಕಾಲದಲ್ಲಿ ಆಮಂತ್ರಿತ ಸದಸ್ಯರೆಂದು ಪರಿಗಣಿಸಲಾಗುವುದಲ್ಲದೆ ಸಂಘದ ಕಟ್ಟಡದಲ್ಲಿ ಇವರ ಹೆಸರನ್ನು ಶಾಶ್ವತವಾಗಿ ಉಳಿಯುವಂತೆ ಬರೆಯಿಸುವ ಏರ್ಪಾಡನ್ನು ಮಾಡಲಾಗುವುದು.

ಪೋಷಕರು : ೨೫೦ಕ್ಕಿಂತ ಹೆಚ್ಚಿಗೆ ರೂಪಾಯಿಗಳನ್ನು ಕೊಡುವವರು.

ಇವರನ್ನೂ ಆಮಂತ್ರಿತ ಸದಸ್ಯರೆಂದು ಪರಿಗಣಿಸಲಾಗುವುದಲ್ಲದೆ, ಸಂಘದ ಸಭಾಭವನದಲ್ಲಿ ಇವರ ಛಾಯಾ ಚಿತ್ರವನ್ನಿರಿಸುವ ಯೋಜನೆ ಮಾಡಲಾಗುವುದು.

**ಕಾರ್ಯದರ್ಶಿಗಳು.**

---

ಕೆಲಸಗಳಲ್ಲಿ ಭಾಗವಹಿಸಿ ತಮ್ಮಿಂದಾದಷ್ಟು ಸೇವೆಯನ್ನು ಮಾಡಲು ಪ್ರೋತ್ಸಾಹಿಸಬೇಕು.

ಗೋದಾವರಿಯಿಂದ ಕಾವೇರಿಯವರೆಗೂ ಏಕಚಕ್ರಾಧಿಪತ್ಯದಿಂದ ಗರ್ಜಿಸುತ್ತಿದ್ದ ಕನ್ನಡಮ್ಮನು ಇಂದು ಉಸಿರಾಡಲಾರಳು. ಇಂದು ಅವಳ ಮುಖವು ಬಾಡಿರುವುದು. ಇದಕ್ಕೆ ಕಾರಣವೇನು? ನಮ್ಮ ಮಹಿಳೆಯರಲ್ಲಿ ಇರುವ ಅಜ್ಞಾನವೇ. ಈದುರವಸ್ಥೆಯನ್ನು ದೂರಮಾಡಿ ಸುವ್ಯವಸ್ಥೆಯನ್ನುಂಟುಮಾಡುವ ಸುಬುದ್ಧಿಯನ್ನು ಭಗವಂತನು ನಿಮಗೆ ದಯಪಾಲಿಸಲೆಂದು ಕೋರುವೆನು.

**ಕನ್ನಡ ಮಾತೆಗೆ ಜಯವಾಗಲಿ**

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೧ ಆಣೆ

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೪೧

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಆಗಸ್ಟ್ ೯, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.



ಪರಿಷತ್ತಿನ ಮಹಾಪೋಷಕರಾಗಿದ್ದು ಕನ್ನಡ ನುಡಿ, ಸಂಸ್ಕೃತಿಗಳಿಗೆ ಆಶ್ರಯವನ್ನಿತ್ತು ಪೊರೆಯುತ್ತಿದ್ದ
ದಿವಂಗತ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು

## ದಿವಾನ್ ಸಾಹೇಬರವರು ಹೊರಡಿಸಿದ ವಿಶೇಷ ಗೆಜೆಟ್

**ಮೈಸೂರು ಸಂಸ್ಥಾನದ ಪ್ರಜೆಗಳಿಗೆ, ನಮ್ಮ ಪ್ರೀತಿ ಪಾತ್ರರಾದ ಪ್ರಭುಗಳವರಾದ ಶ್ರೀಮನ್ಮಹಾರಾಜರವರು ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಬೆಂಗಳೂರು ಅರಮನೆಯಲ್ಲಿ ಸ್ವಲ್ಪ ಕಾಲದಿಂದ ರೋಗಗ್ರಸ್ತರಾಗಿದ್ದು ೧೯೪೦ನೆಯ ಇಸವಿ ಆಗಸ್ಟ್ ೩ನೆಯ ತಾರೀಖು ಶನಿವಾರ ರಾತ್ರಿ ೯ ಗಂಟೆಗೆ ಕಾಲವಶರಾದರೆಂದು ತಿಳಿಸುವುದು ಅತ್ಯಂತ ವಿಷಾದಕರವಾದ ನನ್ನ ಕರ್ತವ್ಯವಾಗಿದೆ.**

**ಅವರ ಆತ್ಮಕ್ಕೆ ಶಾಂತಿಯುಂಟಾಗಲಿ.**

**ಮಿರ್ಜಾ ಎಂ. ಇಸ್ಮಾಯಿಲ್,**

---

## ಮಹಾಸ್ವಾಮಿಯವರ ಜೀವನ ಚರಿತ್ರೆ

ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ೧೮೮೪ನೇ ಜೂನ್ ನಾಲ್ಕನೆಯ ತಾರೀಖಿನ ದಿವಸ, ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಜ್ಯೇಷ್ಠ ಪುತ್ರರತ್ನರಾಗಿ ಜನ್ಮವೆತ್ತಿದರು. ಸರಿಸಮಾನ ವಯಸ್ಸಿನವರಾದ ಬಾಲಕರನ್ನು ಸೇರಿಸಿ, ಅವರ ವಿದ್ಯಾಭ್ಯಾಸಕ್ಕಾಗಿ ಒಂದು ಪ್ರತ್ಯೇಕ ಶಾಲೆ ಏರ್ಪಾಟಾಯಿತು. ದಿವಾನ್ ಸರ್ ಮಿರ್ಜಾ ಇಸ್ಮೈಲ್‌ರವರೂ ಅವರ ಸಹಪಾಠಿಗಳಲ್ಲಿ ಒಬ್ಬರು.

೧೮೯೪ರಲ್ಲಿ ತಮ್ಮ ಹತ್ತನೆಯ ವಯಸ್ಸಿನಲ್ಲಿ ಭಾರಿ ಸಂಸ್ಥಾನಕ್ಕೆ ಒಡೆಯರಾಗಬೇಕಾಗಿ ಬಂತು. ಶ್ರೀ ವಾಣಿವಿಲಾಸ ಸನ್ನಿಧಾನ ಶ್ರೀ ಕೆಂಪನಂಜಮ್ಮಣ್ಣಿಯವರ ನೇತೃತ್ವದಲ್ಲಿ ಒಂದು 'ರೀಜೆನ್ಸಿ' ಏರ್ಪಾಡಾಯಿತು. ೧೮೯೬ರಿಂದ ೧೯೦೨ರವರೆಗೂ ಸರ್ ಸ್ಟೂಯರ್ಟ್ ಫ್ರೇಜರ್ ಅವರು ಅವರ ಗುರುಗಳಾಗಿದ್ದರು. ಆಗ ಸರ್ ಕೆ. ಶೇಷಾದ್ರಿ ಅಯ್ಯರವರು ದಿವಾನರಾಗಿದ್ದರು. ೧೯೦೦ನೆಯ ಜೂನ್ ತಿಂಗಳಲ್ಲಿ ಶ್ರೀಮನ್ಮಹಾರಾಜರವರಿಗೆ ಕಾಥೇವಾಡದ ವಾಣಾ ಸಂಸ್ಥಾನಾಧೀಶರ ಪುತ್ರಿಯನ್ನು ತಂದುಕೊಂಡು ವಿವಾಹ ಮಹೋತ್ಸವ ನೆರವೇರಿತು.

೧೯೦೨ರಲ್ಲಿ ಆಗಿನ ವೈಸರಾಯ್ ಮತ್ತು ಗವರ್ನರ್ ಜನರಲ್‌ರಾಗಿದ್ದ ಲಾರ್ಡ್ ಕರ್ಜನ್‌ರು ರಾಜಧಾನಿಗೆ ಚಿತ್ತೈಸಿ, ಸಂಸ್ಥಾನದ ಆಡಳಿತ ಸೂತ್ರಗಳನ್ನು ಶ್ರೀ ಕೃಷ್ಣರಾಜ ಒಡೆಯರವರಿಗೆ ವಹಿಸಿಕೊಟ್ಟರು. ಸರ್ ಪಿ. ಎನ್. ಕೃಷ್ಣಮೂರ್ತಿಗಳು ಆಗ ದಿವಾನರಾಗಿದ್ದರು.

೧೯೦೨ರಿಂದ ೧೯೧೨ರವರೆಗೆ ಶ್ರೀಮನ್ಮಹಾರಾಜರು ಸಂಸ್ಥಾನದ ನಾನಾ ಭಾಗಗಳಲ್ಲಿ ಸಂಚರಿಸಿ, ಆಡಳಿತದಲ್ಲಿ ಅನೇಕ ಬದಲಾವಣೆಗೆ ಕಾರಣರಾದರು. ೧೯೦೬ರಿಂದ ೧೯೦೯ರ ವರೆಗೆ ಶ್ರೀ|| ವಿ. ಪಿ. ಮಾಧವರಾಯರೂ ೧೯೦೯ರಿಂದ ೧೯೧೨ರ ವರೆಗೆ ಶ್ರೀ|| ಟಿ. ಆನಂದರಾಯರೂ ದಿವಾನರಾಗಿದ್ದರು. ೧೯೧೨ರಲ್ಲಿ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ದಿವಾನ್‌ಗಿರಿಗೆ ಬಂದರು. ಕೈಗಾರಿಕೆಯ ನವಯುಗವು ಅವರ ಕಾಲದಲ್ಲಿ ಆರಂಭವಾಯಿತೆನ್ನಬಹುದು. ಅನಂತರ ಸರ್ ಕಾಂತರಾಜ ಅರಸರೂ, ಸರ್ ಆಲ್ಬಿಯನ್ ಬ್ಯಾನರ್ಜಿಯವರೂ ದಿವಾನರಾಗಿ ಬಂದರು. ಸರ್ ಮಿರ್ಜಾರವರು ೧೯೨೬ರಲ್ಲಿ ದಿವಾನ್ ಸೂತ್ರಗಳನ್ನು ವಹಿಸಿದರು. ಇವರ ದಿವಾನಗಿರಿಯಲ್ಲಿ ಮೈಸೂರು ಸರ್ವತೋಮುಖವಾಗಿ ಅಭಿವೃದ್ಧಿಗೊಂಡು ಪ್ರಪಂಚಕ್ಕೇ ಮಾದರಿಯಾಯಿತು.

೧೯೨೭ರಲ್ಲಿ ಶ್ರೀಮನ್ಮಹಾರಾಜರವರ ಆಳಿಕೆಯ ರಜತ ಮಹೋತ್ಸವ ಇಡಿಯ ನಾಡಿನಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ೧೯೩೫ರಲ್ಲಿ ಪ್ರಭುವರ್ಯರು ಕೈಲಾಸ ಕ್ಷೇತ್ರಕ್ಕೆ ಹೋಗಿ ಬಂದರು. ೧೯೩೬ರಲ್ಲಿ ಪಾಶ್ಚಾತ್ಯ ಪ್ರವಾಸ ಕೈಕೊಂಡು ಹಿಂತಿರುಗಿದರು.

ಅಲ್ಲಿಂದೀಚೆಗೆ ನಾಲ್ಕು ವರ್ಷಗಳ ಕಾಲ ಮಹಾ ಪ್ರಭುಗಳು ಹಲವು ಸಾರ್ವಜನಿಕ ಉತ್ಸವಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿ, ತಮ್ಮ ಅಮೋಘವಾದ ಅನುಭವದ ಮಾತುಗಳನ್ನು ಅಪ್ಪಣೆಕೊಡಿಸಿ, ನಾಡಿನ ಮೇಲ್ಮೆಯನ್ನು ಸಾಧಿಸುತ್ತ ಇದ್ದರು. ಕಳೆದ ಜೂನ್ ೩೦ನೆಯ ತಾರೀಖು ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ಸಮಾರಂಭಗೊಳಿಸಿದುದೇ ಪ್ರಭುಗಳ ಕೊನೆಯ ಸಾರ್ವಜನಿಕ ಕಾರ್ಯವಾಗಿ ಪರಿಣಮಿಸಿದುದು ದೈವಸಂಕಲ್ಪ!

ಶ್ರೀಮನ್ಮಹಾರಾಜರ ವ್ಯಕ್ತಿತ್ವದ ವಿಚಾರವಾಗಿ ಸರ್ ಇವಾನ್ ಮೆಕಾನಕಿಯವರು ಹೀಗೆ ಬರೆದಿದ್ದಾರೆ:

ಪ್ರತಿಯೊಬ್ಬನ ಸತ್ವವನ್ನೂ ತೂಕಮಾಡುವ ಸಾಮರ್ಥ್ಯ ಇಷ್ಟು ಚಿಕ್ಕ ವಯಸ್ಸಿನ ಇವರಲ್ಲಿ ಇದ್ದುದನ್ನು ಕಂಡು ನಾನು ಬೆರಗಾದೆ.... ತಮ್ಮ ಮಾರ್ಗದಲ್ಲಿ ಏನೇ ಕಷ್ಟಗಳು ಬರಲಿ, ಶ್ರೀಮನ್ಮರಾಜರವರು ತಿಳಿಗೇಡಿಗಳ ಅಥವಾ ತಿಳಿಯದವರ ಅಥವಾ ಅತೃಪ್ತಿಗೊಂಡವರ ಟೀಕೆಗಳಿಗೆ ಗಮನಕೊಡದೆ ಪ್ರತಿಯೊಂದು ನಿರ್ಧಾರದ ಆಗುಹೋಗುಗಳನ್ನು ತೂಕಮಾಡಿ, ನಿರ್ಧಾರಕ್ಕೆ ಬರುತ್ತಿದ್ದರು. ಅವರ ಸಹನೆಯಂತೂ ಮೇರೆಯಿಲ್ಲದ್ದು. ಯಾವುದನ್ನೂ ಆತುರದಿಂದ ಮಾಡುತ್ತಿರಲಿಲ್ಲ. ಕಾಲಕಾಲಕ್ಕೆ ಸರಿಯಾಗಿ ಅವರೇ ಹಾಕಿಟ್ಟ ಯೋಜನೆಗಳು ಒಂದಾಗುತ್ತಲೊಂದು ಜಾರಿಗೆ ಬರುತ್ತಿದ್ದವು. ಆಡಂಬರಾದಿಗಳಿಲ್ಲದೆ ಪ್ರತಿಯೊಂದನ್ನೂ ಸಾಧಿಸುತ್ತಿದ್ದವರಿವರು. ಪ್ರತಿಯೊಂದನ್ನೂ ಒಮ್ಮನಸ್ಸಿನಿಂದ ವ್ಯಕ್ತಿಶಃ ಏನೂ ಪ್ರತಿಫಲ ಆಶಿಸದೆ, ಕೇವಲ ಪ್ರೀತಿಗಾಗಿ ಆಚರಿಸುತ್ತಿದ್ದವರು ಇವರು.

---

ದಿವಂಗತರಾದ ಮಹಾಸ್ವಾಮಿಯವರ ಗೌರವಾರ್ಥವಾಗಿ, ಸಂಸ್ಥಾನದಲ್ಲಿರುವ ಸಮಸ್ತ ಪಬ್ಲಿಕ್ ಆಫೀಸುಗಳೂ, ಕೋರ್ಟುಗಳೂ, ಮತ್ತು ವಿದ್ಯಾಸಂಸ್ಥೆಗಳೂ ಹದಿಮೂರು ದಿನಗಳ ಕಾಲ ಮುಚ್ಚಲ್ಪಟ್ಟಿವೆ.

---

ಸಂಸ್ಥಾನದಲ್ಲೆಲ್ಲ ಸಂತಾಪಸೂಚಕ ಸಭೆಗಳು ನಡೆದಿರುತ್ತವೆ—ಇನ್ನೂ ನಡೆಯುತ್ತಲಿವೆ.

ಸಂಸ್ಥಾನದ ಹೊರಗಡೆ ಬ್ರಿಟಿಷ್ ಪ್ರಾಂತದಲ್ಲಿ ಬೆಳಗಾಂವಿ, ಧಾರವಾಡ, ಬಳ್ಳಾರಿ, ಹೊಸಪೇಟೆ, ಬಿಜಾಪುರ, ಮದರಾಸು, ಕೊಯಮತ್ತೂರು, ಅನಂತಪುರ, ವೆಲ್ಲೂರು, ಪುಣೆ, ಮುಂಬಯಿ ಮುಂತಾದ ಸ್ಥಳಗಳಲ್ಲೆಲ್ಲ ಮಹಾಜನರು ಸಭೆ ಸೇರಿ ತಮ್ಮ ದುಃಖವನ್ನು ವ್ಯಕ್ತಪಡಿಸಿರುತ್ತಾರೆ.

## ಬೆಳಗಾಂವಿಯ ಲಾ ಕಾಲೇಜಿನಲ್ಲಿ ಸಂತಾಪ ಸೂಚನೆ

ಬೆಳಗಾಂವಿಯ ರಾಜಾ ಲಖಮಗೌಡ ಲಾ ಕಾಲೇಜಿನ ಅಧ್ಯಾಪಕರೂ ವಿದ್ಯಾರ್ಥಿಗಳೂ ೫ನೆಯ ತಾರೀಖು ಸಭೆಸೇರಿ ಮೈಸೂರು ಮಹಾರಾಜರವರ ನಿಧನದಿಂದುಂಟಾಗಿರುವ ತಮ್ಮ ಅಪಾರ ದುಃಖವನ್ನು ವ್ಯಕ್ತಗೊಳಿಸಿದರು. ದಿವಂಗತರ ಸ್ಮರಣಾರ್ಥವಾಗಿ ಆ ದಿನ ಕಾಲೇಜು ಮುಚ್ಚಲ್ಪಟ್ಟಿತ್ತು.

## ಧಾರವಾಡದಲ್ಲಿ ಶೋಕ ಪ್ರದರ್ಶನ

ನಿನ್ನೆ ಧಾರವಾಡದ ೮–೧೦ ಸಂಸ್ಥೆಗಳ ಆಶ್ರಯದಲ್ಲಿ ನಾಗರಿಕರ ಸಭೆ ನಡೆದು ಸಂತಾಪ ಪ್ರದರ್ಶನವಾಯಿತು.

---

## ಇತರ ಸಂಸ್ಥಾನಗಳಲ್ಲಿ ಶೋಕ ಪ್ರದರ್ಶನ

ಮೈಸೂರು ಮಹಾರಾಜರವರ ನಿಧನದಿಂದ ಗ್ವಾಲಿಯರ್ ಸಂಸ್ಥಾನದ ಪ್ರಜೆಗಳು ಅತ್ಯಂತ ದುಃಖಿತರಾಗಿದ್ದಾರೆ. ದಿವಂಗತರ ಸ್ಮರಣಾರ್ಥವಾಗಿ ಎಲ್ಲ ಸರ್ಕಾರಿ ಕಚೇರಿಗಳು, ಸಾರ್ವಜನಿಕ ಸಂಸ್ಥೆಗಳು ಮೂರುದಿನಗಳವರೆಗೆ ಮುಚ್ಚಲ್ಪಟ್ಟಿದ್ದುವು. ಐದನೆಯ ತಾರೀಖಿನ ದಿನ ಗ್ವಾಲಿಯರ್ ರಾಜಧಾನಿಯಲ್ಲಿ ಎಲ್ಲ ಅಂಗಡಿಗಳೂ ಮುಚ್ಚಿದ್ದುವು.

ಬರೋಡ, ಭೂಪಾಲ್, ತಿರುವಾಂಕೂರು, ಕೊಚ್ಚಿ ಕೊಲ್ಹಾಪುರ, ಪುದುಕೋಟೆ, ಬಿಕಾನೀರ್, ಸಂಡೂರ್, ಜಮಖಂಡಿ, ರಾಂಪುರ ಮುಂತಾದ ಸಂಸ್ಥಾನಗಳಲ್ಲಿಯೂ ಕೂಡ, ಶೋಕ ಪ್ರದರ್ಶನಕ್ಕಾಗಿ ಸಾರ್ವಜನಿಕ ಸಂಸ್ಥೆಗಳೆಲ್ಲವೂ ಒಂದು ದಿನದಮಟ್ಟಿಗೆ ಮುಚ್ಚಿವೆ.

# ಚರಮಗೀತೆಗಳು

೧

## ಕೆ. ಎಸ್. ಧರಣೇಂದ್ರಯ್ಯನವರಿಂದ

ಮೈಸೂರು ಬಾಂಬೆಳಗಿನೆಳೆವಿಸಿಲು ಮರೆಯಾಯ್ತು.
ದಿನಕರನು ಮುಳುಗಿದನು ಸಂಜೆಯೊದಗದ ಮುನ್ನ
ಕಾರ್ಮೋಡ ಕವಿದಿಹುದು ಮಬ್ಬು ತಾ ಮುಸುಗಿಹುದು
ದಿಗ್ಭ್ರಾಂತಿ ಕಳವಳವು ಮನದಳಲು ಕಣ್ಣೀರು
ನಾಡ ನಾಡಿಯನಿಂದು ಮಿಡಿಯುತಿವೆ ಸೆಡೆಯುತಿವೆ
ಬರಸಿಡಿಲು ಬಡಿತದಿಂ ಭೂಕಂಪ ಗುಡುಗಿನಿಂ
ಜನವೆಲ್ಲ ಕಂಗೆಟ್ಟು ಹಾ ಡವದಿ ಚೀರುತಿದೆ.
ಮೈಸೂರಿನಧಿಪತಿಯು ಸಿರಿಕೃಷ್ಣ ನಮ್ಮೊಡೆಯ
ರಾಜರಿಷಿ ರಾಜಗುರು ಮರೆಯಾದನೀಹೊತ್ತು.
ದುರ್ದಿನವು. ಪೆರ್ಮೋಡ ನಿಬಿಡದಿಂ ಕತ್ತಲೆಯು
ದಿನಕರನ ದರ್ಶನವನಿತ್ತಿಲ್ಲ. ತಲ್ಲಣವು.
ಮೈಸೂರಿನಿಂಗಡಲು ಹಿಂಗಿದುದು. ಪೊಂಗಲಸ
ಕಂಪನದಿ ಜಾರಿದುದು. ಭೂಮಿಯನ್ನು ಸೇರಿದುದು.
ನಾಡ ಚಿಂತಾಮಣಿಯು ಸಗ್ಗವನ್ನೇರಿದುದು,
ಜನತೆಯಾ ಕಲ್ಪತರು ಭುವಿಯಿಂದ ಹಾರಿದುದು;
ಮೈಸೂರಿನಗ್ಗಳಿಯ ಸಿರಿ ಕಾಮಧೇನು ತಾ
ತಿರೆಯನ್ನು ತೊರೆಯುತ್ತ ಪರಿದೋಡಿ ಪೋದುದು.
ಸಿರಿ ಕೃಷ್ಣ ಭೂಪಾಲ ಮಹಿಸೂರ ಶ್ರೀಪಾಲ
ಮೊರೆಯಿಡುವ ಮಕ್ಕಳನು ತೊರೆಯುತ್ತ ಪೋಪರೆ?
ಮರುಕದಲಿ ಪೊರೆಯದೆಯೆ ಮರುಗುವರ ಬಿಡುವರೆ?
ಪರಮಾತ್ಮ ಸಾನ್ನಿಧ್ಯಕಿರದೀಗ ತೆರಳುವರೆ?
ಸಗ್ಗದಲಿ ದೇವೇಂದ್ರ ಪದವಿಯದು ಬರಿದಾಗೆ
ನೀನಲ್ಲದಾರುಮಂ ಆ ಪದವಿಗೇರಿಸಲು
ಮನವಿಲ್ಲದಾ ಸ್ವಾಮಿ ಕರೆದೊಯ್ದು ಪೋದನೆ?
ನಾಕಾಣೆ. ನಮ್ಮಯ್ಯ, ನಮ್ಮೊಡೆಯ, ನಮ್ಮ ವಿಭು,
ನಿನ್ನೆಂತು ಬಿಟ್ಟಹುದು? ನಾವೆಂತು ಬದುಕುವುದು?
ನಿನ್ನ ಪೆಂಪಿನ ರೂಪು ಕಟ್ಟಹುದು ಕಣ್ಣಲ್ಲಿ
ಕೇಳುತಿದೆ ಕಿವಿ ಸವಿಯು ನೀನೊರೆದ ಮೃದುವಾಣಿ
ಆ ದಿವ್ಯ ತೇಜಸ್ಸು ಮನದಲ್ಲಿ ನಟ್ಟಹುದು.
ನಿನ್ನ ಸಾಮ್ರಾಜ್ಯದಾ ಸ್ವರ್ಣೋತ್ಸವಂಗಳನು
ಆ ರಾಮರಾಜ್ಯದ ರತ್ನೋತ್ಸವಂಗಳನ್ನು
ಕಣ್ಣಾರ ನೋಡಿ ನಾವುಲ್ಲಸಿಸಬೇಕೆಂದು
ದಿನದಿನವು ದೇವರಲಿ ವರ ಬೇಡುತಿದ್ದೆವು.
ಪರಮಾತ್ಮ ಪೊರೆಯೆಂದು ಮೊರೆಯಿಡುತಲಿದ್ದೆವು.
ನಮ್ಮ ಪೂಜೆಗಳೆಲ್ಲ ನಿಸ್ಸಾರವಾದುವೆ?
ನಮ್ಮ ಹರಕೆಗಳೆಲ್ಲ ಬಯಲಾಗಿ ಪೋದುವೆ?
ಕನ್ನಡದ ತಾಯೀಗ ಕೊರಗುವಂತಾದುದೆ?
ನೆಮ್ಮದಿಯ ನಾಡೀಗ ಮರುಗುವಂತಾದುದೆ?
ಕನ್ನಡದ ನಾಡೆಲ್ಲ ಸಲೆ ಶೂನ್ಯವಾದುದೆ?
ಹಾಳು ಬಡಿದಿದೆ ನಾಡು ತೇಜವಿನಿತಿಲ್ಲದಲೆ
ನಂದನವು ಸುಡುಗಾಡಿನಂತೀಗ ಬೇಯುತಿದೆ.
ಪಕ್ಷಿಚಯದಿಂಚರವು ರೋದನದ ಶೋಕದನಿ
ತನಿಗಂಪ ತಣ್ಣೆಲರು ಮರುಭೂಮಿ ಬಿಸಿಗಾಳಿ.
ತರುಗುಂಪು ಮೌನದಲಿ ಕಣ್ಣೀರನಿಕ್ಕುತಿದೆ.
ಕನ್ನಡದ ಹಕ್ಕಿಯದು ಚರಮಗೀತವ ಹಾಡಿ
ರಾಜಕುಲ ಹಂಸನಿಗೆ ಯದುವಂಶ ದಿನಮಣಿಗೆ
ಭಕ್ತಿಯನ್ನರ್ಪಿಸುತ ಗೋಳಿಟ್ಟು ಹಲುಬುತಿದೆ.
ಮನೆಯಲ್ಲಿ ಕಂಬನಿಯು, ಬದುಕೆಲ್ಲ ನಿಷ್ಫಲವು.
ಮನದಲ್ಲಿ ಸೊಗವಿಲ್ಲ. ಇಹದಲ್ಲಿ ರುಚಿಯಿಲ್ಲ.
ನಮ್ಮಾಣ್ಮ, ನಮ್ಮೊಡೆಯ, ನಮ್ಮ ಜೀವದ ಬೆಳಕೆ,
ನಮ್ಮುಸಿರೆ, ನಮ್ಮಾಲಿ, ನಮ್ಮ ಬದುಕಿನ ಸಿರಿಯೆ,
ನಮ್ಮ ಕಣ್ಣಿನ ಸೂರೆ, ನೀನೆಲ್ಲಿಗೈದಿದೆ?
ನಮ್ಮ ಬಾಳಿನ ಗುರಿಯೆ ನೀನೆತ್ತ ತೆರಳಿದೆ?
ಆ ಪ್ರೇಮ, ಆ ಕರುಣೆ, ಆ ಭಕ್ತಿ ನಂದಿದುವೆ?
ಪಾವನಕೆ ಪಾವನನೆ, ಭೂಷಣಕೆ ಭೂಷಣನೆ,
ಅರಿವಿನಾ ಹೊಂಬೆಳಗೆ ಸರಿದೆಲ್ಲಿ ಪೋದೆ ನೀ?
ಮಾನವರ ಸಿರವಣಿಯೆ, ಭೂಭುಜರ ತಲೆವಣಿಯೆ,
ಪರನಾರಿ ಸೋದರನೆ, ಪರಮಾರ್ಥ ಕೋವಿದನೆ,
ಮೈಸೂರು ಮಕ್ಕಳಿಗೆ ಸಿರಿರೂಪ ತೋರಿಸೆಯ?
ಧರ್ಮಾವತಾರನೆ, ಪರಮಾತ್ಮನಂಶನೆ
ಪರಮ ತೇಜೋಮೂರ್ತಿ ಮತ್ತೊಮ್ಮೆ ಕಾಣಿಸೆಯ?
ಇನ್ನೆಲ್ಲಿ ಗುಣರತ್ನ ಧರ್ಮ ನಿರ್ಮಲ ಮೂರ್ತಿ?
ಇನ್ನೆಲ್ಲಿ ಸುಕೃತಾತ್ಮ ಪೆರ್ಮೆವಡೆದಾ ಯೋಗಿ?
ತನು ಮನವ ಧನಗಳನು ಜನಹಿತಕೆ ಮುಡುಪಿಟ್ಟ
ಕರುಣಾಳು, ಮಹಿಮಾತ್ಮ, ಕಡುಚಾಗಿ ಇನ್ನೆಲ್ಲಿ?
ಇನ್ನೆಲ್ಲಿ ದೊರಕುವನು ಬಡವರಾ ಭಾಗ್ಯನಿಧಿ?
ಸಗ್ಗದಲಿ ನಲಿಯುತಿಹ ಸಿರಿ ಕೃಷ್ಣ ಪರಮಾತ್ಮ
ಹರಸುತಿರು ಚಿರಕಾಲ ಮೈಸೂರು ಮಕ್ಕಳನು.
ಹರಸುತಿರು ಮೈಸೂರಿನರಮನೆಯ ಕಂದರನು
ಯದುವಂಶ ದಿನಮಣಿಯ ಜಯಚಾಮರಾಜನನು
ಜಯ, ವಿಜಯ, ಸುಜಯರನು ವರ ರಾಜಕುವರಿಯರ.
ಯದುವಂಶ ಕಲ್ಪಾಂತ ಪರಿಯಂತ ಬಾಳಲಿ.
ಕನ್ನಡದ ಸಿರಿತಾಯಿ ನಲ್ಮೆಯಿಂ ಸುಖಿಸಲಿ.

೨

## ಬಿ. ಶಿವಮೂರ್ತಿಶಾಸ್ತ್ರಿಗಳವರಿಂದ

ಆವಂ ಶ್ರೀಕೃಷ್ಣಾನ್ವಯ ।
ನಾವಂ ಸದ್ಗುಣ ವಿಭೂಷಣನನುಪಮಚರಿತಂ ॥
ಆವಂ ಕವಿಬುಧಗಣನುತ ।
ನಾವಿಭು ಶ್ರೀಕೃಷ್ಣರಾಜನಗಲಿದನಕಟಾ ॥
ಮೆರೆವ ಕರ್ಣಾಟಾಖ್ಯದೇಶದೊ ।
ಳಿರುವ ಮೈಸೂರೆನಿಪ ನಾಡಿನೊ ।
ಳರಸನಾಗಿಯೆ ಮೆರೆದು ಸದ್ಗುಣಿ ಸರಸಿಯೆಂದೆನಿಸಿ ॥
ಧರೆಯನಾಳುತೆ ಧರ್ಮಮಾರ್ಗದಿ ।
ಹರನ ಪೂಜಿಸಿ ಸತ್ಯಮಾರ್ಗದಿ ।
ವಿರಚಿಸುತೆ ಸತ್ಕರ್ಮರಾಶಿಯ ರಾಜಋಷಿಯೆನಿಸಿ ॥
ಇಂದುಧರಪದ ಭಕ್ತನೆನಿಸಿದ ।
ತಂದೆ ಶ್ರೀಕೃಷ್ಣೇಂದ್ರ ಭೂಮಿಪ ।
ನಿಂದು ಪಯಣಂಗೆಯ್ದನಕ್ಕಟ ಶಿವನಸನ್ನಿಧಿಗೆ ॥
ಮುಂದುಗಾಣರು ನಾಡಜನಗಳು ।
ತಂದೆಯಗಲಿದ ಮಕ್ಕಳಂದದೊ ।
ಳಿಂದುವಿಲ್ಲದ ರಜನಿಯಂದದೊಳಾಯ್ತು ನಾಡಿದು ಹಾ ॥
ಭರತಖಂಡದ ನೃಪರ ಗಡಣದೊ ।
ಳರಿಯೆ ಶ್ರೀಕೃಷ್ಣೇಂದ್ರ ಜನಪಗೆ ।
ಸರಿಯೆನಿಪನಿನ್ನಾವನೈ ಗುಣಶೀಲ ವಿದ್ಯೆಯೊಳು ॥
ಧರೆಯೊಳದರಿಂದಾಯ್ತು ಪೆಸರೇ ।
ದೊರೆಗೆ 'ನಾಲ್ವಡಿ ಭೂಪ'ನೆನ್ನುತೆ ।
ಗರುವತನ ಸೂಚಕವು ಸಜ್ಜನ ಹೃದಯಕ್ಷೋಭಿತವು ॥
ಕರುಣಿ ಶ್ರೀಕೃಷ್ಣೇಂದ್ರನಗಲಿದ ।
ಧರಣಿಯೊಳು ನಿಜ ಬಂಧು ಮಿತ್ರರ ।
ಮರಣ ಮುಖದಿಂ ಪೊರಟನಾ ಪರಮೇಶನೋಲಗಕೆ ॥

ತಿರೆಯ ಚಂಚಲವಾದ ಭೋಗವ ।
ತೊರೆದು ಶಾಶ್ವತ ಮೋಕ್ಷಸುಖಮಂ ।
ಹರನ ಕೃಪೆಯಿಂ ಪಡೆದು ನಿಲುಕಿಸು ದಿವ್ಯಮಾರ್ಗದೊಳು ॥

ಹರಭಕ್ತಿಯ ಕಣಿ ಶಾಂತಿಯ ಮಡು ಧೈರ್ಯದ ಭೂ ।
ಧರಮೇಕನಿಷ್ಠೆಯ ನೆಲೆ ಯತಿಕಾರುಣ್ಯದ ।
ತರು ನೀತಿಯ ನೆಲೆಮನೆ ನಿರುಪಮ ಪುಣ್ಯದ ಪುತ್ಥಳಿ
ಸತ್ಯದ ಸದನಂ ॥

ಹರುಷದ ಕೆರೆ ನಿತ್ಯೌದಾರ್ಯದ ಮಂದಿರ ಸುರು ।
ಚಿರಜೀವನ ಪಾವನ ಮನೆತನ ಗುರುತರವಹ ।
ದೊರೆತನಮೆನಿಸುವ ನಾಲ್ವಡಿ ಕೃಷ್ಣನ ಕೀರ್ತಿ ವಿರಾಜಿಸು
ಗಂಮಂ ಧಾರಿಣಿಯೊಳ್ ॥

ಮರುಗೆಂ ಶ್ರೀಕೃಷ್ಣೇಂದ್ರಂ ।
ತೊರೆವಂ ನಿಜರಾಜ್ಯಕೋಶಮೆಲ್ಲಮನೆನುತಂ ॥
ಮರುಗುವೆ ನಾನತಿ ಮನದೊಳ್ ।
ದೊರೆ ಜಯಚಾಮೇಂದ್ರಗಾದ ದುಃಖಾವಳಿಗಂ ॥

ಭೌತಿಕ ಶರೀರಮಳಿದುದು ।
ಸಾತಿಶಯಂ ಕೀರ್ತಿದೇಹಮುಳಿದುದು ಧರೆಯೊಳ್ ॥
ಮಾತಿನ್ನೇತಕೆ ತೆಗೆ ಪಳೆ ।
ವಾತದು ಪೇಳಿಲ್ಲವೇನು ಜೀವನದಿರವಂ ॥

ಶಾಂತಿಯಾಗಲಿ ನೃಪತಿಯಾತ್ಮಕೆ ।
ಶಾಂತಿ ದೊರೆಯಲಿ ರಾಜಪತ್ನಿಗೆ ।
ಶಾಂತಿ ಸಮನಿಸಲೆಮ್ಮ ಜಯಚಾಮೇಂದ್ರ ಭೂಪತಿಗೆ ॥
ಶಾಂತಿಯೊಲಿಯಲಿ ನಾಡ ಜನರಿಗೆ ।
ಶಾಂತಿ ದೊರೆಯಲಿ ಲೋಕಕೆಲ್ಲಕೆ ।
ಶಾಂತಿಸಾಗರ ಚಂದ್ರಧರ ಪರಶಿವನ ದಯೆಯಿಂದ ॥

---

## ಬಾಷ್ಪಾಂಜಲಿ

ನಾವು ಅನರ್ಘ್ಯವಾದ ರತ್ನವೊಂದನ್ನು ಕಳೆದುಕೊಂಡೆವು.

—**ಸರ್ ಮಿರ್ಜಾ ಎಂ. ಇಸ್ಮೈಲ್.**

ಸಿಡಿಲೆರಗಿದಂತೆ ಈ ದುಃಖದ ಸುದ್ದಿ ಸುಡುತ್ತಿರುವಾಗ ಬುದ್ಧಿ ಓಡುವುದಿಲ್ಲ. ಮಾತು ಹೊರಡುವುದಿಲ್ಲ.

ನಮ್ಮಲ್ಲನೇಕರಿಗೆ ತಂದೆ ಹೋದಂತಾಗಿದೆ. ಹಿರಿಯಣ್ಣನನ್ನು ಕಳೆದುಕೊಂಡಂತಾಗಿದೆ. ಮಹಾಸ್ವಾಮಿಯವರ ಕೃಪೆ, ಪ್ರೀತಿ, ಸೌಜನ್ಯಗಳನ್ನು ಸವಿದವರಿಗೆ ಮನಸ್ಸು ಸಮಾಧಾನಕ್ಕೆ ಬರುವುದು ಕಷ್ಟವಾಗಿದೆ.

ಪ್ರಪಂಚ ಕ್ಷುಬ್ಧಸಮುದ್ರವಾಗಿರುವಾಗ, ಭಾರತದ ಸ್ಥಾನಮಾನಗಳು ಇನ್ನೂ ನಿಷ್ಕರ್ಷೆಗೆ ಬರದೆ ಇರುವಾಗ, ಕರ್ನಾಟಕದ ಒಕ್ಕೂಟವಿನ್ನೂ ಕನಸಾಗಿಯೇ ಉಳಿದಿರುವಾಗ, ನಾಲ್ಮಡಿ ಶ್ರೀಕೃಷ್ಣರಾಜೇಂದ್ರರಂತಹ ಋಷಿಗಳು, ದಯಾಶೀಲರು, ದೂರದೃಷ್ಟಿಯವರು, ರಾಜನೀತಿ ಪ್ರವೀಣರು, ಸರ್ವಸಮದರ್ಶಿಗಳು, ಕಲೋಪಾಸಕರು, ಸಾಹಿತ್ಯ ಪೋಷಕರು, ಎಲ್ಲರ ಒಲವನ್ನೂ ಸೆಳೆಯಬಲ್ಲ ಪ್ರೇಮಾತ್ಮರು ಕೈಬಿಟ್ಟು ಹೋದದ್ದು ಅಪಾರ ನಷ್ಟ!

ಇಂಡೋ ಬ್ರಿಟಿಷ್ ಕಾಮನ್ ವೆಲ್ತಿಗೂ ಸಂಯುಕ್ತ ಭಾರತಕ್ಕೂ ಸರಿಹೊಂದುವ ರಾಜಭಕ್ತಿಯನ್ನು ತೋರಿಸಿಕೊಟ್ಟರು. ಸಕಾಲಕ್ಕೆ ತಡೆಗೈಮಾಡದೆ, ಮಡುಕದೆ, ಕೇಳದ ಮುನ್ನ ಮೈಸೂರನ್ನು ಹೊಸ ಬಾಳಿಕೆಯ, ಹೊಸ ಆಳಿಕೆಯ ಕಡೆಗೆ ಮುಂದಾಳಾಗಿ ನಡೆಸುತ್ತ, ಮೈಸೂರು ಆದರ್ಶ ಸಂಸ್ಥಾನವೆಂಬ ಹೆಮ್ಮೆಯನ್ನು ಕನ್ನಡಿಗರಿಗೆ ತುಂಬಿಕೊಟ್ಟರು. ಎಲ್ಲರಿಂದಲೂ ಮಾದರಿಯ ರಾಜನೆಂದು, ಚಿನ್ನದಂತಹ ಮನುಷ್ಯನೆಂದು, ಮಹಾನುಭಾವನೆಂದು ಹೊಗಳಿಸಿಕೊಂಡರು.

ಪರಿಷತ್ತಿನ ಬೆಳ್ಳಿಯ ಹಬ್ಬದಲ್ಲಿ ನಮಗೆ ಅವರ ಕಡೆಯ ನೋಟ! ಕನ್ನಡಿಗರೆಲ್ಲರನ್ನೂ ಕಂಡು, ಕನ್ನಡಿಗರೆಲ್ಲರಲ್ಲೂ ಆನಂದವನ್ನು ತುಂಬಿ, ನಗುಮುಖದಿಂದ ಮನೆಗೆ ಹೋದರು. ಆ ನಗುಮುಖ ನಮ್ಮ ಎದೆಯಲ್ಲಿ ನೆಲಸಲಿ. ಆ ಕನ್ನಡಿಗರೆಲ್ಲಾ ಬೇಗ ಒಂದಾಗಿ ಅವರ ಆತ್ಮಕ್ಕೆ ಸಂತುಷ್ಟಿಯನ್ನು ನೀಡಲಿ. ಅವರ ಆತ್ಮ ದೇವಲೋಕದಿಂದ ಶಾಂತಿ ಸಾಮರಸ್ಯಗಳನ್ನು ಸೂಸಿ ಈ ಲೋಕವನ್ನು ನಡಸಲಿ. ರಾಜಕುಟುಂಬದವರಿಗೂ, ಶೋಕದ ಮೇಲೆ ಶೋಕಕ್ಕೆ ಗುರಿಯಾದ ಶ್ರೀಮದ್ಯುವರಾಜರಿಗೂ, ಪ್ರಾಣಿಮಿತ್ರರನ್ನೂ ಆಪ್ತಸ್ವಾಮಿಯನ್ನೂ ಕಳೆದುಕೊಂಡ ದಿವಾನರವರಿಗೂ, ಕರುಳು ಕುದಿಯುತ್ತಿರುವ ಕನ್ನಡ ನಾಡಿಗೂ ಭಗವಂತನು ಧೈರ್ಯವನ್ನು ಕೊಡಲಿ. ಮತ್ತೆ ಮಂಗಳವನ್ನು ನೀಡಲಿ. ಸಿರಿಗನ್ನಡಂ ಗೆಲ್ಗೆ.

—ಬಿ. ಎಂ. ಶ್ರೀಕಂಠಯ್ಯ.

ಪುರಾತನವಾದ ಒಂದು ದೊಡ್ಡ ಮನೆತನದ ಯಜಮಾನನು ತೀರಿಹೋದಂದು ಮನೆಯ ಜನವನ್ನು ಯಾವ, ಮಾತು ಹೇಳಲಾಗದ, ಅತ್ತು ಮುಗಿಸಲಾಗದ, ಸಂಕಟ ಆವರಿಸುವುದೋ ಆ ದುಃಖ ಪರಿಸ್ಥಿತಿ-ಇಂದು ಮೈಸೂರಿನ ಪ್ರಜೆಗೆ ಬಂದಿದೆ. ರಾಜರಿಗಿರಬೇಕಾದ ಸಕಲ ಸದ್ಗುಣಗಳೂ ನಮ್ಮ ಶ್ರೀಮನ್ಮಹಾರಾಜರವರಲ್ಲಿ ಸಮ್ಮೇಳನದಿಂದ ಶೋಭಿಸುತ್ತಿದ್ದವು. ಸುವ್ಯವಸ್ಥಿತವಾದ ರಾಜ್ಯದ ವಿಶೇಷ ಭಾಗ್ಯವೇನೆಂದರೆ ಆಡಳಿತದ ವಿವರಗಳಲ್ಲಿ ತಾನು ಎಷ್ಟು ದೂರ ಸ್ವಂತವಾಗಿ ಕೈ ಹಾಕಬಹುದು, ಎಲ್ಲಿ ಮಂತ್ರಿಗಳಿಗೆ ಸ್ವಾತಂತ್ರ್ಯ ಕೊಡಬೇಕು ಎಂಬ ನಯಸೂಕ್ಷ್ಮವನ್ನರಿತ ರಾಜನು ಎಂದು ಇಂಗ್ಲೀಷ್ ರಾಜ್ಯತತ್ವ ವಿಚಾರಗಳಲ್ಲಿ ಪ್ರಸಿದ್ಧನಾದ ವಾಲ್ಟರ್ ಬೇಜಟ್ ಎಂಬಾತನು ಹೇಳಿದ್ದಾನೆ. ನಮ್ಮ ದಿವಂಗತ ಮಹಾರಾಜರವರ ೩೮ ವರ್ಷಗಳ ನಯ ವಿಚಕ್ಷಣೆಗಳು ಆ ತತ್ವಕ್ಕೆ ನಿದರ್ಶನದಂತಿವೆ. ಸ್ವತಃ ಪರಮ ಸಮರ್ಥರಾಗಿದ್ದಾಗ್ಯೂ, ಹೊರಗಡೆಗೆ ಹೆಚ್ಚಾಗಿ ಕಾಣಿಸಿಕೊಳ್ಳದೆ ಅಂತರಂಗದಿಂದಲೇ ಸೂತ್ರಗಳನ್ನು ನಡೆಸಿ ಮಹಾ ಕಾರ್ಯಗಳನ್ನು ಸಾಧಿಸುವ ಪ್ರಭಾವ ಇವರದಾಗಿತ್ತು. ಭರತಖಂಡದ ದೇಶೀಯ ಸಂಸ್ಥಾನಗಳಲ್ಲಿ ಇವರ ಸ್ಥಾನವು ಅತ್ಯುನ್ನತವಾದದ್ದೆಂದು ಹೇಳುವುದು ಹೇಗೆ ಅತಿಶಯೋಕ್ತಿಯಲ್ಲವೋ ಹಾಗೆಯೇ ಅದು ಅವರ ಮಹಿಮೆಯಷ್ಟನ್ನೂ ಪೂರ್ತಿಯಾಗಿ ತಿಳಿಸತಕ್ಕ ಮಾತಲ್ಲ. ಪ್ರಪಂಚದ ನಾಗರಿಕ ರಾಜ್ಯಗಳನ್ನಾಳಿದ ಪರಮ ಕೀರ್ತಿವಂತರಾದ ಮತ್ತು ಆದರ್ಶಪ್ರಾಯರಾದ ರಾಜರುಗಳಲ್ಲಿ ಇವರೂ ಒಬ್ಬರೆಂದು ಸರ್ವತ್ರ ಪರಿಗಣಿತರಾಗುವದರಲ್ಲಿ ಸಂದೇಹವಿಲ್ಲ. ಇಂಥವರನ್ನು ಕಂಡ ಮೈಸೂರು ಅವರನ್ನು ಮರೆಯುವುದಾಗಲೀ ಅಥವಾ ಅವರಿಂದ ಪಡೆದ ಸಮಾಧಾನವನ್ನು ಪುನಃ ಪಡೆಯುವುದಾಗಲೀ ಅಸಂಭವ. ನಾವು ಈಗ ತಂದುಕೊಳ್ಳಬಹುದಾದ ಸಮಾಧಾನ ಒಂದು–ಶ್ರೀಮನ್ ಜಯಚಾಮರಾಜ ಒಡೆಯರವರು ತಮ್ಮ ಮಹೋನ್ನತ ಪದವಿಗೆ ತಕ್ಕ ಯೋಗ್ಯತಾ ಸಂಪತ್ತನ್ನು ಪಡೆದುಕೊಂಡು ತಮ್ಮ ದೊಡ್ಡಪ್ಪನವರು ನಡೆದ ಉದಾತ್ತ ಮಾರ್ಗದಲ್ಲಿ ನಡೆಯುವದನ್ನು ಕಲಿತಿದ್ದಾರೆಂಬುದು. ನಾವು ಈಗ ಮಾಡಬೇಕಾಗಿರುವ ಪ್ರಾರ್ಥನೆ ಒಂದು — ದಿವಂಗತರ ಆತ್ಮಜ್ಯೋತಿಯು ಈ ಚಿರಂಜೀವರ ಜೀವನದಲ್ಲಿ ಬೆಳಗುತ್ತಿರಲೆಂಬುದು.

—ಡಿ. ವಿ. ಗುಂಡಪ್ಪ.

ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ದಯಮಾಡಿಸಿ, ಪ್ರಜಾವರ್ಗವನ್ನು ಕಣ್ಣುತುಂಬ ನೋಡಿ, ಪ್ರಜೆಗಳಿಗೆ ದಿವ್ಯದರ್ಶನವಿತ್ತು, ನಮ್ಮೆಲ್ಲರ ಒಲವು ಗೆಲವಿನ ಕಾಣಿಕೆಯನ್ನು ಕೈಕೊಂಡು, ಅಂದು ನೆರೆದ ಜನಕ್ಕೆ **ಸಿರಿಗನ್ನಡಂ ಗೆಲ್ಗೆ** ಎಂಬ ಕೊನೆಯ ಸಂದೇಶವನ್ನು ತಮ್ಮ ದಿವ್ಯ ವಾಣಿಯಿಂದ ಉಪದೇಶವನ್ನಾಗಿತ್ತ ನಮ್ಮ ಪ್ರಭುಗಳವರು ನಾಲ್ಮಡಿ ಶ್ರೀಕೃಷ್ಣರಾಜ ಒಡೆಯರವರು ಈಗಾಗಲೇ ನಮ್ಮನ್ನು ಅಗಲಿದ್ದಾರೆ. ದುಃಖದಾವಾಗ್ನಿಯಿಂದ ಬೆಂದ ಪ್ರಜೆಗಳಾದ ನಾವೆಲ್ಲರೂ ರಾಜಮನೆತನದವರೊಡನೆ ಕಣ್ಣೀರ ಕಡಲಿನಲ್ಲಿ ಮುಳುಗಿದ್ದೇವೆ. ದುರದೃಷ್ಟವಂತರಾದ ನಾವು ಪರಮ ಜನಾನುರಾಗಿಗಳಾಗಿದ್ದ ಶ್ರೀಮದ್ಯುವರಾಜರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರನ್ನು ಕಳೆದುಕೊಂಡು ಇನ್ನು ಐದಾರು ತಿಂಗಳು ಕೂಡ ಆಗಿಲ್ಲ. ಆ ದುಃಖದ ಹಸಿಯೇ, ಆ ಕ್ರೂರ ವಿಧಿಯ ಕರಾಳ ಹೊಡೆತದ ಪೆಟ್ಟೇ ಮಾಯದಿರುವಾಗ ನಮ್ಮ ಸಕಲ ಸೌಭಾಗ್ಯಗಳಿಗೆ, ಶಾಂತಿ ಸಮಾಧಾನಗಳಿಗೆ ಆಗರವಾಗಿ ತಂದೆಯಂತಿದ್ದ ಪ್ರಭುವನ್ನೇ ನೀಗಿಕೊಂಡೆವು. ಮೈಸೂರು ಪ್ರಜೆಗಳ ದೌರ್ಭಾಗ್ಯವಿನ್ನೆಂಥದು!

ಕಣ್ಣೀರೂ ಹೃದಯ ವೇದನೆಯೂ ಬಲವಾಗಿ ನಮ್ಮನ್ನು ಸ್ಮೃತಿಗೆಡಿಸುತ್ತಿರುವಲ್ಲಿ, ಮೈಸೂರ ಸೊಬಗು ಸಂಸ್ಕೃತಿಯು ಮಣ್ಣುಗೂಡಿತೇ ಎನಿಸುವಲ್ಲಿ, ಪ್ರಜೆಗಳಾದ ನಾವು ಧೈರ್ಯಗೊಂಡು ನಮ್ಮ ಭಕ್ತಿ ಭರವಸೆಗಳನ್ನು ಶ್ರೀಮನ್ಮಹಾರಾಜರವರ ರಾಜಮನೆತನದಲ್ಲಿ—ಅವರ ಉತ್ತರಾಧಿಕಾರಿಗಳಾದ ಶ್ರೀ ಜಯಚಾಮರಾಜ ಒಡೆಯರವರಲ್ಲಿ—ಇಟ್ಟು ಅವರ ಸತ್ಪ್ರಜೆಗಳಾಗಿ ಬಾಳುವ. ಅವರೇ ಅಖಿಲ ಕರ್ನಾಟಕದ ಮಹಾ ಚಕ್ರೇಶ್ವರರಾಗುವಂತೆ, ಹಿರಿಯ ಕನ್ನಡ ನಾಡಿಗೆ ಅಸ್ತಿಭಾರವನ್ನಿಟ್ಟ ವಿದ್ಯಾರಣ್ಯರೂ, ಪಂಪಾಪತಿಯೂ ಅನುಗ್ರಹಿಸಲೆಂದೂ, ಜನಕರಾಜನಂತಿದ್ದ ಶ್ರೀ ನಾಲುಮಡಿ ಶ್ರೀ ಕೃಷ್ಣರಾಜ ಒಡೆಯರವರ ಅಂತಿಮ ಆಶಯವಾದ **ಸಿರಿಗನ್ನಡಂ ಗೆಲ್ಗೆ** ಎಂಬ ಮಾತು ಸಾರ್ಥಕವಾಗುವಂತೆ ಯದುನೃಪಾಲರ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ಮಾತೆಯು ಆಶೀರ್ವದಿಸುವಳೆಂದೂ ನಂಬಿ ಸಮಾಧಾನ ಮಾಡಿಕೊಳ್ಳೋಣ.

—ಡಿ. ಆರ್. ಚನ್ನೇಗೌಡ.
—ಕೌಸಲ್ಯಾದೇವಿ.

ಆಳಿದ ಮಹಾಸ್ವಾಮಿಯವರು ಭಾರತದಲ್ಲೆಲ್ಲಾ, ಅದೇಕೆ ಅಖಿಲ ಪ್ರಪಂಚದಲ್ಲಿ ಪ್ರಸಿದ್ಧರಾದ ಮಹಾನುಭಾವರು. ಅಂತಹವರನ್ನು ಕಳೆದುಕೊಂಡ ನಾವು ಎಷ್ಟು ಅದೃಷ್ಟಹೀನರು ಎಂದು ಹೇಳುವುದು ಅಸಾಧ್ಯ. ಅವರಿಗೆ ತಮ್ಮ ಪ್ರಜೆಗಳಲ್ಲಿ ಪ್ರೀತಿ, ವಾತ್ಸಲ್ಯ ಮತ್ತು ಅನುರಾಗ ಎಷ್ಟು ಅಪಾರವಾಗಿದ್ದಿತು ಎಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ಅವರು ರಾಜಋಷಿಗಳಾಗಿದ್ದರು. ಅವರ ಮರಣದ ಬಗ್ಗೆ ನಾವು ಎಷ್ಟು ವ್ಯಸನಪಟ್ಟರೂ ಸಾಲದು. ಶ್ರೀಮದ್ಯುವರಾಜ ಶ್ರೀ ಜಯಚಾಮರಾಜ ಒಡೆಯರವರು ದಿವಂಗತ ಮಹಾಸ್ವಾಮಿಯವರ ಮೇಲ್ಪಂಕ್ತಿಯನ್ನನುಸರಿಸಿ, ಪ್ರಜೆಗಳು ಇನ್ನೂ ಹೆಚ್ಚಿನ ಸುಖಸಂತೋಷಗಳಿಂದ ಇರುವಂತೆ ಆಗಲೆಂದು ದೇವರನ್ನು ಪ್ರಾರ್ಥಿಸೋಣ. ಶ್ರೀಮದ್ಯುವರಾಜರವರಿಗೂ, ರಾಜಕುಟುಂಬದವರಿಗೂ ದೇವರು ಸಮಾಧಾನವನ್ನು ದಯಪಾಲಿಸಲಿ.

—ಧರ್ಮಪ್ರಕಾಶ ಧರ್ಮಾತ್ಮ,
ರಾವ್ ಬಹದ್ದೂರ್ ಎಸ್. ಸಜ್ಜನರಾವ್.

ಶ್ರೀಮನ್ಮಹಾರಾಜರವರು ಬಾಲ್ಯದಲ್ಲಿಯೇ ಅತ್ಯಂತ ತೀಕ್ಷ್ಣಮತಿಗಳಾಗಿ, ದೂರದೃಷ್ಟಿಯುಳ್ಳವರಾಗಿ ಜನಗಳ ಮರ್ಜಿಯನ್ನು ತಿಳಿದುಕೊಳ್ಳಬಲ್ಲವರಾಗಿದ್ದರು. ಏಕಾಗ್ರಚಿತ್ತದಿಂದ ಕೆಲಸ ಮಾಡುತ್ತಿದ್ದರು. ಕಟು ಶ್ರದ್ಧೆಯಿಂದ ಹಿಂದೂ ಧರ್ಮವನ್ನು ನಡೆಯಲ್ಲಿ ತರುತ್ತಿದ್ದರಾದರೂ ಚಿಕ್ಕಂದಿನಿಂದಲೇ ವಿಶಾಲ ದೃಷ್ಟಿಯನ್ನು ಬೆಳಸಿಕೊಂಡಿದ್ದರು........ಮಹಾರಾಜರವರು ತಾಯ್ನುಡಿಯಾದ ಕನ್ನಡದ ಜೊತೆಗೆ ಇಂಗ್ಲಿಷ್, ಉರ್ದುಗಳಲ್ಲಿ ಬಹಳ ನಿರರ್ಗಳವಾಗಿ ಮಾತನಾಡುತ್ತಿದ್ದರು. ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯ ಅವರಿಗಿತ್ತು. ಮರಾಠಿ, ತಮಿಳು ಮುಂತಾದ ಸೋದರ ಭಾಷೆಗಳಲ್ಲೂ ಮಾತನಾಡಬಲ್ಲವರಾಗಿದ್ದರು.

—ದಿವಾನ್ ಬಹದ್ದೂರ್ ಪಿ. ರಾಘವೇಂದ್ರರಾವ್.

ಘನತೆ, ಪ್ರಜಾನುರಾಗ, ನಯ, ಶೀಲ, ಇವೆಲ್ಲವುಗಳಿಗೆ ಆದರ್ಶರಾಗಿದ್ದ ಮಹಾಪ್ರಭುಗಳು. ಪರಮ ಪೂಜ್ಯರು. ಈ ಮಧ್ಯಮಯಸ್ಸಿನಲ್ಲೇ ದಿವಂಗತರಾದುದು ಮೈಸೂರಿನ ಪ್ರಜೆಗಳಿಗೆ ಅಪಾರ ನಷ್ಟ. ಮೈಸೂರಿನವರಿಗೆ ಮಾತ್ರವೇಕೆ, ವಿಶಾಲ ಭಾರತಕ್ಕೇ ನಷ್ಟವುಂಟಾಗಿದೆ.

—ದಿವಾನ್ ಬಹದ್ದೂರ್ ಕೆ. ಎಸ್. ಚಂದ್ರಶೇಖರಯ್ಯರ್.

ಇಂಡಿಯಾದಲ್ಲೆಲ್ಲಾ 'ಕಾನ್‌ಸ್ಟಿಟ್ಯೂಷನಲ್ ರೂಲರ್' (ಸಾಂಕುಶ ಪ್ರಭು) ಎಂದು ಅತ್ಯಂತ ಪ್ರಸಿದ್ಧಿ ಪಡೆದ ನಮ್ಮ ಪ್ರಭುಗಳ ಮರಣದಿಂದ ನಮ್ಮ ಸಂಸ್ಥಾನಕ್ಕೇ ಹೇಳಲಾರದಷ್ಟು ಶೋಕವೂ ನಷ್ಟವೂ ಉಂಟಾಗಿದೆ. ಐದು ತಿಂಗಳೊಳಗೇ ಇಬ್ಬರು ಸಹೋದರರು ದಿವಂಗತರಾದುದು ನಮ್ಮ ದೌರ್ಭಾಗ್ಯ. ಶ್ರೀಮನ್ಮಹಾರಾಜರವರು ಘೋಷಿಸಿದ ಸುಧಾರಣೆಗಳು, ಜಾರಿಗೆ ಬರುವುದಕ್ಕೆ ಮುಂಚಿತವಾಗಿಯೇ ಅವರು ದಿವಂಗತರಾದುದು ಅತ್ಯಂತ ಶೋಚನೀಯವಾದ ಅಂಶವಾಗಿದೆ.

ಶ್ರೀಮನ್ಮಹಾರಾಜರವರ ಮರಣದಿಂದ ಸಹಿಸಲಾರದಷ್ಟು ದುಃಖವೂ ನಷ್ಟವೂ ನಮಗೆಲ್ಲರಿಗೂ ಉಂಟಾಗಿದೆ. ದಿವಂಗತರ ಆತ್ಮಕ್ಕೆ ಭಗವಂತನು ಶಾಂತಿ ಈಯಲಿ.

—ಪಿ. ಸುಬ್ಬರಾಮಶೆಟ್ಟಿ.

ಮೈಸೂರು ಮಹಾರಾಜರವರು ಶೀಲಶಿಖಾಮಣಿಗಳೆನಿಸಿದ್ದರು. ಅಲ್ಲದೆ ಶ್ರೇಷ್ಠ ಪ್ರಜಾವತ್ಸಲರೆನಿಸಿದ್ದರು. ಅವರು ಹೆಚ್ಚು ಮಾತನಾಡುತ್ತಿರಲಿಲ್ಲ. ಆದರ್ಶ ಹಿಂದೂ ನರೇಂದ್ರರಂತೆ ವರ್ತಿಸುತ್ತಿದ್ದರು. ಅವರು ತಮ್ಮ ಜೀವನವನ್ನೆಲ್ಲ ಉತ್ತಮ ಮತ್ತು ಆಕರ್ಷಯುತವಾದ ರೀತಿಯಲ್ಲಿ ನಡಸಿದರು. ತಮ್ಮ ಅಧಿಕಾರ ವರ್ಗದವರೊಂದಿಗೆ ಅವರ ಬಾಂಧವ್ಯವು ಮಧುರವಾಗಿತ್ತು. ಮನುಷ್ಯರ ಮರ್ಜಿಯನ್ನು ತಿಳಿದುಕೊಳ್ಳುವುದರಲ್ಲಿ ಅವರು ಬಹಳ ಶಕ್ತರಾಗಿದ್ದರು.

—ಸಿ. ರಾಜಗೋಪಾಲಾಚಾರಿ.

ಶ್ರೀಮನ್ಮಹಾರಾಜರವರ ಮರಣದಿಂದ ಮೈಸೂರು ಸಂಸ್ಥಾನವೇ ಅಲ್ಲದೆ ಇಡೀ ಭರತಖಂಡವೇ ಕಣ್ಣೀರಿಡುತ್ತಿದೆ. ರಾಜರ ಲಕ್ಷಣಗಳೆಲ್ಲವೂ ಅವರಲ್ಲಿ ಮೂರ್ತಿಮತ್ತಾಗಿದ್ದವು. ದೈವಭಕ್ತಿಯುಳ್ಳವರಾಗಿದ್ದರು. ಕಿರೀಟಧಾರಿಗಳಾಗಿದ್ದರೂ ತಾವು ಪ್ರಜಾವತ್ಸಲರೆಂಬ ಬಿರುದಾಂಕಿತರಾಗಿದ್ದರು. ಇಂತಹ ಮಹಾರಾಜರನ್ನು ನಾವು ಮುಂದೆ ನೋಡಲಾರೆವು.

—ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿ.

ಶ್ರೀಮನ್ಮಹಾರಾಜರು ಮಹರ್ಷಿಗಳಂತಿದ್ದರು. ಪ್ರಜೆಗಳ ಸುಖಸಂತೋಷಗಳನ್ನು ಸಾಧಿಸುವುದೇ ಅವರ ಆಶಯವಾಗಿತ್ತು. ನರೇಂದ್ರಗಣದಲ್ಲೆಲ್ಲಾ ಇವರಿಗಿಂತ ಸರಳವಾದ ಜೀವನವನ್ನು ನಡಸಿದವರು ಇನ್ನೊಬ್ಬರಿಲ್ಲ. ಪ್ರಜೆಗಳು ಅವರಲ್ಲಿಟ್ಟದ್ದ ರಾಜಭಕ್ತಿ ವಿಶ್ವಾಸಗಳಿಗೆ ಪಾರವೇ ಇಲ್ಲ.

—ಎಸ್. ಸತ್ಯಮೂರ್ತಿ.

ಮಹಾ ಪರಿಶುದ್ಧರೂ, ಅನುಪಮ ಕರ್ತವ್ಯನಿಷ್ಠರೂ ಜ್ಞಾನ ಮತ್ತು ಲಲಿತಕಲೆಗಳ ಮಹಾಪೋಷಕರೂ ಆಗಿ, ಆದರ್ಶ ಹಿಂದೂ ರಾಜರಾಗಿದ್ದ ಮೈಸೂರು ಮಹಾರಾಜರವರು ದಿವಂಗತರಾದುದಕ್ಕಾಗಿ ಇಡೀ ಭರತಖಂಡವೇ ಮರುಗುತ್ತಿದೆ. ಅರ್ಥಶಾಸ್ತ್ರದಲ್ಲಿ ಹೇಳಿರುವಂತೆ ರಾಜನಲ್ಲಿರಬೇಕಾದ ಸಮಸ್ತ ಗುಣಗಳೂ ಅವರಲ್ಲಿ ಇದ್ದುವು:

ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಂ ||
ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಂ ||

—ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್.

---

## ಪ್ರಮುಖ ಪತ್ರಿಕೆಗಳ ಕಾಣಿಕೆ

ಅತ್ಯಂತ ಪ್ರಸಿದ್ಧರಾದ ಅರಸರನ್ನೂ, ಬ್ರಿಟಿಷ್ ಸಾಮ್ರಾಜ್ಯದ ನೆಚ್ಚುಮೆಚ್ಚಿನ ಪ್ರಿಯ ಮಿತ್ರರನ್ನೂ ಮೃತ್ಯು ಬಹುಬೇಗ ಸೆಳೆದುಕೊಂಡಿತು. ಶ್ರೀಮನ್ಮಹಾರಾಜರವರೂ ಅವರ ಪೂಜ್ಯ ತಂದೆಯವರೂ ತಮ್ಮ ಸಂಸ್ಥಾನದಲ್ಲಿ ರಾಜ್ಯಾಂಗ ಸುಧಾರಣೆಗಳನ್ನು ಕಾಲಕಾಲಕ್ಕೆ ಜಾರಿಗೆ ತರುತ್ತ ವಿದ್ಯಾ ಪ್ರಚಾರಕ್ಕೆ ಪ್ರೋತ್ಸಾಹ ಕೊಡುತ್ತ, ವ್ಯವಸಾಯ ಮತ್ತು ಕೈಗಾರಿಕೆಗಳ ಅಭಿವೃದ್ಧಿಗೆ ಆಧುನಿಕ ವೈಜ್ಞಾನಿಕ ಶೋಧನೆಗಳನ್ನು ಉಪಯೋಗಿಸಿಕೊಳ್ಳುತ್ತ ಇತರ ಭಾರತೀಯ ನರೇಂದ್ರರಿಗೂ, ಹಲವು ವಿಚಾರಗಳಲ್ಲಿ ಬ್ರಿಟಿಷ್ ಪ್ರಾಂತಗಳಿಗೂ ಮೇಲ್ಪಙ್ತಿಯಾಗಿದ್ದರು.

—ಲಂಡನ್ ಟೈಮ್ಸ್.

ಶ್ರೀ ಕೃಷ್ಣರಾಜ ಒಡೆಯರವರ ಮರಣದಿಂದ ಮೈಸೂರಿನ ಪ್ರಜಾವತ್ಸಲರು ಹೋದಂತಾಯಿತು. ಮತ್ತು ದೇಶೀಯ ಸಂಸ್ಥಾನಗಳ ಆದರ್ಶಪ್ರಭುಗಳು ಕಣ್ಮರೆಯಾದಂತಾಯಿತು. ರಾಜರ್ಷಿಗಳೆಂದು ಪ್ರಖ್ಯಾತರಾಗಿದ್ದ ಅವರ ಕಾಲದಲ್ಲಿ ಮೈಸೂರು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿದೆ.

—ಹಿಂದೂ, ಮದರಾಸ್.

ಒಳ್ಳೇ ಸಂಗೀತ ಪ್ರೇಮಿಗಳೂ ಚಿತ್ರಕಲಾ ಕೋವಿದರೂ ಆಗಿದ್ದ ಅವರ ವ್ಯಕ್ತಿತ್ವವೂ ಘನತೆಯೂ ಇತರರಿಗೆ ಮಾದರಿಯಾಗಿತ್ತು. ಪ್ರಾಚೀನ ಅರಸದುಗಳ ಗುಣಗಳೆಲ್ಲವೂ ಅವರಲ್ಲಿ ಮೂರ್ತಿಮತ್ತಾಗಿದ್ದುವು. ಇಂದಿನ ಮೈಸೂರಿಗೆ ಅವರೇ ಕಾರಣರು.

—ಟೈಮ್ಸ್ ಆಫ್ ಇಂಡಿಯಾ, ಬೊಂಬಾಯಿ.

ಮೈಸೂರು ಸಂಸ್ಥಾನ ಕೃಪಾಳುವಾದ ಗುಣಾಢ್ಯರನ್ನು ಕಳೆದುಕೊಂಡು ಕಣ್ಣೀರಿಡುತ್ತಿದೆ. ಅಧಿಕಾರ ಲಾಲಸೆಯಿಂದ ಹಾದಿ ತಪ್ಪಬಹುದಾದ ಗುಣಗಳಾವುವೂ ಮಹಾಸ್ವಾಮಿಯವರಲ್ಲಿರಲಿಲ್ಲ. ಸಂಸ್ಥಾನವನ್ನು ಪ್ರಜೆಗಳ ಆಸ್ತಿಯೆಂದು ಪರಿಗಣಿಸಿದ್ದರು. ಮೈಸೂರನ್ನು ಔನ್ನತ್ಯದ ಪರಮಾವಧಿಗೆ ಕೊಂಡೊಯ್ದರು.

—ಮದರಾಸ್ ಮೆಯಿಲ್.

ಹತ್ತನೆಯ ವಯಸ್ಸಿನಲ್ಲಿ ಪಿತೃವಿಯೋಗ ಮತ್ತು ರಾಜ್ಯಾಭಿಷೇಕ ಹದಿನಾರನೇ ವಯಸ್ಸಿನಲ್ಲಿ ವಿವಾಹ; ೧೮ನೆಯ ವಯಸ್ಸಿನಲ್ಲಿಯೇ ರಾಜ್ಯಾಡಳಿತ ಸೂತ್ರಗಳನ್ನು ವಹಿಸುವ ಜವಾಬ್ದಾರಿ; ೩೮ ವರ್ಷಗಳ ರಾಜ್ಯಭಾರ; ೫೬ನೆಯ ವಯಸ್ಸಿನಲ್ಲಿ ಸ್ವರ್ಗಾರೋಹಣ. ಮೊದಲನೇ ೫ ವರ್ಷಗಳನ್ನು ಬಿಟ್ಟರೆ ಉಳಿದ ೫೧ ವರ್ಷಗಳೂ ಒಂದು ದೀರ್ಘ ತಪಸ್ಯದಲ್ಲಿ ಉರುಳಿ ಹೋದವು. ಅದೆಂತಹ ಶಿಕ್ಷಣ! ಅದೆಂತಹ ಸಂಯಮ! ಭಾರತೀಯರನೇಕರ ಬಾಯಲ್ಲಿ ನಮ್ಮ ಮಹಾರಾಜರು 'ದಕ್ಷಿಣ ಜನಕ', 'ರಾಜರ್ಷಿ', 'ಕರ್ಮಯೋಗಿ', 'ಆದರ್ಶನರೇಶ' ಮೊದಲಾಗಿ ಕರೆಯಲ್ಪಟ್ಟದ್ದಾರೆ. ಇವೆಲ್ಲ ಬರೀ ಉಪಚಾರದ ಮಾತುಗಳಲ್ಲ. ಮುಖ ಸ್ತೋತ್ರದ ಗೀತಾಪಾದಗಳಲ್ಲ. ಹೃದಯಾಂತರಾಳದಿಂದ ಹೊರಟ ಪ್ರೇಮ ಮತ್ತು ಪೂಜಭಾವನೆಯ ಮಾತುಗಳು. ಯಾರ ಪಾಲಿಗೆ ಅವರು ಏನೇ ಆಗಿರಲಿ ಮೈಸೂರಿನ ಹಳ್ಳಿಗಾಡಿನ ಬೋರೇಗೌಡನ ಪಾಲಿಗೆ ಪ್ರತ್ಯಕ್ಷ ಪರದೈವ !!

—ವಿಶ್ವಕರ್ಣಾಟಕ.

ಮೈಸೂರಿನ ಒಡೆಯರಾಗಿದ್ದರೂ ಆ ಮಾಲೀಕತ್ವದ ಚಿಹ್ನೆಗಳು ಅವರಲ್ಲಿ ಕಾಣಿಸುತ್ತಿರಲಿಲ್ಲ. ರಾಜ್ಯಾಡಳಿತವನ್ನು ದರ್ಪದಿಂದ ನಿರ್ವಹಿಸುತ್ತಿದ್ದರೂ ಕೂಡ ನಿಷ್ಪಕ್ಷಪಾತ ಮನೋಧರ್ಮವು ಅವರ ಜೀವನದ ಹೆಗ್ಗುರಿಯಾಗಿತ್ತು. ನಮ್ಮರಸರ ಮರಣದಿಂದ ಜಗತ್ತಿನ ಸಮಸ್ತ ಜನರಿಂದು ಕಣ್ಣೀರಿಡುತ್ತಿದ್ದರೆ ಅದು ಅವರ ನಿಷ್ಕಳಂಕ ಜೀವನದ ಪರಿಣಾಮದಿಂದ.

ಇಂತಹ ಮಹಾಪ್ರಭುಗಳು ಹಿಂದಿರಲಿಲ್ಲ. ಇನ್ನು ಮುಂದೆ ಹುಟ್ಟಲಾರರು. ರಾಜರ್ಷಿಗಳೆಂದು ವಿಖ್ಯಾತಗೊಂಡ ಈ ಪುರುಷ ಶ್ರೇಷ್ಠರು ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿ ಕಣ್ಮರೆಯಾದರು.

—ತಾಯಿನಾಡು.

ನಮ್ಮ ಶ್ರೀಮನ್ಮಹಾರಾಜರವರ ಈ ಮೂವತ್ತೆಂಟು ವರ್ಷಗಳ ಆಳ್ವಿಕೆಯಲ್ಲಿ ಮಹಾಸ್ವಾಮಿಯವರ ದೇಶವಾತ್ಸಲ್ಯ, ಪ್ರಜಾವಾತ್ಸಲ್ಯ ಮತ್ತು ದೂರದರ್ಶಿತ್ವಗಳಿಂದ ಸಂಸ್ಥಾನಕ್ಕಾಗಿರುವ ಉಪಕಾರ ಪರಂಪರೆಗಳನ್ನು ಬಣ್ಣಿಸುವುದು ಅಸಾಧ್ಯ. ಇತಿಹಾಸಕಾರನ ಕೆಲಸವನ್ನು ಅಲ್ಪರಾದ ನಾವು ಕೈಗೊಳ್ಳಲು ಸಾಧ್ಯವಾದೀತೇ! ಪ್ರಜಾಸೌಖ್ಯ ಈ ೩೮ ವರ್ಷಗಳಲ್ಲಿ ಅತಿಶಯವಾಗಿ ವೃದ್ಧಿಯಾಗಿ ಈ ೩೮ ವರ್ಷಗಳ ಇತಿಹಾಸವು ಮೈಸೂರಿನ ಇತಿಹಾಸದಲ್ಲಿ ಸ್ವರ್ಣಯುಗದ ಘಟ್ಟ.

—ದೇಶಬಂಧು.

ಶ್ರೀಮತ್ಕರ್ನಾಟಕ ರತ್ನಸಿಂಹಾಸನಾಧೀಶ್ವರ ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರರು ಮೊನ್ನೆ ಶನಿವಾರ ೩-೮-೧೯೪೦ನೆಯ ದಿನ ರಾತ್ರಿ ಸುಮಾರು ೯ ಗಂಟೆಗೆ ಬೆಂಗಳೂರಲ್ಲಿರುವ ತಮ್ಮ ಅರಮನೆಯಲ್ಲಿ ಮೃತಪಟ್ಟರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ. ಪ್ರಜಾನುರಾಗಿಗಳಾಗಿ ಮಹಾರಾಜರು ಕಣ್ಮರೆಯಾದ ಈ ದುಃಖದಾಯಕ ವಾರ್ತೆಯು ಅಖಂಡ ಕರ್ನಾಟಕವನ್ನು— ಅದೇಕೆ ಇಡೀ ಭರತಖಂಡವೆಂದೂ ಹೇಳಬಹುದು— ಶೋಕಸಾಗರದಲ್ಲಿ ಮುಳುಗಿಸಿದೆ. ಕಣ್ಣೀರು ಸುರಿಸದ ಒಬ್ಬ ಕನ್ನಡಿಗನೂ ಇಲ್ಲವೆಂದು ಹೇಳಬಹುದು. ಕಳೆದ ಮಾರ್ಚಿ ತಿಂಗಳಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ನಿಧನದಿಂದ ಶೋಕಕ್ಕೊಳಗಾದ ಕನ್ನಡ ನಾಡಿಗೆ ಈ ಹೊಸ ವಾರ್ತೆಯಿಂದ ಹುಣ್ಣಿನಮೇಲೆ ಬರೆ ಎಳೆದಂತಾಗಿದೆ. ಮೊನ್ನೆ ಜೂನ್ ೩ನೆಯ ತಾರೀಖಿನ ದಿವಸ ಶ್ರೀ ಕೃಷ್ಣರಾಜ ಒಡೆಯರವರು ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಉದ್ಘಾಟನವನ್ನು ನೆರವೇರಿಸಿದರು. ಕನ್ನಡಿಗರಿಗೆ ಅದೇ ಕೊನೆಯ ದರ್ಶನವೆಂದು ಕನಸು—ಮನಸ್ಸಿನಲ್ಲಿಯೂ ಇದ್ದಿಲ್ಲ. ವಿಧಾತನ ಲಿಖಿತವನ್ನು ಅರಿತವರಾರು? ಅಂದು ಕಣ್ಮುಂದೆ ಕಟ್ಟಿದ ಮೂರ್ತಿಮಂತ ವ್ಯಕ್ತಿಯು ಇಷ್ಟು ಬೇಗನೆ ಕಣ್ಮರೆಯಾದುದನ್ನು ಕಂಡು ವಿಶಾಲ ಕನ್ನಡಿಗರಿಗೆ ಆಶ್ಚರ್ಯವೂ ಅನುತಾಪವೂ ಒಂದೇ ಕಾಲಕ್ಕೆ ಮುತ್ತಿಕೊಂಡಿವೆ.

ರಾಮಾಯಣ ಮಹಾಭಾರತ ಪುರಾಣ ಪುಣ್ಯಕತೆಗಳಲ್ಲಿ ಆದರ್ಶಪ್ರಭುಗಳ ಅನೇಕ ಗುಣಗಳು ವರ್ಣಿಸಲ್ಪಟ್ಟಿವೆ. ಅವು ನಮ್ಮ ಆಳಿದ ಮಹಾರಾಜರಿಗೆ ಅನ್ವಯಿಸುವುದೆಂದು ಹೇಳಬಹುದು. ಅವರನ್ನು ನೋಡಿದರೆ ಹಿಂದಿನ ಕಾಲದ ಜನಕಾದಿ ರಾಜಋಷಿಗಳ ನೆನಪಾಗದಿರದು. ಆಗಿನ ರಾಜರ ಸಾಂಪ್ರದಾಯಗಳೆಲ್ಲವನ್ನೂ ಇವರು ಬಳಸಿಕೊಂಡು ಬಂದಿದ್ದರು. ರಾಜಧರ್ಮಕ್ಕೆ ಅವಶ್ಯವಿದ್ದ ಪ್ರಜಾವಾತ್ಸಲ್ಯ, ದಯೆ, ನ್ಯಾಯಾನ್ಯಾಯ ವಿಚಾರ, ನಿಷ್ಪಕ್ಷಪಾತತೆ, ನಿಸ್ಪೃಹತೆ, ನಿರ್ಮಲ ಜೀವನ ಇವು ಅವರಲ್ಲಿ ಮೈಗೂಡಿದ್ದವು. ಪ್ರಜಾನುರಾಗಕ್ಕಾಗಿ ಸ್ನೇಹ ದಯೆ ಸೌಖ್ಯ— ಕೊನೆಗೆ ಜಾನಕಿಯನ್ನೂ ಪರಿತ್ಯಜಿಸಿದ ಶ್ರೀ ರಾಮಚಂದ್ರನಂತೆ ಇವರು ಪ್ರಜೆಗಳ ಕಲ್ಯಾಣಕ್ಕಾಗಿ ಏನು ಬೇಕಾದ್ದು ಮಾಡಲೂ ಸಿದ್ಧರಿದ್ದರೆಂಬುದು ಅವರ ದೀರ್ಘಯಶಸ್ವಿ ಆಡಳಿತದಿಂದ ಗೊತ್ತಾಗದಿರದು. "ಸರ್ವಸ್ಯ ಜೀವಲೋಕಸ್ಯ ರಾಜಧರ್ಮಃ ಪರಾಯಣಃ" ಎಂಬ ಉಕ್ತಿಯಂತೆ ಸಮಸ್ತ ಜೀವರಾಶಿಗಳಿಗೂ ಉತ್ತಮಗತಿ ದೊರೆಯುವ ರಾಜಧರ್ಮವನ್ನು ಇವರು ಅಕ್ಷರಶಃ ಸಾಧಿಸಿಕೊಂಡಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ನಮ್ಮ ಭಾವನೆ. ಸ್ವಲ್ಪದರಲ್ಲಿ ಹೇಳುವುದಾದರೆ ಪುರಾಣ ಕಾಲದ ಪಾಪಭೀರು ರಾಜನು ಈಗಿನ ಕಾಲದಲ್ಲಿ ಅವತರಿಸಿದಂತಾಗಿತ್ತು.

ಅವರ ವೈಯಕ್ತಿಕ ಜೀವನವಂತೂ ಅತ್ಯಂತ ಸರಳ. ಮನಸ್ಸು ಮೃದು. ಪ್ರಜೆಗಳಿಗೆ ಕಷ್ಟವಾದರೆ ಇವರ ಕೋಮಲ ಹೃದಯಕ್ಕೆ ಪೆಟ್ಟು ತಗಲುತ್ತಿತ್ತು. ಕಠೋರ ಮಾತುಗಳು ಎಂದೂ ಇವರ ಮುಖದಿಂದ ಹೊರಟಲ್ಲ. ಈ ಸರಳ ಮನೋವೃತ್ತಿ ಹಾಗೂ ಆದರ್ಶ ಅರಸುತನವು ಮಹಾಜನರದಷ್ಟೇ ಅಲ್ಲ, ಮಹಾತ್ಮಾ ಗಾಂಧಿಯವರ ಮನಸ್ಸನ್ನೂ ಸೆಳೆದು 'ರಾಮರಾಜ್ಯ' ಎಂಬ ಅಭಿಧಾನವನ್ನು ದೊರಕಿಸಿದುವು.

ಪ್ರಾಚೀನ ಅರಸರ ಮತ್ತೊಂದು ಗುಣವಿಶೇಷವೆನಿಸಿದ ಕಲಾಪ್ರೇಮವು ಇವರಲ್ಲಿ ತುಂಬಿ ತುಳುಕುತ್ತಿತ್ತು. ಸಂಸ್ಕೃತಿ ಮತ್ತು ತತ್ತ್ವಶಾಸ್ತ್ರದಲ್ಲಿ ಪಾಂಡಿತ್ಯವಿದ್ದಂತೆ ಗಾಯನ ಕಲೆಯಲ್ಲಿಯೂ ಜ್ಞಾನವಿತ್ತು. ಕಲಾಕೋವಿದರಿಗೆ, ಗಮಕಿಗಳಿಗೆ ಇವರ ಆಸ್ಥಾನದಲ್ಲಿ ಇನ್ನೂ ಸ್ಥಾನವಿದೆ. ಈ ಉದಾರತನದಿಂದಲೇ ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯಗಳು ಇಂದು ಉಳಿದು ಬೆಳೆಯುತ್ತಿವೆ. ಇಲ್ಲದಿದ್ದರೆ ಅವು ಎಂದೋ ನಾಮಶೇಷವಾಗುತ್ತಿದ್ದವು. ಸಂಸ್ಕೃತ ವಾಙ್ಮಯಕ್ಕೂ ವಿಶೇಷ ಆಶ್ರಯವಿತ್ತು. ಅವರ ವಿದ್ಯಾಭಿರುಚಿ ಇನ್ನೂ ಅಳಿದಿದ್ದಿಲ್ಲ. ಮೊನ್ನೆ ಮೊನ್ನೆ ಯೂರೋಪಿನ ಜ್ಞಾನ ಪ್ರವಾಸ ಕೈಕೊಂಡಿದ್ದರು. ಈ ವಿಶಾಲ ದೃಷ್ಟಿಯು ಅವರನ್ನು ವಿಶಾಲ ಕರ್ನಾಟಕದ ಪ್ರತಿನಿಧಿಗಳನ್ನಾಗಿ ಮಾಡಿದ್ದಿತು. ಹಿಂದೀಯರು ಅವರನ್ನು ಅದೇ ದೃಷ್ಟಿಯಿಂದ ನೋಡುತ್ತಿದ್ದರೆಂದೂ ಹೇಳಬಹುದು. ಇಂತಹ ಮಹಾರಾಜರನ್ನು ಕಳೆದುಕೊಂಡ ಕರ್ನಾಟಕದ ದುರ್ಭಾಗ್ಯವನ್ನು ವರ್ಣಿಸಲಾಸಲ್ಲ.

ಮೃತರ ಆತ್ಮಕ್ಕೆ ಚಿರಶಾಂತಿಯನ್ನೀಯಲೆಂದು ಪರಮಾತ್ಮನನ್ನು ಅನನ್ಯಭಾವನೆಯಿಂದ ಪ್ರಾರ್ಥಿಸುವೆವು.

—ಸಂಯುಕ್ತ ಕರ್ನಾಟಕ.




ಶುಕ್ರವಾರ, ಆಗಸ್ಟ್ ೯, ೧೯೪೦

## ದಿವಂಗತರಾದ ಶ್ರೀ ಕೃಷ್ಣರಾಜ ಒಡೆಯರವರು

"ಆಳುಗೆ ಚಿರಕಾಲಮೆಸೆದು ನಮ್ಮೀ ಕೃಷ್ಣನ್" ಎಂದು ಮೊನ್ನೆ ತಾನೆ ಬೆಳ್ಳಿಯ ಹಬ್ಬದಲ್ಲಿ ಕನ್ನಡಿಗರೆಲ್ಲರೂ ಭಗವಂತನನ್ನು ಪ್ರಾರ್ಥಿಸಿದೆವು. ಆ ಪರಂಜ್ಯೋತಿಯಲ್ಲಿ ಮೈಸೂರಿನ ಜೀವಜ್ಯೋತಿ ಇಷ್ಟು ಬೇಗ ಐಕ್ಯವಾಗುವುದೆಂದು ಯಾರು ತಾನೇ ಮುಂಗಾಣಬಹುದಾಗಿತ್ತು! ಇಂದು ಮೈಸೂರಿನಲ್ಲೆಲ್ಲ ದೊಡ್ಡ ದುಃಖ—ಪ್ರಭುಗಳಾದ ನಾಲ್ಮಡಿ ಶ್ರೀ ಕೃಷ್ಣರಾಜರವರನ್ನು ಕಳೆದುಕೊಂಡದ್ದು. ಉಳಿದ ಯಾವುದಕ್ಕೂ ಎಡೆ ಇಲ್ಲದಂತೆ ಜನರನ್ನೂ ಜನದ ಜೀವನವನ್ನೂ ಸ್ತಬ್ಧಮಾಡಿದೆ. ಎಲ್ಲಿ ನೋಡಿದರೂ ಅವರನ್ನು ಕುರಿತು ಮಾತನಾಡುವ ಜನರೇ, ಗುಂಪುಗಳೇ; ಎಲ್ಲಿ ಕೇಳುವುದೂ ಆರ್ತಸ್ವರವೇ. ನಾಡಿನ ಪ್ರತಿ ಒಬ್ಬರೂ ತಮ್ಮ ಮನೆಗೂ ಬಾಳಿಗೂ ಸಂಬಂಧಿಸಿದ ಬಹು ದಿನದ ಆಪ್ತರೊಬ್ಬರು ತೀರಿಕೊಂಡಿದ್ದರೆ ಯಾವ ಬಗೆಯಲ್ಲಿ ದೀನರಾಗಿ ಕಂಗಾಲಾಗಿ ಇರುತ್ತಿದ್ದರೊ ಆ ರೀತಿ ತಬ್ಬಲಿಗಳಂತೆ ಹೊಲಬು ತೋರದೆ ಇದ್ದಾರೆ. ಒಳದೇಶ, ಹೊರದೇಶಗಳ ಮುಂದಾಳುಗಳೂ, ವೃತ್ತಪತ್ರಿಕೆಗಳವರೂ ತಮ್ಮ ನೆನಪಿನ ಕಾಣಿಕೆಗಳನ್ನೂ, ಮೆಚ್ಚುಗಳನ್ನೂ ಒಪ್ಪಿಸುತ್ತಿದ್ದಾರೆ. ಅವರನ್ನು ಕಂಡು ಕೇಳಿದವರೆಲ್ಲರಿಗೂ, ಇಲ್ಲಿ ಬಂದು ಇದ್ದವರೆಲ್ಲರಿಗೂ ಮೈಸೂರಿನ ಬದುಕಿನಲ್ಲಿರುತ್ತಿದ್ದ ಒಂದು ಬೆಳಕೂ, ಸೊಬಗೂ, ನಯದ ಒಂದು ವಿಲಾಸವೂ ಮಾಯವಾದಂತಾಗಿದೆ.

ಪೂಜ್ಯ ಪ್ರಭುಗಳು ಈ ಸಂಸ್ಥಾನದ ಜೀವನಕ್ಕೆ ಭಾಗ್ಯದೇವತೆಯಾಗಿ ಒಂದು ಮಂಗಳದ ಇತಿಹಾಸವನ್ನು ಹೂಡಿ ಪೋಷಿಸಿದರು. ಹಾಗೆಯೇ ಭರತಖಂಡದಲ್ಲಿನ ರಾಜತನ ಯಾವ ಬಗೆಯ ಗುಣವಿಶೇಷ ಉಳ್ಳದ್ದು ಎಂಬುದನ್ನು ನಮ್ಮ ಕಾಲದಲ್ಲಿ ಪ್ರಪಂಚಕ್ಕೆ ಎತ್ತಿ ತೋರಿಸಿದರು. ಹಿಂದಿನಿಂದ ನಡೆದುಬಂದ ಸಂಪ್ರದಾಯ ಫಲಿಸಿ ಇವರಲ್ಲಿ ರೂಪುಗೊಂಡಿತ್ತೆಂಬಂತೆ ನಡೆಯಿತು ಅವರ ಆಳಿಕೆ, ಅವರ ಬದುಕು, ರೀತಿ, ನೀತಿ. ಅವರೊಡನೆ ಒಂದು ಯುಗವೂ ಸಂಸ್ಕೃತಿಯೂ ಕೊನೆಗೊಂಡವೆಂಬಷ್ಟು ಆ ಸಂಸ್ಕೃತಿಯ ಪ್ರತಿನಿಧಿಗಳಾಗಿದ್ದರು ಅವರು. ಹೊಸಕಾಲದ ಎಲ್ಲ ಪ್ರಭಾವಗಳೂ ಅವರ ನೋಟದಲ್ಲಿ ನೆಲಸಿದ್ದರೂ, ಹಿಂದಿನದರ ಬಲದೌರ್ಬಲ್ಯಗಳು ಎಲ್ಲವೂ ತಿಳಿದಿದ್ದರೂ ಒಂದನ್ನು ಬಿಡದೆ ಇನ್ನೊಂದನ್ನು ಎದುರಿಸಿ ತಡೆಯದೆ ಸ್ಥಿತಿಯ ಸಮರಸ ಕೆಡದಂತೆ ಒಂದು ಸಮತೆಯಲ್ಲಿ ಎಲ್ಲವನ್ನೂ ನಡಸಿಕೊಂಡುಹೋಗಬಲ್ಲದಾಗಿದ್ದ ಸತ್ವ, ಶಕ್ತಿ ಅವರದು. ಈ ಶತಮಾನದ ಸಲವತ್ತು ವರ್ಷಗಳಲ್ಲಿ ಮನುಷ್ಯನ ಜೀವನಕ್ಕೆ ಏನೇನು ಬಗೆಯ ಶಕ್ತಿ ಸಂಚಾರ ಉಂಟಾಗಿ ಬಂದಿದೆಯೊ ಅದರ ಸಾರವನ್ನು ಹೀರಿ ತಮ್ಮ ಬದುಕನ್ನೂ ತಮ್ಮ ಮಡಿಲಿಗೆ ಬಿದ್ದ ಜನರ ಬದುಕನ್ನೂ ಪೋಷಿಸಿ ಬೆಳಸಿದ ಮಹನೀಯರು ಅವರು. ವ್ಯಕ್ತಿಜೀವನವೂ, ರಾಜಕೀಯ ಸಾಮಾಜಿಕ ಜೀವನವೂ ಎಷ್ಟು ಮುಖದಲ್ಲಿ ನಮ್ಮ ನಾಡಿನಲ್ಲಿ ಏಳಿಗೆಗೊಳ್ಳಲು ತೊಡಗಿದೆ ಎಂಬುದನ್ನು ತಿಳಿದಿದ್ದ ಅವರು ಅವಕ್ಕೆ ಸಂಬಂಧಿಸಿದಂತೆ ಒಂದು ಅನುಕೂಲವ ಆವರಣವನ್ನು ಕಲ್ಪಿಸಿಕೊಟ್ಟು ಅವುಗಳೆಲ್ಲವೂ ಒಂದು ಸಮಧಾತುವಿನಲ್ಲಿ ಆಕೃತಿಗೊಳ್ಳುವಂತೆ ನೆರವು ಕೊಡುತ್ತಿದ್ದರು. ಕೆಳೆತನ, ವಿನೋದ ಪ್ರಿಯತೆ, ಕರುಣೆ, ಔದಾರ್ಯ, ಒಳ್ಳೆಯ ಎಲ್ಲಕ್ಕೂ ಒಲಿಯುವ ಸೌಮನಸ್ಯ, ದೀನ ಅನಾಥರಲ್ಲಿ ಕೃಪೆ, ಕರ್ತವ್ಯದಲ್ಲಿ ನಿಷ್ಠೆ, ದೃಢತೆ, ತಾಳ್ಮೆ, ಪರಧರ್ಮ ಸೋದರತೆ, ಸ್ವಧರ್ಮದಲ್ಲಿ ಆಸ್ಥೆ, ಇನ್ನೊಬ್ಬರ ಸಂತೋಷಕ್ಕೆ ಅಡ್ಡಿ ಬಾರದೆ ಅವರ ಸಂಪ್ರದಾಯಗಳನ್ನು ನಡಸಿಕೊಡುವಾಗಲೂ ತಮ್ಮ ಮರ್ಯಾದೆಯನ್ನು ಉಳಿಸಿ ಹಿಡಿಯುವ ಆತ್ಮಗೌರವ, ಸಂಯಮ, ಇವು ಅವರ ವಿಶೇಷ ಗುಣಗಳು. ಕಲೆ, ಶಾಸ್ತ್ರ, ದರ್ಶನ, ವಿಜ್ಞಾನ, ಕಾರ್ಯವ್ಯವಸ್ಥೆ, ಆಡಳಿತ ರಚನೆ, ಯಾವುದರಮೇಲೆಯೂ ಅವರ ಕಣ್ಣಿತ್ತು; ಅವರ ಕೈ ಇತ್ತು. ಅವರ ಕಣ್ಣಿಗೆ ಬಿದ್ದ ಯಾವೊಂದೂ ಅಳಿಸಿಹೋಗಿ ಮರೆಯುತ್ತಿರಲಿಲ್ಲ; ಅದರ ಪ್ರಯೋಜನ ಅವರ ಅನುಭವಕ್ಕೆ ಆಗದೆ ಇರುತ್ತಿರಲಿಲ್ಲ. ಆದುದರಿಂದಲೇ ಅವರ ಮನಸ್ಸು ಎಲ್ಲ ರೀತಿಯ ಕಳೆಗಳನ್ನು ತುಂಬಿಕೊಂಡದ್ದು; ಅವರ ಅನುಭವಕ್ಕೆ ಒಂದು ವ್ಯಕ್ತಿತ್ವವನ್ನೂ ಅಸಾಧಾರಣವಾದ ಒಂದು ಕಾಂತಿಯನ್ನೂ ಕೊಟ್ಟದ್ದದ್ದು. ಒಳ್ಳೆಯ ವಂಶದಲ್ಲಿ ಹುಟ್ಟಿ, ಸಹಜ ಸೌಜನ್ಯವುಳ್ಳವರಾಗಿ, ಮೇಲ್ತರದ ವಿದ್ಯಾ ಶೀಲ ಸಂಪನ್ನತೆಯನ್ನು ಗಳಿಸಿ, ಅನೇಕ ಗುಣಗಳ ಉತ್ಕರ್ಷವುಳ್ಳ ಹಿರಿಯರ ದರ್ಶನ, ಸಂಪರ್ಕ ಪಡೆದು, ಸುಧಾರಿತವಾದ ಒಂದು ರಾಜ್ಯಯಂತ್ರದ ಸಂಚಾಲನೆಯಿಂದ ಗಾಂಭೀರ್ಯ ಕರ್ತೃತ್ವ ಶಕ್ತಿಗಳನ್ನು ಸಂಪಾದಿಸಿ, ನಯಜ್ಞರೂ ಕಾರ್ಯದಕ್ಷರೂ ಆದ ನಾಲ್ಕಾರು ಮಂತ್ರಿವರ್ಯರ ಸಹಕಾರವನ್ನು ಹೊಂದಿಸಿಕೊಂಡು, ಅವರ ಆಳಿಕೆ ಫಲಿಸಿತು. ಅವರ ಬಾಳು ಸುಂದರವಾಯಿತು, ಅವರ ಮನಸ್ಸು ವಿಶಾಲವಾಯಿತು, ಉನ್ನತವಾಯಿತು, ಗಂಭೀರವಾಯಿತು, ಲೋಕ ಕಲ್ಯಾಣಕ್ಕೆ ನೆರವಾಗಬಲ್ಲ ಉದಾತ್ತ ಪ್ರಭಾವವಾಯಿತು. ಈ ಪುಣ್ಯದ ಬಲ ಮೈಸೂರಿಗೆ ಇದ್ದುದರಿಂದಲೇ ದೇಶವಿದೇಶಗಳವರು ಮೈಸೂರೆಂದರೆ ಮಾದರಿ ಸಂಸ್ಥಾನ, ಒಂದು ಅತಿಶಯ, ಭರತಖಂಡಕ್ಕೇ ಒಂದು ಹಿಗ್ಗು ಎಂಬಂತಾದುದು. ಆ ಪ್ರಭಾವ ಒಂದು ಸಂಪ್ರದಾಯವಾಗಿ ಈ ನಾಡ ಜೀವನದ ಅಡಿಯಲ್ಲಿ ಭದ್ರವಾಗಿ ನಿಲ್ಲುತ್ತದೆ. ಇಂದಿನ ಮತ್ತು ನಾಳೆಯ ಜೀವನವನ್ನು ಮಿಡಿಸುತ್ತ, ಎತ್ತಿ ಹಿಡಿಯುತ್ತ, ನಡಸುತ್ತ, ಹದಗೊಳಿಸುತ್ತದೆ; ಎಂದೆಂದಿಗೂ ಜನರ ಮನಸ್ಸನ್ನು ದೊಡ್ಡದರ ಕಡೆಗೇ ತಿರುಗಿಸುತ್ತಿರುತ್ತದೆ, ಶ್ರೀ ಕೃಷ್ಣರಾಜ ಒಡೆಯರವರ ಪುಣ್ಯಪ್ರಭಾವ ಹೀಗೆ ಅಜರಾಮರವಾಗಿ ನಿಂತು ಲೋಕ ಕಲ್ಯಾಣಕ್ಕೆ ಪ್ರೇರಕಶಕ್ತಿಯಾಗಿದೆ. ಇದೇ ನಮ್ಮ ದೊಡ್ಡ ದುಃಖದಲ್ಲಿ ನಾವು ತಂದುಕೊಳ್ಳಬಹುದಾದ ಸಮಾಧಾನ.

ಪರಿಷತ್ತಿನ ವ್ಯವಸಾಯಕ್ಷೇತ್ರವಾದ ಭಾಷೆ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಅವರಿಗೆ ಆಳವಾದ ಪ್ರೀತಿ ಇತ್ತು. ತಮ್ಮ ಮನೆಯ ಮತ್ತು ನಾಡಿನ ನುಡಿಯಾದ ಕನ್ನಡಕ್ಕೆ ಅವರು ಉದಾರ ಪ್ರೋತ್ಸಾಹವನ್ನು ಕೊಟ್ಟರು. ಅವಕಾಶ ದೊರೆತಾಗಲೆಲ್ಲ ತಮ್ಮ ಮನಸ್ಸನ್ನು ತಿಳಿಸಿದರು; ದಾರಿ ತೋರಿಸಿಕೊಟ್ಟರು. ಸಾಹಿತಿಗಳಿಗೆ, ಸಂಸ್ಥೆಗಳಿಗೆ ತಮ್ಮ ಆಸ್ಥಾನದಿಂದಲೂ ಸರಕಾರದಿಂದಲೂ ಉತ್ತೇಜನ ಕೊಟ್ಟರು. ಕನ್ನಡದ ಸ್ಥಾನಮಾನ

ವನ್ನು ಕಾಪಾಡುವುದು ಕನ್ನಡಿಗರ ಕರ್ತವ್ಯವೆಂದು ತಾವು ನುಡಿದು ತಮ್ಮ ಅಧಿಕಾರಿಗಳೂ ಅದರ ಕಡೆ ಗಮನಕೊಡುವುದು ಅಗತ್ಯವೆಂದು ತೋರಿಸಿಕೊಟ್ಟರು; ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಸೇವೆಯನ್ನು ಕರ್ತವ್ಯವಾಗಿ ಸ್ಥಿರಗೊಳಿಸಿದರು. ಇದಕ್ಕಾಗಿ ಕನ್ನಡ ನಾಡು ಅವರಿಗೆ ಎಲ್ಲ ಕಾಲಕ್ಕೂ ಋಣಿಯಾಗಿದೆ. ಅಖಿಲ ಕರ್ನಾಟಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಒದಗಿದ ಮೂಲ ಪ್ರಭಾವಗಳಲ್ಲಿ, ಅವರ ಪ್ರಭಾವ ಮಹತ್ತರವಾದದ್ದು. ಪರಿಷತ್ತಿನ ಬೆಳ್ಳಿಯ ಹಬ್ಬದ ಉತ್ಸವ ಸಮಾರಂಭಕ್ಕೆ ಆನಂದದಿಂದ ತಾವೇ ದಯಮಾಡಿಸಿ ಹರಸಿದ ಹರಕೆ ಕನ್ನಡ ನಾಡಿಗೆ ಹೊಸ ಉತ್ಸಾಹವನ್ನೂ ಶಕ್ತಿಯನ್ನೂ ತುಂಬಿ ಸಂಜೀವನಪ್ರಾಯವಾಗಿದೆ.

ನಮ್ಮ ಅಧ್ಯಕ್ಷರಾದ ಶ್ರೀಮದ್ಯುವರಾಜರವರ – ಈಗ ನಮ್ಮ ಮಹಾರಾಜರವರ–ಅಪಾರ ದುಃಖದಲ್ಲಿ ಅಖಿಲ ಕರ್ನಾಟಕದೊಡನೆ ಪರಿಷತ್ತು ಸಂಪೂರ್ಣ ಸಹಾನುಭೂತಿಯಿಂದ ಭಾಗಿಯಾಗಿರುತ್ತದೆ. ಸತ್ತ್ವಶಾಲಿಗಳಾದ ಅವರು ದಿವಂಗತರಾದ ಮಹಾಸ್ವಾಮಿಯವರ ಪ್ರಭಾವವನ್ನು ತಮ್ಮಲ್ಲಿ ಕೂಡಿಸಿಕೊಂಡು, ಬೆಳೆಯುತ್ತ ಬಂದಿರುವ ಮೈಸೂರಿನ ಕೀರ್ತಿಯನ್ನೂ, ಹಿರಿಮೆಯ ಹೊಣೆಗಾರಿಕೆಗಳನ್ನೂ ಸರ್ವಪ್ರಜಾರಂಜನೆಯಾಗುವಂತೆ ನಿರ್ವಹಿಸುತ್ತ, ಕರ್ನಾಟಕ ಸಂಸ್ಕೃತಿಯ ಅಭ್ಯುದಯವನ್ನು ಪ್ರೋತ್ಸಾಹಿಸುತ್ತ, ತಮ್ಮ ಮನೆತನಕ್ಕೆ ಅಲಂಕಾರಪ್ರಾಯರಾಗಿ ಚಿರಕಾಲ ಆಳಲೆಂದು ಭಗವಂತನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಚಿರಮಭಿವರ್ಧತಾಂ ಯದುಸಂತಾನ ಶ್ರೀಃ

---

## ನಮ್ಮೊಡೆಯರು

(ಮಾಸ್ತಿ ವೆಂಕಟೇಶ ಅಯ್ಯಂಗಾರ್)

ಕರ್ನಾಟಕದ ರತ್ನಸಿಂಹಾಸನವನ್ನು ಮೂವತ್ತೆಂಟು ವರ್ಷಗಳ ಕಾಲ ಅಲಂಕರಿಸಿ ಬೆಳಗಿ, ಲೋಕದಲ್ಲೆಲ್ಲ ತಮ್ಮ ಯಶಸ್ಸನ್ನು ಹರಹಿದ ನಮ್ಮರಸರು, ಶ್ರೀಮನ್ ನಾಲ್ಮಡಿ ಕೃಷ್ಣರಾಜ ಒಡೆಯರವರು, ಇದೀಗ ದೈವಾಧೀನರಾಗಿದ್ದಾರೆ. ತನ್ನ ಪ್ರೇಮ ಗೌರವಗಳ ಪೂಜಾಮೂರ್ತಿಯನ್ನು ಕಳೆದುಕೊಂಡು ಮೈಸೂರ ಜನ ದುಃಖದ ಆವೇಗದಲ್ಲಿ ದಿಕ್ಕುತೋಚದೆ ನಿಂತಿದೆ. ಪ್ರಜೆಯಾದ ಮೈಸೂರ ಜನತೆಯೊಂದಿಗೆ ಉಳಿದ ಕರ್ನಾಟಕದ ಜನತೆಯೂ ಭರತವರ್ಷದ ಇತರ ಪ್ರಾಂತಗಳ ಲಕ್ಷಾಂತರ ಜನಸಮುದಾಯವೂ ಪ್ರಜೆ ಅಲ್ಲದೆಯೇ ಈ ಶೋಕದಿಂದ ಪರಿತಪಿಸುತ್ತಿದೆ. ಪ್ರಪಂಚದ ಇತರ ಭಾಗಗಳಲ್ಲಿರುವ ನಮ್ಮ ದೊರೆಯನ್ನರಿತ ಮಂದಿ ಈ ದುಃಖವಾರ್ತೆಯಿಂದ ಉದ್ವಿಗ್ನರಾಗಿದ್ದಾರೆ. ತಂದೆ ಹೋದರೆ? ಹಿರಿಯ ಹೋದರೆ? ರಾಜ ಹೋದರೆ? ಋಷಿ ಹೋದರೆ? ಇನ್ನು ಗತಿ ಏನು? ಎಂದು ಪ್ರಜೆ ಕಾತರಗೊಳ್ಳುತ್ತಿದೆ. ಈ ನೋವಿನ ಕಾರಿರುಳ ಆಳದಲ್ಲಿ ಮಾತನಾಡುವುದಕ್ಕೇ ಮನಸ್ಸು ಬರುತ್ತಿಲ್ಲ. ಆದರೆ **ಕನ್ನಡ ನುಡಿ**ಯ ಹಿರಿಯರೂ ಗೆಳೆಯರೂ ನಾಲ್ಕು ಮಾತನ್ನು ಹೇಳಬೇಕೆಂದು ಒತ್ತಾಯಮಾಡಿದ್ದಾರೆ. ಈ ಒತ್ತಾಯಕ್ಕೆ ತಲೆಬಾಗಿ ನಮ್ಮ ಜನತೆಯ ನೋವ ನುಡಿಯಾಗಿ ನಾಲ್ಕು ಮಾತನ್ನು ಇಲ್ಲಿ ಅಂಜಲಿಯಾಗಿ ಅರ್ಪಿಸುತ್ತಿದೇನೆ.

ನಮ್ಮಾಳ್ದರು, ಶ್ರೀಮನ್ ನಾಲ್ಮಡಿ ಕೃಷ್ಣರಾಜರು. ಲೋಕದ ರಾಜವರ್ಗಕ್ಕೇ ಆದರ್ಶರೆನಿಸಿಕೊಂಡರು. ಎಳೆಯಂದು ತಂದೆಯನ್ನು ಕಳೆದುಕೊಂಡು, ತಾಯ ಪ್ರೇಮದ ಹೊಂಬಿಸಿಲಲ್ಲಿ ಬೆಳೆದು, ಪ್ರಭುಗಳು ಪ್ರಾಪ್ತವಯಸ್ಕರಾದ ಒಡನೆಯೇ ರಾಜ್ಯದ ಭಾರವನ್ನು ವಹಿಸಬೇಕಾಯಿತು. ರಾಜಪದವಿಗೆ ಬಂದ ತರುಣನು ಗುಣಶಾಲಿಯೆಂದು ಅವರನ್ನು ನೋಡಿದವರೆಲ್ಲ ತಿಳಿದಿದ್ದರು. ಈ ದೊರೆ ರಾಜ್ಯವನ್ನು ಚೆನ್ನಾಗಿಯೇ ಆಳಿಯಾರು, ತನ್ನ ಪ್ರಜೆಯ ಕಷ್ಟಸುಖವನ್ನು ಶ್ರದ್ಧೆಯಿಂದ ನೋಡಿಕೊಂಡಾರು, ಇವರ ಸೂತ್ರದಲ್ಲಿ ಆಡಳಿತ ದಕ್ಷತೆಯಿಂದ ನಡೆದೀತು, ಎಂದು ಅಂಥವರಿಗೆ ನಂಬಿಕೆ ಇತ್ತು. ಆದರೆ ಯಾರೂ ಆ ರಾಜ್ಯಭಾರ ಎಷ್ಟು ಯಶಸ್ವಿಯಾದೀತೆಂದು, ಆ ಪ್ರಜಾಪ್ರೇಮ ಎಷ್ಟು ಹೃತ್ಪೂರ್ವಕ ಆದೀತೆಂದು, ಆ ಆಡಳಿತ ಎಷ್ಟು ದಕ್ಷವಾದೀತೆಂದು ಊಹಿಸಿರಲಾರರು. ಹತ್ತಾರೇ ವರ್ಷದಲ್ಲಿ ಭರತವರ್ಷದಲ್ಲಿ ಈ ದೊರೆಯಂಥ ದೊರೆ ಬೇರೆ ಇದ್ದರೆ ಇನ್ನು ಒಬ್ಬರಿರಬಹುದು ಎಂಬಮಟ್ಟಿಗೆ ಇವರು ಹೆಸರು ಗಳಿಸಿದರು. ಅದಾದ ಹತ್ತು ವರ್ಷದಲ್ಲಿ ಇವರಂಥವರು ಭರತವರ್ಷದಲ್ಲಿ ಇನ್ನೊಬ್ಬರಿಲ್ಲ ಎಂದು ಸಿದ್ಧವಾಯಿತು. ಇಷ್ಟರಲ್ಲಿಯೇ ಸಿದ್ಧವಾಯಿತು ಇನ್ನೊಂದು ಮಾತು : ಗಾದಿಯನ್ನೇರಿದವರೆಂಬ ಲೋಕದ ಎಲ್ಲ ಅರಸರ ಪಂಕ್ತಿಯಲ್ಲಿ ಒಬ್ಬ ವ್ಯಕ್ತಿಯಲ್ಲಿ ಇಷ್ಟು ಗುಣ ದೊರೆಯುವ ಇನ್ನೊಬ್ಬರಿಲ್ಲ ಎನ್ನುವುದು. ಭರತವರ್ಷದ ಜನರು ನಾಲ್ಮಡಿ ಕೃಷ್ಣರಾಜರನ್ನು ಹೊಸ ಕಾಲದ ಜನಕನೆಂದರು. ಪಾಶ್ಚಾತ್ಯ ಸಂಸ್ಕೃತಿಯ ಮೇಲಣ ಮಟ್ಟಗಳನ್ನು ಬಲ್ಲವರು ಈ ಬಾಳಿನಲ್ಲಿ ಮಾರ್ಕಸ್ ಅರೀಲಿಯಸ್ಸಿನ ಹಿರಿತನವನ್ನು ಕಂಡರು. ರಾಜರ ಪ್ರಜಾ ವಾತ್ಸಲ್ಯವನ್ನು ಅರಿತ ಮಹನೀಯರು ಮೈಸೂರ ದೇಶವನ್ನು ರಾಮರಾಜ್ಯವೆಂದರು. ತನ್ನ ತಮ್ಮ ಪ್ರಜೆಗೆ ಇವರಷ್ಟೇ ಪ್ರಿಯರಾದ ಒಬ್ಬರಿಬ್ಬರ ಹೆಸರನ್ನು ಬಲ್ಲವರು ಹೇಳುವುದು ಸಾಧ್ಯವಾಗಿತ್ತು. ಆದರೆ ಅಂಥ ರಾಜರಲ್ಲಿ ಈ ಶೀಲವಿಲ್ಲ, ಈ ಋಷಿಪದವಿಯಿಲ್ಲ. ನಾಲ್ಮಡಿ ಕೃಷ್ಣರಾಜರು ಆಳುವವರ ಕುಲದ ಮೌಳಿಮಣಿಯಾದರು, ದೊರೆತನದ ಕೀರ್ತಿಯ ಸೀಮಾಪುರುಷರಾದರು.

ಈ ಮಹನೀಯರು ಆಳಿದ ಮೂವತ್ತೆಂಟು ವರ್ಷದಲ್ಲಿ ಆಗಿರುವ ದೇಶಾಭಿವೃದ್ಧಿ ಎಷ್ಟೆಂದು ವಿವರಿಸುವುದಕ್ಕೆ ಈಗ ಹೊತ್ತಿಲ್ಲ, ಇದು ಸಮಯವೂ ಅಲ್ಲ. ಈ ಕಾಲದಲ್ಲಿ ಏರ್ಪಟ್ಟ ಸಂಸ್ಥೆ ಸಮಿತಿಗಳು, ಬೆಳೆದ ಪಾಠಶಾಲೆ ವಿದ್ಯಾಮಂದಿರಗಳು, ಆರಂಭವಾದ ವೈದ್ಯಶಾಲೆ ಉಪಚಾರ ಮಂದಿರಗಳು, ಚಿಕಿತ್ಸಾಲಯಗಳು, ಆರೋಗ್ಯಾವಾಸಗಳು, ಈ ಕಾಲದಲ್ಲಿ ನಿರ್ಮಾಣವಾದ ಕೆರೆಗಳು, ಕಟ್ಟೆಗಳು, ಕೈಗಾರಿಕೆಗಳು, ಕಾರಖಾನೆಗಳು, ಇವುಗಳ ಒಂದು ಪಟ್ಟಿಯೇ ಹಲವು ಪುಟದಷ್ಟು ಬೆಳೆಯುವುದು. ಮೈಸೂರಿನ ನ್ಯಾಯವಿಧಾಯಕ ಸಭೆ ಸೃಷ್ಟಿಯಾದದ್ದು ಈ ಆಳ್ವಿಕೆಯಲ್ಲಿ. ಮೈಸೂರಿನ ಸಂಪದಭಿವೃದ್ಧಿ ಸಮ್ಮೇಳನ ದೇಶದ ಏಳ್ಗೆಗಾಗಿ ರೂಪುಗೊಂಡದ್ದು ಈ ಆಳ್ವಿಕೆಯಲ್ಲಿ. ಮೈಸೂರಿನ ಬ್ಯಾಂಕು, ಮೈಸೂರಿನ ವಿಶ್ವವಿದ್ಯಾನಿಲಯ ಜನ್ಮವೆತ್ತಿದ್ದು ಈಗ. ಉಳಿದಲ್ಲಿ ಈಗತಾನೇ ಕ್ಷಯರೋಗದ ನಿವಾರಣೆಯ ಮಾತು ಏಳುತ್ತಿರಲಾಗಿ ಮೈಸೂರು ದೇಶದಲ್ಲಿ ಎಷ್ಟೋ ವರ್ಷದ ಹಿಂದೆ ಕ್ಷಯರೋಗದ ಚಿಕಿತ್ಸಾಲಯ ಬೃಹದಾಕಾರದ ಒಂದು ಕಾರ್ಯಕ್ರಮದಲ್ಲಿ ತೊಡಗಿತು. ಮೈಸೂರು ನಗರದ ಇಂದಿನ ಮಹಿಳಾ ವೈದ್ಯಮಂದಿರ ನಮ್ಮರಸರು ತಮ್ಮ ಸಹೋದರಿಯ ಹೆಸರಲ್ಲಿ ಕಟ್ಟಿಸಿಕೊಟ್ಟ ಕಟ್ಟಡ. ಕನ್ನಡ ಸಾಹಿತ್ಯ ಪರಿಷತ್ತಿನ ಭವ್ಯಮಂದಿರವು ಮಹಾರಾಜರ ಹೆಸರಿಂದ ಶೋಭಿಸುತ್ತಿದೆ. ಅದಕ್ಕೆ ಆದ ಸುಮಾರು ಮೂವತ್ತೆರಡು ಸಾವಿರದ ವೆಚ್ಚದಲ್ಲಿ ಐದು ಸಾವಿರ ನಮ್ಮ ದೊರೆಗಳಿಂದ ಬಂದಿತು; ಮೂರು ಸಾವಿರ ಅವರ ಸೋದರರು ಕೀರ್ತಿಶೇಷರಾದ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಂದಲೂ, ಐದು ಸಾವಿರ ಅವರ ಸೋದರಮಾವಂದಿರು ದಿವಂಗತ ಶ್ರೀಮಾನ್ ಸರದಾರ ಕಾಂತರಾಜ ಅರಸಿನವರಿಂದಲೂ, ಸುಮಾರು ಹದಿನೇಳು ಸಾವಿರ ಶ್ರೀಮನ್ಮಹಾರಾಜರವರ ಸರ್ಕಾರದಿಂದಲೂ ಬಂದವು. ಕೃಷ್ಣರಾಜ ಪರಿಷನ್ಮಂದಿರದಂತೆ ನಮ್ಮ ರಾಜರ ಹೆಸರನ್ನು ಹೊಗಳುವ ಕೃಷ್ಣರಾಜಸಾಗರ ಲೋಕಪ್ರಸಿದ್ಧವಾಗಿದೆ. ಲೋಕದ ಗಮನವನ್ನು ಸೆಳೆಯದಿದ್ದರೂ ಜನದ ಮನದಲ್ಲಿ ಈ ಹೆಸರು ಎಂದಿಗೂ ನಿಲ್ಲುವುದೆನ್ನುವುದಕ್ಕೆ ಸಾಕ್ಷಿಯಾಗಿ ಕೃಷ್ಣರಾಜ ನಗರ, ಕೃಷ್ಣರಾಜ ಸೇತುವೆ, ಕೃಷ್ಣರಾಜ ವೈದ್ಯಾಲಯ, ಕೃಷ್ಣರಾಜರ ಆಳ್ವಿಕೆಯ ಪಾದಶತಮಾನೋತ್ಸವದ ಉಪಯುಕ್ತ ಕಲಾಶಾಲೆ; ಹೀಗೆ ದೊಡ್ಡವಲ್ಲದೆ ಅನೇಕ ಅಲ್ಲಲ್ಲಿ

ಸಣ್ಣ ಸಣ್ಣ ಜನೋಪಯುಕ್ತ ಕಾರ್ಯಗಳ ಮೊತ್ತ. ಈ ಅರಸು ತನದ ಪ್ರಜಾವಾತ್ಸಲ್ಯ ರೂಪುಗೊಂಡ ಸಾವಿರ ಕೆಲಸದ ಸಂಪತ್ತನ್ನು ಎಣಿಸುವುದೂ ಸುಲಭವಲ್ಲ.

ನಮ್ಮ ಒಡೆಯರಿಗೆ ವಿದ್ಯೆಯೆಂದರೆ ಸಾಹಿತ್ಯವೆಂದರೆ ಅದೆಂತಹ ಅಭಿಮಾನ! ಆಡಳಿತ ನಡೆಯಿಸಿದ ಶಾಲೆಗಳ ಮಾತೂ ಇವರು ಪುರೋಧರಾಗಿ ನಿಂತು ನಡೆಯಿಸಿದ ವಿದ್ಯಾನಿಲಯದ ಮಾತೂ ತಿಳಿದೇ ಇದೆ. ಜೊತೆಗೆ ಇವರು ತಮ್ಮ ಹಿರಿಯರ ಸಂಪ್ರದಾಯವನ್ನನುಸರಿಸಿ ತಮ್ಮ ಆಸ್ಥಾನವನ್ನು ವಿದ್ವನ್ಮಂಡಲಿಯ ಆಶ್ರಯ ಮಾಡಿದ್ದರು. ಸಂಸ್ಕೃತ ವಿದ್ಯೆ ಇವರಲ್ಲಿ ಪಡೆದಷ್ಟು ಮನ್ನಣೆಯನ್ನು ಮತ್ತೆಲ್ಲಿಯೂ ಪಡೆದಿರಲಾರದು. ಇಂಗ್ಲೀಷು ಭಾಷೆಯಲ್ಲಿ ಪಂಡಿತರಾದವರಿಗೆ ನೂರಾರು ರೂಪಾಯಿ ಸಂಬಳ ವಿರುವಲ್ಲಿ ಸಂಸ್ಕೃತದ ವಿದ್ವಾಂಸರಿಗೆ ವೇತನ ಎರಡಂಕೆ ಮೀರಿದ್ದು ಈ ಮೊದಲು ಇರಲಿಲ್ಲವೋ ಎನ್ನಬಹುದು. ಸಂಸ್ಕೃತದ ಪಾಂಡಿತ್ಯಕ್ಕೆ ಸಲ್ಲುವ ಗೌರವವನ್ನು ಹಣದಿಂದ ಅಳೆಯಲಾಗದು, ನಿಜ. ಆದರೂ ವೇತನ ಅತಿ ಅಲ್ಪವಾಗಬಾರದು ಎಂಬ ದೃಷ್ಟಿಯಿಂದ ಮಹಾರಾಜರು ತಮ್ಮ ಸಂಸ್ಕೃತ ಪಾಠಶಾಲೆಗಳ ಅಧ್ಯಾಪಕ ವರ್ಗದ ವೇತನವನ್ನು ನೂರರ ಮಟ್ಟಕ್ಕೆ ಮುಟ್ಟಿಸಿದರು. ಎಲ್ಲ ಜನತೆಯೂ ಸಂಸ್ಕೃತದ ಪಾಂಡಿತ್ಯದಿಂದ ಬರುವ ಒಂದು ಗೌರವವನ್ನು ಪಡೆಯಲಪೇಕ್ಷಿಸಿದಾಗ ನಮ್ಮರಸರು ತಮ್ಮ ತಂದೆಯವರ ಹೆಸರಿನ ಬೆಂಗಳೂರಿನ ಸಂಸ್ಕೃತ ಪ್ರೌಢ ವಿದ್ಯಾಮಂದಿರವನ್ನು ಎಲ್ಲರಿಗೂ ಉಪಯೋಗವಾಗುವಂತೆ ಆಜ್ಞೆಮಾಡಿದರು. ಪಾಂಡಿತ್ಯಕ್ಕೆ ಉಳಿದ ಪ್ರಯೋಜನ ಏನಿರಲಿ ಬಿಡಲಿ, ಅರಸರ ಮನ್ನಣೆ ಇದ್ದೇ ಇರುವುದು, ಎಂದು ತೋರಿಸುವಂತೆ ಇವರು ಮೈಸೂರಿನ ಸಂಸ್ಕೃತ ವಿದ್ಯಾಮಂಧಿರದಿಂದ ಉತ್ತೀರ್ಣರಾದವರಿಗೆ ಪ್ರಶಸ್ತಿಗಳನ್ನು ವರ್ಷಂಪ್ರತಿ ತಮ್ಮ ಸಭಾಮಂಟಪದಲ್ಲಿ ನವರಾತ್ರಿಯ ಉತ್ಸವ ದಲ್ಲಿ ತಮ್ಮ ಅಮೃತ ಹಸ್ತದಿಂದ ದಯಪಾಲಿಸುವ ಏರ್ಪಾಡು ಮಾಡಿದರು. ಮೈಸೂರು ವಿಶ್ವವಿದ್ಯಾನಿಲಯ ಆರಂಭವಾದಾಗ ಕನ್ನಡಕ್ಕೆ ಅದರಲ್ಲಿ ಒಂದು ವಿಶೇಷ ಸ್ಥಾನ ಇರಬೇಕೆಂದು ಅನುಗ್ರಹ ಮಾಡಿದರು. ಕನ್ನಡದ ಸಾಹಿತ್ಯ ಬೆಳೆಯಬೇಕೆಂದು ಕೆಲವು ವರ್ಷ ಕವಿತೆಯ ಸ್ಪರ್ಧೆಯನ್ನು ಏರ್ಪಡಿಸಿ ಬಹುಮತಿ ಯನ್ನಿತ್ತರು. ವಿದ್ಯೆಗಾಗಿ ದುಡಿದವರಿಗೆ ಬಿರುದುಗಳನ್ನು ದಯ ಪಾಲಿಸಿದರು. ದೇಹದಲ್ಲಿ ಆರೋಗ್ಯ ಕಡಮೆಯಾಗಿದ್ದರೂ, ಮೂರೇ ತಿಂಗಳ ಹಿಂದೆ ಪ್ರಾಪ್ತವಾದ ಸೋದರ ವಿಯೋಗದಿಂದ ಸಂತಪ್ತರಾಗಿದ್ದರೂ, ಒಡೆಯರು ಅದನ್ನು ಲಕ್ಷ್ಯಮಾಡದೆ ಒಂದು ತಿಂಗಳ ಹಿಂದೆ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಪಾದ ಶತಮಾನೋತ್ಸವದ ಸಮಾರಂಭಕ್ಕೆ ದಯಮಾಡಿಸಿ ಕನ್ನಡ ವನ್ನಾಡುವ ನಾಡನ್ನೆಲ್ಲ ತಮ್ಮ ಭಾಷಾಭಿಮಾನದಿಂದ ಪ್ರೋತ್ಸಾಹಿ ಸಿದರು; ಆನಂದಪಡಿಸಿದರು.

ವಿದ್ಯೆಗೆ, ಸಾಹಿತ್ಯಕ್ಕೆ ಉತ್ತೇಜನ ಕೊಟ್ಟಂತೆಯೇ ಮಹಾರಾಜರು ಸಂಗೀತ, ಶಿಲ್ಪ, ಚಿತ್ರ, ವ್ಯಾಯಾಮ, ಹೀಗೆ ಎಲ್ಲ ಕಲೆಗೆ ಉದಾರಹಸ್ತದಿಂದ ಪೋಷಣೆಯನ್ನು ನೀಡಿದರು. ಸಾಮಾನ್ಯವಾಗಿ ಉತ್ತರದೇಶದ ಜನ ಕರ್ನಾಟಕೀ ಸಂಗೀತ ವನ್ನೂ ದಕ್ಷಿಣ ದೇಶದ ಜನ ಹಿಂದೂಸ್ತಾನೀ ಸಂಗೀತವನ್ನೂ ಬಹಳ ಮೆಚ್ಚಲಾರರು. ಮಹಾರಾಜರಿಗೆ ಈ ಎರಡು ಸಂಗೀತ ದಲ್ಲಿಯೂ ಸಮಾನವಾದ ಪ್ರೇಮ. ಅಲ್ಲದೆ ಸಾಮಾನ್ಯವಾಗಿ ನಮ್ಮ ದೇಶದ ಜನರಿಗೆ ರುಚಿಸದೆನ್ನುವ ಪಾಶ್ಚಾತ್ಯ ಸಂಗೀತದಲ್ಲೂ ಇವರಿಗೆ ವಿಶೇಷ ಪ್ರೇಮವಿತ್ತು. ತಮ್ಮ ತಮ್ಮ ಊರುಗಳಲ್ಲಿರುತ್ತ ಮೈಸೂರು ಅರಮನೆಯಿಂದ ತಿಂಗಳು ತಿಂಗಳಿಗೆ ಸಂಬಳವನ್ನು ತೆಗೆದುಕೊಳ್ಳುತ್ತ ಬಾಳಿದ ಗಾಯಕರ ಸಂಖ್ಯೆ ಮಹಾರಾಜರ ಆಳ್ವಿಕೆ ಯಲ್ಲಿ ಬಹಳ ಬೆಳೆಯಿತು. ವರ್ಷದಲ್ಲಿ ಒಂದು ಸಲ ಸನ್ನಿಧಿಗೆ ಬಂದು ಅಪೇಕ್ಷಿಸಿದಲ್ಲಿ ಹಾಡುವುದು ಈ ಪಂಡಿತರ ಕರ್ತವ್ಯ. ಉಳಿದಂತೆ ಇವರು ಅರಸರಿಗೆ ಸಲ್ಲಿಸಿದ ಪ್ರತಿಫಲ ಏನೆಂದರೆ ತಮ್ಮ ವಿದ್ಯೆಯನ್ನು ಜೀವದ ಅನುಷ್ಠಾನ ಮಾಡುವುದು. ನಮ್ಮ ದೇಶದ ಸಂಗೀತ ವಿದ್ವಾಂಸರನ್ನಂತೂ ಪ್ರಭುಗಳು ತಂದೆಯಾಗಿ ನೋಡಿ ಕೊಂಡರು. ಅವರ ವಿದ್ಯೆ ಉತ್ತಮ ರೀತಿಯದಾದಾಗ ಒಡೆಯರು ಅದಕ್ಕೆ ತೋರಿಸುತ್ತಿದ್ದ ಗೌರವ ಮೇರೆಯನ್ನು ಕಾಣದಿತ್ತು. ಜಗನ್ಮೋಹನ ಮಂದಿರದ ನಾಟಕ ರಂಗದ ಮುಂಭಾಗದಲ್ಲಿ ಒಂದು ಕಡೆ ಪಾಶ್ಚಾತ್ಯ ಸಂಗೀತದ ಅಧಿನಾಯಕನಾದ ಬೀಠವನಿನ ಮೂರ್ತಿಯನ್ನೂ ಇನ್ನೊಂದು ಕಡೆಗೆ ವೈಣಿಕಶಿಖಾಮಣಿ ಕೀರ್ತಿ ಶೇಷ ಶೇಷಣ್ಣನವರ ಮೂರ್ತಿಯನ್ನೂ ಇರಿಸಿರುವುದನ್ನು ಅನೇಕರು ನೋಡಿರಬೇಕು. ಇದರಿಂದ ಭಾರತವರ್ಷದ ಸಂಗೀತದ ವಿಷಯದಲ್ಲಿ ತಮ್ಮ ಆಸ್ಥಾನದ ಸಂಗೀತ ವಿದ್ವಾಂಸನ ವಿಷಯದಲ್ಲಿ ಇವರ ಅಭಿಮಾನ ಎಷ್ಟು ಹಿರಿಯ ದಾಗಿತ್ತೆಂದು ತಿಳಿಯುತ್ತದೆ. ಇದನ್ನು ಪ್ರೇರಿಸಿದ ಅವರ ಅಂತಸ್ಸತ್ವ ಎಂಥ ಉಜ್ವಲ ದೇಶಪ್ರೇಮಿಯನ್ನೂ ತಣಿಸುವಂಥದು. ವರ್ಧಂತಿಯ ತಿಂಗಳಲ್ಲಿ, ನವರಾತ್ರಿಯ ತಿಂಗಳಲ್ಲಿ, ಮೈಸೂರು ನಗರದಲ್ಲಿ ಸಂಗೀತದ ಸುರಿಮಳೆ. ಆ ಉತ್ಸವಗಳಿಗೆ ನಗರಕ್ಕೆ ಬಂದಿರುವ ಮಹನೀಯರೆಲ್ಲ ಸಂಗೀತವನ್ನು ಕೇಳುವಂತೆ ಅರ ಮನೆಗೆ ಆಹ್ವಾನ; ಉಳಿದ ಮಂದಿ ಕೇಳುವುದಕ್ಕೆ ಅನುಕೂಲವಾಗಿ ಧ್ವನಿಯನ್ನು ಸಭಾಮಂದಿರದ ಹೊರಗಣ ಕಳಕ್ಕೆ ಒಯ್ಯುವ ಧ್ವನಿ ವಾಹಕಯಂತ್ರ. ಅರಸರು ಸಂಗೀತದಿಂದ ಸುಖಿಸುತ್ತಿದ್ದರಲ್ಲದೆ ಸ್ವತಃ ಅದರಲ್ಲಿ ಪರಿಶ್ರಮವನ್ನೂ ಪಡೆದಿದ್ದರು. ಸಾಮಾನ್ಯವಾಗಿ ಹಾಡುವ ಕೃತಿಗಳೆಲ್ಲ ಇತರ ಭಾಷೆಗಳವು ಎಂಬುದನ್ನು ಮನಗಂಡು ಒಡೆಯರು ಬಲ್ಲವರಿಂದ ಕನ್ನಡದಲ್ಲಿ ಕೃತಿಗಳನ್ನು ರಚನೆ ಮಾಡಿಸಿ ದರು; ಅವನ್ನು ತಮ್ಮ ಸಭೆಯಲ್ಲಿ ಹಾಡಿಸಿದರು. ಪಾಶ್ಚಾತ್ಯ ಸಂಗೀತದಲ್ಲಿ ವಾಡಿಕೆಯಾಗಿರುವ 'ಕಾನ್ ಸರ್ಟ್' ಎಂಬ ವಾದ್ಯ ಸಾಹಿತ್ಯವನ್ನು ಅನುಭವಿಸಿ ಸುಖಿಸಿ, ಅದರಂತೆ ಭರತವರ್ಷದ ಸಂಗೀತದಲ್ಲಿ ಸಮೂಹನ ಒಂದನ್ನು ಕಲ್ಪಿಸಿದರು. ಈ ಸಮೂಹನ ಮೈಸೂರು ಬೆಂಗಳೂರು ರಾಜೋದ್ಯಾನಗಳಲ್ಲಿ ಆಗಾಗ ಜನರಿಗಾಗಿ ಪ್ರದರ್ಶಿತವಾಗಿದೆ. ಲಕ್ಷಾಂತರ ಜನ ಇದನ್ನು ಕೇಳಿ ಸಂತೋಷಿ ಸಿದ್ದಾರೆ. ಸಂಗೀತ ಪ್ರೇಮಿಗಳು ಆ ಕಲೆಯನ್ನು ಕಲಿಯುವುದಕ್ಕೆ ಅನುಕೂಲಿಸುವಂತೆ ಅರಮನೆಯ ವಿದ್ವಾಂಸರು ಅರಮನೆಯಲ್ಲಿ ಪಾಠ ಹೇಳುವುದಕ್ಕೆಂದು ಕೆಲವು ವರ್ಷಗಳ ಹಿಂದೆ ಒಂದು ಏರ್ಪಾಡಿತ್ತು. ಮಹಾರಾಜರು ಅರಮನೆಯ ಚಿತ್ರಶಾಲೆಯನ್ನು ಒಬ್ಬ ಆಂಗ್ಲಕಲಾವಿಜ್ಞರ ಸಹಾಯದಿಂದ ವ್ಯವಸ್ಥೆಗೆ ತಂದರು. ನಮ್ಮ ದೇಶಕ್ಕೆ ಕೀರ್ತಿಯನ್ನು ತಂದಿರುವ ಚಿತ್ರಕಾರರಾದ ಶ್ರೀ॥ ವೆಂಕಟಪ್ಪನವರಿಗೆ ಒಡೆಯರು ಉದಾರವಾದ ಉತ್ತೇಜನವನ್ನು ನೀಡಿದರು. ಈ ಕಲೆಗಾರರ ಶಿಲ್ಪಕೃತಿ ಕೆಲವು ಮಹಾಸ್ವಾಮಿ ಯವರ ಇಷ್ಟಕ್ಕಾಗಿಯೇ ನಿರ್ಮಿತವಾಯಿತು. ಬೇಲೂರು ದೇವಾಲಯ ನೂರಾರು ವರ್ಷಗಳ ಅಜಾಗ್ರತೆಯ ಫಲವಾಗಿ ಅನೇಕ ವಿಧದಲ್ಲಿ ರೂಪು ಕೆಟ್ಟಿರಲಾಗಿ ಮಹಾರಾಜರ ಅನುಗ್ರಹ ದಿಂದ ಅದನ್ನು ಸರಿಪಡಿಸುವ ಕಾರ್ಯ ಕೆಲವು ವರ್ಷಗಳ ಹಿಂದೆ ಆರಂಭವಾಯಿತು. ಆ ಕೆಲಸವೆಲ್ಲ ಮುಗಿದು ದೇವಾಲಯ ಈಗ ಲಕ್ಷಣವಾಗಿ ಕಾಣುತ್ತಿದೆ. ಕಲೆಗೇ ಬಾಳನ್ನು ಅರ್ಪಿಸಿರುವವರು ಅಲ್ಲದೆ ಕಲೆಯನ್ನು ವಿನೋದಕ್ಕಾಗಿ ಅನುಷ್ಠಿಸುವ ಜನರೂ ನಮ್ಮ ಒಡೆಯರಿಂದ ಉತ್ತೇಜನವನ್ನು ಪಡೆದರು. ವರ್ಧಂತಿಯ ತಿಂಗ ಳಲ್ಲಿ ಕೆಲವು ದಿನ ಹಾಡುವವರು ಇಂತಹ ವಿನೋದಿಗಳು. ಬೆಂಗಳೂರಿನ ನಾಟ್ಯವಿನೋದಿಗಳು ಹಲವು ವೇಳೆ ಒಡೆಯರ ಸಮ್ಮುಖದಲ್ಲಿ ತಮ್ಮ ನಾಟಕಗಳನ್ನು ಪ್ರದರ್ಶಿಸಿ ಪಾರಿತೋಷಿಕ ಗಳನ್ನು ಪಡೆದದ್ದುಂಟು. ಹಾಡಿ ಅಥವಾ ನಾಟಕ ಆಡಿ ಪಾರಿ ತೋಷಿಕವನ್ನು ಪಡೆದವರು ಸರಿಯೆ. ಆದರೆ ಒಡೆಯರ ಕೊಡುಗೈಗೆ ಈ ಕ್ಷೇತ್ರ ಸಾಲಲಿಲ್ಲ. 'ಏನಾದರೊಂದು ಕಾವ್ಯವನ್ನು ಓದುತ್ತೇವೆ ಮಹಾಸ್ವಾಮಿ ಲಾಲಿಸಬೇಕು' ಎಂದು ಬೇಡಿದ ಮಾತ್ರಕ್ಕೇ ಅವರು ಸಂತೋಷಪಡುತ್ತಿದ್ದರು. ಸಾಧ್ಯವಾದರೆ ಓದಿಸುವರು, ಕೇಳುವರು; ಕಾಲದ ಸಂಕೋಚದಿಂದ ಸಾಧ್ಯವಾಗ ದಿದ್ದರೆ ಬಳಿ ಸಾರಿದ ಮಂದಿಯನ್ನು ಬರಿಗೈಯಿಂದ ಕಳುಹುತ್ತಿರ ಲಿಲ್ಲ. ಒಡೆಯರ ಪಾರಿತೋಷಿಕ ಸಂದ ಸೇವೆಗೆ ಪ್ರತಿಫಲವಾಗಿ ಬರುತ್ತಿರಲಿಲ್ಲ; ಸೇವೆ ಸಲ್ಲಿಸುವೆವು ಎಂದು ಬಂದರೆ ಸಾಕು, ಅಂಥವರನ್ನು ಒಳಗೊಳ್ಳುತ್ತಿತ್ತು. ಈ ಕಾವ್ಯಪ್ರೇಮ, ಈ ಕಲಾ ಪ್ರೇಮ ಅಷ್ಟು ಉದಾರವಾದದ್ದು, ಅಷ್ಟು ಸಹಜವಾದದ್ದು.

ಕಾವ್ಯ ಮತ್ತು ಕಲೆಯನ್ನು ಕುರಿತ ಈ ಪ್ರೇಮದ ಹಿನ್ನೆಲೆ ಯಾಗಿ ಒಡೆಯರಲ್ಲಿ ಅನ್ಯಾದೃಶವಾದ ಒಂದು ಸೌಂದರ್ಯ

ಗ್ರಹಣಶಕ್ತಿ ಇತ್ತು. ಮೈಸೂರ ನಗರ ಈಗ ಮೂವತ್ತು ವರ್ಷದ ಹಿಂದೆ ಹೇಗೆ ಇತ್ತೆಂಬುದನ್ನು ಬಲ್ಲವರು ಈಗ ಅದೇ ನಗರವನ್ನು ನೋಡಿದಾಗ ಒಡೆಯರ ಈ ಶಕ್ತಿ ಎಷ್ಟು ವ್ಯಾಪಕವಾದದ್ದೆಂದು ಮನಗಾಣುವರು. ಅಂದು ಮೈಸೂರು ಭರತವರ್ಷದ ಉಳಿದೆಲ್ಲ ದೊಡ್ಡ ಊರಂತೆ ತಾನೂ ಒಂದು ಊರು. ಇಂದು ಮೈಸೂರು ಭರತವರ್ಷದ ಪ್ರಮುಖ ಉದ್ಯಾನ ನಗರ. ರಾಜವೀಥಿ ಸೌಧಗಳು ನೀರ ಹರಹು, ಕೆರೆಯ ಏರಿ, ಸಾಲುಮರ, ಪುಷ್ಪಮಾರ್ಗ, ಎತ್ತರದಲ್ಲಿ ಕಟ್ಟಿರುವ ಹೊಸ ರಾಜಮಂದಿರ, ಲಲಿತಾದ್ರಿಯಮೇಲೆ ವಿಶ್ರಾಂತಿಗೃಹ, ಗಿರಿಯ ಶಿರದಲ್ಲಿ ನಿರ್ಮಿಸಿರುವ ನೂತನ ರಾಜಾಲಯ, ರಾತ್ರಿಯಾದರೆ ಎಲ್ಲೆಲ್ಲೂ ಮಿನುಗುವ ದೀಪಮಾಲೆ, ಇವುಗಳಿಂದ ಅದು ಚಿತ್ರದಲ್ಲಿ ಬರೆದ ಒಂದು ಸೊಗಸ ಕನಸೋ ಎಂದು ಕಾಣುತ್ತದೆ. ಕೃಷ್ಣರಾಜಸಾಗರದ ಬೃಂದಾವನ ಉದ್ಯಾವನವಂತೂ ಇಂದು ಲೋಕಪ್ರಸಿದ್ಧವಾಗಿದೆ. ಶಬ್ದದಿಂದ ರಚಿಸುವ ಕವಿತೆ, ಬಣ್ಣದಿಂದ ರಚಿಸುವ ಚಿತ್ರ, ವಸ್ತುವಿನಿಂದ ರಚಿಸುವ ರೂಪ ಒಂದೊಂದು ತೆರ. ಇದು ಸೃಷ್ಟಿಯನ್ನೇ ನಾದಿ ಸಾಧಿಸಿರುವ ಕವಿತೆ, ಚಿತ್ರ, ಶಿಲ್ಪ. ಅತ್ಯುತ್ತಮವಾದ ಕವಿತೆ, ಚಿತ್ರ, ಶಿಲ್ಪದ ಪ್ರೇರಕಶಕ್ತಿ ವಿಸ್ತಾರವಾದ ಭೂಪ್ರದೇಶದಲ್ಲಿ ವ್ಯಕ್ತವಾಗುವುದು ಹೀಗೆ. ಈ ಸೌಂದರ್ಯಗ್ರಹಣ ಶಕ್ತಿ, ಈ ಸೌಂದರ್ಯ ನಿರ್ಮಾಪಕಶಕ್ತಿ ಬರಿಯ ಬಾಹ್ಯ ಸೌಂದರ್ಯದಲ್ಲಿ ಮೈಮರೆಯಲಿಲ್ಲ. ಲಲಿತಾದ್ರಿಯ ಸುತ್ತಣ ಉದ್ಯಾನದಲ್ಲಿ ಒಡೆಯರು ಬಂಡೆಗಳ ಮೇಲೆ ತಮ್ಮ ಮೆಚ್ಚುಗೆಯ ಶ್ಲೋಕಗಳನ್ನು ಬರೆಯಿಸಿದರು. ಆ ಮಹನೀಯ ಜೀವನದ ಕೆಲವಾದರೂ ಧ್ಯೇಯ ಆ ಶ್ಲೋಕಗಳಲ್ಲಿ ನಮಗೆ ಎಂದಿಗೂ ಕಾಣುತ್ತವೆ. ಇಲ್ಲಿ ನೀತಿ, ಇಲ್ಲಿ ಸ್ತೋತ್ರ, ಇಲ್ಲಿ ಪ್ರಾರ್ಥನೆ. ಆ ಪ್ರಾರ್ಥನೆಯಾದರೂ ಎಷ್ಟು ಸಹಜ, ಎಷ್ಟು ಸರಳ. 'ತಾಯಿ ನನ್ನ ತಲೆ ಎಲ್ಲಿದ್ದರೆ ಅಲ್ಲಿ ನಿನ್ನ ಪಾದವನ್ನು ಕರುಣಿಸು, ನನ್ನ ಮನ ಎತ್ತ ಸುಳಿದರೆ ಅಲ್ಲಿ ನಿನ್ನ ನೆನವನ್ನು ಒದಗಿಸು.'

ಇನ್ನು ಆ ಧರ್ಮನಿಷ್ಠೆಯೋ! ಒಡೆಯರು ಸನಾತನಧರ್ಮದ ಸಾರ ಸಂಗ್ರಹವಾಗಿದ್ದರು. ತಮ್ಮ ಧರ್ಮದ ಯಾವ ನೇಮ ನಿಯಮವನ್ನೂ ಅವರು ಶ್ರದ್ಧೆಯಿಂದಲೇ ಕಂಡರು. ಬ್ರಾಹ್ಮಣ ಕುಲ ತನ್ನ ಬ್ರಾಹ್ಮಣ್ಯಕ್ಕೆ ಕೊಡದೆ ಇದ್ದ ಒಂದು ಗೌರವವನ್ನು, ಸಂಪ್ರದಾಯವನ್ನು ಮನ್ನಿಸಿ ಇವರು ತಮ್ಮ ಬಾಳುವೆಯಲ್ಲಿ ನಡೆಯಿಸಿಕೊಟ್ಟರು. ಸಂಪ್ರದಾಯವನ್ನು ಕುರಿತು ಬೇಸರಪಡುವವರೂ ಸುಧಾರಣೆಗಾಗಿ ತವಕಪಡುವವರೂ ಅರಿಯಲಾರದ ಒಂದು ತತ್ವವನ್ನು ಒಡೆಯರು ಈ ನಡತೆಯಲ್ಲಿ ಅನುಷ್ಠಾನ ಮಾಡಿದರು. ಹೀಗೆಯೇ ಇದ್ದಿತು ಇವರ ಉಳಿದ ಧರ್ಮಾನುಷ್ಠಾನ. ತಮ್ಮ ದಿನಚರಿಯಲ್ಲಿ ಸಂಪ್ರದಾಯದಂತೆ ಸಂಧ್ಯಾವಂದನೆ; ದೇವಮಂದಿರದಲ್ಲಿ ಸಂಪ್ರದಾಯದಂತೆ ಪೂಜೆ, ಪುರಸ್ಕಾರ; ಅರಮನೆಯಲ್ಲಿ ಸಂಪ್ರದಾಯದಂತೆ ವ್ರತಗಳು, ಉತ್ಸವಗಳು; ವರ್ಧಂತಿಯಂದು, ವಿಜಯಪಾಡ್ಯಮಿಯಂದು ಆಚಾರ್ಯರ ಸನ್ನಿಧಿಯಲ್ಲಿ ಸಾಷ್ಟಾಂಗ ನಮಸ್ಕಾರ; ಚಾಮುಂಡೇಶ್ವರಿಯ ರಥೋತ್ಸವ ದಿವಸದಲ್ಲಿ ಮಡಿಯಲ್ಲಿ ಬಂದು ರಥದ ಹಗ್ಗವನ್ನು ಹಿಡಿದು ಎಲ್ಲರಂತೆ ಎಳೆಯೋಣ. ಸಾಮಾನ್ಯವಾಗಿ ದೊಡ್ಡ ಮನುಷ್ಯರೆನ್ನಿಸಿಕೊಂಡವರು ಇದರಲ್ಲಿಒಂದಲ್ಲ ಒಂದನ್ನು ಮಾಡುವುದು ತಮ್ಮ ಮರ್ಯಾದೆಗೆ ಕಡಮೆಯೆಂಬಂತೆ ನಾಚಬಹುದು, ಸಂಕೋಚಪಡಬಹುದು. ನಮ್ಮ ಒಡೆಯರ ಧರ್ಮಶ್ರದ್ಧೆಗೆ ಈ ನಾಚಿಕೆ ಸಂಕೋಚಗಳು ಇಲ್ಲವೆಂಬಂತಾದವು. ಒಡೆಯರು ತಮ್ಮ ಧಾರ್ಮಿಕ ಜೀವನಕ್ಕೆ ಕಳಶವಿಡಲೆಂಬಂತೆ ಹತ್ತು ವರ್ಷದ ಹಿಂದೆ ಕೈಲಾಸಪರ್ವತ ಮಾನಸಸರೋವರದ ಯಾತ್ರೆಗಳನ್ನು ಮಾಡಿ ಬಿಜಯೈದರು. ಆ ಚಳಿಯ ಸ್ಥಳದಲ್ಲಿ ಆ ಚಳಿಯ ನೀರಿನಲ್ಲಿ ಶ್ರದ್ಧಾಳುವಾದ ಸಾಮಾನ್ಯ ಸನಾತನಧರ್ಮಿಯೊಬ್ಬನು ಹೇಗೆ ಮಾಡಬಹುದೋ ಅಥವಾ ಮಾಡಲು ಹೆದರಬಹುದೋ, ಹಾಗೆ ಸ್ನಾನಮಾಡಿದರು, ನಿತ್ಯಾನುಷ್ಠಾನ ನಡಸಿದರು. ಇಷ್ಟನ್ನು ಮಾಡಿದೆವೆಂದು ಹೆಮ್ಮೆಯಿರಲಿಲ್ಲ. ಯಾತ್ರೆಯಿಂದ ಹಿಂತಿರುಗಿದಾಗ ಅವರನ್ನು ಸಂದರ್ಶಿಸಿ ಗೌರವಿಸಬೇಕೆಂದು ದೇಶದ ಪ್ರಜೆ ಆಶಿಸಿತು, ಒಡೆಯರು ಒಪ್ಪಲಿಲ್ಲ.

ಈ ಧರ್ಮನಿಷ್ಠೆ ಅಂಧಶ್ರದ್ಧೆಯಿಂದ ಮಲಿನವಾಗಿರಲಿಲ್ಲ. ಸಂಸ್ಕೃತ ವಿದ್ಯೆ ಒಂದು ಜಾತಿಗೆ ಮಾತ್ರ ಇರಬಾರದು, ಉಳಿದವರಿಗೂ ದೊರೆಯಬೇಕು, ಎಂದು ಜನತೆ ಬೇಡಿದಾಗ ಒಡೆಯರು ಸಂಪ್ರದಾಯದ ದೃಷ್ಟಿಯಿಂದ ಒಂದು ವಿದ್ಯಾಶಾಲೆ ನಡೆಯುವಂತೆಯೂ, ಇನ್ನೊಂದು ಎಲ್ಲ ಜನರಿಗೂ ವಿದ್ಯಾಶಾಲೆಯಾಗಿ ಇರುವಂತೆಯೂ ಮಾರ್ಪಾಡನ್ನು ಮಾಡಿದರು. ಆರೋಗ್ಯ ಮತ್ತು ಅನುಭವದ ದೃಷ್ಟಿಯಿಂದ ಸಮುದ್ರಯಾನಮಾಡುವುದು ಅವಶ್ಯಕವೆಂದು ಕಂಡಾಗ ಅವರು ಯೂರೋಪ್ ಖಂಡಕ್ಕೆ ಚಿತ್ತೈಸಿ ಮರಳಿದರು. ಉಳಿದ ರಾಜರ ನಡೆನುಡಿಯನ್ನು ನೋಡಿದ್ದ ಅಲ್ಲಿಯ ಜನಕ್ಕೆ ಒಡೆಯರ ಬಾಳು ಒಬ್ಬ ಋಷಿಯ ಬಾಳೆಂದು ಕಂಡದ್ದು ಆಶ್ಚರ್ಯವಲ್ಲ. ಪರದೇಶದಲ್ಲಿದ್ದರೂ ಅವರು ತಮ್ಮ ನೇಮ ಒಂದನ್ನೂ ಬಿಡಲಿಲ್ಲ. ತಾವು ಇಳಿದ ಒಂದು ಸ್ಥಳದಲ್ಲಿ ಪೂಜಾಮಂದಿರ ಒಂದೇ ಇದ್ದ ಸಂದರ್ಭದಲ್ಲಿ ತಮ್ಮ ಪರಿವಾರದ ಬ್ರಾಹ್ಮಣರಿಗೆ ಮೊದಲು ಪೂಜೆ ಮುಗಿಸುವುದಕ್ಕೆ ಅವಕಾಶಕೊಟ್ಟು ಆಮೇಲೆ ತಾವು ಪೂಜೆಗೆ ಕುಳಿತರು. ಅಲ್ಲಿ ಇರುತ್ತ ಉಪಾಕರ್ಮದ ದಿನ ಬರಲಾಗಿ ಅಲ್ಲೇ ನದೀ ತೀರದಲ್ಲಿ ಶಾಸ್ತ್ರೋಕ್ತವಾಗಿ ಆ ವ್ರತದ ವಿಧಿಯನ್ನು ಸಾಂಗಗೊಳಿಸಿದರು. ಜನತೆಯ ದೃಷ್ಟಿಯಿಂದ ಹರಿಜನ ಪ್ರಮುಖರನ್ನು ಉಳಿದವರಂತೆ ಅರಮನೆಗೆ ಕರೆಯುವುದು ಅವಶ್ಯಕವೆಂದು ಕಂಡಾಗ, ಒಡೆಯರು, ಸಂಪ್ರದಾಯ ಇಲ್ಲದೆ ಇದ್ದರೂ ಆ ಜನರಿಗೆ ಆಹ್ವಾನಕೊಟ್ಟು ಅವರನ್ನು ಒಳಗೆ ಬರಮಾಡಿಕೊಂಡರು. ಸನಾತನ ಧರ್ಮದ ನವಯುಗದ ಪ್ರತಿಪಾದಕರಾದ ರಾಮಕೃಷ್ಣ ವಿವೇಕಾನಂದರ ಧರ್ಮಪಂಥಕ್ಕೆ ಒಡೆಯರು ಬಹು ವಿಧದಲ್ಲಿ ಉತ್ತೇಜನ ನೀಡಿದ್ದಾರೆ. ಇವುಗಳಲ್ಲಿ ಒಂದು ರಾಮಕೃಷ್ಣರ ಮಠದ ತರುಣ ಸನ್ಯಾಸಿಗಳು ತತ್ತ್ವವನ್ನು ಅಭ್ಯಾಸಮಾಡುವ ಬಗ್ಗೆ ಇವರು ಸ್ವಂತವಾಗಿ ವೇತನಗಳನ್ನು ಕೊಟ್ಟು ಮೈಸೂರಿನಲ್ಲಿ ಏರ್ಪಾಡುಮಾಡಿದ್ದು. ಇದು ಕೆಲವು ವರ್ಷದ ಹಿಂದೆ ಆರಂಭವಾಗಿ ಈಗಲೂ ನಡೆಯುತ್ತಿದೆ.

ಒಡೆಯರ ಧರ್ಮನಿಷ್ಠೆ ಸ್ವಮತಾಭಿಮಾನದಲ್ಲಿ ಮುಗಿಯಲಿಲ್ಲ. ಪರಮತಗಳನ್ನು ಕುರಿತ ಸೌಹಾರ್ದವಾಗಿಯೂ ಕಂಡಿತು. ಮೈಸೂರು ನಗರದಲ್ಲಿ ತಮ್ಮ ಮುಸ್ಲಿಂ ಪ್ರಜೆಗಳ ಒಂದು ಪ್ರಾರ್ಥನಾ ಮಂದಿರಕ್ಕೂ ಕ್ರೈಸ್ತ ಪ್ರಜೆಗಳ ಒಂದು ಪ್ರಾರ್ಥನಾ ಮಂದಿರಕ್ಕೂ ಪ್ರಭುಗಳು ಸ್ವತಃ ದಯಮಾಡಿಸಿ ತಮ್ಮ ಧರ್ಮನಿಷ್ಠೆ ಎಷ್ಟು ಉದಾರವಾದದ್ದೆಂಬುದನ್ನು ತೋರಿದರು. ಈ ಭಾಗದಲ್ಲಿಯೂ ಇವರು ಸನಾತನ ಧರ್ಮದ ಅತ್ಯುತ್ತಮ ತತ್ತ್ವವನ್ನು ತಮ್ಮ ಜೀವನದಲ್ಲಿ ನಿದರ್ಶಿಸಿದರು. ಪರದೇಶದವರು ಅನೇಕ ಸಲ ಎತ್ತಿ ಹೇಳುವ ಒಂದು ಮಾತನ್ನೂ ಇಲ್ಲಿ ಹೇಳಬಹುದು. ಅದು ಯಾವುದೆಂದರೆ: ಹಿಂದುವಾದ ಈ ರಾಜರು ಮುಸ್ಲಿಮರನ್ನು ದಿವಾನರಾಗಿ ಇರಿಸಿಕೊಂಡಿದ್ದಾರೆ; ಒಬ್ಬ ಐರೋಪ್ಯರನ್ನು ಆಪ್ತ ಸಚಿವರನ್ನಾಗಿ, ಒಬ್ಬ ರೋಮನ್ ಕ್ಯಾಥೊಲಿಕರನ್ನು ಅರಮನೆಯ ಕಾರ್ಯಕಾರಿಗಳಾಗಿ ಇರಿಸಿಕೊಂಡಿದ್ದಾರೆ ಎನ್ನುವುದು. ಭರತವರ್ಷ ಪರಸ್ಪರ ಕೊಲೆಮಾಡುವ ಹಲವು ಮತಗಳ ಕಾಳಗದ ಕಣವೆಂದು ಕಥೆ ಕಟ್ಟುವ ಪಾಶ್ಚಾತ್ಯರಿಗೆ ಈ ವಿಷಯ ಆಶ್ಚರ್ಯವನ್ನುಂಟುಮಾಡುವುದು ಸಹಜವೇ ಆಗಿದೆ. ಬಹು ಮತಗಳ ಪರಸ್ಪರ ಸೌಹಾರ್ದವನ್ನೇ ಸಾಮಾನ್ಯವಾಗಿ ಕಾಣುತ್ತಿರುವ ನಮಗೆ ಇದರಲ್ಲಿ ಆಶ್ಚರ್ಯವಿಲ್ಲ. ಆದರೆ ಧ್ಯೇಯ ಇದು: ಸೌಹಾರ್ದ ಇರಬೇಕು, ಎಂದು ಬಲ್ಲೆವಾದರೂ ಆ ಸೌಹಾರ್ದ ಉಳ್ಳವರು ಹೇಗೆ ನಡೆದುಕೊಳ್ಳುತ್ತಾರೆ ಎಂದು ಅರಿಯುವುದು ಹೇಗೆ? ಇದಕ್ಕೆ ಒಬ್ಬ ಆದರ್ಶ ಪುರುಷರು ಬೇಕು. ಅಂಥ ಆದರ್ಶವಾಗಿದ್ದರು ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರು.

ಕಳೆದ ವರ್ಷ ಮಹಾಸ್ವಾಮಿಯವರು ತುಮಕೂರು ಪ್ರಾಂತಕ್ಕೆ ಬಿಜಮಾಡಿಸಿದ್ದರು. ಆಗ ಅವರು ನಡೆದುಕೊಂಡ ರೀತಿ ಕಂಡವರಿ

ಗೆಲ್ಲ ವಿಸ್ಮಯವನ್ನೂ ಆನಂದವನ್ನೂ ಉಂಟುಮಾಡಿತು. ಒಡೆಯರು ತಮ್ಮ ಮೋಟಾರಿನಲ್ಲಿ ಪುರದ ಪ್ರವೇಶ ಮಂಟಪಕ್ಕೆ ಚಿತ್ತೈಸಿದಾಗ ಸಾವಿರಾರು ಪ್ರಜೆ ಇತ್ತ ಅತ್ತ ನೆರೆದು ನಗರದ ಮತ್ತು ಪ್ರಾಂತದ ಪ್ರಮುಖರು ಎರಡು ಸಾಲಿನಲ್ಲಿ ಮುಂದುಗಡೆ ನಿಂತಿದ್ದರು. ವೈದಿಕರು ಫಲಮಂತ್ರಾಕ್ಷತೆಯನ್ನು ಕೊಟ್ಟ ಒಡನೆ ಪ್ರಭುಗಳು ದೂರದಲ್ಲಿದ್ದ ಪ್ರಮುಖರನ್ನು ಬಳಿಗೆ ಬರುವಂತೆ ಸಂಜ್ಞೆ ಮಾಡಿದರು. ಬಳಿ ಸಾರಿದವರಲ್ಲಿ ಮಹಾಸ್ವಾಮಿಗಳ ಆಸ್ಥಾನದ ಮಹಾವಿದ್ವಾಂಸರೊಬ್ಬರು ಇದ್ದರು. ಕಿಕ್ಕಿರಿದು ನಿಂತಿದ್ದ ಆ ಜನ ಸಮೂಹದವಲ್ಲಿ, ಮುಂದೆ ಹೊರಡಬೇಕೆಂಬ ತವಕದ ಆ ಅಲ್ಪಾವಕಾಶದಲ್ಲಿ, ಒಡೆಯರು ವಿದ್ವಾಂಸರನ್ನು ಕುರಿತು ಕುಶಲ ಪ್ರಶ್ನೆ ಮಾಡಿದರು. ಮಾರನೆಯ ದಿನ ಸಹಸ್ರಾಂತರ ಪ್ರಜೆ ಎಲ್ಲ ಕಡೆಯಿಂದ ಬಂದು ನೋಡಲು ಕಾದಿತ್ತು. ಒಡೆಯರು ತಮ್ಮ ರಥದಲ್ಲಿ ಆ ಜನ ಸಮೂಹದ ಮಧ್ಯೆ ಮೆರವಣಿಗೆ ಚಿತ್ತೈಸಿದರು. ಮೆರವಣಿಗೆ ಮುಗಿದಮೇಲೆ ಪರಸ್ಥಳದಿಂದ ಅನೇಕ ಜನ ಬಂದು ತಾವು ಒಡೆಯರನ್ನು ಸಂದರ್ಶಿಸುವುದಕ್ಕೆ ಇಲ್ಲದೆ ಹೋಯಿತಲ್ಲಾ ಎಂದು ವ್ಯಥೆಪಟ್ಟರು. ಇದು ವರದಿಯಾಗಿ, ಜನರು ಮತ್ತೆ ಬೇಡುತ್ತಾರೆ ಎಂದು ತಿಳಿದಾಗ, ಪ್ರಭುಗಳು ಸಂಜೆಯಲ್ಲಿ ಮತ್ತೆ ಅದೇ ರೀತಿಯಲ್ಲಿ ಜನರ ಮಧ್ಯೆ ದಯಮಾಡಿಸಿದರು. ಹೊರಡುವ ವೇಳೆಗೆ ಸರಿಯಾಗಿ ಮಳೆ ಬಂದಿತು. ಆದರೆ ಒಡೆಯರು ಮಳೆಯಲ್ಲಿ ನೆನೆಯುತ್ತಲೇ ಜನದ ಆಸೆಯನ್ನು ಸಲ್ಲಿಸಿದರು. ಮೆರವಣಿಗೆ ಮುಗಿದು ಅರಸರು ಪುರಭವನವನ್ನು ಮುಟ್ಟಿದಾಗ ಅಲ್ಲಿ ಪೌರಸಭೆಯ ಅಧ್ಯಕ್ಷರು ಕಾಣಿಸಿಕೊಂಡರು. ಮಳೆಯಲ್ಲಿ ಬರುತ್ತ ಅಧ್ಯಕ್ಷರು ನೆನೆದಿದ್ದರು. ಒಡೆಯರು ಅವರು ನೆನೆದರೇ ಎಂದು ಪರಿತಾಪಪಟ್ಟರು. ತಾವೂ ನೆನೆದಿರುವುದು ಅಷ್ಟು ದೊಡ್ಡ ಮಾತೆಂದು ಒಡೆಯರಿಗೆ ಕಂಡಂತಿರಲಿಲ್ಲ. ಅಧ್ಯಕ್ಷರು ನಮ್ರತೆಯಿಂದ ಉಚಿತವಾದ ಒಂದು ಮಾತನ್ನು ಆಡಿದಮೇಲೆ ಪ್ರಭುಗಳು ಈ ಮಳೆಯಿಂದ ಬೆಳೆಗೆ ಉಪಯೋಗವಾಯಿತು ಎಂದು ಅಪ್ಪಣೆ ಕೊಡಿಸಿದರು. ಮಾರನೆಯ ದಿನ ಬೆಂಗಳೂರಿಗೆ ಹಿಂತಿರುಗುವಾಗ ದಾರಿಯುದ್ದಕ್ಕೂ ಪ್ರಾಂತದ ಜನ ಚಪ್ಪರಗಳನ್ನು ಹಾಕಿ ಫಲಪುಷ್ಪಗಳನ್ನು ಹಿಡಿದುಕೊಂಡು ಹೊತ್ತಾಯಿತೆನ್ನದೆ, ಬಿಸಿಲೇರಿತೆನ್ನದೆ, ಒಡೆಯರ ದರ್ಶನಕ್ಕೆಂದು ಕಾದು ನಿಂತಿತ್ತು. ಇವರ ಶ್ರದ್ಧೆಯಿಂದ ಆದ ಸಂತೋಷಕ್ಕಿಂತಲೂ ಒಡೆಯರಿಗೆ ಇವರ ಶ್ರಮವನ್ನು ನೋಡಿ ಮರುಕ ಹೆಚ್ಚಾಯಿತು. ನಮಗಾಗಿ ಈ ಜನರು ಪಾಪ ಎಷ್ಟು ಕಷ್ಟಕ್ಕೆ ಸಿಕ್ಕುತ್ತಾರೆ ಎಂದು ಅವರು ವ್ಯಥೆಪಟ್ಟರು. ಒಡೆಯರು ತಮ್ಮನ್ನು ಕುರಿತು ಚಿಂತಿಸುತ್ತಿರಲಿಲ್ಲ. ಇನ್ನೊಬ್ಬರು ನೆನೆದರೆ ಚಿಂತೆಮಾಡುವರು: ರೈತನಿಗೆ ಅನುಕೂಲವಾಯಿತೆಂದರೆ ಸಂತೋಷಪಡುವರು. ಜನ ಬಿಸಿಲಲ್ಲಿ ನಿಂತರೆ ಮರುಕಗೊಳ್ಳುವರು. ಅವರ ಪ್ರಜಾವಾತ್ಸಲ್ಯ ಅಷ್ಟು ತೀವ್ರವಾಗಿತ್ತು.

ದೂರದಿಂದ ನೋಡುವವರಿಗೆ ಸುಂದರವಾಗಿ ಕಂಡ ಈ ಬಾಳುವೆ ಹತ್ತಿರದವರಿಗೂ ಹಾಗೆಯೇ ಕಂಡಿತು. ಒಡೆಯರು ತಮ್ಮ ಮಾತೃಶ್ರೀಯವರ ವಿಷಯದಲ್ಲಿ ನಡೆದುಕೊಂಡ ರೀತಿ ಒಳ್ಳೆಯ ಮಕ್ಕಳೆನಿಸಿಕೊಳ್ಳುವವರಿಗೆ ಮೇಲ್ಪಂಕ್ತಿಯಾಗಿತ್ತು. ಅವರೂ ಅವರ ಸೋದರರೂ ಎಂದಿನಿಂದಲೂ ನೋಡುವ ಮಂದಿಗೆ ಒಳ್ಳೆಯ ಮನೆತನದ ಅಣ್ಣತಮ್ಮಂದಿರು ಹೇಗಿರಬೇಕೆನ್ನುವುದನ್ನು ತೋರುವಂತಿದ್ದರು. ಶೃಂಗೇರಿಯ ಶ್ರೀಮದಭಿನವ ನರಸಿಹ್ಮ ಭಾರತಿ ಸ್ವಾಮಿಗಳು ಈ ಸೋದರರನ್ನು 'ಶ್ರೀರಾಮ ಲಕ್ಷ್ಮಣಾವಿವ ಸಂಪ್ರಾಪ್ತೌ ಚಾಮರಾಜ ಸುಕುಮಾರೌ' ಎಂದು ಒಮ್ಮೆ ವರ್ಣಿಸಿದರು. ತಮ್ಮ ಸೋದರಿಯರಿಗೆ ಬಂಧುಗಳಿಗೆ ಇವರು ಆದರ್ಶ ಸೋದರರಾಗಿ ಆದರ್ಶ ಬಂಧುವಾಗಿ ನಡೆದುಕೊಂಡರು. ಸಮೀಪದ ಸೇವೆಗೆ ನಿಂತವರಿಗೆ ಒಡೆಯರು ಅನುಗ್ರಹಿಸಿದ ವಿಶ್ವಾಸವೂ ಸೌಜನ್ಯವೂ ಅನ್ಯಾದೃಶವಾದುವು. ಈ ಭಾಗವನ್ನು ತೋರಿಸುವ ಸಂಗತಿ ಅನೇಕವನ್ನು ಅವರ ಸನ್ನಿಧಿಯಲ್ಲಿ ಕೆಲಸಮಾಡಿದವರು ಹೇಳುತ್ತಾರೆ. ಅವನ್ನು ಹೇಳುವುದಕ್ಕೇ ಒಂದು ಲೇಖನವನ್ನು ಬರೆಯಬಹುದು. ಇದಕ್ಕೂ ಮಿಗಿಲಾಗಿ ಒಡೆಯರ ಬಳಿ ಸಾರಿದವರಿಗೆ ಅವರ ವಿಷಯದಲ್ಲಿ ಹುಟ್ಟುತ್ತಿದ್ದ ಗೌರವ ಅನವಧಿಕವಾಗಿತ್ತು. ಬಾಲ್ಯದಲ್ಲಿ ಅವರಿಗೆ ಪಾಠ ಹೇಳಿದ ಉಪಾಧ್ಯಾಯರು, ದೇಶೀಯರು ವಿದೇಶೀಯರು, ಅವರು ದೊರೆತನಕ್ಕೆ ಬಂದಮೇಲೆ ಅವರ ಸನ್ನಿಧಿಯಲ್ಲಿ ಸೇವೆ ಮಾಡಿದವರು, ದೇಶೀಯರು ವಿದೇಶೀಯರು, ಒಂದು ಕಂಠದಿಂದ ಅವರ ಗಾಂಭೀರ್ಯವನ್ನು ಅವರ ತಾಳ್ಮೆಯನ್ನು ಅವರ ಗುಣ ಗ್ರಹಣಶಕ್ತಿಯನ್ನು ಅವರ ಕರ್ತವ್ಯ ನಿಷ್ಠೆಯನ್ನು ಒಟ್ಟನಲ್ಲಿ, ಅವರ ರಾಜಯೋಗ್ಯವಾದ ಗುಣಗಳ ಗಡಣವನ್ನು ಬಾಯಿತುಂಬ ಹೊಗಳಿದ್ದಾರೆ. ಪ್ರಭುಗಳ ಇಪ್ಪತ್ತೈದು ವರ್ಷಗಳ ಆಳ್ವಿಕೆಯ ಉತ್ಸವದ ಸಂದರ್ಭದಲ್ಲಿ ಅವರ ಒಡನಾಡಿಗಳೂ ನಚ್ಚಿನ ಗೆಳೆಯರೂ ಆಗಿದ್ದು ಅಧಿಕಾರದಲ್ಲಿ ಮುಖ್ಯ ಮಂತ್ರಿಗಳಾದ ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್‌ರವರು "ಎಂಥ ಮಹನೀಯನೂ ತನ್ನ ಸೇವಕನಿಗೆ ಮಹನೀಯನಾಗಿ ಕಾಣಲಾರನು ಎಂದು ಕಾರ್ಲೈಲ್ ಲೇಖಕನು ಹೇಳಿದನು. ಹಾಗೆ ಹೇಳುವಲ್ಲಿ ಅವನು ನಮ್ಮ ಒಡೆಯರಾದ ಶ್ರೀಮನ್ನಾಲ್ಮಡಿ ಕೃಷ್ಣ ರಾಜ ಒಡೆಯರನ್ನು ಕಂಡಿರಲಿಲ್ಲ." ಎಂದು ಅಪ್ಪಣೆ ಕೊಡಿಸಿದರು. ಎಷ್ಟು ಹತ್ತಿರ ಬಂದವರಿಗೂ ನಮ್ಮ ಪ್ರಭುಗಳ ಗುಣ ಅಷ್ಟು ಅದ್ಭುತವಾಗಿ ಕಾಣುತ್ತಿತ್ತು. ಸಾಮೀಪ್ಯದಿಂದ ಪರಿಚಯದಿಂದ ಇಲ್ಲಿ ದೋಷಗಳು ಕಂಡು ಗೌರವ ಕಡಮೆಯಾಗುತ್ತಿರಲಿಲ್ಲ. ಪ್ರಭುಗಳನ್ನು ನೋಡಿದವರಿಗೆ ದಿನ ಕಳೆದಂತೆ ಪರಿಚಯ ಬೆಳೆದಂತೆ ಅವರ ವಿಷಯದಲ್ಲಿ ಗೌರವವೂ ವೃದ್ಧಿಯಾಗುತ್ತಿತ್ತು.

ಆ ಉತ್ಸವದ ಸಂದರ್ಭದಲ್ಲಿ ಮಹಾರಾಜರವರು ಅಪ್ಪಣೆ ಕೊಡಿಸಿದ ಸಂದೇಶ ಆ ರಾಜರ್ಷಿಗಳ ತಪಸ್ಸಿಗೆ ತಕ್ಕುದಾಗಿತ್ತು. ಈ ಸುಂದರವಾದ ದೇಶದಲ್ಲಿ ಒಳ್ಳೆಯದಾದ ತಮ್ಮ ಪ್ರಜಾವರ್ಗ ಸುಖವಾಗಿ ಬಾಳಲೆಂಬ ತಮ್ಮ ಆಸೆಯನ್ನು ಅವರು ಆಗ ಮುತ್ತಿನಂಥ ಮಾತಿನಲ್ಲಿ ಸೂಚಿಸಿದರು. ಆ ಸಂದೇಶದಲ್ಲಿ ತಾವು ಅದುವರೆಗೆ ಮಾಡಿದ ಪ್ರಜಾಪರಿಪಾಲನೆಯನ್ನು ಕುರಿತು ತೃಪ್ತಿ ಕಾಣಲಿಲ್ಲ; ಮುಂದೆ ತಮ್ಮಿಂದ ಒಳ್ಳೆಯದಾಗುವಂತೆ ಭಗವಂತನು ಅನುಗ್ರಹಿಸಲಿ ಎಂಬ ಪ್ರತ್ಯಾಶೆ ಇತ್ತು. ಈ ಆತ್ಮವಿನಿಗ್ರಹಕ್ಕೆ ಈ ಕರ್ತವ್ಯ ಪರಾಯಣತೆಗೆ ಮಿಗಿಲೆಲ್ಲಿ ಲೋಕದಲ್ಲಿ?

ಕರ್ನಾಟಕ ದೇಶ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರನ್ನು ಕಳೆದುಕೊಂಡು ಐದು ತಿಂಗಳಾಗಿಲ್ಲ. ಆ ಅಪಾರ ನಷ್ಟದ ದುಃಖವನ್ನು ಸಹಿಸಿಕೊಂಡು ಆ ಕಣ್ಣೀರನ್ನು ಸರಿಯಾಗಿ ಒರಸಿಕೊಳ್ಳುವ ಮೊದಲು ಮಹಾರಾಜರನ್ನೇ ಕಳೆದುಕೊಂಡು ಪರಿತಪಿಸುತ್ತಿದೆ. ನಾಡ ಕಲ್ಯಾಣಕ್ಕಾಗಿ ಅದರ ಸೌಭಾಗ್ಯ ಎರಡು ರೂಪವನ್ನು ಧರಿಸಿತೋ ಎಂಬಂತೆ ಇದ್ದ ಈ ಸೋದರರು ಜನಜೀವನದ ಹತ್ತಾರು ಕ್ಷೇತ್ರದಲ್ಲಿ ಜೊತೆ ಜೊತೆಯಾಗಿ ಅವಲಂಬವಾಗಿದ್ದರು. ರಾಮ ಲಕ್ಷ್ಮಣರಂತೆ ಸಂಪ್ರಾಪ್ತರಾಗಿದ್ದ ಇಬ್ಬರೂ ರಾಮ ಲಕ್ಷ್ಮಣರಂತೆ ಕಾಲಸರಯುವಿನ ಪ್ರವಾಹದಲ್ಲಿ ಇಳಿದು ಕಣ್ಮರೆಯಾಗಿದ್ದಾರೆ. ಇವರಿಬ್ಬರನ್ನೂ ನೋಡಿದ್ದ ಕಣ್ಣುಗಳು ಇಷ್ಟು ಬೇಗನೆ ಇಬ್ಬರೂ ಮರೆಯಾದುದನ್ನು ಕಂಡು ಇವರು ತಮ್ಮ ಜೀವನಯಾತ್ರೆಯನ್ನು ಮುಗಿಸಿದರೆಂಬುದನ್ನು ನಂಬುವುದು ಸಾಧ್ಯವಿಲ್ಲ ಎನ್ನುತ್ತಿದಾರೆ.

ಕಳೆದ ಶನಿವಾರದ ರಾತ್ರಿ ಬೆಂಗಳೂರ ಜನರು ಇಲ್ಲಿಯ ರಾಜಾಲಯದಲ್ಲಿ ಒಡೆಯರ ದಿವ್ಯ ಕಳೇಬರದ ದರ್ಶನವನ್ನು ಮಾಡಿಕೊಂಡರು. ಅಮಾವಾಸ್ಯೆಯ ಆ ರಾತ್ರಿ ಪ್ರಭುಗಳ ನಿಧನವನ್ನು ಸಹಿಸಲಾರದೆ ಕೊರಗುವಂತಿತ್ತು. ಪ್ರಕೃತಿಯೇ ಖಿನ್ನವಾದಂತೆ ಕಾಣುತ್ತಿದ್ದ ಆ ಸುತ್ತಿನಲ್ಲಿ ಎಲ್ಲ ಮುಖವೂ ಖೇದದಿಂದ ವಿಕೃತವಾಗಿರುವಲ್ಲಿ ಪ್ರಭುಗಳ ದೇಹದಲ್ಲಿ ಮಾತ್ರ ಪ್ರಶಾಂತವಾದ ಮುಖಮುದ್ರೆ ಕಾಣುತ್ತಿತ್ತು. ಆ ಮುಖದ ಪ್ರಸನ್ನತೆಯಿಂದ ಇದು ಮರಣವಲ್ಲ ನಿದ್ರೆ ಎಂಬ ಭ್ರಾಂತಿ ಹುಟ್ಟುವಂತಿತ್ತು. ಚೆನ್ನಾಗಿ ಬಾಳಿದ ಪ್ರಭುಗಳು ದೇಹವನ್ನು ಬಿಡುತ್ತ ಮತ್ತೆ ಹೇಗೆ ಬಿಟ್ಟಾರು? ಕಾಳಿದಾಸನು ರಘುವಂಶದ ಅರಸರನ್ನು ಕುರಿತು ಹೇಳಿದ

ಮಾತು ನಮ್ಮ ಒಡೆಯರವರಿಗೆ ಅನ್ವಯಿಸಿತು. ಅವರು ಅಂತ್ಯದಲ್ಲಿ ಯೋಗದಿಂದ ತನುತ್ಯಾಗ ಮಾಡಿದರು. ಸತ್ಯವಂತರ ಮೃತಿ ಮೃತಿಯಲ್ಲ, ಯೋಗನಿದ್ರೆ.

ಕರ್ನಾಟಕದ ರಾಷ್ಟ್ರ ಇಂಥ ಅರಸರ ನೆರವಿಂದ ಮುಂದೆ ಏನಾಗಬೇಕೆಂದು ಕನಸುಕಾಣುತ್ತಿತ್ತೊ ಆ ಕನಸ ಗುಳ್ಳೆ ಒಡೆದು ಹೋಯಿತು. ಮೂವತ್ತೆಂಟು ವರುಷದಿಂದ ಈ ಜನದ ಜೀವನವನ್ನು ಅಧಿಕರಿಸಿ ಬೆಳಗಿದ ಭಾಗ್ಯತಾರೆ ಕಣ್ಮರೆಯಾಯಿತು. ಮುಂದೆ ಎಂದೋ ಒಂದು ದಿನ ಸರಿಯಾದ ಕಾಲದಲ್ಲಿ ಮುಗಿಯಬಹುದಾಗಿದ್ದ ಬಾಳು ಅಕಾಲದಲ್ಲಿ ಇಂದೇ ಮುಗಿದುಹೋಯಿತು. ಈ ಹಿರಿಯ ಜೀವವನ್ನು ಕಳೆದುಕೊಂಡ ಈ ಹೊತ್ತಿನಲ್ಲಿ ಮೈಸೂರ ಜನತೆ, ಇಂದು ನಾವು ನಿರಾಧಾರರಾದೆವು, ಇಂದು ಸರಸ್ವತಿಯ ಅವಲಂಬ ತಪ್ಪಿತು, ಇಂದು ಪಂಡಿತರು ದಿಕ್ಕಿಲ್ಲದಾದರು ಎಂದು ಹೇಳುತ್ತಿದೆ. ಆದರೆ ಯೋಗದಿಂದ ದೇಹವನ್ನು ತ್ಯಾಗಮಾಡಿದ ಆ ಮಹನೀಯ ಜೀವನ, ಜನತೆ ಈ ಸ್ಥಿತಿಯಲ್ಲಿ ಬಹು ದಿನ ನಿಲ್ಲುವುದನ್ನು ಒಪ್ಪಲಾರದು. ಕಾಡಿಗೆ ಹೋಗುತ್ತ ರಾಮಚಂದ್ರನು ಅಯೋಧ್ಯೆಯ ಜನರಿಗೆ ಹೇಳಿದಂತೆ ನಮ್ಮ ಒಡೆಯರ ಆತ್ಮ ನಮ್ಮ ಜನತೆಗೆ 'ಚಿರಮ್ ಖಸ್ಯ ಪಾಸೀಯೋ ಗಮ್ಯತಾಂ ಅರ್ಥಸಿದ್ಧಯೇ' ಎಂದು ಹೇಳುತ್ತಿದೆ. ಈ ಕಾಲ ನಮ್ಮ ದೇಶದ ತಪಸ್ಸು ಫಲ ಕೊಡುತ್ತಿರುವ ಕಾಲ. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗೋಖಲೆ, ತಿಲಕ್, ಗಾಂಧೀ, ಟಾಗೋರ್, ಅರವಿಂದಘೋಷ, ರಮಣಮಹರ್ಷಿಗಳನ್ನು ಪಡೆದ ಈ ಕಾಲ ಈ ಮಹಿಮಾಪುರುಷರೊಂದಿಗೆ ರಾಜವರ್ಗದ ಮಹಿಮಾಪುರುಷರಾಗಿ ಶ್ರೀಮನ್ ನಾಲ್ಮಡಿ ಕೃಷ್ಣರಾಜ ಒಡೆಯರನ್ನು ಪಡೆಯಿತು. ಇಂಥ ಬಾಳಿನ ಪ್ರಭಾವ ಅದರೊಂದಿಗೆ ಮುಗಿಯುವುದಿಲ್ಲ. ಆ ಬಾಳು ಮುಗಿದರೂ ಅದರ ಪ್ರಭಾವ ಮುಗಿಯದಿರುವುದೇ ಆ ಮಹಿಮೆಯ ಹೃದಯ. ತಮ್ಮಂತೆಯೇ ಚಿಕ್ಕಂದಿನಲ್ಲಿ ರಾಜ್ಯದ ಭಾರವನ್ನು ವಹಿಸಬೇಕಾಗಿ ಬಂದಿರುವ ಕುಮಾರರ ವಿಷಯದಲ್ಲಿ ಒಡೆಯರ ಆತ್ಮ ತಾನಿರುವಲ್ಲಿ ಚಿಂತಿಸುತ್ತಿದೆ. ತಾನು ಆರಂಭಿಸಿದ ಅಭಿವೃದ್ಧಿ ಕಾರ್ಯಕ್ರಮ ಮುಂದುವರಿಯಲೆಂದೂ ಈ ಜನತೆ ಇನ್ನೂ ಹೆಚ್ಚಿನ ಸೌಭಾಗ್ಯವನ್ನು ಕಾಣಲೆಂದೂ ಅಲ್ಲಿ ಅದು ಆಶಿಸುತ್ತಿದೆ. ಆ ಚಿಂತೆಯನ್ನು ಆ ಆಶೆಯನ್ನು ನಾವು ಎಷ್ಟು ವಹಿಸಿಕೊಂಡರೆ ಅಲ್ಲಿ ಆ ಆತ್ಮಕ್ಕೆ ಅಷ್ಟು ಸಮಾಧಾನ. ಐದು ತಿಂಗಳ ಹಿಂದೆ ಯುವರಾಜ ಕುಮಾರರಾಗಿದ್ದು, ಐದು ತಿಂಗಳ ಕಾಲ ಯುವರಾಜರಾಗಿದ್ದು, ಈಗ ಮಹಾರಾಜರ ಸ್ಥಾನಕ್ಕೆ ಬಿಜಯಗೈದಿರುವ ಶ್ರೀ ಜಯಚಾಮರಾಜ ಒಡೆಯರವರ ಬಾಳಲ್ಲಿ ಅವರ ಈ ಹಿರಿಯರ ತಪಸ್ಸೆಲ್ಲ ಫಲಿಸಲಿ. ಈಗ ಮೊದಲಾಗುವ ಆಳ್ವಿಕೆ ಈಗ ಕೊನೆಯಾದ ಆಳ್ವಿಕೆಯಂತೆ ಯಶಸ್ವಿಯಾಗಲಿ; ಇದಕ್ಕಿಂತ ದೀರ್ಘವಾಗಲಿ. ದಿವಂಗತರಾದ ಒಡೆಯರು ಆಶಿಸಿದ ಸಮಸ್ತ ಮಂಗಳವನ್ನೂ ಈ ಜನತೆ ಕಾಣಲಿ. ಎಷ್ಟೇ ಮಂಗಳವನ್ನು ಕಂಡರೂ ಅದರ ಬಹುಭಾಗಕ್ಕೆ ಕಾರಣರಾದ ಶ್ರೀಮನ್ ನಾಲ್ಮಡಿ ಕೃಷ್ಣ ಭೂಪರನ್ನು ಎಂದೆಂದಿಗೂ ನೆನೆಯಲಿ.

ನೆನೆಯಲಿ ಎಂದು ಹೇಳತೇನು! ನೆನದೇ ನೆನೆಯುತ್ತದೆ, ಪೂಜಿಸುತ್ತದೆ; ಬರುವಕಾಲದ ಎಲ್ಲ ಸಂಪತ್ತಿನ ಪ್ರೇರಕಶಕ್ತಿ ಎಂದು ಆರಾಧಿಸುತ್ತದೆ.

---

## ಬಡವರಿಗೆ ಅನ್ನ ಬಟ್ಟೆಯ ದಾನ

ಬರುವ ೧೫ನೆಯ ತಾರೀಖಿನ ದಿನ ಸಂಸ್ಥಾನದಲ್ಲೆಲ್ಲ ಬಡಬಗ್ಗರಿಗೆ ಅನ್ನ ಮತ್ತು ಬಟ್ಟೆಗಳನ್ನು ದಾನಮಾಡುವುದಕ್ಕಾಗಿ ಮೈಸೂರು ಅರಮನೆಯಿಂದ ೭೩ ಸಾವಿರ ರೂಪಾಯಿ ಮಂಜೂರಾಗಿದೆ.

## ಪರಿಷತ್ತಿನಲ್ಲಿ ಸಂತಾಪ ಸೂಚಕ ಸಭೆ

ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಕಳೆದ ೬ನೆಯ ಮಂಗಳವಾರ ಸಂಜೆ ೬ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಪರಿಷತ್ತಿನ ಮಹಾ ಪೋಷಕರಾದ ಮೈಸೂರಿನ ಶ್ರೀಮನ್ಮಹಾರಾಜರವರ ನಿಧನದ ಪ್ರಯುಕ್ತ ಸಂತಾಪ ಸೂಚಕ ಸಭೆ ಸೇರಿತ್ತು. ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್, ಎಂ.ಎ., ಎಫ್. ಇನ್.ಸ್ಟ್.ಪಿ. ಅವರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷರು ಮಹಾಸ್ವಾಮಿಯವರ ಗುಣಗಾನ ಮಾಡಿದ ಮೇಲೆ ಕೆಳಗೆ ಕಂಡ ನಿರ್ಣಯವನ್ನು ಸಭೆ ಎದ್ದು ನಿಂತು ಮೌನದಿಂದ ಅಂಗೀಕರಿಸಿತು:

ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೂ, ಕನ್ನಡ ಸಾಹಿತ್ಯ ಪರಿಷತ್ತಿನ ಮಹಾ ಪೋಷಕರೂ ಆಗಿದ್ದು, ಕನ್ನಡ ಮತ್ತು ಕನ್ನಡ ನಾಡಿನ ಏಳಿಗೆಗಾಗಿ ಮಮತೆ ವಾತ್ಸಲ್ಯಗಳಿಂದ ಅನುಗ್ರಹ ಮಾಡುತ್ತ ಕನ್ನಡದ ಉದ್ಧಾರಕ್ಕೆ ಆಶ್ರಯದಾತರಾಗಿದ್ದ ಮೈಸೂರು ಸಂಸ್ಥಾನದ ಶ್ರೀಮನ್ ಮಹಾರಾಜರವರಾದ ಸರ್ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು ಕಾಲಾಧೀನರಾದುದರಿಂದ ಕನ್ನಡ ಸಾಹಿತ್ಯ ಪರಿಷತ್ತಿಗೂ ಅಖಿಲ ಕರ್ನಾಟಕಕ್ಕೂ ಆಗಿರುವ ಅಪಾರವಾದ ನಷ್ಟವನ್ನೂ ಶೋಕವನ್ನೂ ಪರಿಷನ್ಮಂದಿರದಲ್ಲಿ ನೆರೆದಿರುವ ಸಾರ್ವಜನಿಕ ಸಭೆಯು ವ್ಯಕ್ತಪಡಿಸಲು ಅಪ್ಪಣೆ ಬೇಡುವುದಲ್ಲದೆ, ಶ್ರೀಮದ್ಯುವರಾಜರಾದ ಶ್ರೀ ಜಯಚಾಮರಾಜ ಒಡೆಯರವರಿಗೂ ರಾಜಕುಟುಂಬದವರಿಗೂ ಹೃತ್ಪೂರ್ವಕವಾದ ಸಂತಾಪವನ್ನು ಬಿನ್ನೈಸುತ್ತದೆ.

ಬಳಿಕ ಸಭೆ ಮುಗಿಯಿತು.

## ಪರಿಷತ್ತಿನ ದುಃಖ ಸಂದೇಶ

ಪರಿಷತ್ತಿನ ಉಪಾಧ್ಯಕ್ಷರು ಇಡಿಯ ಕನ್ನಡ ನಾಡಿನ ಪರವಾಗಿ ೫ನೆಯ ಸೋಮವಾರ ಬೆಳಗ್ಗೆ ಕೆಳಗೆ ಕಂಡಂತೆ ಸಂತಾಪಸೂಚಕ ತಂತಿಯನ್ನು ಶ್ರೀಮದ್ಯುವರಾಜರವರ ಕಾರ್ಯದರ್ಶಿಗಳಿಗೂ ಹುಜೂರು ಸೆಕ್ರೆಟರಿಯವರಿಗೂ ಕಳಿಸಿದರು. "ಇಡಿಯ ಕರ್ನಾಟಕವು ಶೋಕ ಸಾಗರದಲ್ಲಿ ಮುಳುಗಿದೆ. ಪರಿಷತ್ತಿನ ಗೌರವಪೂರಿತ ಸಂತಾಪವನ್ನು ಸಲ್ಲಿಸಬೇಕೆಂದು ಪ್ರಾರ್ಥನೆ."

ದಿವಂಗತ ಮಹಾಸ್ವಾಮಿಯವರ ಗೌರವಾರ್ಥವಾಗಿ ಪರಿಷತ್ತಿನ ಕಚೇರಿಯನ್ನು ೧೩ ದಿನಗಳವರೆಗೆ ಮುಚ್ಚಿದೆ.

---

## ರಾಜಧಾನಿಯ ಪುರಜನರ ಶೋಕ

ಮೈಸೂರಿನ ಪುರಜನರ ಸಭೆ ರಾ॥ ಸಾಡೆಯವರ ಅಧ್ಯಕ್ಷತೆಯಲ್ಲಿ ನಡೆದು ಮಹಾರಾಜರವರ ನಿಧನಕ್ಕಾಗಿ ತನ್ನ ಅಪಾರವಾದ ದುಃಖವನ್ನು ವ್ಯಕ್ತಪಡಿಸಿತು. ದಿವಾನ್ ಸಾಹೇಬರವರು ತಮ್ಮ ದುಃಖ ಸಂದೇಶವನ್ನು ಕಳಿಸಿದ್ದರು. ಆ ಸಂದೇಶ ಈ ರೀತಿ ಇದೆ:

ಲೇಕ್ ವ್ಯೂ ೭-೮-೪೦

ಶ್ರೀಮಾನ್ ರಾ॥ ಸಾಡೆ ಅವರ ಸಮಕ್ಷಮಕ್ಕೆ ವಿಜ್ಞಾಪನೆಗಳು. ನಮ್ಮೆಲ್ಲರಿಗೂ ವಿಶೇಷ ಪ್ರೀತಿ ಪಾತ್ರರಾಗಿದ್ದು ರಾಜರ್ಷಿಗಳೆಂದು ಪ್ರಖ್ಯಾತರಾಗಿದ್ದ ಶ್ರೀಮನ್ಮಹಾರಾಜರವರು ಕಾಲವಶರಾದುದರಿಂದ ನಮಗುಂಟಾಗಿರುವ ಅಪಾರ ನಷ್ಟವನ್ನು, ಮಹಾಸ್ವಾಮಿಯವರಲ್ಲಿ ನಮ್ಮ ಭಕ್ತಿ ವಿಶ್ವಾಸಗಳನ್ನು ವ್ಯಕ್ತಗೊಳಿಸುವುದಕ್ಕಾಗಿ ಈ ದಿನ ಸಂತಾಪಸೂಚಕ ಸಭೆ ನಡೆಯುವುದಷ್ಟೆ. ಮೈಸೂರು ನಗರ ನಿವಾಸಿಗಳಲ್ಲೊಬ್ಬನಾಗಿ ಈ ಸಭೆಯಲ್ಲಿ ತಮ್ಮೆಲ್ಲರೊಡನೆ ಭಾಗಿಯಾಗುವ ಸ್ಥಿತಿಯಲ್ಲಿ ನಾನಿರಬಾರದಾಗಿತ್ತೇ ಎಂದು ಬಯಸುತ್ತೇನೆ.

ಹಾಗೆ ಭಾಗಿಯಾಗಲು ನನಗೇಕೆ ಸಾಧ್ಯವಿಲ್ಲವೆಂಬುದನ್ನು ತಾವೂ ನಗರ ಬಾಂಧವರಲ್ಲಿ ಇತರರೂ ಗ್ರಹಿಸುವಿರೆಂದು ನಾನು ನಂಬಿರುವೆನು. ಮಹಾಪ್ರಭುಗಳನ್ನಗಲಿದ ಕಾರಣದಿಂದ ಶೋಕ ವಿಹ್ವಲನಾಗಿರುವ ನಾನು, ಸಭೆಯಲ್ಲಿ ನನ್ನ ಸಂತಾಪವನ್ನು ವಿವರಿಸಿ ಮಾತನಾಡುವ ಸ್ಥಿತಿಗೆ ಇನ್ನೂ ಬಂದಿಲ್ಲ. ನಾನು ಒಬ್ಬನೇ ಕುಳಿತು ಏಕಾಂತದಲ್ಲಿ ನನ್ನ ಶೋಕವನ್ನು ನುಂಗಿಕೊಳ್ಳಬೇಕಾಗಿದೆ.

ಆದಾಗ್ಯೂ ನನ್ನ ಹೃದಯವೂ, ನನ್ನ ಮನಸ್ಸೂ, ನನ್ನ ಅಂತರಾತ್ಮವೂ ಈ ಸಭೆಯಲ್ಲಿರುತ್ತದೆ. ತಾವು ವಿವೇಕಿಗಳೂ ಅನುಭವಸ್ಥರೂ ಆಗಿದ್ದೀರಿ. ಎಲ್ಲಕ್ಕೂ ಮಿಗಿಲಾಗಿ ನಿಜವಾದ ಧರ್ಮಾಭಿಮಾನಿಗಳಾಗಿದ್ದೀರಿ. ಆದಕಾರಣ ನಮ್ಮ ಭಾವನೆಗಳನ್ನೆಲ್ಲಾ ನನಗೆ ಸಾಧ್ಯವಾಗುವಂತೆ ನಾನು ಭರವಸೆಯಿಡಬಹುದಾದುದಕ್ಕಿಂತ ಬಹಳ ಉತ್ತಮವಾಗಿ ತಾವು ಸೂಚಿಸುವಿರೆಂಬುದು ನನಗೆ ಗೊತ್ತುಂಟು.

ಇಂತಿ ವಿಜ್ಞಾಪನೆಗಳು,
ತಮ್ಮ ವಿಶ್ವಾಸಿ,
ಮಿರ್ಜಾ ಎಂ. ಇಸ್ಮಾಯಿಲ್.

---

೧೦೭-೯೩೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.



ರಾಜಮಾತೆಯೊಂದಿಗೆ ರಾಮ್ಹಲಕ್ಷ್ಮಣರಂತಿದ್ದ ಪ್ರಭು ಸಹೋದರರು

ಪಡಿಯಚ್ಚು: 'ವಿಶ್ವಕರ್ಣಾಟಕ'ದ ಕೃಪೆಯಿಂದ



ಅಳಿದ ಮಹಾಸ್ವಾಮಿಯವರು—ಈಗಿನ ಮಹಾರಾಜರು

ಪಡಿಯಚ್ಚು: 'ದೇಶಬಂಧು'ವಿನ ಕೃಪೆಯಿಂದ



ಪಲ್ಲಕ್ಕಿಯಲ್ಲಿ
ಪ್ರಭುಗಳವರ ಕಳೇಬರ



ಸೈನಿಕ ಮರ್ಯಾದೆಗಳೊಂದಿಗೆ
ಕಳೇಬರದ ಮೆರವಣಿಗೆ



ಮೆರವಣಿಗೆಯ
ಇನ್ನೊಂದು ದೃಶ್ಯ

ಪಡಿಯಚ್ಚುಗಳು: 'ಪ್ರಜಾಮತ'ದ ಕೃಪೆಯಿಂದ

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ



ಸಂಪುಟ ೨
ಸಂಚಿಕೆ ೪೨

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಆಗಸ್ಟ್ ೧೬, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

## ಸಂಭಾಷಣೆ*

(ಜೊನಾಥನ್ ಸ್ವಿಫ್ಟ್: ೧೬೬೭-೧೭೪೫)

ಸಂಭಾಷಣೆ ಎಲ್ಲರಿಗೂ ತಿಳಿಯುವ ವಿಷಯ. ಆದರೂ ಇದನ್ನು ಕುರಿತು ಬರೆದವರು ವಿರಳ. ಬರೆದವರೂ ವಿಚಾರಮಾಡಿರುವುದು ಬಹಳ ಸ್ವಲ್ಪ. ಇದರ ವಿಷಯವಾಗಿ ಬರೆಯಬೇಕಾದಷ್ಟನ್ನು ಬರೆಯದೆ ಹೋಗಿರುವುದಕ್ಕೆ ಕಾರಣ, ವಿಷಯ ಕಠಿಣವಾಗಿರುವುದು. ಆದರೂ ಈ ವಿಷಯದಲ್ಲಿ ಹೇಳಬಹುದಾದಷ್ಟನ್ನು ಇನ್ನು ಯಾವ ಬೇರೆ ವಿಷಯವನ್ನು ಕುರಿತೂ ಹೇಳಲಾಗವುದಿಲ್ಲ.

ಬಹಿರಂಗವಾಗಿ ಅಥವಾ ಏಕಾಂತದಲ್ಲಿ ಸುಖವನ್ನನುಭವಿಸಲು ಜನರು ಅನೇಕ ಸಾಧನಗಳನ್ನು ಬಯಸುತ್ತಾರೆ. ಆದರೆ ಅವುಗಳನ್ನು ನಮ್ಮ ಬುದ್ಧಿಯೊ, ಅವಿವೇಕವೊ ಎಷ್ಟರಮಟ್ಟಿಗೆ ನಾಜೂಕು ಮಾಡಿದೆಯೆಂದರೆ ಅವು ಈಗ ಉಳಿದಿರುವುದು ಭಾವನೆಯಲ್ಲಿ ಮಾತ್ರ. ನಿಜವಾದ ಸ್ನೇಹಿತ, ಒಳ್ಳೆಯ ಮದುವೆ, ಅತ್ಯಂತ ಸಮರ್ಪಕವಾದ ಸರಕಾರದ ಸ್ವರೂಪ ಮುಂತಾದ ಕೆಲವು ಸರಿಯಾಗಿರಬೇಕಾದರೆ ಅವುಗಳಲ್ಲಿ ಅನೇಕ ಒಳ್ಳೆಯ ಅಂಶಗಳು ಸಮರಸವಾಗಿ ಸೇರಬೇಕು. ಅಂಶಗಳ ಸಂಯೋಜನೆಯಲ್ಲಿ ಬಹಳ ವಿವೇಕವನ್ನು ತೋರಿಸಬೇಕು. ಆದುದರಿಂದಲೆ ಸಾವಿರಾರು ವರ್ಷಗಳಿಂದಲೂ ಜನ ಪ್ರಯತ್ನಿಸುತ್ತಿದ್ದರೂ ಅವು ಪರಿಪೂರ್ಣತೆ ಹೊಂದಿಲ್ಲ. ಜನರೂ ಆ ವಿಚಾರದಲ್ಲಿ ನಿರಾಶರಾಗಿದ್ದಾರೆ. ಆದರೆ ಸಂಭಾಷಣೆಯಲ್ಲಿ ಹಾಗಲ್ಲ. ಹಾಗೆ ಆಗಬೇಕಾಗಿಯೂ ಇಲ್ಲ. ಈಗ ಅದೂ ಒಂದು ಭಾವನೆಯಾಗಿಯೇ ನಿಂತಿದೆ. ಮನುಷ್ಯರು ಸ್ವಲ್ಪ ಶ್ರಮವಹಿಸಿದರೆ ಬಿಟ್ಟುಬಿಡಬಹುದಾದ ಅನೇಕ ತಪ್ಪುಗಳು ಅದರಲ್ಲಿವೆ. ಇದು ಪ್ರತಿಯೊಬ್ಬ ಮನುಷ್ಯನ ಶಕ್ತಿಯಲ್ಲಿಯೂ ಇರತಕ್ಕದ್ದು. ಆದುದರಿಂದಲೇ ನನಗೆ ತೋರುವುದು–ಸಂಭಾಷಣೆಯ ಸ್ವರೂಪವನ್ನರಿಯಲು ನಿಜವಾದ ದಾರಿ ಒಂದೇ: ಅದರಲ್ಲಿನ ಲೋಪ ದೋಷಗಳನ್ನು ತಿಳಿಯುವುದು; ಇದಾದಮೇಲೆ ಪ್ರತಿಯೊಬ್ಬನೂ ತನ್ನೊಳಗಿನ ದೋಷಗಳನ್ನು ಬಿಡುವುದಕ್ಕಾಗಿ ಕೆಲವು ಸೂತ್ರಗಳನ್ನು ಮಾಡಿಕೊಳ್ಳುವುದು. ಮಹತ್ತಾದ ಬುದ್ಧಿಶಕ್ತಿಯಾಗಲಿ ಪ್ರತಿಭೆಯಾಗಲಿ ವ್ಯಾಸಂಗವಾಗಲಿ ಇದಕ್ಕೆ ಬೇಕಿಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ಸಹಜವಾಗಿ ಬಂದಿರುವ ಅಥವಾ ಹೆಚ್ಚು ಶ್ರಮವಿಲ್ಲದೆ ಅವನು ಸಂಪಾದಿಸಬಲ್ಲ ಬುದ್ಧಿಶಕ್ತಿ ಸಾಕು. ಪ್ರತಿಯೊಬ್ಬನೂ ತೇಜಸ್ವಿಯಾಗಿ ಸಂಭಾಷಣೆ ಮಾಡಲಾರನಾದರೂ ಹಿತವಾಗಿ ಮಾತನಾಡುವ ಶಕ್ತಿಯನ್ನು ಪ್ರಕೃತಿ ಅವನಿಗೆ ಕೊಟ್ಟಿದೆ. ತಮ್ಮಲ್ಲಿರುವ ಕೆಲವೇ ದೋಷಗಳನ್ನು ಅರ್ಧ ಗಂಟೆಯಲ್ಲಿ ಯಾರೇ ಆಗಲಿ ತಿದ್ದಿಕೊಂಡರೆ ಜನರ ಮೆಚ್ಚುಗೆ ಪಡೆಯುವಂತೆಯೊ ಅವರಿಗೆ ಹಿತವಾಗುವಂತೆಯೊ ಮಾತನಾಡಬಲ್ಲವರು ನೂರಾರು ಮಂದಿ ಇದ್ದಾರೆ. ಕಡೆಗೆ ಅವರ ಮಾತು ಸಹ್ಯವಾಗಿಯಾದರೂ ಆಗುವುದು.

ಇಷ್ಟು ಪ್ರಯೋಜನವುಳ್ಳ ಮತ್ತು ನಿಷ್ಕಲಂಕವಾದ, ಪ್ರತಿಯೊಂದು ವಯಸ್ಸಿಗೂ ಬದುಕಿನ ಪ್ರತಿಯೊಂದು ಸ್ಥಿತಿಗೂ ಒಪ್ಪುವ, ಎಲ್ಲ ಜನರ ಶಕ್ತಿಯಲ್ಲಿಯೂ ಇರುವ ಸಂತೋಷ ಈ ರೀತಿಯಲ್ಲಿ ಅಲಕ್ಷ್ಯಕ್ಕೂ ದುರುಪಯೋಗಕ್ಕೂ ಒಳಗಾಗಿರುವುದನ್ನು ನೋಡಿ ನನಗೆ ಆಗ್ರಹವಾಯಿತು. ಆದುದರಿಂದಲೆ ಈ ವಿಷಯವನ್ನು ಕುರಿತು ನನ್ನಲ್ಲಿದ್ದ ಆಲೋಚನೆಗಳನ್ನು ಬರೆಯಲು ನಾನು ತೊಡಗಿದ್ದು.

ಇಲ್ಲಿ ಹೇಳಿರುವ ದೋಷಗಳಲ್ಲಿ ಕೆಲವು ಎಲ್ಲರ ಗಮನಕ್ಕೂ ಬಂದಿರತಕ್ಕವು. ಇನ್ನು ಕೆಲವು ಅಪೂರ್ವವಾಗಿ ಗಮನಕ್ಕೆ ಬರುವವು. ಅನೇಕ ಜನರು ಒಂದಲ್ಲ ಒಂದು ದೋಷವನ್ನು ಗಮನಿಸಿರುವರು, ಒಪ್ಪಿಕೊಳ್ಳುವರು. ಒಂದು ಸಮಯದಲ್ಲದಿದ್ದರೆ ಇನ್ನೊಂದರಲ್ಲಿ ಈ ದೋಷಗಳಿಗೆ ಒಳಗಾಗದವರು ಬಹಳ ಅಪರೂಪ.

ಉದಾಹರಣೆಗೆ; ಹೆಚ್ಚು ಮಾತನಾಡುವುದು ತಪ್ಪು ಎಂದು ಸಾಮಾನ್ಯವಾಗಿ ಹೇಳದವರೇ ಇಲ್ಲ. ಆದರೂ ಐದು ಜನ ಸೇರಿದ ಕಡೆ ಒಬ್ಬನೇ ಮಾತನಾಡೋಣ, ಇತರರು ನಿರ್ಬಂಧಕ್ಕೊಳಪಡೋಣ, ಅಸಹ್ಯಪಡೋಣ ಹೀಗಾಗದೆ ಇರುವುದು ಅಪರೂಪವೇ ಎಂದು ನನಗೆ ನೆನಪು. ಹೆಚ್ಚು ಮಾತನಾಡುವವರಲ್ಲಿ ಒಂದು ಬಗೆಯವನು ಎಣೆಯಿಲ್ಲದವನು: ಶಾಂತವಾಗಿ, ಉದ್ದೇಶಪೂರ್ವಕವಾಗಿ ಅವನು ಮಾತನಾಡುವನು; ಬಹಳ ಆಲೋಚನೆ ಮಾಡಿ; ಹುಷಾರಾಗಿ ಮುಂದುವರಿಯುವನು. ಮೊದಲು ಮುನ್ನುಡಿ; ಆಮೇಲೆ ಕೆಲವು ಅಪ್ರಸ್ತುತ ಸಂಗತಿಗಳನ್ನು ಹೇಳುವುದು; ಯಾವುದೋ ಒಂದು ಸೂಚನೆಯಿಂದ ಇನ್ನೊಂದು ಕಥೆಯನ್ನು ಜ್ಞಾಪಿಸಿಕೊಳ್ಳುವುದು; ಹೇಳುತ್ತಿರುವ ಕಥೆ ಮುಗಿದಕೂಡಲೆ ಅದನ್ನು ತೆಗೆದುಕೊಳ್ಳುವೆನೆಂದು ನಿಮಗೆ ಹೇಳುವುದು. ಆಮೇಲೆ ಸಂಭಾಷಣೆಯ ವಿಷಯಕ್ಕೆ ಕ್ರಮವಾಗಿ ಹಿಂದಿರುಗುವನು; ಯಾವುದೋ ಹೆಸರು ನೆನಪಿಗೆ ಬರಲಿಲ್ಲವೆಂದು ತಲೆಯನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಳ್ಳುವನು. ತನ್ನ ಜ್ಞಾಪಕಶಕ್ತಿಯನ್ನು ದೂರುವನು. ಇಷ್ಟು ಹೊತ್ತೂ ಜೊತೆಯವರು ನಿರೀಕ್ಷೆಯಲ್ಲಿರುವರು. ಕಡೆಗೆ, ಹೆಸರು ನೆನಪಿಗೆ ಬರದಿದ್ದರೂ ಚಿಂತೆಯಿಲ್ಲವೆಂದು ಹೇಳಿ ಮುಂದುವರಿಯುವನು. ಸಾಲದ್ದಕ್ಕೆ ಆ ಕಥೆ ಜೊತೆಯವರು ಐವತ್ತು ಸಲ ಕೇಳಿದ್ದ ಕಥೆಯೇ. ಹಾಗಿಲ್ಲದಿದ್ದರೆ, ಉತ್ತಮಪಕ್ಷದಲ್ಲಿ ಅದು ಹೇಳುವವನ ತಿರುಳಿಲ್ಲದ ಸಾಹಸ ಕೃತ್ಯಗಳಲ್ಲಿ ಒಂದಾಗಿ ಇರುವುದು.

* Hints towards an essay on Conversation ಎಂಬ ಪ್ರಬಂಧದ ಅನುವಾದ.

ಸಂಭಾಷಣೆಯಲ್ಲಿ ಬಹು ಸಾಮಾನ್ಯವಾಗಿರುವ ಇನ್ನೊಂದು ತಪ್ಪು ಜನರು ತಮ್ಮ ವಿಷಯವನ್ನೇ ಕುರಿತು ಮಾತನಾಡುವುದು. ಕೆಲವರು ಯಾವ ಕ್ಷಮೆಯನ್ನೂ ಬೇಡದೆ, ತಮ್ಮ ಜೀವನ ಚರಿತೆಗಳನ್ನು ಸಾಂಗವಾಗಿ ಹೇಳುವರು. ತಮ್ಮ ರೋಗರುಜಿನಗಳ ಚರಿತ್ರೆಗಳನ್ನೂ ಹೇಳುವರು. ಆ ರೋಗಗಳ ಚಿಹ್ನೆಗಳು, ಅವು ಬಂದ ಸಂದರ್ಭಗಳು ಅರಮನೆಯಲ್ಲಿ, ರಾಜಕೀಯ ಸಭೆಗಳಲ್ಲಿ, ಒಲವಿನಲ್ಲಿ, ನ್ಯಾಯಾಸ್ಥಾನದಲ್ಲಿ ತನಗೆ ಉಂಟಾದ ಅನ್ಯಾಯಗಳು, ತಾವು ಅನುಭವಿಸಿದ ಕಷ್ಟಪರಂಪರೆಗಳು ಇವನ್ನು ಒಂದೊಂದಾಗಿ ಹೇಳುವರು. ಇನ್ನು ಕೆಲವರು ಹೆಚ್ಚು ಚತುರತೆಯನ್ನು ತೋರಿಸುವರು: ಆತ್ಮಪ್ರಶಂಸೆಯನ್ನು ಆರಂಭ ಮಾಡಲು ಸರಿಯಾದ ಸಮಯಕ್ಕಾಗಿ ಬಹಳ ಜಾಣ್ಮೆಯಿಂದ ಕಾಯುವರು. ಇಂಥ ಒಂದು ಸಂದರ್ಭದಲ್ಲಿ ಮುಂದಾಗುವುದನ್ನು ತಾವು ಮೊದಲೇ ಹೇಳಿದ್ದುದನ್ನೂ ಯಾರೂ ಅವರನ್ನು ಆಗ ನಂಬದೆ ಹೋದುದನ್ನೂ ಜ್ಞಾಪಿಸಿಕೊಳ್ಳಲು ಸಾಕ್ಷಿಗಳನ್ನು ಕರೆಯುವರು. ಇಂಥ ಇನ್ನೊಬ್ಬ ಮನುಷ್ಯನಿಗೆ ತಾವು ಮೊದಲಿಂದಲೂ ಬುದ್ಧಿ ಹೇಳಿದ್ದು, ನಡೆದಂತೆಯೇ ಪರಿಣಾಮಗಳನ್ನು ತಾವು ಚಿತ್ರಿಸಿದ್ದು, ಆದರೂ ಅವನು ತನ್ನ ದಾರಿಯಲ್ಲೇ ಹೋದದ್ದು, ಇತ್ಯಾದಿ. ಮತ್ತೆ ಕೆಲವರ ಜಂಬ ತಮ್ಮ ತಪ್ಪುಗಳನ್ನು ಹೇಳಿಕೊಳ್ಳುವುದರಲ್ಲಿ: ಇವರಷ್ಟು ವಿಚಿತ್ರ ಜನ ಪ್ರಪಂಚದಲ್ಲಿ ಬೇರೆ ಇಲ್ಲ. ಅವರಿಗೆ ಕಪಟ ಸಾಧ್ಯವಿಲ್ಲ. ಅದು ಅವಿವೇಕವೆಂದೂ ಒಪ್ಪಿಕೊಳ್ಳುವರು. ಅದರಿಂದ ಅವರು ಪುಷ್ಕಳ ಪ್ರಯೋಜನಗಳನ್ನು ಕಳೆದುಕೊಂಡಿರುವರು. ಆದರೂ ಪ್ರಪಂಚದಲ್ಲಿರುವ ಸರ್ವಸ್ವವನ್ನು ನೀವು ಅವರಿಗೆ ಕೊಡುತ್ತೇವೆಂದರೂ ಹೇಳಿಕೊಳ್ಳದೆ ಅವರಿಗೆ ನಿರ್ವಾಹವಿಲ್ಲ. ಮೋಸಗಾರಿಕೆಯನ್ನೂ ನಿರ್ಬಂಧವನ್ನೂ ಹೇಯವಾಗಿ ಕಾಣುವ ಯಾವುದೋ ಒಂದು ಅವರ ಸ್ವಭಾವದಲ್ಲಿದೆ ಇತ್ಯಾದಿ ಅವರು ಹೇಳುವ ಅನೇಕ ವಿಚಾರಗಳನ್ನು ಸಹಿಸತೀರದು.

ತಾನು ಎಷ್ಟರಮಟ್ಟಿಕ್ಕೆ ಮುಖ್ಯನಾದವನೆಂದು ಪ್ರತಿಯೊಬ್ಬ ಮನುಷ್ಯನೂ ತಿಳಿದುಕೊಳ್ಳುವನೊ ಇತರರಿಗೂ ತಾನು ಅಷ್ಟೇ ಮುಖ್ಯನೆಂದು ಭಾವಿಸಲು ಸಿದ್ಧನಾಗುವನು. ಇತರರ ವಿಚಾರಗಳು ಅವನಿಗೆ ಹೇಗೆ ಮುಖ್ಯವಲ್ಲವೋ ಹಾಗೆಯೇ ಅವನ ವಿಚಾರ ಇತರರಿಗೆ. ಇತರರ ವಿಚಾರ ತನಗೆ ಮುಖ್ಯವಲ್ಲವೆನ್ನುವುದು ತನಗೇ ಚೆನ್ನಾಗಿ ಗೊತ್ತು. ಇಷ್ಟು ಸುಲಭವಾದ, ಸ್ಪಷ್ಟವಾದ ಸಂಗತಿಯನ್ನು ಜನ ಒಂದು ಸಲ ಆಲೋಚನೆ ಮಾಡಿದರೆ ಸಾಕು.

ನಾಲ್ಕು ಜನ ಒಟ್ಟು ಕೂಡಿರುವಾಗ ನಾನು ನೋಡಿದ್ದೇನೆ— ಒಂದೇ ವಿಶ್ವವಿದ್ಯಾನಿಲಯದಲ್ಲಿಯೊ, ಶಾಲೆಯಲ್ಲಿಯೊ ಓದುತ್ತಿದ್ದವರೆಂದು ಇಬ್ಬರು ಆಕಸ್ಮಾತ್ ಕಂಡುಕೊಳ್ಳುವರು. ಇದಾದ ಮೇಲೆ ಉಳಿದವರಿಗೆ ಶಿಕ್ಷೆ, ಮೌನವಾಗಿ ಇರಬೇಕಾಗುವುದು; ಆ ಇಬ್ಬರು ವಿದ್ಯಾರ್ಥಿದೆಶೆಯಲ್ಲಿ ತಾವೂ ತಮ್ಮ ಸಂಗಡಿಗರೂ ಮಾಡಿದ ತಂತ್ರಗಳು ಕೆಲಸಗಳು ಮುಂತಾದುವನ್ನು ನೆನಸಿಕೊಳ್ಳುತ್ತಿದ್ದರೆ ಅದನ್ನು ಕೇಳುತ್ತ ಇರುವುದು.

ಸೈನ್ಯದಲ್ಲಿರುವ ಒಬ್ಬ ಅಧಿಕಾರಿ ನನಗೆ ಗೊತ್ತು. ಗರ್ವದಿಂದಲೂ ಅಸಹನೆಯಿಂದಲೂ ಕೂಡಿದ ಮೌನವನ್ನು ಅವನು ಸ್ವಲ್ಪಹೊತ್ತು ಧರಿಸುವನು. ಮಾತನಾಡುವವರ ಬಗ್ಗೆ ಕೋಪ, ತಿರಸ್ಕಾರ ಅವನಿಗೆ. ಕಡೆಗೆ ಇಷ್ಟಕ್ಕಿಷ್ಟ ಹಾಗೆಯೆ ಎಲ್ಲರೂ ಅವನ ಮಾತನ್ನು ಕೇಳುವಂತೆ ಒತ್ತಾಯಪಡಿಸಿ, ಉದ್ಧತರೀತಿಯಲ್ಲಿ ಎದುರು ಮಾತಿಗೆ ಅವಕಾಶ ಕೊಡದಂತೆ ಒಂದು ಮಹಾ ಸೂತ್ರವನ್ನು ಹೇಳಿಬಿಟ್ಟು ಆಮೇಲೆ ಹಿಂದಿನಂತೆ ಸಮಾಧಿಹೊಗುವನು. ಅವನ ಭಾವಗಳು ಪುನಃ ಅದೇ ಚುರುಕಿಗೆ ಬರುವವರೆಗೂ ಅವನು ಮಾತಿನ ಅನುಗ್ರಹ ಮಾಡುವುದಿಲ್ಲ.

ಸಂಭಾಷಣೆಯ ದೋಷಗಳು ಇನ್ನೂ ಹಲವಿವೆ. ಬುದ್ಧಿವಂತರೆನಿಸಿಕೊಳ್ಳುವವರಲ್ಲಿರುವಷ್ಟು ಇನ್ನು ಯಾರಲ್ಲಿಯೂ ಅವು ಇರುವುದಿಲ್ಲ. ಅವರು ಬುದ್ಧಿವಂತರಿಷ್ಟರು ಛಿಟ್ಟಿಗಿನ್ನಾಗ ಇರುವಷ್ಟು ಇನ್ನು ಯಾವಾಗಲೂ ಇಲ್ಲ. ಚಮತ್ಕಾರದ ಮಾತನ್ನು ಹೇಳದೆ ಬಾಯಿಬಿಟ್ಟರೆಂದರೆ ಅಷ್ಟು ಮಾತು ವ್ಯರ್ಥ ಎಂದೆಣಿಸುವರು. ಚಮತ್ಕಾರದ ಮಾತುಗಳಿಗಾಗಿ ಅವರು ಒದ್ದಾಡುವುದು ಅವರಿಗೂ ಅವರ ಮಾತನ್ನು ಕೇಳುವವರಿಗೂ ಹಿಂಸೆಯಾಗುವುದು. ಸಾಲದ್ದಕ್ಕೆ ನಿರ್ಬಂಧ. ಇಷ್ಟಾದರೂ ಜಯವಿಲ್ಲ. ಬುದ್ಧಿವಂತರೆಂಬ ಮರ್ಯಾದೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಅಸಾಧಾರಣವಾದ ಏನಾದರೂ ಒಂದನ್ನು ತಾವು ಮಾಡಬೇಕು; ತಮ್ಮ ಮೇಲ್ಮೆಗೆ ತಕ್ಕಂತೆ ಮಾತನಾಡಬೇಕು; ಇಲ್ಲದಿದ್ದರೆ ಸುತ್ತಲಿರುವವರಿಗೆ ಆಶಾಭಂಗವಾಗಬಹುದು, ಅವರು ಈ ಬುದ್ಧಿವಂತರನ್ನೂ ಸಾಮಾನ್ಯಜನರಂತೆಯೇ ಪರಿಗಣಿಸಬಹುದು. ಒಂದು ಸಲ, ಒಂದು ಕೂಟವನ್ನು ವಿನೋದಪಡಿಸುವುದಕ್ಕಾಗಿ ಬಹು ಶ್ರಮಪಟ್ಟು ಇಬ್ಬರು ಬುದ್ಧಿವಂತರನ್ನು ಕರೆತಂದುದು ನನಗೆ ಗೊತ್ತು. ಅಲ್ಲಿ ಅವರ ವರ್ತನೆ ಹಾಸ್ಯಾಸ್ಪದವಾಯಿತು. ವಿನೋದವೆಲ್ಲವೂ ಅವರನ್ನು ನೋಡಿ ನಗುವುದೇ ಆಯಿತು.

ಇನ್ನೊಂದು ಬಗೆಯ ಬುದ್ಧಿವಂತನನ್ನು ನಾನು ಬಲ್ಲೆ. ಎಲ್ಲಿ ಅಧ್ಯಕ್ಷನಾಗಿ ಕುಳಿತು, ಆಜ್ಞೆಯನ್ನು ವಿಧಿಸಲು ಅನುಕೂಲವಿರುವುದಿಲ್ಲವೋ ಅಲ್ಲಿ ಅವನಿಗೆ ನೆಮ್ಮದಿಯಿಲ್ಲ. ಅವನು ಇತರರಿಂದ ತಿಳಿವನ್ನಾಗಲಿ ವಿನೋದವನ್ನಾಗಲಿ ನಿರೀಕ್ಷಿಸನು. ತನ್ನ ಸಾಮರ್ಥ್ಯಗಳನ್ನು ಪ್ರದರ್ಶಿಸುವುದೇ ಅವನ ಕೆಲಸ. ಅವನ ಕರ್ತವ್ಯ ಒಳ್ಳೆಯ ಸಂಗವನ್ನು ಕೊಡುವುದೇ ಹೊರತು ಒಳ್ಳೆಯ ಸಂಭಾಷಣೆ ಮಾಡುವುದಲ್ಲ. ಆದುದರಿಂದ ಅವನು ಆಗಿಂದಾಗ ಹೋಗುವುದು ಯಾರು ಅವನ ಮಾತನ್ನು ಕೇಳಿ ತೃಪ್ತಿಪಡುವರೋ ಅವನನ್ನು ಶ್ಲಾಘಿಸುವರೋ ಅವರ ಮಧ್ಯೆ ಮಾತ್ರ. ನನ್ನ ನೆನಪಿನಲ್ಲಿರುವಂತೆ ನಾನು ಬಹು ಕೀಳಾದ ಸಂಭಾಷಣೆಯನ್ನು ಕೇಳಿರುವುದು ವಿಲ್ಸ್ ಕಾಫೀ ಮನೆಯಲ್ಲಿ. ಹಿಂದೆ ಬುದ್ಧಿವಂತರು ಸೇರುತ್ತಿದ್ದುದು ಅಲ್ಲಿಯೆ. ಎಂದರೆ, ನಾಟಕ ಬರೆದವರೊ ಅಥವಾ ಅದಕ್ಕೆ ಪ್ರಸ್ತಾವನೆ ಬರೆದವರೊ, ಕವನಗಳ ಅಥವಾ ಪ್ರಬಂಧಗಳ ಸಂಗ್ರಹಕಾರರೊ ಐದಾರು ಜನ ಅಲ್ಲಿ ಸೇರಿ, ಅಲ್ಪವಾದ ಅವರವರ ಬರಹಗಳನ್ನು ಓದಿ ಪರಸ್ಪರ ವಿನೋದಪಡುತ್ತಿದ್ದರು. ಅವರ ಮಾತಿನ ಗತ್ತನ್ನು ನೋಡಿದರೆ ಅವರ ಕೃತಿಗಳು ಮಾನುಷ ಪ್ರಯತ್ನದ ಉತ್ತಮೋತ್ತಮ ಫಲಗಳೋ ರಾಜ್ಯಗಳ ಉಳಿವು ಅಳಿವುಗಳು ಅವರ ಮಾತಿನ ಅಧೀನವೋ ಎಂಬಂತೆ ಕಾಣುವುದು. ಅವರ ಸುತ್ತ ನಿಂತು ಬಹಳ ನಮ್ರತೆಯಿಂದ ಕೇಳುತ್ತಿದ್ದವರು ವಿಶ್ವವಿದ್ಯಾನಿಲಯದಿಂದ ಅಥವಾ ನ್ಯಾಯ ಶಾಸ್ತ್ರವನ್ನು ಓದುವ ಕಡೆಯಿಂದ ಬಂದ ಯುವಕ ವಿದ್ಯಾರ್ಥಿಗಳು. ಮರ್ಯಾದೆಯಿಂದ ದೂರದಲ್ಲಿ ನಿಂತು, ಇವರ ಮಹಾ ವಾಕ್ಯಗಳನ್ನು ಕೇಳಿ ಬೆರಗಾಗಿ, ಮನೆಗೆ ಹಿಂದಿರುಗುವಾಗ ಈ ಜನ ತಾವು ಓದುತ್ತಿದ್ದ ನ್ಯಾಯ ಮತ್ತು ತತ್ವಶಾಸ್ತ್ರಗಳಲ್ಲಿ ತಿರಸ್ಕಾರವನ್ನು ಕೊಂಡುಹೋಗತ್ತಿದ್ದರು. ಅವರ ತಲೆಯತುಂಬ, ಇರುತ್ತಿದ್ದುದು ಸಭ್ಯತೆ, ವಿಮರ್ಶೆ, ಶುದ್ಧ ಸಾಹಿತ್ಯ ಎಂಬ ಹೆಸರಿನ ಉಪಯೋಗಕ್ಕೆ ಬಾರದ ಜಳ್ಳು.

ಈ ರೀತಿಯಲ್ಲಿ ಬಹಳ ವರ್ಷಗಳಿಂದಲೂ ಕವಿಗಳು ಒಣ ಪಂಡಿತರಾಗಿದ್ದರು. ಒಣಪಾಂಡಿತ್ಯ (Pedantry) ಎನ್ನುವ ಪದವನ್ನು ಸರಿಯಾಗಿ ಪ್ರಯೋಗ ಮಾಡುತ್ತಿಲ್ಲ. ಒಣಪಾಂಡಿತ್ಯವೆಂದರೆ, ಸಾಮಾನ್ಯಸಂಭಾಷಣೆಯಲ್ಲಿ ನಮ್ಮ ವಿದ್ಯೆಯನ್ನು ವಿಪರೀತವಾಗಿ, ಬೇಡದಿದ್ದರೂ ಪ್ರದರ್ಶಿಸುವುದು; ಅದಕ್ಕೆ ಬಹುವಾದ ಬೆಲೆಯನ್ನು ಕಟ್ಟುವುದು. ಈ ನಿಷ್ಕೃಷ್ಟಾರ್ಥದ ಪ್ರಕಾರವಾಗಿ ದರ್ಬಾರಿಗಳೂ ಸೈನಿಕರೂ ದಾರ್ಶನಿಕರು ಮತ್ತು ಪಾದ್ರಿಗಳಷ್ಟೇ ಒಣಪಾಂಡಿತ್ಯವನ್ನು ತೋರಿಸುವ ತಪ್ಪನ್ನು ಮಾಡಬಹುದು. ಹೆಂಗಸರು, ಅವರ ರವಕೆ, ಬೀಸಣಿಗೆ ಆ ಪಾತ್ರೆ ಪದಾರ್ಥಗಳ ವಿಚಾರವಾಗಿ ಬಹು ಮಾತನಾಡುವಾಗಲೂ ತೋರಿಸುವುದು ಇದೇ ದೋಷವನ್ನು. ಈ ಕಾರಣದಿಂದಲೇ ಯಾವ ವಿಷಯಗಳಲ್ಲಿ ಯಾರು ಯಾರು ಪಂಡಿತರೊ, ಅವರನ್ನು ಆ ವಿಷಯವನ್ನು ಕುರಿತೇ ಮಾತನಾಡಬೇಕೆಂದು ಕೇಳುವುದು ಉಚಿತವಾದರೂ, ವಿವೇಕವಾದರೂ, ಈ ಸ್ವಾತಂತ್ರ್ಯವನ್ನು ವಿವೇಕಯಾದವನು ಸಾಮಾನ್ಯವಾಗಿ ಉಪಯೋಗಿಸಿಕೊಳ್ಳಬಾರದು. ಏಕೆಂದರೆ, ಅವನಿಗೆ ಒಣಪಂಡಿತನೆಂದು ದೋಷಾರೋಪಣೆಯಾಗುವುದು. ಅಲ್ಲದೆ ಅವನ ತಿಳಿವು ಅದರಿಂದ ಉತ್ತಮಗೊಳ್ಳುವುದಿಲ್ಲ.

ಸಾಮಾನ್ಯವಾಗಿ ದೊಡ್ಡ ಪಟ್ಟಣದಲ್ಲಿ ವಿನೋದಕ್ಕಾಗಿ ಯಾವನಾದರೂ ಆಟಗಾರನೊ, ಅನುಕರಣಕಾರನೊ, ಹಾಸ್ಯಗಾರನೊ ಇರು

ವನು. ಸಮಾರಾಧನೆಗಳಲ್ಲಿ ಅವನಿಗೆ ಸುಸ್ವಾಗತವೂ ದೊರೆಯುವುದು. ಅವನು ದೊಡ್ಡ ಮನುಷ್ಯರಲ್ಲಿ ಸಲಿಗೆಯಿಂದ ನಡೆದುಕೊಳ್ಳುವನು, ಅವರ ಮನೆಗೆ ಸೇರಿದವನಂತೆ ಇರುವನು. ಅವರ ಮನೆಗಳಲ್ಲಿ ಔತಣ ವಾಗುವ ಕಾಲದಲ್ಲಿ, ಅತಿಥಿಗಳ ವಿನೋದಕ್ಕಾಗಿ ಅವನನ್ನು ಕರೆಯ ಕಳುಹುವರು. ಇದು ತಪ್ಪೆಂದು ನಾನು ಹೇಳುವುದಿಲ್ಲ. ಒಂದು ಪ್ರಹಸನಕ್ಕೊ ಸೂತ್ರದ ಬೊಂಬೆಯ ಆಟಕ್ಕೊ ಹೋಗುವ ಮನಸ್ಸಿನಲ್ಲಿ ನೀವು ಅಲ್ಲಿಗೆ ಹೋಗುವಿರಿ. ಹಾಸ್ಯಗಾರನು ಅವನ ಅಭಿನಯವನ್ನು ತೋರಿಸುವಾಗ, ಮರ್ಯಾದೆಯಿಂದ ಅಥವಾ ಸಹಜವಾಗಿಯೆ, ಸಕಾಲದಲ್ಲಿ ನಗುವುದು ನಿಮ್ಮ ಕರ್ತವ್ಯ. ಅವನ ಕೆಲಸ ಅದು; ಆ ದಿನದ ಕೆಲಸಕ್ಕಾಗಿ ಅವನಿಗೆ ಹಣ ಕೊಟ್ಟಿರುವರೆಂದೂ ನಾವು ಭಾವಿಸಬೇಕು. ಚೆನ್ನಾಗಿ ಪರಿಚಿತರಾದವರು ನಾಲ್ಕಾರು ಜನ ಏಕಾಂತದಲ್ಲಿ ಸೇರಿರುವಾಗ, ವಿದ್ಯಾವಂತರು ವಿವೇಕಿಗಳು ಆಹ್ವಾನಿತ ರಾಗಿರುವಾಗ ಈ ಅನುಕರಣಕಾರನನ್ನು ಕರೆಯಿಸಿ, ಅವನ ಹಾಸ್ಯ ಗಳನ್ನು ಮಾಡಿಸುವಾಗ ಮತ್ತು ಅದರ ಪರಿಣಾಮವಾಗಿ ಕೂಟ ಯಾವ ಸಂಭಾಷಣೆಗೂ ಯೋಗ್ಯವಾಗದೆ ಹೋಗುವಾಗ ಮಾತ್ರ ನನಗೆ ಜಗಳ ವಾಡಬೇಕೆನ್ನಿಸುತ್ತದೆ! ಸಾಲದ್ದಕ್ಕೆ, ಹೀಗೆ ಮಾಡುವುದರಿಂದ ಮನುಷ್ಯನ ಬುದ್ಧಿಗೇ ಅಪಮಾನ. ನಾಲ್ಕು ಜನ ವಿದ್ಯಾವಂತರು ಸಂಭಾಷಣೆಯ ಮೂಲಕ ಪರಸ್ಪರ ವಿನೋದವನ್ನು ಹೊಂದಲಾರರೆಂದು ಊಹಿಸುವುದು ಹಾಸ್ಯಾಸ್ಪದವಾಗಿದೆ.

ಪರಿಹಾಸ್ಯ ಸಂಭಾಷಣೆಯ ಉತ್ತಮ ಅಂಶ. ಆದರೆ ನಮಗೆ ಬಹಳ ಕಷ್ಟವಾಗಿರುವುದನ್ನು ಅನುಕರಿಸುವುದೂ ಬೆರಕೆ ಮಾಡುವುದೂ ನಮ್ಮ ಸಾಮಾನ್ಯ ಪದ್ಧತಿಯಾದುದರಿಂದ, ಇದನ್ನೂ ನಾವು ಹಾಗೆಯೆ ಮಾಡಿದ್ದೇವೆ. ಚುರುಕಾಗಿರುವುದು, ತೀಕ್ಷ್ಣವಾದ ಸಮಯೋಚಿತ ಉತ್ತರವನ್ನು ಕೊಡುವುದು ಎಂದು ಸಾಮಾನ್ಯವಾಗಿ ಯಾವುದನ್ನು ಎನ್ನುವೆವೋ ಅದೇ ಈಗ ಪರಿಹಾಸ್ಯವೆನಿಸಿಕೊಂಡಿದೆ. ಬಹಳ ಬೆಲೆ ಯುಳ್ಳ ಸಂಪ್ರದಾಯ ರೂಢಿಗೆ ಬಂದಾಗ, ಅದನ್ನು ಆಚರಿಸಲು ಸಮರ್ಥರಲ್ಲದವರು ಬಡರೀತಿಯ ಅನುಕರಣದಲ್ಲಿ ತೃಪ್ತಿಪಡುವರು. ಸಂಭಾಷಣೆಯಲ್ಲಿ ಒಬ್ಬನನ್ನು ಸೋಲಿಸುವುದು, ಅವನ ಮುಖಭಂಗ ಮಾಡುವುದು, ಅವನನ್ನು ಹಾಸ್ಯಕ್ಕೆ ಗುರಿಮಾಡುವುದು, ಇದೇ ಈಗ ಪರಿಹಾಸ್ಯವೆನಿಸಿಕೊಂಡಿದೆ. ಹಾಗೆಯೆ ಕೆಲವು ಬಾರಿ ಅವನ ದೇಹ ದಲ್ಲಿಯ ಅಥವಾ ತಿಳಿವಿನಲ್ಲಿಯ ಲೋಪದೋಷಗಳನ್ನು ಬಹಿರಂಗ ಪಡಿಸುವುದೂ. ಅವನು ಈ ಸಂದರ್ಭಗಳಲ್ಲೆಲ್ಲ ಕೋಪಿಸಿಕೊಳ್ಳ ಕೂಡದು; ಕೇವಲ ವಿನೋದವೆಂದು ಹಾಸ್ಯವನ್ನು ಎಣಿಸಲಾರನೆಂಬ ದೋಷಕ್ಕೆ ಅವನು ಈಡಾಗದೆ ಇರಬೇಕಾಗಿರುವುದು. ಈ ವಿದ್ಯೆಯಲ್ಲಿ ಚತುರನಾಗಿರುವವನನ್ನು ನೋಡುವುದು ಅಚ್ಚರಿಯೇ ಸರಿ. ಅವನು ಬಲಹೀನನಾದ ಒಬ್ಬ ಎದುರಾಳನ್ನು ಆರಿಸಿಕೊಳ್ಳುವನು. ಅವನನ್ನು ನೋಡಿ ನಗುಬರುವಂತೆ ಮಾಡುವನು. ಕಡೆಗೆ ಎಲ್ಲ ಬಗೆಯಲ್ಲಿಯೂ ಜಯಶೀಲನಾಗುವನು. ಪರಿಹಾಸ್ಯವೆಂಬ ಈ ಪದವನ್ನು (Raillery) ನಾವು ಎರವಾಗಿ ತೆಗೆದುಕೊಂಡಿರುವುದು ಫ್ರೆಂಚರಿಂದ. ಅವರ ಭಾವನೆ ಬೇರೆ: ಹೆಚ್ಚು ಸಭ್ಯವಾದ ನಮ್ಮ ಪೂರ್ವಿಕರ ದಿನಗಳಲ್ಲಿ ನಮ್ಮಲ್ಲಿಯೂ ಹಾಗೆಯೇ ಇದ್ದಿತು. ರೇಲರಿಯೆಂದರೆ ಹೀಗೆ: ಯಾವುದಾದರೊಂದು ಮಾತು ಮೊದಲು ಕೆಟ್ಟಮಾತಿನಂತೆ ಕಾಣಬೇಕು; ಆದರೆ ಅನಿರೀಕ್ಷಿತ ವಾದ ಮತ್ತು ಅಚ್ಚರಿಯುಂಟುಮಾಡುವ ಚಮತ್ಕಾರ ಒಂದರಿಂದ ಅದೇ ಮಾತು ಅಭಿನಂದನೆಯಾಗಿ ಮುಗಿಯಬೇಕು; ಯಾರನ್ನು ಕುರಿತು ಆ ಮಾತು ಹೇಳಿತ್ತೋ ಆ ಮನುಷ್ಯನಿಗೆ ಗೌರವವುಂಟಾಗ ಬೇಕು. ಸಂಭಾಷಣೆಯ ನಿಯಮಗಳಲ್ಲಿ ನಿಜವಾಗಿ ಉತ್ತಮವಾದು ದೆಂದರೆ, ಸಂತೋಷಕೂಟಕ್ಕೆ ಸೇರಿದ, ನ್ಯಾಯದಿಂದ ನುಡಿಯುವ ಯಾರೊಬ್ಬರಿಗೂ ಈ ಮಾತು ಹೇಳದೆ ಇದ್ದಿದ್ದರೆ ಚೆನ್ನಾಗಿತ್ತು ಎಂದು ಎಂದಿಗೂ ಎನ್ನಿಸಬಾರದು; ನಾಲ್ಕಾರು ಜನ ಒಂದು ಕಡೆ ಸೇರುವುದು ಪರಸ್ಪರ ಸಂತೋಷಕ್ಕೇ ಹೊರತು ಪರಸ್ಪರ ಅತೃಪ್ತಿ ಪಡುವುದಕ್ಕಲ್ಲ.

—ಎಸ್. ಮಂಜನಾಥ್.

# ಮಿಂಚು

ಬರೆದವರು: ಶ್ರೀಮತಿ 'ವಾಣಿ', ಮೈಸೂರು

'ಟಪ್, ಟಪ್, ಟಪ್.......ಜೊಯ್.......ಜೊರೋ'

ಏನು ಮಳೆ? ಇದ್ದಕ್ಕಿದ್ದ ಹಾಗೆ? ಆಕಾಶ ತೂತಾದಂತೆ ತೋರುತ್ತದೆ....ಬೀದಿಯಲ್ಲಿ ತಿರುಗುತ್ತಿದ್ದ ಜನರು ಚಲ್ಲಾಪಿಲ್ಲಿಯಾಗಿ ಆಸರೆ ಸಿಕ್ಕಿದ ಕಡೆ ಓಡಿದರು. ಮರ ಇದ್ದ ಕಡೆ ತೂರಿದರು.

'ಯಾರ ಮನೆಯೋ ಇದು?'

'ರಾಮರಾಯರ ಮನೆ ತಾಯಿ'

'ಇಂಜನಿಯರ್ ಏನೋ?'

ಗೌರಿ ತಲೆಯೆತ್ತಿ ನೋಡಿದಳು. ಉಟ್ಟಿದ್ದ ಬಟ್ಟೆಯಿಂದ ನೀರು ಸೋರುತ್ತಿರುವ ತರುಣಿಯೊಬ್ಬಳು ಬಾಗಿಲಿನಲ್ಲಿಕುತಿದ್ದ ಆಳನ್ನು ಯಾರ ಮನೆಯೆಂದು ನಡುಗುವ ದನಿಯಲ್ಲಿ ವಿಚಾರಿಸುತ್ತಿದ್ದುದು ಸಂಜೆಯ ಮಬ್ಬಿನಲ್ಲಿ ಕಾಣಿಸಿತು.

ಗೌರಿ ಬಾಗಿಲಿನ ಬಳಿಗೆ ಹೋಗಿ ಒಳಕ್ಕೆ ಬರುವಂತೆ ಕರೆದಳು. ಮಾತಾಡಿದವಳು ಆಳಿನ ಜವಾಬಿನಿಂದ ದಿಙ್ಮೂಢಳಂತೆ ಒಂದು ಕ್ಷಣ ನಿಂತಳು. ಅವಳು ಆ ಮನೆಗೆ ಬರಲು ಇನ್ನೂ ಸಿದ್ಧಳಾಗಿರಲಿಲ್ಲ. ಅನಿರೀಕ್ಷಿತವಾಗಿ ಒದಗಿದ ಈ ಪ್ರಸಂಗದಿಂದ ಅವಳಿಗೆ ಏನು ಮಾಡಲೂ ತೋರದೆ ನೆನೆದರೂ ಚಿಂತೆಯಿಲ್ಲ ಹಿಂದಕ್ಕೆ ಹೊರಟುಹೋಗೋಣವೆಂದು ಕೊಳ್ಳುವಷ್ಟರಲ್ಲಿ ಗೌರಿ ಅಲ್ಲಿಗೆ ಬಂದೇಬಿಟ್ಟಳು. ತರುಣಿ ಯತ್ನವಿಲ್ಲದೆ ಒಳಗೆ ಹೋಗಲೇಬೇಕಾಯಿತು.

ಲಲಿತ ಒಳಗೆ ಬಂದಳು. ಅವಳೊಡನೆ ದೀಪವೂ ಬಂದಿತು. ಲಘು ಹಸುರು ಛಾಯೆಯುಳ್ಳ ಗೋಡೆಗಳು. ಅದರಮೇಲೆ ಅಲ್ಲಲ್ಲಿ ಅಂದವಾದ ಚಿತ್ರಪಠಗಳು. ಓರಣವಾಗಿಟ್ಟಿದ್ದ ಬೆಲೆಬಾಳುವ ಮೇಜು ಕುರ್ಚಿಗಳು. ಕುಂಡದೊಳಗಿದ್ದ ಹೂ ಪಾತ್ರೆಯಲ್ಲಿ ಹೂವುಗಳು ಅರಳಿ ಸುವಾಸನೆ ಮನೆಯನ್ನು ಮುತ್ತಿದ್ದಿತು. ಗೌರಿ ಮೇಜಿನಮೇಲೆ ಕೈಯೂರಿ ಸ್ವಲ್ಪ ಬಾಗಿದ ಹಾಗೆ ನಿಂತಿದ್ದಳು. ವಿದ್ಯುದ್ದೀಪದ ಬೆಳಕಿ ನಲ್ಲಿ ಅವಳನ್ನು ಲಲಿತ ನಖಶಿಖಾಂತವಾಗಿ ದಿಟ್ಟಿಸಿದಳು. ಅದೇನು ನೋಟ? ಆ ನೋಟ ಗೌರಿಯ ಹೃದಯವನ್ನೂ, ಅವಳ ಜೀವನವನ್ನೂ ಒಂದೇ ಸಲ ಭೇದಿಸುವಂತಿದ್ದಿತು.

ಬಂದವಳು ಮಾತಾಡದೆ ತನ್ನನ್ನು ಅಳೆಯುವಂತೆ ಆ ರೀತಿ ನೋಡುತ್ತಿರುವುದನ್ನು ನೋಡಿ ಗೌರಿಗೆ ಹೇಗೋ ಎನಿಸಿತು. ಹುಡುಗಿ ಯಂತೆ ನಾಚಿದಳು. ಹೊಸಬಳು ಆ ನೋಟದಲ್ಲಿ ತನ್ನ ಮನಸ್ಸನ್ನೂ ಸಾಮರ್ಥ್ಯವನ್ನೂ ಎಳೆದುಕೊಳ್ಳುವಂತೆ ತೋರಿತು.

ಉಟ್ಟಿದ್ದುದು ರೋಜಾ ಬಣ್ಣದ ಸೀರೆ. ಅದಕ್ಕೊಪ್ಪುವ ರವಿಕೆ. ಮುಡಿಯಲ್ಲಿ ಅರಳಿದ ಗುಲಾಬಿ. ನಸುಗೆಂಪಾದ ಮುಖದಿಂದ ಕೂಡಿ ಗೌರಿ ಗುಲಾಬಿಯಂತೆ ಕಂಡಳು. ಗುಲಾಬಿಯಂತೆಯೇ ಅವಳ ಸುತ್ತಲೂ ಮುಳ್ಳುಗಳಿವೆಯೇನು?

ಲಲಿತ ಹತ್ತಿರ ಬಂದವಳು ಸಲಿಗೆಯಿಂದ ಅವಳ ಕೈ ಹಿಡಿದು ಕೊಂಡು, 'ತಂಗಿ, ನಿನಗೆ ನನ್ನ ಪರಿಚಯವಿಲ್ಲ. ರಾಮುವಿನ ತಾಯಿ ನಮ್ಮ ಸೋದರತ್ತೆ' ಎಂದಳು.

ಗೌರಿ ಅವಳ ಕಡೆ ಸ್ನೇಹದಿಂದ ನೋಡಿದಳು. ಅವಳಿಗೆ ಅಚ್ಚರಿಯಾಯಿತು. ಆ ಹಳ್ಳಿಯ ಚೆಲುವೆಯ ಕಂಗಳಲ್ಲಿ ಏನ ಕಾಂತಿ? ಕಂಡೂ ಕಾಣದಂತಿದ್ದ ಆ ನಗುವಿನ ಸುಳಿಯ ಹಿಂದೆ ಅದೆಷ್ಟೋ ಜೀವನದ ಅನುಭವ ಅಡಗಿರುವಂತಿದೆ!

ಹೊರಗೆ ಮಳೆ. ಒಳಗೆ ಮಾತಿನ ಮಳೆ! ಹುಡುಗಿಯರಿಬ್ಬರೂ ಬಹುಬೇಗ ಹಳೆಯ ಗೆಳತಿಯರಂತೆ ಸಲಿಗೆಯಿಂದ ಮಾತಾಡುತ್ತಿದ್ದರು. ಗೌರಿ ಹಾಗೆ ಮಾತನಾಡಿ ಅನೇಕ ವರ್ಷಗಳಾಗಿದ್ದುವು. ಲಲಿತನ ಮಾತು, ತಮ್ಮ ಯೋಗಕ್ಷೇಮದಲ್ಲಿ, ಮತ್ತು ಮನೆಯ ವಿಚಾರದಲ್ಲಿ ಅವಳು ತೋರುತ್ತಿದ್ದ ಆಸಕ್ತಿ, ಸ್ನೇಹವನ್ನು ಸೂಸುವ ನಗು—

(೪೦೩ನೆಯ ಪುಟಕ್ಕೆ)



ಶುಕ್ರವಾರ, ಅಗಸ್ಟ್ ೧೬, ೧೯೪೦

## ಕಲೆಗೆ ಪ್ರೋತ್ಸಾಹ

ಕಾವ್ಯಕ್ಕೂ ಕಲಾಕೃತಿಗಳಿಗೂ ಪ್ರೋತ್ಸಾಹ ಹೇಗೆ ದೊರೆಯಬೇಕೆಂಬುದನ್ನು ಪ್ರತಿ ಸಮಾಜವೂ ತನ್ನ ಕಾಲಕ್ಕೂ ಯೋಗ್ಯತೆಗೂ ಅಗತ್ಯಕ್ಕೂ ತಕ್ಕಂತೆ ತೀರ್ಮಾನಿಸಿ ತನ್ನ ಬದುಕಿನಲ್ಲಿ ರಚಿಸಿಕೊಳ್ಳಬೇಕು. ಹಿಂದೆ ಆಸ್ಥಾನಗಳಲ್ಲಿಯೊ ಮಠಗಳಲ್ಲಿಯೊ ಶ್ರೀಮಂತರ ಆಶ್ರಯದಲ್ಲಿಯೊ ಬಹುತರ ಈ ಪ್ರೋತ್ಸಾಹ ದೊರೆಯುತ್ತಿತ್ತು. ಕವಿಗಳಿಗೂ ಕಲೆಗಾರರಿಗೂ ದಿನದಿನದ ಸಂಸಾರಕ್ಕೆ ಹೇಗೆ ಎಂಬ ಯೋಚನೆ ಅಷ್ಟಾಗಿ ಇರುತ್ತಿರಲಿಲ್ಲ. ನಮ್ಮ ದೇಶದಲ್ಲಿ ಕೂಡುಕುಟುಂಬ ಪದ್ಧತಿ ಇತ್ತು. ಹಳ್ಳಿ ಪಟ್ಟಣಗಳಲ್ಲಿಯ ಜೀವಿಕೆ, ವಾಸ, ಸುಮಾರು ಒಂದು ಗೊತ್ತಾದ ರೀತಿ ನಡೆಯುತ್ತಿದ್ದುವು. ಯಾರಿಗೇ ಆಗಲಿ ಅನ್ನಬಟ್ಟೆಗೆ ಅತಿಯಾದ ತೊಂದರೆ ಇರುತ್ತಿರಲಿಲ್ಲ. ಇಂದು ಅದಕ್ಕೂ ತೊಂದರೆ. ಕಾವ್ಯಾದಿಗಳ ನಿರ್ಮಾಣಕರು ಅರಸರ ಬಳಿಗೊ ಮಠಗಳಿಗೊ ಕೃತಿಯೊಡನೆ ಹೋದರೆ ಆ ಆಶ್ರಯಗಳಲ್ಲಿ ವಿದ್ವತ್ಸಭೆಗಳು ಸೇರಿ ತುಂಬಿದ ಸಭೆಗಳಲ್ಲಿ ಕೃತಿಯ ಪರಿಚಯ, ಪ್ರಕಟನೆ ಆಗುತ್ತಿತ್ತು. ಯೋಗ್ಯತೆಗೆ ತಕ್ಕಂತೆ ಮರ್ಯಾದೆ ಸಲ್ಲುತ್ತಿತ್ತು. ಹಲವು ವೇಳೆ ಮೇಲ್ತರದ ಕವಿಗಳಿಗೂ ಕಲೆಗಾರರಿಗೂ ದತ್ತಿ, ಸಂಬಳ ಸಾರಿಗೆ ದೊರೆತು ವಿಶೇಷ ಬಗೆಯ ಉತ್ತೇಜನ ಉಂಟಾಗುತ್ತಿತ್ತು. ಅಚ್ಚಿನ ಮೂಲಕ ಲೋಕಕ್ಕೆಲ್ಲ ಕೃತಿಯ ಪರಿಚಯವಾಗುವ ಸಂಭವ ಇಂದಿನಂತೆ ಇಲ್ಲದಿದ್ದರೂ ಸಾಹಿತ್ಯ ಪ್ರಪಂಚದಲ್ಲಿ ಗಣ್ಯರಾಗಿ ಅಧಿಕಾರಿಗಳಾದವರಿಗೆಲ್ಲ ಅದರ ಸ್ವರೂಪವೂ ಬೆಲೆಯೂ ಗೊತ್ತಾಗಿ ಆ ಕಾಲದವರೆಗೆ ಜನದ ಭಾಗ್ಯಕ್ಕೆ ಬಂದ ಸತ್ವಗಳಲ್ಲಿ ಸೇರಿಕೊಂಡು ಹೊಸ ಕೃತಿ ಪ್ರಭಾವಗೊಳ್ಳುತ್ತಿತ್ತು.

ಇಂದಿನ ಕೃತಿನಿರ್ಮಾಣಕ್ಕೆ ಪ್ರೋತ್ಸಾಹ ವಿಶೇಷವಾಗಿ ಮಹಾಜನದಿಂದ ಆಗಬೇಕಾಗಿದೆ. ಅವರ ಅಭಿರುಚಿ ಆವಶ್ಯಕತೆಗಳನ್ನು ಲಕ್ಷ್ಯದಲ್ಲಿಟ್ಟೇ ಕೃತಿರಚನೆ ಆಗಬೇಕಾಗುತ್ತದೆ. ಚಿತ್ರ ಶಿಲ್ಪ ಸಂಗೀತ ನರ್ತನಾದಿಗಳೂ ಅವರು ಮೆಚ್ಚುವಹಾಗಿದ್ದರೆ ಮಾತ್ರ ಲಾಭಕರ. ಇಲ್ಲವಾದರೆ ಕಲೆಗಾರರ ಬದುಕು ನಡೆಯುವುದು ಕಷ್ಟ. ಈ ಬಗೆಯ ಪ್ರಯೋಜನ ಪಡೆಯುವುದು ಸುಲಭವೆನ್ನಿಸಬಹುದು ; ಅವರ ಅಭಿರುಚಿ ಮುಂತಾದ್ದನ್ನು ಅರಿತು ತಕ್ಕಂತೆ ಕೃತಿನಿರ್ಮಾಣಮಾಡಿ ಅವರ ಮೆಚ್ಚಿಕೆಯನ್ನೂ ಹಣವನ್ನೂ ಗಳಿಸುವುದು ಸಾಧ್ಯವೆನ್ನಿಸಬಹುದು ಕೆಲವರಿಗೆ. ಆ ಅಭಿರುಚಿಯನ್ನು ತಿಳಿಯುವುದು ಅಷ್ಟೇನೂ ಸುಲಭವಲ್ಲ. ಮಹಾಜನಕ್ಕೆ ಅನೇಕ ತಲೆಬಗೆ ಉಂಟು ; ಅನೇಕ ಉದ್ದೇಶ ಅಭಿಲಾಷೆಗಳುಂಟು. ಒಂದು ರುಚಿಗೆ ಒಪ್ಪಿದುದು ಇನ್ನೊಂದಕ್ಕೆ ಒಪ್ಪದೆ ಹೋಗಬಹುದು. ಅಭಿರುಚಿಯೇ ಹುಟ್ಟದೆ ಇರಬಹುದು. ಎರಡನೆಯದಾಗಿ ಆ ರುಚಿ ಒರಟಾಗಿ ಕೀಳಾಗಿ ಇದ್ದರೆ ಅದನ್ನು ತೃಪ್ತಿಗೊಳಿಸುವುದು ಎಲ್ಲಕಲೆಗಾರರಿಗೂ ಶಕ್ಯವಾಗದೆ—ಇಷ್ಟವಾಗದೆ ಇರಬಹುದು. ಇಂಥವರ ಕೃತಿಗಳ ಸೊಬಗಿಗೆ ಜನ ಒಲಿಯದಂತಾದರೆ ಇಕ್ಕಟ್ಟು ಉಂಟಾಗುವುದು ಸಹಜ. ಈ ಸ್ಥಿತಿಯನ್ನು ಕುರಿತೇ ಬಹುಶಃ ಸರಸ್ವತಿ ಲಕ್ಷ್ಮಿಯರಿಗೆ ಹೊಂದಿಕೆಯಿಲ್ಲ, ಅವರು ಅತ್ತೆ ಸೊಸೆಯರು ಎಂದು ಮುಂತಾಗಿ ನಮ್ಮವರು ನುಡಿಯುತ್ತಿದ್ದರೇನೊ ! ಒರಟು ಬಗೆಯ ಮೆಚ್ಚುಗೆಯನ್ನು ಒದಗಿಸಲು ಕೃತಿಕಾರರು ಒಪ್ಪರು ; ತಮ್ಮ ಜೀವನ ದರ್ಶನಕ್ಕೂ ಅದರ ಶುದ್ಧಿ ಮಹತ್ವಗಳಿಗೂ ಕುಂದುತಾರಲು ಇವರಿಗೆ ಇಷ್ಟವಿಲ್ಲ. ಇತ್ತ ತಮಗೆ ಬೇಕಾದಂತೆ ಮಾಡದಿದ್ದರೆ ತಾವು ದುಡಿದು ಗಳಿಸಿದ ಹಣವನ್ನು ಜನರೇಕೆ ಇವರಿಗೆ ಕೊಟ್ಟಾರು ?

ಹೀಗೆಂದ ಮಾತ್ರಕ್ಕೇ ಇವರೆಲ್ಲರ ಕಲೆ ಯಾವಾಗಲೂ ಮೇಲಾದ್ದೇ ಎಂದಾಗಲಿ ಅವರೆಲ್ಲರ ಅಭಿರುಚಿ ಎಂದಿಗೂ ಇವರ ಮಟ್ಟಕ್ಕೆ ಏರಲೇ ಆರದೆಂದಾಗಲಿ ಇವೆರಡೂ ಎಂದಿಗೂ ಹೊಂದಲೇ ಆರವೆಂದಾಗಲಿ ಹೇಳಲಿಲ್ಲ. ಆಗಬಹುದು, ಆಗದೆಯೂ ಹೋಗಬಹುದು ; ಒಂದು ಸಂದರ್ಭದಲ್ಲಿ ಮಾತ್ರ ಸ್ಥಿತಿ ವಿಷಮಿಸುವ ಸಂಭವ ಹೆಚ್ಚು. ಕಲೆಗಾರನು ಸ್ವತಂತ್ರ ಸ್ಫೂರ್ತಿಯುಳ್ಳವನೂ ಅನ್ಯಾದೃಶವಾದ ಮತ್ತು ಸಂಪ್ರದಾಯದ ಬಳಕೆಯ ದಾರಿ ಹಿಡಿಯದ ಮನೋವೃತ್ತಿಯುಳ್ಳವನೂ ಆಗಿದ್ದರೆ ಅಂಥವನಿಗೆ ಕಷ್ಟ ಹೆಚ್ಚಾಗುತ್ತದೆ. ಪ್ರಪಂಚದ ಕಲಾಚರಿತ್ರೆಯೆಲ್ಲ ಇದಕ್ಕೆ ನಿದರ್ಶನ. ಉತ್ತಮ ಕಲೆಗಾರರ ಗುರಿ ಮನೋಭಾವಗಳ ವಿಶೇಷತೆಗೆ ಮನ್ನಣೆ ಬರಲು ಸ್ವಲ್ಪಕಾಲ ಹಿಡಿಯುತ್ತದೆ. ಹಲವೇಳೆ ಅವರ ಜೀವನ ಕಾಲದಲ್ಲಿ ಬಹುಕಷ್ಟ ಬಂದು ತೊಳಲಿ ಹಾಗೆಯೇ ಅವರು ಸಾಯಬೇಕಾಗಿರುವುದೂ ಉಂಟು. ಕಾಳಿದಾಸ, ಭವಭೂತಿ ಮುಂತಾದ ಭಾರತ ಮಹಾಕವಿಗಳು ಕೂಡ ನೊಂದು ನುಡಿದಿರುವುದು ಎಲ್ಲರಿಗೂ ತಿಳಿದದ್ದೇ ಆಗಿದೆ. ಹೊಸದೆಲ್ಲ ಅಸಾಧುವಲ್ಲ ಪುರಾತನವಾದ್ದೆಲ್ಲ ಸಾಧುವೂ ಅಲ್ಲ ಎಂದು ಕಾಳಿದಾಸನೂ, ಇನ್ನೊಂದು ಸಹಸ್ರವರ್ಷಗಳಾದಮೇಲೆ ನನಗೆ ಸಮಾನವಾದ ಸತ್ವವುಳ್ಳವನು ಹುಟ್ಟಿಕೊಂಡು ನನ್ನ ಕೃತಿಗಳಿಗೆ ಬೆಲೆ ಕಟ್ಟುವನು ಎಂದು ಭವಭೂತಿಯೂ ತಮ್ಮ ಪರವಾಗಿ ನುಡಿದುಕೊಳ್ಳಬೇಕಾಯಿತು ಪಾಪ. ಪೆರರೀವುದೇಂ, ಪೆರರ ಮಾಡುವುದೇಂ, ಪೆರರಿಂದಮಪ್ಪುದೇಂ ಎಂದು ಪಂಪನು ಕೂಡ ನುಡಿದನೆಂಬುದನ್ನು ನೆನೆಪಿಡಬೇಕು. ಹಾಗೆಯೇ ಲಕ್ಷ್ಮೀಶಾದಿಗಳೂ. ಗ್ರೀಸಿನ ಹೋಮರಿಗಿಂತ ದೊಡ್ಡ ಕವಿಯಿಲ್ಲ ; ಆತನು ವಾಲ್ಮೀಕಿ ವ್ಯಾಸರಂಥ ಸತ್ವಶಾಲಿ. ಆತನು ತೀರಿಕೊಂಡಮೇಲೆ ಗ್ರೀಸಿನ ಏಳು ರಾಷ್ಟ್ರಗಳು ಆತನು ತಮಗೆ ಸೇರಬೇಕು ತಮಗೆ ಸೇರಬೇಕು ಎಂದು ಕಚ್ಚಾಡಿದುವಂತೆ. ಕವಿ ಬದುಕಿದ್ದಾಗ ಆ ರಾಷ್ಟ್ರಗಳ ಬೀದಿಗಳಲ್ಲಿ ಬಿಕ್ಕೆಬೇಡಿ ಅವನನ್ನು ಸಾಯಗೊಟ್ಟಿದ್ದ ರಾಷ್ಟ್ರಗಳ ಈ ಕವಿಭಕ್ತಿ ಇಂಥ ಜೀವನಕ್ಕೆಲ್ಲ ಸ್ವರೂಪ ಲಕ್ಷಣ, ಪ್ರತಿನಿಧಿ. ಕಂಡರೆ ಕಲ್ಲಿಟ್ಟು ಕೊಲ್ಲುವುದು ; ಸತ್ತ ಮೇಲೆ ಸ್ಮಾರಕೋತ್ಸವ ನಡಸುವುದು !

ಇಂದು ಅನೇಕ ರಾಷ್ಟ್ರಗಳಲ್ಲಿ ಸಂಸ್ಥೆಗಳೂ ಸರಕಾರಗಳೂ ಒಂದೊಂದು ಬಗೆಯ ಏರ್ಪಾಟು ಮಾಡಿರುವುದುಂಟು. ಮಾಡಬೇಕಾದ ಕೆಲಸ ಕಡಲಷ್ಟು ವಿಸ್ತಾರವಾಗಿರುವಾಗ ಮಾಡಿರುವುದು ಅಲ್ಪವೇನೊ ಸರಿಯೇ. ಅಷ್ಟಾದರೂ ಆಗುವುದೆಂಬ ನಂಬಿಕೆ ಹುಟ್ಟಿದರೆ ಒಂದು ರೀತಿ ಉತ್ಸಾಹವೂ ಧೈರ್ಯವೂ ಕಲೆಗಾರರಿಗೆ ಖಂಡಿತ ಬಂದೀತು.

ಪಿ. ಇ. ಎನ್. ಆಗಸ್ಟ್ ಪತ್ರಿಕೆಯಲ್ಲಿ ಎಸ್ತೋನಿಯ ಎಂಬ ಬಾಲ್ಟಿಕ್ ರಾಷ್ಟ್ರ (ಮೊನ್ನೆ ರಷ್ಯಾಕ್ಕೆ ಸೇರಿಕೊಂಡಿತು) ಯಾವ ರೀತಿ ಏರ್ಪಾಟುಮಾಡಿತ್ತೆಂಬುದನ್ನು ತಿಳಿಸುತ್ತದೆ:

ಅಲ್ಲಿನ ಜನವರ್ಗ ೧೦ ಲಕ್ಷ ಸುಮಾರು; ಸರಾಸರಿ ಕಾದಂಬರಿಯ ಒಂದು ಸಂಪುಟ ೧೦೦೦–೨೦೦೦ ಪ್ರತಿಗಳು ಅಚ್ಚಾಗುವುವಂತೆ; ಪದ್ಯಗ್ರಂಥವಾದರೆ ೫೦೦ ಪ್ರತಿಗಳಂತೆ. ರಾಜ್ಯದಲ್ಲಿ ಸರಕಾರದ ಸಹಾಯಪಡೆಯುತ್ತಿರುವ ೭೫೦ ಪುಸ್ತಕಭಂಡಾರಗಳು ಮುಖ್ಯಮುಖ್ಯವಾದ ಸುಮಾರು ಎಲ್ಲ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಕೊಂಡು ಯುಕ್ತವಾದ ಬೆಲೆ ತೆರುವುವಂತೆ.

ವಿಶೇಷವಾಗಿ ಒಂದು ಗ್ರಂಥನಿಧಿ, ಒಂದು ಸಂಸ್ಕೃತಿನಿಧಿ ಏರ್ಪಟ್ಟು ಎಸ್ತೋನಿಯ ಲೇಖಕರ ಆರ್ಥಿಕಸ್ಥಿತಿಯ ಬಗ್ಗೆ ನೆರವುಕೊಡುವ ಕೇಂದ್ರಗಳಾಗಿವೆಯಂತೆ. ವರ್ಷವರ್ಷವೂ ಕಾಲ್ಪನಿಕ ಸಾಹಿತ್ಯಕ್ಕೂ ಶಾಸ್ತ್ರಗಳಿಗೂ ಪ್ರೋತ್ಸಾಹಕೊಡುವ ಬಹುಮಾನಗಳು ಬೇರೆ ಉಂಟು. ಕೆಲವು ಪಟ್ಟಣಗಳವರು ಪ್ರತ್ಯೇಕವಾದ ಬಹುಮಾನಗಳ ವ್ಯವಸ್ಥೆಮಾಡುವರು.

ಸಂಸ್ಕೃತಿ ನಿಧಿಯನ್ನು ಪೂರ್ತಿಯಾಗಿ ಸರಕಾರವೇ ಪೋಷಿಸುತ್ತದೆ. ಮದ್ಯ, ಹೊಗೆಸೊಪ್ಪು, ವಿನೋದದ ತೆರಿಗೆಗಳು, ವಿದೇಶಗಮನಕ್ಕಾಗಿ ಪ್ರಯಾಣಿಕರು ತೆರುವ ರುಸುಮು–ಈ ಬಾಬುಗಳಲ್ಲಿ ದೊರಕುವ ಹಣವನ್ನು ಸರಕಾರ ಕೂಡಿಸಿ, ಸಾಹಿತ್ಯ, ಸಂಗೀತ, ಕಲೆ, ರಂಗಭೂಮಿ, ವೃತ್ತಪತ್ರಿಕೆಗಳು, ಅಂಗಸಾಧನೆ ಎಂಬ ವಿಂಗಡದ ಆರು ದ್ರವ್ಯನಿಧಿಗಳಿಗಾಗಿ ಉಪಯೋಗಿಸುವರು. ಸಾಹಿತ್ಯಕ್ಕೆ ಒದಗುವ ಅರ್ಧ ಹಣದಿಂದ ವಿದ್ವನ್ಮಂಡಲಿಗಳಿಗೂ ಪರಿಶೋಧನಾಕಾರ್ಯಗಳಿಗೂ ಪ್ರಕಟನಕಾರರಿಗೂ ನೆರವು ಬರುತ್ತದೆ. ಇನ್ನರ್ಧವನ್ನು ಸಾಹಿತ್ಯನಿಧಿಯ ಕಾರ್ಯಕಾರಿ ಮಂಡಲಿ ತಾನೇ ಹಂಚುತ್ತದೆ. ಎಸ್ತೋನಿಯ ಗ್ರಂಥಕಾರರ ಸಂಘದ ಪತ್ರಿಕೆಯಾದ 'ಲೂಮಿಂಗ್' ಎಂಬ ಪತ್ರಿಕೆಗೆ ಈ ಮೂಲಕ ಹಣ ದೊರೆಯುತ್ತದೆ. ವ್ಯಕ್ತಿಲೇಖಕರಿಗೆ ಸಹಾಯದ್ರವ್ಯ ಸಿಕ್ಕುತ್ತದೆ. ವಿಶೇಷಬಗೆಯ ಕೆಲಸಗಳಿಗೂ ರೋಗರುಜಿನಗಳ ಸಮಯದಲ್ಲಿ ಲೇಖಕರಿಗೆ ನೆರವಾಗುವಂತೆಯೂ ಮಾಸಾಶನ ರೂಪದಲ್ಲಿಯೊ ಇತರ ಬಗೆಯಲ್ಲಿಯೊ ಸಹಾಯ ಲಭಿಸುತ್ತದೆ. ಕೆಲವುವೇಳೆ ಲೇಖಕರ ವಿದೇಶಸಂಚಾರಕ್ಕೆ ಕೂಡ ಈ ಸಹಾಯ ಉಂಟು. ರಾಜಾಧ್ಯಕ್ಷರು ಒಬ್ಬ ಲೇಖಕರಿಗೆ ಆತನು ಬದುಕಿರುವವರೆಗೂ ಕಂದಾಯ ಗುತ್ತಿಗೆ ತೆರದೆ ಬೇಸಾಯಮಾಡಿಕೊಳ್ಳಲು ಭೂಮಿಯನ್ನು ಕೊಟ್ಟಿರುವರಂತೆ. ಸರಕಾರವೂ ಪೌರಸಭೆಗಳೂ ಹಿರಿಯ ಲೇಖಕರಿಗೆ ವಾಸದ ಮನೆಗಳನ್ನು ಕಟ್ಟಿಕೊಡುವರು. ಅವರ ವರ್ಷೋತ್ಸವ ಸಮಯಗಳಲ್ಲಿ ದ್ರವ್ಯದ ನೆರವನ್ನೂ ಕೊಡುವರಂತೆ.

ಮೇಲ್ಕಂಡಂತೆ ಒಂದು ರಾಷ್ಟ್ರದ ಸರಕಾರವೂ ಮಹಾಜನವರ್ಗವೂ ಈ ರೀತಿ ತಮ್ಮ ದೇಶದ ಕಲಾವೈಭವವನ್ನು ಪೋಷಿಸುವ ಭಾರವನ್ನು ಸಂತೋಷದಿಂದ ಹೊತ್ತು ಮುಂದೆ ಬಂದರೆ ಬಂಜರು ನೆಲ ಫಲವತ್ತಾಗುವುದು; ತಬ್ಬಲಿಗಳಂತಿರುವ ಕಲೆಗಾರರು, ನಾಳೆಗೆ, ಸಮಾಜಕ್ಕೆ ಕೀರ್ತಿ ತರುವ ಅಮೃತಕಳಶಗಳಾಗುವ ಸಂಭವವುಂಟು.

ಕನ್ನಡ ನಾಡಿನಲ್ಲಿ ಜನವೂ ಪೌರಸಭೆಗಳೂ ಹಿರಿಯ ಸಂಸ್ಥೆಗಳೂ ಈ ಬಗೆಯ ಮತ್ತು ಅನೇಕ ಮುಖವಾದ ಕಾರ್ಯಗಳಿಗೆ ವಿಶೇಷವಾಗಿ ಒಲಿದು ಕೆಲಸವನ್ನು ಕೈಕೊಳ್ಳುವ ಕಾಲ ಬೇಗನೆ ಬರಲಿ.

(೪೦೧ನೆಯ ಪುಟದಿಂದ)

ಇವೆಲ್ಲವೂ ಗೌರಿಯನ್ನು ಬೆರಗುಗೊಳಿಸಿದವು. ಅವಳ ಮೌನವೂ ಗಾಂಭೀರ್ಯವೂ ಅವಳನ್ನು ಬಿಟ್ಟು ಕೆಲವು ಹೊತ್ತು ಮರೆಯಾಗಿದ್ದುವು.

ಮಾತಾಡುತ್ತ ಹುಡುಗಿಯರು ಮನೆಯನ್ನೆಲ್ಲಾ ಸುತ್ತಿದರು. ಮಹಡಿಯಮೇಲೆ ಹೋದರು. ಲಲಿತ ನಗುನಗುತ್ತ, 'ಇದು ಶಯ್ಯಾಗೃಹವೋ!' ಎಂದಳು.

ಲಲಿತ ಇಷ್ಟೇಕೆ ನಗುತ್ತಾಳೆ? ಅದು ನಗುವೆ?

ಅಲ್ಲ — ಅದು ನಿಜವಾದ ನಗುವಲ್ಲ, ಅಳುವನ್ನು ಮರೆಸಲು ಹೊಚ್ಚಿದ ಹೊದಿಕೆ. ಇದ್ದಕ್ಕಿದ್ದಂತೆ ಕೈ ಕಾಲು ಉಡುಗಿ ಮುಂದೆ ಅಡಿಯಿಡಲಾರದಂತಾಗಿದೆ. ಹೃದಯದ ಬಡಿತ ಜೋರಾಗಿ, ಒಳಗಿನ ವಿಚಾರಲಹರಿಗೆ ತಾಳನಿಕ್ಕುವಂತಿದೆ. ಏನೀ ಒಳಗಿನ ಕೂಗು? 'ಅಯ್ಯೋ ರಾಮು ........ ರಾಮೂ ........ ನನ್ನ ಹೃದಯ ಮಂದಿರದಲ್ಲಿ ನೀನು........ನಿನ್ನ ಮನಸ್ಸಿನ ಸೆರೆಯೊಳಗೆ ನಾನು ಜೀವನದಲ್ಲೂ, ಮರಣದಲ್ಲೂ ನಾವು ಅಭಿನ್ನರು ಎಂದಿದ್ದೆವಲ್ಲ. ಈಗ ನೋಡು. ನಿನ್ನ ಮನೆಯಲ್ಲಿ ನಾನು ಅಪರಿಚಿತ ವ್ಯಕ್ತಿ. ಮನೆಯನ್ನು ನೋಡಲು ಬಂದಿದೇನೆ!' ನೈಜತೆಯ ನಗ್ನತೆ ಎಷ್ಟು ಭೀಕರವಾಗಿದೆ!

ಒಂದು ಘಳಿಗೆ ದುಃಖದ ಮರೆವು! ಆದರೆ ಲಲಿತ ಬಹುಬೇಗ ಚೇತರಿಸಿಕೊಂಡು ಮೊದಲಿನಂತೆ ನಗುತ್ತ, ಮಾತಾಡುತ್ತ ಮುಂದಾದಳು. ಅವಳಿಗೆ ಈ ಹೋರಾಟ ಹೊಸದಲ್ಲ! ಪ್ರತಿನಿತ್ಯದ ಅನುಭವ!! ಎಷ್ಟಾದರೂ ಆ ಯುದ್ಧದಲ್ಲಿ ಅವಳೇ ಜಯಶಾಲಿ!!

ಸಿರಿತನದ ಆಡಂಬರ ಇಲ್ಲ. ಬಡತನದ ಬೇಗೆ ಇಲ್ಲ. ಮಧ್ಯಸ್ಥಿಕೆಯ ಜೀವನ. ಅದಕ್ಕೊಪ್ಪುವ ಸರಳವಾದ ಉಡಿಗೆತೊಡಿಗೆಗಳು. ಜೀವನದ ಸಾರಾಸಾರತೆಯ ತಿರುಳನ್ನರಿತ ಮುಖಭಾವ. ಬಹಳ ಓದಿದವಳಲ್ಲವಾದರೂ ಲೋಕ ವ್ಯವಹಾರವನ್ನರಿತವಳು. ಅನೇಕರೊಡನೆ ಕೂಡಿಯಾಡಿ ಇತರರ ಕಷ್ಟಸುಖಗಳನ್ನರಿತವಳು. ಮಾತಿನಲ್ಲಿ ಬಹಳ ಚತುರೆ. ಇಂಥವಳಿಗೆ ರಾಮುವಿನ ಸಂಸಾರದ ಸ್ಥಿತಿಯನ್ನರಿಯುವುದು ಕಷ್ಟವಾಗಲಿಲ್ಲ.

ರಾಮು ಎಲ್ಲಿ ಹೋಗುತ್ತಾನೆ? ಅವನ ಆಪ್ತ ಸ್ನೇಹಿತರಾರು? ರಜಾ ದಿನಗಳಲ್ಲಿ ದಂಪತಿಗಳು ಹೇಗೆ ಕಾಲಕಳೆಯುತ್ತಾರೆ? ಅವನಿಗೆ ಚಿತ್ರಗಳನ್ನು ಬರೆಯುವುದರಲ್ಲಿ ಮೊದಲಿನಂತೆ ಈಗಲೂ ಅಭಿರುಚಿಯಿದೆಯೆ? ಅವನಿಗೆ ಇಷ್ಟವಾದ ತಿಂಡಿ, ಹೂವು, ಹಣ್ಣುಗಳು, ಅವನು ಮೆಚ್ಚುವ ಬಟ್ಟೆಬರೆಗಳು, ಇವುಗಳನ್ನೆಲ್ಲಾ ತಿರುಗಿಮುರುಗಾಗಿ ಕೇಳಲು ಮೊದಲುಮಾಡಿದಳು.

ಗೌರಿ ಅವಳ ಮಾತಿಗೆ ಸಿಕ್ಕಿಹೋದಳು. ಅವಳ ಸವಾಲಿನಿಂದ ತಪ್ಪಿಸಿಕೊಳ್ಳುವ ಮಾರ್ಗ ಕಾಣದಾಯಿತು. ಅವಳು ಸಂಗ್ರಹಿಸಿದ್ದ ಜ್ಞಾನಭಂಡಾರ ಆ ಸಮಯದಲ್ಲಿ ಏನೂ ಸಹಾಯಮಾಡಲಿಲ್ಲ. ಉದ್ಗ್ರಂಥಗಳಮೇಲೆ ಲೆಖ್ಖವಿಲ್ಲದಷ್ಟು ವ್ಯಾಖ್ಯಾನವನ್ನು ಬರೆಯುವುದಕ್ಕೆ ಸಮರ್ಥಳಾದವಳು, ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕವಿಲ್ಲದೆ, ನೇರವಾಗಿ ಮಾತಾಡುತ್ತಿದ್ದ ಹಳ್ಳಿಯ ಮುಗ್ಧೆಯ ಮಾತಿಗೆ ನಿಜವನ್ನು ಮರೆಸಿ ಜವಾಬು ಕೊಡಲು ಅಸಮರ್ಥಳಾದಳು.

ಒಂದು ಬಗೆಯ ಅಸಹಾಯಕತೆ ಗೌರಿಯನ್ನಾವರಿಸಿತು. ಅದರ ಬೆಳಕಿನಲ್ಲಿ ತನ್ನ ಜೀವನವನ್ನು ನೆನೆದು ಗೌರಿ ಖಿನ್ನಳಾದಳು. ತಾನು ಮಾಡಿದುದೇನು? ತಾನು ಹೋಗಬೇಕೆಂದಿದ್ದ ದಾರಿಯಲ್ಲಿ ಅಡ್ಡಲಾಗಿ ಒಂದು ತೆರೆ ಬರಲು ಅದನ್ನು ಓರೆಮಾಡಲು ಪ್ರಯತ್ನಿಸಿ, ಅದು ಸಫಲವಾಗಲಿಲ್ಲವೆಂದು ಜೀವನದಲ್ಲಿ ಬೇಸರಹೊಂದಿ, ಹೊರಗಣ ಪ್ರಪಂಚದಿಂದ ಮರೆಯಾಗಿರಲು ತನ್ನ ಸುತ್ತಲೂ ಪುಸ್ತಕದ ರಾಶಿಯನ್ನು ಸುರಿದುಕೊಂಡು ಅದರ ಮಧ್ಯೆ ಅಡಗಿಕೊಂಡು ಕುಳಿತಾಯಿತು. ಅದರಿಂದ ಬಂದ ಭಾಗ್ಯವೇನು? ಏನು? .................... ?

ಅವಳ ಮನಸ್ಸಿನಲ್ಲಿ ನಡೆಯುತ್ತಿದ್ದ ಒಳತೋಟಿ ಲಲಿತಳಿಗೆ ಗೊತ್ತಾಗದಿರಲಿಲ್ಲ. ಅವಳು ಆ ಸಮಯವನ್ನು ಸಾಧಿಸಿ, 'ತಂಗೀ ನೀನು ತಪ್ಪು ಭಾವಿಸಬೇಡ. ನಿನ್ನ ಹಿತಕ್ಕಾಗಿ ಹೇಳುತ್ತೇನೆ, ಕೇಳು. ಗಂಡಸರು ಮಕ್ಕಳಂತೆ. ವಯಸ್ಸಿನಲ್ಲಿ ದೊಡ್ಡವರಾದರೂ ಕೂಡ

ನಾವು ಅವರನ್ನೂ ಮಕ್ಕಳಂತೆ ಭಾವಿಸಿ ನಡಸಿಕೊಳ್ಳದಿದ್ದರೆ ಯತ್ನವಿಲ್ಲ. ಈಗ ಮಗು ಹಟಮಾಡುತ್ತದೆಯೆಂದು ಅದರ ದಾರಿಗೆ ಅದನ್ನು ಬಿಟ್ಟು ಬಿಡುವುದಕ್ಕಾಗುತ್ತದೆಯೇ? ಹಾಗೆಯೇ ದೊಡ್ಡವರ ಬಳಿಯಲ್ಲಿಯೂ! ಒಂದಲ್ಲದಿದ್ದರೆ ಇನ್ನೊಂದು ದಾರಿ. ಅತ್ತೆ ನಿಮ್ಮಿಬ್ಬರನ್ನೆ ಬಿಟ್ಟು ಹೋದದ್ದು ನಿನ್ನ ಸುಖ, ಸಂತೋಷಗಳ ಸಾಧನೆಯನ್ನು ವಿಸ್ತಾರ ಪಡಿಸುವುದಕ್ಕೇ ಹೊರತು ಮಗನ ಮೇಲಿನ ಸಿಟ್ಟಿನಿಂದಲ್ಲ. ನೀನು ಅಭಿಮಾನಕ್ಕೆ ಒಳಗಾಗಿ ಆ ಅವಕಾಶವನ್ನು ಸರಿಯಾಗಿ ಉಪಯೋಗಿಸಿ ಕೊಳ್ಳಲಿಲ್ಲ. ದೇವರು ಎಲ್ಲಾ ಭಾಗದಲ್ಲೂ ನಿನ್ನ ವಿಚಾರದಲ್ಲಿ ಮುಕ್ತ ಹಸ್ತನಾಗಿದ್ದಾನೆ. ನಡುವೆ ಇರುವ ಒಂದು ಸಣ್ಣ ಕುಂದನ್ನು ನಿವಾರಿ ಸುವ ಭಾರ ನಿನ್ನ ಪಾಲಿಗೆ ಬಂದಿದೆ. ಅದನ್ನು ಸರಿಮಾಡುವ ಸಾಧನ ವೆಲ್ಲಾ ನಿನ್ನಲ್ಲಿದೆ. ರಾಮು ದೇವರಂತಹ ಚಿನ್ನದ ಮನುಷ್ಯ. ಅವನ ಮನಸ್ಸು ಬೆಣ್ಣೆಯಂತಹುದು. ಎಲ್ಲಿ ಹೋದರೂ ಅದನ್ನು ಹದವಾಗಿ ಕರಿಗಿಸುವುದನ್ನು ಕಲಿಯಬೇಕು ಅಷ್ಟೇ? ನೀನು ಪ್ರಯತ್ನಪಟ್ಟಿದ್ದರೆ? ....................

ಗೌರಿಯ ತಾಳ್ಮೆ ಸಡಿಲವಾಯಿತು. ಬಹಳ ದಿನದಿಂದ ಮರೆ ಯಲ್ಲಿದ್ದ ಯಾವುದೋ ಭಾವ ದುಃಖ ರೋಷಗಳನ್ನು ಮೀರಿ ಹೊರಬಂದಿತು. 'ಆಹಾ! ಜನಗಳೆಷ್ಟು ನಿರ್ದಯರು? ತನ್ನ ಅಷ್ಟು ದಿವಸದ ಕಷ್ಟ ಸಹಿಸ್ಸುತೆಗೆ, ಮೌನವ್ರತಕ್ಕೆ ಎಂತಹ ಪುರಸ್ಕಾರ! ತಾನು ಅನುಭವಿಸಿದ ನೋವನ್ನು–ತಾಪವನ್ನು–ಹೃದಯದ ಹೊಯ್ದಾಟ ವನ್ನು ತಿಳಿಯುವರಾರು? ನನ್ನ ಸಂಸಾರದ ವಿಚಾರದಲ್ಲಿ ನನಗಿಂತಲೂ ಇತರರಿಗೆ ಹೆಚ್ಚು ಆಸಕ್ತಿಯಿರುವಂತಿದೆ. ಕೊನೆಗೂ ನನ್ನದೇ ತಪ್ಪು? ಅಲ್ಲವೇ?'

ಗೌರಿ ಏನೂ ಹೇಳಬಾರದೆಂದು ಪ್ರಯತ್ನಪಟ್ಟರೂ ಅವಳಿಂದ ಸುಮ್ಮನಿರುವುದು ಸಾಧ್ಯವಾಗಲಿಲ್ಲ.

'ಹೌದಮ್ಮ, ನನ್ನದೇ ತಪ್ಪು. ಅದಕ್ಕಾಗಿ ಯಾರೂ ತೊಂದರೆ ಪಡಬೇಕಾಗಿಲ್ಲ. ಅದಕ್ಕೆ ಶಿಕ್ಷೆಯನ್ನು ಯಥೇಷ್ಟವಾಗಿ ನಾನೇ ಅನುಭವಿಸುತ್ತಿದೇನಲ್ಲ!'

ಗೌರಿ ಈ ಮಾತನ್ನು ಬಹಳ ನೊಂದ ದನಿಯಲ್ಲಿ ನುಡಿದಳು. ಲಲಿತ ತಾನು ಹೇಳಿದುದು ಹೆಚ್ಚಾಯಿತೇನೋ ಎಂದುಕೊಂಡಳು. ಆದರೆ ಅವಳು ಹೇಳಿದುದು ಯಾರಿಗಾಗಿ? ಫಲವನ್ನುಣ್ಣುವವಳು ಗೌರಿ ಯೊಬ್ಬಳಲ್ಲ. ಅದರಲ್ಲಿ ರಾಮುವಿನ ಪಾಲೂ ಸೇರಿದೆ. ಅವನಿಗಾಗಿ— ಅವನ ಸುಖಕ್ಕಾಗಿ ಎರಡು ನಿಷ್ಠುರದ ಮಾತಾಡಿ ಅದರಿಂದ ಮತ್ತೊಬ್ಬರ ಮನ ನೊಂದು, ತಾನು ಕೆಟ್ಟವಳಾದರೆ ತಾನೇ ಏನು ನಷ್ಟ?

* * * *

ಮಳೆ ಕಡಮೆಯಾಗುತ್ತ ಬಂದಿತು. ಲಲಿತ ಹೊರಟಳು. ಇನ್ನು ಅಲ್ಲಿರುವುದು ಸರಿಯಾಗಿ ತೋರಲಿಲ್ಲ. ಯಾವ ಘಳಿಗೆಯಲ್ಲಿ ರಾಮು ಮನೆಗೆ ಬಂದುಬಿಡುವನೋ ಎಂಬ ಭಯ ಬೇರೆ! ಗೌರಿಯಿಂದ ಅಪ್ಪಣೆ ಪಡೆದು ಕುಂಕುಮ ಹಚ್ಚಿಕೊಂಡು ಹೊರಟಳು. ಅವಳಿಗೆ ದಾರಿಯಮೇಲೆ ಗಮನವಿರಲಿಲ್ಲ. ಹಳೆಯದಾಗಿದ್ದ ನೆನಪುಗಳು ಹೊಡೆದೆಬ್ಬಿಸಿದಂತೆ ಹೃದಯದಲ್ಲಿ ತಾಂಡವನೃತ್ಯವನ್ನಾರಂಭಿಸಿದ್ದುವು. 'ತನಗಾಗಿ ತನ್ನದೊಂದು ನೆನಪಾಗಿ—ರಾಮು, ಸುಂದರಿಯಾದ ಮಡದಿಯನ್ನೂ, ಸಂಸಾರ ಸುಖವನ್ನೂ ದೂರವಾಗಿಟ್ಟದ್ದಾನೆ! ಎಂಬ ಯೋಚನೆ ಮನದಲ್ಲಿ ಆಗಾಗ್ಗೆ ಮಿಂಚುತ್ತಿತ್ತು. ಚಿಂತೆಯಿಂದ ಆವೃತ ವಾಗಿದ್ದಾಗಲೂ ಅದೊಂದು ಯೋಚನೆಯಿಂದ ಅವಳೆಷ್ಟು ಸುಖಿ? ಅದು ನ್ಯಾಯವಲ್ಲವೆಂದು ಅವಳರಿತಿದ್ದರೂ, ಆ ಭಾವವನ್ನು ದೂರ ಮಾಡಲಾಗಲಿಲ್ಲ.

'ಆ ಪ್ರೇಮವನ್ನು ಚಿರಕಾಲ ಅನುಭವಿಸುವ ಭಾಗ್ಯ ನನಗಿರಲಿಲ್ಲ. ಅದಕ್ಕೆ ಅಧಿಕಾರಿಣಿಯಾದವಳು? ಅವಳೂ ನನ್ನಂತೆ ದುಃಖಿಯೇ! ಇದು ಯಾರ ತಪ್ಪು? ...................'

ಅವಳಿಗೆ ಎಲ್ಲಿಗೆ ಹೋಗುತ್ತಿದೇನೆಂಬ ಅರಿವೇ ಇಲ್ಲ. ಇನ್ನೇನು ಎದುರಿಗೆ ಬರುತ್ತಿದ್ದವರಿಗೆ ಢಿಕ್ಕಿಯಾಗಬೇಕು, ಅಷ್ಟರಲ್ಲಿ ಒಬ್ಬರು ತಟಕ್ಕನೆ ಪಕ್ಕಕ್ಕೆ ಸರಿದುನಿಂತು ಬೀದಿಯ ದೀಪದಲ್ಲಿ ಗುರುತಿಸಿದಾಗ ಸಿಡಿಲು ಬಡಿದವನಂತೆ ಚಕಿತರಾಗಿ,

'ಲಲಿತ!'....................!' ಎಂದರು.

ಲಲಿತ ತಲೆ ಎತ್ತಿ ನೋಡಿದಳು, 'ರಾಮು!'

ರಾಮು ಅವಾಕ್ಕಾದನು! ಇದೇನು ಅಘಟಿತಘಟನೆ!

ಪ್ರಪಂಚದ ಗಲಾಟೆಗಳಿಂದ ದೂರವಾಗಿದ್ದ ಹಳ್ಳಿ. ಅಲ್ಲಿಯ ನಿರಾತಂಕ ಜೀವನ—ಮಾವಿನ ತೋಪನ್ನು ಬಳಸಿ ನಿದಾನವಾಗಿ ಹರಿಯುತ್ತಿದ್ದ ನದಿ! ಸುತ್ತಲೂ ಹಸುರುಟ್ಟ ಭೂದೇವಿ! ಕಣ್ಣು ಕಾಣಿಸುವವರಿಗೂ ಅಲ್ಲಲ್ಲಿ ಸಣ್ಣ ಚಿಟ್ಟ ಗುಡ್ಡಗಳು—ಮೇಲೆ ನೀಲ ಗಗನ! ಅದರಡಿ ಕಷ್ಟವೆಂದರೇನೆಂಬುದನ್ನರಿಯದೆ ಒಬ್ಬರ ಕೈಯನ್ನೊ ಬ್ಬರು ಹಿಡಿದುಕೊಂಡು ತಿರುಗುತ್ತ, ಹಕ್ಕಿಗಳನ್ನು ಅನುಕರಿಸಿ ತಾವೂ ಕೂಗುತ್ತ ಆಟವಾಡುತ್ತ ಬಾಲ್ಯವನ್ನು ಕಳೆದುದು ಏನು ಸುಖದ ಕಾಲವದು! ನದಿಯ ಮರಳಲ್ಲಿ ಕಪ್ಪೆಗೂಡುಮಾಡಿ ಮನೆಯನ್ನು ಕಟ್ಟಿ ಒಡೆದುಹಾಕುತ್ತಿದ್ದ ದಿನಗಳು ಎಷ್ಟುಬೇಗ ಕಳೆದುಹೋದವು? ಜೀವನದಲ್ಲಿ ಮತ್ತಾವ ಆಶೆಯೂ ತಲೆದೋರುವುದಕ್ಕೆ ಮೊದಲು–ಒಬ್ಬರ ನ್ನೊಬ್ಬರು ಪಡೆಯಬೇಕೆಂಬ ಆಸೆಯನ್ನು ಆ ಎಳೆಯ ಮನದಲ್ಲಿ ನೆಟ್ಟು ಅದು ಬೆಳೆಯಲು ಅವಕಾಶ ಕೊಟ್ಟು, ಅದು ಚಿಗುರಿ, ಫಲವಾಗುವ ಕಾಲದಲ್ಲಿ, ಏನೋ ಒಂದು ಕ್ಷುಲ್ಲಕ ಕಾರಣಕ್ಕಾಗಿ ಹಿರಿಯರು ಜಗಳ ವಾಡಿ, ಅದರ ಫಲವಾಗಿ ಆ ಮಕ್ಕಳು ಬಾಲ್ಯದಿಂದಲೂ ಕಟ್ಟಿಕೊಂಡು ಬಂದಿದ್ದ ಬಾಳಿನ ಗೋಪುರ ಒಂದು ಕ್ಷಣದಲ್ಲಿ ನೆಲಸಮನಾಗಿ ಹೋದಾಗ, ಕೊನೆಯದಾಗಿ ಬೀಳ್ಕೊಳ್ಳಲು ಹಿರಿಯರು ಕಾಣದಂತೆ ನದಿಯ ತೀರದಲ್ಲಿ, ಕಣ್ಣೀರನ್ನು ನದಿಯ ನೀರಿನೊಂದಿಗೆ ಬೆರಸಿ ಒಬ್ಬರ ನ್ನೊಬ್ಬರು ಅಗಲಿದಾಗಿನ ದೃಶ್ಯ ರಾಮುವಿನ ಕಣ್ಣ ಮುಂದೆ ಈಗಲೂ ಕಟ್ಟಿದಂತಿತ್ತು. ಆಗಿನಿಂದ ಅವಳನ್ನು ನೋಡಿರಲಿಲ್ಲ. ಆ ಊರಿನ ಕಡೆ ಹೋಗಿಯೇ ಇರಲಿಲ್ಲ. ಕೊನೆಗೆ ಅಲ್ಲಿನ ಯೋಗಕ್ಷೇಮವೂ ಸರಿ ಯಾಗಿ ತಿಳಿಯುತ್ತಿರಲಿಲ್ಲ. ಎಂಟು ವರ್ಷದ ಮೇಲೆ ನಡು ರಸ್ತೆಯಲ್ಲಿ— ಲಲಿತ ಈ ಪ್ರಾಂತ ಬರುವಳೆಂಬ ಯೋಚನೆ ಸಹ ಇಲ್ಲದಿರು ವಾಗ–ಅವಳನ್ನು ಅಕಸ್ಮಾತ್ತಾಗಿ ನೋಡಿ ಬೆರಗಾದದ್ದೇನೂ ಹೆಚ್ಚಲ್ಲ.

ಲಲಿತ ಆಗಲೆ ಒಂದು ರೀತಿಯಲ್ಲಿ ಅನುಭವವನ್ನು ಪಡೆದಿದ್ದಳಾಗಿ ಅವಳು ಬೆಚ್ಚಿಬೀಳಲಿಲ್ಲ. ತಾವು ನಿಂತಿದ್ದ ಜಾಗದ ಅರಿವುಂಟಾಗಿ ಮಾತು ಬೆಳಸದೆ ಮೆಲ್ಲನೆ ಮುಂದೆ ನಡೆದಳು. ರಾಮು ವಿಚಾರ ಸರಣಿಯಲ್ಲಿಯೇ ಮುಳುಗಿದವನಾಗಿ–ದಾರದಿಂದ ಕಟ್ಟಿದ ಬೊಂಬೆ ಯಂತೆ ಅವಳ ಹಿಂದೆಯೇ ನಡೆದನು.

ಇಬ್ಬರೂ ಕೆಲ ದೂರ ಕತ್ತಲೆಯಲ್ಲಿ ನಡೆದು, ಐದಾರು ಬೀದಿ ಗಳನ್ನು ದಾಟ ಒಂದು ಸಣ್ಣಬೀದಿಗೆ ಬಂದರು. ಲಲಿತ ಅದರ ನಡುವೆ ಇದ್ದ ಒಂದು ಸಣ್ಣಮನೆಯನ್ನು ಪ್ರವೇಶಿಸಿದಳು. ಮನೆ ಚಿಕ್ಕದಾಗಿ ಲಕ್ಷಣವಾಗಿತ್ತು. ಒಳಗಡೆ ಹಾಲಿನಲ್ಲಿ ಸಾಧಾರಣ ತರದ ಒಂದು ಮೇಜೂ, ಎರಡು ಮೂರು ಕುರ್ಚಿಗಳೂ ಇದ್ದವು.

ರಾಮು ಬಂದವನೆ ಒಂದು ಕುರ್ಚಿಯಮೇಲೆ ದೊಪ್ಪನೆ ಕುಳಿತನು. ಲಲಿತ ಕುರ್ಚಿಯ ಪಕ್ಕದಲ್ಲಿದ್ದ ಮೇಜನ್ನು ಒರಗಿಕೊಂಡು ನಿಂತಳು. ಇಬ್ಬರೂ ಬಹಳಹೊತ್ತು ಮಾತನಾಡಲಿಲ್ಲ. ಅನೇಕ ದಿನಗಳು ಮರಳು ಗಾಡಿನಲ್ಲಿ ಪ್ರಯಾಣ ಮಾಡುತ್ತಾ ಇರುವಾಗ, ಅಕಸ್ಮಾತ್ ನೀರಿನ ಚಿಲುಮೆಯೊಂದು ಕಣ್ಣಿಗೆ ಬಿದ್ದರೆ, ಅದನ್ನು ನೋಡುವ ದಾರಿಗನಂತೆ, ರಾಮು ಲಲಿತಳನ್ನು ಎವೆಯಿಕ್ಕದೆ ನೋಡುತ್ತಿದ್ದನು. ಲಲಿತ ಆ ನೋಟದ ಭಾರವನ್ನು ತಾಳಲಾರದೆ ದೃಷ್ಟಿಯನ್ನು ತಗ್ಗಿಸಿ ನೆಲವನ್ನು ನೋಡುತ್ತಿದ್ದಳು. ರಾಮುವೇ ಮೊದಲು ಮೌನವನ್ನು ಭೇದಿಸಿ,

'ಲಲಿತ ಇದೇನು ನೀನು ಇಲ್ಲಿ? ಇದು ಯಾರ ಮನೆ? ಯಾರು ಯಾರು ಇದ್ದೀರಿ? ಇಲ್ಲಿಗೆ ಬಂದ ಕಾರಣವೇನು? ಎಷ್ಟು ದಿವಸ ವಾಯಿತು?' ಎಂದು ಕೇಳಿದನು.

ಲಲಿತ ಅವನ ಪ್ರಶ್ನಾವಳಿ ಮುಗಿಯುವವರೆಗೂ ಸುಮ್ಮನಿದ್ದ ವಳು, 'ನಾವು ಇಲ್ಲಿಗೆ ಬಂದು ಹದಿನೈದು ದಿವಸವಾಯಿತು. ಈ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ಸದ್ಯಕ್ಕೆ ಮನೆಯಲ್ಲಿ ಯಾರೂ ಇಲ್ಲ.......ರಾಮು ನೀನೇಕೆ ಹೀಗಾಗಿದ್ದಿ? ಮೈ ಸರಿಯಾಗಿ ಲ್ಲವೆ? ಗುರುತು ಹಿಡಿಯುವುದೇ ಕಷ್ಟವಾಗುವಂತೆ ಇದೀಯಲ್ಲ?' ಎಂದು ಹೇಳುತ್ತ ಹೇಳುತ್ತ ಕಣ್ಣೀರು ತುಂಬಿದಳು.

‘ನನಗೇನಾಗಿದೆ? ಇದ್ದಹಾಗೆಯೇ ಇದೀನಿ. ಅದಿರಲಿ, ಅದೇನು ನೀನು ಈಗ ಇಲ್ಲಿಗೆ ಬಂದಿರುವುದು?’

‘ಮಗುವಿಗೆ ಖಾಯಿಲೆಯಾಗಿತ್ತು. ಹೊಟ್ಟೆಯಲ್ಲಿ ಗೆಡ್ಡೆಯಿದೆಯಂತೆ. ಔಷಧಿ ಕೊಡಿಸುವುದಕ್ಕಾಗಿ ಒಂದು ತಿಂಗಳು ರಜ ತೆಗೆದುಕೊಂಡು ಬಂದಿದೇವೆ.’

ರಾಮು ಬೆಚ್ಚಿ ‘ಯಾವ ಮಗುವಿಗೆ?’ ಎಂದನು.

ಅವನ ನೋಟದಲ್ಲಡಗಿದ್ದ ತಿರಸ್ಕಾರ ಅವಳೆದೆಯನ್ನು ಚುಚ್ಚಿತು. ಅವಳು ಮಾತಾಡಬೇಕೆಂದಿರುವಷ್ಟರಲ್ಲಿ ಹೊರಗೆ ಮಗುವನ್ನು ಆಡಿಸುತ್ತಿದ್ದ ಹುಡುಗನು ಒಳಗೆ ಬಂದು, ‘ಅವ್ವ, ಮಗ ಅಳ್ತದೆ,’ ಎಂದನು.

ಲಲಿತ ಮಗುವನ್ನೆತ್ತಿಕೊಂಡು ಸಮಾಧಾನ ಮಾಡಿ ಬೀರುವಿನಿಂದ ಒಂದು ಕಿತ್ತಳೆಹಣ್ಣು ತೆಗೆದು ಅದರ ಕೈಲಿ ಕೊಟ್ಟು ಆಳನ್ನು ಇನ್ನು ಸ್ವಲ್ಪ ಹೊರಗೆ ತಿರುಗಾಡಿಸಿಕೊಂಡು ಬರುವಂತೆ ಹೇಳಿ ಕಳುಹಿಸಿದಳು.

ಆ ಅವಕಾಶದಲ್ಲಿ ರಾಮುವಿನ ಕಣ್ಣು ಮುಂದಿದ್ದ ಪರ ಜಾರಿತು. ಈ ಎಂಟು ವರ್ಷಗಳಲ್ಲಿ ಒಂದು ಸಲವಾದರೂ ಅವನಿಗೆ ಲಲಿತ ಪರಕೀಯಳೆಂಬ ಭಾವನೆ ತೋರಿರಲಿಲ್ಲ. ಅವಳು ಮದುವೆಯಾಗಿ ಗಂಡನೊಡನೆ ಬೇರೆ ಊರಿನಲ್ಲಿ ಇರುತ್ತಿದ್ದ ವಿಷಯವನ್ನು ಕೇಳಿ ತಿಳಿದಿದ್ದರೂ ಅದನ್ನು ಅವನ ಚೇತನ ಒಪ್ಪುತ್ತಿರಲ್ಲ. ಆದರೆ ಈಗ ಕಣ್ಣೆದುರಿಗೆ ಅವಳನ್ನು ಮಗುವಿನೊಡನೆ ನೋಡಿದಾಗ ಅವನು ಬೇಡವೆಂದು ಬಿಟ್ಟಿದ್ದ ಅರಿವು ಬಲವಂತದಿಂದ ಅವನ ಎದೆಯನ್ನು ಹೊಕ್ಕು ಇರಿಯುತ್ತಿದ್ದಿತು. ಲಲಿತ ಮಗುವನ್ನು ಹೊರಗೆ ಕಳುಹಿಸಿ, ತಾನು ಬಂದು, ಅವನ ಬಳಿ ನಿಂತುಕೊಂಡಳು. ಮಾತು ಯಾರಿಗೂ ಬೇಕಾಗಿರಲಿಲ್ಲ. ಆದರೆ ಅಂತಹ ಸಮಯದಲ್ಲಿ ಸುಮ್ಮನಿರುವುದೇನೂ ಸುಲಭವಲ್ಲ. ಮತ್ತೇನು ಹೇಳಲೂ ತೋರದೆ,

‘ರಾಮು, ಅತ್ತೆ ಎಲ್ಲಿದಾರೆ?’ ಎಂದು ಕೇಳಿದಳು.

‘ಊರಿನಲ್ಲೇ ಇದಾರೆ. ನಿನ್ನನ್ನು ಇಷ್ಟುಕಾಲದ ಮೇಲೆ, ಇಲ್ಲಿ ಹೀಗೆ ನೋಡುತ್ತೇನೆಂದು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ನೀನು ಆ ಕತ್ತಲಲ್ಲಿ ಎಲ್ಲಿಗೆ ಹೊರಟಿದ್ದೆ ಲಲಿತ?’

‘ನಮ್ಮ ಊರಿನವರೊಬ್ಬರು ಇಲ್ಲಿದಾರೆ. ಮೊನ್ನೆ ಅವರು ಆಸ್ಪತ್ರೆಯಲ್ಲಿ ಸಿಕ್ಕಿ ಬಹಳವಾಗಿ ಬಲವಂತ ಮಾಡಿದರು. ಅವರ ಮನೆಗೆ ಹೋಗಿದ್ದೆ. ಮಳೆ ಬಂದದ್ದರಿಂದ ಬರುವುದು ಹೊತ್ತಾಯಿತು.’

‘ನಮ್ಮ ಮನೆಗೆ ಮಾತ್ರ ಬರಲಿಲ್ಲ. ಒಂದು ಸಲವಾದರೂ ಈ ಹಳೆಯ ಗೆಳೆಯನ ನೆನಪಾಗಲಿಲ್ಲವೆ? ಇಷ್ಟಕ್ಕೂ ಹೇಗೆ ಆಗುತ್ತೆ?’

ಆ ನಿಷ್ಠುರದ ನುಡಿಯಿಂದ ನೊಂದವಳಾಗಿ ಲಲಿತ, ‘ರಾಮು ನೀನೂ ಹೀಗೆ ಹೇಳುತ್ತೀಯ? ಇಲ್ಲ, ಅದು ಅಂತರ್ಯದಿಂದ ಆಡಿದ ಮಾತಲ್ಲ. ನಿನ್ನ ನೆನಪಾಯಿತೆ ಇಲ್ಲವೆ? ಎಂಬುದನ್ನು ನನಗಿಂತಲೂ ಹೆಚ್ಚಾಗಿ ನೀನು ಬಲ್ಲೆ....ರಾಮು, ಇಲ್ಲಿಗೆ ಬಂದ ದಿವಸದಿಂದ ಹೊರಗೆ ಹೋದಾಗ ದಾರಿಯಲ್ಲಿ ಕಾಣುವ ಮನೆಗಳೆಲ್ಲವನ್ನೂ ನಿನ್ನ ಮನೆಯೆಂದೂ ಓಡಾಡುವ ಪ್ರತಿಯೊಬ್ಬರೂ ನೀನೇ ಎಂದೂ ಭಾವಿಸಿಕೊಳ್ಳುತ್ತಿದ್ದೆ. ಭಕ್ತರ ಕಣ್ಣಿಗೆ ಎಲ್ಲೆಲ್ಲೂ ದೇವರೇ ಕಾಣುವಂತೆ ಇಷ್ಟು ದೊಡ್ಡ ಪಟ್ಟಣದಲ್ಲಿ ನಿನ್ನ ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ಆದರೂ ಪ್ರತ್ಯಕ್ಷವಾಗಿ ನಿನ್ನನ್ನು ನೋಡಲು ಧೈರ್ಯವಿಲ್ಲದವಳಾಗಿದ್ದೆ.’

‘ಹೋಗಲಿ, ಬಿಡಮ್ಮ–ನೀನು ಸೌಖ್ಯವಾಗಿದೀಯ?’

‘ಸೌಖ್ಯವೆಂದರೇನೋ ತಿಳಿಯದು. ಎಲ್ಲಿದೆ ಸುಖ? ನಾವಿರುವ ಮನೆಯಲ್ಲೆ? ಉಣ್ಣುವ ಊಟದಲ್ಲೆ? ಉಡುವ ಬಟ್ಟೆಯಲ್ಲೆ?.... ಸೌಖ್ಯವೆಂದರೇನೋ ನನಗೆ ತಿಳಿಯದು. ನಾವು ಕೋರಿದಂತೆ ಜೀವನ ನಡೆದುಬರುವುದಿಲ್ಲ. ಅದು ಬಂದಂತೆ, ನಾವು ಸ್ವೀಕರಿಸಬೇಕೆಂಬುದನ್ನು ತಿಳಿದಿದೇನೆ ಅಷ್ಟೆ.’

ರಾಮು ತಿರಸ್ಕಾರದಿಂದ ಸ್ವಲ್ಪ ನಕ್ಕು ‘ಲಲಿತ ನೀನು ಬಹಳ ಜಾಣೆ. ನಾನು ಅದನ್ನು ಬಲ್ಲೆ. ಆದರೆ ನೀನು ಬಹಳ ಬದಲಾಯಿಸಿದ್ದೀ. ಅದು ನನಗೆ ಗೊತ್ತಿರಲಿಲ್ಲ.’

ಅವನ ಮಾತು ಅವಳ ಅಭಿಮಾನವನ್ನು ಕೆರಳಿಸಿತು. ಅವಳು ಅದೇ ಧ್ವನಿಯಲ್ಲಿ ‘ಹೌದು, ರಾಮು. ನಿನ್ನ ಮಾತು ನಿಜ. ನಾನು ಬದಲಾಯಿಸಿದೇನೆ. ಇಲ್ಲದಿದ್ದರೆ ಯತ್ನವಿಲ್ಲ. ನಾವು ಬೇಡವೆಂದರೂ, ಪ್ರಪಂಚ ಕಿವಿಹಿಂಡಿ ಬುದ್ಧಿ ಕಲಿಸುತ್ತದೆ. ಅದರಲ್ಲಿ ಜಾಣತನವೇನೂ ಇಲ್ಲ. ಜಾಣತನವೆಲ್ಲ ನಾಗರಿಕರಾದ ನಿಮ್ಮ ಪಾಲಿಗೆ ಬಂದದ್ದು. ನೀವು ಗಂಡಸರು, ಸ್ವತಂತ್ರರು! ಹೇಗೆ ಬೇಕಾದರೂ ಮಾಡಬಹುದು. ಆದರೆ ನಮಗಾ ಅಧಿಕಾರವಿಲ್ಲ. ನಾನು ಗೃಹಿಣಿ. ಸರ್ವ ಪ್ರಕಾರದಿಂದಲೂ ಒಂದು ಸಂಸಾರಕ್ಕೆ ಬಂಧಿತಳಾಗಿದ್ದೇನೆ. ನನಗೆ ನನ್ನ ಸ್ವಂತ ಸುಖ ದುಃಖಗಳಿಗೆ ಮೀರಿದ, ಕರ್ತವ್ಯವೊಂದಿದೆ. ಎಲ್ಲವನ್ನೂ ಬಲ್ಲ ನೀನು ಅದನ್ನು ತಿಳಿಯಲಾರದೆ ಹೋದೆ! ರಾಮು, ನೀನು ನನಗೆ ಕೇಳಿದ ಪ್ರಶ್ನೆಯನ್ನು ನಾನು ಕೇಳಲೆ? ನೀನು ಸುಖವಾಗಿದೀಯಾ?’

ರಾಮುವಿನ ಮಾತು ಬಾಯಿಯಲ್ಲೇ ನಿಂತಿತು. ಬಾಗಿಲ ಬಳಿ ಸದ್ದಾಯಿತು. ಲಲಿತ ಕಣ್ಣೊರಸಿಕೊಂಡವಳೇ ನಗುಮುಖದಿಂದ ಮಿಂಚಿನ ವೇಗದಲ್ಲಿ ಬಾಗಿಲ ಬಳಿಗೆ ಹಾರಿದಳು.

‘ಲಲ್ಲೂ ಪಿಕ್ಚರ್ ಎಷ್ಟು ಚೆನ್ನಾಗಿತ್ತು ಅಂತೀ, ನಳನ ಪಾರ್ಟ್ ಅಂತೂ, ಫಸ್ಟ್‌ಕ್ಲಾಸ್. ನೀನು ನೋಡಬೇಕು........!’

ಲಲಿತ ಮೆಲ್ಲಗೆ ತನ್ನ ಭುಜದಮೇಲೆ ಹಾಕಿದ್ದ ಕೈಯನ್ನು ತೆಗೆದು, ಕಿವಿಯಲ್ಲಿ ‘ನಮ್ಮ ಸೋದರತ್ತೆಯ ಮಗ ಬಂದಿದಾರೆ. ನಿಮಗಾಗಿ ಕಾದಿದಾರೆ,’ ಎಂದು ಹೇಳಿ ಸ್ವಲ್ಪ ಓರೆಯಾದಳು.

‘ಬಹಳ ಸಂತೋಷ’ ‘ನಮಸ್ಕಾರ ಸಾರ್, ನಿಮ್ಮ ವಿಚಾರ ಕೇಳಿದ್ದೆ. ಆದರೆ ಪರಸ್ಪರ ಭೇಟಿ ಆಗಿರಲಿಲ್ಲ. ನಮ್ಮವರಾಗಿ ನೀವು ದೊಡ್ಡ ಪದವಿಯಲ್ಲಿದ್ದು, ಒಳ್ಳೆಯ ಹೆಸರುವಾಸಿಯಾಗಿ ಇರುವುದೇ ನಮಗೆಲ್ಲ ಎಷ್ಟೋ ಹೆಮ್ಮೆ.......’

ರಾಮು ಪ್ರತಿ ವಂದನೆಯನ್ನು ಮಾಡಿ, ‘ಎಲ್ಲಾ ತಮ್ಮ ವಿಶ್ವಾಸ,’ ಎಂದು ಏನೋ ಎರಡು ಮಾತು ಗೊಣಗಿ ಹೊರಟನು.

‘ಇದೇನು ಎದ್ದೇಬಿಟ್ಟರಲ್ಲ.’

‘ಹೊತ್ತಾಯಿತು. ಇನ್ನೊಂದುಸಲ ಬರುತ್ತೇನೆ. ನಮಸ್ಕಾರ–ಬರುತ್ತೇನಮ್ಮ ಲಲಿತ.’

* * * *

ರಾಮು ಹೊರಟವನು ನೆಟ್ಟಗೆ ಮನೆಗೆ ಹೋಗಲಿಲ್ಲ. ಅವನ ಮನಸ್ಸು ಕದಡಿದಂತಾಗಿತ್ತು. ಕಾಲು ಎಳೆದ ಕಡೆ ಹೋಗುತ್ತ ಬೇಸರದಿಂದ ಸರ್ಕಲ್ಲಿನ ಸಮೀಪದಲ್ಲಿ ಹಾಕಿದ್ದ ಒಂದು ಕಲ್ಲು ಬೆಂಚಿನಮೇಲೆ ಕುಳಿತುಕೊಂಡನು. ಆ ವೇಳೆಗೆ ಬೀದಿಯಲ್ಲಿ ಜನರ ಗಲಾಟೆ ಕಡಿಮೆಯಾಗಿ, ಶಾಂತಿಯ ಸಾನ್ನಿಧ್ಯ ಸಮೀಪಿಸುತ್ತಿತ್ತು. ಮೇಘರಹಿತವಾದ ಗಗನದಲ್ಲಿ ಚಂದ್ರನು ಮನಬಂದಂತೆ ವಿಹರಿಸುತ್ತಿದ್ದನು.

ರಾತ್ರಿಯ ಮೌನದೊಂದಿಗೆ ಹೃದಯದ ಮೌನವನ್ನು ಬೆರಸಿ, ನಿಶ್ಚಲನಾಗಿ ಕುಳಿತು, ಲಲಿತನು ತೋರಿದ ಹೊಸ ದೀವಿಗೆಯ ಬೆಳಕಿನಲ್ಲಿ ತನ್ನ ಹಿಂದಿನ ಬಾಳನ್ನು ನಿರುಕಿಸುತ್ತಿದ್ದನು. ನೆನಪು ಸ್ಫುಟವಾಗುತ್ತ ಬಂದಂತೆ ಮನಸ್ಸಿಗೆ ಬೇಸರ ಹೆಚ್ಚಾಯಿತು. ಕಳೆದುಹೋದ ಕಾಲ ಕೈತಟ್ಟಿ, ವಿಕಟ ಹಾಸ್ಯ ಮಾಡುತ್ತ ಅವನನ್ನು ಅಣಕಿಸುತ್ತಿರುವಂತೆ ಭಾಸವಾಯಿತು.

ಬರಬರುತ್ತ ಮನಸ್ಸಿನ ಮುಂದಿನ ಪಟದಿಂದ ಒಂದೊಂದಾಗಿ ಎಲ್ಲ ಚಿತ್ರಗಳೂ ಅಳಿಸುತ್ತ ಬಂದವು. ಕೊನೆಗೆ ನಿಂತದ್ದು ಗೌರಿಯ ಶಾಂತ ಮೂರ್ತಿಯೊಂದೇ! ಅದನ್ನು ನೋಡಿದೊಡನೆಯೇ ರಾಮು ಲಜ್ಜಿತನಾಗಿ ಅಪರಾಧಿಯಂತೆ ತಲೆ ತಗ್ಗಿಸಿದನು. ಅವಳೊಡನೆ ಕಳೆದ ಐದು ವರ್ಷಗಳೂ ಅವನ ಸ್ಮರಣೆಯಲ್ಲಿ ಮಿಂಚಿದವು. ಆ ದೀರ್ಘ ಕಾಲವೆಲ್ಲವನ್ನೂ ತನ್ನಿಂದೊಂದು ಒಳ್ಳೆಯ ಮಾತಿಗಾಗಿ–ಸ್ನೇಹಕಟಾಕ್ಷಕ್ಕಾಗಿ ಬಗೆಬಗೆಯ ಪ್ರಯತ್ನಮಾಡುತ್ತ ಮೌನತಪಸ್ಸಿನಲ್ಲಿ ಕಳೆದ ಹುಡುಗಿಯನ್ನು ನೆನೆದು ಅವನ ಕಣ್ಣಿನಲ್ಲಿ ನೀರು ತುಂಬಿತು. ‘ಗೌರಿ ಕ್ಷಮಿಸುವಳೆ? ಒಂದುಸಲ ನನ್ನ ವಿಶ್ವಾಸಕ್ಕಾಗಿ ಅವಳು ಯಾಚಿಸಿದಾಗ ನಾನು ಈಗಿರುವಂತೆಯೇ ಇರಲಿ ಎಂದಿದ್ದೆ. ಈಗ ಅವಳ ಸರದಿಯಾದರೆ?’

ರಾಮು ಹೊಡೆದೆಬ್ಬಿಸಿದವನಂತೆ ತಟಕ್ಕನೆ ಎದ್ದನು. ಗಡಿಯಾರದ ಮುಳ್ಳು ಹನ್ನೊಂದನ್ನು ಸಮೀಪಿಸುತ್ತಿತ್ತು. ‘ನಾನೆಂತಹ ಹುಚ್ಚ! ಗೌರಿ ಮನೆಯಲ್ಲಿ ಎಷ್ಟು ಕಾತರಳಾಗಿರಬಹುದು?’ ಎಂದುಕೊಂಡು

ಬೇಗಬೇಗ ಮನೆಯಕಡೆ ಹೊರಟ. ಮನೆ ಹತ್ತಿರವಾದಂತೆ ಅವನ ಎದೆಯ ಬಡಿತ ಜೋರಾಗಿ ಕಿವಿಗೆ ಕೇಳಿಸುವಂತಾಯಿತು. ಕಾರಣವಿಲ್ಲದೆ ಮನಸ್ಸಿಗೇಕೆ ಇಷ್ಟು ಗಾಬರಿ? ಶುಭವನ್ನು ಕೋರುವ ಸಮಯದಲ್ಲಿ ಈ ಕಾತುರತೆ ಏಕೆ?

ರಾಮು ನಡುಗುವ ಕೈಗಳಿಂದ ಆವರಣದ ಬಾಗಿಲನ್ನು ತೆಗೆದು ಒಳಹೊಕ್ಕು ಮನೆಯ ಮೆಟ್ಟಲುಗಳನ್ನು ಹತ್ತಿದ್ದ. ಗೌರಿ ಬಾಗಿಲ ಬಳಿ ಕಾಯುತ್ತಿರಬಹುದೆಂಬ ಊಹೆ ಸುಳ್ಳಾಯಿತು. 'ಕುರ್ಚಿಯ ಮೇಲೆ ಕುಳಿತು ಹಾಗೇ ನಿದ್ರೆಮಾಡಿಬಿಟ್ಟಳೋ?'

ಆದರೆ ಅವನು ಜಿಜ್ಞಾಸೆ ಮಾಡುವ ಆವಶ್ಯಕತೆ ಉಳಿಯಲಿಲ್ಲ. ಅವನು ಒಳಬಾಗಿಲನ್ನು ಸೇರುತ್ತಲೇ ಭಯದಿಂದ ಕಂಗೆಟ್ಟಿದ್ದ ಆಳು ಓಡಿ ಬಂದು 'ಬುದ್ಧಿ....ಅಮ್ಮಾವ್ರು........

'ಏನೋ ಅದು?'

'ದೇವಸ್ಥಾನದಿಂದ ಬರುವಾಗ....ಆಚೆ ಕದದ ಬಳಿ....ಮೋಟಾರಿಗೆ ಸಿಕ್ಕಿ........

'ಎಲ್ಲೊ?'

'ಅದೇ ಗಾಡಿಯಲ್ಲಿ ಆಸ್ಪತ್ರೆಗೆ ತೆಗೆದುಕೊಂಡು ಹೋದರು. ನಾನು ಕ್ಲಬ್ಬಾವ್ ಓಡಿಬಂದೆ, ನೀವು ಇರಲಿಲ್ಲ. ಮನೆ ತಾವ್ ಯಾರೂ ಇರಲಿಲ್ಲ. ನನಗೆ ಏನು ಮಾಡಬೇಕೋ ಗೊತ್ತಾಗಲಿಲ್ಲ....'

ರಾಮುವಿಗೆ ಅವನಾಡಿದ ಮಾತು ಕೇಳಿಸಿದಂತೆ ಕಾಣಲಿಲ್ಲ. ವಿಧಿ ಎರಚಿದ ಮಂಜಿನ ನೀರು ಅವನ ಕೈಕಾಲುಗಳೆಲ್ಲವನ್ನೂ ಕಟ್ಟಿದಂತೆ ತೋರಿತು. ಒಂದು ಘಳಿಗೆಯ ಮೇಲೆ ಚದುರಿ ಹೋಗಿದ್ದ ಚೈತನ್ಯವನ್ನೆಲ್ಲಾ ಒಂದುಗೂಡಿಸಿ ದೀರ್ಘನಿಶ್ವಾಸವನ್ನು ಬಿಟ್ಟು ಆಸ್ಪತ್ರೆ ಕಡೆಗೆ ಅಭಿಮುಖನಾದನು.

ಅಲ್ಲಿಯೂ ನಿಶ್ಶಬ್ದ ಸಾಮ್ರಾಜ್ಯ ನೆಲಸಿತ್ತು. ಅಲ್ಲಿ ಡ್ಯೂಟಿ ನೋಲಿದ್ದ ಡಾಕ್ಟರೊಡನೆ ಸಣ್ಣಧ್ವನಿಯಲ್ಲಿ ಒಂದೆರಡು ಮಾತಾಡಿದ ಮೇಲೆ ಅವರು ಅವನನ್ನು ರೋಗಿಯನ್ನು ಮಲಗಿಸಿದ್ದ ಕೊಠಡಿಗೆ ಕರೆದುಕೊಂಡು ಹೋದರು.

ಗೌರಿಗೆ ಜ್ಞಾನವಿರಲಿಲ್ಲ. ಕಣ್ಣು ಮುಚ್ಚಿದ್ದಿತು. ತಲೆಯಮೇಲೂ ಮೈಮೇಲೂ ಪೆಟ್ಟುಗಳಾಗಿ ಅಲ್ಲೆಲ್ಲಾ ಬಟ್ಟೆಗಳನ್ನು ಕಟ್ಟಿದ್ದರು. ಶುಭ್ರ ವಸ್ತ್ರಧಾರಿಣಿಯಾದ ದಾದಿ ಅವಳ ಶಿಷ್ರೂಷೆಯಲ್ಲಿ ನಿರತಳಾಗಿದ್ದಳು.

ಡಾಕ್ಟರು ನಾಡಿಯನ್ನು ನಿಧಾನವಾಗಿ ನೋಡಿ, ನರ್ಸಿಗೆ ಹೇಳಬೇಕಾದ ಒಂದೆರಡು ಮಾತು ಹೇಳಿ, ಪ್ರಶ್ನಾರ್ಥಕವಾಗಿ ತಮ್ಮ ಕಡೆಗೆ ನೋಡುತ್ತಿದ್ದ ರಾಮುವಿಗೆ ನೋಟದಿಂದಲೇ ನಿರಾಶೆಯನ್ನು ಸೂಚಿಸಿ ಹೊರಟು ಹೋದರು.

ರಾಮು ಹಾಸಿಗೆಯ ಬಳಿ ಬಂದು, ಅದರ ಪಕ್ಕದಲ್ಲಿ ಕುರ್ಚಿಯನ್ನು ಹಾಕಿಕೊಂಡು ಕುಳಿತನು. ಹೊತ್ತು ಓಡುತ್ತಿತ್ತು. ದಾದಿ ಬಿಡುವಿಲ್ಲದೆ ತನ್ನ ಕೆಲಸದಲ್ಲಿ ಮಗ್ನಳಾಗಿ– ನಡುನಡುವೆ ಸಹಾನುಭೂತಿಯಿಂದ ರಾಮುವಿನ ಕಡೆ ನೋಡುತ್ತಿದ್ದಳು.

ಸ್ವಲ್ಪ ಹೊತ್ತಿನಮೇಲೆ ನಿಶ್ಚಲವಾಗಿದ್ದ ದೇಹ ಅಲುಗಾಡಿತು. ಅದರೊಂದಿಗೆ ಯಾತನಾಮಯವಾದ ಧ್ವನಿಯೊಂದು ಹೊರಬಂದಿತು. ಪ್ರಜ್ಞೆ ಬರುತ್ತಿರುವ ಸೂಚನೆಯನ್ನು ತಿಳಿದು ದಾದಿ ಬಾಯಿಬಿಡಿಸಿ ಸ್ವಲ್ಪ ಔಷಧಿಯನ್ನು ಕುಡಿಸಿದಳು.

ಗೌರಿ ಮೆಲ್ಲಗೆ ಕಣ್ಣು ತೆರೆದು ತಾನು ಎಲ್ಲಿರುವೆನೆಂಬುದನ್ನು ಜ್ಞಾಪಿಸಿಕೊಳ್ಳುವಂತೆ ಸುತ್ತಲೂ ನೋಡಿದಳು. ಸ್ವಲ್ಪ ಸ್ವಲ್ಪವಾಗಿ ಅವಳ ಸ್ಮೃತಿ ಪಥದಲ್ಲಿ, ವಿಷಯಗಳು ಬೆಳಕಿಗೆ ಬಂದಂತಾದವು. ಸಾಯಂಕಾಲ ಲಲಿತ ಹೊರಟುಹೋದಮೇಲೆ ತಾನು ದೇವಸ್ಥಾನಕ್ಕೆ ಹೋದದ್ದು–ಅನ್ಯ ಮನಸ್ಕಳಾಗಿ ಚಿಂತೆಯಿಂದ ಹೋಗುತ್ತಿರುವಾಗ ಮೋಟಾರೊಂದು ಅವಳ ಸಮೀಪ ಬಂದದ್ದು.......ಇಷ್ಟೇ ಅವಳಿಗೆ ನೆನಪಾದದ್ದು. ಮುಂದೇನು ನಡೆಯಿತೋ ಅವಳಿಗೆ ಗೊತ್ತಿಲ್ಲ. ಆದರೆ ಪಕ್ಕದಲ್ಲಿದ್ದ ದಾದಿಯನ್ನು ನೋಡಿದ ಕೂಡಲೆ ಅವಳಿಗೆ ತಾನಿರುವ ಜಾಗದ ಅರಿವಾಯಿತು.

ದಾದಿ ಔಷಧಿ ಕುಡಿಸಿ ಪಕ್ಕಕ್ಕೆ ಸರಿದಳು. ರಾಮು ಅವಳ ಕಣ್ಣಿಗೆ ಬಿದ್ದನು. ಗೌರಿ ರಾಮುವನ್ನು ನೋಡಿದ ಕೂಡಲೆ ಅವಳ ಕಣ್ಣಿನಲ್ಲಿ ನೀರು ಸುರಿಯಲು ಆರಂಭವಾಯ್ತು. ಹೃದಯ ಚಲನ ಹೆಚ್ಚಾಗಿ, ಘಾಯಗಳಿಂದ ರಕ್ತಸ್ರಾವ ಹೆಚ್ಚಿತು. ಯಾವ ಔಷಧಿಯೂ ಅದನ್ನು ಕಡಿಮೆ ಮಾಡಲಾಗಲಿಲ್ಲ. ನಾಡಿಯ ಗತಿಯನ್ನು ನೋಡಿ ಅವಸಾನ ಸಮೀಪಿಸುತ್ತಿರುವುದನ್ನು ತಿಳಿದು, ದಾದಿ ಆ ಸಮಯದಲ್ಲಿ ಅವರ ನಡುವೆ ಅಲ್ಲಿ ತಾನು ಇರುವುದು ಸರಿಯಲ್ಲವೆಂದು ಯೋಚಿಸಿ ಮೆಲ್ಲಗೆ ಅಲ್ಲಿಂದ ಹೊರಕ್ಕೆ ಜಾರಿದಳು.

ಗೌರಿಯ ಕಣ್ಣಿನಲ್ಲಿ ನೀರು ಒಂದೇ ಸಮನಾಗಿ ಹರಿಯುತ್ತಿದ್ದಿತು. ರಾಮು ಹಾಸಿಗೆಯಮೇಲೆ ಕುಳಿತುಕೊಂಡು, ಮೆಲ್ಲಗೆ ಅವಳ ತಲೆಯನ್ನೆತ್ತಿ ತನ್ನ ತೊಡೆಯಮೇಲಿಟ್ಟುಕೊಂಡು ತನ್ನ ರೇಷ್ಮೆಯ ಕರವಸ್ತ್ರದಿಂದ ಕಣ್ಣೀರನ್ನು ಒರಸಿದನು. ಅವನ ಕಣ್ಣಿನಿಂದ ಉರುಳಿದ ನೀರು ಅವಳ ಹಣೆಯ ಮೇಲೆ ಬಿತ್ತು. ಗೌರಿ ಅವನನ್ನು ಸಮಾಧಾನಪಡಿಸಲು ಪ್ರಯತ್ನಪಟ್ಟಳು. ತುಟಿಗಳು ಅಲುಗಿದುವು, ಮಾತು ಹೊರಬೀಳಲಿಲ್ಲ. ಅತಿ ಪ್ರಯಾಸದಿಂದ ಕೈಗಳನ್ನು ಮೇಲಕ್ಕೆತ್ತಿದಳು. ರಾಮು ಅವನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡು, ಅವಳ ಮುಖದ ಬಳಿ ತನ್ನ ಮುಖವನ್ನಿಟ್ಟು, 'ಗೌರಿ, ನನ್ನನ್ನು ಕ್ಷಮಿಸುವೆಯಾ?' ಎಂದು ಕೇಳಿದನು.

ನಿರ್ವಾಣೋನ್ಮುಖದೀಪದಂತೆ, ಮಂದಹಾಸವೊಂದು ಪ್ರಜ್ವಲಿತವಾಗಿ ಪುನಃ ಮರೆಯಾಯಿತು. ಅದರೊಡನೆ ಗೌರಿಯ ಕಣ್ಣುಗಳೂ ಮುಚ್ಚಿಹೋದವು.

---

## ಪರಿಷತ್ತಿನ ಸುದ್ದಿ

ಸಾಹಿತ್ಯ ತರಗತಿಗಳು ಇದೇ ತಿಂಗಳು ೧೯ನೆಯ ಸೋಮವಾರದಿಂದ ಈಗಾಗಲೇ ಪ್ರಕಟಿಸಿದ್ದ ವೇಳಾಪತ್ರಿಕೆಯಂತೆ ಆರಂಭವಾಗುವುವು.

---

### ಬಾಷ್ಪಾಂಜಲಿ

ದಿವಂಗತ ಶ್ರೀ ಕೃಷ್ಣರಾಜ ಒಡೆಯರವರ ನಿಧನಕ್ಕಾಗಿ ಶ್ರೀಗಳಾದ ಗೋಮಟೇಶ್ವರ ದಿಗಂಬರ ಜೈನ ವೇದಮಹಾಪಾಠಶಾಲೆಯ ಕಾರ್ಯದರ್ಶಿಗಳಾದ ನ್ಯಾಯತೀರ್ಥ ಆಸ್ಥಾನವಿದ್ವಾನ್ ಎ. ಸುಬ್ಬಯ್ಯಶಾಸ್ತ್ರಿಗಳು; ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ, ಕಾಸರಗೋಡು; ಟಿ. ಎನ್. ಶ್ರೀನಿವಾಸಮೂರ್ತಿ, ಮೈಸೂರು; ಒ. ಎನ್. ಲಿಂಗಯ್ಯ, ಬೆಂಗಳೂರು; ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳು, ಬೆಂಗಳೂರು; ಪಿ. ಆರ್. ಶ್ರೀನಿವಾಸ ಅಯ್ಯಂಗಾರ್, ಚೆನ್ನರಾಯಪಟ್ಟಣ; ಬೆಳ್ಳಾವೆ ನರಹರಿಶಾಸ್ತ್ರಿಗಳು, ಬೆಂಗಳೂರು; ಡಿ. ಆರ್. ರಾಮಯ್ಯನವರು, ಬೆಂಗಳೂರು ಮುಂತಾದ ಮಹನೀಯರು ಕವಿವಾಣಿಯಲ್ಲಿ ತಮ್ಮ ದುಃಖವನ್ನು ತೋಡಿಕೊಂಡು ಬಾಷ್ಪಾಂಜಲಿಗಳನ್ನು ರಚಿಸಿ ಕಳಿಸಿದ್ದಾರೆ. ಸ್ಥಳಸಂಕೋಚದಿಂದ ಅವುಗಳನ್ನೆಲ್ಲ ಪ್ರಕಟಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸಲು ವಿಷಾದಿಸುತ್ತೇವೆ.

### ಲಂಡನ್ನಿನಲ್ಲಿ ಸಂತಾಪಸೂಚಕ ಸಭೆ

ಈ ದಿನ ಲಂಡನ್ನಿನ ಹಿಂದೂ ಸಂಘದ ಆಶ್ರಯದಲ್ಲಿ ದಿವಂಗತ ಮಹಾಸ್ವಾಮಿಯವರ ಆತ್ಮಕ್ಕೆ ಶಾಂತಿ ಕೋರಲು ಸಾರ್ವಜನಿಕ ಸಭೆ ನಡೆಯುತ್ತದೆ. ಲಾರ್ಡ್ ವಿಲ್ಲಿಂಗಡನ್‌ರವರು ಅಗ್ರಾಸನವನ್ನು ವಹಿಸುವರು.

### ಮುಂಬಯಿಯಲ್ಲಿ ಸಂತಾಪಸೂಚಕ ಸಭೆ

ದಿವಂಗತ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರ ಆತ್ಮಕ್ಕೆ ಶಾಂತಿಯುಂಟಾಗಲೆಂದು ಪ್ರಾರ್ಥಿಸಲು ಮುಂಬಯಿಯ ಹಲವು ಕನ್ನಡ ಮತ್ತು ಕನ್ನಡೇತರ ಸಂಘಗಳ ನೇತೃತ್ವದಲ್ಲಿ ಸಾರ್ವಜನಿಕ ಸಭೆ ಇದೇ ೧೬ನೆಯ ಶುಕ್ರವಾರ ಸರ್ ಕವಾಸ್ಜಿ ಜಹಾಂಗೀರ್ ಹಾಲಿನಲ್ಲಿ ನಡೆಯುವುದು. ಮೈಸೂರಿನ ನಿವೃತ್ತ ದಿವಾನರಾದ ಸರ್ ಎಂ. ವಿಶ್ವೇಶ್ವರಯ್ಯ, ಕೆ.ಸಿ.ಐ.ಇ. ಅವರು ಅಧ್ಯಕ್ಷತೆ ವಹಿಸುವರು.

ಶ್ರೀಗಳಾದ ಸರ್ ಪುರುಷೋತ್ತಮದಾಸ್ ಥಾಕೂರ್‌ದಾಸ್, ಸರ್ ಚಿಮನ್‌ಲಾಲ್ ಸೆಟಲ್‌ವಾಡ್, ಸರ್ ಎಚ್. ಪಿ. ಮೋದಿ, ಸರ್ ಕವಾಸಿ ಜಹಾಂಗಿರ್, ಸರ್ ರಹಿಂಮತುಲಾ ಚಿನಾಯ್, ಫ್ರಾನ್ಸಿಸ್ ಲೋ, ಎಸ್. ಎ. ಬ್ರೆಲ್ವಿ, ಬಿ. ಜಿ. ಖೇರ್ ಮತ್ತು ಚುನಿಲಾಲ್ ಬಿ. ಮೇತಾ ಇವರೇ ಮೊದಲಾದ ಮುಂಬಯಿ ನಗರದ ಅನೇಕ ಪ್ರಮುಖರುಗಳು ಮಾತನಾಡುವವರಿದ್ದಾರೆ.

೧೦೪-೬೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೪೩

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಆಗಸ್ಟ್ ೨೩, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಸಂಭಾಷಣೆ

### (೨)

ಬೇರೆ ಬೇರೆಯಾಗಿ ಕಾಣುವ ಎರಡು ತಪ್ಪುಗಳಿವೆ, ಆದರೂ ಅವೆರಡೂ ಹುಟ್ಟುವುದು ಒಂದೇ ಬೇರಿನಿಂದ, ಎರಡೂ ಒಂದೇ ವಿಧವಾದ ದೂರಿಗೆ ಒಳಗಾದವು: ಇನ್ನೊಬ್ಬರ ಮಾತನ್ನು ಮಧ್ಯದಲ್ಲಿ ತಡೆದು ನಿಲ್ಲಿಸಬೇಕೆನ್ನುವ ಅಸಹನೆ; ನಮ್ಮ ಮಾತನ್ನು ಅಡ್ಡಗಟ್ಟಿದಾಗ ಉಂಟಾಗುವ ಅಸಮಾಧಾನ. ಸಂಭಾಷಣೆಯ ಎರಡು ಮುಖ್ಯ ಉದ್ದೇಶಗಳು: ನಮ್ಮ ಸಂಗಡಿಗರಿಗೆ ವಿನೋದವನ್ನೂ ತಿಳಿವನ್ನೂ ಕೊಡುವುದು ಅಥವಾ ಆ ಪ್ರಯೋಜನಗಳನ್ನು ನಾವೇ ಪಡೆಯುವುದು. ಇದನ್ನು ಗಮನದಲ್ಲಿಡುವವರು ಸುಲಭವಾಗಿ ಈ ಎರಡು ತಪ್ಪುಗಳನ್ನು ಮಾಡಲಾರರು. ಏಕೆಂದರೆ ಯಾವನಾದರೊಬ್ಬ ಮನುಷ್ಯನು ಒಂದು ಕೂಟದಲ್ಲಿ ಮಾತನಾಡುವುದು ಅವನ ಮಾತನ್ನು ಕೇಳುವವರಿಗಾಗಿ ಎಂದು ಊಹಿಸಬೇಕೇ ಹೊರತು, ತನಗೋಸ್ಕರ ಅಲ್ಲ. ಆದುದರಿಂದ ಸಾಮಾನ್ಯವಾದ ವಿವೇಚನೆಯೇ ಹೇಳುವುದು — ಮಾತನ್ನು ಕೇಳಲು ಅವರು ಇಚ್ಛೆಪಡದಿದ್ದರೆ, ಅವರು ಗಮನಕೊಡುವಂತೆ ಒತ್ತಾಯ ಮಾಡಬೇಡಿ ಎಂದು. ಇನ್ನೊಬ್ಬನು ಮಾತನಾಡುತ್ತಿರುವಾಗ ಅವನ ಮಾತನ್ನು ನಿಲ್ಲಿಸಕೂಡದೆಂದೂ ಅದೇ ಹೇಳಿಕೊಡುತ್ತದೆ. ಏಕೆಂದರೆ ಅವನ ತಿಳಿವಿಗಿಂತ ನಮ್ಮ ತಿಳಿವಿಗೇ ನಾವು ಬಹಳ ಹೆಚ್ಚಿನ ವಿಶ್ವಾಸವನ್ನು ಬಹಳ ಒರಟು ರೀತಿಯಲ್ಲಿ ತೋರಿಸಿದಂತೆ ಆಗುವುದು.

ಕೆಲವು ಜನರಿದ್ದಾರೆ: ಅವರ ಒಳ್ಳೆಯ ನಡತೆ ಅವರು ನಿಮ್ಮ ಮಾತನ್ನು ಮಧ್ಯೆ ನಿಲ್ಲಿಸುವಂತೆ ಮಾಡುವ ಪ್ರಯತ್ನಕ್ಕೆ ಎಡೆ ಕೊಡುವುದಿಲ್ಲ. ಆದರೆ ಅವರಲ್ಲಿ ಇಷ್ಟೇ ಕೆಟ್ಟದಾದ ಇನ್ನೊಂದು ದುರ್ಗುಣವಿರುತ್ತದೆ. ಅವರು ನಿಮ್ಮ ಮಾತಿನಲ್ಲಿ ಅಸಹನೆಯನ್ನು ತೋರಿಸಿ ನೀವು ಮುಗಿಸುವ ಕ್ಷಣವನ್ನೇ ಕಾದು ಕುಳಿತಿರುವರು; ಮನಸ್ಸಿನಲ್ಲಿ ತಮ್ಮದೇ ಆದ ಯೋಚನೆಗಳಲ್ಲಿ ಮಗ್ನರಾಗಿದ್ದು, ಅವನ್ನು ನಿಮ್ಮ ಮುಂದೆ ಹೇಳಲು ಆತುರಪಡುತ್ತಿರುವರು. ಈ ಮಧ್ಯೆ ಅವರು ಇತರರ ಮಾತಿಗೆ ಗಮನವನ್ನೇ ಕೊಡದೆ ಇರುವುದರಿಂದ ಅವರ ಮನಸ್ಸೆಲ್ಲ ಅವರ ಸ್ವಂತ ಯೋಚನೆಗಳಲ್ಲಿಯೇ ನಿಲ್ಲುವುದು. ನೆನಪಿಂದ ಇವು ಎಲ್ಲಿ ಜಾರಿಹೋಗುವುವೊ ಎಂದು ಹೆದರಿಕೆ ಸಹ ಉಂಟು. ಹೀಗಾಗಿ ಒಂದುನೂರು ಒಳ್ಳೆಯ ವಿಚಾರಗಳಲ್ಲಿ ನಿರತವಾಗಬಲ್ಲ ಅವರ ಯೋಚನೆ ಒಂದೇ ಕಡೆ ಸಿಕ್ಕಿಕೊಂಡು ಸಂಕುಚಿತವಾಗುವುದು.

ಒಂದು ಬಗೆಯ ಒರಟು ಸಲಿಗೆ ಇದೆ. ಇದನ್ನು ಕೆಲವರು ತಮ್ಮ ಬಹಳ ಪರಿಚಯವುಳ್ಳ ಸ್ನೇಹಿತರ ಮೇಲೆ ಉಪಯೋಗಮಾಡಲು ಆರಂಭಮಾಡಿ ಸಂಭಾಷಣೆಯಲ್ಲಿಯೂ ಮಧ್ಯೆ ತರುವರು. ಅದನ್ನು ಒಂದು ಬಗೆಯ ಕಪಟವರಿಯದ ಸ್ವಾತಂತ್ರ್ಯ, ಒಂದು ಬಗೆಯ ಹಾಸ್ಯ ಎಂದು ಎಣಿಸಬೇಕೆಂದು ಅಪೇಕ್ಷಿಸುವರು. ಈ ಬಗೆಯ ಪ್ರಯೋಗ ನಮ್ಮಂಥ ಉತ್ತರ ದೇಶಗಳಲ್ಲಿ ಬಹಳ ಅಪಾಯಕರ. ಇಲ್ಲಿರುವ ಅಲ್ಪ ಸ್ವಲ್ಪ ವಿನಯ ಮರ್ಯಾದೆಗಳು ಬಲವಂತವಾಗಿ ಕಲಿತವು ಮತ್ತು ಬಹುಬೇಗ ಅನಾಗರಿಕತೆಗೆ ಹಿಮ್ಮೆಟ್ಟುವಂಥವು. ರೋಮನ್ನರಲ್ಲಿ ಇದು ಗುಲಾಮರ ಹಾಸ್ಯವಾಗಿತ್ತು; ಪ್ಲಾಟಸ್ಸಿನಲ್ಲಿ ಇದಕ್ಕೆ ಅನೇಕ ಉದಾಹರಣೆಗಳಿವೆ. ನಮ್ಮಲ್ಲಿ ಇದನ್ನು ಕ್ರಾಮ್‌ವೆಲ್ ಬಳಕೆಗೆ ತಂದ ಹಾಗೆ ತೋರುವುದು. ಆತನು ಬಹಳ ಕೀಳಾದ ಜನರನ್ನು ಅನುಗ್ರಹಿಸಿದ್ದರಿಂದ, ಇದನ್ನು ರಾಜಸಭೆಯ ವಿನೋದವನ್ನಾಗಿ ಮಾಡಿದನು. ಈ ಬಗ್ಗೆ ನಾನು ಅನೇಕ ಉದಾಹರಣೆಗಳನ್ನು ಕೇಳಿದ್ದೇನೆ. ಆ ಕಾಲದಲ್ಲಿ ಎಲ್ಲ ವಸ್ತುಗಳೂ ತಲೆಕೆಳಗಾಗಿದ್ದುದರಿಂದ ಅದು ಉಚಿತವಾಗಿಯೂ ನ್ಯಾಯವಾಗಿಯೂ ಇದ್ದಿತು. ಅದನ್ನು ಬಳಕೆಗೆ ತರುವುದಕ್ಕೆ ಕಾರಣ, ರಾಜನ ಅನುಯಾಯಿಗಳ ಮರ್ಯಾದೆಯ ಭಾವವನ್ನು ಪರಿಹಾಸ್ಯ ಮಾಡುವುದಕ್ಕೋಸ್ಕರ. ಆಸ್ಥಾನಿಕರು ಈ ವಿಚಾರದಲ್ಲಿ ಬಹಳ ಮಿತಿಮೀರಿದ್ದರು: ಒಂದು ಮಾತನ್ನು ಹೆಚ್ಚು ಕಡಮೆ ಉಪಯೋಗಿಸುವುದು ದ್ವಂದ್ವ ಯುದ್ಧದಲ್ಲಿ, ಸಾವಿನಲ್ಲಿ ಪರಿಣಾಮಗೊಳ್ಳುತ್ತಿದ್ದಿತು.

ಕೆಲವರು ಕಥೆ ಹೇಳುವುದರಲ್ಲಿ ಬಹು ನಿಪುಣರು. ಅವರಲ್ಲಿ ಒಳ್ಳೆಯ ಸಂಗ್ರಹವೂ ಇರುವುದು. ಎಲ್ಲ ವಿಧವಾದ ಕೂಟಗಳಲ್ಲಿಯೂ ಅವರು ಸಮಯೋಚಿತವಾದ ಕಥೆಯನ್ನು ಆಯ್ದು ಹೇಳುವರು. ಈಗ ನಮ್ಮಲ್ಲಿ ಸಂಭಾಷಣೆ ಇರುವ ಕೀಳುಮಟ್ಟವನ್ನು ಗಮನಿಸಿದರೆ, ಕಥೆ ಹೇಳುವುದನ್ನು ತುಚ್ಛವಾದ ಕುಶಲತೆಯೆಂದು ಹೇಳಲಾರೆವು. ಆದರೂ ಅದರಲ್ಲಿ ಅನಿರ್ವಾಹವಾದ ಎರಡು ದೋಷಗಳಿವೆ. ಹೇಳಿದ್ದನ್ನೇ ಹೇಳುವುದು ಮತ್ತು ಬಂಡವಾಳವನ್ನು ಜಾಗ್ರತೆಯಲ್ಲಿ ಬರಿದುಮಾಡಿಕೊಳ್ಳುವುದು. ಆದುದರಿಂದ ಯಾವ ಮನುಷ್ಯನು ಈ ವರವನ್ನು ಅಮೂಲ್ಯವಾದುದೆಂದು ಭಾವಿಸುವನೋ ಅವನಲ್ಲಿ ಜ್ಞಾಪಕಶಕ್ತಿ ಚೆನ್ನಾಗಿರಬೇಕು, ಅವನು ಗುಂಪುಗಳನ್ನು ಆಗಾಗ್ಗೆ ಬದಲಾಯಿಸುತ್ತಿರಬೇಕು, ಇಲ್ಲದಿದ್ದರೆ ಅವನ ಬಂಡವಾಳದ ಬಡತನ ಕೂಡಲೆ ಹೊರಬೀಳುವುದು; ಈ ಯೋಗ್ಯತೆ ಪಡೆದವರಿಗೆ ಅವರ ಜೀವ ಮುಖ್ಯ ನಿಧಿಯೇ ಹೊರತು ಬೇರೆಯಾವುದೂ ಇಲ್ಲ.

ದೊಡ್ಡ ಸಭೆಗಳಲ್ಲಿ ಉಜ್ವಲ ಭಾಷಣ ಮಾಡುವವರು ಏಕಾಂತದಲ್ಲಿ ಸಂಭಾಷಣೆ ಮಾಡುವಾಗ ಹಿತವಾಗಿರುವುದಿಲ್ಲ. ಅವರ ಭಾಷಣಶಕ್ತಿ ಸ್ವಾಭಾವಿಕವಾದದ್ದಿರಲಿ, ಅಭ್ಯಾಸದಿಂದ ಉಂಟಾಗಿರಲಿ ಅಥವಾ ಧೈರ್ಯದಿಂದ ಹುಟ್ಟಿದ್ದಾಗಿಯೇ ಇರಲಿ, ನೈಜವಾದ ವಾಕ್ಚಾತುರ್ಯ,—ಇದು ವಿರೋಧಾಭಾಸದಂತೆ ಕಂಡರೂ—ಇದು ಹುಟ್ಟುವುದು

೪೧೧ನೆಯ ಪುಟಕ್ಕೆ

ನಮ್ಮ ನಗೆಗಾರರು:—

## ೧. ಕವಿವಲ್ಲಭ

"ಲೋಗರಱಿವಿನ ಕೊಱತೆಯಂ ನೀಡುಮೆಣಿಸದೆ ತಗದ ಕಜ್ಜಮನೊಡರ್ಚುತೆ ಕಟ್ಟಕಡೆಯೊಳ್ ಬಱಿಮುಱುಕದಿಂ ಮನದೆ ಕುದಿವರ್ ಪಲಂಬರೊಳರ್."

ಸಂಸ್ಕೃತ ರಾಮಾಶ್ವಮೇಧ ಓದಿಯಾಯಿತು. 'ಎಂತೆಂತೊ ರಗಟೆಯ ಪಾಟ್ಗತೆ ಕಡೆಗಂಡುದು'. ಅಬ್ಬ! ಏನು ಕತೆ! 'ಅಡಿಮುಡಿಯಿಲ್ಲದ ಕತೆ'. 'ನಿಱಿಗೆಯ ಕೂಟಂ ಕೇಳ್ವರ್ಗೆ ಮನಕ್ಕೆ ಬಾಱದ' ಕತೆ. 'ಪ್ರೋಪ್ರೋಪ ಬಟ್ಟೆಯೊಳ್ ಅಡವಿಸೆಟ್ಟುಗಳ ಬಱುವಣ್ಣನೆಯ ಬೇಸರಿಕೆಯ ಪಾಟ್ಗಬ್ಬಂ'. ಕಾಮಾಕ್ಷಿ, ಚ್ಯವನಾಶ್ರಮ, ನೀಲಾಚಲ, ಸಾಳಗ್ರಾಮ, ಗೋಪೂಜಾ ಮಾಹಾತ್ಮ್ಯಗಳ ಮೂಟೆ. ಅಶ್ವ ಎಲ್ಲೂ ನಾಡ ಸೊಗನು. ಯೊಕ್ಕರೂ 'ಬಲ್ಸುಳ್ಳ ರಾಯಂ ಕಟ್ಟೆ ಕಾದಂ, ತಾನೆ ಕೆಯ್ಗುಟ್ಟುವಂ'. ಕಟ್ಟೆ ಕಾದಿದರೂ ಆಮ 'ಕಿವಿಗಳ್ಗೆ ಪುರುಳ ಮರದ ಗುರ್ದಿನಾಟದ ಬಱುರಗಟೆಯ ನಿಡುಗತೆ'. 'ಕತೆಯ ಸೇಟ್ವರ ಕಣ್ಗೆ ಕಟ್ಟೆದಿಱೊಳ್ ಪುರುಳನಱಿಯದ ಗಾಂಪಿನ ಕಾಡವರಂತಿರೆ ನಿದ್ದೆಯ ಬಿಣ್ಪಂ ತೂಂಕಡಿಪಂತೆ ಗೆಯ್ವ ಕತೆ'. ಒಟ್ಟಿನಲ್ಲಿ ಇದು 'ಕಟ್ಬಾಯಸವ ನಿಚ್ಚವಯಣ, ಬನ್ನವಟ್ಟೆಯ ಬಳಲ್ಕೆ, ಗಾಱಿಗೂಟಿಱೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟ'—ರಾಮಸೇನೆಗೆ ಮಾತ್ರವಲ್ಲ, ಓದುಗರಿಗೆ ಕೂಡ. ಇಂತಹದನ್ನು 'ಜಾಣೆಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ'?

ಆದರೆ, ಈ ಮಹಾಮುರುಕುಮನೆಯ ಯಾವುದೋ ಮೂಲೆಯಲ್ಲಿ ಮುಚ್ಚಿಹೋದ ಸೀತಾ ಪರಿತ್ಯಾಗದ ಕತೆ—ಈಗ ಪ್ರಚಾರದಲ್ಲಿರುವಂತೆಯಾದರೂ—ಕೇಳುತ್ತಿದ್ದರೆ 'ಸುಡು ಸುಡು ನಿನ್ನ ಜನ್ನಗುದುರೆಯಂ' ಎನ್ನಿಸುವಂತಹದು. 'ಮೇಣುಂ ಮೇಣುಂ ಕೇಳ್ವೆಂ ಕೇಳ್ವೆಂ ಎಂಬೊಂದಾಸೆ' ಹುಟ್ಟಿಸುವಂತಹದು. ಇದು 'ಎರ್ದೆವುಗುವ ನಲ್ಗತೆ.' ಕೇಳುವ ಪ್ರತಿ ಸತಿಪತಿಯೂ 'ಆನೊರ್ಮೆಯುಂ ನಿನ್ನ ನುಱಿದು ಬಾೞೆಂ. ಅಂತದಱಿನೆಮ್ಮೊಳಾವಗಂ ಪುದುವಾೞ್ಕೆಯಂ ದೀರ್ಘಾಯುಮುಂ ಶಿವಂ ನೆಲೆಗೆಯ್ಗೆ! ಸ್ವಸ್ತಿ!' ಎಂದು ಹಾರೈಸಿಕೊಳ್ಳುವಂತೆ ತಲ್ಲೀನತೆಯುಂಟುಮಾಡುವಂತಹದು.

ಆದರೆ ಇದಾದರೂ ಎಂತಹ ಕತೆ? ಹುಸಿತವಸಿ ದುಷ್ಟರಾಕ್ಷಸ ಅಂದು ಸೀತೆಯನ್ನು ಕದ್ದೊಯ್ದ ಒಡನೆ ಬಿಡಲಾರದ ಮೋಹದಿಂದ ಮರುಗಿ ಕೊರಗಿ ಹುಡುಕಿ ಬಂದು ಹಿರಿಯಾಯಾಸದಿಂದ ಕಡಲಿಗೆ ಅಣೆಗಟ್ಟು ಕಟ್ಟಿ ರಾಕ್ಷಸರಲ್ಲಿ ಕಾದಿ ಮೊನೆಯಲ್ಲಿ ಗೆದ್ದು ಮರಳಿಸಿದನಂತೆ ರಾಮ. ಪುನಃ ಯಾವನೊ ಗಾವಿಲ, ನಡುಗೇರಿಯ ಅಗಸ, ಕರುಬಿ ಹೇಳಿದ ನಾಣ್ನುಡಿಯ ನೆವ ಹಿಡಿದು ದೇವಿಯರಲ್ಲಿ ಕುಂದನೆಣಿಸಿದನಂತೆ. 'ಹೊನ್ನ ಸುರಿಗೆಯೆಂದೇ ಎದೆಗೊತ್ತಿದೆ. ಹೀಗೆ ಕರುಳನ್ನು ಕೊರೆಯುವುದೆಂದು ತಿಳಿಯದೆ ಹೋದೆನಲ್ಲಾ. ಆ ಅಗಸ ನನ್ನನ್ನು ಏಳಿಸಲಿಲ್ಲ. ಎಚ್ಚರಿಸಿದ' ಎಂದು, ಕೂಳ ಕೊರಚಾಡಿದರೆ ತಾನೊಂದಾಡಿದನಂತೆ. 'ಧರ್ಮ ಹಾಗೆ. ಅಪವಾದ ಹೊದ್ದಿದ ಬಳಿಕ ದೂಷಿತೆಯಾದ ಈ ಮಡದಿಯನ್ನು ಬಿಟ್ಟಲ್ಲದೆ ಮಾಣೆ. ಸೀತೆಯನ್ನು ತೊರೆದೇ ಸುಖವಾಗಿ ಬಾಳುವೆನು' ಎಂದು ತುಂಬಿದ ಬಸಿರಿಯನ್ನು, ಕವಡನರಿಯದ ಬಾಲೆಯನ್ನು ಕಾಡಿಗಟ್ಟಲು ಛಲ ಹಿಡಿದನಂತೆ. ಸೀತೆ ಅಡವಿಯ ರಿಸಿಹೆಂಗಳನ್ನು ಕಾಣಲು ಬಯಸಿದ್ದಳಂತೆ; 'ಅಂತದರಿನೀ ನೆವದಿಂ ಅಡವಿಯೊಳುೞಿದೆ ಬಾರ' ಎಂದು ತಮ್ಮನಿಗೆಂದನಂತೆ. ಹೀಗೆ ರಾಮ ಕೂಳನ ಪಿಸುಣಿಗೆ ನಿರಪರಾಧಿನಿಯನ್ನು ಬಲಿತೆತ್ತ. ಊರಿನಲ್ಲಿ ಮಾರಿಯೆಂದು ಮನೆಯ ಹೋರಿಯನ್ನು ಮಾರುಗೊಟ್ಟ. ಹಾಲು ಹುಳಿತುದೆಂದು ಅವನ್ನು ಹೊಯ್ದ. ವ್ಯಾಜವಿಲ್ಲದೆ ಅಗಸನೊಬ್ಬ ತೆಗಳಿದನೆಂದು, ಅಬಲೆಯನ್ನು ಹೀಗೆ ಕಾಡಡವಿಗೆ ಅಟ್ಟಿದ. ಹಾ! ರಾಘವಾ! ಈ ಕೂಸನ್ನು ನಿನ್ನ ಕೈಯಲ್ಲಿ ಕೊಡುವಾಗ ಜನಕನೇನೆಂದ? ಅಗ್ನಿ ಸಾಕ್ಷಿಯಾಗಿ ನೀನೆ ಏನೆಂದೆ? ಪಾವಕಪಾವನೆಯನ್ನು ತೊರೆಯಲು ಹೇಗೆ ಮನಸ್ಸು ತಂದೆ? 'ನಿನ್ನೀ ಜಸಕೆ ನಿನ್ನೀ ಪೆರ್ಮೆಗೆ ನಿನ್ನೀ ಬೀರಕೆ ಇಂತಿದು ಪಾಡೇ!'

ಇಂತವನು 'ಸೀತಾರಾಮ'ನಂತೆ! ಸೀತೆಯನ್ನು ಹಾಗೆ ಉಳಿದು ಏತರ ಸೀತಾರಾಮ? ಕಲ್ಲೆದೆಯವನಂತೆ ಸೀತೆಯನ್ನು ತೊರೆದು ಬಳಿಕ ಪ್ರಲಾಪಿಸಿದನಂತೆ! ಮೊದಲು ತಲೆಹೊಯ್ಯಲೇಕೆ? ಅನಂತರ ಮರುಗಲೇಕೆ? ತಾನು ಯಶೋಧನನಂತೆ! ಲೋಕಾಪವಾದ ಭೀತಿಯಿಂದ ಅಡವಿಗಟ್ಟಿದನಂತೆ! ಅರಸಿಯೊಡನೆ ಏನೂ ಹಗೆಯಿಲ್ಲವಂತೆ! ಹಗೆಯೇನು, ನಗೆಯೇನು, ಅರಿಯದ ಹೆಣ್ಣೊಬ್ಬಳು ಕಾಡಿಗಾದಳು ತಾನೆ! ಅದನ್ನೆ ನೆನೆನೆನೆದು ಬಹಳ ಹಲುಬಿದನಂತೆ. ಏಕಂತೆ? ತನಗೆ ಬೇರೆ ಹೆಂಡಿರಿಲ್ಲವೆಂದೆ? ನಗು ಬರುವುದು ಇವನ ನಡತೆಗೆ. ಲೋಗರಿಗೆ ಅರಿವಿನ ಕೊರತೆಯೆಂಬುದನ್ನು ನೀಡುಂ ಎಣಿಸನೇಕೆ? ತಗದ ಕಜ್ಜಮನೊಡರ್ಚಲೇಕೆ? ಕಟ್ಟಕಡೆಯೊಳ್ ಮನದೆ ಬಱಿ ಮರುಕದಿಂ ಕುದಿಯಲೇಕೆ? ಇಂತವರು ಇವನೊಬ್ಬನೆ ಅಲ್ಲ, 'ಪಲಂಬರೊಳರ್'.

ಈ ವಿಯೋಗದುಃಖವನ್ನು ನೆನೆನೆನೆದು ಅನುಗಾಲ ಹಲುಬುತ್ತಿದ್ದನಂತೆ. ಇರಲು, ಒಮ್ಮೆ ದರ್ಶನಾರ್ಥವಾಗಿ ಅಗಸ್ತ್ಯ ಬಂದನಂತೆ. 'ಮುನಿ ಏನೆಂಗುಂ ನೋೞ್ಪೆಂ'. ಬಂದ ಮುನಿ, ರಾವಣ ಕುಂಭಕರ್ಣಾದಿಗಳು ಬ್ರಹ್ಮನ ಬಳಗ—ಎಂದನಂತೆ. ಇದು ಕೇಳಿ, ಸೀತೆಯನ್ನು ತೊರೆದುದಕ್ಕೆ ಪಶ್ಚಾತ್ತಪಿಸುತ್ತಿದ್ದ ರಾವಣಾರಿ 'ಪೆಣ್ಣೆವದಿಂ ಪಾತಕದಿನಿತೊಂದು ತಿಣ್ಣಮಂ ಪೊಱುವೊಡೆಂದೇಂ ಬಿದಿಮಾಡಿದನೇ? ಎಗ್ಗರೆನರೆ ಲೋಗರಾಡರೆ ಮಡದಿಗೆಂದು ಬ್ರಹ್ಮಘಾತಂಗೆಯ್ದನೆಂದು?' ಎಂದು ಹಲುಬತೊಡಗಿದನಂತೆ. ಎಲ್ಲ ಅನಿಷ್ಟಕ್ಕೂ ಸೀತೆ ಗುರಿ. ಸೀತೆಯನ್ನು ರಾವಣ ಕದ್ದರೆ, ಅದು ಅವಳ ತಪ್ಪೆ? ತಾನು ಅಗ್ನಿಸಾಕ್ಷಿಕವಾಗಿ ಕೈ ಹಿಡಿದವಳ ಮಾನ ಪ್ರಾಣಗಳನ್ನು ಕಾಪಾಡಲು ಅಷ್ಟು ಆಯಾಸಪಟ್ಟು ರಾವಣನನ್ನು—ಬ್ರಹ್ಮನ ಬಳಗವಾದರೇನಂತೆ—ಕೊಂದುದು ತಪ್ಪೆ? ಎಗ್ಗರ, ಲೋಗರ ಅರಿವಿನ ಕೊರತೆಯ ನುಡಿಗಷ್ಟು ದುಗುಡವೇಕೆ? 'ದಾನವರುಪಟಳಕೆ ಬಾರ್ತೆಗೆಟ್ಟ ಬರ್ದಿಲರಂ ಬರ್ದುಂಕಿಸಲ್ ಮೆಯ್ವೆತ್ತು ಪುಟ್ಟಿದ ಆದಿನಾರಾಯಣನಲಾ' ಇವನು! ಹಿಂದೆ 'ಬಲ್ಲೆಂ ಅವಳಯೋನಿಜೆಯೆಂಬುದಂ, ಪಾವನೆಯೆಂಬುದಂ. ಆದೊಡಂ ಜನರಿಂತು ಜೋಡಿಸೆ ಪುದುವಾೞ್ವೆನೆಂತೊ' ಎಂದು ಸ್ವಸುಖೈಕಕಾಮನಾಗಿ ನಿರ್ದುಷ್ಟೆಯನ್ನು ಕಾಡಿಗಟ್ಟಿದನಲ್ಲ? ಅರಿಯದ ಹೆಣ್ಣಿನ ಪಾಡೇನೆಂದು, ಬೇಡ? ತನ್ನ ಸೊಗವೆ, ತನ್ನ ಪುದುವಾೞ್ಕೆಯೆ ಯಾವಾಗಲೂ!

ರಾಮನಿಗಂತೂ ತನ್ನ ಅನ್ಯಾಯದ ಅರಿವಾಗದಿದ್ದರೆ ಮಹಾಮುನಿ ಅಗಸ್ತ್ಯನಾದರೂ ತಿಳಿಯಬೇಡ? ತಿಳಿಸಬೇಡ? ಇಲ್ಲ. 'ಪಾತಕಂ ಜ್ಞಾತಂ, ಅಜ್ಞಾತಂ' ಎಂದು ತೊಡಗಿ ಬ್ರಹ್ಮಹತ್ಯೆಯ ಪಾಪಕ್ಕೆ ಅಶ್ವಮೇಧ ಮಾಡೆಂದು ಒಡರಿಸುವನಂತೆ! ಈ ಸಾಕ್ಷಾನ್ನಾರಾಯಣ ಅಂತೆ ಗೈವನಂತೆ! ಸೀತೆಯ ಮಾತೇ ಇಲ್ಲ! ಮುಂದೆ ಬ್ರಹ್ಮಹತ್ಯೆಯ ಬಿಸಿಲುಗುದುರೆಯ ಬೇಟೆ! 'ಇಂತೆರ್ದೆವುಗುವ ಕತೆಗಿನ್ನೆಂತುಡುಗೊಱೆಯಂಗೆಯ್ವೆನೋ!' ಇದಕ್ಕಿಂತ, ಉೞಿದೊಡಂ ಅೞಿದೊಡಂ ಬಟ್ಟೆದೋರಿಪ ರಸಭರಿತಂ ಚರಿತಂ' ಆಗದಿದ್ದರೂ ರಸಭಾರದಲ್ಲಿ ಭೋಜಪ್ರಬಂಧ ವಿಕ್ರಮವಿಜಯ ಮಹಾವೀರಚರಿತಗಳೆ ಎಷ್ಟೋ ಮೇಲು.

* * *

ಆದರೆ ಇದನ್ನು ನಾನು ಹೀಗೆ ಹೇಳಲಾಗದು. ನಮ್ಮ ಜನ ಕೇಳಲಾರರು. 'ಛಿಃ! ಶ್ರೀರಾಮ ಪುಣ್ಯಚರಿತಮುಂ ಪಾಟ್ಗತೆಯೆಂದು ಇಱಿಕೆಯ್ದು ತೆಗಬ್ಬ!' ಎಂದಾತು. 'ಉೞಿದೊಡಂ ಅೞಿದೊಡಂ ಬಟ್ಟೆದೋಱಿಪ ರಸಭರಿತಂ ಚರಿತಂ' ಎನಿಸುವ 'ರಾಮಾಯಣದೊಳೇ ನಾನುಮೊಂದು' ಈ 'ಪುಣ್ಯಚರಿತಂ'. 'ಅಧರಕ್ಕೆ ಕಹಿ—ಉದರಕ್ಕೆ ಸಿಹಿ'ಯಾದ ಈ ಟೀಕೆಯನ್ನು ಜನಕ್ಕೆ ಹಿತವಾಗಿ ತಿಳಿಸುವುದೆಂತು?

ಒಳ್ಳೆಯದು. ಶೃಂಗಾರ ಹಾಸ್ಯಗಳ ಹಿತಮಿತ ಮಿಶ್ರಣದಲ್ಲಿ ಈ ಕಟು ಟೀಕೆಯನ್ನು ಕಲಸಿಕೊಡೋಣ.*

ಒಬ್ಬ ಕಬ್ಬಿಗರ ಬಲ್ಲಹನಿರಲಿ. ಅವನಿಗೆ ಮುದ್ದಣ್ಣನೆಂದು ಮುದ್ದಾದ ಹೆಸರಿರಲಿ. ಅವನಿಗೆ ತಾನು ಬರುವುದನ್ನು 'ದೂರದೆ ಕಂಡೆಟ್ದು ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೆಯ್ವಿಡಿದೊಳ ಚೌಕಿಗೆಗುಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿನ ಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುವ' ಮುದ್ದಿನ ಮಡದಿ ಯಿರಲಿ. ಅವಳಿಗೂ ಮುದ್ದಾದ ಹೆಸರಿರಲಿ: ಮನೋರಮೆ ಎಂದು. ಈಕೆ ಒಂದು ಸಂಜೆ ಕತೆ ಹೇಳುವಂತೆ ಅವನನ್ನು ಕೇಳಲಿ. ಸೀತಾ ಸ್ವಯಂವರ ಸೀತಾಪಹರಣಗಳನ್ನು ಅವನು ಮೊದಲೇ ಕತೆ ಹೇಳಿದ್ದಾ ನೆಂದು ಸಂಕೇತವಿರಲಿ. ಎಂದರೆ, ಇನ್ನುಳಿದ ಕತೆ ಸೀತಾಪರಿತ್ಯಾಗ ವೆಂದಾಯಿತು. ಆದರೆ ಮನೋರಮೆ "ಶ್ರೀರಾಮಂ ಅಶ್ವಮೇಧಮಂ ಕೆಯ್ಕೊಂಡನೆಂಬರಲ್ತೆ. ಆ ಕತೆಯೆ ಅಕ್ಕುಂ' ಎನ್ನಲಿ. 'ಅಯ್ಯೊ! ಶೇಷರಾಮಾಯಣವೆ!' ಎಂದು ಹಂಗಿಸಲಿ ಮುದ್ದಣ; 'ಬಲ್ಗತೆ ಕಣಾ! ಒಂದೆರಟ್ದಿವಸಕ್ಕೆ ಮುಡಿಯದು!' ಎಂದು ಅವಳನ್ನು ಮರಲ್ಚಲು ಯತ್ನಿಸಲಿ. 'ಇರ್ಕೆ. ಓರೊಂದು ದೆವಸಮಿನಿಸಿನಿಸಂ ಪೇಟ್ದೊಡೇಂ?' ಎನ್ನಲಿ ಆಕೆ. ಹೀಗೆ, ಹೇಳದೆ ತೀರದಾಗಿ ಬಂದಾಗ, ಈ ಕಬ್ಬಿಗರ ಬಲ್ಲಹ ಈ ಬರಿ ರಗಳೆಯ ನಿಡುಗತೆಯಿಂದ ಆಕೆಗೆ ತಲೆ ನೋವು ಬರುವಂತೆ ಹೇಳಲಿ. ಈ ಕತೆಯ ಗುಣಕ್ಕೆ ತಕ್ಕಂತೆ ಹೇಳುವ ಸಮಯ ವರ್ಷಾಕಾಲದ ಸಂಜೆಯಾಗಿರಲಿ. ಒಳಗೆ ಹೇಗೋ ಹೊರಗೂ ಹಾಗೆ ಸೋನೆಯಿರಲಿ. 'ಪಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನತ್ತಣಿಂ ಬೇಸತ್ತ ಬಗೆ'ಯನ್ನು ತಣಿಸಲು ಇದಕ್ಕಿಂತ ಯೋಗ್ಯ ಕತೆಯೆಲ್ಲಿ!

ಮುದ್ದಣ ಮನೋರಮೆಗೆ ಅಶ್ವಮೇಧದ ಕತೆ ಬಿತ್ತರಿಸಲಿ. ಬಿತ್ತರಿ ಸುತ್ತ ಬಿತ್ತರಿಸುತ್ತ, ಯಜ್ಞಕಾಲಕ್ಕೆ ಸೀತೆಯಲ್ಲಿರಲಿಲ್ಲವೆಂದು 'ಪೊನ್ನ ಸೀತೆ'ಯನ್ನು ಸೂಚಿಸಲಿ. ಏಕಿರಲಿಲ್ಲವೆಂದು ಕುತೂಹಲ ಕೆದಕಿದ ಮನೋರಮೆಗೆ ಮುದ್ದಣ ಸೀತಾಪರಿತ್ಯಾಗದ ಕತೆಯನ್ನು ಮರುಗಿಸು ವಂತೆ ವಿಸ್ತರಿಸಲಿ. ಮನೋರಮೆ ಅದರಲ್ಲಿ ಆಸಕ್ತಳಾದಳೆಂದು ಕಂಡು ಬಂದಾಗ 'ಇಂತು ನಡೆನಡೆದು ಬಲ್ದೂರಂಬೋಗಿ ನಟ್ಟಡವಿಯಂ ಪೊಕ್ಕು ಕಟ್ಟಕಡೆಯೊಳಣ್ಣನ ಕಟ್ಟಾಣತಿಯನೊರೆದು ಲಕ್ಷ್ಮಣಂ ಭೂಮಿಜೆಯನುೞಿಸಿ ಪೋದಂ' ಎಂದು ತಟ್ಟನೆ ಮುಗಿಸಲಿ. ಆಗ ಮನೋರಮೆ ತಾನಾಗಿಯೆ, ಅಶ್ವಮೇಧದ ನೆನಪೆ ಇಲ್ಲವೆಂಬಂತೆ, ಸೀತಾ ಪರಿತ್ಯಾಗವನ್ನು ವಿಸ್ತರಿಸಬೇಕೆಂದು ಬೇಡಲಿ. ವಿಸ್ತರಿಸುತ್ತ, ಮಧ್ಯೆ ಮುದ್ದಣ 'ಜನ್ನಗುದುರೆ'ಯ ಹೆಸರೆತ್ತಲಿ. ಎತ್ತಿದೊಡನೆ 'ಸುಡು ಸುಡು ನಿನ್ನ ಜನ್ನಗುದುರೆಯಂ. ಆ ಕತೆಗೀಗಳೆ ಪೊಟ್ಟಿ? ಸೀತೆಯೇ ನಾದಳೆಂತಿರ್ದಳೆಂದು ಪೇೞಿಯ್' ಎಂದು ಮನೋರಮೆ ಸಿಡಿಮಿಡಿ ಗೊಳ್ಳಲಿ. ಸೀತೆ ಪ್ರಾಚೇತಸನ ಒಲ್ಮೆಗಾಪಿಗೆ ಬರುವತನಕ ಮುದ್ದಣ ಕತೆ ತಿಳಿಸಲಿ. ಅಲ್ಲಿಂದ ಮುಂದೆ, ಇಂತಹ ಕತೆಯ ಪಕ್ಕದಲ್ಲಿ ಅವಳು ಕೇಳಬಯಸಿದ ಅಶ್ವಮೇಧದ ಕತೆ ಹೇಗೆ ಕಾಣುವುದೆಂಬುದಕ್ಕೆ ಕುದುರೆ ಪೊಱಟು ನಡೆದುದನ್ನು 'ಸವಿಸ್ತರಂ ನಿರವಿಸಲಿ'; 'ತೊಡಂಕಿ ಬೆದಂಕಿ ಪೇೞಲಿ'. ಮನೋರಮೆಗೆಯೆ 'ಎಲ್ಲೆಲ್ಲಿ ಕೇಳಿಕೊಂಡೆ ನಾನೀ ಕತೆ ಯನ್ನು!' ಎನ್ನುವಂತೆ ಹೇಳಲಿ. ಆಕೆ ಆ ಕತೆಯ ಬಗ್ಗೆ (ನನ್ನ) ತನ್ನ ಅಭಿಪ್ರಾಯವನ್ನು ಮುಚ್ಚುಮರೆಯಿಲ್ಲದೆ ಹೇಳಿಬಿಡಲಿ. (ಹೆಂಗುಸದು ತಾನೆ ಈ ಅಭಿಪ್ರಾಯ! ಅದರಲ್ಲೂ ಆ ಹೆಂಗುಸು ಮನೋರಮೆ ಯಂತಹ ಮನೋಹರಿ ತಾನೆ! ಅದೂ ಮನೆಯೊಳಗೆ ಕುಳಿತು ಗಂಡ ನೊಂದಿಗೆ ತಾನೆ! ಲೋಕಾಂತವಲ್ಲವಲ್ಲ! ಏಕಾಂತ!) ಯಜ್ಞಾಶ್ವ ಸಂಚಾರದ ಕತೆ ಕೇಳಿ ತೂಕಡಿಸುತ್ತಿದ್ದ ಮನೋರಮೆ (ಲವಕುಶ) ಕುಮಾರರು ಕುದುರೆ ಕಟ್ಟಿದುದು ಕೇಳಿ ಎಚ್ಚರಗೊಳ್ಳಲಿ. ಆ ಕುವರರ ಕತೆ ಕೇಳಲು ಉತ್ಸುಕಳಾಗಲಿ. ಆಗ 'ಎಳಗುವರರೊಂದು ಕತೆ ಮುಂತಿರ್ಕೆ. ನೀಂ ಮುನಿವೆರಸು ಪೋದ ಸೀತೆಯೊಂದಿರವನಱಿ ತುಂಟೆ?' ಎಂದು ಮುದ್ದಣ ಎಚ್ಚರಗೊಡಲಿ. "ಆ ಮಕ್ಕಳಿರ್ಕೆ ಪೋಕೆ. ಎನ್ನಬ್ಬೆ ಸೀತೆಯೆಂತಿರ್ದಳೀಂಗೆಯ್ದುಳ್ ಪೇೞ" ಎನ್ನುವಷ್ಟು ಮಟ್ಟಿಗೆ ಮನೋರಮೆ ಅಶ್ವಮೇಧದಿಂದ ಸೀತಾತ್ಯಾಗದ ಪರಿಸಮಾಪ್ತಿಗೆ ಮುರಿದು ಬರಲಿ. ಮುಂದೆ 'ಮಕ್ಕಳ ಸೆರಗಿಲ್ಲದ ಸಾಸಕ್ಕೆ ಬೆಱಗುವಟ್ಟು ಹುಂಗುಟ್ಟದೆ ಗುರುಗುಮ್ಮ'ನಿರಲಿ. ರಾಮ ಸೀತೆಯನ್ನು ಕರೆದೊಯ್ದನೆ ಎಂಬುದನ್ನೂ ಮುದ್ದಣ ವಾಚ್ಯವಾಗಿ ಹೇಳದಿರಲಿ. ಮನೋರಮೆಯೆ ಮರೆಯದೆ 'ಏಂ ಸೀತೆಯನಿನ್ನುಂ ಕೂಡಿ ಪೋಗನೆ?' ಎನ್ನಲಿ. ಈಗ ಕೂಡಿಯೆ ಪೋದನೆಂದಾಗ, ಹಿಂದೆ ಸೀತೆಯನ್ನು ತೊರೆದುದಕ್ಕೆ ರಾಮ ನನ್ನು ತೆಗಳಿದಾಕೆ ಈಗ ತಾನೇ 'ರಾಮನೊಳ್ಳಿದನಕ್ಕೆ' ಇತ್ಯಾದಿ ತುದಿ ಕೊನೆಯಿಲ್ಲದೆ ಹರಸಲಿ. ಹೀಗೆ ಮುದ್ದಣ, ಕಬ್ಬಿಗರ ಬಲ್ಲಹ, 'ಅರಿ ಯದರಂತೆ ಮಿಣ್ಣನಿರ್ದು' ಮನೋರಮೆಯನ್ನು 'ತನ್ನಿಂ ತಾನೆ ಕಟ್ಟಸಿದ ದಿಟ್ಟ'ನಾಗಲಿ.

* * *

ಉಂ. ದೊಡ್ಡ ವಿಡಂಬವಾಯಿತು. ಆದುದು ಆಯಿತು; ಎಡೆ ಎಡೆಗಿರಲಿ ಇನ್ನೊಂದೆರಡು........ಪದ್ಯ ವಧ್ಯವಂತೆ! ಗದ್ಯ ಹೃದ್ಯವಂತೆ! 'ಅತ್ತೆವಿರೇಂ ಬಯ್ದರೆ? ಎನ್ನೊತ್ತಿನ ಸಹಜಾತರಂತುಟಣಕಿಸೆ ನಿನಗಾದತ್ತೆ ವಿಷಾದಂ? ದೂಸಱಿದೆತ್ತಣೆನಾಯ್ತುರಸಿ ನಿನಗೆ ಸರಸಿರು ಹಾಕ್ಷೀ?' ಪದ್ಯವೂ ಹೃದ್ಯವಾಗಬಲ್ಲುದು. 'ಸ್ವಸ್ತಿ. ಶ್ರೀಮತ್ಸುರಾ ಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರ ಮಣಿಮುಕುಟ ತಟಘಟಿತ–' ಇದಕ್ಕಿಂತ ವಧ್ಯವಾದ ಗದ್ಯ ಬೇಕೆ! ಇದು 'ಸಕ್ಕದದೊಂದು ಚೆಲ್ವು!' ........ಪುರಾಣ ಕತೆಗಳನ್ನು ಕುರಿತು ಈ ಸಣ್ಣ ಸೂಜಿಚುಚ್ಚಿರಲಿ: ಸ್ವರ್ಗದ ದೇವತೆಗಳಿಗೂ ಭೂಮಿಯ ತಪಸ್ವಿಗಳಿಗೂ ಹಗೆಯಂತೆ. ಇವರು ತಪಸ್ಸಿಗೆ ನಿಂತರೆ ದೇವತೆಗಳು ಅಡ್ಡಿಯೊಡ್ಡುವರಂತೆ. ಇದು ಹುಟ್ಟುಹಗೆ. ನಾಡವರು ದಿನ ದಿನ ಬೇಳುವ ಹವ್ಯವನ್ನು ಉಂಡುಂಡು ಸವಿಕೊಂಡ ದೇವತೆಗಳು ಎಲ್ಲಿಯಾದರೂ ಒಬ್ಬ ಈ ನಿತ್ಯಬಲಿಯಿಂದ ಪುರುಳು ಕಾಣದೆ ಹೆಜ್ಜೆಯಿಟ್ಟು ತಿರುಳು ಪುರುಳುಗಳನ್ನು ತೋರಿಸುವ ಯೋಗಕ್ಕೆ ಸಂಚುಗೆಯ್ದೊಡನೆ ಕರುಬಿ ಸದಾ ಈ ಉದ್ಯೋ ಗಕ್ಕೆ ತಡೆ ಬರುವರು. ಕಳ್ಳು ಕುಡಿದವರು ಏನು ತಾನೆ ಮಾಡುವುದಿಲ್ಲ? ನೂರು ಯಜ್ಞದ ಬಲ್ಮೆಯಿಂದ ಸ್ವರ್ಗದಲ್ಲಿ ಬಾಳುವ ಇಂದ್ರ ಕೂಡ ಈ ಯೋಗಮಾರ್ಗವನ್ನು ಕಂಡು ಇರಲಾರ........

ಇಂತಹ ವಿಷಯಗಳನ್ನು ಬಿಟ್ಟು ಸ್ವತಂತ್ರ ಕೃತಿಗೆ ತೊಡಗಿದರೆ ಕಬ್ಬಿಗರ ಬಲ್ಲಹ ಏನು ಮಾಡಬಲ್ಲನೆಂಬುದಕ್ಕೆ ಮುದ್ದಣ ಮನೋರಮೆ ಯರ 'ಕಾಮದೇವ–ರತಿದೇವಿ' ಸಲ್ಲಾಪ ಸಾಕ್ಷಿಯಿರಲಿ. ಕೊನೆ ಗೊಂದು ಕೊಂಡಿಯಿರಲಿ: 'ಇಂತು ವ್ಯರ್ಥಾಳಾಪದಿಂ ಪೊಟ್ತಂ ಕಟಿ ವೆಮ್ಮಂ ಲೋಗರ್ ಪೞಿಯರೆ? ಪೋ ಮಾಣ್. ರಾಮಕಥೆಯ ನಿನ್ನೊರೆವೆಂ ಕೇಳ್', ಎಂದು. ವ್ಯರ್ಥಾಳಾಪವೆಂದು ಯಾರೂ ಪಳಿಯರು, ಗೊತ್ತು. ರಾಮ ಕಥೆಗಿಂತ ಇದನ್ನೆ ಹೇಳು–ಎಂಬರು, ಗೊತ್ತು. ಆದರೆ ನಾನು ತೋರ ಹೊರಟಿರುವುದು ಅಶ್ವಮೇಧದ ಕತೆಯ ಪುರುಳಮೆ. ಇದೊ; ಇರಲಿ ಇನ್ನೊಂದು ರಸಸ್ಥಾನ: 'ಭವತಿ ಭಿಕ್ಷಾಂದೇಹಿ' ಮಂತ್ರೋಪದೇಶ........ಇವು ಶೃಂಗಾರ ಹಾಸ್ಯ ಗಳಿಗಾಯ್ತು. ವೀರರಸಕ್ಕೆ ಕುಶಲವರ ಕಾಳಗ ಸಾಕು. ತೂಕಡಿ ಸುತ್ತಿದ್ದ ಮನೋರಮೆ ಎಚ್ಚತ್ತು ಈ ಕತೆ ಕೇಳಿ 'ಸೆರಗಿಲ್ಲದ ಸಾಸಕ್ಕೆ ಮರವಟ್ಟು' ಇರಲಿ. ಜೊತೆಗೆ ಕಬ್ಬಿಗರ ಬಲ್ಲಹನ ಬಣ್ಣನೆಯ ಕುಸುರಿ

(೪೧೨ನೆಯ ಪುಟಕ್ಕೆ)

---

* ಈ ಪದ್ಧತಿ ನಮ್ಮವರಿಗೇನೂ ಹೊಸದಲ್ಲ. 'ಅಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ' ಎಂದ ರತ್ನಾಕರ ಕೂಡ—

"ಆಗಮವಧ್ಯಾತ್ಮವಳವಟ್ಟ ಶೃಂಗಾರ |
ತ್ಯಾಗಭೋಗದ ಮೋಡಿ ಮೆರೆಯೆ ||
ಭೋಗಿಯೋಗಿಗಳೆದೆ ಜುಮ್ಮುಜುಮ್ಮೆನೆ ನೇಮ |
ದಾಗಿ ಸೊಲ್ಲಿಸುವೆನಾಲಿಸಿರೊ"

ಎಂದು ಭರತೇಶ ವೈಭವದಲ್ಲಿ ಹೇಳಲಿಲ್ಲ? ಅಶ್ವಘೋಷನನ್ನೂ ನೋಡಿ:

ಇತ್ಯೇಷಾ ವ್ಯುಪಶಾಂತಯೇ ನ ರತಯೇ ಮೋಕ್ಷಾರ್ಥಗರ್ಭಾ ಕೃತಿಃ |
ಶ್ರೋತೄಣಾಂ ಗ್ರಹಣಾರ್ಥಮನ್ಯಮನಸಾಂ ಕಾವ್ಯೋಪಚಾರಾತ್ ಕೃತಾ |
ಯನ್ಮೋಕ್ಷಾತ್ ಕೃತಮನ್ಯದತ್ರ ಹಿ ಮಯಾ ತತ್ಕಾವ್ಯಧರ್ಮಾತ್ಕೃತಂ |
ಪಾತುಂ ತಿಕ್ತಮಿವೌಷಧಂ ಮಧುಯುತಂ ಹೃದ್ಯಂ ಕಥಂ ಸ್ಯಾದಿತಿ ||



ಶುಕ್ರವಾರ, ಆಗಸ್ಟ್ ೨೩, ೧೯೪೦

## ಗ್ರಹಣ ಕಾಲ

ಇಂದು ಸರ್ವಾಧಿಕಾರಿಗಳು ಪ್ರಬಲಿಸಿ ಎಲ್ಲೆಲ್ಲಿ ರಾಜ್ಯ ವ್ಯವಸ್ಥೆಯೂ ದಿನಚರಿಯ ಜೀವನಕ್ರಮವೂ ಮಾರ್ಪಟ್ಟವೆಯೊ ಅಂತಹ ರಾಷ್ಟ್ರಗಳಿಂದೆಲ್ಲ, ಎಂದರೆ ರಷ್ಯಾ, ಜರ್ಮನಿ, ಇಟಲಿ ಮುಂತಾದ ನಾಡುಗಳಿಂದ,–ಈ ರಾಷ್ಟ್ರಗಳಲ್ಲಿ ಮುಖ್ಯವಾಗಿ ಜರ್ಮನಿಯ ಕೈ ಮೇಲಾದ ಕಡೆಯಿಂದ–ಸ್ವತಂತ್ರವಾದ ನಡೆ, ನುಡಿ, ಬರಹ, ಕಲೆ, ಬಗೆ, ಕಾರ್ಯರಚನೆ ಕಾಣದಂತೆ ಮಾಯವಾಗುತ್ತಿವೆ. ಅವು ತಲೆಯೆತ್ತಿ ಕಾಣಿಸಿಕೊಂಡ ಕಡೆ ಅವನ್ನೂ ಕಲೆಗಾರರನ್ನೂ ಹೊರಗೆ ಹಾಕಿದ್ದಾರೆ. ಆ ಅಳಲನ್ನು ಹೇಳತೀರದು. ಶಾಸ್ತ್ರವೇತ್ತರು, ಕಲೆಗಾರರು, ಹಿರಿಯ ಸಾಹಿತಿಗಳು, ನ್ಯಾಯನಿಷ್ಠರು ಇವರಿಗೆ ಭಂಗವುಂಟಾಗಿ ತಾಯ್ನಾಡುಗಳಿಂದ ಉಚ್ಚಾಟನೆಯಾಗಿದೆ. ತಬ್ಬಲಿಗಳಂತೆ ಅವರು ದೇಶದೇಶ ಅಲೆಯುತ್ತಿದ್ದಾರೆ; ದಿಕ್ಕಿಲ್ಲದೆ ಇಂಗ್ಲಂಡ್, ಅಮೆರಿಕಾ, ಪೂರ್ವರಾಷ್ಟ್ರಗಳು ಮುಂತಾದಲ್ಲಿಗೆ ಹೋಗಿ ತಮ್ಮ ವೃತ್ತಿ, ಬದುಕು ನಡೆದಾವೇನೊ ಎಂದು ನಿರೀಕ್ಷಿಸುತ್ತ ಬಾಯಿಬಿಡುತ್ತಿದ್ದಾರೆ. ಅವರ ಆಸ್ತಿ ಹೋಗಿದೆ; ಅವರ ನಾಡು ನುಡಿ ಅವರಿಗೆ ಇಲ್ಲವಾಗಿದೆ; ಹಳೆಯ ಸ್ನೇಹಿತರಿಲ್ಲವಾಗಿದ್ದಾರೆ; ಅವರು ಬರೆದುದನ್ನು ಓದುವ ಜನ ಇಲ್ಲವಾಗಿದ್ದಾರೆ; ಅವರು ಗಳಿಸಿದ ತಿಳಿವಳಿಕೆಗೆ ಬೆಲೆ, ಪ್ರಯೋಜನ ಇಲ್ಲವಾಗಿವೆ; ಅವರ ಕಲೆಗೆ ಸ್ವೀಕಾರದ ನೆಲೆ ದೊರಕದಾಗಿದೆ. ಮನೆ ಮಠ ಹಣ ಇಲ್ಲದೆ ದೇಶದೇಶ ಅಲೆಯಬೇಕಾದ ಈ ಕಾಲದಲ್ಲಿ ಕೂಡ ತಮ್ಮ ಮನಸ್ಸಿನ ಸ್ವಾಧೀನತೆಯನ್ನು ಮಾರಿಕೊಳ್ಳುವ ಇಚ್ಛೆಯಿಲ್ಲದೆ ತೊಳಲುವ ಹಿರಿಯ ಸಾಹಿತಿಗಳ ಸಂಖ್ಯೆ ಇಂದು ಬಹಳ.

ಇಂತಹ ಒಂದು ಗುಂಪಿನ ಜನವನ್ನು ಸೋದರತೆಯಿಂದ ಎದುರುಗೊಂಡು ತಮ್ಮ ಕಯ್ಯಲ್ಲಾದ ಸಹಾಯವನ್ನು ನೀಡಿ ಆತಿಥ್ಯ ತೋರುವ ಸಂಸ್ಥೆಗಳು ಪ್ರಪಂಚದಲ್ಲಿ ಕೆಲವೆಡೆ ಇವೆ. ಇಂಗ್ಲಂಡ್ ದೇಶದಲ್ಲಿ ಪಿ. ಇ. ಎನ್. ಸಂಸ್ಥೆ ಅಂಥದೊಂದು. ಹಿಂದಿನ ಸಂಚಿಕೆಯಲ್ಲಿ ಎಸ್ತೋನಿಯಾ ದೇಶದ ಸಾಹಿತ್ಯೋತ್ತೇಜನವನ್ನು ಕುರಿತು ಬರೆದಿದ್ದೆವು. ಇಂದು ಇಂಗ್ಲಂಡಿನ ಈ ಸಂಸ್ಥೆಯ ಅಧ್ಯಕ್ಷರಾದ ಮಿಸ್. ಸ್ಟಾರ್ಮ್-ಜೇಮ್ಸನ್ ಎಂಬಾಕೆ ಒಂದು ಸಮಯದಲ್ಲಿ ಇಂತಹ ವಿದೇಶೀಯ ಸಾಹಿತ್ಯ ಬಾಂಧವರಿಗೆ ಆಡಿದ ಮಾತುಗಳು ವಿಶೇಷ ಮಹತ್ವವಾದವು:

"ಬಾಗಿಲಿಂದ ಮನೆಯ ಒಳಕ್ಕೆ ಬಂದಮೇಲೆ ಪರಕೀಯನಂತೆ ಬದುಕುವುದು ಸುಲಭವಲ್ಲ. ನಮಗದು ಗೊತ್ತು. ಅದಕ್ಕಾಗಿ ನಮಗೆ ವ್ಯಥೆಯಾಗುತ್ತದೆ. ಅದನ್ನು ಸುಲಭಗೊಳಿಸಲು ಎಷ್ಟು ಇಷ್ಟವಿದ್ದರೂ ಶಕ್ತಿಯಿಲ್ಲವಾಗಿದೆ. ಕೈಯಲ್ಲಾದುದನ್ನು ಮಾಡುವೆವಾದರೂ ಅದು ಬಹಳ ಅಲ್ಪ. ನಾವು ನಿಮ್ಮ ಮನೆಗಳನ್ನೂ ನಿಮ್ಮ ಬಳಕೆಯ ಬೀದಿಗಳನ್ನೂ ನೀವು ಕಳೆದುಕೊಂಡಿರುವ ನಿಶ್ಚಯಗಳನ್ನೂ ಹಿಂದಕ್ಕೆ ಕೊಡಲಾರೆವು. ಕಡೆಯಲ್ಲಿ, ಧೈರ್ಯ ಹೊರತು ಬೇರೆಯಾವುದೂ ನಿಮಗೆ ಅಷ್ಟು ಪ್ರಯೋಜನಕಾರಿಯಲ್ಲ. ಆ ಧೈರ್ಯ ನಿಮ್ಮಲ್ಲಿ ತುಂಬಿದೆ. ಅದನ್ನೇ ನೀವು ನೆಚ್ಚಿದ್ದೀರಿ. ನಮ್ಮ ಗೆಳೆತನವನ್ನೂ ನೆಚ್ಚಿದ್ದೀರಿ; ಹಾಗೆಂದು ನಂಬಿಕೆ ನನಗೆ. ನಮಗೆ ತೀವ್ರವಾಗಿ ಅನುಭವವಾಗಿದೆ: ಹೊಸ ದೇಶವೊಂದರಲ್ಲಿ ನಿಮ್ಮ ಬದುಕಿನ ಮೇಲೆ ಕವಿದು ಬಂದ ಅನಿಶ್ಚಯವನ್ನೂ ಅಸುಖವನ್ನೂ ದಾಟಲು ಯಾವುದೋ ಅವಸರದಲ್ಲಿ ಹೇಗೋ ಎಸೆದು ಹಾಸಿದ ಹಲಗೆ ಈ ಕೆಳೆತನ ಎಂದು. ಅದಕ್ಕಾಗಿ ನೀವು ನಮ್ಮನ್ನು ಕ್ಷಮಿಸಬೇಕು. ಒಂದು ಹೊಸ ಬಗೆಯ ಕಾತರ ನಮಗೆ ಉಂಟಾಗಿದೆ; ಯುದ್ಧದ ಗೊಂದಲಗಳಲ್ಲಿ ನಾವೂ ಸಿಕ್ಕಿಕೊಂಡಿದ್ದೇವಾಗಿ ಮೊದಲು ಅವಕ್ಕೆ ಗಮನ ಕೊಡಬೇಕಾಗಿದೆ. ಸ್ವಂತ ಉದ್ಯೋಗಗಳಲ್ಲಿ ತೊಡಗಿ ಮರೆತಂತಿರುವ ನಮ್ಮನ್ನು ನೋಡಿ ನಿಮ್ಮ ಪರವಾದ ಚಿಂತೆಯನ್ನು ನಾವು ತೊರೆದಿದ್ದೇವೆಂಬ ತಪ್ಪಭಿಪ್ರಾಯವನ್ನಿಟ್ಟುಕೊಳ್ಳಬೇಡಿ. ಇನ್ನೊಂದನ್ನು ಹೇಳಬೇಕೆನ್ನಿಸುತ್ತದೆ: ಹೊರಗಿಂದ ಮನೆಯೊಳಕ್ಕೆ ಬಂದು ನಿಂತವರನ್ನು ಕಂಡು, ಇತರ ಎಲ್ಲ ಕಡೆಗಳಲ್ಲಿರುವಂತೆಯೇ ಇಲ್ಲಿಯೂ ಸಂಶಯಪಡುವ ಜನ ಇದ್ದಾರೆ. ಇಂಥವರು ನಿಮ್ಮ ಮೇಲೆ ಆಪಾದನೆ ಹೊರಿಸಿಯಾರು; ನಿಮಗೆ ವಿರೋಧವಾಗಿ ನುಡಿದಾರು. ಅಂಥವರು ನಿಮ್ಮ ಹಗೆಗಳು ಹೇಗೋ ಹಾಗೆ ನಮ್ಮ ಹಗೆಗಳೂ ಹೌದೆಂಬುದನ್ನು ನೆನಪಿನಲ್ಲಿಡಿರಿ. ಪಿ.ಇ.ಎನ್. ಸಂಸ್ಥೆ ಯಾವ ತತ್ವಕಾಗಿ ಹುಟ್ಟಿದೆಯೊ ಏತಕ್ಕಾಗಿ ನಿಲ್ಲಬೇಕೊ ಆ ಎಲ್ಲಕ್ಕೂ ಹಗೆಗಳು ಅಂಥವರು. ಮಾನವರಿಗೆ ಧರ್ಮಬುದ್ಧಿ ಶಕ್ಯ, ಎಲ್ಲಕ್ಕೂ ಮೀರಿದುದು ಮಾನವ ಸೋದರತೆ ಎಂಬುದನ್ನು ಅವರೇನು ಬಲ್ಲರು? ಅಂಥವರಿಗೆ ಪ್ರತಿಯಾಗಿ ನಾವು ನಿಮಗೆ ಮಿತ್ರರು. ಇದನ್ನು ಮರೆಯಬೇಡಿ. ಕೋಪಿಸಿಕೊಳ್ಳಬೇಡಿ–ಅದರಿಂದ ಅಪಾಯವುಂಟು; ತಾಳ್ಮೆ ಕಳೆದುಕೊಳ್ಳಬೇಡಿ–ನಮ್ಮೆಲ್ಲರ ಪಂಥಕ್ಕೆ ಅದರಿಂದ ಕೇಡುಂಟು. ಈ ಸಂಜೆ ನಾವೆಲ್ಲರೂ ಕೆಲವು ಗಂಟೆಗಳ ಕಾಲ ಸುರಕ್ಷಿತವಾಗಿದ್ದೇವೆ; ನಿಶ್ಶಂಕೆಯಿಂದಿದ್ದೇವೆ. ಅದಕ್ಕಾಗಿ ಸಂತೋಷಪಡೋಣ. ಇಲ್ಲಿರುವ ನಮ್ಮೆಲ್ಲರಿಗೂ ಅನುಕೂಲವಾದ ಭವಿಷ್ಯ ಕಾದಿದೆ; ಎಲ್ಲರ ಕೈತುಂಬುವಷ್ಟು ಕೆಲಸ ಸಿಕ್ಕುವುದು"—ಎಂಬ ನುಡಿಯಲ್ಲಿನ ಉತ್ತೇಜನವೂ ಸೌಮನಸ್ಯವೂ ಸಾಧಾರಣವಾದವಲ್ಲ. ವ್ಯಕ್ತಿತ್ವವೂ ಸ್ವತಂತ್ರ ತೇಜೋಬಲವೂ ಉಳ್ಳ ಜನಕ್ಕೆ ರಾಜಕೀಯ ಸರ್ವಾಧಿಕಾರ ಪ್ರಬಲಿಸಿರುವ ರಾಷ್ಟ್ರಗಳಲ್ಲಿ ಎಡೆಯಿಲ್ಲ. ಇಂತಹ ಸತ್ವಯುತರನ್ನು ತುಳಿಯದಿದ್ದರೆ ಅವರ ಆಳಿಕೆ ನಡೆಯದು. ಅವರು ಹೇಳಿದಂತೆ ಕೇಳುವ ವಿಧೇಯರಿವರಲ್ಲವಾಗಿ ಅವರು ಮನಸ್ಸು ಬಂದಂತೆ ಎಲ್ಲವನ್ನೂ ನಡಸಲು ಅಡ್ಡಿಯಾಗುವುದು. ಜನಕ್ಕೆ ಇವರಲ್ಲಿ ಗೌರವ, ಭಕ್ತಿ ಇರುವುದರಿಂದಲೂ ಜನಕ್ಕೆ ಸ್ಫೂರ್ತಿ ಬರುವಂತೆಯೂ ಮನಸ್ಸು ತಿರುಗುವಂತೆಯೂ ಬರೆಯಬಲ್ಲ ಶಕ್ತಿ ಇರುವುದರಿಂದಲೂ ಇಂತಹವರನ್ನು ಹೊರದೂಡಿದಷ್ಟೂ ನಾಶಮಾಡಿದಷ್ಟೂ ಅವರಿಗೆ ಪ್ರಯೋಜನ ಹೆಚ್ಚು. ತಾವು ಅಳಿಸಿಹೋದ ಮೇಲೂ ಅನ್ಯತವಾದ ಇಂಥವರ ಕೃತಿಯಿಂದ ಕೇಡಾದೀತೆಂಬ ಭೀತಿ ಇದ್ದೇ ಇರುತ್ತದೆ. ತಮ್ಮ ಪ್ರಭಾವ ಹೆಚ್ಚು ಕಾಲ ನಡೆಯಬೇಕೆಂಬ ಕಾರಣದಿಂದ ಈ ಸತ್ಯಭಕ್ತರಿಗೂ ಸರಸ್ವತೀಕುಮಾರರಿಗೂ ಕಷ್ಟ ಕೊಡುವರು.

ಪ್ರಪಂಚವಲ್ಲಿ ಇಂದು ಎಲ್ಲ ದೊಡ್ಡ ದೇಶಗಳಲ್ಲಿಯೂ ಸ್ವತಂತ್ರವಾದ ಬುದ್ಧಿ, ಅಭಿಪ್ರಾಯ, ನಡೆ ನುಡಿ ಇರುವವರಿಗೆ ಗ್ರಹಣ ಹಿಡಿವಂತಾಗಿದೆ. ಅವರ ಕೃತಿನಿರ್ಮಾಣಕ್ಕೆ ಅಡಚನೆ ಉಂಟಾಗಿದೆ. ಅವರ ಮಾತನ್ನು ಬಲು ಜನ ಕೇಳದಂತೆ ಅಡ್ಡಿಯಾಗಿದೆ. ಆದರೆ ಗ್ರಹಣ ಎಷ್ಟು ಕಾಲ ಕತ್ತಲು ಕವಿಸೀತು? ಜಗತ್ತಿನ ಮಂಗಳಕ್ಕೆ ವ್ಯಕ್ತಿಸ್ವಾತಂತ್ರ್ಯ, ಉಕ್ತಿಸ್ವಾತಂತ್ರ್ಯ, ಕಾರ್ಯಸ್ವಾತಂತ್ರ್ಯ ಅಗತ್ಯವೆಂಬುದನ್ನು ಪುನಃ ತಿಳಿಯುವ ಕಾಲ,—ಅವನ್ನು ತುಳಿಯುವವರಿಗೇ ಗೊತ್ತಾಗುವ ಕಾಲ ಬೇಗ ಬಂದೀತು. ಅವಿಲ್ಲದಿದ್ದರೆ, ಮನುಷ್ಯನ ಮೂರ್ತಿತ್ವ ಎಷ್ಟು ಉನ್ನತವಾಗಿ ಬೆಳೆಯಬಹುದೊ ಅಷ್ಟು ಉನ್ನತಿಗೆ ಏರಲಾರದು ಎಂದು ಅವರೇ ತಿಳಿದಾರು. ಅದಕ್ಕಾಗಿ ದುಡಿವ ಎಲ್ಲರೂ ಮನುಷ್ಯನ ಉದಾರಸತ್ವವನ್ನು ಪೋಷಿಸುವ ಉಪಕಾರಿಗಳಾದಾರು ಎಂಬ ನಂಬಿಕೆಯಿಂದ ಮಿಸ್. ಸ್ಟಾರ್ಮ್ ಜೇಮ್ಸನ್ ಅವರು ಮೇಲಿನ ಮಾತುಗಳನ್ನಾಡಿದ್ದಾರೆ. ಅದೇ ಆಶಯವನ್ನೇ ಎತ್ತಿ ಅಲ್ಲಿ ನೆರೆದ ಸಾಹಿತಿಗಳೊಬ್ಬರು ಮತ್ತೊಂದು ರೀತಿ ವ್ಯಕ್ತಪಡಿಸಿದ್ದಾರೆ. ಅವರೊಡನೆ ನಾವೂ ಸೇರಿ ಅಂತಹ ಲೇಖಕರಿಗೆಲ್ಲ ಸೌಹಾರ್ದವನ್ನು ಸೂಚಿಸಲು ಬಯಸುತ್ತೇವೆ. ಈಗ ಕವಿದು ಅಬ್ಬರಿಸುತ್ತಿರುವ ಮೃತ್ಯುವಿನಿಂದ ಜಗತ್ತು ಬೇಗನೆ ಪಾರಾಗಲಿ ಎಂದು ಜಗತ್ತಿನ ಕಲ್ಯಾಣಶಕ್ತಿಗಳನ್ನು ಪ್ರಾರ್ಥಿಸುತ್ತೇವೆ.

---

೪೦೭ನೆಯ ಪುಟದಿಂದ

ಭಾವನೆಗಳು ಇಲ್ಲದೆಹೋದಾಗ ಮತ್ತು ಮಾತುಗಳು ಸರಾಗವಾಗಿ ಬರದೆಹೋದಾಗ. ಆದುದರಿಂದ ಪ್ರತಿಯೊಂದು ವಿಷಯದ ಸಂಬಂಧವಾಗಿಯೂ ಭಾವನೆಗಳ ಒಂದೇ ಒಂದು ಸಂಗ್ರಹವನ್ನುಳ್ಳವರೂ, ಅವುಗಳನ್ನು ಹೇಳಲು ಒಂದೇ ಮಾತಿನ ಸರಣಿಯುಳ್ಳವರೂ, ವಿಷಯದ ಮೇಲ್ಮೈಯ್ಯನ್ನು ಮಾತ್ರ ತೋರಿಸಬಲ್ಲರು, ಪ್ರತಿಯೊಂದು ಸಂದರ್ಭದಲ್ಲಿಯೂ ಮಾತನಾಡಲು ಮುಂದೆ ತಾವಾಗಿಯೇ ಬರುವರು. ಹೆಚ್ಚು ವಿದ್ಯಾವಂತರೂ ಒಂದು ಭಾಷೆಯ ಶಬ್ದಕೋಶವನ್ನು ಚೆನ್ನಾಗಿ ಬಲ್ಲವರೂ, ತಟಕ್ಕನೆ ಮಾತನಾಡ ಹೊರಟರೆ, ಸಾಮಾನ್ಯವಾಗಿ, ಸರಿಯಾಗಿ ಮಾತನಾಡುವುದಿಲ್ಲ. ಹೆಚ್ಚಿನ ಅಭ್ಯಾಸದಿಂದ ಅವರು ಧೈರ್ಯವನ್ನು ಕಲಿಯಬೇಕು. ಏಕೆಂದರೆ ವಿಷಯಬಾಹುಳ್ಯವೂ ಸಕಲ ವಿಧದ ಭಾವನೆಗಳೂ ಮಾತುಗಳೂ ಅವರನ್ನು ದಿಗ್ಭ್ರಮೆಗೊಳಿಸುವುವು. ಆ ಯಾವುದನ್ನೂ ಕೂಡಲೆ ಆಯಲು ಅವರು ಸಮರ್ಥರಾಗಿರುವುದಿಲ್ಲ. ಯಾವುದನ್ನು ಆಯಬೇಕು, ಯಾವುದನ್ನು ಬಿಡಬೇಕು ಎಂದೇ ಅವರಿಗೆ ತೋರುವುದಿಲ್ಲ. ಈ ಭ್ರಮೆ ಏಕಾಂತದ ಸಂಭಾಷಣೆಯಲ್ಲಿ ಪ್ರತಿಕೂಲವಲ್ಲ. ಉಪನ್ಯಾಸದ ಧೋರಣೆ ಹಿಡಿಯುವುದನ್ನು ಹೇಗೆಯೂ ಸಮರ್ಥಿಸಲಾಗುವುದಿಲ್ಲ.

ನಾವು ಬುದ್ಧಿವಂತರು ಎಂಬ ಭಾವನೆ ಸಂಭಾಷಣೆಯಲ್ಲಿ ಜನರನ್ನು ಕೆಡಿಸುವಂತೆ ಇನ್ನು ಯಾವುದೂ ಕೆಡಿಸುವುದಿಲ್ಲ. ಆ ಭಾವನೆಯನ್ನು ಸಮರ್ಥಿಸಲು ಅವರು ಹಲವು ಹೊಗಳುಭಟರನ್ನೂ ಅನುಯಾಯಿಗಳನ್ನೂ ಪ್ರೋತ್ಸಾಹಿಸದೆ ಇರುವುದಿಲ್ಲ. ಅವರು ಪರಸ್ಪರ ಸಂತೋಷಪಡಿಸುವುದು ಅವರವರ ಒಣಜಂಭಗಳನ್ನು ತೃಪ್ತಿಪಡಿಸುವುದರಿಂದ. ಈ ಕಾರಣದಿಂದ ಬುದ್ಧಿವಂತರೆನ್ನಿಸಿಕೊಳ್ಳುವವರು ಅಟ್ಟಹಾಸದಿಂದ ವರ್ತಿಸುವರು. ಅವರ ಅನುಯಾಯಿಗಳು ಔದ್ಧತ್ಯದಿಂದ ಮಾತನಾಡುವರು. ಇಬ್ಬರ ಸಂಗವೂ ಸಹ್ಯವಲ್ಲ. ಇನ್ನು ಕೆಲವು ದೋಷಗಳ ವಿಚಾರ ನಾನು ಏನನ್ನೂ ಹೇಳುವುದಿಲ್ಲ. ಜಗಳವಾಡುವುದಕ್ಕೂ, ಪ್ರತಿಭಟಿಸುವುದಕ್ಕೂ ಕಾಲು ಕೆರೆದು ಕಾದಿರುವುದು, ಸುಳ್ಳು ಹೇಳುವುದು, ಅಥವಾ ಸುತ್ತಲಿರುವುದನ್ನು ಗಮನಿಸದೆ ಮನಸ್ಸು ಎಲ್ಲಿಯೋ ಅಲೆಯುವ ರೋಗ—ಇದರ ದೆಸೆಯಿಂದ ಸಂಭಾಷಣೆ ಅವರ ಮನಸ್ಸಿಗೆ ಹತ್ತುವುದೇ ಇಲ್ಲ. ಈ ದೋಷಗಳಲ್ಲಿ ಯಾವ ಒಂದು ದೋಷಕ್ಕೆ ಸಿಕ್ಕಿ ಶ್ರಮಪಡುತ್ತಿದ್ದರೂ ಮನುಷ್ಯನು ಸಂಭಾಷಣೆಗೆ ಯೋಗ್ಯನಲ್ಲ. ಅವನೊಬ್ಬ ಬೆಡ್ಲಮ್ಮಿನಲ್ಲಿರುವ ಹುಚ್ಚನಂತೆ.

ಸಂಭಾಷಣೆಯಲ್ಲಿರುವ ಅನೇಕ ದೋಷಗಳಲ್ಲಿ ನನ್ನ ಗಮನಕ್ಕೆ ಬಂದಿರುವ, ನನ್ನ ನೆನಪಿನಲ್ಲಿರುವ; ದೋಷಗಳೆಲ್ಲವನ್ನೂ ನಾನು ಹೇಳಿದ್ದೇನೆಂದು ಭಾವಿಸುತ್ತೇನೆ. ವೈಯಕ್ತಿಕವಾದ ಕೆಲವನ್ನು ಮತ್ತು ವಿವರಿಸಲು ಬಹಳ ಅಶ್ಲೀಲವಾದ ಇನ್ನೂ ಕೆಲವನ್ನು ಬಿಟ್ಟಿದ್ದೇನೆ. ಅವು ಪೋಕರಿ ಮಾತುಗಳು. ಸಂಭಾಷಣೆಯಲ್ಲಿ ಬರುವ ದೋಷಗಳನ್ನು ನಾನು ಸಾಮಾನ್ಯ ರೀತಿಯಲ್ಲಿ ಹೇಳಹೊರಟಿರುವೆನೇ ಹೊರತು ಅಸಂಖ್ಯಾತವಾದ ಸಂಭಾಷಣೆಯ ವಿಷಯಗಳನ್ನು ಹೇಳುವುದಿಲ್ಲ. ಯಾವ ಮಾತನಾಡುವ ಶಕ್ತಿಯನ್ನು ಮನುಷ್ಯನ ವಿಶೇಷಲಕ್ಷಣವೆಂದೂ ಮೃಗಕ್ಕಿಂತ ಅವನು ಉತ್ತಮನೆಂದು ಸ್ಥಾಪಿಸುವುದೆಂದೂ ತಿಳಿದಿರುವೆವೊ ಆ ಶಕ್ತಿಯ ದುರುಪಯೋಗದಿಂದ ಮನುಷ್ಯನ ಸ್ವಭಾವ ಎಷ್ಟರ ಮಟ್ಟಿಗೆ ಕೀಳಾಗಿಹೋಗಿದೆ ಎಂದು ತಿಳಿಯಬರುವುದು. ಸಂಭಾಷಣೆ ಜೀವನದ ಸಂತೋಷಗಳಲ್ಲೆಲ್ಲ ಬಹಳ ಮಹತ್ವವುಳ್ಳದ್ದೂ, ಶಾಶ್ವತವಾದ್ದೂ, ಉಪಯುಕ್ತವಾದ್ದೂ ಆಗಬಹುದಾದರೂ ಅದರಿಂದ ಎಷ್ಟು ಕಡಮೆಯ ಪ್ರಯೋಜನವನ್ನು ಪಡೆಯುತ್ತೇವೆಂದು ಎಲ್ಲರೂ ನೋಡಬಹುದು. ಇದನ್ನು ಬಿಟ್ಟಿರುವುದರ ಪರಿಣಾಮವಾಗಿ ನಾವು ಬಲವಂತದಿಂದ ಇತರ ಬಹಳ ತುಚ್ಛವಾದ ವಿನೋದಗಳನ್ನು ಇಟ್ಟುಕೊಳ್ಳಬೇಕಾಗಿದೆ. ಅವು ಬಟ್ಟೆ ಹಾಕಿಕೊಳ್ಳುವುದು, ಸ್ನೇಹಿತರನ್ನು ಭೇಟಿ ಮಾಡುವುದು, ಅಥವಾ ಹೆಚ್ಚು ದುಷ್ಟವಾದ ಜೂಜು, ಮದ್ಯಪಾನ ಮತ್ತು ಪರಸ್ತ್ರೀಸಂಗ. ಇವುಗಳ ದೆಸೆಯಿಂದ ಶ್ರೀಮಂತರಲ್ಲಿ, ಸಾಮಾನ್ಯರಲ್ಲಿ, ಗಂಡಸರೂ ಹೆಂಗಸರೂ ಶಾರೀರಕವಾಗಿ, ಮಾನಸಿಕವಾಗಿ ಕೆಟ್ಟುಹೋಗಿ ಒಲವು, ಮರ್ಯಾದೆ, ಸ್ನೇಹ, ಔದಾರ್ಯ ಇವುಗಳ ಸಂಬಂಧವಾದ ಭಾವನೆಗಳೇ ಇಲ್ಲದವರಾಗಿದ್ದಾರೆ. ಕೆಲ ಕಾಲದಿಂದ ಜನರು ಇವುಗಳನ್ನು ಒಂದು ಬಗೆಯ ಬೆಡಗು ವಿಲಾಸಗಳೆಂದೂ ಹಾಸ್ಯ ಮಾಡುತ್ತಿರುವರು.

ಸಂಭಾಷಣೆಯ ಈ ಅವನತಿಗೂ, ನಮ್ಮ ಸ್ವಭಾವ ಮತ್ತು ಮನೋಧರ್ಮಗಳ ಮೇಲೆ ಅದು ಉಂಟುಮಾಡಿರುವ ದುಷ್ಪರಿಣಾಮಕ್ಕೂ ಇರುವ ಕಾರಣಗಳಲ್ಲಿ ಒಂದು ಇದು: ಒಲವು, ನರ್ತನ ಮತ್ತು ಆಟಗಳನ್ನು ಬಿಟ್ಟು ಇತರ ವೇಳೆಗಳಲ್ಲಿ ಹೆಂಗಸರನ್ನು ನಮ್ಮ ಕೂಟಕ್ಕೆ ಸೇರಿಸದೇ ಇರುವ ಪದ್ಧತಿ. ಇಂಗ್ಲೆಂಡಿನಲ್ಲಿ ವಿನಯ ಉತ್ತಮ ಸ್ಥಿತಿಯಲ್ಲಿದ್ದ ಕಾಲ, (ಫ್ರಾನ್ಸಿನಲ್ಲಿಯೂ ಅದೇ ಕಾಲ) ಮೊದಲನೆಯ ಚಾರಲ್ಸಿನ ಆಳಿಕೆಯಲ್ಲಿ ಶಾಂತಿ ನೆಲಸಿದ್ದ ಕಾಲ. ಆ ಕಾಲದ ಚರಿತ್ರೆಯನ್ನು ಓದುವುದರಿಂದಲೂ ಆಗ ಅರಮನೆಯಲ್ಲಿದ್ದವರು ಹೇಳಿರುವುದನ್ನು ಕೇಳಿದ್ದರಿಂದಲೂ ನನಗೆ ತಿಳಿಯುವುದೇನೆಂದರೆ, ಸಂಭಾಷಣೆಯನ್ನು ಉತ್ತಮಗೊಳಿಸುವುದಕ್ಕೂ, ಬೆಳಸುವುದಕ್ಕೂ ಅವರು ಉಪಯೋಗಿಸುತ್ತಿದ್ದ ರೀತಿಗಳು ಬೇರೆ ಎಂದು. ಆಗಿನ ಕವಿಗಳು ಹೊಗಳಿರುವಂಥ ಕೆಲವು ಹೆಂಗಸರು ಅವರ ಮನೆಗಳಲ್ಲಿ ಗೋಷ್ಠಿಗಳನ್ನೇರ್ಪಡಿಸುತ್ತಿದ್ದರು. ಉತ್ತಮವಾದ ತಿಳಿವುಳ್ಳ ಗಂಡಸರೂ, ಹೆಂಗಸರೂ ಅಲ್ಲಿ ಸೇರಿ ಹಿತವಾದ ಯಾವ ವಿಷಯ ಸಂದರ್ಭಾನುಸಾರ ಬಂದರೂ ಅದರ ವಿಚಾರವಾಗಿ ಚರ್ಚೆಮಾಡುತ್ತಿದ್ದರು. ಒಲವಿನಲ್ಲಿ, ಸ್ನೇಹದಲ್ಲಿ ಅವರು ಹೊಂದಿದ್ದ ಘನವಾದ ಪ್ಲೆಟೋನಿಕ್ ಭಾವನೆಗಳನ್ನು ನೋಡಿ ನಾವು ನಗಬಹುದಾದರೂ, ಅವರ ನಾಗರಿಕತೆ ಬುದ್ಧಿಗೆ ಒಪ್ಪುವಂಥಾದ್ದು ಎಂದು ನನ್ನ ಭಾವನೆ. ಮಾನವ ಸ್ವಭಾವದ ಘನತೆಯನ್ನು ಕಾಪಾಡುವುದಕ್ಕೂ ಹೆಚ್ಚಿಸುವುದಕ್ಕೂ ರೊಮಾನ್ಸಿನ ಅಂಶ ಸ್ವಲ್ಪ ಸೇರುವುದು ಕೆಟ್ಟುದಲ್ಲ. ಅದಿಲ್ಲದಿದ್ದರೆ ಮಾನವ ಸ್ವಭಾವ ಅವನತಿ ಹೊಂದಿ, ಅಶ್ಲೀಲವಾಗಿ ನಾಶಹೊಂದುವುದು. ಹೆಂಗಸರನ್ನು ಸಂಭಾಷಣೆಗೆ ಸೇರಿಸಿಕೊಳ್ಳುವುದರಲ್ಲಿ ಇನ್ನು ಯಾವ ಪ್ರಯೋಜನವಿಲ್ಲದಿದ್ದರೂ, ನಮ್ಮ ಉತ್ತರ ದೇಶಗಳ ಅನಾಗರಿಕತೆ ಜಾರಿಬೀಳುವ ಅಶ್ಲೀಲ ನೀಚ ಹೇಯ ವಿಷಯಗಳ ಚರ್ಚೆಯನ್ನು ದೂರಮಾಡಿದಂತಾಗುವುದು. ಉದ್ಯಾನವನಗಳಲ್ಲಿ ಮತ್ತು ನಾಟಕ ಮಂದಿರಗಳಲ್ಲಿ ವೇಷವನ್ನು

೪೧೪ನೆಯ ಪುಟಕ್ಕೆ

(೪೦೯ನೇ ಪುಟದಿಂದ)

ಕಾಣಿಸಲಿ ಕಥಾಮುಖದಲ್ಲಿ; ಹಾಗೂ ಅಲ್ಲಲ್ಲಿ ಎಡೆಗಳಲ್ಲಿ. ಹೆಚ್ಚೇಕೆ? 'ಮುನ್ನೀರ ನೀರ ಸವಿಯನಜಿವ್ರೊಂದು ಬಗೆಯೊಳ್ ಕೊಡಸ ಕುವರನಂತಿರೆ ಬಲ್ಗಡಲನೆ ಕುಡಿವ್ರೊಡಕ್ಕುಮೆ? **ಒರ್ಪನಿ ಸಾಲದೆ?**

* * *

—ಎಂದು ಸಂಸ್ಕೃತ ರಾಮಾಶ್ವಮೇಧವನ್ನು ಓದಿದ ನಂದಳಿಕೆ ಲಕ್ಷ್ಮೀನಾರಣಪ್ಪನವರು ಕನ್ನಡವಲ್ಲಿ ರಾಮಾಶ್ವಮೇಧ ಬರೆದರು.

ಪರಂಪರೆಯಾಗಿ ಪವಿತ್ರವೆಂದು ನಡೆದುಬಂದ ಈ ಕತೆಯನ್ನು ಕುರಿತು ತನ್ನ ಅಭಿಪ್ರಾಯವನ್ನು ಇಷ್ಟು ಸ್ಪಷ್ಟವಾಗಿ, ನಿರ್ಭಯವಾಗಿ ಹೇಳಿದ ಈತನೀಗ ದಿಟ್ಟ! ಇಂತಹ 'ಅಪ್ರಿಯವಾದ ಸತ್ಯ'ವನ್ನು ಕೂಡ ಯಾರ ಮನಸ್ಸಿಗೂ ನೋವಾಗದಂತೆ, ಸಹಜಕಾವ್ಯವ್ರೋ ಎಂದು ಪ್ರೀತಿಬರುವಂತೆ ನವ್ಯವಾಗಿ ನಿರೂಪಿಸಿದ ಈತನೀಗ **ಕಬ್ಬಿಗರ ಬಲ್ಲಹ!**

**—ಜಿ. ಪಿ. ರಾಜರತ್ನಂ.**

---

## ಗಾಥಾಸಪ್ತಶತಿ

(ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.)

ಪ್ರಾಕೃತ ಭರತಖಂಡದಲ್ಲಿ ಒಂದು ಬಾರಿ ವ್ಯವಹಾರ ಭಾಷೆಯಾಗಿದ್ದಿತು. ಈ ಭಾಷೆಯಲ್ಲಿಯೇ ಆಗಿನ ಕಾಲದ ಪಂಡಿತರು ಮತ್ತು ಕವಿಗಳು ಗ್ರಂಥಗಳನ್ನು ಬರೆಯುತ್ತಿದ್ದರು. ಪ್ರಾಕೃತ ಸಾಹಿತ್ಯ ಕ್ಷೇತ್ರ ಸಂಸ್ಕೃತದಷ್ಟು ವಿಸ್ತಾರವಾದುದಲ್ಲವಾದರೂ, ಆ ಭಾಷೆಯಲ್ಲಿಯೂ ಗಣನೀಯವಾದ ಕಾವ್ಯಗಳೂ, ಶಾಸ್ತ್ರ ಗ್ರಂಥಗಳೂ ಹುಟ್ಟಿದುವು. ವೈದಿಕಮತದ ಬೆಳವಣಿಗೆ ಸಂಸ್ಕೃತ ಭಾಷೆಯ ಮೂಲಕ ನಡೆದಂತೆಯೇ ಬೌದ್ಧಮತದ ಬೆಳವಣಿಗೆ ಪಾಲೀ ಮತ್ತು ಪ್ರಾಕೃತ ಭಾಷೆಗಳಿಂದಾಯಿತು. ನಮಗೆ ಈಗ ದೊರೆತಿರುವ ಪ್ರಾಕೃತ ಗ್ರಂಥಗಳ ಸಂಖ್ಯೆ ಅಲ್ಪ. ಆದರೂ ಅವು ಆ ಭಾಷೆಯ ಪ್ರೌಢತೆಯನ್ನು ಸೂಚಿಸುವುದರಲ್ಲಿ ಸಂದೇಹವಿಲ್ಲ. ಸುಪ್ರಸಿದ್ಧನಾದ ಪ್ರವರಸೇನನು ಬರೆದ ಸೇತುಬಂಧ ಕಾವ್ಯ ಪ್ರಾಕೃತ ಭಾಷೆಯಲ್ಲಿದೆ. ಇಂತಹ ಕಾವ್ಯಗಳು ಆ ಭಾಷೆಯಲ್ಲಿ ಅನೇಕವಿದ್ದುವೆಂದು ನಾವು ಊಹಿಸಬಹುದು. ಈ ಊಹೆಗೆ ಶಾಲನ ಗಾಥಾಸಪ್ತಶತಿಯೂ ಒಂದು ಆಧಾರವಾಗುತ್ತದೆ. ಈ ಸಪ್ತಶತಿ ಶಾಲನೆಂಬ ರಾಜನು ತನ್ನ ಕಾಲವಲ್ಲಿ ಪ್ರಚಾರದಲ್ಲಿದ್ದ ಪ್ರಾಕೃತ ಕಾವ್ಯಗಳಿಂವ ಆರಿಸಿದ ಪದ್ಯಗಳ ಸಂಗ್ರಹ.

ಇಮುವರೆಗೂ ದೊರೆತಿರುವ ಸಂಗ್ರಹ ಗ್ರಂಥಗಳಲ್ಲಿ ಇದು ಅತಿ ಪ್ರಾಚೀನವಾಮುದು. ಇದರಲ್ಲಿ ದೊರೆಯುವ ಪ್ರತಿಯೊಂದು ಪದ್ಯವೂ ಸ್ವತಂತ್ರವಾದುಮು. ಒಂದೊಂದಕ್ಕೆ ಸಂಬಂಧವಿಲ್ಲ. ಇಂಥವುಗಳಿಗೇ **ಗಾಥಾ** ಎಂಬ ಹೆಸರು. ಇವನ್ನು ಸಂಗ್ರಹಿಸಿದವನು ಶಾಲ. ಇವನಿಗೆ ಹಾಲ, ಸಾತವಾಹನ, ಶಾಲಿವಾಹನ, ಸಾಲಾಹಣ ಮೊದಲಾದ ಹೆಸರುಗಳೂ ಇವೆ. ಇವನು ಆಂಧ್ರ ದೇಶದ ದೊರೆ. ಇವನು ಪ್ರಾಯಶಃ ಕ್ರಿ.ಶ. ಒಂದನೆಯ ಶತಮಾನದಲ್ಲಿದ್ದಿರಬಹುದು. ಇವನು ಶಕಾರಾತಿಯಾದ ವಿಕ್ರಮಾದಿತ್ಯನ ಸಮಕಾಲಿಕನೆಂದು ಕೆಲವರ ಅಭಿಪ್ರಾಯ. ಆ ವಿಕ್ರಮಾದಿತ್ಯನೊಡನೆ ಹೋರಾಡಿ ತನ್ನ ಹೆಸರಿನಲ್ಲಿ ಬೇರೊಂದು ಶಕವನ್ನು ಇವನು ಆರಂಭಿಸಿದನೆಂಬ ಪ್ರತೀತಿಯೂ ಇದೆ. ಇದೇ ದಕ್ಷಿಣ ಭಾರತದಲ್ಲಿ ಪ್ರಚಾರದಲ್ಲಿರುವ ಶಾಲಿವಾಹನಶಕವೆಂದು ಕೆಲವರ ಅಭಿಪ್ರಾಯ. ಶ್ರೀ॥ ಆರ್. ಜಿ. ಭಂಡಾರಕರ್ ಮೊದಲಾದ ಪಂಡಿತರು ಈ ಹಾಲನು ಆಂಧ್ರ ರಾಜರಲ್ಲಿ ಹದಿನೇಳನೆಯವನೆಂದೂ ಕ್ರಿ. ಪೂ. ೩೦ರಲ್ಲಿ ಜೀವಿಸಿದ್ದನೆಂಮೂ ಅಭಿಪ್ರಾಯಪಟ್ಟಿದ್ದಾರೆ.[1] ಮತ್ತಿತರರು ಇವನು ಅರಿಷ್ಟಶಾತಕರ್ಣಿಯ ಮಗನೆಂಮೂ, ಆಂಧ್ರರಾಜರಲ್ಲಿ ಹದಿನೆಂಟನೆಯವನೆಂದೂ ಇವನ ಕಾಲ ಕ್ರಿ. ಪೂ. ೪೯೫–೪೯೦ ಎಂದೂ ಅಭಿಪ್ರಾಯಪಡುತ್ತಾರೆ.[2] ಅಂತೂ ಕ್ರಿ.ಶ. ೭ನೆಯ ಶತಮಾನದಲ್ಲಿದ್ದ ಬಾಣ ಕವಿಯು ಈ ಹಾಲನನ್ನು ತನ್ನ ಗ್ರಂಥವಲ್ಲಿ ಸ್ಮರಿಸಿ ಕೊಂಡಾಡಿದ್ದಾನೆ. ಬಾಣನಿಗಿಂತ ಹಿಂದಿನವನಾದ ವಾತ್ಸ್ಯಾಯನನು ತನ್ನ ಕಾಮಸೂತ್ರ ಗ್ರಂಥದಲ್ಲಿ ಇವನ ಹೆಸರನ್ನು ಉಲ್ಲೇಖಿಸಿದ್ದಾನೆ.

ಗಾಥಾಸಪ್ತಶತೀ ಗ್ರಂಥ ೭೦೦ ಪದ್ಯಗಳ ಸಂಗ್ರಹವೆಂದು ಹೆಸರಿನಿಂದಲೇ ಸ್ಪಷ್ಟವಾಗುತ್ತದೆ. ಈ ಗ್ರಂಥದ ಮಾತೃಕಾ ಪ್ರತಿಗಳು ಭರತಖಂಡದ ಅನೇಕ ಭಾಗಗಳಲ್ಲಿ ದೊರೆತಿವೆ. ಆದರೆ ಅವುಗಳಲ್ಲಿ ಒಂದೊಂದು ಪ್ರತಿಗೂ ತಾಳೆ ಬರುವುದಿಲ್ಲ. ಹೀಗಾಗಿ 'ಗಾಥಾಸಪ್ತಶತೀ' ಎಂಬ ಹೆಸರಿನಲ್ಲಿರುವ ಎಲ್ಲ ಪುಸ್ತಕಗಳ ಕವಿತೆಗಳನ್ನೂ ಲೆಕ್ಕಮಾಡಿದರೆ ಅದರ ಸಂಖ್ಯೆ -ಸುಮಾರು ಎರಡು ಸಾವಿರದಷ್ಟಾಗಬಹುದು. ಇವುಗಳಲ್ಲಿ ಹಾಲನೇ ಸಂಗ್ರಹಿಸಿದವುಗಳು ಯಾವುವು, ಈಚಿನವರು ಸೇರಿಸಿದುವು ಯಾವುವು, ಎಂಬುದನ್ನು ತಿಳಿಯುವುದು ಬಹು ಕಷ್ಟ. ಆದರೂ ಹಾಲನೇ ಸಂಗ್ರಹಿಸಿದ ಕವಿತೆಗಳನ್ನು ಹುಡುಕಿ ತೆಗೆಯುವ ಕೆಲಸವು ನಡೆದಿದೆ. ಇಂತಹ ಪ್ರಯತ್ನಗಳಲ್ಲಿ ನಿರ್ಣಯಸಾಗರ ಪುಸ್ತಕ ಪ್ರಕಟನಾಲಯದವರ ಕೆಲಸವೂ ಒಂದು. ಇದನ್ನು ಆಧಾರವಾಗಿಟ್ಟುಕೊಂಡು ಈ ಪ್ರಬಂಧವನ್ನು ಬರೆಯಲಾಗಿದೆ.

ಈ ಸಂಗ್ರಹಕ್ಕೆ ಗಂಗಾಧರ, ಪ್ರೇಮರಾಜ, ಭುವನಪಾಲ, ಪೀತಾಂಬರ, ಸಾಧಾರಣ ದೇವ, ಕುಲಬಲದೇವ, ವೇಮಭೂಪಾಲ ಮೊದಲಾದ ಪಂಡಿತರು ಸಂಸ್ಕೃತದಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ.[3] ಕೆಲವು ವ್ಯಾಖ್ಯಾನಕಾರರು ಗಾಥಾಸಪ್ತಶತಿಯಲ್ಲಿನ ಸುಮಾರು ೪೦೦ ಪದ್ಯಗಳಿಗೆ ಅವುಗಳ ಕರ್ತೃಗಳ ಹೆಸರುಗಳನ್ನು ಕೊಟ್ಟಿದ್ದಾರೆ. ಮಿಕ್ಕ ಪದ್ಯಗಳ ಲೇಖಕರ ಹೆಸರನ್ನು ತಿಳಿಯುವುದು ಅಸಾಧ್ಯ. ಈ ಸಂಗ್ರಹದಲ್ಲಿ ಸಂಗ್ರಹಕರ್ತನಾದ ಹಾಲರಾಜನೇ ರಚಿಸಿದ ಪದ್ಯಗಳೂ ಕೆಲವಿವೆ. ಉಳಿದುವುಗಳಲ್ಲಿ ಎಷ್ಟು ಆತನ ಸಮಕಾಲಿಕರದು, ಎಷ್ಟು ಪ್ರಾಚೀನರದು ಎಂದು ಹೇಳುವುದೂ ಕಷ್ಟ. ಈ ಸಂಗ್ರಹದಲ್ಲಿ 'ಸೇತುಬಂಧ'ದ ಕರ್ತೃವಾದ ಪ್ರವರಸೇನನದೂ, ಹಾಲನ ಆಸ್ಥಾನ ಕವಿಯಾಗಿದ್ದ[4] ಶ್ರೀಪಾಲಿತನದೂ ಪದ್ಯಗಳಿವೆ. ಈ ಗಾಥಾಸಂಗ್ರಹದಲ್ಲಿ ರೋಹಾ, ರೇವಾ, ಮಾಧವೀ, ಅಣುಲಚ್ಛೀ, ಅಸುಲದ್ಧೀ, ಪಹಾಯಿಾ, ಸಸಿಪ್ಪಹಾ, ನಾಥಾ ಎಂಬ ಹೆಂಗಸರ ಕವನಗಳೂ ಅಡಗಿವೆ.

ಈ ಸಂಗ್ರಹವಲ್ಲಿನ ಅನೇಕ ಪದ್ಯಗಳು, ಸಂದರ್ಭೋಚಿತವಾಗಿ ಆಗಾಗ ಹೇಳಲ್ಪಟ್ಟವುಗಳು. ಇವನ್ನು ಚಾಟು ಪದ್ಯಗಳೆಂದೂ ಕರೆಯಬಹುದು. ಆಗಿನ ಕಾಲದ ಪ್ರಾಕೃತ ಸಾಹಿತ್ಯ ಮುಕ್ಕಾಲುಪಾಲು ನಷ್ಟವಾಗಿಹೋಗಿರುವುದರಿಂದ ಈ ಪದ್ಯಗಳನ್ನು ಯಾವ ಗ್ರಂಥಗಳಿಂದ ಶಾತವಾಹನನು ಉದ್ಧರಿಸಿದ್ದಾನೆಂದು ಹೇಳಲು ಸಾಧ್ಯವಿಲ್ಲ.

ಪ್ರಾಕೃತಭಾಷೆಯಲ್ಲಿ ಅಪಾರವಾದ ಸಾಹಿತ್ಯವಿತ್ತೆಂಬುದು ಮಾತ್ರ ನಿರ್ವಿವಾದವಾದ ವಿಷಯ. ಆ ಭಾಷೆ ಬೌದ್ಧ ಮತಕ್ಕೆ ಬಹುಕಾಲ ಪಾತೆಯಂತಿದ್ದುದೇ ಅದು ಮಾಡಿದ ಮಹಾಪಾಪ. ಮುಂದೆ ಬಂದ ವೈದಿಕಮತಪುನರುದ್ಧಾರಕರು, ತಮ್ಮ ಮತವನ್ನು ಉದ್ಧಾರಮಾಡುವ ಭರದಲ್ಲಿ ಸಂಖ್ಯೆಯಿಲ್ಲದಷ್ಟು ಪ್ರಾಕೃತ ಗ್ರಂಥಗಳನ್ನು ಬೆಂಕಿಗೆ ಹಾಕಿದರು. ಈ ಮಾರಣಹೋಮದಿಂದ ತಪ್ಪಿಸಿಕೊಂಡು ಉಳಿದ ಗ್ರಂಥಗಳು ಕೆಲವು ಮಾತ್ರ. ಅವುಗಳಲ್ಲಿ ಗಾಥಾಸಪ್ತಶತಿಯೂ ಒಂದು.

ಪ್ರಾಕೃತ ಭಾಷೆಯಲ್ಲಿರುವ ಈ ಗೀತೆಗಳಿಗೆ ಈಗ ಸಂಸ್ಕೃತ ಛಾಯೆಯೂ ದೊರೆಯುತ್ತದೆ.

---

1. (i) R. G. Bhandarkar's *Early History of the Deccan* p. 171.
   (ii) Journal of the Asiatic Society of Bengal, Bombay Branch. X 127.
   (iii) *Early History of India.* V. Smith. p. 208.

2. T. S. Narayana Sastri's *Sankara.* Part I D. 98.

3. (i) Peterson's Reports of the operations in search of sanskrit manuscripts. III 396.
   (ii) Aufrecht's catalogus of catalogurum. I 151.
   (iii) Triennial Catalogue of Sanskrit manuscripts in the Oriental Library, Madras. IV 5066.

4. ಹಾಲೇನೋತ್ತಮಪೂಜಯಾ ಕವಿವೃಷ ಶ್ರೀಪಾಲಿತೋ ಲಾಲಿತಃ।
   Abhinanda's *Ramacaritam.*

ಪ್ರಾಕೃತ ಆಗಿನ ಕಾಲದ ಜನಸಾಮಾನ್ಯದ ವ್ಯವಹಾರ ಭಾಷೆ; ಸಾಮಾನ್ಯವಾಗಿ ಜನರ ಜೀವನವನ್ನು ನೇರವಾಗಿ ವ್ಯಕ್ತಪಡಿಸಿದ ಭಾಷೆ. ಇದು ಗಾಥಾಸಪ್ತಶತಿಯಲ್ಲಿನ ಕವನಗಳಿಂದ ಸ್ಪಷ್ಟವಾಗುತ್ತದೆ.

ಈ ಸಂಗ್ರಹದಲ್ಲಿ ಪುರಾಣದ ಕಥೆಗಳಿಲ್ಲ. ರಾಮಾಯಣ ಮಹಾಭಾರತಗಳಿಗೆ ಸಂಬಂಧಪಟ್ಟ ವಿಷಯಗಳ ವರ್ಣನೆಗಳಿಲ್ಲ. ಇಂದ್ರಾದಿ ದೇವತೆಗಳ ದಿವ್ಯ ಚರಿತ್ರೆಗಳಿಗೆ ಇವರಲ್ಲಿ ಸ್ಥಾನ ದೊರೆತಿಲ್ಲ. ಇದರಲ್ಲಿ ನಮಗೆ ಕಂಡುಬರುವುದು ಆಗಿನ ಕಾಲದ ನಮ್ಮ ದೇಶದ ಜನರ ದೈನಂದಿನ ಜೀವನ.

ಸಾಮಾನ್ಯವಾಗಿ ಸಂಸ್ಕೃತ ಕಾವ್ಯಗಳಲ್ಲಿ ಕಂಡುಬರುವ ಉತ್ಪ್ರೇಕ್ಷಾದಿ ಅಲಂಕಾರಗಳಾಗಲಿ, ವಿಪರೀತ ವರ್ಣನೆಗಳಾಗಲಿ ಇಲ್ಲಿ ಇಲ್ಲ. ಇದು ಈ ಗ್ರಂಥದ ವಿಶೇಷ ಗುಣ. ಇಲ್ಲಿ ಹೇಳಿರುವ ವಿಷಯಗಳು ಸಾಮಾನ್ಯವಾದುವುಗಳು; ಸ್ವಾಭಾವಿಕವಾದುವುಗಳು. ಇಲ್ಲಿಯವರ ಜೀವನ ಯಥಾರ್ಥವಾದ ಜೀವನ. 'ವಪ್ರಸ್ಥಲೀಚುಂಬಿತಾಂಬರ'ಗಳಾದ ಪಟ್ಟಣಗಳ ವರ್ಣನೆ ಇದರಲ್ಲಿಲ್ಲ. ಅಮಾವಾಸ್ಯೆಯೊಂದು ದಿನ ಬಿಟ್ಟು ಉಳಿದ ಎಲ್ಲ ದಿನಗಳಲ್ಲಿಯೂ ಚಂದ್ರನಲ್ಲಿರುವ ಕಪ್ಪನ್ನು ತೆಗೆದು ಕಾಡಿಗೆಯನ್ನು ಕಣ್ಣಿಗೆ ಹಚ್ಚಿಕೊಳ್ಳುವಂತಹ ಹೆಂಗಸರು ನಮಗಿಲ್ಲಿ ಕಾಣಬರರು. ಸ್ತ್ರೀಯರ ಅಂಗ ಪರಿಶೀಲನೆಯೇ ಪ್ರಧಾನ ಕಾರ್ಯವೆಂದು ಭಾವಿಸಿದ ರಾಜರಾಗಲಿ, ಮೋಹಾತಿಶಯದಿಂದ ಪ್ರಮದವನಗಳಲ್ಲಿಯೇ ಬಿದ್ದು ಹೊರಳಾಡುವ ರಮಣಿಯರಾಗಲಿ ಇಲ್ಲಿ ನಮ್ಮ ದೃಷ್ಟಿಪಥಕ್ಕೆ ಬೀಳರು. ಅವರ ಕಾಮೋದ್ದೀಪಿತವಾದ ಹಸಿಮಾತು, ಅದಕ್ಕಿಂತ ಹಸಿಯಾದ ಚರ್ಯೆ ಇವು ಇಲ್ಲಿ ನಮಗೆ ತೋರವು. ಇಲ್ಲಿ ಕಂಡುಬರುವ ಜೀವನ ಹಳ್ಳಿಯ ಜೀವನ. ಹೊಲಗಳ ಪಕ್ಕದ ಗುಡಿಸಲುಗಳಲ್ಲಿ ವಾಸಿಸುವ ಬಡವರ, ಮನೋಹರವಾದ ಪ್ರೇಮಚರ್ಯೆಗಳು; ಗುಟ್ಟನ್ನು ಮರೆಯಾಗಿಟ್ಟು ನರ್ಮಗರ್ಭವಾಗಿ ಆಡುವ ಅವರ ಮಾತುಗಳು; ಮುಗುಳ್ನಗೆಯಿಂದ ಮಾಡುವ ಹಾಸ್ಯ ಇವು ಇಲ್ಲಿಯ ವಿಷಯ ಮತ್ತು ಚಿತ್ರಗಳು. ಇಲ್ಲಿಯ ಜನರು ಆಡುವ ಮಾತುಗಳು ಮನಬಿಚ್ಚಿ ಆಡಿದವುಗಳು. ಇಲ್ಲಿಯ ಹೆಂಗಸರು ಕಣ್ಮನಗಳೆರಡನ್ನೂ ಆಕರ್ಷಿಸಬಲ್ಲವರು. ಸ್ತ್ರೀ ಪ್ರಕೃತಿಗೇ ಒಂದು ಹೊಸ ಬಣ್ಣವನ್ನೂ, ಹೊಸ ಗೌರವವನ್ನೂ ಸಂಪಾದಿಸಿಕೊಡಬಲ್ಲ ರಮಣಿಯರು. ಅವರಿಗೆ ಆಡಂಬರವೆಂಬುದು ಬಾರದು. ಅಮೂಲ್ಯವಾದ ದುಕೂಲ ವಸ್ತ್ರಗಳನ್ನಾಗಲಿ, ರತ್ನಾಭರಣಗಳನ್ನಾಗಲಿ ಅವರು ಕಾಣರು. ಆದರೆ, ಸಹಜವಾದ ಸೌಂದರ್ಯದಿಂದ ಬೆಳಗುತ್ತಿರುವವರು. ಸ್ವಚ್ಛಂದವಾದ ಅನುರಾಗವನ್ನೂ ಭಾವವನ್ನೂ ಪ್ರಕಟಗೊಳಿಸಬಲ್ಲವರು. ಕೃತ್ರಿಮ ಜೀವನವನ್ನು ಅರಿಯದ ವ್ಯಕ್ತಿಗಳು. ಮರೆ, ಮಾನ, ಸೌಕುಮಾರ್ಯ, ಇವೆಲ್ಲವೂ ಅವರಲ್ಲಿವೆ. ಆದರೂ ವಿಪರೀತವಾಗಿ ವರ್ತಿಸುವವರಲ್ಲ. ಅವರ ಮನಸ್ಸು ಒಳ್ಳೆಯ ಮನಸ್ಸು. ಅದಕ್ಕೆ ತಕ್ಕ ಚರ್ಯೆ. ಆದುದರಿಂದಲೇ ಅವರ ಜೀವನವೂ, ಅವರ ಚಿತ್ರಗಳೂ ನಮಗೆ ಮನೋಹರವಾಗಿ ಕಂಡುಬರುತ್ತವೆ.

ಗಾಥಾಸಪ್ತಶತಿಯಲ್ಲಿನ ಕವನಗಳು ಇವರನ್ನು ಕುರಿತು ಹಾಡಿದ ಗೀತೆಗಳು. ಪ್ರತಿಯೊಂದು ಗೀತೆಯೂ ಭಾವಪೂರ್ಣವಾಗಿದೆ. ಒಂದೊಂದೂ, ಒಂದೊಂದು ನಕ್ಷತ್ರದಂತೆ ಹೊಳೆಯುತ್ತದೆ.

ಮುಂದುವರಿಯುವುದು

---

## ಗಮಕ ಕಲಾ ಸಂಘ, ಬೆಂಗಳೂರು

ಈ ತಿಂಗಳು ೪ನೆಯ ತಾರೀಖು ಭಾನುವಾರ ನಡೆಯಬೇಕಾಗಿದ್ದು ಮುಂದುವರಿಸಲಾದ ಸಭೆಯನ್ನು ಆಗಸ್ಟ್ ೨೪ನೆಯ ತಾರಿಖು ಶನಿವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರ ಅಧ್ಯಕ್ಷತೆಯಲ್ಲಿ ನಡಸಲು ಏರ್ಪಡಿಸಿದೆ. ಗಮಕ ಕಲಾವಿದರೂ ಗಮಕ ಕಲಾಭಿಮಾನಿಗಳೂ ಸಭೆಗೆ ದಯಮಾಡಿಸಿ ತಮ್ಮ ಅಮೋಘವಾದ ಸಲಹೆಗಳನ್ನೂ ಬೆಂಬಲವನ್ನೂ ಕೊಟ್ಟು ಸಂಘ ಸ್ಥಾಪನಾಕಾರ್ಯದಲ್ಲಿ ನೆರವಾಗಬೇಕಾಗಿ ಕೋರಿದೆ.

# ಸಾದರ ಸ್ವೀಕಾರ

**ವಚನೋಪದೇಶ ಪಠ:—** ಚಿತ್ರಕ—ಸಂಪಾದಕ—ಪ್ರಕಾಶಕ: ಶ್ರೀ|| ಜೀರಿಗೆ ಕ. ಬಸವಪ್ಪ, ಬಿ.ಎ., ಬಸವಲಿಂಗ ಮಂಟಪ, ೧೪೧೪, ೨ನೆಯ ಕ್ರಾಸ್ ರೋಡು, ಮಲ್ಲೇಶ್ವರ. ಬೆಲೆ ೨ ಆಣೆ.

ಸಾಮಾನ್ಯವಾಗಿ ಪ್ರಕಟವಾಗುವ ಕ್ಯಾಲೆಂಡರ್ ಆಕಾರದ ಹೊಳಪು ಕಾಗದದಮೇಲೆ ಬಸವಣ್ಣನವರ 'ಎನಗಿಂತ ಕಿರಿಯರಿಲ್ಲ' ಎಂದು ಮೊದಲಾಗುವ ಒಂದು ವಚನವನ್ನು ವಚನದ ಇಂಗ್ಲಿಷ್ ಅನುವಾದದೊಡನೆಯೂ ಬಸವಣ್ಣನವರ ರೇಖಾಚಿತ್ರದೊಡನೆಯೂ ಅಂದವಾಗಿ ಮುದ್ರಿಸಿ ಪ್ರಕಟಿಸಿದ್ದಾರೆ.

**ಹಿಂದೂ ದರ್ಶನಸಾರ:—** ಬರೆದವರು: ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರವರು. ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಕ್ರೌನ್ ಅಷ್ಟಪತ್ರ ೧೨+೩೦೨ ಪುಟಗಳು. ಬೆಲೆ ೧೨ ಆಣೆ.

History of Kannada Literature (Readership Lectures)—ಕನ್ನಡ ಸಾಹಿತ್ಯ ಚರಿತ್ರೆ. ಉಪನ್ಯಾಸಕರು: ಪ್ರಾಕ್ತನವಿಮರ್ಶವಿಚಕ್ಷಣ ಮಹಾಮಹೋಪಾಧ್ಯಾಯ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯ, ಎಂ.ಎ., ಎಂ.ಆರ್.ಎ.ಎಸ್. ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ. ಡೆಮಿ ಅಷ್ಟಪತ್ರ ೮+೮೫ ಪುಟಗಳು. ಬೆಲೆ ೧ ರೂಪಾಯಿ.

**ಶರೀರ ಶಿಕ್ಷೆ:—**ಬರೆದವರು ಮತ್ತು ಪ್ರಕಾಶಕರು: ಶ್ರೀ|| ಜ. ಬಾಪಟ, ಧಾರವಾಡ.

ಮಧ್ಯಪ್ರಾಂತದ ಬಿರಾರಿನ ಆರೋಗ್ಯ ರಕ್ಷಣ ಖಾತೆಯ ಸದಸ್ಯರಾದ ವಾಙ್ಮಯ ವಿಶಾರದ ವೈದ್ಯ ಶ್ರೀ|| ಎಚ್. ವಿ. ದೇಶಪಾಂಡೆ ಅವರು ಮುನ್ನುಡಿ ಬರೆದಿದ್ದಾರೆ. ಇದರಲ್ಲಿ ೩೦ ಚಿತ್ರಗಳು ಇವೆ. ೨೧೨ ಪುಟಗಳು. ಬೆಲೆ ೩ ರೂಪಾಯಿ.

ಭಾರತೀಯ ಕವಾಯಿತು, ಯೋಗಾಸನಗಳು, ಸೂರ್ಯನಮಸ್ಕಾರ, ಜೋಡಿ, ಲೆಝೀಮ್ ಮುಂತಾದ ವ್ಯಾಯಾಮ ವಿವರಗಳನ್ನೊಳಗೊಂಡಿದೆ. ಕೇವಲ ಹೆಣ್ಣುಮಕ್ಕಳಿಗಾಗಿ ಕೋಲಾಟ, ಹಗ್ಗದ ಆಟ, ವಿಶೇಷ ವ್ಯಾಯಾಮ ರೀತಿಯ ಚರ್ಚೆ—ಇವು ಪುಸ್ತಕದ ವೈಶಿಷ್ಟ್ಯವನ್ನು ಹೆಚ್ಚಿಸಿದೆ.

**ಸುಬೋಧ ಸಾರ** (ಮುಪ್ಪಿನ ಷಡಕ್ಷರಿ ಸ್ವಾಮಿಗಳ ಗೀತಗಳು) **:—**ಸಂಗ್ರಾಹಕರು ಮತ್ತು ಪ್ರಕಾಶಕರು: ಶ್ರೀ|| ಹರ್ಡೇಕರ ಮಂಜಪ್ಪನವರು. ಕ್ರೌನ್ ಅಷ್ಟಪತ್ರ ೧೬+೧೨೮ ಪುಟಗಳು. ಬೆಲೆ ೧೨ ಆಣೆ.

ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬದ ನೆನಪಾಗಿ ಈ ಗ್ರಂಥವನ್ನು ಪ್ರಕಟಿಸಿದೆ.

**ನವನೀತ ರಾಮಾಯಣ** (ಪ್ರಥಮ ಭಾಂಡ) **:—**ಬರೆದವರು: ವಿದ್ವಾನ್ ಶ್ರೀ|| ಮುಳಿಯ ತಿಮ್ಮಪ್ಪಯ್ಯನವರು. ಪ್ರಕಾಶಕರು: ಕನ್ನಡ ಸೇವಾ ಸಂಘ, ಅಮ್ಮೆಂಬಳ, ದಕ್ಷಿಣ ಕನ್ನಡ. ಕ್ರೌನ್ ಅಷ್ಟಪತ್ರ ೧೦೭ ಪುಟಗಳು. ಬೆಲೆ ೧ ರೂ.

**ಪೌರುಷ:—**ಬರೆದವರು: ಡಾ|| ಗೋಪಾಲಕೃಷ್ಣರಾಯರು. ಪ್ರಕಾಶಕರು: ಸಮಾಜ ಕಾರ್ಯಾಲಯ, ಧಾರವಾಡ. ಕ್ರೌನ್ ಅಷ್ಟಪತ್ರ ೧೦೩ ಪುಟಗಳು. ಬೆಲೆ ೧ ರೂಪಾಯಿ.

**ಬಹಿಷ್ಕಾರ** (ನೀಳ್ಗತೆ) **:—**ಬರೆದವರು: ಶ್ರೀ|| 'ನೆರಂಗ' ಅವರು. ಪ್ರಕಾಶಕರು: ರಂಗಮಂಗ ಪ್ರಕಾಶನ, ಧಾರವಾಡ. ಫೂಲ್ಸ್‌ಕ್ಯಾಪ್ ಅಷ್ಟಪತ್ರ ೬೪ ಪುಟಗಳು. ಬೆಲೆ ೪ ಆಣೆ.

**ಕನ್ನಡಕ** (ಹನ್ನೆರಡು ಕಿರುಗತೆಗಳು) **:—** ಬರೆದವರು: ಶ್ರೀ|| 'ಅರುಣ'. ಪ್ರಕಾಶಕರು: ರಂಗಮಂಗ ಪ್ರಕಾಶನ, ಧಾರವಾಡ. ಫೂಲ್ಸ್‌ಕ್ಯಾಪ್ ಅಷ್ಟಪತ್ರ ೭೪ ಪುಟಗಳು. ಬೆಲೆ ೪ ಆಣೆ.

**ಮಕ್ಕಳ ಒಡಪುಗಳು:—**ಪ್ರಕಾಶಕರು: ಮಾಧವ ಬಲ್ಲಾಳ ಬಂಧುಗಳು, ಸಾಧನಕೇರಿ, ಧಾರವಾಡ. ಕ್ರೌನ್ ಅಷ್ಟಪತ್ರ ೪೦ ಪುಟಗಳು. ಬೆಲೆ ೩ ಆಣೆ.

ಶ್ರೀ|| ಶಂ. ಬಾ. ಜೋಶಿಯವರು ದೀರ್ಘವಾದ ಮುನ್ನುಡಿ ಬರೆದು ಒಡಪುಗಳು ಎಂದರೆ ಒಗಟುಗಳ ಸ್ವಾರಸ್ಯವನ್ನು ವಿವರಿಸಿದ್ದಾರೆ. ಮಕ್ಕಳ ಮನಸ್ಸನ್ನು ಮೊನೆಯಾಗಿಸುವ, ಒಲಿಸುವ ಸುಮಾರು ೨೨೦ ಒಗಟುಗಳೂ ಸಮಸ್ಯಾಪೂರ್ತಿಗಳೂ ಇಲ್ಲಿ ಸಂಗ್ರಹಿಸಲ್ಪಟ್ಟಿವೆ.

**ಭಕ್ತಿಕುಸುಮಾಂಜಲಿ** (ಸಚಿತ್ರ) **:—**ಬರೆದವರು ಮತ್ತು ಪ್ರಕಾಶಕರು: ಶ್ರೀ|| ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ. ಅವರು. "ವಿಶ್ವಬಂಧು" ಪ್ರಕಟನಾಲಯ, ಶಂಕರಪುರ ಬೆಂಗಳೂರು ನಗರ. ಫೂಲ್ಸ್‌ಕ್ಯಾಪ್ ಅಷ್ಟಪತ್ರ ೭೪ ಪುಟಗಳು. ಬೆಲೆ ?

ಜಿನಸ್ತೋತ್ರಗಳ ಮತ್ತು ಇತರ ಕವನಗಳ ಸಂಗ್ರಹ.

**ವನಮಾಲೆ** (ಕಾದಂಬರಿ) **:—**ಬರೆದವರು ಮತ್ತು ಪ್ರಕಾಶಕರು: ಶ್ರೀಮಾನ್ ಕೆ. ಎಸ್. ಧರಣೇಂದ್ರಯ್ಯ, ಎಂ.ಎ, ಬಿ.ಟಿ. ಅವರು. ಕ್ರೌನ್ ಅಷ್ಟಪತ್ರ. ೧೦+೧೦೬ ಪುಟಗಳು. ಬೆಲೆ ೮ ಆಣೆ.

ಜೈನ ಪುರಾಣ ಕತೆಗಳನ್ನು ಅನುಸರಿಸಿ ಬರೆದ ಕಾದಂಬರಿ.

**ದ್ವೈತ ದರ್ಶನ:—**ಬರೆದವರು: ಶ್ರೀ ಶಿರೂರುಮಠದ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು. ಪ್ರಕಾಶಕರು: ಶ್ರೀ|| ಎಂ. ಆರ್. ರಾವ್, ಎಂ.ಎ. ಸಂಸ್ಕೃತ ಕಾಲೇಜು, ಉಡುಪಿ. ಕ್ರೌನ್ ಅಷ್ಟಪತ್ರ, ೫೪ ಪುಟಗಳು. ಭಕ್ತರ ಜ್ಞಾನೋದಯವೇ ಬೆಲೆ.

೪೧೧ನೆಯ ಪುಟದಿಂದ

ಮರೆಯಿಸಿಕೊಂಡು ಬರುವ ಪರಸ್ತ್ರೀಯರ ಸಂಗಡ ಚತುರತೆಯಿಂದ ಮಾತನಾಡುವ ಶೋಕಿ ಯುವಕರನ್ನು ಸಭ್ಯರಾದ ಶ್ರೀಮಂತರಾದ ಹೆಂಗಸರಿರುವಲ್ಲಿಗೆ ಕರೆದುಕೊಂಡು ಬಂದಾಗ ಅವರು ಮೌನ ಧರಿಸು ವುದನ್ನೂ ತಬ್ಬಿಬ್ಬಾಗುವುದನ್ನೂ ತಮ್ಮ ಸ್ವಭಾವಕ್ಕೆ ವಿರುದ್ಧವಾದ ಸನ್ನಿವೇಶದಲ್ಲಿ ಸಿಕ್ಕಿ ಒದ್ದಾಡುವುದನ್ನೂ ನೋಡಬಹುದು.

ಕೆಲಸಕ್ಕೆ ಬಾರದ ವಿಚಾರಗಳನ್ನೂ ಪ್ರತಿದಿನವೂ ನಡೆಯುವ ಸಾಮಾನ್ಯ ವಿಷಯಗಳನ್ನೂ ಹೇಳಿ ಸಂಗಡಿಗರನ್ನು ವಿನೋದಪಡಿಸಿ ದ್ದಾರೆಂದೂ, ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡಿರುವರೆಂದೂ ಭಾವಿಸುವ ಜನರು ಕೆಲವರಿರುವರು. ಬೇರೆ ಯಾವ ಜನಾಂಗಕ್ಕಿಂತಲೂ ಹೆಚ್ಚಾಗಿ ನಾನು ಇದನ್ನು ಕಂಡಿರುವುದು ಸ್ಕಾಟ್ ಜನಗಳಲ್ಲಿ, ಅವರು ಕಾಲದೇಶಗಳಿಗೆ ಸಂಬಂಧಪಟ್ಟ ಯಾವ ಅಲ್ಪಾಂಶವನ್ನೂ ಬಿಡುವುದಿಲ್ಲ. ಅವರ ಒರಟು ಮಾತುಗಳು, ವಿಚಿತ್ರವಾದ ಉಚ್ಚಾರಣೆ ಮತ್ತು ಆ ಜನರದೇ ಆದ ಒಂದು ಬಗೆಯ ಅಂಗಚೇಷ್ಟೆ ಇವುಗಳಿಂದುಂಟಾಗುವ ವಿನೋದವಿಲ್ಲದಿದ್ದರೆ ಅವರ ಮಾತು ಸಹ್ಯವಾಗುತ್ತಿರಲಿಲ್ಲ. ಗೋಷ್ಠಿ ಗಳಲ್ಲಿ ಹೆಚ್ಚು ಮಾತನಾಡುವುದು ತಪ್ಪಲ್ಲ. ಆದರೆ ಅದನ್ನು ದೀರ್ಘ ಕಾಲ ಎಳೆಯುವುದು ಖಂಡಿತವಾಗಿಯೂ ತಪ್ಪು. ಏತಕ್ಕೆಂದರೆ ಅಲ್ಲಿ ಸೇರಿರುವವರಲ್ಲಿ ಬಹುಮಂದಿ ಸ್ವಾಭಾವಿಕವಾಗಿ ಮೌನವುಳ್ಳವರೂ ಎಚ್ಚರಿಕೆಯುಳ್ಳವರೂ ಆದರೆ ಸಂಭಾಷಣೆ ನಿರ್ಜೀವವಾಗುವುದು. ಇದನ್ನು ತಪ್ಪಿಸಬೇಕಾದರೆ ಅವರಲ್ಲೊಬ್ಬರು ಹೊಸ ವಿಷಯಗಳನ್ನೆತ್ತ ಬೇಕು, ಅದರ ಮೇಲೆ ಭಾಷಣಮಾಡದೆ, ಚರ್ಚೆಗೂ ಪ್ರಶ್ನೋತ್ತರ ಗಳಿಗೂ ಅವಕಾಶಕೊಡಬೇಕು.

—ಎಸ್. ಮಂಜನಾಥ್

---

## ಕನ್ನಡ ಸುದ್ದಿ

**ಬೆಂಗಳೂರು: ಕನ್ನಡ ಸಾಹಿತಿಗಳ ಸಂಘ**

೨೫ನೆಯ ಭಾನುವಾರ ಬೆಳಗ್ಗೆ ೮–೩೦ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ 'ವಿಶ್ವಕರ್ಣಾಟಕ'ದ ಸಂಪಾದಕರಾದ ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮ ಅವರು ತಮ್ಮ ಏಕಾಂಕ ನಾಟಕಗಳನ್ನು ಓದುವರು.

**ಹೊಸದುರ್ಗ: ಕರ್ನಾಟಕ ಸಂಘ ಸ್ಥಾಪನೆ**

ತಾ॥ ೩೧-೭-೪೦ನೆಯ ದಿನ ಅಮಲ್ದಾರರಾದ ಶ್ರೀ॥ ಸಿ. ಎನ್. ಗೋಪಾಲ ಸ್ವಾಮಿ ನಾಯಕ್ ಬಿ.ಎ. ಅವರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಕರ್ನಾಟಕ ಸಂಘ ಸ್ಥಾಪಿತವಾಯಿತು. ಸಂಘವನ್ನು ಪರಿಷತ್ತಿನ ಅಂಗಸಂಸ್ಥೆಯಾಗಿ ಮಾಡಲಿರುವರು.

**ಬೆಳಗಾಂವಿ: ಲಿಂಗರಾಜ ಕಾಲೇಜಿನ ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಪ್ರಾರಂಭೋತ್ಸವ ೧೯ನೆಯ ಸೋಮವಾರ ಜಯಂ ತಿಯ ಸಂಪಾದಕರಾದ ಶ್ರೀ ಬೆಟಗೇರಿ ಕೃಷ್ಣ ಶರ್ಮರವರ ಹಸ್ತದಿಂದ ನೆರವೇರಿತು. ಪ್ರೊ॥ ಪರಮಶಿವಯ್ಯನವರು ಅಧ್ಯಕ್ಷತೆ ವಹಿಸಿದ್ದರು.

**ಕೇರಳಾಪುರ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ ವಯಸ್ಕರ ಶಿಕ್ಷಣ ತರಗತಿಗಳಿಗೆ ಅನೇಕರು ಸಂತೋಷದಿಂದ ಸೇರುತ್ತಿದ್ದಾರೆ. ಹಲವರು ಉಪಾ ಧ್ಯಾಯರು ಮುಂದೆಬಂದು ಉಚಿತವಾಗಿ ಶಿಕ್ಷಣ ಕೊಡುತ್ತಿದ್ದಾರೆ.

---

## ನಾಲ್ಮಡಿ ಕೃಷ್ಣರಾಜ ಪ್ರಭುಗಳವರ ಕಲಾಪ್ರೇಮ

ಶ್ರೀ॥ ಅ. ನ. ಕೃಷ್ಣರಾಯರು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ನಾಲ್ಮಡಿ ಕೃಷ್ಣರಾಜ ಒಡೆಯರವರ ಕಲಾಪ್ರೇಮವನ್ನು ಕುರಿತು 'ಪ್ರಜಾಮತ'ದ ಸ್ಮಾರಕ ಸಂಚಿಕೆಯಲ್ಲಿ ಬರೆದಿರುವ ಲೇಖನದಲ್ಲಿ ಹೀಗೆ ಹೇಳಿರುತ್ತಾರೆ:

ಶ್ರೀ ಕೃಷ್ಣರಾಜರು ಲಲಿತ ಕಲಾವಿಲಾಸ ಮೂರ್ತಿಯಾಗಿದ್ದರು. ಅವರ ಕಲಾನೈಪುಣ್ಯಕ್ಕೆ ಅವರ ನಿತ್ಯ ಜೀವನವೇ ಸಾಕ್ಷಿಯಾಗಿತ್ತು........ಮೈಸೂರಿನ ರಾಜ ಮನೆತನದವರು ಪರಂಪರಾಗತವಾಗಿ ಸಾಹಿತ್ಯ ಕಲಾ ಪ್ರೇಮಿಗಳು. ಚಿಕದೇವ ರಾಯ, ಮುಮ್ಮಡಿ ಅರಸರು — ಸ್ವಯಂಕವಿಗಳಾಗಿದ್ದರು. ಶ್ರೀ ಚಾಮರಾಜ ಒಡೆಯರವರು ನಾಟ್ಯಕಲೆಗಿತ್ತ ಪ್ರೋತ್ಸಾಹವೇ ಕರ್ನಾಟಕ ರಂಗಭೂಮಿಯ ಸ್ಥಾಪನೆಗೆ ಕಾರಣವಾಯಿತು. ಆಳಿದ ಮಹಾಸ್ವಾಮಿಯವರು ಸಾಹಿತ್ಯ, ಸಂಗೀತ, ಚಿತ್ರಕಲೆ ಈ ಮೂರು ಕಲಾರೂಪಗಳಲ್ಲಿಯೂ ಪೂರ್ಣ ಪಂಡಿತರೂ ರಸಿಕರೂ ಆಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತು ಬೆಳೆದು ಬಾಳಿರುವುದು, ಅವರ ಕೃಪಾ ಛತ್ರದ ಕೆಳಗೆ. ಅವರು ತಮ್ಮ ಪ್ರಜೆಗಳ ಮುಂದೆ ಕೊನೆಯ ಸಲ ನಿಂತುದೂ ಪರಿಷತ್ತಿನ ಬೆಳ್ಳಿಯ ಹಬ್ಬದಸಲುವಾಗಿಯೇ. ಆರೋಗ್ಯವಿಲ್ಲ, ಶಕ್ತಿಯಿಲ್ಲ— ಆದರೂ ಕನ್ನಡದ ಕರೆಗೆ ಕೃಷ್ಣರಾಜ ಒಲ್ಲೆನೆನ್ನಲಿಲ್ಲ. ಪರಿಷತ್ತು ದೊರೆಯ ಅಕ್ಕರದ ಕಂದ. ಕನ್ನಡದ ತಾಯಿ—ಚಾಮುಂಡಿ—ದೊರೆಗಳ ತಾಯಿ.

---

## ಕನ್ನಡ ನಾಡಿನ ನೋಡತಕ್ಕ ಸ್ಥಳಗಳು

ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಶ್ರೀಮಾನ್ ಮುದವೀಡು ಕೃಷ್ಣರಾಯರು ೬-೮-೧೯೪೦ನೆಯ ಮಂಗಳವಾರ ಮುಂಬಯಿ ಆಕಾಶ ವಾಣಿಯಿಂದ "ಕನ್ನಡ ನಾಡಿನ ನೋಡತಕ್ಕ ಸ್ಥಳಗಳು" ಎಂಬ ವಿಷಯವಾಗಿ ಮಾತನಾಡುತ್ತ ಹೀಗೆ ಹೇಳಿದರು:

"ನಮ್ಮ ನಾಡು ಬಲು ದೊಡ್ಡದು, ಬಹಳ ಪುರಾತನವಾದದ್ದು. ಕಾರವಾರದಿಂದ ಕಾಸರಗೋಡಿನ ವರೆಗೆ ಸುಮಾರು ಮುನ್ನೂರು ಮೈಲುಗಳ ಕರಾವಳಿ ಪ್ರದೇಶ ಅಂದರೆ ಸಮುದ್ರದ ದಂಡೆಯ ಸೀಮೆ ಸದ್ಯದ ನಮ್ಮ ನಾಡಿನ ಪಡುವಣಕ್ಕಿದೆ. ಇಷ್ಟೊಂದು ಉದ್ದವಾದ ಪ್ರದೇಶದಲ್ಲಿ ಸಮುದ್ರದ ದಂಡೆಯಿಂದ ಮೂಡಣಕ್ಕೆ ನೂರಾರು ಮೈಲಿಗಳ ವರೆಗೆ ಒಂದೇ ಸವನೆ ಹಬ್ಬಿಕೊಂಡಿರುವ ಸಹ್ಯಾದ್ರಿ ಬೆಟ್ಟಗಳ ಎತ್ತರವಾದ ಶಿಖರಗಳ ಸಾಲು ಮುಗಿಲನ್ನೇ ಮುದ್ದಿಡುವಂತೆ ಬೆಳೆದು ನಿಂತಿವೆ. ಈ ಪ್ರದೇಶವೆಲ್ಲ ಸೃಷ್ಟಿಸೌಂದರ್ಯದ ತವರುಮನೆ ಯಾಗಿದೆ. ಇಂಥ ಕನ್ನಡ ನಾಡು ಬಹುಕಾಲದಿಂದಲೂ ಅನೇಕಾ ನೇಕ ಕವಿಶ್ರೇಷ್ಠರ ಜನ್ಮಸ್ಥಾನ ಆಶ್ರಯಸ್ಥಾನಗಳಿಂದ ತುಂಬಿ ಕೀರ್ತಿವೆತ್ತಿದೆ. ದೊಡ್ಡದೊಡ್ಡ ಧರ್ಮಸಂಸ್ಥಾಪಕರೂ ಧರ್ಮ ಸುಧಾರಕರೂ, ಭಗವದ್ಭಕ್ತರೂ, ಶರಣಶರಣೆಯರೂ ನಮ್ಮ ನಾಡಿನಲ್ಲಿ ಹುಟ್ಟಿ, ಕಡುತರ ತಪವನ್ನಾಚರಿಸಿ, ಪತಿತರನ್ನು ಪಾವನ ಗೊಳಿಸಿ, ತಾವು ಕೈವಲ್ಯವನ್ನು ಕೈವಶಪಡಿಸಿಕೊಂಡು, ಮಿಕ್ಕವರಿಗೂ ಆ ದಾರಿಯನ್ನು ಸುಲಭ ಮಾಡಿಕೊಟ್ಟಿರುವ ಅಸಂಖ್ಯ ಪುಣ್ಯಕ್ಷೇತ್ರಗಳು ನಮ್ಮ ನಾಡಿನಲ್ಲಿ ತುಂಬಿಕೊಂಡಿವೆ. ಅದೇ ಮೇರೆಗೆ ಅನೇಕ ರಾಜ್ಯಗಳು ಸಾಮ್ರಾಜ್ಯಗಳು ಹುಟ್ಟಿಬೆಳೆದು, ಬೆಳಗಿ ಅನೇಕಾನೇಕ ರಾಜಧಾನಿ, ನಗರ, ಪಟ್ಟಣಗಳನ್ನು ಕಟ್ಟಿಸಿ, ಬೆಳೆಯಿಸಿ ವೈಭವದ ಶಿಖರಕ್ಕೆ ಮುಟ್ಟಿಸಿದ್ದೂ ಉಂಟು. ನಮ್ಮ ಕನ್ನಡವೀರರ, ವೀರರಮಣಿಯರ ವಿಜಯ ಪ್ರತಾಪವನ್ನು ಇಂದಿಗೂ ನೆನಪಿಗೆ ತಂದುಕೊಡುವ ಅಸಂಖ್ಯ ರಣಕ್ಷೇತ್ರಗಳೂ ನಮ್ಮಲ್ಲಿ ತುಂಬಿಕೊಂಡಿವೆ. ಮೇಲಾಗಿ ಕನ್ನಡಿಗರ ಕಲಾಭಿರುಚಿ, ಶಿಲ್ಪಕಲಾ ನಿಪುಣತೆ, ಉದ್ಯೋಗ ತತ್ಪರತೆ, ವ್ಯವಹಾರ ಕುಶಲತೆ, ಪರೋಪಕಾರ ಬುದ್ಧಿ, ಸಾಹಸಪ್ರವೃತ್ತಿ, ರಸಮಯ ಜೀವನ ಮೊದಲಾದ ಹಿರಿಯ ಸಾಂಸ್ಕೃತಿಕ ದೃಶ್ಯ ದೃಷ್ಟಾಂತಗಳಂತೆ ಇಂದಿಗೂ ಅವಶೇಷವಾಗಿ ಉಳಿದಿರುವ ಲೆಕ್ಕವಿಲ್ಲದಷ್ಟು ತಾಣಗಳು ನಮ್ಮ ನಾಡಿ ನಲ್ಲೆಲ್ಲ ಕಡೆಗೆ ತುಂಬಾ ಹರಡಿಕೊಂಡಿವೆ."

ಕಾವ್ಯದಲ್ಲಿನ ರಸಸ್ಥಾನವನ್ನು ತೋರಿಸುವ ರಸಿಕ-ವಿಮರ್ಶಕನಂತೆ ಕನ್ನಡ ನಾಡಿನಲ್ಲಿ ಇಲ್ಲಿ ಅಲ್ಲಿ ಎಲ್ಲೆಲ್ಲೂ ಮೆರೆಯುತ್ತಿರುವ ಪ್ರಕೃತಿ ಸೌಂದರ್ಯದ ನೆಲೆವೀಡುಗಳನ್ನು ಶ್ರೀಯುತರು ವರ್ಣಿಸಿದ್ದಾರೆ. ಪಂಪನು ಬಿಡುಗೊರಲಿನಿಂದ ಹಾಡಿ ಹೊಗಳಿದ ಬನವಾಸಿಯಿಂದ ಹೊರಟು 'ಇಂದಿನ ಕವೀಂದ್ರ ರವೀಂದ್ರರಿಗೆ ಕಾವ್ಯಸ್ಫೂರ್ತಿಯ ಕಿಡಿ ಯನ್ನು ಕಾಣಿಕೆ ಕೊಟ್ಟ ಕಾರ್ವಾರ'ವನ್ನು ಬಳಸಿ, ಭಟ್ಕಳದೇವಿನ ಪೂರ್ವ ವೈಭವವನ್ನು ಸ್ಮರಿಸಿ, ದಕ್ಷಿಣ ಕನ್ನಡ ಜಿಲ್ಲೆ, ಮೈಸೂರು ಸಂಸ್ಥಾನ, ವಿಜಯನಗರ, ಉತ್ತರ ಕರ್ನಾಟಕ ಪ್ರದೇಶಗಳ ಧಾರ್ಮಿಕ, ಐತಿಹಾಸಿಕ, ಶಿಲ್ಪಕಲಾತ್ಮಕ ಸ್ಥಳಗಳನ್ನೂ ನವೀನ ವಿಜ್ಞಾನದ ಸೌಕರ್ಯ ಗಳನ್ನು ಬಳಸಿಕೊಂಡು ದೊಡ್ಡದೊಡ್ಡ ಕೈಗಾರಿಕೆಗಳನ್ನು ಬೆಳಸು ತ್ತಿರುವ ಪಟ್ಟಣಗಳನ್ನೂ ತಮ್ಮದೇ ಆದ ವಿಶಿಷ್ಟ ರೀತಿಯ ವರ್ಣನೆಯ ಮೂಲಕ ನಮಗೆಲ್ಲ ಸಂದರ್ಶನ ಮಾಡಿಸಿದ್ದಾರೆ.

೧೦೯-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

# ಕನ್ನಡ ನುಡಿ

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ



ಸಂಪುಟ ೨
ಸಂಚಿಕೆ ೪೪

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಆಗಸ್ಟ್ ೩೦, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಸರಸ್ವತಿಗೆ

೧

ಸರಸ್ವತೀದೇವಿ ನಿನ್ನ ವೀಣೆ ನುಡಿಯೆ ಜೀವನ
ತನುಮನದೀ ತುಂಬುತಿದೆ ನವ್ಯ ದಿವ್ಯ ಭಾವನ
ಬೆಳೆಯುತಿಹುದು 'ತನ್ನತನ' ಬೆಳಗುವ ಚಿರಂತನ
ಸರಸ್ವತೀದೇವಿ ನಿನ್ನ ವೀಣೆ ನುಡಿಯೆ ಜೀವನ

೨

ಎಲ್ಲಿ? ಎಲ್ಲಿ? ಶಾಂತಿಜೇನು ಈಂಟಬಿಡುವೆನೆನ್ನುತ
ಅದರ ತೃಷೆಗೆ ತಾಳದೆ ತಸು ಗಾಳಿಗುದುರೆ ಏರುತೆ
ಹುಡುಕುತಿರೆ ಎಲ್ಲಿ ಶಾಂತಿ? ಎಲ್ಲಿ ಮುಕ್ತಿ ಎನ್ನುತ?

೩

ಜಗದಿ ಬೆಳೆದು ನಿಂತ ಮೋಹ ಎಳೆಯುತಿಹುದು ಕಾಡಿಗೇ
ಹೊನ್ನು-ಹೆಣ್ಣು ಕರೆಯುತಿಹವು ಬಾರೊ ನನ್ನ ಪಾಡಿಗೇ
ಇಹದ ಸುಖವನುಣ್ಣುಬಾರೊ ಇಹುದು ಇಲ್ಲಿ ನುಣ್ಣಗೇ

೪

ಹೋದಕಡೆಗೆ ಹೊಗೆಯನುಂಡು ದಣಿಸಿಕೊಂಡೆ ನಾಲಿಗೇ
ಹೊಟ್ಟೆಯಲ್ಲಿ ಹಸಿವೆ ಚಿಂತೆ ದಹಿಸುತಿರೆ ಪಾಡಿಗೇ
ನುಡಿಯುತಿಹವು 'ಕರೆದೊಯ್ಯೋ ಶಾಂತಿಸುಖದ ನಾಡಿಗೇ'

೫

ಎಲ್ಲೆಡೆಗೂ ಹಾಯ್ದು ಬಂದು ಹಾದಿಗಾಣದಾದೆನು
ಸಿರಿಯ ಶಿಖರದಲ್ಲಿ ನಿಂತು ಶಾಂತಿ ಪಡೆಯದಾದೆನು
ಮಡದಿ ಮಕ್ಕಳಲ್ಲಿ ಉಲಿದು ಸುಖವ ಪಡೆಯದಾದೆನು

೬

ಇಂತು ಇರಲು ಎಂತೊ ಬಂದು ಕೇಳಿಸಿತದೊ ನಾದ
ನನ್ನ ದೈವರೇಷೆ ಬರೆಯುವಂಥ ಸೂ-ವಾದ
ಕರೆಯುತಿಹುದು ಇಲ್ಲಿ ಬಾರೊ ಇಹುದು ಇಹದ ಸ್ವಾದ

೭

ಮನದ ಮೌಢ್ಯವಳಿಸುತಿಹುದು ನೋಡು ನೋಡು ಗಾನ
ಬೆಳೆಯುತಿಹವು ಭಾವಬುದ್ಧಿ ನಿತ್ಯ ನಿತ್ಯ ನೂತನ
ಮಂತ್ರದಂತೆ ತಾನೆ ನನ್ನ ಸುತ್ತುತಿಹುದು ತಾನ

೮

ವಿರಸವಿಂದು ಸರಸವಾಯ್ತು ನಿನ್ನ ನುಡಿಯ ಮಹಿಮೆಗೆ
ಬೇವು ಬೆಲ್ಲವಾಯ್ತೆ ತಾಯಿ ನಿನ್ನ ಬಲದ ಶಕ್ತಿಗೆ
ಮನದ ಮಲಿನವಳಿಯಿತವ್ವ ನಿನ್ನ ಮಂತ್ರ ಯುಕ್ತಿಗೆ

೯

ದೇವಿ ನಿನ್ನ ಮಿಲನದಿಂದ ನನ್ನ ಜೀವ ಪಾವನ
ವಾಗುತಿಹುದು ಹೃದಯ ತಾನೆ ಹಿಗ್ಗುತಿಹುದು ತನನನ
ಮನವು ಮೆಯ್ಯನುಳಿದು ಮೇಲೆ ಏರುತಿಹುದು ಜೀವನ

೧೦

ತೋರು ದೇವಿ ನಿನ್ನ ಕೃಪೆಯ ಮಾನವಮನ ಮಡಿಲಲಿ
ಬಂದು ಬಂದುದೆಲ್ಲ ಮುಕ್ತಿ ತನ್ನ ತಾನು ಮರೆಯಲಿ
ತನ್ನ ತಾನು ಮರೆಯೆ ನಿನ್ನ ಒಲುಮೆ ಗಳಿಸಲಿ

ಹುಚ್ಚಣ್ಣ

ನಮ್ಮ ನಗೆಗಾರರು:—

## ೧. ಕವಿವಲ್ಲಭ

(ಮುಂದುವರಿದುದು)

ಪ್ರತಿಭಾನು ಕಾವ್ಯವಿದ್ಯಾಪ್ರಚಯಪರಿಚಯಂ ವೃದ್ಧಸೇವಾನುರಾಗಂ
ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ......

—ಎಂದು ಹೇಳಿದ ಕಾವ್ಯಾವಲೋಕನಕಾರ. ನಂದಳಿಕೆ ಲಕ್ಷ್ಮೀನಾರಣಪ್ಪನವರ ಪ್ರತಿಭೆ ನಿಸರ್ಗವಾದುದು. ಕಾವ್ಯವಿದ್ಯಾಪ್ರಚಯಪರಿಚಯವೂ ವೃದ್ಧಸೇವಾನುರಾಗವೂ ಅವರಿಗೆ ಮಳಲಿ ಸುಬ್ಬರಾಯ ರೆಂಜವರ ಕೃಪೆಯಿಂದ ಆಗಿ ಬೆಳೆಯಿತು. ಇನ್ನುಳಿದ ಸತತಾಭ್ಯಾಸ ಪ್ರಯತ್ನ **ರತ್ನಾವತೀ ಕಲ್ಯಾಣ** ಮತ್ತು **ಕುಮಾರ ವಿಜಯ**ಗಳೆಂಬ ಯಕ್ಷಗಾನಗಳಲ್ಲಿ ಪ್ರಾರಂಭವಾಗಿ, **ಅದ್ಭುತ ರಾಮಾಯಣ, ಶ್ರೀರಾಮಪಟ್ಟಾಭಿಷೇಕ** ಮತ್ತು **ಶ್ರೀರಾಮಾಶ್ವಮೇಧ**ಗಳಲ್ಲಿ ಮುಂದುವರಿಯುತ್ತಿರುವಾಗಲೇ ನಿರ್ಘೃಣನಾದ ಕಾಲ ಇವರನ್ನು ಕೊಂಡೊಯ್ದ.

ಇವರು ಇದ್ದ ಈ ಸ್ವಲ್ಪ ಕಾಲದಲ್ಲೇ ಕನ್ನಡಕ್ಕೆ ಕೊಟ್ಟುಹೋದ ಕೃತಿಗಳಲ್ಲಿ ಮೊದಲಿನೆರಡು ಯಕ್ಷಗಾನಗಳು ಕನ್ನಡ ಜಿಲ್ಲೆಯಲ್ಲಾದರೂ ಪ್ರಚಾರದಲ್ಲಿದ್ದಂತಿಲ್ಲ. ಮಿಕ್ಕ ಮೂರೂ ಬಹುಜನ ಪರಿಚಿತವಾದವು. ಅವುಗಳಲ್ಲಿ ರಾಮಾಶ್ವಮೇಧವಂತೂ ಸರ್ವಜನಮಾನ್ಯವಾದುದು. ಅದರೊಳಗೂ ಮುದ್ದಣ–ಮನೋರಮಾ ಸೃಷ್ಟಿಯಂತೂ 'ಕೇಳ್ದಂ ಬಹುಶ್ರುತನಲ್ಪಶ್ರುತನೆನ್ನದೆ ಆರ ಕಿವಿಗಂ ನುಣ್ಪಿಂಪಿನೊಳ್ ಕೂಡೆ ಪಂಡಿತರುಂ ಮೂರ್ಖರುಂ ಎಕ್ಕೆಯಿಂ ಪೊಗೞ್ಪೆ' ರಚಿತವಾದುದು. ನಂದಳಿಕೆಯವರಿಗೆ ತಮ್ಮ ಅಳವು ತಿಳಿದುದು ಇದನ್ನು ರಚಿಸುತ್ತಿರುವಾಗಲೆ. 'ಕನ್ನಡಗಬ್ಬಿಗರ ಮನೆಯೂೞಿಗದವನೊರ್ವಂ ಕನ್ನಡಿಗಂ ಪೇೞ್ದ'ನೆಂದು ಅದ್ಭುತ ರಾಮಾಯಣವನ್ನು ಹೊರಹಾಕಿದವರು, 'ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು' ಎಂದು ಮಹಾಲಕ್ಷ್ಮಿ ನಾಮದಿಂದ ಶ್ರೀರಾಮ ಪಟ್ಟಾಭಿಷೇಕವನ್ನು ಹೊರಗೆಡವಿದರು, ರಾಮಾಶ್ವಮೇಧದ ಕಾಲಕ್ಕೆ 'ಅರಮನೆಯಿಂ ಪೊಜಮಡುವ ಕಬ್ಬಿಗರ ಬಲ್ಲಹ ಮುದ್ದಣ'ನಾದರು. 'ಇಂತಪ್ಪ ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮಂ ಪೊನ್ನ ಕಂಠಿಕೆಯಂ ಮೆಚ್ಚನೀವರ್. ನೀನೀವುದೇಂ?' ಎಂದು ಕೇಳುವಮಟ್ಟಿಗಾದರು. ಇಂತಹ ಕಾವ್ಯ ನೂರಾರು ಬರೆದೇನೆಂಬ ಆತ್ಮವಿಶ್ವಾಸ ಇವರಿಗೆ ಆ ಕಾಲಕ್ಕೆ ಬಂದಿತ್ತು. ಆದರೆ ಇವರ ಕವಿತೆಯ ಪರಿಪೂರ್ಣ ಪಕ್ವ ಫಲಗಳಿಗೆ ಕನ್ನಡ ಕೇಳಿಕೊಂಡು ಬಂದಿರಲಿಲ್ಲ.

ಶ್ರೀ ರಾಮಾಶ್ವಮೇಧ ಬಹುಶ್ರುತ ಅಲ್ಪಶ್ರುತರೆನ್ನದೆ ಎಲ್ಲರಿಗೂ ಪ್ರಿಯವಾಗುವುದು ಅದರ ರಾಮಾಯಣ ಕಥಾನಕ ಮಾತ್ರದಿಂದಲ್ಲ, ಅದರ ತಿರುಳ್ಗನ್ನಡವೊಂದರಿಂದಲ್ಲ, ಅದರ ಹೃದ್ಯವಾದ ಗದ್ಯದಿಂದಲೇ ಅಲ್ಲ, ಇವೆಲ್ಲಕ್ಕೂ ಅತಿಶಯವಾಗಿ ಅದರಲ್ಲಿ ಮೂಡಿರುವ ಹೊಚ್ಚ ಹೊಸ ಹಾಸ್ಯ ಪದ್ಧತಿಯಿಂದ.

ಒಂದೆ ತಂತಿಯ ನೀವಿದೇತಕೆ ನುಡಿಸುತಿರುವಿರಿ ಸುಮ್ಮನೆ?
　　ನಾಲ್ಕು ತಂತಿಯ ಮೀಟಿ ಕೆರಳಿಸಿ ಎಲ್ಲ ತಾಳಕು ನುಡಿಯಿರಿ.
ನಯದ ನುಣುಪು ನನಿಯು ಮೆಲುಪು ಬೇಸರಾಯಿತು, ಸಿಲ್ಲಿಸಿ;
　　ಪಿರಿಯ ರಾಗದ ನುಡಿದ ಕೆರಳಿಸಿ ಗಂಡು ತಾನದ ಮೊಳಗಿಸಿ.
ಒಡೆದ ಸಗಸದ ಮುರಿದ ಮನಗಳ ಒಲಿದ ಜೀವದ ವಿರಹದ
　　ಕರಸಿ ತೋರಿಸಿ ತರಿಸಿ ಕಂಬನಿ ಧೈರ್ಯವೇತಕೆ ಮುರಿವಿರಿ?
ಸಬಿಲ್ಲ ಮನಗಳ ಬಿಗುವನೇರಿಪ ವೀರಭರವನೆಯೂಡಿರಿ,
　　ಜೀವರಸಗಳನೆರೆದು ನೆನಸಿರಿ ಜಾಳುವಾಸೆಯ ನೆರಸಿರಿ.
ಕೈಗನ್ನೀವಲಿ ಬೆರಳು ಹಾರಲಿ ನಾದ ಸೋದೆ ಸೋದೆಗರೆಯಲಿ
　　ನಲಿಸಿ ಕೂಗಿಸಿ ಉಳಿಸಿ ನಗಿಸುವ ಗಾನವೈಸಿರಿ ಹಾಯಿಸಿ.
ಒಂದು ತಂತಿಯನೆಳೆದು ಸೆಳೆದು ಎದೆಯ ಸೀಳುವಿರೇತಕೆ?
　　ಎಲ್ಲ ತಂತಿಗಳೆಲ್ಲ ರಾಗದ ಎಲ್ಲ ಸಂತಸ ಸೂಸಿರಿ.

—ಎಂದು ಈಗಿನವರೊಬ್ಬರು ಹಾಡಿದ್ದಾರೆ. ನಮ್ಮ ಪ್ರಾಚೀನರು ಶೃಂಗಾರ, ಶಾಂತ, ಕರುಣಗಳಲ್ಲಿ ಅದ್ವಿತೀಯರು, ಎತ್ತಿದ ಕೈ. ಆಗಾಗ್ಗೆ ವೀರ ಚಿತ್ರಿಸುವುದೂ ಉಂಟು. ಶೃಂಗಾರಕ್ಕೆ ಅನುಸರಿಸಿ ಹಾಸ್ಯವೂ ಆಗಾಗ ಇಣಿಕುವುದೂ ಉಂಟು. ಆದರೆ ಅವರಲ್ಲಿ ಹಾಸ್ಯಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಆದರಲ್ಲೂ ರಾಮಾಶ್ವಮೇಧದಲ್ಲಿ ಕಾಣುವಂತಹ ಹಾಸ್ಯ ಅನ್ವರ್ಥವಾಗಿ ಅಪೂರ್ವ. ಕಂಡರೆ ರತ್ನಾಕರನೊಬ್ಬನಲ್ಲಿ ಕಾಣಬಹುದು, ಇದೇ ಆಳ ಅಗಲಗಳ ಹಾಸ್ಯ. ಆದರೆ ಅದು ಕೂಡ ಆ ಭರತೇಶ ವೈಭವದ ಬೃಹತ್ತಿನಲ್ಲಿ ಕುರಿತ ಹೊರತು ಕಾಣಸಿಗದು.*

ರಾಮಾಶ್ವಮೇಧ ಹೇಗೆ ನಂದಳಿಕೆಯವರ ರಸನಗೆಯಿಂದ ನಿರ್ಮಾಣವಾಯಿತೆಂದು ಹಿಂದಿನ ಲೇಖನದಲ್ಲಿ ಹೇಳಿದೆ. ಇವರ ರಾಮಾಯಣದ ರತ್ನತ್ರಯಗಳು ಮೈಸೂರ ಕಡೆ ಪ್ರಕಟವಾದುದು ಕೂಡ ಇವರ ಸ್ವಾಭಾವಿಕ ಹಾಸ್ಯಗುಣಕ್ಕೆ ಸಾಕ್ಷಿ.

ನಂದಳಿಕೆಯವರು ಲಕ್ಷ್ಮೀಶನನ್ನು ಓದಿದ್ದರು; 'ವಿನೂತನ ಕವಿತೆಯೆಂದು ಜರೆಯಬೇಡಿ. ಮತ್ಸರವನುಳಿದು ಆಲಿಸಿ' ಎಂದುದನ್ನು ಕೇಳಿದ್ದರು. 'ತೆಗಳಲ್ ಬಲ್ಲಂ ಖಳನೇಂ ನೆಗಳಲ್ ಬಲ್ಲನೆ ನವೀನ ಕೃತಿಯಂ' ಎಂಬ ಶಬರಶಂಕರವಿಲಾಸದ ಪದ್ಯ ಅವರಿಗೆ ತಿಳಿದಿತ್ತು. ಅದೇ ಷಡಕ್ಷರಿಯ

ಮೊದಲಕವೀಂದ್ರರೊಲ್ದೊರೆದ ಸತ್ಕೃತಿ ಸಂಚಯಮೀ ಧರಿತ್ರಿಯೊ
ಳ್ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ
ಗದಿಪರೊ ಚೀರೆನುತ್ತೆ ನುಡಿವಜ್ಞಜನಕಾರನವಂಗೆ ಪುತ್ರಸಂ
ಪದದೊದವೇಕೆ ಬೇರೆ ಪರಪುತ್ರರನೀಕ್ಷಿಪ ತುಷ್ಟಿ ಸಾಲದೇ

ಎಂಬ ಪದ್ಯ ಇವರಿಗೆ ಗೊತ್ತಿದ್ದಿರಬೇಕು. 'ಇಂದಿನವರಂದಿನವರ್ ಕೆಲರೆಂದು ಪಿಕ್ಕುವೀ ದಂದುಗದಿಂದಮೇನೆಮಗನಿಂದ್ಯ ಕವೀಂದ್ರರೆ ವಂದ್ಯರಾವಗಂ' ಎಂದ ಮಧುರನ ಮಾತು ಇವರಿಗೆ ತಿಳಿಯದಿದ್ದಿರ ಬಹುದಾದರೂ ತಮ್ಮ ನಾಡಕಡೆಯವನೇ ಆದ ರತ್ನಾಕರನು

ತೊಡಗುವರ್ ತಾವು ಕವಿತ್ವವ ಕಡೆಗದು
ನಡೆಯದು ಕಿವಿಗೆ ಶೋಭಿಸದು
ಬಿಡು ಹೊಸ ಕವಿತೆಯನೆಂದು ಪೂರ್ವದ ಶಾಸ್ತ್ರ
ಗಡಬಡೆ ಮಾಡುವರೊಡನೆ

ಹೇಳಿದುದಾದರೂ ಇವರಿಗೆ ತಿಳಿದಿರಲಿಕ್ಕೂ ಸಾಕು. ರನ್ನನ ಗದಾಯುದ್ಧವನ್ನಂತೂ ಇವರು ಓದಿದ್ದುದರಿಂದ, ಅದರಲ್ಲಿಯ

ಕವಿಗಳೋಳಾ ಪುರಾಣಕವಿಪುಂಗವರೊಳ್ವಿದರೀಗಳಿಲ್ಲ ಸ
ತ್ಕವಿಗಳೆನಲ್ಕೆವೇಡವರ ಪೋದೊಡವಂದಿರ ಕಬ್ಬಮಿನ್ನುಮಿ
ರ್ಪುವು ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾನೆ ಪೇ
ಳುವೆ ಬುಧರಿರ್ದು ನೋಳ್ಪುದು ಪುರಾತನ ನೂತನ ಕಾವ್ಯರೇಖೆಯಂ

ಎಂಬ ಪದ್ಯ ಅವರಿಗೆ ಹೃದ್ಗತವಾಗಿತ್ತು. 'ಹೀಗೆ ಲಕ್ಷ್ಮೀಶ, ಷಡಕ್ಷರಿ, ರನ್ನ ಮೊದಲಾದವರಿಗೇ ಅವರ ಕಾಲದಲ್ಲಿ ಈ ಮಂಗಳಾರತಿ ಯಾಯಿತಾದರೆ, ಕುಸ್ತಿ ಮಾಸ್ತರನಾದ ನಾನು ಕನ್ನಡದಲ್ಲಿ, ಅದೂ ಹಳಗನ್ನಡದಲ್ಲಿ, ಕಾವ್ಯ ಬರೆದೆನೆಂದರೆ ಬೆಲೆ ಕೊಡುವವರು ಯಾರು? ಬೆಲೆ ಹಾಗಿರಲಿ, ನಂಬುವವರು ತಾನೆ ಯಾರು?' ಎಂದು ಎಣ್ಣಿಸಿದ್ದಿರ ಬೇಕು ಇವರಿಗೆ. 'ಮುಂತೆ ಸರಿಯಿಲ್ಲೆಂದು ಪೊಗೞ್ದವನ ಪೂಜೆ ಮಡಿಸಿ ಪಿಂತವನ ಕವಿತೆಯೇನೆಂದು ನಿಂದಿಸು'ವ ಮರ್ಯಾದೆ 'ರಾಘವಾಂಕಪಂಡಿತನುಭಯಕವಿಶರಭಭೇರುಂಡ'ನಿಗೆ ದೊರಕಿರಬೇಕಾದರೆ ತನಗೆ ಏನು ತಾನೆ ದೊರಕದು!—ಎಂದು ಎಣ್ಣಿಸಿದ್ದಿರಬೇಕು ಇವರಿಗೆ. ಸಾಲದುದಕ್ಕೆ 'ಕನ್ನಡ ಜಿಲ್ಲೆಯವರ ಕಾವ್ಯವೆಂದರೆ ಮಾನ್ಯವಾಗುವುದು ಪ್ರಯಾಸ. ಮೈಸೂರು ವಿದ್ವಾಂಸರಿಗೆ ನಮ್ಮ ಜಿಲ್ಲೆಯ ಲೇಖಕರ ವಿಷಯದಲ್ಲಿ ಆದರವಿಲ್ಲ' ಎಂದೂ ಇವರಿಗೆ ಎಣ್ಣಿಸಿತ್ತು. ಈ ಕಾರಣಗಳಿಂದ ಇವರು ತಮ್ಮ ಹೆಸರಿನಲ್ಲಿ ಕಾವ್ಯ ಪ್ರಕಟಿಸಲು ಹಿಂದೆಗೆಯುತ್ತಿದ್ದರು.

ಆದರೆ, ಅಭ್ಯಾಸಕ್ಕಾಗಿ ಬರೆದ ಅದ್ಭುತ ರಾಮಾಯಣವನ್ನು ಮಳಲಿ ಸುಬ್ಬರಾಯರು ಮೆಚ್ಚಿಕೊಂಡು, ಅದನ್ನು ಪ್ರಕಟಿಸುವ ಸುಲಭೋಪಾಯವನ್ನು ಸೂಚಿಸಿದರು. ಅವರ ಸೂಚನೆಯಂತೆ ಅದನ್ನು

---

* ನಂದಳಿಕೆಯವರು ರತ್ನಾಕರನನ್ನು ಓದಿದ್ದಿರಬೇಕೆಂದು ನನಗೆನ್ನಿಸುತ್ತದೆ. ಇವರು 'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ಒಬ್ಬ 'ದಿಗಂಬರ ವಿಲಾಸ'ನನ್ನು ಸ್ಮರಿಸಿದ್ದಾರೆ. ಶ್ರೀರಾಮಾಶ್ವಮೇಧದಲ್ಲಿ 'ಬಸದಿಗೊಡೆಯರಪ್ಪ ಸುರೇಂದ್ರ ಚರಿತೆ'ಯ ಪ್ರಸ್ತಾಪ ಬಂದಿದೆ. ಇದಕ್ಕೂ ಹೆಚ್ಚಾಗಿ ಮುದ್ದಣ ಮನೋರಮೆಯರ ಸರಸ ಸಲ್ಲಾಪ ಓದಿದರೆ, ಭರತೇಶ್ವರ, ಕುಸುಮಾಜಿ, ಮಕರಂದಾಜಿ, ಪದ್ಮಿನಿಯರೊಡನೆ ಆಡಿದ ಸರಸ ನೆನಪಾಗುತ್ತದೆ.

ನಂದಳಿಕೆಯವರು ಪ್ರಾಚೀನಕಾವ್ಯವೆಂಬ ಮುಸುಕಿನಲ್ಲಿ ಮೈಸೂರಿನ 'ಕರ್ಣಾಟಕ ಕಾವ್ಯ ಮಂಜರಿ'ಗೆ ಕಳಿಸಿದರು. ಮೈಸೂರಿನವರು ಅದರ ಪ್ರೌಢಿಮೆಗೆ ಮೆಚ್ಚಿ, ಇವರ ಮಾತನ್ನೆ ನಂಬಿ, ಸಿಪ್ಪೆ ಕೂಡ ಸುಲಿಯದೆ ಅದನ್ನು ನುಂಗಿಬಿಟ್ಟರು. ಅದನ್ನು ಅವರು ನುಂಗಿದುದು ತಡ, ನಂದಳಿಕೆಯವರು ಇನ್ನೊಂದು ಹಣ್ಣು ಸಿದ್ಧಪಡಿಸಿದರು. ಅದನ್ನು ಮಹಾಲಕ್ಷ್ಮಿಯೆಂಬ ಹೆಸರಿನಡಿ ನೀಡಿದರು. ಮೈಸೂರು ಅದನ್ನೂ ನಂಬಿ ನುಂಗಿತು. ಪುನಃ ಅದನ್ನು ನುಂಗಿದುದು ತಡ, ಸಿದ್ಧವಾಯಿತು ಇನ್ನೊಂದು. ಅದೆ ಇವರ ಕಡೆಯ ಕೃತಿ, ರಾಮಾಶ್ವಮೇಧ. ಅದು ಅಚ್ಚಿನಲ್ಲಿ ಕಣ್ಣು ತೆರೆಯುವ ಮೊದಲೆ ಇವರು ಕಣ್ಣುಮುಚ್ಚಿದರೂ ಇವರು ಇನ್ನೂ ಇರುವಾಗಲೆ ಅದನ್ನು ಮೈಸೂದು ಪುರಾತನಕೃತಿಯೆಂದು ಸ್ವೀಕರಿಸಿತ್ತು. ಹೀಗೆ ಒಂದಲ್ಲ, ಎರಡಲ್ಲ, ಮೂರು ಸಲ ನವೀನನೊಬ್ಬನ ಕೃತಿ ಪ್ರಾಚೀನವೆಂದು ಮಾನ್ಯವಾದುದನ್ನೂ ಮೈಸೂರು ವಿದ್ವಾಂಸರು ಕನ್ನಡ ಜಿಲ್ಲೆಯ ಲೇಖಕನೊಬ್ಬನನ್ನು ಆ ಜಿಲ್ಲೆಯವನೆಂದು ತಿಳಿಯದೆಯೆ ಪ್ರಾಚೀನರ ಪಟ್ಟಕ್ಕೆ ಸೇರಿಸಿದುದನ್ನೂ ಕಂಡು, ಮುದ್ದಣ—ಮನೋರಮಾ ಸೃಷ್ಟಿಕರ್ತರಾದ ನಂದಳಿಕೆಯವರಿಗೆ ಎಷ್ಟು ರಸನಗೆ ಉಕ್ಕಿರಬೇಡ! ಇಂತಹ ನಗೆಗಾರರನ್ನು 'ಸುಳ್ಳು ತಟವಟ ಹೇಳಿ ಮೋಸಮಾಡಿದನೆಂದು' ಆಕ್ಷೇಪಿಸುವುದು ಸಲ್ಲದು. ನಗೆಯ ನಾನಾ ನಿಲುವುಗಳನ್ನು ಬಲ್ಲವರು ಹೀಗೆನ್ನರು. ನೂತನ ಕವಿತೆ ಸ್ವೀಕರಣೀಯವಾಗದಿರಲು ಅದರ ನೂತನತ್ವವೊಂದೇ ಕುಂದೆಂದು ಎಣಿಸುವ ನಾಡಿಗರಿಗೆ ಏನು ಮಾಡಬೇಕು? ನೂತನವಾದುದಕ್ಕೇ ಪ್ರಾಚೀನತೆಯ ಪಟ್ಟಹಚ್ಚಿ, ಅಂತೆಯೇ ಅವರು ಅದಕ್ಕೆ ಪೂಜೆಮಾಡುವ ಮೌಢ್ಯವನ್ನು ಕಂಡು ಕನಿಕರಿಸಿ ನಗಬೇಕು ತಾನೆ!

ಮೋಸ ನಂಗ್ ಮಾಡಂತ ಬೇಡತದ್ ಜಗತ್ತು.
ಅದಕೇನೆ ಯಿಡದೀನಿ ಪಟ್ಬಾಗ್ ಇಕ್ಮತ್ತು.
ಈ ಮಾದ್ರಿ ಮೋಸ
ಆಗದಣ್ಣ ದೋಸ.

ನಂದಳಿಕೆಯವರ ರಾಮಾಶ್ವಮೇಧದಲ್ಲಿ ಕಂಡುಬರುವುದು ಅವರ ಹಾಸ್ಯಪ್ರವೃತ್ತಿ ಮಾತ್ರವಲ್ಲ, ಹಾಸ್ಯವನ್ನೇ ಹಿರಿದಾಗಿ ಬಳಸಬೇಕೆಂದು ಅವರ ಬಯಕೆಯಿದ್ದಂತೆಯೂ ಕಂಡುಬರುವುದು. ರಾಮಾಶ್ವಮೇಧದ ನಗುವಿನ ಹೊನಲಿನಲ್ಲಿ 'ಕಾಮದೇವ ರತಿದೇವಿ' ಸಲ್ಲಾಪವೂ 'ಭವತಿ ಭಿಕ್ಷಾಂ ದೇಹಿ' ಮಂತ್ರೋಪದೇಶವೂ ಎರಡು ಮಡುಗಳು, ಬೇಕೆಂದೇ ತಯಾರಾದವು. ಇವುಗಳಲ್ಲಿ ಮೊದಲನೆಯದು ಅಶ್ವಮೇಧದ ಕತೆಗೆ ಏನೂ ಸಂಬಂಧವಿಲ್ಲದೆ ಹುಟ್ಟಿಬಂದುದು; ಮುದ್ದಣನು ಪ್ರಾಸಂಗಿಕವಾಗಿ 'ದೇವೀ' ಎಂದುದರಿಂದ ಹುಟ್ಟಿ ಬೆಳೆದುದು. ಈ ಶುದ್ಧ ಸರಸ ಸಲ್ಲಾಪ ಬೇರೇನೂ ಉದ್ದೇಶವಿಲ್ಲದೆ ಬಂದಂತೆ ಕಂಡರೂ ಕೊನೆಯ ಕೊಂಡಿ ಅದನ್ನು ಸ್ಪಷ್ಟಗೊಳಿಸುತ್ತದೆ. 'ಇಂತು ವ್ಯರ್ಥಾಳಾಪದಿಂ ಪೊೞ್ತಂ ಕಟಿವೆಮ್ಮಂ ಲೋಗರ್ ಪಟಿಯರೆ? ಪೋಮಾಣ್, ಶ್ರೀ ರಾಮಕಥೆಯನಿನ್ನೊರೆವೆಂ, ಕೇಳ್' ಎಂಬ ಮಾತಿನಲ್ಲಿ ಮುದ್ದಣ, ಪುರಾಣವಲ್ಲವೆಂಬ ಕಾರಣದಿಂದ ರಸವನ್ನು ದೂರಮಾಡಿ ಪುರಾಣವೆಂದೊಡನೆ ಕಸವಾದರೂ ಸರಿಯೆ ಅದನ್ನು ಕೊಳ್ಳುವವರನ್ನು ನೋಡಿ ನಗುತ್ತಿದ್ದಾನೆ. ಎರಡನೆಯ ಹಾಸ್ಯ ರಸಸ್ಥಾನವಾದರೋ ಕಥೆಗೆ ಅಂಟಿಕೊಂಡೆ ಬರುತ್ತದೆ. ಇದಕ್ಕಾದರೂ ಕೊಂಡಿಯಿಲ್ಲದೆ ಇಲ್ಲ. ಮುದ್ದಣನ ಮಂತ್ರೋಪದೇಶವನ್ನು ಕೇಳಿದ ಮನೋರಮೆ 'ನಿನ್ನ ಸೊಗಸನೆಮ್ಮನ್ನರಪ್ಪ ಜಾಣಿಲಿವೆಣ್ಗಳೆ ಕೊಂಡಾಡುವರಲ್ಲದೆ ಬಲ್ಲರೇನೊಲ್ವರೆ?' ಎನ್ನುತ್ತಾಳೆ. ಬಲ್ಲವರು ಒಲ್ಲೆನೆಂದರೂ ಇದು ಅವರನ್ನು ಒಲಿಸಿಕೊಂಡೇ ತೀರುವುದೆಂದು ನಂದಳಿಕೆಯವರ ನಂಬಿಕೆ ಇಲ್ಲಿ ನಗುತ್ತಿದೆ. ಮಾತ್ರವಲ್ಲ, 'ನೀಂ ಕಬ್ಬಿಗನೊ? ಸಬ್ಬವಕಾಱನೊ?' ಎನ್ನುತ್ತಾಳೆ ಮನೋರಮೆ. 'ಪರಿಹಾಸಮಾಡುವ ಸಬ್ಬವಕಾರನು ಕಬ್ಬಿಗನಾಗಲಾರನೇನು? ಶೃಂಗಾರ, ಶಾಂತ, ಕರುಣ, ವೀರಗಳು ಮಾತ್ರ ಕವಿಯ ಕ್ಷೇತ್ರವೇನು?' ಎಂದು ಸವಾಲು ಹಾಕುತ್ತಿದೆ ಇಲ್ಲಿ ನಂದಳಿಕೆಯವರ ನಗು. ಇದೆ ಸಂದರ್ಭದಲ್ಲಿ ಮುದ್ದಣ, ತನ್ನಂತಹ ಕಬ್ಬಿಗರು ಕೂಡ ಈ 'ಭವತಿ ಭಿಕ್ಷಾಂದೇಹಿ' ಎಂಬ ಸಪ್ತಾಕ್ಷರೀ ಮಂತ್ರದಿಂದ ಸಿದ್ಧಿಗಾಣುವರೆಂದು ಮುಗುಳುನಗುತ್ತ ಹೇಳುವುದನ್ನು ಓದಿದರೆ, ಇದನ್ನು ಬರೆದ ನಂದಳಿಕೆಯವರ ೧೦–೧೫–೨೦ ರೂಪಾಯಿ ಸಂಬಳದ ಕತೆ ತಿಳಿದ ಯಾರ ಕಣ್ಣು ತೇವವಾಗಲಿಕ್ಕಿಲ್ಲ! 'ದುಕ್ಕ ಇದ್ರೆ ಇತ್ತಂತೇಳು. ಸಂತೋಸಾನ ಗಳ್ಸು' ಎಂದು ನಗುತ್ತ ಬದುಕಿದ ಗಂಡುಜೀವ ಇದು. ಆದರೆ, ಅಡಿಯಲ್ಲಿ ಏನೂ ಅನ್ಯ ಉದ್ದೇಶವಿರದ ಸ್ವಚ್ಛ ಸರಸಕ್ಕೆ ಒಂದು ಸಣ್ಣ ಮಾದರಿಯೂ ಇದೆ, 'ಹನೂಮತ್ಪರಾಜಯ'ದ ಪ್ರಾರಂಭದಲ್ಲಿ.

ಇಂತಹ ನಿಗಿನಿಗಿ ನಗುವಿನ ರಾಮಾಶ್ವಮೇಧ ನಂದಳಿಕೆಯವರ ಒಂದು ಪ್ರಯೋಗ ಮಾತ್ರ. ಇದು ಇವರ ಹಿಂದಿನೆರಡು ಕೃತಿಗಳಿಂದ ತೀರ ಭಿನ್ನವಾದುದು. ಇದಕ್ಕೆ ಜನರಿಂದ ಏನು ಅಭಿಪ್ರಾಯ ಬರುವುದೊ ನೋಡಿ ಮುಂದೆ ಇವರು ಅದಕ್ಕೆ ತಕ್ಕಂತೆ ತೊಡಗಬೇಕೆಂದಿದ್ದಂತೆ ಕಾಣುತ್ತದೆ. ರಾಮಾಶ್ವಮೇಧದಲ್ಲಿ ಪ್ರಸ್ತಾಪಿಸಿರುವ 'ಉಡುಗೊಱೆ'ಯ ಮಾತು ಕೇವಲ ಸತಿಪತಿಯರ ಸಲ್ಲಾಪದಂತೆ ಕಂಡರೂ ಅದರಲ್ಲಿ ಇನ್ನೂ ಹೆಚ್ಚಿನ ಅರ್ಥವಿದೆಯೆಂದು ತೋರುತ್ತದೆ. ಪುಸ್ತಕದ ಕೊನೆ ನೋಡಿ. ಮನೋರಮೆಯಾದರೂ ಮುದ್ದಣನಿಗೆ ಉಡುಗೊರೆ ಕೊಟ್ಟಿಲ್ಲ. 'ಅಂತಪ್ಪೊಡಿಂತಿದು' ಎಂದು ಏನೋ ಕೊಡುವುದಕ್ಕೆ ತೊಡಗಿ, ಅಷ್ಟರಲ್ಲೆ ತಡೆದು 'ನಿನ್ನೀ ಕಬ್ಬಮನೋದುವ ಜಾಣರೇವಗೆಯುಡುಗೊಱೆಯನೀಯೆಂಬರಾವಗೆಯ ಮೆಚ್ಚನೀವೆಂ' ಎಂದಿದ್ದಾಳೆ. ಮುದ್ದಣನಾದರೂ 'ಅಂತಾನುಮಕ್ಕೆ. ಪೋಪಂ' ಎಂದು, ಉಡುಗೊರೆ ತಡೆದುಬರಲೆಂದೇ ಒಪ್ಪಿದ್ದಾನೆ.

ಆದರೆ, ತನ್ನ ಕಾವ್ಯವನ್ನು ಓದುವ ಜಾಣರು ಯಾವ ಬಗೆಯ ಉಡುಗೊರೆ ಕೊಡುವರೊ ಕೊಡಿಸುವರೊ ಎಂಬುದನ್ನು ಕಾಣುವ ಮುನ್ನ ಕವಿಯನ್ನು ಕಾಲ ಒಯ್ದು. ನಂದಳಿಕೆಯವರು ಮುಂದೆ ಏನೇನು ಬರೆಯಬೇಕೆಂದು ಕನಸು ಕಾಣುತ್ತಿದ್ದರೊ! ಆ ಕನಸನ್ನು ನನಸಾಗಿ ಪಡೆಯುವ ಭಾಗ್ಯ ಕನ್ನಡ ಕೇಳಿಬರಲಿಲ್ಲ.

—ಜಿ. ಪಿ. ರಾಜರತ್ನಂ.

---

## ಗಾಥಾಸಪ್ತಶತಿ

(ಮುಂದುವರಿದುದು)

(ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.)

ಇದರಲ್ಲಿ ಕವಿಗಳು ಹಳ್ಳಿಯ ಜೀವನವನ್ನು ಬಹು ಚೆನ್ನಾಗಿ ಚಿತ್ರಿಸಿದ್ದಾರೆ. ಲೋಕದಲ್ಲಿ ಸಾಮಾನ್ಯವಾಗಿ ನೀಚರಿಗೆ ಭಾಗ್ಯ ಬಂದರೆ ಒಂದು ವಿಧವಾದ ಗರ್ವ ಬರುತ್ತದೆ. ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದು ಸರಳ ಜೀವನವನ್ನು ನಡೆಸುತ್ತಿರುವವರಿಗೆ ಈ ವಿಧವಾದ ಹೆಮ್ಮೆ ಬರದು. ಅಷ್ಟೇ ಅಲ್ಲದೆ ಅವರಿಗೆ ದೊರೆಯುವ ಸುಖ ಅಲ್ಪವಾದುದಾದರೂ, ಅವರ ಆನಂದ ಅಪಾರವಾದುದು. ಒಬ್ಬ ಹಳ್ಳಿಯ ರೈತ ತನ್ನ ಸೊಸೆಗೆ ಒಂದು ಹೊಸ ಸೀರೆಯನ್ನು ತಂದುಕೊಟ್ಟಿದ್ದಾನೆ. ಅದರ ಬೆಲೆ ಅಲ್ಪ. ಆದರೂ ಆಕೆಗೆ ಇದರಿಂದ ಉಂಟಾಗಿರುವ ಸಂತೋಷವನ್ನು ನೋಡಿ :

ಅಪ್ರಾಪ್ತ ಪ್ರಾಪ್ತಂ ಪ್ರಾಪ್ಯ ನವರಂಗಕಂ ಹಾಲಿಕ ಸ್ನುಷಾ॥
ಪಶ್ಯತ ತಸ್ಮೀ ನಮಾತಿ ವಿಸ್ತೀರ್ಣಾಸ್ವಪಿ ಗ್ರಾಮರಥ್ಯಾಸು॥

(ರೈತನ ಸೊಸೆಗೆ ಇದುವರೆಗೂ ದೊರೆಯದಿದ್ದ ಕೇಸರಿ ಬಣ್ಣದ ಸೀರೆಯೊಂದು ದೊರೆಯಿತು. ಆಕೆ ತೆಳ್ಳಗೇ ಇದ್ದಾಳೆ. ಆದರೂ ಆಕೆಯ ಓಡಾಟಕ್ಕೆ ವಿಸ್ತಾರವಾದ ಆ ಗ್ರಾಮದ ಬೀದಿಗಳು ಈಗ ಸಾಲದೆ ಹೋಗಿವೆ).

ರೈತರಿಗೆ ದನಕರುಗಳೇ ಆಧಾರ. ಅವೇ ಅವರ ಸಂಪತ್ತು. ಆದುದರಿಂದ ಅವುಗಳ ಮೇಲೆ ಅವರಿಗೆ ಬಹು ವಿಶ್ವಾಸ. ಇದನ್ನು ಕವಿ ಬಹು ಸ್ಪಷ್ಟವಾಗಿ ಚಿತ್ರಿಸಿದ್ದಾನೆ. ಒಬ್ಬ ರೈತನ ಎಮ್ಮೆ ಸತ್ತುಹೋಗಿದೆ. ಅವನ ಸಂಕಟವನ್ನಾದರೂ ನೋಡಿ:

ಗೃಹಪತಿನಾ ಮೃತಸೈರಿಭ ಬೃಹದ್ಘಂಟಾದಾಮ ಚಿರಮೂಢ್ವಾ।
ವರ್ಗಶತಾನಿ ನೀತ್ವಾ ನನ್ತರಮಾರ್ಯಾ ಗೃಹೇ ಬದ್ಧಂ॥

(ಸತ್ತುಹೋದ ಎಮ್ಮೆಯ ಕತ್ತಿಗೆ ಕಟ್ಟಿದ್ದ ಘಂಟೆಯನ್ನು ತೆಗೆದುಕೊಂಡು ತನ್ನಲ್ಲಿದ್ದಂತಹ ಎಮ್ಮೆಯನ್ನೇ ಕೊಂಡು ತರಲು ರೈತನು

೪೨೦ನೆಯ ಪುಟಕ್ಕೆ



ಶುಕ್ರವಾರ, ಆಗಸ್ಟ್ ೩೦, ೧೯೪೦

## ವಯಸ್ಕರ ವಿದ್ಯಾಭ್ಯಾಸ

ವಯಸ್ಕರ ವಿದ್ಯಾಭ್ಯಾಸದ ವಿಚಾರವಲ್ಲಿ ಶ್ರೀಯುತ ಎಸ್. ಎನ್. ಕುಲಕರ್ಣಿ ಅವರು 'ದಿ ಯುನೈಟೆಡ್ ಕರ್ನಾಟಕ' ಎಂಬ ಪತ್ರಿಕೆಯ ೨೫-೮-೪೦ನೆಯ ತಾರೀಖಿನ ಸಂಚಿಕೆಯಲ್ಲಿ ಒಂದು ಒಳ್ಳೆಯ ಲೇಖನವನ್ನು ಬರೆದಿದ್ದಾರೆ.

ವಯಸ್ಕರ ವಿದ್ಯಾಭ್ಯಾಸಕ್ಕಾಗಿ ಬೊಂಬಾಯಿ ಪ್ರಾಂತದಲ್ಲಿ ಒಂದು ಪ್ರಾಂತ ಮಂಡಲಿ ಏರ್ಪಾಟಾಗಿದೆ. ಆ ಮಂಡಲಿಯವರು ಎರಡು ನಿರ್ಣಯಗಳನ್ನು ಮಾಡಿ ಬೊಂಬಾಯಿ ಸರ್ಕಾರಕ್ಕೆ ಕಳುಹಿಸಿದ್ದರು.

(೧) ೧೯೪೦ನೆಯ ಮಾರ್ಚಿ ತಿಂಗಳ ತರುವಾಯ ಯಾವ ಸ್ಥಳೀಯ ಸಂಸ್ಥೆಯಲ್ಲಾಗಲಿ ಅನಕ್ಷರಸ್ಥನಾದವನಿಗೆ ಉದ್ಯೋಗದ ಅರ್ಹತೆ ಇರಕೂಡದು.

(೨) ಸ್ಥಳೀಯ ಸಂಸ್ಥೆಗಳಲ್ಲಿ ಉಪಾಧ್ಯಾಯರು ಮೊದಲಾದ ಉದ್ಯೋಗಿಗಳನ್ನು ನೇಮಿಸಿಕೊಳ್ಳುವಾಗ, ವಯಸ್ಕರ ವಿದ್ಯಾಭ್ಯಾಸದ ತರಗತಿಯನ್ನು ನಡಸಿರುವುದೂ, ಕನಿಷ್ಠಪಕ್ಷ ೨೦ ಮಂದಿಯನ್ನಾದರೂ ಅಕ್ಷರಸ್ಥರನ್ನಾಗಿ ಮಾಡಿರುವುದೂ ಒಂದು ಹೆಚ್ಚಿನ ಯೋಗ್ಯತೆಯೆಂದು ಭಾವಿಸತಕ್ಕದ್ದು. ೧೯೪೦ನೆಯ ಇಸವಿಯ ತರುವಾಯ ಈ ಹೆಚ್ಚಿನ ಯೋಗ್ಯತೆ ಇದ್ದೇತೀರಬೇಕೆಂದು ವಿಧಾಯಕಮಾಡತಕ್ಕದ್ದು.

ಈ ಎರಡು ನಿರ್ಣಯಗಳನ್ನೂ ಬೊಂಬಾಯಿ ಸರಕಾರದವರು ಅಂಗೀಕರಿಸಿದ್ದಾರೆ. ಪ್ರಾಂತ ಮಂಡಲಿಯವರು ಸಹಕಾರ ಸಂಘಗಳ ರಿಜಿಸ್ಟ್ರಾರ್ ಅವರಿಗೆ ವಿನಂತಿ ಮಾಡಿಕೊಂಡಿದ್ದರ ಮೇಲೆ, ಅವರು ಎಲ್ಲ ಸಂಘಗಳಿಗೂ ಸರ್ಕ್ಯುಲರನ್ನು ಕೊಟ್ಟುಕಳಿಸಿದ್ದಾರೆ. ಅದರಲ್ಲಿ—

(೧) ವಾರ್ಷಿಕಾಧಿವೇಶನಗಳಲ್ಲಿ ಕಾರ್ಯಕ್ರಮವನ್ನು ಏರ್ಪಡಿಸುವಾಗ ಸದಸ್ಯರಲ್ಲಿ ನಿರಕ್ಷರತಾನಿವಾರಣೆಯ ಬಗ್ಗೆ ಒಂದು ನಿರ್ಣಯವನ್ನು ತಪ್ಪದೆ ಮಾಡಬೇಕು,

(೨) ಸದಸ್ಯರಲ್ಲಿ ನಿರಕ್ಷರತೆಯನ್ನು ಹೋಗಲಾಡಿಸಲು ತರಗತಿಗಳು ಮೊದಲಾದುವನ್ನು ಏರ್ಪಡಿಸಬೇಕು,

(೩) ಬೊಂಬಾಯಿ ಸರ್ಕಾರದ ಸಹಕಾರ ಸಂಘಗಳ ಕಾನೂನಿಗೆ ಒಳಪಟ್ಟು ಈ ತರಗತಿಗಳಿಗೆ ದಾನದ್ರವ್ಯದಿಂದ ಕೊಂಚ ಹಣವನ್ನು ಕೊಡಬಹುದು

ಎಂಬ ಮುಖ್ಯವಾದ ಮೂರು ವಿಚಾರಗಳಿವೆ.

ಮೇಲೆ ಹೇಳಿರುವ ನಿರ್ಣಯಗಳೂ, ಸಹಕಾರ ಸಂಘಗಳಿಗೆ ಕೊಟ್ಟಿರುವ ಸೂಚನೆಗಳೂ ಬಹಳ ಉಪಯುಕ್ತವಾದುವುಗಳಾಗಿವೆ. ಪ್ರಾಂತ ಮಂಡಲಿಯವರು ಸ್ಥಳೀಯ ಸಂಸ್ಥೆಗಳ ನೌಕರರ ವಿಚಾರವನ್ನು ಮಾತ್ರ ಹೇಳಿದ್ದಾರೆ. ಅದನ್ನು ಎಲ್ಲ ಸರ್ಕಾರಿ ಇಲಾಖೆಗಳಿಗೂ ಅನ್ವಯಿಸುವಂತೆ ಮಾಡಲು ಸಾಧ್ಯವೆಂದು ನಮಗೆ ತೋರುತ್ತದೆ. ಈಗ ಕಚೇರಿಗಳಲ್ಲಿರುವ ಅನಕ್ಷರಸ್ಥರಾದ ಜವಾನರು ಮೊದಲಾದವರು ಆರು ತಿಂಗಳೊಳಗಾಗಿ ಓದುಬರಹಗಳನ್ನು ಕಲಿಯಬೇಕೆಂದು ಒತ್ತಾಯಮಾಡಿ, ಹಾಗೆ ಕಲಿತವರಿಗೆ ತಿಂಗಳಿಗೆ ಒಂದು ರೂಪಾಯಿನಂತೆ ಹೆಚ್ಚು ಸಂಬಳವನ್ನು ಕೊಟ್ಟು ಪ್ರೋತ್ಸಾಹಿಸಬಹುದು. ಎರಡನೆಯದಾಗಿ ಗ್ರಾಮಾಂತರಗಳಲ್ಲಿ ಉಪಾಧ್ಯಾಯರನೇಕರು ಹಳ್ಳಿಯ ಹುಡುಗರಿಗೆ ಪಾಠ ಹೇಳಿ ಓದುಬರಹಗಳನ್ನು ಕಲಿಸುತ್ತಿದ್ದಾರೆ. ಆದರೆ ಮನೆಗಳಲ್ಲಿ ತಂತಮ್ಮ ಗೃಹಿಣಿಯರಿಗೇ ಮೊದಲು ಓದುಬರಹಗಳನ್ನು ಕಲಿಸುವ ಪ್ರಯತ್ನಗಳನ್ನು ಮಾಡಿ ಅವರೂ ಈ ಕಾರ್ಯದಲ್ಲಿ ನೆರವಾಗುವಂತೆ ಮಾಡಿಕೊಳ್ಳುವುದು ಒಳ್ಳೆಯದು. ಪ್ರೈಮರಿ ಪಾಠಶಾಲೆಗಳಲ್ಲಿ ಗಂಡನಿಗೆ ಸಹಾಯವಾಗಿ ಹೆಂಡತಿಯೂ ಪಾಠಹೇಳುವುದಾದರೆ, ಹಳ್ಳಿಯ ಹೆಂಗಸರಲ್ಲಿ ಕೆಲವರಿಗಾದರೂ ಓದುಬರಹಗಳನ್ನು ಕಲಿಸುವುದಾದರೆ ನಾಲ್ಕೈದು ರೂಪಾಯಿಗಳ ಅಲೋಯನ್ಸುಗಳನ್ನು ಕೊಡುವುದೂ ಬಹಳ ಫಲಕಾರಿಯಾಗಿರುತ್ತದೆ. ಜಪಾನ್ ದೇಶದ ಗ್ರಾಮಾಂತರ ಪಾಠಶಾಲೆಗಳಲ್ಲಿ ಹೀಗೆ ದಂಪತಿಗಳು ಕೆಲಸಮಾಡುವುದು ಒಂದು ವಿಶಿಷ್ಟ ಲಕ್ಷಣವಾಗಿದೆ. ಆದುದರಿಂದ ನಮ್ಮ ದೇಶದಲ್ಲಿಯೂ ಇದನ್ನು ಆಚರಣೆಗೆ ತರಬಹುದು.

ಪಂಜಾಬು ಪ್ರಾಂತದಲ್ಲಿ ಸಹಕಾರ ಸಂಘಗಳು ನಿರಕ್ಷರತಾನಿವಾರಣೆಗೆ ತಕ್ಕ ಕಾರ್ಯಕ್ರಮಗಳನ್ನು ಕೈಕೊಂಡು ಜಯವನ್ನು ಪಡೆದಿವೆ. ನಮ್ಮ ಪ್ರಾಂತಗಳಲ್ಲೂ ಸಾವಿರಾರು ಸಹಕಾರ ಸಂಘಗಳಿವೆ. ಸಾಮಾನ್ಯವಾಗಿ ಪ್ರತಿಯೊಂದು ತಾಲ್ಲೂಕಿನಲ್ಲೂ ನಲವತ್ತು ನಲವತ್ತೈದು ಸಂಘಗಳಾದರೂ ಇರುತ್ತವೆ. ಸ್ಥಳದಲ್ಲಿರುವ ಉಪಾಧ್ಯಾಯರಿಗೆ ಪ್ರೋತ್ಸಾಹ ಕೊಟ್ಟು, ಸದಸ್ಯರೆಲ್ಲರೂ ಓದುಬರಹಗಳನ್ನು ಕಲಿತುಕೊಳ್ಳಬಹುದು. ವರ್ಷಕ್ಕೆ ಸಂಘದಿಂದ ಹತ್ತು ರೂಪಾಯಿಗಳು, ಸದಸ್ಯರಿಂದ ಹತ್ತು ರೂಪಾಯಿಗಳು ಒದಗಿದರೂ ಸಾಕು; ಇಪ್ಪತ್ತು ಜನರನ್ನು ಒಂದು ವರ್ಷದಲ್ಲಿ ತಯಾರುಮಾಡಲು ಪ್ರಯತ್ನಪಡಬಹುದು. ಸುಮಾರು ೫-೬ ವರ್ಷಗಳಲ್ಲಿ ಸದಸ್ಯರಲ್ಲಿ ನೂರಕ್ಕೆ ಕಡಮೆಯಿಲ್ಲದಂತೆ ಅಕ್ಷರಸ್ಥರಾಗುತ್ತಾರೆ.

ಆದರೆ ಒಂದು ಮುಖ್ಯವಾದ ಮಾತನ್ನು ಇಲ್ಲಿ ಹೇಳಬೇಕಾಗಿದೆ. ವಯಸ್ಕರ ವಿದ್ಯಾಭ್ಯಾಸವನ್ನು ಮುಂದುವರಿಸುವುದಕ್ಕೆ ಸರಿಯಾದ ವ್ಯವಸ್ಥೆ ಬೇಕು. ಇದು ಕೇವಲ ಖಾಸಗಿ ಸಂಸ್ಥೆಗಳಿಂದಲಾಗಲಿ, ಬಿಟ್ಟಿ ಆಳುಗಳಿಂದಲಾಗಲಿ ತೃಪ್ತಿಕರವಾಗಿ ನಡೆಯತಕ್ಕದ್ದಲ್ಲ. ಬೊಂಬಾಯಿ ಪಟ್ಟಣದಲ್ಲಿರುವಂತೆ ಕಾರ್ಯೋತ್ಸಾಹವುಳ್ಳ ದಕ್ಷವಾದ ಒಂದು ಮಂಡಲಿ ಅಗತ್ಯವಾಗಿ ಬೇಕು. ತನ್ನ ಕರ್ತವ್ಯಗಳಲ್ಲಿ ವಯಸ್ಕರ ವಿದ್ಯಾಭ್ಯಾಸವೂ ಮುಖ್ಯವಾದುದೆಂದು ಬೊಂಬಾಯಿ ಸರ್ಕಾರ ಭಾವಿಸಿರುವಂತೆ ಇತರ ಸರ್ಕಾರಗಳೂ ಭಾವಿಸಿ ಸಹಾಯಹಸ್ತವನ್ನು ಉದಾರವಾಗಿ ನೀಡಬೇಕು. ಹಣವನ್ನು ಒದಗಿಸಬೇಕು. ನಿರುದ್ಯೋಗಿಗಳಾದ ವಿದ್ಯಾವಂತರು ಸಹಸ್ರ ಸಹಸ್ರವಾಗಿ ಹೊಟ್ಟೆಗಿಲ್ಲದೆ ನರಳುತ್ತಿರುವಾಗ ಪಾರಮಾರ್ಥದ ಬಾಯುಪಚಾರ ಹೇಳದೆ ಐಹಿಕದ ನಾಲ್ಕು ರೂಪಾಯಿಗಳನ್ನು ಕೊಡಬೇಕು. ವಯಸ್ಕರ ವಿದ್ಯಾಭ್ಯಾಸದ ಸಮಸ್ಯೆ ಬಹಳ ತೊಡಕುಳ್ಳದ್ದು, ಬಹಳ ಕಷ್ಟತರವಾದ್ದು; ಎರಡು ದಿನದ ಉತ್ಸಾಹದಿಂದಲೇ ನಡೆಯತಕ್ಕದ್ದಲ್ಲ. ಪರಿಷತ್ತು ತನ್ನ ಸಂಘಗಳ ಮೂಲಕ ಮೊದಲನೆಯ ಓದುಬರಹ ಪರೀಕ್ಷೆಯ ಕಾರ್ಯಕ್ರಮವನ್ನು ಸುಸಂಘಟಿತವಾಗಿ ನಡೆಯಿಸುವುದಕ್ಕೂ ಈ ಪ್ರತಿಫಲದ ಅಭಾವವೇ ಕಾರಣವಾಗಿದೆಯೆಂದು ಹೇಳಬೇಕಾಗಿಲ್ಲ. ಮಹಾಜನರು ಉದಾರಿಗಳಾಗಿ ಸ್ಥಳೀಯ ಪ್ರಚಾರಕರಿಗೆ ಬೆಂಬಲವಾಗಿ ನಿಂತ ಹೊರತು ಈ ಕಾರ್ಯ ತೃಪ್ತಿಕರವಾಗುವುದೆಂತು?

## ಚರ್ಚೆಗೆ ದಾಸರ ತೀರ್ಮಾನ

ಈ ಸಭೆ ವೈದ್ಯವೃತ್ತಿಯನ್ನು ಬಹಳ ಅಸಹ್ಯದಿಂದ ಕಾಣುತ್ತದೆ ಎಂದು ಮೊನ್ನೆ ಒಂದು ಚರ್ಚೆ ನಡೆಯಿತು. ಉಪಾಧ್ಯಾಯರೂ, ವಿದ್ಯಾರ್ಥಿಗಳೂ ಚರ್ಚೆಯಲ್ಲಿ ಭಾಗವಹಿಸಿದರು. ಉಪಾಧ್ಯಾಯರೂ ವೈದ್ಯರೂ ಕಾರ್ಯಾಂತದಲ್ಲಿ ಅಪ್ರಯೋಜಕರೆನಿಸಿಕೊಂಡು ಒಟ್ಟಿಗೆ ಸಂಕಟದಲ್ಲಿ ಜೊತೆಗಾರರಾದರೂ, ಇಲ್ಲಿ ಉಪಾಧ್ಯಾಯರು ವೈದ್ಯರ ಮೇಲೆ ಕತ್ತಿಕಟ್ಟಿದ್ದು ತುಂಬ ಆಶ್ಚರ್ಯ. ವೈದ್ಯರು ಪ್ರತಿಭಟಿಸುವುದು ಸಹಜ.

ವಾದಕ್ಕೋಸ್ಕರ ಚರ್ಚೆಮಾಡದೆ ಯಾವ ವೃತ್ತಿಯನ್ನು ಅಸಹ್ಯವೆಂದು ಕಾಣಬೇಕೆಂದು ಸ್ವಲ್ಪ ಯೋಚಿಸೋಣ. ಎಲ್ಲಕ್ಕಿಂತಲೂ ಬೀದಿಗುಡಿಸುವ ಜಲಗಾರನ ಕೆಲಸ ಅಸಹ್ಯಕರವೆಂದು ಹೇಳಬಹುದು. ಆದರೆ ಅವನಿಂದಲೇ ಊರು, ಕೇರಿ ಶುಚಿಯಾಗಿರುವುದು. ಜಲಗಾರರು ಒಂದು ದಿನ ಕೆಲಸಕ್ಕೆ ಬರದೆ ನಿಂತರೆ ಅವರ ಕೆಲಸದ ಬೆಲೆ ಕಾಣುವುದು. ಅಷ್ಟೇ ಅಲ್ಲ. ಈ ಕೆಲಸವನ್ನು ಸ್ವಯಂಸೇವಕರು ನಡಸಿದರೆ ಅವರಿಗೆ ಲೋಕವೇ ಮನ್ನಣೆಮಾಡುವುದು. ಆಫ್ರಿಕಾದ ಜೈಲಿನಲ್ಲಿ ಮಹಾತ್ಮಾ ಗಾಂಧಿಯವರು ಇದ್ದಾಗ ಅವರ ನಿತ್ಯಕರ್ತವ್ಯದ ಒಂದು ಭಾಗವಾಗಿತ್ತು ಈ ಕೆಲಸ. ಅಂದ ಮೇಲೆ ಜಲಗಾರನನ್ನು 'ದೂರಸರಿ' ಎಂದು ಹೇಳಲು ಯಾರಿಗೆ ಮನಸ್ಸು ಬಂದೀತು! ಅಲ್ಲದೆ ಮನೆಯನ್ನೂ ಮಕ್ಕಳನ್ನೂ ಶುಚಿಯಾಗಿಟ್ಟಿರುವವಳು ತಾಯಿ. ಆದುದರಿಂದ ಜಲಗಾರನ ಕೆಲಸವೂ ಕೂಡ ಮನ್ನಣೆ ಪಡೆಯಬೇಕಾದರೆ, ಆ ಕೆಲಸ ಮಾಡುವವರು ಅದನ್ನು ಸೇವೆಯೆಂದು ಭಾವಿಸಿದಾಗ. ಲೋಕದ ಎಲ್ಲ ಕೆಲಸಗಳೂ ಹೀಗೆಯೇ.

ಉಪಾಧ್ಯಾಯವೃತ್ತಿಯನ್ನು ಗೌರವದಿಂದ ನೋಡುವವರು ಯಾರು? ವಿದ್ಯಾರ್ಥಿಗಳೋ? ಅವರನ್ನು ಕೇಳಿನೋಡಿ. ಜನರೇನೋ ಉಪಾಧ್ಯಾಯ ವೃತ್ತಿಗಿಂತ ಘನವಾದ ವೃತ್ತಿ ಈ ಲೋಕದಲ್ಲಿ ಇನ್ನಿಲ್ಲವೆಂದು ಹೇಳುವರು. ಯಾವಾಗ? ಶಿಕ್ಷಣ ಉತ್ಸವಗಳ ಸಂಬಂಧದಲ್ಲಿ ಉಪಾಧ್ಯಾಯರ ಸಭೆಯಲ್ಲಿ ಅಧ್ಯಕ್ಷತೆಯನ್ನು ವಹಿಸಿದಾಗ! ಬಾಯಲ್ಲಿ ಹೊಗಳಿಕೆ ಹೆಚ್ಚಿದಷ್ಟೂ ಮನಸ್ಸಿನಲ್ಲಿ ಅದಕ್ಕೆ ವಿರುದ್ಧಭಾವನೆಯೆಂದು ಜನರ ನಡವಳಿಕೆಯ ಒಂದು ಸಾಧಾರಣ ನಿಯಮ. ಆದ್ದರಿಂದ ಉಪಾಧ್ಯಾಯರು ವೈದ್ಯವೃತ್ತಿಯನ್ನು ಹೀಯಾಳಿಸುವುದರ ಗುಟ್ಟು ಇಷ್ಟೇ; ಅವರಿಗಿರುವ ಲಾಭ ತಮಗಿಲ್ಲವೆಂದು.

ಆದರೆ ಒಂದು ವಿಷಯ. ಆಗಲೆ ಹೇಳಿದಂತೆ ವೃತ್ತಿ ಸೇವೆಯೆನಿಸಿದರೆ ಅದಕ್ಕೆ ಗೌರವ. ಇದು ಈ ಲೋಕದಲ್ಲಿ ಅಸಾಧ್ಯ. ಆದ್ದರಿಂದ ಜನ ಇದನ್ನು ಅಳೆಯುವುದು, ಸಂಬಳದಿಂದ, ದುಡ್ಡಿನಿಂದ. ವೈದ್ಯರಲ್ಲಿ, ದುಡ್ಡಿಲ್ಲದೆ ಮುರುಕುಮನೆಯಲ್ಲಿ ವಾಸ ಮಾಡುವ, ಆಯುರ್ವೇದ ಪಂಡಿತ ಅಪ್ರಯೋಜಕ; ಕಾರಿನಲ್ಲಿ ತಿರುಗುತ್ತ ಕಿವಿಯಲ್ಲಿ ಕೊಳವೆಯನ್ನು ಸಿಕ್ಕಿಸಿಕೊಳ್ಳುವ ಇಂಗ್ಲಿಷ್ ಡಾಕ್ಟರು ಗೌರವಸ್ಥ. ಇವನ ಸಂಬಳವೆಷ್ಟು? ಇವನ ಫೀಜು ಎಷ್ಟು? ಗೌರವ ಅಷ್ಟು!

ಉಪಾಧ್ಯಾಯರಲ್ಲಿಯೂ ಹೀಗೆಯೇ. ಈ ಮೇಷ್ಟರಿಗೆ ಏನು ಸಂಬಳ? ಮೂವತ್ತು. ತತ್‌ಕ್ಷಣ ನಮ್ಮ ಕಿವಿಯಮೇಲೆ ಬೀಳುವ ಮಾತುಗಳು ಇವು: "ಈಗಿನಕಾಲದ ಮೇಷ್ಟರುಗಳೇ ಹೀಗೆ. ಅವರನ್ನು ಕಂಡರೆ ನನಗೆ ಮೈಯೆಲ್ಲ ಉರಿಯುತ್ತದೆ." ಸಂಬಳ ಜಾಸ್ತಿ ಬಂದರೆ, ಜಾತಿಯೇ ಬೇರೆ ಆಗುತ್ತದೆ. ಆಗ ಆ ಉಪಾಧ್ಯಾಯರು ಪ್ರೊಫೆಸರು. ಹೆಸರಿಗೆ ತಕ್ಕಂತೆ ಮಾನ, ಮರ್ಯಾದೆ, ಸಂಭಾವನೆ.

ವಕೀಲರ ವೃತ್ತಿ ಈ ನೀತಿಗೆ ವಿರುದ್ಧವಲ್ಲ. ತಿಂಗಳಿಗೆ ಎಂಟುನೂರು, ಹತ್ತುನೂರು ಸಂಪಾದಿಸುತ್ತಿರುವ ವಕೀಲನಾದರೆ, ಆತ ಸಮಾಜದಲ್ಲಿ ಗಣ್ಯ; ಸಾರ್ವಜನಿಕ ಸಂಸ್ಥೆಗಳ ಅಧ್ಯಕ್ಷ; ಸರಕಾರದ ಸಮಿತಿಗಳ ಸದಸ್ಯ. ವಕೀಲವೃತ್ತಿ ಸ್ವತಂತ್ರವಾದದ್ದು ಎಂದು ತನ್ನ ವೃತ್ತಿಗೇ ಒಂದು ಹೆಸರು ತರುವನು. ಒಬ್ಬ ಲಾಯರಿಗೆ ಸರಿಯಾದ ಸಂಪಾದನೆ ಇಲ್ಲವಾದರೆ, ಆತ ಫೂಟ್ ಲಾಯರೆನಿಸಿಕೊಳ್ಳುತ್ತಾನೆ. ಆಗ–ವಕೀಲವೃತ್ತಿ ನಮ್ಮ ದೇಶದ ರೈತರ ರಕ್ತ ಹೀರುವ ವೃತ್ತಿಯೆನಿಸಿಕೊಳ್ಳುತ್ತದೆ.

ಜಲಗಾರನ ಕೆಲಸ ಬಹಳ ಅಸಹ್ಯಕರವೆಂದು ಸಾಮಾನ್ಯ ಒಪ್ಪಿಗೆ ತಾನೆ? ಒಂದು ಪ್ರಯೋಗಕ್ಕಾಗಿ ಅವನ ಸಂಬಳವನ್ನು ಹೆಚ್ಚಿಸಿ, ತಿಂಗಳಿಗೆ ನೂರು ರೂಪಾಯಿ ಮಾಡಿ. ಆಗ ಈ ಕೆಲಸಕ್ಕೆ ಬರುವ ಅರ್ಜಿಗಳೆಷ್ಟು? ನಿಯಮ ನಿಬಂಧನೆಗಳೇನು? ದಾರಿಯಲ್ಲಿ ಜಲಗಾರನಿಗೆ ದೊರೆಯುವ ನಮಸ್ಕಾರಗಳೆಷ್ಟು? ಪ್ರತಿವಂದನೆ ಮಾಡಲು ತನ್ನ ಕೆಲಸದ ಮಧ್ಯೆ ಅವನಿಗೆ ಹೇಗೆ ಸಾಧ್ಯವೆಂದು ಊಹಿಸಿ.

ಆದುದರಿಂದ ಈ ಚರ್ಚೆಯ ತೀರ್ಮಾನ ದಾಸರದು–
"ಹಣವೇ ನಿನ್ನಯ..........."

ಎಸ್. ವಿ. ಶ್ರೀ.

---

## ಪರಿಷತ್ತಿನ ಸುದ್ದಿ

ಕಾರ್ಯಸಮಿತಿಯ ಅಧಿವೇಶನ ಮುಂದಿನ ತಿಂಗಳು ೨೨ನೆಯ ತಾರೀಖು ಭಾನುವಾರ ಧಾರವಾಡದಲ್ಲಿ ಸೇರುವುದು.

### ಶ್ರೀಮನ್ಮಹಾರಾಜರವರ ಪಟ್ಟಾಭಿಷೇಕ ಮಹೋತ್ಸವ

ಸೆಪ್ಟಂಬರ್ ೮ನೆಯ ತಾರೀಖು ಭಾನುವಾರ ಬೆಳಗ್ಗೆ ೧೦ ಘಂಟೆಗೆ ಮೈಸೂರು ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಪಟ್ಟಾಭಿಷೇಕ ಮಹೋತ್ಸವವನ್ನು ಪರಿಷತ್ತಿನಲ್ಲಿ ಆಚರಿಸಲಾಗುವುದು. ಎಲ್ಲರೂ ಬರಬೇಕಾಗಿ ಬಿನ್ನಹ.

ಪರಿಷತ್ತಿನ ಸದಸ್ಯರು ತಮ್ಮ ಮಕ್ಕಳನ್ನೂ ಈ ಸಮಾರಂಭಕ್ಕೆ ದಯಮಾಡಿ ಕರೆತರಬೇಕಾಗಿ ಕೋರಿದೆ.

* * *

ಇದೇ ಸಂದರ್ಭದಲ್ಲಿ ಆ ದಿನ ಮಧ್ಯಾಹ್ನ ಪರಿಷತ್ಸದಸ್ಯರ ಭೋಜನಕೂಟವೊಂದನ್ನು ಏರ್ಪಡಿಸಿದೆ. ಈ ಕೂಟದಲ್ಲಿ ಭಾಗವಹಿಸಲಿಚ್ಛಿಸುವವರು ಅದರ ವೆಚ್ಚದ ಬಗ್ಗೆ ರೂ. ೧–೦–೦ ಕೊಡಬೇಕಾಗುವುದು.

**ಪ್ರಾಂತಸಮಿತಿಯ ಆಶ್ರಯದಲ್ಲಿ ಭಾಷಣಗಳು :**

೩೧-೮-೪೦ನೆಯ ಶನಿವಾರ ಸಂಜೆ ೬ ಗಂಟೆಗೆ ಮೈಸೂರು ನ್ಯಾಯವಿಧಾಯಕ ಸಭೆಯ ಸದಸ್ಯರಾದ ಶ್ರೀ|| ಬಿ. ಆರ್. ಪುಟ್ಟನಂಜಪ್ಪ, ಎಂ.ಎ., ಎಲ್.ಎಲ್.ಬಿ. ಅವರು **ಮೈಸೂರು ಶಾಸನ ಸಭೆಯಲ್ಲಿ ಕನ್ನಡ** ಎಂಬ ವಿಷಯವಾಗಿ ಭಾಷಣ ಮಾಡುತ್ತಾರೆ. ಶ್ರೀ|| ಎನ್. ಬಾಲಕೃಷ್ಣಯ್ಯ, ಬಿ.ಎ., ಎಲ್ಎಲ್.ಬಿ. ಅವರು ಅಧ್ಯಕ್ಷತೆ ವಹಿಸುವರು.

೨-೯-೪೦ನೆಯ ಸೋಮವಾರ ಸಂಜೆ ೬ ಗಂಟೆಗೆ ಧಾರವಾಡದ ನವಕಲ್ಯಾಣ ಮಠದ ಶ್ರೀ|| ಕುಮಾರಸ್ವಾಮಿ, ಬಿ.ಎ. ಅವರು **ವೀರಶೈವ ಸಂಸ್ಕೃತಿ** ಎಂಬ ವಿಷಯದ ಮೇಲೆ ಭಾಷಣ ಮಾಡುತ್ತಾರೆ.

**ಅಭಿನಯಾದಿ ಸ್ಪರ್ಧೆಗಳು :**

ಈ ಸ್ಪರ್ಧೆಗಳಿಗೆ ಪ್ರವೇಶಪತ್ರಗಳನ್ನು ಕಳಿಸುವ ಅವಧಿಯನ್ನು ಸೆಪ್ಟೆಂಬರ್ ೩೦ನೆಯ ತಾರೀಖಿನವರೆಗೆ ಹೆಚ್ಚಿಸಿದೆ. ಸ್ಪರ್ಧೆಗಳಿಗಾಗಿ ಗೊತ್ತುಮಾಡಿರುವ ವಿವರಗಳನ್ನು ಮುಂದಿನ ವಾರ ಪ್ರಕಟಿಸಲಾಗುವುದು.

**ಮಲ್ಲೇಶ್ವರ : ಸಾಹಿತ್ಯ ತರಗತಿಗಳು**

ಪರಿಷತ್ತು ಏರ್ಪಾಟುಮಾಡಿರುವ ಸಾಹಿತ್ಯ ಪರೀಕ್ಷೆಗಳ ತರಗತಿಗಳು ಈ ವರ್ಷ ಹೆಚ್ಚು ಕಡೆಗಳಲ್ಲಿ ತೆರೆಯಲ್ಪಟ್ಟಿವೆ.

ಶ್ರೀಮತಿ ಎಚ್. ವಿ. ಸೀತಮ್ಮ ರಾಮಸ್ವಾಮಿಯವರು ಮತ್ತು ಶ್ರೀಮತಿ ಎಸ್. ಗೋಪಾಲಸ್ವಾಮಿಯವರ ಉತ್ಸಾಹ, ಕಾರ್ಯಸ್ಫೂರ್ತಿಗಳ ಸಹಕಾರದಿಂದ ಬೆಂಗಳೂರು ನಗರದ ಮಲ್ಲೇಶ್ವರ ಬಡಾವಣೆಯಲ್ಲಿ ಮೊದಲನೆಯ ಮತ್ತು ಎರಡನೆಯ ತರಗತಿಗಳ ಸ್ತ್ರೀ ಶಾಖೆಗಳನ್ನು ತೆರೆಯಲು ಸಾಧ್ಯವಾಗಿದೆ. ಈಗಾಗಲೇ ಎರಡನೆಯ ತರಗತಿಗೆ ೨೫ ಮಂದಿ ಮಹಿಳೆಯರು ಸೇರಿದ್ದಾರೆಂದು ತಿಳಿಸಲು ಸಂತೋಷವಾಗುತ್ತದೆ.

೪೧೭ನೆಯ ಪುಟದಿಂದ

ನೂರಾರು ಎಮ್ಮೆ ಮಂದೆಗಳಲ್ಲಿ ಹುಡುಕಿದ. ಸರಿಯಾದ ಎಮ್ಮೆ ದೊರೆಯಲಿಲ್ಲ; ನಿರಾಶೆಯಿಂದ ಕೊನೆಗೆ ಆ ಕತ್ತಿನ ಘಂಟೆಯನ್ನು ಗ್ರಾಮ ದೇವತೆಯ ದೇವಾಲಯದಲ್ಲಿ ಕಟ್ಟಿದ).

ಹಳ್ಳಿಯ ಜೀವನ ಸಾಮಾನ್ಯವಾಗಿ ಬಡತನದ ಜೀವನ. ರೈತನ ಹೆಂಡತಿಗೆ ಇರುವುದು ಒಂದೇ ಸೀರೆ. ಪ್ರತಿ ದಿನದ ಉಪಯೋಗಕ್ಕೂ ಇದೇ. ಇದನ್ನು ಒಗೆದು ಒಣಗಿ ಹಾಕಿದಾಗ ಸೀರೆಯ ಕೊನೆಯಿಂದ ನೀರು ತೊಟ್ಟಿಡುತ್ತಿತ್ತು. ಇವನ್ನು ನೋಡಿದ ಕವಿ,

ದುರ್ಗತ ಕುಟುಂಬಾಕೃಷ್ಟಃ ಕಥಂ ಸುಮುಯಾಧೌತೇನ ಸೋಢವ್ಯಾ ।
ದಶಾಪಸರತ್ಸಲಿಲೇನ ಪಶ್ಯತ ರುದಿತಮಿವ ಪಟಕೇನ ॥

(ಮೂರು ಹೊತ್ತೂ ರೈತನ ಹೆಂಡತಿಯ ಕೈಯಲ್ಲಿ ಅತ್ತಿತ್ತ ಎಳೆಯಲ್ಪಡುವುದನ್ನು ನಾನು ಹೇಗೆ ಸಹಿಸಲಿ? ಎಂದು ತನ್ನ ಜೀವನದ ಅವಸ್ಥೆಯನ್ನು ನೆನೆಸಿಕೊಂಡು ಈ ಬಟ್ಟೆ ಕಣ್ಣೀರು ಇಡುತ್ತಿದೆ) ಅನ್ನುತ್ತಾನೆ.

ರೈತನು ಹಗಲೆಲ್ಲಾ ಗಟ್ಟಿಯಾದ ಭೂಮಿಯಲ್ಲಿ ನೇಗಿಲನ್ನು ಎಳೆ ದೆಳೆದೂ ಆಯಾಸಪಟ್ಟಿದ್ದಾನೆ. ಆಯಾಸದಿಂದ ಮನೆಗೆ ಬಂದು ನಿದ್ದೆ ಹೋಗುತ್ತಿದ್ದಾನೆ. ಈ ಸಮಯದಲ್ಲಿ ಮಳೆಬಂದು ಮಣ್ಣಿನ ಬಿರುಸು ಕಡಮೆಯಾಗುತ್ತದೆ. ಮಳೆ ಬಂದು ತನ್ನ ಇನಿಯನ ಶ್ರಮ ಕಡಮೆ ಯಾದುದು ಗೌಡಗಿತ್ತಿಗೆ ಸಂತೋಷ. ಮಳೆ ಬಂದಮೇಲೆ ಮುಂದಿನ ಕೆಲಸಕ್ಕೆ ತನ್ನ ಗಂಡ ಕೂಡಲೇ ಹೊರಟುಹೋಗುತ್ತಾನಲ್ಲಾ, ಎಂದು ಆಕೆ ವರ್ಷಾಕಾಲವನ್ನು ಶಪಿಸುತ್ತಾಳೆ.

ಕರ್ದಮ ಮಗ್ನ ಹಲಮುಖ ಕರ್ಷಣ ಶಿಥಿಲೇ ಪತ್ಯೌ ಪ್ರಸುಪ್ತೇ ।
ಅಪ್ರಾಪ್ತ ಮೋಹನ ಸುಖಾ ಘನಸಮಯಂ ಪಾಮರೀ ಶಪತಿ ॥

(ಗಟ್ಟಿ ನೆಲದಲ್ಲಿ ನೇಗಿಲಿನಿಂದ ಉತ್ತು ಆಯಾಸಗೊಂಡ ಗಂಡ ವಿಶ್ರಾಂತಿಗಾಗಿ ಮಲಗಿದ್ದಾನೆ. ಮೋಹನಸುಖವನ್ನನುಭವಿಸದ ಅವನ ಹೆಂಡತಿ ವರ್ಷಾಕಾಲವನ್ನು ಶಪಿಸುತ್ತಾಳೆ).

ಈ ಶತಕಗಳಲ್ಲಿ ಸಾಮಾನ್ಯವಾಗಿ ಪರ್ವತಗಳ ತಪ್ಪಲುಗಳಲ್ಲಿಯೂ, ಕಾಡುಗಳಲ್ಲಿಯೂ ವಾಸಮಾಡುವ ಬೇಟೆಗಾರರ ಜೀವನವನ್ನು ಚಿತ್ರಿ ಸುವ ಪದ್ಯಗಳಿವೆ. ಅವರ ಜೀವನ ಕಷ್ಟಮಯವಾದ ಜೀವನ. ಆದರೆ ಅದು ಪರಾಕ್ರಮದಿಂದ ಕೂಡಿದುದು. ಅವರಿಗೂ ಮಾನವ ಹೃದಯ ಸಹಜ ವಾದ ಪ್ರೇಮ, ಸುಖ, ಸಂತೋಷ, ಭಯ ಮೊದಲಾದ ರಾಗ ಭಾವ ಗಳಿವೆ. ನಾಗರಿಕರಂತೆಯೇ ಅವರೂ ಸುಖ ಸಂತೋಷಗಳನ್ನು ಅನು ಭವಿಸಬಲ್ಲವರು. ಆದುದರಿಂದ ಅವರ ಜೀವನ ಚಿತ್ರಗಳು ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ.

ಬೇಟೆಗಾರನೊಬ್ಬನಿಗೆ ಆಗತಾನೇ ಮದುವೆಯಾಗಿದೆ. ಹರೆಯದ ಹೆಣ್ಣು ಮನೆಗೆ ಬಂದಿದ್ದಾಳೆ. ಮೂರು ಹೊತ್ತೂ ಅವಳ ಜೊತೆ ಯಲ್ಲಿಯೇ ಇರಬೇಕೆಂಬುದು ಅವನ ಆಶೆ. ಅದೇ ಅವನಿಗೆ ಈಗ ಕಂಡುಬಂದ ಸ್ವರ್ಗ ಸುಖ. ಇದುವರೆಗೂ ಕಾಡಿನೊಳಕ್ಕೆ ಹೋಗಿ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಬಲವಾದ ಪ್ರಾಣಿಗಳನ್ನು ಕೊಂದು ತರುತ್ತಿದ್ದವನು ಈಗ ತನ್ನ ಹೊಸ ಹೆಂಡತಿಯ ಮನಸ್ಸನ್ನು ಒಪ್ಪಿಸುವುದಕ್ಕಾಗಿ ನವಿಲು ಗರಿಗಳನ್ನು ತರುವುದರಲ್ಲಿ ಆಸಕ್ತನಾಗಿ ದ್ದಾನೆ. ಇದನ್ನು ನೋಡಿ ಅವನ ಮುದಿ ತಾಯಿಗೆ ಅಸಮಾಧಾನ. ಹೊಸದಾಗಿ ಮನೆಗೆ ಬಂದ ಚೆಲುವೆ ತನ್ನ ಮಗನ ಮನಸ್ಸನ್ನು ಸೆಳೆದು ಈ ರೀತಿ ಮಾಡಿರುವಳೆಂಬುದು ತಾಯಿಗೆ ಗೊತ್ತು. ಅನ್ನಲಾರಳು, ಅನುಭವಿಸಲಾರಳು. ತನ್ನ ಮನೆಗೆ ಬಂದ ಒಬ್ಬ ವ್ಯಾಪಾರಿಯೊಂದಿಗೆ ಹೀಗೆ ಮಾತನಾಡಿ, ಮನಸ್ಸಿನ ಕೋಪವನ್ನು ತೀರಿಸಿಕೊಳ್ಳುತ್ತಾಳೆ.

ನಿಟ್ಟುಸಿರುಬಿಡುತ್ತಾ,

ಗಜವಧೂ ವೈಧವ್ಯ ಕರಃ ಪುತ್ರೋ ಮೇ ಏಕಕಾಂಡ ವಿನಿಪಾತೀ ।
ತಥಾ ಸ್ನುಷಯಾ ಪ್ರಲೋಕಿತೋ ಯಥಾ ಕಾಂಡಸಮೂಹಂ ವಹತಿ ॥

(ಎಲೈ ವ್ಯಾಪಾರಿಯೆ, ಇನ್ನು ಮೇಲೆ ನಮ್ಮ ಮನೆಯಲ್ಲಿ ಆನೆಯ ಕೊಂಬುಗಳನ್ನು ಕೊಳ್ಳುವ ಆಶೆಯನ್ನು ಬಿಟ್ಟುಬಿಡು. ಸುಂದರಿಯಾದ ನನ್ನ ಸೊಸೆ ನನ್ನ ಮಗನನ್ನು ಈಚೆಗೆ ನವಿಲುಗರಿಯ ಬೇಟೆಯಲ್ಲಿ ಆಸಕ್ತನನ್ನಾಗಿ ಮಾಡಿಬಿಟ್ಟಿದ್ದಾಳೆ.)

ಮೋಸವರಿಯದ, ಕಷ್ಟದಿಂದ ಜೀವನ ಮಾಡುತ್ತಿರುವ ಈ ಬೇಟೆಗಾರರ ಜೀವನ ಚಿತ್ರಗಳು ಹೃದಯಂಗಮವಾಗಿವೆ. ಒಬ್ಬ ವ್ಯಾಧ ಸ್ತ್ರೀ ತನ್ನ ತವರೂರಿಗೆ ಹೋಗಿ ಬಹು ದಿನಗಳಾಗಿವೆ. ಗಂಡನ ಮನೆಗೆ ಹಿಂದಿರುಗಿ ಬರುತ್ತಿರುವಾಗ ಆಕೆಯ ಮನಸ್ಸಿನಲ್ಲಿ ಹುಟ್ಟಿದ ಭಾವಗಳನ್ನು ನೋಡಿ: ದಾರಿಯಲ್ಲಿ ಬರುತ್ತಾ ತನ್ನ ಮನೆಯ ಹತ್ತಿರವಿರುವ ಕರಂಜ ವೃಕ್ಷಗಳ ಮೇಲೆ ಮತ್ತಗಜಗಳ ಮದೋದಕ ಸುರಿದಿರುವುದನ್ನು ನೋಡುತ್ತಾಳೆ. ತನ್ನ ಗಂಡ ಪರಾಕ್ರಮಿಯಾದ ಬೇಟೆಗಾರ. ಎಂತಹ ಆನೆಗೂ ತನ್ನ ಮನೆಯ ಮುಂದೆ ಬರಲು ಧೈರ್ಯ ವಿಲ್ಲವೆಂಬುದು ಆಕೆಯ ನಂಬುಗೆ. ಆದರೆ ಕರಂಜ ವೃಕ್ಷದ ಬಳಿಯ ಮದೋದಕವನ್ನು ನೋಡಿ ತನ್ನ ಗಂಡನಿಗೇನೋ ಕೆಡುಕಾಗಿರಬೇಕೆಂದು ಊಹಿಸುತ್ತಾಳೆ.

ಗಜ ಗಂಡಸ್ಥಲ ನಿರ್ಘರ್ಷಣ ಮದಮಲಿನೀಕೃತ ಕರಂಜ ಶಾಖಾಭಿಃ ।
ಆಗಚ್ಛಂತ್ಯಾಕುಲ ಗೃಹಾತ್ಜ್ಞಾತಂ ವ್ಯಾಧಸ್ತ್ರಿಯಾ ಪತಿಮರಣಃ ॥

(ಆನೆಗಳ ಗಂಡಸ್ಥಲದಿಂದ ಸೋರಿದ ಮದೋದಕದಿಂದ ಮಲಿನ ವಾದ ಕರಂಜ ವೃಕ್ಷಗಳ ಕೊಂಬೆಗಳನ್ನು ನೋಡಿ, ತವರೂರಿಂದ ಹಿಂದಿರುಗಿ ಬರುತ್ತಿರುವ ವ್ಯಾಧ ಸ್ತ್ರೀ ತನ್ನ ಪತಿ ಮರಣ ಹೊಂದಿರ ಬೇಕೆಂದು ಊಹಿಸಿದಳು).

ಒಬ್ಬ ವ್ಯಾಪಾರಿ, ಜಿಂಕೆಯ ಚರ್ಮವನ್ನು ಕೇಳಲು ಒಬ್ಬ ಬೇಟೆಗಾರನ ಮನೆಗೆ ಬಂದನು. ಮನೆಯಲ್ಲಿ ಆತನ ತಾಯಿ ಇದ್ದಳು ಆಕೆಗೆ ತನ್ನ ಮಗ ಪರಾಕ್ರಮಶಾಲಿಯೆಂದು ತಿಳಿಸಬೇಕೆಂಬ ಆಶೆ. ಮಗನ ಶಕ್ತಿ ಆಕೆಗೊಂದು ಪ್ರತಿಷ್ಠೆಯನ್ನು ತಂದುಕೊಟ್ಟಿದೆ. ತನ್ನ ಮಗ ಒಳ್ಳೆಯ ಬೇಟೆಗಾರನೆಂಬ ಹೆಮ್ಮೆಯೂ ಇದೆ. ಆಕೆ ವ್ಯಾಪಾರಿ ಯೊಡನೆ ಆಡುವ ಮಾತನ್ನು ನೋಡಿ:

ಅನ್ಯೇಷು ಪಥಿಕ ಪೃಚ್ಛ ವ್ಯಾಧಕ ಪುತ್ರೇಷು ಪೃಷತ ಚರ್ಮಾಣಿ ।
ಅಸ್ಮಾಕಂ ವ್ಯಾಧಯುವಾ ಹರಿಣೇಷು ಧನುರ್ನಮಾನಯತಿ ॥

(ಎಲೈ ಪಥಿಕನೆ! ನಿನಗೆ ಜಿಂಕೆಯ ಚರ್ಮ ದೊರೆಯಬೇಕಾದರೆ ಇತರ ಬೇಟೆಗಾರರಲ್ಲಿ ಕೇಳು. ನನ್ನ ಮಗನು ಜಿಂಕೆಗಳನ್ನು ಕೊಲ್ಲಲು ಬಾಣಪ್ರಯೋಗ ಮಾಡುವುದಿಲ್ಲ).

ಈ ಅರಣ್ಯ ಜೀವನದಲ್ಲಿ ಅನೇಕ ಹೃದಯ ಭೇದಕವಾದ ದೃಶ್ಯಗಳೂ ಅಲ್ಲಲ್ಲಿ ಕಂಡುಬರುವುವು. ಒಬ್ಬ ವ್ಯಾಧನು ಬಿಲ್ಲೇರಿಸಿ ಬೇಟೆಗಾಗಿ ಹೊರಟಿದ್ದಾನೆ. ಎರಡು ಜಿಂಕೆಗಳು ಒಟ್ಟಿಗೆ ಅವನ ದೃಷ್ಟಿಗೆ ಬಿದ್ದಿವೆ. ಇವನು ಹೆದೆಯೇರಿಸಿ ಬಾಣ ಬಿಡಲು ಸಿದ್ಧವಾದಾಗ, ಆ ಮೃಗಗಳು ಒಂದೊಂದೂ ಆ ಬಾಣಕ್ಕೆ ಗುರಿಯಾಗಿ ಇನ್ನೊಂದರ ಜೀವವನ್ನುಳಿಸಲು ಪ್ರಯತ್ನಿಸುತ್ತದೆ. ಈ ದೃಶ್ಯ ಸದಾ ಮೃಗ ವಧೆ ಯಲ್ಲಿಯೇ ನಿರತನಾದ ಬೇಡನ ಮನಸ್ಸನ್ನು ಕೂಡಾ ಕರಗಿಸಿದೆ. ಅವನು ಈ ಮೃಗಗಳ ಅನ್ಯೋನ್ಯ ಪ್ರೇಮವನ್ನು ಕಣ್ಣಾರ ಕಂಡು ತೊಟ್ಟ ಬಾಣ ವನ್ನು ಕೆಳಗಿಳುಹಿದನು. ಆ ಬಾಣವನ್ನು ಅವನು ಕೆಳಗಿಳಿಸಿದಾಗ ಬಿಲ್ಲು ಅವನ ಕಣ್ಣೀರಿಂದ ನೆನೆದು ತೊಟ್ಟಿಕ್ಕುತ್ತಿತ್ತು.

ಹೀಗೆಯೇ ಇನ್ನೊಂದು ಚಿತ್ರದಲ್ಲಿ ತಾಯಿಮಕ್ಕಳ ಪ್ರೇಮವನ್ನು ಕಾಣುತ್ತೇವೆ. ಇಲ್ಲಿಯ ಚಿತ್ರ ಕಡು ಬಡತನದ ಚಿತ್ರ. ಅವರ ವಾಸ ಮುರುಕು ಮನೆಯಲ್ಲಿ. ಅವರಿಗೆ ಮೈಮುಚ್ಚುವಷ್ಟು ಕೂಡಾ ಬಟ್ಟೆ ಯಿಲ್ಲ. ಕಾಲ ಮಳೆಗಾಲ. ಚಾವಣಿಯಿಂದ ನೀರು ಧಾರಾವಾಹಿನಿ ಯಾಗಿ ಬೀಳುತ್ತಿದೆ. ಹುಟ್ಟುಬಡತನದಲ್ಲಿ ಹುಟ್ಟಿದ ಆ ಮನೆಯ ಮಗುವಿನ ಮೇಲೆ ನೀರು ಬಿದ್ದು ತೊಯ್ದುಹೋಗಿದೆ. ಇದನ್ನು ನಿವಾರಿಸಲು ತಾಯಿಗೆ ಯಾವ ಮಾರ್ಗವೂ ತೋಚಲಿಲ್ಲ. ಕೊನೆಗೆ ಮಗುವಿನ ತಲೆಯ ಮೇಲೆ ತನ್ನ ಬೆನ್ನೊಡ್ಡಿ, ಮಳೆ ನೀರು ಮಗುವಿನ ಮೇಲೆ ಬೀಳದಂತೆ ಮಾಡಿದಳು. ಆ ಎಲ್ಲ ಹೊತ್ತೂ ತನ್ನ ಸ್ಥಿತಿ ಹೀಗೆದೆಯೆಂದು ನೊಂದು ಆಕೆ ನಿರರ್ಗಳವಾಗಿ ಕಣ್ಣೀರನ್ನು ಹಾಕು ತ್ತಿದ್ದಳು. ಮಳೆಯ ನೀರ ಬದಲು ತನ್ನ ಕಣ್ಣೀರು ಮಗುವನ್ನು ಪುನಃ ತೊಯಿಸಿಬಿಟ್ಟಿತೆಂಬುದು ದುಃಖದ ಭರದಲ್ಲಿ ಆಕೆಗೆ ಗೊತ್ತಾಗಲೇ ಇಲ್ಲ.

ಇಲ್ಲಿಯ ಪ್ರತಿಯೊಂದು ಪದ್ಯವೂ ದಿನಂಪ್ರತಿ ನಾವು ನೋಡುವ ಚಿತ್ರಗಳನ್ನು ವರ್ಣಿಸುತ್ತದೆ. ನಮ್ಮ ಕಷ್ಟಸುಖಗಳನ್ನು ನೆನಪಿಗೆ ತಂದು ಕೊಡುತ್ತದೆ. ಒಂದೊಂದು ಕವಿತೆಯೂ ವೈವಿಧ್ಯದಿಂದ ಕೂಡಿದ

ಗಾಢವಾದ, ಭಾವನಾಲೋಕಕ್ಕೆ ಕರೆದೊಯ್ಯುತ್ತದೆ. ಪ್ರತಿಯೊಂದು ಚಿತ್ರವೂ ಸ್ವಾಭಾವಿಕವಾಗಿ ಮನೋಹರವಾಗಿದೆ.

ವರ್ಷಾಕಾಲ ಬಂತೆಂದರೆ ನವಿಲುಗಳಿಗೆ ಆನಂದ. ನವಿಲೊಂದು ಹಸುರು ಗರಿಕೆಯ ತುದಿಯಲ್ಲಿ ನಿಂತಿರುವ ನೀರು ಹನಿಯನ್ನು ಕುಡಿಯುತ್ತಿದೆ. ಅದನ್ನು ಕವಿ ವರ್ಣಿಸಿರುವ ಬಗೆ ನೋಡಿ:

ಮರಕತಸೂಚೀವಿದ್ಧಮಿವ ಮೌಕ್ತಿಕಂ ಪಿಬತ್ಯಾಯತಗ್ರೀವಃ ।
ಮಯೂರಃ ಪ್ರಾವೃಟ್ಕಾಲೇ ತೃಣಾಗ್ರ ಲಗ್ನ ಮುದಕ ಬಿಂದುಂ ॥

(ಮಳೆಗಾಲದಲ್ಲಿ ಗರಿಕೆಯ ತುದಿಯಲ್ಲಿ ನಿಂತಿರುವ ನೀರುಹನಿಯನ್ನು ಕುಡಿಯಲು ನವಿಲು ತನ್ನ ಕತ್ತನ್ನು ಮುಂದಕ್ಕೆ ಚಾಚಿದೆ. ಇದು ಮರಕತದಿಂದ ಮಾಡಿದ ಸೂಜಿಗೆ ಮುತ್ತು ಪೋಣಿಸುತ್ತಿರುವ ಹಾಗೆ ಇದೆ).

ಕರಿದುಂಬಿಯೊಂದು ಕೋತಿಯನ್ನು ಒಂದು ಬಾರಿ ಚೆನ್ನಾಗಿ ಕಚ್ಚಿದೆ. ಅದರಿಂದ ಗಾಸಿಗೊಂಡ ಕೋತಿ ಕಪ್ಪಗಿರುವ ಜಂಬು ನೇರಿಳೆ ಹಣ್ಣನ್ನು ಕಂಡಾಗ ಕೂಡಾ ಭಯಗೊಂಡು ಓಡಿಹೋಗುತ್ತಿದೆ.

ಅವಸರತಿ ಧುನೋತಿ ಶಾಖಾಂ ಖೋಖಾಮುಖರಃ ಪುನಸ್ಸಮುಲ್ಲಸತಿ ।
ಜಂಬೂಫಲಂ ನಗೃಹ್ಣಾತಿ ಭ್ರಮರ ಇತಿ ಕಪಿಃ ಪ್ರಥಮದಷ್ಟಃ ॥

(ಕರಿದುಂಬಿಯಿಂದ ಕಚ್ಚಲ್ಪಟ್ಟ ಕೋತಿ ಕಪ್ಪಗೆ ಚೆನ್ನಾಗಿಬಲಿತು ಹಣ್ಣಾಗಿರುವ ನೇರಳೆಹಣ್ಣನ್ನು ನೋಡಿಯೂ ಹಿಂದಕ್ಕೆ ಸರಿಯುತ್ತದೆ. ಕೊಂಬೆಗಳನ್ನು ಅಲುಗಾಡಿಸುತ್ತಾ, ಅರಚುತ್ತಾ ದೂರದಲ್ಲಿಯೇ ನೋಡುತ್ತಾ ನಿಂತಿದೆ.)

ಹಳ್ಳಿಯ ರೈತರಿಗೆ ವಸಂತಕಾಲಕ್ಕಿಂತ ವರ್ಷಾಕಾಲ ಹೆಚ್ಚು ಪ್ರಿಯವಾದುದು. ಈ ಸಂಗ್ರಹದಲ್ಲಿ ವರ್ಷರ್ತುವನ್ನು ಕುರಿತ ಪದ್ಯಗಳು ಅನೇಕವಾಗಿವೆ.

ಉದ್ವಹತಿ ನವತೃಣಾಂಕುರ ರೋಮಾಂಚ ಪ್ರಸಾಧಿತಾನ್ಯಂಗಾನಿ ।
ಪ್ರಾವೃಟ್ ಲಕ್ಷ್ಮ್ಯಾಃ ಪಯೋಧರೈಃ ಪರಿಪ್ರೇರಿತೋ ವಿಂಧ್ಯಃ ॥

(ಅತ್ತ ನೋಡು, ವಿಂಧ್ಯ ಶಿಖರದ ಸೊಬಗನ್ನು. ಪರ್ವತದ ಶಿಖರವು ವರ್ಷರ್ತುಲಕ್ಷ್ಮಿಯ ಪಯೋಧರಗಳನ್ನು ಹೊತ್ತಿವೆ. ಎಲ್ಲ ಕಡೆಗಳಲ್ಲಿಯೂ ಹೊಸ ಗರಿಕೆ ಹುಲುಸಾಗಿ ಬೆಳೆದು ವರ್ಷಾ ದೇವಿ ಶೋಭಿಸುತ್ತಿದ್ದಾಳೆ).

ವರ್ಷಾಕಾಲದಲ್ಲಿ ಎಲ್ಲೆಲ್ಲಿ ನೋಡಿದರೂ ಕಾರ್ಮೋಡಗಳು, ಸೂರ್ಯ ರಶ್ಮಿಗೆ ಅಡ್ಡಲಾಗಿ ಬಂದು ಎಲ್ಲವನ್ನೂ ಶ್ಯಾಮ ವರ್ಣಮಯವನ್ನಾಗಿ ಮಾಡುತ್ತವೆ. ನವಿಲುಗಳ ಗುಂಪುಗಳು ಆನಂದದಿಂದ ಕತ್ತೆತ್ತಿಕೊಂಡು ನರ್ತನ ಮಾಡುತ್ತಿರುತ್ತವೆ. ಮರಗಿಡ ಬಳ್ಳಿಗಳು ಹುಲುಸಾಗಿ ಬೆಳೆದು ತಮ್ಮ ಹಸುರು ಮೈಯಿಂದ ಕಣ್ಣುಗಳಿಗೆ ಸೊಂಪು ಕೊಡುತ್ತವೆ. ಇಂತಹ ಕಾಲ ರೈತರಿಗೆ ಆನಂದವನ್ನು ಕೊಡುವುದರಲ್ಲಿ ಅತಿಶಯವೇನು?

---

## ಮೈಸೂರು ಜನಗಣತಿಯಲ್ಲಿ ಇಡಿಯ ಕನ್ನಡ ನಾಡಿನ ನೋಟ

ಮೈಸೂರು ಸಂಸ್ಥಾನದ ಸೆನ್ಸಸ್ ಸೂಪರಿಂಟೆಂಡೆಂಟರಾದ ಶ್ರೀಮಾನ್ ಪಿ. ಎಚ್. ಕೃಷ್ಣರಾಯರು ೨೪-೮-೪೦ನೆಯ ದಿನ ಮೈಸೂರು ಸಿವಿಲ್ ಸರ್ವಿಸ್ ಅಸೋಸಿಯೇಷನ್ನಿನ ಆಶ್ರಯದಲ್ಲಿ ನಡೆದ ಸಭೆಯಲ್ಲಿ ೧೯೪೧ರ ಮೈಸೂರು ಜನಗಣತಿಯ ಕೆಲವು ಲಕ್ಷಣಗಳನ್ನು ವಿವರಿಸುವ ಒಂದು ಪ್ರಬಂಧವನ್ನು ಓದಿದರು. ಅದರಲ್ಲಿ ಅವರು ಕನ್ನಡ ನಾಡುನುಡಿಗಳ ವಿಷಯವಾಗಿ ಕೆಲವು ಸ್ವಾರಸ್ಯವಾದ ಅಂಶಗಳನ್ನು ಹೊರಗೆಡವಿದ್ದಾರೆ. ಹಿಂದಿನ ಸೆನ್ಸಸ್ ವರದಿಗಳನ್ನು ಅಧ್ಯಯನಮಾಡಿ, ಅಂಕಿಸಂಖ್ಯೆಗಳ ಆಧಾರದಿಂದ ಕನ್ನಡ ನಾಡಿನ ಒಂದು ನಕ್ಷೆಯನ್ನು ರಚಿಸಿ ಪ್ರಬಂಧದಲ್ಲಿ ಸೇರಿಸಿದ್ದಾರೆ. ಈ ನಕ್ಷೆಯಲ್ಲಿ ವಿವಿಧ ಸರಕಾರಗಳ ಆಡಳಿತದಲ್ಲಿ ಹರಿದು ಹಂಚಿಹೋದ ಪ್ರದೇಶಗಳಲ್ಲಿ ನೂರಕ್ಕೆ ಐವತ್ತಕ್ಕಿಂತ ಹೆಚ್ಚುಮಂದಿ ಕನ್ನಡ ಮಾತನಾಡುವವರಿರುವ ಭಾಗಗಳನ್ನು ಸೇರಿಸಿದೆ.

ಹಿಂದಿನ ಸೆನ್ಸಸ್ ವರದಿಗಳನ್ನು ಅಧ್ಯಯನ ಮಾಡಿ ಶ್ರೀಮಾನ್ ಕೃಷ್ಣರಾಯರು ರಚಿಸಿರುವ ನಕ್ಷೆ, ೧೯೦೬ರಲ್ಲಿ ಇಂಡಿಯಾ ಸರಕಾರದ ನೇತೃತ್ವದಲ್ಲಿ ನಡೆದ ಭಾರತೀಯ ಭಾಷೆಗಳ ಪರಿಶೀಲನೆ (ಸರ್ವೆ)ಯಲ್ಲಿ ವಿವರಿಸಿರುವ ಕನ್ನಡ ನಾಡಿನ ನಕ್ಷೆಗೆ ಹೋಲುವ ಸಂಗತಿ ಗಮನಾರ್ಹವಾಗಿದೆ. ಆ ಸರ್ವೆಯಲ್ಲಿ ಕರ್ನಾಟಕ ನಕ್ಷೆಯನ್ನು ಕುರಿತು ಹೀಗೆ ಹೇಳಿದೆ:

"ಮೈಸೂರು ಸಂಸ್ಥಾನ ಮತ್ತು ನೆರೆಯ ಕೊಯಮತ್ತೂರು, ಶಾಲ್ಯ, ಅನಂತಪುರ ಮತ್ತು ಬಳ್ಳಾರಿ ಪ್ರದೇಶಗಳ ಭಾಗಗಳಲ್ಲಿ ಕನ್ನಡವೇ ಪ್ರಮುಖ ಭಾಷೆ. ಅಲ್ಲಿಂದ ಗಡಿಯ ರೇಖೆ ನೈಜಾಂ ರಾಜ್ಯದ ಮೂಲಕ ಹಾದು ಬಿದರೆಯನ್ನು ಒಳಕೊಂಡು, ಅಲ್ಲಿಂದ ೭೮ ರೇಖಾಂಶಗಳ ವರೆಗೆ ಪಶ್ಚಿಮಕ್ಕೆ ತಿರುಗಿ, ಬಳಿಕ ದಕ್ಷಿಣಕ್ಕೆ ಇಳಿದು, ಜತ್ತ್ ಮತ್ತು ದಾಪ್ಲಾಪುರಗಳ ಆಗ್ನೇಯ ಭಾಗದ ಪ್ರದೇಶಗಳನ್ನು ಒಳಕೊಂಡಿರುತ್ತದೆ. ಸತಾರೆ ಜಿಲ್ಲೆಯ ತಾಸ್ಗಾಂ ತಾಲ್ಲೂಕಿನ ಆಗ್ನೇಯ ಭಾಗದಲ್ಲೂ ಸತಾರೆ ಏಜೆನ್ಸಿಯ ಔಂಧ್ ಸಂಸ್ಥಾನದಲ್ಲಿ ಕೆಲ ಮಟ್ಟಿಗೂ ಕನ್ನಡ ಮುಖ್ಯ ಭಾಷೆಯಾಗಿದೆ. ಹಾಗೆಯೇ ಬೆಳಗಾಂವಿಯ ದಕ್ಷಿಣ ಪಶ್ಚಿಮ ಭಾಗಗಳು, ಕೊಲ್ಲಾಪುರ ಸಂಸ್ಥಾನದಲ್ಲಿ ಕೊಲ್ಲಾಪುರ ನಗರದ ವರೆಗೂ ಕನ್ನಡ ಮನೆಮಾಡಿಕೊಂಡಿದೆ. ಅಲ್ಲಿಂದ ಗಡಿರೇಖೆ ಪಶ್ಚಿಮ ಘಟ್ಟಗಳ ಒತ್ತಿಗೆ ನಡೆದು ಹೊನ್ನಾವರವನ್ನು ಮುಟ್ಟಿ ಕಡಲ ಕರೆಯನ್ನು ಸೇರುವುದು. ಉತ್ತರ ಕನ್ನಡ ಜಿಲ್ಲೆಯಲ್ಲೆಲ್ಲ ಕನ್ನಡವೇ ಸರಕಾರಿ ಭಾಷೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತಿ ದಕ್ಷಿಣದಲ್ಲಿರುವ ಪ್ರದೇಶವನ್ನು ಬಿಟ್ಟು ಇಡಿಯ ಜಿಲ್ಲೆ ಕನ್ನಡ. ಅಲ್ಲಿಂದ ಗಡಿರೇಖೆ ಹೊರಟು ಮೈಸೂರು ಸಂಸ್ಥಾನದ ದಕ್ಷಿಣ ಗಡಿಯಲ್ಲಿ ಒಂದಾಗುವುದು. ನೀಲಗಿರಿ ಬೆಟ್ಟಗುಡ್ಡಗಳಲ್ಲಿ ಕನ್ನಡ ನುಡಿಯ ಪ್ರಭೇದಗಳು ಬಳಕೆಯಲ್ಲಿವೆ. ಕೊನೆಯದಾಗಿ ವಲಸೆಗಾರರು ಮಧುರೆ ಮತ್ತು ಮಧ್ಯ ಪ್ರಾಂತಗಳ ವರೆಗೆ ಕನ್ನಡ ನುಡಿಯನ್ನು ಹರಡಿದ್ದಾರೆ.

ಕನ್ನಡಕ್ಕೆ ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಮರಾಠಿ ಮತು ಅದರ ಪ್ರಭೇದವಾದ ಕೊಂಕಣಿ ಭಾಷೆಯೂ, ಪೂರ್ವದಲ್ಲಿ ತೆಲುಗು ಮತ್ತು ತಮಿಳೂ, ದಕ್ಷಿಣದಲ್ಲಿ ತಮಿಳು, ಕೊಡಗು ಮತ್ತು ತುಳು ಭಾಷೆಗಳೂ ಆವರಿಸಿಕೊಂಡಿವೆ."

ಶ್ರೀಮಾನ್ ಕೃಷ್ಣರಾಯರು ೨೧ ಸರಕಾರಗಳ ಅಧೀನಕ್ಕೆ ಒಳಗಾಗಿರುವ ಕನ್ನಡ ನಾಡಿನ ವಿವಿಧ ಭಾಗಗಳಲ್ಲಿನ ಕನ್ನಡ ಜನರ ಸಂಖ್ಯಾ ವಿವರಗಳನ್ನು ಅವಲಂಬಿಸಿ ತಮ್ಮ ಪ್ರಬಂಧದಲ್ಲಿ ಹೀಗೆ ಹೇಳಿದ್ದಾರೆ:

(೧) ಇಡಿಯ ಕನ್ನಡ ನಾಡಿನ ಜನಸಂಖ್ಯೆ ೧೩೧ ಲಕ್ಷಕ್ಕಿಂತ ಹೆಚ್ಚಾಗಿದೆ. (೨) ಈ ಜನಸಂಖ್ಯೆ ೨೦ ಆಡಳಿತಗಳಿಗೆ ಅಧೀನವಾಗಿರುವ ಪ್ರದೇಶಗಳಲ್ಲಿ ಹರಿದು ಹಂಚಿಹೋಗಿದೆ. (೩) ೫೪ ಲಕ್ಷಕ್ಕಿಂತ ಹೆಚ್ಚಾಗಿ ಅಥವಾ ಕನ್ನಡ ಮಾತನಾಡಬಲ್ಲವರ ಒಟ್ಟು ಸಂಖ್ಯೆಯಲ್ಲಿ ಸುಮಾರು ಶೇಕಡ ೪೨ರ ಪ್ರಮಾಣದಲ್ಲಿ ಮೈಸೂರಿನ ಪ್ರಜಾ ಸಂಖ್ಯೆ ಇದೆ. (೪) ಆಮೇಲೆ ಹೆಚ್ಚು ಕನ್ನಡಿಗರಿರುವುದು ಕ್ರಮವಾಗಿ ಮುಂಬಯಿ ಪ್ರಾಂತದ ಜಿಲ್ಲೆಗಳಲ್ಲಿ–೩೦,೫೭,೯೩, ಮದರಾಸು ಪ್ರಾಂತದ ಜಿಲ್ಲೆಗಳಲ್ಲಿ–೧೯,೭೭,೮೮೮, ಹೈದರಾಬಾದು ಸಂಸ್ಥಾನ–೧೮,೬೮,೫೮೩, ಮುಂಬಯಿ ಪ್ರಾಂತದ ಸಂಸ್ಥಾನಗಳು ೬,೭೧,೪೦೨, ಕೊಡಗು–೯೪,೧೮೬ ಮತ್ತು ಮದರಾಸು ಪ್ರಾಂತದ ಸಂಸ್ಥಾನಗಳು–೧೬,೯೭೭. (೫) ಸಂಸ್ಥಾನಗಳನ್ನೂ ಜಿಲ್ಲೆಗಳನ್ನೂ ಪ್ರತ್ಯೇಕವಾಗಿ ಪರಿಗಣಿಸಿ, ಒಟ್ಟು ಜನಸಂಖ್ಯೆಯ ದೃಷ್ಟಿಯಿಂದ ಈ ಪ್ರದೇಶಗಳಲ್ಲಿ ಇರುವ ಶೇಕಡಾವಾರು ಕನ್ನಡ ಪ್ರಜಾ ಪ್ರಮಾಣವನ್ನು ಲೆಕ್ಕಾಚಾರಮಾಡಿದರೆ, ರಾಮದುರ್ಗ ಸಂಸ್ಥಾನ ಪೂರ್ತಿ ಅಚ್ಚಗನ್ನಡ ಸಂಸ್ಥಾನವಾಗಿ ಶೇಕಡ ೯೯.೧ರಷ್ಟು ಪ್ರಮಾಣದಲ್ಲಿ ಕನ್ನಡಿಗರನ್ನೊಳಗೊಂಡಿರುವುದೆಂದು ಹೇಳಬಹುದು. ಆಮೇಲೆ ಕ್ರಮವಾಗಿ ಮುಧೋಳ ಸಂಸ್ಥಾನ ಶೇ|| ೯೭.೨, ಬಿಜಾಪುರ ಜಿಲ್ಲೆ ಶೇ|| ೯೬.೬, ಧಾರವಾಡ ಜಿಲ್ಲೆ ಶೇ|| ೯೨.೮, ಮೈಸೂರು ಸಂಸ್ಥಾನ ಶೇ|| ೮೨.೭, ಜಮಖಂಡಿ ಸಂಸ್ಥಾನ ಶೇ|| ೮೨.೨, ಸಂಡೂರು ಸಂಸ್ಥಾನ ಶೇ|| ೭೭.೯, ರಾಯಚೂರು ಜಿಲ್ಲೆ ಶೇ|| ೭೬.೯, ಸವಣೂರು ಸಂಸ್ಥಾನ ಶೇ|| ೭೬.೫, ಬೆಳಗಾಂವಿ ಜಿಲ್ಲೆ ಶೇ|| ೭೨.೫, ಉತ್ತರ ಕನ್ನಡ ಜಿಲ್ಲೆ ಶೇ|| ೭೦.೫, ಬಳ್ಳಾರಿ ಜಿಲ್ಲೆ ಶೇ||

೬೭.೯, ಗುಲ್ಬರ್ಗ ಜಿಲ್ಲೆ ಶೇ|| ೫೩.೭, ಕುರುಂದವಾಡ ಸಂಸ್ಥಾನ (ಕನಿಷ್ಠ) ಶೇ|| ೫೧.೮–ಈ ಪ್ರಮಾಣಗಳಲ್ಲಿ ಕನ್ನಡ ತಿಳಿದವರಿದ್ದಾರೆ. ಮಿಕ್ಕ ಜಿಲ್ಲೆ ಮತ್ತು ಸಂಸ್ಥಾನಗಳಲ್ಲಿ ಕನ್ನಡ ತಿಳಿದ ಜನಸಂಖ್ಯೆಯ ಪ್ರಮಾಣ ಶೇ|| ೫೦ಕ್ಕಿಂತ ಕಡಮೆಯಾಗಿರುವುದು.

೧೯೦೬ರ ಪರಿಶೀಲನೆಗೂ ಶ್ರೀಮಾನ್ ಕೃಷ್ಣರಾಯರ ಲೆಕ್ಕಾಚಾರಕ್ಕೂ ವ್ಯತ್ಯಾಸ ಕಂಡುಬರುವುದು ಇಲ್ಲಿಯೆ. ದಕ್ಷಿಣ ಕನ್ನಡ ಜಿಲ್ಲೆ ಸಂಪೂರ್ಣವಾಗಿ ಕನ್ನಡ ಪ್ರದೇಶವೆಂದು ಮೇಲೆ ಹೇಳಿದೆ. ಆದರೆ ಶ್ರೀಯುತರು ಆ ಜಿಲ್ಲೆಯಲ್ಲಿ ಕನ್ನಡ ತಿಳಿದ ಜನರು ಶೇ|| ೨೭.೨ ಮಾತ್ರ ಇರುವರೆಂದು ಹೇಳಿ ತಮ್ಮ ನಕ್ಷೆಯಲ್ಲಿ ಅದನ್ನು ಹೊರಗಿಟ್ಟಿದ್ದಾರೆ. ಇದು ಪುನಃ ಪರಿಶೀಲನೆಗೆ ಯೋಗ್ಯವಾದ ವಿಷಯವಾಗಿದೆ. ಪರಿಷತ್ತಿನ ಮತ್ತು ಇತರ ಸಂಸ್ಥೆಗಳಿಂದ ಪ್ರಚಾರವಾಗುತ್ತಿರುವ ಕನ್ನಡ ನಾಡಿನ ನಕ್ಷೆಗಳೂ ಗಡಿಭಾಗದಲ್ಲಿ ವ್ಯತ್ಯಾಸ ತೋರಿಸುತ್ತವೆ. ಕನ್ನಡ ನುಡಿಯ ವ್ಯಾಪ್ತಿಯ ನಿಷ್ಕೃಷ್ಟವಾದ ರೇಖಾಸೀಮೆಯನ್ನು ಗೊತ್ತುಹಚ್ಚುವುದು ಅವಶ್ಯಕವೆಂದು ಹೇಳಬೇಕಾಗಿಲ್ಲ.

## ಕನ್ನಡ ಸುದ್ದಿ

**ಬೆಂಗಳೂರು: ಕನ್ನಡ ಸಾಹಿತಿಗಳ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ೧-೯-೪೦ನೆಯ ಭಾನುವಾರ ಬೆಳಗೆ ೮-೩೦ಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಕನ್ನಡ ಪ್ರಬಂಧಗಳ ವಿಚಾರಕೂಟ ಸೇರುವುದು. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸುವರು. ಬೆಳಗಿನ ಅಧಿವೇಶನದಲ್ಲಿ ಶ್ರೀ|| ಕೆ. ಸಂಪದ್ಗಿರಿರಾಯರು 'ಪ್ರಬಂಧಗಳ ಹುಟ್ಟು, ಬೆಳವಣಿಗೆ ಸ್ವರೂಪ' ಎಂಬ ವಿಚಾರವಾಗಿಯೂ, ಶ್ರೀ|| ಡಿ. ವಿ. ಶೇಷಗಿರಿರಾಯರು 'ವಿಮರ್ಶಾತ್ಮಕ ಪ್ರಬಂಧಗಳು' ಎಂಬ ವಿಚಾರವಾಗಿಯೂ ಶ್ರೀ|| ಎಸ್. ಎಸ್. ರಾಮಚಂದ್ರಯ್ಯನವರು 'ಹರಟೆಗಳು' ಎಂಬ ವಿಚಾರವಾಗಿಯೂ ಶ್ರೀ|| ಎಂ. ಎನ್. ಚೌಡಪ್ಪನವರು 'ವೃತ್ತ ಪತ್ರಿಕೆಗಳಲ್ಲಿ ಪ್ರಬಂಧಗಳು' ಎಂಬ ವಿಚಾರವಾಗಿಯೂ ಭಾಷಣ ಮಾಡುವರು.

ಸಂಜೆ ೪ ಗಂಟೆಗೆ ಕೆಲವು ಸಾಹಿತಿಗಳು ತಮ್ಮ ಸ್ವಂತ ಪ್ರಬಂಧಗಳನ್ನು ಓದುವರು.

**ಉಪನ್ಯಾಸ:**

ಬೆಂಗಳೂರು ಯುನೈಟೆಡ್ ಮಿಷನ್ ಹೈಸ್ಕೂಲಿನ ಕನ್ನಡ ಸಂಘದ ಆಶ್ರಯದಲ್ಲಿ ಇದೇ ೩ನೆಯ ತಾರೀಖು ಶುಕ್ರವಾರ ಸಾಯಂಕಾಲ ಶ್ರೀ|| ಡಿ. ಆರ್. ರಾಮಯ್ಯ ಬಿ.ಎ. ಅವರು 'ವಿದ್ಯಾರ್ಥಿಗಳಿಂದ ಸಾಹಿತ್ಯಸೇವೆ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಶ್ರೀಮಾನ್ ಎ. ಆನಂದ, ಬಿ.ಎ. ಅವರು ಅಧ್ಯಕ್ಷತೆ ವಹಿಸಿದ್ದರು. ಭಾಷಣಕಾರರು ಕನ್ನಡ ಸಾಹಿತ್ಯದಲ್ಲಿ ಈಚೆಗೆ ಉಂಟಾಗುತ್ತಿರುವ ಪುನರುಜ್ಜೀವನ ಚಳವಳಿಯಲ್ಲಿ ವಿದ್ಯಾರ್ಥಿಗಳು ಆಸಕ್ತಿ ವಹಿಸಬೇಕೆಂದೂ ಕನ್ನಡ ಸಾಹಿತ್ಯ ಕೆಡದಂತೆ ನೋಡಿಕೊಳ್ಳಬೇಕೆಂದೂ ತಿಳಿಸಿದರು. ಕೊನೆಯಲ್ಲಿ ತಾವು ರಚಿಸಿರುವ ಕವನಗಳಲ್ಲಿ ಕೆಲವನ್ನು ಹಾಡಿದರು.

**ಸಿದ್ಧಗಂಗಾಕ್ಷೇತ್ರ:**

ಶ್ರೀ ಓ. ಎಸ್. ಲಿಂಗಯ್ಯ, ಬಿ. ಎ. ಅವರು ಈ ತಿಂಗಳು ೨ನೆಯ ತಾರೀಖು ಸಿದ್ಧಗಂಗಾ ಸಂಸ್ಕೃತ ಕಾಲೇಜಿನಲ್ಲಿ ಶ್ರೀ|| ನಿರಂಜನ ಶಿವಕುಮಾರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ 'ಜಂಗಮ–ವಿಜಯ' ಎಂಬ ಐತಿಹಾಸಿಕ ನಾಟಕವನ್ನು ಓದಿದರು. ಮರುದಿನ ವಿದ್ವಾನ್ ಎಂ. ನರಸಿಂಹಾಚಾರ್ಯರವರ ಅಧ್ಯಕ್ಷತೆಯಲ್ಲಿ 'ಕನ್ನಡ ಸಾಹಿತ್ಯವಾಹಿನಿ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಕನ್ನಡ ಸಾಹಿತ್ಯ ೯ನೆಯ ಶತಮಾನದ ಹಿಂದೆ ಇದ್ದ ರೀತಿಯನ್ನೂ, ಅಲ್ಲಿಂದ ಮುಂದೆ ಜೈನ ಕವಿಗಳ ಕೈಯಲ್ಲಿ ಹೇಗೆ ಪರಿಪೋಷಿತವಾಗಿ, ವೀರಶೈವ ಕವಿಗಳ ಕಾಲದಲ್ಲಿ ಸಾಮಾನ್ಯ ಜನರ ಅಭಿರುಚಿಗೂ ಸಿಕ್ಕಿ, ದಾಸ ಕೂಟದವರಿಂದ ಜನಾದರಣೆಯನ್ನು ಹೊಂದಿ, ಬ್ರಾಹ್ಮಣ ಕವಿಗಳ ಕೈ ನೀರಿನಿಂದ ಪರಿಪುಷ್ಟವಾಗಿ ಬೆಳೆದು, ವಿಜಯ ನಗರ ಸಾಮ್ರಾಜ್ಯದ ಅರಸರ ಆಶ್ರಯದಲ್ಲಿ ಪಂಚವಟಿಯಾಗಿ, ಮೈಸೂರು ಪ್ರಭುಗಳ ಕೃಪಾಶ್ರಯದಲ್ಲಿ ಕಲ್ಪವೃಕ್ಷವಾಯಿತೆಂಬುದನ್ನು, ಆಯಾ ಕಾಲದ ಕವಿಗಳ ಗ್ರಂಥಗಳಿಂದ ಸ್ವಾರಸ್ಯವಾದ ಭಾಗಗಳನ್ನು ಓದಿ–ಕನ್ನಡ–ಸಂಸ್ಕೃತಗಳಿಗೆ ಇರಬೇಕಾದ ಮಧುರ ಬಾಂಧವ್ಯವನ್ನು ತಿಳಿಸಿದರು.

**ಬಿಜಾಪುರ: ಸಾಹಿತ್ಯ ತರಗತಿಗಳ ಪ್ರಾರಂಭೋತ್ಸವ**

ಕಳೆದ ಜೂನ್ ತಿಂಗಳಿನಲ್ಲಿ ನಡೆದ ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳಿಗೆ ೩-೮-೪೦ನೆಯ ದಿನ ಶ್ರೀ|| ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಪ್ರಶಸ್ತಿಪತ್ರದಾನ ಮಾಡುವ ಉತ್ಸವ ನಡೆಯಿತು. ಅಂದೇ ಹೊಸ ತರಗತಿಗಳ ಉದ್ಘಾಟನವನ್ನೂ ಕೂಡ ಶ್ರೀ|| ಬೇಂದ್ರೆಯವರು ನಡೆಸಿಕೊಟ್ಟರು.

**ತುಮಕೂರು: ಇಂಟರ್‌ಮಿಡಿಯೆಟ್ ಕಾಲೇಜಿನ ಕರ್ನಾಟಕ ಸಂಘ**

ತಾ|| ೨೭-೮-೪೦ನೆಯ ಮಂಗಳವಾರ ಕಾಲೇಜಿನ ಸಭಾಂಗಣದಲ್ಲಿ ಮೇಲ್ಕಂಡ ಸಂಘದ ಆಶ್ರಯದಲ್ಲಿ 'ಜನಾಂಗದ ಏಳಿಗೆಗೆ ಸ್ತ್ರೀಯರ ಪ್ರಗತಿ ಅತ್ಯಾವಶ್ಯಕ' ಎಂಬ ವಿಷಯದ ಮೇಲೆ ಒಂದು ಚರ್ಚೆ ನಡೆಯಿತು. ಕಾಲೇಜಿನ ಸೂಪರಿಂಟೆಂಡೆಂಟರವರಾದ ಶ್ರೀಯುತ ಡಾ|| ಬಿ. ತಿರುಮಲಾಚಾರ್ ಎಂ.ಎಸ್‌ಸಿ., ಪಿ.ಎಚ್.ಡಿ. (ಲಂಡನ್) ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಯುತರುಗಳಾದ ಎಸ್. ವಿ. ಪರಮೇಶ್ವರಭಟ್ಟ, ಎಂ.ಎ. ಎ. ಸಿ. ಚಂದ್ರಶೇಖರ ಅಯ್ಯರ್, ಎಂ.ಎಸ್‌ಸಿ. ಬಿ. ಕೃಷ್ಣಪ್ಪ, ಬಿ.ಎಸ್‌ಸಿ. (ಆನರ್ಸ್) ಅವರುಗಳು ವಿಷಯದ ಪರವಾಗಿಯೂ, ಶ್ರೀಯುತರುಗಳಾದ ವೈ. ಎಸ್. ಲೂಯಿಸ್, ಬಿ.ಎಸ್‌ಸಿ. ಎಸ್. ರಂಗಾಚಾರ್, ಎಂ.ಎ. ಕೆ. ಸಿ. ಶಂಕರ್ ಅವರುಗಳು ವಿರೋಧವಾಗಿಯೂ ಮಾತನಾಡಿದರು. ವಿಷಯ ಬಹುಮತದಿಂದ ಅಂಗೀಕೃತವಾಯಿತು.

**ಮೈಸೂರಿನಲ್ಲಿ ಅಕ್ಷರ ಪ್ರಚಾರ**

ಆಗಸ್ಟ್ ತಿಂಗಳ ಮೊದಲ ವಾರದಿಂದ ಮೈಸೂರು ವಿಶ್ವವಿದ್ಯಾನಿಲಯ ಸಂಘದವರ ನೇತೃತ್ವದಲ್ಲಿ ಅಕ್ಷರ ಪ್ರಚಾರ ಭರದಿಂದ ಸಾಗುತ್ತಿದೆ. ಅದಿಕರ್ನಾಟಕ ಪುರ, ಜಲಪುರಿಗಳಲ್ಲಿನ ಹರಿಜನರೂ ಉತ್ಸಾಹದಿಂದ ಕಲಿಯುತ್ತಿದ್ದಾರೆ. ಶ್ರೀಗಳಾದ ಎಸ್. ವಿ. ಶ್ರೀನಿವಾಸರಾವ್, ಜಿ. ಆರ್. ರಂಗಸ್ವಾಮಿ, ಎನ್. ಕಸ್ತೂರಿ, ಎ. ಶೇಷಯ್ಯಂಗಾರ್ ಮತ್ತು ಕೆ. ವಿ. ದೊರೆಸ್ವಾಮಿಯವರುಗಳು ಒಟ್ಟಾಗಿ ಸೇರಿ ಸುಲಭರೀತಿಯಲ್ಲಿ ಅಕ್ಷರ ಪ್ರಚಾರ ಮಾಡಲು ಕನ್ನಡದಲ್ಲಿ ವರ್ಣಮಾಲೆಯೊಂದನ್ನು ತಯಾರಿಸಿದ್ದಾರೆ.

ತರಗತಿಗಳನ್ನು ರಾತ್ರಿ ೭|| ಘಂಟೆಯಿಂದ ೯ ಘಂಟೆಯ ವರೆಗೆ ನಡೆಸಲಾಗುತ್ತಿದೆ. ಅದರಲ್ಲಿ ಮೊದಲು ೧೫ ನಿಮಿಷಗಳನ್ನು ಸಾಧಾರಣ ಸಂಭಾಷಣೆ ಮತ್ತು ಕಥೆಗಳಿಗೂ ಉಪಯೋಗಿಸಲಾಗುವುದು. ಒಂದು ಗಂಟೆ ಕಾಲ ಓದುಬರಹಕ್ಕೆ ವಿನಿಯೋಗಿಸಲಾಗುವುದು. ಮತ್ತು ಕೊನೆಯ ೧೫ ನಿಮಿಷಗಳನ್ನು ಸರ್ಕಾರಿ ಇಲಾಖೆಯವರು ಹೊರಡಿಸಿರುವ 'ಮೈಸೂರು ಕೈಪಿಡಿ'ಯಿಂದ ಒಂದು ವಿಷಯವನ್ನು ಬೋಧಿಸಲು ಉಪಯೋಗಿಸಲಾಗುವುದು.

### ಗಮಕ ಕಲಾ ಸಂಘದ ಸ್ಥಾಪನೆ

ಗಮಕ ಕಲಾ ಸಂಘದ ಸ್ಥಾಪನಕಾರ್ಯವನ್ನು ನೆರವೇರಿಸುವುದಾಗಿ, ಗಮಕ ಕಲಾವಿದರೂ ಮತ್ತು ಗಮಕ ಕಲಾಭಿಮಾನಿಗಳೂ ಆಗಸ್ಟ್ ೨೪ನೆಯ ತಾರೀಖು ಶನಿವಾರ ಸಂಜೆ ೬ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಭೆ ಸೇರಿದ್ದರು. ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಅಧ್ಯಕ್ಷತೆಯನ್ನು ವಹಿಸಿ ತಮ್ಮ ಅಮೋಘವಾದ ಸಲಹೆಗಳನ್ನೂ, ಬೆಂಬಲವನ್ನೂ ಕೊಟ್ಟರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಗಮಕ ಕಲಾ ಸಂಘ ಕನ್ನಡ ನಾಡಿನಲ್ಲಿ ಬಹಳ ಹಿಂದೆಯೇ ಏರ್ಪಡಬೇಕಾಗಿದ್ದಿತೆಂದೂ, ಈಗ ಅದು ಪರಿಷತ್ತಿನ ಅಂಗಸಂಸ್ಥೆಯಾಗಿ ಏರ್ಪಟ್ಟಿರುವುದು ಬಹಳ ಸಂತೋಷದ ಸಂಗತಿಯೆಂದೂ, ಈ ಸಂಘ ಒಂದು ಪಡೆಯಾಗಿ ನಿಂತು ಸೇವೆಯನ್ನು ಸಲ್ಲಿಸುತ್ತಾ, ಬಹುಕಾಲ, ಬಲು ದೊಡ್ಡದಾಗಿ, ಲೋಕಕ್ಕೆ ಬೆಳಗಾಗಿ ತನ್ನ ಕಾರ್ಯವನ್ನು ನೆರವೇರಿಸಲೆಂದೂ ಹಾರೈಸಿದರು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಗಮಕ ಕಲಾ ಪ್ರಚಾರಕ್ಕಾಗಿ ಒಂದು ನಿಧಿ ಏರ್ಪಟ್ಟಿರುವುದಾಗಿಯೂ ಈ ನಿಧಿಗೆ ಇದುವರೆಗೆ ೧೪೦೦ ರೂಪಾಯಿಗಳ ಧನಸಹಾಯ ದೊರೆತಿದೆಯೆಂದೂ, ಈ ನಿಧಿ ೩ ಅಥವಾ ೪ ಸಾವಿರ ರೂಪಾಯಿಗಳಷ್ಟು ಬೆಳೆದ ಪಕ್ಷದಲ್ಲಿ ಪರಿಷತ್ತಿನವರು ಕೂಡ ಗಮಕ ಕಲೆಗೆ ಮತ್ತಷ್ಟು ತೀವ್ರವಾಗಿ ಪ್ರೋತ್ಸಾಹ ಕೊಡಲು ಸಿದ್ಧರಾಗಿರುವರೆಂದೂ ತಿಳಿಸಿದರು.

ತರುವಾಯ ಸಂಘದ ಕಾರ್ಯನಿರ್ವಾಹಕ ಸಭೆಯ ಅಧಿಕಾರಿ ವರ್ಗದ ಮತ್ತು ಸದಸ್ಯರುಗಳ ಚುನಾವಣೆ ನಡೆದು, ಈ ಕೆಳಗೆ ಕಂಡ ಮಹನೀಯರು ಸರ್ವಾನುಮತದಿಂದ ಆಯಾ ಸ್ಥಾನಗಳಿಗೆ ಚುನಾಯಿಸಲ್ಪಟ್ಟರು.

ಅಧ್ಯಕ್ಷರು: ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು. ಉಪಾಧ್ಯಕ್ಷರು: ಶ್ರೀ|| ಕೆ. ಜಿ. ಸಂಪತ್ಕುಮಾರಾಚಾರ್ಯರು, ಗೌರವ ಉಪಾಧ್ಯಕ್ಷರು: ಶ್ರೀ||ಗಳಾದ ಬಿಂದೂರಾಯರು, ಕೆ. ಕೃಷ್ಣರಾಯರು ಮತ್ತು ಮಾಯಿಗೌಡರು. ಕೋಶಾಧ್ಯಕ್ಷರು: ಈ ಸ್ಥಾನಕ್ಕೆ ಕಾರ್ಯನಿರ್ವಾಹಕ ಸಮಿತಿಯವರೇ ತಕ್ಕ ಮಹನೀಯರನ್ನು ಚುನಾಯಿಸಿಕೊಳ್ಳತಕ್ಕದೆಂದು ನಿರ್ಧರವಾಯಿತು. ಕಾರ್ಯದರ್ಶಿಗಳು: ಶ್ರೀ||ಗಳಾದ ಡಿ. ಆರ್. ರಾಮಯ್ಯನವರು ಮತ್ತು ಎಂ. ರಾಮಕೃಷ್ಣರಾಯರು. ಕಾರ್ಯನಿರ್ವಾಹಕ ಸಮಿತಿಯ ಸದಸ್ಯರುಗಳು: ಶ್ರೀಮತಿಗಳಾದ ರತ್ನಮ್ಮನವರು, ಸುಶೀಲಮ್ಮನವರು. ಶ್ರೀ||ಗಳಾದ ಡಿ. ಸಿ. ಸುಬ್ಬರಾಯಪ್ಪನವರು, ಎಲ್. ರಾಜಾರಾಯರು, ರಾಘವೇಂದ್ರರಾಯರು, ಕೆ. ಎಲ್. ನಾರಾಯಣರಾಯರು, ಶ್ರೀನಿವಾಸರಾಯರು ಮತ್ತು ಎಂ. ಎಸ್. ಚಂದ್ರಶೇಖರಯ್ಯನವರು.

ಕೊನೆಯಲ್ಲಿ ಶ್ರೀಮಾನ್ ಕೆ. ಜಿ. ಸಂಪತ್ಕುಮಾರಾಚಾರ್ಯರು ಸಂಘದ ಉದ್ದೇಶಗಳನ್ನು ವಿವರಿಸಿ, ಗಮಕ ಕಲಾಭಿಮಾನಿಗಳೆಲ್ಲರೂ ಮುಂದೆ ಬಂದು ಪೋಷಕರಾಗಿಯೂ, ಸದಸ್ಯರಾಗಿಯೂ, ಅಭಿಮಾನಿಗಳಾಗಿಯೂ ನಿಂತು ಸಹಾಯ ಮಾಡಬೇಕೆಂದು ಪ್ರಾರ್ಥಿಸಿದರು. ಚಂದಾ ಮೊಬಲಗು ಬಹಳ ಹೆಚ್ಚಾಗಿರದಂತೆ ವರ್ಷವೊಂದಕ್ಕೆ ಪೋಷಕರಿಗೆ ೫ ರೂಪಾಯಿಗಳೂ, ಸದಸ್ಯರಿಗೆ ಒಂದು ರೂಪಾಯಿಯೂ, ಅಭಿಮಾನಿಗಳಿಗೆ (ವಿದ್ಯಾರ್ಥಿಗಳು ಮತ್ತು ಸ್ತ್ರೀಯರು) ೮ ಆಣೆಗಳೂ ಇರಬೇಕೆಂದು ಗೊತ್ತು ಮಾಡಲಾಯಿತು.

ವಂದನಾ ಸಮರ್ಪಣೆಯಾದಮೇಲೆ ಸಭೆ ಮುಕ್ತಾಯವಾಯಿತು.

೧೧೫-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು



# ಕನ್ನಡ ನುಡಿ

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

ಸಂಪುಟ ೨
ಸಂಚಿಕೆ ೪೫

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೬, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.



ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜ ಒಡೆಯರವರು
ಮತ್ತು
ಮಹಾರಾಣಿಯವರಾದ ಶ್ರೀ ಸತ್ಯಪ್ರೇಮಾದೇವಿಯವರು

ಶ್ರೀ

## ವಿಜಯಾಶಂಸನಂ

ಕಂದ॥ ಶ್ರೀ ಮಾಹಿಶೂರ ಯೋಗ
ಕ್ಷೇಮ ಜಗದ್ಭಾಗ್ಯಧಾತ್ರಿ, ಸಕ್ಷಮೆಯನುಕಂ
ಪಾಮಯಿ ಚಾಮುಂಡಾಂಬಿಕೆ
ಶ್ರೀಮಜ್ಜಯ ಚಾಮನೃಪತಿಯಂ ಪೊರೆಗೊಲವಿಂ ॥೧॥

ಶ್ರೀ ಯದುಕುಲ ವಿಮಲಸುಧಾ
ಕೋಯಧಿ ತುಹಿನಾಂಶು, ಧವಳಿತಾಷ್ಟದಿಶಂ ಪ್ರ
ತ್ಯಾಯಾತನೆಮ್ಮ ಪೊರೆಗುಮ
ಜೇಯನಮೇಯಂ ಧರಾಧವಂ ಶ್ರೀಕೃಷ್ಣಂ ॥೨॥

ತುಂಗಗಿರಿ ಶಿಖರದೊಳ್ ಕಿರ
ಣಂಗಳ್ ದೆಸೆಬೆಳಗೆ ರಂಜಿಪುದಯಾರ್ಕನವೋಲ್
ಸಿಂಗರಿಸು ಸಿಂಗವಣೆಯಂ
ಮಂಗಳಗುಣವಿತತಿ ಬೆಳಗೆ ಜಯಚಾಮನೃಪಾ ॥೩॥

ಹಡಗೊಡೆಯೆ ಕಡಲನಡುವೊಳ್
ನಡುಂಗಿ ಬೆಬ್ಬಳಿಪರಿರವು ನಮಗಾದುದು ದಲ್
ನಡೆಯೆ ಸಿರಿಕೃಷ್ಣನರಪತಿ
ಯಡಪುರ್ ಬಳಿಕೆಮಗೆ ನೀನೆ ತರುಣ ನೃಪೇಂದ್ರಾ ॥೪॥

ಮಱೆಯಾಗಿ ಮೊದಲಮೃಗಪತಿ
ಮಱುಗಿಸೆ ಸತ್ವಂಗಳೆಲ್ಲಮಂ ಯುವಸಿಂಹಂ
ಮಱೆಯಿಸಿ ಭಯಮಂ ಕಾವೊಲ್
ನರಸಿಂಹಕಿಶೋರ, ನಲ್ಮೆಯಿಂ ಪೊರೆಯೆಮ್ಮಂ ॥೫॥

ವಿಷಮುಶಿಶಿರಂಬೊಲೊದವಿ
ತ್ತ ಸಮಯದೊಳೆ ನಮಗೆ ಕೃಷ್ಣನೃಪತಿಯ ವಿರಹಂ
ಪೊಸಜೀವಕಳೆಯನೊದವಿಪ
ಬಸಂತನಂತೆಯ್ದಿವಾರ ರಾಜಕುಮಾರಾ ॥೬॥

ವೃ॥ ನಲವಿಂದಾಳೆ ಧರಾಮುಖಂ, ಪಗೆಮೊಗಂ ಜೋಲ್ವೀಳೆ,
ಭೂಮಿಾಸುರರ್
ಪಲವುಂ ಹೋಮಮನೊಲ್ದು ಬೇಳೆ, ವಿಬುಧರ್
ಸಂತೋಷಮಂತಾಳೆ ಮಿ
ಕ್ಕೊಲವಿಂದಂ ಪ್ರಜೆ ಬಾಳೆ, ನಾಡೆ ಗುಣಮಂ
ಕೊಂಡಾಡುತುಂ ಪೇಳೆ ನೀಂ
ಗೆಲವಾಳಲ್ ಜಯಚಾಮರಾಜನೃಪತೀ
ಸಿಂಹಾಸನಕ್ಕೇರೆಲೈ ॥೭॥

ವೃ॥ ಇದು ಭರತಾನ್ವಯರ್ಕಳಧಿರೋಹಿಸಿದುತ್ತಮಸಿಂಹಪೀಠಮಿಂ
ತಿದುವೆ ಮಹೀಮಹೇಂದ್ರನಿನಲಂಕೃತಮಾದುದು ಕೃಷ್ಣರಾಜನಿಂ
ಇದೆ ಗಡ ಸಿಂಹವಾಹಿನಿಯ ಪೂರ್ಣಕೃಪಾಬಲದಿಂ ದೃಢಂ ಶುಭಂ
ಮುದಮನಮರ್ಚು, ವಿಸ್ತರಿಸೆ ವಂಶಮಹೋನ್ನತಿಯೇರು
ಭೂಮಿಪಾ ॥೮॥

ಕಂದ॥ ಪ್ರೌಢೆ ಗಡ! ರಾಜ್ಯಲಕ್ಷ್ಮಿ ನಿ
ಗೂಢಕಲಾಪ್ರೌಢಿಯೆಲ್ಲಮಂ ಬಯಸಿದಪಳ್
ನೋಡು ಕಲಾಭಿಜ್ಞನೆ ಕೈ
ಗೂಡಿಸು ತನ್ನೊಂದು ಬಯಕೆಯಂ ಜಯನೃಪತೀ ॥೯॥

ಒಡನಿರೆ ಸಹಜ ಗುಣಂಗಳ್
ಪಡೆದೈ ಕೌಶಲವಿಶೇಷಮಂ ನೃಪವರನೊಳ್
ಒಡನಾಡಿ ; ಜನತೆಯನಿತುಂ
ಕಡಂಗಿ ಚಾದಗೆಗಳಂತೆ ಬಯಸದೆ ನಿನ್ನಂ ॥೧೦॥

ಧರೆಯರಿಯೆ 'ಸತ್ಯಮೇವೋ
ದ್ಧರಾಮ್ಯಹಂ' ಎಂಬುದಾಯ್ತು ವಂಶದ ಶಪಥಾ
ಕ್ಷರವಿತತಿ ನೀನುಮದನ
ಕ್ಕರದಿಂ ಪಾಲಿಸಿ ನೆಗಳ್ತೆಯಂ ಬಿತ್ತರಿಸೈ ॥೧೧॥

ವೃ॥ ನಿನಗೊಲ್ದಿರ್ಪುದು ವಿದ್ಯೆ, ಸನ್ನುತಗುಣ ಶ್ರೀಕೋಶನಾಗಿರ್ದಪೈ
ಧನಸೇನಾಬಲಮುಂಟು, ಮಂತ್ರಿವರನುಂ ವಿಖ್ಯಾತನಾಗಿರ್ದಪಂ
ಅನಘಪ್ರಜ್ಞೆ, ಸಮುಗ್ರಸೂತ್ರಧರನೆಂಬಂತಾಗೆ ನಾಡೆಲ್ಲಮುಂ
ಮನದಂತಿರ್ಪುದು ಕೀರ್ತಿಲಕ್ಷ್ಮಿಯೊಲಿದಳ್ ;
ಗೆಲ್! ಗೆಲ್!! ಕ್ಷಮಾಭೃತ್ಪತೀ ॥೧೨॥

ಸ್ರ॥ ವೃ॥ ಸತ್ಯಂ ಸರ್ವಸ್ವಮೆಂಬೀಯನುನಯದೆ
ನೆಗಳ್ದಾದ್ಯವಂದ್ಯಾವನೀಂದ್ರರ್
ನಿತ್ಯಂ ಧರ್ಮಾನುರಕ್ತಿ ಪ್ರಚುರಕುಶಲಧೀವಿಶ್ರುತರ್
ನಲ್ಮೆವೆತ್ತರ್
ನೀತ್ಯಧ್ವಾನಕ್ಕೆ ನೀನೇ ಪ್ರಜೆಗಳನಿಬರಂ
ಮಾರ್ಗದರ್ಶಿತ್ವದಿಂ ಕೊಳ್
ಸತ್ಯಪ್ರೇಮಾನ್ವಿತಂ ನೀಂ ಸಹಜಶುಭಗುಣಂ
ಭೂಪತೀ ಸ್ತುತ್ಯನಾಗೈ ॥೧೩॥

ವಿಜಯಿಸು ವಿಜಯಿಸು ಮಹಿಶೂರ್
ಪ್ರಜೆಗಳ್ ಕುಶಲಿಗಳದೀನಸತ್ವರುದಾರರ್ ॥
ಸುಜನರ್ಕಳೆನಿಸಿ ನಿನ್ನೀ
ಧ್ವಜಮಂ ಪಲವೆಡೆಯೊಳೆತ್ತಿ ಬಳೆಯಿಸೆ ಜಸಮಂ ॥೧೪॥

ವೃ॥ ನಲವಂ ನೀಡುಗೆ ರಾಜ್ಯಲಕ್ಷ್ಮಿ ಪೊಸವೆಣ್ ನಿನ್ನೊಲ್ಮೆಯಿಂ
ಹಿಗ್ಗಿ ಮೇಣ್
ಗೆಲವಿಂ ಬಾಳ್ಗೆ, ಸದಾಶ್ರಯಂಗೆ ನಿನಗಾ ಸರ್ವೇಶ್ವರಂ ವಶ್ಯನ
ಕ್ಕೆ, ಲಸತ್ಪಂಚಮುಖಾಧಿರೂಢೆ ಯದುವಂಶಕ್ಷ್ಮಾಭೃ
ದಾತ್ಮೀಯಸ
ತ್ಕುಲದೈವಂ ಬಲಮಕ್ಕೆ ನಿನ್ನೊಸಗೆಯೊಳ್
ಭದ್ರಂ ಶುಭಂ ಮಂಗಳಂ ॥

**ಹೆಮ್ಮಿಗೆ ದೇಶಿಕಾಚಾರ್ಯ.**

---

## ರಾಜಭಕ್ತಿ ಮುಕ್ತಾವಳಿ

೧

ಜನಿಸಿ ಕಾಳಾಯುಕ್ತಿಯಲಿ ಭಾ
ಮಿನಿಯ ಬಹುಧಾನ್ಯದಲಿ ವರಿಸುತೆ
ಸನುಮತಿಯ ತಳೆದಿಂದು ಭೂಮಿಪನಾಗಿ ವಿಕ್ರಮದಿ
ಜನನುತನು ತಾನಾಗಿ ಸಕಲರ
ಮನಕೆ ಸಂತಸವೆಸಗಿ ಬೆಳಗುವ
ದಿನಕರನ ನೀಂ ಪೋಲ್ವೆ ಸಿರಿ ಜಯಚಾಮರಾಜೇಂದ್ರ

೨

ಪಿತನು ನರಸಿಂಹಾಖ್ಯನಲಿ ತಾಂ
ಹಿತದಿ ಬೆಳೆಯುತೆ ಮಿಗಿಲು ರಾಜ್ಯದ
ಮತವ ತಿಳಿಯುತೆ ವರದ ಕೃಷ್ಣನೃಪಾಲನಾಶ್ರಯದಿ
ಮತಿಯ ತಳೆದಿಹೆ ಪ್ರೌಢವಿದ್ಯೆಯ
ನತಿ ಹರುಷದಿಂದರಿತು ಚರಿಸಿದೆ
ಸತತ ದೇಶವಿದೇಶದಲಿ ಜಯಚಾಮರಾಜೇಂದ್ರ

೩

ಎಸೆದಿರಲು ನವವಿಧದಿ ರಾಜ್ಯದ
ಮಿಸುಪ ಕೀರ್ತಿಯ ಕಲೆಯ ಕುಸುಮಗ
ಳೆಸಕದಿಂ ಯದುಕುಲದ ಸಿಂಹಾಸನವು ಪಿರಿದಾಗಿ
ಎಸೆದಿರುವೆ ಶತಮಾನವಾರರ
ಜಸದಿ ಜಯಜಯಕಾರ ಸತ್ವದಿ
ವಸುಮತೀಶರೊಳಗ್ಗಳೆಯ ಜಯಚಾಮರಾಜೇಂದ್ರ

೪

ಜನನಿ ಚಾಮುಂಡಾಂಬೆ ಗಿರಿಯಲಿ
ಜನಪರನು ಪಾಲಿಸುವ ಪರಿಯಲಿ
ಮನದಿ ಭಾವಿಸಿ ಬೆಳಗುತಿರೆ ಲಲಿತಾದ್ರಿ ರಂಜಿಸಲು
ಘನತೆಯಿಂ ಮೈಸೂರ ಬಾವುಟ
ವನುನಯದಿ ತಾಂ ಗಂಡಭೇರುಂ
ಡನಲಿ ತಲೆಯೆತ್ತಿಹುದು ಸಿರಿ ಜಯಚಾಮರಾಜೇಂದ್ರ

೫

ಶೃಂಗ ಚಂದ್ರದ್ರೋಣ ಬಿಳಿಗಿರಿ
ರಂಗ ನಂದಿಗಳೆಂಬ ನಗಗಳ
ತುಂಗ ಭದ್ರೆಯ ಕಪಿಲೆ ಕಾವೇರಿಗಳ ನಾಡಿನಲಿ
ಮಂಗಳದ ಮಾಳ್ಕೆಗಳು ಕಲೆಗಳು
ರಂಗಮಂಟಪ ದಿವ್ಯ ವನಗಳು
ಸಂಗಡಿಸೆ ರಾಜಿಸುವೆ ಸಿರಿ ಜಯಚಾಮರಾಜೇಂದ್ರ

೬

ಕನ್ನಡದ ನಾಡಿನಲಿ ಮೆರೆಯುವ
ನಿನ್ನ ನಯವಿನಯಗಳ ಸಾಕ್ಷಿಗೆ
ಮನ್ನಣೆಯ ಸೌರಭಕೆ ನೆಲೆವೀಡಾಯ್ತು ಯದುಕುಲವು
ಸನ್ನುತಿಯ ಸಂಪದದ ಬಾಳ್ಕೆಯ
ನನ್ಯಸಾಧಾರಣವಿದೆಂಬವೊ
ಲುನ್ನತದಿ ಬೆಳಗುತಿಹೆ ಸಿರಿ ಜಯಚಾಮರಾಜೇಂದ್ರ

೭

ಪ್ರಜೆಗಳೊಲಿಮೆಯ ಪೀಠದಲಿ
ನಿಜಗುಣದ ಸಿರಿ ರಾಜಿಸಲು ಸಂತತ
ಭಜಕರನು ಪಾಲಿಸುವ ಸುಕೃತವು ನಿನ್ನದಾಗಿರಲು
ಸುಜನರಿಷ್ಟವ ಬಗೆದು ರಕ್ಷಿಸಿ
ಕುಜನರನು ಶಿಕ್ಷಿಸುವ ಪರಿಯಂ
ಸೃಜಿಸುವೊಡೆ ಸೌಭಾಗ್ಯವದು ಜಯಚಾಮರಾಜೇಂದ್ರ

೮

ಬಕುತಿಗಾಶ್ರಯವೆನಿಸಿ ಕಿರಿದಹ
ಯುಕುತಿಯನು ಸಂಹರಿಸಿ ಲೋಕದಿ
ಮುಕುತಿಯನು ತಳೆವಂತೆ ನಮ್ಮಯ ತಾಯಿ ಭೂಮಿಯಲಿ
ಸಕಲಭಾಗ್ಯವ ಪಡೆದು ರಾಜಿಪ
ಸುಕೃತದಲಿ ಸುಖಶಾಂತಿಯಲಿ ತಾಂ
ನಿಖಿಲ ಜನರನು ಸಲಹು ಸಿರಿ ಜಯಚಾಮರಾಜೇಂದ್ರ

೯

ಜಯತು ಜಯ ಯದುಕುಲದ ರತ್ನವೆ
ಜಯತು ಜಯ ಮೈಸೂರ ಭಾಗ್ಯವೆ
ಜಯತು ಜಯ ರಾಜ್ಯಾಧಿಕಾರದ ಪೂರ್ಣಚಂದ್ರಮನೆ
ಜಯತು ಜಯ ಜನಪದದ ಸಿಂಧುವೆ
ಜಯತು ಜಯ ಚಾಮೇಂದ್ರ ಬಂಧುವೆ
ಜಯತು ಜಯ ಚಾಮುಂಡಿಕಾಂಬೆಯ ಪ್ರೇಮಪುತ್ಥಳಿಯೆ

ಡಿ. ಆರ್. ರಾಮಯ್ಯ

## ಕನ್ನಡ ಸಾಹಿತಿಗಳ ಸಂಘ

### ಕನ್ನಡ ಪ್ರಬಂಧಗಳ ವಿಚಾರ ಕೂಟ

ಇದೇ ೧೯೪೦ನೆಯ ಸೆಪ್ಟೆಂಬರ್ ೧ನೆಯ ತಾರೀಖು ಭಾನುವಾರ ಮೇಲ್ಕಂಡ ಕೂಟ ನಡೆಯಿತು. ಬೆಳಗಿನ ಸಭೆಗೆ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರೂ, ಸಂಜೆಯ ಸಭೆಗೆ ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರೂ ಸಭಾಪತಿಗಳಾಗಿದ್ದರು.

### ಬೆಳಗಿನ ಕಾರ್ಯ ವಿವರ

ಮೊದಲು ಅಧ್ಯಕ್ಷರಾದ ಶ್ರೀ|| :ಬಿ. ಎಂ. ಶ್ರೀಕಂಠಯ್ಯನವರು ಈ ಕೆಳಗಿನಂತೆ ಭಾಷಣಮಾಡಿ ಕೂಟವನ್ನು ಪ್ರಾರಂಭಗೊಳಿಸಿದರು :—

### ‘ಶ್ರೀ’ಯವರ ಭಾಷಣ

“ಸಾಹಿತಿಗಳ ಸಂಘ ಹುಟ್ಟಿ ವರ್ಷದ ಮೇಲಾಯಿತು. ಕಳೆದ ಡಿಸೆಂಬರಿನಿಂದ ಅದು ಹುರುಪಿನಿಂದ ಕೆಲಸಮಾಡುತ್ತಿದೆ. ಸಾಹಿತಿಗಳಿಂದ ಗ್ರಂಥವಾಚನ ಮಾಡಿಸುವುದು ಈ ಸಂಘದ ಪ್ರಮುಖ ಕಾರ್ಯವಾಗಿದೆ. ಅಲ್ಲದೆ, ಈಗಾಗಲೆ ಕತೆಗಾರರ ಸಮ್ಮೇಳನ, ಏಕಾಂಕ ನಾಟಕ ವಿಚಾರ ಕೂಟ — ಹೀಗೆ ಎರಡು ವಿಶೇಷ ಸಭೆಗಳು ನಡೆದಿವೆ; ಇದು ಮೂರನೆಯದು.

“ಈಗ ಮಹಾ ಕಾವ್ಯಗಳ, ದೊಡ್ಡ ಗ್ರಂಥಗಳ ಕಾಲ ಮುಗಿಯಿತು. ಈಗಿನವರಿಗೆ ಎಲ್ಲವೂ ಸಣ್ಣದಾಗಿರಬೇಕು; ಸಣ್ಣ ಕತೆ, ಸಣ್ಣ ನಾಟಕ, ಸಣ್ಣ ಪ್ರಬಂಧ ಬೇಕು. ಸಣ್ಣದಾದ ಮಾತ್ರಕ್ಕೆ ಆಕಾರದಲ್ಲಿಯೆ ಹೊರತು ಗುಣದಲ್ಲಿ ಅಲ್ಲ; ಸಣ್ಣದರಲ್ಲಿ ದೊಡ್ಡತನ ಇರಬೇಕು. ಇದಕ್ಕೆ ಮುಖ್ಯ ಕಾರಣ, ಈಗಿನ ಕಾಲದವರಿಗೆ ಕಾಲವ್ಯವಧಾನ ಇಲ್ಲದಿರುವುದು; ಅವರು ಹಲವು ವಿಷಯಗಳಿಗೆ ಗಮನ ಕೊಡಬೇಕಾಗಿದೆ; ಒಂದೊಂದು ಸಲ, ಈಗಿನ ನಾಗರಿಕ ಜನಜೀವನದಲ್ಲಿ ಸಾಹಿತ್ಯಕ್ಕೇ ಸ್ಥಳವಿಲ್ಲ ಎಂಬ ಉದಾಸೀನ ಭಾವ ನಮ್ಮ ಜನಕ್ಕೆ ಎಲ್ಲಿ ಬರುತ್ತಿದೆಯೋ ಎಂಬ ಶಂಕೆ ಕೂಡ ಉಂಟಾಗುತ್ತದೆ. ಸ್ಥಿತಿ ಹೀಗಿರುವುದರಿಂದ, ಜನಮನೋಭಾವವನ್ನನುಸರಿಸಿ ಸಾಹಿತ್ಯದ ಸ್ವರೂಪವೂ ಬದಲಾಗಬೇಕಾಗಿದೆ: ಸಾಹಿತ್ಯ ಜನದ ನಡುವೆ ಬಂದು ಅವರೊಡನೆ ಬೆರೆಯಬೇಕಾಗಿದೆ; ಹಿಂದಿನಂತೆ ಅದು ಸಾಮಾನ್ಯ ಜನಕ್ಕೆ ಎಟುಕದ ರೀತಿಯಲ್ಲಿ ಒಂದು ಉನ್ನತ ಸ್ಥಳದಲ್ಲಿ ಕುಳ್ಳಿದ್ದರಾಗುವುದಿಲ್ಲ. ಸಾಹಿತ್ಯ ಕೃತಿಗಳನ್ನು ಜನಕ್ಕೆ ಹಿಡಿಯುವಂತೆ, ಸರಳವಾದ ಭಾಷೆಯಲ್ಲಿ ರಚಿಸಬೇಕು.

“ಪ್ರಬಂಧ ಹಳೆಯದೆ, ಹೊಸದೆ ಎಂಬ ಚರ್ಚೆಗೆ ನಾನು ಕೈಹಾಕುವುದಿಲ್ಲ. ಪ್ರಬಂಧ ಹೊಸದೆಂದೇ ಇಟ್ಟುಕೊಳ್ಳೋಣ. ಆದರೆ, ಈಗ ಯಾವ ಸಾಹಿತ್ಯ ಪ್ರಭೇದಕ್ಕೆ ನಾವು ಪ್ರಬಂಧ ಎನ್ನುತ್ತೇವೆಯೊ ಅದಕ್ಕೆ ಆ ಹೆಸರು ಒಪ್ಪುತ್ತದೆಯೆ? ಪ್ರಬಂಧ ಎಂದರೆ ರಚನೆ, ಚೆನ್ನಾಗಿ ಕಟ್ಟಿದ್ದು ಎಂದು ಅರ್ಥವಾಗುತ್ತದೆ, ಅಷ್ಟೆ. ಸಾಹಿತ್ಯ ಕೃತಿ ಯಾವುದು ರಚಿಸಿದ್ದಲ್ಲ, ಕಟ್ಟಿದ್ದಲ್ಲ? ಈಗ ನಾವು ಯಾವುದನ್ನು ‘ಪ್ರಬಂಧ’ ಎನ್ನುತ್ತೇವೆಯೋ ಅದರಲ್ಲಿ ಬರಹಗಾರನ ಮನೋವೃತ್ತಿ ಒಡೆದು ಕಾಣುತ್ತದೆ; ಅವನ ಒಂದು ಅನುಭವ ಅದರಲ್ಲಿ ಅಡಕವಾಗಿರುತ್ತದೆ; ಒಂದು ಕಾಂತಿಯಿರುತ್ತದೆ; ಅವನು ಹೇಳುವುದನ್ನು ಸಲಿಗೆಯಾಗಿ, ಸರಳವಾಗಿ, ತಮಾಷೆಯಾಗಿ, ಬಿಡುವಾಗಿ ಹೇಳಿಕೊಂಡು ಹೋಗುತ್ತಾನೆ; ಈ ಪ್ರಬಂಧ ಬೇಸರಗೊಳಿಸುವಷ್ಟು ದೀರ್ಘವಾಗಿರುವುದಿಲ್ಲ. ಇದನ್ನು ಇನ್ನು ಕೆಲವರು ನಿಬಂಧ ಎಂಬುದಾಗಿಯೂ ಕರೆಯುತ್ತಾರೆ. ಪ್ರಸಂಗ ಎಂಬುದಾಗಿ ಕರೆಯಬಹುದೆ ಎಂಬುದನ್ನು ವಿಚಾರಿಸಬಹುದಾಗಿದೆ. ಹೆಸರು ಏನಾದರೂ ಇರಲಿ. ಅಂತೂ, ಕನ್ನಡ ನಾಡಿನಲ್ಲಿ ಪ್ರಬಂಧಗಳು ಬೆಳೆಯುತ್ತಿರುವ ಈ ಕಾಲದಲ್ಲಿ ಪ್ರಬಂಧ ವಿಚಾರ ವಿಮರ್ಶೆ ಅಗತ್ಯವಾಗಿ ಮಾಡಬೇಕಾಗಿದೆ.”

* * * *

ಬಳಿಕ ಶ್ರೀ|| ಕೆ. ಸಂಪದ್ಗಿರಿರಾಯರು ‘ಪ್ರಬಂಧದ ಹುಟ್ಟು ಬೆಳವಣಿಗೆ’ ಎಂಬ ವಿಷಯವಾಗಿಯೂ, ಶ್ರೀ|| ಡಿ. ವಿ. ಶೇಷಗಿರಿರಾಯರು ‘ವಿಮರ್ಶಾತ್ಮಕ ಪ್ರಬಂಧಗಳು’ ಎಂಬ ವಿಚಾರವಾಗಿಯೂ

೪೩೦ನೆಯ ಪುಟಕ್ಕೆ



ಶುಕ್ರವಾರ, ಸೆಪ್ಟೆಂಬರ್ ೬, ೧೯೪೦

## ಜಯ ಶ್ರೀ ಜಯಚಾಮರಾಜ ಒಡೆಯರ್

ಬರುವ ಭಾನುವಾರ ನಡೆಯುವ ಪಟ್ಟಾಭಿಷೇಕ ಮಹೋತ್ಸವದ ಮಹದಾನಂದದ ಶುಭ ಮುಹೂರ್ತದಲ್ಲಿ ಮೈಸೂರಿನ ಸಕಲ ಪ್ರಜೆಗಳೊಡನೆ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರ ಪರವಾಗಿಯೂ, ನಮ್ಮ ವಾಚಕರ ಪರವಾಗಿಯೂ ನಮ್ಮ ಪರವಾಗಿಯೂ ಗೌರವ ಮತ್ತು ವಿಶ್ವಾಸಗಳಿಂದ ಕೂಡಿದ ಅಭಿನಂದನೆಗಳನ್ನು ಅರ್ಪಿಸುತ್ತೇವೆ.

ತಮಸೋ ಮಾ ಜ್ಯೋತಿರ್ಗಮಯ,
ಮೃತ್ಯೋರ್ಮಾ ಅಮೃತಂ ಗಮಯ

ಎಂಬ ಋಷಿಗಳ ಪ್ರಾರ್ಥನೆಯಂತೆ, ಮೈಸೂರಿಗೆ ಕವಿದಿದ್ದ ಕತ್ತಲೆಯೂ, ಮೃತ್ಯುವಿನ ಪೆಟ್ಟಿನ ದುಗುಡವೂ ಹಿಮ್ಮೆಟ್ಟಿ, ಕಾರ್ಮೋಡಗಳು ತೆಗೆದು, ಬೆಳಕೂ ಹೊಸಜೀವದ ಉತ್ಸಾಹವೂ ಎಲ್ಲೆಲ್ಲೂ ಹಬ್ಬಿಕೊಂಡಿವೆ. ಪ್ರಜಾವರ್ಗವೂ, ಇಡಿಯ ಕನ್ನಡ ಜನತೆಯೂ, ಶ್ರೀ ಜಯಚಾಮರಾಜ ಒಡೆಯರವರ ಗುಣಶೀಲಗಳನ್ನು ತಿಳಿದು, ಅವರ ಆಳಿಕೆಯಲ್ಲಿ ದೇಶದ ಮುನ್ನಡೆ ವಿಜೃಂಭಿಸಿ ಉನ್ನತಿಗೊಳ್ಳುವುದೆಂದು ಅತ್ಯಂತ ಭರವಸೆಯುಳ್ಳದ್ದಾಗಿದೆ. ಅವರ ಸಾರ್ವಜನಿಕ ವಿದ್ಯಾಭ್ಯಾಸ, ಕುಶಾಗ್ರ ಬುದ್ಧಿ, ಪರದೇಶ ಸಂಚಾರ, ಈ ಕಾಲದ ಸಮಸ್ಯೆಗಳ ವಿಚಾರದಲ್ಲಿ ಅನುಭವ, ಸೇವೋತ್ಸಾಹ, ಆಡಳಿತ ವಿವರಗಳ ಪರಿಚಯ, ತಮ್ಮ ತಂದೆಯವರ ಮತ್ತು ದೊಡ್ಡಪ್ಪನವರ ಸದ್ಗುಣಗಳ ಸಮ್ಮೇಳನ— ಎಲ್ಲಕ್ಕೂ ಹೆಚ್ಚಾಗಿ ಕೀರ್ತಿಶೇಷರಾದ ಶ್ರೀ ಕೃಷ್ಣರಾಜ ಒಡೆಯರವರ ರಾಜ್ಯದೀಕ್ಷೆಯನ್ನು ಪೂರ್ಣ ಭಕ್ತಿಯಿಂದ ತಮ್ಮ ಹೃದಯದಲ್ಲಿ ತುಂಬಿಕೊಂಡು ಮುಂದುವರಿಸಬೇಕೆಂಬ ಹೆಬ್ಬಯಕೆಯ ಭಕ್ತಿ— ಇವೆಲ್ಲವೂ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಆಳಿಕೆಯೂ ಹಿಂದಿನ ಆಳಿಕೆಗಿಂತಲೂ ಹೆಚ್ಚಾಗಿ ತೇಜಸ್ವಿಯಾಗುವುದೆಂಬ ಹಾರೈಕೆಯನ್ನು ಸರ್ವರಲ್ಲೂ ಬಿತ್ತಿರುತ್ತದೆ.

ತಮ್ಮ ತಂದೆಯವರು ಮತ್ತು ಹಿರಿಯ ತಂದೆಯವರಂತೆಯೇ, ತಾವೂ ಪರಿಷತ್ತಿಗೆ ಪೋಷಕರೂ ಅಧ್ಯಕ್ಷರೂ ಆಗಿ ಮಹಾಸ್ವಾಮಿಯವರು ಆಗಲೇ ವಸಂತೋತ್ಸವ, ಬೆಳ್ಳಿ ಹಬ್ಬಗಳನ್ನು ಅಲಂಕರಿಸಿ ಉತ್ತೇಜನ ಕೊಟ್ಟಿದ್ದಾರೆ. “ನಾವೆಲ್ಲ ಒಬ್ಬಳೆ ಕನ್ನಡ ತಾಯಿಯ ಮಕ್ಕಳು ಎಂಬುದನ್ನು ಎಷ್ಟು ಬೇಗ ಮನಗಂಡು ಅದಕ್ಕನುಸಾರವಾಗಿ ವರ್ತಿಸಿದರೆ ಅಷ್ಟು ಅನುಕೂಲ” ಎಂದು ಉಪದೇಶಮಾಡಿ ತಮ್ಮ ಹೃದಯವೆಲ್ಲಿದೆ ಎಂಬುದನ್ನು ಕನ್ನಡಿಗರಿಗೆ ಸ್ಪಷ್ಟಪಡಿಸಿದ್ದಾರೆ. ಅವರ ಕೃಪಾಪೋಷಣೆಯಿಂದ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಏಳಿಗೆ ಪರಮಾವಧಿಯನ್ನು ಮುಟ್ಟುವುದು; ಕನ್ನಡಿಗರು ಈ ಏಳಿಗೆಗಾಗಿ ಅಣ್ಣತಮ್ಮಂದಿರಂತೆ ಒಂದುಗೂಡುವರು; ಸ್ವತಂತ್ರ ಸಂಯುಕ್ತ ಭಾರತದಲ್ಲಿ ಕರ್ನಾಟಕ ಜನತೆ ದೊಡ್ಡ ಪಾತ್ರವನ್ನು ವಹಿಸುವುದು ಎಂಬುದಾಗಿ ನಾವು ನಂಬಬಹುದಾಗಿದೆ.

**ಸಿರಿಗನ್ನಡಂಗೆಲ್ಗೆ !**
**ಕನ್ನಡ ತಾಯ್ ಬಾಳ್ಗೆ !**
**ದೇವರು ದೊರೆಗಳನ್ನು ಕಾಪಾಡಲಿ !**

---

## ಆಳುವ ಮಹಾಸ್ವಾಮಿಯವರು

ಜಗತ್ತಿನ ಇತಿಹಾಸವನ್ನು ಉದ್ದಕ್ಕೂ ಕಣ್ಣಿಟ್ಟು ನೋಡುತ್ತ ಬಂದರೆ ಅಲ್ಲಲ್ಲಿ ಮಹಾಪುರುಷರ ಜೀವನಗಳು ಕಂಗೊಳಿಸುತ್ತವೆ. ಕಲಾವಿದನ ಕಣ್ಣಿಗೆ ಅವು ಸೊಬಗುಪಡೆದ ಚಿತ್ರದಂತೆ, ರಸವಿಡಿದ ಕಾವ್ಯದಂತೆ ಕಾಣುತ್ತವೆ. ಕಲೆ ತುಂಬಿದ ಚಿತ್ರಕ್ಕೆ ಅಥವಾ ಕಾವ್ಯಕ್ಕೆ ಒಪ್ಪುವ ಹಿನ್ನೆಲೆಯ ಆವಶ್ಯಕತೆಯುಂಟು. ಇದು ಮಿತಿಮೀರಿದ ಬಣ್ಣದಿಂದ ಕೂಡಿದ್ದರೆ ಪ್ರಧಾನ ವಸ್ತುವಿನ ಸೊಬಗು ಹದಗೆಡುತ್ತದೆ. ಆದಕಾರಣ ಹಿನ್ನೆಲೆ ಹಿತವಾಗಿ ಮಿತವಾಗಿ ಮೆರೆಯಬೇಕು. ನೆಳಲು—ಬೆಳಕಿನಿಂದ ಕೂಡಿರಬೇಕು. ಅಂದರೆ ನೆಳಲಿನ ಪಕ್ಕದಲ್ಲಿ ಬೆಳಕಲ್ಲ; ನೆಳಲಿನ ಮುಂದೆ ಬೆಳಕು; ಬೆಳಕಿನ ನಡುವೆ ರಸಗಟ್ಟಿಯಂತೆ ಸುಳಿಯುವುದೇ ಒಳ್ಳೆಯ ಚಿತ್ರ ಅಥವಾ ಕಾವ್ಯ. ಆಳುವ ಮಹಾಸ್ವಾಮಿಯವರ ಜೀವನವೂ ಇಂಥ ಕಲಾಸೃಷ್ಟಿಯಂತೆ ಮೂಡಿ ಮಿನುಗುತ್ತಿದೆ.

ಈಗ್ಗೆ ಸುಮಾರು ಇಪ್ಪತ್ತಾರು ವರ್ಷಗಳ ಹಿಂದೆ ಯೂರೋಪಿನಲ್ಲಿ ತಲೆಯೆತ್ತಿದ್ದ ಘೋರ ಸಂಗ್ರಾಮ ಮುಗಿದು, ಕತ್ತಲಿನ ಮುಂದಿನ ನಸುಬೆಳಕಿನಂತೆ ಶಾಂತಿ ಸುಳಿದು ಮೆರೆಯುತ್ತಿದ್ದಾಗ, ಬ್ರಿಟಿಷರಿಗೆ ವಿಜಯವಾಗಿ ಎಲ್ಲೆಡೆಗಳಲ್ಲಿಯೂ ಜಯಧ್ವನಿ ಮೈವೆತ್ತು ಲಲಿತ ಲಾಸ್ಯ ಮಾಡುತ್ತಿದ್ದಾಗ, ಆಳುವ ಮಹಾಸ್ವಾಮಿಯವರು ಮೈಸೂರು ಅರಮನೆಯಲ್ಲಿ ೧೯೧೯ನೆಯ ಇಸವಿಯ ಜುಲೈ ೧೮ನೆಯ ದಿನ ಸಂಜೆ ಜನ್ಮ ತಾಳಿದರು; ಮೈಸೂರು ರಾಜವಂಶಕ್ಕೆ ಎಳಗುಡಿಯಾದರು. ಆಗ ನಮ್ಮ ನಾಡಿನಲ್ಲಿ ಹರ್ಷದ ಹೊನಲು ಉಕ್ಕಿ ಹರಿಯಿತು. ಮೈಸೂರು ಪ್ರಜೆ ಸಂತಸದ ಸುಗ್ಗಿಯನ್ನು ಸವಿದು ತಣಿಯಿತು. ದೇಶದ ಮುಖ್ಯ ಮುಖ್ಯ ಸ್ಥಳಗಳಲ್ಲಿ ಮನೆ ಮನೆಗೂ ಸಕ್ಕರೆ ಬೀರಿದರು. ಶಾಲೆಯ ಮಕ್ಕಳಿಗೆ ಸಿಹಿ ತಿಂಡಿ ಹಂಚಿದರು.

ಇನ್ನು ಹುಟ್ಟಿದ ಹಸುಳೆಗೆ ಹೆಸರಿಡುವ ಸಂಭ್ರಮ ಅರಮನೆಯಲ್ಲಿ ಎಲ್ಲೆ ಮೀರಿತು. ಪ್ರಪಂಚದ ಎಲ್ಲೆಡೆಗಳಲ್ಲಿಯೂ ವಿಜಯೋತ್ಸವ ಬೆಳೆಯುತ್ತಿದ್ದಾಗ ಜನ್ಮತಾಳಿದ್ದರಿಂದ ಮಗುವಿಗೆ ಒಪ್ಪಾದ ಹೆಸರಿಡಬೇಕೆಂದು ಯೋಚಿಸಿ ಶ್ರೀ ಜಯಚಾಮರಾಜೇಂದ್ರ ಒಡೆಯರವರೆಂದು ನಾಮಕರಣ ಮಾಡಲಾಯಿತು.

ಶ್ರೀ ಜಯಚಾಮರಾಜ ಒಡೆಯರವರು ಮುದ್ದಿನ ಮುದ್ದೆಯಂತೆ ಎತ್ತಿದವರ ಕೈಗೆ ಚೆಲುವಿನ ಹಸುಳೆಯಾಗಿ, ನೋಡಿದವರ ಕಣ್ಣಿಗೆ ಹಬ್ಬವಾಗಿ ತಮ್ಮ ಶೈಶವವನ್ನು ಕಳೆಯುತ್ತ ಬಂದರು. ಇವರ ನಸುನಗೆ ತಾಯಿ ತಂದೆಗಳ, ರಾಜ ಪರಿವಾರದವರ ಮನಸ್ಸುಗಳನ್ನು ಸೂರೆಗೊಂಡಿತು. ಇವರ ದೊಡ್ಡಪ್ಪನವರಾದ ಆಳಿದ ಮಹಾಸ್ವಾಮಿಯವರು ಇವರನ್ನು ಎಡೆಬಿಡದೆ ಎತ್ತಿಕೊಂಡು ಮುದ್ದಾಡುತ್ತಿದ್ದರು.

ಶೈಶವ ಮೀರಿ ವಿದ್ಯೆ ಕಲಿಯುವ ವಯಸ್ಸು ಒದಗಿದಾಗ ಶ್ರೀ ಜಯಚಾಮರಾಜ ಒಡೆಯರವರಿಗೆ ಅರಮನೆಯಲ್ಲಿಯೇ ರಾಜವಿದ್ಯಾಶಾಲೆಯೊಂದನ್ನು ತೆರೆದು ಓರಗೆಯ ಮಕ್ಕಳೊಡನೆ ವಿದ್ಯಾಭ್ಯಾಸ ಮಾಡಿಸಲಾಯಿತು. ರಾಜ ಕುಮಾರರಿಗೆ ಮಿಸ್ಟರ್ ಜೆ. ಬಿ. ಟರ್ನರ್ ಅವರು ವಿದ್ಯಾಗುರುಗಳಾದರು; ವಿಶೇಷ ರೀತಿಯ ಶಿಕ್ಷಣ ಕೊಡಲು ಮೊದಲು ಮಾಡಿದರು.

ಒಡೆಯರವರು ತಮ್ಮ ಓರಗೆಯವರೊಡನೆ ಕಲಿತು ಆಟಪಾಠ ಕಲಿತು ತಮ್ಮ ಗುರುಗಳ ಮನಮೆಚ್ಚಿಸಿದರು. ಕಾಲ ಕ್ರಮದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಆಗ,

## ಕನ್ನಡ ಸಾಹಿತ್ಯ ಪರಿಷತ್ತು
(ಮೈಸೂರು ಪ್ರಾಂತ ಸಮಿತಿ)

### ಅಭಿನಯ, ಆಶುಭಾಷಣ ಮತ್ತು ಪ್ರಬಂಧ ರಚನಾ ಸ್ಪರ್ಧೆಗಳು

೧. ಮೇಲ್ಕಂಡ ಸ್ಪರ್ಧೆಗಳಿಗೆ ಪ್ರವೇಶಪತ್ರಿಕೆಗಳನ್ನು ಕಳಿಸುವ ತಾರೀಖನ್ನು ಸೆಪ್ಟೆಂಬರ್ ೩೦ನೆಯ ತಾರೀಖಿನವರೆಗೆ **ಮುಂದುವರಿಸಿದೆ.**

೨. ಸ್ಪರ್ಧೆಗಳು ಅಕ್ಟೋಬರ್ ೩ನೆಯ ವಾರದಲ್ಲಿ ನಡೆಯುತ್ತವೆ.

೩. ಅಭಿನಯ ಸ್ಪರ್ಧೆಗೆ ಕೆಳಗೆ ಕಂಡ ವಿಷಯಗಳನ್ನು ಆರಿಸಲಾಗಿದೆ. ಸ್ಪರ್ಧಿಗಳು ಯಾವುದಾದರೂ ಒಂದನ್ನು ಆರಿಸಿಕೊಳ್ಳಬಹುದು. ಅಭಿನಯದ ವಿಷಯಗಳು ಸಂಭಾಷಣೆ ರೂಪದಲ್ಲಿರುತ್ತವೆ. ಆದರೆ ೨ಕ್ಕಿಂತ ಹೆಚ್ಚಾಗಿ ಪಾತ್ರಗಳು ಬರುವುದಿಲ್ಲ. ಯಾವ ಭಾಗವನ್ನಾರಿಸಿದರೂ, ಒಬ್ಬನೇ ಅಭಿನಯಿಸಲು ಸಾಧ್ಯವಾಗಿರಬೇಕು ಎಂಬುದು ಸಮಿತಿಯ ಉದ್ದೇಶ. ಇಬ್ಬರು ಸೇರಿ ಸ್ಪರ್ಧಿಸಲೂ ಅವಕಾಶವುಂಟು:

(೧) **ಅಶ್ವತ್ಥಾಮನ್ :** ('ಶ್ರೀ') ಸಾಲುಗಳು ೬೩೮ರಿಂದ ೬೭೪ರ ವರೆಗೆ.

(೨) **ಅಂತಿಗೊನೆ :** (ಶ್ರೀ|| ಕೆ. ವಿ. ರಾಘವಾಚಾರ್) ಸಾಲುಗಳು ೧,೧೧೧ರಿಂದ ೧,೧೬೬ರ ವರೆಗೆ.

(೩) **ಯಮನ ಸೋಲು :** (ಶ್ರೀ|| ಕೆ. ವಿ. ಪುಟ್ಟಪ್ಪ) ದೃಶ್ಯ ೫. ೧೦೦ ಸಾಲುಗಳನ್ನು ಮಾತ್ರ ಆರಿಸಿಕೊಳ್ಳತಕ್ಕದ್ದು.

(೪) **ಯಮನ ಸೋಲು :** (ಶ್ರೀ|| ಆರ್. ವಿ. ಜಾಗಿರದಾರ್—ಶ್ರೀರಂಗ) ಪುಟ ೧ರಿಂದ ೭. ರೋಗಿ–ಯಮ ಇವರ ಸಂಭಾಷಣೆ.

(೫) **ನಾಗರಿಕ :** (ಶ್ರೀ|| ಎಂ. ಅರ್. ಶ್ರೀನಿವಾಸಮೂರ್ತಿ) ದೃಶ್ಯ ೪, ಯಮ–ನಾಗರಿಕರ ಸಂಭಾಷಣೆ ಪೂರ್ತಿ.

(೬) **ವೈದ್ಯನ ಜಾಡ್ಯ :** (ಶ್ರೀ|| ಟಿ. ಪಿ. ಕೈಲಾಸಂ) ರಂಗ ೧, ಪುಟ ೧ರಿಂದ ೬, ಸುಬ್ಬಣ್ಣ–ರಂಗಣ್ಣ ಇವರ ಸಂಭಾಷಣೆ.

(೭) **ದೇವರಂಗೆ ದ್ಯಾವೀನೂ :** (ಶ್ರೀ|| ಬಿ. ಎಸ್. ವೆಂಕಟರಾಮ್ ಅವರ "ಮಕ್ಕಳಿವರೇನಮ್ಮ" ಎಂಬ ಗ್ರಂಥದಿಂದ) ಪುಟ ೬೧, **ಕೆಂಚ:** ಸುಂಸುಂಕೆ ನನ್ಮೇಗುರು ದ್ಯಾಕಾರಾ ಬಿದ್ದೀಯಾ? ಎಂಬ ಮಾತುಗಳಿಂದ ಆರಂಭಿಸಿ ಮುಂದಕ್ಕೆ ಪೂರ್ತಿ.

(೮) **ಸೊಹ್ರಾಬ್ ರುಸ್ತುಂ :** (ವಿ. ಸೀ.) ದೃಶ್ಯ ೮, ಪುಟ ೪೬ರಿಂದ ಕೊನೆಯವರೆಗೆ.

(೯) **ಭೀಷ್ಮ :** (ಶ್ರೀ|| ದ. ಕೃ. ಭಾರದ್ವಾಜರು) ಅಂಕ ೭, ದೃಶ್ಯ ೨, ಪುಟ ೫೧ರಿಂದ ೫೫, ಅಂಬೆ–ಭೀಷ್ಮರ ಸಂವಾದ.

(೧೦) **ಕಟ್ಟೆ ಪುರಾಣ :** (ಶ್ರೀ|| ಕೋ. ಶಿ. ಕಾರಂತ್‌ರವರ "ಏಕಾಂಕ ನಾಟಕಗಳು" ಎಂಬ ಗ್ರಂಥದಿಂದ) ಮೊದಲಿನಿಂದ ೬ ಪುಟಗಳು. "ರಾಮಣ್ಣಯ್ಯ ನಿನ್ನದು ಕುತಂತ್ರದ ಮಾತು" ವರೆಗೆ.

(೧೧) **ಬುದ್ಧಿವಂತಿಕೆ :** (ಶ್ರೀ|| ಕೆ. ರಾಜಾರಾವ್) ಪುಟ ೯ರಿಂದ ೧೫ರ ವರೆಗೆ, ಲೀಲಾ–ಕುಸುಮ ಇವರ ಸಂಭಾಷಣೆ.

(೧೨) **ಸ್ವರ್ಣಮೂರ್ತಿ :** (ಶ್ರೀ|| ಅ. ನ. ಕೃಷ್ಣರಾಯರ "ಎರಡು ನಾಟಕಗಳು" ಎಂಬ ಗ್ರಂಥದಿಂದ) ದೃಶ್ಯ ೨, ಪುಟ ೧೩ರಿಂದ ೧೮, ಸೀತೆ–ಊರ್ಮಿಳೆ ಇವರ ಸಂಭಾಷಣೆ.

ಸ್ಪರ್ಧಿಗಳು ತಮಗೆ ಬೇಕಾದ ಭಾಗಗಳನ್ನು ಪರಿಷತ್ತಿನ ಕಚೇರಿಯಲ್ಲಿ ನಕಲುಮಾಡಿಕೊಳ್ಳಬಹುದು.

## ಪ್ರವೇಶ ಪತ್ರಿಕೆ

**ಸೂಚನೆ:** ಪ್ರವೇಶಪತ್ರಿಕೆಗಳು ಈ ಕೆಳಗೆ ಕಾಣಿಸಿರುವ ನಮೂನೆಯಲ್ಲಿರತಕ್ಕದ್ದು. ಸ್ಪರ್ಧೆಗಳಿಗೆ ಸೇರಲಿಚ್ಛಿಸುವವರು **ಪ್ರತಿಯೊಂದು ಸ್ಪರ್ಧೆಗೂ** ೪ ಆಣೆ ಪ್ರವೇಶ ಧನಸಹಿತ ತಮ್ಮ ಪ್ರವೇಶ ಪತ್ರಿಕೆಗಳನ್ನು ೧೯೪೦ನೆಯ ಸೆಪ್ಟೆಂಬರ್ ೩೦ನೇ ತಾರೀಖಿನೊಳಗಾಗಿ ಪರಿಷತ್ತಿಗೆ ಕಳಿಸತಕ್ಕದ್ದು.

---

ಸ್ಪರ್ಧೆಯ ಹೆಸರು ....................................................

(ಅಭಿನಯ ಸ್ಪರ್ಧೆಯಲ್ಲಿ) ಆರಿಸಿಕೊಂಡಿರುವ ವಿಷಯ ಭಾಗ ....................................................

ಸ್ಪರ್ಧಿಯ ಹೆಸರು ....................................................

ಶಾಲೆ ಅಥವಾ ಕಾಲೇಜಿನ ಹೆಸರು .......... ......................

ವಯಸ್ಸು....................................................

ಮನೆಯ ವಿಳಾಸ ....................................................

---

## ಕನ್ನಡದ ಪ್ರಾಚೀನತೆ

ಕಳೆದ ೩೧ನೆಯ ತಾರೀಖು ಶ್ರೀ|| ಎಚ್. ಶೇಷಯ್ಯಂಗಾರ್ಯರು ಮದರಾಸು ಪ್ರೆಸಿಡೆನ್ಸಿ ಕಾಲೇಜಿನ 'ಕನ್ನಡ ಸಂಘ'ದ ಪ್ರಾರಂಭ ಭಾಷಣವನ್ನು ಮಾಡುತ್ತ ಕನ್ನಡದ ಹಿರಿಮೆ ಪ್ರಾಚೀನತೆಗಳನ್ನು ವಿವರಿಸಿದರು: "ಕನ್ನಡ ಆರನೆಯ ಶತಮಾನದ ಹೊತ್ತಿಗೇನೇ ಪುಷ್ಟವಾಗಿ ಬೆಳೆದು ತನ್ನದೇ ಆದ ವ್ಯಾಕರಣ ಶಾಸ್ತ್ರ ಮತ್ತು ಸಾಹಿತ್ಯಗಳಿಂದ ಬೆಳಗುತ್ತಿತ್ತೆಂಬುದು ಶಾಸನಗಳಿಂದ ಸಿದ್ಧವಾಗಿದೆ. ಹರಪ್ಪ ಮತ್ತು ಮೆಹೆಂಜೊದಾರೋ ಅಗೆತಗಳಿಂದ ಈ ವಿಷಯದ ಮೇಲೆ ಹೆಚ್ಚಿನ ಬೆಳಕು ಬಿದ್ದು, ಕ್ರಿಸ್ತಯುಗಕ್ಕೆ ಹಲವು ಶತಮಾನಗಳಿಗೆ ಹಿಂದೆಯೇ ದ್ರಾವಿಡ ಸಂಸ್ಕೃತಿ ಭಾರತದ ಉತ್ತರ ಪ್ರದೇಶಗಳಲ್ಲಿ ಹರಡಿತ್ತೆಂದು ಗೊತ್ತಾಗಿದೆ. ದ್ರಾವಿಡ ಭಾಷೆಗಳು ಸಂಸ್ಕೃತ ಅಥವಾ ಪ್ರಾಕೃತ ಭಾಷೆಗಳಿಗೆ ಸಂಬಂಧಪಡದ ಒಂದು ಸಮಾನವಾದ ಮೂಲ ಭಾಷೆಯಿಂದ ಹುಟ್ಟಿದುವೆಂದು ಹೇಳಲು ಸಮರ್ಥನೀಯವಾದ ಕಾರಣಗಳು ಸಿಕ್ಕಿವೆ. ದ್ರಾವಿಡ ಭಾಷೆಗಳಲ್ಲಿ ಕನ್ನಡ ಒಂದೆಂದು ದೃಢಪಟ್ಟದೆ. ಮಾನವ ಚಟುವಟಿಕೆಗಳ ಎಲ್ಲ ಮುಖಗಳನ್ನೂ ಒಳಗೊಂಡು ಪ್ರತಿಬಿಂಬಿಸುವ ಗುಣ ಕನ್ನಡ ಭಾಷೆಗೆ ಶತಮಾನಗಳಷ್ಟು ಹಿಂದೆಯೇ ಇತ್ತೆಂಬುದಕ್ಕೆ ಸಾಕ್ಷ್ಯಗಳು ಸಿಕ್ಕಿವೆ."

ಕ್ಯಾಪ್ಟನ್ ಶ್ರೀನಿವಾಸಮೂರ್ತಿಗಳು ತಮ್ಮ ಅಧ್ಯಕ್ಷಭಾಷಣದಲ್ಲಿ ಹೀಗೆ ಹೇಳಿದರು:

"ಹರಪ್ಪ ಮತ್ತು ಮೆಹೆಂಜೊದಾರೊ ಅಗೆತಗಳ ಗುಟ್ಟು ಪೂರ್ತಿಯಾಗಿ ಹೊರಬಿದ್ದಾಗ, ಈಗಾಗಲೇ ಸಿದ್ಧಾಂತವೆನ್ನುವ ಮಟ್ಟಿಗೆ ಆಗಿರುವ ಐತಿಹಾಸಿಕ ಮತಗಳು ತಲಕೆಳಗಾಗಬಹುದು. ಹಳಗನ್ನಡ ಮತ್ತು ತಮಿಳು ಲಿಪಿಗಳನ್ನು ಬಲ್ಲವರು ಆ ಸ್ಥಳಗಳಲ್ಲಿನ ಶಾಸನಗಳ ಮತ್ತು ನಾಣ್ಯಗಳ ವಿಚಾರಗಳನ್ನು ಅರಿಯಲು ಸಾಧ್ಯವೆಂದು ಹೇಳಲಾಗಿದೆ. ನಾಗರಿಕತೆ ಉತ್ತರದಿಂದ ದಕ್ಷಿಣಕ್ಕೆ ಹರಿದುಬಂತೆಂದು ಇದುವರೆಗೆ ಇದ್ದ ನಂಬಿಕೆ ಈಗ ಸಡಿಲವಾಗಿ, ದಕ್ಷಿಣಾಪಥದಿಂದ ಹೊರಟ ನಾಗರಿಕತೆಯ ಹೊನಲು ಉತ್ತರ ಭಾರತದಲ್ಲಿ ಹರಡಿ, ಅಲ್ಲಿಂದ ವಾಯವ್ಯ ಗಡಿ ಪ್ರಾಂತಗಳ ಮೂಲಕ ಮುಂದಕ್ಕೆ ಸಾಗಿ ಭೂಮಧ್ಯ ಸಮುದ್ರದ ಕರೆಗಳನ್ನು ಮುಟ್ಟಿದ ಅಂಶಗಳು ಈಗೀಗ ಬೆಳಕಿಗೆ ಬರುತ್ತಿವೆ. ಭೂಗರ್ಭ ಶಾಸ್ತ್ರದ ದೃಷ್ಟಿಯಿಂದ ಕೂಡ ದಕ್ಷಿಣಾಪಥ ಅತ್ಯಂತ ಪ್ರಾಚೀನವಾದ ನೆಲ; ಹಿಮಾಲಯ ಪರ್ವತ ಎಷ್ಟೋ ಸಾವಿರ ವರ್ಷಗಳಾದ ಮೇಲೆ ಸಾಗರದಿಂದ ಮೇಲಕ್ಕೆ ಎದ್ದಿತು. ಮೇಲಾಗಿ ದ್ರಾವಿಡ ವಾಸ್ತುಶಿಲ್ಪ ಭಾರತದಲ್ಲೆಲ್ಲ ಅತ್ಯಂತ ಸುಂದರವೆಂದು ಹೆಸರಾಗಿರುವುದಕ್ಕೆ ಮೈಸೂರು ಮತ್ತು ತಮಿಳು ನಾಡಿನಲ್ಲಿನ ದೇವಾಲಯಗಳೇ ಸಾಕ್ಷಿ. ದ್ರಾವಿಡ ಭಾಷೆಗಳ ಪ್ರಾಚೀನತೆಯೂ ಹಿರಿಮೆಯೂ ಪ್ರತಿಪಾದಿತವಾಗುತ್ತಿರುವ ಇಂದು, ಕನ್ನಡ ಭಾಷಾ ಪ್ರಾಚೀನತೆ ಮಹತ್ವಗಳೂ ಅಂತೆಯೇ ಪ್ರತಿಪಾದಿತವಾಗುವುದರಲ್ಲಿ ಸಂದೇಹವಿಲ್ಲ."

## ಕೆಲವು ಚಾಟುಗಳು

(ಸಂಸ್ಕೃತದಿಂದ)

೧

'ಲೋ ಗಣಪ!' 'ಏನಮ್ಮ?' 'ಏಕಳುವೆ?' 'ಕಿವಿಯೆಳೆವನೀಷಣ್ಮುಖ.'
'ಸ್ಕಂದ! ಏಕೀ ಚೇಷ್ಟೆ?' 'ಅವನೆ ಮೊದಲೆನ್ನ ಕಂಗಳನೆಣಿಸಿದ.'
'ಉಚಿತವಲ್ಲೀ ನಡತೆ ಗಜಮುಖನೆ.' 'ಮೊದಲೆನ್ನ ಮೂಗನಳೆದ.'
ಇದಕೇನು ತೋಚದೆಯೆ ನಸುನಕ್ಕ ಶಿವೆಯೆಮ್ಮ ಕಾಪಾಡಲಿ.

೨

ನಾಲ್ಕರ ಮಗ ಐದಕೆ ಹೋಗಿ
ಬಳಿಕೊಂದರ ಮಗಳನು ಕಂಡು
ಅಲ್ಲಾಗಲೆ ಮೂರನು ಮಡಗಿ
ಎರಡನೆಯದ ನೆಗೆದನು ಮತ್ತೆ.*

೩

ಕತ್ತರಿಸಿದುದಕಾನು
ದುಃಖಿಸೆನು, ಸುಟ್ಟುದಕೆ,
ತಿಕ್ಕಿದುದಕೆ;
ಕಿರಿದುಕ್ಕವೆನಗಿದುವೆ—
ಗುಲಗಂಜಿಯೊಡನೆನ್ನ
ತೂಗಿದುದಕೆ.

೪

'ನೀಮಾರೊ?' 'ದ್ರುಹಿಣರಥಗತಿಗೆ ನಾವ್ ಸಾಧಕರ್,
ಸತ್ಯಲೋಕಾವಾಸರಮರನದಿಯಲೆಗಳೊಳ್
ನಾವ್ ಕೇಳಿಯಾಡುವ ಮರಾಳರ್.
ತಾಮಾರೊ?' 'ಧರ್ಮಪತ್ನಿಯ ರಾಸಭಿಯ ಕೂಡಿ
ರಜಕಮುನಿಯಾಶ್ರಮದೊಳಾಂ ಕರ್ಮನಿಷ್ಠನೆಂ,
ತೀರ್ಥಯಾತ್ರಾಪಹೃತತಮಸನೆಂ, ಪೂತಾಂಗ
ನಾನ್ ರಾಸಭಾಚಾರ್ಯವರ್ಯನ್.'

—ಜಿ. ಪಿ. ರಾಜರತ್ನಂ.

---

* ಇದು ಸಂಕ್ಷಿಪ್ತ ಸುಂದರಕಾಂಡ. ೧: ನೆಲ, ೨: ನೀರು, ೩: ಬೆಂಕಿ, ೪: ಗಾಳಿ, ೫: ಆಕಾಶ.

---

## ಪರಿಷತ್ತಿನ ಸುದ್ದಿ

ಡಿಸೆಂಬರು ತಿಂಗಳಲ್ಲಿ ನಡೆಯಲಿರುವ ೨೫ನೆಯ ಸಾಹಿತ್ಯ ಸಮ್ಮೇಳನದ ಏರ್ಪಾಡಿಗೋಸ್ಕರ ಧಾರವಾಡದ ಮಹಾಜನರು ೧ನೆಯ ತಾರೀಖು ಭಾನುವಾರ ಕರ್ನಾಟಕ ವಿದ್ಯಾವರ್ಧಕ ಸಂಘದ ಕಟ್ಟಡದಲ್ಲಿ ಸಭೆ ಸೇರಿ ಸ್ವಾಗತ ಮಂಡಲಿಯೊಂದನ್ನು ಏರ್ಪಡಿಸಿದ್ದಾರೆ. ಸದ್ಯಕ್ಕೆ ೩೨ ಜನರನ್ನೊಳಗೊಂಡ ಈ ಮಂಡಲಿಗೆ ಶ್ರೀ|| ಎಸ್. ಎಸ್. ಬಸವನಾಳ, ಎಂ.ಎ. ಅವರು ಅಧ್ಯಕ್ಷರಾಗಿಯೂ, ಡಾ|| ಕಾಂತಾರಾವ್ ಕಮಲಾಪೂರ ಅವರು, ಶ್ರೀ|| ಬೆಟಗೇರಿ ಕೃಷ್ಣಶರ್ಮ ಅವರುಗಳು ಕಾರ್ಯದರ್ಶಿಗಳಾಗಿಯೂ, ಶ್ರೀ|| ಶಿವಲಿಂಗ ಶಾಸ್ತ್ರಿಗಳು ಕೋಶಾಧಿಕಾರಿಗಳಾಗಿಯೂ ನೇಮಿಸಲ್ಪಟ್ಟಿರುವರು.

ಸ್ವಾಗತ ಸಮಿತಿಯ ಸದಸ್ಯರಲ್ಲಿ ಎರಡು ತರಗತಿಗಳನ್ನು ಮಾಡಲಾಗಿದೆ. ಮೊದಲನೆಯ ತರಗತಿ ಸದಸ್ಯತ್ವ ಚಂದಾ ರೂ. ೧೦. ಎರಡನೆಯ ತರಗತಿ ಸದಸ್ಯತ್ವ ಚಂದಾ ರೂ. ೫—೦—೦.

---

## ಕನ್ನಡ ಸುದ್ದಿ

**ಕೋಲಾರ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಆಶ್ರಯದಲ್ಲಿ ೨೯-೮-೪೦ನೆಯ ಗುರುವಾರ ಶ್ರೀ|| ಟಿ. ಎಸ್. ಚನ್ನಪ್ಪನವರು 'ರಾಜಶೇಖರ ವಿಳಾಸದ ಷಡಕ್ಷರಿ' ಎಂಬ ವಿಷಯವನ್ನು ಕುರಿತು ಭಾಷಣಮಾಡಿದರು. ಶ್ರೀ|| ಹನುಮಂತರಾಯರು ಅಧ್ಯಕ್ಷತೆ ವಹಿಸಿದ್ದರು. ಉಪನ್ಯಾಸಕರು ತಮ್ಮ ಸ್ವಾರಸ್ಯವಾದ ಭಾಷಣದಲ್ಲಿ ಷಡಕ್ಷರಿ ವೀರಶೈವ ಮತದವನೆಂದೂ, ದೈವದತ್ತವಾದ ಕವಿತಾಶಕ್ತಿಯನ್ನು ಪಡೆದಿದ್ದನೆಂದೂ, ಹೇಳಿ ಕಾವ್ಯದಿಂದ ಹಲವು ರಸವತ್ತಾದ, ಭಾವಪೂರ್ಣವಾದ ಭಾಗಗಳನ್ನು ಓದಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ "ಷಡಕ್ಷರಿ ಮಹಾ ಶ್ರೇಷ್ಠ ಕವಿ. ಕನ್ನಡ ಕವಿತೆಯಲ್ಲಿ ಸಂಸ್ಕೃತ ಪದಗಳನ್ನು ಇಷ್ಟೊಂದು ವಿರಳವಾಗಿ ಉಪಯೋಗಿಸಿರುವವರಲ್ಲಿ ಈತನೇ ಮೊದಲನೆಯವನು" ಎಂದು ಹೇಳಿದರು. ಶ್ರೀ|| ವೆಂಕಟಕೃಷ್ಣಪ್ಪನವರು ಧನ್ಯವಾದಗಳನ್ನರ್ಪಿಸಿದ ಬಳಿಕ ಸಭೆ ಮುಗಿಯಿತು.

**ಮುಂಬಯಿ: ಕನ್ನಡ ಸಂಘದ ವಾರ್ಷಿಕೋತ್ಸವ**

ಮೇಲ್ಕಂಡ ಸಂಘದ ವಾರ್ಷಿಕೋತ್ಸವ ಕಳೆದ ೧೮ನೆಯ ತಾರೀಖು ಬಹಳ ವಿಜೃಂಭಣೆಯಿಂದ ನಡೆಯಿತು. ಸ್ಥಳೀಯ ಎಕ್ಸಿಕ್ಯುಟಿವ್ ಇಂಜಿನಿಯರಾದ ಶ್ರೀ|| ಎಸ್. ವಿ. ಶ್ರೀನಿವಾಸಮೂರ್ತಿಯವರು ಅಧ್ಯಕ್ಷತೆ ವಹಿಸಿದ್ದರು. ಆ ಕಾಲಕ್ಕೆ ಮುಂಬಯಿಯಲ್ಲಿದ್ದ ಮೈಸೂರು ಕಾಂಗ್ರೆಸ್ಸಿನ ನಾಯಕರಾದ ಶ್ರೀ|| ಕೆ. ಟಿ. ಭಾಷ್ಯಂ ಮತ್ತು ಶ್ರೀ|| ಕೆ. ಚಂಗಲರಾಯರೆಡ್ಡಿಯವರು ಉತ್ಸವದಲ್ಲಿ ಭಾಗವಹಿಸಿ ಕನ್ನಡ ಸಂಘದ ಕಾರ್ಯಕಲಾಪಗಳನ್ನು ಮೆಚ್ಚಿದರು. ಶ್ರೀಗಳಾದ ಗೋಪಾಲಾಚಾರ್ಯರು, ಅ. ನ. ಕೃಷ್ಣರಾಯರು, ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು ಮುಂತಾದ ಮಹನೀಯರು ಭಾಷಣ ಮಾಡಿದರು.

**ಮುಂಬಯಿ: ಕನ್ನಡ ರಾಷ್ಟ್ರೀಯ ಶಿಕ್ಷಣ ಸಂಸ್ಥೆ**

ಮುಂಬಯಿ ಬೃಹನ್ನಗರದಲ್ಲಿರುವ ಹತ್ತಾರುಸಾವಿರ ಕನ್ನಡಿಗರ ಏಳಿಗೆಗಾಗಿ ಬಹುಮುಖವಾಗಿ ದುಡಿಯುತ್ತಿರುವ ಕನ್ನಡ ಸಂಸ್ಥೆಗಳಲ್ಲಿ ಮಾತುಂಗ ಬಡಾವಣೆಯಲ್ಲಿ ಒಂದು ವರ್ಷದಿಂದ ಸೇವೆ ಸಲ್ಲಿಸುತ್ತಿರುವ ರಾಷ್ಟ್ರೀಯ ಕನ್ನಡ ಶಿಕ್ಷಣ ಸಂಸ್ಥೆಯೂ ಒಂದು. ಕಳೆದ ೨೪ನೆಯ ತಾರೀಖು ಶ್ರೀ|| ಬಿ. ಜಿ. ಖೇರ್ ಅವರ ಅಧ್ಯಕ್ಷತೆಯಲ್ಲಿ ಈ ಸಂಸ್ಥೆಯ ವಾರ್ಷಿಕೋತ್ಸವ ನಡೆಯಿತು. ಆಗ ಪರಿಷತ್ತಿನ ಪರವಾಗಿ ಉಪಾಧ್ಯಕ್ಷರು ಶ್ರೇಯೋಕಾಂಕ್ಷೆಯ ತಂತಿಯನ್ನು ಕಳಿಸಿದ್ದರು.

ಈ ಸಂಸ್ಥೆ ಕನ್ನಡ ಮಕ್ಕಳಿಗೆ ಶಿಕ್ಷಣ ಶಾಲೆಗಳನ್ನು ನಡಸುತ್ತಿರುವುದೇ ಮುಂತಾದ ಪ್ರಯತ್ನಗಳನ್ನು ಕಂಡ ಕನ್ನಡ ಪ್ರೇಮಿಗಳಾದ, ಮುಂಬಯಿಪ್ರಾಂತದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ|| ಬಾಲಗಂಗಾಧರ ಖೇರರವರು ಸಂತೋಷವನ್ನು ವ್ಯಕ್ತಗೊಳಿಸಿ ಸಂಘಕ್ಕೆ ಕೆಲವು ಪುಸ್ತಕಗಳನ್ನು ದಾನಮಾಡಿದ್ದಾರೆ. ಸಂಘ ಈ ಪುಸ್ತಕಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿ, ಅವರ ಹೆಸರಿನಲ್ಲಿಯೇ ಒಂದು ಸರಸ್ವತಿ ಭಂಡಾರವನ್ನು ಸ್ಥಾಪಿಸಲು ನಿಶ್ಚಯಿಸಿದೆ.

ಈ ಸಂಘದ ಪ್ರಯತ್ನಗಳು ಫಲಿಸಲಿ, ಮುಂಬಯಿಯಂತಹ ಕಡೆ ಕನ್ನಡದ ಹೆಮ್ಮೆ ಬೆಳಗಲಿ ಎಂಬುದೇ ನಮ್ಮ ಹಾರೈಕೆ.

ಈ ಸಂಸ್ಥೆಯ ವಿಶೇಷ ಸಭೆ ೨೪-೮-೪೦ನೆಯ ಶನಿವಾರ ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರ ಅಧ್ಯಕ್ಷತೆಯಲ್ಲಿ ನಡೆದು ೧೯೪೦-೪೧ನೆಯ ವರ್ಷದ ಕಾರ್ಯಕರ್ತರನ್ನು ಆರಿಸಲಾಯಿತು. ದಿವಾನ್ ಬಹದ್ದೂರ್ ರಾಮಸ್ವಾಮಿಯವರ ಸಂಸ್ಥೆಯ ಅಧ್ಯಕ್ಷರು. ಶ್ರೀಗಳಾದ ವಿದ್ವಾನ್ ಎಂ. ಆರ್. ಗೋಪಾಲಾಚಾರ್ಯರು, ಆರ್. ಎ. ಜಹಗೀರದಾರರು, ಜಿ. ಎಸ್. ಕಪೂರ್, ಡಾ|| ಯು. ಎ. ರಾವ್ ಇವರುಗಳು ಉಪಾಧ್ಯಕ್ಷರುಗಳು. ಶ್ರೀ|| ಬಿ. ಟಿ. ಚಾರ್ ಅವರು ಗೌರವ ಕಾರ್ಯದರ್ಶಿಗಳು. ಶ್ರೀ|| ಎಸ್. ಆರ್. ಎಸ್. ರಾಘವನ್ ಅವರು ಕೋಶಾಧಿಕಾರಿಗಳು. ಶ್ರೀಗಳಾದ ಆರ್. ವೆಂಕಟೇಶಮೂರ್ತಿ, ಕೆ. ವಿಠಲರಾವ್, ಆರ್. ಕೆ. ಪ್ರಭು, ಕೆ. ಎನ್. ಗಾಯತೊಂಡೆ, ಬಿ. ನಾರಾಯಣಸ್ವಾಮಿ, ಡಿ. ಎಸ್. ಬಳುವಳ್ಳಿ, ಜಿ. ಕೆ. ಬೆಟಗೇರಿ, ವಿ. ಬಿ. ಪಾಟೀಲ್, ಆರ್. ಚಕ್ರವರ್ತಿ ಇವರು ಸದಸ್ಯರು.

**ಕಲಕತ್ತ: ಮೈಸೂರು ಸಂಘ**

ಈ ಸಂಘದವರು ಈ ತಿಂಗಳು ೫ನೆಯ ತಾರೀಖಿನಿಂದ ೧೫ರ ವರೆಗೂ ಗಣಪತಿ ಮಹೋತ್ಸವವನ್ನು ಆಚರಿಸುವರು. ಈ ಸಂದರ್ಭದಲ್ಲಿ ೧೩ನೆಯ ತಾರೀಖು ಕನ್ನಡ ಕಂಠಪಾಠ ಸ್ಪರ್ಧೆಯೊಂದನ್ನು ಏರ್ಪಡಿಸಿದ್ದಾರೆ.

---

## ಸಾದರ ಸ್ವೀಕಾರ

**ನೀತಿಪಾಠಗಳು:** (ಸಚಿತ್ರ) ಬರೆದವರು: ಶ್ರೀಮಾನ್ ಎಸ್. ಶ್ರೀನಿವಾಸರಾಯರು. ಪ್ರಕಾಶಕರು: ವೆಂಕಟೇಶ್ವರ ಪ್ರಕಟನಾಲಯ, ಬೆಂಗಳೂರು ಸಿಟಿ. ಕ್ರೌನ್ ಅಷ್ಟಪತ್ರ ೮+೫೬ ಪುಟಗಳು. ಬೆಲೆ ಮೂರಾಣೆ.

ಮಕ್ಕಳಿಗಾಗಿ ಬರೆದ ಪುಟ್ಟಕತೆಗಳ ಮೊದಲನೆಯ ಸಂಪುಟ ಇದು. ಶ್ರೀ|| ಎಸ್. ಶ್ರೀನಿವಾಸರಾಯರು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಹೊಸಬರಲ್ಲ. 'ಶ್ರೀನಾಥ' ಎಂಬ ಹೆಸರಿನಲ್ಲಿ ಹಲವು ಚೆಲುವಾದ ಕತೆಗಳನ್ನು ಬರೆದು ಹೆಸರು ಗಳಿಸಿದ್ದಾರೆ. ಅಲ್ಲದೆ ಮಕ್ಕಳ ಸಾಹಿತ್ಯಕ್ಕಾಗಿ ಕೂಡ ದುಡಿಯುತ್ತಿರುವರು. ಇವರ 'ನೀತಿಪಾಠಗಳ'ಲ್ಲಿನ ಪುಟ್ಟಕತೆಗಳನ್ನು ಓದಿದ ಮಕ್ಕಳು ನಲಿಯುವುದರಲ್ಲಿ ಸಂದೇಹವಿಲ್ಲ. ಮಕ್ಕಳಿಗೆ ಕತೆಗಳನ್ನು ಬರೆಯುವವರು ಮಕ್ಕಳ ಮನಸ್ಸನ್ನು ಚೆನ್ನಾಗಿ ತಿಳಿದವರಾಗಬೇಕು. ಕತೆಯಲ್ಲಿ ನೀತಿಯನ್ನು ಹಿತವಾಗಿ ಬೆರಸುವ ಕಲೆಯನ್ನು ಚೆನ್ನಾಗಿ ಸಾಧಿಸಿರಬೇಕು. ವಿಷ್ಣುಶರ್ಮ ಈಸೋಪರು ಮಕ್ಕಳ ಮನಸ್ಸನ್ನು ಚೆನ್ನಾಗಿ ತಿಳಿದಿದ್ದುದರಿಂದಲೇ ಅವರ ನೀತಿಯ ಕತೆಗಳು ಅಷ್ಟು ಲೋಕಪ್ರಿಯವಾಗಿರುವುದು. ಪ್ರಸಕ್ತ ಲೇಖಕರಾದರೂ ಅವರು ಹಿಡಿದ ಮಾರ್ಗವನ್ನೇ ಹಿಡಿದು ತಮ್ಮ ಅನುಭವವನ್ನೂ ಬಳಸಿಕೊಂಡು ಮಕ್ಕಳ ಮನಸ್ಸನ್ನು ಹರ್ಷಪಡಿಸಲೆತ್ನಿಸಿದ್ದಾರೆ. ಅವರ ಪ್ರಯತ್ನಕ್ಕೆ ಕನ್ನಡಿಗರು ಪ್ರೋತ್ಸಾಹ ಕೊಡುವರೆಂದು ನಂಬಿದ್ದೇವೆ.

**ಶಂಕರ ಸಿದ್ಧಾಂತ:**—ಬರೆದವರು: 'ಶಂಕರ ಹೃದಯ' ಅಥವಾ 'ಮೂಲಾವಿದ್ಯಾನಿರಾಸ' ಎಂಬ ಸಂಸ್ಕೃತ ಗ್ರಂಥವನ್ನೂ ಕನ್ನಡದಲ್ಲಿ ಅನೇಕ ದರ್ಶನ ಗ್ರಂಥಗಳನ್ನೂ ಬರೆದಿರುವ ಶ್ರೀ|| ವೈ. ಸುಬ್ಬರಾಯರು (ಯಲ್ಲಂಬಳಸೆ ಸುಬ್ರಹ್ಮಣ್ಯ ಶರ್ಮ). ಪ್ರಕಾಶಕರು: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ. ಕ್ರೌನ್ ಅಷ್ಟಪತ್ರ ಪುಟಗಳು ೯೭+೧೦. ಬೆಲೆ ಮರೆಹಾಳೆ—೮ ಆಣೆ; ದಪ್ಪ ರಟ್ಟು—೧೦ ಆಣೆ.

---

೧೧೭-೯೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

ಇವರ ತಂದೆ ಕೀರ್ತಿಶೇಷರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ತಮ್ಮ ಕುಮಾರರಿಗೆ ಪ್ರತ್ಯೇಕವಾದ ಶಿಕ್ಷಣ ಕೊಡಿಸುವುದಕ್ಕಿಂತ ಸಂಸ್ಥಾನದ ವಿದ್ಯಾರ್ಥಿಗಳ ಸಂಗಡಲೇ ವಿದ್ಯೆ ಕಲಿಸಲು ಮೈಸೂರಿನ ಇಂಟರ್‌ಮೀಡಿಯೆಟ್ ಕಾಲೇಜಿಗೆ ಸೇರಿಸಿದರು. ಆಳುವ ಮಹಾಸ್ವಾಮಿಯವರು ತಮಗೂ ತಮ್ಮ ಜೊತೆಯ ವಿದ್ಯಾರ್ಥಿಗಳಿಗೂ ಯಾವ ವಿಧವಾದ ವ್ಯತ್ಯಾಸವನ್ನೂ ಎಣಿಸಬಾರದೆಂದು ಅಪೇಕ್ಷಿಸಿದರು. ಇತರ ವಿದ್ಯಾರ್ಥಿಗಳಂತೆ ತಾವೂ ಓದಿ ಪರೀಕ್ಷೆ ಕೊಟ್ಟು ಉತ್ತಮ ವರ್ಗದಲ್ಲಿ ಉತ್ತೀರ್ಣರಾದರು.

ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮಹಾರಾಜಾ ಕಾಲೇಜಿಗೆ ಸೇರಿ ಚರಿತ್ರೆ, ರಾಜನೀತಿ, ಅರ್ಥ ಶಾಸ್ತ್ರ—ಇವನ್ನು ಒಲವಿನಿಂದ ಕಲಿತರು. ಆಧುನಿಕ ರಾಜಕೀಯ ಸಮಸ್ಯೆಗಳಲ್ಲಿ, ರಾಜ್ಯಭಾರ ಕ್ರಮಗಳಲ್ಲಿ ವಿಶಾಲವಾದ ಪಾಂಡಿತ್ಯ ಸಂಪಾದಿಸಿದರು. ಚರಿತ್ರೆಯೆಂದರೆ ಒಡೆಯರವರಿಗೆ ಪರಮ ಪ್ರೇಮ. ಅದನ್ನು ಓದುವಾಗಲೆಲ್ಲ ಆಧುನಿಕ ಸಮಸ್ಯೆಗಳ, ಅದರಲ್ಲಿಯೂ ಭಾರತೀಯ ರಾಜ್ಯಾಂಗ ಸಮಸ್ಯೆಗಳ ಮೇಲೆ ನಟ್ಟ ನೋಟವುಳ್ಳವರಾಗಿ ಮುಂದೆ ಸಾಗುತ್ತಿದ್ದರು. ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿ ಇವರು ಗಹನವಾದ ಅಂತರ ರಾಷ್ಟ್ರೀಯ ವಿಷಯಗಳಿಗೆ ಹೆಚ್ಚು ಗಮನ ಕೊಡುತ್ತಿದ್ದರು. ಕಾಲೇಜಿನ ಇತಿಹಾಸ ಸಂಘದ ಗೌರವಾಧ್ಯಕ್ಷರಾಗಿ ತಮ್ಮ ಅಮೂಲ್ಯವಾದ ಸೇವೆ ಸಲ್ಲಿಸಿದರು; ಸಂಘದ ಆರಂಭಭಾಷಣವನ್ನು ಅಪ್ಪಣೆ ಕೊಡಿಸುತ್ತ ಆಗ ನಡೆಯುತ್ತಿದ್ದ ಚೀಣಾ—ಜಪಾನ್ ಕದನದಿಂದ ಪರಿಣಮಿಸಬಹುದಾದ ತೊಡಕುಗಳನ್ನು ವಿಶದಪಡಿಸಿ ಸಭಿಕರಿಗೆ ತಿಳಿವುಂಟುಮಾಡಿದರು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಹುರುಪಿನಿಂದ ದುಡಿಯುತ್ತ ಈ ಕಾಲದ ಚಲನವಲನಗಳಿಗೆ ತಕ್ಕಂತೆ ಬರೆದು ಸಾಹಿತ್ಯ ಸೇವೆ ಎಸಗುತ್ತಿರುವವರ ಉತ್ಸಾಹವನ್ನೂ, ಆಶೋತ್ತರಗಳನ್ನೂ ಮೆಚ್ಚಿದರು. ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರೂ, ಮಹಾ ಪೋಷಕರೂ ಆಗಿ ಕನ್ನಡದ ಏಳಿಗೆಗೆ ನೆರವಾಗಿ ನಿಂತಿದ್ದಾರೆ. ಕಳೆದ ಜೂನ್ ತಿಂಗಳ ಅಂತ್ಯ ಭಾಗದಲ್ಲಿ ಪರಿಷತ್ತಿನ 'ಬೆಳ್ಳಿಯ ಹಬ್ಬ'ದಲ್ಲಿ ಭಾಗವಹಿಸಿ ಕೃಪೆಯಿಟ್ಟು ಉದಾರವಾಗಿ ದ್ರವ್ಯ ಸಹಾಯವೆಸಗಿದರು.

ಶ್ರೀ ಜಯಚಾಮರಾಜ ಒಡೆಯರವರು ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ತಮ್ಮ ದಾತೃತ್ವದ ಕೆಚ್ಚನ್ನು ಮೆರೆದರು; ತಮ್ಮ ಕೊಡುಗೈಯ ಮೇಲ್ಮೆಯನ್ನು ವ್ಯಕ್ತಪಡಿಸಿದರು. ತಮ್ಮ ಗೆಳೆಯರು ಯಾವುದಾದರೊಂದು ಉತ್ಸವ ನೆರವೇರಿಸುವುದಕ್ಕಾಗಿ ಚಂದಾ ಪಟ್ಟಿ ತಂದರೆ ಸಾಕು, 'ಮೊದಲು ಮಿಕ್ಕೆಲ್ಲರದೂ ಆಗಲಿ; ನನ್ನಲ್ಲಿಗೆ ಕೊನೆಗೆ ತೆಗೆದುಕೊಂಡು ಬನ್ನಿ; ಸಾಕಷ್ಟು ಚಂದಾ ಕೊಡುತ್ತೇನೆ' ಎಂದು ವಿನಯದಿಂದ ನುಡಿಯುತ್ತಿದ್ದರು. ಇವರು ಹೀಗೆ ಹೇಳುತ್ತಿದ್ದುದರಲ್ಲಿ ಅರ್ಥವಿದೆ. ತಾವು ಕೊಡುವುದು ಇತರ ಗೆಳೆಯರಿಗೆ ಗೊತ್ತಾದರೆ ಅವರು ಅದನ್ನು ತಾವು ಹಾಕಿರುವ ಚಂದಾಹಣದೊಡನೆ ಹೋಲಿಸಿಕೊಂಡು ಸಂಕೋಚಪಟ್ಟುಕೊಳ್ಳಬಹುದು; ಅವರ ಮನಸ್ಸು ನೋಯಬಹುದು; ಅದಕ್ಕೆ ತಾವು ಕಾರಣರಾಗುವುದು ಸರಿಯಲ್ಲವೆಂಬ ನಯವಾದ ಉದಾತ್ತವಾದ ಭಾವನೆಯಿಂದ ಹೀಗೆ ಮಾಡುತ್ತಿದ್ದರು. ಕಾಲೇಜಿನ ವಾಚನಾಲಯಕ್ಕೆ ಕಡ್ಡಾಯವಾಗಿ ಬೇಕಾಗಿದ್ದ ಸಮಸ್ತ ಅನುಕೂಲಗಳನ್ನೂ ಒದಗಿಸಲು ಉದಾರವಾಗಿ ದ್ರವ್ಯ ಸಹಾಯಮಾಡಿ ಶಾಶ್ವತ ಕೀರ್ತಿ ಗಳಿಸಿದರು; ವಿದ್ಯಾರ್ಥಿಗಳ ಮನಸ್ಸನ್ನು ಸೂರೆಗೊಂಡರು.

ತಮ್ಮ ಸಹಪಾಠಿಗಳಲ್ಲಿ ಒಲವಿದ್ದಂತೆಯೇ ಶ್ರೀ ಜಯಚಾಮರಾಜ ಒಡೆಯರವರಿಗೆ ತಮ್ಮ ವಿದ್ಯಾಗುರುಗಳಲ್ಲಿಯೂ ಅಪಾರವಾದ ಭಕ್ತಿಯಿತ್ತು. ಗುರುವರ್ಯರಿಂದ ತಿಳಿವು ಗಳಿಸುತ್ತಿದ್ದುದರ ಜೊತೆಗೆ ತಾವೇ ಕಷ್ಟಪಟ್ಟು ಅನೇಕ ಗ್ರಂಥಗಳನ್ನು ಓದಿ ಜ್ಞಾನಾರ್ಜನೆಮಾಡಿದರು. ಗುರುಗಳೊಂದಿಗೆ ಅನೇಕ ಸ್ವಾರಸ್ಯವಾದ ವಿಷಯಗಳನ್ನು ಕುರಿತು ಚರ್ಚೆ ನಡಸುತ್ತಿದ್ದರು. ಇವರು ಹೂಡಿದ ಚರ್ಚೆಗಳನ್ನು ನೋಡಿದರೆ ಸತ್ಯದ ನೆಲೆಯನ್ನು ನಿಲುಕಿಸಿಕೊಳ್ಳುವ ಇವರ ಆಸೆ, ಉತ್ಸಾಹ—ಇವು ವ್ಯಕ್ತವಾಗುತ್ತಿದ್ದುವು. ಇತರರು ಹೇಳಿದ್ದನ್ನು ಮಾತ್ರ ಆಲಿಸಿ ತಣಿಯುವ ಸ್ವಭಾವ ಇವರದಲ್ಲ. ಪುಸ್ತಕಗಳಲ್ಲಿ ಅಡಕವಾಗಿರುವ ವಿಷಯಗಳನ್ನು ಓದಿ ತಟ್ಟನೆ ಒಪ್ಪಿಕೊಳ್ಳುವುದು ಇವರ ಹುಟ್ಟಿಗೆ ಬಂದುದಲ್ಲ. ಯಾವುದನ್ನಾದರೂ ಕೂಲಂಕಷವಾಗಿ ಚರ್ಚೆ ಮಾಡಿ ತಿಳಿದುಕೊಳ್ಳುವುದು ವಾಡಿಕೆ.

ಮುಂಜಾನೆ ಎದ್ದು ತಮ್ಮ ಕೆಲಸಕ್ಕೆ ತೊಡಗುವುದು ಇವರ ಸ್ವಭಾವ. ಸಂಗೀತಪಾಠ, ಹಿಂದೀ ಸಾಹಿತ್ಯಾಭ್ಯಾಸ, ಆಚಾರಕ್ಕೆ ತಕ್ಕಂತೆ ದೇವತಾ ಪ್ರಾರ್ಥನೆ, ವಿವಿಧವಾದ ಆಟಗಳಲ್ಲಿ ತೊಡಗುವುದು, ಗೊತ್ತಾದ ಪಠ್ಯಪುಸ್ತಕಗಳಲ್ಲದೆ ಇನ್ನೂ ಅನೇಕ ಗ್ರಂಥಗಳನ್ನು ಓದುವುದು, ಕಾಲೇಜಿಗೆ ಕಾಲಕ್ಕೆ ಸರಿಯಾಗಿ ಹೋಗುವುದು, ರಾಜಕುಮಾರರು ನಿರ್ವಹಿಸಬೇಕಾದ ಇನ್ನೂ ಅನೇಕ ಜವಾಬ್ದಾರಿ ಕೆಲಸಗಳನ್ನು ಚಾಚೂ ತಪ್ಪದೆ ನೆರವೇರಿಸುವುದು ಇವರ ನಿತ್ಯಕರ್ಮ. ಈ ಕಾರ್ಯಗಳನ್ನು ಇವರು ಮಿಕ್ಕವರ ಭಯಕ್ಕಾಗಿ ಇಷ್ಟು ಸಮರ್ಪಕವಾಗಿ ಮಾಡಬೇಕಾಗಿರಲಿಲ್ಲ. ತಮ್ಮ ಆತ್ಮತೃಪ್ತಿಗಾಗಿ ಉತ್ಸಾಹದಿಂದ ಎಲ್ಲವನ್ನೂ ನೆರವೇರಿಸುತ್ತಿದ್ದರು. ಇವರ ಗೆಯ್ಮೆಗಳಲ್ಲಿ ಒಂದು ವಿಧವಾದ ನಯ, ನಾಜೂಕು, ನೀತಿ, ಶಿಸ್ತು ಕಾಣುತ್ತಿದ್ದುವು.

ಆಳುವ ಮಹಾಸ್ವಾಮಿಯವರು ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗಮಾಡಿದ ನಾಲ್ಕು ವರ್ಷಗಳನ್ನು ಇವರ ಜೀವಿತದಲ್ಲಿ ಅತ್ಯುತ್ತಮ ಕಾಲವೆನ್ನಬಹುದು; ಕಾಲೇಜಿನ ಇತಿಹಾಸದಲ್ಲಿಯೂ ಹೆಸರಾದ ಕಾಲವೆನ್ನಬಹುದು. ಒಡೆಯರವರು ವಿದ್ಯಾರ್ಥಿದಶೆಯಲ್ಲಿದ್ದಾಗ ತಮ್ಮದೇ ಆದ ವಿನಯ ಮೆರೆದರು. ಒಡನಾಡಿಗಳೊಡನೆ ದಟ್ಟವಾದ ಗೆಳೆತನ ಬೆಳಸಿ ಸರ್ವರಿಗೂ ಒಂದು ಕಣ್ಣಾಗಿದ್ದರು. ವಿದ್ಯಾರ್ಥಿಯ ಕರ್ತವ್ಯವೇನು, ಗುರಿಯೇನು ಎಂಬುದನ್ನು ಇವರು ಎಂದೂ ಮರೆತವರಲ್ಲ. ಕರ್ತವ್ಯನಿಷ್ಠೆಯೆಂಬುದು ಇವರಲ್ಲಿಯೇ ಮನೆಮಾಡಿಕೊಂಡಿತ್ತೆಂದರೆ ಒಪ್ಪದ ಮಾತಲ್ಲ. ತಾವು ಮುಂದೆ ನಿರ್ವಹಿಸಬೇಕಾಗಿದ್ದ ಕರ್ತವ್ಯದ ಅಳವನ್ನರಿತು ಅದಕ್ಕೆ ತಕ್ಕಂತೆ ತಾವು ಹೊಂದಿಕೊಂಡು ಕಾರ್ಯತತ್ಪರರಾದರು.

ಕೇಳುವವರ ಓದುಗರ ಮನವೊಲಿಸಿಕೊಳ್ಳುವಂತೆ ಸಮಂಜಸವಾಗಿ ಮಾತನಾಡುವುದು, ಬರೆಯುವುದು ಒಂದು ದೊಡ್ಡ ಕಲೆ. ಆಳುವ ಮಹಾಸ್ವಾಮಿಯವರು ಈ ಕಲೆಯನ್ನು ಮನಸ್ಸಿಟ್ಟು ಕಲಿತರು. ತಮ್ಮ ಶಕ್ತಿ, ಶ್ರದ್ಧೆ, ಚುರುಕಾದ ಮನೋಧರ್ಮಗಳನ್ನು ಪ್ರಕಟಿಸಿ ತಮಗೆ ವ್ಯಾಸಂಗಮಾಡಿಸುತ್ತಿದ್ದವರಿಗೆಲ್ಲ ವಿಸ್ಮಯವುಂಟುಮಾಡಿದರು.

ವಿಶ್ವವಿದ್ಯಾನಿಲಯದಲ್ಲಿ ಒಡೆಯರವರ ವಿದ್ಯಾವ್ಯಾಸಂಗ ಮುಗಿಯುತ್ತ ಬಂತು. ಇವರು ಬಿ.ಎ. ಪರೀಕ್ಷೆಗೆ ಕುಳಿತು ತಾವು ಕಲಿತ ಶಾಸ್ತ್ರಗಳಲ್ಲಿ ಕೊಟ್ಟ ಪ್ರಶ್ನೆಗಳಿಗೆ ಸದುತ್ತರ ಬರೆದು ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾದರು. ಆದರೆ ಇವರು ವಿದ್ಯಾರ್ಥಿಯಾಗಿ ಸಂಪಾದಿಸಿದ ಜ್ಞಾನಭಂಡಾರ ಇಂಥ ಪರೀಕ್ಷೆಗಳ ಅಳವಿನಲ್ಲಿಯೇ ಅಡಕವಾಗಿರುತಕ್ಕುದಾಗಿರಲಿಲ್ಲ. ಅದು ಜೀವನದಂತೆ ವಿಶಾಲವಾಗಿ ಹಿರಿದಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯದ ೧೯೩೮ನೆಯ ವರ್ಷದ ಘಟಿಕೋತ್ಸವ ನೆರವೇರಿದಾಗ ಶ್ರೀ ಜಯಚಾಮರಾಜ ಒಡೆಯವರವರು ಕೀರ್ತಿಶೇಷರಾಗಿರುವ ತಮ್ಮ ತಂದೆಯವರ, ದೊಡ್ಡಪ್ಪನವರ ಜೊತೆಯಲ್ಲಿ ಮಂಡಿಸಿ ಚರಿತ್ರೆ ಮತ್ತು ಅರ್ಥಶಾಸ್ತ್ರಗಳಲ್ಲಿ ಉಚ್ಚಸ್ಥಾನದಲ್ಲಿ ಉತ್ತೀರ್ಣರಾದವರಿಗೆ ಸಲ್ಲುವ ಐದು ಚಿನ್ನದ ಪದಕಗಳನ್ನು ತಾವೊಬ್ಬರೇ ಪಡೆದು ಹಿರಿಯ ವಿದ್ಯಾವಂತರಿಗೆ ವಿಸ್ಮಯವುಂಟುಮಾಡಿದರು; ಕಿರಿಯ ವಿದ್ಯಾರ್ಥಿಗಳಿಗೆ ಆದರ್ಶ ವಿದ್ಯಾರ್ಥಿಗಳಾದರು; ತಮ್ಮ ಹಿರಿಯರ ಮನ ಮೆಚ್ಚಿಸಿದರು.

ವಿಶ್ವವಿದ್ಯಾನಿಲಯದ ವ್ಯಾಸಂಗ ಹೀಗೆ ಯಶಸ್ವಿಯಾಗಿ ಸಾಗಿದಮೇಲೆ ಮಹಾಸ್ವಾಮಿಯವರಿಗೆ ರಾಜ್ಯಭಾರ ವಿಷಯಗಳಲ್ಲಿ ತಕ್ಕ ಶಿಕ್ಷಣ ಪಡೆಯುವುದು ಆವಶ್ಯಕವಾಯಿತು. ಆ ವೇಳೆಗೆ ಸರಿಯಾಗಿ ಇವರಿಗೆ ಇಂಡಿಯನ್ ಸಿವಿಲ್ ಸರ್ವಿಸ್ಸಿನಲ್ಲಿ ಸೇರಿ ಅಪಾರವಾದ ಸೇವೆ ಸಲ್ಲಿಸಿ ಅರಿತು ನುರಿತವರಾಗಿದ್ದ ಮಿ॥ ಎಚ್. ಟಿ. ಎಲ್ಫಿನ್‌ಸ್ಟನವರು ಸಹವಾಸಿಗಳೂ ಶಿಕ್ಷಕರೂ ಆದರು.

ಮಹಾಸ್ವಾಮಿಯವರು ಅವರೊಡನೆ ಮೈಸೂರು ಡಿಸ್ಟ್ರಿಕ್ಟಿನ ಕೆಲವು ತಾಲ್ಲೂಕುಗಳಿಗೆ ದಯಮಾಡಿಸಿ ರೈತರ ಸ್ಥಿತಿಗತಿಗಳೇನು, ಹಳ್ಳಿಗಳ ಪರಿಯೆಂತು ಎಂಬಿವೇ ಮೊದಲಾದುವನ್ನು ಸಾಕ್ಷಾತ್ತಾಗಿ ಕಂಡು ಅನುಭವಗಳಿಸಿದರು. ಸಂಸ್ಥಾನಧ ಏಳಿಗೆಗಾಗಿ ಕೆಲಸಮಾಡುತ್ತಿರುವ ಎಲ್ಲ ಇಲಾಖೆಗಳಿಗೂ, ಸಂಸ್ಥೆಗಳಿಗೂ ತಾವೇ ಬಿಜಯಮಾಡಿಸಿ, ಅವು ಮಾಡುವ ಕೆಲಸದ ರೀತಿನೀತಿಗಳನ್ನು ಕಣ್ಣಿಟ್ಟು ಪರೀಕ್ಷಿಸಿ ನೋಡಿದರು. ಆಳಿದ ಮಹಾಸ್ವಾಮಿಯವರ ಸಹವಾಸದಲ್ಲಿಯೇ ಯಾವಾಗಲೂ ಇದ್ದು ಅವರು ಬಿಜಯಮಾಡಿಸಿದ ಸ್ಥಳಗಳಿಗೆ ತಾವೂ ದಯಮಾಡಿಸಿ, ಅವರು ಕೃಪೆಯಿಟ್ಟು ನೆರವೇರಿಸಿದ ಉತ್ಸವಗಳಲ್ಲಿ ಭಾಗವಹಿಸಿ ಅಮೌಲ್ಯವಾದ ಅನುಭವ ಗಳಿಸಿದರು.

ಇಂತು, ಶ್ರೀ ಜಯಚಾಮರಾಜೇಂದ್ರ ಒಡೆಯರವರು ಗ್ರಂಥಾವಲೋಕನ, ಪಂಡಿತಭಾಷಣ, ರಾಜವಿದ್ಯಾಶಿಕ್ಷಣ ಮುಂತಾದುವುಗಳಿಂದ ವಿಶೇಷ ಅನುಭವ ಗಳಿಸಿದರೂ ಇವರಿಗೆ ದೇಶಾಟನವೊಂದು ಮಾತ್ರ ಆಗಿರಲಿಲ್ಲ. ಆದಕಾರಣ, ಇವರು ೧೯೩೭ರಲ್ಲಿ ಜಪಾನಿಗೆ ತೆರಳಿ. ಅಲ್ಲಿಯ ಜನಜೀವನ, ಆರ್ಥಿಕ ಸಂಪತ್ತು, ವಾಣಿಜ್ಯೋದ್ಯಮಗಳ ಮೇಲ್ಮೆ—ಎಲ್ಲವನ್ನೂ ಕಂಡು ಸ್ವದೇಶಾಭಿಮುಖರಾದರು. ಮಾರನೆಯ ವರ್ಷ ದೆಹಲಿಗೆ ಪ್ರಯಾಣ ಬೆಳಸಿ ವೈಸ್ರಾಯ್‌ರವರನ್ನು ಸಂದರ್ಶಿಸಿ ರಾಜಧಾನಿಗೆ ಹಿಂತಿರುಗಿದರು. ಅನಂತರ ಚರ್ಖಾರಿ ಸಂಸ್ಥಾನದ ಮಹಾರಾಜರ ಸೋದರಿಯವರಾದ ಸತ್ಯಪ್ರೇಮಕುಮಾರಿದೇವಿಯವರನ್ನು ಸಕಲ ರಾಜವೈಭವಗಳೊಡಗೂಡಿ ೧೯೩೮ನೆಯ ಮೇ ತಿಂಗಳ ೧೫ನೆಯ ತಾರೀಖು ಭಾನುವಾರ ಮದುವೆಯಾದರು.

ಶ್ರೀಮನ್ಮಹಾರಾಜರು ೧೯೩೯ನೆಯ ವರ್ಷದ ಆದಿಭಾಗದಲ್ಲಿ ಮದರಾಸಿಗೆ ಬಿಜಯಮಾಡಿಸಿ, ಅಲ್ಲಿ ನಡೆಯುತ್ತಿರುವ ಸಮಾಜ ಸುಧಾರಣಾಕಾರ್ಯದ ಅಳವನ್ನರಿಯಲು ಅನೇಕ ಸಾರ್ವಜನಿಕ ಸಂಸ್ಥೆಗಳಿಗೆ ದರ್ಶನವಿತ್ತರು. ಅದೇ ಜುಲೈ ತಿಂಗಳ ೧೦ನೆಯ ತಾರೀಖು ಸೋಮವಾರ ಮಿತಪರಿವಾರರಾಗಿ ತಮ್ಮ ತಂದೆ, ತಾಯಿ, ಪತ್ನಿಯವರೊಡಗೂಡಿ ರಾಜಧಾನಿಯಿಂದ ಬೊಂಬಾಯಿಗೆ ಚಿತ್ತೈಸಿದರು. ವಿದೇಶಾಟನಮಾಡಿ ಪಾಶ್ಚಾತ್ಯ ದೇಶಗಳ ಆರ್ಥಿಕ ನೈತಿಕ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗಳನ್ನು ಕಣ್ಣಾರ ಕಂಡು ಅನುಭವಗಳಿಸಲು ಅಲ್ಲಿಂದ ಜಹಜು ಹತ್ತಿ ಯೂರೋಪಿಗೆ ಪಯಣ ಬೆಳಸಿದರು. ಯೂರೋಪಿನಲ್ಲಿ ಮುಖ್ಯ ಮುಖ್ಯ ಸ್ಥಳಗಳನ್ನು ಸಂದರ್ಶಿಸುತ್ತ ಕ್ರೈಸ್ತ ಗುರುಗಳಾದ ಪೋಪ್ ಮೊದಲಾದ ಮಾನ್ಯರನೇಕರ ದರ್ಶನ ಪಡೆದರು. ಆಮೇಲೆ ಇಂಗ್ಲೆಂಡಿಗೆ ಸುಖವಾಗಿ ತಲಪಿದರು. ಅಷ್ಟರಲ್ಲಿಯೇ ಯುದ್ಧ ಪ್ರಾರಂಭವಾದುದರಿಂದ ತಮ್ಮ ಪರಿವಾರದೊಡಗೂಡಿ ವಾಯುಮಾರ್ಗವಾಗಿ ಕಳೆದ ಅಕ್ಟೋಬರ್ ತಿಂಗಳಲ್ಲಿ ನಾಡಹಬ್ಬವಾದ ನವರಾತ್ರಿಯ ವೇಳೆಗೆ ರಾಜಧಾನಿಗೆ ಹಿಂದಿರುಗಿ ತಲ್ಲಣಿಸುತ್ತಿದ್ದ ಮೈಸೂರ ಪ್ರಜೆಗೆ ಆನಂದ ಮರುಕೊಳಿಸುವಂತೆ ಮಾಡಿದರು. ಮಾರನೆಯ ತಿಂಗಳ ೨೬ನೆಯ ತಾರೀಖಿನ ಭಾನುವಾರ ತಮ್ಮ ಮಾತೃಶ್ರೀಯವರು, ಸಹೋದರಿಯರು, ಧರ್ಮಪತ್ನಿಯವರೊಂದಿಗೆ ಶಿವಮೊಗ್ಗದ ಮಾರ್ಗವಾಗಿ ಉಡುಪಿ ಪುಣ್ಯಕ್ಷೇತ್ರದ ಲಕ್ಷದೀಪೋತ್ಸವದ ಸೇವೆಯ ಸೊಬಗನ್ನು ಕಂಡು ಆನಂದಿಸಲು ಉಡುಪಿಗೆ ಪಯಣ ಬೆಳಸಿದರು. ಅಲ್ಲಿ ರಾಜಮರ್ಯಾದೆಗಳೊಡನೆ, ಸಿಂಗರಿಸಿದ ಬೀದಿಗಳಲ್ಲಿ ಪಾದಚಾರಿಗಳಾಗಿ ಶ್ರೀಕೃಷ್ಣ ದೇವಾಲಯಕ್ಕೆ ದಯಮಾಡಿಸಿ ಅನನ್ಯ ಭಕ್ತಿಯಿಂದ ದೇವರಿಗೆ ಅರ್ಚನಾದಿಗಳನ್ನು ನಡಸಿದರು. ಉಡುಪಿಯ ಪಾಲಿಮಾರು ಮಠದ ಶ್ರೀಪಾದಂಗಳವರ ಆಶೀರ್ವಾದಗಳನ್ನು ತಲೆಬಾಗಿ ಸ್ವೀಕರಿಸಿ ರಾಜಧಾನಿಗೆ ಚಿತ್ತೈಸಿದರು.

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಕಳೆದ ಮಾರ್ಚಿ ತಿಂಗಳಲ್ಲಿ ವಿಧಿವಶರಾದುದರಿಂದ, ಆಳಿದ ಮಹಾಸ್ವಾಮಿಯವರಾದ ನಾಲ್ವಡಿ ಶ್ರೀಕೃಷ್ಣರಾಜ ಒಡೆಯರವರು ಶ್ರೀ ಜಯಚಾಮರಾಜೇಂದ್ರ ಒಡೆಯರವರಿಗೆ ಶ್ರೀಮದ್ಯುವರಾಜರವರೆಂಬ ಅಭಿಧಾನಾಂಕಿತವನ್ನೂ, ಯುವರಾಜ ಪದವಿಯ ಸ್ಥಾನಮಾನಗಳನ್ನೂ ಕೃಪೆಯಿಟ್ಟು ದಯಪಾಲಿಸಿದರು. ಹೋದ ತಿಂಗಳ ೩ನೆಯ ತಾರೀಖು ಶನಿವಾರ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜ ಒಡೆಯರವರು ಕೀರ್ತಿಶೇಷರಾದುದರಿಂದ, ಆಳುವ ಮಹಾಸ್ವಾಮಿಯವರಿಗೆ ಮೇಲಿಂದ ಮೇಲೆ ವಿಯೋಗದುಃಖ ಒದಗಿತು; ನಮ್ಮ ನಾಡಿನ ಎಪ್ಪತ್ತು ಲಕ್ಷ ಪ್ರಜೆಗೆ ಒಡೆಯರಾಗಿ ಸಲಹುವ ಹೊರೆ ಇವರ ಪಾಲಿಗೆ ಬಂತು.

ತಂದೆಯಂತಹ ದೊರೆಯಾಗಿ ಪೊರೆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರ ಮರಣದಿಂದ ನಮ್ಮ ನಾಡಿನ ಪ್ರಜೆ ದುಃಖದಲ್ಲಿ ಮುಳುಗಿ ಬಳಲಿ ಬೆಂಡಾಗಿದ್ದಾಗ ಚಕ್ರವರ್ತಿ ಸಾರ್ವಭೌಮ ಸರ್ಕಾರದವರು ಶ್ರೀ ಜಯಚಾಮರಾಜೇಂದ್ರ ಒಡೆಯರವರನ್ನು ಶ್ರೀಮನ್ಮಹಾರಾಜರವರನ್ನಾಗಿ ಅಂಗೀಕರಿಸಿರುತ್ತಾರೆಂಬ ಶುಭ ಸಮಾಚಾರ ಕಿವಿಗೆ ಬಿದ್ದೊಡನೆ ಪ್ರಜೆಗಳಿಗೆ ಎಲ್ಲೆಮೀರಿದ ಆನಂದವುಂಟಾಯಿತು. ಪ್ರಭುವರ್ಯರ ಪಟ್ಟಾಭಿಷೇಕ ಮಹೋತ್ಸವಕ್ಕೆ ಬೇಕಾದ ಎಲ್ಲ ಅಣಿಗಳೂ ರಾಜಧಾನಿಯಲ್ಲಿ ನಡೆಯಲು ಮೊದಲಾಗಿ, ಇದೇ ತಿಂಗಳ ೮ನೆಯ ತಾರೀಖು ಭಾನುವಾರ ಶುಭಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ರಾಜ್ಯಾಭಿಷೇಕ ಬೆಳೆಯಬೇಕೆಂದು ಗೊತ್ತಾಯಿತು. ಸಂಸ್ಥಾನದ ಅಧಿಕಾರಿವರ್ಗದವರಿಗೆ ಮತ್ತು ಇನ್ನೂ ಅನೇಕ ಮಾನ್ಯರಿಗೆ ಲಗ್ನಪತ್ರಿಕೆಗಳನ್ನು ಅರಮನೆಯಿಂದ ಕಳಿಸಿಕೊಟ್ಟರು. ಈ ಮಹೋತ್ಸವಕ್ಕೆ ಪೂರ್ವಭಾವಿಯಾಗಿ ಕಳೆದ ತಿಂಗಳ ೨೯ನೆಯ ತಾರೀಖು ಗುರುವಾರ ಬೆಳಗ್ಗೆ ಅರಮನೆಯ ಅಂಬಾವಿಲಾಸದಲ್ಲಿ ದರ್ಬಾರು ನಡೆಯಿತು. ವೈಸ್ರಾಯ್‌ರವರ ಪರವಾಗಿ ಬ್ರಿಟಿಷ್ ರೆಸಿಡೆಂಟ್‌ರವರಾದ ಲೆಫ್ಟಿನೆಂಟ್ ಕರ್ನಲ್ ಡಿ. ಎಚ್. ಗೋರ್ಡನ್‌ರವರು ರಾಜಮರ್ಯಾದೆಗಳೊಡನೆ ದರ್ಬಾರು ಸೆಜ್ಜೆಗೆ ದಯಮಾಡಿಸಿ, ಭದ್ರಾಸನವನ್ನು ಶ್ರೀಮನ್ಮಹಾರಾಜರವರೊಡನೆ ಸಮೀಪಿಸಿ "ಚಕ್ರವರ್ತಿ ಸಾರ್ವಭೌಮರು ತಮ್ಮನ್ನು ಮೈಸೂರು ಸಂಸ್ಥಾನದ ಪ್ರಭುವರ್ಯರೆಂದು ಅಂಗೀಕರಿಸಿದ್ದಾರೆ" ಎಂಬುದಾಗಿ ಉದ್ಘೋಷಿಸಿ, ಶ್ರೀಮನ್ಮಹಾರಾಜರವರನ್ನು ಭದ್ರಾಸನದಲ್ಲಿ ಕುಳ್ಳಿರಿಸಿದರು; ಮಹಾಸ್ವಾಮಿಯವರನ್ನು ಅಭಿನಂದಿಸುತ್ತಾ "ಆಳಿದ ಮಹಾಪ್ರಭುಗಳು ತಮ್ಮ ಅಧಿಕಾರಿವರ್ಗದವರ ಸದಭಿಪ್ರಾಯಗಳನ್ನು ಸ್ವೀಕರಿಸಿ, ಅವನ್ನು ತಮ್ಮ ಸ್ವಂತ ಅಭಿಪ್ರಾಯಗಳೊಡನೆ ಹೊಂದಿಸಿ ಅತ್ಯಂತ ಉದಾತ್ತ ಮತ್ತು ಉದಾರವಾದ ಪ್ರಗತಿ ಮಾರ್ಗದಲ್ಲಿ ಮುಂದುವರಿದರು. ದಿವಂಗತ ಮಹಾಪ್ರಭುಗಳ ಸರ್ಕಾರದವರು ಈಗ ತಮ್ಮ ಸೇವೆಯಲ್ಲಿದ್ದಾರೆ. ಅವರು ಪ್ರಜೆಯ ಸೇವಕರಾಗಿ, ಪ್ರಜೆಗೋಸ್ಕರ ತಮ್ಮ ಕರ್ತವ್ಯಗಳನ್ನು ಮುಂದುವರಿಸುವರೆಂದು ನಾನು ಬಲ್ಲೆ. ಆಳಿದ ಮಹಾಸ್ವಾಮಿಯವರ ಉದಾತ್ತ ಜೀವನದ ಉದಾಹರಣೆ ತಮ್ಮ ಮುಂದಿದೆ. ತಾವು ಪಡೆದಿದ್ದ ಅವರ ಸಾಹಚರ್ಯದ ನೆನಪು ಉದಾತ್ತವ್ಯಕ್ತಿತ್ವದ ಪರಿಚಯ ಇವು ತಮ್ಮ ಭಾಗ್ಯಕ್ಕೊದಗಿವೆ. ಇದಕ್ಕಿಂತ ಮಿಗಿಲಾಗಿ ಸಂಸ್ಕೃತಿ ಮತ್ತು ವಿಶಾಲದೃಷ್ಟಿಗಳು ತಮ್ಮಲ್ಲಿ ನೆಲಸಿವೆ. ಆದಕಾರಣ ತಮ್ಮ ಸಂಸ್ಥಾನವನ್ನೂ, ಸರ್ಕಾರವನ್ನೂ ನಿಜವಾದ ಪ್ರಗತಿಮಾರ್ಗದಲ್ಲಿ ಸಾಗಿಸುವಿರೆಂಬ ನಂಬಿಕೆ ನನಗಿದೆ. ತಮ್ಮ ಹಿರಿಯರು ಮಂಡಿಸಿದ ಮಹಾಪೀಠವನ್ನಲಂಕರಿಸಿ ಪ್ರಜೆಗಳಿಗೆ ತಂದೆಯೆಂಬ ಧರ್ಮಕೀರ್ತಿಗೆ ಆಶ್ರಯರಾಗಿದ್ದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರಂತೆ ರಾಜ್ಯಸೂತ್ರ ವಹಿಸುವಿರೆಂದು ನಾನು ನಂಬಿದ್ದೇನೆ." ಎಂಬುದಾಗಿ ನುಡಿದು ತಮ್ಮ ಹೆಬ್ಬಯಕೆಗಳನ್ನು ಬೆಳಗಿದರು; ಆಳುವ ಮಹಾಸ್ವಾಮಿಯವರ ಕೊರಳಿಗೆ ಮುತ್ತಿನ ಹಾರವೊಂದನ್ನು ಅಲಂಕರಿಸಿ ಗೌರವಿಸಿದರು.

ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರವರು ಚೆಲುವಿಗೆ ನೆಲೆಯಾಗಿದ್ದಾರೆ. ಹುಟ್ಟಿದಂದಿನಿಂದ ತೇಜೋವಂತರು, ದೃಢಕಾಯರು. ವಿದ್ಯಾವಿನಯಸಂಪನ್ನರು. ಸಂಗೀತದಲ್ಲಿ ನಿಪುಣರು. ಇವರಿಗೆ ಕುದುರೆ ಸವಾರಿ, ಟೆನ್ನಿಸ್ ಆಟ,

ಮೃಗಯಾವಿಹಾರ—ಇವುಗಳಲ್ಲಿ ಆಸಕ್ತಿ ಹೆಚ್ಚು. ಇವರಲ್ಲಿ ತಮ್ಮ ತಂದೆಯವರ ಸಂಸ್ಕೃತಿ, ಹೃದಯವೈಶಾಲ್ಯ, ರಸಿಕತೆ ಮತ್ತು ತಮ್ಮ ದೊಡ್ಡಪ್ಪನವರ ಗಾಂಭೀರ್ಯ, ಧರ್ಮಬುದ್ಧಿ, ಕಾರ್ಯ ತತ್ಪರತೆ, ತಾಳ್ಮೆ—ಇವೇ ಮೊದಲಾದ ಸದ್ಗುಣಗಳು ಒಡೆದು ಮೂಡಿವೆ. ಇವರು ತಮ್ಮ ಬಾಲ್ಯದಲ್ಲಿಯೇ ಸ್ಕೌಟ್ ಚಳವಳಿಯಲ್ಲಿ ಭಾಗವಹಿಸಿ ಆದರ ಪವಿತ್ರಧ್ಯೇಯಗಳ ಬೆಲೆಯನ್ನು ಕಂಡುಕೊಂಡಿದ್ದಾರೆ. ತಮ್ಮ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ ಮೈಸೂರಿನ ಕಾಲೇಜು ವಿದ್ಯಾರ್ಥಿಗಳಿಗೆಲ್ಲ ಸಂತೋಷಕೂಟವೊಂದನ್ನು ಏರ್ಪಡಿಸಿರುವುದು ತಮ್ಮ ಒಡನಾಡಿ ಒಡನೋದಿದವರ ಮೇಲೆ ಇವರಿಗಿರುವ ಅಚಲವಾದ ಪ್ರೀತಿಗೆ ಸಾಕ್ಷಿಯಾಗಿದೆ. ಆಳುವ ಮಹಾಸ್ವಾಮಿಯವರು ಒಳ್ಳೆಯ ಮಾತುಗಾರರು. ಇಂಪಾಗಿ, ಸರಸವಾಗಿ, ಹಿತಮಿತವಾಗಿ ಮಾತನಾಡಬಲ್ಲರು. ಇವರು ಅನೇಕ ಸಂದರ್ಭಗಳಲ್ಲಿ ಭಾವಪೂರಿತವಾದ ಭಾಷಣಗಳನ್ನು ಅಪ್ಪಣೆ ಕೊಡಿಸಿದ್ದಾರೆ. ಕಳೆದ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ವಸಂತ ಸಾಹಿತ್ಯೋತ್ಸವವನ್ನು ಸಮಾರಂಭಣಗೊಳಿಸುತ್ತ "ಒಮ್ಮೆ ಉಚ್ಛ್ರಾಯಸ್ಥಿತಿಯಲಿದ್ದ ಕನ್ನಡ ನಾಡಿನಲ್ಲಿ ಮತ್ತೊಮ್ಮೆ ಅಭ್ಯುದಯಸಾಧನೆಯ ಅರುಣೋದಯ ಬೆಳಗುತ್ತಿರುವುದನ್ನು ಕಂಡು ಆನಂದಿಸಬಹುದಾಗಿದೆ.......... ನಾವೆಲ್ಲ ಒಬ್ಬಳೇ ಕನ್ನಡ ತಾಯಿಯ ಮಕ್ಕಳೆಂಬುದನ್ನು ಮನಗಂಡು ವರ್ತಿಸಿದಷ್ಟೂ ಅನುಕೂಲ. ನಮ್ಮ ನಾಡು ಮುಂದಕ್ಕೆ ಬರಬೇಕಾದರೆ ತಾಯಿನುಡಿಯಾದ ಕನ್ನಡ ಭಾಷೆಯ ಬೆಳವಣಿಗೆ ಬಹು ಮುಖ್ಯವಾದ ಅಂಶವಾಗಿದೆ. ನಮ್ಮ ಜನರಲ್ಲಿ ತಿಳಿವಳಿಕೆ ಹೆಚ್ಚಿ, ನಮ್ಮ ಸಾಹಿತ್ಯ ಏಳಿಗೆನಡೆದಂತೆಲ್ಲ ನಮ್ಮ ಸಂಸ್ಕೃತಿಯೂ ವೃದ್ಧಿಹೊಂದುತ್ತದೆ" ಎಂದು ಅಪ್ಪಣೆ ಕೊಡಿಸಿ ತಾಯಿನುಡಿಯಲ್ಲಿ ತಮಗಿರುವ ಅಪಾರ ಪ್ರೇಮಕ್ಕೆ ಮಾತು ಗೊಟ್ಟರು. ಮಹಾಪ್ರಭುಗಳಿಗೆ ವಸ್ತುಪ್ರದರ್ಶನಗಳ ಬೆಲೆ ಚೆನ್ನಾಗಿ ಗೊತ್ತು. "ಮೈಸೂರಿನ ಸಂಸ್ಕೃತಿ, ವಿದ್ಯಾಭ್ಯಾಸ, ಕೈಗಾರಿಕೆ ಮತ್ತು ವ್ಯವಸ್ಯಾಯ—ಇವುಗಳ ಪ್ರಗತಿಯನ್ನು ನಾವು ದಸರಾ ವಸ್ತುಪ್ರದರ್ಶನದ ಮೂಲಕ ತಿಳಿಯಬಹುದಾಗಿದೆ" ಎಂದು ಕಳೆದ ನವರಾತ್ರಿಯ ವಸ್ತುಪ್ರದರ್ಶನ ಕಾಲದಲ್ಲಿ ಸೂಚಿಸಿದರು. ಮಿತ್ರರಾಷ್ಟ್ರಗಳವರಿಗೆ ಸಹಾಯವೆಸಗಲು ದ್ರವ್ಯಸಹಾಯ ಮಾಡಿರೆಂದು ಪ್ರಜೆಗಳನ್ನು ಕೇಳುವಾಗ "ಕಷ್ಟಕ್ಕೀಡಾಗಿ ಬಳಲುತ್ತಿರುವ ಜಗತ್ತಿನ ಜನತೆಗಾಗಿ ನಾವು ಕನಿಕರಪಡಬೇಕು; ಈ ಸಮಯದಲ್ಲಿ ಕೈಲಾದಮಟ್ಟಿಗೂ ಸಹಾಯ ನೀಡುವುದು ನಮ್ಮ ಕರ್ತವ್ಯ" ಎಂದು ಅಪ್ಪಣೆ ಕೊಡಿಸಿರುವ ದಯಾಪೂರಿತವಾದ ಮಾತುಗಳನ್ನು ನೆನಸಿಕೊಂಡರೆ ಮಹಾಸ್ವಾಮಿಯವರ ತ್ಯಾಗಬುದ್ಧಿ ಮತ್ತು ಪರಮಕಾರುಣ್ಯ—ಇವು ಗೊತ್ತಾಗುತ್ತವೆ. ತಮಗೆ ಗ್ರಾಮನಿವಾಸಿಗಳ ಹಿತಚಿಂತನೆಯೂ ವಿಶೇಷವಾಗಿದೆಯೆಂಬುದನ್ನು ತಮ್ಮ ಭಾಷಣವೊಂದರಲ್ಲಿ ವ್ಯಕ್ತಪಡಿಸಿದ್ದಾರೆ.

ಹೀಗೆ ಸಕಲ ಸದ್ಗುಣಸಂಪನ್ನರಾದ, ಆಳುವ ಮಹಾಸ್ವಾಮಿಯವರಾದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರವರ ಪಟ್ಟಾಭಿಷೇಕ ಮಹೋತ್ಸವ ವೈಭವದೊಡಗೂಡಿ ರಾಜಧಾನಿಯಲ್ಲಿ ಇದೇ ೮ನೆಯ ತಾರೀಖು ಭಾನುವಾರ ಬೆಳಗ್ಗೆ ನೆರವೇರುವುದಾಗಿದೆ. ಕನ್ನಡ ನಾಡಿನ ರತ್ನಸಿಂಹಾಸನವನ್ನಡರಿ ಸತ್ಕೀರ್ತಿ ಸಾಧಿಸಿ, ಚಿರಕಾಲ ಬಾಳಿ ತಮ್ಮ ಪ್ರಜೆಗಳಿಗೆ ಒಲವಿನ ದೊರೆಯಾಗಿ, ತಂದೆಯಾಗಿ, ಪೋಷಕರಾಗಿ ಇವರು ಮೆರೆಯಲೆಂದು ನಾವೆಲ್ಲರೂ ಭಗವಂತನನ್ನು ಪ್ರಾರ್ಥಿಸುತ್ತೇವೆ.

—ಕೆ. ದೊರೆಸ್ವಾಮಿ, ಬಿ.ಎ. (ಆನರ್ಸ್)

---

**ಬಾಗಲುಕೋಟಿ:** ವಾಸುದೇವ ಅಮೋಘೂರ ನಾಟಕ ಸಂಘ

ಮೇಲ್ಕಂಡ ಸಂಘದ ೧೬ನೆಯ ವಾರ್ಷಿಕೋತ್ಸವ ಸಮಾರಂಭ ಪ್ರೊ| ಜಾಗಿರದಾರರ ನೇತೃತ್ವದಲ್ಲಿ ೫-೯-೪೦ನೆಯ ಗುರುವಾರ ನಡೆಯಿತು. ಅಂದು ರಾತ್ರಿ ಅಧ್ಯಕ್ಷರ 'ಪ್ರಪಂಚ ಪಾಣಿಪತ್ತು' ಎಂಬ ನಾಟಕ ಲಿಖಾನಂದ ಥಿಯೇಟರಿನಲ್ಲಿ ಪ್ರದರ್ಶಿಸಲ್ಪಟ್ಟಿತು.

## 'ಖರೀತಾ' ದರ್ಬಾರ್

ಕಳೆದ ತಿಂಗಳು ೨೯ನೆಯ ತಾರೀಖು ಮೈಸೂರು ಅರಮನೆಯಲ್ಲಿ ಖರೀತಾ ದರ್ಬಾರು ನಡೆಯಿತು. ಅಂದು ಮಾನ್ಯ ಬ್ರಿಟಿಷ್ ರೆಸಿಡೆಂಟರವರು, ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರನ್ನು ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರನ್ನಾಗಿ ಸಮ್ರಾಟರು ಅಂಗೀಕರಿಸಿ ಕಳಿಸಿದ್ದ 'ಖರೀತ'ವನ್ನೊಪ್ಪಿಸಿ ಸಾರ್ವಭೌಮರ ಪರವಾಗಿ ಭಾಷಣ ಮಾಡಿದರು. ಭಾಷಣದ ಸಾರಾಂಶ:

ಇಂದು ತಮ್ಮ ಈ ದರ್ಬಾರಿನಲ್ಲಿ ಹಾಜರಿರುವ ಮೈಸೂರು ಸಂಸ್ಥಾನದ ಉನ್ನತಾಧಿಕಾರಿಗಳು, ಸರ್ದಾರರು, ಅಧಿಕಾರಿ ಮತ್ತು ಖಾಸಗೀ ದೊಡ್ಡಮನುಷ್ಯರ ಎದುರಿನಲ್ಲಿ ತಮಗೆ, ತಮ್ಮನ್ನು ಮೈಸೂರು ಸಿಂಹಾಸನದ ಉತ್ತರಾಧಿಕಾರಿಗಳನ್ನಾಗಿ ಸಾಮ್ರಾಟರು ಅಂಗೀಕರಿಸಿರುವುದನ್ನು ತಿಳಿಸುವ ವೈಸರಾಯರ ಖರೀತವನ್ನು ತಮಗೊಪ್ಪಿಸುವ ಗೌರವ ಮತ್ತು ಸುಯೋಗ ನಮಗೆ ದೊರೆತಿದೆ.

**ತಾವು ಈಗ್ಗೆ ೨೧ ವರ್ಷಗಳ ಹಿಂದೆ ಜನ್ಮತಾಳಿದಾಗ, ತಮಗೆ ಶುಭಸೂಚಕವಾದ 'ಜಯ' ಎಂಬ ಅಭಿಧಾನ ಕೊಡಲ್ಪಟ್ಟಿತು.**

ನಾಲ್ಕು ವರ್ಷಗಳಕಾಲ ಉಗ್ರಕದನವಾಗಿ ಬ್ರಿಟಿಷ್‌ಸಾಮ್ರಾಜ್ಯದ ಮತ್ತು ಅದರ ಮಿತ್ರ ಮಂಡಲದ ಶಕ್ತಿಗೆ ವಿಜಯವಾದ ಘಳಿಗೆಯಲ್ಲಿ ತಮಗೆ ಈ ನಾಮಕರಣವಾಯಿತು.

ಮತ್ತೊಮ್ಮೆ, ಹೋರಾಟದ ಕಾಲದಲ್ಲಿ ಮಹಾಸ್ವಾಮಿಯವರ ಜೀವಿತದಲ್ಲಿ ಮಹತ್ತರವಾದೊಂದು ಸಂಭವ ಒದಗಿದೆ.

**ಮೈಸೂರು ಸಂಸ್ಥಾನದಲ್ಲಿ ವಿಜಯಸೂಚಕವಾದ ಈ ಶುಭಸೂಚನೆ, ಜಗತ್ತಿನ ಸ್ವತಂತ್ರ ಪ್ರಜಾವರ್ಗದ ವಿಜಯದ ಪೀಠಿಕೆಯಾಗುವುದರಲ್ಲಿ ಸಂದೇಹವೆ ಇಲ್ಲವೆಂದು ನನ್ನ ಅಭಿಪ್ರಾಯ.**

ಒಡೆಯರ್ ಮನೆತನದ ಇತಿಹಾಸವನ್ನು ನೋಡಿದರೆ ಅವರು ೧೩೯೯ರಿಂದ ಅಂದರೆ ಐದೂವರೆ ಶತಮಾನಗಳ ಕಾಲದಿಂದ ಆಳರಸರಾಗಿದ್ದಾರೆಂದು ವ್ಯಕ್ತವಾಗುತ್ತದೆ. ಅಂಥ ಮಹತ್ತರವಂಶದ ಆಳರಸರು ತಾವು. ಆ ಮನೆತನದ ಮಹೋನ್ನತ ವ್ಯಕ್ತಿಗಳಲ್ಲೊಬ್ಬರೆಂದರೆ ಕೀರ್ತಿಶೇಷರಾದ ಮಹಾಪ್ರಭುಗಳು.

ತಾವು ವಹಿಸಿಕೊಂಡಿರುವ ಜವಾಬ್ದಾರಿ ನಿಜವಾಗಿಯೂ ಘನವಾದುದು; ಆದರೆ ಅದರಲ್ಲಿ ತಮ್ಮ ವಿವೇಕವನ್ನು ಪ್ರದರ್ಶಿಸಲು ತುಂಬ ಅವಕಾಶಗಳಿವೆ. ಇದುವರೆಗೂ ತಮ್ಮ ಮುಂದೆ ಆದರ್ಶದಂತಿದ್ದ ನಿದರ್ಶನವನ್ನೇ ತಾವು ಅನುಸರಿಸಬೇಕೆಂದು ತಮ್ಮ ಚಿರಾಭಿಲಾಷೆಯಾಗಿದೆ ಎಂಬುದನ್ನು ನಾನು ಅರಿತಿದ್ದೇನೆ. ಈ ವಿಚಾರದಲ್ಲಿ ತಾವು ವಿಶೇಷಶ್ರಮ ವಹಿಸುವಿರೆಂಬುದನ್ನೂ ನಾನು ನಿಸ್ಸಂದೇಹವಾಗಿ ಹೇಳಬಲ್ಲೆ.

**ಮೈಸೂರು ಪ್ರಗತಿಯನ್ನೈದುತ್ತಲೇ ಇದೆ; ಪ್ರಗತಿಯನ್ನೈದುತ್ತಲೇ ಇರುತ್ತದೆ. ಮೈಸೂರಿನ ಭವಿಷ್ಯವನ್ನು ನಿರ್ಧರಿಸುವ ಭಾಗ್ಯವಿಧಾತರಾಗುವ ಗೌರವ ತಮಗೆ ಸಲ್ಲತಕ್ಕದಾಗಿದೆ.**

**ಇಲ್ಲಿ ಮೈಸೂರಿನಲ್ಲಿ ಕಳೆದ ಅರ್ಧಶತಮಾನದಲ್ಲಿ ನಡೆದಿರುವ ಪುರೋಭಿವೃದ್ಧಿಯನ್ನು ಕಂಡು ಎಲ್ಲರೂ ಹೆಮ್ಮೆ ಪಡುವುದು ನ್ಯಾಯವೇ ಆಗಿದೆ. ಇತರರಿಗೆ ಇದು ಅನುಕರಣೀಯವಾದ ಆದರ್ಶವಾಗಿದೆ.**

ಮೈಸೂರಿನ ಆರ್ಥಿಕ ಪುರೋಭಿವೃದ್ಧಿಯ ಜೊತೆಗೆ ಅದರ ಆಧ್ಯಾತ್ಮಿಕ ಪುರೋಭಿವೃದ್ಧಿಯೂ ಆಗಿರುವುದು ಸಂಸ್ಥಾನಕ್ಕೂ, ಸಂಸ್ಥಾನದ ಕೀರ್ತಿಶೇಷರಾದ ಪ್ರಭುಗಳಿಗೂ ಗೌರವಕರವಾದುದು.

ಇಲ್ಲಿ ಪೌರ್ವಾತ್ಯ ಪಾಶ್ಚಾತ್ಯ ವಿದ್ಯಾಪೀಠಗಳಿವೆ; ಸಾಹಿತ್ಯ ಮತ್ತು ಕುಶಲ ಕಲೆಗಳಿಗೆ ಇದು ಕೊಡುತ್ತಿರುವ ಪೋಷಣೆ ವಿಖ್ಯಾತವಾಗಿದೆ; ಇಲ್ಲಿಯ ನಗರಗಳೂ, ಉದ್ಯಾನವನಗಳೂ ಹೆಸರುವಾಸಿ

ಯಾಗಿವೆ. ಇಲ್ಲಿಯ ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದ ಪಡುವ ಸೌಲಭ್ಯ ಎಲ್ಲ ಪ್ರಜೆಗಳಿಗೂ ದೊರೆತಿದೆ.

ಕೀರ್ತಿಶೇಷರಾದ ಮಹಾ ಪ್ರಭುಗಳ ಘನಾದರ್ಶ ; ಅವರೊಡನೆ ತಮಗಿದ್ದ ಸಹಚರ್‍ಯದ ನೆನಪು ಮತ್ತು ಅವರ ಉದಾತ್ತ ವ್ಯಕ್ತಿತ್ವದ ಪರಿಚಯ ; ತಮ್ಮ ವಿಶಾಲವಾದ ಮತ್ತು ಸಂಸ್ಕೃತಿಪೂರ್ಣವಾದ ಮನೋಭಾವ ಇವೆಲ್ಲವುಗಳನ್ನೂ ಗಮನದಲ್ಲಿಟ್ಟುಕೊಂಡು ತಾವು ತಮ್ಮ ಸಂಸ್ಥಾನವನ್ನೂ ಸರಕಾರವನ್ನೂ ನಿಜವಾದ ಪ್ರಗತಿಪಥ ನಡೆಸಿಕೊಂಡು ಬರುತ್ತಾ, ಕೀರ್ತಿಶೇಷರಾದ ಮಹಾಪ್ರಭುಗಳಂತೆ ತಾವೂ ತಮ್ಮ ಪ್ರಜೆಗಳ ತಂದೆಯೆಂಬ ಉಚ್ಚಸ್ಥಾನವನ್ನಲಂಕರಿಸುವಿರೆಂಬುದನ್ನು ನಾನು ಅರಿತಿದ್ದೇನೆ.

ಇನ್ನು ತಮಗೆ ತಾವು ಪಟ್ಟಕ್ಕೆ ಬಂದುದಕ್ಕಾಗಿ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಯಾವಾಗಲೂ ತಮ್ಮ ಹಿತವನ್ನೇ ನಾನು ಹಾರೈಸುತ್ತಿರುತ್ತೇನೆ.

---

೪೨೫ನೆಯ ಪುಟದಿಂದ

ಶ್ರೀ|| ಎನ್. ಎಸ್. ರಾಮಚಂದ್ರಯ್ಯನವರು 'ಹರಟೆಗಳು' ಎಂಬ ವಿಷಯವಾಗಿಯೂ, ಶ್ರೀ|| ಮಾ. ನ. ಚೌಡಪ್ಪನವರು 'ವೃತ್ತ ಪತ್ರಿಕೆಗಳೂ - ಪ್ರಬಂಧಗಳೂ' ಎಂಬ ವಿಷಯವಾಗಿಯೂ ವಿಚಾರಪೂರಿತವಾದ ಭಾಷಣಗಳನ್ನು ಮಾಡಿದರು ; ಶ್ರೀ|| ಜಿ. ಪಿ. ರಾಜರತ್ನಂ ಅವರು ದಕ್ಷಿಣ ಕನ್ನಡದ ಕೆಲವು ಪ್ರಬಂಧಕಾರರನ್ನು ಕುರಿತು ತಿಳಿಯ ಹೇಳಿದರು.

[ಭಾಷಣಗಳ ಸಾರಾಂಶವನ್ನು ಮುಂದೆ ಪ್ರಕಟಿಸಲಾಗುವುದು.]

ಸಭಾಪತಿಗಳು ಭಾಷಣಗಳನ್ನು ಮೆಚ್ಚಿ ಕೆಲವು ಮಾತುಗಳನ್ನಾಡಿದ ಮೇಲೆ, ಸಂಘದ ಉಪಾಧ್ಯಕ್ಷರಾದ ಶ್ರೀ|| ಮಾಸ್ತಿ ವೆಂಕಟೇಶ ಅಯ್ಯಂಗಾರ್‍ಯರು ಸಭಾಪತಿಗಳಿಗೂ ಭಾಷಣಕಾರರಿಗೂ ಸಂಘದ ಪರವಾಗಿ ವಂದನೆಗಳನ್ನು ಅರ್ಪಿಸಿದರು. ಇಲ್ಲಿಗೆ ಬೆಳಗಿನ ಕಾರ್ಯಕ್ರಮ ಕೊನೆಗಂಡಿತು.

### ಸಂಜೆಯ ಕಾರ್ಯ ವಿವರ

ಸಂಜೆ ೪ಗಂಟೆಗೆ ಮತ್ತೆ ಸಭೆ ಸೇರಿತು. ಈ ಕೆಳಗಿನಂತೆ ಪ್ರಬಂಧಗಳ ಓದು ನಡೆಯಿತು.

### ಪ್ರಬಂಧಗಳ ಓದು

೧. ಶ್ರೀ|| ಗಳಾದ ಕಡೂರು ಶ್ರೀಪಾದ — 'ಟಾಲ್‌ಸ್ಟಾಯಿಯವರ ದುರಂತ ಪ್ರಣಯ' ; ೨. ಬಿ. ಜಿ. ಎಲ್. ಸ್ವಾಮಿ — 'ಜೀವ ವಿಜ್ಞಾನದಲ್ಲಿ ತಿಲೋತ್ತಮೆ' ; ೩. ವಿ. ಎನ್. ಭೂಪಾಲಂ— 'ಓದಿಗಿಂತ ಊಟ ದೊಡ್ಡದು' ; ೪. ಜೀರಗೆ ಕ. ಬಸವಪ್ಪ — 'ವೀರಶೈವರ ನೈತಿಕ ವಿಚಾರಗಳು' ; ೫. ಎಂ. ವಿ. ನಾರಾಯಣಮೂರ್ತಿ— 'ರೈಲು' ; ೬. ಬಿ. ವಿ. ಕೃಷ್ಣಮೂರ್ತಿ— 'ಸಣ್ಣ ಕತೆಗಳ ಬರಹಗಾರರ ಸ್ಥಾನ' ; ೭. ಜಿ. ಪಿ. ರಾಜರತ್ನಂ— ಮಾಸ್ತಿಯವರ 'ಶಾಂತಿ' ಮತ್ತು ತಮ್ಮ 'ಜೈನ ಪುರಾಣಗಳಲ್ಲಿ ಭವಾವಳಿ' ; ೮. ಕೆ. ಎಸ್. ಸೀತಾರಾಮಯ್ಯ— 'ಸಮಾಜ ಸುಧಾರಕ ರಾಘವಾಂಕ' ; ೯. ಪಿ. ಪ್ರಭಾಶಂಕರ್— ಪ. ರಮಾನಂದರ 'ನನ್ನ ಭಾವ' ; ೧೦. ಎಂ. ವಿ. ಸೀತಾರಾಮಯ್ಯ — 'ರಸಿಕ(ತೆ)' ; ೧೧. ಎಂ. ಎಸ್. ಶಾಮರಾವ್—'ತಿಂಗಳ ಕೊನೆ' ; ೧೨. ನಾಡಿಗೇರ ಕೃಷ್ಣರಾವ್—'ಸಾಹಿತ್ಯ ಸೇವೆ'.

ಪ್ರಬಂಧಗಳ ಓದು ಮುಗಿದ ಬಳಿಕ ಕಾರ್ಯದರ್ಶಿಗಳ ಪ್ರಾರ್ಥನೆಯ ಮೇರೆಗೆ ಶ್ರೀ|| ಮಾಸ್ತಿಯವರು ಈ ಕೆಳಗೆ ಕಂಡಂತೆ ಕೆಲವು ಮಾತುಗಳನ್ನಾಡಿ ಕಿರಿಯ ಸಾಹಿತಿಗಳನ್ನು ಹರಸಿದರು.

### ಮಾಸ್ತಿಯವರ ಭಾಷಣ

"ಈಗ್ಗೆ ಕೆಲವು ಕಾಲದ ಹಿಂದೆ ಇಂಥ ಸಾಹಿತ್ಯವನ್ನು ಕೇಳುವವರು ಇರಲಿಲ್ಲ. ಅದರ ಬೆಳವಣಿಗೆಯೂ ಅಷ್ಟಾಗಿ ಇರಲಿಲ್ಲ. ಈಗ ಕನ್ನಡ ಸಾಹಿತ್ಯ ಬಹುಮುಖವಾಗಿ ಬೆಳೆಯುತ್ತಿದೆ. ಅದು ಹೇಗೆ ಬೆಳೆಯುತ್ತಿದೆ ಎನ್ನುವುದನ್ನು ಹಿರಿಯರು ತಿಳಿಯಬೇಕಾದರೆ ಅವರು ಕಿರಿಯರ ಬರಹಗಳನ್ನು ಓದಬೇಕು, ಕೇಳಬೇಕು.

ಪಾಶ್ಚಾತ್ಯರಂತೆ ನಮ್ಮಲ್ಲಿಯೂ ಸ್ವತಂತ್ರ ಸಾಹಿತ್ಯಸಂಪತ್ತು ಬೆಳೆಯಬೇಕಾದರೆ ಅವರ ಸ್ವಾವಲಂಬನ ನಮಗೆ ಬರಬೇಕು. ನಮ್ಮವರು ತಮ್ಮ ಗ್ರಂಥಗಳನ್ನು ತಾವು ಬರೆಯಬೇಕು: ಅಂದರೆ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳಬೇಕು; ತಮ್ಮ ಸ್ವಂತ ಅನುಭವ ತಿಳಿಸಬೇಕು; ತಮ್ಮ ಬಾಳು ತಾವು ಬದುಕಬೇಕು ; ಬಾಳಿನ ದಾರಿಯಲ್ಲಿ ಧೃತಿಯಿಂದ ನಡೆಯಬೇಕು. ಮುಂದುವರಿಯುತ್ತಿರುವ ಬೇರೆಯ ಜನರ ಕೆಲಸವನ್ನು ನೋಡಿಕೊಂಡು ನಾವು ಅವರಂತೆಯೇ ಮುಂದುವರಿಯಬೇಕು.

ನಾನು ಬರೆಯುವುದಕ್ಕೆ ಮೊದಲು ಮಾಡಿದ ಕಾಲದಲ್ಲಿ ಹೊಸ ತರದ ಬರವಣಿಗೆಗೆ ಪ್ರೋತ್ಸಾಹವಿರಲಿಲ್ಲ. 'ನಾನು ಮೊತ್ತ ಮೊದಲು ೧೯೧೧ರಲ್ಲಿ 'ರಂಗನ ಮದುವೆ' ಎಂಬ ಕತೆಯನ್ನು ಬರೆದೆ. ನನ್ನ ಬರಹವನ್ನು ಜನ ಸಾಹಿತ್ಯವೆನ್ನುವರೆಂಬ ಭರವಸೆ ನನಗೆ ಆಗ ಇರಲಿಲ್ಲ.

ಸೂರ್ಯ ಚಂದ್ರ ಹೇಗೆ ಎಲ್ಲರಿಗೂ ಒಂದೋ ಬಾಳೂ ಹಾಗೆಯೆ. ಇಂಗ್ಲೆಂಡಿಗೆ ಬೇರೆ ಸೂರ್ಯ, ನಮಗೆ ಬೇರೆ ಸೂರ್ಯ ಇಲ್ಲ. ಅಲ್ಲಿ ಬಾಳ್ವೆ ಇರುವಂತೆ ಇಲ್ಲಿಯೂ ಇದೆ; ಅಲ್ಲಿ ಕಷ್ಟಸುಖ ಇರುವಂತೆ ಇಲ್ಲಿಯೂ ಇದೆ. ನಮ್ಮ ಸೀಮೆಯಲ್ಲಿ ಎಲ್ಲವೂ ಇದೆ. ಆದರೆ ನಮ್ಮ ಜನರನ್ನು ಬುದ್ಧಿವಂತರಾದವರು ನಡಸಿಕೊಂಡು ಹೋಗಬೇಕಾಗಿದೆ. ನಡಸಿಕೊಂಡು ಹೋಗುವವರು ಯಾವುದನ್ನೂ ಲೆಕ್ಕಿಸದೆ ಕೆಚ್ಚಿನಿಂದ ಮುಂದೆ ಸಾಗಬೇಕು.

ಈ ಕೆಲಸವನ್ನು ಕಿರಿಯರಾದ ನೀವು ಮಾಡಬೇಕಾಗಿದೆ. ಈ ದಿನ ನೀವು ಓದಿದ ಪ್ರಬಂಧಗಳನ್ನು ನಾವೆಲ್ಲ ಕೇಳಿ ಅತ್ಯಂತ ಸಂತೋಷಪಟ್ಟಿದ್ದೇವೆ. ನೀವು ಜೀವನವನ್ನು ಸೂಕ್ಷ್ಮವಾಗಿ ನೋಡಬಲ್ಲಿರಿ, ನೋಡಿದ್ದನ್ನು ಕೌಶಲದಿಂದ ಹೇಳಬಲ್ಲಿರಿ, ಹೇಳುವುದನ್ನು ಹಾಸ್ಯವಾಗಿ ಸರಸವಾಗಿ ಹೇಳಿ ನಲಿವು ಕೊಡಬಲ್ಲಿರಿ ; ವಿಜ್ಞಾನಶಾಸ್ತ್ರ ವಿಚಾರಗಳನ್ನು ಸರಳವಾಗಿ ನಿರೂಪಿಸಬಲ್ಲಿರಿ ; ಸಾಹಿತ್ಯ ವಿಮರ್ಶೆ ಮಾಡಬಲ್ಲಿರಿ ; ಇದಿಷ್ಟು ನಿಮ್ಮ ಪ್ರಬಂಧಗಳಿಂದಲೆ ಮನದಟ್ಟಾಗುತ್ತದೆ. ನಿಮ್ಮಲ್ಲಿ ಶಕ್ತಿಯಿದೆ. ಕೆಚ್ಚಿನಿಂದ ಮುಂದೆ ನಡೆಯಿರಿ. ಪುಸ್ತಕ ಬರೆದರೆ ಪ್ರಕಟಿಸಲು ಹಣ ಇರುತ್ತದೆಯೊ ಇಲ್ಲವೊ, ಬರೆದದ್ದನ್ನು ಜನ ಓದುತ್ತಾರೆಯೋ ಇಲ್ಲವೊ ಇವುಗಳಾವುವನ್ನೂ ಲೆಕ್ಕಿಸದೆ ಬರೆಯುತ್ತ ಹೋಗಿ. ಇನ್ನು ೫-೧೦ ವರ್ಷಗಳಲ್ಲಿ ಸಾಹಿತ್ಯದ ಪ್ರತಿಯೊಂದು ಶಾಖೆಯಲ್ಲೂ ಕಡೆಯಪಕ್ಷ ೫೦ ಹೆಸರನ್ನಾದರೂ ಹೇಳುವಂತಾಗಬೇಕು. ನೀವು ಭಯಪಡದೆ, ಎಚ್ಚರಿಕೆಯಿಂದ ಧೈರ್ಯದಿಂದ ಮುಂದೆ ಮುಂದೆ ನಡೆದು ಹೋದರೆ ಆ ಕಾಲ ಬಂದೇ ಬರುತ್ತದೆ; ಬರುತ್ತದೆಯೆಂಬ ಭರವಸೆ ಇದೆ. ಆ ಭರವಸೆಗೆ ಕಾರಣ ಕಿರಿಯರಾದ ನಿಮ್ಮಲ್ಲಿ ಉಂಟಾಗಿರುವ ಮನಃಪ್ರಸಾದ. ಭಗವಂತನ ಅನುಗ್ರಹ ನಿಮ್ಮ ಮೇಲೆ ಇದೆ, ನಿಮ್ಮಿಂದ ದೊಡ್ಡ ಕೆಲಸವಾಗುತ್ತದೆ– ಎಂದು ಸ್ವಲ್ಪ ವಯಸ್ಸಾದ ನಾವು ಆಸೆಪಟ್ಟಿದ್ದೇವೆ, ಧೈರ್ಯಗೊಂಡಿದ್ದೇವೆ. ನಮ್ಮ ಕನಸನ್ನು ನೀವು ನನಸುಮಾಡಿ."

ಬಳಿಕ ಸಭಾಧ್ಯಕ್ಷರೂ ಸಹ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಎರಡು ಮಾತಾಡಿದರು. ಕಾರ್ಯದರ್ಶಿಗಳು ಸಭಾಪತಿಗಳಿಗೂ, ಶ್ರೀ|| ಮಾಸ್ತಿಯವರಿಗೂ ಪ್ರಬಂಧಗಳನ್ನು ಓದಿದ ಸಾಹಿತಿಗಳಿಗೂ ವಂದನೆಗಳನ್ನು ಸಮರ್ಪಿಸಿದ ಮೇಲೆ ಸಭೆ ಮುಕ್ತಾಯವಾಯಿತು.

---

**ತುಂಕೂರು : ಇಂಟರ್‌ಮೀಡಿಯೆಟ್ ಕಾಲೇಜು ಕರ್ನಾಟಕ ಸಂಘ**

ಇದೇ ತಿಂಗಳು ೨ನೆಯ ತಾರೀಖು ಸೋಮವಾರ ಸಂಜೆ ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀಮಾನ್ ಡಾ|| ಬಿ. ತಿರುಮಲಾಚಾರ್, ಎಂ.ಎಸ್‌ಸಿ., ಪಿಎಚ್.ಡಿ. (ಲಂಡನ್) ಅವರ ಅಧ್ಯಕ್ಷತೆಯಲ್ಲಿ ಕಾವ್ಯವಾಚನವೊಂದು ನಡೆಯಿತು. ಧಾರವಾಡದ ಮನೋಹರ ಗ್ರಂಥ ಭಂಡಾರದ ಪ್ರತಿನಿಧಿಗಳಾಗಿ ಇಲ್ಲಿಗೆ ಆಗಮಿಸಿರುವ ತರುಣ ಸಾಹಿತಿಗಳಾದ ಶ್ರೀಮಾನ್ ದತ್ತಾತ್ರೇಯ ಕುಲಕರ್ಣಿ ಅವರು ಕನ್ನಡ ನಾಡಿನ ಸುಪ್ರಸಿದ್ಧ ಕವಿಗಳಾದ ಶ್ರೀಮಾನ್ ಬೇಂದ್ರೆಯವರ ಕವನಗಳನ್ನು ಮನರಂಜನೆಯಾಗುವಂತೆ ಉಚಿತವಾದ ವ್ಯಾಖ್ಯಾನ ವಿವರಣೆಗಳೊಂದಿಗೆ ಅಂದು ತೋರಿಸಿದರು.

**ಮುಂಬಯಿ : ಮೈಸೂರು ಸಂಘ**

ಮೈಸೂರು ಸಂಘದ ವಿಶೇಷ ಅಧಿವೇಶನ ೨೫-೮-೪೦ನೆಯ ಭಾನುವಾರ ದಿವಾನ್ ಬಹದ್ದೂರ್ ಶ್ರೀ|| ಎನ್. ಎಸ್. ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡೆದು, ಸಂಘದ ಕಟ್ಟಡದ ಬಡಾವಣೆಗಾಗಿ ಆಗಿರುವ ೧೩,೦೦೦ ರೂಪಾಯಿಗಳ ಅಂದಾಜು ಪಟ್ಟಿಯನ್ನು ವಿಮರ್ಶಿಸಲಾಯಿತು. ಸಂಘದಲ್ಲಿ ಮೈಸೂರು ಶ್ರೀಮನ್ಮಹಾರಾಜರವರ ಪಟ್ಟಾಭಿಷೇಕ ಮಹೋತ್ಸವವನ್ನು ಆಚರಿಸಿದ ಬಳಿಕ ಕಟ್ಟಡದ ಬಡಾವಣೆಯ ಕೆಲಸಗಳನ್ನು ಪ್ರಾರಂಭ ಮಾಡಬೇಕೆಂದು ತೀರ್ಮಾನವಾಯಿತು.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೪೬

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೩, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.



## ಕರ್ನಾಟಕ ರತ್ನಸಿಂಹಾಸನಾಧೀಶ್ವರರಾದ
## ಮೈಸೂರು ಶ್ರೀಮನ್ಮಹಾರಾಜ
## ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ
## ಶುಭ ಸಂದೇಶ

"ನನ್ನ ಪ್ರೀತಿಪಾತ್ರರಾದ ಪ್ರಜೆಗಳೇ,

* * * * *

ನಾನು ನನ್ನ ಹಿರಿಯರ ಸಿಂಹಾಸನವನ್ನೇರುವ ಈ ವ್ರತಸಮಾರಂಭವನ್ನು, ನನ್ನನ್ನೂ, ನನ್ನ ಜೀವಮಾನವನ್ನೂ, ನನ್ನ ಸಕಲ ಸರ್ವಸ್ವವನ್ನೂ ಮೈಸೂರು ಸಂಸ್ಥಾನದ ಜನರ ಸೇವೆಗಾಗಿ ಸಮರ್ಪಣದೀಕ್ಷೆಯೆಂಬುದಾಗಿ ಎಣಿಸುತ್ತೇನೆ. ಇದರಲ್ಲಿ ನನ್ನೊಬ್ಬನ ಪ್ರಯತ್ನವೊಂದೇ ಜಯಶಾಲಿಯಾಗಲಾರದೆಂದು ನಾನು ಚೆನ್ನಾಗಿ ಅರಿತಿದ್ದೇನೆ. ನಿಮ್ಮ ನೆರವು, ನಿಮ್ಮ ಸಹಕಾರ, ನಿಮ್ಮ ನಂಬಿಕೆ, ನಿಮ್ಮ ಪ್ರೇಮ ನನಗೆ ಬೇಕು.

ನನ್ನ ವಶಕ್ಕೆ ಒಪ್ಪಿಸಿರುವ ಪವಿತ್ರಕರ್ತವ್ಯದ ನಿರ್ವಹಣೆಯಲ್ಲಿ ಬೆಳಕನ್ನೂ, ಶಕ್ತಿಯನ್ನೂ ಭಗವಂತನು ನನಗೆ ಅನುಗ್ರಹಿಸಲಿ; ಮತ್ತು ಆತನ ವರಪ್ರಸಾದಗಳು ಯಥೇಷ್ಟವಾಗಿ ಮೈಸೂರು ಸಂಸ್ಥಾನದ ಪ್ರತಿಯೊಂದು ಮನೆಯಲ್ಲಿಯೂ ತೊಟ್ಟಿಯಲ್ಲಿಯೂ ಹೊಕ್ಕು ನೆಲಸಿ ಹೊಳೆದು ಬೆಳಗಲಿ."

**ಶ್ರೀ ಜಯಚಾಮರಾಜ ಒಡೆಯರ್**

ನಮ್ಮ ನಗೆಗಾರರು:—

## ೨. ರತ್ನಾಕರ

'ಕವಿವಲ್ಲಭ'ನೆನಿಸಿದ ನಂದಳಿಕೆ ಲಕ್ಷ್ಮೀನಾರಣಪ್ಪನವರು ಬಂದ ಅದೇ ಕನ್ನಡ ಜಿಲ್ಲೆಯಿಂದ ಅವರಿಗಿಂತ ಮೂರು ಶತಮಾನಗಳ ಹಿಂದೆ ಬಂದವನು ರತ್ನಾಕರ, 'ಭರತೇಶ ವೈಭವ'ದ ಕರ್ತೃ. ಭರತೇಶ ವೈಭವದಲ್ಲಿ ಕವಿಯ ಆಶಯ ಆಗಮ ಅಧ್ಯಾತ್ಮಗಳನ್ನು ಅಳವಡಿಸುವುದು, ಭೋಗ ಯೋಗ ಶೃಂಗಾರಗಳನ್ನು ಚಿತ್ರಿಸುವುದು. ಇಷ್ಟರಿಂದಲೆ ಕವಿ ನಮಗೆ ಪ್ರಿಯನಾಗಿಲ್ಲ. 'ಪೆಱವುಳಿ ಉಳ್ಳುವು ಇಲ್ಲಿ ಒಳವು; ಇಲ್ಲಿ ಉಳ್ಳುವಂ ಪೆಱವುಳಿ ಕಾಣಲಾಗದು' ಎನ್ನುವಂತೆ ರನ್ನ ತನ್ನ ಅಜಿತ ಪುರಾಣದಲ್ಲಿ ಆಗಮಭಾಷೆ ಅಳವಡಿಸಿದ್ದಾನೆ. ರತ್ನಾಕರನಲ್ಲಿ ಕಾಣುವ ಶೃಂಗಾರದ ಅವಸ್ಥೆಗಳನ್ನು 'ಭೋಗಿ ಯೋಗಿಗಳೆದೆ ಜುಮ್ಮೆಂದಟ್ಟು'ವಂತೆ ನೇಮಿಚಂದ್ರ ಷಡಕ್ಷರಿಗಳೂ ಹೇಳಿದ್ದಾರೆ. ರತ್ನಾಕರ ನಲ್ಲಾದರೂ ನಾವು ಮೇಲಿಂದ ಮೇಲೆ ಕಾಣುವುದು ಸಂಭೋಗ ಶೃಂಗಾರ, ವಿಪ್ರಲಂಭವಲ್ಲ. ರತ್ನಾಕರ ನಮಗೆ ಪ್ರಿಯನಾಗುವುದು ಈ ಇತರರಲ್ಲೂ ಕಂಡುಬರುವ ಕೆಲವು ಗುಣಗಳಿಗಾಗಿಯಲ್ಲ, ಅದುವರೆಗಿನ ಇತರರಾರಲ್ಲೂ ಇಷ್ಟುಮಟ್ಟಿಗೆ ಕಂಡುಬರದ ಒಂದು ವಿಶೇಷ ಗುಣಕ್ಕಾಗಿ; ಆತನ ಶೃಂಗಾರಕ್ಕೆ ಸಹ-ಜವಾಗಿ ಸಹ-ಚರವಾಗಿ ಸಹ-ಕರವಾಗಿ ಬರುವ ಅಪೂರ್ವಹಾಸ್ಯದ ಹರವಿಗಾಗಿ. ರತ್ನಾಕರನ ಗುಣ ಏನೆಂದು ತಿಳಿಯಬೇಕಾದರೆ ಸಂಸ್ಕೃತ ಪೂರ್ವಪುರಾಣವನ್ನೂ ಕನ್ನಡ ಆದಿಪುರಾಣವನ್ನೂ ಓದಬೇಕು, ಇವನ ಭರತೇಶ ವೈಭವವನ್ನೂ ಓದಬೇಕು. ಪೂರ್ವಪುರಾಣ ಆದಿಪುರಾಣಗಳ ಭರತ ಸಮಸ್ತ ರಾಜರನ್ನೂ ಅಂಜಿಸಿ ಕಪ್ಪ ಕೈಕೊಂಡ ಚಕ್ರವರ್ತಿ; ಹುಂಡಾವಸರ್ಪಿಣೀ ವಿಳಸನಕ್ಕೆ ಸಿಕ್ಕಿ ಚಿಕ್ಕ ತಮ್ಮನನ್ನೂ ಯುದ್ಧಕ್ಕೆ ಕರೆದು, 'ಕ್ರಮದಿಂ ಮೆಯ್ವೊಣರ್ದು, ಆಱದೆ, ಅಕ್ರಮದೆ ಮಾತಂ ಬಿಟ್ಟು, ತನ್ನ ಇಟ್ಟ ಚಕ್ರಂ ಅದುಂ ನಿಃಪ್ರಭಮಾಗೆ ಸಿಗ್ಗನೊಳಕೊಂಡು' ಬುದ್ಧಿಕಲಿತ ಉದ್ಧತ; ಆದಿಜಿನೇಶ್ವರನ ಧರ್ಮ ಲೋಕಕ್ಕೆ ದೊರಕಲು ಕಾರಣನಾದ ಆದಿತೀರ್ಥಕರಕ್ಷತ್ರಿಯ; ತನ್ನ ಗುರುಗುಮ್ಮನೆಯ ಗಾಂಭೀರ್ಯದಿಂದ ಜಗತ್ತನ್ನು ಸ್ತಂಭಿಸತಕ್ಕವನು. ಆದರೆ ರತ್ನಾಕರನ ಭರತೇಶನೋ ಸಮಸ್ತ ರಾಜರನ್ನು ಬಗ್ಗಿಸಿ ಕಪ್ಪ ಕೈಕೊಂಡನಾದರೂ, ಅದೇ ಹಿಂದಿನ ಕಾವ್ಯಗಳಲ್ಲಿನ ಅದೇ ಗಾಂಭೀರ್ಯವುಳ್ಳವನಾದರೂ, ತಾವು ಅವನಿಗೆ ಸೋತುದೆ ಒಂದು ಭಾಗ್ಯವೆಂಬ ಚಿತ್ತವೃತ್ತಿಯನ್ನು ಸೋತವರಲ್ಲಿ ಉಂಟುಮಾಡುವ ಸರಸಿ. ಇಲ್ಲಿಯ ಭರತೇಶ ಅಂತಃಪುರದವರಿಗೆ ರಮಣ, ಮಕ್ಕಳಿಗೆ ಪ್ರೀತಿಯ ತಂದೆ, ದಾಸದಾಸಿಯರಿಗೆ ವಿಶ್ವಾಸದ ಸ್ವಾಮಿ, ತಮ್ಮಂದಿರಿಗೂ ತಂಗಿಯರಿಗೂ ಹಿರಿಯಣ್ಣ, ಬಾಹುಬಲಿಗಂತೂ ಸವಿಮಾತಿನಿಂದಲೆ ಸೋಲಿಸಿದ ಧರ್ಮಗುರು, ಮೈದುನರಿಗೆ ಭಾವ, ತಾಯಿಗೆ ಮಗ, ಅತ್ತೆಗೆ ಅಳಿಯ, ಕವಿ ನಟ ನರ್ತಕ ಗಾಯಕ ಗಣಕ್ಕೆ ಪೋಷಕ, ಮುನಿಗಳ ಆರಾಧಕ, ಹಂಸನಾಥನ ಪಾದಸೇವಕ. ಹೀಗೆ ಅನೇಕಾಂತ ಮೂರ್ತಿವೆತ್ತಂತೆ ಅನೇಕರೂಪ. ಇದು ರತ್ನಾಕರನ ಸೃಷ್ಟಿ.

ಇಂತಹ ರತ್ನಾಕರಕೃತ ಭರತೇಶ್ವರ ಯಾರ ಪಾಲಿಗೆ ಏನೇ ಆಗಿರಲಿ, ನಮ್ಮ ಪಾಲಿಗಂತೂ ಆತನ ಅಂತಃಪುರದ ದಾದಿಯಾದ ಪಂಡಿತೆ ಹೇಳಿದಂತೆ, 'ನಗೆಕಾರ.' ಅವನ ಅರಸಿಯರಲ್ಲಿ ಒಬ್ಬಳಾದ ಕುಸುಮಾಜಿ ಹಾಡಿದಂತೆ

ನಗೆಯ ಚೆಲ್ವಿಕೆಯ ಮೋಹನಕಾಂತಿರಸವನು । ಮೊಗವೆತ್ತಲಲೆದುದತ್ತತ್ತ
ನೊಗೆದು ಮೊಗೆದು ಚೆಲ್ಲುವಂತೆ ರಾಯನ ಮುದ್ದು । ಮೊಗವೊಪ್ಪುತಿಹುದು....

ಭರತೇಶವೈಭವದಲ್ಲಿ ಸುಮ್ಮನೆ ಹಾಳೆ ತಿರುಗಿಸುತ್ತ ಹೋದರೂ ಸಾಕು. ಭರತ 'ವಿನೋದಾರ್ಥಿ,' 'ವಿನೋದಿಗಳರಸ,' 'ಆತ್ಮವಿನೋದಿ'; ಇಲ್ಲಿ 'ನಸುನಗೆ ಮೊಗದೊಳು,' ಅಲ್ಲಿ 'ಆರಸನಾನಂದಿಸುತಿರ್ದನೆದೆಯೊಳು'; ಇತ್ತ 'ಎದೆಯೊಳಿನಿಸು ನಗು,' ಅತ್ತ 'ದರಹಾಸದಿಂದ ನುಡಿವನು'; ಒಮ್ಮೆ 'ಮಂದಸ್ಮಿತ ಮುಖನಾಗಿ ರಾಜೇಂದ್ರನಾನಂದಿಸುತಿದ್ದ,' ಇನ್ನೊಮ್ಮೆ 'ಎಳೆನಗೆ ಮಿನುಗೆ ನುಡಿದನೊಲ್ದು', ಮತ್ತೊಮ್ಮೆ 'ಅರಸುಬ್ಬಿ ನಗುವಾ'; ಹೀಗೆಯೆ ಹೆಜ್ಜೆ ಹೆಜ್ಜೆಗೂ. ಭರತ ಒಂದೆರಡು ಸಲ 'ಗಹಗಹಿಸುತ' ನಕ್ಕುದುಂಟು; ಒಂದು ಸಲ 'ತುಚ್ಛಗಾಣಿಸಿ ನಕ್ಕು ನುಡಿ'ದದ್ದೂ ಉಂಟು. ಭರತನಂತೆಯೆ ಅವನ ಬಳಿಯವರಿಗು ಸಹ. ಅವರಿಗೆ ಸದಾ 'ನಸುನಗೆ ಮೊಗದೊಳು'— 'ದಳವೇರುವುದು ನಗೆ' ಅವರಿಗೆ ಯಾವಾಗಲೂ. ಅವರು 'ಚೆನ್ನಾಗಿ ನಗುತ ನುಡಿವರು', 'ಅಟ್ಟಹಾಸವ ಮಾಡುತೊಬ್ಬರೊಬ್ಬರ ಮೈಯ ತಟ್ಟುತ ತೋರಿ ನುಡಿವರು'. ಭರತನ ಅರಸಿಯರಲ್ಲಿ ಒಬ್ಬಳಾದ ಕುಸುಮಾಜಿ ಒಂದು ಸಲ

ಬಿಸಿನಗೆಯಾವುದು ತಣ್ಣಗೆಯಾವುದು । ಹುಸಿನಗೆ ಮುಗುಳುನಗೆಗಳು
ರಸನಗೆ ಯೆಳೆನಗೆಯೆಂಬವೆಂತಿಹುವೆಂದು । ನಸುನಗುತ..............

ಹಾಡಿದಳಂತೆ. ರತ್ನಾಕರನ ಭರತೇಶನನ್ನು ನೋಡಿದರೆ, ಈ ನಗೆಯ ನಾನಾ ರೂಪಗಳನ್ನು ಆಕೆ ಈತನಿಂದಲೆ ಕಲಿತಳೊ ಎನ್ನಿಸುತ್ತದೆ.

ಭರತೇಶನ ಸಹಜಸ್ಮಿತಕ್ಕೆ ವಿರಾಮ ಸಿಕ್ಕುತ್ತಿದ್ದುದು ಅವನ ಆಸ್ಥಾನದಲ್ಲಿ ಮಾತ್ರ. ಅಲ್ಲಿ ಮಾತ್ರ 'ಏಕೆ ನುಡಿಯನೊ ಇನ್ನೊಮ್ಮೆ ಎಂಬಂತೊಂದು ತೂಕದೊಳಿಸೆವನಾ ರಾಯ'. ಅಲ್ಲಿ ಮಾತ್ರ 'ಕಿಂಮೆನಬಾರದು ನಗಬಾರದತ್ತಿತ್ತ ನೆಮ್ಮಬಾರದು ಸಭೆಯೊಳಗೆ'. ಅದೊಂದು ಸಂದರ್ಭ ಬಿಟ್ಟರೆ ಉಳಿದೆಲ್ಲ ಕಡೆ, ಉಳಿದೆಲ್ಲ ಹೊತ್ತು, ಉಳಿದೆಲ್ಲರೊಡನೆ ಸಹಜವಾದ ಸರಸವಾದ ಉಚಿತವಾದ ಮಿತವಾದ ನಗು. ಭರತೇಶ್ವರ 'ಸರಸವನಾಡ; ಆಡಿದನಾದರೆ ಅದರಲ್ಲಿ ವಿರಸವ ಮೊಳೆದೋರಲೀಸ'.

ಮೋಹನಶೃಂಗಾರ ಮೋಕ್ಷಶೃಂಗಾರವೆಂ । ದಾ ಹೇಮವರ್ಣಗುಂಟೆರಡು
ಮೋಹನಶೃಂಗಾರ ಸತಿಯರ ಮೆಚ್ಚು ನಿ । ರ್ಮೋಹಾಂಗ ಮೋಕ್ಷಶೃಂಗಾರಾ

'ಶೃಂಗಾರ ಸಹಕರೋ ಹಾಸ್ಯಃ' ಎಂಬ ಸೂತ್ರ ಭರತನ ಮೋಕ್ಷ ಶೃಂಗಾರವನ್ನೂ ಬಿಟ್ಟುದಲ್ಲ: ಆತ ಜಿನತತ್ತ್ವೋಪದೇಶಕ್ಕೆ ಕಿವಿಗೊಟ್ಟಾಗ ಕೂಡ 'ಎಡೆಗೊಮ್ಮೆ ನಕ್ಕರೆ ಧರ್ಮಸೋಂಕಿನ ನಗೆ'. ಕಡೆಗೆ ಕೇವಲಜ್ಞಾನ ಪಡೆದು ಅಮೃತ ಶ್ರೀಕಾಂತೆ ತನ್ನನ್ನು ವರಿಸಬಂದಾಗಲೂ ಭರತ 'ಅದಕೂ ನಗುತ ನೋಡುತಿರ್ದ'ನಂತೆ! ಹೀಗೆ, ರತ್ನಾಕರನ ಭರತೇಶ ವೈಭವ ಮೊದಲಿನಿಂದ ಕಡೆಯವರೆಗೂ ಹಲವು ವಿಧದ ನಗುವಿನ ರತ್ನಾಕರ. ಭರತೇಶನ ಮನೆಯವರು ಹಿಂದೆ ಎಂದೂ ಕಾಣದ ಕಡಲನ್ನು ಒಂದು ದಿನ ಕಂಡರಂತೆ. ಅಲ್ಲಿ ಅವರು

ಅಟ್ಟುವ ತೆರೆಯ ಮುಂದೋಡುವ ತೆರೆಯ ಪೆ । ರ್ಚಟ್ಟದಂತೇಳ್ವ ತೆರೆಗಳಾ
ತುಂತುರು ತೆರೆ ನೊರೆ ಸುಳಿ ಘುಳುಘುಳುರವ । ತೊಂತಿಟ್ಟು ಹೊಳೆವ ವಾರಿಧಿಯಾ

ಕಂಡರಂತೆ. ಅವರು ಕಂಡ ಕಡಲಿನ ಈ ವರ್ಣನೆಯನ್ನು ರತ್ನಾಕರನಲ್ಲಿ ಕಾಣುವ ನಗುವಿಗೆ ಅನ್ವಯಿಸಬಹುದು. ಈ ರತ್ನಾಕರದ ಪೆರ್ಚಟ್ಟದಂಥ ತೆರೆಗಳಿಗೆ ಬರುವ ಮೊದಲು ತುಂತುರು, ನೊರೆ, ಸುಳಿ, ಘುಳುಘುಳು ರವಗಳನ್ನೆ ನೋಡೋಣ. ಕಡಲನ್ನು ಕಾಣುವುದಕ್ಕೆ ಕಂಡದ್ದೆ ಕ್ರಮ. ಇಲ್ಲಿಯೂ ಹಾಗೆಯೆ.

ಒಂದು ದಿನ ಭರತ ಉಪ್ಪರಿಗೆಯಲ್ಲಿ ಕುಳಿತು ಅರಸಿಯರನ್ನು ಕಾಣಬಯಸಿದ. ಅವರೆಲ್ಲ ಲೀಲೆಯಿಂದ ಸಿಂಗರಿಸಿಕೊಂಡು ಕೈಗಾಣಿಕೆ ಹಿಡಿದು ಮೇಲೇರಿದರು.

ನೋಡಿ ಬಾ ತಂಗಿ ಯೆಚ್ಚರಿಕೆ ಯಕ್ಕಾಜಿ ಕೈ । ನೀಡಕ್ಕ ಕೋ ಹಿಡಿ ತಾಯಿ
ಓಡದಿರಕ್ಕ ಬಾ ಬಾ ತಂಗಿಯೆಂದು ಮಾ । ತಾಡುತೇರಿದರೊಲವಿನೊಳು

ಹರಿವುತಿದ್ದ ಪಳಿಗೆ ಹರಿಹರಿ ಮುಂದೆ ನಿ । ನ್ನ ರಸನೀವನು ದೊಡ್ಡ ಮೆಚ್ಚಾ
ಬರಲಾರದವರೇನನಾಡರೆನುತ ತಾವು । ಸರಸವಾಡುತ ಪತ್ತುತಿಹರು

ತವಕಿಸಿ ನಡೆನಡೆಯೆನುತಿಪ್ಪಳಿವಳಿಷ್ಟು । ದಿವಸದಿಂ ಕಾಣಳೊ ಪತಿಯಾ
ನಿವಗೆ ಹಿತವ ಪೇಳ್ವುದೆನ್ನದು ತಪ್ಪು ಮಾ । ನವ ಮಾಳ್ಪೆನೆನುತೇರುತಿಹಳು.

ಸಾಕು ನಿಮ್ಮುಪಚಾರ ತಾವೇನು ಬರಲಾರ । ರಾಕೆಯಿಂ ಮುಂದೆ ನಡೆದರೆ
ಈಕೆ ಗಂಡನ ಕಾಣಹರಿವಳೆಂದಪರೆಂಬ । ವಾಕಿಗಳುಕಿ ಹಿಂದೆ ಬಹೆನು

ಮಾನಸನೀಕೆಗೆ ತನ್ನ ಗಂಡನಂತಾತ್ರನ । ಜಾನಿಸುತ್ತೈದುವ ಪರಿಯೊ
ಏನೆಂಪು ತಿಳಿಯಬಾರದು ಹೇಳು ನಿನಗೆ ಸು । ಧ್ಯಾನವ ಕಲಿಸಿದನಾರೆ

ಧ್ಯಾನಗೀನವ ನೀವು ನಿಮ್ಮರಸನು ಬಲ್ಲಿ । ರಾನೇನ ಬಲ್ಲೆನಾ ಗುಸುಟಾ
ಈ ನಿಮ್ಮ ಸರಸಸಲ್ಲಾಪಕೆ ಮನದಲ್ಲಿ । ಆನಂದಿಸುತ ಬಂದೆನಕ್ಕಾ

ಹಿಂದುಳಿದರೆ ಮುಂದೆ ನಡೆದರೆ ಸುಮ್ಮನೆ । ಬಂದರೆ ಮಾತನಾಡಿದರೆ
ಒಂದೊಂದ ಕಲ್ಪಿಸುವಿರಿ ನಿಮ್ಮನುರೆ ಗೆಲು । ವಂದವನಾ ಚಕ್ರಿ ಬಲ್ಲ

ಹೀಗೆ ವಿನೋದ ವಿನಯದಿಂದ ಅವರೆಲ್ಲ ಅರಸನ ಬಳಿಗೆ ನಡೆದು ನಳಿತೋಳ ನೀಡಿ ಕಾಣಿಕೆ ಕೊಟ್ಟು ಕೈಮುಗಿದು ನಿಂದರು. ಪೊಂಬಣ್ಣೆ ಮೈಯಿನೊಬ್ಬಳು ಹೊಸ ನಿಂಬೆಹಣ್ಣು ಕೊಟ್ಟಳು. ನೀಲಾಂಗಿ

ಯೊಬ್ಬಳು ನೀಲಾಂಬುಜ ತಂದಳು. ಕೆಂಪಿಯೊಬ್ಬಳು ಸಂಪಿಗೆ ನೀಡಿದಳು. ಕರಿಯಳೊಬ್ಬಳು ಸುರಗಿಯ ಮಾಲೆಯಿತ್ತಳು. ಬಟ್ಟಜವ್ವನೆಯೊಬ್ಬಳು ಬೆಟ್ಟದಾವರೆಯಿತ್ತಳು. ಆಗ ಅವರ ನಡುವೆ

ಮೈಯೊಡ್ಡಿ ಸಂಮುಖದೊಳು ಸಿಲ್ಲದೆಲ್ಲರ । ಮೈಯ ಮರೆಗೆ ಸಾರುವವಳಾ
ಕೈಯ ಹಿಡಿದು ಕರೆತಂದೊರ್ವಳರಸಗೆ । ಕೈಯ ಕಾಣ್ಕೆಯ ಕೊಡಿಸಿದಳು

ಅಂಜುತಂಜುತ ಬಾಲೆ ಬಂದೊರ್ವಳರಸಗೆ । ಕೆಂಜಾಜಿ ಸರಗೊಡುವಾಗ
ಕೆಂಜಾಜಿ ಜಗುಳಿತು ಕಾಣಿಕೆಯಲ್ಲ ಪು । ಷ್ಪಾಂಜಲಿಯೆಂದರಾಳಿಯರು

ಎಲ್ಲರ ಮುಂದೊರ್ವ ಮುಗ್ಧೆ ನಾಚುತ ಬಂದು । ಮಲ್ಲಿಗೆ ಸರಗೊಡುವಾಗ
ಮಲ್ಲಿಗೆ ಜಾರಿತು ಜಾರಿದರೇನದೆ । ಮ್ಮಲ್ಲಿಗೆಯೆಂದನು ನೃಪತಿ

ಪಾದರಿಯರಲನೊರ್ವಳು ಕೊಡುತಿರೆ ಜಾರಿ । ಪಾದದೆಡೆಗೆ ಬಿದ್ದುದವನ
ಪಾದದಿಂದೊದೆದನು ಸೋತು ಕಾಲ್ಗೆರಗಿದ । ಪಾದರಿಯನು ನೂಕುವಂತೆ

ಪರದಾರಸೋದರನೊತ್ತಿಗೆ ಪಾದರಿ । ಬರಬಹುದೇ ಭರತೇಶಾ
ಚರಣದಿಂದೊದೆದುದದಾಯ್ತೆಂದು ಪಂಡಿತೆ । ಅರಸನ ನಸುನಗಿಸಿದಳು

ಕಡುಶೀಲವತಿಯರು ನಿನ್ನ ಪೆಂಡಿರು ತಮ್ಮ । ಕಡೆಗೊಬ್ಬ ಪಾದರಿ ಬರಲು
ಪಿಡಿತಂದು ನಿನಗೊಪ್ಪಿಸಿದರು ನೀನೊದೆದುದು । ಬೆಡಗಾಯ್ತು ಶೀಲನಿಧಾನಾ

ಮುಂಧೆ, ಕಡೆಗಣ್ಣ ಪ್ರಭೆಯವಳೊಬ್ಬಳು ಒಂದು ಮುಡಿವಾಳದಝುಲ್ಲಿ, ಭಾವೆಯೊಬ್ಬಳು ಮಾವಿನ ತಳಿರು,—ಹೀಗೇ ಕಾಣ್ಕೆಗೊಡುತ್ತಿರಲು

ಮುತ್ತಿನ ಮಣಿಯನೊರ್ವಳು ತಂದು ನೃಪನ ಕೈ । ಗಿತ್ತು ಕೈಮುಗಿದಳಂತದನು
ಒತ್ತಿನೊಳಿದ್ದ ಪಂಡಿತೆ ಕಂಡು ನುಡಿದಳು । ಮತ್ತೊಂದು ಬಿನದದ ಮಾತಾ

ವದನ ವದನ ಸೋಂಕಿ ಮುತ್ತಕೊಡುವುದು ಲೋ । ಕದೊಳುಂಟು ಭರತಚಕ್ರೇಶಾ
ಇದು ಚಿತ್ರ ಕರಯುಗ ಸೋಂಕಿ ಮುತ್ತೀವುದೆಂ । ದೆದೆಯೊಳಿನಿಸು ನಗಿಸಿದಳು.

ಇನ್ನೊಂದು ಸಲ ಭರತೇಶ್ವರ ದಿಗ್ವಿಜಯಕ್ಕೆ ಹೊರಟು ಬೀಡು ಬಿಟ್ಟಿರುವಾಗ ದಾದಿಯೊಬ್ಬಳು ಅವನ ಮಗು ಅರ್ಕಕೀರ್ತಿಯನ್ನು ತಂದುಕೊಟ್ಟಳು.

ತೊಡೆಯ ಮೇಲಿಟ್ಟು ಮಗನ ನೋಡಿ ಮಂಡೆಯ । ತಡಹುತ ಮುತ್ತಕೊಡುವನು
ಒಡನೆತ್ತಿಕೊಂಡೆದೆತುಂಬಲಪ್ಪುವನು ಬೊ । ಟ್ಟಿಡುವನು ಪಣೆಯೊಳಾ ನೃಪತಿ

ತಳಡೆಯ ಕೊರಳನೆದ್ದಪ್ಪುವ ಕಿರುವೆರ । ಳಿಂದ ಕೊರಳ ಮಣಿಗಳನು
ಒಂದೆಂಟು ಹತ್ತೆರಡೆಂದು ತಪ್ಪೆಣಿಸುವ । ನಂದದಕರಸುಬ್ಬಿ ನಗುವಾ

ಮೀಸೆಯ ತಿದ್ದುವ ಗಲ್ಲವ ತಡಹಿ ವಿ । ಲಾಸದಿ ನಗುವನಾ ತರಳಾ
ಆ ಸುಕುಮಾರನ ಮೊಳೆವಲ್ಲ ಕಂಡಣ್ಣ । ಲೇಸು ಲೇಸೆಂಬನಾ ತಂದೆ

ಆದಿತೀರ್ಥಂಕರ ಎನ್ನರ್ಕಕೀರ್ತಿಯೆಂ । ದೋದಿಸುವನು ತನ್ನ ಮಗಗೆ
ಆದಿಂಕರನೆಂಬನಾ ಬಾಲನದಕೆ ವಿ । ನೋದದಿ ನಗುವನಾ ರಾಯಾ

ಅಣ್ಣ ಚಿದಂಬರಪುರುಷ ಎನ್ನೆಂದಾಗ । ಬಣ್ಣಿಸಿ ಕಲಿಸಿ ಕೊಡುವನು
ಚಿಣ್ಣ ಚಿಂಬರಪೂಸ ಎಂಬನದಕೆ ಹೊಟ್ಟೆ । ಹುಣ್ಣಾಗೆ ನಗುವನಾ ಚಕ್ರಿ

ಗುರುನಿರಂಜನಸಿದ್ಧ ಎನ್ನಪ್ಪನೆಂದು ಭೂ । ವರ ತನ್ನ ಮಗನಿಗೋದಿಸುವಾ
ತರಳನದಕೆ ನಿಂಜಸಿದ್ಧಯೆಂಬನು ರಾಯ । ಮುರಿದಪ್ಪಿ ನಗುತ ಚುಂಬಿಸುವಾ

ನೋಡಣ್ಣ ಮುಂದಿದ್ದ ರಾರೆಂದು ದೊರೆಗಳ । ಕೂಡೆ ತೋರುವನು ಬಾಲಕಗೆ
ನೋಡುತ ಶಿಶು ಹಸ್ತದೊಳು ತೋರದೆಡಗಾಲ । ನೀಡಿ ತೋರುವುದು ಭೂಭುಜರಾ

ಪಾದದೂಳಿಗದವರೆಂದು ನಮ್ಮೆಲ್ಲರ । ಪಾದಪದ್ಮದಿ ಸೂಚಿಸಿದನು
ಆದಿಚಕ್ರಿಯ ಸುತಗದು ಜಾತಿ ಸಹಜವೆಂ । ದಾ ದೊಡ್ಡ ದೊರೆಗಳಾಡಿದರು

ಏಕಾಂತಗೈವಂತೆ ತಂದೆಯ ಕಿವಿಯೊತ್ತಿ । ಗಾ ಕುಮಾರಕ ಮೊಗವಿಟ್ಟಾ
ಸಾಕಿನ್ನು ನಮಗೇಕೆ ಸುಪ್ರಧಾನಿಕೆಯೆಂಬ । ನಾ ಕಾಲವರಿದೊಲ್ದು ಮಂತ್ರಿ

ಅದೆ ಸಮಯದಲ್ಲಿ, ರಾಜರೆಲ್ಲರು ಒಲವಿನಿಂದ ಮಗುವಿಗೆ ಕಾಣಿಕೆಯಿಕ್ಕಿದರು. ದೊರೆಯ ಮುಂದೆ ಒಂದು ಚಿನ್ನದ ರಾಶಿಯಾಯ್ತು. ಆಗ ಭರತ

ಕಳುಹಣ್ಣ ನಿನಗೆ ಕಾಣಿಕೆಯಿಕ್ಕಿ ಕೈಮುಗಿ । ದೆಳಸಿ ನಿಂದಿರ್ದರರಸೆಂದಾ
ತಲೆಯೊಲೆದೊಲೆದು ಕೈಯಾಡಿಸಿ ಕಳುಹಿ ತಾ । ಯೆಳೆಗೂಸಿಗದು ಜಾತಿಸಹಜ

ಅಂತಲ್ಲವಣ್ಣ ವೀಳೆಯವ ಕೊಟ್ಟೆಲ್ಲರ । ಸಂತೋಷದೊಳು ಕಳುಹೆಂದಾ
ತಾಂ ತೆಗೆದವರ ಮೇಲೆಲೆಯ ಚೆಲ್ಲಿತು ಶಿಶು । ಮುಂತೆಲ್ಲ ಕುಳಿತರರ್ತಿಯೊಳು

ಈ ರಾಶಿಹೊನ್ನ ನಿನ್ನಾಗಿರ್ೀವವಣ್ಣಯೆಂ । ದಾರಯ್ದ ನಾ ಪುತ್ರನೊಳಗಾ
ಸಾರೆ ನಿಂದಿರ್ದ ಸೇವಕರ ತೋರಿತು ಶಿಶು । ಭೂರಾಮ ವಿಸ್ಮಯಬಟ್ಟಾ.

ಮತ್ತೊಂದು ಸಲ ಭರತೇಶ ಅರಸಿಯರೊಡನೆಯೂ ಮಕ್ಕಳೊಡನೆಯೂ ಭೋಜನ ಶಾಲೆಗೆ ಬಂದ. ಅಲ್ಲಿ ಭರತನ ತಾಯಿ ಯಶಸ್ವತಿ ಉಯ್ಯಲ ಮೇಲೆ ಗದ್ದುಗೆಯಲ್ಲಿದ್ದಳು. ತಾಯನ್ನು ಪೂಜಿಸಬೇಕೆಂದು ಭರತ ಅಲ್ಲಿಗೊಂದು ಸಿಂಹಾಸನ ತರಿಸಿ ಅಲ್ಲಿಗೆ ಚಿತ್ತೈಸಬೇಕೆಂದ. ಆದರೆ ತಾಯಿ ತನಗೇಕೆ ಪೂಜೆಯೆಂದು ಒಲ್ಲೆನೆಂದಳು. ತಾಯನ್ನು ಸಿಂಹಾಸನಕ್ಕೆ ತರುವ ಸುಲಭೋಪಾಯ ಏನೆಂದು ಭರತ ಅರ್ಕಕೀರ್ತಿಯನ್ನು ಕೇಳಿದ. ಗದ್ದುಗೆ ಹಿಡಿದೆತ್ತಿ ತರುವೆನೆಂದ ಅರ್ಕಕೀರ್ತಿ. ಇನ್ನೊಬ್ಬ ಮಗ ಆದಿರಾಜನನ್ನು ಕೇಳಿದರೆ, ಅವನು ಪೂಜೆ ಅಲ್ಲಿಯೆ ಮಾಡೋಣವೆಂದ. ಉಳಿದ ಮಕ್ಕಳು ತಂದೆಗಿಂತ ತಾವೇನು ಬಲ್ಲೆವೆಂದರು. ಆಗ ಭರತ 'ಈ ತಂತ್ರಗಳೇಕೆ? ಒಂದು ಮಂತ್ರದಿಂದಲೆ ನಾನು ಇದನ್ನು ಸಾಧಿಸುವೆ'ನೆಂಧ.

ಏಳಿ ಪೂಜಾಸನಕಮ್ಮಾಜಿಯೆಂದನು । ಹೇಳಬೇಡೆಂದಳಾ ಮಾತ
ಹೇಳುವುದಿಲ್ಲೊಂದು ಮಂತ್ರಶಕ್ತಿಯ ನೀವು । ಲಾಲಿಸಬೇಡವೆಯೆಂದಾ

ಓಂ ಮಹಾಹಂಸನಾಥಾಯ ನಮಃ ಸ್ವಾಹಾ । ಅಮ್ಮಾಜಿಯೇಳಿಯೇಳದಿರೆ
ನಿಮ್ಮಯ್ಯ ಭರತಣ್ಣನಾಣೆ ಸ್ವಾಹಾಯೆಂದ । ಜುಮ್ಮನಿಳಿದು ನಿಂದಳಾಕೆ

ಪಣ್ಣಪಣ್ಣನೆ ನಡೆಯದಿರೆ ನಿಮ್ಮಯ ಚಕ್ರ । ದಣ್ಣನಾಣೆ ಸ್ವಾಹಾಯೆಂದಾ
ಅಣ್ಣ ಬಿಡಾಣೆಯನೆನುತಾಕೆ ನಡೆದಳು । ಹೆಣ್ಣುಗಳ್ನಗೆ ತಾನು ನಗುತ

ನೀವು ಪೇಳ್ವರಸಣ್ಣನಾಣೆ ಸ್ವಾಹಾ ವಿಷ್ಟ । ರಾವಲಂಬನವೇರಿರೆಂದಾ
ಭಾವೆಯರೆಲ್ಲರು ನಗುತ ಕೈಮುಗಿಯಲಾ । ದೇವಿ ಕುಳಿತಳೇರಿ ಮಣೆಯಾ

ನಿಮ್ಮ ದೊಡ್ಡಣ್ಣನಾಣೆಮ್ಮ ದೊಡ್ಡಣ್ಣನಾ । ಣೆಮ್ಮಯ ಚಿಕ್ಕಣ್ಣನಾಣೆ
ನಿಮ್ಮಯ ಚಿಕ್ಕಣ್ಣನಾಣೆ ಸ್ವಸ್ಥದೊಳಿರಿ । ಅಮ್ಮ ಸ್ವಾಹಾಠಠಯೆಂದಾ

ಭರತೇಶ ಭುಜಬಲಿಗಳನಾಕೆ ವಿನಯದಿ । ಕರೆವ ಮಾತುಗಳವು ಮತ್ತೆ
ಭರತೇಶ ತಾನರ್ಕಕೀರ್ತ್ಯಾದಿರಾಜರ । ಕರೆವ ಮಾತುಗಳು ಸ್ವಲ್ಪಗಳೆ

ಘೊಳ್ಳನೆಲ್ಲರು ನಗುತಿದ್ದರು ಮಗನೆ ನೀ । ನೊಳ್ಳಿತ ಕಲಿತೆ ಮಂತ್ರವನು
ಇಲ್ಲವಿನ್ನಾಣೆಯು ನನ್ನಾಣೆಯೆನಲಾಣೆ । ಯಿಲ್ಲಿಲ್ಲ ಸ್ವಾಹಾಹಿಯೆಂದಾ

ಮತ್ತೊಂದು ಸಲ, ಭರತೇಶ ಭುಜಬಲಿಯ ಮೇಲೆ ನಡೆದು ಪಾಳೆಯ ಬಿಟ್ಟಿರುವಾಗ, ಒಂದು ರಾತ್ರೆ ಆ ಕಟಕದಲ್ಲಿ ಭಾವಮೈದುನರಿಬ್ಬರು ಸೈನಿಕರು ಮಾತಾಡಿಕೊಂಡರಂತೆ:

ಹನಿಗೂಡಿ ಹಳ್ಳ ನಾರೊಡಗೂಡಿ ಹಗ್ಗವೆಂ । ಬನುವಿನೊಳ್ಪಡೆಗೂಡಿ ಚಕ್ರಿ
ಘನತೆವೆತ್ತನು ಸೇನೆಹೊರತಾದರಿವನೊಬ್ಬ । ಮನುಜನಲ್ಲವೆಯೆಂದರವರು

ಆಹುದಹುದಾನೆ ಕುದುರೆ ಮೊದಲಾದ ಸಂ । ಗ್ರಹದೋರಿ ಜಗವನಂಜಿಸಿದಾ
ಸಹಜಶಕ್ತಿಯ ನೋಡಲೀತಗೇನುಂಟಾದ । ಮಹಿಮೆ ನಮ್ಮತೆಂದರೊಡನೆ

ಭರತ ಇದನ್ನು ಕೇಳಿದ. ಅವನಿಗೆ ವಿನೋದ ಮಾಡಬೇಕೆನ್ನಿಸಿತು. ಮಾರನೆಯ ಬೆಳಗ್ಗೆ ಕಿರುಬೆರಲನ್ನು ಸಟೆಗೆ ಡೊಂಕುಮಾಡಿನೊಂದಂತೆ ಕುಳಿತ. ಮಂತ್ರಿ, ಮಕ್ಕಳು ಬಂದು ಮುಟ್ಟದರೆ ಸಟಿಗೆ ನರಳಿದ. ರಾಜವೈದ್ಯರು ಬಂದರು, 'ವರಮೂಲಿಕಾಸಾರ ಸಿದ್ಧ ತೈಲವ ಪೂಸಿ ಸರಿತ ಮಾಡುವೆ'ವೆಂದರು. ದಿವ್ಯ ಮಂತ್ರವಾದಿಗಳು ಬಂದರು, 'ಮಂತ್ರಿಸಿ ನೇರಮಾಡುವೆವಿದ' ನೆಂದರು. ಯಂತ್ರ ಸಿದ್ಧರು ಬಂದರು, 'ಇದಕೆ ಬೀಜಾಕ್ಷರ ಮಂತ್ರವ ಬರೆದು ಕಟ್ಟದರೆ ಜಂತ್ರ ಪರಿದ ಬಿಲ್ಲು ನಿಮಿರಿದಂತಹುದು' ಎಂದರು. ಜಟ್ಟಿಗಳು ಬಂದರು, 'ನಾವೊಯ್ಯನೆ ನೆಟ್ಟಗೆದೆಗೆವೆ'ವೆಂದರು. ಕವಿಗಳಾದರೂ ಹಿಂದೆ ಬೀಳಲಿಲ್ಲ, 'ಹೊಸಕೃತಿವೇಳ್ದು ನಾಂ ನೆಟ್ಟಗಾಗಿಸೆವು' ಎಂದರು. 'ಜಲವ ಹೊಕ್ಕಾವು ಮಂತ್ರಿಸಿ ನೇರವಾಳ್ಪೆವೆಂದುಲಿದರು ಬಂದ ಭೂಸುರರು.' ಹೀಗೆ 'ಹಲಬರು ತಂತಮ್ಮ ಕಲಿತ ವಿದ್ಯಾರ್ಥದ ಬಲುಹ ಸೂಚಿಸುತ್ತಿದ್ದರಾಗ.' ಆದರೆ ಭರತ ಜೆಟ್ಟಿಗಳು ನೆಟಗೆ ತೆಗೆಯಲೆಂದ. ಬಂದ ಜೆಟ್ಟಿ ಬಾವಲಿಯಂತೆ ಬೆರಳಿಗೆ ಜೋತುಬಿದ್ದರೂ ಬೆರಳು ಹಾಗೆಯೆ ಇತ್ತು. ಹಲವರು ಜೆಟ್ಟಿಗಳು ಬಂದೆಳೆದರು. ಅರಸ ಅವರನ್ನು ಅಕ್ಷಮಾಲೆಯಂತೆ ಎತ್ತಿದ. ಆದರೂ ಬೆರಳು ನೇರವಾಗಲಿಲ್ಲ. ಆಗ ಭರತನ ಸೂಚನೆಯಂತೆ ಆ ಬೆರಲಿಗೆ ಚಿನ್ನದ ಸರಪಣಿ ತಗಲಿಸಿ ಕಟಕವೆಲ್ಲ ಹಿಡಿದು ಎಳೆಯಿತು. ಇರುವೆಗಳು ಎಣ್ಣೆ ಸೋಕಿದ ನೇಣ ಮುತ್ತುವಂತೆ ಮುತ್ತಿ ಎಳೆಯಿತು. ಆದರೂ ಬೆರಳು ಕೊಂಕುಬಿಡಲಿಲ್ಲ. ಹೀಗೆ ಹಲ್ಲು ಕಚ್ಚಿ ಉಳ್ಳ ಶಕ್ತಿಯೆಲ್ಲ ಬಿಟ್ಟು ಸೇನೆ ತುಯ್ಯುತ್ತಿರುವಾಗ ಅರಸ ತನ್ನ ಮಡಿಸಿದ ತೋಳನ್ನು ಕೊಂಚ ನೀಡಿದ. ಕಟಕವೆಲ್ಲ ಹೊಟ್ಟೆ ಮೇಲಾಗಿ ಕೆಳಗೆ ಕೆಡೆಯಿತು. ಅದನ್ನು 'ರಾಯ ನಿಟ್ಟಿಸುತಿದ್ದನು ನಗದೆ.'

ಏಳಹೇಳೇಕೆ ಬಿದ್ದರು ನಾನು ಸುಕ್ಕಿದ ತೋಳ । ನೀಡಿದೆನ್ನೆಸೆ ನನ್ನ
ಮಾಲಿದಂಗುಲಿಯಿನ್ನು ನೇರವಾಯ್ತಿಲ್ಲೆಂದ । ಮೇಲೆಲ್ಲರೆದ್ದರಾ ಕ್ಷಣವೆ

ಪುನಃ ಎಳೆದರು. ಅರಸ ಅವರನ್ನು ತನ್ನತ್ತ ತುಯ್ದ. ಅದಕ್ಕೆ 'ಮೂಗಡಿಯಾಗಿ ಬಿದ್ದುದು ಸೇನೆ ಸಾಷ್ಟಾಂಗವಾಗಿ ವಂದಿಸುವಂತೆ ತನಗೆ.'

(೪೩೬ನೆಯ ಪುಟಕ್ಕೆ)




ಶುಕ್ರವಾರ, ಸೆಪ್ಟೆಂಬರ್ ೧೩, ೧೯೪೦

## ಇಂಗ್ಲಿಷ್ ವ್ಯಾಸಂಗಕ್ಕೆ ಬೆಲೆ

ಒಂದು ಕಾಲದಲ್ಲಿ ಸಂಸ್ಕೃತ ಪ್ರಭಾವ ದೇಶಭಾಷೆಗಳಮೇಲೆ ಬಿದ್ದು ಈ ನಾಡಿನ ಎಲ್ಲ ಭಾಷೆಗಳಮೇಲೂ ಅದರ ಅಚ್ಚು ಒತ್ತಿನಿಂದ ಈವರೆಗೂ ನಡೆಯಿತು. ಸಾಹಿತ್ಯದಲ್ಲಿ ಏನೇನನ್ನು ಹೀರಿಕೊಳ್ಳಬಹುದೊ ಅದನ್ನೆಲ್ಲ ಬಹುತರವಾಗಿ ಈ ಭಾಷೆಗಳು ಹೀರಿಕೊಂಡದ್ದಾಗಿದೆ. ಮೊದಮೊದಲು ಈ ನುಡಿಗಳಲ್ಲಿ ಬರೆದವರೆಲ್ಲರೂ ಉಭಯಭಾಷಾಪಂಡಿತರೂ ಸಂಪ್ರದಾಯದ ಮರ್ಮವನ್ನು ಅರಿತು ಬೆಳಸಿದವರೂ ಆಗಿದ್ದರು. ಆದ್ದರಿಂದ ಸುಮಾರು ಎಲ್ಲ ಭಾಷೆಗಳೂ ಒಂದು ಮುಖವಾಗಿ ಬೆಳೆದು ಮಾತು, ಪ್ರಯೋಗ, ನಿರುಕ್ತಿ, ವ್ಯಾಕರಣ, ಅಲಂಕಾರ, ಛಂದಸ್ಸು ಮುಂತಾದ ಸಾಹಿತ್ಯದ ಅಂಗಗಳಲ್ಲಿ ಸುಮಾರು ಸಂಸ್ಕೃತದ ನೆಳಲಂತೆಯೇ ಆ ಭಾಷೆಯನ್ನು ಅನುಸರಿಸಿದವು. ಯಾವಾಗ ಹೊರಗಿನ ಕಾರಣಗಳಿಂದ ಈ ಸಂಪರ್ಕ ತಪ್ಪಿ ಸಾಹಿತ್ಯ ದಿನದಿನದ ಜೀವನದ ಪ್ರತಿಬಿಂಬನ ಕಾರ್ಯಕ್ಕೂ ಸಹಜತೆಗೂ ಲೌಕಿಕವನ್ನು ನಿರೂಪಿಸುವ ಕೆಲಸಕ್ಕೂ ತಿರುಗಲು ಬಯಸಿತೊ ಆಗ ಹಿಂದಿನ ಪ್ರಪಂಚದ ನೆರವೂ ಹಬ್ಬುಗೆಯೂ ನಿಂತುಹೋಯಿತೆನ್ನಬೇಕು. ಇಂದೂ ಸಂಸ್ಕೃತದಿಂದ ದೇಶಭಾಷೆಗಳಿಗೆ ಆಗಬೇಕಾದ ಉಪಕಾರ ಬೇಕಾದಷ್ಟಿದೆ. ಹಿಂದೆ ಮಾಡಿದ ಕೆಲಸವನ್ನೆಲ್ಲ ಈಗ ಪುನಃ ಅದು ಮಾಡಬೇಕಾಗಿಲ್ಲ. ಶಾಸ್ತ್ರಪರಿಪಾಠಿ, ಖಚಿತವಾಗಿ ಸಂಗ್ರಹವಾಗಿ ವಿಷಯಗಳನ್ನು ತಿಳಿಸುವ ರೀತಿ, ಪ್ರಾಚೀನ ದರ್ಶನ, ವಿಜ್ಞಾನ ಮುಂತಾದ ಭಾಗಗಳಲ್ಲಿ ಹಿಂದಿನವರು ಯಾವರೀತಿ ವಿಷಯ ಅರಿಯುತ್ತಿದ್ದರು, ತತ್ವ ಅರಸುತ್ತಿದ್ದರು, ಪ್ರತಿಪಾದನ ಮಾಡುತ್ತಿದ್ದರು, ಆಯಾ ಕಾಲಕ್ಕೂ ಹುಟ್ಟಬಂದ ಗ್ರಂಥಕಾರ್ಯಕಲಾಪಗಳಿಗೂ ಇದ್ದ ಸಂಬಂಧವೇನು, ಈ ಜನದ ಬದುಕಿಗೆ ಅವರ ಕೃತಿಗಳಿಂದ ಯಾವ ಜೀವಶಕ್ತಿ ಹರಿದು ಅದರಿಂದ ಇಲ್ಲಿನ ಬದುಕು ಬೆಳಗಿ ನಿಲ್ಲಲು ಹೇಗೆ ಸಾಧ್ಯವಾಯಿತು ಎಂಬುದನ್ನು ಸಂಸ್ಕೃತವನ್ನು ಬಲ್ಲ ಮಹನೀಯರು ಕೃಪೆಮಾಡಿ ಈ ದಿನ ದೇಶಭಾಷೆಗಳಿಗೆ ಒದಗಿಸಬೇಕಾಗಿದೆ. ಪೂರ್ವಕಾಲದ ಸಂಪತ್ತು ಎಂಥದೆಂಬುದು ಗೊತ್ತಾಗಿ ಒಂದುಕಡೆ ಕೂಡಿಸಿದಂತಾಗುತ್ತದೆ. ಇಂದಿನ ದೃಷ್ಟಿಯಿಂದಲೂ ತಾರತಮ್ಯ ಗಣನೆಯಿಂದಲೂ ಮುಂದಿನ ಅಗತ್ಯದ ನೋಟದಿಂದಲೂ ಬೇರೆಬೇರೆ ದೇಶಗಳಲ್ಲಿ ಪ್ರಬಲಿಸಿದ ತತ್ವದೊಡನೆ ಹೋಲಿಸಿ ತೂಗಿಯೂ ಈ ಸಂಪತ್ತನ್ನು ನಾವು ನಮ್ಮ ಕೆಲಸಗಳಿಗೆ ಒದಗಿಸಿಕೊಳ್ಳಲು ಅನುಕೂಲವಾಗುತ್ತದೆ.

ಇಷ್ಟೂ ಸಂಸ್ಕೃತದ ಮಾತಾಯಿತು. ಇನ್ನು ಇವತ್ತಿನ ಜೀವನಕ್ಕೆ ನೆರವಾಗಬೇಕಾದ ಇಂಗ್ಲಿಷಿನಂತಹ ಪ್ರಪಂಚದ ವ್ಯವಹಾರಭಾಷೆಯನ್ನೂ ಸಾಹಿತ್ಯವನ್ನೂ ಕುರಿತು ಒಂದು ಮಾತು ಹೇಳಬಹುದು. ಜರ್ಮನ್, ಫ್ರೆಂಚ್, ಇಂಗ್ಲಿಷ್ ಇವುಗಳಲ್ಲಿ ಪ್ರಪಂಚದ ತಿಳಿವಿನ ಭಂಡಾರವನ್ನೆಲ್ಲ ಕಾಣಬಹುದೆನ್ನುತ್ತಾರೆ. ಇವುಗಳಲ್ಲಿ ಯಾವ ಭಾಷೆಯ ನೆರವು ಸಿಕ್ಕಿದರೂ ನಮಗೆ ಸಹಾಯವೇ. ಅವುಗಳ ಹಿನ್ನೆಲೆಯಲ್ಲಿ ಗ್ರೀಕ್, ಲ್ಯಾಟಿನ್, ಹೀಬ್ರೂ ಭಾಷೆಗಳ ಸಂಪತ್ತಿ ಇದ್ದರೂ ಆ ಭಾಷೆಗಳ ವೀರ್ಯವಿಲಾಸಗಳನ್ನೆಲ್ಲ ಯೂರೋಪಿನ ಇಂದಿನ ಪ್ರಮುಖ ಭಾಷೆಗಳು ತಮ್ಮ ರಕ್ತಕ್ಕೆ ಇಳಿಸಿಕೊಂಡುಬಿಟ್ಟವೆ ಎಂಬುದೂ ತಿಳಿದ ಸಂಗತಿಯೇ. ಈ ೧೫೦ ವರ್ಷಗಳಿಂದ ಇಂಗ್ಲಿಷಿನ ಪರಿಚಯವೂ ಅಧ್ಯವಸಾಯವೂ ಇಲ್ಲಿನ ಬದುಕಿನಲ್ಲಿ ಉಂಟಾಗಿ ಯಾವ ಬಗೆಯ ಜಾಗೃತಿಯನ್ನೂ ಒಲವು ನಿಷ್ಠೆಗಳನ್ನೂ ಮನಸ್ಸಿನ ಒಲ್ಮೆತಗಳನ್ನೂ ತಂದಿದೆ ಎಂಬುದು ವಿಚಾರಪರರಾದ ಎಲ್ಲರಿಗೂ ಗೊತ್ತಿದೆ. ಪೂರ್ವ ಪಶ್ಚಿಮದ ವ್ಯವಹಾರದ ಮತ್ತು ಸಂಸ್ಕೃತಿಯ ಪ್ರಭಾವಗಳು ಅನಿವಾರ್ಯವಾಗಿ ಬೆರೆಯಬೇಕಾಗಿರುವ ಈ ಸಮಯದಲ್ಲಿ ಪೂರ್ವದ ಪ್ರಭಾವಗಳನ್ನೆಲ್ಲ ಸಂಸ್ಕೃತ ದ್ರಾವಿಡಭಾಷೆಗಳು ಒದಗಿಸಿಕೊಟ್ಟರೆ ಪಶ್ಚಿಮದವನ್ನು ಇಂಗ್ಲಿಷು ಸಂಪೂರ್ಣವಾಗಿ ಒದಗಿಸುವಂತೆ ಮಾಡಿಕೊಳ್ಳಬೇಕಾದುದು ಇಂದು ಅಗತ್ಯವಾಗಿದೆ. ಆದುದರಿಂದಲೆ ರಾಜಕೀಯದೃಷ್ಟಿಯಿಂದ ಇಂಗ್ಲಿಷಿನಮೇಲೆ ನಮ್ಮವರಿಗೆ ಎಷ್ಟೇ ಅಸಮಾಧಾನವಿದ್ದರೂ ಅಂಥ ಭಾಷೆಯಿಂದ ಆಗಬೇಕಾಗಿರುವ ಪ್ರಯೋಜನದ ದೃಷ್ಟಿಯಿಂದ ಅದು ಮುಖ್ಯವಾಗುವುದು. ಮಾಥ್ಯು ಆರ್ನಲ್ಡ್ ಎಂಬ ಕವಿ-ವಿಮರ್ಶಕನು ಹೇಳಿದಂತೆ ಪರಸ್ಪರ ಹೋಲಿಕೆ ಇಲ್ಲದ ಎರಡು ಭಾಷಾ ಸಾಹಿತ್ಯಗಳ ಮತ್ತು ಜೀವನ ಸಂಪ್ರದಾಯಗಳ ಪರಿಚಯವಿಲ್ಲದವರ ತಿಳಿವಳಿಕೆ ಅಪೂರ್ಣವಾಗುವುದು. ಸತ್ಯದ ಎರಡುಮುಖ ಒಂದಕ್ಕೊಂದು ಕಾಣಿಸದಾದರೆ ಬಾಳು ಅರೆತಿಳಿವಿನಲ್ಲಿ ನಡೆಯಬೇಕಾಗುವುದು, ಮುಗಿಯಬೇಕಾಗುವುದು. ಅಲ್ಲಿನ ಜ್ಞಾನ ಅನುಭವಗಳ ಸಾರವನ್ನು ಇಲ್ಲಿನವರೂ ಇಲ್ಲಿನದನ್ನು ಅವರೂ ಪರಿಚಯಮಾಡಿಕೊಂಡು ಹೊಂದಿಸಿಕೊಂಡ ಹೊರತು ಮುನ್ನಡೆಗೆ ಅವಕಾಶ ಪೂರ್ತಿಯಾಗಿ ದೊರೆಯದು. ಈ ದೃಷ್ಟಿಯಿಂದ ಮಾತ್ರ ಇಂಗ್ಲಿಷಿನಂಥ ಭಾಷಾ ಸಾಹಿತ್ಯಗಳ ವ್ಯಾಸಂಗಕ್ಕೆ ಮಹತ್ವ.

ಆದರೆ ವಿದ್ಯಾಭ್ಯಾಸ ಕ್ರಮದಲ್ಲಿ ಈ ದೃಷ್ಟಿ ದಿನಚರಿಯ ವ್ಯಾಸಂಗದ ಗುರಿಯಾಗಿ ಕಾಣಲಾಗದೆ ಇರುವುದು ಶೋಚನೀಯವಾದ ಸಂಗತಿ. ನಮಗೆ ಬೇಕಾಗಿರುವುದು ಇಂಗ್ಲಿಷಿನ ವ್ಯಾಕರಣವಲ್ಲ; ಅವರಂತೆ ಮಾತುಕಥೆಗಳನ್ನು ಉಚ್ಚರಿಸಲು ಕಲಿತು ಕೃತಾರ್ಥರಾಗುವುದಲ್ಲ ; ಇಂಗ್ಲಿಷಿನ ಹೃದಯ ಹಿಡಿದು ಆ ನುಡಿಕಟ್ಟಿನ ಮರ್ಮವನ್ನು ಮನಗಂಡು ಇಂಗ್ಲಿಷಿನವರಂತೆಯೆ ಮಾತನಾಡಬಲ್ಲ ಬರೆಯಬಲ್ಲ ಜಾಣ್ಮೆ ಅಲ್ಲ. ಅವೂ ದೊರೆತರೆ ದೊರಕಲಿ. ದೊರೆಯುವುದು ಅಸಾಧ್ಯವಾದೀತೆಂದು ಹಲವರ ಅಭಿಪ್ರಾಯ. ಏಕೆಂದರೆ ಆಯಾ ದೇಶಗಳಲ್ಲಿ ಜನ ಬಳಸುವ ಮಾತಿನಲ್ಲಿ ಇರುವ ಜೀವದ ಕಾವೂ ಮಿಡಿತವೂ ಅಲ್ಲಿ ಹೋಗಿ ಅಥವಾ ಅಲ್ಲಿನ ಜನರೊಡನೆ ಕೂಡಿ ಆಡಿ ಕಲಿಯಬೇಕಾದುವೇ ಹೊರತು ಪುಸ್ತಕಗಳಿಂದ ಅರಿಯುವಂಥವಲ್ಲ. ಆ ಜನರ ಆಪ್ತಸಂಪರ್ಕ ಇಲ್ಲಿನವರಿಗೆ ಒಂದು ಜೀವಮಾನದಲ್ಲಿ ಒಂದು ಸಲ ದೊರಕುವುದೂ ಕಷ್ಟ. ಹೆಚ್ಚೆಂದರೆ ಹಿಂದೆ ಕಲಿತ ವ್ಯಾಕರಣಕ್ಕೆ ಒಪ್ಪುವಂತೆ, ಪುಸ್ತಕ ವ್ಯಾಸಂಗದಿಂದ ಕುದುರಿದ ಮಾತಿನ ರೀತಿಯನ್ನು ನಾವು ಅರಿಯಬಹುದು. ಬಳಸಬಹುದು.

ಅದರ ಗಳಿಕೆಗಾಗಿ ಹತ್ತಾರು ವರುಷ ದುಡಿದು ಜೀವವನ್ನು ತೇಯುವ ದೌರ್ಭಾಗ್ಯ ಓದುವ ಎಲ್ಲರ ಪಾಲಿಗೂ ಕಡ್ಡಾಯವಾಗಿ ಬಂದಿರುವುದು ದೇಶದ ಹಿತದೃಷ್ಟಿಯಿಂದ ಸುತರಾಂ ಪ್ರಯೋಜನಕಾರಿಯಾದದ್ದಲ್ಲ. ಎಲ್ಲರೂ ಆ ಭಾಷೆಯನ್ನು ಕಲಿಯಲೇ ಬೇಕೆಂದು ನಾವು ತೀರ್ಮಾನಿಸಿ ನಡಸುವವರೆಗೆ ಅಲ್ಲಿನ ಜೀವಶಕ್ತಿಯನ್ನು ಹೀರಿಕೊಂಡು ಅಲ್ಲಿನ ಸಂಸ್ಕೃತಿಯ ನಿಲುವು, ಬಗೆ, ಶಕ್ತಿ, ಆಕಾಂಕ್ಷೆ ಇವು ಎಂಥವು ಎಂಬುವರ ಸ್ವರೂಪ ಜ್ಞಾನವನ್ನು ಪಡೆದುಕೊಳ್ಳಲು ಯತ್ನಿಸಬೇಕೆ ಹೊರತು ಕೇವಲ ನಾವು ಬಳಸುವ ಪರಭಾಷೆಯು ಶುದ್ಧವಾಗಿದೆಯೆ ಇಲ್ಲವೆ ಎಂಬ ಎಣಿಕೆಯಲ್ಲಿ ಜನದ ಯೋಗ್ಯತೆಯನ್ನು ಅಳೆಯುತ್ತ ಹೋಗುವುದು ಅವಿವೇಕದ ದಾರಿ. ನಮ್ಮ ಸಾಹಿತ್ಯದಲ್ಲಿಯೂ ಸಂಸ್ಕೃತಿಯಲ್ಲಿಯೂ ನಿಯಮ, ನಿರ್ಬಂಧ, ಸಮಷ್ಟಿದೃಷ್ಟಿ, ಅಲೌಕಿಕವಾದ ವರ್ಚಸ್ಸಿನ ಸಾಧನೆ, ಅದರ ಮಾರ್ಗ, ಅದಕ್ಕೆ ತಕ್ಕ ಗುಣಗಳನ್ನು ಗಳಿಸುವ ಪ್ರಯತ್ನ ಇವುಗಳನ್ನು ಕುರಿತು ಮಾತುಕತೆ ಕಾರ್ಯರಂಗ ಬೆಳೆದಿವೆ. ಪಾಶ್ಚಾತ್ಯ ಜೀವನದಲ್ಲಿ ವ್ಯಕ್ತಿನಿಷ್ಠೆ, ಅಭಿಮಾನ, ಸ್ವಾತಂತ್ರ್ಯವೃತ್ತಿ, ವ್ಯವಹಾರ ಜೀವನ ಪಟುತ್ವ, ವಿಜ್ಞಾನಸಾಧನೆ, ಪೌರುಷವಾದ, ಸಾಹಸಬುದ್ಧಿ ಇವು ತಾವೇತಾವಾಗಿರುವುದರಿಂದ ಅವುಗಳ ಗ್ರಹಿಕೆ ನಮಗೆ ಚೆನ್ನಾಗಿ ಆಗುವಂತೆಯೂ ಅದರಿಂದ ನಮ್ಮ ಸತ್ವಕ್ಕೆ ಕಾಂತಿ ಬರುವಂತೆಯೂ ಓದು ಸಹಾಯಮಾಡಬೇಕಾಗುವುದು. ಶಾಂತಿ ಧರ್ಮ ವೈರಾಗ್ಯಗಳ ವರ್ಣನೆ ನಮ್ಮಲ್ಲಿ ಲೋಕೋತ್ತರವಾಗಿ ಆಗಿದೆ. ಸದ್ಯಕ್ಕೆ ಅದಕ್ಕೆ ಸೇರಿಸಿ ತುಂಬಿಕೊಳ್ಳಬೇಕಾದ್ದೇನೂ ಇಲ್ಲ. ಮಾನವಸಾಹಸದ ಪ್ರಶಸ್ತಿಯನ್ನು ಹೊಮ್ಮಿಸಬೇಕು, ಸ್ವಾತಂತ್ರ್ಯ ಗೀತೆಗಳನ್ನು ಕಟ್ಟಬೇಕು; ವ್ಯಕ್ತಿಗಳ ಪರಮಶಕ್ತಿಯನ್ನು ಎಚ್ಚರಗೊಳಿಸಿ ಬಲಿಸಬೇಕು; ಸಾಗರ ಸಂಗೀತಗಳನ್ನು ಮೊಳಗಿಸಬೇಕು; ದೇವ ಮಾನವರೆದುರು ಮೂರುಕಾಲಗಳೆದುರು ಮಾನವಮೂರ್ತಿತ್ವವನ್ನು ಎತ್ತಿಹಿಡಿಯಬೇಕು ಎಂಬ ಮಹಾಕಾಂಕ್ಷೆ ಇಂಗ್ಲಿಷ್ ಸಾಹಿತ್ಯದಲ್ಲಿರುವಂತೆ ನಮ್ಮ ಸಾಹಿತ್ಯಕ್ಕೂ ಬಂದು ಇಂದಿನ ಮತ್ತು ನಾಳಿನ ಸಾಹಿತ್ಯ ಕಾರ್ಯ ಫಲಗೊಳ್ಳಬೇಕಾಗಿದೆ. ನಾನಾಮುಖವಾದ ತೇಜಸ್ವಿತೆಯೂ ಕ್ಷತ್ರದ ಚಿಮ್ಮುಗೆಯೂ ಬಾಳಲ್ಲಿ ಕಾಣಬೇಕಾಗಿದೆ. ಆ ಬಗೆಯ ನೋಟಕ್ಕೇ ಮನ್ನಣೆಕೊಟ್ಟು ಇಲ್ಲಿನ ಇಂಗ್ಲಿಷು ವ್ಯಾಸಂಗ ನಡೆಯುವಂತಾದರೆ ಮಾತ್ರ ಇಂಗ್ಲಿಷಿಗೆ ಸ್ಥಾನ ಸಂದೀತು; ಅದಕ್ಕಾಗಿ ಕಳೆಯುವ ಕಾಲ ಪ್ರಯೋಜಕವಾದೀತು. ಇಲ್ಲವಾದರೆ ಅದರ ಪ್ರಭಾವಕ್ಕೆ ನಾಳಿನ ಭರತಖಂಡದಲ್ಲಿ ಅವಕಾಶ ದೊರೆಯಲಾರದೆನ್ನಿಸುತ್ತದೆ. ಇಂಗ್ಲಿಷಿನ ಅಧ್ಯಾಪಕರ ಸ್ನೇಹದೃಷ್ಟಿ ಈ ಕಡೆಗೆ ಬಿದ್ದರೆ ಆ ಭಾಷೆಯ ವ್ಯಾಸಂಗಕ್ಕೂ ಉಪಯುಕ್ತತೆಗೂ ಬಹುವಾಗಿ ಸೇವೆ ಸಲ್ಲಿಸಿದಂತಾಗುವುದೆಂದೂ ನಮ್ಮ ಜನದ ಶಕ್ತಿ ಸುಪ್ರಯುಕ್ತವಾಗಿ ಒಂದು ಹಾಳತದಲ್ಲಿ ಬೆಳೆಯುವಂತಾಗುವುದೆಂದೂ ಬಿನ್ನವಿಸಿ ಅವರು ಈ ಬಗೆಯ ಭಿಕ್ಷೆಯನ್ನು ನಮಗೆ ನೀಡಬೇಕೆಂದು ಬೇಡುತ್ತೇವೆ.

## ಭಾಷಾ ಏಕತೆ

೨-೮-೧೯೪೦ರ 'ಕನ್ನಡ ನುಡಿ'ಯಲ್ಲಿ **ಮುಂಬಯಿ ಪ್ರಾಂತದಲ್ಲಿ ಕನ್ನಡ ಪಠ್ಯ ಪುಸ್ತಕಗಳು** ಎಂಬ ವಿಷಯವನ್ನು ಕುರಿತು ಒಂದು ಲೇಖನ ಬರೆದಿದ್ದೆವು. ಆ ಬಗ್ಗೆ ಶ್ರೀಯುತ ಕೆ. ಎಸ್. ಕಾರಂತರು ನಮಗೆ ಬರೆದಿರುವ ಪತ್ರವನ್ನು ಮುಂದೆ ಪ್ರಕಟಿಸಿದ್ದೇವೆ:

"ತಮ್ಮ ತಾ|| ೨-೮-೪೦ರ ಕನ್ನಡ ನುಡಿಯ 'ಮುಂಬೈ ಪ್ರಾಂತದಲ್ಲಿ ಪಠ್ಯ ಪುಸ್ತಕಗಳು' ಎಂಬ ಅಗ್ರಲೇಖ ಓದಿದೆ. ಇದೇ ತಾತ್ಪರ್ಯ ಅಗ್ರಲೇಖನ ಹಿಂದೊಮ್ಮೆ ಬಂದಾಗ ನಾನೊಂದು ಪ್ರತ್ಯುತ್ತರ ತಮಗೆ ಕಳುಹಿದ್ದೆ. ತಾವು ತಮ್ಮ ಲೇಖದಲ್ಲಿ ಸೂಚಿತವಾದ ಮಾತುಗಳನ್ನು ಯಾವ ಧೋರಣೆಯಿಂದ ಮಾಡುತಿದ್ದೀರಿ? ಕನ್ನಡ ನುಡಿಯು 'ಮೈಸೂರು ನುಡಿಯೋ' ಅಖಿಲ ಕನ್ನಡದ ಪತ್ರಿಕೆಯೆ? ಹಾಗಿದ್ದರೆ ಒಂದು ಪ್ರಾಂತದ ಪುಸ್ತಕ ಇನ್ನೊಂದು ಪ್ರಾಂತದ ಪಠ್ಯಪುಸ್ತಕವಾದೊಡನೆ ಈ ರೀತಿ ಬರೆಯುವುದು ಯುಕ್ತವಲ್ಲ.

ಮಂಗಳೂರಿನ ಪ್ರಾಥಮಿಕ ಪಠ್ಯಪುಸ್ತಕಗಳ ಬಗ್ಗೆ ತಾವು ಮೈಸೂರಲ್ಲಿ ಈ ರೀತಿ ಪ್ರಚಾರಕ್ಕೆ ಸಿದ್ಧರಿದ್ದೀರಾ?

ಮುಂಬೈ ಸರ್ಕಾರದವರು ಮೈಸೂರು ಪಠ್ಯಪುಸ್ತಕಗಳಷ್ಟನ್ನೆ ಇರಿಸಿಲ್ಲವೆಂದೂ ಮಂಗಳೂರಿನ ಹೂಗನ್ನಡ ಪಾಠಮಾಲೆಯನ್ನೂ, ಮೆಕ್ಮಿಲನ್ನರ ಪುಸ್ತಕಾವಳಿಯನ್ನೂ ಸೂಚಿಸಿದ್ದಾರೆ ಎಂಬುದನ್ನೂ ತಾವು ತಿಳಿದಿಲ್ಲವೆ? ಆ ಬಗ್ಗೂ ತಮ್ಮ ಪತ್ರಿಕೆಯಲ್ಲಿ ಸಂತೋಷವನ್ನು ವ್ಯಕ್ತಪಡಿಸುವುದು ನ್ಯಾಯವಿದೆ.

ತಮ್ಮ ಪತ್ರಿಕೆಯು ಇಂಥ ವಿಷಯಗಳಲ್ಲಿ ಏಕ ಪಕ್ಷೀಯ ದೃಷ್ಟಿ ಇರಿಸುವುದು ಖೇದಕರವಾಗಿದೆ. ಹೈದರಾಬಾಡಿನಲ್ಲಿ ಮೈಸೂರು ಪಠ್ಯಪುಸ್ತಕಗಳು ಪ್ರಚಾರಕ್ಕೆ ಬಂದಿವೆ ಎಂಬ ತಮ್ಮ ಹಿಗ್ಗೂ ಇದೇ ತೆರನಾಗಿದೆ.

ಪ್ರಾಥಮಿಕ ಶಾಲೆಗಳ ಪಠ್ಯಪುಸ್ತಕಗಳ ಏಕತೆಯು ತಪ್ಪು ಹಾದಿ. ಅದರಿಂದ ಭಾಷಾ ಏಕೀಕರಣವಾಗುತ್ತದೆಯೋ ಇಲ್ಲವೊ ನಾನರಿಯೆ. ಆದರೆ ಶಿಕ್ಷಣದಹಾನಿಯೇನೋ ಆಗುತ್ತದೆ. ಪರಿಷತ್ತಿನ ಧೋರಣೆ ಈ ಪಠ್ಯಪುಸ್ತಕಗಳ ವಿಷಯದಲ್ಲಿ ಯಾವುದು:

೧) ಮೈಸೂರು ಪುಸ್ತಕಗಳ ಪ್ರಚಾರವೇ?
೨) ಭಾಷಾ ಏಕತೆಯು ಗುರಿಯೆ?
೩) ಇಲ್ಲವೇ ಒಂದೇ ಪಠ್ಯಪುಸ್ತಕಗಳ ಯತ್ನವೆ?

ಇದರಲ್ಲಿ ಯಾವುದು ತಮ್ಮ ಧ್ಯೇಯ, ತಮ್ಮ ಪಠ್ಯಪುಸ್ತಕ ಸಮಿತಿಯ ಧ್ಯೇಯ ಎಂಬುದನ್ನು ತಾವು ಸ್ಪಷ್ಟಪಡಿಸಬೇಕು.

ತಾವು ಈ ಪತ್ರವನ್ನು ಪ್ರಕಟಿಸುವುದಲ್ಲದೆ, ತಮ್ಮ ಸಂಪಾದಕ ಮಂಡಳಿಯ ಮುಂದೆಯೂ ಇರಿಸಬೇಕೆಂದು ಬೇಡುತ್ತೇನೆ."

ಈ ವಿಚಾರದಲ್ಲಿ ಕೆಲವು ತಪ್ಪು ಅಭಿಪ್ರಾಯಗಳುಂಟಾದುದಕ್ಕಾಗಿ ವಿಷಾದಿಸಬೇಕಾಗಿದೆ. ಪರಿಷತ್ತು ಹೇಗೆ ಅಖಿಲ ಕರ್ನಾಟಕ ಸಂಸ್ಥೆಯಾಗಿದೆಯೊ ಹಾಗೆಯೇ 'ಕನ್ನಡ ನುಡಿ' ಅಖಿಲ ಕರ್ನಾಟಕದ ಪತ್ರಿಕೆಯಾಗಿದೆ. ಬೆಂಗಳೂರಿಂದ ಹೊರಡುತ್ತಿರುವ ಮಾತ್ರದಿಂದಲೇ ಅದು 'ಮೈಸೂರು ನುಡಿ' ಆಗಲಾರದೆಂದು ನಾವು ಭಾವಿಸುತ್ತೇವೆ. ನಮಗೆ ಎಲ್ಲ ಪ್ರಾಂತದ ಪಠ್ಯಪುಸ್ತಕಗಳೂ ಆದರಣೀಯಗಳಾಗಿವೆ. ಆಯಾ ಪ್ರಾಂತದ ಸರ್ಕಾರದವರು ತಮ್ಮ ಪಾಠಶಾಲೆಗಳಿಗೆ ಉಪಯುಕ್ತವಾದುವನ್ನು ನಿಯಮಿಸಲು ಟೆಕ್ಸ್ಟ್‌ಬುಕ್ ಕಮಿಟಿಗಳನ್ನು ನೇಮಕಮಾಡಿದ್ದಾರೆ. ಅವರು ಉಚಿತ ತೋರಿದುವನ್ನು ಆಯ್ಕೆಮಾಡಿ ನಿಯಮಿಸುತ್ತಾರೆ. 'ಕನ್ನಡ ನುಡಿ'ಯಲ್ಲಿ ಈ ಪಠ್ಯಪುಸ್ತಕಗಳ ವಿಚಾರ ಬರುವುದಕ್ಕೆ ಕಾರಣವನ್ನು ನಮ್ಮ ಆ ಲೇಖನದಲ್ಲಿಯೇ ವಿಶದಗೊಳಿಸಿದ್ದೇವೆ. ಬೊಂಬಾಯಿ ಪ್ರಾಂತದ 'ಯುನೈಟೆಡ್ ಕರ್ನಾಟಕ' 'ಸಂಯುಕ್ತ ಕರ್ನಾಟಕ' ಮೊದಲಾದ ಪತ್ರಿಕೆಗಳು ತಮ್ಮ ಪಾಠಶಾಲೆಗಳಲ್ಲಿ ಈಗ ಜಾರಿಗೆ ಬಂದಿರುವ ಹೊಸ ರೀಡರುಗಳ ವಿಚಾರ ಪ್ರಸ್ತಾಪಮಾಡಿ, ಬೊಂಬಾಯಿ ಪ್ರಾಂತದ ಮಕ್ಕಳಿಗೂ ಉಪಾಧ್ಯಾಯರಿಗೂ ಭಾಷಾ ದೃಷ್ಟಿಯಿಂದ ಒದಗಿರುವ ಕೆಲವು ಕಷ್ಟಗಳನ್ನೂ, ಆ ಕಷ್ಟಗಳ ನಿವಾರಣೆಗೆ ತಕ್ಕ ಉಪಾಯಗಳನ್ನೂ ಸೂಚಿಸಿದ್ದವು. ಆ ಲೇಖನಗಳಲ್ಲಿ ಮೈಸೂರು ಪ್ರಾಂತದ ರೀಡರುಗಳ ಪ್ರಸ್ತಾಪವಿದ್ದುದರಿಂದಲೂ, ಆ ರೀಡರುಗಳು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರ ಸ್ವತ್ತಾದುದರಿಂದಲೂ, ಈ ಸಲಹೆಗಳನ್ನು ಆಚರಣೆಗೆ ತರಬೇಕಾದರೆ ಮೈಸೂರಿನ ವಿದ್ಯಾಭಾಸದ ಇಲಾಖೆಯವರು ಮುಂದುವರಿಯಬೇಕಾಗುವುದು. ಆದರೆ ಆ ಕಾರ್ಯವನ್ನು ತಾವೇ ಕೈಕೊಳ್ಳುವುದಕ್ಕಿಂತ ಅಖಿಲ ಕರ್ನಾಟಕ ಸಮಿತಿಯೊಂದನ್ನು ಪರಿಷತ್ತು ಈಗಾಗಲೇ ಏರ್ಪಡಿಸಿರುವುದರಿಂದಲೂ, ಆ ಸಮಿತಿ ಈ ಭಾಷಾ ಏಕತೆಯ ಪ್ರಶ್ನೆಯನ್ನು ಆಲೋಚಿಸುತ್ತಿರುವುದರಿಂದಲೂ, ಇಲಾಖೆಯವರು ರೀಡರುಗಳ ಪರಿಷ್ಕರಣಕಾರ್ಯವನ್ನು ಪರಿಷತ್ತಿಗೆ ವಹಿಸುವುದು ಸೂಕ್ತವೆಂದು ತಿಳಿಸಿದೆವು.

ಒಂದು ಪ್ರಾಂತದ ಪುಸ್ತಕಗಳು ಮತ್ತೊಂದು ಪ್ರಾಂತದಲ್ಲಿ ಪ್ರಚಾರಕ್ಕೆ ಬರುವುದು ಭಾಷಾ ಏಕತೆಯ ದೃಷ್ಟಿಯಿಂದ ಒಳ್ಳೆಯ

ದಾದ್ದರಿಂದ ಬೊಂಬಾಯಿ ಪ್ರಾಂತದವರು ಮಾಡಿರುವ ಈ ಕಾರ್ಯವು ಸ್ತುತ್ಯವಾದ ಕಾರ್ಯವೆಂದೂ ಹೇಳಬೇಕಾಯಿತು. ಮಂಗಳೂರಿನ ಹೂಗನ್ನಡ ಪಾಠಮಾಲೆ ಮತ್ತು ಮೆಕ್ಮಿಲನ್ನರ ರೀಡರುಗಳನ್ನೂ ಸಹ ಬೊಂಬಾಯಿ ಪ್ರಾಂತದಲ್ಲಿಟ್ಟಿರುವರೆಂದು ಶ್ರೀಯುತ ಕಾರಂತರು ತಿಳಿಸುತ್ತಾರೆ. ಇದು ನಮಗೆ ನಿಜವಾಗಿಯೂ ಸಂತೋಷವನ್ನುಂಟುಮಾಡತಕ್ಕ ಸಂಗತಿ.

ಪರಿಷತ್ತು ಪಠ್ಯಪುಸ್ತಕ ಸಮಿತಿಯೊಂದನ್ನು ಏರ್ಪಡಿಸಿದೆ. ಅದರಲ್ಲಿ ಅಖಿಲ ಕರ್ನಾಟಕದ ಪ್ರತಿನಿಧಿಗಳು ಇದ್ದಾರೆ. ಭಾಷಾ ಏಕತೆಯ ದೃಷ್ಟಿಯಿಂದ ಒಂದೇ ಪಠ್ಯ ಪುಸ್ತಕಗಳನ್ನಿಡಬೇಕೆ? ಅಥವಾ ಇರುವ ಪಠ್ಯಪುಸ್ತಕಗಳಲ್ಲಿ ಭಾಷೆಯನ್ನು ಪರಿಷ್ಕರಿಸಬೇಕೇ? ಎಂಬ ಮುಂತಾದ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳು ಬರುವುದು ಸಹಜವೇ ಆಗಿದೆ. ಇದಕ್ಕೆ ಸಂಬಂಧಿಸಿದ ಹಲವು ತೊಡಕು ವಿಚಾರಗಳೂ ಇವೆ. ಈ ಸಮಿತಿ ಜುಲೈ ೩ನೆಯ ತಾರೀಖು ಮೊದಲುಬಾರಿ ಸೇರಿ ವಿಚಾರಮಾಡಬೇಕಾದ ವಿಷಯಗಳನ್ನು ಗೊತ್ತುಮಾಡಿತು. ಎಲ್ಲ ಪ್ರಾಂತದವರಿಗೂ ಒಪ್ಪಿಗೆಯಾಗುವಂಥ ಮತ್ತು ಭಾಷಾ ಏಕತೆಯನ್ನು ಸಾಧಿಸುವಂಥ ಮಾರ್ಗವನ್ನು ಸಮಿತಿ ಆಲೋಚಿಸುತ್ತಲಿದೆ. ಒಟ್ಟಿನಲ್ಲಿ ಸಮಿತಿಯ ಧ್ಯೇಯ, ಪರಿಷತ್ತಿನ ಧ್ಯೇಯ, ಭಾಷಾ ಏಕತೆಯನ್ನು ಸಾಧಿಸಬೇಕೆಂಬುದೂ, ಕನ್ನಡಿಗರು ಪ್ರಾಂತ ಭೇದವಿಲ್ಲದೆ ಸೋದರರಂತೆ ಒಬ್ಬರನ್ನೊಬ್ಬರು ತಿಳಿಯಬೇಕೆಂಬುದೂ ಆಗಿದೆಯೇ ಹೊರತು, ಒಂದು ಪ್ರಾಂತದ—ಮೈಸೂರು ಪ್ರಾಂತದ್ದೇ ಆಗಿರಲಿ—ಪಠ್ಯಪುಸ್ತಕಗಳನ್ನು ಪ್ರಚಾರ ಮಾಡುವುದೂ, ಪ್ರೋತ್ಸಾಹಿಸುವುದೂ, ನಿಯಮಿಸುವಂತೆ ಒತ್ತಾಯಮಾಡುವುದೂ ಅಲ್ಲವೆಂಬುದನ್ನು ನಾವು ಖಂಡಿತವಾಗಿ ಹೇಳಬಲ್ಲೆವು.

---

## ಕುಂದಗೋಳ ಪೌರಸಭೆಯಲ್ಲಿ ಕನ್ನಡದ ಸ್ಥಾನ

ಕಳೆದ ತಿಂಗಳು ೩೧ನೆಯ ತಾರೀಖಿನ ದಿನ ಕುಂದಗೋಳದ ನಗರ ಸಭೆಯ ಅಧಿವೇಶನ ಕೂಡಿದಾಗ ಸದಸ್ಯರಾದ ಶ್ರೀ|| ಪಾಟೀಲರು ನಗರ ಸಭೆಯ ದಪ್ತರನ್ನು ಕೂಡಲೇ ಕನ್ನಡ ಮಾಡಬೇಕೆಂದು ಒಂದು ಗೊತ್ತುವಳಿಯನ್ನು ಮಂಡಿಸಿದರು. ಇಂಥ ಒಂದು ಗೊತ್ತುವಳಿ ಎರಡು ವರ್ಷಗಳ ಹಿಂದೆಯೇ ಸೂಚಿತವಾಗಿತ್ತು; ಸ್ವೀಕೃತವಾಗಿ ಕೂಡ ಇತ್ತು. ಅಲ್ಲಿಂದೀಚೆಗೆ ಪೌರಸಭೆಯವರು ಕನ್ನಡವನ್ನು ಕಲಿಯಲು ಯತ್ನಿಸಿದ್ದರೂ ಈ ಎರಡು ವರ್ಷಗಳಲ್ಲಿ ಸ್ವೀಕೃತವಾದ ಗೊತ್ತುವಳಿಯ ಆಶಯವನ್ನು ನಡಸಬಹುದಾಗಿತ್ತು. ಆದರೆ ಪ್ರಸಕ್ತ ಅಧಿವೇಶನದಲ್ಲಿ ಸಭೆಯ ಕಾರ್ಯದರ್ಶಿಗಳು ಗೊತ್ತುವಳಿಯನ್ನು ವಿರೋಧಿಸಿ, 'ಎರಡು ವರುಷಗಳಲ್ಲಿ ಕನ್ನಡ ಕಲಿತಿಲ್ಲ. ಒಂದು ವೇಳೆ ಈ ಗೊತ್ತುವಳಿ ಸ್ವೀಕೃತವಾದರೆ ನಾವು ರಾಜೀನಾಮೆ ಕೊಡುವೆವು' ಎಂದು ಹೆದರಿಸಿದರಂತೆ.

ಕಾರ್ಯದರ್ಶಿಗಳ ಉತ್ತರವನ್ನು ನಾವು ಮೆಚ್ಚಲಾರೆವು. ಅವರು ತಮ್ಮ ಧೋರಣೆಯನ್ನು ಮಾರ್ಪಡಿಸಿಕೊಂಡು ಕನ್ನಡಕ್ಕೆ ಒಲಿಯುವರೆಂದು ನಾವು ನಂಬಿದ್ದೇವೆ. ಶೇಕಡ ೮೨·೨ರಷ್ಟು ಕನ್ನಡಿಗರಿರುವ ಜಮಖಂಡಿ ಸಂಸ್ಥಾನಕ್ಕೆ ಸೇರಿದ ಕುಂದಗೋಳ ಅಚ್ಚಗನ್ನಡ ಪ್ರದೇಶವೆಂದು ಹೇಳಬೇಕಾಗಿಲ್ಲ. ಅಲ್ಲಿ ಕನ್ನಡದ ಸ್ಥಾನವನ್ನು ಕಾಪಾಡುವುದು ಕನ್ನಡಿಗರ ಕರ್ತವ್ಯವಾಗಿದೆ. ಅದರಲ್ಲೂ ಪೌರ ಸಭೆಯವರು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಿಕೊಳ್ಳುವುದು ಗೌರವಾಸ್ಪದವಾದುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

---

### ಶುಭಾಶಂಸನೆಯ ಕವನಗಳು

ಕನ್ನಡನಾಡಿನ ಹಲವು ಕವಿಗಳೂ ಸಂಸ್ಥೆಗಳೂ ಭಕ್ತಿಪೂರ್ವಕವಾಗಿ ಮೈಸೂರಿನ ಶ್ರೀಮನ್ಮಹಾರಾಜರವರಿಗೆ ಶ್ರೇಯಸ್ಸನ್ನು ಬಯಸಿ ಕವನಗಳನ್ನೂ ಠರಾವುಗಳನ್ನೂ ಕಳಿಸಿದ್ದಾರೆ.

# ಪರಿಷತ್ತಿನ ಸುದ್ದಿ

## ೨೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ಧಾರವಾಡ

ಸ್ವಾಗತ ಸಮಿತಿಯ ಎರಡನೆಯ ಸಭೆ ತಾ|| ೮-೯-೪೦ ರಲ್ಲಿ ಸೇರಿದ್ದಿತು.

ಈ ಸಭೆಯಲ್ಲಿ ಮೈಸೂರಿನ ಶ್ರೀಮನ್ ಮಹಾರಾಜರವರಿಗೆ ಶ್ರೇಯಸ್ಸನ್ನು ಬಯಸಿ ಕೆಳಗೆ ಕಂಡಂತೆ ಒಂದು ನಿರ್ಣಯವನ್ನು ಕಳಿಸಬೇಕೆಂದು ಗೊತ್ತಾಯಿತು.

**'ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಶ್ರೀ ಚಾಮರಾಜ ಮಂದಿರದಲ್ಲಿ ಕೂಡಿದ ಬರುವ ೨೫ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಮಹಾರಾಜರವರು ಮೈಸೂರು ಸಂಸ್ಥಾನದ ಕರ್ನಾಟಕದ ರತ್ನಸಿಂಹಾಸನಾರೋಹಣರಾದ ಈ ಸುಮಂಗಲ ಪ್ರಸಂಗದಲ್ಲಿ ತನ್ನ ಭಕ್ತಿ ವಿಶ್ವಾಸಪೂರ್ವಕವಾದ ಅಭಿನಂದನೆಗಳನ್ನು ಸಮರ್ಪಿಸುವುದಲ್ಲದೆ ಅನಂತ ಅಖಂಡ ಶ್ರೇಯಸ್ಸುಗಳನ್ನು ಮಹಾರಾಜರವರ ಆಳಿಕೆಗೆ ಅನುಗ್ರಹಿಸಲೆಂದು ಭಗವಂತನ ಸನ್ನಿಧಿಯಲ್ಲಿ ಪ್ರಾರ್ಥಿಸುತ್ತದೆ.'**

ಸ್ವಾಗತ ಸಮಿತಿಗೆ ಇನ್ನೂ ೨೦ ಮಂದಿ ಸದಸ್ಯರು ಅಂದು ಸೇರಿ ಈಗ ಒಟ್ಟು ೫೨ ಮಂದಿ ಸದಸ್ಯರಾಗಿರುವರೆಂದು ಕಾರ್ಯದರ್ಶಿಗಳು ತಿಳಿಸುತ್ತಾರೆ. ಸ್ವಾಗತ ಸಮಿತಿ ಮತ್ತೆ ಇದೇ ತಿಂಗಳು ೧೫ ಮತ್ತು ೨೦ನೆಯ ತಾರೀಖುಗಳಲ್ಲಿ ಸೇರಿ ಸಮ್ಮೇಳನ ಕಾರ್ಯವನ್ನು ವ್ಯವಸ್ಥಿತ ರೀತಿಯಲ್ಲಿ ಜರುಗಿಸಲು ಉಪಸಮಿತಿಗಳನ್ನು ಗೊತ್ತುಪಡಿಸುವುದಕ್ಕೂ, ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಇಬ್ಬರ ಹೆಸರುಗಳನ್ನು ಸೂಚಿಸುವುದಕ್ಕೂ ಸಭೆ ಸೇರುವುದು.

### ಉತ್ತರ ಕರ್ನಾಟಕ ಪ್ರಾಂತ ಸಮಿತಿ

ಸಾಧಾರಣ ಸಭೆ ಇದೇ ತಿಂಗಳು ೨೨ನೆಯ ತಾರೀಖು ಭಾನುವಾರ ಬೆಳಗ್ಗೆ ೮ ಗಂಟೆಗೆ ಧಾರವಾಡದಲ್ಲಿ ವಿದ್ಯಾವರ್ಧಕ ಸಂಘದ ಕಟ್ಟಡದಲ್ಲಿ ಸೇರುವುದು.

### ಮೈಸೂರು ಪ್ರಾಂತ ಸಮಿತಿ

ಕಳೆದ ತಿಂಗಳು ೨೪ರಲ್ಲಿ ಸೇರಿದ್ದ ಸಭೆಯಲ್ಲಿ ಈ ಕೆಳಗಿನ ನಿರ್ಣಯ ಅಂಗೀಕೃತವಾಯಿತು :

**'ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಅವರ ಸ್ಮಾರಕವಾಗಿ, ಮಹಾಸ್ವಾಮಿಯವರು ಕನ್ನಡ ಭಾಷೆಯಲ್ಲಿಯೂ ಮತ್ತು ಸಾಹಿತ್ಯ ಪರಿಷತ್ತಿನಲ್ಲಿಯೂ ಇಟ್ಟಿದ್ದ ಅಭಿಮಾನದ ಕುರುಹಾಗಿ ಕನ್ನಡ ಗ್ರಂಥಕರ್ತರಿಗೆ ಉತ್ತೇಜನ ಕೊಡುವುದಕ್ಕಾಗಿಯೂ ಮತ್ತು ವಿದ್ಯಾರ್ಥಿಗಳಲ್ಲಿ ಕನ್ನಡದಲ್ಲಿ ಅಭಿಮಾನವನ್ನು ಅಭಿವೃದ್ಧಿಪಡಿಸುವುದಕ್ಕಾಗಿಯೂ ಪರಿಷತ್ತಿನ ಆಶ್ರಯದಲ್ಲಿ 'ಶ್ರೀ ಕೃಷ್ಣರಾಜೇಂದ್ರ ಸ್ಮಾರಕನಿಧಿ' ಎಂದು ಒಂದು ನಿಧಿಯನ್ನು ಕೂಡಿಸತಕ್ಕದ್ದು.'**

---

(೪೩೩ನೆಯ ಪುಟದಿಂದ)

ನರನಾಥ ತಲೆವಾಗಿ ನಸುನಕ್ಕನಾಗ ಮಿ | ತ್ರರು ಹುಸಿರೋಗವೆಂದರಿದು
ಪರರಿಂದ ಮಾಣದೊಡೆಯ ನೀನೆ ನಿನ್ನ ನು | ಚ್ಚೆರಳ ಮಾಣಿಪುದೆಂದರೊಸೆದು
ಸರಪಣಿದೆಗೆದೆಡಗೈಯಿಂದ ತನ್ನ ನು | ಚ್ಚೆರಳನೊತ್ತುತ ವಿನೋದಾರ್ಥಿ
ಗುರುಹಂಸನಾಥಾಯ ಸ್ವಾಹಾಯೆಂದನು ಕೂಡೆ | ಸರಿತವಾಗಿದ್ದುದಾ ಬೆರಳು
ಸರಸಾರ್ಥವಿದನೇಕೆ ನೆನೆದೆ ಚಕ್ರೇಶಯೆಂ | ದುರುಮುದದೊಳು ಮಂತ್ರಿ ಕೇಳ್ದಾ
ಇರುಳಿಬ್ಬರಾಡಿದ ನುಡಿಗಿಂತು ನೆನೆದೆನೆಂ | ದರಸನಾ ಸ್ಥಿತಿಯ ಪೇಳಿದನು

ಇವು ಈ ರತ್ನಾಕರದ ನಾಲ್ಕು ಸಣ್ಣ ಅಲೆ.

ಜಿ. ಪಿ. ರಾಜರತ್ನಂ.

# ಕನ್ನಡ ಸುದ್ದಿ

## ಕರ್ನಾಟಕ ಸಂಘ: ಬೆಳಗಾಂವಿ

ಶ್ರೀ|| ಜಯಚಾಮರಾಜ ಒಡೆಯರವರು ಕನ್ನಡ ನಾಡಿನ ರತ್ನಸಿಂಹಾಸನವನ್ನು ಕಳೆದ ಭಾನುವಾರದ ಮುಂಜಾವದಲ್ಲಿ ಅಲಂಕರಿಸಿದರಷ್ಟೆ. ಅಂದಿನ ಸಂಜೆಯ ೬ ಗಂಟೆಗೆ ಶ್ರೀಮಾನ್ ಸವಣೂರ ಹನುಮಂತರಾಯರು ಲಿಂಗರಾಜ ವಿದ್ಯಾಲಯದಲ್ಲಿ ಬೆಳಗಾಂವಿಯ ಕನ್ನಡಿಗರ ಮುಂದಾಳುಗಳಿಗೆ ಸಂತಸ ಕೂಟವನ್ನು ಏರ್ಪಡಿಸಿದ್ದರು. ೮೦–೯೦ ಮಂದಿ ದಯಮಾಡಿಸಿದ್ದರು. ಶ್ರೀಮಾನ್ ಸವಣೂರರೂ ಶ್ರೀಯುತ ವಾಲಿಯವರೂ ಬಂದವರಿಗೆ ಕೆಲವು ಮಾತುಗಳನ್ನು ಹೇಳಿದ ಬಳಿಕ ಬೆಳಗಾಂವಿಯ ಕನ್ನಡಿಗರ ಪರವಾಗಿ ಕೆಳಗಿನ ಎರಡು ಗೊತ್ತುವಳಿಗಳನ್ನು ಮಾಡಿ ಕಳಿಸಬೇಕೆಂದು ನಿರ್ಣಯವಾಯಿತು:

(೧) ಶ್ರೀ ಜಯಚಾಮರಾಜ ಒಡೆಯರ ಆಳಿಕೆ ಕನ್ನಡಿಗರೆಲ್ಲರಿಗೂ ಚಿರಕಾಲ ಕಲ್ಯಾಣವನ್ನುಂಟುಮಾಡಲಿ.

(೨) ಒಂಟಮುರಿಯ ಶ್ರೀಮಂತ ಬಸವಪ್ರಭು ಸರದೇಸಾಯಿಯವರು ತಮ್ಮ ಜೀವಕ್ಕೆ ಈಚೆಗೆ ಒದಗಿದ ಗಂಡಾಂತರದಿಂದ ಪಾರಾಗಿ ಈಗ ಗುಣಮುಖರಾಗಿರುವ ಸಂಗತಿಯಿಂದ ಕನ್ನಡಿಗರೆಲ್ಲರಿಗೂ ಸಂತಸವಾಗಿದೆ.

ಶ್ರೀಯುತರಾದ ಸವಣೂರ ಮತ್ತು ವಾಲಿ ಇವರ ಭಾಷಣಗಳಿಂದ ಹುರುಪುಗೊಂಡು ೪೦ ಮಂದಿ ಬೆಳಗಾಂವಿಯ ಕರ್ನಾಟಕ ಸಂಘಕ್ಕೆ ಸದಸ್ಯರಾಗಲು ಒಪ್ಪಿದರು; ಇನ್ನುಳಿದ ದಿವಸಗಳಲ್ಲಿ ಇನ್ನೂ ೧೦೦ ಮಂದಿ ಸದಸ್ಯರಾಗುವರು. ಬರಲಿರುವ ರವಿವಾರ ಸಂಜೆ ೬ ಗಂಟೆಗೆ ಈ ಸದಸ್ಯರ ಸಭೆ ಸೇರಿ ಕಾರ್ಯಸಮಿತಿಗೆ ಸದಸ್ಯರ ಆಯ್ಕೆಯಾಗಿ ಸಂಘ ಪ್ರಾತಿನಿಧಿಕವಾಗುವ ಶುಭಲಕ್ಷಣಗಳು ತೋರುತ್ತಿವೆ. ಶ್ರೀಯುತ ವಾಲಿಯವರು ಸಂಘದ ಸದಸ್ಯರಿಗೆ ಆ ಸಮಯದಲ್ಲಿ ಸಂತಸಕೂಟವನ್ನು ತಮ್ಮ ವೆಚ್ಚದಿಂದ ಏರ್ಪಡಿಸಲು ಒಪ್ಪಿದ್ದಾರೆ. ಬೆಳಗಾಂವಿಯ ಕನ್ನಡ ಕೂಟ ಬೇಗನೆ ಜಿಲ್ಲೆಯ ಕನ್ನಡ ಚಟುವಟಿಕೆಗಳಿಗೆ ಕೇಂದ್ರವಾಗಲಿ.

ಶ್ರೀ|| ಸವಣೂರ ಹನುಮಂತರಾಯರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:

'ಬೆಳಗಾಂವಿಯಲ್ಲಿಯ ಕನ್ನಡಿಗರ ಅಲಕ್ಷತೆಯಿಂದ ಒಂದು ತಲಮಾರಿನವರೆಗೆ ಈ ನಮ್ಮ ಜಿಲ್ಲೆಯಲ್ಲಿ ಕುಗ್ಗಿಹೋಗುತ್ತಿದ್ದ ನಮ್ಮ ಕನ್ನಡ ನುಡಿಯ ಉಳಿವಿಗಾಗಿ ಈ ಊರಿನಲ್ಲಿ ಕರ್ನಾಟಕ ಸಂಘ ಹುಟ್ಟಿ ೨೫ ವರ್ಷಗಳು ಸಂದು ಹೋಗಲು ಆ ಸಂಘದ ಬೆಳ್ಳಿಯ ಹಬ್ಬವನ್ನು ಮಾಡಿಯೂ, ನಾನು ಹುಟ್ಟಿ ೬೦ ವರ್ಷಗಳು ತುಂಬಿ ನನಗೆ ೬೧ನೆಯ ವರ್ಷ ಮೊದಲಾಗಲು ಉತ್ಸವವನ್ನು ಮಾಡಿಯೂ, ಕನ್ನಡಿಗರು ಬಗೆಬಗೆಯಿಂದ ನನ್ನ ಸನ್ಮಾನವನ್ನು ಮಾಡಿದರು. ಕನ್ನಡಿಗರಾದ ನಾವು ಈಗ ಎಚ್ಚರಗೊಂಡು ನಮ್ಮ ತಾಯ್ನುಡಿಯ ನಲುಮೆಯಿಂದ ಎಲ್ಲ ಬಗೆಯಿಂದಲೂ ಮುಂದುಮುಂದಕ್ಕೆ ನುಗ್ಗುತ್ತಿರುವೆವಾದರೂ, ನಮ್ಮ ಕರ್ನಾಟಕ ಸಂಘ ಬೆಳಗಾಂವಿಯಲ್ಲಿ ಬಗೆಬಗೆಯ ಉದ್ಯೋಗಗಳನ್ನು ಮಾಡಿ ಬಾಳುತ್ತಿರುವ ಮತ್ತು ಕಲಿತವರಾದ ಕನ್ನಡಿಗರೆಲ್ಲರ ಪ್ರತಿನಿಧಿಗಳನ್ನು ಒಳಗೊಂಡು ಬಲ್ಪಿನಿಂದ ಅಡಿಗಳನಿಡುತ ಮುಂದಕ್ಕೆ ಸಾಗುವ ಸಂಘವಾಗಿಲ್ಲ. ಅದು ಅಂತಹ ಸಂಘವಾಗಬೇಕು. ಪ್ರಾತಿನಿಧಿಕವಾಗಿರಬೇಕು. ಕನ್ನಡದ ಚಟುವಟಿಕೆಗಳಿಗೆ ನಮ್ಮ ಜಿಲ್ಲೆಗೆ ಇದು ಕೇಂದ್ರವಾಗಬೇಕು. ಕನ್ನಡ ಸಾಹಿತ್ಯ ಪರಿಷತ್ತಿನ ಗುರಿಗಳನ್ನು ಈಡೇರಿಸುವ ಸಂಸ್ಥೆಯಾಗಬೇಕು. ಇಂತಹ ಮಾದರಿಯ ಕೂಟವೊಂದಾಗಿ ನಮ್ಮ ಸಂಘ ಮೆರೆಯಬೇಕೆಂದು ನನ್ನ ಹೆಬ್ಬಯಕೆ ಇದ್ದಂತೆಯೇ ನಿಮ್ಮೆಲ್ಲರದೂ ಇರಬಹುದೆಂದು ನಾನು ನಂಬಿದ್ದೇನೆ. ಈಗ ಈ ಸಂಘಕ್ಕೆ ವಂತಿಗೆಯನ್ನು ಸಲ್ಲಿಸಿ ಸದಸ್ಯರಾಗಿರುವವರು ಹತ್ತೇ ಮಂದಿ. ಹೀಗಿರುವದು ನಮಗೆ ಭೂಷಣವಲ್ಲ. ವರ್ಷವೊಂದಕ್ಕೆ ಒಂದೇ ಒಂದು ರೂಪಾಯಿಯನ್ನು ವಂತಿಗೆಯಾಗಿ ಈ ಸಂಘಕ್ಕೆ ಸಲ್ಲಿಸಿ ಸದಸ್ಯರಾಗಲು ಶಕ್ತಿ ಮತ್ತು ಇಚ್ಛೆಯುಳ್ಳವರು ನಮ್ಮ ಊರಿನಲ್ಲಿ ಬೇಕಾದಷ್ಟು ಕನ್ನಡಿಗರು ಇರುವರು. ಇವರೆಲ್ಲರೂ ದಯವಿಟ್ಟು ಈ ಸಂಘವನ್ನು ಬಲಪಡಿಸಿ ಇದನ್ನು ಪ್ರತಿನಿಧಿಕವನ್ನಾಗಿ ಮಾಡಬೇಕೆಂದು ನಾನು ತಮ್ಮೆಲ್ಲರನ್ನು ಬೇಡಿಕೊಳ್ಳುವೆನು. ನಾಲ್ಕೈದು ಮಾಧ್ಯಮಿಕ ಶಾಲೆಗಳೂ, ಲಿಂಗರಾಜ ವಿದ್ಯಾಲಯವೂ, ಶಿಕ್ಷಕರ ವಿದ್ಯಾಲಯಗಳೂ, ನ್ಯಾಯಶಾಸ್ತ್ರವನ್ನು ಕಲಿಸುವ ವಿದ್ಯಾಲಯವೂ ಈಗ ನಮ್ಮ ಬೆಳಗಾಂವಿಯಲ್ಲಿ ಚೆನ್ನಾಗಿ ನಡೆಯುತ್ತಿರುವುದು ಹೆಚ್ಚಾಗಿ ಕನ್ನಡಿಗರ ಬಲದಿಂದಲೇ. ಈ ಸಂಗತಿಯಿಂದ ಬೆಳಗಾಂವಿಯಲ್ಲಿ ಈಗ ಕನ್ನಡಕ್ಕೆ ಕಳೆಯೇರುತ್ತಿದೆ; ಈ ಕಾವನ್ನು ನಾವು ಆರಗೊಡಬಾರದು. ಇದನ್ನು ಸರಿಯಾಗಿ ಬಳಸಿಕೊಂಡು, ನಮ್ಮ ಜಿಲ್ಲೆಯಲ್ಲಿಯ ಕನ್ನಡಿಗರ ಏಳಿಗೆಯ ಕೆಲಸಗಳನ್ನು ನಾವು ಕೈಕೊಂಡು, ಸರಿಯಾಗಿ ಸಾಗಿಸಿ, ಕನ್ನಡ ಸಾಹಿತ್ಯ ಪರಿಷತ್ತಿನ ಗುರಿಗಳನ್ನು ನೆರವೇರಿಸಬೇಕು. ಈಗ ಈ ವಿದ್ಯಾಲಯದಲ್ಲಿ ಕನ್ನಡ ಸಾಹಿತ್ಯ ಪರೀಕ್ಷೆಗಳ ಪಾಠಗಳನ್ನು ಹೇಳಿಕೊಡುವ ಅನುಕೂಲತೆಯನ್ನು ಮಾಡಿಕೊಟ್ಟಿರುವವರಾದ ಡಾಕ್ಟರ್ ನಂದೀಮಠ ಇವರಿಗೂ ಈ ಪರೀಕ್ಷೆಗಳ ಪಠ್ಯಪುಸ್ತಕಗಳ ಪಾಠಗಳನ್ನು ಪ್ರತಿಫಲದ ಆಶೆಯಿಲ್ಲದೆ ದಿನಾಲು ಹೇಳಿಕೊಡುತ್ತಿರುವ ಶಿಕ್ಷಕರೆಲ್ಲರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ತಾವೆಲ್ಲರೂ ನನಗೆ ಮಾಡಿದ ಸನ್ಮಾನಕ್ಕೆ ನಾನು ನಿಮಗೆ ಈಗ ಕೊಡುತ್ತಿರುವ ಪ್ರತಿಫಲ ಒಂದು ರೂಪಾಯಿ ಸಂಬಳ ದೊರೆಯಬೇಕಾದ ಕೆಲಸಕ್ಕೆ ಒಂದು ಕಾಸನ್ನು ಕೊಟ್ಟಂತೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು.

'ಇಂದಿನ ದಿನ ಕನ್ನಡಿಗರೆಲ್ಲರಿಗೆ ಹಬ್ಬದ ದಿನ. ಕನ್ನಡ ನಾಡಿನ ರತ್ನಸಿಂಹಾಸನದಮೇಲೆ ಈ ದಿವಸ ಶ್ರೀ ಜಯಚಾಮರಾಜ ಒಡೆಯರವರು ಕುಳಿತು ಅದನ್ನು ಅಲಂಕರಿಸಿದ್ದಾರೆ. ಇವರ ಆಳಿಕೆ ಚಿರಕಾಲ ಕನ್ನಡಿಗರಿಗೆ ಏಳ್ಗೆಯನ್ನು ಉಂಟುಮಾಡಲಿ. ಅವರಿಗೆ ನಾವು ಇಂದು ನಮ್ಮ ಶುಭಸಂದೇಶವನ್ನು ಕಳುಹುವಾ.

'ಇದಲ್ಲದೆ ಕನ್ನಡಿಗರಲ್ಲಿ ಈಗಿನ ಕರ್ಣರೆಂದು ಹೆಸರುಗೊಂಡಿರುವ ಒಂಟಮುರಿಯ ಶ್ರೀಮಂತ ಬಸವಪ್ರಭು ಸರದೇಸಾಯಿಯವರು ಈಚೆಗೆ ಅವರ ಜೀವಕ್ಕೆ ಒದಗಿದ ಗಂಡಾಂತರದಿಂದ ಪಾರಾಗಿ ಈಗ ಗುಣಮುಖರಾಗಿರುವುದು ನಮಗೆಲ್ಲರಿಗೂ ಬಲು ಹಿಗ್ಗಿನ ಸಂಗತಿ. ಅವರಿಗೂ ನಾವೂ ನಮ್ಮ ಸಂತೋಷವನ್ನು ವ್ಯಕ್ತಪಡಿಸುವಾ. ಸಿರಿಗನ್ನಡಂ ಗೆಲ್ಗೆ.'

ಶ್ರೀ|| ಎಂ. ಪಿ. ವಾಲಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:—

'ಬೆಳಗಾಂವಿಯ ಕರ್ನಾಟಕ ಸಂಘದ ಕಾರ್ಯಸಮಿತಿಯ ಅಧ್ಯಕ್ಷನಾಗಿಯೂ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯನಾಗಿಯೂ ಈ ಸಂಘದ ವಿಷಯವಾಗಿ ನಾಲ್ಕು ಮಾತುಗಳನ್ನು ತಮಗೆ ಅರಿಕೆ ಮಾಡಿಕೊಳ್ಳುವೆನು. ಶ್ರೀಮಾನ್ ಸವಣೂರ ಹನುಮಂತರಾಯರು ಹೆಚ್ಚಿನ ತ್ಯಾಗದಿಂದ ಇಲ್ಲಿಯ ಸಂಘವನ್ನು ಹುಟ್ಟುಹಾಕಿ ಇಪ್ಪತ್ತೈದು ವರ್ಷಗಳವರೆಗೆ ಅದನ್ನು ನಡೆಯಿಸಿಕೊಂಡು ಬಂದರು. ಅವರು ಈ ಸಂಘದ ಬಗೆಗೆ ನಮಗೆ ಹೇಳಿದ ಸಂಗತಿಗಳೆಲ್ಲವೂ ಸತ್ಯವಾದುವು.

'ಈ ಸಂಘವನ್ನು ಅವರು ಬಯಸುತ್ತಿರುವಂತೆ ಬಲಪಡಿಸಬೇಕಾದರೆ, ನೀವೆಲ್ಲರೂ ವರ್ಷಕ್ಕೆ ಒಂದೇ ಒಂದು ರೂಪಾಯಿಯನ್ನಾದರೂ ಸಲ್ಲಿಸುತ್ತಾ ಅದರ ಸದಸ್ಯರಾಗಿರಬೇಕಲ್ಲದೆ, ಇನ್ನೂ ಹೆಚ್ಚು ಮಂದಿ ಇದಕ್ಕೆ ಸದಸ್ಯರಾಗಿ ಸೇರುವಂತೆ ಪ್ರಯತ್ನಿಸಬೇಕು; ಬೆಳಗಾಂವಿಯ ಕನ್ನಡಿಗರ ಎಲ್ಲ ಪಂಗಡಗಳ ಪ್ರತಿನಿಧಿಗಳೂ, ಸಂಘದ ಕಾರ್ಯಸಮಿತಿಯಲ್ಲಿ ಇರುವಂತೆಯೂ ಪ್ರಯತ್ನಿಸಬೇಕು. ಸಂಘದ ಕಾರ್ಯಸಮಿತಿಯಲ್ಲಿ ಹತ್ತು ಸದಸ್ಯರು ಇರಬೇಕೆಂದು ನಿಯಮವಿದೆ; ಹತ್ತೇ ಜನರು ಸಂಘಕ್ಕೆ ಸದಸ್ಯರಾಗಿ, ಇವರೇ ಹತ್ತು ಮಂದಿ ಕಾರ್ಯಸಮಿತಿಯ ಸದಸ್ಯರನ್ನು ಆಯ್ದುಕೊಡುವುದೆಂದರೆ, ಸಂಘದ ಸದಸ್ಯರೆಲ್ಲರೂ ಕಾರ್ಯಸಮಿತಿಯ ಸದಸ್ಯರಾದಂತಾಯಿತು. ಸಂಘದ ಆಡಳಿತ ಸಾರ್ವಜನಿಕವಾಗಿಯೂ ಪ್ರಾತಿನಿಧಿಕವಾಗಿಯೂ ಸಾಗಿ, ಬೆಳಗಾಂವಿ ಜಿಲ್ಲೆಗೆ ಈ ಸಂಘ ಕನ್ನಡದ ಚಟುವಟಿಕೆಗಳ ಕೇಂದ್ರವಾಗಬೇಕಾದರೆ, ೧೦೦–೧೫೦ ಮಂದಿಯಾದರೂ ವರ್ಷಕ್ಕೆ ೧ ರೂ. ವಂತಿಗೆಯನ್ನು ಕೊಡುವ ಸದಸ್ಯರಾಗಬೇಕು; ಸಂಘದ ಸದಸ್ಯರ ವಾರ್ಷಿಕ ಸಭೆಗೆ ಈ ೧೫೦ ಸದಸ್ಯರೆಲ್ಲರೂ ಬರಬೇಕು. ಇವರೆಲ್ಲರೂ ಸೇರಿ ಗುಪ್ತಮತದಾನದಿಂದ ಹತ್ತು ಮಂದಿ ಕಾರ್ಯಸಮಿತಿಯ ಸದಸ್ಯರನ್ನು ಆಯ್ದುಕೊಳ್ಳಬೇಕು. ಈ ಸಮಿತಿಯಲ್ಲಿ ವಕೀಲರ ಪ್ರತಿನಿಧಿಗಳು ಇಬ್ಬರು (೨), ವೈದ್ಯರ ಪ್ರತಿನಿಧಿಗಳು ಒಬ್ಬರು (೧), ವ್ಯಾಪಾರಿಗಳ ಪ್ರತಿನಿಧಿಗಳು ಒಬ್ಬರು (೧), ಮಾಧ್ಯಮಿಕ ಶಾಲೆಗಳ ಮುಖ್ಯ ಉಪಾಧ್ಯಾಯರ ಪ್ರತಿನಿಧಿಗಳು ಒಬ್ಬರು (೧), ಸಾಹಿತಿಗಳ ಪ್ರತಿನಿಧಿಗಳು ಒಬ್ಬರು (೧), ಶಾಲೆಗಳಲ್ಲಿ ಕನ್ನಡವನ್ನು ಕಲಿಸುವ ಶಿಕ್ಷಕರ ಪ್ರತಿನಿಧಿಗಳೊಬ್ಬರು (೧), ಶಾಲಾಧಿಕಾರಿಗಳ ಪ್ರತಿನಿಧಿಗಳು ಒಬ್ಬರು (ಡೆಪ್ಯೂಟಿ ಇನ್ಸ್‌ಪೆಕ್ಟರರು) (೧) ಸ್ತ್ರೀಯರ ಪ್ರತಿನಿಧಿಗಳು ಒಬ್ಬರು (೧), ಲಿಂಗರಾಜ ವಿದ್ಯಾಲಯದ ಪ್ರತಿನಿಧಿಗಳು ಒಬ್ಬರು (೧) — ಹೀಗೆ ಹತ್ತು ಮಂದಿ ಪ್ರತಿನಿಧಿಗಳಿರಬೇಕು. ಇವರೆಲ್ಲರೂ ಅಚ್ಚ ಕನ್ನಡಿಗರೇ ಇದ್ದು ಕನ್ನಡದ ಮುನ್ನಡೆಗಾಗಿ ತ್ಯಾಗವನ್ನು ಮಾಡುವ ಬುದ್ಧಿಯುಳ್ಳವರೂ ಇರಬೇಕು. ಈ ಕಾರ್ಯಸಮಿತಿಗೆ ಶ್ರೀಮಾನ್ ಸವಣೂರ ಹನುಮಂತರಾಯರೇ ಸನ್ಮಾನ್ಯ ಅಧ್ಯಕ್ಷರಾಗಿ ಇರಬೇಕು. (Unelected Honorary President).

'ಈ ರೀತಿಯಾಗಿ ಕಾರ್ಯಸಮಿತಿಯ ಸದಸ್ಯರ ಆಯ್ಕೆಯಾಗಿ ಕಾರ್ಯಸಮಿತಿಯ ಹಿರಿಯರ, (Chairman' Working Committee) ಕಾರ್ಯದರ್ಶಿಗಳಿಬ್ಬರ ಮತ್ತು ಕೋಶಾಧ್ಯಕ್ಷರೊಬ್ಬರ ಆಯ್ಕೆಯಾಗಬೇಕೆಂತಲೇ, ಸಂಘದ ವಾರ್ಷಿಕ ಸಭೆಯನ್ನು ಬರಲಿರುವ ರವಿವಾರ (ತಾ|| ೧೫–೯–೪೦) ಇಳಿಹೊತ್ತಿನ ೬ ಗಂಟೆಗೆ ನಡಸಬೇಕೆಂದು ಪ್ರಕಟಿಸಲಾಗಿದೆ. ಆದುದರಿಂದ ಇಂದಿನಿಂದ ಆರು ದಿವಸಗಳಲ್ಲಿ ನೀವೆಲ್ಲರೂ ಒಂದೊಂದು ರೂಪಾಯಿಯನ್ನು ಸಂಘದ ಈ ವರ್ಷದ ವಂತಿಗೆಯೆಂದು ನನಗೆ ತಂದುಕೊಟ್ಟು ಪಾವತಿಯನ್ನು ಪಡೆಯಬೇಕು. ಬರಲಿರುವ ಶುಕ್ರವಾರದ ಮಧ್ಯಾಹ್ನದ ೧೨ ಗಂಟೆಯವರೆಗೆ ೧ ರೂಪಾಯಿ ನನಗೆ ತಂದುಕೊಡುವವರೆಲ್ಲರೂ ಸಂಘದ ಈ ವರ್ಷದ ಸದಸ್ಯರಾಗುವರು; ಮತ್ತು ಕಾರ್ಯಸಮಿತಿಯ ಹತ್ತು ಮಂದಿ ಸದಸ್ಯರನ್ನು ಆಯ್ದುಕೊಡುವ ಮತಾಧಿಕಾರವನ್ನು ಪಡೆಯುವರು. ಈ ಅಧಿಕಾರವನ್ನು ಪಡೆದ ಸದಸ್ಯರೆಲ್ಲರೂ ಮುಂದಿನ ರವಿವಾರ ಸೇರಲಿರುವ ಸಂಘದ ವಾರ್ಷಿಕ ಸಭೆಗೆ ಹೊತ್ತಿಗೆ ಸರಿಯಾಗಿ ತಪ್ಪದೆ ಬರಬೇಕು. ತಮ್ಮ ಮತಾಧಿಕಾರವನ್ನು ಉಪಯೋಗಿಸಬೇಕು. ಅಲ್ಲದೆ ಕಾರ್ಯಸಮಿತಿಯವರು ಸಂಘದ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಗುರಿಗಳನ್ನು ನೆರವೇರಿಸಲು ಸರಿಯಾದ ಕಾರ್ಯಗಳನ್ನು ಕೈಕೊಳ್ಳುವಂತೆ ಯಾವಾಗಲೂ ನೋಡಿಕೊಳ್ಳುತ್ತಿರಬೇಕು.'

## ಸಿದ್ಧಗಂಗಾಕ್ಷೇತ್ರ: ಕನ್ನಡ-ಸಂಸ್ಕೃತ ಕೈಬರಹದ ತ್ರೈಮಾಸಿಕ ಪತ್ರಿಕೆ

ಮೇಲ್ಕಂಡ ಕೈಬರಹದ ಪತ್ರಿಕೆಯನ್ನು - ಕಿರಣ - ಸಿದ್ಧಗಂಗಾ ಸಂಸ್ಕೃತ ಕಾಲೇಜಿನಲ್ಲಿ ಶ್ರೀ ತೋಂಟದಾರ್ಯ ವಿದ್ಯಾವರ್ಧಿನೀ ಸಭೆಯವರು ಪ್ರಕಟಿಸಿದ್ದಾರೆ. ಇದರ ಪ್ರಾರಂಭೋತ್ಸವವನ್ನು ಶ್ರೀ|| ಓ. ಎಸ್. ಲಿಂಗಯ್ಯನವರು ಕಳೆದ ವಾರ ನಡಸಿ, ಪತ್ರಿಕೆ ಉಜ್ವಲ ಪ್ರಕಾಶ ಪಡೆದು ಕನ್ನಡ ಮತ್ತು ಭಾರತದ ಸಾಂಗಕ್ಕೆ ನಂದಾದೀವಿಗೆಯಾಗಲೆಂದು ಹರಸಿದರು. ಪತ್ರಿಕೆಯಲ್ಲಿ ಕನ್ನಡ ಮತ್ತು ಸಂಸ್ಕೃತ ಕವನ ಮತ್ತು ಪ್ರಬಂಧಗಳನ್ನು ಪ್ರಕಟಿಸುವುದೇ ಸಂಪಾದಕ ಮಂಡಲಿಯ ಉದ್ದೇಶ. 'ಕಿರಣ'ವು ಸಭೆಯ ಅಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ, ವಿದ್ವಾಂಸರ ಮತ್ತು ವಿದ್ಯಾರ್ಥಿಗಳ ಉತ್ಸಾಹದ ಪ್ರತಿಬಿಂಬವಾಗಿದೆ.

# ಗಾಥಾಸಪ್ತಶತಿ

(ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.)

ಗಾಥಾಸಪ್ತಶತೀ ಸಂಗ್ರಹದಲ್ಲಿ ಶೃಂಗಾರರಸದಿಂದ ಕೂಡಿದ ಪದ್ಯಗಳೇ ಹೆಚ್ಚು. ಆದರೂ ಇತರ ರಸಪ್ರಧಾನವಾದ, ಮನೋಹರವಾದ ಪದ್ಯಗಳೂ ಅಲ್ಲಲ್ಲಿವೆ. ಭರ್ತೃ ಹರಿ ಮೊದಲಾದ ನೀತಿ ವೈರಾಗ್ಯ, ಬೋಧನ ಚಾತುರೀ ಧುರೀಣರ ಕಾವ್ಯವ್ಯಾಪಾರಕ್ಕೆ ಮಾರ್ಗದರ್ಶಕವಾಗಿರಬಹುದಾದ ಪದ್ಯಗಳೂ ಇದರಲ್ಲಿವೆ.

ಸತ್ಪುರುಷನೊಂದಿಗೆ ಹೇಳಿಕೊಂಡ ರಹಸ್ಯವನ್ನು ಅವನು ಎಷ್ಟು ಗೋಪ್ಯವಾಗಿಟ್ಟುಕೊಂಡಿರುವನೆಂಬುದಕ್ಕೆ ಕವಿ ಕೊಟ್ಟಿರುವ ಉದಾಹರಣೆಯನ್ನು ನೋಡಿ:

ಕಲಹಾಂತರೇಸ್ಯ ವಿನಿರ್ಗತಾನಿ ಹೃದಯೇ ಜರಾಮುಪಗತಾನಿ।
ಸುಜನಕೃತಾನಿ ರಹಸ್ಯಾನಿ ದಹತ್ಯಾಯುಃ ಕ್ಷಯೇಗ್ನಿಃ ॥

(ಸತ್ಪುರುಷನೊಂದಿಗೆ ಹೇಳಿಕೊಂಡ ರಹಸ್ಯ, ಜಗಳ ಬಂದರೂ ಹೊರಗೆ ಬರದು. ಆ ಗುಟ್ಟು ಅವನ ಹೃದಯದಲ್ಲೇ ಮುಪ್ಪಾಗಿ ಸವೆದುಹೋಗುತ್ತದೆ. ಕೊನೆಗೆ ಅದು ಅವನ ದೇಹದೊಡನೆ ಭಸ್ಮವಾಗಿಹೋಗುತ್ತದೆ.)

ಮನುಷ್ಯನು ಸತ್ಕಾರ್ಯಪ್ರವರ್ತಕನಾಗಬೇಕು; ಉದ್ಯೋಗಿಯಾದ ಮನುಷ್ಯನಿಗೆ ಸಂಪತ್ತು ತಾನಾಗಿ ದೊರೆಯುವುದು; ದೊಡ್ಡ ಕಾರ್ಯಗಳನ್ನು ಮಾಡುವುದು ಮಹಾಪುರುಷನ ಲಕ್ಷಣ; ಮೊದ ಮೊದಲು ತೊಂದರೆಗಳು ಬರುವುವೆಂದು ಹಿಂಜರಿಯಬಾರದು ಎಂಬ ಪುರುಷಪ್ರಯತ್ನವಾದವನ್ನು ಕವಿ ತನ್ನದೇ ಆದ ರೀತಿಯಲ್ಲಿ ವರ್ಣಿಸಿದ್ದಾನೆ:

ಆರಂಭಮಾಣಸ್ಯಧೃವಂ ಲಕ್ಷ್ಮೀರ್ಮರಣಂವಾ ಭವತಿ ಪುರುಷಸ್ಯ।
ತನ್ಮರಣ ಮನಾರಂಭೇಪಿ ಭವತಿ ಲಕ್ಷ್ಮೀಃ ಪುನರ್ನಭವತಿ ॥

(ಕಾರ್ಯೋನ್ಮುಖಿಯಾದವನಿಗೆ ಸಂಪತ್ತು ಅಥವ ಮರಣ, ಎರಡರಲ್ಲಿ ಒಂದು ದೊರೆಯುವುದು ನಿಜ. ಕೆಲಸ ಮಾಡದೆಯೇ ಇರುವವನಿಗೆ ಮರಣವೇನೋ ನಿಶ್ಚಯವಾಗಿ ದೊರೆಯುತ್ತದೆ. ಸಂಪತ್ತು ಮಾತ್ರ ದೊರೆಯಲಾರದು)

ಗಳಿಸಿದ ಹಣವನ್ನು ಲೋಕದ ಉದ್ಧಾರಕ್ಕಾಗಿ ವೆಚ್ಚ ಮಾಡಿದರೇನೇ ಆ ಹಣಕ್ಕೆ ಒಂದು ಬೆಲೆ ಬರುವುದು. ಹಣವನ್ನು ಕೂಡಿಸಿ ಅದನ್ನು ಪೋಷಣೆ ಮಾಡುವುದರಿಂದ ಮನುಷ್ಯನಿಗೆ ಯಾವ ವಿಧವಾದ ಸುಖವೂ ಇಲ್ಲ; ಅದರಿಂದ ಗೌರವ ಬಾರದು; ಧನಿಕನಾದವನಿಗೆ ದಾತೃತ್ವವಿರಬೇಕು ಎಂಬುದನ್ನು ಈ ಪದ್ಯದಲ್ಲಿ ಕವಿ ಸ್ಪಷ್ಟಪಡಿಸಿದ್ದಾನೆ:

ಭವನ್ತ್ಯಪಿ ನಿಷ್ಫಲೈವ ಧನಋದ್ಧಿರ್ಭವತಿ ಕೃಪಣ ಪುರುಷಸ್ಯ।
ಗ್ರೀಷ್ಮಾತಪ ಸಂತಪ್ತಸ್ಯ ನಿಜಕಚ್ಛಾಯೇವ ಪಥಿಕಸ್ಯ ॥

(ಗ್ರೀಷ್ಮರ್ತುವಿನಲ್ಲಿ ಬಿಸಿಲಿನ ಝಳಕ್ಕೆ ಸಿಕ್ಕಿ ಒದ್ದಾಡುತ್ತಿರುವ ದಾರಿಹೋಕನ ನೆರಳು, ತನಗಾಗಲಿ, ಇತರರಿಗಾಗಲಿ ಉಪಯೋಗವಾಗದು. ಹಾಗೆಯೇ ಕೃಪಣನ ಬಳಿ ಹಣವಿದ್ದರೂ ನಿಷ್ಪ್ರಯೋಜಕವಾದುದು.)

ಈ ಸಂಗ್ರಹದಲ್ಲಿನ ವಿಷಯಗಳು ಬಹುಮುಖವಾದುವು; ಅನೇಕ ವಿಷಯಗಳನ್ನು ವಿವರಿಸತಕ್ಕುವು. ಹೆಚ್ಚು ಗಾಥೆಗಳು ಶೃಂಗಾರ ರಸಕ್ಕೆ ಸಂಬಂಧಪಟ್ಟುವು. ಗ್ರಂಥದ ಪ್ರಾರಂಭದಲ್ಲಿಯೇ ಸಂಗ್ರಹಕಾರನು, 'ಪ್ರಾಕೃತ ಕಾವ್ಯ ಅಮೃತದಂತೆ. ಇಂತಹ ಕಾವ್ಯವನ್ನು ಓದಲು ಮತ್ತು ಕೇಳಲು ಯಾರಿಗೆ ಬಾರದೋ ಅವರು ಲಜ್ಜೆ ಬಿಟ್ಟು ಕಾಮನ ಕಲಾ ಮರ್ಮವನ್ನು ಹೇಗೆ ತಿಳಿದಾರು?' ಎಂದಿದ್ದಾನೆ.

ಅಮೃತಂ ಪ್ರಾಕೃತಕಾವ್ಯಂ ಪಠಿತುಂ ಶ್ರೋತುಂ ಚ ಯೇ ನಜಾನನ್ತಿ।
ಕಾಮಸ್ಯ ತತ್ವಚಿನ್ತಾಂ ಕುರ್ವಂತಿ ತೇ ಕಥಂ ನಲಜ್ಜನ್ತೇ ॥

ಹೀಗೆಂದು, ಪ್ರಾಕೃತ ಕಾವ್ಯ ಶೃಂಗಾರರಸಪೂರ್ಣವಾಗಿದೆ, ಇದು ಓದುಗನ ಮನಸ್ಸಿಗೆ ಆನಂದವನ್ನುಂಟುಮಾಡುತ್ತದೆ, ಆದುದರಿಂದ ಅದು ಅಮೃತಪ್ರಾಯವಾದುದು ಎಂದು ಸೂಚಿಸಿದ್ದಾನೆ.

ಶೃಂಗಾರ, ಸಾಮಾನ್ಯವಾಗಿ ಪ್ರಾಚೀನ ಕಾವ್ಯಗಳಲ್ಲೆಲ್ಲಾ ಪ್ರಧಾನವಾಗಿ ಕಂಡುಬಂದರೂ, ಇಲ್ಲಿಯ ಶೃಂಗಾರರಸಪ್ರಧಾನವಾದ ಚಿತ್ರಗಳ ಸೊಗಸೇ ಒಂದು ವಿಧ. ಇದರಲ್ಲಿಯ ವೈವಿಧ್ಯ, ಸ್ವಾಭಾವಿಕ ರೀತಿ, ಪ್ರೇಮದ ಅನಂತ ಮುಖವಾದ ಸ್ವರೂಪ ಇವು ಓದುಗರ ಕಣ್ಣಿಗೆ ಎತ್ತಿಕಟ್ಟುವಹಾಗಿವೆ. ಇಂತಹ ಚಿತ್ರಗಳು ಇತರ ಕಡೆ ದೊರೆಯುವುದು ಅಪರೂಪ.

ಇಲ್ಲಿಯ ಒಂದೊಂದು ಪದ್ಯವೂ, ಒಂದೊಂದು ಅಪೂರ್ವವಾದ, ಆದರೆ, ಪೂರ್ಣವಾದ ಚಿತ್ರ. ಒಂದೊಂದೂ ಒಂದೊಂದು ಮುತ್ತು. ಕವಿ ಎಲ್ಲಿಯೂ ಮೇರೆ ಮೀರಿಹೋಗಿಲ್ಲ. ತುಚ್ಛ ಶೃಂಗಾರದ ಕಡೆ ಮನಗೊಟ್ಟಿಲ್ಲ. ಆದುದರಿಂದಲೇ ಇಲ್ಲಿಯ ಚಿತ್ರಗಳು ಸಹೃದಯರ ಮನಸ್ಸನ್ನು ಆಕರ್ಷಿಸುವಂತಿವೆ.

ಎಲ್ಲ ಕಡೆಗಳಲ್ಲಿಯೂ ತೊಂದರೆಗಳು. ಇವುಗಳ ನಡುವೆ ನಿಂತು ತನ್ನ ಶೀಲವನ್ನು ಕಾಪಾಡಿಕೊಂಡು ಬಂದಿರುವ ಹೆಂಗಸಿನ ವಿಷಯದಲ್ಲಿ ಕವಿಯೊಪ್ಪಿಸಿರುವ ಕಾಣಿಕೆಯನ್ನಾದರೂ ನೋಡಿ:

ಚತ್ವರ ಗೃಹಿಣೀ ಪ್ರಿಯದರ್ಶನಾ ಚ ತರುಣೀ ಪ್ರೋಷಿತಪತಿಕಾ ಚ।
ಅಸತೀ ಪ್ರತಿವೇಶಿನೀ ದುರ್ಗತಾ ಚ ನಖಲು ಖಂಡಿತಂ ಶೀಲಂ ॥

(ಆಕೆಯ ಮನೆ ನಾಲ್ಕು ದೊಡ್ಡ ರಸ್ತೆಗಳು ಸೇರುವ ಚೌಕದಲ್ಲಿ. ಇನ್ನೂ ಪೂರ್ವ ವಯಸ್ಸು; ಅದ್ಭುತವಾದ ಸೌಂದರ್ಯ. ಗಂಡ ದೇಶಾಂತರಕ್ಕೆ ಹೋಗಿದ್ದಾನೆ. ಪಕ್ಕದ ಮನೆಯಲ್ಲಿ ವಾಸವಾಗಿರುವವಳೋ ವೇಶ್ಯೆ. ಇದರ ಜೊತೆಗೆ ಬಡತನ ಬೇರೆ. ಹೀಗಿದ್ದರೂ ಆಕೆಯ ಶೀಲ ಮಾತ್ರ ನಿಷ್ಕಲಂಕವಾಗಿದೆ.)

ಸಾಮಾನ್ಯವಾಗಿ ಗರ್ಭಿಣಿಯರಾದ ಹೆಂಗಸರಿಗೆ ಯಾವುದಾದರೂ ಒಂದು ಬಯಕೆಯಿರುತ್ತದೆ. ಈ ಬಯಕೆಯನ್ನು ಈಡೇರಿಸಲು ಮನೆ ಜನರು ಎಲ್ಲ ಪ್ರಯತ್ನಗಳನ್ನೂ ಮಾಡುವರು. ಅತ್ತೆ ಎಷ್ಟೇ ಕಠಿನ ಹೃದಯಳಾದರೂ ಕೂಡ ಈ ಕೆಲಸದಲ್ಲಿ ನೆರವಾಗುತ್ತಾಳೆಂಬುದು ಅನುಭವದ ಮಾತು. ಇಷ್ಟಾದರೂ ತನ್ನ ಗಂಡನ ಮೇಲಿರುವ ಪ್ರೀತಿಯಿಂದ ತಾನು ಕಷ್ಟವನ್ನು ಸಹಿಸಿಕೊಂಡಿರುವ ಈ ಹೆಂಗಸಿನ ಚರ್ಯೆಯನ್ನು ನೋಡಿ:

ದುರ್ಗತಗೃಹೇ ಗೃಹಿಣೀ ರಕ್ಷನ್ತೀ ಆಕುಲತ್ವಂ ಪತ್ಯುಃ।
ಪುಷ್ಪದೋಹದ ಶ್ರದ್ಧಾ ಪುನರಪ್ಯುದಕಮೇವ ಕಥಯತಿ ॥

(ಬಡತನದ ಸಂಸಾರ, ಮನೆಯ ಒಡತಿ ಗರ್ಭಿಣಿ. ತನ್ನ ಬಯಕೆಯಿಂದ ತನ್ನ ಗಂಡನಿಗೆ ಎಲ್ಲಿ ಶ್ರಮ ಹೆಚ್ಚುವುದೋ ಎಂಬ ಯೋಚನೆಯಿಂದ, ಎಷ್ಟು ಕೇಳಿದರೂ ಅನಾಯಾಸವಾಗಿ ದೊರೆಯುವ ನೀರನ್ನು ಮಾತ್ರ ಕೊಡಿ ಎನ್ನುತ್ತಾಳೆ.)

ಸ್ತ್ರೀಯರ ಸೌಂದರ್ಯವನ್ನು ವರ್ಣಿಸುವುದೆಂದರೆ ಅವರ ಅಂಗಾಂಗಳ ಪಟ್ಟಿಯೊಂದನ್ನು ಮಾಡಿ ಅವುಗಳಿಗೆ ಕವಿಸಮಯದ ಕೆಲವು ವಸ್ತುಗಳನ್ನು ಹೋಲಿಸುವುದೇ ಸಂಪ್ರದಾಯವಾಗಿ ಹೋಗಿದೆ. ಹೀಗಾಗಿ ನಮಗೆ 'ಕಮಲ ಮುಖಿ', 'ಪದ್ಮನಯನೆ', 'ರಂಭೋರು' 'ಸರ್ಪವೇಣಿ'ಯರ ಸೌಂದರ್ಯವನ್ನು ಊಹಿಸುವುದಕ್ಕೆ ಕೂಡ ಅವಕಾಶವಿಲ್ಲದಂತಾಗಿದೆ. ಕಾವ್ಯಗಳಲ್ಲಿ ಬರುವ ಸ್ತ್ರೀಯರೆಲ್ಲರೂ ಅಪ್ರತಿಮವಾದ ಸೌಂದರ್ಯದಿಂದ ಕೂಡಿದವರೇ. ಅವರ ಮುಖಗಳೆಲ್ಲವೂ ಕಮಲಮುಖಗಳೇ. ಹೀಗಾಗಿ ಕಮಲಮುಖಿಯರ ಬೆಲೆಯೇ ನಮಗೆ ಗೊತ್ತಿಲ್ಲದಂತಾಗಿದೆ. ಪ್ರಾಕೃತ ಕವಿ ಒಬ್ಬ ಸ್ತ್ರೀಯ ಸೌಂದರ್ಯವನ್ನು ವರ್ಣಿಸುವುದರಲ್ಲಿ ತೋರಿಸಿರುವ ಕೈವಾಡವನ್ನಾದರೂ ನೋಡಿ. ಆಕೆ ಸೌಂದರ್ಯದ ಸಾರಸರ್ವಸ್ವವೆಂದು ಹೇಳಬೇಕೆಂಬುದೇ ಅವನ ಬಯಕೆ. ಇತರರಂತೆ 'ಪಟ್ಟಿಕ್ರಮ'ವನ್ನು ಅನುಸರಿಸದೆ ತನ್ನದೇ ಆದ ಒಂದು ಹೊಸ ಮಾರ್ಗವನ್ನು ಹಿಡಿದಿದ್ದಾನೆ:

ಯಸ್ಯ ಯತ್ರೈವ ಪ್ರಥಮಂ ತಸ್ಯಾ ಅಂಗೇ ನಿಪತಿತಾ ದೃಷ್ಟಿಃ।
ತಸ್ಯ ತತ್ರೈವಸ್ಥಿತಾ ಸರ್ವಾಂಗಂ ಕೇನಾಪಿ ನದೃಷ್ಟಂ ॥

(ಆಕೆಯ ದೇಹದ ಯಾವ ಭಾಗದಲ್ಲಿ ಮೊದಲು ದೃಷ್ಟಿಬಿದ್ದಿತೋ ಅದು ಅಲ್ಲಿಯೇ ನೆಟ್ಟುಹೋಯಿತು. ಹೀಗಾಗಿ ಆಕೆಯ ಸರ್ವಾಂಗ ಸೌಂದರ್ಯವನ್ನು ಇದುವರೆಗೂ ಕಂಡವರೇ ಇಲ್ಲದಂತಾದರು.)

(ಮುಂದುವರಿಯುವುದು)

೧೩೧-೬೦೦—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ವಾರ್ಷಿಕ ಚಂದಾ: ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ: ೧೨ ಆಣೆ

# ಕನ್ನಡ ನುಡಿ



ಸಂಪುಟ ೨
ಸಂಚಿಕೆ ೪೭

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೦, ೧೯೪೦

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಶ್ರೀ



ಗೌರೀಶಂಕರಮೂರ್ತಿ

[ಚಿತ್ರಕಾರರು: ಬಿ. ವೆಂಕೋಬರಾವ್]

ಶಾಂತಂ ಸಸ್ಮಿತವಕ್ತ್ರನಾಪ್ತಸುಖದಂ ಶ್ರೀ ನಂದಿ ಸಂಸೇವಿತಂ
ಕಾಂತಾಲಿಂಗಿತ ವಾಮಭಾಗನಮಳಂ ಭೂಷೋಜ್ವಳಂ ಸುಂದರಂ
ದಾಂತಂ ದಕ್ಷಿಣ ಪಾಣಿ ಪದ್ಮ ವಿಲಸತ್ ಶೂಲಾಯುಧಂ ತಾಂ ನಿಜೈ
ಕಾಂತಾನಂದಮನೀಗೆ ಭವ್ಯ ಡಮರು ಪ್ರೋದ್ಯತ್ಕರಂ ಶಂಕರಂ

— ಶ್ರೀ ಗಂಪ

# ಗಾಥಾಸಪ್ತಶತಿ

(ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.)

(ಮುಂದುವರಿದುದು)

ಹಿಂದಿನ ಕಾಲದಲ್ಲಿ ಒಂದೂರಿಂದ ಮತ್ತೊಂದೂರಿಗೆ ಹೋಗುವುದು ಪ್ರಯಾಸದ ಕೆಲಸವಾಗಿತ್ತು. ಜನರು ಅಲ್ಲಲ್ಲಿ ತಂಗಿ ತಮ್ಮ ಮಾರ್ಗಾಯಾಸವನ್ನು ಪರಿಹರಿಸಿಕೊಂಡು ಪ್ರಯಾಣವನ್ನು ಮುಂದುವರಿಸುತ್ತಿದ್ದರು. ಇದಕ್ಕೆ ಅನುಕೂಲಿಸುವಂತೆ ಜನಗಳು ಅರವಟ್ಟಿಗೆಗಳನ್ನೂ ಛತ್ರಗಳನ್ನೂ ಕಟ್ಟಿಸುತ್ತಿದ್ದರು. ಇಲ್ಲಿ ಮಾರ್ಗಸ್ಥರಿಗೆ ದೊರೆಯುತ್ತಿದ್ದುದು ಪಾನೀಯ ಮಾತ್ರ. ಇಂತಹ ಕಡೆ ತಮ್ಮ ಆಯಾಸವನ್ನು ನೀಗಿಕೊಳ್ಳಲು ನೂರಾರು ಮಂದಿ ಮಾರ್ಗಸ್ಥರು ಕೊಂಚ ಕಾಲ ತಂಗುತ್ತಿದ್ದರು. ಅವರೆಲ್ಲರೂ ನೂರಾರು ತೆರದವರು. ಇಂತಹ ಅರವಟ್ಟಿಗೆಗಳಲ್ಲಿ ದಾರಿಹೋಕರಿಗೆ ಪಾನೀಯವನ್ನು ಕೊಡಲು ಹರೆಯದ ಹೆಣ್ಣುಮಕ್ಕಳೂ ಇರುತ್ತಿದ್ದರು. ಅವರ ಸೊಬಗನ್ನು ನೋಡಿ ಎಷ್ಟೋ ಮಂದಿ ಮಾರ್ಗಸ್ಥರು ಮುಗ್ಧರಾಗಿಯೂ ಇರಬೇಕು. ಹಿಂದಿನ ಕಾಲದ ತಪೋವನಗಳಲ್ಲಿ ಹೇಗೆ ಪ್ರಣಯಕ್ಕೆ ಅಭಾವವಿರಲಿಲ್ಲವೋ ಈ ಅರವಟ್ಟಿಗೆಗಳಲ್ಲೂ ಪ್ರಣಯಕ್ಕೆ ಅಭಾವವಿರಲಿಲ್ಲ. ಪ್ರಯಾಣ ಮಧ್ಯದಲ್ಲಿ ಒಬ್ಬ ಮಾರ್ಗಸ್ಥ ಆಯಾಸಗೊಂಡು ಅರವಟ್ಟಿಗೆಯೊಂದಕ್ಕೆ ಬಂದ. ಅಲ್ಲಿ ಪಾನೀಯವನ್ನು ಒದಗಿಸುತ್ತಿದ್ದ ಚೆಲುವೆಯೊಬ್ಬಳ ಸೌಂದರ್ಯಕ್ಕೆ ಮನಸೋತ. ಅವಳಿಗೂ ಅವನಲ್ಲಿ ಅಭಿಮಾನ ತಲೆದೋರಿತು. ಆದರೆ ತಮ್ಮ ಪ್ರಣಯವನ್ನು ಬೆಳಸಲಾಗಲಿ, ಪ್ರಕಟಗೊಳಿಸಲಾಗಲಿ ಅಲ್ಲಿ ಅವಕಾಶವಿಲ್ಲ. ಇವರ ಪ್ರಣಯವೆಲ್ಲವೂ ಮಾರ್ಗಸ್ಥ ನೀರು ಕುಡಿದು ಮುಗಿಸುವುದರೊಳಗಾಗಿ ನಡೆಯಬೇಕು. ಈ ಸಂದರ್ಭದಲ್ಲಿ ಅವರು ಅನುಸರಿಸಿದ ಮಾರ್ಗವನ್ನು ಕವಿ ಸ್ವಾರಸ್ಯವಾಗಿ ಈ ವಾಕ್ಯದಲ್ಲಿ ಚಿತ್ರಿಸಿದ್ದಾನೆ :

ಊರ್ಧ್ವಾಕ್ಷಃ ಪಿಬತಿಜಲಂ ಯಥಾಯಥಾ ವಿರಲಾಂಗುಲಿಶ್ಚಿರಂ ಪಥಿಕಃ ।
ಪ್ರಪಾಪಾಲಿಕಾಪಿ ತಥಾತಥಾ ಧಾರಾಂ ತನು ಕಾಮಪಿ ತನೂಕರೋತಿ ॥

(ಮಾರ್ಗಸ್ಥನಿಗೆ ಬಾಯಾರಿಕೆ ತೀರಿದೆ. ಆದರೆ ಆಕೆಯ ಮುಖವನ್ನು ಇನ್ನೂ ನೋಡಬೇಕೆಂಬ ಆಶೆ. ಕಣ್ಣೆತ್ತಿ ಕೈಯನ್ನು ಬಾಯಿ ಬಳಿ ಬೊಗಸೆಯಂತೆ ಮಾಡಿಕೊಂಡು ನೀರು ಕುಡಿಯುತ್ತಿದ್ದಾನೆ. ನೀರು ಕೆಳಗೆ ಬಿದ್ದು ಹೋಗುವುದಕ್ಕೋಸ್ಕರ ತನ್ನ ಕೈ ಬೆರಳುಗಳನ್ನು ಅಗಲಿಸಿದ್ದಾನೆ. ಅವನು ಬೆರಳುಗಳನ್ನು ವಿರಲಿಸಿದಷ್ಟೂ ನೀರನ್ನು ಹುಯ್ಯುತ್ತಿರುವ ಅರವಟ್ಟಿಗೆಯ ಒಡತಿ, ಆಗಲೇ ಸಣ್ಣದಾಗಿರುವ ಜಲಧಾರೆಯನ್ನು ಇನ್ನೂ ಸಣ್ಣಗೆ ಮಾಡುತ್ತಾಳೆ.)

ಹಿಂದಿನ ಗ್ರಂಥಗಳಲ್ಲಿ ನಾವು ಬಹುವಾಗಿ ಕಾಣುವುದು ಒಬ್ಬ ಪುರುಷನು ತನ್ನ ಪ್ರಣಯಿಯ ವಿಷಯದಲ್ಲಿ ತೋರಿಸಿದ ಅಭಿಮಾನ, ರೀತಿ, ಇವುಗಳನ್ನು ಮಾತ್ರ. ಇಲ್ಲಿಯ ಕವಿಗಳು ಪುರುಷರು ಮತ್ತು ಸ್ತ್ರೀಯರು – ಇಬ್ಬರ ಪ್ರಣಯವನ್ನೂ ಸ್ವಾಭಾವಿಕವಾಗಿ ನಯವಾಗಿ ಚಿತ್ರಿಸಿದ್ದಾರೆ. ಇದು ಸಂಗ್ರಹದ ಒಂದು ವಿಶೇಷ ಗುಣ.

ಕಾಳಿದಾಸ ಕವಿ ತನ್ನ ಕಾವ್ಯವೊಂದರಲ್ಲಿ 'ಕಾಮಾರ್ತಾ ಹಿ ಪ್ರಕೃತಿಕೃಪಣಾಃ ಚೇತನಾಚೇತನೇಷು' ಅಂದಿದ್ದಾನೆ. ಅಷ್ಟೇ ಅಲ್ಲ. ಪ್ರಣಯ ಗಾಢವಾಗಿ ಬೆಳೆದಾಗ ಮನುಷ್ಯನು ಜೀವನದಲ್ಲಿ ವಸ್ತುಗಳಿಗಿರುವ ಬೆಲೆಯನ್ನು ಕೂಡ ಮರೆತುಬಿಡುತ್ತಾನೆ. ಎಂಬುದನ್ನು ಪ್ರಾಕೃತ ಕವಿ ಸೂಚಿಸಿದ್ದಾನೆ. ಕಾಮಿ ತನ್ನ ಆರಾಧ್ಯ ವಸ್ತುವನ್ನು ಪಡೆಯುವುದಕ್ಕಾಗಿ ಎಷ್ಟು ನಷ್ಟವಾದರೂ ಲೆಕ್ಕಿಸುವುದಿಲ್ಲ.

ಒಬ್ಬ ಹಳ್ಳಿಯ ಹುಡುಗಿ ಒಬ್ಬನ ವಿಷಯದಲ್ಲಿ ಅನುರಕ್ತಳಾಗಿದ್ದಾಳೆ. ಬಹುಶಃ ಅವನು ಆ ಅನುರಾಗಕ್ಕೆ ಮಾರ್ದನಿಗೊಡಲಿಲ್ಲ. ಅವನೊಂದಿಗೆ ಕಲೆತು, ಬೆರೆತು ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳಬೇಕೆಂಬುದು ಆಕೆಯ ಆಶೆ. ಇದಕ್ಕೆ ಅವಕಾಶ ದೊರೆಯಲಿಲ್ಲ. ಒಂದು ದಿನ ಆ ಊರಿನಲ್ಲಿ ಒಂದು ಗುಡಿಸಲಿಗೆ ಬೆಂಕಿ ಬಿತ್ತು. ಬೆಂಕಿಯನ್ನು ಆರಿಸಲು ಹತ್ತಾರು ಜನರು ಕಲೆತರು. ಮಡಕೆಗಳಲ್ಲಿ ದೂರದ ಕೆರೆಯೊಂದರಿಂದ ನೀರು ತಂದು ಬೆಂಕಿಯನ್ನು ಆರಿಸಲು ಎಲ್ಲರೂ ಪ್ರಯತ್ನಪಡುತ್ತಿದ್ದಾರೆ. ಆಕೆ ಯಾರನ್ನು ಪ್ರೀತಿಸುತ್ತಿದ್ದಳೋ ಅವನೂ ಅಲ್ಲಿಗೆ ಬಂದ. ಅವನೊಂದಿಗೆ ನೀರು ಹೊತ್ತು ತರಲು ಅವಳಿಗೆ ಈಗ ಅವಕಾಶ ದೊರೆಯಿತು. ಅವನ ಸಹವಾಸದಿಂದ ಅವಳಿಗೆ ಸುಖ, ಆನಂದ. ಕೊನೆಗೆ ಹಳ್ಳಿಯೆಲ್ಲಾ ಸುಟ್ಟು ಬೂದಿಯಾಯಿತು. ಎಲ್ಲರೂ ಕಣ್ಣೀರಿಡುತ್ತಿದ್ದಾರೆ. ಆದರೆ ಆ ಹುಡುಗಿ? ಅವಳ ಮನಸ್ಸಿನ ಭಾವಗಳನ್ನು ನೋಡಿ :

ಸರ್ವಸ್ವೇಪಿ ದಗ್ಧೇ ತಥಾಪಿ ಖಲು ಹೃದಯಸ್ಯ ನಿರ್ವೃತಿರೇವ ।
ಯತ್ತೇನ ಗ್ರಾಮದಾಹೇ ಹಸ್ತಾಹಸ್ತಿಕಯಾ ಕುಟೋಗೃಹೀತಃ ॥

(ನಿಜ. ಬೆಂಕಿಯಿಂದ ಊರೆಲ್ಲ ಹಾಳಾಯಿತು. ಇದರಿಂದ ನನಗೆ ಸಂಕಟವಿಲ್ಲ. ನನ್ನ ಹೃದಯ ಸಂತೋಷದಿಂದ ಕುಣಿಯುತ್ತಿದೆ. ಏಕೆಂದರೆ ಊರ ಬೆಂಕಿಯನ್ನು ಆರಿಸುವ ನೆಪದಲ್ಲಿ ಅವನೊಂದಿಗೆ ನೀರುಕೊಡವನ್ನು ಹಿಡಿದುಕೊಂಡು ಹೋಗುವಾಗ ನಮ್ಮಿಬ್ಬರ ಕೈಗಳೂ ಪರಸ್ಪರ ಮಿಳಿತವಾದುವು.)

ಈ ಸಂಗ್ರಹದಲ್ಲಿನ ಬಹುಭಾಗದ ಪದ್ಯಗಳು ಹೆಂಗಸಿನ ಹೃದಯದಲ್ಲಿ ಏಳುವ ಪ್ರೇಮಭಾವಗಳನ್ನು ವರ್ಣಿಸುತ್ತವೆ. ಹೆಂಗಸು ಪ್ರೇಮಿಸುವ ಪುರುಷನು ಆಕೆಯಲ್ಲಿ ಅನುರಕ್ತನಾಗಿಲ್ಲದೆಯೇ ಇರಬಹುದು. ಅದು ಆಕೆಯ ಮನಸ್ಸನ್ನು ಮಾತ್ರ ಬದಲಾಯಿಸದು. ಇಂತಹ ಚಿತ್ರವನ್ನು ಈ ಕೆಳಗಣ ಪದ್ಯದಲ್ಲಿ ಕಾಣಬಹುದು :

ದಾಕ್ಷಿಣ್ಯೇನಾಪ್ಯಗಚ್ಛತ್ಸುಭಗ ಸುಖಯಸ್ಯಸ್ಮಾಕಂ ಹೃದಯಾನಿ ।
ನಿಷ್ಕೃತಮೇನಯಾಸಾಂ ಗತೋಸಿ ಕಾ ನಿರ್ವೃತಿಸ್ತಾಸಾಂ ॥

(ಎಲೈ ಪ್ರಿಯನೆ! ದಾಕ್ಷಿಣ್ಯದಿಂದ ನೀನು ನನ್ನ ಬಳಿ ಸುಳಿದರೂ ನನಗೆ ಅಗಾಧವಾದ ಸಂತೋಷವಾಗುತ್ತದೆ. ಕೈತವವಿಲ್ಲದೆ ನೀನು ಬಳಿ ಬಂದಾಗ ಆಗುವ ಸಂತೋಷವೆಷ್ಟಿರಬಹುದು?)

ಮನೆಯಲ್ಲಿ ಗಂಡಸು ಇನ್ನೊಬ್ಬ ಹೆಂಗಸಿನ ಗುಣಗಳನ್ನಾಗಲಿ ಸೌಂದರ್ಯವನ್ನಾಗಲಿ ವರ್ಣಿಸಿದರೆ ಮನೆಯ ಹೆಂಗಸಿಗಾಗದು. ತನ್ನ ಒಡೆಯ, ಇನ್ನೊಬ್ಬಳ ಗುಣಕ್ಕೆ ಮತ್ತು ಸೌಂದರ್ಯಕ್ಕೆ ಮನಸೋತಿರುವನೆಂಬುದು ಅವಳಿಗೆ ರುಚಿಸದ ಮಾತು. ರುಚಿಸದುದು ಮಾತ್ರವಲ್ಲ, ಆ ತೆರನ ಮಾತು ಹೆಂಗಸಿಗೆ ಕೋಪವನ್ನೂ ಛಲವನ್ನೂ ಉಂಟುಮಾಡುತ್ತದೆ. ತನ್ನ ಗಂಡನ ಮೇಲಿನ ಒಡೆತನ ಪೂರ್ಣವಾಗಿ ತನಗೇ ಇರಬೇಕೆಂಬ ಆಸೆ ಅಸೂಯೆಗಳು ಸಹಜವಾದುವೂ, ನ್ಯಾಯವಾದುವೂ ಹೌದು. ಪರಸ್ತ್ರೀಯ ವರ್ಣನೆಯೇ ಸೇರದಿರುವಾಗ, ಅವನ ಹೆಂಡತಿಯನ್ನು ಕೂಗುವಾಗಲೆಲ್ಲಾ ನೆರೆಯವಳ ಹೆಸರಿನಿಂದ ಕರೆಯುತ್ತಿದ್ದರೆ ಅವಳಿಗೆ ಸರಿಬೀಳುವುದೆ? ಒಂದು ಕುಟುಂಬದಲ್ಲಿ ಯಜಮಾನ ತನ್ನ ಹೆಂಡತಿಯನ್ನು ತನಗೆ ಬೇಕಾದ ನೆರೆಮನೆಯಾಕೆಯ ಹೆಸರಿನಿಂದ ಕೂಗುತ್ತಿರುವುದನ್ನು ನೋಡಿ ಅಕ್ಕಪಕ್ಕದ ಹೆಂಗಸರು ಅವನನ್ನು ದೂಷಿಸಲು ಉಪಕ್ರಮಿಸಿದರು. ತನ್ನ ಗಂಡ, ತನಗಿಂತ ಇನ್ನೊಬ್ಬಳ ಮೇಲೆ ಹೆಚ್ಚು ಅಭಿಮಾನವನ್ನು ತೋರಿಸುತ್ತಿರುವ ನೋವು ಮನೆಯಾಕೆಯನ್ನು ಕುಯ್ಯುತ್ತಿದೆ. ಆದರೂ, ಆಕೆಗೆ ಇತರರು ತನ್ನ ಗಂಡನನ್ನು ದೂಷಿಸುವುದು ಸರಿಬೀಳದು. ಆಕೆ, ತನ್ನ ಗೆಳತಿಯರ ಮಾತಿಗೆ ಉತ್ತರವಾಗಿ,

ವ್ಯಾಹರತುಮಾಂ ಸಖ್ಯಸ್ತಸ್ಯಾ ಗೋತ್ರೇಣ ಕಿಮತ್ರ ಭಣಿತೇನ ।
ಸ್ಥಿರ ಪ್ರೇಮ್ಣಾ ಭವತು ಯತ್ರ ತತ್ರಾಪಿ ಮಾಕಿಮಪ್ಯೇವಂ ಭಣತ ॥

(ಎಲೈ ಸಖಿಯರೇ! ನನ್ನ ಗಂಡ ಅವಳ ಹೆಸರನ್ನಿಟ್ಟೇ ನನ್ನನ್ನು ಕರೆಯಲಿ. ಎಲ್ಲಾದರೂ ಸರಿಯೆ, ಅವನ ಪ್ರೇಮ ಸ್ಥಿರವಾಗಿದ್ದರೆ ಸಾಕು. ನೀವು ಮಾತ್ರ ನನ್ನ ಗಂಡನನ್ನು ದೂಷಿಸಬೇಡಿ.) ಅನ್ನುತ್ತಾಳೆ.

ಇನ್ನೊಬ್ಬ ಹೆಂಗಸು ಅನ್ಯಸ್ತ್ರೀಯಲ್ಲಿ ಅನುರಕ್ತನಾಗಿರುವ ತನ್ನ ಗಂಡನ ವಿಷಯದಲ್ಲಿ ತೋರಿಸುವ ಗಾಢವಾದ ಪ್ರೇಮವನ್ನು ನೋಡಿ :

ಸಾ ಸತ್ಯಂ ಸುಭಗ ಗುಣರೂಪಶೋಭನಶೀಲಾ ಸತ್ಯಂ ನಿರ್ಗುಣಾ ಚಾಹಂ ।
ಭಣ ತಸ್ಯಾ ಯೋನ ಸದೃಶಃ ಕಿಂ ಸಸರ್ವೋ ಜನೋ ಮ್ರಿಯತಾಂ ॥

(ಎಲೈ ಪ್ರಿಯನೇ ಅವಳಿಗೆ ಗುಣವಿದೆ, ರೂಪವಿದೆ, ಬಿಂಕ ಬಿನ್ನಾಣಗಳಿವೆ. ನಿಜ. ನನ್ನಲ್ಲಿ ಅಂತಹ ಗುಣವೊಂದೂ ಇಲ್ಲ. ಅದೂ ನಿಜ. ಆದರೆ ಅವಳಂತೆ ಇಲ್ಲದವರೆಲ್ಲರೂ ಪ್ರಾಣ ತ್ಯಾಗಮಾಡಬೇಕೇನು, ಹೇಳು?) ಅನ್ನುತ್ತಾಳೆ. ಇನ್ನು ಹೆಚ್ಚು ಹೇಳಿ ಏನು ಉಪಯೋಗ?

ಪ್ರಪಂಚದಲ್ಲಿನ ಸುಖ ದುಃಖಗಳಿಗೆ ಕಾರಣ ಮನುಷ್ಯರು ಬಯಸುವ ವಸ್ತುಗಳ ಲಭ್ಯತೆ ಮತ್ತು ಅದರ ಅಭಾವ, ಇವುಗಳೇ. ನಮಗೆ ಬೇಕಾದವರು ನಮ್ಮ ಬಳಿ ಇದ್ದರೆ ಅದೇ ನಮಗೆ ಹಬ್ಬ. ಅವರು ನಮ್ಮೊಂದಿಗೆ ಇರದಿದ್ದರೆ ಅದು ಹರಿದಿನ. ಇಷ್ಟೇ ವ್ಯತ್ಯಾಸ. ಮಾನವನ ಪ್ರೇಮ ನಿಷ್ಕಲ್ಮಷವಾಗಿ, ನಿಸ್ವಾರ್ಥವಾಗಿ ಬೆಳೆಯುತ್ತ ಹೋದಂತೆಲ್ಲಾ ಐಶ್ವರ್ಯಕ್ಕೆ ದೊರೆತಿರುವ ಸ್ಥಾನ ಚ್ಯುತವಾಗುತ್ತದೆ. ನಮಗೆ ಬೇಕಾದ ವ್ಯಕ್ತಿಯ ಸಾನ್ನಿಧ್ಯವು ನಮಗೆ ಆನಂದವನ್ನು ಉಂಟುಮಾಡುತ್ತದೆ. ಎಷ್ಟೇ ವೈಭವವಿರಲಿ, ಎಷ್ಟೇ ವೈಖರಿ ಇರಲಿ, ಒಂದು ಸಂತೋಷ ಕೂಟದಲ್ಲಿ ನಮಗೆ ಬೇಕಾದವರು ಇಲ್ಲದಿದ್ದರೆ ಅದರಿಂದ ಸಂತೋಷ ದೊರೆವುದು ದುರ್ಲಭ. ಪ್ರಪಂಚಕ್ಕೆಲ್ಲಾ ಅದು ಸಂತೋಷದ ದಿನವಾಗಿರಬಹುದು, ಆದರೂ ಆಗ, ಕಣ್ಮರೆಯಾದವರನ್ನು ನೆನೆದುಕೊಂಡರೆ ಮೇರೆಯರಿಯದ ದುಃಖ ಬರುವುದು. ಸುಖದ ದಿನ ದುಃಖಮಯವಾಗುವುದು. ಇದು ಮಾನವನ ಮನೋಧರ್ಮ.

ಒಂದೂರಲ್ಲಿ ಒಬ್ಬರ ಮನೆಯಲ್ಲಿ ಸಂಪ್ರದಾಯವಾಗಿ ನಡೆದುಬಂದ ಹಬ್ಬವೊಂದು ಬಹು ವಿಜೃಂಭಣೆಯಿಂದ ನಡೆಯುತ್ತಿದೆ. ಸಂತೋಷ ಎಲ್ಲೆಲ್ಲೂ ಕುಣಿದಾಡುತ್ತಿದೆ. ಎಲ್ಲರ ಮುಖದಲ್ಲೂ ನಗು, ಆನಂದ. ವಿಧವೆಯೊಬ್ಬಳು ಮಾತ್ರ ದೀನಾಕ್ರಂದವದನಳಾಗಿ ಹೀಗೆನ್ನುತ್ತಾಳೆ :

ಉತ್ಪಥ ಪ್ರಧಾವಿತ ಜನಃ ಪ್ರವಿಜೃಂಭಿತ ಕಲಕಲಃ ಪ್ರಹತ ತೂರ್ಯಃ ।
ದುಃಖಂ ಸಏವ ಕ್ಷಣಸ್ತೇನ ವಿನಾಗ್ರಾಮದಾಹ ಇವ ॥

(ಜನಗಳು ಬಹು ಸಡಗರದಿಂದ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದಾರೆ. ಎಲ್ಲೆಲ್ಲಿ ನೋಡಿದರೂ ವಿಜೃಂಭಣೆ. ಮಂಗಳವಾದ್ಯಗಳು ಭೋರ್ಗರೆಯುತ್ತಿವೆ. ಈ ಹಬ್ಬದ ವೈಖರಿಯನ್ನೂ ಸಡಗರವನ್ನೂ ನೋಡಿದರೆ, ಊರಿಗೆ ಬೆಂಕಿ ಬಿದ್ದಾಗ ಇದ್ದ ಸಡಗರದಂತೆ ಕಾಣುತ್ತದೆ.)

ಆಕೆಯ ಹೃದಯ ವೇದನೆಯನ್ನೂ ಅದರ ಹಿಂದಿರುವ ಸ್ವಚ್ಛವೂ, ಗಭೀರವೂ ಆದ ಪ್ರೇಮವನ್ನೂ ಅಳೆಯಬಲ್ಲವರಾರು?

ಇನ್ನೊಂದು ಚಿತ್ರದಲ್ಲಿನ ವಿಪ್ರಲಂಭಕರುಣವನ್ನು ನೋಡಿ :

ಒಬ್ಬ ರೈತನ ಹೆಂಡತಿ ಮೃತಳಾದಳು. ಅವನು ವಿರಹವ್ಯಥೆಗೆ ಒಳಗಾಗಿದ್ದಾನೆ. ಅವನು ದುಃಖವನ್ನು ಮಾತಿನಿಂದ ವ್ಯಕ್ತಪಡಿಸಿ ದುಃಖದ ಭಾರವನ್ನು ಕಡಮೆ ಮಾಡಿಕೊಳ್ಳಲು ಕೂಡ ಅರಿಯ. ಎಲ್ಲರ ಇದಿರಿಗೆ ತನ್ನ ದುಃಖವನ್ನು ಪ್ರದರ್ಶಿಸುವುದು ತನ್ನ ಅಶಕ್ತಿಯನ್ನು ತೋರಿಸುತ್ತದೆಯೆಂಬುದು ಅವನ ಅಭಿಪ್ರಾಯ. ಅವ್ಯಕ್ತ ವೇದನೆಯನ್ನು ಅನುಭವಿಸುತ್ತಿದ್ದಾನೆ. ಇದನ್ನು ಕಂಡು ಆ ರೈತನ ಹೃದಯವನ್ನು ಬಣ್ಣಿಸಿರುವ ಕವಿಯ ಈ ಪದ್ಯವನ್ನು ನೋಡಿ :

ನಿಷ್ಕರ್ಮ ಹೋಪಿ ಕ್ಷೇತ್ರಾತ್ರಾ ಮರೋ ನೈವವ್ರಜತಿವಸತಿಂ ।
ಮೃತಂಪ್ರಿಯಜಾಯಾ ಶೂನ್ಯೇ ಕೃತವೇಗದುಃಖಂ ಪರಿಹರ್ತ ॥

(ತನ್ನ ಪ್ರಿಯೆ ಮೃತಳಾಗಿ ಮನೆ ಶೂನ್ಯವಾಗಿದೆ. ಮನೆಗೆ ಬಂದರೆ ದುಃಖದ ಉದ್ವೇಗ ಹೆಚ್ಚಾಗುತ್ತದೆ. ಇದನ್ನು ತಪ್ಪಿಸಿಕೊಳ್ಳಲು ರೈತ ಹೊಲದಲ್ಲಿ ಏನೂ ಕೆಲಸವಿಲ್ಲದಿದ್ದರೂ ಮೂರು ಹೊತ್ತೂ ಅಲ್ಲಿಯೇ ಇರುತ್ತಾನೆ.)

ನಿಷ್ಕಲಂಕವಾದ ಮತ್ತು ಶುದ್ಧವಾದ ಪ್ರೇಮ ಕಂಡುಬರುವುದು ಸ್ತ್ರೀಪುರುಷರು ಪರಸ್ಪರ ಒದಗಿಸಿಕೊಡುವ ಆಹಾರ, ಬಟ್ಟೆ, ವೈಭವ ಮೊದಲಾದ ಸೌಕರ್ಯಗಳಲ್ಲಲ್ಲ. ಪ್ರೇಮವು ಎರಡು ಹೃದಯಗಳನ್ನು ಬಂಧಿಸಿ ಒಂದುಮಾಡುವುದು. ಅದು ಜೀವನ ಪರ್ಯಂತ ಇರುವ ವಸ್ತು, ಎಂಬುದನ್ನು ಕವಿ,

ಅರಣ್ಯಾತ್ತೃಣಮರಣ್ಯಾತ್ಪಾನೀಯಂ ಸರ್ವತಃ ಸ್ವಯಂಗ್ರಾಹಂ ।
ತಥಾಪಿ ಮೃಗಾಣಾಂ ಮೃಗೀಣಾಂ ಚಾಮರಣಾನ್ತಾನಿ ಪ್ರೇಮಾಣಿ ॥

(ತಿನ್ನುವ ಹುಲ್ಲು, ಕುಡಿಯುವ ನೀರು ಇದನ್ನು ಸ್ವತಃ ತಾವೇ ಅರಣ್ಯದಿಂದ ಸಂಪಾದಿಸಿಕೊಳ್ಳಬೇಕು. ಹೀಗಾದರೂ ಮೃಗಮೃಗಿಯರ ಪ್ರೇಮ ಆಮರಣಾನ್ತವಾದುದು,) ಎಂಬ ಚಿತ್ರದಿಂದ ಸ್ಪಷ್ಟಪಡಿಸಿದ್ದಾನೆ.

ಮೊದಲೇ ಹೇಳಿದಂತೆ ಇದರಲ್ಲಿಯ ನಾಯಕ ನಾಯಿಕೆಯರು ಮುಗ್ಧರು. ಕೃತ್ರಿಮವನ್ನರಿಯದವರು. ಇವರು ಅನುಭವಿಸುವ ಸುಖ, ದುಃಖ ಆನಂದಗಳು ಪ್ರತಿದಿನ ಜೀವನದ ಸಾರಸರ್ವಸ್ವ.

ಪ್ರೇಮ ನಿಜವಾಗಿಯೂ ಅಮೃತವಾದುದು. ಅದರ ಆಳ ಸಮುದ್ರದ ಆಳಕ್ಕಿಂತ ಗಭೀರವಾದುದು. ಈ ಪ್ರೇಮವು ಜಗತ್ತನ್ನು ಅನೇಕಮುಖವಾಗಿ ಅನೇಕ ರೂಪದಿಂದ ಆವರಿಸಿದೆ. ಪ್ರತಿಯೊಂದು ಹೃದಯದಿಂದಲೂ ಹೊರಹೊಮ್ಮುವ ಪ್ರೇಮ, ಆ ಅಗಾಧವಾದ ಪ್ರೇಮದ ಅವ್ಯಕ್ತವಾದ ಧ್ವನಿಯೆನ್ನಬಹುದು. ಇದರಲ್ಲಿಯ ಪದ್ಯಗಳು ಆ ಅವ್ಯಕ್ತ ಧ್ವನಿಗೆ ಒಂದು ರೂಪುಗೊಟ್ಟು ನಮ್ಮೆದುರಿಗೆ ನಿಲ್ಲಿಸುತ್ತವೆ.

ಈ ಸಂಗ್ರಹದ ಪದ್ಯಗಳ ಪರಿಚಯವನ್ನು ಮಾಡಿಕೊಡುವ ಭರದಲ್ಲಿ ಸಂಗ್ರಹದ ಎಲ್ಲ ಪದ್ಯಗಳನ್ನೂ ಓದುಗರ ಮುಂದಿಡಬೇಕೆಂಬ ಆಶೆ ಬಲವಾಗುತ್ತದೆ. ಇದರಲ್ಲಿ ಯಾವುದನ್ನು ಆರಿಸಬೇಕು? ಯಾವುದನ್ನು ಬಿಡಬೇಕು ಎಂಬುದೇ ತೋಚದೆ ಹೋಗುತ್ತದೆ. ಇಲ್ಲಿಯ ಪ್ರಾಕೃತ ಕಾವ್ಯಪಾಕ ಅಂತಹುದು.

ಇದರಲ್ಲಿಯ ಒಂದೊಂದು ಪದ್ಯವೂ ಒಂದೊಂದು ಮಿಂಚಿನ ಬಳ್ಳಿಯಂತಿದೆ. ರಮಣೀಯವಾಗಿದೆ.

ಆದುದರಿಂದಲೇ ಏಳನೆಯ ಶತಮಾನದಲ್ಲಿದ್ದ ಸುಪ್ರಸಿದ್ಧನಾದ ಬಾಣ ಕವಿ

'ಅವಿನಾಶಿನ ಮಗ್ರಾಮ್ಯ
ಮಕರೋತ್ಸಾತವಾಹನಃ ।
ವಿಶುದ್ಧ ಜಾತಿಭಿಃ ಕೋಶಂ
ರತ್ನೈರಿವ ಸುಭಾಷಿತೈಃ ॥'

(ಸಾತವಾಹನನು ಶ್ರೇಷ್ಠವಾದ ರತ್ನಗಳಂತಹ ಸುಭಾಷಿತಗಳಿಂದ ಎಂದೆಂದಿಗೂ ಅಳಿಯದ, ಗ್ರಾಮ್ಯವಲ್ಲದ, ಕೋಶವನ್ನು ರಚಿಸಿದನು.)

ಎಂದು ಈ ಸಪ್ತಶತಿಯ ಯೋಗ್ಯತೆಯನ್ನು ಮುಕ್ತಕಂಠದಿಂದ ಹಾಡಿದ್ದಾನೆ. ಇದನ್ನು ಅಲ್ಲವೆನ್ನುವರಾರು? ಇದಕ್ಕಿಂತ ಹೆಚ್ಚಾಗಿ ಹೇಳಬಲ್ಲವರಾರು?

[ಇದನ್ನು ಬರೆಯುವುದರಲ್ಲಿ ಈ ಲೇಖಕನು, ಶ್ರೀಮಾನ್. ಆರ್. ಅನಂತ ಕೃಷ್ಣ ಶರ್ಮರವರ ಗಾಥಾ ಸಪ್ತಶತೀ ಸಾರಮು ಎಂಬ ಗ್ರಂಥದಿಂದಲೂ, ಪ್ರೊಫೆಸರ್. ಸಿ. ಆರ್. ನರಸಿಂಹ ಶಾಸ್ತ್ರಿಗಳವರ *Studies in Sanskrit Literature* ಎಂಬ ಪುಸ್ತಕದಿಂದಲೂ ಉಪಕೃತನಾಗಿದ್ದಾನೆ. ಅವರಿಬ್ಬರಿಗೂ ಈ ಲೇಖಕನು ಋಣಿ.]

---

## ಮುಕ್ತಕಗಳು

(ಇಂಗ್ಲಿಷಿನಿಂದ)

ಅನುವಾದಕ: ಎಂ. ವಿ. ಸೀ.

ಮಾಲೆಯನು ಕಟ್ಟುವುದು ಬಲು ಸುಲಭವಹುದು;
ಬಲು ಕಷ್ಟ ಮುಡಿವುದಕೆ ತಕ್ಕವರನರಸುವುದು.

["........ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ."—ಜನ್ನ ಕವಿ]

* * * *

ಒಂದು ಸಾಸಿರ ನೊಣಗಳನು ನಾ ಹಿಂದಿನಿರುಳಲಿ ಕೊಂದೆನು;
ಒಂದೆ ನೊಣವೆಬ್ಬಿಸಿತು ಎನ್ನನು ಇಂದು ಇರುಳಾದೊಡನೆಯೆ.

* * * *

ಮಾತಿಗೆ ಕೊಡುವೆ;
ಮಗಳಿಗೆ ಇರುವೆ.

—Goethe

---

ಹಂಸಗಳು ಹಾಡುವುವು ಸಾವುದಕೆ ಮುನ್ನ—
ಕೆಲಮಂದಿ ಹಾಡದೆಯೆ ಸತ್ತರೂ ಚೆನ್ನ!

—S. T. Coleridge



ಶುಕ್ರವಾರ, ಸೆಪ್ಟೆಂಬರ್ ೨೦, ೧೯೪೦

## ವಿಶದೀಕರಣ

'ಕನ್ನಡ ನುಡಿ'ಯ ಸೆಪ್ಟೆಂಬರ್ ೧೩ನೆಯ ಸಂಚಿಕೆಯ ಅಗ್ರಲೇಖನದ ಹಲವು ಅಂಶಗಳನ್ನು ದೇಶದ ಹಿತವನ್ನು ದೃಷ್ಟಿಯಲ್ಲಿಟ್ಟಿರುವ ಆಲೋಚನಾಪರರಾದ ಜನರು ಎಲ್ಲ ಒಪ್ಪತಕ್ಕದ್ದು.

(೧) ಆದರೆ ಪಾಶ್ಚಾತ್ಯ ಜನಜೀವನದ ಮತ್ತು ಸಾಹಿತ್ಯದ ಅಮೋಘಗುಣಗಳು ನಮ್ಮ ಜೀವನದಲ್ಲಿ ಬೆರೆತು, ನಮ್ಮ ಸಾಹಿತ್ಯ ನಾನಾ ಮುಖವಾಗಿ ತೇಜಸ್ವಿಯಾಗಿ ಬೆಳೆಯಬೇಕಾದರೆ ಶಾಲೆಗೆ ಸೇರುವ ಪ್ರತಿ ವಿದ್ಯಾರ್ಥಿಯೂ ಹತ್ತಾರು ವರ್ಷಗಳು ಇಂಗ್ಲಿಷನ್ನು ಪ್ರಮುಖ ಭಾಷೆಯನ್ನಾಗಿ ವ್ಯಾಸಂಗಮಾಡಬೇಕಾದ ಅಗತ್ಯವಿದೆಯೇ?

(೨) ನಮ್ಮ ಜನರ ಜೀವನ ದೊಡ್ಡದಾಗಿ ಬೆಳೆಯಬೇಕಾದರೆ ಯಾವ ಭಾಷೆ ವಿದ್ಯಾಭ್ಯಾಸ ಕ್ರಮದಲ್ಲಿ ಮುಖ್ಯ ಭಾಷೆಯಾಗಿರಬೇಕು?

(೩) ಇಂಗ್ಲಿಷ್ ಸಾಹಿತ್ಯದ ವರ್ಚಸ್ಸು ನಮ್ಮ ರಕ್ತಗತವಾಗಬೇಕಾದರೆ ನಮ್ಮ ನುಡಿಯ ಮೂಲಕವಲ್ಲವೇ?

(೪) ಅಲ್ಲದೆ, ಒಂದು ಭಾಷೆಯನ್ನು ಸುಮಾರು ಹನ್ನೆರಡು ವರ್ಷಗಳ ಕಾಲ ಮುಖ್ಯ ಭಾಷೆಯನ್ನಾಗಿ–ದೇಶ ಭಾಷೆಯನ್ನು ನಿರ್ಲಕ್ಷ್ಯಮಾಡಿ, ವ್ಯಾಸಂಗದ ಕಾಲದಲ್ಲಿ ಬಹು ಭಾಗವನ್ನು ಇಂಗ್ಲಿಷಿಗೇ ಮುಡುಪಾಗಿಟ್ಟೂ – ಅಭ್ಯಾಸ ಮಾಡಿದಮೇಲೆ "ಇಂಗ್ಲಿಷಿನ ಹೃದಯ ಹಿಡಿದು ಆ ನುಡಿಕಟ್ಟಿನ ಮರ್ಮವನ್ನು ಮನಗಂಡು ಇಂಗ್ಲಿಷಿನವರಂತೆಯೆ ಮಾತನಾಡಬಲ್ಲ (ಬರೆಯಬಲ್ಲ) ಜಾಣ್ಮೆ" ನಮಗೆ ಬರದೆಂದರೆ ಶಿಕ್ಷಣದ ದಾರಿತಪ್ಪೇ, ಇಲ್ಲವೆ ಅದು ಶಿಕ್ಷಕರ ಅಯೋಗ್ಯತೆಯನ್ನು ಸೂಚಿಸುವುದೇ?

ಕೊನೆಯದಾಗಿ,

(೫) ಇಂಗ್ಲಿಷಿನವರಂತೆ ಮಾತನಾಡಬಲ್ಲ, ಬರೆಯಬಲ್ಲ ಜಾಣ್ಮೆ ಹಾಗಿರಲಿ, ಇಷ್ಟು ವರ್ಷಗಳ ಕಾಲ ವ್ಯಾಸಂಗ ಮಾಡಿ, ದೊಡ್ಡ ದೊಡ್ಡ ಡಿಗ್ರಿಗಳನ್ನು ಪಡೆದ ಎಷ್ಟು ಮಂದಿ ವಿದ್ಯಾರ್ಥಿಗಳು ಸಾಮಾನ್ಯವಾಗಿ, ವ್ಯಾಕರಣಬದ್ಧವಾದ ಇಂಗ್ಲಿಷನ್ನು ಬಳಸಬಲ್ಲವರಾಗಿದ್ದಾರೆ?

—ಎಂದು ಗೆಳೆಯರೊಬ್ಬರು ನಮಗೆ ಬರೆದಿದ್ದಾರೆ. ನಮ್ಮ ಅಗ್ರಲೇಖನದ ಕಡೆ ವಿಶ್ವಾಸದ ಗಮನಕೊಟ್ಟಿದ್ದಕ್ಕಾಗಿ ವಂದನೆಗಳು. ಪ್ರಶ್ನೆಗಳ ಸಂಬಂಧದಲ್ಲಿ ಹೀಗೆ ಹೇಳಿ ಒಂದೆರಡು ಸಂಗತಿಗಳನ್ನು ವಿಶದಪಡಿಸಲು ಬಯಸುತ್ತೇವೆ.

(೧) ಇಲ್ಲ. (೨) ನಾಡಿನ ಭಾಷೆ; ಕರ್ನಾಟಕದಲ್ಲಿ ಕನ್ನಡ. (೩) ಹೌದು; ಬಹುಮಟ್ಟಿಗೆ; ನಾಡಿನ ರಕ್ತಕ್ಕೆ ಸೇರಬೇಕಾದರೆ. (೪) ಪ್ರಶ್ನೆಯ ಎರಡನೆಯ ಭಾಗವನ್ನು ಅಷ್ಟು ಕಠಿಣಮಾಡಬೇಕಾಗಿಲ್ಲ. ನಮ್ಮ ವಿದ್ಯೆಯ ಗುರಿಯನ್ನೂ ಈಗಿನ ಸ್ಥಿತಿಯನ್ನೂ ಬಲ್ಲವರು ಎಷ್ಟು ಭಾಗ ಇದರದು ಎಷ್ಟು ಇನ್ನೊಂದರದು–ಕಾಣಬಹುದು. (೫) ತೀರ ಕಡಮೆ ಮಂದಿ.

ಮೇಲಿನ ಉತ್ತರಗಳು ಸ್ಥೂಲವಾಗಿ ನಮ್ಮ ಅಭಿಪ್ರಾಯವನ್ನು ಸೂಚಿಸುವುವು. ಹೋದ ವಾರದ ಅಗ್ರಲೇಖನವನ್ನು ದಯಮಾಡಿ ಇನ್ನೊಮ್ಮೆ ಪರಿಶೀಲಿಸಿದರೆ 'ಕನ್ನಡ ನುಡಿ'ಯ ನಿಜವಾದ ಆಶಯ ಯಾವುದೆಂಬುದು ಸ್ಪಷ್ಟಪಡುತ್ತದೆ. ಅದನ್ನು ಬರೆದ ಉದ್ದೇಶ ಇಷ್ಟು: ಇಂದಿನ ಸಾಹಿತ್ಯದ ನೋಟ ತಿದ್ದಿ ಪುಷ್ಟಿಗೊಳ್ಳುವುದಕ್ಕೂ, ನಾಳೆಗೆ ಅದೂ ಅದರ ಮೂಲಕ ಬದುಕೂ ವೀರ್ಯವಂತವಾಗುವುದಕ್ಕೂ, ಇಂಗ್ಲಿಷ್ ಸಹಾಯ ಯಾವ ಬಗೆಯಲ್ಲಿ ದೊರೆಯಬೇಕು? ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಣದ ಮಾರ್ಗ, ಗುರಿ ಹೇಗಿದ್ದರೆ ಮಾತ್ರ ಅದರ ಪ್ರಯೋಜನ ಸಿದ್ಧಿಸೀತು? ಎಂಬುದು.

ಕನ್ನಡ ನಾಡಿನಲ್ಲಿ ಶಿಕ್ಷಣ ಎಲ್ಲ ಮಟ್ಟಗಳಲ್ಲಿಯೂ ಕನ್ನಡದಲ್ಲಿ ಆಗುವುದೇ ಸಹಜ, ನ್ಯಾಯ, ಸರ್ವಾರ್ಥಸಾಧಕ. ನಾಡಿನ ನುಡಿಯಲ್ಲದ ಪರಭಾಷೆಯಲ್ಲಿ ಶಿಕ್ಷಣ ನಡೆಯಬೇಕೆನ್ನುವುದು ಭರತಖಂಡದಂತೆ ಪರಿಸ್ಥಿತಿಯುಳ್ಳ ನಾಡುಗಳ ದುರದೃಷ್ಟಕ್ಕೆ ಮಾತ್ರ ವಿಶೇಷವಾಗಿ ಸಂದ ಭಾಗ್ಯ. ಸ್ವಾಧೀನವಾದ ಯಾವ ಸತ್ವವೂ ಇಂತಹ ಸ್ಥಿತಿಗೆ ಸಂತೋಷಪಡುವುದಿಲ್ಲ. ನಾಚಿ ತಲೆತಗ್ಗಿಸುತ್ತದೆ. ಎಂದು ಒಂದು ನಾಡಿಗೆ ಸ್ವಾಭಿಮಾನ ಹುಟ್ಟುತ್ತದೆಯೊ ಅಂದು ಅದರ ಭಾಷೆ ತಲೆಯೆತ್ತಿ ನಿಂತು ತನ್ನ ಮನೆಯಲ್ಲಿ ತಾನು ಒಡತಿಯಾಗುತ್ತದೆ. ಉಳಿದ ಭಾಷೆಗಳಿಂದ ಊಳಿಗ, ದುಡಿಮೆ ಕೊಳ್ಳುತ್ತದೆ. ಅಂತಹ ಸ್ಥಿತಿ ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಎಷ್ಟು ಬೇಗ ಬಂದರೂ ತಡವೇ. ಈವರೆಗೆ ವ್ಯರ್ಥವಾದ ಕಾಲವನ್ನು ಕುರಿತು ವ್ಯಥೆ ಉಂಟಾಗುತ್ತಿದೆ.

ಹೀಗೆಂದುದರಿಂದಲೇ ಹತ್ತಾರು ವರ್ಷಗಳ ಕಾಲ ಕಡ್ಡಾಯವಾಗಿ ಪರಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಅಗತ್ಯ ಎಲ್ಲರ ಮೇಲೂ ಹೊರಬಾರದೆಂಬುದೂ ಅದು ಶಿಕ್ಷಣದ ಭಾಷೆ ಆಗಬಾರದೆಂಬುದೂ ತಿಳಿಯಾದೀತು. ಇದುವರೆಗೆ ಅಭ್ಯಾಸಮಾಡಿದವರ ಹಿರಿಮೆಯ ಪರೀಕ್ಷೆ ಅಷ್ಟೇನೂ ಅಗತ್ಯವಲ್ಲ. ಇನ್ನೆಷ್ಟು ಕಾಲ, ಇಂದಿನ ಪರಿಸ್ಥಿತಿಯೇ ನಾಡಿನ ವಿದ್ಯಾಭ್ಯಾಸದಲ್ಲಿ ನಡೆದುಬರುತ್ತದೆಯೊ, ಇಂಗ್ಲಿಷಿನ ಮೂಲಕ ಶಿಕ್ಷೆ ನಡೆಯಬೇಕಾಗುತ್ತದೆಯೋ ಅಲ್ಲಿನವರೆಗಾದರೂ ನಾವು ಸೂಚಿಸಿದ ಗುರಿ ಮಾರ್ಗಗಳ ಬೆಳಕು ನಮ್ಮ ವ್ಯಾಸಂಗವನ್ನು ನಡಸಿ ಕೃತಕೃತ್ಯವಾಗಲಿ ಎಂದು ನಾವು ಹಾರೈಸಿದೆವು. ಅದರಲ್ಲಿಯೂ ವಿಶೇಷವಾಗಿ, ಇಂಗ್ಲಿಷ್ ಸಾಹಿತ್ಯದ ವ್ಯಾಸಂಗವನ್ನು ಕುರಿತು ಆಡಿದ ಮಾತು, ಅದರ ಜೀವ, ಜಾಡು, ಆಕಾಂಕ್ಷೆಗಳಂತಹದರ ಕಡೆಗೆ ನಮ್ಮ ಗಮನ ಹೋಗಲಿ; ನಮ್ಮ ಪ್ರಯತ್ನಗಳು ಹೊಸ ಕಾಲದ ಬದುಕಿನ ಸಾಧನೆಗೂ ಬಗೆಬಗೆಯ ವೈಭವ ವಿವಿಧತೆಗಳ ಗಳಿಕೆಗೂ ನೆರವಾಗಲಿ ಎಂಬುದನ್ನು ಸಮರ್ಥಿಸಲು ನಾವು ಹೊರಟದ್ದು.

ಈ ವಿಷಯವನ್ನೂ ಸಂಬಂಧಿಸಿದ ಎಲ್ಲ ಪ್ರಶ್ನೆ ಸಮಸ್ಯೆಗಳನ್ನೂ ಸಾಕಲ್ಯದಿಂದ ಪರಿಶೀಲಿಸಿ ನಾಡುನುಡಿಗಳ ಭಕ್ತರೆಲ್ಲ ವಿಚಾರವನ್ನೂ ಕಾರ್ಯವನ್ನೂ ಕೈಕೊಳ್ಳುವರೆಂದು ನಂಬಿದ್ದೇವೆ.

# ಪರಿಷತ್ತಿನ ಸುದ್ದಿ

## ಪರಿಷತ್ತಿನ ಮಾನ್ಯ ಸದಸ್ಯರಲ್ಲಿ ವಿನಂತಿ

**ಕಳೆದ ವರ್ಷ ಬೆಳಗಾಂವಿಯಲ್ಲಿ ಸೇರಿದ ಸಕಲ ಸದಸ್ಯರ ಅಧಿವೇಶನದಲ್ಲಿ ಸಮ್ಮೇಳನಾಧ್ಯಕ್ಷರನ್ನು ಆರಿಸುವ ವಿಷಯದಲ್ಲಿ ಆದ ತೀರ್ಮಾನದಂತೆ ಸಮ್ಮೇಳನಾಧ್ಯಕ್ಷರನ್ನು ಆರಿಸುವ ಹಕ್ಕು ಎಲ್ಲ ಸದಸ್ಯರಿಗೂ ಉಂಟು.**

**ಚಂದಾ ಹಣ ಬಾಕಿ ಉಳಿಸಿಕೊಂಡಿರುವ ಸದಸ್ಯರುಗಳಿಗೆ, ಶೀಘ್ರದಲ್ಲಿಯೇ ನಡೆಯಬೇಕಾದ ಅಧ್ಯಕ್ಷ ಚುನಾವಣೆಯಲ್ಲಿ ಭಾಗ ವಹಿಸುವ ಹಕ್ಕು ಇರದೆ ಹೋಗುವುದರಿಂದ ಅಂಥ ಸದಸ್ಯರೆಲ್ಲರೂ ಕೂಡಲೆ ಬಾಕಿ ನಿಂತಿರುವ ಚಂದಾ ಹಣವನ್ನು ಪರಿಷತ್ತಿಗೆ ಸಲ್ಲಿಸಬೇಕಾಗಿ ಪ್ರಾರ್ಥನೆ.**

### ಶ್ರೀ|| ಎ. ಕೆ. ಅಸುಂಡಿಯವರ ಉದಾರ ದಾನ

ಗದುಗಿನ ನಿವೃತ್ತ ಡಿಸ್ಟ್ರಿಕ್ಟ್ ಜಡ್ಜರಾದ ಶ್ರೀ|| ಎ. ಕೆ. ಅಸುಂಡಿಯವರು ಪರಿಷತ್ತಿನ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಪ್ರದಾತೃ ವರ್ಗದ ಸದಸ್ಯತ್ವ, ಹರಿದಾಸವಾಙ್ಮಯ ಸಂಗ್ರಹ ಮತ್ತು ಪ್ರಕಟನೆ, ಗಮಕ ಶಿಕ್ಷಣ ಪ್ರಚಾರ—ಇವುಗಳಿಗಾಗಿ ೩,೦೦೦ ರೂಪಾಯಿಗಳನ್ನು ಕೊಡುವುದಾಗಿ ವಚನ ಕೊಟ್ಟಿದ್ದರಷ್ಟೆ. ಅವರು ಉದಾರ ದ್ರವ್ಯವನ್ನು ಈ ದಿನ ಪರಿಷತ್ತಿಗೆ ಮುಟ್ಟುವಂತೆ ಕಳಿಸಿದ್ದಾರೆ. ಇದಕ್ಕಾಗಿ ಅವರಿಗೆ ಪರಿಷತ್ತು ತನ್ನ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

### ಪುಸ್ತಕ ಮತ್ತು ಪಡಿಯಚ್ಚುಗಳ ದಾನ

ಪ್ರಸಿದ್ಧ ಆಯುರ್ವೇದ ವೈದ್ಯರೂ ಕನ್ನಡ ಪ್ರೇಮಿಗಳೂ ಆದ ಬೆಂಗಳೂರು ಸ್ಯಾದ್ವಾದ ವೈದ್ಯಶಾಲೆಯ ಪಂ|| ಎಂ. ಯಲ್ಲಪ್ಪನವರು ಮೈಸೂರು ಮಹಾರಾಜರವರಾದ ಶ್ರೀ|| ಜಯಚಾಮರಾಜ ಒಡೆಯರವರು ಕರ್ನಾಟಕ ರತ್ನಸಿಂಹಾಸನಾರೋಹಣಮಾಡಿದ ಶುಭ ಸಮಯದ ನೆನಪಾಗಿ ಪರಿಷತ್ತಿಗೆ 'ತತ್ತ್ವಸಾರ' ಎಂಬ ಕೈಬರಹದ ಗ್ರಂಥವನ್ನೂ ಸುಮಾರು ೧೦೦ ಪಡಿಯಚ್ಚುಗಳನ್ನೂ ದಾನಮಾಡಿರುತ್ತಾರೆ. ಅವರ ಬಳಿ ಇರುವ ಇನ್ನೂ ಹಲವು ಅಮೂಲ್ಯವಾದ ಓಲೆಗರಿಯ ಪ್ರಾಚೀನ ಗ್ರಂಥಗಳನ್ನು ದಾನಮಾಡಲು ಮಾತು ಕೊಟ್ಟಿರುತ್ತಾರೆ.

### ಶ್ರೀಮತಿ ಸೊಫಿಯಾ ವಾಡಿಯಾ ಅವರಿಗೆ ಸತ್ಕಾರ

ಈಗ ಬೆಂಗಳೂರಿಗೆ ದಯಮಾಡಿಸಿರುವ, ಪಿ. ಇ. ಎನ್. ಸಂಸ್ಥೆಯ ಇಂಡಿಯಾ ಶಾಖೆಯ ಕಾರ್ಯದರ್ಶಿಗಳೂ 'ಪಿ. ಇ. ಎನ್.' ಮತ್ತು 'ಆರ್ಯನ್ ಪಾತ್' ಪತ್ರಿಕೆಗಳ ಸಂಪಾದಕಿಯರೂ ಆದ ಶ್ರೀಮತಿ ಸೊಫಿಯಾ ವಾಡಿಯಾ ಅವರ ಗೌರವಾರ್ಥವಾಗಿ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ಇಂದು ಬೆಳಗ್ಗೆ ಒಂದು ಸತ್ಕಾರಕೂಟವನ್ನು ಏರ್ಪಡಿಸಿದ್ದರು. ಹಿರಿಯ ಕಿರಿಯ ಸಾಹಿತಿಗಳು ಹಲವು ಮಂದಿ ದಯಮಾಡಿಸಿದ್ದರು. ಲಘು ಉಪಾಹಾರವಾದ ಮೇಲೆ 'ಶ್ರೀ'ಯವರು ಶ್ರೀಮತಿಯವರನ್ನು ನೆರೆದಿದ್ದವರಿಗೆ ಪರಿಚಯ ಮಾಡಿಕೊಟ್ಟು, ಅವರು ನಮ್ಮ ದೇಶದ ಬೇರೆ ಬೇರೆ ವಾಙ್ಮಯಗಳಿಗೂ ಒಟ್ಟು ಸಾಹಿತ್ಯಕ್ಕೂ ಭಾರತೀಯ ಸಂಸ್ಕೃತಿಯ ಪ್ರಸಾರಕ್ಕೂ ಮಾಡುತ್ತಿರುವ ಸೇವೆಯನ್ನು ಕೊಂಡಾಡಿದರು. ಶ್ರೀಮತಿಯವರು ಉತ್ತರ ಕೊಡುತ್ತ, ತಮ್ಮ ಕಾರ್ಯದಲ್ಲಿ ನೆರವಾಗುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತನ್ನೂ ಎಲ್ಲ ಕನ್ನಡ ಸಾಹಿತಿಗಳನ್ನೂ ವಂದಿಸಿದರು; ಪಿ. ಇ. ಎನ್. ವಿಶ್ವಸಮ್ಮೇಳನ ಈ ವರ್ಷ ಮೈಸೂರಿನಲ್ಲಿ ನಡೆಯಬೇಕಾಗಿದ್ದು ಯುದ್ಧದ ಪ್ರಯುಕ್ತ ಮುಂದುವರಿಯಬೇಕಾಯಿತೆಂದೂ ಅದು ನಡೆದಾಗ ಮೈಸೂರಿನಲ್ಲಿ ನಡೆಯುವುದಾಗಿ ತಮಗೆ ಭರವಸೆಯಿದೆ ಎಂದೂ ತಿಳಿಸಿದರು. ಪಿ. ಇ. ಎನ್. ಸಂಸ್ಥೆಯ ಸ್ಥಾಪನೆ, ಬೆಳವಣಿಗೆ ಮತ್ತು ಉದ್ದೇಶಗಳನ್ನು ತಿಳಿಯಹೇಳಿ, ಸತ್ಯ ಸೌಂದರ್ಯಗಳ ಪ್ರತೀಕವಾದ ಸಾಹಿತ್ಯ ಜನಾಂಗ ಭಾವನೆಗೆ ಹೊರಗಾದದ್ದೆಂದು ಒತ್ತಿ ಹೇಳಿ, ಪಿ. ಇ. ಎನ್. ಸಂಸ್ಥೆಯ ಹೆಗ್ಗುರಿಯಾದ ವಿಶ್ವಸೌಹಾರ್ದ ಸಾಧನೆಯಲ್ಲಿ ಸಾಹಿತಿಗಳೆಲ್ಲರೂ ನೆರವಾಗಬೇಕೆಂದು ಕೋರಿದರು. ಬಳಿಕ ಶ್ರೀ|| ಡಿ. ವಿ. ಗುಂಡಪ್ಪನವರು ಶ್ರೀಮತಿಯವರು ಕನ್ನಡಕ್ಕೆ ಮಾಡುತ್ತಿರುವ ಉಪಕಾರವನ್ನು ಕುರಿತು, ಪಿ. ಇ. ಎನ್. ಮೂಲಕ ಪ್ರಪಂಚದ ಭಾಷೆಗಳ ಭೂಪಟದಲ್ಲಿ ಕನ್ನಡದ ನೆಲೆಯನ್ನು ಕಾಣಿಸಿರುವರೆಂದೂ ಇದಕ್ಕಾಗಿ ಕನ್ನಡಿಗರು ಅವರಿಗೆ ಕೃತಜ್ಞರಾಗಿರಬೇಕೆಂದೂ ಹೇಳಿದರು. 'ಶ್ರೀ'ಯವರು ಅತಿಥಿಗಳಾದ ವಾಡಿಯಾ ದಂಪತಿಗಳಿಗೆ ವಂದನೆ ಸಲ್ಲಿಸಿ ಹಾರ ತುರಾಯಿಗಳನ್ನು ಅರ್ಪಿಸಿದಮೇಲೆ ಸಮಾರಂಭ ಮುಕ್ತಾಯವಾಯಿತು.

---

**ವಿಜಾಪುರ: ಕನ್ನಡ ಸಾಹಿತ್ಯ ಪರೀಕ್ಷೆಗಳು**

ತಾ|| ೫-೯-೪೦ನೆಯ ದಿನ ವಿನಾಯಕನ ಹಬ್ಬದ ಶುಭ ಮುಹೂರ್ತದಲ್ಲಿ ಹಿಂದೀ ಶಿಕ್ಷಣ ವರ್ಗದ ಭವನದಲ್ಲಿ ರಾ. ಸಾ. ಫ. ಗು. ಹಳಕಟ್ಟಿಯವರಿಂದ ಕನ್ನಡ ಸಾಹಿತ್ಯ ಪರೀಕ್ಷಾ ವರ್ಗಗಳು ಪ್ರಾರಂಭವಾದವು. ೧ನೆಯ ಪರೀಕ್ಷೆಗೆ ೨೫ ಜನ ವಿದ್ಯಾರ್ಥಿಗಳೂ ೨ನೆಯ ಪರೀಕ್ಷೆಗೆ ೪೦ ಜನ ವಿದ್ಯಾರ್ಥಿಗಳೂ ಮತ್ತು ೩ನೆಯ ಪರೀಕ್ಷೆಗೆ ೨೦ ಜನ ವಿದ್ಯಾರ್ಥಿಗಳೂ ಹೆಸರು ಹಚ್ಚಿರುವರು. ೧ನೆಯ ಮತ್ತು ೩ನೆಯ ಪರೀಕ್ಷೆಗಳ ವರ್ಗಗಳಿಗೆ ೨೫ ಜನ ಮಹಿಳೆಯರೂ ಸೇರಿರುವರು. ಮಹಿಳೆಯರಿಗಾಗಿ ಸ್ಥಾನ ಹಾಗೂ ಸಮಯದ ಪ್ರತ್ಯೇಕ ಏರ್ಪಾಡು ಮಾಡಲಾಗಿದೆ.

**ಬೆಳಗಾಂವಿ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಸದಸ್ಯರ ಈ ವರ್ಷದ ಸಾಧಾರಣ ಸಭೆ ರವಿವಾರ (ತಾ|| ೧೫-೯-೧೯೪೦) ಇಳಿ ಹೊತ್ತಿನ ೬ ಗಂಟೆಗೆ ಲಿಂಗರಾಜ ವಿದ್ಯಾಲಯದಲ್ಲಿ ಸೇರಿತು. ಸಭೆಗೆ ಶ್ರೀಮಾನ್ ಸವನೂರ ಹನುಮಂತರಾಯರೂ ಶ್ರೀಯುತ ವಾಲಿಯವರೂ ಡಾಕ್ಟರ ನಂದೀಮಠ ಮುಂತಾದ ೪೫-೫೦ ಮಂದಿ ಸದಸ್ಯರೂ ಬಂದಿದ್ದರು. ಈ ಸಭೆಗೆ ಶ್ರೀಯುತ ಸವನೂರರವರು ಹಿರಿಯರಾಗಿದ್ದರು. ಸಂಘದ ೧೯೩೯ನೆಯ ವರ್ಷದ ಆಯವ್ಯಯ ಪತ್ರಿಕೆಯನ್ನೂ, ಸಂಘ ನಡಸಿಹ ಕಾರ್ಯಕಲಾಪಗಳ ವರದಿಯನ್ನೂ ಗೌರವ ಕಾರ್ಯದರ್ಶಿಗಳಾದ ಶ್ರೀಯುತ ಪ್ಯಾಟಿ ಶಾಮರಾಯರು ಸಭಿಕರಿಗೆ ಒಪ್ಪಿಸಿದರು. ಸಂಘದ ಕಾರ್ಯಸಮಿತಿಯ ಹಿರಿಯರಾದ ಶ್ರೀಯುತ ವಾಲಿಯವರು ಇವುಗಳಿಗೆ ಸದಸ್ಯರೆಲ್ಲರ ಸಮ್ಮತಿಯನ್ನು ಕೋರಿದರು. ಎಲ್ಲರ ಸಮ್ಮತಿಯಿಂದ ಸಭೆ ಇವುಗಳನ್ನು ಸ್ವೀಕರಿಸಿತು.

(೨) ಬಳಿಕ ಈಗ ನಡೆದಿರುವ ವರುಷದ ಕಾರ್ಯಸಮಿತಿಯ ೧೪ ಮಂದಿ ಸದಸ್ಯರ ಆಯ್ಕೆ ನಡೆಯಿತು. ಶ್ರೀಮಾನ್ ಸವನೂರ ಹನುಮಂತರಾಯರು ಅಧ್ಯಕ್ಷರಾಗಿಯೂ, ಶ್ರೀಯುತರಾದ ವಾಲಿ ಮತ್ತು ತೆರಗೊಂಡಿ ಇವರಿಬ್ಬರು ಉಪಾಧ್ಯಕ್ಷರಾಗಿಯೂ, ಶ್ರೀಯುತ ಇಂಚಲ, ಬಿ.ಎ. ಇವರು ಕಾರ್ಯದರ್ಶಿಗಳಾಗಿಯೂ, ಶ್ರೀಯುತ ಗೋಪಾಳರಾವ ದೇಶಪಾಂಡೆಯವರು ಪುಸ್ತಕಾಲಯದ ಮೇಲ್ವಿಚಾರಕರಾಗಿಯೂ, ಶ್ರೀಯುತರಾದ ಈ. ಸಿ. ರೆಡ್ಡಿ, ಎಮ್.ಎ. ರುಬೇನ್, ಎಮ್.ಎ. ತಟ್ಟಿ ಶೇಷಾಚಾರ್ಯ, ಎಲ್‌ಎಲ್.ಬಿ. ಮಹಾಜನ, ಎಲ್‌ಎಲ್.ಬಿ. ಬೀಡಿ ಶಾಮರಾವ, ಬಿ.ಎ. ಮತ್ತು ಪ್ಯಾಟಿ ಶಾಮರಾವ ಇವರು ಕಾರ್ಯಸಮಿತಿಯ ಸದಸ್ಯರಾಗಿಯೂ ಸರ್ವಾನುಮತದಿಂದ ಆಯ್ದು ಬಂದಿರುವರು.

(೩) ಬಳಿಕ ಹಿಂದಿನ ವರ್ಷದ ಕಾರ್ಯಸಮಿತಿಯವರು ಕೈಕೊಂಡು ನೆರವೇರಿಸಿದ ಕನ್ನಡದ ಚಟುವಟಿಕೆಗಳಿಗಾಗಿ ಕೃತಜ್ಞತೆಯನ್ನು ಸಲ್ಲಿಸಿತು. ಕೊನೆಗೆ ಶ್ರೀಯುತ ವಾಲಿಯವರು ಉಪಾಹಾರವನ್ನು ಸಭಿಕರಿಗೆ ಕೊಟ್ಟು ಅವರನ್ನು ಸಂತಸಗೊಳಿಸಿದರು.

**ಸಿರಿಯಾಳಕೊಪ್ಪ: ಕರ್ನಾಟಕ ಸಂಘ**

ಮೇಲ್ಕಂಡ ಸಂಘದ ಸಭೆ ತಾ|| ೧೪-೯-೪೦ನೆಯ ಶನಿವಾರ ಸಾಯಂಕಾಲ ಶ್ರೀಮಾನ್ ಎಂ. ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ದೇವರ ಪ್ರಾರ್ಥನೆ, ಶ್ರೀಮಜ್ಜಯಚಾಮರಾಜ ಒಡೆಯರ್ ಬಹಾದ್ದೂರ್, ಮಹಾಸ್ವಾಮಿಯವರು ಪಟ್ಟಾಭಿಷಿಕ್ತರಾದ ಬಗ್ಗೆ ಸಂಘದ ವಿಶ್ವಾಸಪೂರ್ವಕವಾದ ಭಕ್ತಿ ಗೌರವಸೂಚಕ ನಿರ್ಣಯ ಆದಮೇಲೆ ಹಿಂದಿನ ಸಭೆಯ ವರದಿಯನ್ನೋದಲಾಯಿತು. ಶಾಲಾ ವಿದ್ಯಾರ್ಥಿಗಳಲ್ಲಿ ಕೆಲವರು ಕವನ ಪಠಣಮಾಡಿದರು. ಕಾರ್ಯದರ್ಶಿ ಶ್ರೀ|| ಬಿ. ಎಂ. ಮಹಾದೇವಯ್ಯನವರು ಶ್ರೀ|| ಕೆ. ವಿ. ಪುಟ್ಟಪ್ಪನವರ ಕೆಲವು ಕವನಗಳನ್ನು ಓದಿದರು. ಶ್ರೀ|| ಎಸ್. ವಿ. ಗೋಪಾಲರಾಯರು ಶ್ರೀ|| ಬೇಂದ್ರೆಯವರ ಕವನಗಳನ್ನು ಮತ್ತು ಶ್ರೀ|| ಕೌಜಲಗಿಯವರು ರಚಿಸಿದ 'ಹಾಸ್ಯ'ವೊಂದನ್ನು ಓದಿದರು. ಶ್ರೀ|| ಎಂ. ಹನುಮಂತಪ್ಪನವರು, ಸಿರಿಯಾಳಕೊಪ್ಪದವರು ಸಂಘಕ್ಕಾಗಿ ಮಾಡಬೇಕಾಗಿರುವ ಸಹಾಯ ಮತ್ತು ಸೇವೆಯ ವಿಚಾರವಾಗಿ ಭಾಷಣಮಾಡಿದ ನಂತರ ಅಧ್ಯಕ್ಷರು ತಾವೇ ರಚಿಸಿದ 'ಚಂದ್ರಹಾಸ' ಎಂಬ ಲಾವಣಿಯನ್ನು ಓದಿ 'ಕರ್ನಾಟಕ ಸಂಸ್ಕೃತಿ ಮತ್ತು ಸಾಹಿತ್ಯ'ದ ವಿಚಾರವಾಗಿ ಮಾತಾಡಿದರು.

**ಬೆಂಗಳೂರು: ಸಂಸ್ಕೃತ ಭಾಷಾ ಪೋಷಿಣೀ ಸಭಾ**

೧೮-೯-೪೦ನೆಯ ಬುಧವಾರ ಸಂಜೆ ೫-೩೦ ಗಂಟೆಗೆ ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು ಮೇಲ್ಕಂಡ ಸಂಘದ ಈ ವರ್ಷದ ಆರಂಭ ಭಾಷಣವನ್ನು ಕನ್ನಡದಲ್ಲಿ ಮಾಡಿದರು.

**ದೊಡ್ಡಬಳ್ಳಾಪುರ: ಶ್ರೀ|| ಕೆ. ವಿ. ಪುಟ್ಟಪ್ಪನವರ ಭಾಷಣ**

ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸದ ಏರ್ಪಾಟಿನ ಸಂಬಂಧದಲ್ಲಿ ಶ್ರೀ|| ಕೆ. ವಿ. ಪುಟ್ಟಪ್ಪನವರು ೨೫ನೆಯ ತಾರೀಖು ಬುಧವಾರ ಸಂಜೆ ೬ ಗಂಟೆಗೆ ದೊಡ್ಡಬಳ್ಳಾಪುರದಲ್ಲಿ 'ಸಾಹಿತ್ಯ ಮತ್ತು ಸಾಕ್ಷಾತ್ಕಾರ' ಎಂಬ ವಿಷಯವನ್ನು ಕುರಿತು ಭಾಷಣಮಾಡುವರು.

# ಪುಸ್ತಕಗಳ ವ್ಯಾಸಂಗ-- ಜೀವನದ ವ್ಯಾಸಂಗ

**ಜೀವನ ಮತ್ತು ನೀತಿಗಳನ್ನು ಕುರಿತು ಯೋಚನೆ ಮಾಡು; ಸೂಕ್ಷ್ಮವಾದ ಅಣುಗಳ ಮತ್ತು ಶೂನ್ಯದ ವಿಚಾರಗಳ ತರ್ಕವನ್ನು ವೇದಾಂತಿಗಳಿಗೆ ಬಿಡು.**

ಲಿ ಕ್ಲಾರ್ಕ್* ಎಲ್ಲಿಯೊ ಒಂದು ಕಡೆಯಲ್ಲಿ ಒಂದು ಸ್ವಾರಸ್ಯವಾದ ಕಥೆಯನ್ನು ಹೇಳಿದ್ದಾನೆ: ಸಿರಿವಂತನಾದ ವರ್ತಕನೊಬ್ಬನು ಮಗನನ್ನು ವಿದ್ಯಾವಂತನನ್ನಾಗಿ ಮಾಡುವ ಆಸೆಯಿಂದ ಅವನೊಡನೆ ಒಂದು ವಿಶ್ವವಿದ್ಯಾನಿಲಯಕ್ಕೆ ಹೋದನು. ಮಗನಿಗೆ ತಕ್ಕ ಗುರುವನ್ನು ತಾನೇ ಆರಿಸುವುದಾಗಿ ಮನಸ್ಸಿನಲ್ಲಿ ನಿಶ್ಚಯ ಮಾಡಿದನು. ವಿದ್ಯಾವಂತರ ಹೃದಯವನ್ನು ಒಲಿಸಿ ತಿಳಿಯುವ ಶಕ್ತಿ ಹೇಗೊ ಅವನಲ್ಲಿದ್ದಿತು. ಅಲ್ಲಿಗೆ ಬಂದ ಕೂಡಲೆ ದೊರೆತವರಿಗೆಲ್ಲ ಅವನು ಕೊಡುಗೈಯಿಂದ ಔತಣವನ್ನು ಮಾಡಿದನು. ವಿಶ್ವವಿದ್ಯಾನಿಲಯದ ಅಧ್ಯಾಪಕರೆಲ್ಲರೂ ಔತಣದ ರುಚಿಯನ್ನು ಕಂಡು, ಪುಸ್ತಕಗಳನ್ನು ಬಿಸುಟು, ವರ್ತಕನನ್ನು ತೃಪ್ತಿಪಡಿಸುವ ಆಸೆಯಿಂದ ಗುಲಾಮರಂತೆ ಕೀಳುತೆರದಲ್ಲಿ ನಡೆದುಕೊಂಡರು. ವರ್ತಕನ ಉದ್ದೇಶ ನೆರವೇರಿತು. ಅವನು ರುಚಿಯಾದ ಭಕ್ಷ್ಯಗಳನ್ನು ಅವರಿಗೆ ಮೇಯಿಸಿದನು; ಮೆದು ಮಾತುಗಳಿಂದ ಅವರನ್ನು ಒಲಿಸಿಕೊಂಡನು. ಪ್ರತಿ ಪಂಡಿತನೂ ಎದೆಬಿಚ್ಚಿ ಮಾತನಾಡುವಂತೆ ಮಾಡಿಕೊಂಡನು. ಈ ಪ್ರಕಾರ ಅವರವರಲ್ಲಿದ್ದ ಪೈಪೋಟಿ ಅಸೂಯೆ ಅಸಮಾಧಾನಗಳನ್ನು ತಿಳಿದನು. ಪ್ರತಿಯೊಬ್ಬ ಪಂಡಿತನ ಗುಣವನ್ನು ಅವನ ಮಾತಿನಿಂದಲೂ ಅವನ ಪರಿಚಿತರ ಮಾತಿನಿಂದಲೂ ತಿಳಿದು, ಮಗನಿಗೆ ಬೇರೆಯ ವಿದ್ಯಾಭ್ಯಾಸ ಕೊಡಲು ನಿಶ್ಚಯಿಸಿ ಅಲ್ಲಿಂದ ಹೊರಟುಹೋದನು. ಈ ಅನುಭವದಿಂದ ಅವನು ನಿರ್ಧರ ಮಾಡಿದ್ದು ಇಷ್ಟು: ವಿಶ್ವವಿದ್ಯಾನಿಲಯಗಳಲ್ಲಿ ಓದುವುದರಿಂದ ನೀತಿ ಕೆಡುವುದು, ಬುದ್ಧಿ ಸಂಕುಚಿತವಾಗುವುದು ಎಂದು. ಎಲ್ಲ ಕಾಲದ ಪಂಡಿತರೂ ಒಂದೇ ಎಂದು ತಿಳಿದಿದ್ದುದರಿಂದ ಪುರಾತನ ಗ್ರಂಥಕರ್ತೃಗಳ ವಿಚಾರ ಹೇಳಿದರೂ ಅವನು ತಾಳ್ಮೆಯಿಂದ ಅವರ ಸ್ತುತಿಯನ್ನು ಕೇಳುತ್ತಿರಲಿಲ್ಲ. ಕ್ಸೆನೊಫನ್ ಮತ್ತು ಸಿಸಿರೊ ಕೂಡ ಯಾವುದೊ ಒಂದು ಹಳೆಯ ವಿಶ್ವವಿದ್ಯಾನಿಲಯದ ಅಧ್ಯಾಪಕರಾದ್ದುದರಿಂದ ಅವರು ಕೀಳರು, ಸ್ವಾರ್ಥಿಗಳು, ತಿಳಿವಳಿಕೆಯಿಲ್ಲದವರು, ತಾನು ಈ ಮುಂಚೆ ಕಂಡು ಬಿಟ್ಟು ಬಂದಿದ್ದವರಂತೆಯೇ ಆತ್ಮ ಗೌರವ ತೊರೆದವರು--ಎಂದು ಅವನ ಅಭಿಪ್ರಾಯವಾಯಿತು.

ಅಸೂಯೆ, ಕುತೂಹಲ, ನಮ್ಮ ಈಗಿನ ಅಪೂರ್ಣತೆಯ ತಿಳಿವು ಇವು ಇತರರಲ್ಲಿರುವ ಸುಖ ಸೌಕರ್ಯಗಳಿಗೆ ನಾವು ಹೆಚ್ಚು ಬೆಲೆ ಕಟ್ಟುವಂತೆ ಮಾಡುವುವು. ಈ ಬೆಲೆ ಯಾವಾಗಲೂ ಅವುಗಳ ನಿಜವಾದ ಬೆಲೆಗಿಂತ ಬಹಳ ಹೆಚ್ಚು. ವಿದ್ಯಾವಂತರಲ್ಲದವರು ವಿದ್ಯೆಯಿಂದ ದೊರೆಯಬಹುದಾದ ಶಕ್ತಿ ಮತ್ತು ವಿಶೇಷಾಧಿಕಾರಗಳ ವಿಚಾರದಲ್ಲಿ ಯಾವ ಭಾವನೆ ಉಳ್ಳವರಾಗಿರುವರೊ ಅದು ಪ್ರತಿಯೊಬ್ಬರಿಗೂ ತಿಳಿದೇ ಇರಬೇಕು. ಅನಕ್ಷರಸ್ಥರೂ ಅಜ್ಞಾನಿಗಳೂ ಶಾಸ್ತ್ರ ಸಾಹಿತ್ಯಗಳ ಉಪಯೋಗವಿಲ್ಲದ ಸಂದರ್ಭಗಳಲ್ಲಿ ಕೂಡ ಶಾಸ್ತ್ರಜ್ಞನು ತಮಗಿಂತ ಮೇಲಾಗಿರಬೇಕೆಂದು ನಿರೀಕ್ಷಿಸುವರು. ಜೀವನದ ಕೆಲವು ಕೆಲಸಗಳಲ್ಲಿ ಆವಶ್ಯಕವಾಗಿ ಎಲ್ಲರೂ ಒಂದೇ ಸಮನಾಗಿರುವರು. ಆದರೂ ವಿದ್ಯಾವಂತರು ಇತರರಿಗಿಂತ ಮೇಲಾಗಿಲ್ಲದಿದ್ದರೆ ದುರ್ಬಲ ಮನಸ್ಸಿನವರು ಅವರಿಗೆ ಕೊಡುವ ಮರ್ಯಾದೆಯುಲ್ಲಿ ಕಡಮೆ ಮಾಡುವರು. ಹಳ್ಳಿಗಾಡುಗಳಲ್ಲಿ ದೂರದ ಸಂಚಾರಕ್ಕೆ ಹೋದಾಗ ದೊರೆ ಗಾತ್ರದಲ್ಲಿ ತಮ್ಮಷ್ಟೇ ಇರುವುದನ್ನು ಕಂಡು ಹಳ್ಳಿಯವರು ಕೆಲವೇಳೆ ಆಶ್ಚರ್ಯಪಟ್ಟಿರುವರಂತೆ. ಸಂಕುಚಿತಬುದ್ಧಿಯ ಮತ್ತು ಅವಿವೇಕದ ಇಂತಹ ನಿರೀಕ್ಷಣೆಗಳನ್ನು ತೃಪ್ತಿಪಡಿಸುವುದು ಎಂದಿಗೂ ಅಸಾಧ್ಯ. ಆದುದರಿಂದ ಆಶಾಭಂಗಕ್ಕೊಳಗಾದ ಅಜ್ಞಾನಿಗಳು ವಿದ್ಯಾವಂತರನ್ನು ಕುರಿತು ಆರೋಪಿಸುವ ದೋಷಗಳನ್ನು ಗಮನಿಸಬಾರದು. ಆದರೆ ವಿದ್ಯಾವಂತರೇನೊ ವಿಚಿತ್ರವಾದ ಕೆಲವು ಲೋಪ ದೋಷಗಳ ಸೆಳೆತಕ್ಕೆ ಸಿಕ್ಕಿರುವರು. ಜೀವನದ ಪ್ರತಿಯೊಂದು ಸ್ಥಿತಿಯಲ್ಲಿಯೂ ಗುಣ, ದೋಷ ಯಾವಾಗಲೂ ಇದ್ದೇ ಇರುವುವು. ಎಷ್ಟೇ ಹೆಚ್ಚಾದ ಚೇತನ, ಶ್ರದ್ಧೆ ಇರುವ ಬುದ್ಧಿಗೂ ತಿಳಿವಿನ ರಾಜ್ಯ ಬಹಳ ಅಪಾರವಾದುದು. ಶಾಸ್ತ್ರವನ್ನು ಓದುವಾಗ ಇತರ ಕುಶಲತೆಗಳನ್ನು ಲಕ್ಷ್ಯದಲ್ಲಿಡುವುದಿಲ್ಲ. ಒಂದು ದೊಡ್ಡ ಕೋಟೆಯನ್ನು ಕಾಪಾಡಲು ಒಂದು ಸಣ್ಣ ಸೈನ್ಯವಿದ್ದರೆ, ಒಂದು ಕಡೆಯ ಗಲಾಟೆಯನ್ನು ನೋಡಲು ಅದು ಹೋದಾಗ ಕೋಟೆಯ ಇತರ ಭಾಗಗಳನ್ನು ಅರಕ್ಷಿತವಾಗಿಬಿಡುವುದು ಹೇಗೆ ಅನಿವಾರ್ಯವೊ ಹಾಗೆ.

ಆದರೂ ಅನಾವಶ್ಯಕವಾದ ಸಿದ್ಧಿಗಳನ್ನು ಪಡೆಯುವ ಆಸೆಗೆ ಸಿಕ್ಕಿ ದಾರಿತಪ್ಪಿ ಹೋಗದೆ ಇದ್ದರೆ ವಿದ್ಯಾವಂತರು ಅವರ ಮರ್ಯಾದೆಯನ್ನು ಮೇಲಾಗಿ ಉಳಿಸಿಕೊಳ್ಳಬಹುದು. ರಫೇಲ್ ಎನ್ನುವ ದೇವ ಪ್ರಮಥನು ಆ್ಯಡಮ್ಮಿನ ಬಳಿ ಬಂದಾಗ ಅವನು ಖಗೋಳ ಶಾಸ್ತ್ರದ ವಿಚಾರವಾಗಿ ಪ್ರಶ್ನೆ ಮಾಡಿದನು. ಪ್ರಮಥನು ಅವನಿಗೆ ಹೀಗೆ ಬುದ್ಧಿ ಹೇಳಿದನು: ಪ್ರಯೋಜನವಿಲ್ಲದ ಆಲೋಚನೆಗಳಿಂದ ಮನಸ್ಸನ್ನು ಹಿಂದಕ್ಕೆಳೆದುಕೊ; ನಿನ್ನ ಮನಸ್ಸು ನಿನಗೆ ಸಮೀಪದಲ್ಲಿರುವ ಮತ್ತು ಉಪಯುಕ್ತಿಪೂರ್ಣವಾದ ವಿಚಾರಗಳನ್ನು ಮಾಡಲಿ; ನಿನ್ನ ಜೀವನದ ಸಮಾಲೋಚನೆ ರಾಗ ದ್ವೇಷಾದಿಗಳನ್ನು ಮೆಟ್ಟಿಡುವುದು, ಪ್ರತಿ ದಿನದ ಕರ್ತವ್ಯಗಳನ್ನು ತಿಳಿಯುವುದು, ನಿತ್ಯ ಜೀವನದಲ್ಲಿ ಒದಗಬಹುದಾದ ಅಪಾಯಗಳನ್ನು ಗುರುತಿಸುವುದು.

ದೇವತೆಯ ಈ ಬುದ್ಧಿವಾದ ಯಾವಾಗಲೂ ಪ್ರತಿಯೊಬ್ಬ ಸಾಹಿತಿಯ ಮುಂದೆಯೂ ಇರಬೇಕು. ಯಾವ ಮನುಷ್ಯನು ಏಕಾಂತದಲ್ಲಿ ವ್ಯಾಸಂಗ ಮಾಡುವುದರಲ್ಲಿ ಜೀವನ ಕಳೆಯುವನೋ ಅವನು ಸಾಮಾಜಿಕ ಕರ್ತವ್ಯಗಳನ್ನು ಸ್ವಾಭಾವಿಕವಾಗಿಯೆ ಮರೆಯುವನು. ಆದುದರಿಂದ ಅವನನ್ನು ಆಗಾಗ್ಗೆ ಎಚ್ಚರಿಸಬೇಕು. ಜನರ ಸಾಮಾನ್ಯ ಸ್ಥಿತಿಯನ್ನು ಅವನ ಗಮನಕ್ಕೆ ತರಬೇಕು.

ಕುತೂಹಲವನ್ನೂ ಜ್ಞಾನಾನ್ವೇಷಣವನ್ನೂ ಕಡಮೆ ಮಾಡಬೇಕೆಂದು ನನ್ನ ಉದ್ದೇಶವಲ್ಲ. ತಕ್ಷಣದ ಮತ್ತು ಉಪಯುಕ್ತವಾದ ಈ ವಿದ್ಯೆಗಳನ್ನು ಮಾತ್ರವೇ ಕಲಿಯಲು ಶ್ರಮಿಸಬೇಕೆಂದೂ ಹೇಳುವುದಿಲ್ಲ. ಜ್ಞಾನದ ಅಭಿವೃದ್ಧಿಯನ್ನು ನಾವು ನಿರೀಕ್ಷಿಸಬೇಕಾದರೆ ಅದು ಸಾಧ್ಯವಾಗುವುದು ಅನೇಕ ಪ್ರಯೋಗಗಳನ್ನು ಮಾಡುವವರ ಶ್ರಮದಿಂದಲೇ. ಹೊಸತನ್ನು ಕಂಡುಹಿಡಿಯಬೇಕೆಂದು ದಿಗಂತಗಳಲ್ಲಿ ಅಲೆದಾಡುವ ಮನಸ್ಸುಗಳಿಂದಲೇ. ಈ ಬಗೆಯ ಶ್ರಮದಲ್ಲಿ ಅನೇಕರಿಗೆ ಆಶಾಭಂಗವಾಗಬಹುದು, ಅವರು ಏನನ್ನೂ ಸಾಧಿಸಲಾಗದೆ ಹೋಗಬಹುದು, ಆದರೂ ಅವರನ್ನು ವ್ಯರ್ಥವಾಗಿ ಕಾಲ ಕಳೆಯುವರೆಂದು ಹೇಳುವುದು ತಪ್ಪು. ಅವರು ಜಯಶೀಲರಾದರೆ, ಅವರ ಉದಾಹರಣೆ ಇತರರಲ್ಲಿ ಸ್ಪರ್ಧೆ ಪ್ರೇರಿಸುವುದು; ಸೋತರೆ, ಅವರ ಸೋಲು ಇತರರಿಗೆ ಜಯದ ದಾರಿ ತೋರಿಸುವುದು.

ಆಸೆಗಳನ್ನು ಒಂದು ಮಿತಿಯಲ್ಲಿಡುವುದು, ಅನೇಕ ಬಗೆಯ ಹಸಿವುಗಳನ್ನು ತುಳಿಯುವುದು, ಜನರ ಒಲವನ್ನುಳಿಸಿಕೊಳ್ಳುವುದು, ಅಥವಾ ಸಂಪಾದಿಸಿಕೊಳ್ಳುವುದು--ಇದನ್ನು ಕಲಿಯುವುದು ಎಲ್ಲರಿಗೂ ಬಹಳ ಆವಶ್ಯಕ. ದೊಡ್ಡವರು, ಚಿಕ್ಕವರು, ಪ್ರಸಿದ್ಧ ಪುರುಷರು, ಅಜ್ಞಾತರು ಎಲ್ಲರಿಗೂ ಬೇಕಾದ ವಿದ್ಯೆ ಇದು. ಯಾವುದೋ ಒಂದು ದಿನ ಉಪಕಾರಿಯಾಗಬಹುದು, ಪ್ರಸಿದ್ಧನಾಗಬಹುದು ಎಂಬ ದೂರದ ಆಸೆ ಈ ವಿದ್ಯೆಯಿಂದ ನಮ್ಮನ್ನು ಎಲ್ಲಿಗೋ ಎಳೆದುಕೊಂಡು ಹೋಗಿ ನಮಗೆ ದಾರಿಯನ್ನು ತಪ್ಪಿಸಕೂಡದು.

ಯಾವ ಮನುಷ್ಯನಾದರೂ ತನ್ನ ಜೀವನವೇ ಆಗಲಿ, ಸುತ್ತಲ ಪ್ರಪಂಚದ ವರ್ತನೆಯೇ ಆಗಲಿ ತನ್ನ ಗಮನಕ್ಕೆ ಬರಲು ಅರ್ಹವಲ್ಲವೆಂದು ತಿಳಿಯಕೂಡದು. ಆದರೂ ಸರಸ್ವತಿಯ ಮಕ್ಕಳಲ್ಲಿ ಅನೇಕರು ತಮ್ಮ ವಿಚಾರವನ್ನು ಬಿಟ್ಟು ಉಳಿದ ಪ್ರತಿಯೊಂದು ವಸ್ತುವನ್ನೂ ಕುರಿತು ಆಲೋಚನೆ ಮಾಡಿರುವರು. ಕಣ್ಣಮುಂದೆ ನಡೆಯುವುದನ್ನು ಬಿಟ್ಟು ಉಳಿದ ಪ್ರತಿಯೊಂದನ್ನೂ ಗಮನಿಸಿರುವರು. ಬಹಳ ತೊಡಕಾದ ಶಾಸ್ತ್ರಗಳನ್ನು ಶ್ರಮಪಟ್ಟು ತಿಳಿದಿರುವ ಅನೇಕರು 'ಸಾಮಾನ್ಯ ಜೀವನದಲ್ಲಿ ಎಳ್ಳಷ್ಟು ತೊಡಕು ಬಂದರೂ ಕ್ಲೇಶಪಟ್ಟು ದಿಗ್ಭ್ರಮೆ ಹೊಂದುವರು. ಪುರಾತನಕಾಲದ ಸಾಹಿತ್ಯ ಚರಿತ್ರೆಗಳಲ್ಲಿ ಬರುವ ವೀರರ ಸಾಹಸ

---

* ಸ್ವಿಸ್ ಮತಶಾಸ್ತ್ರಜ್ಞ. ೧೭ನೆಯ ಶತಮಾನದವನು.

ಗಳನ್ನೂ ಪಾತ್ರರಚನೆಯನ್ನೂ ಚರ್ಚಿಸಿ, ಹೋಲಿಸಿನೋಡುವ ಅನೇಕರು ತಮ್ಮ ಬದುಕುಗಳನ್ನೇ ಪರೀಕ್ಷೆಮಾಡದೆ ವರ್ಷಗಟ್ಟಳೆ ಕಳೆಯುವರು; ತಮ್ಮ ಗೋಚರಕ್ಕೆ ಬಾರದೆ ತಾವು ತಡೆಯದೆ ಕೆಟ್ಟ ಅಭ್ಯಾಸಗಳು ಮನಸ್ಸನ್ನು ಹೊಗಲು ದಾರಿಕೊಡುವರು.

ವಿದ್ಯಾವಂತರ ಮೇಲೆ ಪದೇಪದೇ ಆರೋಪಣೆಮಾಡುವ ದೋಷ ಅವರಲ್ಲಿ ಧೈರ್ಯವಿಲ್ಲವೆನ್ನುವುದು—ಧೈರ್ಯ, ಶಾರೀರಿಕವಾದದ್ದಲ್ಲ; ಮಾನಸಿಕವಾದುದು. ನೆರಳಲ್ಲಿ, ಮೌನದಲ್ಲಿ ಬೆಳೆದು, ಸೂರ್ಯಾಸ್ತವಾದ ಕೂಡಲೆ ಗೂಡನ್ನು ಸೇರಿ, ತರ್ಕ ಬಿಟ್ಟು ಬೇರೆ ಯಾವ ಆಯುಧದ ಪ್ರಯೋಗವನ್ನೂ ತಿಳಿಯದ ಜನರು ಶರೀರಕ್ಕೆ ಅಪಾಯ ಸಂಭವಿಸುವ ವೇಳೆಯಲ್ಲಿ ಗಾಬರಿಪಡಬಹುದು, ಗದ್ದಲವಾಗುವ ವೇಳೆಯಲ್ಲಿ ತಬ್ಬಿಬ್ಬಾಗಬಹುದು. ಇದು ಸಹಜವೇ. ಆದರೆ ಜೀವನವನ್ನು ಧ್ಯಾನದಲ್ಲಿ ಕಳೆದಿರುವಂಥವನು ಸತ್ಯಾನ್ವೇಷಣೆಯೇ ಕರ್ತವ್ಯವಾಗಿ ಉಳ್ಳವನು ಭಾವನೆಯಲ್ಲುಂಟಾಗುವ ಭ್ರಾಂತಿಗಳನ್ನು ತಿದ್ದುವುದರಲ್ಲಿ ದುರಾಗ್ರಹ ಮತ್ತು ರಾಗದ್ವೇಷಗಳ ಎದುರು ಹೋರಾಡುವುದರಲ್ಲಿ ಏಕೆ ಅಸಮರ್ಥನಾಗಬೇಕು? ಭ್ರಾಂತಿಗಳನ್ನು ನಂಬಿ ತನ್ನ ತಿಳಿವನ್ನು ವ್ಯರ್ಥಮಾಡಿದರೆ; ಅಜ್ಞಾನ ಅಥವಾ ದುರಭಿಮಾನ ಇವು ಮಾತ್ರವೇ ಈಡುಮಾಡುವ ಅಪಾಯಗಳಿಗೆ ಹೆದರಿ ಅವುಗಳ ಗುಲಾಮನಾದರೆ; ಅಥವಾ ಒಳ್ಳೆಯವರು ಕೆಟ್ಟವರು ಎಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಇರುವ ಸೌಕರ್ಯಗಳನ್ನು ಕಂಡು—ಅವುಗಳಲ್ಲಿ ನಿಜವಾದ ಮರ್ಯಾದೆಯಿಲ್ಲದಿದ್ದರೂ—ಸಂತೋಷಪಟ್ಟರೆ ಅವನು ವ್ಯಾಸಂಗದಲ್ಲಿಯೂ ಆಲೋಚನೆಯಲ್ಲಿಯೂ ವರ್ಷಗಳನ್ನು ಕಳೆದು ಏನು ಫಲ ಪಡೆದ ಹಾಗಾಯಿತು?

ಪ್ರಪಂಚದ ಸ್ಥಿತಿ ಹೇಗಿದೆಯೆಂದರೆ ಗರ್ವಕ್ಕೆ ಬಹಳ ವಿಧೇಯರಾದ ಗುಲಾಮರೂ ಸಂಪತ್ತನ್ನು ಕಂಡು ಬಹು ಸಂತೋಷದಿಂದ ಬಾಯ್ಬಿಟ್ಟು ನೋಡುವವರೂ, ದೊಡ್ಡಸ್ತಿಕೆಯ ವಿಚಾರವಾಗಿ ಬಹಳ ಉತ್ಸಾಹಗೊಂಡು ಪಿಸುಗುಟ್ಟುವರೂ ವಿದ್ಯಾಲಯಗಳಿಂದ ಬಂದವರೇ. ವಿದ್ಯಾಲಯಗಳು ಮೀಸಲಾಗಿರುವುದು ವಿವೇಕಶೀಲಗಳ ಸಂಗ್ರಹಕ್ಕಾಗಿ; ಹಸಿವು ಸ್ವಲ್ಪದರಿಂದಲೆ ತೃಪ್ತಿಹೊಂದುವುದನ್ನು ಕಲಿಯುವುದಕ್ಕಾಗಿ; ಯಾವ ಬಹುಮಾನವನ್ನು ಕೊಡುವುದಾಗಲಿ ಕಿತ್ತುಕೊಳ್ಳುವುದಾಗಲಿ ಮನುಷ್ಯನ ಶಕ್ತಿಗೆ ಅಸಾಧ್ಯವೋ ಅಂಥ ಬಹುಮಾನಗಳಿಗೆ ಆಸೆಪಡುವುದಕ್ಕಾಗಿ.

ವಿದ್ಯಾಲಯವನ್ನು ಬಿಟ್ಟು ವಿದ್ಯಾರ್ಥಿ ಜನರ ಮಧ್ಯೆ ಬರುವನು. ಜನರ ಅಭಿಪ್ರಾಯ ಸಂಪ್ರದಾಯಬದ್ಧವಾಗಿರುವುದು ಅಥವಾ ಆಕಸ್ಮಿಕವಾಗಿ ಉಂಟಾಗಿರುವುದು. ಅವರ ನಡತೆಯೂ ಯಾವ ಖಚಿತವಾದ ನಿಯಮಗಳಿಗೂ ಒಳಪಟ್ಟಿರುವುದಿಲ್ಲ. ವಿದ್ಯಾರ್ಥಿ ಈ ಲೋಪದೋಷಗಳು ತನ್ನಲ್ಲಿ ಇಲ್ಲದಿರುವುದಕ್ಕಾಗಿ ಸಂತೋಷ ಪಡದೆ ಸಾಮಾನ್ಯವಾಗಿ ಜನರ ಮಧ್ಯೆ ಸೇರುವುದಕ್ಕೆ ಆತುರಪಡುವನು. ರೂಢಿಯಲ್ಲಿರುವ ಸಂಪ್ರದಾಯಗಳನ್ನು ಅಥವಾ ದುರ್ಗುಣಗಳನ್ನು ತಾತ್ಕಾಲಿಕವಾಗಿ ಅನುಸರಿಸಿ ಅವನ ಉಲ್ಲಾಸವನ್ನೂ ಮೃದುಸ್ವಭಾವವನ್ನೂ ತೋರಿಸಲು ಆತುರ ಪಡುವನು. ಆಶ್ರಿತರಿಗೆ ಅನುಕೂಲಗಳನ್ನು ಕಲ್ಪಿಸಿ ಕೊಡುವ ಶಕ್ತಿಯುಳ್ಳ ಶ್ರೀಮಂತನ ಮೊದಲ ಕಿರುನಗೆ ವಿದ್ಯಾರ್ಥಿಯನ್ನು ಅಜೇಯವಾದ ಮೋಹಕ್ಕೊಳಪಡಿಸುವುದು; ಪರಿವಾರ, ಸಜ್ಜಿತವಾದ ವಾಹನ ವೈಭವ, ಭೋಗಗಳ ಮಾಧುರ್ಯ, ಸಾಮಾನ್ಯವಾಗಿ ಮಾಡುವ ವಾಗ್ದಾನಗಳ ಧಾರಾಳ, ಸ್ವಾಭಾವಿಕವಾಗಿರುವ ಸೌಜನ್ಯದ ಮೃದುತ್ವ ಇವುಗಳು ಅವನ ಮನಸ್ಸನ್ನು ತುಂಬುವುವು. ಕೆಲವು ದಿನಗಳಲ್ಲಿಯೆ ಅವನ ಮನಸ್ಸಿನಲ್ಲಿ ಒಂದೇ ಅಪೇಕ್ಷೆ ಉಳಿಯುವುದು—ಹೋದೆಡೆಯಲ್ಲಿ ಮರ್ಯಾದೆಯಿಂದ ಬರಮಾಡಿಸಿಕೊಳ್ಳಬೇಕೆನ್ನುವುದು. ತನ್ನ ಆಶ್ರಯದಾತನ ಅಭಿಪ್ರಾಯ ಬಿಟ್ಟು ಬೇರೆ ನ್ಯಾಯ ಅನ್ಯಾಯದ ಭಾವನೆಯೇ ಅವನಿಗೆ ಉಳಿಯುವುದಿಲ್ಲ.

ಒಬ್ಬ ಮನುಷ್ಯನನ್ನು ಹೊಗಳಿ ಅವನಿಗೆ ವಿಧೇಯತೆಯನ್ನು ತೋರಿಸಿದರೆ ಅವನು ಕಲಿಯುವುದು ಏನು—ಇನ್ನೂ ಹೆಚ್ಚು ನಿಜವಾದ ಹೊಗಳಿಕೆಯನ್ನೂ ಅಧೀನತೆಯನ್ನೂ ಇತರರಿಂದ ಬಲಾತ್ಕಾರವಾಗಿ ಪಡೆಯುವುದನ್ನು. ನಮ್ಮ ಗುಣಗಳಾಗಲಿ ದೋಷಗಳಾಗಲಿ ನಮ್ಮ ಸ್ವಂತದ್ದೇ ಅಲ್ಲ. ಹೇಡಿತನವಿಲ್ಲದಿದ್ದರೆ ಅಹಂಕಾರವೂ ಇರುವುದಿಲ್ಲ. ಬಹಳ ಸಾಧುವಾಗಿ ಅನುಭವಿಸುವುದೂ, ಅಕ್ಕರೆಯ ಮಾತುಗಳಿಂದ ಅದನ್ನು ತೃಪ್ತಿಪಡಿಸುವುದೂ ಇಲ್ಲದಿದ್ದರೆ ಗರ್ವ ಬಹಳ ಎತ್ತರಕ್ಕೆ ಏರಲಾರದು. ಇಬ್ಬರು ಸಮಾನಸ್ಕಂಧರಲ್ಲಿ ಒಬ್ಬನು ಇನ್ನೊಬ್ಬನನ್ನು ಕಂಡು ಹೆದರಿ ಅವನ ಕಾಲಿಗೆ ಬೀಳುವನು. ಇದೇ ಹೇಡಿ ಅವನ ಸಮೀಪಕ್ಕೆ ಮೊರೆಯಿಡುವವನು ತಲೆತಗ್ಗಿಸಿಕೊಂಡು ಬಂದು, ಹೆದರಿಕೆಯಿಂದ ಬಹು ಮೃದುವಾದ ಮಾತುಗಳನ್ನಾಡಿದರೆ ಆಗ್ರಹ ತೋರಿಸಿ ಕ್ರೌರ್ಯದಿಂದ ವರ್ತಿಸುವನು. ಸತ್ಯ ಮತ್ತು ದೃಢಗಳಿಂದ ಯಾವ ಅನುಗ್ರಹ ಸಂಪಾದನೆಯೂ ಸಾಧ್ಯವಿಲ್ಲವೆಂದು ಹೇಳುವಂಥ ಗರ್ವ ಉತ್ಪನ್ನವಾಗಿರುವುದು ಹೇಗೆ? ಅನುಕರಣೆಯಿಂದಲೂ ಅತಿ ದೈನ್ಯದಿಂದಲೂ ಅನುಗ್ರಹ ಪಡೆಯಲು ಇಷ್ಟಪಡುವವರು ಇರುವುದರಿಂದಲೇ.

ಬೀಳುವ ನಕ್ಷತ್ರಗಳು ತಮ್ಮ ಪ್ರಭೆಯಿಂದ ಪ್ರಪಂಚವನ್ನು ಸ್ವಲ್ಪ ಕಾಲ ಮಾತ್ರ ತುಂಬಿ, ಆಮೇಲೆ ಮುಳುಗುವುವು; ಮರೆವಿಗೀಡಾಗುವುವು. ಶಾಸ್ತ್ರಗಳೂ ಇವುಗಳಂತೆಯೇ. ವಿದ್ಯಾರ್ಥಿಗಳು ಅವುಗಳಿಗಾಗಿ ಅಲೆಯದೆ ಶಾಶ್ವತ ಪ್ರಭೆಯುಳ್ಳ ನೈತಿಕ ಮತ್ತು ಮತ ಸಂಬಂಧವಾದ ಸತ್ಯಗಳಲ್ಲಿ ದೃಷ್ಟಿಯನ್ನಿಟ್ಟರೆ ಅವರಿಗೆ ಸುಖಕ್ಕೆ ಸರಿಯಾದ ಮಾರ್ಗ ಸಿಗುವುದು. ವಿವೇಕಯುತವೆಂದು ಕಾಣುವ ಮಾತನ್ನಾಡಲು ಸ್ವಲ್ಪಮಟ್ಟಿಗೆ ಕಲಿಯಲಾಗಲಿ ಉಪಯೋಗಕ್ಕೆ ಬಾರದ ಕೃತಕ ವಿಚಾರಗಳ ಪರಿಚಯಗಳನ್ನು ಸಂಪಾದಿಸುವುದಕ್ಕಾಗಲಿ ಅದಕ್ಕೆ ಮೀರಿದ ಬೆಲೆಯನ್ನು ತೆರಬಾರದು. ಧೈರ್ಯಸ್ಥೈರ್ಯಗಳನ್ನು ಕೊಡುವ ಮತ್ತು ಸ್ವಾಧೀನತೆಯ ಉನ್ನತಿಗೆ ಆತ್ಮವನ್ನು ಎತ್ತುವ ಶಿಕ್ಷಣವನ್ನು ದುರ್ಲಕ್ಷಿಸಬಾರದು.

(ಆಧಾರ: ಸ್ಯಾಮುವೆಲ್ ಜಾನ್ಸನ್ ಅವರ The Study of life and the study of Books'.)

— ಎಸ್. ಮಂಜನಾಥ್

---

## ಮೈಸೂರು ಶಾಸನ ಸಭೆಯಲ್ಲಿ ಕನ್ನಡ*

(ಬಿ. ಆರ್. ಪುಟ್ಟನಂಜಪ್ಪನವರು, ಎಂ.ಎ., ಎಲ್‌ಎಲ್.ಬಿ.)

೧೯೩೭ ನೆಯ ವರ್ಷಕ್ಕೆ ಮುಂಚೆ ಮೈಸೂರು ನ್ಯಾಯವಿಧಾಯಕ ಸಭೆಯಲ್ಲಿ ಕನ್ನಡಕ್ಕೆ ಸ್ವತಂತ್ರಸ್ಥಾನವೇ ಇರಲಿಲ್ಲ. ಪ್ರಜಾಪ್ರತಿನಿಧಿ ಸಭೆಯ ನಡವಳಿಕೆಗಳೆಲ್ಲ ಮೊದಲಿಂದಲೂ ಕನ್ನಡದಲ್ಲಿಯೇ ಆಗುತ್ತಿವೆ; ಮತ್ತು ಆ ನಡವಳಿಕೆಗಳು ಕನ್ನಡದಲ್ಲಿಯೇ ಅಚ್ಚಾಗುತ್ತಿವೆ. ಆದರೆ ಶಾಸನ ಸಭೆಯೆಲ್ಲ ಇಂಗ್ಲಿಷ್ ವಾತಾವರಣದಿಂದ ತುಂಬಿರುತ್ತಿದ್ದಿತು. ಕನ್ನಡದ ಮುನ್ನಡೆಗಾಗಿ ಇಂದು ಪ್ರಚಂಡವಾದ ಪುನರುಜ್ಜೀವನ ಚಳವಳಿ ನಡೆಯುತ್ತಿರುವಾಗ ಅದಕ್ಕೆ ನೆರವಾಗಿ ಶಾಲೆ, ಕಾಲೇಜು, ಕೋರ್ಟು, ಕಚೇರಿಗಳು, ಶಾಸನ ಸಭೆಗಳು ಎಲ್ಲ ಕಡೆಯಲ್ಲಿಯೂ ಕನ್ನಡದ ಮೂಲಕ ಸಕಲ ವ್ಯಾಪಾರಗಳೂ ನಡೆಯುವಂತಾಗಬೇಕಾದುದು ನ್ಯಾಯವಾಗಿದೆ. ಕನ್ನಡ ತಲೆಯೆತ್ತಬೇಕಾದರೆ ಕನ್ನಡಿಗರು ತಮ್ಮ ಜೀವನದ ನಾನಾ ಕ್ಷೇತ್ರಗಳಲ್ಲಿ ಅದಕ್ಕೆ ಯಾವ ಸ್ಥಾನಮಾನಗಳನ್ನು ನೀಡಬೇಕೆಂಬುದನ್ನು ಆಲೋಚಿಸಬೇಕು.

ಶಾಸನ ಸಭೆಗೆ ನಾನು ಪ್ರವೇಶಮಾಡಿದ್ದು ೧೯೩೭ನೆಯ ವರ್ಷದ ಜೂನ್ ತಿಂಗಳಲ್ಲಿ. ಹೊಸದಾಗಿ ಸದಸ್ಯರಾದವರು ರಾಜಭಕ್ತಿಯ ಪ್ರಮಾಣವಚನವನ್ನು ಸ್ವೀಕರಿಸುವ ಸಮಯದಲ್ಲಿ ಇಂಗ್ಲಿಷ್ ನಮೂನೆಗೆ ಸಹಿ ಮಾಡಿ ಪ್ರಮಾಣ ಮಾಡುತ್ತಿದ್ದುದನ್ನು ಕಂಡ ನಾನು ಕನ್ನಡದ ನಮೂನೆ ಇರುವಾಗ ಕೂಡ ಇಂಗ್ಲಿಷ್ ನಮೂನೆಯ ಗೋಜೇಕೆ ಎಂದು ಕನ್ನಡದಲ್ಲೇ ರಾಜಭಕ್ತಿ ಪ್ರಮಾಣವನ್ನು ಸ್ವೀಕರಿಸಿದೆ. ಹೀಗೆಮಾಡಲು ನನಗೆ ಶ್ರೀ. ಡಿ. ವಿ. ಗುಂಡಪ್ಪನವರಿಂದ ಬೆಂಬಲ ದೊರೆಯಿತು. ಅಲ್ಲಿಂದಾಚೆಗೆ ಸ್ವಲ್ಪ ಧೈರ್ಯ ತಂದುಕೊಂಡು ಅವರ ಮತ್ತು ಇತರ

---

* ೩೦-೮-೪೦ ನೆಯ ಶನಿವಾರ ಪರಿಷತ್ತಿನಲ್ಲಿ ಶ್ರೀಯುತರು ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಈ ವಿಷಯವನ್ನು ಕುರಿತು ಮಾಡಿದ ಭಾಷಣದ ಸಾರಾಂಶ.

ಮಿತ್ರರ ಸಹಕಾರದಿಂದ ಅನೇಕರು ಕನ್ನಡದಲ್ಲಿ ಮಾತನಾಡಲಾರಂಭಿಸಿದೆವು. ಹಾಗೆ ಮಾತನಾಡಿದ್ದನ್ನು ಶಾಸನ ಸಭಾ ನಡೆವಳಿಕೆಗಳ ಪುಸ್ತಕದಲ್ಲಿ ಕನ್ನಡದಲ್ಲಿಯೇ ಪ್ರಕಟಮಾಡುವಂತೆ ಸರಕಾರದವರನ್ನು ಒತ್ತಾಯ ಪಡಿಸಲು ಪ್ರಯತ್ನಿಸಿದೆವು. ಈ ಪ್ರಯತ್ನಕ್ಕೆ ಮೊದಮೊದಲು ಅಧಿಕಾರಿಗಳಿಂದ ಪ್ರೋತ್ಸಾಹ ದೊರೆಯಲಿಲ್ಲ. ಉದಾಸೀನವೇ ಉತ್ತರವಾಯಿತು. ಬೇಡಿಕೆ ಬಲವಾಗಲು, ಅಧಿಕಾರಿಗಳು ಕನ್ನಡದ ಕಡೆ ಸ್ವಲ್ಪಮಟ್ಟಿಗೆ ಒಲಿಯುವ ಸೂಚನೆ ತೋರಿತು. ಸಭೆಯ ನಡೆವಳಿಕೆಗಳ ಪುಸ್ತಕದಲ್ಲಿ, ಕನ್ನಡದಲ್ಲಿ ಆದ ಭಾಷಣವನ್ನು ಕನ್ನಡದಲ್ಲಿಯೂ, ಇಂಗ್ಲಿಷಿನಲ್ಲಿ ಆದ ಭಾಷಣವನ್ನು ಇಂಗ್ಲಿಷ್‌ನಲ್ಲಿಯೂ ಅಚ್ಚುಮಾಡುವ ರೂಢಿ ಬಂದಿತು.

ಇಷ್ಟಕ್ಕೆ ನಾವು ತೃಪ್ತರಾಗಲಿಲ್ಲ. ೧೯೩೮ ರ ಜೂನ್ ತಿಂಗಳ ಅಧಿವೇಶನವಲ್ಲಿ, ಆಯವ್ಯಯ ಪಟ್ಟಿಯ ಮೇಲಣ ಚರ್ಚೆಯ ಕಾಲದಲ್ಲಿ ನಾನು ಒಂದು ಖೋತಾ ನಿರ್ಣಯತಂದು ಕೋರ್ಟುಗಳಲ್ಲಿ ಸಾಕ್ಷ್ಯಗಳನ್ನು ಕನ್ನಡದಲ್ಲೇ ಬರೆದುಕೊಳ್ಳುವಂತೆ ಸರಕಾರ ಅಪ್ಪಣೆಮಾಡಬೇಕೆಂದು ಕೋರಿದೆ. ಮೊದಮೊದಲು ನ್ಯಾಯಾಸ್ಥಾನಗಳಲ್ಲಿ ಸಾಕ್ಷಿಗಳು ಕನ್ನಡದಲ್ಲಿ ಕೊಡುವ ಸಾಕ್ಷ್ಯಗಳನ್ನು ನ್ಯಾಯಾಧೀಶರು ಇಂಗ್ಲಿಷಿನಲ್ಲಿಯೂ, ಗುಮಾಸ್ತರು ಕನ್ನಡದಲ್ಲಿಯೂ ಬರೆದುಕೊಂಡು ಸಂದೇಹ ಬಂದಾಗ ತಾಳೆ ನೋಡಿಕೊಳ್ಳುತ್ತಿದ್ದರು. ಈ ವಿಧಾನದಿಂದ ವೆಚ್ಚ ಹೆಚ್ಚೆಂದು ಆಮೇಲೆ ಇಂಗ್ಲಿಷನ್ನೇ ಬಳಸುವ ವ್ಯವಸ್ಥೆಯಾಯಿತು. ಈ ಪರಿಸ್ಥಿತಿಯನ್ನು ತಪ್ಪಿಸಿ ನ್ಯಾಯಾಸ್ಥಾನಗಳಲ್ಲಿ ಕನ್ನಡಕ್ಕೆ ಸ್ಥಾನ ಕೊಡಬೇಕೆಂದು ನಾವು ಮುಂದೊತ್ತಿದ ಬೇಡಿಕೆಗೆ ಸರಕಾರದವರು ಕೊಟ್ಟ ಉತ್ತರದಿಂದ ಕನ್ನಡಿಗರಿಗೆ ತೀವ್ರ ಅಸಮಾಧಾನವಾಗಿದೆ. 'ಅಕ್ಕಪಕ್ಕದ ಪ್ರಾಂತಗಳಲ್ಲಿ ನ್ಯಾಯಾಧೀಶರುಗಳು ಇಂಗ್ಲಿಷಿನಲ್ಲೇ ಸಾಕ್ಷ್ಯಗಳನ್ನು ಬರೆದುಕೊಳ್ಳುವಾಗ ನಮ್ಮ ದೇಶದ ನ್ಯಾಯಾಧೀಶರುಗಳು ಕನ್ನಡದಲ್ಲಿ ಬರೆದುಕೊಳ್ಳುವುದು ಹೀನಾಯವಾದುದು' ಎಂಬುದೇ ಸರಕಾರದ ಉತ್ತರ. ಈ ಉತ್ತರದ ನ್ಯಾಯಾನ್ಯಾಯಗಳನ್ನು ಕನ್ನಡಿಗರು ಪರ್ಯಾಲೋಚಿಸಬೇಕು.

ನಮ್ಮ ಲಕ್ಷಾಂತರ ಪ್ರಜೆಗಳು ತಾವು ಆರಿಸಿ ಕಳಿಸಿದ ಪ್ರತಿನಿಧಿಗಳು ತಮ್ಮ ಪರವಾಗಿ ಸರಕಾರದೆದುರು 'ಹೇಗೆ ವರ್ತಿಸುತ್ತಿದ್ದಾರೆ, ಸರಕಾರದವರು ತಮ್ಮ ಮೇಲ್ಮೆಗಾಗಿ ಯಾವ ಕಾರ್ಯಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿದ್ದಾರೆ—ಇವೇ ಮುಂತಾದುವನ್ನು ತಿಳಿಯಲು ಕುತೂಹಲದಿಂದಿರುವುದು ಸಹಜ ತಾನೇ. ಆದ್ದರಿಂದ ಶಾಸನಸಭೆಯಲ್ಲಿ ನಡೆಯುವ ಕಾರ್ಯಕಲಾಪಗಳ ವರದಿಯನ್ನು ಕನ್ನಡದಲ್ಲಿ ಕೂಡ ಅಚ್ಚುಹಾಕಿಸಬೇಕು ಎಂದು ನಾವು ಒತ್ತಾಯಪಡಿಸಿದ್ದಕ್ಕೆ "ಎರಡು ವರದಿಗಳನ್ನು ಮುದ್ರಿಸಬೇಕಾಗುವುದು; ಇದರಿಂದ ವೃಥಾ ವೆಚ್ಚ ಹೆಚ್ಚು" ಎಂಬ ಉತ್ತರ ಬಂದಿತು ಸರಕಾರದಿಂದ.

ಅಂತು, ಶಾಸನ ಸಭೆಯಲ್ಲಿ ಕನ್ನಡದ ಕೂಗು ಈಚೆಗೆ ಹೆಚ್ಚಾಗುತ್ತಿದೆ. ಅನೇಕ ಸದಸ್ಯರು ಧೈರ್ಯದಿಂದ ಕನ್ನಡದಲ್ಲಿ ಭಾಷಣ ಮಾಡಲು ಮುಂದೆ ಬರುತ್ತಿದ್ದಾರೆ. ಇಂಗ್ಲಿಷಿನಲ್ಲಿ ಭಾಷಣ ಮಾಡುವಷ್ಟೆ ಚೆನ್ನಾಗಿ, ತೂಕವಾಗಿ, ಪರಿಣಾಮಕಾರಿಯಾಗಿ ಭಾಷಣ ಮಾಡುತ್ತಿದ್ದಾರೆ. ರಾಜಭಾಷೆಯೂ ನಾಡನುಡಿಯೂ ಆದ ಕನ್ನಡವನ್ನು ಶಾಸನ ಸಭೆಯಲ್ಲಿ ಗೌರವದ ಸ್ಥಾನದಲ್ಲಿಡಬೇಕೆಂಬ ಪ್ರಯತ್ನಕ್ಕೆ ಹೆಚ್ಚು ಬೆಂಬಲವನ್ನು ನೀಡುತ್ತಿದ್ದಾರೆ. ಇಂದಲ್ಲ ನಾಳೆ ಈ ಲೋಕಾಭಿಪ್ರಾಯಕ್ಕೆ ಸರ್ಕಾರದವರು ಒಲಿಯಬೇಕಾಗುವುದು. ಒಲಿದೇ ಒಲಿಯುವರೆಂದು ನಾವು ದೃಢವಾಗಿ ನಂಬಿದ್ದೇವೆ. ಭಾರತದ ವಿವಿಧ ಪ್ರಾಂತಗಳಲ್ಲಿ ಪ್ರಾಂತೀಯ ಸ್ವರಾಜ್ಯ ಜಾರಿಗೆ ಬಂದ ಮೇಲೆ ಆಯಾ ಪ್ರಾಂತೀಯ ಶಾಸನ ಸಭೆಗಳಲ್ಲಿ ದೇಶಭಾಷೆಗಳಲ್ಲಿ ಭಾಷಣಮಾಡುವುದು ರೂಢಿಗೆ ಬಂದಿತು. ನಮ್ಮ ಸಂಸ್ಥಾನವಾದರೂ ಈ ವಿಷಯದಲ್ಲಿ ಹಿಂದೆ ಬೀಳದೆ, ಸರಕಾರದ ವಿವಿಧ ಶಾಖೆಗಳಲ್ಲಿ ಕನ್ನಡಕ್ಕೆ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಳ್ಳಲು ದುಡಿಯಬೇಕು.

# ಕನ್ನಡ ಸುದ್ದಿ

## ಕ್ರಿಶ್ಚಿಯನ್ ಮಿಷನ್ ಮತ್ತು ಕನ್ನಡ ಸಾಹಿತ್ಯ

ಅರಳೇಪೇಟೆಯಲ್ಲಿರುವ ಲಂಡನ್ ಮಿಷನ್ ಬಾಲಿಕಾ ಪಾಠಶಾಲೆಯಲ್ಲಿ ಭಾಷಣ ಮಾಡುತ್ತಾ, ಸಂಸ್ಥಾನದ ರೆವೆನ್ಯೂ ಕಮಿಷನರವರಾದ ರೂಕ್ನ್-ಉಲ್-ಮುಲ್ಕ್ ಮಿ॥ ಎಸ್. ಅಬ್ದುಲ್ ವಾಜಿದ್‌ರವರು, ಕನ್ನಡ ಭಾಷೆಯ ಬೆಳವಣಿಗೆಗೆ ಕ್ರಿಶ್ಚಿಯನ್ ಮಿಷನರಿಗಳು ಮಾಡಿರುವ ಅಪಾರವಾದ ಸೇವೆಯನ್ನು ಬಹಳವಾಗಿ ಶ್ಲಾಘಿಸಿದರು. ಲಂಡನ್ ಮಿಷನ್ ಸೊಸೈಟಿಯವರು ೧೮೨೪ನೇ ಇಸವಿಯಲ್ಲಿ ಇಂಗ್ಲಿಷು-ಕನ್ನಡ ನಿಘಂಟುವನ್ನೂ ೧೮೩೨ರಲ್ಲಿ ಕನ್ನಡ-ಇಂಗ್ಲಿಷು ನಿಘಂಟುವನ್ನೂ ಪ್ರಕಟಿಸಿದರು. ಕನ್ನಡ ಭಾಷೆಯಲ್ಲಿರುವ ಶಬ್ದಗಳನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಿದುದು ಇದೇ ಮೊದಲು. ಮತ್ತು ಹಲವು ವರ್ಷಗಳವರೆಗೂ ಈ ನಿಘಂಟುಗಳೇ ಆಧಾರವಾದ ನಿಘಂಟುಗಳಾಗಿದ್ದುವು. ೧೮೩೯-೪೭ರಲ್ಲಿ ರೆವರೆಂಡ್ ಬೆಂಜಮಿನ್ ರೈಸರವರು, ಭೂಗೋಳ, ಮತ್ತು ಗಣಿತ ವಿಷಯಗಳನ್ನು ಬೋಧಿಸುವ ಹಲವು ಕನ್ನಡ ಪುಸ್ತಕಗಳನ್ನು ರಚಿಸಿದರು. ಅವರು ಒಂದು ಪ್ರಾರ್ಥನೆಯ ಪುಸ್ತಕವನ್ನೂ ಬೈಬಲಿನ ಸಾರಾಂಶವನ್ನೊಳಗೊಂಡ ಪುಸ್ತಕವೊಂದನ್ನು ರಚಿಸಿರುತ್ತಾರೆ. ಅನಂತರ ಅವರೂ ಅವರ ಸಹೋದರರಾದ ಮಿ॥ ರೈಸ್‌ರವರೂ ಕನ್ನಡ ಬೈಬಲನ್ನು ಪರಿಷ್ಕರಿಸಿದರು. ಕೆಲವು ಕಾಲದಮೇಲೆ ಬೈಬಲನ್ನು ಮತ್ತೊಮ್ಮೆ ಪರಿಷ್ಕರಿಸಲಾಯಿತು. ಅಲ್ಲದೆ ಕನ್ನಡ ಭಾಷೆಗೆ ಬಹಳ ಪ್ರೋತ್ಸಾಹ ದೊರೆಯಿತು. ೧೯೧೫ರಲ್ಲಿ ರೆವರೆಂಡ್ ಇ. ಪಿ. ರೈಸ್‌ರವರು ಕನ್ನಡ ಸಾಹಿತ್ಯದ ಚರಿತ್ರೆಯೊಂದನ್ನು ಪ್ರಕಟಿಸಿದರು. ಅವರ ತಮ್ಮಂದಿರಾದ ಮಿ॥ ರೈಸ್‌ರವರು ಮೈಸೂರು ಸರ್ಕಾರದ ಪ್ರಾಚ್ಯವಸ್ತು ಪರಿಶೋಧನಾ ಇಲಾಖೆಯ ಡೈರೆಕ್ಟರಾಗಿದ್ದರು. ಈ ಮಹನೀಯರೂ ಸಹ ಕನ್ನಡ ನುಡಿಗೆ ವಿಶೇಷವಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ.

## ಬೆಂಗಳೂರು: ಮಿತ್ರ ಸಂಘ

ಮೇಲ್ಕಂಡ ಸಂಘದ ಏಳನೆಯ ವಾರ್ಷಿಕೋತ್ಸವ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಂಗೀತ, ಕವಿತೆಗಳ ಓದು ಮುಂತಾದ ಕಾರ್ಯಕ್ರಮಗಳಾದಮೇಲೆ 'ಶ್ರೀ'ಯವರು ಸಂಘದ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನಗಳನ್ನು ಹಂಚಿದರು. ಬಳಿಕ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು:-

"ಗೆಳೆಯರ ಗುಂಪಿನ ಮುಖ್ಯ ಗುರಿ, ಸದಸ್ಯರು ತಮಗೆ ತಿಳಿದ ಅಂಶಗಳನ್ನು ಚರ್ಚಿಸಲು" ನಾಡಿನಲ್ಲಿ ಎದ್ದಿರುವ ಸಮಸ್ಯೆಗಳನ್ನು ಪರ್ಯಾಲೋಚಿಸಲು, ಮನಸ್ಸಿನಲ್ಲಿ ಹುಟ್ಟತಕ್ಕ ಸಂಶಯಗಳನ್ನು ಬಗೆಹರಿಸಿಕೊಳ್ಳಲು ಸ್ನೇಹದ ಅಮೃತಮಯವಾದ ವಾತಾವರಣದಲ್ಲಿ ಸೇರಿ ಕೆಲಸಮಾಡುವುದೇ ಆಗಿದೆ. ಗುಂಪಿನಲ್ಲಿ ಸದಸ್ಯರ ಸಂಖ್ಯೆ ಕಡಮೆಯಾಗಿದ್ದಷ್ಟೂ ಪರಸ್ಪರ ಸ್ನೇಹ ಸಹೃದಯತೆಗಳು ಬೇರೂರಲು ಅವಕಾಶ ಹೆಚ್ಚು. ಒಂದು ಗ್ರಂಥ, ಇಲ್ಲವೇ ಒಬ್ಬ ಕವಿ, ಇಲ್ಲವೇ ಒಂದು ಕಲೆ—ಹೀಗೆ ಯಾವುದಾದರೊಂದು ವಿಷಯದಲ್ಲಿ ಆಸಕ್ತಿಯುಳ್ಳ ನಾಲ್ಕಾರು ಜನ ಒಂದೆಡೆ ಸೇರುವುದು ಒಳ್ಳೆಯದು. ಸ್ನೇಹದ ಮಾತಿಗಿಂತ ಮಧುರವಾದ ಮಾತೊಂದಿಲ್ಲ. ಸ್ನೇಹದ ಬಾಳಿಗಿಂತ ಉತ್ತಮವಾದ ಬಾಳೊಂದಿಲ್ಲ. ಏಸುಕ್ರಿಸ್ತ, ಬುದ್ಧ, ಮಹಾತ್ಮಾಗಾಂಧಿ ಮುಂತಾದ ಮಹಾನುಭಾವರೆಲ್ಲರೂ ಮಿತವಾದ ಸ್ನೇಹಗೋಷ್ಠಿಯಲ್ಲಿ ಬಾಳನ್ನು ನಡಸಿ ಹಿರಿಯ ಹೆಸರನ್ನು ಗಳಿಸಿದವರು. ಒಂದು ಸಣ್ಣ ವೃತ್ತದಲ್ಲಿ ಮಾತ್ರ ತುಂಬು ಸ್ನೇಹ, ಸೌಹಾರ್ದ, ಶಾಂತಿ, ಸೌಖ್ಯಗಳು ಇದ್ದು ಜ್ಞಾನಾಭಿವೃದ್ಧಿಗಾಗಿ ಹೊಂದಿಕೊಂಡು ಕೆಲಸಮಾಡುವ ಮನೋಧರ್ಮ ಬಲಿಯುತ್ತದೆ. ಇಂಥ ಆದರ್ಶ ಕಾರ್ಯಕ್ಷೇತ್ರಗಳನ್ನು ಯುವಕರು ನಾಡಿನಲ್ಲೆಲ್ಲ ಸ್ಥಾಪಿಸಿ ಬೆಳಸಬೇಕು. ನಿಮ್ಮ ಸಂಘ ಹಾಗೆ ಅಭಿವೃದ್ಧಿಗೆ ಬರಲೆಂದು ಹಾರೈಸುತ್ತೇನೆ."

## ಬೆಂಗಳೂರು: ಗಮಕಕಲಾ ಸಂಘ

ಮೇಲ್ಕಂಡ ಸಂಘದ ಆಶ್ರಯದಲ್ಲಿ ಇದೇ ತಿಂಗಳು ೨೨ನೆಯ ತಾರೀಖು ಭಾನುವಾರ ಸಂಜೆ ೬-೩೦ ಘಂಟೆಗೆ ಸಂಗೀತ ವಿದ್ವಾನ್ ಸೇಲಂ ಶ್ರೀನಿವಾಸ ಮೂರ್ತಿಯವರ ಹಾಡುಗಾರಿಕೆಯನ್ನು, ಸಂಗೀತ ವಿದ್ವಾನ್ ಅರುಣಾಚಲಪ್ಪನವರ ಹಾರ್ಮೋನಿಯಂ, ವಿದ್ವಾನ್ ಪಾಲಘಾಟ್ ರಾಮಯ್ಯರ್ ಅವರ ಮೃದಂಗ, ವಿದ್ವಾನ್ ವಿ. ವಿ. ರಂಗನಾಥನ್ ಅವರ ಕಂಜಿರಾ ಪಕ್ಕವಾದ್ಯಗಳೊಡನೆ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಏರ್ಪಡಿಸಲಾಗಿದೆ. ಸಂಘದ ಪೋಷಕರೂ, ಸದಸ್ಯರೂ ಅಭಿಮಾನಿಗಳೂ ದಯಮಾಡಿಸಬೇಕಾಗಿ ಕೋರಿದೆ. ಹೊರಗಿನವರಿಗೆ ಟಿಕೆಟ್ಟಿನ ಮೂಲಕ ಪ್ರವೇಶ.

## ಬೆಂಗಳೂರು: ಬಿ. ಕೆ. ಮರಿಯಪ್ಪ ವಿದ್ಯಾರ್ಥಿನಿಲಯದ ಸಂಘ

೨೨ನೆಯ ತಾರೀಖು ಸಂಜೆ ಮೇಲ್ಕಂಡ ಸಂಘದ ಈ ವರ್ಷದ ಭಾಷಣವನ್ನು ಮಾಡಲು ದೇಶೀಯ ವಿದ್ಯಾಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ॥ ಸಂಪದ್ಗಿರಿರಾಯರು ಒಪ್ಪಿರುತ್ತಾರೆ. ವಿಷಯ: ಓದು ಮತ್ತು ಸಂಸ್ಕೃತಿ.

## ಮಲ್ಲೇಶ್ವರ: ಹೈಸ್ಕೂಲು ಕರ್ನಾಟಕ ಸಂಘ

ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀ॥ ಅ. ನ. ಕೃಷ್ಣರಾಯರು 'ಸಾಹಿತ್ಯ ಮತ್ತು ಸಮಾಜ' ಎಂಬ ವಿಷಯವನ್ನು ಕುರಿತು ೧೯-೯-೪೦ನೆಯ ಗುರುವಾರ ಸಂಜೆ ೫-೪೫ ಗಂಟೆಗೆ ಭಾಷಣ ಮಾಡಿದರು.

೧೩೦-೯೦೫—೧೯೪೦ ಮುದ್ರಣಕಾರರು: ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು: ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ

# ಕನ್ನಡ ನುಡಿ



ಸಂಪುಟ ೨ — ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ — ಸಂಪಾದಕ :
ಸಂಚಿಕೆ ೪೮ — ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೭, ೧೯೪೦ — ಬಿ. ವೆಂಕೋಬರಾವ್, ಬಿ.ಎ.

## ಪ್ರಬಂಧಗಳ ಹುಟ್ಟು, ಬೆಳವಣಿಗೆ, ಸ್ವರೂಪ*

(ಕೆ. ಸಂಪದ್ಗಿರಿರಾವ್, ಎಂ.ಎ. ಅವರು)

ನಾವು ಪ್ರಬಂಧ ಎನ್ನುವ ಸಾಹಿತ್ಯ ಪ್ರಕಾರಕ್ಕೆ ಇಂಗ್ಲಿಷಿನಲ್ಲಿ Essay ಎನ್ನುತ್ತಾರೆ; ಅರವ, ತೆಲುಗು ಮುಂತಾದ ಭಾಷೆಗಳಲ್ಲಿ ಅದನ್ನು ವ್ಯಾಸ, ಲೇಖನ, ನಿಬಂಧ ಎಂದು ಬೇರೆ ಬೇರೆಯಾಗಿ ಕರೆಯುತ್ತಾರೆ. ಭಾರತೀಯ ಭಾಷೆಗಳೆಲ್ಲವೂ ಇಂಥ ಸಂದರ್ಭಗಳಲ್ಲಿ ಒಂದೇ ಹೆಸರನ್ನು ಬಳಕೆಗೆ ತರುವುದು ಲೇಸು.

ನಮ್ಮಲ್ಲಿ ಹಿಂದೆ ಪ್ರಬಂಧ ಇತ್ತೆ ಇಲ್ಲವೆ ಎನ್ನುವ ಚರ್ಚೆಗೆ ಈಗ ನಾನು ಕೈಹಾಕುವುದಿಲ್ಲ. ಶೋಧನೆ ಮಾಡಹೊರಟರೆ ಸಂಸ್ಕೃತ ವಾಙ್ಮಯದಲ್ಲಿ ಗದ್ಯಾತ್ಮಕ ಮತ್ತು ಪದ್ಯಾತ್ಮಕ ಪ್ರಬಂಧಗಳು ದೊರೆಯುತ್ತವೆ. ಉದಾಹರಣೆಗೆ, ಭರ್ತೃಹರಿ ಶತಕಗಳು ಪದ್ಯಾತ್ಮಕವಾದ ಪ್ರಬಂಧಗಳೆಂದೇ ಹೇಳಬಹುದು. ದೊಡ್ಡ ಗ್ರಂಥಗಳಲ್ಲಿ ಅಡ್ಡ ಮಾತಾಗಿ ಪ್ರಬಂಧಗಳು ಅಲ್ಲಲ್ಲಿ ತಲೆಯಿಕ್ಕುತ್ತವೆ. ಶಂಕರಾಚಾರ್ಯರೇ ಮೊದಲಾದ ಆಚಾರ್ಯರ ಭಾಷ್ಯಗಳ ಮುನ್ನುಡಿಗಳೂ ಪ್ರಬಂಧಗಳೇ ಆದರೂ, ನಾವು ಈಗ ಯಾವುದನ್ನು ಪ್ರಬಂಧ ಎಂದು ತಿಳಿದಿದ್ದೇವೆಯೋ ಅದು ನಮ್ಮಲ್ಲಿ ಅತ್ಯಂತ ಈಚಿನದೆಂದು ಹೇಳಬೇಕು. ಇಂಗ್ಲೆಂಡು ಫ್ರಾನ್ಸುಗಳಲ್ಲಿ ಕೂಡ ಅದು ಈಚಿನ ಬೆಳವಣಿಗೆ. ಮೊದಲನೆಯ ಪ್ರಬಂಧಕಾರ ಫ್ರಾನ್ಸಿನ ಮಾನ್‍ಟೆಯ್‍ನ್ (Montaigne : 1580). ಇಂಗ್ಲಿಷ್ ಸಾಹಿತ್ಯದಲ್ಲಿ ಮೊದಲನೆಯವ ಬೇಕನ್ (Francis Bacon: 1597). ಮಾನ್‍ಟೆಯ್‍ನ್ ತಾನು ಸಾಹಿತ್ಯವನ್ನು ಬರೆಯುತ್ತಿದ್ದೇನೆಂದು ತಿಳಿದು ಪ್ರಬಂಧ ಬರೆಯಲಿಲ್ಲ; ತನ್ನ ಸ್ವತಂತ್ರ ವಿಚಾರವನ್ನು ಹೊರಗೆಡಹುವುದಕ್ಕಾಗಿ ಬರೆದ. ಅವನು ಹಾಕಿದ ತಳಪಾಯದ ಮೇಲೆ ಈ ಪ್ರಬಂಧದ ಕಟ್ಟಡ ಬೆಳೆದು ಬಂತು.

ಯೂರೋಪಿನಲ್ಲಿ ೧೬ನೆಯ ಶತಮಾನದಿಂದ ಒಂದು ನವಯುಗ ಪ್ರಾರಂಭವಾಯಿತು. ಎಲ್ಲೆಲ್ಲೂ ಸ್ವತಂತ್ರ ವಿಚಾರ ಪ್ರವೃತ್ತಿ ಹರಡಿತು. ಆ ಪ್ರವೃತ್ತಿಯ ಒಂದು ಕುರುಹು ಈ ಪ್ರಬಂಧ. ಅದೇ ಕಾಲದಲ್ಲಿಯೇ ಅಚ್ಚುಕೂಟ ಹೊಸದಾಗಿ ಬಂತು. ಇದು ಪ್ರಬಂಧದ ಬೆಳವಣಿಗೆಗೆ ಪೋಷಕವಾಯಿತು. ಸಾಮಾನ್ಯವಾಗಿ ಪ್ರಬಂಧಗಳಲ್ಲಿ ತಮ್ಮ ತಮ್ಮ ವಿಚಾರಗಳನ್ನು ಹೊರಗೆಡುಹುತ್ತಿದ್ದವರೆಲ್ಲ ಸಾಹಿತಿಗಳು ಮುಂತಾದ ದೊಡ್ಡ ವ್ಯಕ್ತಿಗಳೇ ಆಗಿರುತ್ತಿದ್ದರು. ಅವರು ತಾವು ಹೇಳಬೇಕಾದ್ದನ್ನು ಜನಸಾಮಾನ್ಯಕ್ಕಾಗಿ ಹೇಳುತ್ತಿದ್ದುದರಿಂದ ಹೇಳುವುದನ್ನು ಸರಳವಾಗಿ, ಲಲಿತವಾಗಿ, ಸುಲಭವಾದ ಭಾಷೆ ಶೈಲಿಗಳಲ್ಲಿ ಹೇಳುತ್ತಿದ್ದರು. ಇದು ಜನರಿಗೆ ಚೆನ್ನಾಗಿ ಹಿಡಿಸಿದ್ದರಿಂದ ಅವರು ಪ್ರಬಂಧದಲ್ಲಿ ಒಂದು ಲವಲವಿಕೆಯನ್ನೂ ಅಭಿರುಚಿಯನ್ನೂ ತೋರುತ್ತ ಬಂದರು. ೧೭-೧೮ನೆಯ ಶತಮಾನಗಳಲ್ಲಿ ವೃತ್ತಪತ್ರಿಕೆಗಳು ಉದಯವಾಯಿತು. ಅವುಗಳಲ್ಲಿ ವರ್ತಮಾನಗಳ ಜೊತೆಗೆ ಪ್ರಬಂಧಗಳನ್ನೂ ಪ್ರಕಟಿಸುವುದು ರೂಢಿಗೆ ಬಂತು. ಇದು Addison, Steele ಇವರ ಕಾಲ. ಇವರು ಸ್ವಯಮಾಚಾರ್ಯರಾಗಿ, ಆಗಿನ ಸಮಾಜದಲ್ಲಿ ತಮ್ಮ ದೃಷ್ಟಿಗೆ ಬಿದ್ದ ಲೋಪ ದೋಷಗಳನ್ನು ತಿದ್ದುವುದಕ್ಕಾಗಿ ನೀತಿ ನಡತೆಯ ವಿಷಯವಾಗಿ ಪ್ರಬಂಧಗಳನ್ನು ಬರೆಯತೊಡಗಿದರು. ತಮ್ಮ ಪ್ರಬಂಧಗಳ ನಡುನಡುವೆ ಕಾಲ್ಪನಿಕ ಕಥೆಗಳನ್ನೂ ಕಟ್ಟುತ್ತಿದ್ದರು. ಆ ತರುವಾಯ ೧೯ನೆಯ ಶತಮಾನದಲ್ಲಿ ವಿದ್ಯಾ ಪ್ರಸಾರ ಬಹಳವಾಗಿ ಆದ ಮೇಲೆ ಓದುವವರ ಸಂಖ್ಯೆ ಹೆಚ್ಚಿತು. ಅಲ್ಲದೆ ವಿಜ್ಞಾನದಲ್ಲಿ ಅನೇಕ ಶೋಧನೆಗಳು ನಡೆದು ಒಂದು ಹೊಸಯುಗವೇ ಆರಂಭವಾಯಿತು. ಆಗ ಪ್ರಬಂಧವನ್ನು ಸ್ವಲ್ಪ ಬೇರೆಯ ರೀತಿಗೆ ತಿರುಗಿಸಿಕೊಳ್ಳಬೇಕಾಯಿತು. ವಿಜ್ಞಾನದ ಬೆಳವಣಿಗೆಯೊಡನೆ ಪ್ರಬಂಧದ ವಿಷಯ ವ್ಯಾಪ್ತಿಯೂ ಹೆಚ್ಚಿತು. ಶಾಸ್ತ್ರ ವಿಷಯಗಳನ್ನು ಸರಳವಾಗಿ ಪ್ರಬಂಧಗಳಲ್ಲಿ ನಿರೂಪಿಸತೊಡಗಿದರು. ಈಗಿನ ೨೦ನೆಯ ಶತಮಾನದಲ್ಲಿ ಜೀವನದ ವೇಗಕ್ಕೆ ಅನುಸಾರವಾಗಿ ಪ್ರಬಂಧವೂ ಮಾರ್ಪಾಟು ಹೊಂದುತ್ತಿದೆ. ಅನೇಕ ಪತ್ರಿಕೆಗಳಲ್ಲಿ ಉತ್ತಮ ಲೇಖಕರು ಸಣ್ಣ ಲೇಖನಗಳನ್ನು ಬರೆಯಲು ತೊಡಗಿರುವುದರಿಂದ ವಿಚಾರ ಪ್ರತಿಪಾದನೆ, ನೀತಿ ನಿರೂಪಣೆ ಮೊದಲಾದ ಯಾವುದೊಂದೂ ಮುಖ್ಯ ಗುರಿಯಾಗಿಲ್ಲದೆ ಬರೆಯುವ ರೀತಿ ಬಹಳ ಕೇವಲ ಚಮತ್ಕಾರವಾಗಿಯೂ ಓದುಗರ ಮನಸ್ಸನ್ನು ತಕ್ಷಣ ಆಕರ್ಷಿಸುವಂತಹುದಾಗಿಯೂ ಇರುವುದು ಈ ಶತಮಾನದಲ್ಲಿಯೆ. ಈಗ ಹುಟ್ಟುತ್ತಿರುವ ಪ್ರಬಂಧಗಳಲ್ಲಿ ಎಷ್ಟು ಹೊಸ ವಿಚಾರಗಳು ಅಡಕವಾಗಿವೆ, ಎಷ್ಟು ವಿಷಯ ವೈವಿಧ್ಯವಿದೆ–ಎಂಬುದು ಸದ್ಯದ ನಿರೂಪಣೆಗೆ ಮೀರಿದ್ದು. ಸೀಮೆಸುಣ್ಣದ ಮೇಲೂ ಪ್ರಯಾಣಕ್ಕೆ ಗಂಟುಮೂಟೆ ಕಟ್ಟುವುದರ ಮೇಲೂ ಒಂದು ಸರ್ವೋತ್ಕೃಷ್ಟವಾದ ಪ್ರಬಂಧ ಬರೆಯಬಹುದು ಎಂದಮೇಲೆ ಪ್ರಬಂಧದ ವ್ಯಾಪ್ತಿ ಎಷ್ಟು ಬೆಳೆದಿದೆ ಎಂಬುದನ್ನು ಸೂಚಿಸಿದಂತಾಗುವುದು.

ಪ್ರಬಂಧಗಳನ್ನು ಶುದ್ಧ (ಸಾಹಿತ್ಯ) ಪ್ರಬಂಧಗಳು, ಬೋಧನಾತ್ಮಕ ಪ್ರಬಂಧಗಳು, ಪ್ರಚಾರಾತ್ಮಕ ಪ್ರಬಂಧಗಳು ಎಂದು ಮೂರು ಜಾತಿಯಾಗಿ ಸ್ಥೂಲವಾಗಿ ವಿಂಗಡಿಸಬಹುದು. ಶುದ್ಧ ಪ್ರಬಂಧಗಳು ಕೇವಲ ರಂಜನಾತ್ಮಕ. ಬೋಧನಾತ್ಮಕ ಪ್ರಬಂಧಗಳು ಪಾಮರ ಜನಕ್ಕೆ ಹೊಸ ಹೊಸ ವಿಷಯ, ಆಧುನಿಕ ವಿಚಾರ, ಶೋಧನೆ, ಶಾಸ್ತ್ರ ವಿಚಾರ ಇವುಗಳನ್ನು ಪರಿಚಯಮಾಡಿಕೊಡತಕ್ಕವು. ಪ್ರಚಾರಾತ್ಮಕ ಪ್ರಬಂಧಗಳು ಸಮಾಜ ಸುಧಾರಣೆ, ಸಾಹಿತ್ಯ, ರಾಜಕೀಯ, ಧರ್ಮ ಮುಂತಾದ ನಾನಾ ಮಹತ್ತ್ವದ ವಿಷಯಗಳ ಕಡೆಗೆ ಅಥವಾ ವಾದಗಳ ಕಡೆಗೆ ಜನ ಗಮನವನ್ನು ಸೆಳೆಯುವುವು.

ಈಗ ನಮ್ಮ ಜನಕ್ಕೆ ಹೆಚ್ಚುಹೆಚ್ಚು ಪ್ರಬಂಧಗಳನ್ನು ಒದಗಿಸಬೇಕಾಗಿದೆ. ವಿದ್ವಾಂಸರು, ಪಂಡಿತರು, ಶಾಸ್ತ್ರಕಾರರು ಮುಂತಾದವರು ಪ್ರಬಂಧ ಬರೆಯಲು ಮನಸ್ಸು ಮಾಡಿ, ನಮ್ಮ ದೇಶದ ಓದುಗರ ಜ್ಞಾನವನ್ನು ಬೆಳಸಲು ನೆರವಾಗಬೇಕು. ವಿದ್ಯಾಪ್ರಸಾರಕ್ಕೆ ಪ್ರಬಂಧ ಅತ್ಯುತ್ತಮವಾದ ಸಾಧನ. ಈ ದೃಷ್ಟಿಯಿಂದ ಸಾಹಿತ್ಯದಲ್ಲಿ ಪ್ರಬಂಧದ ಸ್ಥಾನ ಮಹತ್ತ್ವದ್ದಾಗಿದೆ.

* ಕನ್ನಡ ಸಾಹಿತಿಗಳ ಸಂಘದ ಆಶ್ರಯದಲ್ಲಿ ನಡೆದ ಕನ್ನಡ ಪ್ರಬಂಧಗಳ ವಿಚಾರಕೂಟದಲ್ಲಿ ಶ್ರೀಯುತರು ಮಾಡಿದ ಉಪನ್ಯಾಸದ ಸಾರಾಂಶ.

ನಮ್ಮ ನಗೆಗಾರರು:—

## ೨. ರತ್ನಾಕರ

(ಮುಂದುವರಿದುದು)

**ಕುಸುಮಾಜಿಯ ಕಾವ್ಯಸನ್ಮಾನ** ಎಂಬ ಈಗ ನಾನು ಕರೆಯುತ್ತಿರುವ ಇದು ರತ್ನಾಕರನಿಂದ ತೆಗೆದ **ಒಂದು ದೊಡ್ಡ ಅಲೆ.** ಒಂದು ಸಲ

ಪಂಡಿತೋಜನನೊಳಗಧಿಕದ ಕುಸುಮಾ ಕೋ । ದಂಡನಾ ನೃಪನೊಪ್ಪುವಾಗ
ಪಂಡಿತೆಯೊವನೊರ್ವ ಗಾಯಕ ಕಿವಿಗಚ್ಚಿ । ಕೊಂಡು ನುಡಿದಳೊಂದು ಮಾತ

ಆ ಮಾತು ಕೇಳಿ, ಪಂಡಿತೆ ಗರಗರನೆ ಎದ್ದು, ಅರಸನಿಗೆ ಬಿನ್ನಹವೆಂದು ನಗುತ್ತ 'ಒಂದು ಹೊಸ ಕಾವ್ಯವುಂಟು, ಅವಧರಿಸಬೇಕು' ಎಂದಳು. ಅರಸ 'ಯಾರು ಹೇಳಿದುದು? ಆರ ವರ್ಣನೆ? ಅದನ್ನು ತಿದ್ದಿದವರಾರು?' ಎಂದು ಕೇಳಿದ. 'ಪರರು ಹೇಳಿದುದಲ್ಲ. ಪರರ ವರ್ಣನೆಯಲ್ಲ. ತಿದ್ದುವ ದಕ್ಷರು ಪರರಿಲ್ಲ. ಅರಸ, ಇದು ನಿನ್ನ ಅರಮನೆಯಲ್ಲಾದ ಕೃತಿ. ನಿನ್ನ ಚರಿತ. ನೀನೇ ತಿದ್ದಬೇಕು' ಎಂದಳು ಪಂಡಿತೆ. 'ಅರಮನೆಯೊಳಗಾದುದು ಎಂದರೆ ಆರೆಂದು ನಿರ್ಧರಿಸಬಹುದು. ಹೊಸ ಕೃತಿಯ ವಿರಚಿಸಿದಾಕೆಯ ಹೆಸರ ಹೇಳು' ಎಂದು ದರಹಾಸದಿಂದ ಭೂವರನೆಂದ. ಅದಕ್ಕೆ ಪಂಡಿತೆ "ನಿನ್ನೆ ಅರಗಿಳಿಯೊಡನೆ ಕುಸುಮಾಜಿಯರು ಒಲಿದು ಸರಸದಿಂದ ನುಡಿದಾಡಲು, ಅದನ್ನು ನೆರೆಮನೆಯಲ್ಲಿದ್ದ ಸುಮನಾಜಿಯರು ಕೇಳಿ ಚರಿತೆ ಮಾಡಿದರು. ನಿನ್ನೆ ಸುಮನಾಜಿಯರ ನಿಲಯಕ್ಕೆ ವಿನೋದಕ್ಕಾಗಿ ಅಮರಾಜಿಯರು ಬಂದು, ಆಕೆ ಅಮೃತವಾಚಕನೆಂಬ ಗಿಳಿಯೊಡನೆ ನುಡಿವುದನ್ನು ಕೇಳಿದರು. 'ಕುಸುಮಾಜಿ ನುಡಿದದ್ದು ಚೆನ್ನಾಯಿತು. ಸುಮನಾಜಿ, ನೀನಿದನ್ನು ಹೊಸಕೃತಿಮಾಡು. ನಾನು ಇದನ್ನು ಬರೆಯುವೆನು' ಎಂದು ಅಮರಾಜಿಯವರು ಬರೆದು ಹೇಳಿಸಿದ ಕಾವ್ಯ, ರಾಯ" ಎಂದಳು. ಅರಸ ಆ ಕಾವ್ಯ ಓದಿಸಲು ಅಪ್ಪಣೆ ಕೊಟ್ಟ. ಒಬ್ಬ ತಳೋದರಿ ಓದಲು ಪುಸ್ತಕ ಹಿಡಿದು ಇದಿರಲ್ಲಿ ಕುಳಿತಳು. ಆಗ

ಧಿಗಿಲನೆದ್ದಳು ಕುಸುಮಾಜಿ ಕೈಮುಗಿದಿಂದು । ಹಗಲೊಂದು ನೋಂಪಿಯುಂಟೆನಗೆ
ಸುಗತನಿವಾಸಕೆ ಪೋಪೆನೆಂದಳು ರಾಯ । ನಗುತ ನುಡಿದನಾಕೆಗಿಂತು

ಲೇಸಾಯ್ತು ಹೋಗು ಕಂಕಣ ಬೇಡವೆ ನೋಂಪಿ । ಗೀ ಸುವರ್ಣದ ಕಂಕಣವನು
ಕೋ ಸುಮ್ಮನೇಕೆ ಪೋದಪೆ ಪಿಡಿಯೆಂದು ವಿ । ಲಾಸದಿ ಕೈಯ ನೀಡಿದನು

ನಿಜವೆಂದು ರಾಯನ ಕರದ ಕಂಕಣಕೆ ವಾ । ರಿಜಮುಖಿ ಕೈಯ ನೀಡಿದಳು
ಗಜ ತನ್ನ ಕರಿಣಿಯ ಕರ ಪಿಡಿವಂತೆ ಭೂ । ಭುಜ ಪಿಡಿದನು ಕೈಯನವಳ

ಆರ ಚಾಳೈಸುವಾ ನಿನಗೆ ನಾನರಿಯದಂ । ತಾರಿತ್ತರಿಂದು ನೋಂಪಿಯನು
ಸಾರೆ ಕುಳ್ಳಿರು ಸಾಕು ನನ್ನಾಣೆಯೆಂದೊತ್ತಿ । ನಾರಾಯನೊಯ್ದ ನಾಕೆಯನು

ಹೀಗೆ, ಹೊರಟ ಕುಸುಮಾಜಿಯನ್ನು ಹಿಡಿದು ಕುಳ್ಳಿರಿಸಿ,

ಕಂಡೆಯ ಪಂಡಿತೆ ಕುಸುಮಾಜಿ ಕುಸುಮದ । ಚೆಂಡಿನಂತೆಪ್ಪ ಲಂಘನವಾ......
ಅವಕಲ್ಲ ನೋಡೊಂದು ನೋಂಪಿಯೆಂದೆನ್ನುತ್ತೊ । ಪ್ಪದಿ ಚಾಳಿಸುವ್ರೊಂದು ಬಗೆಯಾ

ಎಂದು ಸರಸವನಾಡಿ, ಇತರ ಮಹಿಳೆಯರೊಡನೆ ಕುಳ್ಳಿರು ಹೋಗೆಂದು ಸಹಜದಿಂದ ಅವಳನ್ನು ಬೀಳ್ಕೊಟ್ಟನು.

ಬಳಿಕ ಅರಸನ ಅಪ್ಪಣೆಪಡೆದು ಹಾಡುವ ಕನ್ಯೆ ಹೊತ್ತಗೆ ಹಿಡಿದು ಹಾಡಿದಳು. ಕುಸುಮಾಜಿ ತನ್ನ ಮುದ್ದಿನ ಗಿಳಿ ಅಮೃತವಾಚಕನಿಗೆ ಭರತೇಶನ ಸರ್ವಾಂಗಶೋಭೆಯನ್ನು ಬಣ್ಣಿಸಿ ನುಡಿದುದನ್ನೂ, ಲೀಲಾರ್ಥವಾಗಿ ಗಗನದಲ್ಲಿ ಹೋಗುತ್ತಿದ್ದ ವ್ಯಂತರಕನ್ಯೆಯೊಬ್ಬಳು ಆ ವರ್ಣನೆ ಕೇಳಿ ಅರಗಿಳಿಯ ಮೈಯಲ್ಲಿ ನಿಂತು ಕುಸುಮಾಜಿಗೆ ಉತ್ತರಕೊಟ್ಟುದನ್ನೂ ನಿರವಿಸಿದ ಆ ಕವಿತೆಯನ್ನು ಹಾಡಿದಳು.

ಹಾಡಿಯಾದ ಮೇಲೆ, ಭರತೇಶ್ವರ ಆ ಕಾವ್ಯರಚನೆಯನ್ನು ತನ್ನ ಎದೆಯಲ್ಲಿ ಭಾವಿಸಿ ನೋಡಿ ಮೆಚ್ಚಿ 'ಕೃತಿ ಚೆನ್ನಾಯಿತು. ಆದರೆ ಒಂದು ವಿಚಾರವುಂಟು. ಇದು ಸುಮನಾಜಿಯ ಕವಿತೆಯಲ್ಲ, ಅಮರಾಜಿ ಹೇಳಿದ ಕೃತಿ' ಎಂದ. ಅದ ಕೇಳಿ ಅವರಿಬ್ಬರೂ ನಕ್ಕು ಒಬ್ಬರೊಬ್ಬರ ಮುಖ ನೋಡಿದರು. 'ಆಗಲೆ ಹೇಳಿದೆ, ಅಕ್ಕ, ನೀನು ನನ್ನ ಮೇಲೆ ಈ ಗುಟ್ಟು ಹೊರಿಸದಿರೆಂದು. ಈಗ ಆಯಿತೆ!' ಎಂದು ಸುಮನಾಜಿ ನಕ್ಕು ನುಡಿದು, 'ತಂಗಿ, ನೀನು ಇದ ಕೃತಿಮಾಡು–ಎಂದಳು. ಈ ಕಾವ್ಯದ ಅಂಗ ನನಗೆ ಬಿರಿಸು ಎಂದೆ. ಅಮರಾಜಿ ಸಂಗತಿ ಮಾಡಿದಳು. ನಾನು ಅದನ್ನು ಅಂಗೀಕರಿಸಿ ಬರೆದೆ. ನಾನು ಹೇಳಿದೆನೆಂಬುದು ಏನಕ್ಕ, ನಿನ್ನ ಅಭಿಧಾನವೆ ಅಲ್ಲಿರಲಿ, ಎಂದೆ. ಅವಳು ಕೇಳಲಿಲ್ಲ, ಮರೆಸಿ ಹೇಳಿದಳು. ಆದರೆ ಎಲ್ಲರ ಚಿತ್ತದ ಓರೆಕೋರೆ ಬಲ್ಲವರ ಮುಂದೆ ಯಾರೇನು ಮರಸಲಾದೀತು!' ಎಂದಳು. ಅದಕ್ಕೆ ಅರಸನು ನಗುತ್ತ 'ಮೊದಲರ್ಧ ಅವಳ ಕವಿತ್ವ. ಕಡೆಯರ್ಧ ನಿನ್ನ ಸುಕವಿತ್ವ' ಎಂದ. ಅಮರಾಜಿ ಅದಕ್ಕೆ ನಗುತ್ತ 'ಹೌದು. ಹೌದು. ನೀನು ಹೇಳು ತಾಯಿ–ಎಂದರೆ ಒಲ್ಲದಾದಳು. ಅದಕ್ಕೆ ನಾನೊಂದು ಉಪಾಯ ನೆನೆದೆ. ನಾನು ಸ್ವಲ್ಪ ಹೇಳಿ, ಹೀಗೆ ಹೇಳು ಎನ್ನಲು, ಬಳಿಕ ಹೇಳಿದಳು. ಆದಿಮಂಗಲ ನನ್ನದು. ಅಂತ್ಯಮಧ್ಯದೊಳಾದ ಮಂಗಲ ಆಕೆಯದು' ಎಂದು ಒಪ್ಪಿದಳು. ಅರಸನು ತಮ್ಮ ಅಂತರಂಗದ ಸುಕ್ಕುಸುಳುಹನ್ನು ಅಂತರಿಸದೆ ಹೇಳುತ್ತಿದ್ದುದಕ್ಕೆ ಕಾಂತೆಯರೆಲ್ಲ ನಲಿದರು.

ಅರಸ ಅಮರಾಜಿ ಸುಮನಾಜಿಯರ ಕೃತಿಗೆ ಮೆಚ್ಚಿ ಮೆಚ್ಚುಗೊಡ ಬಯಸಿದಾಗ ಅವರು ಆಭರಣ ಬಂಗಾರ ಸ್ವೀಕರಿಸಲು ಒಪ್ಪಲಿಲ್ಲ.

ಮುಟ್ಟಿತಿವರಮೇಲೆ ನನಗರ್ತಿ ನಾನೊಂದ । ಕೊಟ್ಟಪೆನೆನಲೊಲ್ಲರಿವರು
ಕೊಟ್ಟಲ್ಲದೆನ್ನುಬ್ಬು ನಿಲ್ಲದಿನ್ನಿದಕೇನು । ತಿಟ್ಟವೆಂದೆದೆಯೊಳು ನೆನೆದಾ

ಬಂಗಾರವನೊಲ್ಲದಿರೆ ಮಾಣಲಿವರನಾ । ಲಿಂಗಿಸಿಯಾದರು ಬಿಡುವಾ
ಪಾಂಗಾವುದೊತ್ತಿಗೆ ಬಾರರೆಂದೆಣಿಸಿ ತಂ । ತ್ರಾಂಗವನೊಡನೊಂದ ಕಂಡಾ

ಅಮರೆ ಬಾ ಸುಮನೆ ಬಾ ಕುಸುಮಾಜಿ ಚಿತ್ತವಿ । ಭ್ರಮದೊಳಿದ್ದ ಪಳದಕೊಂದು
ಕ್ರಮವನೇಕಾಂತದೊಳಗೆ ಪೇಳ್ವೆನೆಂದು ಭೂ । ರಮಣ ತನ್ನೊತ್ತಿಗೆ ಕರೆದಾ

ನಡೆದು ಸಮೀಪಕೆ ಬಂದ ಪೆಂಗಳನೆಡ । ಗಡೆ ಬಲಗಡೆಯೊಳು ನಿಲಿಸಿ
ನುಡಿವಂತೆ ಕಿವಿಗೆ ಮೋರೆಯ ತೋರುತಿಬ್ಬರ । ನೊಡನಪ್ಪಿಕೊಂಡನಾ ನೃಪತಿ

ಬೆದರಿದಂತಾದರು ಪೆಂಗಳತ್ತಿತ್ತ ಮೈ । ಯೊದರಿಕೊಂಬರು ಲಲ್ಲೆಯಿಂದ
ಅದಿರದಂತಾ ರಾಯನಮರ್ದಪ್ಪಿಕೊಂಡು ಮೆ । ಚ್ಚಿದೆನೆಂದು ಬಿಟ್ಟನಾಕ್ಷಣವೆ

ಗೊಳ್ಳನೆ ಸತಿಯರೆಲ್ಲರು ನಕ್ಕರದಕೆ ಭೂ । ವಲ್ಲಭ ತಾ ನಸುನಕ್ಕಾ
ಒಳ್ಳಿತಂತಾಯ್ತಾಗಬೇಕೆಂದು ಕುಸುಮಾಜಿ । ಗೆಲ್ಲವಡೆದು ನಕ್ಕಳೊಡನೆ

ಕೋಣೆಯೊಳಾನೊಂದ ನುಡಿದಾಡಲದ ತಂದು । ಕ್ಷೋಣೀಶಗರಿಕೆ ಮಾಡಿದಿರಿ
ಕಾಣದೆ ದೈವವಿಲ್ಲವೆ ನಿವಗಾಫಲ । ಕಾಣಿಸಿತಿಂತು ಕಣ್ಣಾರೆ

ಒಬ್ಬರ ಗೂಢಚರಿತ್ರವ ಬಾಹ್ಯಕೆ । ಹಬ್ಬಿಸಿ ನಗುವಾ ಎಂಬವರಾ
ತಬ್ಬಿ ದೈವವೆ ನಗಿಸುವುದೆಂಬ ನುಡಿಗೆ ನೀ । ವಿಬ್ಬರೆ ಗುರಿಯಾದಿರಕ್ಕ

ಸೆರಗ ಮೊಗಕೆ ಸಾರ್ಚಿ ನಗುವಳು ಕಂಬದ । ಮರೆಗೆ ಹೋಹಳು ಕೂಡೆ ಬಹಳು
ಎರೆಯನಿದಿರೊಳಿಷ್ಟು ನಾಣ್ಚುತ ನಗುತ ಹೊ । ಮ್ಮಿರಿದಾಡುತಿರ್ದಳಾ ತರುಣಿ

ಅರಸ ಕಿಕ್ಕಣ್ಣಿಂದ ನೋಡುವನಾಕೆಯ । ಸರಸಲೀಲೆಗೆ ಹಿಗ್ಗಿ ನಗುವ
ಶಿರಬಾಗಿಕೊಂಡಿದ್ದಳೀಗಳುಬ್ಬಿದಳೆಂದು । ಹರುಷವೈದಿದನೆದೆಯೊಳಗೆ

ಹೀಗೆಯೆ ಅರಸಿಯರಲ್ಲಿ ತಮತಮಗೆ ಸರಸ ನಡೆದ ಮೇಲೆ ಎಲ್ಲರೂ ಅರಸನಿಗೆ ಆಭರಣದ ನಿವಾಳಿ ತೆಗೆದರು.

ಮಮತೆಯೊಳಬಲೆಯರೆಲ್ಲರು ಕೂಡಿ ಸಂ । ಭ್ರಮದಿ ನಿವಾಳಿಸುವಾಗ
ಅಮರೆ ಸುಮನೆ ಕುಸುಮೆಯರ ಜಗಳವೆತ್ತ । ಗಮಿಸಿತೆಂದನು ನರನಾಥ

ಅದಕ್ಕೆ ಪಂಡಿತೆ ಹೀಗೆಂದಳು :

ರಾಜ ಬಿನ್ನಹ ಸುಮನಾಜಿಯೊಳಗೆ ಕುಸು । ಮಾಜಿಯೊಳಗೆ ನೋವು ಬಹುದೆ
ಆಜಿಯೆಂದರೆ ಕದನಕೆ ಹೆಸರೆಂದರಿ । ದಾ ಜಾಣ್ಮೆಗರಸ ಮೆಚ್ಚಿದನು

ಅಹುದೆ ಚೆನ್ನಾಯ್ತದು ಖಡ್ಗದಾಜಿಯೊಳು ನೋ । ವಹುದೈಸೆ ಹೂವಿನಾಜಿಯೊಳು
ಮಹಿಯೊಳಗಾರು ನೊಂದವರುಂಟೆನುತ ರಾಯ । ಗಹಗಹಿಸುತ ಮೆಚ್ಚಿ ನುಡಿದ

ಅಸುರಾಜಿಗುಂಟು ಕರ್ಕಶವಮರಾಜಿಯೊ । ಳೆಸೆವುದೆ ಕರ್ಕಶವರಸ
ಹೊಸತಾಯ್ತು ಸುರರಿಗೆ ಕದನವಿಲ್ಲೊಮ್ಮೆ ಸಂ । ಧಿಸಿದರು ಮೃದುವೆಂದೆಯಲ್ತೆ

ಆಗ ಭರತ ಅಲ್ಲಿದ್ದ ಲಲನೆಯರನ್ನು ನೋಡಿ, 'ಪಂಡಿತೆ, ನಾವು ಇಂದು ನಮ್ಮ ಮನೆಯಲ್ಲೆ ಉಂಡರೆ ಲೇಸೊ? ನಮ್ಮ ಹೆಂಡಿರೊಬ್ಬಳ ಮನೆಗೆ ಹೋದರೆ ಲೇಸೊ? ಹೇಳು' ಎಂದ. ಅರಸನ ಚಿತ್ತ ಕುಸುಮಾಜಿಯಲ್ಲಿ ಎರಕವಾಯ್ತೆಂದು ಪಂಡಿತೆಗೆ ತಿಳಿಯಿತು. 'ಇಂದಿಗೆ ಆರೋಗಣೆ ದೇವರ ಗೃಹದಲ್ಲಿ ಚೆಂದವಲ್ಲ. ಒಬ್ಬಳ ಮನೆಗೆ ಸಂದರೆ ಉತ್ತಮ' ಎಂದಳು. ಅರಸನಿಗೆ ಮನಸಿನ ಗಂಡೆ ತುರಿಸಿದಂತಾಯ್ತು. 'ಆರ ಮನೆಗೆ ಹೋಗಬಹುದು, ಹೇಳು?' ಎಂದ ಭರತ. ಪಂಡಿತೆ ಆಲೋಚಿಸಿ ಬಿನ್ನವಿಸುವೆನೆಂದು ಕುಟಿಲ ಮೌನ ತಾಳಿ, ಮೂಗಿನ

ಮೇಲೆ ಬೆರಳನ್ನಿಟ್ಟು ಕಣ್ಮುಚ್ಚಿ ತಲೆಯನ್ನು ಒಂದಿಷ್ಟು ತೂಗಾಡಿ, ಯೋಗಿಗಳಂತೆ ಧ್ಯಾನಿಸಿ, ಕಣ್ತೆರೆದು 'ಒಡೆಯ, ಕುಸುಮಾಜಿಯವರ ಮನೆಗೆ ಅಡಿಯಿಟ್ಟರೆ ಉತ್ತಮ' ಎಂದಳು. 'ಅದು ಹೇಗೆ ಉತ್ತಮ? ಹೇಳು' ಎಂದು ಭರತ ಅವಳಿಂದ ಹೇಳಿಸಿದ. ಅದಕ್ಕೆ ಪಂಡಿತೆ 'ಈ ಹೊಸ ಕಾವ್ಯ ಆದುದು ಮೂವರಿಂದ. ಇಬ್ಬರನ್ನು ನೀನು ಮನ್ನಿಸಿದೆ. ಇನ್ನೊಬ್ಬಳಿಗಿಲ್ಲ. ಅವಳ ಮನೆಗೆ ಹೋಗಿ ಅವಳನ್ನು ಮನ್ನಿಸುವುದು ಉಚಿತ' ಎಂದಳು.

ಅದು ಲೇಸುಲೇಸಂತುಟಾಗಬೇಕೆಂದು ತ । ಸ್ಪದೆ ಪೆಣ್ಗಳೆಲ್ಲರಾಡಿದರು
ಎದೆಯೊಳಾನಂದ ಮುಖದೊಳಿಷ್ಟು ಮಾಂದ್ಯಭಾ । ವದೊಳೊಡಬಟ್ಟನಾಕುಶಲ

ಇದಾಯಿತು. ಅರಸನ ಆರೋಗಣೆಗೆ ಸಿದ್ಧಗೊಳಿಸಲು ಕುಸುಮಾಜಿ ತನ್ನ ಅರಮನೆಗೆ ತೆರಳಿದಳು. ಭರತ ಅಲ್ಲಿಯವರೆಗೆ ತನ್ನ ಅರಮನೆಗೆ ಇರಲು ಹೋದ. ಉಳಿದವರು ತಮ್ಮ ತಮ್ಮ ಎಡೆಗೆ ಹೋದರು. ಆರೋಗಣೆಯ ಸಮಯವಾದಾಗ, ಕುಸುಮಾಜಿಯ ತಂಗಿ ಮಕರಂದಾಜಿ ಯೆಂಬವಳು ಭರತನನ್ನು ಕರೆಯಲು ಬಂದಳು. ಅವಳಿಗೆ ಪ್ರಾಯಕ್ಕೆ ಅರೆ ವರುಷ ಕಡಿಮೆ. ಆಕೆ ಬಂದು ಭಾವನಿಗೆ ಮಲಯಜವೀಟಿ ಕಾಕ್ಷತೆ ಕೊಟ್ಟು

ಅನುಕೂಲವಾದುದಾರೋಗಣೆಗಿನ್ನೆಮ್ಮ । ಮನೆಗೇಳು ಭಾವಾಜಿಯೆಂದು
ತನುಮಧ್ಯೆ ನುಡಿದಳದಕೆ ರಾಯ ನಗುತ । ನಾದುನಿಯೊಳು ನುಡಿದನಿಂತೆಂದು

ಇಂದಾನು ನಿನ್ನ ಮನೆಗೆ ಬಹುದುಚಿತವೆ । ಒಂದರೆ ವರುಷದ ಮೇಲೆ
ಬಂದು ನೀನೆನ್ನ ಕರೆದರಾನು ಬಹೆನು ಹೋ । ಗೆಂದನು ನೃಪತಿ ನಾದುನಿಯ

ಅಕ್ಕಾಜಿಯರಮನೆಗೇಳೆಂದೆ ನೀನಿಂತು । ಠಕ್ಕಿನ ಮಾತನಾಡಿದೆಯ
ಠಕ್ಕುಕಾತಿಯೆ ನಿನ್ನ ಮನೆಗೆಂದೆಯೈಸೆ ನಿ । ನ್ನಕ್ಕನ ಹೆಸರ ಹೇಳಿದೆಯ

ಅಕ್ಕನ ಹೆಸರ ಹೇಳುವರಾಕೆ ಪಡೆದರೆ । ಮಕ್ಕಳು ಪೇಳ್ವವು ಮುಂದೆ
ಚಿಕ್ಕನೊಳೆನಗೇನು ಸಂಬಂಧ ಸಾಕೇಳು । ಸಿಕ್ಕಿನ ಮಾತನಾಡದಿರು

ಸಾಕೇಳು ಸಲಹೇಳು ನೀನೆಂದು ತಾನೆನ್ನ । ನಾಕರುಷಣ ಮಾಡುತಹಳೆ
ಈಕೆ ತಾನೇನು ಕಾತರೆಯೊಯೆಂದನು ರಾಯ । ನಾ ಕಾಂತೆ ತಲೆವಾಗಿ ನಗಲು

ಕಾತರಗೀತರವನು ನೀವು ನಿಮ್ಮಂಬು । ಜಾತಾಕ್ಷಿಯರು ಬಲ್ಲಿರೈಸೆ
ಆ ತಳ್ಳಿಬಳ್ಳಿಯ ನಾವೇನ ಬಲ್ಲೆವು । ಮಾತು ಸಾಕಿನ್ನೇಳು ಭಾವಾ

ಆಗ 'ಅತಿ ಸರಸಗಳಾಗದದೆಂಬುದ ನೆನೆದು' ಆ ರಾಯನು 'ಕುಸುಮ ವಿದ್ದೆಡೆಗೆ ಮಧುವ್ರತ ಹೋಹಂತೆ ಕುಸುಮಾಜಿಯರ ಮನೆಗಾಗಿ' ನಡೆದನು. ಅವನು ಬರುವುದನ್ನು ಕೇಳಿ, ಕುಸುಮಾಜಿ ತಾನೇ ಇದಿರಾಗಿ ಬಂದು ಸತ್ಕರಿಸಿ ಅವನನ್ನು ಒಳಕ್ಕೆ ಒಯ್ದಳು. ಅವನು ಮನೆಯೊಳಕ್ಕೆ ಬಂದಾಗ, ಅಲ್ಲಿಯ ರಾಜಕೀರ 'ಅಕ್ಕಕ್ಕ, ಭಾವ ಬಂದನು ನಮ್ಮ ಮನೆಗೆ. ದೇವಿ, ಗದ್ದುಗೆಯಿಕ್ಕು, ಮನ್ನಿಸು' ಎಂದಿತು. 'ಇವನೆ ಅಮೃತವಾಚಕನು!' ಎಂದು ಅರಸನು ಬೆಸಗೊಳ್ಳುತ್ತ ಅಲ್ಲಿದ್ದ ಗದ್ದುಗೆಯೇರಿ ಕುಳಿತನು. ಆಗ

ಬಂದೆಯ ಭಾವ ಬಂದೆಯ ಸುಪ್ರಭಾವ ಐ । ತಂದೆಯ ಸುಗುಣಸ್ವಭಾವ
ಬಂದುದು ಲೇಸು ಮಹಾನುಭಾವಾಯೆಂದು । ದಂದು ಮುದ್ದಿನ ರಾಜಕೀರ

ಧರೆಯನಾಳಿದೆನೆಂಬ ಗರ್ವವೊ ನಮ್ಮಕ್ಕ । ನರಮನೆಗಡಿಗಡಿಗೇಕೆ
ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನ ಕಾ । ಲ್ಗರುಲನಿಕ್ಕುವೆನೆಂದುಥಾಗ

ಸುಳಿಗುರುಳೆಂಬುರುಲುಂಟು ನಮ್ಮಕ್ಕನ । ನಳಿತೋಳ ಪಾಶಗಳುಂಟು.......
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿ । ಸಂಕಲೆಗಳನಿಕ್ಕಿಸುವೆನು.......

ಇದೇ ಮುಂತಾಗಿ ಆ ಗಿಳಿ ಸರಸ ವಚನಗಳಾಡಿ

ಈ ನುಡಿಗಳು ನಿನಗುಚಿತಗಳಹುದಿನ್ನು । ಮಾನಿನಿಯಾಸ್ಯದೊಳೊಂದು
ಜೇನೆಯ್ಯ ಕೊಡನುಂಟು ನಿನಗದೆಂತಹುದದು । ಜೈನನಲ್ಲವೆ ಭಾವ ನೀನು

ಗಿಳಿ ಹೀಗೆನ್ನಲು, ಅರಸನು ನಕ್ಕು, 'ಈ ನುಡಿ ಗಿಳಿಯ ಯೋಚನೆಯಲ್ಲ. ಯಾರೊ ಇದಕ್ಕೆ ವಿನೋದಕ್ಕೆ ಕಲಿಸಿರಬೇಕು' ಎಂದುಕೊಂಡ. ಕಲಿಸಿದವಳು ನಾದುನಿಯೆಂದು ತಿಳಿದ. ಅವಳನ್ನು ತಕ್ಕೈಸುವ ಆರ್ತಿಯಾಯಿತು. ಕರೆದರೆ ಬಾರಳೆಂದು ಒಂದು ತಂತ್ರ ತೆಗೆದ. 'ಆ ಚೆಂದದ ಗಿಳಿಯನ್ನು ಕೊಂಡು ಬಾ, ಮಕರಂದಾಜಿ' ಎಂದ. ಅವಳು ತಂದು ಕೊಡುವಾಗ 'ಆನಂದದೊಳಮರ್ದಪ್ಪಿಕೊಂಡ. ಮುತ್ತಕೊಟ್ಟ. ಕೊರಳಿಗೆ ಕಂಠಮಾಲೆಯ ಸುತ್ತಿ ಮೆಚ್ಚಿದೆನೆಂದು ಬಿಟ್ಟ.' ಅದನ್ನು ಕಂಡು ಕುಸುಮಾಜಿ ನಗುತ್ತ 'ಗಿಳಿಗೆ ಹೀಗೆ ಕಲಿಸಬೇಡ. ಕಲಿಸಿದರೆ ಹೀಗೇ ಆಗುತ್ತದೆ – ಎಂದು ನಾನು ಆಗಲೆ ಹೇಳಲಿಲ್ಲವೆ, ತಂಗಿ?' ಎಂದಳು. ಅದಕ್ಕೆ ಮಕರಂದೆ 'ಅಕ್ಕನನ್ನು ನೋಡೋಣವೆಂದು ಬಂದರೆ ಒಳ್ಳೆಯ ಫಲವಾಯಿತು. ನಮ್ಮ ಮಾನಭಂಗವಾಯಿತು' ಎಂದು,

ಅಳುವಂತೆ ಮೊಗವ ಕಿರಿದು ಮಾಡಿಕೊಂಡಾಗ । ತಲೆವಾಗಿ ಕಣ್ಣನೊಸೆವಳು
ಒಳಗೆ ಸಂತಸವುಂಟು ಕಣ್ಣ ನೀರಿಲ್ಲ ಬಿ । ಕ್ಕುಳಿಸುತ ನುಡಿವಳು ಸಟೆಗೆ

ನೋಡುವಳೊಡನೋರೆಗಣ್ಣಿಂದ ಭಾವನ । ಕೂಡದ್ದ ಮೋರೆವೆಗೆವಳು
ನೋಡುವಾಗಿಷ್ಟು ಚಿಂತೆಯ ತೋರಿ ಮೊಗವದ್ದ । ಮಾಡಿಕೊಂಡುರೆ ನಗುತಿಹಳು

ಶಿರದೂಗುವನು ಮುಗುಳ್ನಗುವನು ಕುಸುಮಾಜಿ । ಗರಸ ಕಣ್ಸನ್ನೆದೋರುವನು

ಆ ಸುಳ್ಳಿನ ಅಳುವಿಕೆಗೆ ಬೆರಗಾಗಿ, ಕುಸುಮಾಜಿ 'ಏಕಿಷ್ಟು ವ್ಯಾಕುಲ, ಮಕರಂದೆ? ತೀವಿದ ನಿನ್ನ ಕಂಗಳ ನೀರ ಕಂಡೆದೆ ನೋವುತಿದ್ದನು ರಾಯ' ಎಂದಳು.

ಎನಲೊಡನರಿದಾಗಳೆ ಕಣ್ಣ ತಿಕ್ಕುತೊ । ಯ್ಯನೆಯೆವೆವ್ರೊಂದೆರಳ್ಮರಿಯೆ
ಅನಿತರೊಳಗೆ ಕಣ್ಣ ನೀರೊಕ್ಕುವುದ ಕಂಡು । ಜನನಾಥ ಭಾಪೆಂದ ನಗುತ

ನಮ್ಮರಸನ ಮುಂದೆ ದುಃಖದ ಕಣ್ಣೀರು । ಹೆಮ್ಮಕ್ಕಳಿಗೆ ಬಾರವೆಲಗೆ
ಸುಮ್ಮಾನದಿಂದ ಕಣ್ಬನಿಯುಂಟು ನಿನಗೀಗ । ಉಮ್ಮಿದಶ್ರುಗಳು ಲೇಸಲ್ತೆ

ಹೀಗೆಂದು ಕುಸುಮಾಜಿ ಹೇಳಲು, ಮಕರಂದಾಜಿ

ಬರಿಯಳ್ಕೆಯಾಟವ ತೊರೆದಳು ತಲೆವಾಗಿ । ಕಿರುನಗೆ ನಗುತಿದ್ದಳೊಡನೆ

ಭರತ ಎಂಜಲು ಕೊಟ್ಟ. ಅವಳು ಥೂ ಥೂ ಎಂದು ಉಗುಳಿ ತುಟಿ ತೊಡೆದು ಅವನಿಗೆ ಕಾಣುವಂತೆಯೆ ಬಾಯಿ ಮುಕ್ಕುಳಿಸಿ, ಜಿನಯೆಂದು ಜಪಿಸಿ,

ಕಣ್ಣು ಮುಚ್ಚುವಳಿಷ್ಟು ಜಾನಿಸುವಳು ತುಟಿ । ಬಣ್ಣ ಮಿಡುಕಿ ಜಪಿಸುವಳು
ಕಣ್ಣುದೆರೆದು ಭಾವನ ನೋಡುವಳು ನಾಣ್ಚಿ । ಹೆಣ್ಣು ಬಾಗುವಳಾಗ ತಲೆಯ

ಆಗ ಕುಸುಮಾಜಿ 'ಎಲಗೆ, ಎಮ್ಮರಸನ ಎಂಜಲು ಸೋಂಕಿದಾಗ ನಿನ್ನ ಕುಲಕೋಟಿ ಪಾವನ' ವೆಂದಳು. ಅದಕ್ಕೆ ಮಕರಂದೆ,

ಮೆಚ್ಚಿರುತಿಹಳು ಭಾವನ ರೂಪು ಕುಲಶೀಲ । ಹೆಚ್ಚೆಂದು ತನ್ನೆದೆಯೊಳಗೆ
ಒಚ್ಚೆಯಗೊಡದಾಗ ತವರೂರ ಮೇಲಣ । ಹೆಚ್ಚುಗಾರಿಕೆಗಾಡುತಿಹಳು

ಏನು ನುಡಿವೆಯಕ್ಕ ನೀನೀತಗುರೆ ಸೋತು । ಹೀನದೋರುವೆ ತವರೂರ
ಈ ನೃಪನಾಳ್ವಷ್ಟು ನೆಲನಿಲ್ಲ ನಮ್ಮವ । ರ್ಗೇನು ಕಡಿಮೆ ವಂಶದಲ್ಲಿ

ವೀಳೆಯದೊಳಗೆ ಮದ್ದುಂಟೊ ನಿನ್ನರಸನ । ತೋಳೊಳುಂಟೊ ವಶ್ಯಯಂತ್ರ
ಬೇಳುವೆಯುಂಟೊ ತಿಲಕದೊಳ್ಗಲ್ಲದಿರಿಂತು । ಬೇಳಾಗಿ ನೀನು ಸಿಕ್ಕುವೆಯ

ಮಾನಹಾನಿಯ ನೆನೆದತ್ತರು ಕಣ್ಣೀರು । ತಾನು ಬಾರದು ನನಗಾಗ
ಏನ ಹೇಳುವೆ ನಿನ್ನ ಗಂಡನ ಮಾಯವ । ನೀನೊಲಿವುದು ಚೋದ್ಯವಲ್ಲ

ಮಕರಂದೆ ಈ ಮಾತನ್ನೆಲ್ಲ ಎಲ್ಲಿ ಕಲಿತಳೆಂದು ಅರಸ ಬೆರಗಾಗಿ ನೋಡುತಿದ್ದ. ನೋಡುತ್ತಿದ್ದು

ನೊಂದಳಹುದು ದಿಟ ಕುಸುಮಾಜಿ ಕರೆ ಮಕ । ರಂದಾಜಿಯನು ಮನ್ನಿಸುವೆನು
ಎಂದನದಕೆ ತಂಗಿ ಬಾರೆಂದಳರಸಿ ಹೋ । ಗೆಂದು ಕೋಪಿಸಿದಳಾ ತರುಣಿ

ಜಗುಳ್ವ ಹೆಂಗಳನೆತ್ತಿ ತಕ್ಕೈಸಿ ಮೊಗವದ್ದ । ದೆಗೆಯ ಚುಂಬಿಸುತಿಹ ನಿನ್ನ
ಬಗೆಯ ಕಂಡರೆ ಹುಚ್ಚುನಗೆ ಬರುತಿವೆಂದೆಂದು । ನಗುವಳೊಡನೆ ಕಿಲಕಿಲನೆ

ಅಡ್ಡಮೋರೆಯನಿಕ್ಕಿ ನಗುವಳು ನೋಡುವ । ಳೊಡ್ಡೊಡ್ಡಿ ನುಡಿದೇಡಿಸುವಳು
ದೊಡ್ಡತನವೆ ಭಾವ ನಿನಗಿದೆಂಬಳು ರಾಯ । ಸಡ್ಡೆಮಾಡದೆ ಕೇಳುತಿಹನು

ಎಲೆ ಧೂರ್ತೆ ನಿನಗೆ ಮನ್ನಣೆಯೀವೆನೆಂದರೆ । ಹಳಿವುದೇಕೆಮ್ಮ ನೀನೆಂದ
ಬಲುಧೂರ್ತ ಹೋಗು ಮನ್ನಣೆ ನಿನಗಿರಲಿಯೆಂ । ದುಳಿದಳದಕೆ ರಾಯ ನಕ್ಕ

ಅಹುದೆ ಅಹುದೆ ನಾನು ಧೂರ್ತ ನೀನೆ ಧೂರ್ತೆ । ಯಹುದಾದರರ್ಕವೇನಾಯ್ತು
ಬಹುದೊ ನೋಡಿದರದು ಕಡೆಗೆಂದನುರೆ ಗಹ । ಗಹಿಸಿದಳವಳೋರೆಮೊಗದಿ

ಹೀಗೆಯೆ ಹುಸಿಜಗಳವಾಡುತ್ತ ಆಡುತ್ತ ಅರಸನೆಂದನು:

ಅರುದಿಂಗಳಿನ್ನು ಸೈರಿಸು ಮಕರಂದೆ ನಿ । ನ್ನರುಬಿನಾಟವ ನಿಲಿಸುವೆನು
ಬಿರುಬೆದರಾರಿಗೆ ಭಾವ ನೀನುರೆ ಕಂಡ । ತೆರನೇನು ಹೇಳು ಹೇಳೆನಗೆ

ಹಿಕ್ಕಿ ಹೇಳಲೇಕೆ ಬೇಕು ಕೇಳ್ ನಿನ್ನ ನಿ । ಮ್ಮಕ್ಕಗೆ ಸವತಿ ಮಾಡುವೆನು
ನಕ್ಕಳೋಡಿದಳು ಕಂಬವ ಮರೆಗೊಂಡಳು । ಜಕ್ಕುಲಿ ಸಂತೋಷಗೊಳುತ

ಕುಸುಮಾಜಿಗೂ ಹರುಷವಾಯಿತು.

ಮಂಗಳೋತ್ಸವವಾಪುದೆಂದು ನಗುತ ತನ್ನ । ತಂಗಿಯೊತ್ತಿಗೆ ತಾನೇ ಹೋಗಿ
ಅಂಗನೆ ಪುರುಷಗುತ್ತರವಿತ್ತ ದೋಷವ । ಹಿಂಗಿಸೆಂಮೊರೆದಳೋಜೆಯೊಳು

ಒಲ್ಲದಂತತ್ತಿತ್ತಲೊಲೆವಳು ನಾಣ್ಚುವ । ಳಲ್ಲಲ್ಲಿ ನಿಲ್ವಳಾ ಕನ್ನೆ
ಬಲ್ಲಿತಾಗಿರಲಕ್ಕ ತೆಗೆದರೆ ಬಂದಂತೆ । ಮೆಲ್ಲನೆ ಬಂದಳಿದಿರಿಗೆ

(೪೫೨ನೆಯ ಪುಟಕ್ಕೆ)




ಶುಕ್ರವಾರ, ಸೆಪ್ಟೆಂಬರ್ ೨೭, ೧೯೪೦

## ಇತಿಹಾಸ ಸಂಶೋಧನೆ

ಮಿಥಿಕ್ ಸೊಸೈಟಿಯ ೩೦ನೆಯ ವರ್ಷ ವರ್ಧಂತಿಯ ಸಮಯದಲ್ಲಿ ರಾಜಮಂತ್ರಪ್ರವೀಣ ಶ್ರೀ॥ ಎನ್. ಮಾಧವ ರಾಯರವರು ಅಗ್ರಾಸನ ವಹಿಸಿ ಅಮೂಲ್ಯವಾದ ಕೆಲವು ಮಾತುಗಳನ್ನು ನುಡಿದರು. ಭರತಖಂಡದ ನಾಗರಿಕತೆಯಲ್ಲಿ ತತ್ತ್ವ ಮೀಮಾಂಸೆಯೂ ಧರ್ಮವೂ ಹೇಗೆ ಹಾಸುಹೊಕ್ಕಾಗಿ ನೆಯ್ದುಕೊಂಡಿವೆ; ನಮ್ಮ ಚರಿತ್ರೆಯ ಅತಿ ದುರ್ದಶೆಯ ಕಾಲದಲ್ಲಿ ಕೂಡ ಜೀವಂತಪ್ರಭಾವಗಳಾಗಿಯೇ ಹೇಗೆ ನಡೆದು ಬಂದಿವೆ; ಮಾನವನ ಮಹಾಕಾಂಕ್ಷೆಗಳೆಲ್ಲ ಮಣ್ಣುಗೂಡಿ ಹೊಸ ಬರ್ಬರತೆಯೊಂದರ ಕಾಲ್ತುಳಿತದಲ್ಲಿ ಅಡಗಿ ನಯದ ಬದುಕು ನಾಶವಾಗುವುದೇನೊ ಎಂಬ ಭಯ ತರುವ ಈ ಕಾಲದಲ್ಲಿ, ವಿಶ್ವ ಪ್ರೇಮ, ಔದಾರ್ಯ, ಸಮಸ್ತ ಲೋಕದ ಮಂಗಳ, ಶಾಂತಿ ಇವುಗಳನ್ನು ಬೋಧಿಸಿದ ಭಾರತ ಧರ್ಮ, ಪ್ರಪಂಚಕ್ಕೆ ಎಷ್ಟು ಮುಖ್ಯವಾದ ಉಪದೇಶ ಎಂಬುದನ್ನು ವಿವರಿಸಿದರು. ಮತ ಧರ್ಮ, ಜನಾಂಗಗಳ ವಂಶಲಕ್ಷಣ ಮತ್ತು ವಿಜ್ಞಾನ, ದಕ್ಷಿಣ ಸಾಹಿತ್ಯ ಮುಂತಾದ್ದಕ್ಕೆ ಸಂಬಂಧಿಸಿದ ಪ್ರಾಚೀನ ಇತಿಹಾಸವನ್ನು ಕುರಿತ ಶೋಧನೆ ಮುಂತಾದ ಅನೇಕವನ್ನು ಸೊಸೈಟಿ ಪ್ರಕಟಿಸಿರುವುದು ತಮಗೆ ಸಂತೋಷವುಂಟುಮಾಡಿದೆ ಎಂದರು. ಸತ್ಯಪರೀಕ್ಷಾ ದೃಷ್ಟಿಯಿಂದ ದೇಶದ ಇತಿಹಾಸವನ್ನೂ ರಾಜಕೀಯ ಭೂವಿವರಣೆಯನ್ನೂ ತಿಳಿದುಕೊಳ್ಳಲು ಅನೇಕ ಬಗೆಯ ಪ್ರಯತ್ನಗಳು ನಡೆಯುತ್ತ ಇರುವುದು ಸಂಶೋಧನೆಗೆ ಸಹಕಾರಿಯಾಗಿದೆ ಎಂದರು. ಇಂಥ ವಿಮರ್ಶೆ ವಿಚಾರಗಳಲ್ಲಿ ಇತಿಹಾಸಕಾರನ ವ್ಯಕ್ತಿಗುಣದ ಪ್ರಭಾವಕ್ಕೆ ಎಡೆ ಇದ್ದರೂ ಯಾವ ಪಕ್ಷಪಾತಕ್ಕೂ ಪೂರ್ವನಿರ್ಣಯಗಳಿಗೂ ಅವಕಾಶವಿಲ್ಲ ಎಂದರು. ಈವರೆಗಾಗಲೇ ಇಂಡಿಯಾ ಸರಕಾರದವರು 'ಹಿಸ್ಟಾರಿಕಲ್ ರೆಕಾರ್ಡ್ಸ್ ಕಮಿಷನ್' ಎಂಬ ಸಮಿತಿಯೊಂದನ್ನು ಏರ್ಪಡಿಸಿ, ಈ ಬಗೆಗೆ ಕಾರ್ಯ ಕೈಕೊಂಡಿರುವುದನ್ನೂ ಪ್ರಾಂತ ಸರಕಾರಗಳೂ ದೇಶೀಯ ಸಂಸ್ಥಾನಗಳೂ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಇಂತಹ ಪರಿಶೀಲನೆಗಳಿಗೆ ಸೌಕರ್ಯ ಕಲ್ಪಿಸಿಕೊಟ್ಟಿರುವುದನ್ನೂ ವಿವರಿಸುತ್ತ, ಮೈಸೂರಿನಲ್ಲಿ ಈವರೆಗೆ ನಡೆದಿರುವ ಶೋಧನೆ ಬಹುಮಟ್ಟಿಗೆ ಫಲಪ್ರದವಾಗಿ ಮುಖ್ಯವಾದ ಹಲವು ವಿಷಯಗಳನ್ನು ಇತಿಹಾಸ ಸಂಶೋಧಕರಿಗೆ ತನ್ನ ಪಾಲಿನ ಕಾಣಿಕೆಯಾಗಿ ಅರ್ಪಿಸಿದೆ ಎಂದರು. ಚಂದ್ರವಳ್ಳಿ ಬ್ರಹ್ಮಗಿರಿಗಳಲ್ಲಿ ನೆಲವನ್ನು ಅಗೆದು ಮೇಲೆತ್ತಿದ ಪ್ರಾಚ್ಯವಸ್ತುಗಳು ಅನೇಕ ಹೊಸ ಸಂಗತಿಗಳನ್ನು ಹೊರಗೆಡವಿವೆ; ಕ್ರಿಸ್ತಪೂರ್ವ ಪ್ರಪಂಚದ ಇತಿಹಾಸದ ನಕ್ಷೆಯನ್ನು ರೂಪುಗೊಳಿಸುವುದರಲ್ಲಿ ಮೈಸೂರಿನ ಈ ಸಂಶೋಧನೆ ಬಹುವಾಗಿ ಸಹಾಯ ಮಾಡುವುದು; ಹುಡುಕುತ್ತ ಹುಡುಕುತ್ತ ಐದನೆಯ ಶತಮಾನದ ಹಲ್ಮಿಡಿಯ ಶಾಸನಕ್ಕಿಂತಲೂ ಹಿಂದಿನ ಶಾಸನಗಳನ್ನು ಕಂಡು ಹಿಡಿದು ಕನ್ನಡದ ಇನ್ನೂ ಹಿಂದಿನ ಚರಿತ್ರೆಯನ್ನು ಒಂದು ಕಡೆಯೂ ಅಶೋಕನ ಕಾಲಕ್ಕಿಂತ ಇನ್ನೂ ಹಿಂದಿನ ನಾಗರಿಕತೆಯ ಸ್ವರೂಪವನ್ನು ಮತ್ತೊಂದು ಕಡೆಯೂ ತಿಳಿಸುವ ಭಾಗ್ಯ ನಮಗೆ ಬರಬಹುದು ಎಂದರು. ವಿಷಯಗರ್ಭಿತವಾಗಿ, ಸಂಶೋಧಕರಿಗೆ ಉತ್ತೇಜಕವಾಗಿ ಇರುವ ಇಂತಹ ಭಾಷಣಗಳಿಂದ ಆಯಾ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ವಿದ್ಯಾರ್ಥಿಗಳ ಶ್ರದ್ಧೆ ಉತ್ಸಾಹ ಹೊಸತಿಕ್ಕಿ ಬಲಗೊಳ್ಳುವುವೆಂದು ಧಾರಾಳವಾಗಿ ಹೇಳಬಹುದು. ಹಲವು ಕೆಲಸಗಳನ್ನು ಮಾಡಿ ಮಾನ್ಯತೆ ಪಡೆದಿರುವ ಮಿಥಿಕ್ ಸೊಸೈಟಿ ವರ್ಷ ವರ್ಷಕ್ಕೂ ಹೆಚ್ಚಿನ ಹಿರಿಮೆಯನ್ನು ಸಂಪಾದಿಸಿಕೊಳ್ಳಲಿ. ಭರತ ಖಂಡದ ಚರಿತ್ರೆಯ ಪುನರ್ನಿರ್ಮಾಣ ಕಾರ್ಯದಲ್ಲಿ ನಮ್ಮ ನಾಡಿಗೆ ಕೀರ್ತಿ ತರುವಂತಹ ಕೆಲಸಗಳನ್ನು ಮಾಡಿ ಕೃತಾರ್ಥವಾಗಲಿ.

ಈಗಾಗಲೆ ಹಲವು ಬಗೆಯ ಇತಿಹಾಸ ಸಂಶೋಧನೆಯ ಕಾರ್ಯಗಳು ದೇಶೀಯ ವಿದ್ವಾಂಸರಿಂದಲೂ ಪಡುವಣ ಶಾಸ್ತ್ರಜ್ಞರಿಂದಲೂ ನಡೆದಿವೆ. 'ಕೇಂಬ್ರಿಜ್ ಹಿಸ್ಟರಿ'ಯಂತಹ ವಿಸ್ತಾರವಾದ ಗ್ರಂಥಗಳಿಂದ ಹಿಡಿದು ಸಣ್ಣ ದೊಡ್ಡ ಅನೇಕ ಗ್ರಂಥಗಳು ಇಡಿಯ ಚರಿತ್ರೆಯ ಕಾಲವನ್ನೆಲ್ಲ ಕುರಿತೋ, ದೇಶದ ಒಂದೊಂದು ಭಾಗದ ಇತಿಹಾಸವನ್ನು ಕುರಿತೋ, ಜನವರ್ಗ, ಅರಸುಮನೆತನಗಳು ಇಲ್ಲವೇ ಅರಸು ವ್ಯಕ್ತಿಗಳನ್ನು ಕುರಿತೋ ಬೇಕಾದಷ್ಟು ಹುಟ್ಟಿವೆ. ಈಚಿನ ಪ್ರಖ್ಯಾತ ಕಾಲಗಳ ಸಂಬಂಧದಲ್ಲಿ ಹೆಚ್ಚು ಕಡಮೆ ನಿಷ್ಕೃಷ್ಟವೆನ್ನಬಹುದಾದ ಇತಿಹಾಸ ಬೆಳೆದಿದೆಯಾದರೂ ಸಮಗ್ರ ಭರತಖಂಡದ ಇತಿಹಾಸದ ಸಂಪೂರ್ಣ ತಿಳಿವಳಿಕೆಗೆ ಬೇಕಾಗುವ ಎಲ್ಲ ಮುಖ್ಯಸಂಗತಿಗಳೂ ದೊರೆಯದೆ, ಶೂನ್ಯತೆ, ಅಜ್ಞಾನ, ಲೋಪ, ದೋಷ ಹಾಗೆ ಹಾಗೆಯೇ ಅಲ್ಲಲ್ಲಿ ಇನ್ನೂ ಉಳಿದಿವೆ. ದೋಷ ಅಳಿದು ತಿಳಿವು ತೀವಿದ ಹೊರತು ನಮ್ಮ ಒಟ್ಟು ಚರಿತ್ರೆಯ ಸಂಪೂರ್ಣ ರೂಪರೇಖೆ ಕಾಣದಾಗುವುದು.

ಅತಿಶಯ ಪ್ರಭಾ ವಿಶಿಷ್ಟವಾದ ಕ್ರಿಸ್ತಪೂರ್ವ ಭರತ ಖಂಡದಚರಿತ್ರೆ ತಿಳಿಯುವಂತಾದರೆ ಆರ್ಯ ದ್ರಾವಿಡ ಸೌಮೇರುಶಾಖೆಗಳ ಪ್ರಾಚೀನ ಇತಿಹಾಸ ಮತ್ತು ಸಂಸರ್ಗಗಳು ಹೇಗೆ ಬೆರೆದು ಸೇರಿದುವು ಎಂಬುದು ಗೊತ್ತಾಗುತ್ತದೆ. ಬಹುವಾಗಿ, ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಿಂದ ಹಿಡಿದು ಕ್ರಿಸ್ತಶಕ ನಾಲ್ಕನೆಯ ಶತಮಾನದವರೆಗಿನ ಚರಿತ್ರೆ ಇನ್ನೂ ನಮ್ಮ ಕಣ್ಣಿಗೆ ಸಮಗ್ರವಾಗಿ ಕಟ್ಟಬೇಕು. ದಕ್ಷಿಣ ಭರತಖಂಡ, ಮಾಳವ ಮಧ್ಯದೇಶ, ಸಿಂಧುಗಂಗಾ ಪ್ರದೇಶ, ವಾಯವ್ಯ ಪ್ರಾಂತ, ಮಗಧಾದಿ ಭಾಗಗಳಲ್ಲಿ ಹೇಗೆ ಚಾರಿತ್ರಕ ಪ್ರಭಾವಗಳು ಆ ಕಾಲದಲ್ಲಿ ರೂಪುಗೊಳ್ಳುತಿದ್ದುವು? ಒಳದೇಶದ ಲಕ್ಷಣ ಪ್ರಾಬಲ್ಯಗಳು ಎಂಥವು? ಹೊರನಾಡಿನವು ಯಾವ ಬಗೆಯ ಶಕ್ತಿ ಬೀರಿದವು ಎಂಬಿವನ್ನು ತಿಳಿದ ಹೊರತು ನಮ್ಮ ಇತಿಹಾಸದಲ್ಲಿ ಒಂದು ಮುಖ್ಯಕಾಲದ ಸ್ವರೂಪಲಕ್ಷಣ ತಿಳಿಯದೆಯೇ ಉಳಿಯುವುದು. ಪ್ರಾಚ್ಯ ಸಂಶೋಧನ ಶಾಖೆಗಳಲ್ಲಿಯೂ, ಪ್ರಾಚ್ಯ ಸಂಗ್ರಹಾಲಯಗಳಲ್ಲಿಯೂ ವಿಶ್ವವಿದ್ಯಾನಿಲಯ ಮುಂತಾದ ಸಂಸ್ಥೆಗಳಲ್ಲಿಯೂ ಅನೇಕ ವಿದ್ವಾಂಸರು ಬಹುವಾಗಿ ಶಾಸ್ತ್ರಶೋಧನೆ, ಚರಿತ್ರೆಯ ಶೋಧನೆ ಮಾಡಿದ್ದಾರೆ. ದಕ್ಷಿಣ

ನಿಜವಾದ ವಿದ್ಯಾವಂತನಲ್ಲಿ ಅವನ ಮನಸ್ಸಿನ ಔದಾರ್ಯಕ್ಕೆ ತಕ್ಕಂತೆ ವಿಶಾಲ ಹೃದಯವೂ ಇದೆಯೆ? ಸಮಾಜ ಕಾರ್ಯಗಳಲ್ಲಿ ಅವನು ನೆರವಾಗುವನೆ? ಎನ್ನುವುದು ಈಗಿನವರ ಪ್ರಶ್ನೆ. ಆದರೆ ಈ ವಿಚಾರದಲ್ಲಿ ಸಂಶಯಕ್ಕೆ ಸ್ವಲ್ಪ ಅವಕಾಶವುಂಟು. ಈ ಬಗೆಯ ಜನ ಈಗ ಹೇರಳವಾಗಿರುವಷ್ಟು ಇನ್ನು ಯಾವ ಕಾಲದಲ್ಲಿಯೂ ಇರಲಿಲ್ಲ. ಯಾವ ಶಾಲೆ, ಯಾವ ವಿಶ್ವವಿದ್ಯಾನಿಲಯದ ಸಂಘವನ್ನು ನೋಡಿ; ಹತ್ತಾರು ವಿದ್ಯಾರ್ಥಿಗಳು ಕೂಡಿ ಮಾತನಾಡುವಾಗ ಇವೇ ಸಮಸ್ಯೆಗಳು ಬರುತ್ತವೆ. ಆದರೆ ಎಲ್ಲ ಮಾತಿನಲ್ಲಿ ಮುಗಿಯುವುದು. ಬಾಳಿಗೆ ಬರುವುದಿಲ್ಲ. ಈ ರೀತಿಯ ಮನಸ್ಸಿನ ಔದಾರ್ಯ ಮತ್ತು ವಿಶಾಲ ಹೃದಯದಿಂದ ಸಮಾಜಕ್ಕೆ ಪ್ರಯೋಜನವಿಲ್ಲ. ಜೊತೆಗೆ ಅವಶ್ಯವಾಗಿ ಬೇಕಾದ್ದು ಜೀವನದಲ್ಲಿ ಒಂದು ಗುರಿ; ಅದನ್ನು ಸಾಧಿಸುವ ಕೆಚ್ಚು, ಛಲ. ಯಾವ ಮನುಷ್ಯನೇ ಆಗಲಿ ತನ್ನನ್ನೂ ತನ್ನ ಸುತ್ತಲಿರುವ ಪ್ರಪಂಚವನ್ನೂ ಹಿರಿಯರಿಂದ ಬಂದ ಅನುಗ್ರಹವೆಂದು ತಿಳಿದು ಸುಮ್ಮನಿರಬಾರದು. ಸುತ್ತಲಿರುವ ಪ್ರಪಂಚವನ್ನು ಉತ್ತಮಗೊಳಿಸುವುದಕ್ಕೋಸ್ಕರ ಅವನ ಸಕಲ ಶಕ್ತಿಗಳನ್ನೂ ಉಪಯೋಗಿಸಬೇಕು. ಪ್ರತಿಯೊಬ್ಬನೂ ಈ ಮಾತುಗಳನ್ನು ಗಮನಿಸುವುದು ಒಳ್ಳೆಯದು. ಈ ಪ್ರಪಂಚದಲ್ಲಿ ನಾನು ಬಂದು ಹೋಗುವುದು ಒಂದೇ ಬಾರಿ; ಆದುದರಿಂದ ನಾನು ಮಾಡಬಹುದಾದ ಒಳ್ಳೆಯ ಕೆಲಸ, ನಾನು ತೋರಿಸಬಲ್ಲ ಕರುಣೆ, ಈಗಲೇ ನಡೆಯಲಿ; ನಾನು ಅದನ್ನು ಅಲಕ್ಷ್ಯಮಾಡಬಾರದು; ನಾನು ಪುನಃ ಈ ದಾರಿಯಲ್ಲಿ ಬರುವುದಿಲ್ಲ. ಈ ಮನೋಭಾವ ವಿದ್ಯಾವಂತನಿಗೆ ಆವಶ್ಯಕವಾದ್ದು.

ಮನಸ್ಸು ಹೃದಯಗಳ ಆರೋಗ್ಯದ ಜೊತೆಯಲ್ಲಿ ಅವರು ದೇಹದಾರ್ಢ್ಯವನ್ನೂ ದೇಹಾರೋಗ್ಯವನ್ನೂ ಸರಿಯಾಗಿ ನೋಡಿಕೊಳ್ಳಬೇಕು. ಅವನ ಸನ್ನಿವೇಶ ಸಂದರ್ಭಗಳು ಅವನಿಗೆ ನೆರವಾಗಿ, ಎಷ್ಟು ಉತ್ತಮವಾದ ಜೀವನವನ್ನು ನಡಸಲು ಅವನಿಗೆ ಸಾಧ್ಯವೋ, ಯಾವ ಉನ್ನತಿಯಲ್ಲಿರಲು ಸಾಧ್ಯವೋ ಅಲ್ಲಿಯೇ ಅವನಿರುವನು. ಮನಃಪೂರ್ವಕವಾಗಿ ಅವನು ಮೇಲ್ಮಟ್ಟದಿಂದ ಕೆಳಗಿಳಿಯುವುದಿಲ್ಲ. ಅನಾರೋಗ್ಯ ರೋಗರುಜಿನಗಳು ದೇಹಕ್ಕೆ ತೊಂದರೆಯನ್ನುಂಟುಮಾಡುವುವು. ವಿದ್ಯಾವಂತನು ಅವನ್ನು ಮೆಟ್ಟಿ ತನ್ನ ಮನಸ್ಸನ್ನೂ ಆತ್ಮವನ್ನೂ ಮೇಲ್ಮಟ್ಟದಲ್ಲಿ ಇಡಬಲ್ಲನು. ಬದುಕಿನಲ್ಲಿ ಅವನ ಒಂದೇ ಸಂಕಲ್ಪ, ಪ್ರತಿಯೊಂದು ಬಗೆಯ ಜೀವನದಲ್ಲಿಯೂ ಉತ್ತಮವಾದ್ದನ್ನು ನಡಸಬೇಕೆನ್ನುವುದು.

ಶಾಲೆಗಳಲ್ಲಿ, ವಿಶ್ವವಿದ್ಯಾನಿಲಯಗಳಲ್ಲಿ ದೊರೆಯುವ ವಿದ್ಯಾಭ್ಯಾಸ ಮನಸ್ಸಿಗೆ ತಿಳಿವನ್ನು ಮಾತ್ರ ತುಂಬುತ್ತದೆ. ಜೀವನದ ಸಮಸ್ಯೆಗಳನ್ನು ಪರಿಹರಿಸುವ ಬಗೆಯನ್ನು, ಮ್ಯುನಿಸಿಪಲ್ ಕೌನ್ಸಿಲರ್ ಕೆಲಸವನ್ನು ಅಥವಾ ರಾಜಕೀಯ ಕಾರ್ಯವನ್ನು ನಡಸುವ ಬಗೆಯನ್ನು ಹೇಳಿಕೊಡುವುದಿಲ್ಲ. ಜ್ಞಾನಾರ್ಜನೆ ಒಂದೇ ಸಾಲದು. ವಿದ್ಯಾವಂತನಿಗೆ ಬೇಕಾದ್ದು ಆಲೋಚನಾಶಕ್ತಿ. ಎರಡು ಸಂಗತಿಗಳನ್ನು ತೂಕಮಾಡುವುದು; ಕೇವಲ ಭಾವನಾರೂಪವಾದ ತತ್ವವನ್ನು ಸಮಯೋಚಿತವಾದ ನಡವಳಿಕೆಯೊಡನೆ ಹೋಲಿಸುವುದು; ಮನಸ್ಸಿನಲ್ಲಿ ಮುಂಚೆಯೇ ಇದ್ದ ಭಾವನೆಗಳಿಗೂ ಸತ್ಯಾಂಶಕ್ಕೂ ವಿರೋಧವುಂಟಾದಾಗ, ಅಹಿತವಾಗಿ ಕಂಡರೂ ಸರಿಯಾದ ನಿರ್ಣಯಕ್ಕೆ ಬರುವ ಶಕ್ತಿ; ಬುದ್ಧಿಪೂರ್ವಕವಾಗಿ ಚರ್ಚೆಮಾಡುವ ಶಕ್ತಿ. ಈ ಚರ್ಚೆಯಿಂದಲೂ ಒಳ್ಳೆಯ ತತ್ವಗಳಿಂದಲೂ ನಡತೆಯನ್ನು ಸರಿಪಡಿಸಿಕೊಳ್ಳುವುದು ಬಹು ಮುಖ್ಯ. ರಾಜನೀತಿಯಲ್ಲಿ, ಸಾಮಾಜಿಕ ಜೀವನದಲ್ಲಿ ವಿಶ್ವವಿದ್ಯಾನಿಲಯಗಳ ಪದವೀಧರರು ಸೋಲುವುದೂ ಆ ಬಗೆಯ ವಿದ್ಯಾಭ್ಯಾಸವೇ ಇಲ್ಲದವರು ಜಯಶೀಲರಾಗಿರುವುದೂ ಎಲ್ಲರೂ ತಿಳಿದಿರುವ ಅಂಶ. ಎಲ್ಲ ಮಟ್ಟದ ಉಪಾಧ್ಯಾಯರೂ ಅವರ ಕರ್ತವ್ಯವನ್ನು ಸುಧಾರಿಸಿಕೊಳ್ಳುವುದು ಒಳ್ಳೆಯದು. ವಿದ್ಯಾರ್ಥಿಗಳಿಗೆ ಚರಿತ್ರೆಯಲ್ಲಿ ಜೀವನದಲ್ಲಿರುವ ವಿಷಯಗಳನ್ನು ಹೇಳಿದರೆ ಸಾಲದು. ಅವುಗಳ ಸೂಕ್ಷ್ಮವಿಚಾರ ಮಾಡಿ, ಸ್ವತಂತ್ರ ನಿರ್ಣಯಕ್ಕೆ ಬರುವಂತೆ ಅವರಿಗೆ ಸಾಮರ್ಥ್ಯವನ್ನುಂಟುಮಾಡಬೇಕು. ವಿದ್ಯಾರ್ಥಿಗೆ ವಿವೇಚನಾಶಕ್ತಿ ಬಹಳ ಆವಶ್ಯಕ.

ವೃತ್ತಪತ್ರಿಕೆಗಳು, ರೇಡಿಯೋ ಮುಂತಾದ ಪ್ರಚಾರ ಸಲಕರಣಗಳು ಹೆಚ್ಚಿರುವ ಕಾಲದಲ್ಲಿ ಸ್ವತಂತ್ರವಾಗಿ ಯೋಚನೆಮಾಡುವ ಶಕ್ತಿ ಬಹಳ ಅಮೂಲ್ಯ. ವಿವೇಚನೆಯನ್ನು ಮಾಡದೆ ಇತರರು ಹೇಳಿದ್ದನ್ನು ಸತ್ಯವೆಂದೂ ಒಳ್ಳೆಯದೆಂದೂ ಸ್ವೀಕರಿಸಿದರೆ ಆಗ ಒಬ್ಬ ಮನುಷ್ಯನ ವ್ಯಕ್ತಿತ್ವಕ್ಕೇ ಚ್ಯುತಿ ಉಂಟಾಗುವುದು. ಒಟ್ಟಿನಲ್ಲಿ ಹೇಳಿದರೆ ವಿದ್ಯಾವಂತನ ಮುಖ್ಯ ಲಕ್ಷಣ ಇದು: ಜ್ಞಾನ ಪ್ರಪಂಚಕ್ಕೆ ಸಂಬಂಧಪಟ್ಟ ಅವನ ಮನೋಭಾವ ಅವನನ್ನು ಸ್ವತಂತ್ರ ತೀರ್ಮಾನಕ್ಕೆ ಬರುವಂತೆ ಮಾಡುವುದು. ಅವನು ದೇಹವನ್ನು ಸ್ವತಂತ್ರ ತೀರ್ಮಾನದ ಗುಡಿಯಂತೆ ಭಾವಿಸಿ ಅದರ ಶಕ್ತಿಗಳನ್ನು ಕೈಯಲ್ಲಾದಮಟ್ಟಿಗೂ ಕಾಪಾಡಿಕೊಳ್ಳುವನು. ಸಾಮಾಜಿಕ ಆಧ್ಯಾತ್ಮಿಕ ಸಂಬಂಧವಾಗಿರುವ ಅವನ ಮನೋಭಾವ, ಅವನು ಆರಿಸಿರುವ ಗುರಿಯ ಸಾಧನೆಗೆ ಅವನ ಸರ್ವವಿಧವಾದ ಶಕ್ತಿಗಳನ್ನೂ ಸ್ವತಂತ್ರ ಯೋಚನಾಶಕ್ತಿಯನ್ನೂ ಉಪಯೋಗಿಸುವಂತೆ ಮಾಡುವುದು. ಸ್ವತಂತ್ರ ಯೋಚನಾಶಕ್ತಿಯೇ ಮಾನವನ ಪ್ರಗತಿಯ ಆದರ್ಶವೆಂದು ಅವನು ತಿಳಿದಿರುವನು.

ಎಸ್. ಮಂಜನಾಥ್.

---

## ಕವಿಯ ಕೀರ್ತಿ.

(ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.)

ಆಕಾಶ ನಿರ್ಮಲವಾಗಿತ್ತು. ಮಂದಮಂದವಾಗಿ ವಾಯುದೇವನು ಬೀಸುತ್ತಿದ್ದ ಕಾರಣ ಯಮುನೆ ನಿಧಾನವಾಗಿ ಪ್ರವಹಿಸುತ್ತಿದ್ದಳು. ಪ್ರಾತಃಕಾಲ. ಭಗವಾನ್ ಸೂರ್ಯದೇವನು ತನ್ನ ಹೊನ್ನಿನ ಕಿರಣಗಳನ್ನು ಪ್ರಸರಿಸುತ್ತ ಉದಯಿಸುತ್ತಿದ್ದನು. ಸುಪ್ತವಾಗಿದ್ದ ಆಗ್ರಾನಗರ ಕ್ರಮಕ್ರಮವಾಗಿ ಎಚ್ಚರಗೊಳ್ಳುತ್ತಲಿತ್ತು. ರಾಜಧಾನಿಗೆ ಕಾರ್ಯಾರ್ಥಿಗಳಾಗಿ ಹೋಗುತ್ತಿದ್ದ ಪ್ರಯಾಣಿಕರನ್ನೊಳಗೊಂಡ ಹರಿಗೋಲೊಂದು ನದಿಯಲ್ಲಿ ತೇಲುತ್ತಿತ್ತು. ಹರಿಗೋಲು ನಡುಹೊಳೆಗೆ ಬರಲು ಅಂಬಿಗನು ಪ್ರಯಾಣಿಕರಿಂದ ಹಣವನ್ನು ಬರಮಾಡಿಕೊಳ್ಳತೊಡಗಿದನು. ಎಲ್ಲರ ಸರದಿ ಮುಗಿದ ಮೇಲೆ ತೇಜಸ್ವಿಯಾದ ಬ್ರಾಹ್ಮಣನೊಬ್ಬನ ಸರದಿ ಬಂತು. ಬ್ರಾಹ್ಮಣ ಮಧ್ಯವಯಸ್ಸಿನವನು. ಗಿಡ್ಡಾದ ಗುಂಡಾದ ಮಟ್ಟಸನಾದ ಆಳು. ಮುಖದಲ್ಲಿ ಪಾಂಡಿತ್ಯದ ಕಳೆ ಉಕ್ಕುತಿದೆ. ಆದರೇನು? ಅತ್ತೆಸೊಸೆಯರಿಗೆ ಬದ್ಧದ್ವೇಷ. ಪಂಡಿತನು ಧರಿಸಿದ್ದ ವಸ್ತ್ರ, ಅವನ ದಾರಿದ್ರ್ಯವನ್ನು ಚೆನ್ನಾಗಿ ವ್ಯಕ್ತಪಡಿಸುತ್ತಿತ್ತು. ಕಂಕುಳಲ್ಲೊಂದು ಓಲೆಗರಿಯ ಪುಸ್ತಕ. ಅಂಬಿಗನಿಗೆ ಪಂಡಿತನಾದರೇನು? ಪಾಮರನಾದರೇನು? ಹರಿಗೋಲಿನಲ್ಲಿ ಕುಳಿತವರೆಲ್ಲರೂ ಅವನ ಭಾಗಕ್ಕೆ ಒಂದೇ. ಪಂಡಿತನನ್ನು ಅಂಬಿಗನು ಹಣ ಕೇಳಲು,

"ಅಯ್ಯಾ, ಈಗ ನನ್ನಲ್ಲಿ ಹಣವಿಲ್ಲ" ಎಂದ.

"ಹಾಗಾದರೆ ಹರಿಗೋಲಿನಿಂದ ಇಳಿದುಬಿಡು"

ಮಧ್ಯನದಿಯಲ್ಲಿ ಇಳಿದುಬಿಡಲಾಗುತ್ತದೆಯೇ? ನಡು ಹೊಳೆಯಲ್ಲಿ ಅಂಬಿಗನೊಡನೆ ದ್ವೇಷಕಟ್ಟಿಕೊಳ್ಳುವುದು ಅನುಚಿತ. ಉಪಾಯದಿಂದ ಆಚೆದಡವನ್ನು ಸೇರಬೇಕೆಂದು ಬಗೆದು,

"ಅಯ್ಯಾ, ಆಚೆಯ ದಡ ಸೇರಿ, ರಾಜಧಾನಿಯನ್ನು ಹೊಕ್ಕು ಚಕ್ರವರ್ತಿ ಷಾಜಹಾನನನ್ನು ಕಾಣುತ್ತೇನೆ. ಈ ಕಾವ್ಯವನ್ನು ಆತನಿಗೆ ತೋರಿಸಿದರೆ ಪ್ರತಿಸಾರಿ ಕೊಟ್ಟಂತೆ ಸಂಭಾವನೆ ಕೊಡುತ್ತಾನೆ. ಬಂದ ಹಣದಲ್ಲಿ ಒಂದಕ್ಕೆ ಎರಡು ಕೊಡುತ್ತೇನೆ. ಅಲ್ಲಿಯವರೆಗೆ ತಡೆ" ಎಂದ.

ಅಂಬಿಗನು ಇದಕ್ಕೊಪ್ಪಲಿಲ್ಲ. ದುಡ್ಡಿಲ್ಲದ ಕಾರಣ ಹಿಂದೆ ಅನೇಕಾವರ್ತಿ ಅಂಬಿಗನು ಈ ಬ್ರಾಹ್ಮಣನನ್ನು ಹರಿಗೋಲಿನೊಳಕ್ಕೆ ಸೇರಿಸಿರಲಿಲ್ಲ. ಇಂದು ಪಂಡಿತನು ಬಲಾತ್ಕಾರದಿಂದ ಹರಿಗೋಲಿನೊಳಕ್ಕೆ ಕುಳಿತುಕೊಂಡಿದ್ದುದರಿಂದಲೂ, ಹರಿಗೋಲು ನಡುಹೊಳೆಯಲ್ಲಿ ಹೋಗುತ್ತಿದ್ದುದರಿಂದಲೂ, ಅಂಬಿಗನು ಏನೂ ಮಾಡುವಂತಿರಲಿಲ್ಲ. ಆದರೂ ದರ್ಪದಿಂದ,

"ನೀನೇನು ದೊಡ್ಡ ಕವಿಯೋ, ಓಲೆಗರಿಯಲ್ಲಿರುವುದೇನು ತೆಗೆ, ನೋಡೋಣ. ಹೋದಕೂಡಲೇ ಚಕ್ರವರ್ತಿ ನಿನ್ನನ್ನು ನೋಡು

(೪೪೯ನೆಯ ಪುಟದಿಂದ)

ಪಾವಕೆರಗು ನಡೆಯೆಂಬಳೊತ್ತಿಗೆ ಪೋಗ । ಲಾದಲ್ಲಿ ರಗೆಂಬಳವಕೆ
ಆದರಿಸುತ ಸಲ್ಮೆಕೊತ್ತಿ ಬಿಗ್ಗಿಸಿದಂತೆ । ನೋಡಿಸಲೊಡನೆರಗಿದಳು

ತಪ್ಪ ಪಾಲಿಪುದೆನ್ನ ತಂಗಿಯೆಂದಳು ಪೋಗು । ತಪ್ಪೆನಗಿಲ್ಲ ನಿನ್ನಿನಿಯ
ತಪ್ಪದೆ ಗಿಳಿಯು ತಂತ್ರವ ಪೇಳ್ದೆರಗಿದೆ । ನೊಪ್ಪುಗೊಳ್ಳಿಸುತೆಪ್ಪೊಡನೆ

ಆ ವೇಳೆಗೆ

ಸಾಲದೆ ಇವಳೊಡನಾಟ ಭೋಜನಕಿನ್ನು । ವೇಳೆ ವೆಗ್ಗಳಿಸಿದೆ ದೇವ
ಮೇಲಣ ನೆರೆಯು ಪ್ಪಾಳಿಗೆಗೆ ಚಿತ್ತೈಸೆಂದು । ಲೋಲಾಕ್ಷಿ ಬಿನ್ನವಿಸಿದಳು

ಅರಸನು ಪಕ್ಕದಲ್ಲಿದ್ದ ಅಮೃತವಾಚಕನ ಮೈತಡವಿ ಮೇಲೆದ್ದ. ಆಹಾರ ವಾಯಿತು. ವಿಶ್ರಾಂತಿಯಾಯಿತು. ಬಳಿಕ ಕುಸುಮಾಜಿ

ಕನ್ನಡಿಯೊಳು ಹೊಳೆಹೊಳೆದು ಮೊಗವನೋಡಿ । ಚೆನ್ನಾಗಿ ತಿಲಕವ ತಿದ್ದಿ
ಛನ್ನ ಕುಂತ್ತಳವ ಸಾಗಿಸಿಕೊಳುತೊಯ್ಯನೆ । ತನ್ನ ತಾ ನಕ್ಕಳುಬ್ಬಿನೊಳು

ನಗುತ ಭೂಪತಿಯೆದ್ದನಲ್ಲಿಂದ ಮುಂದಣು । ಜ್ಜುಗವನವರೆ ಬಲ್ಲರದರ
ಸೊಗಸನಂತಿಂತೆಂದು ನುಡಿದೆನಾದರೆ ಬಲು । ಹಗರಣವಹುದದಂತಿರಲಿ

—ಇಲ್ಲಿಗೆ ಇದು, 'ರಾಜಲಾವಣ್ಯಸಂಧಿ' ಮೊದಲಾಗಿ 'ಸನ್ಮಾನ ಸಂಧಿ' ಕಡೆಯಾಗಿ ಐದು ಸಂಧಿಗಳಲ್ಲಿ ಹರಡಿಕೊಂಡಿರುವ ಒಂದು ಹಿರಿಯಲೆಯ ಕಿರಿಯ ಪರಿಚಯ.

**—ಜಿ. ಪಿ. ರಾಜರತ್ನಂ.**

---

# ವಿದ್ಯಾವಂತನ ಲಕ್ಷಣ

**ವಿದ್ಯಾ ದದಾತಿ ವಿನಯಂ । ವಿನಯಾದ್ ಯಾತಿ ಪಾತ್ರತಾಂ**

ಪ್ರತಿ ಶತಮಾನವೂ ಒಪ್ಪುವ ಉತ್ತರವನ್ನು ಮೇಲಿನ ಪ್ರಶ್ನೆಗೆ ಹೇಳುವುದಾಗಲಿ, ಮೇಲೆ ಕೊಟ್ಟಿರುವ ಶ್ಲೋಕದ ಅರ್ಥದಲ್ಲಿ ನಂಬಿಕೆಯನ್ನು ಪೂರ್ಣವಾಗಿ ಇಡುವುದಾಗಲಿ ಸಾಧ್ಯವಿಲ್ಲ. ವಿದ್ಯಾವಂತನ ಲಕ್ಷಣಗಳು ಪ್ರತಿಯೊಂದು ಜನಾಂಗಕ್ಕೂ ಕಾಲಕ್ಕೂ ಬೇರೆಯಾಗಿ ಕಾಣುವುದು ಸಹಜವೇ ಸರಿ. ಈಗ ಒಂದೆರಡು ಶತಮಾನಗಳ ಹಿಂದೆ ಇದ್ದ ಜ್ಞಾನದ ವಿಸ್ತಾರವನ್ನೂ, ವಿಜ್ಞಾನದ ಬೆಳವಣಿಗೆಯಾದನಂತರ ಈ ಶತಮಾನದಲ್ಲಿರುವ ಜ್ಞಾನಪ್ರಪಂಚವನ್ನೂ ಹೋಲಿಸಿದರೆ ಈಗಿನದು ನೂರರಷ್ಟು ಏಕೆ ಒಂದು ಸಾವಿರದಷ್ಟು ಹೆಚ್ಚಾಗಿದೆ. ಆದುದರಿಂದ ಸುಮಾರು ಇನ್ನೂರು ವರ್ಷಗಳ ಕೆಳಗಿನ ಸಮಾಜದಲ್ಲಿ ವಿದ್ಯಾವಂತ ರೆಂದೆನಿಸಿದವರ ಲಕ್ಷಣವನ್ನು ಪರಿಶೀಲಿಸಿದರೆ, ಸಾಮಾನ್ಯವಾಗಿ ಅವರು ಸಕಲಶಾಸ್ತ್ರ ಪಂಡಿತರಾಗಿದ್ದ ಹಾಗೆ ಕಾಣುವುದು. ಇದು ಯೂರೋಪಿನ ಸಮಾಜಗಳಿಗೆ ಚೆನ್ನಾಗಿ ಒಪ್ಪುವ ಮಾತು. ಹೊಟ್ಟೆಯ ಪಾಡಿಗೆ ಹೋರಾಡುವ ಆವಶ್ಯಕತೆಯಿಲ್ಲದವರು, ಹಳ್ಳಿಗಾಡುಗಳಲ್ಲಿ ಬಂಗಲೆಗಳನ್ನು ಕಟ್ಟಿ ಪುಸ್ತಕ ಭಂಡಾರಗಳನ್ನು ನಿರ್ಮಿಸಿಕೊಂಡು ನಾಲ್ಕಾರು ಶಾಸ್ತ್ರಗಳನ್ನು ಓದುತ್ತಿದ್ದರು. ಈಗಲಾದರೋ ಒಂದೊಂದು ಶಾಸ್ತ್ರವೂ ಅಪಾರವಾಗಿ ಬೆಳೆದಿದೆ. ಒಂದು ಶಾಸ್ತ್ರದ ಅನೇಕ ಅಂಗಗಳಲ್ಲಿ ಒಂದನ್ನಾದರೂ ಆಮೂಲಾಗ್ರವಾಗಿ ಓದಿ, ಇನ್ನು ಓದಬೇಕಾದ್ದಿಲ್ಲ ಎಂದು ಹೇಳುವುದು ಈಗ ಕಷ್ಟಸಾಧ್ಯ. ವಿಜ್ಞಾನಶಾಸ್ತ್ರಗಳಲ್ಲಿ ಪರಿಶೋಧಕರು ಅಸಂಖ್ಯಾತರಾಗಿರುವರು. ಕಳೆದ ತಿಂಗಳು ಅಚ್ಚಾದ ಪುಸ್ತಕವನ್ನು ಓದಿಮುಗಿಸುವುದರೊಳಗೆ ಅದೇ ಸಂಬಂಧವಾಗಿ ಒಂದೆರಡೋ, ನಾಲ್ಕಾರೋ ಪುಸ್ತಕಗಳು ಅಚ್ಚಾಗಿಬರುವುವು. ಆದುದರಿಂದ ಚತುಶ್ಶಾಸ್ತ್ರ ಪಾಂಡಿತ್ಯ, ಸಕಲಶಾಸ್ತ್ರ ಪಾಂಡಿತ್ಯ, ಈಗ ಅಸಾಧ್ಯ. ಒಬ್ಬೊಬ್ಬರು ಅಂಶಪುರುಷರಿರಬಹುದು. ಆದರೆ ವಿದ್ಯಾವಂತರ ಸಾಮಾನ್ಯ ಲಕ್ಷಣವಲ್ಲ ಅದು.

ವಿದ್ಯೆ ವಿನಯವನ್ನೂ, ವಿನಯ ಪಾತ್ರತೆಯನ್ನೂ ಕೊಟ್ಟರೆ ಆ ವಿದ್ಯೆ ಸರಿಯಾದ ವಿದ್ಯೆ. ಆದರೆ ಈಗಿನ ವಿದ್ಯಾಭ್ಯಾಸ ಮನುಷ್ಯನಿಗೆ ಪ್ರಪಂಚದಲ್ಲಿ ಸರಿಯಾಗಿ ಬಾಳಲು ಆವಶ್ಯಕವಾದ ಗುಣಶೀಲಗಳನ್ನು ಕೊಡುತ್ತಿಲ್ಲವೆಂದು ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಜನ ಹೇಳುವರು. ಈಗಿನ ಶಿಕ್ಷಣಕ್ರಮದಲ್ಲಿ ಲೋಪದೋಷಗಳು ಬಹಳವೆಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಹೇಳುವುದು ಯಾವ ಶಿಕ್ಷಣಪದ್ಧತಿಯೂ ಮನುಷ್ಯನನ್ನು ವಿದ್ಯಾವಂತನನ್ನಾಗಿ ಮಾಡುವುದಿಲ್ಲ ಎಂದು. ವಿಶ್ವವಿದ್ಯಾನಿಲಯಗಳಲ್ಲಿ ನಾಲ್ಕಾರು ವರ್ಷ ಓದಿ ಪದವಿಯನ್ನು ಪಡೆದವರು ವಿದ್ಯಾವಂತರಾಗಿಲ್ಲದಿರಬಹುದು. ವಿಶ್ವವಿದ್ಯಾನಿಲಯಗಳನ್ನು ಪ್ರವೇಶ ಮಾಡದೇ ಇರುವವರು ವಿದ್ಯಾವಂತರಾಗಿರಬಹುದು. ಯಾವ ವಿದ್ಯಾಭ್ಯಾಸವೂ ಒಣ ವಿಷಯಗಳನ್ನು ವಿದ್ಯಾರ್ಥಿಯ ತಲೆಗೆ ತುಂಬಿದರೆ ಅವನು ವಿದ್ಯಾವಂತನಾಗುವುದಿಲ್ಲ. ಶಿಕ್ಷಣಕ್ರಮ ಅವನ ಮನಸ್ಸಿನ ದಾಹ, ತೀಕ್ಷ್ಣತೆಗಳನ್ನು ಹೆಚ್ಚಿಸಬೇಕು. ಒಟ್ಟಿನಲ್ಲಿ ಅವನ ಆತ್ಮದ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡಬೇಕು. ಆದ್ದುದರಿಂದ ವಿದ್ಯಾವಂತರ ವಿಚಾರಮಾಡುವಾಗ ವಿದ್ಯಾಭ್ಯಾಸ ಕ್ರಮವನ್ನು ವಿಚಾರ ಮಾಡುವುದು ಅಗತ್ಯವಾಗುವುದು. ಈ ವಿಷಯವನ್ನು ಚರ್ಚಿಸಿರುವ ನಾಲ್ಕಾರು ಜನ ಅವರ ಅನುಭವಕ್ಕನುಸಾರವಾಗಿ ವಿದ್ಯಾವಂತನ ಲಕ್ಷಣಗಳನ್ನು ಹೇಳಿರುವರು. ಎರಡು ವರ್ಷಗಳ ಹಿಂದೆ ಇಂಗ್ಲೆಂಡಿನ ವಾರಪತ್ರಿಕೆಯೊಂದರಲ್ಲಿ ಪ್ರಕಟವಾದ ನಾಲ್ಕು ಲೇಖನಗಳ ಸಾರಾಂಶವನ್ನು ಕೆಳಗೆ ಕೊಟ್ಟಿದೆ.

—೧—

**ದಿ ರೈಟ್ ಆನರಬಲ್ ಹರ್ಬರ್ಟ್ ಮಾರಿಸನ್ ಎಂ. ಪಿ.**

ಇಡಿಯ ಪ್ರಪಂಚವೇ ಒಪ್ಪುವಂಥ ಸಂಪೂರ್ಣ ಲಕ್ಷಣಗಳನ್ನು ಹೇಳುವುದು ಅಸಾಧ್ಯವಾದುದರಿಂದ ಈಗಿನ ಇಂಗ್ಲೆಂಡನ್ನು ಹಿನ್ನೆಲೆಯಾಗಿಟ್ಟುಕೊಂಡು ವಿದ್ಯಾವಂತನ ಲಕ್ಷಣಗಳನ್ನು ಹೇಳಬೇಕು. ಈಗಿನ ಪ್ರಪಂಚದಲ್ಲಿ ತಿಳಿವಳಿಕೆಯೆಂದರೆ ನಾವು ಕಲಿಯಬೇಕಾದ್ದು ಇನ್ನೂ ಎಷ್ಟಿದೆ ಎಂದು ತಿಳಿಯುವುದು. ಇದು ಮನಸ್ಸಿನ ನಿಷ್ಪೃಷ್ಟಭಾವ; ಪಾಂಡಿತ್ಯದ ಗಟ್ಟಿತಿರುಳಲ್ಲ. ಒಬ್ಬ ಮನುಷ್ಯನನ್ನು ವಿದ್ಯಾವಂತರ ಗುಂಪಿಗೆ ಸೇರಿದವನೇ ಎಂದು ಅವನ ಸ್ನೇಹಿತರು ಪರೀಕ್ಷಿಸುವಾಗ ಅವರು ಅವನಲ್ಲಿ ಕಾಣಬೇಕಾದ್ದು ಮನಸ್ಸಿನ ಒಂದು ವಿನ್ಯಾಸವನ್ನು. ನಾನು ವಿದ್ಯಾವಂತನೇ ಎನ್ನುವ ಪ್ರಶ್ನೆಯನ್ನು ಅವನು ತನಗೇ ಅನ್ವಯಿಸಲು ಇದು ಅವನಿಗೆ ಎಡೆ ಕೊಡುವುದಿಲ್ಲ. ಇದು ಮೊದಲ ಲಕ್ಷಣ.

ವಿದ್ಯಾವಂತನ ಎರಡನೆಯ ಲಕ್ಷಣ, ಅವನ ಪಾಂಡಿತ್ಯದ ವಿಸ್ತರವಲ್ಲ. ಜೀವನದ ಸಮಸ್ಯೆಗಳನ್ನು ಪರಿಹಾರ ಮಾಡಲು ಅವನಿಗೆ ದೊರೆಯುವ ತಿಳಿವನ್ನು ಅವನು ಶೇಖರಿಸುವುದರಲ್ಲಿ, ವಿಂಗಡಿಸುವುದರಲ್ಲಿ, ಒಟ್ಟುಗೂಡಿಸುವುದರಲ್ಲಿ ತೋರಿಸುವ ಸ್ವಾತಂತ್ರ್ಯ, ಹೊಂದಿಕೆ ಮತ್ತು ಸೂಕ್ಷ್ಮಬುದ್ಧಿ. ಬದುಕಿನ ಸಮಸ್ಯೆಗಳ ಪರಿಹಾರಕ್ಕೆ ಸಲಹೆಗಳನ್ನು ಕೇಳಲು ಜನ ಹೋಗುವುದು, ಪಂಡಿತನ ಬಳಿಗಾಗಲಿ, ಚತುರತೆಯಿಂದ ಸಿದ್ಧಗೊಳಿಸಿದ ಉತ್ತರವನ್ನು ಕೇಳಿದ ಕೂಡಲೆ ಹೇಳುವ ಮನುಷ್ಯನ ಬಳಿಗಾಗಲಿ ಅಲ್ಲ. ನಿಜವಾಗಿಯೂ ವಿದ್ಯಾವಂತನಾದ ಮನುಷ್ಯನು ತಿಳಿದಿರುವನು, ಈ ಉತ್ತರವನ್ನು ಪ್ರಯೋಗ ಮಾಡಿದರೆ, ಅದರಲ್ಲಿ ಲೋಪದೋಷಗಳು ಒಂದು ಬಗೆಯಲ್ಲಿ ಅಲ್ಲದಿದ್ದರೆ ಇನ್ನೊಂದು ಬಗೆಯಲ್ಲಿ ಕಾಣಬಹುದು ಎಂದು. ಇಷ್ಟೇ ಅಲ್ಲ. ಈ ವಿಚಾರ ಅವನಿಗೆ ತಿಳಿದಿಲ್ಲವೆಂದು ಒಪ್ಪಿಕೊಳ್ಳುವನು. ಆದರೆ ತಿಳಿವಿನ ಭೂವಿವರಣೆ ಅವನಿಗೆ ಗೊತ್ತು. ಅದರ ಸಹಾಯದಿಂದ ಅವನು ಎಲ್ಲಿಂದ ವಿಷಯ ಸಂಗ್ರಹ ಮಾಡಬೇಕು, ಯಾವ ಬಗೆಯಲ್ಲಿ ಸಮಸ್ಯೆಗೆ ಪರಿಹಾರವನ್ನು ಯೋಚಿಸಬೇಕು ಎಂದು ಪ್ರಯತ್ನ ಮಾಡಲು ಸಮರ್ಥನು. ಅವನ ಮನಸ್ಸು ಪೂರ್ವನಿರ್ಣಯಗಳಿಂದ ಕೆಟ್ಟು ಹೋಗಿಲ್ಲ. ಆದುದರಿಂದಲೇ ಅವನು ಉತ್ತಮವಾದ ಅಂಶಗಳನ್ನು ಆರಿಸಿ ಶ್ರೇಷ್ಠವಾದ ಪರಿಹಾರವನ್ನು ಕೊಡಬಲ್ಲನು.

ಜ್ಞಾನದ ಪ್ರಪಂಚಕ್ಕೂ ವಿದ್ಯಾವಂತನಿಗೂ ಈ ಬಗೆಯ ಸಂಬಂಧವಿದ್ದರೆ, ಅವನಿಗೂ ನೈತಿಕ ಅಥವಾ ಆಧ್ಯಾತ್ಮಿಕ ಪ್ರಪಂಚಕ್ಕೂ ಏನು ಸಂಬಂಧ? ಅವನಿಗೂ ಸಮಾಜ ಜೀವನಕ್ಕೂ ಏನು ಸಂಬಂಧ? ಪ್ರತಿಯೊಬ್ಬನೂ ಸ್ವಂತಕ್ಕೆ ಸಂಬಂಧಪಟ್ಟ ವಿಚಾರಗಳನ್ನು ನೋಡಿಕೊಂಡರೆ ಸಾಕು ಎನ್ನುವ ಕಾಲ ಹೋಯಿತು. ವೈಯಕ್ತಿಕವಾಗಿ ಸಮಾಜ ಸೇವೆಯನ್ನು ಮಾಡುವುದು ಮತ್ತು ದೊಡ್ಡ ದೊಡ್ಡ ಸಂಸ್ಥೆಗಳಲ್ಲಿ ಸೇರಿ ಅವುಗಳ ಕಾರ್ಯಗಳಲ್ಲಿ ಸಹಕರಿಸುವುದು ಈಗಿನ ನೀತಿ.

Reg.No.M.3975
ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ : ೬ ಕಾಸು

ವಾರ್ಷಿಕ ಚಂದಾ : ರೂ. ೧-೮-೦
ಪರಿಷತ್ತಿನ ಸದಸ್ಯರಿಗೆ ಉಚಿತ
ಅಂಚೆ ವೆಚ್ಚ ಬೇರೆ : ೧೨ ಆಣೆ




ಸಂಪುಟ ೨
ಸಂಚಿಕೆ ೪೯

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೪, ೧೯೪೦

ಸಂಪಾದಕ :
ಬಿ. ವೆಂಕೋಬರಾವ್, ಬಿ.ಎ.

## ಕೆಲವು ಚಾಟುಗಳು

(ಸಂಸ್ಕೃತದಿಂದ)

೧

ಸಖನೆ ನಾಲ್ಮೊಗನೇ! ನಿನಗೆ ಬಯಕೆ ತೀರುವನ್ನಕ
ಇತರ ಪಾಪಫಲಗಳನ್ನೆ ಹಣೆಯ ತುಂಬ ಬರೆ, ಬರೆ.
ಅರಸಿಕರಿಗೆ ಕವಿತೆಯೊರೆವ ಪಾಪಫಲವಿದೊಂದ–ಓ
ಬರೆಯಬೇಡ, ಬರೆಯಬೇಡ, ಬರೆಯಬೇಡ, ಬೇಡವೊ.

೨

ರಾತ್ರಿಯಲಿ ಜಾನು,
ಹಗಲಿನಲಿ ಭಾನು,
ಇದರೆರಡು ಸಂಧಿಗೆ ಕೃಶಾನು ;
ಇಂತೆನ್ನ ಶೀತ
ಇವರಿಂದ ನೀತ
ಆಗಿರಲು ಬೆಚ್ಚನ್ನೆ ನಾನು.

೩

ಕಮಲೆ ಮಲಗುವಳು ಕಮಲದಲಿ ;
ಹರ ಮಲಗುವನು ಹಿಮಾಲಯದಲ್ಲಿ ;
ಹರಿ ಮಲಗುವನಾ ಹಾಲ್ಗಡಲಲ್ಲಿ ;
ಏಕೆನೆ ?—ತಗಣೆಯ ಶಂಕೆಯಲಿ.

೪

ಹಸಿವಿಗುಣಬಯಸಿತ್ತು ಗಣಪನಿಲಿಯನು ಹಾವು,
ಆದ ಕುಮಾರನ ನವಿಲು,
ಪಾರ್ವತಿಯ ಸಿಂಹವ್ರೋ ಗಜಮುಖನನೆ.
ಗೌರಿ ಗಂಗೆಯ ಚಂದ್ರಸುರಿಗಣ್ಣಿ ಸಹಿಸರೀ
ಸಂಸಾರ ಸಾಕಾಗಿ
ಹಾಲಾಹಲವನೀಶನುಂ ಪೀರ್ದನಂದು.

೫

ಹುಟ್ಟುವುದು ಬೆಟ್ಟದಲಿ ಬಳ್ಳಿ ;
ಹುಟ್ಟದ್ದೆ ಬಳ್ಳಿಯಲಿ ಬೆಟ್ಟ.
ಇಂದದರ ವಿಪರೀತ—
ಚೆನ್ನದಾ ಬಳ್ಳಿಯಲಿ
ಬಿಟ್ಟಿತ್ತು ಬೆಟ್ಟವೆರಡು.

೬

ಬೇಡಬಂದವರಿತ್ತ ಕಟ್ಟುವರು ಕಟ್ಟುವರು
ಓದುವರು ಓದುವರು ಸ್ತುತಿಸಹಸ್ರಗಳ.
ಜಿಪುಣನಾದರೊ ಅತ್ತಲದನೆ ಮರುಮಾತಿನಲಿ
ಸಲಿಸಿ ಮುಗಿದೆತ್ತುವನು ಹಸ್ತಯುಗಳಗಳ.

೭

ಕಣ್‌ಕಣ್‌ಬಿಟ್ ಇಂಗಂದ ವೈದ್ಯ
ಉರಿಯೊ ಚಿತೇನ್ ನೋಡಿ :
‘ನಾನ್ ಇರ್‍ಲಿಲ್ಲ, ನಮ್ಮಣ್ಣಿರ್‍ಲಿಲ್
ಯಾವೊನ್ದೀ ಕೈವಾಡ !’

೮

ಕತ್ತೆ ಕೇಳ್ಕೆ ವಸ್ತ್ರಭಾರವ
ಹೊತ್ತು ಓನಾನ್ನಗಳ ತಿನಲೀ
ಕತ್ತ ರಾಜಾಶ್ವಾವಸಥವನು
ಹತ್ತಿ ಸುಖದಲಿ ಕಡಲೆಗುಗ್ಗರಿಗಳನೆ ತಿನ್ನುತಿರು
ಅತ್ತಣಧಿಕಾರಿಗಳು ಬಾಲಂ
ಬೆತ್ತುದೆಲ್ಲವು ಕುದುರೆಯೆಂದೇ
ಗೆತ್ತು ನುಡಿವರು ; ರಾಜನೋ ಅವ
ರಿತ್ತುದೇ ಪರಸತ್ಯವೆಂಬ ; ತಟಸ್ಥರುಳಿದವರು.

—ಜಿ. ಪಿ. ರಾಜರತ್ನಂ

# ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳು

(ಶ್ರೀ ಸಿದ್ಧವೀರದೇವರು, ಹೊಸಮಠ, ಹುಬ್ಬಳ್ಳಿ)

ಚಂದ್ರಶೇಖರ ಶಾಸ್ತ್ರಿಗಳು ಕನ್ನಡ ನಾಡೆಂಬ ಕಡಲಿನ ಹಲವು ದಿವ್ಯರತ್ನಗಳಲ್ಲಿ ಒಂದು ರತ್ನ. ಅವರನ್ನು ಕಂಡರೆ, ನೆನೆದರೆ ಕನ್ನಡಿಗರಿಗೆ ಒಂದು ಬಗೆಯ ಆದರ, ಉಲ್ಲಾಸ. ಅವರ ಸೌಶೀಲ್ಯಾದಿಗುಣ, ಸೌಮ್ಯ ಆಕೃತಿ, ಶುದ್ಧಸಾತ್ವಿಕ ಖಾದಿಯ ವೇಷ, ವಿದ್ಯೆಯಿಂದ ವಿನೀತವಾದ ಭಾಷೆ, ಹಿತವಾದ ಮಿತವಾದ ವಿಚಾರಪರಿಪ್ಲುತ ಬರಹ ಇವೆಲ್ಲವುಗಳನ್ನು ಕಂಡು ಕೇಳಿ ಮನವರಿಕೆ ಮಾಡಿಕೊಳ್ಳದಿರುವ ಕನ್ನಡಿಗರಿರುವುದು ಅತ್ಯಲ್ಪವೆಂದು ಹೇಳಿದರೆ ಅತ್ಯುಕ್ತಿಯಲ್ಲ.

ಶಾಸ್ತ್ರಿಗಳು ಕನ್ನಡ ಸಾಹಿತ್ಯಕ್ಕಾಗಿ, ಕನ್ನಡ ಸಂಸ್ಕೃತಿಗಾಗಿ, ಕನ್ನಡದ ಕಲೆಗಾಗಿ, ಕರ್ನಾಟಕದ ಏಕೀಕರಣಕ್ಕಾಗಿ, ಸಂಸ್ಕೃತದ ಅಭಿವೃದ್ಧಿಗಾಗಿ, ನಿರಪೇಕ್ಷೆಯಿಂದ ನಿರಭಿಮಾನದಿಂದ ಹೆಣಗುತ್ತಲಿದ್ದಾರೆ. ನಾಡೆಲ್ಲವೂ ಒಂದಾಗಿ ಐಮ್ಮತ್ಯವಾಗಿ ನೆಮ್ಮದಿಯಿಂದಿರಬೇಕು, ಬಾಳಬೇಕು, ಬೆಳಕಿಗೆ ಬರಬೇಕು ಎಂಬುದೇ ಅವರ ಹೆಬ್ಬಯಕೆ.

ಶಾಸ್ತ್ರಿಗಳವರ ಹುಟ್ಟೂರು ಮದ್ರಾಸ್ ಇಲಾಖೆಗೆ ಸೇರಿದ ಹೊಳಲು. ಅಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದರು. ಆಮೇಲೆ ಗದಗ, ಹಾವೇರಿ, ಸಿರಹಟ್ಟಿ ಪಾಠಶಾಲೆಗಳಲ್ಲಿ ತಕ್ಕಮಟ್ಟಿಗೆ ಸಂಸ್ಕೃತ ಜ್ಯೋತಿಷ್ಯಜ್ಞಾನ ಪಡೆದರು. ಉಚ್ಚ ಶಿಕ್ಷಣಕ್ಕಾಗಿ ಬನಾರಸಕ್ಕೆ ತೆರಳಿದರು. ಕುಶಲಮತಿಗಳು, ಸತತೋದ್ಯೋಗಿಗಳಾದುದರಿಂದ, ಲಗುಬಗೆಯಿಂದ ಸಾಹಿತ್ಯ ವ್ಯಾಕರಣಗಳನ್ನು ಅಭ್ಯಸಿಸಿದರು. ೧೯೨೪ರಲ್ಲಿ ಕಲ್ಕತ್ತೆಯ ಅಸೋಸಿಯೇಷನ್ನಿನ ವ್ಯಾಕರಣತೀರ್ಥ ಪರೀಕ್ಷೆಯಲ್ಲಿ ಇಂಗ್ಲಿಷ್ ಭಾಷೆಯನ್ನು ತೆಗೆದುಕೊಂಡು ಎರಡನೆಯ ವರ್ಗದಲ್ಲಿ ಉತ್ತೀರ್ಣರಾದರು. ಇದರ ಜೊತೆಗೆ ಹಿಂದಿ, ತೆಲುಗು, ಮರಾಠಿ ಭಾಷೆಗಳ ಜ್ಞಾನವನ್ನು ಸಂಪಾದಿಸಿಕೊಂಡಿದ್ದಾರೆ. ಇದರಿಂದ ಅವರ ಬಾಳು ಬದುಕು ಹೆಚ್ಚು ಅಂದವಾಗಿದೆ, ಇನಿದಾಗಿದೆ. ಬನಾರಸದಿಂದ ನಾಡಿಗೆ ಬಂದೊಡನೆಯೇ ನೈಜಾಂ ಪ್ರಾಂತದ ಯಾದಗಿರಿಯ ಶಂಕರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ಅವರನ್ನು ಆರಿಸಿಮದು ಅವರ ಪಾಂಡಿತ್ಯವನ್ನೂ, ಪ್ರೌಢಿಮೆಯನ್ನೂ ಪ್ರದರ್ಶಿಸುತ್ತದೆ. ಅವರ ಅಲ್ಲಿಯ ಏಳು ವರ್ಷದ ಆಡಳಿತವಲ್ಲಿ ವಿದ್ಯೆಯಿಂದ ಹಿಂದುಳಿದ ಬಹುಭಾಗ ಜನಾಂಗವನ್ನು ವಿದ್ಯೆಯತ್ತ ಮುಖವೆತ್ತಿ ನೋಡುವಷ್ಟು ಅರಿವನ್ನಿತ್ತರು; ಮತ್ತು ಆ ನಾಡಿನ ಉನ್ನತಿಗೆ ಸಾಧನಗಳಾದ ಸಾರ್ವಜನಿಕ ಕಾರ್ಯಗಳಲ್ಲಿ ಕೈನೀಡಿ ಜನರನ್ನು ಉಪಕರಿಸಿದ್ದಾರೆ. ಜನ ಇಂದಿಗೂ ಶಾಸ್ತ್ರಿಗಳ ಉಪಕೃತಿಯನ್ನು ನೆನೆನೆನೆದು ಬಗೆಬಗೆಯಿಂದ ಬಣ್ಣಿಸುತ್ತಾರೆ.



ಶ್ರೀ॥ ಚಂದ್ರಶೇಖರಶಾಸ್ತ್ರಿಗಳು

೧೯೩೧ರಲ್ಲಿ ಮತ್ತೆ ಹುಬ್ಬಳ್ಳಿಯ ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ಬಂದರು. ಇಲ್ಲಿಯ ಏಳು ವರ್ಷದ ತಾಳಿಕೆಯಲ್ಲಿ, ಬಾಳಿಕೆಯಲ್ಲಿ ಸಂಸ್ಕೃತ ಭಾಷೆಯತ್ತ ವಿದ್ಯಾರ್ಥಿಗಳ ಆಸಕ್ತಿ, ಅಭಿಮಾನಗಳು ಬೆಳೆಯುವ ತೆರನಾಗಿ ಆಗಿದೆ. ಅವರಿಗೆ ಅವರಿವರೆಂಬ ಜಾತಿಭೂತದ ಭೇದ ಭಾವವಿಲ್ಲ. ಸರ್ವಮತೀಯ ವಿದ್ಯಾರ್ಥಿಗಳೆಲ್ಲರೂ ಒಂದೆ ಎಂಬ ಭಾವನೆಯುಳ್ಳವರು. ವಿದ್ಯಾರ್ಥಿಗಳೆಂದರೆ ಅವರಿಗೊಂದು ವಿಶೇಷ ಪ್ರೇಮ. ಅದರಲ್ಲಿಯೂ ಅನಾಥ ಅಭಾಗ್ಯ ವಿದ್ಯಾರ್ಥಿಗಳೆಂದರೆ ಪಂಚಪ್ರಾಣ. ಅವರಿಗೆ ತಮ್ಮಿಂದ ಸಾಧ್ಯವಿದ್ದ ಸಹಾಯ ಸೌಕರ್ಯಗಳನ್ನು ನೀಡುತ್ತಲಿರುವರು. ಸರ್ವಮತಸಹಿಷ್ಣುತೆ ಸರಳತೆ ಸ್ನೇಹ ವಿನೀತ ಭಾವಗಳಿಗೆ ನೆಚ್ಚಿ ಮೆಚ್ಚಿ ಸಂಸ್ಕೃತವನ್ನೋದಬಯಸುವ ಸರ್ವಮತೀಯ ವಿದ್ಯಾರ್ಥಿಗಳು ಇವರನ್ನು ಸೇರುತ್ತಿರುವರು, ಸುತ್ತುಗಟ್ಟುತ್ತಿರವರು. ಹುಡುಗರಿಗೆ ಪಾಠವನ್ನು ಹೇಳಿಕೊಡುವದೆಂದರೆ ಶಾಸ್ತ್ರಿಗಳವರಿಗೆ ಬಹು ಆನಂದ. ಈಗ ಎರಡು ನೂರು ಸಂಖ್ಯೆಗೆ ಕಡಮೆ ಇಲ್ಲದಷ್ಟು ವಿದ್ಯಾರ್ಥಿಗಳು ಉಚ್ಚಶಿಕ್ಷಣವನ್ನು ಪಡೆದಿರುವರು. ಹಲವರು ಅಲ್ಲಲ್ಲಿಯ ಪಾಠಶಾಲೆಗಳಲ್ಲಿ ಅಧ್ಯಾಪಕರಾಗಿರುವರು ಮತ್ತು ಮಠಾಧಿಪತಿಗಳಾಗಿರುವರು. ಇದರಿಂದ ಅವರ ಪಾಂಡಿತ್ಯಕ್ಕೆ ಮತ್ತಷ್ಟು ಕಳೆಯೇರಿದೆ.

ಮೊತ್ತಮೊದಲು ಕನ್ನಡ ನಾಡಿನಲ್ಲಿ ಮೈಸೂರು ಪ್ರಾಂತವನ್ನುಳಿದು ಯಾವೆಡೆಯಲ್ಲಿಯೂ ಸಂಸ್ಕೃತ ಪರೀಕ್ಷೆಗೆ ಎಡೆ ಇರಲಿಲ್ಲ. ಒಂದು ಪರೀಕ್ಷೆಯನ್ನು ಕಟ್ಟಬೇಕಾದರೆ, ಬನಾರಸ್ ಕಲ್ಕತ್ತಾ ಪಾಟ್ನಾ ಮುಂತಾದ ಪಟ್ಟಣಗಳನ್ನು ಕಾಣದೆ ಗತ್ಯಂತರವಿರಲಿಲ್ಲ. ಅಧಿಕ ಹಣವನ್ನೂ ಬಹಳ ಶ್ರಮವನ್ನೂ ವಿಶೇಷವೇಳೆಯನ್ನೂ ವೆಚ್ಚಮಾಡಬೇಕಾಗಿತ್ತು. ಸಂಸ್ಕೃತವನ್ನು ಕಲಿಯುವ ಬಡತನದ ಬಾಳುವೆಯ ಬಾಲಕರಿಗೆ ಹಲವು ತೊಡಕು ತೊಂದರೆಗಳ ಮೂಲಕ ಸಂಸ್ಕೃತಾಧ್ಯಯನವೇ ಬೇಸರಿಕೆಯಾಗಿತ್ತು ಬೇಡವಾಗಿತ್ತು. ಶಾಸ್ತ್ರಿಗಳು ಶಂಕರಸಂಸ್ಕೃತ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಇವೆಲ್ಲ ಕುಂದುಕೊರತೆಗಳನ್ನು ಕಂಡರು, ಕಡುನೊಂದರು. ಕಲ್ಕತ್ತೆಯ ಸಂಸ್ಕೃತ ಪರೀಕ್ಷೆಗಳು ಕನ್ನಡ ನಾಡಿನಲ್ಲಿ ಜರುಗಬೇಕು, ಸಾಮಾನ್ಯರು ಸಂಸ್ಕೃತ ಭಾಷಾ ಜ್ಞಾನವನ್ನು ಪಡೆಯಬೇಕು, ನಾಡಿನ ತುಂಬ ಸಂಸ್ಕೃತ ಭಾಷೆ ಬೆಳೆಯಬೇಕು ಎಂಬ ಬಲವಾದ ಬಯಕೆಯಿಂದ ಬಹಳ ಶ್ರಮವಹಿಸಿ ಮೊತ್ತಮೊದಲು ಕನ್ನಡ ನಾಡಿನಲ್ಲಿ ಶಂಕರ ಸಂಸ್ಕೃತ ಕಾಲೇಜು, ಗಂಗಾಧರ ಸಂಸ್ಕೃತ ಕಾಲೇಜುಗಳಲ್ಲಿ ಕಲ್ಕತ್ತೆಯ ಪರೀಕ್ಷೆಯ ಕೇಂದ್ರಗಳನ್ನೇರ್ಪಡಿಸಿದ ಸರ್ವಶ್ರೇಯಸ್ಸು ಚಂದ್ರಶೇಖರಶಾಸ್ತ್ರಿಗಳವರಿಗೆ ಸಲ್ಲತಕ್ಕದ್ದಾಗಿದೆ. ಕನ್ನಡ ನಾಡು ಅವರಿಗೆ ಉಪಕೃತವಾಗಿದೆ. ಕರ್ನಾಟಕದ ಇತಿಹಾಸದಲ್ಲಿ ಈ ಸಂಗತಿ ಉಳಿಯಬೇಕಾಗಿದೆ. ಅವರ ಸಂಸ್ಕೃತ ಸಾಹಿತ್ಯಸೇವೆಯನ್ನು ಕಂಡು ಕಲ್ಕತ್ತಾ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಡಾ॥ ಸುರೇಂದ್ರನಾಥದಾಸಗುಪ್ತರು ಮನಮೆಚ್ಚಿ ಸದಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಈಗ ಶಾಸ್ತ್ರಿಗಳು ಕಲ್ಕತ್ತ ಸಂಸ್ಕೃತ ಪರೀಕ್ಷೆಯ ಸೆಕ್ರೆಟರಿಗಳಾಗಿದ್ದಾರೆ. ಹತ್ತು ವರ್ಷಗಳಿಂದ 'ತೀರ್ಥ' ಮೊದಲಾದ ಪರೀಕ್ಷೆಗಳ ಪರೀಕ್ಷಕರಿರುತ್ತಾರೆ. ಇಂತು ಶಾಸ್ತ್ರಿಗಳು ಸಂಸ್ಕೃತ ಸಾಹಿತ್ಯದೇವಿಗೆ ಸೇವೆಯನ್ನು ಸಲ್ಲಿಸುತ್ತ ಇರುವುದು ಸರ್ವರಿಗೂ ಸಂತೋಷದಾಯಕವಾಗಿದೆ.

ಚಂದ್ರಶೇಖರ ಶಾಸ್ತ್ರಿಗಳು ಸಂಸ್ಕೃತ ಸಾಹಿತ್ಯದೇವಿಗೆ ಸಲ್ಲಿಸಿರುವ ಸೇವೆಗಿಂತಲೂ ಕನ್ನಡಮ್ಮನ ಮಡಿಲಿನಲ್ಲಿ ಸಲ್ಲಿಸುತ್ತಲಿರುವ ಸೇವೆ ಮಿಗಿಲಾಗಿದೆ. ಅವರಿಗೆ ಕನ್ನಡವೆಂದರೆ ಕಡುಸಡಗರ; ಕುರುಡನಿಗೆ ಕಣ್ಬಂದಷ್ಟು ಹರ್ಷ. ಕನ್ನಡವನ್ನು ಬರೆಯುವುದು, ಕನ್ನಡವನ್ನು ಓದುವದಾದರೆ ಒಂದು ತೆರನಾದ ಉತ್ಸಾಹ, ಹೆಮ್ಮೆ. ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠವನ್ನು ಹೇಳಿಕೊಡುವಾಗ ಕನ್ನಡದ ಹಿರಿಮೆಯನ್ನು, ಘನತೆಗೌರವಗಳನ್ನು ತಿಳಿಯಹೇಳಿ ಕನ್ನಡವನ್ನೋದಿ ಬರೆಯಲು ಒತ್ತಾಯಪಡಿಸುವದು ದಿನ ದಿನದ ಅವರದೊಂದು ಪಾಠವೇ ಆಗಿದೆ. ಕಾಲೇಜಿನಲ್ಲಿ ಪಾಕ್ಷಿಕ ಸಭೆಗಳನ್ನೇರ್ಪಡಿಸಿ ಕನ್ನಡ ಕಾವ್ಯಗಳನ್ನು, ರಗಳೆಗಳನ್ನು, ಕಥೆಗಳನ್ನು, ಎತ್ತಿಕೊಂಡು ಉಪನ್ಯಾಸ ಮಾಡುವ, ಲೇಖಗಳನ್ನು ಬರೆಯುವ ಕಡ್ಡಾಯದ ಶಿಕ್ಷಣವನ್ನೀಯುತ್ತ ಕನ್ನಡದತ್ತ ವಿದ್ಯಾರ್ಥಿಗಳ ಅಭಿಮಾನ ಆದರಗಳನ್ನು ಸೆಳೆಯುತ್ತಿರುವುದು ಅಭಿನಂದನೀಯವಾಗಿದೆ; ಇನ್ನುಳಿದ ಸಂಸ್ಕೃತಾಧ್ಯಾಪಕರಿಗೆ ಅನುಕರಣೀಯವಾಗಿದೆ.

ಹುಬ್ಬಳ್ಳಿಯ ಜಗದ್ಗುರು ಗಂಗಾಧರ ಗ್ರಂಥಮಾಲೆಯಿಂದ ಹಲವು ಗ್ರಂಥಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ತೋಂಟದ ಸಿದ್ಧಲಿಂಗೇಶ್ವರ ವಚನ, ಸ್ವತಂತ್ರ ಸಿದ್ಧ ಲಿಂಗೇಶ್ವರ ವಚನ, ಕಾಡ ಸಿದ್ಧೇಶ್ವರನ ವಚನಗಳನ್ನು ಶೋಧಿಸಿ ಮಹತ್ವದ ಮುನ್ನುಡಿಗಳನ್ನು ಬರೆದಿರುವರು. ಮತ್ತೆ ಹಲವು ಗ್ರಂಥಗಳ ಪ್ರಕಾಶಕ್ಕೆ ಪ್ರೇರಕರಾಗಿ ಪೋಷಕರಾಗಿರುವರು.

ಕನ್ನಡ ದೈನಂದಿನ ಸಾಪ್ತಾಹಿಕ ಮಾಸಿಕ ಪತ್ರಿಕೆಗಳಲ್ಲಿ ಸಾಹಿತ್ಯ, ಕರ್ನಾಟಕ ಏಕೀಕರಣ, ಸಾಮಾಜಿಕ, ಚಾರಿತ್ರಿಕ, ರಾಜಕೀಯ ವಿಚಾರಗಳಲ್ಲಿ ವಿಚಾರ ಪರಿಪ್ಲುತ ಲೇಖನಗಳನ್ನು ಬರೆದು ಕನ್ನಡಿಗರಿಗೆ ಚಿರಸ್ಮರಣೀಯರಾಗಿದ್ದಾರೆ. ಇಂದಿಗೆ ಅವರು ಬರೆದಿರುವ ಬರಹಗಳನ್ನು ಒಟ್ಟುಗೂಡಿಸಿದರೆ ಒಂದು ಸಾವಿರ ಪುಟಕ್ಕೆ ಕಡಮೆಯಿಲ್ಲದ ಹೊತ್ತಗೆಯಾಗುವಂತಿದೆ.

ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರದ್ಧೆ ಅಭಿಮಾನಗಳು ಹೆಚ್ಚು. ಪರಿಷತ್ತಿನ ಕಾರ್ಯಗಳನ್ನು ನೆರವೇರಿಸುವದಾದರೆ ಆಲಸ್ಯವಿಲ್ಲ. ಹುಬ್ಬಳ್ಳಿಯ ಸಾಹಿತ್ಯ ಸಮ್ಮೇಳನವು ಒಳ್ಳೇ ಯಶಸ್ವಿಯಾಗಿ ಸಾಗಿ ಮುಗಿದುದು ಎಲ್ಲರ ನೆನವಿನಲ್ಲಿಲ್ಲದಿಲ್ಲ. ಅವರು ಆಗ ತೋರಿಸಿದ ಕಾರ್ಯದಕ್ಷತೆಯನ್ನು, ಧೈರ್ಯವನ್ನು, ಉತ್ಸಾಹವನ್ನು, ಮಹಾಜನಗಳೆಲ್ಲರೂ ಕಂಡು ಮನಮೆಚ್ಚಿ ಮನ್ನಿಸಿದರು ಮಾನಿಸಿದರು. ಈಗ ಸಾಹಿತ್ಯ ಪರಿಷತ್ತಿನ ಕಾರ್ಯಕಾರೀ ಮಂಡಲದ ಸಭಾಸದರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ನೈಜಾಂ ಪ್ರಾಂತಸಮಿತಿಯ ಅಧ್ಯಕ್ಷರಾಗಿ, ಪರಿಷತ್ತಿನ ಪ್ರತಿಯೊಂದು ಅಧಿವೇಶನದಲ್ಲಿ ಭಾಗ ವಹಿಸಿ ಸರ್ವರೊಡನೆ ಸಹಕರಿಸಿ ಸಮಿತಿಯ ಹೆಚ್ಚು ನೆಚ್ಚುಮೆಚ್ಚಿನವರಾಗಿರುವುದು ಅವರ ಪ್ರತಿಭೆಯನ್ನು, ಪ್ರೌಢಿಮೆಯನ್ನು, ವ್ಯಕ್ತಿಗೌರವವನ್ನು, ವ್ಯಕ್ತಮಾಡುತ್ತದೆ.

ವಿಜಯನಗರದ ಸಾಮ್ರಾಜ್ಯ ಮಹೋತ್ಸವದ ಕಾರ್ಯದರ್ಶಿಗಳಲ್ಲಿ ಒಬ್ಬರಾಗಿ ಕೆಲಸಗಳನ್ನು ಮಾಡಿ ದ್ರವ್ಯವನ್ನು ಕೂಡಿಸಿ ಆ ಉತ್ಸವದ ಬಗ್ಗೆ ಹದಿನೇಳು ಲೇಖಗಳನ್ನು ಬರೆದು ಪ್ರಚಂಡ ಪ್ರಚಾರ ಮಾಡಿದ್ದು ಕನ್ನಡಿಗರೆಲ್ಲರಿಗೆ ಗೊತ್ತಿದೆ. ಇವರು ಸಾಹ್ಯಿತ್ಯಕ್ಕೆ ದುಡಿಯುತ್ತಿದ್ದಂತೆ ಕರ್ನಾಟಕದ ಏಕೀಕರಣಕ್ಕೂ ದುಡಿಯುತ್ತಿದ್ದಾರೆ. ಕರ್ನಾಟಕ ಏಕೀಕರಣ ಪರಿಷತ್ತಿನ ಕಾರ್ಯಕಾರಿ ಮಂಡಲದ ಸದಸ್ಯರಾಗಿ ಭಾಷಣ ಬರಹಗಳಿಂದ ಕನ್ನಡ ಸಾಹಿತ್ಯ, ಕನ್ನಡ ಸಂಸ್ಕೃತಿ, ಕನ್ನಡದ ಕಲೆಗಳು, ಅನ್ಯ ಸಾಹಿತ್ಯ, ಸಂಸ್ಕೃತಿ, ಕಲೆಗಳ ತಾಕಲಾಟ ತಿಕ್ಕಾಟಗಳ ಕಾಟದಿಂದ ಸಣ್ಣಾಗದೆ ತಾಳಿ ಬಾಳಿ ಬೆಳೆದು ಮೇಲ್ಪಡಲೆ ಮಾಡಿ ಮೆರೆಯುವಂತಾಗಬೇಕಾಗಿದ್ದರೆ ಕನ್ನಡನಾಡು ಒಂದಾಗದೆ ಒಮ್ಮೈಯಾಗದೆ ಉತ್ತಮ ದಶೆಯನ್ನೈದಲಾರದೆಂದು ಸಾರುತ್ತಿರುವರು. ಕರ್ನಾಟಕ ಏಕೀಕರಣವಾಗದೆ ಹಿಂದುಸ್ಥಾನಕ್ಕೆ ಸ್ವರಾಜ್ಯ ಸಿಕ್ಕರೂ ಅದರಿಂದ ಕನ್ನಡಿಗರಿಗೆ ಏನೂ ಪ್ರಯೋಜನವಿಲ್ಲೆಂದೂ ಸಾರಿ ಸಾರಿ ಹೇಳುತ್ತಲಿರುವರು. ಕನ್ನಡ ನಾಡಿನ ಒಕ್ಕೂಟಾಭಿಮಾನಿಗಳಲ್ಲಿ ಇವರಿಗೂ ಒಂದು ಸ್ಥಾನವಿದೆ, ಮಾನವಿದೆ, ಮನ್ನಣೆಯಿದೆ. ಅವರು ಪ್ರವೇಶಿಸದ, ಮೂರು ಮುತ್ತಿನಂತಹ ಮಾತುಗಳನ್ನು ಹೇಳದ, ಕರ್ನಾಟಕದಲ್ಲಿ ಸಾರ್ವಜನಿಕ ಸಭೆ ಸಮ್ಮೇಲನಗಳು ಉಳಿದಿರುವುದು ಕಡಮೆಯೆಂದು ಹೇಳಬಹುದು.

ಚಂದ್ರಶೇಖರ ಶಾಸ್ತ್ರಿಗಳು ಕರ್ನಾಟಕಕ್ಕೊಂದು ಚಂದ. ಶಾಸ್ತ್ರಿಗಳು ಕೇವಲ ವೈದಿಕರಲ್ಲ; ವೀರವೈದಿಕರು. ಒಂದು ಸಮಾಜದ ಶಾಸ್ತ್ರಿಗಳಲ್ಲ, ಕರ್ನಾಟಕದ ಶಾಸ್ತ್ರಿಗಳೆಂದರೆ ಎಲ್ಲರೂ ಅಹುದೆನ್ನಬಹುದು. ಅವರ ಇನ್ನೂ ಹೆಚ್ಚಾದ ಸೇವೆ ಕನ್ನಡಮ್ಮನ ಮಡಿಲಿನಲ್ಲಿ ಸಲ್ಲಲೆಂದು ಅನನ್ಯವಾಗಿ ಹಾರೈಸುತ್ತೇನೆ.

---

## ಕಂಡವರು

'ಕಂಡವರು' ಏನನ್ನೂ ಕಂಡಿಲ್ಲ; ನಮಗೆ ಕಂಡವರು ಮಾತ್ರ. 'ಕಂಡವರು' ಎಂದು ಮೇಲಿನ ತಲೆಬರೆಹವನ್ನೋದಿದೊಡನೆಯೇ ಸತ್ಯವನ್ನು ಕಂಡ ವಸಿಷ್ಠ ವಿಶ್ವಾಮಿತ್ರ ಕುತ್ಸ ಅಗಸ್ತ್ಯ ಆರ್ಕಿಮೇಡೀಸ್ ನ್ಯೂಟನ್ ಗೆಲಿಲಿಯೋ ಐನ್‌ಸ್ಟೀನರ ಜ್ಞಾಪಕಬರಬಹುದು; ಆದರೆ ಈ ಯಾವೊಬ್ಬ ಮಹಾವಿಭೂತಿಯ ಗೊಡವೆಯೂ ನಮಗೆ ಬೇಕಿಲ್ಲ ಈ ಪ್ರಬಂಧಕ್ಕೆ—ಈ ಪೊಳ್ಳು ಹರಟೆಗೆ. 'ಕಂಡವರೆದುರಿಗೆಲ್ಲಾ ಹಲ್ಲು ಗಿಂಜುತ್ತಾನೆ'. 'ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳನೋಡಿದಂತೆ' ಇವೇ ಮುಂತಾದ ವ್ಯವಹಾರಗಳಲ್ಲಿ ಪ್ರಯುಕ್ತವಾದ 'ಕಂಡವರೇ' ನಮ್ಮ 'ಕಂಡವರು'. ಈ 'ಕಂಡವರು' ಬೇಡವೆಂದರೂ ನಮ್ಮ ಕಣ್ಣಿಗೆ ಬಿದ್ದು ಬೇನೆ ತರುವ ಜನ. ಆನಂದ ಭವನದ ಮೆಟ್ಟಲೇರುವಾಗ 'ನಮಸ್ಕಾರ ಸಾರ್, ಏನು ಕಾಣಲೇ ಇಲ್ಲವಲ್ಲಾ ಈಚೆಗೆ' ಎನ್ನುವ ಮುಂದಿ. ಸಿನೀಮಾ ಟಿಕೆಟ್ಟು ಕೊಳ್ಳುತ್ತಿರುವಾಗ, 'ಓಹೋ ಪಿಕ್ಚರ್‌ಗೋ, ಚೆನ್ನಾಗಿದೆ ನೋಡಬೇಕಾದ್ದು—ಹೊತ್ತಾಯಿತೇನೋ, ಆಗಲಿ, ಸಿಕ್ಕುತ್ತಿರುತ್ತೀರಲ್ಲ' ಎಂದು ಹೇಳಿ ಹುಸಿನಗೆ ನಕ್ಕು ಹೊಟ್ಟೆಯಲ್ಲಿ ಬೆಂಕಿ ಬೀಳಿಸುವ ಜನ. ಮಾರ್ಕೆಟ್ಟಿನಿಂದ ಎರಡು ಕೈಯಲ್ಲೂ ದೊಡ್ಡ ಚೀಲಗಳಲ್ಲಿ, ಬದನೆಯಕಾಯಿ, ಸೀಮೆಬದನೆಕಾಯಿ, ಕೋಸು, ಚಪ್ಪರದವರೆಕಾಯಿ, ದಂಟು, ಕೊತ್ತಂಬರಿ, ಮೆಂತ್ಯದ ಸೊಪ್ಪು, ಹಸಿಮೆಣಸಿನಕಾಯಿ, ಕೊಂಚ ಸೇಬು, ಕಿತ್ತಳೆ, ಚಪ್ಪರ ದ್ರಾಕ್ಷಿ, ಹೂವು, ವೀಳೆಯದೆಲೆ—ತಮಗೋಸ್ಕರ ಅಲ್ಲ, ಬಂದ 'ಅಮ್ಮಾವ್ರ' ಕಡೆಯ ಜನಗಳ ಸಂತೋಷಕ್ಕೆ ಹೊತ್ತೂ ಹೊರಲಾರದೆ ತಿಣಿಕಿಕೊಂಡು ನಡೆದು ಬರುವಾಗ, 'ಏನು ಸ್ವಾಮಿ, ಭರ್ಜರಿ ಅಂತ ಕಾಣುತ್ತೆ ನಿಮ್ಮ ಮನೆಯಲ್ಲಿ ಈ ಹೊತ್ತು. ನಡೆಯಲಿ ದೇವರು', ಎಂದು ಹೇಳಿ ಮೇಲುಸಿರಿನಿಂದ ಮಾತನಾಡಲೂ ತ್ರಾಣವಿಲ್ಲದೆ ಇರುವ ನಮ್ಮನ್ನು ಗೋಳುಹುಯ್ದುಕೊಂಡು ಮಿಂಚಿನಂತೆ ಮಾಯವಾಗುವ ದೊಡ್ಡ ಮನುಷ್ಯರು. ಮನೆಯಲ್ಲಿ ತಮ್ಮನ ಮುಂಜಿ, ಅಕ್ಕನ ಮಗಳಿಗೆ ಬಳೆ ತೊಡಿಸುವುದು ಇತ್ಯಾದಿ ಸಂದರ್ಭಗಳಲ್ಲಿ 'ಭೋಜನಕ್ಕೆ ದಯಮಾಡಿಸಬೇಕು' ಎಂದು ಮನೆಯ ಯಜಮಾನ ಕರೆದು—ಮೊದಲನೆಯ ಆಹ್ವಾನ ಮೂರುದಿನ ಮುಂಚೆಯೇ ಆಗಿರುತ್ತೆ—ದೊಡ್ಡ ಮಗ ಹೋದಾಗ 'ಆಗಲಿ, ಬಂದೆ' ಎಂದು ಹೇಳಿ, ಚಿಕ್ಕವನು ಹೋದಾಗ 'ಏನವಸರವೋ ಮಹಾ, ನಡಿ ನಡಿ, ನಿಮ್ಮಪ್ಪನಿಗೆ ಹೇಳು ಬಂದುಬಿಟ್ಟೆ ಎಂದು' ಇದೇ ಮೊದಲಾಗಿ ಮಾತನಾಡಿ ಸರಿಯಾಗಿ ಎರಡೂಮುಕ್ಕಾಲು ಗಂಟೆಗೆ ದಯಮಾಡಿಸುವ ಜನ. ಆಫೀಸಿಗೆ ಬಸ್ ಹೊರಟು ನಿಂತಿರುವಾಗ, ಒಂದು ಕಾಲಿನ ಬೂಟ್ಸನ್ನು ಕಟ್ಟಿ ಅವಸರದಲ್ಲಿ ಇನ್ನೊಂದು ಕಾಲಿನದನ್ನು ಕಟ್ಟದೆಯೇ ಬಸ್ಸಿನ ಹಿಂದೆ ಓಡುತ್ತಿರುವಾಗ, 'ಆಫೀಸೇನೋ, ಅಲ್ಲಾ ಮೊನ್ನೆ ದಿನ ಶಾಮರಾಯರ ಭಾವನ ಮಗನ ಐ.ಸಿ.ಎಸ್. ರಿಸಲ್ಟ್ ಬಂತಂತೆ. ನೀವೇನಾದರೂ ಕೇಳಿದಿರಾ? ಏನಾಯ್ತೋ! ಮತ್ತೆ, ನಿಮ್ಮ ಆಫೀಸಿನಲ್ಲಿ ಹೊಸದಾಗಿ ಒಬ್ಬರು ಶಿರಸ್ತೇದಾರ್ರು ಬಂದಿದಾರಂತೆ. ಹೇಗಪ್ಪಾ ಅವರು?' ಇತ್ಯಾದಿಯಾಗಿ ಪರಂಪರೆಯಾಗಿ ಪ್ರಶ್ನೆಗಳ ಬಾಣಜಾಲವನ್ನೆಸೆಯುವ ವೀರಾಧಿವೀರರಿವರು. ಇದಿಷ್ಟು ನಮ್ಮ 'ಕಂಡವರ' ವಿಷಯ ಕೊಂಚ ಮಾತ್ರ. ನಮ್ಮ 'ಕಂಡವರ' ನಡೆ ನುಡಿ, ಆಚಾರ ವಿಚಾರ, ಊಟ ಉಪಚಾರ, ಹಾವ ಭಾವ, ಬಂಧು ಬಳಗ, ಕುಲ ಗೋತ್ರ, ಧರ್ಮ ಕರ್ಮ, ಆಯ ವ್ಯಯ ಇವುಗಳ ವಿವರ ಬರೆಯ ಹೊರಟರೆ ಒಂದು ರೀತಿಯ ಮಹಾಭಾರತ ಬರೆಯಬಹುದು. ಅಷ್ಟು ಬರೆಯುವ ಧೀರ ವ್ಯಾಸನ ತರುವಾಯ ಬೇರೊಬ್ಬ ಹುಟ್ಟಲಿಲ್ಲ; ಹುಟ್ಟುವನೋ ಇಲ್ಲವೋ ಎಂಬುದು ಸಂದೇಹಾಸ್ಪದ.

ಹಾಗಾದರೆ 'ಕಂಡವರು' ಎಲ್ಲರೂ ಜನರನ್ನು ಹಿಂಸೆಪಡಿಸುವುದಕ್ಕೋ ಇರುವುದು? ಅವರಿಗೆ ನೀವು 'ಕಂಡವರ'ಲ್ಲವೋ? ಎಂದು ಕೇಳೀರಿ. ಹೌದು, ನಿಜ. ನಾನೂ 'ಕಂಡವನೇ'—ನೀವೂ. ಹಾಗಾದರೆ ಏಕೀ ಪುರಾಣ? ಸಣ್ಣ ಮೀನು ದೊಡ್ಡ ಮೀನಿಗೆ ಆಹಾರ, ಆ ದೊಡ್ಡದು ಅದಕ್ಕಿಂತ ದೊಡ್ಡದಕ್ಕೆ ಇತ್ಯಾದಿ ಅನಂತವಾಗಿ ಹೇಗುಂಟೋ ಹಾಗೆ ನನ್ನ 'ಕಂಡವರಿಗೆ' ನಾನು 'ಕಂಡವನೇ'. ಅಂದ ಮಾತ್ರಕ್ಕೇ ಹೀಗಿದೆ ಮನುಷ್ಯರಲ್ಲಿ ಎಂದು ಹೇಳಬಾರದೇನು? ಹತ್ತು ಬೆರಳಿರುವುದು ಸ್ವತಃ ಪ್ರಮಾಣವಾಗಿರುವಾಗ, ನಿಮ್ಮ ಹುಡುಗನಿಗೆ 'ನನ್ನ ಕೈಯಲ್ಲಿ ಹತ್ತು ಬೆರಳುಗಳಿವೆ'; ಕುರಿ ಕಚ್ಚದೆ ಬೊಗಳದೆಯೂ ಇರುವುದು ಎಲ್ಲರಿಗೂ ಗೊತ್ತಿರುವಾಗ 'ಕುರಿ ಸಾಧುವಾದ ಪ್ರಾಣಿ' ಎಂದೇಕೆ ಪಾಠ ಹೇಳುವಿರಿ? ಮಲ್ಲಿಗೆಹೂ ತನ್ನ ಸುಗಂಧವನ್ನು

(೪೬೦ನೆಯ ಪುಟಕ್ಕೆ)




ಶುಕ್ರವಾರ, ಅಕ್ಟೋಬರ್ ೪, ೧೯೪೦

## ಶಿಕ್ಷಣದ ಗುರಿ

ಇಂಡಿಯಾ ಸರಕಾರದ ಎಜುಕೇಷನಲ್ ಕಮಿಷನರವರಾದ ಮಿ॥ ಜಾನ್ ಸಾರ್ಜೆಂಟ್ ಅವರು 'ವಿದ್ಯಾಭ್ಯಾಸ ಸಫಲವಾಗುವ ರೀತಿ' ಎಂಬ ವಿಷಯವನ್ನು ಕುರಿತು ಮೈಸೂರಿನಲ್ಲಿ ಘನವಾದ ಭಾಷಣಮಾಡಿದರು. ಉತ್ತಮವಾದ ಶಿಕ್ಷಣ ವ್ಯವಸ್ಥೆಯಲ್ಲಿ ಮೊದಲ ಎಷ್ಟು ಭಾಗ ಎಷ್ಟು ಕಾಲ ಕಡ್ಡಾಯವಾಗಿ ಸಾರ್ವತ್ರಿಕವಾಗಿ ಇರಬೇಕು? ಮುಂದಿನ ಮಜಲುಗಳಲ್ಲಿ ವಿದ್ಯಾರ್ಥಿಗಳನ್ನು ಹೇಗೆ ಆಯ್ದುಕೊಂಡು ಬಗೆಬಗೆಯ ವಿಶೇಷ ಶಿಕ್ಷಣ, ವೃತ್ತಿ ಶಿಕ್ಷಣ ಏರ್ಪಡಿಸಬೇಕು? ವಿದ್ಯಾರ್ಥಿಗಳ ಶಿಕ್ಷಣಕ್ಕೂ ದೇಶದ ಆರ್ಥಿಕ ಸಂಪನ್ನತೆಗೂ ಹತ್ತಿರ ಸಂಬಂಧವನ್ನು ಹೇಗೆ ರಚಿಸಬೇಕು? ಅವರ ಬುದ್ಧಿಶಕ್ತಿ ಮನಶ್ಶಕ್ತಿ ಬೆಳೆದು ನಾಡಿನ ಜೀವನವಲ್ಲಿ ಹೇಗೆ ಸಫಲವಾಗಬೇಕು ಎಂಬವನ್ನು ವಿವರಿಸಿದರು. ಕಡೆಯಲ್ಲಿ "ಕಾಲ ಮೀರಿಹೋಗುವ ಮುಂಚೆಯೇ, ಭರತಖಂಡದ ಪೂರ್ವ ಸಂಪ್ರದಾಯಗಳಿಗೂ ಇಂದಿನ ಮಹಾಕಾಂಕ್ಷೆಗಳಿಗೂ ನಾಳಿನ ಅದೃಷ್ಟ ಸೌಭಾಗ್ಯಕ್ಕೂ ತಕ್ಕಂತಹ ವಿದ್ಯಾವ್ಯವಸ್ಥೆಯನ್ನು ರಚಿಸುವ ಕರ್ತವ್ಯ ಎಲ್ಲರಿಗೂ ಸೇರಿದುದಾಗಿದೆ. ಬಹುಶಃ ಆ ಸಂದರ್ಭದಲ್ಲಿ ಮಾತ್ರವೇ 'ಅನಂತಕಾಲವೇ ನಗರಗಳನ್ನು ಕಟ್ಟತಕ್ಕದ್ದು' ಎಂಬ ಪ್ಲೇಟೋವಿನ ನುಡಿಯನ್ನು ನಾವು ಅಂಗೀಕರಿಸಬಹುದು" ಎಂದು ನುಡಿದು ಮುಗಿಸಿದರು.

ವಿದ್ಯಾವಿಚಾರಗಳನ್ನು ಕುರಿತು ಮೇಧಾವಿಗಳು ಅನೇಕ ರೀತಿಯಲ್ಲಿ ಈವರೆಗೆ ನುಡಿದಿದ್ದಾರೆ. ಭರತಖಂಡದ ಸರ್ವತೋಮುಖವಾದ ಏಳಿಗೆ ಸಂಪತ್ತಿಗಳೇ ಆ ಎಲ್ಲರ ಉದ್ದೇಶ. ನಮ್ಮ ಜೀವನದಲ್ಲಿ ಇಂದು ಯಾವುದೊ ನ್ಯೂನತೆ ಇದೆ, ಇದು ಹೋಗಬೇಕು; ಈ ಜನದ ಶಕ್ತಿ ಕುದುರಬೇಕಾದರೆ ಜನದ ದೇಹಶಕ್ತಿಯನ್ನೂ ಮನಶ್ಶಕ್ತಿಯನ್ನೂ ಜಾಗ್ರತೆಗೊಳಿಸಿ ತಕ್ಕ ವಿಚಕ್ಷಣೆಯಿಂದ ಬಲಪಡಿಸಬೇಕು; ಈವೊತ್ತಿನ ಮಕ್ಕಳು ನಾಳಿನ ಜೀವನದ ಆಧಾರಸ್ತಂಭಗಳು, ಆದುದರಿಂದ ಅವರ ವಿದ್ಯಾಶಿಕ್ಷಣ ಉತ್ತಮವಾಗಿ ನಡೆಯಬೇಕು ಎಂಬ ಅಂಶಗಳು ನಿರ್ವಿವಾದ. ಆದರೆ ಇತರ ಹಲವು ರಂಗಗಳಲ್ಲಿನಂತೆಯೇ ಈ ವಿಷಯದಲ್ಲಿಯೂ: ನಾಲ್ಕು ಜನ ನುಡಿವಾಗ ಆರು ಅಭಿಪ್ರಾಯಗಳೂ ಮಾರ್ಗಗಳೂ ಸೂಚಿತವಾಗುವುವು ಎಂಬ ನುಡಿಯಂತೆ ವ್ಯಾಧಿ ಯಾವುದೆಂದು ಪರೀಕ್ಷೆ ನಡಸುವಾಗಲೂ ಚಿಕಿತ್ಸಾವಿಧಾನವನ್ನು ಕೈಕೊಳ್ಳುವಾಗಲೂ ಅನೇಕ ಅಭಿಪ್ರಾಯಗಳು ಹುಟ್ಟಿಕೊಂಡು ಹುರುಡುಮಾಡುವುವು. ಹೀಗಾಗಿ ಭರತಖಂಡದ ಯೋಜನೆ ಪ್ರಯತ್ನಗಳು ಒಂದು ಗುರಿಯಲ್ಲಿಯೂ ಮೊನೆಯಲ್ಲಿಯೂ ಸಾಗುವುದು ಶಕ್ಯವಿಲ್ಲವಾಗಿದೆ. ಇದು ಭರತಖಂಡದ ದುರದೃಷ್ಟ.

ನಾವು ನಲವತ್ತು ಕೋಟಿ ಸಂಖ್ಯೆಯುಳ್ಳ ಜನವರ್ಗ. ಅತಿ ಪ್ರಾಚೀನವಾದ ಕಲೆ ಸಂಸ್ಕೃತಿ ಸಾಧನೆ ಸಿದ್ಧಿಗಳ ಚರಿತ್ರೆಯ ಹಿನ್ನೆಲೆ ಇದೆ ನಮಗೆ. ಸುತ್ತಲ ಪ್ರಪಂಚವನ್ನು ನೋಡಿ ನಾವು ಮುಂದುವರಿಯಬೇಕಾಗಿರುವ ಅಂಶ ಎಷ್ಟಿದೆ ಎಂಬುದನ್ನು ಜನ ಅರಿತುಕೊಳ್ಳುತ್ತಿದೆ. ಒಳ ಹೊರ ಕಾರಣಗಳಿಂದ ನಮ್ಮ ಪ್ರಯತ್ನ ಎಷ್ಟು ವಿಫಲವಾಗುತ್ತಿದೆ ಎಂಬುದನ್ನು ನೆನೆಯುತ್ತ ಮನಸ್ಸು ತಲ್ಲಣಗೊಂಡಿದೆ. ನೂರು ವರ್ಷಗಳಿಂದಲೂ ನೂರಾರು ಕೋಟಿ ರೂಪಾಯಿ ಹಣ ವೆಚ್ಚದಿಂದ ಏರ್ಪಟ್ಟು ನಡೆಯುತ್ತಿರುವ ವಿದ್ಯಾವ್ಯಾಸಂಗ ಹೆಚ್ಚಾಗಿ ಫಲಕಾರಿಯಾಗದಿರುವ ವ್ಯಥೆ ಕೊರಗಿಸುತ್ತಿದೆ. ಹೀಗೆಯೆ ನಡೆದರೆ ಅನಂತಕಾಲ ಮುಗಿದರೂ ನಮ್ಮ ನಾಡು ಕಟ್ಟಲಾರದು; ನಮ್ಮ ನಾಗರಜೀವನ ಮೇಲ್ಪಡಲಾರದು.

ಪ್ರತಿಯೊಬ್ಬ ವ್ಯಕ್ತಿಯೂ ಶಿಕ್ಷಣದಿಂದ ಉತ್ತಮಗೊಂಡ ದೇಹಶಕ್ತಿ ಮನಶ್ಶಕ್ತಿಗಳಿಂದ ನಾಡಿನ ಸೌಭಾಗ್ಯಕ್ಕೆ ತನ್ನದೇ ಆದ ವಿಶೇಷ ಕಾಣಿಕೆಯನ್ನು ಸಲ್ಲಿಸುವಂತಾದ ಹೊರತು ದೇಶದ ಬದುಕು ಪುಷ್ಟಿಗೊಳ್ಳುವುದಿಲ್ಲ ಎಂಬುದು ಎಲ್ಲರಿಗೂ ತಿಳಿದ ತತ್ವ. ವ್ಯಕ್ತಿಯ ಸ್ವಂತ ಶಕ್ತಿ ಬಲಿತಂತೆಲ್ಲ ಅವನ ಸುತ್ತಲ ಆವರಣ ಮೇಲಾಗಲು ಸಾಧ್ಯವಾಗುವುದು. ಆವರಣವ ತುಂಬು ಸೌಕರ್ಯಗಳಿಂದ ವ್ಯಕ್ತಿ ಗುಣವೂ ಶಕ್ತಿಗಳೂ ಬಲಪಡುವುವು. ಇವೆರಡರ ಪರಸ್ಪರ ಸಹಾಯಕತೆಯಿಂದ ಒಟ್ಟು ಒಂದು ಕಾಲದ ಬದುಕು ರೂಪುಗೊಳ್ಳುವುದು. ಇಂದಿನ ವಿದ್ಯಾಭ್ಯಾಸಕ್ರಮದಲ್ಲಿ ಆವರಣಸೌಕರ್ಯ ಹೇಳಿಕೊಂಡು ಸಂತೋಷಪಡುವಂತಿಲ್ಲ. ಆವರಣಸಂಪತ್ತಿಯನ್ನು ನಿರ್ಮಾಣಮಾಡಿ ಅದರಿಂದ ಜೀವನವನ್ನು ಬೆಳಸತಕ್ಕದ್ದಾಗಿಲ್ಲ ವ್ಯಕ್ತಿಶಕ್ತಿ. ಆದ್ದರಿಂದಲೇ ಇಷ್ಟು ಸತ್ವದಾರಿದ್ರ್ಯ ನಮ್ಮಲ್ಲಿ. ಬದುಕಿನ ಎಲ್ಲ ರಂಗಗಳಲ್ಲಿಯೂ ಕೃತಕಾರ್ಯವಾಗಿ ಆಚಂದ್ರಾರ್ಕವಾದ ಸ್ಮಾರಕಗಳನ್ನು ಬಿಟ್ಟುಹೋದ ಪ್ರಾಚೀನರು ಮಾಡಬಹುದಾದ್ದೇನು? ಬುದ್ಧಿಶಕ್ತಿಯಲ್ಲಾಗಲಿ ಆಶೆ ಆಕಾಂಕ್ಷೆಗಳಲ್ಲಾಗಲಿ ಯಾರಿಗೂ ಯಾವ ಅಂಶಗಳಲ್ಲಿಯೂ ಕಡಮೆಯಿಲ್ಲದ ಇಂದಿನ ನಮ್ಮ ಜೀವನ ಹೀಗೆ ಬರಡಾಗಬೇಕಾದುದೇನು? ಇಂದಿನ ಪ್ರಯತ್ನಗಳು ಶ್ರಮಕ್ಕೂ ವೆಚ್ಚಕ್ಕೂ ತಕ್ಕಷ್ಟು ಫಲಕಾರಿಯಾಗದೆ–ವಿದ್ಯಾವಂತರೆನಿಸಿಕೊಂಡ ಜನರಲ್ಲಿ ಕೂಡ–ಕ್ರಿಯಾಶಕ್ತಿಯೂ ನಾಡಿನ ಕಲ್ಯಾಣದರ್ಶನವೂ ಬಹುಮಟ್ಟಿಗೆ ಇಲ್ಲದೆ ಇರುವುದನ್ನು ನೋಡಿದರೆ ನಮ್ಮ ಶಿಕ್ಷಣ ಕೃತಕಾರ್ಯವಾಗಿಲ್ಲ ಎನ್ನಿಸುತ್ತದೆ. ಎಲ್ಲ ವಿದ್ಯಾಕಾರ್ಯದ ಫಲ: ಉತ್ತಮರಾದ ಕರ್ತೃತ್ವಶಾಲಿಗಳ ಹುಟ್ಟು; ತಯಾರಿಕೆ. ಅಂಥವರು ಹೆಚ್ಚು ಸಂಖ್ಯೆಯಲ್ಲಿ ಹುಟ್ಟುವಂತೆ ಮಾಡತಕ್ಕ ಆವರಣದ ಬಲವೂ, ಅನುಕೂಲದ ಏರ್ಪಾಡೂ ಸರಕಾರ ಸಮಾಜ ವಿದ್ಯಾಸಂಸ್ಥೆಗಳಿಗೆ ಸೇರಿದ ಕೆಲಸ. ಜನ ಹುಟ್ಟಿ ಬೆಳೆದರೆ ನಾಡಿನ ಜೀವನ ಹತ್ತು ವರ್ಷದಲ್ಲಿ ಮೇಲಾಗುವುದು; ಹೊಸ ಜನದಿಂದ ಹೊಸ ಜಗತ್ತು ನಿರ್ಮಾಣವಾಗುವುದು. ಜೀವನ ಮೇಲಾದಂತೆಲ್ಲ ಮೇಲ್ತರದ ಜನವನ್ನು ನಿರ್ಮಾಣ ಮಾಡುವ ಅವಕಾಶ ಹೆಚ್ಚಾಗುವುದು. ಒಬ್ಬೊಬ್ಬನ ಸುತ್ತಲೂ ಒಂದೊಂದು ಪ್ರಭಾವಮಂಡಲ ಉಂಟಾಗಿ ಅಲ್ಲಿ ಉತ್ಸಾಹವೂ ಬಗೆಬಗೆಯ ಕಾರ್ಯಪ್ರಪಂಚಗಳೂ ಹುಟ್ಟಿ ಎಲ್ಲ ಸಾಧನ ಸಫಲವಾಗುವುದು. ನಮ್ಮ ಒಂದೊಂದು ಸಂಸ್ಥಾನ ಅಥವಾ ಒಂದೊಂದು ಪ್ರಾಂತದಷ್ಟು ಕೂಡ ದೊಡ್ಡವಲ್ಲದ ವಿದೇಶಗಳಲ್ಲಿ

ಆರ್ಥಿಕ ಜೀವನವಾಗಲಿ ರಾಜಕೀಯ ಸಾಮಾಜಿಕ ಜೀವನಗಳಾಗಲಿ, ಜ್ಞಾನವಿಜ್ಞಾನ ಸಾಧನೆಯಾಗಲಿ ಪ್ರಪಂಚವನ್ನು ಬೆರಗುಗೊಳಿಸುವಷ್ಟು ಹಿರಿದಾಗಿ ಬೆಳೆಯುತ್ತಿವೆ. ಒಂದೊಂದು ಶಾಸ್ತ್ರವನ್ನು ವರ್ಷವರ್ಷಕ್ಕೆ ಹತ್ತು ಹೆಜ್ಜೆ ನೂರು ಹೆಜ್ಜೆ ನಡಸಿಕೊಂಡು ಹೋಗಬಲ್ಲ ಹಲವಾರು ಮಂದಿಯನ್ನು ಆ ಆವರಣಗಳು ಉಂಟುಮಾಡುತ್ತಿವೆ. ಆ ಆವರಣಗಳ ಶಕ್ತಿ ಏನು? ಆ ವಿದ್ಯಾಪ್ರಭಾವಗಳ ವೀರ್ಯವೇನು? ಇಷ್ಟು ಪ್ರಯತ್ನಪಟ್ಟರೂ ನಮ್ಮ ವಿದ್ಯಾಪದ್ಧತಿ ನಿಷ್ಫಲವಾಗಿ ನಮ್ಮಲ್ಲಿ ವಿದ್ಯಾವಂತರಾದ ಜನರನ್ನು—ಅಲ್ಲಿ ಇಲ್ಲಿ ಒಬ್ಬಿಬ್ಬರು ಮಹಾಸತ್ವರನ್ನುಳಿದು—ಕೇವಲ ಗುಹಾಧ್ವನಿಗಳನ್ನಾಗಿ ಜಡರನ್ನಾಗಿ ಮಾಡುತ್ತಿರುವುದೇನು? ಈ ಸಂಗತಿಗಳನ್ನು ಯೋಚಿಸಿದರೆ ಯಾವ ತೇಪೆಯ ಕೆಲಸವಾಗಲಿ ಯಾವ ಸಣ್ಣ ಬೆಸುಗೆಯ ಪ್ರಯತ್ನವಾಗಲಿ ಈ ನಾಡನ್ನು ಈಗ ಬಲಪಡಿಸಲಾರದು ಎಂಬುದು ಖಂಡಿತವಾಗುವುದು. ನಮಗೆ ಈಗ ಬೇಕಾಗಿರುವುದು ನಿಸ್ಸತ್ವವಾದ ಸೊರಗಿದ ಈ ಜೀವನವನ್ನು ಸಂಪೂರ್ಣವಾಗಿ ಸರ್ವತೋಮುಖವಾಗಿ ಅರಳಿಸಬಲ್ಲ ಚೈತನ್ಯ. ಅದಾಗಬೇಕಾದರೆ ಮೇಲೆ ಹೇಳಿದಂತೆ ದೇಹದಾರ್ಢ್ಯ ಧೀಶಕ್ತಿ ಧೈರ್ಯ ದಕ್ಷತೆಗಳುಳ್ಳ ಜನ ಬೇಕು. ಒಂದೊಂದು ವಿದ್ಯಾಸಂಸ್ಥೆಯೂ ಒಂದು ಸೃಷ್ಟಿ ಚೈತನ್ಯವಾಗಬೇಕು; ಕ್ರಿಯೋತ್ಸಾಹ ಊಡಬಲ್ಲ ಪ್ರೀತಿಯ ಒಂದು ಸಾಧನವೂ ಗರುಡಿಯೂ ಆವರಣವೂ ಆಗಬೇಕು. ಯಾವ ಉಪಕರಣಗಳನ್ನು ಬೇಕಾದರೆ ಅವುಗಳನ್ನು ಒದಗಿಸಿಕೊಂಡು ಮುಂದೆ ಮುಂದೆ ಧೈರ್ಯದಿಂದ, ನಂಬಿಕೆ ಸಂತೋಷಗಳಿಂದ ನಡೆಯಬಲ್ಲ ಶಕ್ತಿ ಹೊಮ್ಮಬೇಕು, ಚಿಮ್ಮಬೇಕು. ಇದಕ್ಕೆ ಬೇಕಾದುದು ಈ ಜನರಲ್ಲಿ ಪ್ರೇಮ, ವಿಶ್ವಾಸ, ಅಭಿಮಾನ, ಕಾರ್ಯನಿಷ್ಠೆ, ನಾಳಿನ ಮಂಗಳದ ಕಡೆಗೆ ನಾಡಿನ ಮಕ್ಕಳನ್ನು ಒಂದು ದೃಢದಿಂದ ನಡಸಬೇಕೆಂಬ ಚಲಿಸದ ಪ್ರತಿಜ್ಞೆ. ಈ ಭಾಗ್ಯ ಎಲ್ಲೆಲ್ಲಿಯೂ ಬೇಗನೆ ಉಂಟಾಗಬೇಕು ಮಾತ್ರ. ಇಲ್ಲವಾದರೆ ನಾವು ಸಿಕ್ಕಿದವರ ಕಾಲ್ತುಳಿತಕ್ಕೆ ಬಿದ್ದು ಅಡಗಿಹೋಗಬೇಕಾದೀತು. ತಡೆಯಲಾಗದ ಪ್ರಪಂಚ ಶಕ್ತಿಗಳ ಹುಚ್ಚುಹೊಳೆಯಲ್ಲಿ ಕೊಚ್ಚಿಹೋಗಬೇಕಾಗುವುದು. ಸಾರ್ಜೆಂಟ್ ಅವರು ಹೇಳಿದ 'ಕಾಲ ಮೀರುವ ಮುಂಚೆಯೇ' ಎಂಬ ನುಡಿಯನ್ನು ಆ ಅರ್ಥದಲ್ಲಿ ಮಾತ್ರವೇ ನಾವು ತೆಗೆದುಕೊಳ್ಳಲು ಬಯಸುತ್ತೇವೆ.

---

## ಕೃತಜ್ಞತೆ

ಈ ಸಂಚಿಕೆಯೊಂದಿಗೆ 'ಕನ್ನಡ ನುಡಿ'ಯ ಎರಡನೆಯ ಸಂಪುಟ ಮುಗಿಯುವುದು. ವಿಜಯದಶಮಿ (೧೦-೧೦-೧೯೪೦) ಯಿಂದ 'ಕನ್ನಡ ನುಡಿ' ತನ್ನ ಮೂರನೆಯ ವರ್ಷದಲ್ಲಿ ಅಡಿಯಿಡುವುದೆಂದು ತಿಳಿಸಲು ನಮಗೆ ಸಂತೋಷವಾಗುತ್ತದೆ. ಕಳೆದ ಎರಡು ವರ್ಷಗಳಿಂದ ಮಾಡಿದ ಈ ಸೇವೆಯನ್ನು ಕೈಕೊಂಡು ನುಡಿಯ ಏಳ್ಗೆಯಲ್ಲಿ ನೆರವಾದ ಎಲ್ಲ ಮಹನೀಯರಿಗೂ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಮುಂದಿನ ವರ್ಷಗಳಲ್ಲಿಯೂ ಕನ್ನಡ ಬಾಂಧವರ ನೆರವು ಬೆಂಬಲಗಳಿಂದ ಪತ್ರಿಕೆಯು ಹೆಚ್ಚು ವೈವಿಧ್ಯದ ಅಂಶಗಳಿಂದ ಕೂಡಿ ನಾಡಿನ ಸೇವೆ ಮಾಡಲು ಪ್ರಯತ್ನಿಸುತ್ತದೆಯೆಂದು ಹೇಳಬಯಸುತ್ತೇವೆ.

# ಪರಿಷತ್ತಿನ ಸುದ್ದಿ

### ಕಾರ್ಯಸಮಿತಿಯ ನಿರ್ಣಯಗಳು

೧. ಎಂದಿನಂತೆ ಈ ವರ್ಷವೂ ಬಾಲಕ ಬಾಲಕಿಯರಿಗಾಗಿ ಕಂಠಪಾಠ ಸ್ಪರ್ಧೆಯನ್ನು ಮುಂದಿನ ತಿಂಗಳಿನಲ್ಲಿ ನಡಸತಕ್ಕದ್ದು.

೨. ಸಾಹಿತ್ಯ ಪರೀಕ್ಷೆಗಳ ಮೊದಲನೆಯ ಪರೀಕ್ಷೆಯ ಪ್ರವೇಶಧನವನ್ನು ೮ ಆಣೆಗೆ ಬದಲು ೨ ಆಣೆ ಇರತಕ್ಕದ್ದು.

೩. ಸದಸ್ಯತ್ವ ಚಂದಾಬಾಕಿ ನಿಲ್ಲಿಸಿಕೊಂಡಿರುವವರ ವಿಷಯ :—

(೧) ಮೂರು ವರ್ಷ ಮತ್ತು ಅದಕ್ಕೆ ಮೇಲ್ಪಟ್ಟ ವರ್ಷಗಳಿಂದ ಚಂದಾ ಬಾಕಿ ಉಳಿಸಿಕೊಂಡಿರುವ ಸದಸ್ಯರ ಹೆಸರುಗಳನ್ನು ಲೆಕ್ಕಗಳಿಂದ ತೊಡೆದುಹಾಕತಕ್ಕದ್ದು.

(೨) ಎರಡು ವರ್ಷದ ಚಂದಾ ಬಾಕಿ ನಿಲ್ಲಿಸಿಕೊಂಡಿರುವವರಿಗೆ ಕಡೆಯದಾದ ತಿಳಿವಳಿಕೆ ಕೊಟ್ಟು ಅವರಿಂದ ಪ್ರತಿಫಲ ದೊರೆಯದಿದ್ದಲ್ಲಿ ಅವರ ಹೆಸರುಗಳನ್ನೂ ತೊಡೆದುಹಾಕತಕ್ಕದ್ದು.

### ಬೆಳ್ಳಿಯ ಹಬ್ಬಕ್ಕೆ ಸಹಾಯ

ಬೊಂಬಾಯಿನ ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು ಪರಿಷತ್ತಿನ ಬೆಳ್ಳಿಯ ಹಬ್ಬಕ್ಕೆ ಹಿಂದೆ ೫೦ ರೂ. ಸಹಾಯ ದ್ರವ್ಯ ಕೊಟ್ಟಿದ್ದರ ಜೊತೆಗೆ ಈಚೆಗೆ ಮತ್ತೆ ೭೦ ರೂ. ಗಳ ಸಹಾಯ ದ್ರವ್ಯವನ್ನು ಕಳಿಸಿರುತ್ತಾರೆ. ಈ ಮಹನೀಯರ ಈ ಉದಾರದಾನಕ್ಕೆ ಪರಿಷತ್ತು ಕೃತಜ್ಞತೆಯುಳ್ಳದ್ದಾಗಿದೆ.

### ಬೆಂಗಳೂರಿನಲ್ಲಿ ನಾಡಹಬ್ಬ

ಭಾನುವಾರ (೬-೧೦-೪೦) ಸಂಜೆ ೫ ಗಂಟೆಗೆ ಪರಿಷತ್ತಿನಲ್ಲಿ ನಾಡಹಬ್ಬವನ್ನು ಆಚರಿಸಲಾಗುವುದು. ಸಂಗೀತ, ಭಾಷಣ ಮುಂತಾದ ವಿವಿಧ ಕಾರ್ಯಕ್ರಮವೇರ್ಪಟ್ಟಿದೆ. ಎಲ್ಲರೂ ಬರಬೇಕೆಂದು ಬಿನ್ನಹ.

---

### ಷಡಕ್ಷರಿಯ ರಾಜಶೇಖರ ವಿಳಾಸ

ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಪ್ರಾಂತ ಸಮಿತಿಯ ಆಶ್ರಯದಲ್ಲಿ ಬೆಂಗಳೂರಿನ ಶ್ರೀಮಾನ್ ಟಿ. ಎನ್. ಚನ್ನಪ್ಪನವರು ಷಡಕ್ಷರದೇವನ 'ರಾಜಶೇಖರ ವಿಳಾಸ'ವನ್ನು ಕುರಿತು ಕಳೆದ ಸೋಮವಾರ ಭಾಷಣಮಾಡಿದರು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷತೆ ವಹಿಸಿದರು.

ಶ್ರೀ॥ ಟಿ. ಎನ್. ಚನ್ನಪ್ಪನವರು ಸುಮಾರು ಒಂದು ಗಂಟೆಯ ಕಾಲ ಷಡಕ್ಷರದೇವನ ವಿಷಯವಾಗಿಯೂ, ಅವನ ಕೆಲವು ಕಾವ್ಯಗಳ ವಿಷಯವಾಗಿಯೂ ಭಾಷಣ ಮಾಡುತ್ತ ಕವಿ ಪ್ರತಿಪಾದಿಸಿರುವ ಶೋಕರಸ ಮತ್ತು ವೀರರಸಗಳ ಪರಿಚಯವನ್ನು ಸಂಗೀತದ ಮೂಲಕ ಸಭಿಕರಿಗೆ ಮನಗಾಣಿಸಿದರು.

ಅಧ್ಯಕ್ಷರು ಭಾಷಣಕಾರರ ಭಾಷಣವನ್ನೂ ಅವರ ಹಾಡುಗಾರಿಕೆಯನ್ನೂ ಹೊಗಳಿ "ನಾನು ಶ್ರೀಮಾನ್ ಟಿ. ಎನ್. ಚನ್ನಪ್ಪನವರನ್ನು ಬಹಳ ದಿನಗಳಿಂದ ಬಲ್ಲೆ. ಅವರು ವೀರಶೈವ ಸಾಹಿತ್ಯದಲ್ಲಿ ಬಹಳ ಉತ್ತಮ ಕೆಲಸ ಮಾಡುತ್ತಿದ್ದಾರೆ. ನಾವು ವಿಶ್ವವಿದ್ಯಾನಿಲಯದಿಂದ ಕೆಲವು ಪುರಾತನ ಕವಿಗಳ ಉದ್ಗ್ರಂಥಗಳ ಸಂಕ್ಷಿಪ್ತ ಪ್ರಕಟನೆಗಳನ್ನು ತರಬೇಕೆಂದು ಉದ್ದೇಶಿಸಿ ಮೊದಲು 'ಹರಿಶ್ಚಂದ್ರಕಾವ್ಯ'ವನ್ನು ಪ್ರಕಟಿಸಿದ ಮೇಲೆ ಶ್ರೀ॥ ಚನ್ನಪ್ಪನವರು ಈ ಕೆಲಸವನ್ನು ಬಹಳ ಹಿಂದೆಯೇ ಮಾಡಿದ್ದರೆಂದು ತಿಳಿಯಬಂದಿತು. ಇತ್ತೀಚೆಗೆ ಅವರು ಷಡಕ್ಷರಿಯ 'ರಾಜಶೇಖರ ವಿಳಾಸ'ವನ್ನೂ ಹರಿಹರನ 'ಗಿರಿಜಾ ಕಲ್ಯಾಣ'ವನ್ನೂ ಸಂಕ್ಷೇಪಿಸಿ ಪ್ರಕಟಿಸಿದ್ದಾರೆ. ಇವರು ಇನ್ನೂ ಇಂತಹ ಕಾರ್ಯಗಳನ್ನು ಹೆಚ್ಚು ಹೆಚ್ಚಾಗಿ ಮಾಡಲಿ" ಎಂದು ಹೇಳಿ ಭಾಷಣಕಾರರನ್ನು ವಂದಿಸಿದರು.

ಕೊನೆಯಲ್ಲಿ ಕಾರ್ಯದರ್ಶಿಯವರು ಭಾಷಣಕಾರರನ್ನೂ ಅಧ್ಯಕ್ಷರನ್ನೂ ಸಭಿಕರನ್ನೂ ವಂದಿಸಿದರು.

## ಸಾದರ ಸ್ವೀಕಾರ

೧. **ಬೆಳ್ಳಿಯ ಹಬ್ಬ** (ಏಕಾಂಕ ನಾಟಕಗಳು): ಬರೆದವರು: ಶ್ರೀ॥ ಎನ್. ಕೆ. ಕುಲಕರ್ಣಿ, ಎಂ.ಎ., ಬಿ.ಟಿ. ಪ್ರಕಾಶಕರು: ಮನೋಹರ ಗ್ರಂಥ ಭಂಡಾರ, ಧಾರವಾಡ. ಕ್ರೌನ್ ಅಷ್ಟಪತ್ರ ೫+೭೨ ಪುಟಗಳು. ಬೆಲೆ ೮ ಆಣೆ.

ಈ ಸಂಗ್ರಹದಲ್ಲಿ ಬೆಳ್ಳಿಯ ಹಬ್ಬ, ಬಿ. ಟಿ. ಬುದ್ಧಿವಂತ, ಹೆರಿಗೆಯ ಹಿಟ್ಲರ್, ವಸುಂಧರಾಖ್ಯಾನ, ಅದ್ಭುತ ಶಿಕ್ಷಣ, ಉಷಃಪಾರಾಯಣ, ಮುಸುಕು ಎಂಬ ಏಳು ಏಕಾಂಕ ನಾಟಕಗಳಿವೆ.

೨. **ಮೈಸೂರು ಒಡೆಯರ ಕಥೆಗಳು**: ಬರೆದವರು: ಶ್ರೀ॥ ಓ. ಎನ್. ಲಿಂಗಯ್ಯ, ಬಿ. ಎ. (ಆನರ್ಸ್). ಪ್ರಕಾಶಕರು: ಶ್ರೀ॥ ಶೈಲಕುಮಾರಿ ಗ್ರಂಥಮಾಲೆಯ ಒಡೆಯರು. ಕ್ರೌನ್ ಅಷ್ಟಪತ್ರ ೪+೯೩ ಪುಟಗಳು ಬೆಲೆ ೮ ಆಣೆ.

(೪೫೭ನೆಯ ಪುಟದಿಂದ)

ಬೀರುವುದು—ನನಗೆ, ನಿಮಗೆ, ನನ್ನ ರೈತನಿಗೆ, ನಿಮ್ಮ ಮನೆ ಮುಸುರೆ ಕಸತೆಗೆಯುವವಳಿಗೆ—ಎಲ್ಲರಿಗೂ ಚೆನ್ನಾಗಿ ಗೊತ್ತಿರುವಾಗ, 'ಮಲ್ಲಿಗೆಯ ಲರಿನ ಸೌರಭವೇನಿದು.' ಎಂದೇಕೆ ಪದ್ಯ ಬರೆಯಿಸಿ ಹಾಡುತ್ತೀರಿ?

'ಕಂಡವರಲ್ಲಿ' ಒಳ್ಳೆಯತನ ಇಲ್ಲ ಎಂದು ಹೇಳಲಿಲ್ಲ. ಆದರೆ, ಕೆಲವು ಸಂದರ್ಭಗಳಲ್ಲಿ ಹೀಗೆ ತೊಂದರೆಯಾಗಿರುವಾಗ 'ಕಂಡವರೇ' ಇಲ್ಲದಂತೆ ಮಾಡಲು ಅಥರ್ವಣ ವೇದದಲ್ಲಿ ಒಂದು ಮಂತ್ರವೋ, ತಂತ್ರವೋ ಯಾಗವೋ ಪೂಜೆಯೋ ಇರಬಾರದಾಗಿತ್ತೇ ಎನ್ನಿಸುತ್ತದೆ. ಅದು ಕೆಲವು ಸಂದರ್ಭಗಳಲ್ಲಿ ಮಾತ್ರ. 'ಕಂಡವರ' ಮನೆಗೆ ಹೋಗಿ ಕಾಫೀ ಉಪ್ಪಿಟ್ಟು ಬೇಡ ಎಂದರೂ—ಸಂಕೋಚದಿಂದ ಅಷ್ಟೇ—ಕೊಟ್ಟು ಬಹಳ ಉಪಚಾರ ಹೇಳುತ್ತಾರೆ. ಅಂತಹ ಸಂದರ್ಭಗಳಲ್ಲಿ 'ಕಂಡವರಿರಲಿ' ಕೆಲವೇ ಸಂದರ್ಭಗಳವು ಎಂದು ಹೇಳಿರುವುದರಿಂದ 'ಕಂಡವರು' ಆಯುರಾರೋಗ್ಯೈಶ್ವರ್ಯಾದಿಗಳಿಂದ ಒಡಗೂಡಿ ನಿರಂತರವೂ ನಮಗೆ ಉಪಚಾರ ಮಾಡುತ್ತಿರಲಿ. ಭಗವಂತನ ಕೃಪೆ ನಮ್ಮ 'ಕಂಡವರ' ಮೇಲೆ ಸಂತತವಾಗಿರಲಿ.

—**ಶಿರೀಷ.**

---

## ಕವೀಂದ್ರ ವಚನ ಸಮುಚ್ಚಯ

(ಎಂ. ವಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.)

ಸಂಸ್ಕೃತದಲ್ಲಿ ಸಂಗ್ರಹಗ್ರಂಥಗಳು ಅನೇಕವಾಗಿವೆ. ಹಿಂದಿನ ಕಾಲದ ಕವಿಗಳ ಸ್ವಾರಸ್ಯವಾದ ಪದ್ಯಗಳನ್ನು ಒಂದುಕಡೆ ಒಟ್ಟುಗೂಡಿಸಿ ಓದುಗರ ಮುಂದೆ ಇಡಬೇಕೆಂಬುದೇ ಈ ಸಂಗ್ರಹಗಳ ಕೆಲಸಕ್ಕೆ ಕೈ ಹಾಕಿದವರ ಆಶೆ. ಕಾವ್ಯಗಳಲ್ಲಿ ಮತ್ತು ಅಲಂಕಾರ ಗ್ರಂಥಗಳಲ್ಲಿರುವ ಮನೋಹರವಾದ ಪದ್ಯಗಳನ್ನೂ ಆಗಾಗ ಪ್ರಾಸಂಗಿಕವಾಗಿ ಹೇಳಿದ ವಚನಗಳನ್ನೂ ಆರಿಸಿ, ಕೂಡಿಸಿ, ಸುಭಾಷಿತಗಳನ್ನು ಸಂಗ್ರಹಿಸಲಾಗಿದೆ. **ಸದುಕ್ತಿಕರ್ಣಾಮೃತ, ಶಾರ್ಙ್ಗಧರಪದ್ಧತಿ** ಮೊದಲಾದ ಗ್ರಂಥಗಳೂ, ಜಲ್ಹಣನ **ಸೂಕ್ತಿಮುಕ್ತಾವಳೀ** ಮತ್ತು ವಲ್ಲಭದೇವನ **ಸುಭಾಷಿತಾವಳೀ** ಮುಂತಾದ ಪುಸ್ತಕಗಳೂ ಈ ಗುಂಪಿಗೆ ಸೇರಿದವು. ಈ ಗ್ರಂಥಗಳಲ್ಲಿ ಸಂಗ್ರಹಿಸಿರುವ ಪದ್ಯಗಳ ಕರ್ತೃಗಳು ಯಾರು, ಅವು ಯಾವ ಗ್ರಂಥದಿಂದ ಉಧೃತವಾಗಿವೆ, ಆ ಕವಿಗಳ ಕಾಲ, ದೇಶ ಮತ್ತು ಚರಿತ್ರೆಗಳೇನು ಎಂಬುದನ್ನು ತಿಳಿಸಲು ಈ ಗ್ರಂಥಗಳನ್ನು ಮೊದಲುಬಾರಿ ಅಚ್ಚುಹಾಕಿಸಿದ ಔಫ್ರೆಕ್ಟ್, ಪೀಟರ್‌ಸನ್, ಥಾಮಸ್ ಮೊದಲಾದ ವಿದ್ವಾಂಸರು ಬಹುವಾಗಿ ಶ್ರಮಿಸಿದ್ದಾರೆ.

**ಕವೀಂದ್ರ ವಚನ ಸಮುಚ್ಚಯ** ಈ ತೆರದ ಒಂದು ಪ್ರಾಚೀನ ಸಂಸ್ಕೃತ ಸುಭಾಷಿತ ಗ್ರಂಥ. ಈ ಗ್ರಂಥದ ಮೂಲ ಪ್ರತಿಯನ್ನು ಕಂಡುಹಿಡಿದವರು ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳು. ಅವರಿಗೆ ದೊರೆತ ಹಸ್ತಪ್ರತಿಯಲ್ಲಿ ಗ್ರಂಥದ ಹೆಸರಾಗಲೀ ಅದರ ಸಂಗ್ರಹಕಾರನ ಹೆಸರಾಗಲೀ ಇರಲಿಲ್ಲ.[1] ಆದುದರಿಂದ ಅವರು ತಮಗೆ ದೊರೆತ ಗ್ರಂಥಪ್ರತಿಯಲ್ಲಿನ ಮೊದಲನೆಯ ಪದ್ಯವಾದ

ನಾನಾ ಕವೀಂದ್ರವಚನಾನಿ ಮನೋಹರಾಣಿ
ಸಂಖ್ಯಾವತಾಂ ಪರಮಕಂಠ ವಿಭೂಷಣಾನಿ ।
ಆಕಾಂಕ್ಷಿತಾನಿ ಶಿರಸಶ್ಚ ಮಹಾಕವೀನಾಂ
ತೇಷಾಂ ಸಮುಚ್ಚಯಮನರ್ಘಮಹಂ ವಿಧಾಸ್ಯೇ ॥

ಎಂಬುದರಲ್ಲಿನ ಕೆಲವು ಪದಗಳಿಂದ ಇದು ಕವೀಂದ್ರ ವಚನ ಸಮುಚ್ಚಯ ವಿರಬಹುದೆಂದು ಊಹಿಸಿ ಈ ಸಂಗ್ರಹಕ್ಕೆ ಆ ಹೆಸರನ್ನು ಕೊಟ್ಟರು. ಔಫ್ರೆಕ್ಟ್ (Aufrecht) ಪಂಡಿತರ Catalogus Catalogorum ಎಂಬ ಸಂಸ್ಕೃತ ಗ್ರಂಥಗಳ ಸೂಚೀಪುಸ್ತಕದಲ್ಲಿ ಇದೇ ಹೆಸರಿನ ಎರಡು ಗ್ರಂಥಗಳನ್ನು ಗುರುತಿಸಿದ್ದಾರೆ. ಆ ಗ್ರಂಥಗಳಿಗೂ, ಈ ಸುಭಾಷಿತ ಸಂಗ್ರಹಕ್ಕೂ ಹೆಸರಿನ ಸಾಮ್ಯವೊಂದುಳಿದು ಮತ್ತೆ ಬೇರೆ ಸಂಬಂಧವಿಲ್ಲ.[2]

ಈ ಸಂಗ್ರಹದಲ್ಲಿ ಹದಿನೆಂಟು ಪ್ರಕರಣಗಳಿವೆ. ಮೊದಲನೆಯದು 'ಸುಗತವ್ರಜ್ಯಾ'. ಈ ಪ್ರಕಣದಲ್ಲಿ ಅಶ್ವಘೋಷ, ವಸುಕ, ಅಪರಾಜಿತ ರಕ್ಷಿತ, ವಸುಕಲ್ಪ, ಶ್ರೀವರನಂದಿ, ಬಲ್ಲಣ, ಶ್ರೀಪಾಶವರ್ಮ, ಜಿತಾರಿನಂದಿ ಮತ್ತು ತ್ರಿಲೋಚನ ಎಂಬ ಕವಿಗಳ ಪದ್ಯಗಳಿವೆ. ಎರಡನೆಯದು ಬೋಧಿಸತ್ವರಲ್ಲಿ ಒಬ್ಬನಾದ ಅವಲೋಕಿತೇಶ್ವರನಿಗಾಗಿ ಮೀಸಲಾಗಿದೆ. ಇದರಲ್ಲಿರುವ ಪದ್ಯಗಳು ಪಂಡಿತ ಬುದ್ಧಾಕರಗುಪ್ತ ಮತ್ತು ರತ್ನಕೀರ್ತಿ ಇವರಿಗೆ ಸೇರಿದುವು. ಮೊದಲ ಎರಡು ಪ್ರಕರಣಗಳಲ್ಲಿನ ಕವಿಗಳೂ ಸುಪ್ರಸಿದ್ಧರು. ಅಶ್ವಘೋಷನು **ಬುದ್ಧಚರಿತ** ಮತ್ತು **ಸೌಂದರನಂದ** ಎಂಬ ಎರಡು ಬೌದ್ಧ ಮಹಾಕಾವ್ಯಗಳ ಕರ್ತೃ. ರತ್ನಾಕರನು **ಅಪೋಹಸಿದ್ಧಿ** ಎಂಬ ದರ್ಶನ ಗ್ರಂಥವನ್ನು ರಚಿಸಿದವನು. ಮುಂದಿನ ಪ್ರಕರಣಗಳಲ್ಲಿ ಇವರಂತೆಯೇ ಮತ್ತು ಇವರಿಗಿಂತ ಹೆಚ್ಚಾಗಿ ಪ್ರಸಿದ್ಧರಾದ ಕಾಳಿದಾಸ, ಬಾಣ, ಭವಭೂತಿ, ಶ್ರೀಹರ್ಷದೇವ, ಶ್ರೀಹರ್ಷಪಾಲದೇವ, ವಾಕ್ಪತಿರಾಜ, ವಿಕ್ರಮಾದಿತ್ಯ, ರಾಜಶೇಖರ, ಅಮರಸಿಂಹ, ಪುರುಷೋತ್ತಮದೇವ, ವರಾಹಮಿಹಿರ, ಮಯೂರ, ಮುರಾರಿ, ಪಾಣಿನಿ, ಮಾಘ, ಅಮರುಕ ಇವರುಗಳ ಪದ್ಯಗಳಿವೆ. ಈ ಕವಿಗಳೆಲ್ಲರೂ ಸಂಸ್ಕೃತಭಾಷೆಗೆ ಗೌರವ ತಂದವರು. ಇವರಷ್ಟು ಪ್ರಸಿದ್ಧರಲ್ಲದ ಸುಮಾರು ಎಂಬತ್ತು ಮಂದಿ ಇತರ ಕವಿಗಳ ಪದ್ಯಗಳೂ ಈ ಸಮುಚ್ಚಯದಲ್ಲಿ ಸೇರಿವೆ.

ಕವೀಂದ್ರ ವಚನ ಸಮುಚ್ಚಯ ಇದುವರೆಗೂ ದೊರೆತಿರುವ ಸುಭಾಷಿತ ಗ್ರಂಥಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದ ಗ್ರಂಥ. ಇದು ಪ್ರಾಯಶಃ ಕ್ರಿ. ಶ. ೧೧ನೆಯ ಶತಮಾನದಲ್ಲಿ ಸಂಗ್ರಹಿಸಿದ ಗ್ರಂಥ. ಇದನ್ನು ಬೌದ್ಧ ಕವಿಯೊಬ್ಬನು ಸಂಗ್ರಹಿಸಿರಬೇಕೆಂದು ಊಹಿಸಲು ಸಾಕಾದಷ್ಟು ಆಧಾರಗಳಿವೆ. ಮೊದಲ ಎರಡು ಪ್ರಕರಣಗಳೂ ಬುದ್ಧನ ಮತ್ತು ಅವಲೋಕಿತೇಶ್ವರನ ಸ್ತೋತ್ರಕ್ಕೆ ಮುಡುಪಾಗಿವೆ. ಕಾಳಿದಾಸ ಮೊದಲಾದ ಮಹಾಕವಿಗಳ ಪದ್ಯಗಳು ದೊರೆವುದು ಕೂಡಾ ಇನ್ನುಳಿದ ಪ್ರಕರಣಗಳಲ್ಲಿಯೇ.

ಈ ಸಂಗ್ರಹದಲ್ಲಿ ಮೇಲೆ ಹೇಳಿದಂತೆ ೧೮ ಪ್ರಕರಣಗಳಿವೆ. ಪ್ರಕರಣಗಳ ಹೆಸರುಗಳು ಇವು:—

| | |
|---|---|
| ೧. ಸುಗತ ವ್ರಜ್ಯಾ | ೧೦. ತರುಣೀ ವ್ರಜ್ಯಾ |
| ೨. ಲೋಕೇಶ್ವರ ವ್ರಜ್ಯಾ | ೧೧. ಅನುರಾಗ ವ್ರಜ್ಯಾ |
| ೩. ಹರಿ ವ್ರಜ್ಯಾ | ೧೨. ದೂತೀವಚನ ವ್ರಜ್ಯಾ |
| ೪. ಸೂರ್ಯ ವ್ರಜ್ಯಾ | ೧೩. ಸಂಭೋಗ ವ್ರಜ್ಯಾ |
| ೫. ವಸಂತ ವ್ರಜ್ಯಾ | ೧೪. ಸಮಾಪ್ತನಿಧುವನಚಿಹ್ನ ವ್ರಜ್ಯಾ |
| ೬. ಗ್ರೀಷ್ಮ ವ್ರಜ್ಯಾ | ೧೫. ಮಾನಿನೀ ವ್ರಜ್ಯಾ |
| ೭. ಪ್ರಾವೃಟ್ ವ್ರಜ್ಯಾ | ೧೬. ವಿರಹಿಣೀ ವ್ರಜ್ಯಾ |
| ೮. ಮದನ ವ್ರಜ್ಯಾ | ೧೭. ವಿರಹಿ ವ್ರಜ್ಯಾ |
| ೯. ವಯಃ ಸಂಧಿ ವ್ರಜ್ಯಾ | ೧೮. ಅಸತೀ ವ್ರಜ್ಯಾ |

ಒಟ್ಟು ಪದ್ಯಗಳ ಸಂಖ್ಯೆ ೫೨೫. ಇದರಲ್ಲಿ, ಪ್ರತಿಯೊಂದು ಪ್ರಕರಣಕ್ಕೂ 'ವ್ರಜ್ಯಾ' ಎಂಬ ಹೆಸರನ್ನು ಕೊಡಲಾಗಿದೆ. ಇದು ಪ್ರಾಕೃತದ 'ವಗ್ಗ' ಎಂಬುದರ ಪರಿಭಾಷೆಯಾಗಿರಬಹುದು. 'ವರ್ಗ' ಎಂಬುದಕ್ಕೇನು ಅರ್ಥವೋ 'ವ್ರಜ್ಯಾ' ಎಂಬುದಕ್ಕೂ ಅಷ್ಟೆ. ಜಯವಲ್ಲಭದೇವನೆಂಬ ಜೈನ ಕವಿ ಆರ್ಯಾವೃತ್ತದಲ್ಲಿ ಬರೆದಿರುವ **ವಜ್ಜಲಗ್ಗ** ಎಂಬ ಗ್ರಂಥದಲ್ಲಿ ಪ್ರತಿಯೊಂದು ಅಧ್ಯಾಯಕ್ಕೂ 'ವಜ್ಜ' ಎಂಬ ಹೆಸರನ್ನು ಕೊಟ್ಟಿದ್ದಾನೆ. ಸಾಧಾರಣದೇವನು ಪರಿಶೋಧಿಸಿ, ವ್ಯಾಖ್ಯಾನಿಸಿದ ಹಾಲನ **ಆರ್ಯಾಸಪ್ತಶತಕ**ದಲ್ಲಿಯೂ 'ವಜ್ಜ' ಪದವನ್ನು ಉಪಯೋಗಿಸಲಾಗಿದೆ.[3] ಕವೀಂದ್ರ ವಚನ ಸಮುಚ್ಚಯದಲ್ಲಿನ ಪ್ರಕರಣಗಳು ಕೊಂಚ ಹೆಚ್ಚುಕಡಮೆ ಆರ್ಯಾಸಪ್ತಶತಕದಂತೆಯೇ ಇದೆಯೆನ್ನಬಹುದು. ಗ್ರಂಥವಿಭಾಗದಲ್ಲಿ ಹಾಲನೂ, ಕವೀಂದ್ರ ವಚನ ಸಮುಚ್ಚಯ ಕರ್ತೃವೂ ಒಂದೇ ಮೇಲ್ಪಂಕ್ತಿಯನ್ನು ಅನುಸರಿಸಿರುವಂತೆ ಕಾಣುತ್ತದೆ. ಇವುಗಳಲ್ಲಿ, ಮೊದಲು ನಮಸ್ಕಾರ ಶ್ಲೋಕಗಳು, ಆಮೇಲೆ ಋತುವರ್ಣನೆ, ಅನಂತರ ಶೃಂಗಾರರಸಕ್ಕೆ ಸಂಬಂಧಪಟ್ಟ ಚಿತ್ರಗಳು; ಸುಭಾಷಿತಾವಳಿಯಲ್ಲಿಯೂ ಮೊದಲು ನಮಸ್ಕಾರ ಮತ್ತು ಆಶೀರ್ವಾದರೂಪವಾದ ಪದ್ಯಗಳು ಬರುತ್ತವೆ. ನಾಯಕ ನಾಯಕಿಯರನ್ನು ವರ್ಣಿಸಿರುವ ಪದ್ಯಗಳು ಶೃಂಗಾರಪ್ರಕರಣ

---

1. Report on the search for Sanskrit manuscripts (Calcutta 1901).

2. Introduction to *Kavindravacanasamuccayah* F. W. Thomas, p. 7.

3. Pischel's Prakrit Grammar. 12 Note.

ದಲ್ಲಿ ಬರುತ್ತವೆ. ಶಾರ್ಙಧರಪದ್ಧತಿಯಲ್ಲಿ, ಶೃಂಗಾರರಸದ ಪದ್ಯಗಳು ಬರುವುದು ಕೊನೆಯಲ್ಲಿ. ಈ ಸಂಗ್ರಹಕಾರರು ಗ್ರಂಥವಿಭಾಗದಲ್ಲಿ, ತಮ್ಮದೇ ಆದ ಒಂದೊಂದು ಪದ್ಧತಿಯನ್ನು ಅನುಸರಿಸಿದ್ದಾರೆ. ಕವೀಂದ್ರ ವಚನ ಸಮುಚ್ಚಯವನ್ನು ಸಂಗ್ರಹಿಸಿದ ಎರಡು ಶತಮಾನ ಗಳಲ್ಲೇ ಸದುಕ್ತಿಕರ್ಣಾಮೃತವೆಂಬ ಗ್ರಂಥವೊಂದು ತಲೆದೋರಿತು. ಇದನ್ನು ಸಂಗ್ರಹಿಸಿದವನು ಹನ್ನೆರಡನೆಯ ಶತಮಾನದಲ್ಲಿ ವಂಗದೇಶದ ದೊರೆಯಾಗಿದ್ದ ಲಕ್ಷ್ಮಣಸೇನನ ಬಳಿ ಮಾಂಡಲಿಕನಾಗಿದ್ದ ವಟು ದಾಸನ ಮಗ ಶ್ರೀಧರದಾಸನೆಂಬವನು. ಇದರಲ್ಲಿ ನೂರಾರು ಕವಿಗಳ ಸಾವಿರಾರು ಪದ್ಯಗಳಿವೆ.[4] ಈ ಸಂಗ್ರಹದಲ್ಲಿಯೂ ಮೊದಲು ದೇವತಾ ಸ್ತೋತ್ರ ಪದ್ಯಗಳು, ಆಮೇಲೆ ನಾಯಿಕಾಲಕ್ಷಣಗಳು ಮೊದಲಾದ ಶೃಂಗಾರರಸಪ್ರಧಾನವಾದ ಪದ್ಯಗಳು, ಋತುವರ್ಣನೆ, ಚಾಟುಪ್ರವಾಹ, ಅನಂತರ ಮೃಗ ಪಕ್ಷಿ ಸಸ್ಯಗಳನ್ನುದ್ದೇಶಿಸಿ ಹೇಳಿದ ಅಪದೇಶವಾಕ್ಯ ಗಳು. ಮುಂದೆ ಮನುಷ್ಯ, ಅಶ್ವ, ಗೋ, ಕವಿ, ದುರ್ಜನ, ರಾಜ, ಕಾಲ ಇವನ್ನು ಕುರಿತ ಉಚ್ಚಾವಚಪ್ರವಾಹ – ಹೀಗೆ ಭಾಗಗಳಾಗಿವೆ. ಪ್ರತಿಯೊಂದು ಪ್ರವಾಹವೂ (ಪ್ರವಾಹವೆಂಬುದು ಅಧ್ಯಾಯಕ್ಕೆ ಕೊಟ್ಟಿರುವ ಹೆಸರು) 'ವೀಚೀ' ಎಂಬ ಹೆಸರಿನಿಂದ ವಿಭಾಗವಾಗಿದೆ. ಈ ಸದುಕ್ತಿಕರ್ಣಾಮೃತದಲ್ಲಿ ಕವೀಂದ್ರ ವಚನ ಸಮುಚ್ಚಯದಲ್ಲಿನ ಅನೇಕ ಪದ್ಯಗಳು ಕಂಡುಬರುತ್ತವೆ. ಆದುದರಿಂದ ಶ್ರೀಧರದಾಸನು ತನ್ನ ಕಾಲಕ್ಕೆ ಬಳಕೆಯಲ್ಲಿದ್ದ ಈ ಸಂಗ್ರಹಗ್ರಂಥವನ್ನು ಪ್ರಕರಣ ಮೊದ ಲಾದುವುಗಳಲ್ಲಿ ವ್ಯತ್ಯಾಸಮಾಡಿ ಅನೇಕ ಹೊಸ ಸುಭಾಷಿತಗಳನ್ನು ಸೇರಿಸಿ ಇದರ ಬೆಂಬಲದಿಂದ, ಹೊಸ ಸಂಗ್ರಹ ಗ್ರಂಥವನ್ನೇ ರಚಿಸಿದನು ಎನ್ನಬಹುದು.

ಈ ಆಧಾರಗಳ ಮೇಲೆ ಈ ಕವೀಂದ್ರ ವಚನ ಸಮುಚ್ಚಯದ ಮಹತ್ವವನ್ನು ಸ್ಥೂಲವಾಗಿ ಈ ಕೆಳಗೆ ಕಂಡಂತೆ ಹೇಳಬಹುದು.

ಈ ಗ್ರಂಥ, ೧. ಇದುವರೆಗೆ ದೊರೆತಿರುವ ಸಂಸ್ಕೃತ ಸುಭಾಷಿತ ಗ್ರಂಥಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು. ೨. ಬೌದ್ಧ ಕವಿ ಸಂಗ್ರಹಿಸಿರುವ ಏಕಮಾತ್ರ ಸುಭಾಷಿತ ಗ್ರಂಥ. ೩. ಬಹುಪ್ರಖ್ಯಾತ ವಾದ ಶ್ರೀಧರದಾಸನ ಸದುಕ್ತಿಕರ್ಣಾಮೃತಕ್ಕೆ ಆಧಾರರೂಪವಾದುದು.

ಗ್ರಂಥ ಪ್ರಾರಂಭವಾಗುವುದು 'ನಮೋ ಬುದ್ಧಾಯ' ಎಂದೆರಗಿ, ಈ ನಮಸ್ಕಾರ ಶ್ಲೋಕದಿಂದ :

ಆಬಾಹೂದ್ಗತ ಮಂಡಲಾಗ್ರರುಚಯಃ ಸಂನದ್ಧವಕ್ಷಃಸ್ಥಲಾಃ
ಸೋಷ್ಮಾಣೋ ವ್ರಣಿನೋ ವಿಪಕ್ಷಹೃದಯ ಪ್ರೋನ್ಮಾಥಿನಃ ಕರ್ಕಶಾಃ ।
ಉತ್ಸೃಷ್ಟಾಂಬರ ದೃಷ್ಟ ವಿಗ್ರಹಭರಾ ಯಸ್ಯ ಸ್ಮರಾಗ್ರೇಸರಾ
ಮಾರಾ ವಾರವಧೂಸ್ತನಾಶ್ಚ ನ ದಧುಃ ಕ್ಷೋಭಂ ಸ ವೋಽವ್ಯಾಜ್ಜಿನಃ ॥

ಇದು ಬುದ್ಧನನ್ನು ಕುರಿತು ಅಶ್ವಘೋಷನು ಮಾಡಿದ ಸ್ತೋತ್ರ. ಬುದ್ಧನು ಕಾಮಾತೀತನಾಗಿ, ಜಗತ್ತಿನ ಯಾವ ವಿಧವಾದ ಪಾಶಕ್ಕೂ ಸಿಕ್ಕದೆ, ಅವ್ಯಾಜಪ್ರೇಮದಿಂದ ಪ್ರಪಂಚವನ್ನು ಉದ್ಧಾರಮಾಡಲು ಸ್ಥಿರಮನಸ್ಕನಾಗಿ ನಿಂತ ಪವಿತ್ರಮೂರ್ತಿ. ಈತನು ತೃಷ್ಣೆಯಿಂದ ಕ್ಷೋಭೆಗೊಂಡ ಲೋಕಕ್ಕೆ ತನ್ನ ಧರ್ಮವಾಣಿಯ ಅಮೃತವನ್ನು ಧಾರೆ ಯೆರೆದು ಸಂತೈಸಿದ ಮಹಾನುಭಾವ. ಇಂತಹ ಪುಣ್ಯಮೂರ್ತಿ ನಮಗೆ ಒಳ್ಳೆಯದನ್ನು ಮಾಡಲಿ ಎಂದು ಕವಿ ಈ ಪದ್ಯದಲ್ಲಿ ಬೇಡಿದ್ದಾನೆ. ಬುದ್ಧನ ಜೀವನದಲ್ಲಿ ಅನೇಕ ಅಡ್ಡಿ ಆತಂಕಗಳು ಬಂದೊದಗಿದುವು. ಅವುಗಳಲ್ಲಿ ಬಹು ಮುಖ್ಯವಾದುದೆಂದರೆ ಬುದ್ಧನನ್ನು ಮೋಹಪಾಶಕ್ಕೆ ಸಿಲುಕಿಸಬೇಕೆಂದು ಮಾರನು ಮಾಡಿದ ಮಹಾಪ್ರಯತ್ನ. ಬುದ್ಧನನ್ನು ತನ್ನ ಪ್ರತಿಜ್ಞೆಯಿಂದ ಚ್ಯುತನನ್ನಾಗಿ ಮಾಡಿ, ಪ್ರಪಚಂದ ಪಾಶಕ್ಕೆ ಸಿಲುಕಿಸಿ, ಅವನನ್ನು ಗೆಲ್ಲುವುದಕ್ಕಾಗಿ ಮಾರನು ಮಾಡಿದ ಪ್ರಯತ್ನ ಗಳು, ಬುದ್ಧನ ಜೀವನವನ್ನು ಚಿತ್ರಿಸಿರುವ ಗ್ರಂಥಗಳಲ್ಲಿ ವಿಶದವಾಗಿವೆ. ಬುದ್ಧನು ಈ ಮಾರನಿಗೂ ಅವನ ಅನುಯಾಯಿಗಳಿಗೂ ಹೆದರಲಿಲ್ಲ, ಸಗ್ಗಲಿಲ್ಲ. ಈ ಸನ್ನಿವೇಶವೇ ಬುದ್ಧನನ್ನು ಲೋಕೋತ್ತರ ಗುಣಯುತ ನನ್ನಾಗಿ ಮಾಡಿದುದು. ಇದನ್ನು ಕುರಿತು ಕವಿ ಈ ಪದ್ಯದಲ್ಲಿ ವರ್ಣಿಸಿ ದ್ದಾನೆ. ಪದ್ಯದ ಅರ್ಥವಿಷ್ಟೆ :

"ಬುದ್ಧನನ್ನು ಸೋಲಿಸಲು ಹೊರಟ ಮ[illegible] ಯುತರಾದವರು; ಎತ್ತರವಾದ ದುಂಡಾದ ತೋ[illegible] ಮುಂದಕ್ಕೆ ಚಾಚಿದ ಕೆಚ್ಚೆದೆಯವರು ; ಬಲದಿಂದ ಉಸಿರು ಬಿಡು ತ್ತಿದ್ದವರು ; ಪ್ರಬಲರಾದ ಶತ್ರುಗಳೊಂದಿಗೆ ಹೋರಾಡಿ ಮೈಯೆಲ್ಲಾ ಗುರುತುಗಳನ್ನು ಪಡೆದಿದ್ದವರು ; ಶತ್ರುಗಳ ಹೃದಯವನ್ನು ಮಥನ ಮಾಡಬಲ್ಲವರು ; ಯಾವಾಗಲೂ ಆಕಾಶದ ಕಡೆಯೆ ನೆಟ್ಟ ನೋಟ, ಅಂದರೆ ಯಾರಿಗೂ ತಲೆಬಾಗದವರು ; ಇಂತಹ ಸ್ಮರನ ಮುಂದಾಳು ತನದಲ್ಲಿ ವಿಜಯಾರ್ಥಿಗಳಾಗಿ ಹೊರಟ ಮಾರರನ್ನು ಕಂಡರೂ ಯಾರು ಕ್ಷೋಭೆಗೊಳ್ಳಲಿಲ್ಲವೊ ಅಂತಹ ಬುದ್ಧನು ನಮ್ಮನ್ನು ಕಾಪಾಡಲಿ."

ಈ ಮಂಗಳಶ್ಲೋಕದಲ್ಲಿ ಕವಿ ಶ್ಲೇಷೆಯನ್ನು ಉಪಯೋಗಿ ಸಿದ್ದಾನೆ. ಶ್ಲೇಷೆಯೆಂದರೆ ಎರಡು ಅರ್ಥಗಳನ್ನು ಕೊಡುವ ಪದ ಗಳನ್ನು ಉಪಯೋಗಿಸುವುದು. ಬುದ್ಧನು ಮಾರನಿಂದ ಗೆಲ್ಲಲ್ಪಡ ಲಿಲ್ಲವೆಂದರೆ ಬುದ್ಧನಿಗೆ ಸ್ತ್ರೀವ್ಯಾಮೋಹವಿರಲಿಲ್ಲವೆಂದು ಅರ್ಥ. ಎಂತಹ ಸ್ತ್ರೀಯರ ಮಧ್ಯದಲ್ಲಿದ್ದರೂ ಬುದ್ಧನ ಮನಸ್ಸು ಎಳ್ಳಷ್ಟೂ ಚಲಿಸುತ್ತಿರಲಿಲ್ಲ. ಆತನು ಲೋಕಾತೀತನಾದ ವ್ಯಕ್ತಿ. ಈ ಪದ್ಯ ದಲ್ಲಿ ಮಾರನಿಗೆ ಅನ್ವಯಿಸುವ ವಿಶೇಷಗಳೆಲ್ಲವೂ 'ವಾರವಧೂಸ್ತನ' ಗಳಿಗೂ ಅನ್ವಯಿಸುತ್ತವೆ. ಬುದ್ಧನ ಸುತ್ತಲೂ ನಿಂತ ವಾರವಧುಗಳ ಸ್ತನಗಳು, ಬಾಹುಪರ್ಯಂತ ಮಂಡಲೀಕೃತವಾಗಿ ಮನೋಹರವಾಗಿವೆ, ಎದೆಯನ್ನು ಅಪ್ಪಿಕೊಂಡು ನಿಂತಿವೆ; ಉಬ್ಬಿಸದ ಉಸಿರಿನಿಂದ ಕೂಡಿವೆ ; ನಖಕ್ಷತಾದಿಗಳಿಂದ ಗಾಯಗೊಂಡಿವೆ ; ನೋಡುವವರ ಮನಸ್ಸನ್ನು ಕಲಕಿಸುವ ಅಪೂರ್ವವಾದ ಶಕ್ತಿಯನ್ನು ಪಡಿದಿವೆ. ಉಟ್ಟ ದುಕೂಲವನ್ನು ದೂರವೆಸೆದು ಅನುರಾಗವನ್ನು ಮುಂದಿಟ್ಟು ನಿಂತಿವೆ. ಇಂಥ ವಾರವಧುಗಳ ಮನಮೋಹಕ ಚೇಷ್ಟೆಗಳಿಗೆ, ಬುದ್ಧ ಸಿಲುಕಲಿಲ್ಲ. ಇಂತಹ ಸಂಯಮಸ್ವರೂಪಿಯಾದ ಬುದ್ಧದೇವನು ನಮ್ಮನ್ನು ಹರಸಲಿ ಎಂದು ಹಾಡಿ, ಕವಿ ಬುದ್ಧನ ಕಾಮದೂರತ್ವ ವನ್ನೂ ಆತ್ಮನಿಗ್ರಹ ಶಕ್ತಿಯನ್ನೂ ತೋರ್ಪಡಿಸಿದ್ದಾನೆ.

ಇಂತಹ ಶಕ್ತಿಯನ್ನು ಪಡೆದಿದ್ದುದರಿಂದಲೇ ಆತನು ಲೋಕ ಗುರುವಾದ. ಆತನು ದುಸ್ತರವಾದ ಭವಾಂಬುಧಿಯಿಂದ ಪಾರಾಗಿ ದಡವನ್ನು ಸೇರಿದ ನಾವಿಕ ; ಮಾರವ್ಯೂಹದೊಡನೆ ಕಾದು ಜಯಶೀಲ ನಾದ ಮಹಾವೀರ. ಆದುದರಿಂದಲೇ ಬ್ರಹ್ಮ ವಿಷ್ಣು ಮಹೇಶ್ವರರು ಬಂದು ಆತನ ಪಾದಗಳಿಗೆರಗುತ್ತಾರೆ. ಈ ಮೂವರೂ ಬಂದು ಆತನ ಪಾದತಲಗಳಲ್ಲಿ ಬಿದ್ದಾಗ ಅವರ ಮೂರ್ತಿಗಳು ಆತನ ಹತ್ತು ಪಾದ ನಖಗಳಲ್ಲಿ ಪ್ರತಿಬಿಂಬಿತವಾಗಲು ಮೂರು ಮುವ್ವತ್ತಾಗಿ ಕಾಣುತ್ತವೆ. ಇಂತಹ ನಿರ್ಮಲಕಾಯನಾದ ಬುದ್ಧದೇವನು ನಮಗೆ ಸಂತೋಷ ವನ್ನುಂಟುಮಾಡಲಿ ಎಂದು

ನಮ್ರಾಃ ಪಾದನಖೇಷು ಯಸ್ಯ ದಶಸು ಬ್ರಹ್ಮೇಶಕೃಷ್ಣಾಸ್ತ್ರಯ
ಸ್ತೇ ದೇವಾಃ ಪ್ರತಿ ಬಿಂಬನಾತ್ತ್ರಿದಶತಾಂ ಪ್ರವ್ಯಕ್ತಮಾ ಪೇದಿರೇ ।
ಸತ್ತ್ರೈಲೋಕ್ಯಗುರುಃ ಸುದುಸ್ತರ ಭವಾ ಕೂಪಾರ ಪಾರಂ ಗರೋ
ಮಾರವ್ಯೂಹ ಜಯ ಪ್ರಗಲ್ಭ ಸುಭಟಃ ಶಾಸ್ತಾ ತವ ಸ್ಯಾನ್ಮುದೇ ॥

ಎಂಬ ಪದ್ಯದಲ್ಲಿ ವಸುಕಲ್ಪನು ಹೇಳಿದ್ದಾನೆ.

ಮಾರನನ್ನು ಗೆದ್ದುದು ಬುದ್ಧನ ಜೀವನದಲ್ಲಿ ಒಂದು ಮಹಾ ಪ್ರಸಂಗವೆಂದು ಹಿಂದೆಯೇ ಹೇಳಲಾಗಿದೆ. ಇಂತಹ ಮಹಾ ಕಾರ್ಯ ವನ್ನು ಮಾಡಿದವರು ಮತ್ತಾರೂ ಇರಲಿಲ್ಲವೆ? ಬುದ್ಧನಿಗಿಂತ ಮೊದಲು ಈಶ್ವರ ತನ್ನ ಫಾಲನೇತ್ರದಿಂದ ಮಾರನನ್ನು ಭಸ್ಮಾವಶೇಷವಾಗಿ ಮಾಡಿದ. ಅಂತಹ ಈಶ್ವರನು ಕೂಡಾ ಬುದ್ಧನ ಪಾದಗಳಿಗೆ ಎರಗಲು ಕಾರಣವೇನು ? ಮಾರನಿಗ್ರಹವನ್ನು ಇಬ್ಬರೂ ಮಾಡಿದ್ದಾರೆ. ಆದರೆ ಅವರು ಮಾಡಿದ ರೀತಿಯಲ್ಲಿ ಮಾತ್ರ ವ್ಯತ್ಯಾಸವಿದೆ; ಅಷ್ಟೆ.

ಕಾಮಕ್ರೋಧೌ ದ್ವಯಮಪಿ ಯದಿ ಪ್ರತ್ಯನೀಕಂ ವಶಿತ್ವೇ
ಹತ್ವಾನಂಗಂ ಕಿಮಿವಹಿ ರುಷಾಸಾಧಿತಂ ತ್ರ್ಯಂಬಕೇನ ।
ಯಸ್ತುಕ್ಷಾನ್ತ್ಯಾ ಶಮಯತಿ ಶತಂ ಮನ್ಮಥಾದ್ಯಾನರಾತೀ
ಕಲ್ಯಾಣಂ ವೋ ದಿಶತು ಸಮುನಿ ಗ್ರಾಮಣೀರರ್ಕ ಬಂಧುಃ ॥

(ಕಾಮ ಕ್ರೋಧಗಳೆರಡೂ ಸಂಯಮಕ್ಕೆ ಶತ್ರುಗಳು. ತನ್ನ ತಪಸ್ಸಿಗೆ ಭಂಗಮಾಡಿದ, ಸಂಯಮ ವಿರೋಧಿಯಾದ ಕಾಮನನ್ನು

4. (i) Nos. 57–58 Aufrecht Collection. India Office Library.
(ii) Aufrecht Collections J.R.A.S. 1908. (1029–63)

ಬೀರುವುದು--ನನಗೆ ; ; [illegible] ಇದರಿಂದ ಅವನು ಸಾಧಿಸಿದ ಫಲವೇನು? ಕಾಮನ ಬದಲು ಕ್ರೋಧ ಪ್ರಾದುರ್ಭವಿಸಿತು. ಬುದ್ಧನಾದರೋ ತನ್ನ ಶಾಂತಿಯಿಂದ ಮನ್ಮಥನಂತಹ ನೂರಾರು ಶತ್ರುಗಳನ್ನು ಶಮನ ಮಾಡುತ್ತಾನೆ. ಇದು ಬುದ್ಧನ ವಿಶೇಷ ಗುಣ. ಅಂತಹ ಮುನಿಶ್ರೇಷ್ಠನೂ, ಆದಿತ್ಯಬಂಧುವೂ ಆದ ಬುದ್ಧನು ನಮಗೆ ಕಲ್ಯಾಣವನ್ನುಂಟು ಮಾಡಲಿ ) ಎಂದು ಬುದ್ಧನಲ್ಲಿರುವ ಅಮೋಘವಾದ ಶಾಂತ ಸ್ವಭಾವವನ್ನು ಕವಿಯೊಬ್ಬನು ಸೊಗಸಾಗಿ ಚಿತ್ರಿಸಿದ್ದಾನೆ.*

---

# ಕನ್ನಡ ಸುದ್ದಿ

**ಚಿತ್ರದುರ್ಗ : ಕರ್ನಾಟಕ ಸಂಘ**

೨೩-೯-೪೦ ಸೋಮವಾರದ ದಿನ ಪ್ರೌಢ ವಿದ್ಯಾ ಭವನದಲ್ಲಿ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್‌ರವರ ಸಿಂಹಾಸನಾರೋಹಣದ ಸಲುವಾಗಿ ರಾಜಭಕ್ತಿಯುತವಾದ ಅಭಿವಂದನೆಗಳನ್ನು ಸಮರ್ಪಿಸಲು ಸಭೆ ಸೇರಿತ್ತು. ಶ್ರೀ|| ಬಿ. ಕೆ. ರಾಮಚಂದ್ರರಾಯರು ಮಹಾಸ್ವಾಮಿಗಳ ವಿದ್ಯಾ ಸಂಪತ್ತಿನ ವಿಚಾರವಾಗಿ ಭಾಷಣ ಮಾಡಿದರು. ಅರಮನೆ ಯೋಗಶಾಲೆಯ ಉಪಾಧ್ಯಕ್ಷರಾದ ಶ್ರೀ|| ಮಹದೇವಭಟ್ಟರು ಯೋಗ ವ್ಯಾಯಾಮದ ಅವಶ್ಯಕತೆಯನ್ನು ವಿವರಿಸಿ, ಇದೇ ಊರಿನ ಯೋಗ ವ್ಯಾಯಾಮ ಹೊಂದಿರುವ ಹಿರಿಯ ವಿದ್ಯಾರ್ಥಿಗಳಿಂದ ವಿಶೇಷವಾದ ಕೆಲವು ಆಸನಗಳನ್ನು ಮಾಡಿಸಿ, ಕಷ್ಟತರವಾದ ಕೆಲವು ಬಂಧನಗಳನ್ನು ತಾವೂ ಸಹ ತೋರಿಸಿದರು. ಅಧ್ಯಕ್ಷರು ಶ್ರೀ ವೆಂಕಟೇಶಾಮಣ್ಣನವರು ಇಂಥ ಅಮೂಲ್ಯ ಸಂಸ್ಕೃತಿಗಳನ್ನು ಮೈಸೂರು ಸಿಂಹಾಸನ ಇನ್ನು ಮುಂದು ಸಹ ಪಾಲಿಸಿಕೊಂಡು ಬರಲಿ ಎಂದು ಹಾರೈಸಿದ ಮೇಲೆ ವಂದನಾ ಸಮರ್ಪಣೆ ಮತ್ತು ಮಂಗಳ ಮುಕ್ತಾಯಗಳಾದುವು.

**ಶಿವಮೊಗ್ಗ : ಕರ್ನಾಟಕ ಸಂಘ**

ಮೇಲ್ಕಂಡ ಸಂಘದವರು ಈ ತಿಂಗಳು ೫, ೬, ೭ನೆಯ ತಾರೀಖುಗಳು ಶಿವಮೊಗ್ಗ ನಗರ ಭವನದಲ್ಲಿ ಕನ್ನಡ ನಾಡ ಹಬ್ಬವನ್ನು ಆಚರಿಸುವರು. ಶ್ರೀಮಾನ್ ಕೆ. ವಿ. ಪುಟ್ಟಪ್ಪ, ಎಂ.ಎ. ಅವರು ಅಧ್ಯಕ್ಷತೆ ವಹಿಸುತ್ತಾರೆ. ಕಾವ್ಯವಾಚನ, ಉಪನ್ಯಾಸ, ಭರತನಾಟ್ಯ, ನಾಟಕಾದಿ ಕಾರ್ಯಕ್ರಮಗಳು ಏರ್ಪಟ್ಟಿವೆ.

**ಹುಬ್ಬಳ್ಳಿ : ಸತ್ಯಬೋಧ ವಾಚನಾಲಯದ ೫ನೆಯ ಹುಟ್ಟುಹಬ್ಬ**

ಮೇಲ್ಕಂಡ ಉತ್ಸವ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಕಳೆದ ೨೩ನೆಯ ತಾರೀಖು ನಡೆಯಿತು. ವರದಿಯ ಓದು ಆದ ಮೇಲೆ, ಶ್ರೀ|| ಬಿ. ವೆಂಕೋಬರಾಯರು, ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರು ಮತ್ತು ಶ್ರೀ|| ಪೋತ್ದಾರ್ ರಂಗಪ್ಪನವರು ಭಾಷಣಮಾಡಿದರು. ಅನಂತರ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಕನ್ನಡ ನಾಡು ನುಡಿಗಳ ಸೇವೆಯಲ್ಲಿ ತೊಡಗಿರುವ ಜನರೂ ಸಂಘಗಳೂ ಒಕ್ಕಟ್ಟಿನಿಂದ ದುಡಿಯಬೇಕೆಂದು ಒತ್ತಿ ಹೇಳಿ, ಪರಿಷತ್ತು ಏರ್ಪಡಿಸಿರುವ ಸಾಹಿತ್ಯ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸಲು ವಾಚನಾಲಯದವರು ವರ್ಗಗಳನ್ನು ನಡಸುತ್ತಿರುವುದಕ್ಕಾಗಿ ಅಭಿನಂದಿಸಿದರು. ಶ್ರೀ|| ಆರ್. ಎಸ್. ಮುಳಗಿಯವರು ಕನ್ನಡ ದೇಶದಲ್ಲಿ ನಾಡಹಬ್ಬದ ಆವಶ್ಯಕತೆಯನ್ನು ವಿವರಿಸಿ ಅಧ್ಯಕ್ಷರಿಗೂ ಉಪನ್ಯಾಸಕರಿಗೂ ಧನ್ಯವಾದಗಳನ್ನರ್ಪಿಸಿದರು.

**ಧಾರವಾಡ : ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘ**

ಕಾವ್ಯವಾಚನ: ಮೇಲ್ಕಂಡ ಸಂಘದ ಆಶ್ರಯದಲ್ಲಿ ಶ್ರೀಮಾನ್ ಬಿಂದೂರಾಯರು ಕನ್ನಡ ಭಾರತದಿಂದ 'ಕಿರಾತಾರ್ಜುನೀಯ' ಎಂಬ ಭಾಗವನ್ನು ಓದಿದರು.

ಉಪನ್ಯಾಸ: ಶ್ರೀ|| ವಿ. ಸೀತಾರಾಮಯ್ಯ, ಎಂ.ಎ. ಅವರು 'ಸಾಹಿತ್ಯದ ಗುರಿ' ಎಂಬ ವಿಷಯವನ್ನು ಕುರಿತು ಸಂಘದಲ್ಲಿ ಭಾಷಣ ಮಾಡಿದರು. ಶ್ರೀ|| ದತ್ತಾತ್ರೇಯ ಬೇಂದ್ರೆಯವರು ಅಧ್ಯಕ್ಷತೆ ವಹಿಸಿದ್ದರು.

**ರಾಣಿಬೆನ್ನೂರು : ನಾಡಹಬ್ಬ**

ಕನ್ನಡ ನಾಡ ಹಬ್ಬದ ಸಂದರ್ಭದಲ್ಲಿ ಶ್ರೀ|| ಅ. ನ. ಕೃಷ್ಣರಾಯರು ಉತ್ತರ ಕರ್ನಾಟಕದ ರಾಣಿಬೆನ್ನೂರಿಗೆ ಪ್ರಯಾಣ ಬೆಳಸಿ ೨-೧೦-೪೦ನೆಯ ಬುಧವಾರ 'ಜಗದ್ಗುರು ಬಸವಣ್ಣನವರು' ಎಂಬ ವಿಷಯವಾಗಿ ಭಾಷಣ ಮಾಡಿ ಹಿಂತಿರುಗಿದರು.

**ಮುಂಬಯಿಯಲ್ಲಿ : ಕನ್ನಡ ನಾಡಹಬ್ಬ**

ಕನ್ನಡ ನಾಡಹಬ್ಬ ಮಹೋತ್ಸವವನ್ನು ಈ ಸಲವೂ ಜರಗಿಸಬೇಕೆಂದು ಮುಂಬಯಿ ಪಟ್ಟಣದ ಬಹುತರ ಎಲ್ಲ ಕನ್ನಡ ಸಂಸ್ಥೆಗಳೂ ಒಟ್ಟುಗೂಡಿ ನಿರ್ಧಾರ ಮಾಡಿವೆ. ಈ ಎಲ್ಲ ಸಂಸ್ಥೆಗಳ ಪ್ರತಿನಿಧಿಗಳನ್ನೊಳಗೊಂಡ ನಾಡಹಬ್ಬ ಸಮಿತಿ ಈ ಮಹೋತ್ಸವವನ್ನು ಈ ತಿಂಗಳು ೫ನೇ ತಾರೀಖು ಶನಿವಾರದ ದಿವಸ ಸಾಯಂಕಾಲ ೫ ಗಂಟೆಯಿಂದ ೮ ಗಂಟೆಯವರೆಗೆ ಮುಂಬಯಿ ಕೋಟೆಯಲ್ಲಿರುವ ಸರ್ ಕಾವಸಜಿ ಜಹಾಂಗಿರ ಹಾಲಿನಲ್ಲಿ ಕನ್ನಡಿಗರ ಆಶೆ ಆಕಾಂಕ್ಷೆಗಳಿಗೆ ಪೋಷಕವಾಗುವಂಥ ಕಾರ್ಯಕ್ರಮದೊಂದಿಗೆ ಅತಿ ವಿಜೃಂಭಣೆಯಿಂದ ಜರುಗಿಸವುದನ್ನು ನಿಶ್ಚಯಿಸಿದೆ. ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು ಅಧ್ಯಕ್ಷಸ್ಥಾನವನ್ನು ವಹಿಸಲು ಒಪ್ಪಿಕೊಂಡಿದ್ದಾರೆ.

**ಗೋಕರ್ಣ : ಕೆಳೆಯರ ಕೂಟ**

ಶಿಕ್ಷಕ ಪರಿಷತ್ತಿನ ಕರೆಯೋಲೆಯಂತೆ ಶ್ರೀ|| ದತ್ತಾತ್ರೇಯ ಬೇಂದ್ರೆಯವರು ೨೩, ೨೪ ರಲ್ಲಿ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದರು.

೨೩ನೆಯ ತಾರೀಖು ಬೆಳಿಗ್ಗೆ ಶ್ರೀ|| ತೊರಗಲ್ ಅವರ ಅಧ್ಯಕ್ಷತೆಯಲ್ಲಿ ಕೆಳೆಯರ ಕೂಟದ ಪರವಾಗಿ ಭದ್ರಕಾಳಿ ಮಾಧ್ಯಮಿಕ ಶಾಲೆಯಲ್ಲಿ ಶ್ರೀ|| ಬೇಂದ್ರೆಯವರು 'ಅಜಾಗೃತ ಕರ್ನಾಟಕದ ಸಮಸ್ಯೆಗಳು' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು.

೨೪ನೆಯ ಬೆಳಿಗ್ಗೆ ೬ ಗಂಟೆಗೆ ಸಮುದ್ರದಲ್ಲಿ ಸುಮಾರು ಒಂದೂವರೆ ಗಂಟೆಯ ವರೆಗೆ ನೌಕಾವಿಹಾರವಾಯಿತು. ಶ್ರೀ|| ಬೇಂದ್ರೆಯವರೂ ಕೆಳೆಯರ ಕೂಟದ ಸದಸ್ಯರೂ ಭಾಗವಹಿಸಿದ್ದರು. ಅಂಬಿಗರ ಹಾಡು ಶ್ರೀ|| ಬೇಂದ್ರೆಯವರನ್ನು ಸಂತಸಗೊಳಿಸಿತು.

ಮಧ್ಯಾಹ್ನ ಸಂತೋಷಕೂಟ, ಬೇಂದ್ರೆಯವರ ಕಾವ್ಯಗಾಯನ ನಡೆದುವು. ರಾತ್ರಿ ಒಕ್ಕಲಿಗರ ಗುಮಟೆಪಾಂಗಿನ ಕಾರ್ಯಕ್ರಮಗಳಾದ ಮೇಲೆ ಶಿಕ್ಷಕ ಸಮ್ಮೇಳನ ನಡೆಯಿತು. ಸಂಭಾಷಣೆ, ವಸ್ತುಪ್ರದರ್ಶನ ಮತ್ತು ನಾಟಕ ಪ್ರದರ್ಶನಗಳಲ್ಲಿ ಕೌಶಲ ತೋರಿದವರಿಗೆ ಅಧ್ಯಕ್ಷ ಬೇಂದ್ರೆಯವರು ಬಹುಮಾನ ವಿನಿಯೋಗ ಮಾಡಿದರು. ಮರುದಿನ ಭದ್ರಕಾಳಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ|| ಎಂ.ಎಂ. ಉಪಾಧ್ಯರವರು ಅತಿಥಿಗಳನ್ನು ಬರಮಾಡಿಕೊಂಡು ಸತ್ಕಾರಮಾಡಿದರು.

ಕೆಳೆಯರ ಕೂಟದ ಮತ್ತು ಭದ್ರಕಾಳೀ ಶಾಲೆಯ ವಾರ್ಷಿಕೋತ್ಸವ ನವಂಬರ್ ತಿಂಗಳ ಮೊದಲನೆಯ ವಾರ ನಡೆಯುವುದೆಂದೂ, ಆ ಉತ್ಸವಕ್ಕೆ ಶ್ರೀಗಳಾದ ಶಂ. ಬಾ. ಜೋಶಿ ಮತ್ತು ಹನುಮಂತರಾವ ಮಾಂಜರೇಕರ್ ಇವರನ್ನು ಕರಸಬೇಕೆಂದಿರುವರೆಂದೂ ಗೊತ್ತಾಗಿದೆ.

**ವಿಜಾಪುರ : ನಾಡಹಬ್ಬ**

ವಿಜಾಪುರದಲ್ಲಿ ಪ್ರತಿ ಸಲದಂತೆ ಈ ಸಲವೂ ನಾಡಹಬ್ಬವನ್ನು ವೈಭವದಿಂದ ನೆರವೇರಿಸಬೇಕೆಂದು ನಿಶ್ಚಿತವಾಗಿ ಅದಕ್ಕೆ ಸಮರ್ಥವಾದ ಒಂದು ಮಂಡಲವನ್ನು ಆರಿಸಲಾಗಿದೆ. ಆ ಸಂಸ್ಥೆಗೆ ಶ್ರೀಮಾನ್ ಕಂಕಣವಾಡಿ ಅನಂತರಾಯರು ಅಧ್ಯಕ್ಷರಾಗಿಯೂ ಡಾ|| ಎಸ್. ಬಿ. ಪಾಟೀಲರು ಉಪಾಧ್ಯಕ್ಷರಾಗಿಯೂ ಶ್ರೀಯುತರುಗಳಾದ ಎಸ್. ವಿ. ಕಟ್ಟಿ, ರೇವಣಸಿದ್ಧಪ್ಪ ಹಲಸಂಗಿ, ಪು. ಬ. ನರೇಗಲ್ಲರು ಇವರುಗಳು ಕಾರ್ಯದರ್ಶಿಗಳಾಗಿಯೂ ಇರುವರು.

ಉತ್ಸವದ ಅಂಗವಾಗಿ ಪ್ರಬಂಧ ಬರಹ, ಕಥೆ ಬರಹ, ಚಿತ್ರಲೇಖನ, ಕಾವ್ಯಗಾಯನ, ನಾಟ್ಯಾಭಿನಯ, ಗಾಯನ ವಾದನ ಮೊದಲಾದ ಬೌದ್ಧಿಕ ಸ್ಪರ್ಧೆಗಳೂ, ಆಸನ, ಸೂರ್ಯನಮಸ್ಕಾರ, ಸಾಂಘಿಕ ಕವಾಯಿತು ಮೊದಲಾದ ಶಾರೀರಕ ಸ್ಪರ್ಧೆಗಳೂ ನಡೆಯುವುವು. ಅಲ್ಲದೆ ಪ್ರತಿದಿನ ಪ್ರಾತಃಕಾಲ ನಗರ ಸಂಕೀರ್ತನೆ, ಸಾಯಂಕಾಲ ನಾಟಕ, ಏಕಾಂಕ ನಾಟಕ ಮೊದಲಾದ ಮನರಂಜನೆಯ ಕಾರ್ಯಕ್ರಮಗಳು ನಡೆಯುವುವು.

ದಿನಂಪ್ರತಿ ಸಾಯಂಕಾಲ ಕನ್ನಡ ನಾಡಿನ ಧುರೀಣರೊಬ್ಬರ ಉಪನ್ಯಾಸ ನಡೆಯುವುದು. ಉತ್ಸವ ಮಂಡಲದ ಆಮಂತ್ರಣ ಸ್ವೀಕರಿಸಿ ಉಪನ್ಯಾಸಗಳನ್ನು ಕೊಡಲು ಕೆಳಗಿನ ಮಹನೀಯರು ಈಗಾಗಲೇ ಒಪ್ಪಿದ್ದಾರೆ: ಶ್ರೀಯುತ ಮುದವೀಡು ಕೃಷ್ಣರಾಯರು, ಶ್ರೀಮತಿ ಶಕುಂತಲಾದೇವಿ ನಂದಾವರ (ಧಾರವಾಡ), ಶ್ರೀ|| ಗಳಾದ ಟಿ. ರಾಘವಾಚಾರ್ಯ ಮತ್ತು ಅಮರ ಸಂಗಡಿಗರು (ಬಳ್ಳಾರಿ), ಹರ್ಡೇಕರ ಮಂಜಪ್ಪನವರು (ಆಲಮಟ್ಟಿ), ಪ್ರೊ|| ಡಿ. ಜೆ. ಕುಲಕರ್ಣಿ (ಬೆಳಗಾಂವಿ), ಗದುಗಿನ ಯೋಗ ವ್ಯಾಯಾಮ ಶಾಲೆಯ ಸಂಚಾಲಕರಾದ ಶ್ರೀ ಬಾದಾಮಿಯವರು. ಇನ್ನೂ ಕೆಲವು ವಿದ್ವಜ್ಜನರಿಗೆ ಆಮಂತ್ರಣಗಳನ್ನು ಕಳಿಸಲಾಗಿದ್ದು ಅವರಲ್ಲಿ ಅನುಕೂಲವಿದ್ದ ಅನೇಕರು ಬರಬಹುದೆಂದು ಆಶಿಸಲಾಗಿದೆ.

ಉತ್ಸವದ ಎಲ್ಲ ಕಾರ್ಯಕ್ರಮಗಳು ವಿಜಾಪೂರ ಮೋಟಾರ್ ಟ್ರಾನ್ಸ್‌ಪೋರ್ಟ್ ಕಂಪೆನಿ ಲಿಮಿಟೆಡ್ ಅವರ ನೇತೃತ್ವದಲ್ಲಿ ನಡೆಯುವುವು. ಮಂಡಲದ ಕಾರ್ಯಾಲಯ ರಾಜಬೀದಿಯಲ್ಲಿರುವ ಆಯುರ್ವೇದ ವಿದ್ಯಾಲಯದಲ್ಲಿದೆ.



೧೨೪-೯೩೦—೧೯೪೦ ಮುದ್ರಣಕಾರರು : ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು
ಪ್ರಕಟನಕಾರರು : ಬಿ. ವೆಂಕೋಬರಾವ್, ಬಿ.ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ.

